# ಮಹಾಭಾರತದ

## ಉಪಾಖ್ಯಾನಗಳು

(ಒಂದು ಕಿರು ಅಧ್ಯಯನ)

## Short Stories in Mahabharata



ಭಾಗ-2


ಲೇಖಕರು - ಸಂಪಾದಕರು

ಡಾ. ವೇದಗರ್ಭ ಜಿ. ಶೇಷಗಿರಿ ಆಚಾರ್ಯ

B.Sc(Agri), M.A., Ph.D.



ಪ್ರಕಾಶನ

[illegible], ಬೆಂಗಳೂರು

ವಿಶ್ವಮಧ್ವಮಹಾಪರಿಷತ್ ಗ್ರಂಥಮಾಲಾ - 212

# ಮಹಾಭಾರತದ ಉಪಾಖ್ಯಾನಗಳು

## (ಭಾಗ-೨)

# Short Stories in Mahābhārata

(ಒಂದು ಕಿರು ಅಧ್ಯಯನ)

ಲೇಖಕರು - ಸಂಪಾದಕರು:

ಡಾ. ವೇದಗರ್ಭ ಜಿ. ಶೇಷಗಿರಿ ಆಚಾರ್ಯ

B.Sc(Agri), M.A., Ph.D.

ಪ್ರಕಾಶನ :

ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ

ಶ್ರೀಮದುತ್ತರಾದಿಮಠ

ವಿಶ್ವಮಧ್ವಮಹಾಪರಿಷತ್, ಬೆಂಗಳೂರು - ೫೬೦೦೦೪

# ಮಹಾಭಾರತದ ಉಪಾಖ್ಯಾನಗಳು (ಭಾಗ-2)
# Short Stories in Mahābharāta

ಲೇಖಕರು : ಡಾ. ವೇದಗರ್ಭ ಜಿ. ಶೇಷಗಿರಿ ಆಚಾರ್ಯ (ಜಿ ಶೇಷಗಿರಿರಾವ್)
B.Sc(Agri), M.A., Ph.D.
080-26721028, 9986973919

**Published by** Vishva Madhwa Maha Parishat Research Center,

| Edition | Year | Copies | Total |
|---|---|---|---|
| First | 2021 | 1,000 | 1,000 |

**No.of Pages** 16+784



**Price.** [Vol 01 & 2 SET] Rs. 900/-

**Used Paper** 80 Gsm Maplitho

**Book Size** 1/8 Demmy

**Cover Design by** Gopalakrishna Davanageri

**Copies can be had from**

**Vishva Madhwa Maha Parishat**
Research Center, #11, 2nd Floor,
Uttaradi Math Building. Uttaradi Math Road,
Shankarpuram, Basavanagudi
BENGALURU - 4 Phone : 080 42103176

Printed by : **VAGARTHA,**
Hanumantha Nagar, Bengaluru- 19 Ph.22427677

|| ಶ್ರೀಗುರುಭ್ಯೋನಮಃ ||
|| ಹರಿಃ ಓಂ ||

ಶ್ರೀಮತ್ಕುಲದೇವತಾಯೈ ಶ್ರೀತುಲಜಾಭವಾನ್ಯೈ ನಮಃ ||

|| ತೇನ ವ್ಯಾಸದಿವಾಕರೇಣ ಸತತಂ ಮಾ ತ್ಯಾಜಿ ಮೇ ಮಾನಸಮ್ ||

ಯೋಽಂತಃ ಪ್ರವಿಶ್ಯ ಮಮ ವಾಚಮಿಮಾಂ ಪ್ರಸುಪ್ತಾಂ
ಸಂಜೀವಯತ್ಯಖಿಲಶಕ್ತಿಧರಣಃ ಸ್ವಧಾಮ್ನಾ ।
ಅನ್ಯಾಂಶ್ಚ ಹಸ್ತಚರಣಶ್ರವಣತ್ವಗಾದೀನ್ ।
ಪ್ರಾಣಾನ್ನಮೋ ಭಗವತೇ ಪುರುಷಾಯ ತುಭ್ಯಮ್ ||  - ಭಾಗವತ(೪/೧೦/೬)

ನಾರಾಯಣಂ ಸುರುಗುರಂ ಜಗದೇಕ ನಾಥಂ
ಭಕ್ತಪ್ರಿಯಂ ಸಕಲಲೋಕನಮಸ್ಕೃತಂ ಚ ।
ತ್ರೈಗುಣ್ಯವರ್ಜಿತಮಜಂ ವಿಭುಮಾದ್ಯಮೀಶಂ
ವಂದೇ ಭವಘ್ನಮಮರಾಸುರಸಿದ್ಧ ವಂಧ್ಯಮ್ ||  - ಮಹಾಭಾರ(೧/೧/೧)

ಕೃಷ್ಣೋ ಯಜ್ಞೈರಿಜ್ಯತೇ ಸೋಮಪೂತೈಃ
ಕೃಷ್ಣೋ ವೀರೈರಿಜ್ಯತೇ ವಿಕ್ರಮದ್ಭಿಃ ।
ಕೃಷ್ಣೋ ವನ್ಯೈರಿಜ್ಯತೇ ಸಮ್ಮೃಶಾನ್ಯೈಃ
ಕೃಷ್ಣೋ ಮುಕ್ತೈರಿಜ್ಯತೇ ವೀತಮೋಹೈಃ ||  - ಮಹಾಭಾರತ (೧/೧/೨)

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇತ್ ||  - (೧/೧/೩)

ನಮೋ ಭಗವತೇ ತಸ್ಮೈ ವ್ಯಾಸಾಯಾಮಿತತೇಜಸೇ ।
ಯಸ್ಯ ಪ್ರಸಾದಾದ್ವಕ್ಷ್ಯಾಮಿ ನಾರಾಯಣಕಥಾಮಿಮ್ ||  - (೧/೧/೩೦)

ನಾಸ್ತಿ ನಾರಾಯಣಸಮಂ ನ ಭೂತಂ ನ ಭವಿಷ್ಯತಿ ।
ಏತೇನ ಸತ್ಯವಾಕ್ಯೇನ ಸರ್ವಾರ್ಥಾನ್ ಸಾಧಯಾಮ್ಯಹಮ್ ।  - (೧/೧/೩೨)

ನಾರಾಯಣಾಯ ಪರಿಪೂರ್ಣ ಗುಣಾರ್ಣವಾಯ
ವಿಶ್ವೋದಯಸ್ಥಿತಿಲಯೋನ್ನಿಯತಿಪ್ರದಾಯ ।
ಜ್ಞಾನಪ್ರದಾಯ ವಿಬುಧಾಸುರಸೌಖ್ಯದುಃಖ-
ಸತ್ಕಾರಣಾಯ ವಿತತಾಯ ನಮೋ ನಮಸ್ತೇ ||  - ಮ.ತಾ.ನಿ.(೧/೧)

ಜಯತ್ಯಜೋಽಖಂಡಗುಣೋರುಮಂಡಲಃ
ಸದೋದಿತೋ ಜ್ಞಾನಮರೀಚಿಮಾಲೀ ।
ಸ್ವಭಕ್ತಹಾರ್ದೋಕ್ತ ತಮೋನಿಯಂತಾ
ವ್ಯಾಸಾವತಾರೋ ಹರಿರಾತ್ಮ ಭಾಸ್ಕರಃ ॥ - ಮ.ತಾ.ನಿ.(೩/೧)

ಜಯತ್ಯಜೋಽಕ್ಷೀಣಸುಖಾತ್ಮಬಿಂಬಃ
ಸ್ವೈಶ್ವರ್ಯ ಕಾಂತಿಪ್ರತತಃ ಸದೋದಿತಃ ।
ಸ್ವಭಕ್ತಸಂತಾಪ ದುರಿಷ್ಟಹಂತಾ
ರಾಮಾವತಾರೋ ಹರಿರೀಶಚಂದ್ರಮಾಃ ॥ - ಮ.ತಾ.ನಿ.(೩/೨)

ಜಯತ್ಯಸಂಖ್ಯೋರುಗುಣಾಂಬುಪೂರೋ
ಗುಣೋಚ್ಚರತ್ನಾಕರ ಆತ್ಮವೈಭವಃ ।
ಸದಾ ಸದಾತ್ಮಜ್ಞ ನದೀಭಿರಾಪ್ಯಃ
ಕೃಷ್ಣಾವತಾರೋ ಹರಿರೇಕ ಸಾಗರಃ ॥ - ಮ.ತಾ.ನಿ.(೩/೩)

ಶ್ರೀಶಂ ಗುರೂಣಾಂ ಗುರುಮಾದ್ಯಯೋನಿಂ
ವೈದ್ಯೈಕವೇದ್ಯಂ ನಿಖಿಲೇಶ್ವರೇಶ್ವರಮ್ ।
ನಮಾಮಿ ವಿಷ್ಣುಂ ಜಗದೇಕನಾಥ
ಕೇಶಾದಿಭಿಃ ಪ್ರಾಪ್ಯತಮಂ ಸುನಿತ್ಯಮ್ ॥

ಯೋ ಭಾರತೀಮಪಹೃತಾಮಸುರೈಃ ಸಹಾನ್ಯ
ಗೋಭಿಃ ಶುಭಾಂ ಭಗವತೀಮಸುರಾನ್ನಿಹತ್ಯ ।
ಉತ್ಸಾದ್ಯ ಚಾಥ(ತ್ರ)ಕುಪಥಾಮಥ ವೈಷ್ಣವೀಂ ತಾಂ
ಚಕ್ರೇ ಕರೋತು ಸದಶಪ್ರಮತಿರ್ಹಿ ಗಾಂ ನಃ ॥
- ಶ್ರೀನರಹರಿತೀರ್ಥರ ಯಮಕಭಾರತಟೀಕೆಯಿಂದ

ಯಾಂಚಾ ಮಂದರಲೋಲಿತಾದ್ಯತ ಉದ್ಯೈದ್ವಿದ್ಯೇಂದಿರಾ ನಿರ್ಜರೈಃ
ಜಾತೋ ಭಾರತಪಾರಿಜಾತಸುತರುಃ ಸದ್ಬ್ರಹ್ಮಸೂತ್ರಾಮೃತಮ್ ।
ಆಸ್ತೀತ್ತಂತ್ರಪುರಾಣಸನ್ಮಣಿಗಣೋ ಜಾತಃ ಶುಕೇಂದುಃ ಸದಾ
ಸೋಽಯಂ ವ್ಯಾಸಸುಧಾನಿಧಿರ್ಭವತು ಮೇ ಭೂತ್ಯೈ ಸದಾ ಭೂತಿದಃ ॥
- ಶ್ರೀಜಯತೀರ್ಥರ ತತ್ತ್ವಪ್ರಕಾಶಿಕಾ (೧/೧/೧)

ವ್ಯಾಸಾಯ ಭವನಾಶಾಯ ಶ್ರೀಶಾಯ ಗುಣರಾಶಯೇ ।
ಹೃದ್ಯಾಯ ಶುದ್ಧವಿದ್ಯಾಯ ಮಧ್ವಾಯ ಚ ನಮೋ ನಮಃ ॥

ವೇದವ್ಯಾಸ ಗುಣಾವಾಸ ವಿದ್ಯಾಧೀಶ ಸತಾಂ ವಶ ।
ಮಾಂ ನಿರಾಶಂ ಗತಕ್ಲೇಶಂ ಕುರ್ವನಾಶಂ ಹರೇಽನಿಶಮ್ ॥ - ಶ್ರೀವಾದಿರಾಜರು

ವ್ಯಾಸಾಯಾಪ್ರತಿಮೇತಿಹಾಸರಚನೋಲ್ಲಾಸಾಯ ದುರ್ವಾದಿನಾಂ
ತ್ರಾಸಾಯಾಸಕರಾಯ ಸತ್ಸು ಕೃತವಿಶ್ವಾಸಾಯ ದೋಷದ್ವಿಷೇ ।
ಭಾಸಾಯಾಮುನರಮ್ಯತೋಯಸದೃಶಾಯಾಸಾಯ ಮಾಸೇವಿನೇ
ದಾಸಾಯಾಭಯದಾಯ ಮಧ್ವಗುರು(ಮುನಿ)ಹೃದ್ವಾಸಾಯ ತುಭ್ಯಂ ನಮಃ ॥
- ಶ್ರೀವಾದಿರಾಜಶ್ರೀಪಾದರ ಲಕ್ಷಾಲಂಕಾರ)

ವ್ಯಾಸಂ ಭಾರತಕರ್ತಾರಂ ಮಧ್ವಂ ಮೂಲಕೃತಂ ತಥಾ ।
ಚೇತೋ ವಾಗ್ದೇವತಾಂ ವಾಣೀಂ ಗುರೂಂಶ್ಚ ಪ್ರಣಮಾಮ್ಯಹಮ್ ॥
- ಶ್ರೀಯಾದವಾರ್ಯರ ಯಮಕಭಾರತಟೀಕೆಯಿಂದ

ಬ್ರಹ್ಮಾದಿಸರ್ವಜಗತಃ ಸುವಿಶೇಷತೋ ವೀ
ಸರ್ವತ್ರ ಸಂಸ್ಥಿತಿನಿಮಿತ್ತತ ಏವ ಚಾಸಃ (ಸ) ।
ವ್ಯಾಸಃ ಸ ವೇತಿ ಹಿ ಶ್ರುತೇರಿತಿ ವ್ಯಾಸನಾಮನ್
ವಾಸಿಷ್ಠಕೃಷ್ಣ ಮಮ ದೇಹಿ ಕರಾವಲಂಬಮ್ ॥
- ಶ್ರೀಯಾದವಾರ್ಯರಚಿತ ಕರಾವಲಂಬನ ಸ್ತೋತ್ರ

ಬ್ರಹ್ಮಾಂತಾ ಗುರವಃ ಸಾಕ್ಷಾತ್ ಇಷ್ಟಂ ದೈವಂ ಶ್ರಿಯಃ ಪತಿಃ ।
ಆಚಾರ್ಯಾಃ ಶ್ರೀಮದಾಚಾರ್ಯಾಃ ಸಂತು ಮೇ ಜನ್ಮಜನ್ಮನಿ (ಜನ್ಮನಿಜನ್ಮನಿ) ॥

ಸತ್ಸಂಘಮಾನಸಸರೋವರಮಧ್ಯವರ್ತೀ
ಕೃಷ್ಣಾಂಘ್ರಿಚಾರುಕಮಾರ್ಪಿತಚಿತ್ತವೃತ್ತಿಃ ।
ಶಾಸ್ತ್ರಾತ್ರಿಮಂಜುಪದರಂಜಿತರಮ್ಯ ಸಂಸತ್
ಆಸ್ಮಾಕಹೃತ್ಸರಜಿಸೇಽಸ್ತು ಸ ಮಧ್ವಹಂಸಃ ॥
- ಶ್ರೀವಾದಿರಾಜಶ್ರೀಪಾದರ ಶ್ರೀರುಗ್ಮಿಣೇಶವಿಜಯ

ದುಷ್ಟಾನಾಂ ವಿಘ್ನಕರ್ತಾ ಸುಚರಿತಸುಜನಸ್ತೋಮವಿಘ್ನಾಪಹರ್ತಾ
ತಸ್ಮಾದ್ವಿಘ್ನಾಧಿಪೋಽಹಂ ಮತ ಇತಿ ಸುಧಿಯಾಂ ಸ್ಪಷ್ಟಮಾಜ್ಞಾಪನಾಯ ।
ಪೌಲಸ್ತ್ಯೇಚ್ಛಾಂತರಾಯಃ ಸುರಮುನಿನಿಕರಾಭೀಷ್ಟಸಂಪ್ರಾಪ್ತ್ಯುಪಾಯಃ
ಶ್ರೇಯೋ ವಿಘ್ನಾಧಿರಾಜಃ ಪ್ರದಿಶತು ಸುದೃಶಂ ಭೂರಿ ಗೌರೀತನೂಜಃ ॥
- ಶ್ರೀವಾದಿರಾಜರ (ತೀರ್ಥಪ್ರಬಂಧ-ಪಶ್ಚಿಮಪ್ರಬಂಧ-೮೩)

ವಂದೇ ವಿಷ್ಣುಂ ನಮಾಮಿ ಶ್ರಿಯಮಥ ಚ ಭುವಂ ಬ್ರಹ್ಮವಾಯೂ ಚ ವಂದೇ
ಗಾಯತ್ರೀಂ ಭಾರತೀಂ ತಾಮಪಿ ಗರುಡಮನಂತಂ ಭಜೇ ರುದ್ರದೇವಮ್ ।
ದೇವೀಂ ವಂದೇ ಸುಪರ್ಣೀಮಹಿಪತಿದಯಿತಾಂ ವಾರುಣೀಮಪ್ಯುಮಾಂ ತಾಂ
ಇಂದ್ರಾದೀನ್ ಕಾಮಮುಖ್ಯಾನಪಿ ಸಕಲಸುರಾನ್ ತದ್ಗುರೂನ್ ಮದ್ಗುರೂಂಶ್ಚ ॥

ರಮಾನಿವಾಸೋಚಿತವಾಸಭೂಮಿಃ ಸನ್ನ್ಯಾಯರತ್ನಾವಲಿಜನ್ಮಭೂಮಿಃ ।
ವೈರಾಗ್ಯಭಾಗ್ಯೋ ಮಮ ಪದ್ಮನಾಭತೀರ್ಥಾಮೃತಾಬ್ಧಿಃ ಭವತಾದ್ವಿಭೂತ್ಯೈ ॥

ವಂದೇ ಹೃಷೀಕೇಶಮಥೋ ನೃಸಿಂಹಂ ಜನಾರ್ದನಂ ಚಿಂತಯ ಧೀರುಪೇಂದ್ರಮ್ ।
ಶ್ರೀವಾಮನಂ ಸಂಸ್ಮರ ವಿಷ್ಣುಮೇಮಿ ಶ್ರೀರಾಮಮಂಚೇಽಹಮಧೋಕ್ಷಜಂ ಚ ॥

ಶ್ರೀಮಧ್ವಃ ಕಲ್ಪವೃಕ್ಷಸ್ತು ಜಯಾರ್ಯಃ ಕಾಮಧುಕ್ ಸ್ಮೃತಃ ।
ಚಿಂತಾಮಣಿಸ್ತು ವ್ಯಾಸಾರ್ಯಃ ಮುನಿತ್ರಯಮುದಾಹೃತಮ್ ॥

ವಾದಿರಾಜಮುಖಾಂಭೋಜನಿಃಸೃತಾ ವಾಕ್ ಸರಸ್ವತೀ ।
ಅಶ್ವಗ್ರೀವಯಶೋಗಂಗಾ ಸಂಗಾಽಸ್ಮಾನ್ ಪಾವಯತ್ವಲಮ್ ॥

ಪ್ರಣಮತ್ಕಾಮಧೇನುಂ ಚ ಭಜತ್ಸುರತರೂಪಮಮ್ ।
ಶ್ರೀಭಾವಬೋಧಕೃತ್ಪಾದ ಚಿಂತಾಮಣಿಮುಪಾಸ್ಮಹೇ ॥

ದುರ್ವಾದಿಧ್ವಾಂತರವಯೇ ವೈಷ್ಣವೇಂದೀವರೇಂದವೇ ।
ಶ್ರೀರಾಘವೇಂದ್ರಗುರವೇ ನಮೋಽತ್ಯಂತದಯಾಲವೇ ॥

ನಮಃ ಪುರಂದರಾರ್ಯಾಯ ವಿಜಯಾರ್ಯಾಯ ತೇ ನಮಃ ।
ಗೋಪಾಲದಾಸವರ್ಯಾಯ ಜಗನ್ನಾಥಾಯ ತೇ ನಮಃ ॥

ಪೃಥ್ವೀ ಮಂಡಲಮಧ್ಯಸ್ಥಾಃ ಪೂರ್ಣಬೋಧಮತಾನುಗಾಃ ।
ವೈಷ್ಣವಾ ವಿಷ್ಣುಹೃದಯಾಸ್ತಾನ್ನಮಸ್ಯೇ ಗುರೂನ್ಮಮ ॥

ಆಪಾದಮೌಲಿಪರ್ಯಂತಂ ಗುರೂಣಾಮಾಕೃತಿಂ ಸ್ಮರೇತ್ ।
ತೇನ ವಿಘ್ನಾಃ ಪ್ರಣಶ್ಯಂತಿ ಸಿದ್ಧ್ಯಂತಿ ಚ ಮನೋರಥಾಃ ॥

।। श्रीदिग्विजयरामो विजयते ।।

श्रीमत्परमहंसपारिव्राजकाचार्यत्वाद्यनेकगुणगणालङ्कृत श्रीमन्मूलसीतासमेतश्रीमन्मूलरामदिग्विजयरामवेदव्यासादिपादपद्माराधक

श्रीमद्वैष्णवसिद्धान्तप्रतिष्ठापनाचार्यजगद्गुरुश्रीमन्मध्वाचार्यमूलमहासंस्थान

श्रीमदुत्तरादिमठाधीश

श्री श्री १००८ श्रीसत्याभिज्ञतीर्थकरकमलसञ्जात श्री श्री १००८ श्रीसत्यप्रमोदतीर्थवरकुमार

## श्री श्री १००८ श्रीसत्यात्मतीर्थश्रीपादानां

No. :
Camp : सुवर्णपुरि

शुभदिनम् : शा.श.१९४३ प्लव आषाढ शु. दशमी
Date : १९-०७-२०२१

### अनुग्रहसन्देशः

ಮಹಾಭಾರತ. ಹೆಸರಿನಲ್ಲಿಯೇ ಮಹತ್ತ್ವ ತುಂಬಿಕೊಂಡ ಗ್ರಂಥ. ಗ್ರಂಥದ ಗಾಂಭೀರ್ಯ ಮಹತ್ತ್ವಗಳನ್ನು ತಿಳಿಯಲು, ಅಳೆಯಲು ಸಾಧ್ಯವೇ ಇಲ್ಲ. ಇದು ಆದರ್ಶ ಕಥೆಗಳ ಆಗರ. ತತ್ತ್ವಜ್ಞಾನದ ಸಾಗರ. ಕಥೆಗಳ ಮೂಲಕ ತತ್ತ್ವಗಳನ್ನು ತಿಳಿಸುವ ಅಪರೂಪದ ಆಕರ. ಇಲ್ಲಿ ದೇವರ ಆದೇಶವೂ ಇದೆ. ಗುರುವಿನ ಉಪದೇಶವೂ ಇದೆ. ಮಿತ್ರನ ಹಿತ ಸಂದೇಶವೂ ಇದೆ. ಕಥೆಗಳ ಮೂಲಕವೇ ಮನಃಪರಿವರ್ತನೆಗೊಳಿಸುವ ಅದ್ಭುತವಾದ ಕಥಾರತ್ನಾಕರ ಈ ಮಹಾಭಾರತ. ಸಾಕ್ಷಾತ್ ಭಗವಂತನೇ ನುಡಿದ ಕಥೆಗಳಿವು. ಎಲ್ಲ ತರಹದ, ಎಲ್ಲ ಸ್ತರದ ಜನರಿಗೂ ಬೋಧಿಸುವ ಕಥೆಗಳು ಇದರಲ್ಲಿ ಇವೆ. ಕಥೆಗಳಲ್ಲಿ ಬರುವ ಪಾತ್ರಗಳ ಮಾರ್ಮಿಕವಾದ ಸಂಭಾಷಣೆಗಳು ಅದ್ಭುತ ಸಂದೇಶಗಳನ್ನು ಹೊರಹೊಮ್ಮಿಸುತ್ತವೆ. ಜೀವನದಲ್ಲಿ ಮಾರ್ಗದರ್ಶಕವಾಗುತ್ತವೆ. ಮನಸ್ಸಿಗೆ ಉತ್ಸಾಹವನ್ನು ನೀಡುತ್ತವೆ. ಕಿಂಕರ್ತವ್ಯ ಮೂಢನಿಗೆ ಗುರಿ ತೋರಿಸುತ್ತವೆ. ಗುರಿ ಬೆನ್ನಟ್ಟುವ ಛಲ ಮೂಡಿಸುತ್ತವೆ. ಗುರಿ ತಲುಪುವ ದಾರಿ ತೋರಿಸುತ್ತವೆ. ಹೀಗೆ ಒಂದಲ್ಲಾ ಎರಡಲ್ಲ ನೂರಾರು ಕಥೆಗಳು ಈ ಗ್ರಂಥರತ್ನಾಕರದಲ್ಲಿ ಅಡಕವಾಗಿವೆ.

ನಮ್ಮ ಪ್ರಿಯಶಿಷ್ಯರಾದ ಶ್ರೀಯುತ ವೇದಗರ್ಭ ಶೇಷಗಿರಿ ಇವರು ಮಹಾಭಾರತದಲ್ಲಿ ಬರುವ ಸುಮಾರು 200 ಕ್ಕೂ ಹೆಚ್ಚು ಕಥೆಗಳನ್ನು ಸಂಗ್ರಹಿಸಿ ಒಂದು ಬೃಹತ್ ಹೊತ್ತಿಗೆಯನ್ನೇ ನಿರ್ಮಾಣ ಮಾಡಿದ್ದಾರೆ. ಕಥೆಗಳು ಮಾತ್ರವಲ್ಲದೇ ಅದರ ಸಂದೇಶ ಅಲ್ಲಿರುವ ಸಂಭಾಷಣೆ ಇವುಗಳನ್ನೆಲ್ಲಾ ಬಹಳ ಪರಿಶ್ರಮದಿಂದ ಸುಂದರವಾಗಿ ಸಂಗ್ರಹಿಸಿದ್ದಾರೆ. ಇದೊಂದು ಅಪರೂಪವಾದ ಕೃತಿ. ಅವರ ಈ ಕಾರ್ಯ ಅಭಿನಂದನೀಯವಾದದ್ದು. ಸದಾ ಅಧ್ಯಯನಶೀಲರಾದ ಇವರು ಈಗಾಗಲೇ ಅನೇಕ ಉಪಯುಕ್ತವಾದ ಸಂಶೋಧನಾತ್ಮಕವಾದ ಕೃತಿಗಳನ್ನು ರಚಿಸಿ ಪ್ರಕಾಶಿಸಿದ್ದಾರೆ. ವಯಸ್ಸು ಇಳಿದಾದರೂ ಉತ್ಸಾಹ ಅಳಿದಿಲ್ಲ.

ಭಗವಂತ ಶ್ರೀಯುತ ಶೇಷಗಿರಿರಾಯರಿಗೆ ದೀರ್ಘವಾದ ಆರೋಗ್ಯ ಉತ್ಸಾಹಗಳನ್ನು ಕರುಣಿಸಲಿ. ನಿರಂತರ ವೇದವ್ಯಾಸದೇವರ ಸೇವೆ ಅವರಿಂದ ನೇರವೇರಲಿ. ಎಂಬುದಾಗಿ ಅಸ್ಮದುಪಾಸ್ಯ ಶ್ರೀಮೂಲರಾಮದಿಗ್ವಿಜಯರಾಮ-ವೇದವ್ಯಾಸದೇವರು ಹಾಗೂ ವಂಶರಾಮ, ಪ್ರಸನ್ನವಿಠ್ಠಲ ದೇವರಲ್ಲಿ ಪ್ರಾರ್ಥಿಸುತ್ತೇವೆ. ಈ ಕೃತಿಯ ಲಾಭವನ್ನು ಸಕಲ ಸಜ್ಜನರೂ ಪಡೆಯುವಂತಾಗಲಿ ಎಂದು ಆಶಿಸುತ್ತೇವೆ.

ಇತ್ಯನೇಕ ನಾರಾಯಣ ಸ್ಮರಣೆಗಳೊಂದಿಗೆ

श्रीसत्यात्मतीर्थः

उत्तरादि मठः

ಶ್ರೀ ಶ್ರೀಸತ್ಯಾತ್ಮತೀರ್ಥ ಶ್ರೀಪಾದಂಗಳವರು ಶ್ರೀಉತ್ತರಾದಿಮಠ

# ಅನುಗ್ರಹಸಂದೇಶ

## ಶ್ರೀವಿದ್ಯೇಶತೀರ್ಥಶ್ರೀಪಾದರು

### ಶ್ರೀಸತ್ಯತೀರ್ಥಭಂಡಾರಕೆರೆ ಮಠ, ಉಡುಪಿ

### 'ಹೃದಯವಾಣಿ'

ಮಹಾಭಾರತದ ಉಪಾಖ್ಯಾನಗಳು ಸುಮಾರು ೨೫೦೦೦ ಶ್ಲೋಕಗಳನ್ನು ವ್ಯಾಪಿಸಿಕೊಂಡಿವೆಎಂದುಪ್ರಸ್ತುತಗ್ರಂಥಕಾರರಾದವೇದಗರ್ಭಜಿ.ಶೇಷಗಿರಿಆಚಾರ್ಯರು ಅಭಿಪ್ರಾಯಪಟ್ಟಿದ್ದಾರೆ.ಸನ್ಮಾರ್ಗಪ್ರಚೋದಕಗಳಾದಈಉಪಯುಕ್ತಉಪಾಖ್ಯಾನಗಳನ್ನು ಪರಿಚಯಿಸುವ ಮಹಾಕಾರ್ಯವನ್ನು ಶೇಷಗಿರಿ ಆಚಾರ್ಯರು ಉಪನ್ಯಾಸ, ಬರವಣಿಗೆ, ಮಾಧ್ಯಮಗಳಿಂದ ಮಾಡಿದ್ದಾರೆ. ಮಕ್ಕಳಿಗೆ ಹಿಂದಿನ ಹಿರಿಯರು ಇಂತಹ ಕಥೆಗಳನ್ನು ಹೇಳಿ ಉತ್ತಮಸಂಸ್ಕಾರವನ್ನು ನೀಡುತ್ತಿದ್ದರು. ಆದರೆ ಇಂದು ಈ ಪದ್ಧತಿ ಲುಪ್ತವಾಗಿದೆ. ಕಾರಣ ಇಂದು ಸಂಪ್ರದಾಯಬದ್ಧಸಂಸ್ಕಾರಮಯ ಅವಿಭಕ್ತಕುಟುಂಬದ ಜೀವನಪದ್ಧತಿ ಕನಸಾಗಿದೆ. ಇಂತಹ ಪರಿಸ್ಥಿತಿಯಲ್ಲಿ ಶೇಷಗಿರಿ ಆಚಾರ್ಯರ ಉಪಾಖ್ಯಾನಸಂಗ್ರಹಪುಸ್ತಕ ಪ್ರಕಾಶಿತವಾಗಿ, ಜನರ ಕೈಗೆ ಸೇರಿದರೆ ಇದರ ಉಪಯೋಗವನ್ನು ಪಡೆದು ಅವರು ತಮ್ಮ ಮಕ್ಕಳಿಗೆ ಉಪಾಖ್ಯಾನಗಳನ್ನು ಹೇಳಿ, ಶ್ರದ್ಧಾವಂತರಾದ ಉತ್ತಮಸಂಸ್ಕಾರವನ್ನು ನೀಡವಲ್ಲಿ ಸಫಲರಾಗಬಲ್ಲರು.

ಮಹಾಭಾರತದಲ್ಲಿ ಉಲ್ಲೇಖಗೊಂಡಿರುವ ಉಪಾಖ್ಯಾನಗಳನ್ನು ವರ್ಗೀಕರಿಸಿರುವ ಶೇಷಗಿರಿಆಚಾರ್ಯರುಪ್ರತಿಯೊಂದುಪರ್ವದಲ್ಲಿಬರುವಉಪಾಖ್ಯಾನಗಳಸಂಖ್ಯೆಯನ್ನು ಉಲ್ಲೇಖಿಸಿದ್ದಾರೆ.ಯಾರುಯಾರಿಗೆಹೇಳಿದರು? ಯಾವುದಕ್ಕೆಸಂಬಂಧಿಸಿದಉಪಾಖ್ಯಾನ? ಎಂಬ ಪ್ರಶ್ನೆಗಳಿಗೂ ಉತ್ತರವನ್ನು ನೀಡಿದ್ದಾರೆ.

ಸಾಮಾನ್ಯ ೧೦ ಪರ್ವಗಳಲ್ಲಿ ೧೪೧ ಸಾಮಾನ್ಯ ಉಪಾಖ್ಯಾನಗಳನ್ನು ಗುರುತಿಸಿದ್ದಾರೆ. ಶಾಂತಿಪರ್ವ, ಅನುಶಾಸನಪರ್ವಗಳಲ್ಲಿ ಬರುವ ೪೮ ಉಪಾಖ್ಯಾನಗಳನ್ನು ಉಪದೇಶಪರ ಉಪಾಖ್ಯಾನಗಳೆಂದು ವರ್ಗೀಕರಿಸಿದ್ದಾರೆ. ರಾಜರಿಗೆ ಸಂಬಂಧಿಸಿದ ಉಪಾಖ್ಯಾನಗಳು ೧೬ ಎಂದು ವರ್ಗೀಕರಿಸಿದ್ದಾರೆ. ಒಟ್ಟು ೨೦೫ ಉಪಾಖ್ಯಾನಗಳ ಪರಿಚಯವನ್ನು ಪದವಿ ಪಡೆಯಲು ಅರ್ಹ ಪ್ರಬಂಧಸದೃಶ ಗ್ರಂಥರಚನೆಯ ಮೂಲಕ ಮಾಡಿದ್ದಾರೆ. ಉಪಾಖ್ಯಾನಗಳನ್ನು ನಾನಾ ಸಂಸ್ಥೆಗಳಿಂದ ಪ್ರಕಾಶಿತಗಳಾದ ಗ್ರಂಥಗಳ ಅವಲೋಕನದಿಂದ ಅಧ್ಯಯನ ಮಾಡಿ ೧೯೯೦-೧೯೯೫ರವರೆಗೆ ನಾನಾಸ್ಥಳಗಳಲ್ಲಿ ಉಪನ್ಯಾಸ ಮಾಡಿದ್ದಾರೆ.

ಮತ್ತಿಕೆರೆ ಮಾಧ್ವಸಂಘ, ಶ್ರೀನಿವಾಸನಗರ ಮಾಧ್ವಸಂಘದಲ್ಲಿ ಎಲ್ಲಾ ಉಪಾಖ್ಯಾನಗಳ ಉಪನ್ಯಾಸವನ್ನು ನೀಡಿದ್ದಾರೆ. ಎನ್.ಆರ್. ಕಾಲೋನಿ ರಾಘವೇಂದ್ರಮಠದಲ್ಲಿ ಆದಿ, ಸಭಾ, ವನ ಪರ್ವಗಳಲ್ಲಿ ಬರುವ ಉಪಾಖ್ಯಾನಗಳ ಉಪನ್ಯಾಸವನ್ನು ನೀಡಿದ್ದಾರೆ. ಒಟ್ಟು ೪೦೦ ಉಪನ್ಯಾಸಗಳು, ಅವುಗಳಿಗೆ ವಿನಿಯೋಗಿಸಿದ ಸಮಯ, ಸುಮಾರು ೧೬೦೦ ಘಂಟೆಗಳು. ಉಪಾಖ್ಯಾನಗಳ ಬರವಣಿಗೆಗೆ (೧೬೦೦ ಪುಟಗಳ ಬರವಣಿಗೆ) ವಿನಿಯೋಗಿಸಿದ ಸಮಯ ೪೮೦೦ ಘಂಟೆಗಳು ಎಂದು ಅವರ ಹೇಳಿಕೆಯಿಂದ ತಿಳಿಯುತ್ತದೆ.

ಇಂತಹ ದೀರ್ಘಕಾಲೀನ ಮಹಾಭಾರತದ ಉಪಾಖ್ಯಾನಗಳ ಬಗೆಗಿನ ವಾಙ್ಮಯ ತಪಸ್ಸನ್ನು ಆಚರಿಸಿದ ಶೇಷಗಿರಿ ಆಚಾರ್ಯರನ್ನು ನಾವು ಮನಸಾ ಅಭಿನಂದಿಸುತ್ತೇವೆ.

ಶ್ರೀಮದಾಚಾರ್ಯರ ಸರ್ವಮೂಲದ ಬಗೆಗೂ ಇದೇ ಮಾದರಿಯ ವಾಙ್ಮಯ ತಪಸ್ಸನ್ನು ಆಚರಿಸಿದ ಅವರು ಅಭಿನಂದನಾರ್ಹರಾಗಿದ್ದಾರೆ. ಈ ವಾರ್ಧಕ್ಯದಲ್ಲೂ ಅವರ ಚಿಂತನ, ಮಂಥನ, ಲೇಖನ ಯಜ್ಞದ ಉತ್ಸಾಹವನ್ನು ಕಂಡು ನಾವು ಸಂತುಷ್ಟರಾಗಿದ್ದೇವೆ. ನಮ್ಮಲ್ಲಿ ಸುಧಾಧ್ಯಯನ ಮಾಡಿದ ವೇದಗರ್ಭ ಶೇಷಗಿರಿ ಆಚಾರ್ಯರ ಈ ಬರವಣಿಗೆಯ ಪರಿಶ್ರಮ, ತಪಸ್ಸನ್ನು ಮಧ್ವಾಂತರ್ಗತ ವೇದವ್ಯಾಸರು ಸ್ವೀಕರಿಸಿ ಅನುಗ್ರಹಿಸಲಿ. ಅವರ ಈ ಬರವಣಿಗೆಯು ಸಮಾಜಕ್ಕೆ ದಾರಿದೀಪವಾಗಿ ಸಾರ್ಥಕವಾಗಲಿ ಎಂದು ಹಾರೈಸಿ ನಮ್ಮ ಉಪಾಸ್ಯಮೂರ್ತಿಯಾದ ಕೋದಂಡರಾಮಚಂದ್ರನನ್ನು ಪ್ರಾರ್ಥಿಸುತ್ತೇವೆ.

– ಇತಿ ಶ್ರೀಮನ್ನಾರಾಯಣ ಸ್ಮರಣೆಗಳು

ಸ್ಥಳ : ಬೆಂಗಳೂರು
ದಿನಾಂಕ: ೨೪.೦೭.೨೦೨೧

**ಶ್ರೀವಿದ್ಯೇಶತೀರ್ಥಶ್ರೀಪಾದರು**
**ಭಂಡಾರಕೆರೆ ಮಠ, ಉಡುಪಿ**

# ಅನುಗ್ರಹಸಂದೇಶ

## ಶ್ರೀವಿಶ್ವಪ್ರಸನ್ನತೀರ್ಥಶ್ರೀಪಾದರು

### ಶ್ರೀಪೇಜಾವರಅಧೋಕ್ಷಜಮಠ, ಉಡುಪಿ

ಯದಿಹಾಸ್ತಿ ತದನ್ಯತ್ರ ಯನ್ನೇಹಾಸ್ತಿ ನ ತತ್ ಕ್ವಚಿತ್ ಎಂಬ ಬಿರುದಿಗೆ ಪಾತ್ರವಾದದ್ದು ಶ್ರೀಮನ್ಮಹಾಭಾರತ. ಆಖ್ಯಾನ, ಉಪಾಖ್ಯಾನಗಳಿಂದ ದೃಷ್ಟಾಂತ, ಪ್ರತಿದೃಷ್ಟಾಂತಗಳಿಂದಮಾನವಬದುಕನ್ನುರೂಪಿಸುವ,ಹರಿತತ್ತ್ವವನ್ನುಬೋಧಿಸುವ ಮಹಾಗ್ರಂಥ ಶ್ರೀಮನ್ಮಹಾಭಾರತ.

ಡಾ. ವೇದಗರ್ಭ ಜಿ. ಶೇಷಗಿರಿ ಆಚಾರ್ಯರು ಇಲ್ಲಿನ ಉಪಾಖ್ಯಾನಗಳನ್ನೆಲ್ಲ ಸಂಗ್ರಹಿಸಿ, ಸಮಾಜಕ್ಕೆ ನೀಡುತ್ತಿದ್ದಾರೆ. ಅವು ನಮಗೆ ನೀಡುವ ಸಂದೇಶವನ್ನು ಎತ್ತಿ ತೋರಿಸುತ್ತಿದ್ದಾರೆ. ಸಂಸ್ಕೃತಸಾಹಿತ್ಯದಲ್ಲಿರುವ ಈ ವಿಚಾರಗಳನ್ನು ಸರಳ ಕನ್ನಡ ಭಾಷೆಯಲ್ಲಿ ನೀಡುತ್ತಿದಾರೆ. ಆಸಕ್ತರಿಗಿದು ಅನುಕೂಲಗ್ರಂಥ. ಇಂತಹ ಒಂದು ಉತ್ತಮ ಕೃತಿಯನ್ನು ನೀಡುತ್ತಿರುವ ಶ್ರೀಯುತರನ್ನು ನಾವು ಹೃತ್ಪೂರ್ವಕವಾಗಿ ಅಭಿನಂದಿಸುತ್ತಾ ಶ್ರೀಕೃಷ್ಣಮುಖ್ಯಪ್ರಾಣರ ಅನುಗ್ರಹವನ್ನು ಪ್ರಾರ್ಥಿಸುತ್ತಿದ್ದೇವೆ.

– ಇತಿ ಶ್ರೀಮನ್ನಾರಾಯಣ ಸ್ಮರಣೆಗಳು

ಸ್ಥಳ: ಬೆಂಗಳೂರು — **ಶ್ರೀವಿಶ್ವಪ್ರಸನ್ನತೀರ್ಥಶ್ರೀಪಾದರು**

ದಿನಾಂಕ : ೨೧.೦೬.೨೦೨೧ — **ಶ್ರೀಪೇಜಾವರಅಧೋಕ್ಷಜಮಠ, ಉಡುಪಿ**

# ಸಂದೇಶ


## ಶ್ರೀನಿವಾಸ ವರಖೇಡಿ

**ಕುಲಪತಿಗಳು-ಕುಲಗುರುಗಳು**

**ಕಾಳಿದಾಸ ಸಂಸ್ಕೃತ ವಿಶ್ವವಿದ್ಯಾಲಯ**

**ನಾಗಪುರ**


ಮಹಾಭಾರತಕಥೆ, ಉಪಕಥೆಗಳ ಆಗರ. ಈ ಉಪಕಥೆಗಳು ಮಹಾಭಾರತಕ್ಕೆ ಸಮಗ್ರತೆಯನ್ನು ನೀಡುತ್ತವೆ. ಅವುಗಳು ಸ್ವತಂತ್ರವಾಗಿದ್ದರೂ, ಮಹಾಭಾರತದ ಮೂಲಕಥೆಗೆ ಪೂರಕವಾಗಿರುತ್ತವೆ. ಅವುಗಳ ಮಾರ್ಮಿಕ ಸಂದೇಶ ಹಾಗೂ ಕೌತುಕತೆ ಓದುಗರಿಗೆ ಮುದ ನೀಡುತ್ತವೆ. ಈ ಕಥೆಗಳು ಮಹಾಭಾರತದಲ್ಲಿ ಅಲ್ಲಲ್ಲಿ ಸೇರಿಕೊಂಡಿರುವುದರಿಂದ ಸುಲಭವಾಗಿ ದೊರಕುವುದಿಲ್ಲ. ಅವುಗಳನ್ನು ಸಾಗರದಿಂದ ರತ್ನಗಳನ್ನು ಹೊರತೆಗೆಯುವಂತೆ ಹೊರತಂದು ಕನ್ನಡಕ್ಕೆ ತಂದು ಓದುಗರಿಗೆ ನೀಡಿರುವ ಡಾ. ವೇದಗರ್ಭ ಶೇಷಗಿರಿರಾಯರ ಈ ಕಥಾಸಂಗ್ರಹ ಒಂದು ಅಪೂರ್ವ ಕೊಡುಗೆಯಾಗಿದೆ.

ಮಹಾಭಾರತದಲ್ಲಿ ಬರುವ ನಳೋಪಾಖ್ಯಾನವೇ ಮೊದಲಾದ ಉಪಾಖ್ಯಾನಗಳಲ್ಲದೆ, ಇತರ ಸಾಂದರ್ಭಿಕ ಕಥೆಗಳು ಮತ್ತು ಅವುಗಳ ಸಾರ್ವಕಾಲಿಕ ಸಂದೇಶಗಳನ್ನು ತುಂಬ ಅಚ್ಚುಕಟ್ಟಾಗಿ ಸಂಗ್ರಹಿಸಲಾಗಿದೆ. ಇಂತಹ ಅನೇಕ ಕೃತಿಗಳು ಬಂದಿದ್ದರೂ, ಸಮಗ್ರತೆಯ ದೃಷ್ಟಿಯಿಂದ ಈ ಕಾರ್ಯ ಸ್ತುತ್ಯಾರ್ಹವಾಗಿದೆ.

ಶ್ರೀ ಡಾ. ಶೇಷಗಿರಿರಾಯರು ಸಾಹಸಿಗರು. ಶೋಧಕಾರ್ಯದಲ್ಲಿ ಮತ್ತು ಶ್ರಮಸಾಧ್ಯವಾದ ಕಾರ್ಯಗಳಲ್ಲಿ ಅವರು ಹಿಂಜರಿಯದೇ ಆಸ್ಥೆಯಿಂದ ತೊಡಗುತ್ತಾರೆ ಮತ್ತು ಯಶಸ್ವಿಯಾಗಿ ಪೂರೈಸುತ್ತಾರೆ.

ಹಾಗೆಯೇ ತಾತ್ಪರ್ಯನಿರ್ಣಯದ ಅಧ್ಯಯನದ ಹಿನ್ನೆಲೆಯಲ್ಲಿ ಅವರ ಅನುವಾದವೂ ಶಾಸ್ತ್ರಶುದ್ಧವಾಗಿರುತ್ತದೆ. ಇಂತಹ ಕೃತಿ ಅವರಿಂದ ಮತ್ತೆ ಮತ್ತೆ ಮೂಡಿಬರಲಿ ಎಂದು ಹಾರೈಸುತ್ತೇವೆ.

**ಶ್ರೀನಿವಾಸ ವರಖೇಡಿ**

# ವಿಷಯಾನುಕ್ರಮಣಿಕೆ

## ಅನುಶಾಸನಪರ್ವ - ದಾನಧರ್ಮಪರ್ವ

## ಆಶ್ವಮೇಧಿಕಪರ್ವ



## ಉಪದೇಶಪರ ಉಪಾಖ್ಯಾನಗಳು

## ಶಾಂತಿಪರ್ವ (ರಾಜಧರ್ಮಪರ್ವ)

## ಆಶ್ವಮೇಧಿಕಪರ್ವ (ಅನುಗೀತಾಪರ್ವ)



***

## ಪರಿಶಿಷ್ಟಗಳು



***

ವಿ.ಸೂ.: ಈ ಪುಸ್ತಕದಲ್ಲಿನ ಉಪಾಖ್ಯಾನಗಳ ಸಂಖ್ಯೆ ಪೂರ್ಣನಿಖರವಲ್ಲ. ಅಲ್ಲಲ್ಲಿ ಕೆಲವು ಕಥೆಗಳು ಬಿಟ್ಟುಹೋಗಿವೆ.

# ಶಾಂತಿಪರ್ವ

# ಮೋಕ್ಷಧರ್ಮಪರ್ವ (ಉಪಪರ್ವ)

## ೧೦೨. ಚಿರಕಾರಿ ಉಪಾಖ್ಯಾನ

ಧರ್ಮರಾಜನು ಭೀಷ್ಮರನ್ನು ಪ್ರಶ್ನಿಸುತ್ತಾನೆ.

ಗುರುಹಿರಿಯರ ಮಾತನ್ನು ನಡೆಸಿಕೊಡಲೇಬೇಕಾದ ಸಂದರ್ಭ ಬಂದಾಗ ಆ ಕಾರ್ಯವನ್ನು ಹೇಗೆ ಪರೀಕ್ಷಿಸಬೇಕು? ತಕ್ಷಣ ಕಾರ್ಯಪ್ರವೃತ್ತನಾಗಬೇಕಾ? ತಡಮಾಡಿ ಮಾಡಬೇಕಾ? ವಿಚಾರ ಮಾಡಿ ಮಾಡಬೇಕಾ ಹೇಗೆ? ನೀನು ನಮ್ಮ ಗುರು. ದಯವಿಟ್ಟು ಈ ಬಗ್ಗೆ ತಿಳಿಸು.

ಆಂಗೀರಸ ವಂಶದಲ್ಲಿ ಜನಿಸಿದ್ದ **ಚಿರಕಾರಿ** ಎಂಬುವನ ಇತಿಹಾಸವು ಈ ವಿಷಯದಲ್ಲಿ ವಿದ್ವಾಂಸರು ಉದಾಹರಿಸುತ್ತಾರೆ. ಅದನ್ನು ಕೇಳೆಂದರು ಪಿತಾಮಹರಾದ ಭೀಷ್ಮರು.

ಗೌತಮರ ಮಗ ಮಹಾಪ್ರಾಜ್ಞನಾದ ಚಿರಕಾರಿ. ಅವನು ಯಾವುದೇ ಕಾರ್ಯವನ್ನು ಪೂರ್ವಾಪರ ವಿಮರ್ಶಿಸಿದ ನಂತರವೇ ಮಾಡುತ್ತಿದ್ದನಾದ್ದರಿಂದ **ಚಿರಕಾರಿ** ಎಂಬ ಹೆಸರಿನಿಂದ ಅವನು ಕರೆಯಲ್ಪಡುತ್ತಿದ್ದನು. ಎಲ್ಲ ವಿಷಯವನ್ನು ಬಹಳಕಾಲ ವಿಚಾರ ಮಾಡುತ್ತಿದ್ದನು. ಬಹಳ ಕಾಲ ಎಚ್ಚರವಾಗಿರುತ್ತಿದ್ದ. ಮಲಗಿದರೂ ಬಹಳ ಕಾಲ ನಿದ್ರಿಸುತ್ತಿದ್ದನು. ನಿಧಾನವಾಗಿ ಕಾರ್ಯ ಮಾಡಿದರೂ ಅಚ್ಚುಕಟ್ಟಾಗಿ ಮಾಡುತ್ತಿದ್ದ. ಅವಸರ ಮಾಡುತ್ತಿದ್ದಿಲ್ಲ. ವಿಳಂಬವಾಗಿಯೂ ಮಾಡುತ್ತಿದ್ದಿಲ್ಲ. ಮಲಗಿದಾಗಲೂ ಬಹುಶಃ ಕಾರ್ಯದ ಬಗ್ಗೆ ಚಿಂತಿಸುತ್ತಿದ್ದನೋ ಏನೋ?[೧]

ಆದ್ದರಿಂದಲೋ ಏನೋ ಅವನಿಗೆ ಮಂಗಳವಾಗಲಿ ಎಂದು ವ್ಯಾಸರು ಅವನನ್ನು ಪ್ರಶಂಸಿಸಿ, ಅವನು ಯಾವುದೇ ಕಾರ್ಯ ಮಾಡಲೀ ಅಪರಾಧವೆಸಗುವುದಿಲ್ಲ ಎನ್ನುತ್ತಾರೆ.

---

೧ ಚಿರಕಾರೀ ಮಹಾಪ್ರಾಜ್ಞೋ ಗೌತಮಸ್ಯಾಭವತ್ ಸುತಃ।
ಚಿರಂ ಸಂಚಿಂತಯನ್ನರ್ಥಾನ್ ಚಿರಂ ಜಾಗ್ರತ್ ಚಿರಂ ಸ್ವಪನ್ ॥
ಚಿರಕಾರ್ಯಾಭಿ ಸಂಪತ್ತೇಶ್ಚಿರಕಾರೀ ತಥೋಚ್ಯತೇ ॥
ಚಿರಕಾರಿಕ ಭದ್ರಂ ತೇ ಭದ್ರಂ ತೇ ಚಿರಕಾರಿಕ।
ಚಿರಕಾರೀ ಹಿ ಮೇಧಾವೀ ನಾಪರಾಧ್ಯತಿ ಕರ್ಮಸು ॥ - ೧೦೧/೨-೬

ಹೀಗಿರುವಾಗ ಒಮ್ಮೆ ಗೌತಮರ ಪತ್ನಿಗೆ ವ್ಯಭಿಚಾರದ ದೋಷ ಬರಲು ಕೋಪಗೊಂಡ ಗೌತಮರು ತಮ್ಮ ಇತರ ಮಕ್ಕಳನ್ನು ಬಿಟ್ಟು, ಚಿರಕಾರಿಗೆ ಜನನಿಯನ್ನು ಸಂಹರಿಸಲು ಹೇಳಿ ಎಲ್ಲೋ ಹೋದರು[೧].

ಇಂದ್ರದೇವರು ಅಹಲ್ಯೆಯ ಪ್ರಸಂಗ ಮಾಡಿದ್ದು ರಾಮಾಯಣದಲ್ಲಿ ಬಂದಿದೆ. ಆಗ ಆಕೆಗೆ ಶಿಲೆಯಾಗೆಂಬ ಶಾಪವಲ್ಲದೆ, ಈ ಪ್ರಸಂಗ ಮಹಾಭಾರತದಲ್ಲಿ ಬಂದುದು ಎರಡನೆಯದೆಂದು ಲಕ್ಷಾಲಂಕಾರದಲ್ಲಿದೆ. ಹೀಗೆ ಎರಡೂ ಪ್ರಸಂಗಗಳೂ ಪ್ರಮಾಣಗಳೇ.

ಲಕ್ಷಾಲಂಕಾರದಲ್ಲಿ ಹೀಗಿದೆ :

''ಜಹೀಮಾಂ ಜನನೀಮಿತಿ ಇತ್ಯತ್ರ 'ಏಕವಾರಂ ಇಂದ್ರಾಗಮನೇ ಪುತ್ರಂ ಪ್ರತಿ ಜಹೀತ್ಯಾಜ್ಞಾದತ್ತಾ' 'ಪುನರೇಕವಾರಂ ಇಂದ್ರಾಗಮನೇ ಶಿಲಾಭವೇತಿ ಶಾಪೋ ದತ್ತಃ' ಇತಿ ಕಥಾದ್ವಯಮಪ್ಯನುಸಂಧೇಯಮ್ ।'' – ಸಂಸ್ಕೃತ ಪಾಠ (ವ್ಯೆ.ಪಾ.) ಮ.ಭಾ. ಶಾಂ.ಪ.(೧೦೧/೭); ಪು. ೫೮೦

ತಂದೆಗೆ ಹಾಗೆಯೇ ಆಗಲಿ ಎಂದು ಹೇಳಿದ ಚಿರಕಾರಿಯು ಇಂತಹ ಸಂದಿಗ್ಧ ಪ್ರಸಂಗದಲ್ಲಿ ಏನು ಮಾಡಬೇಕೆಂದು ತುಂಬಾ ಯೋಚಿಸಿದನು. ಆತನ ಯೋಚನಾರೀತಿ ಅನುಕರಣೀಯವೂ, ಧರ್ಮಬದ್ಧವಾಗಿಯೂ ಇದೆ. ೧೫ ಶ್ಲೋಕಗಳಲ್ಲಿ ವ್ಯಾಸರು ಇದನ್ನು ದಾಖಲಿಸಿದ್ದಾರೆ. ಅದರ ಮುಖ್ಯಾಂಶಗಳು ಹೇಗಿವೆ.

೧. ತಂದೆಯ ಆಜ್ಞೆಯನ್ನು ಹೇಗೆ ನಡೆಸಲಿ? ತಾಯಿಯನ್ನು ಹೇಗೆ ಕೊಲ್ಲಲಿ? ದರ್ಮಸಂಕಟದಲ್ಲಿ ದುರ್ಜನನಂತೆ ಮುಳುಗಿದ್ದೇನಲ್ಲ! ಮೇಲೆ ಏಳುವುದಾದರೂ ಹೇಗೆ?

೨. ತಂದೆಯ ಆದೇಶ ಮಹಾಧರ್ಮ. ತಾಯಿಯ ರಕ್ಷಣೆಯೂ ಪುತ್ರನಾದ ನನ್ನ ಸ್ವಧರ್ಮ. ನಾನೋ ಮಗ, ಸ್ವತಂತ್ರನಲ್ಲ, ಅಧರ್ಮ ನನ್ನನ್ನು ಪೀಡಿಸದಂತೆ ಹೇಗೆ ವರ್ತಿಸಲಿ[೨] (ಅಧರ್ಮಕ್ಕೆ, ಪಾಪಕ್ಕೆ ಗುರಿಯಾಗದಿರಲು ಏನು ಮಾಡಲಿ?).

೩.. ಸ್ತ್ರೀಯನ್ನು ಕೊಂದು, ಅದರಲ್ಲೂ ತಾಯಿಯನ್ನು ಕೊಂದು ಯಾರು ತಾನೇ ಸುಖಿಯಾಗಲು ಸಾಧ್ಯ? ತಂದೆಯ ಆದೇಶವನ್ನು ತಿರಸ್ಕರಿಸಿ ಲೋಕದಲ್ಲಿ ಯಾರು ತಾನೇ ಸ್ಥಾನಮಾನ ಹೊಂದಬಲ್ಲರು?[೩]

---

೧ ವ್ಯಭಿಚಾರೇ ತು ಕಸ್ಮಿಂಶ್ಚಿತ್ ವ್ಯತಿಕ್ರಮ್ಯಾಪರಾನ್ ಸುತಾನ್ ।
ಪಿತ್ರೋಕ್ತಃ ಕುಪಿತೇನಾಥ ಜಹೀಮಾಂ ಜನನೀಮಿತಿ ॥ – ೧೦೧/೭

೨ ಪಿತುರಾಜ್ಞಾ ಸ್ವಯಂ ಧರ್ಮಃ ಸ್ವಧರ್ಮೋ ಮಾತೃರಕ್ಷಣಮ್ ।
ಅಸ್ವತಂತ್ರಂ ಚ ಪುತ್ರತ್ವಂ ಕಿಂ ನು ಮಾಂ ನಾತ್ರ ಪೀಡಯೇತ್ ॥

೩ ಪಿತರಂ ಚಾಪ್ಯವಜ್ಞಾಯ ಕಃ ಪ್ರತಿಷ್ಠಾಮವಾಪ್ನುಯಾತ್ ॥

೪. ತಂದೆಯು ತಾನೇ ರೇತೋರೂಪದಲ್ಲಿ ಪತ್ನಿಯಲ್ಲಿ ಇರುವುದು ತನ್ನ ಶೀಲ, ಸದಾಚಾರ, ಗೋತ್ರ, ಕುಲಗಳನ್ನು ಧಾರಣ ಮಾಡುವ ಸಲುವಾಗಿಯೇ. ನಾನು ಹೀಗೆ ತಂದೆಯಿಂದಲೇ ಜನ್ಮ(ದೇಹ) ಪಡೆದು ಹೇಗೆ ಈ ಸಂಕಟದಿಂದ ಹೊರಬರಲಿ[೧].

೫. ಜಾತಕರ್ಮ, ಉಪನಯನ ಸಂಸ್ಕಾರಗಳಲ್ಲಿ ತಂದೆಯು ಮಾಡುವ 'ಆತ್ಮಾ ವೈ ಪುತ್ರ ನಾಮಾಸಿ', ಆಚಾರ್ಯದೇವೋ ಭವ' ಮುಂತಾದ ಆದೇಶಗಳೇ ತಂದೆಯಲ್ಲಿ ಗೌರವನಿಶ್ಚಾಯಕ ಪ್ರಮಾಣಗಳಾಗಿವೆ.

೬. ತಂದೆಯು ಹೇಳುವುದೆಲ್ಲ ವೇದವಿಧಿಗಳೇ. ತಂದೆಯು ಮಗನ ಸ್ವಾಧ್ಯಾಯ, ಪೋಷಣಕರ್ತನೂ ಆಗಿದ್ದಾನೆ. ಆದ್ದರಿಂದ ಅದೇ ಮಗನ ಪಾಲಿಗೆ ಪರಮಧರ್ಮ.

೭. ತಂದೆಗೆ ಮಗನೇ ಪ್ರೀತಿಪಾತ್ರ. ಮಗನಿಗೆ ತಂದೆಯೇ ಸರ್ವಸ್ವ. ಬೇರಾರೂ ಮಗನಿಗೆ ಹೀಗೆ ಎಲ್ಲವನ್ನೂ ಕೊಡಲಾರರು. ಆದ್ದರಿಂದ ಬೇಕಾದ ಭೋಗ, ಭಾಗ್ಯ, ಲೋಕವ್ಯವಹಾರಜ್ಞಾನ ತಿಳುವಳಿಕೆ, ಗರ್ಭಾಧಾನಮಾಡಿ ಸಂಸ್ಕಾರಾದಿಗಳಲ್ಲಿಯೂ ತಂದೆಯದೇ ಮುಖ್ಯಸ್ಥಾನ.

೮. ತಂದೆಯೇ ಸ್ವರ್ಗ, ಧರ್ಮ, ತಪಸ್ಸು ಎನಿಸಿರುವನಲ್ಲದೆ ತಂದೆ ಪ್ರೀತನಾದರೆ ದೇವತೆಗಳು ಪ್ರೀತರಾಗುತ್ತಾರೆ. ತಂದೆಯ ಸಂತೋಷ ಸಮಸ್ತ ಪಾಪಗಳಿಗೆ ಪ್ರಾಯಶ್ಚಿತ್ತವಾಗಿದೆ. ತಂದೆ ಮಗನ ಬಗ್ಗೆ ಪ್ರೀತಿಯನ್ನು ಎಂದೂ ತೊರೆಯನು. ಇವೆಲ್ಲವೂ ತಂದೆಯ ಬಗ್ಗೆ ಮಗನು ಗೌರವದಿಂದ ಇರಬೇಕೆನ್ನಲು ಪ್ರಮಾಣಗಳು[೨].

ಹೀಗೆ ತಂದೆಯ ಮಹತ್ತ್ವವನ್ನು ಯೋಚಿಸಿದ ಚಿರಕಾರಿಯು ತಾಯಿಯನ್ನು ಹೇಗೆ ಕೊಲ್ಲಲಿ? ಆಕೆಯ ಸ್ಥಾನಮಾನದ ಬಗ್ಗೆ ಇನ್ನೂ ಹೆಚ್ಚು ಚಿಂತಿಸಿದುದನ್ನು ವ್ಯಾಸರು ವರ್ಣಿಸಿದ್ದಾರೆ ಹದಿನೇಳು ಶ್ಲೋಕಗಳಿಂದ. ಅವುಗಳ ಸಾರ ಹೀಗಿದೆ.

೧. ನನಗೆ ಬಂದ ಪಂಚಭೂತಾತ್ಮಕ ಶರೀರಕ್ಕೆ ತಾಯಿಯೇ ಕಾರಣ. ಬೆಂಕಿಯ ಉತ್ಪತ್ತಿಗೆ ಅರಣಿ ಕಾರಣವಾದಂತೆ. ದುಃಖಾರ್ತಪುರುಷರ ದುಃಖ ಪರಿಹಾರಕ್ಕೆ ತಾಯಿಯೇ ಕಾರಣ[೩].

---

೧ ಪಿತಾಹ್ಯಾತ್ಮಾ ನಮಾಧತ್ತೇ ಜಾಯಾಯಾಂ ಜಜ್ಞಿಯಾಮಿತಿ।
ಶೀಲಚಾರಿತ್ರ್ಯಗೋತ್ರಸ್ಯ ಧಾರಣಾರ್ಥಂ ಕುಲಸ್ಯ ಚ॥

೨ ಗುರುರಗ್ರ್ಯಃ ಪರೋ ಧರ್ಮಃ ಪೋಷಣಾಧ್ಯಯನಾದ್ಧಿತಃ।
ಪಿತಾ ಯದಾಹ ಧರ್ಮಃ ಸ ವೇದೇಷ್ವಪಿ ಸುನಿಶ್ಚಿತಃ॥
ಪಾತಕಾನ್ಯಪಿ ಪೂಯಂತೇ ಪಿತುರ್ವಚನಕಾರಿಣಃ।
ಪಿತಾ ಸ್ವರ್ಗಃ ಪಿತಾ ಧರ್ಮಃ ಪಿತಾ ಪರಮಕಂ ತಪಃ॥
ಪಿತರಿ ಪ್ರೀತಿಮಾಪನ್ನೇ ಸರ್ವಾ ಪ್ರೀಯಂತಿ ದೇವತಾಃ।
ಕ್ಲಿಶನ್ನಪಿ ಸುತಸ್ನೇಹೈಃ ಪಿತಾ ಸ್ನೇಹಂ ನ ಮುಂಚತಿ॥ - ೧೦೧/೮-೨೩

೩ ಅಸ್ಯ ಮೇ ಜನನೀ ಹೇತುಃ ಪಾವಕಸ್ಯ ಯಥಾರಣಿಃ।
ಮಾತಾ ದೇಹಾರಣಿಃ ಪುಂಸಾಂ ಸರ್ವಸ್ಯಾರ್ತಸ್ಯ ನಿರ್ವೃತಿಃ॥

೨. ಯಾರ ಮನೆಯಲ್ಲಿ ತಾಯಿ ಎಂಬ ವಸ್ತು ಇರುತ್ತದೋ ಅಲ್ಲಿರುವವರಿಗೆ ಯಾವುದಕ್ಕೂ ಶೋಕ ಬರುವುದಿಲ್ಲ, ಸಿರಿತನ, ಬಡತನ, ಚಿಂತೆ, ವೃದ್ಧಾಪ್ಯಗಳು ಅವರನ್ನು ಆಕ್ರಮಿಸುವುದಿಲ್ಲ(ಅಮ್ಮ ಎಂದು ಕೂಗುತ್ತಾ ಮನೆಯೊಳಗೆ ಪ್ರವೇಶಿಸುವವನಿಗೆ ಮೇಲಿನ ಚಿಂತೆಗಳಿರುವುದಿಲ್ಲ).

೩. ಮಕ್ಕಳು, ಮೊಮ್ಮಕ್ಕಳು ಮೊದಲಾದವರಿಂದ ತುಂಬಿದ ಮನೆಯಿದ್ದರೂ ತನಗೆ ನೂರುವರ್ಷ ಆಗಿದ್ದರೂ ತಾಯಿಯನ್ನು ಆಶ್ರಯಿಸುವವನು ಎರಡು ವರ್ಷದ ಮಗುವಿನಂತೆ ವರ್ತಿಸುತ್ತಾನೆ[೧](ತಾಯಿಗೆ ಮಗನು ಮಗುವೇ ಸರಿ. ಮಗ ಎಷ್ಟೇ ವಯಸ್ಸಿನವನಾಗಿದ್ದರೂ).

೪. ಮಗನು ಸಮರ್ಥನಾಗಿರಲಿ, ಅಸಮರ್ಥನಾಗಿರಲಿ, ಕೃಶನಾಗಿರಲಿ, ಸ್ಥೂಲನಾಗಿರಲಿ, ತಾಯಿ ಯಾವುದೇ ತಾರತಮ್ಯ ಮಾಡದೆ ರಕ್ಷಿಸುತ್ತಾಳೆ. ತಾಯಿಯಿಂದ ವಿರಹಿತನಾದ ಮಗನು ದುಃಖಿತನೂ, ವೃದ್ಧನೂ, ಆಗುತ್ತಾನೆ. ಜಗತ್ತೆಲ್ಲ ಅವನ ಪಾಲಿಗೆ ಶೂನ್ಯ.

೫. ತಾಯಿಗೆ ಸಮವಾದ ನೆರಳು, ಗತಿ, ಆಶ್ರಯ, ರಕ್ಷಕರೂ ಯಾರೂ ಇಲ್ಲ. ತಾಯಿಯೇ ನಿಜವಾದ ನೆರಳು. ತಾನು ಬಿಸಿಲು, ಮಳೆಯಲ್ಲಿದ್ದು ತನ್ನನ್ನು ಆಶ್ರಯಿಸಿದವರಿಗೆ ಬಿಸಿಲಿನ ಬೇಗೆ, ಮಳೆಯಿಂದಾಗುವ ಶೀತಾದಿಗಳ ಆಗವು. (ಇದರಂತೆ ಉಳಿದವನ್ನೂ ತಿಳಿಯುವುದು)[೨].

೬. ತನ್ನ ಉದರದಲ್ಲಿ ಗರ್ಭವನ್ನು ಧಾರಣ ಮಾಡುವುದರಿಂದ ಧಾತ್ರೀ ಎಂದೂ, ಪ್ರಸವಿಸುವುದರಿಂದ ಜನನೀ ಎಂದೂ ಮಗುವಿನ ಅಂಗಾಂಗಳನ್ನು ಬೆಳೆಸುವುದರಿಂದ ಅಂಬೆಯೆಂದೂ, ವೀರಮಗನನ್ನು ಹಡೆಯುವುದರಿಂದ ವೀರಸೂ ಎಂದೂ, ಮಗುವಿನ ಶುಶ್ರೂಷೆ(ಆರೈಕೆ, ಸೇವೆ) ಮಾಡುವುದರಿಂದ ಶುಶ್ರೂ ಎಂದೂ ಕರೆಯಲ್ಪಡುವ ತಾಯಿಯು ಮಗನಿಗೆ ಎರಡನೇ ದೇಹವೇ ಆಗಿದ್ದಾಳೆ. ಇಂತಹ ತಾಯಿಯನ್ನು ಅವಿವೇಕಿ, ಸಾವಿರ ಹೋಳಾದ ತಲೆಯುಳ್ಳವನು ಮಾತ್ರ ಕೊಂದಾನು! ಸದ್ವಿಚಾರಿಯು ಎಂದೂ ತಾಯಿಯನ್ನು ಕೊಲ್ಲನು[೩].

---

೧ ಪುತ್ರಪೌತ್ರ ಸಮಾಕೀರ್ಣೋ ಜನನೀಂ ಯಃ ಸಮಾಶ್ರಿತಃ।
ಅಪಿ ವರ್ಷಶತಸ್ಯಾಂತೇ ಸ ದ್ವಿಹಾಯನವಚ್ಚರೇತ್ ॥
ತದಾ ಶೂನ್ಯ ಜಗತ್ತಸ್ಯ ಯದಾ ಮಾತ್ರಾ ವಿಯುಜ್ಯತೇ

೨ ನಾಸ್ತಿ ಮಾತೃಸಮಾ ಛಾಯಾ ನಾಸ್ತಿ ಮಾತೃಸಮಾ ಗತಿಃ।
ನಾಸ್ತಿ ಮಾತೃಸಮಾ ತ್ರಾಣಂ ನಾಸ್ತಿ ಮಾತೃಸಮಾ ಪ್ರಪಾ ॥

೩ ಕುಕ್ಷಿಸಂಧಾರಣಾದ್ಧಾತ್ರೀ ಜನನಾಜ್ಜನನೀ ಸ್ಮೃತಾ।
ಅಂಗಾನಾಂ ವರ್ಧನಾದಂಬಾ ವೀರಸೂತ್ವೇವ ವೀರಸೂಃ।
ಶಿಶೋಃ ಶುಶ್ರೂಷಣಾತ್ ಶುಶ್ರೂ ಮಾತಾ ದೇಹಮನಂತರಮ್।
ಚೇತನಾವಾನ್ನರೋ ಹನ್ಯಾದಸ್ಯ ನಾಸುಕ್ಷಿರಂ ಶಿರಃ ॥

೭. ಮಗನ ಗೋತ್ರ ಬಲ್ಲವಳು, ತನ್ನಲ್ಲಿರುವ ಗರ್ಭ ಯಾರದೆಂದು ಬಲ್ಲವಳು ತಾಯಿ ಮಾತ್ರ. ಒಂಭತ್ತು ತಿಂಗಳು ಗರ್ಭದಲ್ಲಿ ಧರಿಸಿರುವುದರಿಂದಲೇ ತಾಯಿಗೆ ಮಗುವಿನ ಬಗ್ಗೆ ಪ್ರೀತಿ, ಅಂತಃಕರಣಗಳಿರುತ್ತವೆ. ಸಂತಾನವು ಮಾತ್ರ ತಂದೆಯ ಆಧೀನ್ಯಕ್ಕೆ ಒಳಪಟ್ಟಿರುತ್ತದೆ[೧].

೮. ಕನ್ಯೆಯ ಪಾಣಿಗ್ರಹಣ ಮಾಡಿ, ಸಹಧರ್ಮಿಣಿಯನ್ನಾಗಿ ಸ್ವೀಕರಿಸಿದ ಪುರುಷ ಸನ್ಯಾಸಧರ್ಮ ಸ್ವೀಕರಿಸಿ ಹೋಗುತ್ತಾನೆ. ಆದರೆ ಸ್ತ್ರೀಯರಿಗೆ ಸನ್ಯಾಸ ವಿಧಿಸಿಲ್ಲ. ಗಂಡನ ಬಳಿಕ ಸಾಂಸಾರಿಕ ಜವಾಬ್ದಾರಿ ನಿರ್ವಹಿಸುವ ಮಹಾತಾಯಿಯೂ ಆಕೆಯೇ.

೯. ಭರಣ, ಪೋಷಣಾದಿಗಳನ್ನು ಮಾಡದವನು ಭರ್ತಾ, ಪತಿ ಎರಡೂ ಆಗುವುದಿಲ್ಲ.

೧೦. ಪ್ರಾಯಃ ಸ್ತ್ರೀಯು ಅಪರಾಧಗಳನ್ನು ಮಾಡುವುದಿಲ್ಲ. ಪುರುಷನೇ ಅಪರಾಧಕೃತ್ಯ ಮಾಡುವವನು. ಸ್ತ್ರೀಯರನ್ನು ಉಲ್ಲಂಘಿಸಿ ಹೊರಟ ಮಹಾದೋಷ ಹಾಗೂ ಅಪರಾಧ ಮಾಡುವವನು ಪುರುಷನೇ.

೧೧. ಸ್ತ್ರೀಯರಿಗೆ ಪತಿಯೇ ಪರಮದೈವ. ತನ್ನ ಪತಿಯಂತೆ ವೇಷಭೂಷಣ ಧರಿಸಿ ಬಂದ ಇಂದ್ರನನ್ನು ತನ್ನ ಪತಿಯೆಂದು ಭಾವಿಸಿ ನನ್ನ ತಾಯಿ ತನ್ನನ್ನು ಒಪ್ಪಿಸಿದಳು. ಹೀಗಾಗಿ ಆಕೆಯ ಅಪರಾಧವೇನೂ ಇಲ್ಲ. ಕಾರಣ ಎಲ್ಲ ಕಾರ್ಯಗಳಲ್ಲಿ ಸ್ತ್ರೀಯರು ಪರಾಧೀನರು[೨].

೧೨. ಸ್ತ್ರೀಯರಿಗೆ ಮೈಥುನವಿಧಿ ಋತುಕಾಲದಲ್ಲಿ ಮಾತ್ರ. ಬೇರೆ ಸಮಯದಲ್ಲಿ ಅದನ್ನು ಪ್ರಚೋದಿಸುವ ಪುರುಷನಿಗೆ ಅಧರ್ಮ ಬರುತ್ತದೆ (ಪಾಪ).

೧೩. ಗೌರವಾರ್ಹಸ್ಥಾನದಲ್ಲಿರುವ ನಾರಿಯನ್ನು, ತಾಯಿಯನ್ನು ಯಾರು ಅವಧ್ಯಳೆಂದು ತಿಳಿಯುವುದಿಲ್ಲವೋ ಅವರೇ ಪಶುಗಳೇ ಸರಿ.

– ಹೀಗೆ ವಿಚಾರ, ವಿಮರ್ಶೆ ಮಾಡುತ್ತಿದ್ದ ಚಿರಕಾರಿಗೆ ಬಹಳ ಕಾಲ ಕಳೆದುಹೋಯಿತು. ಅಷ್ಟರಲ್ಲಿ ಕಾಡಿಗೆ ಹೋದ ತಂದೆ ಬಂದರು. ಅತ್ತ ಮೇಧಾತಿಥಿ ಗೌತಮರೂ ತಪಸ್ಸನ್ನು ಮಾಡುತ್ತಾ ಪತ್ನಿಸಂಹಾರ ಮಾಡಲು ಮಗನಿಗೆ ತಿಳಿಸಿದ್ದರಷ್ಟೆ ಅದು ಯೋಗ್ಯವಲ್ಲ ಎಂದು ನಿಶ್ಚಯಿಸಿಕೊಂಡು ಬಂದು ಪಶ್ಚಾತ್ತಾಪ ಪಟ್ಟು ಹೀಗೆ ನುಡಿದರು[೩].

---

೧ ಮಾತಾ ಜಾನಾತಿ ಯದ್ಗೋತ್ರಂ ಮಾತಾ ಜಾನಾತಿ ಯಸ್ಯ ಸಃ।
ಭರಣಾದ್ಧಿ ಸ್ತ್ರಿಯೋ ಭರ್ತಾ ಪಾತ್ಯಾಚ್ಚೈವ ಸ್ತ್ರಿಯಾಃ ಪತಿಃ॥

೨ ಸ್ತ್ರಿಯಾ ಹಿ ಪರಮೋ ಭರ್ತಾ ದೈವತಂ ಪರಮಂ ಸ್ಮೃತಮ್।
ತಸ್ಯಾತ್ಮನಾತು ಸದೃಶಮಾತ್ಮಾನಂ ಪರಮಂ ದದೌ॥
ಸರ್ವಕಾರ್ಯಾಪರಾಧ್ಯತ್ವಾತ್ ನಾಪರಾಧ್ಯಂತಿ ಚಾಂಗನಾಃ॥

೩ ಮೇಧಾತಿಥಿರ್ಮಹಾಪ್ರಾಜ್ಞೋ ಗೌತಮಸ್ತಪಸಿ ಸ್ಥಿತಃ।
ವಿಮೃಶ್ಯ ತೇನ ಕಾಲೇನ ಪತ್ನ್ಯಾಃ ಸಂಸ್ಥಾವ್ಯತಿಕ್ರಮತ್॥
ಸೋಽಬ್ರವಿತ್ ಭೃಶಸಂತಪ್ತೋ ಭೃಶಮಶ್ರೂಣಿ ವರ್ತಯನ್।

ಗೌತಮರು ತನ್ನ ಪತ್ನಿಯು ಹೇಗೆ ಇಂದ್ರನಿಂದ ಬಲಾತ್ಕೃತಳಾದಳೆಂದು ಸ್ಮರಿಸಿದರು. ಒಮ್ಮೆ ಇಂದ್ರನು ಗೌತಮರ ಆಶ್ರಮಕ್ಕೆ' ಬ್ರಾಹ್ಮಣವೇಷದಿಂದ ಬಂದಾಗ ಅವನನ್ನು ದಂಪತಿಗಳು ಅರ್ಘ್ಯ, ಪಾದ್ಯಾದಿಗಳಿಂದ ಸತ್ಕರಿಸಿದರು. ಇಂದ್ರನ ಪ್ರಸನ್ನತೆ ಹೊಂದಲು ಔಪಚಾರಿಕವಾಗಿ 'ನಾನು ನಿನ್ನ ಅಧೀನ' ಎಂದೆ. ಆದರೆ ಮಂದಬುದ್ಧಿಯಾದ ನನ್ನ ಪತ್ನಿ ಅವನ (ವಿಷಯಲೋಲುಪತೆಯಿಂದಾಗಿ) ಪ್ರಧರ್ಷನಕ್ಕೆ ತುತ್ತಾದಳು (ಬಲಾತ್ಕೃತಳಾದಳು).

ಆಗ ಗೌತಮರು ಆಶ್ರಮದಲ್ಲಿದ್ದಿಲ್ಲವೆಂದು ಊಹಿಸಬೇಕೇನೋ, ಈ ಘಟನೆ ಇಲ್ಲಿ ಸ್ಪಷ್ಟವಾಗಿ ಇಲ್ಲ.

ನಾನೂ ಬ್ರಾಹ್ಮಣನೆಂದು ಗೌರವಿಸಿದೆ. ಆದ್ದರಿಂದ ನಾನೂ ಅಪರಾಧಿಯಲ್ಲ(ದೇವತಾಕಾರ್ಯದ ಉದ್ದೇಶ್ಯದಿಂದ ಬಂದ). ಇಂದ್ರನೂ ಅಪರಾಧಿಯಲ್ಲ, ಆದರೆ ಧರ್ಮದ ವಿಚಾರದಲ್ಲಿ ಪ್ರಮಾದದಿಂದ ಆಡಿದ ಆಕೆಯನ್ನು ಕೊಲ್ಲು ಎಂಬ ಮಾತೇ ಅಪರಾಧವಾಗಿದೆ'.

**ತಂದೆಯ ಮಾತನ್ನು ಕೇಳಿದ ಮಗ ಚಿರಕಾರಿಯು ತಾಯಿಯನ್ನು ಸಂಹರಿಸಲು ತೆಗೆದ ಕತ್ತಿಯನ್ನು ತೊರೆದು ತಂದೆಯ ಪಾದಗಳಿಗೆ ಬಿದ್ದನು. ಶುದ್ಧಮನಸ್ಕಳಾದ ಅಹಲ್ಯೆಯೂ ಪತಿಯ ಪಾದಕ್ಕೆ ಎರಗಿದಳು.**

**ಮಗನ ನಡೆಯಿಂದ ಪ್ರಸನ್ನರಾದ ಗೌತಮರು 'ಚಿರಕಾರಿಯೇ! ನಿನಗೆ ಮಂಗಳವಾಗಲಿ, ನಿನ್ನ ಹೆಸರಿಗೆ ತಕ್ಕಂತೆ ಕಾರ್ಯ(ಮಾತೃಸಂಹಾರ) ತಡಮಾಡಿದೆ. ಆದ್ದರಿಂದ ನೀನು ನಿಜವಾಗಿಯೂ ಚಿರಕಾರಿ ಎಂದು ಪ್ರಸಿದ್ಧನಾಗುತ್ತೀ. ನಿಧಾನವಾಗಿ ಕಾರ್ಯತತ್ಪರನಾಗು. ನನ್ನನ್ನು ನಿನ್ನನ್ನು, ತಾಯಿಯನ್ನು ರಕ್ಷಿಸು. ನನ್ನ ತಪಸ್ಸು ರಕ್ಷಿಸು. ನನ್ನನ್ನು ಸ್ತ್ರೀಹತ್ಯಾ ಪಾಪದಿಂದ ರಕ್ಷಿಸು, ನಿನ್ನ ಹೆಸರು ನಿನಗೆ ಸಹಜವಾಗಿದೆ. ನಿನ್ನ ತಾಯಿ ನಿನ್ನನ್ನು ಚಿರಕಾಲ ಗರ್ಭದಲ್ಲಿ**

---

ಶ್ರುತಧೈರ್ಯಪ್ರಸಾದೇನ ಪಶ್ಚಾತ್ತಾಪಮುಪಾಗತಃ ॥
೧ ಆಶ್ರಮಂ ಮಮ ಸಂಪ್ರಾಪ್ತಸ್ತ್ರಿಲೋಕೇಶಃ ಪುರಂದರಃ ।
ಅತಿಥಿವ್ರತಮಾಸ್ಥಾಯ ಬ್ರಾಹ್ಮಣಂ ರೂಪಮಾಸ್ಥಿತಃ ।
ಸ ಮಯಾ ಸಾಂತ್ವಿತೋ ವಾಗ್ಭಿಃ ಸ್ವಾಗತೇನಾಭಿಪೂಜಿತಃ ।
ಅರ್ಘ್ಯಂ ಪಾದ್ಯಂ ಚ ನ್ಯಾಯೇನ ತಯಾ(ಮಯಾ)ಭಿಪ್ರತಿಪಾದಿತಃ (ತಮ್) ।
ಪರವಾನಸ್ಮಿ ಚೇತ್ಯುಕ್ತಃ ಪ್ರಣಯಿಷ್ಯತಿ ತೇನ ಚ ।
ಅತ್ರ ಚಾಕುಶಲೇ ಜಾತೇ ಸ್ತ್ರಿಯೋ ನಾಸ್ತಿ ವ್ಯತಿಕ್ರಮಃ ।
ಏವಂ ನ ಸ್ತ್ರೀ ನ ಚೈವಾಹಂ ನಾಧ್ವಗಸ್ತ್ರಿದಶೇಶ್ವರಃ ।
ಅಪರಾಧ್ಯತಿ ಧರ್ಮಸ್ಯ ಪ್ರಮಾದಸ್ತ್ವಪರಾಧ್ಯತಿ । - ೧೦೧/೪೪-೪೭
**ಲಕ್ಷಾಲಂಕಾರ** - ಪ್ರಣಯಿಷ್ಯತಿ ತೇನ ಚ ಇತ್ಯತ್ರ ತೇನ ಅಕೃತೋಪಚಾರೇಣ । ಪ್ರಣಯಿಷ್ಯತಿ ಇತಿ ಮತ್ವಾ ಪರವಾನಸ್ಮೀತಿ ಮಯಾ ಉಕ್ತಃ ॥

ಧರಿಸಿದ್ದರಿಂದ ಚಿರಕಾರಿ ಎಂಬ ನಾಮಧೇಯ ಸಾರ್ಥಕವಾಗಲಿ. ಪತ್ನೀ, ಪುತ್ರರು ತಮ್ಮನ್ನು ಭಕ್ತಿಯಿಂದ ಪಾದದ ಮೇಲೆ ಎರಗಿದುದಕ್ಕೆ ಗೌತಮರು ಇಬ್ಬರನ್ನೂ ಮುಂದೆ ಎಂದೂ ಬಿಟ್ಟು(ಆಶ್ರಮದಲ್ಲಿ) ಹೋಗಲಿಲ್ಲ. ಮಗನನ್ನು ಪ್ರೀತಿಯಿಂದ ತಲೆಯನ್ನು ಮುದ್ದಿಸಿ, ಆಲಿಂಗಿಸಿ, ಪ್ರಶಂಸಿಸಿ, ಆಘ್ರಾಣಿಸಿ (ತಲೆಯನ್ನು) ಚಿರಂಜೀವಿಯಾಗೆಂದು ಹರಸಿದರು. ನಿನ್ನ ವಿಳಂಬಕಾರ್ಯದಿಂದಾಗಿ ನಾನು ಚಿರಕಾಲ ದುಃಖಕ್ಕೆ ಈಡಾಗುವುದಿಲ್ಲ ಎಂದು ಚಿರಕಾರಿಯ ಗುಣಗಳನ್ನು ಗಾನಮಾಡಿದರು[೧].

೧. ಬಹಳ ಕಾಲ ಯೋಚಿಸಿ ಮೈತ್ರಿ ಮಾಡಬೇಕು(ಮಿತ್ರನೊಡನೆ). ಮೈತ್ರಿ ಹೊಂದಿದ ಮೇಲೆ ಬೇಗನೇ ಅದನ್ನು ಕಳೆದುಕೊಳ್ಳಬಾರದು. ಬಹಳ ಕಾಲಯೋಚಿಸಿಯೇ ಮೈತ್ರಿ ತ್ಯಜಿಸಬೇಕು. ಕಾರಣ ಮೈತ್ರಿ ಹೆಚ್ಚು ಕಾಲ ಇರಲು ಯೋಗ್ಯವಾಗಿದೆ[೨].

೨. ರಾಗ, ದರ್ಪ, ಅಭಿಮಾನ, ದ್ರೋಹ, ಪಾಪಕರ್ಮ, ಅಪ್ರಿಯಕಾರ್ಯ ತಡಮಾಡಿದಷ್ಟೂ ಒಳ್ಳೆಯದು - ಪ್ರಶಂಸೆಯೋಗ್ಯ[೩].

೩. ಬಂಧುಗಳು, ಸ್ನೇಹಿತರು, ಸೇವಕರು, ಸ್ತ್ರೀಯರು, ತಿಳಿಯದೆ ಮಾಡುವ ಅಪರಾಧಗಳಿಗೆ ಶಿಕ್ಷೆಯನ್ನು ವಿಧಿಸುವಾಗ ಚಿರಕಾರಿಯು ಆದರ್ಶನಾಗುತ್ತಾನೆ[೪].

- ಹೀಗೆ ಮಗನ ಬಗ್ಗೆ ಗೌತಮರು ಪ್ರಸನ್ನರಾದರು. ಕಾರಣ ಮಗನು ಬಹಳಕಾಲ ವಿಚಾರಮಾಡಿ ಕಾರ್ಯಪ್ರವೃತ್ತನಾದುದರಿಂದ :

---

೧ ಚಿರಕಾರಿಕ ಭದ್ರಂ ತೇ ಭದ್ರಂ ತೇ ಚಿರಕಾರಿಕ।.....
ತ್ರಾಹಿ ಮಾಂ ಮಾತರಂ ಚೈವ ತಪೋ ಯಚ್ಚಾರ್ಜಿತಂ ಮಯಾ।
ಆತ್ಮಾನಂ ಪಾತಕೇಭ್ಯಶ್ಚ ಭವಾದ್ಯ ಚಿರಕಾರಿಕಃ।
ಗೌತಮಸ್ತು ಸುತಂ ದೃಷ್ಟ್ವಾ ಶಿರಸಾ ಪತಿತಂ ಭುವಿ।
ಪತ್ನೀಂ ಚೈವ ನಿರಾಕಾರಾಂ ಪರಮಾಭ್ಯಗಮನ್ಮುದಾ।
ನ ಹಿ ಸಾ ತೇನ ಸಂಭೇದಂ ಪತ್ನೀ ನೀತಾ ಮಹಾತ್ಮನಾ।
ವಿಜನೇ ಚಾಶ್ರಮಸ್ಥೇನ ಪುತ್ರಶ್ಚಾಪಿ ಸಮಾಹಿತಃ।..........
ಚಿರಕಾರಿಕ ಭದ್ರಂ ತೇ ಚಿರಕಾರೀ ಚಿರಂ ಭವ।
ಚಿರಾಯಯತಿ ತೇ ಸೌಮ್ಯ ಚಿರಮಸ್ಮಿ ನ ದುಃಖಿತಃ।
ಗಾಥಾಶ್ಚಾಪ್ಯಬ್ರವೀತ್ ವಿದ್ವಾನ್ ಗೌತಮೋ ಮುನಿಸತ್ತಮಃ।....
೨ ಚಿರೇಣ ಮಿತ್ರಂ ಬಧ್ನೀಯಾತ್ ಚಿರೇಣ ಚ ಕೃತಂ ತ್ಯಜೇತ್।
ಚಿರೇಣ ಹಿ ಕೃತಂ ಮಿತ್ರಂ ಚಿರಂ ಧಾರಣಮರ್ಹತಿ।
೩ ರಾಗೇ ದರ್ಪೇ ಚ ಮಾನೇ ಚ ದ್ರೋಹೇ ಪಾಪೇ ಚ ಕರ್ಮಣಿ।
ಅಪ್ರಿಯೇ ಚ ಕರ್ತವ್ಯೇ ಚಿರಕಾರೀ ಪ್ರಶಂಸ್ಯತೇ॥
೪ ಬಂಧೂನಾಂ ಸುಹೃದಾಂ ಚೈವ ಭೃತ್ಯಾನಾಂ ಸ್ತ್ರೀಜನಸ್ಯ ಚ।
ಅವ್ಯಕ್ತೇಷ್ವಪರಾಧೇಷು ಚಿರಕಾರೀ ಪ್ರಶಂಸ್ಯತೇ॥

**೪. ಯಾರು ಬಹಳಕಾಲದವರೆಗೆ ತನ್ನ ಕೋಪವನ್ನು ಹೊರಗೆ ಹಾಕುವುದಿಲ್ಲವೋ, ರೋಷವನ್ನು ತಡೆಯುತ್ತಾನೋ, ಅವನು ಪಶ್ಚಾತ್ತಾಪಪಡುವ ಪ್ರಸಂಗವೇ ಬಾರದು.**

**೫. ವೃದ್ಧರನ್ನು ಬಹುಕಾಲ ಸೇವಿಸಿರಿ, ಪೂಜಿಸಿರಿ, ಧರ್ಮಾನ್ವೇಷಣೆ ಮಾಡಿರಿ[೧].**

**೬. ಚಿರಕಾಲ ವಿದ್ವಾಂಸರೊಡನೆ ವಾಸಿಸುತ್ತಾ, ಶಿಷ್ಟರನ್ನು ಸೇವಿಸುತ್ತಾ, ಮನೋನಿಗ್ರಹ ಸಂಪಾದಿಸುವವನು ಬಹಳಕಾಲ ಗೌರವಾರ್ಹನಾಗುತ್ತಾನೆ, ಸಮ್ಮಾನಪಾತ್ರನಾಗುತ್ತಾನೆ.**

**೭. ಧಾರ್ಮಿಕ ಪ್ರಶ್ನೆಗಳಿಗೆ ಯೋಚಿಸಿಯೇ ಉತ್ತರಿಸಬೇಕು. ಇದರಿಂದ ಪ್ರಶ್ನೆ ಕೇಳುವವರಿಗೆ, ಉಪದೇಶಕರಿಗೆ ಸಂತಾಪವಾಗದು[೨].**

**ಹೀಗೆ ಮಗನನ್ನು ಪ್ರಶಂಸಿಸಿದ ಗೌತಮರು ತಮ್ಮ ಆಶ್ರಮದಲ್ಲಿ ಬಹುಕಾಲ ವಾಸವಾಗಿದ್ದು ಕೊನೆಗೆ ಮಗನೊಂದಿಗೆ ಸ್ವರ್ಗಕ್ಕೆ ಹೋದರು[೩].**

## ಸಂದೇಶಗಳು- ವಿವರಣೆಗಳು

೧. ಯುಧಿಷ್ಠಿರನ ಪ್ರಶ್ನೆ ಹಾಗೂ ಭೀಷ್ಮರ ಉತ್ತರಗಳಲ್ಲಿ ಸಂದೇಶಗಳು ಅತ್ಯಂತ ಸ್ಫುಟವಾಗಿಯೇ ಇವೆ. ಯಾವುದೇ ಕಾರ್ಯವನ್ನಾಗಲೀ, ಅವಸರ, ವಿಚಾರವಿಲ್ಲದೇ ಮಾಡಿದರೆ ಅನರ್ಥಗಳಾಗುವ ಸಂಭವವುಂಟು. ಇದು ಲೋಕನಿಯಮ. ಅದರಲ್ಲೂ ಗುರುಹಿರಿಯರು ಒಂದು ಮುಖ್ಯಕಾರ್ಯದಲ್ಲಿ ತೊಡಗಿಸಲ್ಪಟ್ಟಾಗ ಅತ್ಯಂತ ಎಚ್ಚರಿಕೆಯಿಂದ ನಿರ್ಧಾರ ತೆಗೆದುಕೊಂಡು ಕಾರ್ಯಾಚರಣೆಗೆ ಇಳಿಯಬೇಕೆನ್ನುವ ವಿಷಯದಲ್ಲಿ ಗೌತಮರ ಮಗ ಚಿರಕಾರಿಯ ವ್ಯಕ್ತಿತ್ವ ಇಲ್ಲಿ ಮಾದರಿಯಾಗಿದೆ. ಆತನ ಕಾರ್ಯರೀತಿಯಲ್ಲಿ ಆಲಸ್ಯಗಳೇ ಇಲ್ಲ. ಶ್ರೇಯಸ್ಸಿಗೆ ಕಾರಣವಾಗುತ್ತದೆ. ಯದ್ಯಪಿ ಜಮದಗ್ನಿ, ರೇಣುಕೆಯರ ಪ್ರಸಂಗದಲ್ಲಿ ಪರಶುರಾಮದೇವರು ಕೂಡಲೇ ಕಾರ್ಯಪ್ರವೃತ್ತರಾದರೂ, ಅವರು ತಾಯಿಯನ್ನು ಬದುಕಿಸಿಕೊಳ್ಳುತ್ತಾರೆ. ಇಲ್ಲಿ ಅಹಲ್ಯೆಯ ತಪ್ಪಿಲ್ಲದಿರುವುದು ಗೌತಮರೇ ಹೇಳುತ್ತಾರೆ, ಪಶ್ಚಾತ್ತಾಪಪೂರ್ವಕವಾಗಿ. ಆದ್ದರಿಂದ ಇಲ್ಲಿ ಚಿರಕಾರಿಯ ನಿರ್ಣಯ ಮಾನ್ಯವಾಗಿದೆ.

---

೧ ಚಿರಂ ವೃದ್ಧಾನುಪಾಸೀತ ಚಿರಮನ್ವಾಸ್ಯ ಪೂಜಯೇತ್ ।
ಚಿರಂ ಧರ್ಮಾನ್ನಿಷೇವೇತ ಕುರ್ಯಾಚ್ಚಾನ್ವೇಷಣಂ ಚಿರಮ್ ॥

೨ ಬ್ರುವತಶ್ಚ ಪರಸ್ಯಾಪಿ ವಾಕ್ಯಂ ಧರ್ಮೋಪಸಂಹಿತಮ್ ।
ಚಿರಂ ಪೃಚ್ಛೇಚ್ಚಿರಂ ಬ್ರೂಯಾತ್ ಚಿರಂ ನ ಪರಿಭೂಯತೇ ।
ಚಿರಮನ್ವಾಸ್ಯ ವಿದುಷಶ್ಚಿರಂ ಶಿಷ್ಟಾನ್ನಿಷೇವ್ಯ ಚ ।
ಚಿರಂ ವಿನೀಯಾ ಚಾತ್ಮಾನಂ ಚಿರಂ ಯಾತ್ಯವನಜ್ಞಾತಮ್ ॥

೩. ಉಪಾಸ್ಯ ಬಹುಲಾಸ್ತಸ್ಮಿನ್ನಾಶ್ರಮೇ ಸುಮಹಾತಪಾಃ ।
ಸಮಾಃ ಸ್ವರ್ಗಂ ಗತೋ ವಿಪ್ರಃ ಪುತ್ರೇಣ ಸಹಿತಸ್ತದಾ ॥ - ೧೧೧/೫೧-೭೫

೨. ಮೈತ್ರಿ, ರಾಗದ್ವೇಷಾದಿ ಪ್ರಸಂಗಗಳಲ್ಲೂ ಅತ್ಯಂತ ತಾಳ್ಮೆಯಿಂದ ನಿರ್ಧಾರ ತೆಗೆದುಕೊಳ್ಳಲು ಗೌತಮರೇ ಆದೇಶಿಸಿದ್ದಾರೆ. ಅವರ ನುಡಿಗಳು ಜಗತ್ತಿನ ಎಲ್ಲ ಕಾಲ, ವರ್ಗದ ಜನರಿಗೆ ತಾರಕವಾಗಿದೆ.

ಆಂಗ್ಲ ನುಡಿಯೂ ಹಾಗೆಯೇ ಇದೆ : Haste is Waste. hasty decisions are dangerous.

೩. ಇಲ್ಲಿ ಬಂದಿರುವ ಅಹಲ್ಯಾ ವ್ಯಭಿಚಾರ ಪ್ರಸಂಗ ಸ್ಪಷ್ಟವಾಗಿಲ್ಲ. ಆ ಪ್ರಸಂಗ ನಡೆದಾಗ ಗೌತಮರು ಎಲ್ಲಿದ್ದರು ಎನ್ನುವುದು ಸ್ಪಷ್ಟವಿಲ್ಲ. ಆದರೆ ಗೌತಮರು ಆ ಘಟನೆಯಾದ ಬಳಿಕ ಮತ್ತೆಂದೂ ಪತ್ನಿಯನ್ನು ಬಿಟ್ಟು ಹೋಗಲಿಲ್ಲವೆಂದು ಮಾತು ಮುಂದೆ ಬಂದಿದೆ. ಆದ್ದರಿಂದ ಈ ಪ್ರಸಂಗ ನಡೆದಾಗ ಗೌತಮರು ಆಶ್ರಮದಲ್ಲಿ ಇರಲಿಲ್ಲವೆನಿಸುತ್ತದೆ. ಹಿಂದಿನ ಪ್ರಸಂಗದಲ್ಲಿ(ರಾಮಾಯಣಕಾಲ) ರಾತ್ರಿವೇಳೆ ಇಂದ್ರನು ಗೌತಮರ ವೇಷದಿಂದ ಬಂದು ಅಹಲ್ಯೆಯನ್ನು ಬಲಾತ್ಕರಿಸಿದ್ದು ಇದೆ. ಇಲ್ಲಿ ಗೌತಮ ಅಹಲ್ಯೆಯರೇ ಬ್ರಾಹ್ಮಣರೂಪಿ ಇಂದ್ರನನ್ನು ಸತ್ಕರಿಸಿದ್ದು ಉಲ್ಲೇಖಿತವಾಗಿದೆ. ಗೌತಮರೇ ಮತ್ತೆ ಅಹಲ್ಯೆಯು ಇಂದ್ರನಿಗೆ ಬಲಿಯಾದಳೆಂದು, ಆಕೆಯ ಮಂದಬುದ್ಧಿಯನ್ನು ಹೇಳಿ, ಆಕೆಯ ಅಪರಾಧವಿಲ್ಲವೆಂದೂ ಅವರೇ ಹೇಳುತ್ತಾರೆ.

ಬಹುಶಃ ಕೆಲವು ಶ್ಲೋಕಗಳು ಹಸ್ತಪ್ರತಿಯಲ್ಲಿರದೆ, ಪ್ರಸಂಗ ಪೂರ್ತಿಯಾಗಿ ಇಲ್ಲಿ ಬಂದಿಲ್ಲವೆಂದೆನಿಸುತ್ತದೆ. ಈ ಬಗ್ಗೆ ಸಂಶೋಧನೆ ಅವಶ್ಯ. ಔತ್ತರೇಯಪಾಠವೂ ಹೀಗೆಯೇ ಇದೆ. ಈ ಬಗ್ಗೆ ನಿರ್ಧಾರ ತೆಗೆದುಕೊಳ್ಳುವುದು ಕ್ಲಿಷ್ಟಕರವಾಗಿದೆ.

*****

# ೧೦೩. ಕುಂಡಧಾರೋಪಾಖ್ಯಾನ

ಧರ್ಮರಾಜನ ಪ್ರಶ್ನೆ – 'ತಾತ! ವೇದಗಳು ಧರ್ಮ, ಅರ್ಥ, ಕಾಮಗಳನ್ನು ಹೊಗಳುತ್ತವೆ. ಇವುಗಳಲ್ಲಿ ಯಾವುದನ್ನು ಪಡೆಯುವುದು ಶ್ರೇಷ್ಠ?

ಅದಕ್ಕೆ ಭೀಷ್ಮರು – ಹಿಂದೆ ಕುಂಡಧಾರನೆಂಬ ವ್ಯಕ್ತಿಯು ತನ್ನ ಬ್ರಾಹ್ಮಣ ಭಕ್ತನೊಬ್ಬನಿಗೆ ಮಾಡಿದ ಉಪಕಾರವನ್ನು ತಿಳಿಸುವ ಒಂದು ಇತಿಹಾಸವನ್ನು ಹೇಳಿದರು.

ಬಡಬ್ರಾಹ್ಮಣನೊಬ್ಬ ಯಜ್ಞಾದಿ ಕರ್ಮಗಳ ಸಾಧನೆಗಾಗಿ ಹಣ ಸಂಪಾದನೆಗೆ ತಪಸ್ಸನ್ನು ಮಾಡುತ್ತಿದ್ದ. ಅಲ್ಲದೆ ಭಕ್ತಿಯಿಂದ ದೇವತೆಗಳನ್ನು ಸೇವಿಸಿದರೂ ಧನವನ್ನು ಹೊಂದಲಿಲ್ಲ. ಆದ್ದರಿಂದ ಯಾವ ದೇವತೆಯನ್ನು ಪ್ರಸನ್ನೀಕರಿಸಲಿ ಎಂದು ಯೋಚಿಸುತ್ತಿರುಬಾಗ ಆತನ ಸಮೀಪದಲ್ಲಿ ಕುಂಡಧಾರನೆಂಬ ಮೇಘಾಭಿಮಾನಿಯಾದ ಕುಬೇರನ ಸೇವಕನಾದ ಯಕ್ಷ/ಗಂಧರ್ವನೊಬ್ಬನು ಕಂಡನು[೧].

ಅವನನ್ನು ಕಂಡಕೂಡಲೇ ಬ್ರಾಹ್ಮಣನಿಗೆ ಇವನ ಶರೀರವನ್ನು ನೋಡಿದರೆ ಇವನು ನನಗೆ ಶ್ರೇಯಸ್ಸನ್ನು ಕೊಡುವನೆಂದು ತೋರುತ್ತಿದೆ. ಈತನು ಬೇರಾವ ಮನುಷ್ಯರಿಂದಲೂ ಆರಿಸಿಕೊಂಡಂತೆ ತೋರುವುದಿಲ್ಲ. ನನಗೆ ಇವನು ಬೇಕಾದಷ್ಟು ಧನವನ್ನು ನೀಡಬಹುದೆಂದು ಭಾವಿಸಿ, ಕುಂಡಧಾರನನ್ನು ಭಕ್ತಿಯಿಂದ ಧೂಪದೀಪ ನಾನಾವಿಧವಾದ ಬಲಿ(ನೈವೇದ್ಯ) ಮಾಲೆಗಳಿಂದ ಪೂಜಿಸಿದನು. ಆದರಿಂದ ಸಂತುಷ್ಟನಾದ ಕುಂಡಧಾರನು ಮನಸ್ಸಿನಲ್ಲಿಯೇ 'ಇವನಿಗೆ ಏನಾದರೂ ಅನುಗ್ರಹ(ಪ್ರತ್ಯುಪಕಾರ) ಮಾಡಲೇಬೇಕೆಂದು' ಹೀಗೆ ನುಡಿದನು[೨].

ಕುಂಡಧಾರ – 'ಬ್ರಹ್ಮಹತ್ಯೆ ಮಾಡಿದವನಿಗೆ, ಸುರಾಪಾನ ಮಾಡಿದವನಿಗೆ, ಕಳ್ಳನಿಗೆ, ವ್ರತ ಭಂಗಮಾಡಿದವನಿಗೆ, ಪ್ರಾಯಶ್ಚಿತ್ತಗಳಿವೆ. ಆದರೆ ಕೃತಘ್ನನಿಗೆ ಪ್ರಾಯಶ್ಚಿತ್ತವೇ ಇಲ್ಲ. ಆಶೆಯಿಂದ

---

೧ ಪ್ರತ್ಯಪಶ್ಯತ್ ಜಲಧರಂ ಕುಂಡಾಧಾರಮವಸ್ಥಿತಮ್ । -೧೦೬/೬
**ಲಕ್ಷಾಲಂಕಾರದಲ್ಲಿ** 'ಜಲಧರಂ ಮೇಘಾಭಿಮಾನಿನಮ್ । ಕುಂಡಾಧಾರಂ ಕುಂಡಧಾರನಾಮಕಮ್ । ದೇವಾನುಚರಂ ಗಂಧರ್ವಂ ಧನದಾನುಚರಂ ಯಕ್ಷಂ ವಾ । ಎಂದಿದೆ.

೨ ಅಯಂ ಮೇ ದಾಸ್ಯತಿ ಶ್ರೇಯೋ ವಪುರೇತದ್ಧಿ ತಾದೃಶಮ್ ।
ಏಷ ಮೇ ದಾಸ್ಯತಿ ಧನಂ ಪ್ರಭೂತಂ ಶೀಘ್ರಮೇವ ಚ ॥
ತಸ್ಯೋಪಕಾರೇ ನಿಯತಾಮಿಮಾಂ ವಾಚಮುವಾಚ ಹ ॥ - ೧೦೬/೭-೧೦

ಸ್ತ್ರೀಯಿಂದ ಅಧರ್ಮನೆಂಬ ಮಗನು, ಅಸೂಯೆಯಿಂದ ಕ್ರೋಧ (ಮೋಸ-ವಂಚನೆಯಿಂದ) ಲೋಭಗಳೆಂಬ ಪುತ್ರರು ಜನಿಸುತ್ತಾರೆ. ಆದರೆ ಕೃತಘ್ನನು ಸಂತಾನಕ್ಕೆ ಅರ್ಹನೇ ಅಲ್ಲ[೧].

'ನೀನು ಮಾಡಿದ ಪೂಜೆಗೆ ನಾನು ಸ್ವಲ್ಪ ಉಪಕಾರ ಮಾಡಿದರೆ ನಾನು ಕೃತಘ್ನನೇ ಆಗುತ್ತೇನೆ. ಆದ್ದರಿಂದ ನಿನಗೆ ಮೋಕ್ಷವೆಂಬ ಮಹೋಪಕಾರವನ್ನು ಮಾಡುವ ಪ್ರಯತ್ನವನ್ನೇ ಮಾಡುವೆ' ಎಂದನು ಕುಂಡಧಾರನು.

ನಂತರ ಕುಂಡಧಾರನ ತಪಃಪ್ರಭಾವದಿಂದ ಶಮಾದಿ ತಪಸ್ಸಿನಿಂದ ಕೂಡಿದ ಬ್ರಾಹ್ಮಣನು ದರ್ಭೆಗಳ ಮೇಲೆ ಮಲಗಿದ ಆತನ ಸ್ವಪ್ನದಲ್ಲಿ ಕುಂಡಧಾರನ ಮಾತಿನ ಮೇರೆಗೆ ಒಂದು ನಿದರ್ಶನವನ್ನು ಕಂಡನು. ಕನಸಿನಲ್ಲಿ ಮಣಿಭದ್ರನನ್ನು ಯಾಚಿಸುವವರ ಪ್ರಾರ್ಥನೆಗಳನ್ನು ದೇವತೆಗಳಿಗೆ ಸಲ್ಲಿಸುತ್ತಿರುವ ದೃಶ್ಯವನ್ನು, ದೇವತೆಗಳು ಯಾಚಕರಿಗೆ ಅನುಗ್ರಹಿಸುವ ಫಲಗಳನ್ನು ಈ ಬ್ರಾಹ್ಮಣ ಕಂಡನು. ಅಲ್ಲಿದ್ದ ಯಕ್ಷರೆಲ್ಲರೂ ನೋಡುತ್ತಿದ್ದಂತೆ ಕುಂಡಧಾರನು ದೇವತೆಗಳ ಮುಂದೆ ಬಿದ್ದನು. ದೇವತೆಗಳ ಮಾತಿನಂತೆ ಮಣಿಭದ್ರನು ಕುಂಡಧಾರನನ್ನು ಕುರಿತು 'ಏನನ್ನು ಬಯಸುತ್ತೀ' ಎಂದು ಕೇಳಿದನು. ಅದಕ್ಕೆ ಕುಂಡಧಾರನು 'ತನ್ನ ಈ ಭಕ್ತನಾದ ಬ್ರಾಹ್ಮಣನಿಗೆ ಭವಿಷ್ಯದಲ್ಲಿ ಸುಖವಾಗುವಂತೆ ಅನುಗ್ರಹಿಸಲು ಬೇಡಿದನು. ಅದಕ್ಕೆ ದೇವತೆಗಳ ಮಾತಿನಂತೆ ಮಣಿಭದ್ರನು 'ದೇವತೆಗಳ ಆಜ್ಞೆಯಂತೆ ಬ್ರಾಹ್ಮಣನು ಬಯಸುವಷ್ಟು ಅಸಂಖ್ಯೆಯ ಧನವನ್ನು ಕೊಡುತ್ತೇನೆ' ಎಂದನು.

ಕುಂಡಧಾರನು ಮನುಷ್ಯರ ಜೀವನ ಚಂಚಲ, ಅಶಾಶ್ವತವೆಂದು ಭಾವಿಸಿ ಬ್ರಾಹ್ಮಣನ ತಪಸ್ಸನ್ನು ಹೆಚ್ಚಿಸಲು 'ಬ್ರಾಹ್ಮಣನ ಸಲುವಾಗಿ ನಾನು ಭಾರಿ ಧನಗಳನ್ನಾಗಲೀ, ರತ್ನಪೂರ್ಣವಾದ ಭೂಮಿಯನ್ನಾಗಲೀ, ಬಯಸುವುದಿಲ್ಲ. ಅವನ ಬುದ್ಧಿಯು ಧರ್ಮವನ್ನು ಆಶ್ರಯಿಸಿ ಬದುಕಲಿ, ಧರ್ಮಬುದ್ಧಿ ನಿಶ್ಚಿತವಾಗಿರಲಿ, ನನ್ನ ಭಕ್ತ ಧರ್ಮಪ್ರಧಾನನಾಗಲಿ ಈ ಅನುಗ್ರಹವನ್ನು ನಾನು ಯಾಚಿಸುತ್ತೇನೆ ಎಂದು ಪ್ರಾರ್ಥಿಸಿದನು. ಅದಕ್ಕೆ ಮಣಿಭದ್ರನು ಅನೇಕ ತೆರನಾದ ಸುಖಗಳು ಧರ್ಮದ ಫಲಗಳಾಗಿವೆ. ಆದ್ದರಿಂದ ದೇಹಾಯಾಸವಾಗದಂತೆ ಧರ್ಮದ ಫಲಗಳನ್ನು ಅನುಭವಿಸಲಿ ಎಂದು ನುಡಿದಾಗ, ಕುಂಡಧಾರನು ಮತ್ತೆ ಮತ್ತೆ ಬ್ರಾಹ್ಮಣನಿಗೆ ಧರ್ಮ ಬುದ್ಧಿಯನ್ನು ಬೇಡಿದಾಗ ಮಣಿಭದ್ರನು 'ದೇವತೆಗಳು ನಿನ್ನ ಹಾಗೂ ನಿನ್ನ ಭಕ್ತನಾದ ಬ್ರಾಹ್ಮಣನ ಬಗ್ಗೆ ಪ್ರಸನ್ನರಾಗಿದ್ದಾರೆ. ಅವರ ಅನುಗ್ರಹದಿಂದ ಅವನು

---

೧ ಬ್ರಹ್ಮಘ್ನೇ ಚ ಸುರಾಪೇ ಚ ಚೋರೇ ಭಗ್ನವ್ರತೇ ತಥಾ।
ನಿಷ್ಕೃತಿರ್ವಿಹಿತಾ ಸದ್ಭಿಃ ಕೃತಘ್ನೇ ನಾಸ್ತಿ ನಿಷ್ಕೃತಿಃ॥
ಆಶಾಯಾಸ್ತನಯೋಽಧರ್ಮಃ ಕ್ರೋಧೋಽಸೂಯಾಸುತಃ ಸ್ಮೃತಃ।
ಪುತ್ರೋ ಲೋಭೋ ನಿಕೃತ್ಯಾಸ್ತು ಕೃತಘ್ನೋ ನಾರ್ಹತಿ ಪ್ರಜಾಮ್॥ - ೧೦೬/೧೧,೧೨
ಲಕ್ಷಾಲಂಕಾರದಲ್ಲಿ 'ಕೃತಘ್ನೇ ನಾಸ್ತಿ ನಿಷ್ಕೃತಿಃ ಇತ್ಯತ್ರ ತ್ವತ್ಕೃತಪೂಜಾಯಾಃ ಅಲ್ಪೋಪಕಾರೇ ಕೃತೇ ಮಮ ಕೃತಘ್ನತಾ ಸ್ಯಾತ್। ಅತಃ ಮೋಕ್ಷಾಖ್ಯಮಹೋಪಕಾರಾಯೈವ ಯತಿಷ್ಯೇ ಇತಿ ಭಾವಃ॥

ಧರ್ಮಬುದ್ಧಿಯುಳ್ಳವನಾಗಲಿ, ಸ್ಥಿರವಾಗಿರಲಿ ಅವನ ಧರ್ಮಬುದ್ಧಿ ಎಂದು ನುಡಿದನು. ಹೀಗೆ ದೇವತೆಗಳ ಮತ್ತು ಮಣಿಭದ್ರನ ಅನುಗ್ರಹದಿಂದ ಕುಂಡಧಾರನಿಗೆ ಬಹಳ ಸಂತೋಷವಾಯಿತು[೧].

ಇತ್ತ ಸ್ವಪ್ನದಿಂದ ಎಚ್ಚೆತ್ತ ಬ್ರಾಹ್ಮಣನ ಪಕ್ಕದಲ್ಲಿ ದೇವತೆಗಳು ಹರಿದ, ಮಲಿನ ಬಟ್ಟೆಗಳು ಇದ್ದವು. ಅದನ್ನು ನೋಡಿದ ಬ್ರಾಹ್ಮಣನಿಗೆ ನಿರಾಶೆ, ದುಃಖ, ವೈರಾಗ್ಯಗಳು ಬಂದು ಈ ಕುಂಡಧಾರನೇ ನನ್ನ ತಪಸ್ಸಿನ ಉದ್ದೇಶ ತಿಳಿಯಲಿಲ್ಲ, ಬೇರೆ ಯಾರು ತಾನೇ ತಿಳಿಯಲು ಸಾಧ್ಯ? ಆದ್ದರಿಂದ ಅರಣ್ಯದಲ್ಲಿದ್ದು ಧರ್ಮದಿಂದ ಜೀವನ ನಡೆಸುವೆ ಎಂದು ಸಂಕಲ್ಪಿಸಿ, ದೇವತಾನುಗ್ರಹದಿಂದಲೇ (ಆತನಿಗೆ ಗೊತ್ತಿಲ್ಲದಂತೆ ಧರ್ಮ ಬುದ್ಧಿ ಆಗಲೇ ಬಂದಿತು) ಅರಣ್ಯದಲ್ಲಿ ಘೋರತಪಸ್ಸನ್ನು ಆರಂಭಿಸಿದನು. ನಿತ್ಯವೂ ದೇವಾತಿಥಿ ಪೂಜೆ, ಅವರಿಗೆ ಅರ್ಪಿಸಿದ ಶೇಷದಿಂದ ಆಹಾರ ತೆಗೆದುಕೊಳ್ಳುತ್ತಿದ್ದ. ಅಂತೆಯೇ ಆತನಿಗೆ ಧರ್ಮದಲ್ಲಿ ಸ್ನೇಹ ಉತ್ಪಾದನೆಯಾಯಿತು.

ಮುನ್ನಡೆಯುತ್ತಾ ಗಡ್ಡೆ, ಗೆಣಸು, ಫಲಾದಿಗಳನ್ನು ಬಿಟ್ಟು ಜಲಾಹಾರನಾದ. ನಂತರ ಅದೂ ಬಿಟ್ಟು ವಾಯುವನ್ನು ಸೇವಿಸುತ್ತಿದ್ದ. ದಿನೇ ದಿನೇ ಧರ್ಮಬುದ್ಧಿ ಹೆಚ್ಚಾಗಿ ದಿವ್ಯದೃಷ್ಟಿ ಬಂದಿತು. ಆಗ ಬ್ರಾಹ್ಮಣನಿಗೆ 'ಸಂತುಷ್ಟನಾಗಿ ನಾನು ಯಾರಿಗಾದರೂ, ಹಣವನ್ನು ಕೊಡುವೆನೆಂದರೆ ಆ ಮಾತು ಸುಳ್ಳಾಗದು' ಎಂಬ ಬುದ್ಧಿ - ವಿಚಾರ ಬಂತು. ಆಮೇಲೆ ತನ್ನ ತಪಸ್ಸನ್ನು ಮತ್ತೂ ಹೆಚ್ಚಿಸಿ ಮೋಕ್ಷಸಿದ್ಧಿಗಾಗಿ ವಿಚಾರ ಮಾಡಿದ. ಮನಸ್ಸಿಗೆ ಮತ್ತೆ 'ನಾನು ಯಾರಿಗಾದರೂ ಸಂತುಷ್ಟನಾಗಿ ರಾಜ್ಯವನ್ನು ಅನುಗ್ರಹಿಸಿದರೆ ಅವನು ರಾಜನಾಗುವನು. ನನ್ನ ಮಾತು ಸುಳ್ಳಾಗದು' ಎನಿಸಿತು[೨].

---

೧ ಪಶ್ಯತಾಮಥ ಯಕ್ಷಾಣಾಂ ಕುಂಡಧಾರೋ ಮಹಾದ್ಯುತಿಃ।
ನಿಪತ್ಯ ಪತಿತೋ ಭೂಮೌ ದೇವಾನಾಂ ಭರತರ್ಷಭಃ॥
ಯದಿ ಪ್ರಸನ್ನಾ ದೇವಾ ಮೇ ಭಕ್ತೋಽಯಂ ಬ್ರಾಹ್ಮಣೋ ಮಮ।
ಅಸ್ಯಾನುಗ್ರಹಮಿಚ್ಛಾಮಿ ಕೃತಂ ಕಿಂಚಿತ್ ಸುಖೋದಯಮ್॥
ಯಾವದ್ಧನಂ ಪ್ರಾರ್ಥಯತೇ ಬ್ರಾಹ್ಮಣೋಽಯಂ ಸಖಾ ತವ।
ದೇವಾನಾಂ ಶಾಸನಾತ್ತಾವದಸಂಖ್ಯೇಯಂ ದದಾಮ್ಯಹಮ್॥
ಪೃಥಿವೀಂ ರತ್ನಪೂರ್ಣಾಂ ವಾ ಮಹದ್ವಾ ಧನಸಂಚಯಮ್।
ಭಕ್ತಾಯ ನಾಹಮಿಚ್ಛಾಮಿ ಭವೇದೇಷ ತು ಧಾರ್ಮಿಕಃ॥
ಧರ್ಮೇಽಸ್ಯ ರಮತಾಂ ಬುದ್ಧಿಃ ಧರ್ಮಂ ಚೈವೋಪಜೀವತು।
ಧರ್ಮಪ್ರಧಾನೋ ಭವತು ಮಮೈಷೋಽನುಗ್ರಹೋ ಮತಃ॥
ಪ್ರೀತಾಸ್ತೇ ದೇವತಾಃ ಸರ್ವಾ ದ್ವಿಜಸ್ಯಾಸ್ಯ ತಥೈವ ಚ।
ಭವಿಷ್ಯತ್ಯೇಷ ಧರ್ಮಾತ್ಮಾ ಧರ್ಮೇ ಚಾಧಾಸ್ಯತೇ ಮತಿಃ॥ - ೧೦೬/೧೩-೨೮

೨ ತತಃ ಪ್ರಹೃಷ್ಟವದನೋ ಭೂಯ ಆರಬ್ಧವಾಂಸ್ತಪಃ।

ಹೀಗೆ ಬ್ರಾಹ್ಮಣನು ತಪಸ್ಸು ಮುಂದುವರೆಸುತ್ತಿರಲು ಬ್ರಾಹ್ಮಣನ ಸೌಹಾರ್ದದಿಂದಾಗಿ ಕುಂಡಧಾರನು ಬ್ರಾಹ್ಮಣನಿಗೆ ದರ್ಶನ ನೀಡಿದನು. ಬ್ರಾಹ್ಮಣನು ಆಶ್ಚರ್ಯದಿಂದ ವಿಧ್ಯುಕ್ತವಾಗಿ ಸತ್ಕರಿಸಿದ. ಕುಂಡಧಾರನು 'ಬ್ರಾಹ್ಮಣನೇ ನಿನಗೆ ದಿವ್ಯ ದೃಷ್ಟಿ ಬಂದಿದೆ. ಅದರಿಂದ ಹಿಂದಿನ ರಾಜರು ಹೊಂದಿದ ಗತಿಯನ್ನು ನೋಡು' ಎಂದನು. ಅದರಂತೆ ಬ್ರಾಹ್ಮಣನು ತನ್ನ ದಿವ್ಯದೃಷ್ಟಿಯಿಂದ ಸಹಸ್ರಾರು ರಾಜರು ನರಕದಲ್ಲಿ ಬಿದ್ದಿರುವುದನ್ನು ದೂರದಿಂದ ನೋಡಿದ. ಆದ್ದರಿಂದ ನನ್ನನ್ನು ಪೂಜಿಸಿ ನಿನಗೆ ದುಃಖವಾಗಬಾರದು. ನಾನು ಅದರಿಂದ ಯಾವ ಅನುಗ್ರಹ ಮಾಡಿದಂತಾಯಿತು. ರಾಜರಿಗೆ ಒದಗಿರುವ ದುರ್ಗತಿಯನ್ನು ನೋಡಿಯೂ ಯಾವ ಮನುಷ್ಯ ತಾನೇ ಲೌಕಿಕ ಕಾಮನೆಗಳನ್ನು (ಅರ್ಥಾದಿಗಳು - ನೀನು ಹಿಂದೆ ಬಯಸಿದ್ದೆಯಲ್ಲಾ ಅದು) ಬಯಸುವನು? ಅಂತಹವನಿಗೆ ಸ್ವರ್ಗದ ಬಾಗಿಲುಗಳು ಮುಚ್ಚಿರುತ್ತವೆ.

ನಂತರ ಬ್ರಾಹ್ಮಣನು ತನ್ನ ದಿವ್ಯದೃಷ್ಟಿಯಿಂದ ಭೋಗಿಗಳಾದ ಮನುಷ್ಯರು ಕಾಮ, ಕ್ರೋಧ, ಲೋಭ, ಭಯ, ಮದ, ನಿದ್ರೆ, ಆಲಸ್ಯ ಇವೇ ಮೊದಲಾದ ಶತ್ರುಗಳಿಂದ ಆಕ್ರಮಿಸಿಕೊಂಡಿರುವುದನ್ನು ನೋಡಿದನು. ಕುಂಡಧಾರನು ಮಂದುವರೆದು 'ಇಡೀ ಜಗತ್ತು ಕಾಮಕ್ರೋಧಾದಿಗಳಿಂದ ಬಂಧಿತವಾಗಿದೆ. ದೇವತೆಗಳಿಗೆ ಮನುಷ್ಯ ಜನ್ಮದಿಂದ (ಅದಕ್ಕೇನೆ) ಭಯ. ಆದ್ದರಿಂದ ದೇವದೂತರು ಮನುಷ್ಯರಿಗೆ ಕಾಮಕ್ರೋಧಗಳನ್ನು ನೀಡಿ ತಪಸ್ಸಿಗೆ (ಮನುಷ್ಯರ) ವಿಘ್ನವುಂಟು ಮಾಡುತ್ತಾರೆ. ದೇವತಾನುಮತಿ, ಅನುಗ್ರಹವಿಲ್ಲದೆ ಯಾರೂ ನಿರ್ವಿಘ್ನವಾಗಿ ಧರ್ಮಕಾರ್ಯ ಮಾಡಲಾರರು, ಧಾರ್ಮಿಕನೂ ಆಗಲಾರನು. ನಿನಗೆ ದೇವತೆಗಳ ಅನುಜ್ಞೆ, ಅನುಗ್ರಹ ಸಿಕ್ಕಿದೆ. ತಪಸ್ಸು ಸಿದ್ಧಿಸಿದೆ. ಹೀಗಾಗಿ ನೀನು ಬೇರೆ ಯಾಚಕರಿಗೆ ರಾಜ್ಯ ಕೋಶಾದಿಗಳನ್ನು ಕೊಡಬಲ್ಲೆ.[೧]''

---

ಭೂಯಶ್ಚಾಚಿಂತಯತ್ ಸಿದ್ಧೋ ಯತ್ಪರಂ ಸೋಽಭ್ಯಪದ್ಯತ ॥
ಯದಿದದ್ಯಾಮಹಂ ರಾಜ್ಯಂ ತುಷ್ಟೋ ವೈ ಯಸ್ಯ ಕಸ್ಯಚಿತ್ ।
ಸ ಭವೇದಚಿರಾದ್ರಾಜಾ ನ ಮಿಥ್ಯಾ ವಾಗ್ಭವೇನ್ಮಮ ॥ – ೧೦೬/೩೮,೩೯
ಲಕ್ಷಾಲಂಕಾರದಲ್ಲಿ 'ನ ಮಿಥ್ಯಾ ವಾಗ್ಭವೇತ್ ಮಮ ಇತ್ಯತ್ರ ಮಮ ವಾಕ್ ಪ್ರಾರ್ಥನಾರೂಪ ವಾಕ್ । ಫಲಾಲಾಭಾತ್ ಮಿಥ್ಯಾವ್ಯರ್ಥಾ ನ ಭವೇತ್ । ಮಹಾಫಲಂ ತು ನ ಲಭ್ಯತ ಏವೇತಿ ಭಾವಃ। ನನ್ನ ಪ್ರಾರ್ಥನೆಯಿಂದ ದೇವತೆಗಳು ರಾಜ್ಯಾದಿಫಲ ಕೊಟ್ಟರೂ, ಮೋಕ್ಷ ಮಹಾಫಲ ಯಾರಿಗೂ ದೊರಕದು. ಅದಕ್ಕಾಗಿ ಇನ್ನೂ ಹೆಚ್ಚಿನ ತಪಸ್ಸನ್ನು ಮಾಡಬೇಕೆಂದು ಬ್ರಾಹ್ಮಣನು ಸರಿಯಾಗಿಯೇ ತಿಳಿದನು. ಅದೂ ಧರ್ಮಬುದ್ಧಿಯ ಫಲ.

೧ ತಸ್ಯ ಸಾಕ್ಷಾತ್ ಕುಂಡಧಾರೋ ದರ್ಶಯಾಮಾಸ ಭಾರತ ।
ಬ್ರಾಹ್ಮಣಸ್ಯ ತಪೋಯೋಗಾತ್ ಸೌಹೃದೇನಾಭಿಚೋದಿತಃ ॥.....
ಸಮಾಗಮ್ಯ ಸ ತೇ ನಾಥ ಪೂಜಾಂ ಚಕ್ರೇ ಯಥಾವಿಧಿ ।
ಬ್ರಾಹ್ಮಣಃ ಕುಂಡಧಾರಸ್ಯ ವಿಸ್ಮಿತಶ್ಚಾಭವನ್ನೃಪ ।

ಈ ಮಾತುಗಳನ್ನು ಕೇಳಿದ ಬ್ರಾಹ್ಮಣನು ಕುಂಡಧಾರನಿಗೆ ಸಾಷ್ಟಾಂಗವೆರಗಿದ. 'ನನ್ನ ಮೇಲೆ ಮಹಾನುಗ್ರಹವನ್ನು ಮಾಡಿರುವೆ' ಎಂದನು. ಆದರೆ ನಾನು ಅದನ್ನು ತಿಳಿಯದೆ ನೀನು ನನ್ನ ಧನಾಗಮನವನ್ನು ತಪ್ಪಿಸಿದವನೆಂದು ಕಾಮ, ಲೋಭಗಳಿಂದಾಗಿ ತಪ್ಪಾಗಿ ತಿಳಿದು ದ್ವೇಷ ಬಗೆದೆ. ಅದಕ್ಕಾಗಿ ನನ್ನನ್ನು ಕ್ಷಮಿಸು' ಎಂದನು[೧].

ಕುಂಡಧಾರನು ಬ್ರಾಹ್ಮಣನಿಗೆ 'ನಾನು ಅಂದೇ ಕ್ಷಮಿಸಿದ್ದೇನೆ' ಎಂದು ಹೇಳಿ ಆಲಿಂಗಿಸಿಕೊಂಡು, ಅಲ್ಲಿಯೇ ಅಂತರ್ಧಾನನಾದನು[೨].

ನಂತರ ಬ್ರಾಹ್ಮಣನು ಕುಂಡಧಾರನ ಅನುಗ್ರಹದಿಂದ ತಪಸ್ಸಿದ್ಧಿಯನ್ನು ಪಡೆದು ಎಲ್ಲ ಲೋಕಗಳಲ್ಲಿ ಸಂಚರಿಸಿದನು. ತಪಸ್ಸಿದ್ಧಿಯಿಂದ ಆಕಾಶ ಸಂಚಾರ ಸಾಮರ್ಥ್ಯ, ಸಂಕಲ್ಪಮಾತ್ರದಿಂದ ಇಷ್ಟಾರ್ಥಲಾಭಶಕ್ತಿ, ಧರ್ಮ, ಯೋಗಶಕ್ತಿಗಳಿಂದ ಎಲ್ಲವನ್ನು ಪಡೆಯುವ ಪರಮಗತಿ ಹೀಗೆ ಎಲ್ಲವೂ ಸಾಧ್ಯವಾಯಿತು. ದೇವತೆಗಳು, ಬ್ರಾಹ್ಮಣರು, ಸಜ್ಜನರು, ಯಕ್ಷರು, ಚಾರಣರು ಜಗತ್ತಿನಲ್ಲಿ ಧಾರ್ಮಿಕರನ್ನು ಪೂಜಿಸುತ್ತಾರೆಯೇ ಹೊರತು ಕಾಮೋಪಭೋಗಿಗಳನ್ನಾಗಲೀ, ಸಿರಿವಂತರನ್ನಾಗಲೀ, ಪೂಜಿಸುವುದಿಲ್ಲ.

ಆದ್ದರಿಂದ ಧರ್ಮರಾಜನೇ! ನಿನ್ನಬುದ್ಧಿಯೂ ಧರ್ಮದಲ್ಲಿಯೇ ರತಿಯನ್ನುಹೊಂದಿದೆ. ಆದ್ದರಿಂದ ದೇವತೆಗಳು ಪ್ರಸನ್ನರಾಗಿದ್ದಾರೆ, ನಿನ್ನ ಬಗ್ಗೆ. ಧನದಲ್ಲಿ ಸುಖವೆನ್ನುವುದು ಅತ್ಯಲ್ಪ ಅಶಾಶ್ವತ. ಆದರೆ ಧರ್ಮಾಚರಣೆಯಲ್ಲಿ ಪರಮಸುಖ ಅಡಗಿದೆ[೩].

---

ಮಾಂ ಪೂಜಯಿತ್ವಾ ಭಾವೇನ ಯದಿ ತ್ವಂ ದುಃಖಮಾಪ್ನುಯಾಃ।
ಕೃತಂ ಮಯಾ ಭವೇತ್ ಕಿಂ ತೇ ಕಶ್ಚ ತೇಽನುಗ್ರಹೋ ಭವೇತ್।
... ಸ ದೇವೈರನನುಜ್ಞಾತಃ ಕಶ್ಚಿತ್ ಭವತಿ ಧಾರ್ಮಿಕಃ।
ಏಷ ಶಕ್ತೋಽಸಿ ತಪಸಾ ರಾಜ್ಯಂ ದಾತುಂ ಧನಾನಿ ಚ।

೧ ತತಃ ಪಪಾತ ಶಿರಸಾ ಬ್ರಾಹ್ಮಣಸ್ತೋಯಧಾರಿಣೇ।
ಉವಾಚ ಚೈನಂ ಧರ್ಮಾತ್ಮಾ ಮಹಾನ್ ಮೇಽನುಗ್ರಹಃ ಕೃತಃ।
ಕಾಮಲೋಭಾನುಬಂಧೇನ ಪುರಾ ತೇ ಯದಸೂಯಿತಮ್।
ಮಯಾ ಸ್ನೇಹಮವಿಜ್ಞಾಯ ತತ್ರ ಮೇ ಕ್ಷಂತುಮರ್ಹಸಿ॥ - ೧೦೬/೪೦-೫೦

೨ ಕ್ಷಾಂತಮೇವ ಮಯೇತ್ಯುಕ್ತ್ವಾ ಕುಂಡಧಾರೋ ದ್ವಿಜರ್ಷಭಮ್।
ಸಂಪರಿಷ್ವಜ್ಯ ಬಾಹುಭ್ಯಾಂ ತತ್ರೈವಾಂತರಧೀಯತ॥ - ೧೦೬/೫

೩ ತತಃ ಸರ್ವಾನ್ ಇಮಾನ್ ಲೋಕಾನ್ ಬ್ರಾಹ್ಮಣೋಽನುಚಚಾರ ಹ।
ಕುಂಡಧಾರಪ್ರಸಾದೇನ ತಪಸಾ ಯೋಜಿತಃ ಪುರಾ।
ವಿಹಾಯಸಾ ಚ ಗಮನಂ ತಥಾ ಸಂಕಲ್ಪಿತಾರ್ಥತಾ।
ಧರ್ಮಾಚ್ಛಕ್ತ್ಯಾ ತಥಾ ಯೊಗಾದ್ಯಾ ಚೈವ ಪರಮಾಗತಿಃ।
ದೇವತಾ ಬ್ರಾಹ್ಮಣಾಃ ಸಂತೋ ಯಕ್ಷಾ ಮಾನುಷಚಾರಣಾಃ।
ಧಾರ್ಮಿಕಾನ್ ಪೂಜಯಂತೀಹ ನ ಧನಾಢ್ಯಾನ್ನ ಕಾಮಿನಃ।

## ಸಂದೇಶಗಳು-ವಿವರಣೆಗಳು

೧. ವೇದಾದಿಗಳು ಧರ್ಮಾದಿ ಮೂರು ಪುರುಷಾರ್ಥಗಳನ್ನು ಹೇಳುತ್ತವೆ ಎಂದು ಧರ್ಮರಾಜನೇ ಹೇಳುತ್ತಾನೆ. ಅವುಗಳಲ್ಲಿ ಶ್ರೇಷ್ಠ ಧರ್ಮವೆಂದು ಈ ಉಪಾಖ್ಯಾನದ ಮುಖ್ಯ ಸಂದೇಶ. ಧರ್ಮದ ಮೂಲಕ ಮೋಕ್ಷದಸಾಧನೆ. ಮಹಾಭಾರತದಲ್ಲಿ ಇದೇ ಚರ್ಚೆ ನಡೆದು ಪುರುಷಾರ್ಥಚತುಷ್ಟಯಗಳಲ್ಲಿ ಕಾಮವೇ ಶ್ರೇಷ್ಠವೆಂದು ಭೀಮಸೇನನ ಅಭಿಮತವೆಂಬುದನ್ನೂ ಇಲ್ಲಿ ಸ್ಮರಿಸಬೇಕು. ಕಾಮ ಭಗವಂತನೇ, ಮೋಕ್ಷವೂ ಕಾಮವೇ. ಸದಿಚ್ಛೆ ಎಂಬ ವಿವರಣೆ ಮ.ಭಾ.ತಾ.ನಿಯಲ್ಲಿ ಅಧ್ಯಾಯ ೨೯ರ ಕೊನೆಗೆ ಬಂದಿರುವುದನ್ನು ಅನುಸಂಧಾನ ಮಾಡಬೇಕು.

೨. ಬ್ರಾಹ್ಮಣನ ಆಸೆ ಯಜ್ಞಾದಿಗಳಿಗೆ ಅರ್ಥ ಸಂಪಾದನೆ. ಆತ ಮಾಡಿದ್ದೆಲ್ಲ ವ್ಯರ್ಥವಾಯಿತಾದರೂ 'ಕುಂಡಧಾರ'ನ ಬರುವಿಕೆಯೊಂದಿಗೆ ಬ್ರಾಹ್ಮಣನಿಗೆ ಒಳ್ಳೆಯ ಗುರು, ಮಾರ್ಗದರ್ಶಕ ಸಿಕ್ಕಂತಾಯಿತು. ಆತನ ಜೀವನದ ವಿಧಾನವೇ ಪೂರ್ಣ ಬದಲಾಯಿತು. ಆದ್ದರಿಂದ ಒಳ್ಳೆಯ ಗುರುವಿನ ಸಲುವಾಗಿ ಕಾಯಬೇಕು, ಹುಡುಕಬೇಕು. ಸದ್ಗುರುವಿನ ಸಲುವಾಗಿ ಪ್ರಯತ್ನಿಸಬೇಕು.

೩. ಕುಂಡಧಾರನು ಗಂಧರ್ವ/ಯಕ್ಷನಾಗಿದ್ದ ತನಗಿಂತ ಉತ್ತಮವಾದ ಮಣಿಭದ್ರನ ಮೂಲಕ ದೇವತೆಗಳಿಗೆ ಬ್ರಾಹ್ಮಣನ ಶ್ರೇಯಸ್ಸಿಗೆ ದಾರಿ ಮಾಡಿಕೊಡುತ್ತಾನೆ. ಆದ್ದರಿಂದ ಸದ್ಗುರುವಿನ ಮೇಲೆ ಭಾರ ಹಾಕಬೇಕು. ಅವರು ಉಳಿದುದನ್ನು ನೋಡಿಕೊಳ್ಳುತ್ತಾರೆ ಎಂಬ ಸಂದೇಶ ಇಲ್ಲಿದೆ.

೪. ಬ್ರಾಹ್ಮಣನ ಅಲ್ಪಫಲದ ಆಶೆಯನ್ನು ಆತನಿಗೆ ಗೊತ್ತಿಲ್ಲದಂತೆ ನಿರಾಕರಿಸಿ ಶಾಶ್ವತಫಲ ಬರುವಂತೆ ಮಾಡಿದ ಕುಂಡಧಾರನ ಔದಾರ್ಯ, ವಾತ್ಸಲ್ಯ ಅನುಕರಣೀಯ. ಸ್ನೇಹಿತ/ ಗುರು/ಶಿಷ್ಯರನ್ನು ಮುಂದೆ ತರುವ ಮುತ್ಸದ್ದಿಯಾಗಿದ್ದಾನೆ.

೫. ಅಲ್ಪಕಾಲೀನ ಫಲಕ್ಕೆ ಹಾತೊರೆಯಬಾರದು ಎಂಬ ಸಂದೇಶ ಕುಂಡಧಾರ ಪರೋಕ್ಷವಾಗಿ ಬ್ರಾಹ್ಮಣನಿಗೆ ತೋರಿಸಿದ ರಾಜ್ಯಾದಿಗಳು ಲೌಕಿಕ ಐಶ್ವರ್ಯಗಳ ಫಲ ನರಕಾದಿಗಳೂ ಆಗುತ್ತವೆ ಎಂದು ಸಾಕ್ಷಾತ್ ತೋರಿಸಿ ಬ್ರಾಹ್ಮಣನನ್ನು ಒಪ್ಪಿಸಿದ ಕುಂಡಧಾರನ ಉಪದೇಶದ ರೀತಿ ಅಸದೃಶ.

೬. ದೇವತೆಗಳ, ಮಣಿಭದ್ರನ ಅನುಗ್ರಹವನ್ನು ಬ್ರಾಹ್ಮಣನಿಗೆ ಕುಂಡಧಾರ ಹೇಳಲಿಲ್ಲ. ಆದರೆ ಅದರ ಪರಿಣಾಮ ಮಾತ್ರ ಬ್ರಾಹ್ಮಣನ ಮೇಲಾಯಿತು. ವೈರಾಗ್ಯ ಹೊಂದಿ ತಪಸ್ಸಿಗೆ

---

ಸುಪ್ರಸನ್ನಾ ಹಿ ತೇ ದೇವಾ ಯತ್ತೇ ಧರ್ಮೇ ರತಾಮತಿಃ।
ಧನೇ ಸುಖಕಲಾ ಕಾಚಿತ್ ಧರ್ಮೇ ತು ಪರಮಂ ಸುಖಮ್ ॥ – ೧೦೬/೫೨-೫೫

ಹೋದ.

೭. ಬ್ರಾಹ್ಮಣನಿಗೆ ಕುಂಡಧಾರನ ಬಗ್ಗೆ ಮನಸ್ಸಿನ ಯಾವುದೇ ಮೂಲೆಯಲ್ಲಿ ಅಸಮಾಧಾನ, ದ್ವೇಷ, ಅಸೂಯೆ ಇದ್ದರೂ, ಆತನ ಧರ್ಮಬುದ್ಧಿಯ ನಡತೆಗೆ ದೇವತಾನುಗ್ರಹವೇ ಕಾರಣ. ಅದಕ್ಕೆ ಕುಂಡಧಾರನ ಪ್ರಯತ್ನವೇ ಕಾರಣ.

೮. ತನ್ನ ಅಸಮಾಧಾನವನ್ನು ಒಪ್ಪಿ ಕ್ಷಮಿಸೆಂದು ಕೋರಿದ ಬ್ರಾಹ್ಮಣ ನಿಜಕ್ಕೂ ಒಳ್ಳೆಯ ಸಾಧಕ. ತನ್ನ ದೌರ್ಬಲ್ಯ, ತಪ್ಪನ್ನು ಒಪ್ಪಿಕೊಂಡು ಕ್ಷಮೆ ಕೇಳುತ್ತಾನೆ. ಹಾಗೆಯೇ ಎಲ್ಲ ಸಾಧಕರಿರಬೇಕು.

೯. ಬ್ರಾಹ್ಮಣ ಸಿಟ್ಟಾಗಿದ್ದರೂ ಆತನನ್ನು ಕ್ಷಮಿಸಿದ(ಆಗಲೇ) ಕುಂಡಧಾರನ ಗುಣ ಎಲ್ಲ ಗುರುಹಿರಿಯರಿಗೆ ಇದ್ದರೆ, ಚಿಕ್ಕವರು ಮೇಲೆ ಬರುತ್ತಾರೆ. ಇಲ್ಲದಿದ್ದರೆ ಮೊಳಕೆ ಒಡೆಯಲೂ ಆಗದ ಬೀಜದಂತೆ ಆಗುತ್ತಾರೆ ಕಿರಿಯರು.

೧೦. ಬ್ರಾಹ್ಮಣನ ತಪಸ್ಸಿನ ಫಲ ಇಹ, ಪರ, ಪರಮಗತಿಯಾದ ಮೋಕ್ಷ ಎಲ್ಲ ಸಿಕ್ಕಿತು. ಅದಕ್ಕೆ ಮೋಕ್ಷಕ್ಕೆ ಹಾತೊರೆಯುವುದು, ಇಲ್ಲಿಯ ಸುಖದ ಬಗ್ಗೆ ವೈರಾಗ್ಯ, ಇಲ್ಲಿನ ಸಂದೇಶ.

ತಪಸ್ಸಿನಿಂದ ಫಲ ಸಿದ್ಧಿ ಎನ್ನಲು ಬ್ರಾಹ್ಮಣನೇ ನಿದರ್ಶನ.

೧೧. ದೇವತಾ, ಬ್ರಾಹ್ಮಣಾದಿಗಳೆಲ್ಲರೂ ಗೌರವಿಸುವುದು ಧಾರ್ಮಿಕರನ್ನು ಹೊರತು ಧನವಂತರನ್ನಲ್ಲ.

೧೨. ಧರ್ಮರತಿಯಿಂದ ದೇವತೆಗಳ ಪ್ರಸನ್ನತೆ, ಧನದಿಂದ ಬರುವ ಸುಖ, ಅತ್ಯಲ್ಪ ಅನಿತ್ಯ. ಧರ್ಮಪಾಲನೆಯಿಂದ ಸಿಗುವ ಸುಖ ನಿತ್ಯ ಮತ್ತು ಅನಂತ.

ಇತ್ಯಾದಿ...

# ೧೦೪. ವೃತ್ರಗೀತೆ

ಯುಧಿಷ್ಠಿರನ ಪ್ರಶ್ನೆ ಭೀಷ್ಮರಿಗೆ.

'ತಾತ! ನಮ್ಮನ್ನು ಎಲ್ಲರೂ ಧನ್ಯರು, ಧನ್ಯರು ಎನ್ನುತ್ತಾರೆ. ಆದರೆ ನಮಗಿಂತ ದುಃಖಿತರು ಯಾರೂ ಇಲ್ಲ. ನಾವು ದೇವತೆಗಳ ಮುಖಾಂತರ ಮನುಷ್ಯಲೋಕದಲ್ಲಿ ಜನಿಸಿದ ಎಲ್ಲ ಪ್ರಜೆಗಳಿಂದ ಮಾನ್ಯರಾದರೂ, ನಮಗೆ ಇಂತಹ ದುಃಖ ಬಂದಿದೆ. ನಮಗೆ ಈ ಶರೀರಧಾರಣೆ ಬಹಳ ದುಃಖಕರವಾಗಿದೆ. ಸಂಸಾರಿಗಳಿಗೆ ಕಠಿಣವಾದ ಆಶ್ರಮವಾದ ಸನ್ಯಾಸಾಶ್ರಮವನ್ನು ನಾವು ಯಾವಾಗ ಆಶ್ರಯಿಸುತ್ತೇವೆ? ನಾವು ಯಾವಾಗ ಈ ರಾಜ್ಯವನ್ನು ಬಿಟ್ಟು ಅಂತಹ ಶ್ರೇಷ್ಠವಾದ ಸ್ಥಿತಿಯನ್ನು ಯಾವಾಗ ಹೊಂದುತ್ತೇವೆ?'[೧]

ಭೀಷ್ಮರು ಧರ್ಮರಾಜನಿಗೆ –

'೧. ದುಃಖ ಅನಂತವಲ್ಲ. ಎಲ್ಲಕ್ಕೂ ಮಿತಿ ಎಂಬುದು ಇದೆ. ಪುನರ್ಜನ್ಮಗಳಿಗೂ ಮಿತಿ ಇದೆ. ಲೋಕದಲ್ಲಿ ಅಚಲವಾದುದು ಯಾವುದೂ ಇಲ್ಲ[೨].

೨. ಧರ್ಮಜ್ಞರಾದ ನೀವು ಶಮದಮಾದಿ ಮೋಕ್ಷಸಾಧನದಿಂದ ಅನತಿ ಕಾಲದಲ್ಲಿ ಮೋಕ್ಷ ಹೊಂದುವಿರಿ(ಸನ್ಯಾಸಾಶ್ರಮವೇ ಬೇಕೆಂದೇನಿಲ್ಲ).

೩. ಜೀವನು ಪುಣ್ಯಪಾಪಗಳ ನಿಯಾಮಕನಲ್ಲ. ಜೀವ ಸ್ವಾಭಾವಿಕವಾಗಿ ಶುದ್ಧ. ಆದರೆ ಅಜ್ಞಾನಾವೃತ(ಅವಿದ್ಯಾ ಕಾಮಕರ್ಮಾದಿ)ನಾಗಿ ಹಿಂದಿನ ಜನ್ಮಗಳ ಕರ್ಮಫಲದಿಂದ ಬೇರೆ ಬೇರೆ ಶರೀರಗಳನ್ನು ಪಡೆಯುತ್ತಾ ಸಂಚರಿಸುತ್ತಾನೆ. ಬ್ರಹ್ಮಾಪರೋಕ್ಷ ಹೊಂದಿದಾಗ ಅಜ್ಞಾನ ಪರಿಹಾರವಾಗಿ ಸನಾತನ ಪರಬ್ರಹ್ಮನು (ಹೃದಯದಲ್ಲಿಯೇ) ಪ್ರಕಾಶಿಸುತ್ತಾನೆ[೩].

---

೧ ಯುಧಿಷ್ಠಿರ –
ಧನ್ಯಾ ಧನ್ಯಾ ಇತಿ ಜನಾಃ ಸರ್ವೇಽಸ್ಮಾನ್ ಪ್ರವದಂತ್ಯುತ।
ನ ದುಃಖಿತತರಂ ಕಶ್ಚಿತ್ ಪುಮಾನಸ್ಮಾಭರಸ್ತಿ ಹ॥..........
ಕದಾ ವಯಂ ಕರಿಷ್ಯಾಮಃ ಸನ್ಯಾಸಂ ದುಃಖಸಂಜ್ಞಕಮ್ ॥.....
ಕದಾ ವಯಂ ಭವಿಷ್ಯಾಮೋ ರಾಜ್ಯಂ ಹಿತ್ವಾ ಪರಂತಪ॥

೨ ನಾಸ್ತ್ಯನಂತಂ ಮಹಾರಾಜ ಸರ್ವಂ ಸಂಖ್ಯಾನಗೋಚರಮ್।
ಪುನರ್ಭಾವೋಽಪಿ ಸಂಖ್ಯಾತೋ ನಾಸ್ತಿ ಕಿಂಚಿತ್ ಇಹಾಚಲಮ್॥

೩ ನೇಶೋಽಯಂ ಸತತಂ ದೇಹೀ ನೃಪತೇ ಪುಣ್ಯಪಾಪಯೋಃ।
ಜ್ಞಾನೇ ನ ಹಿ ಯದಾ ಜಂತುರಜ್ಞಾನಪ್ರಭವಂ ತಮಃ।
ವ್ಯಪೋಹತಿ ತದಾ ಬ್ರಹ್ಮ ಪ್ರಕಾಶೇತ ಸನಾತನಮ್॥
ಅಸ್ಮಿನ್ನರ್ಥೇ ಪುರಾ ಗೀತಂ ಶೃಣುಷ್ವೈಕಮನಾ ನೃಪ।
ಯಥಾ ದೈತ್ಯೇನ ವೃತ್ರೇಣ ಭ್ರಷ್ಟೈಶ್ವರ್ಯೇಣ ಚೇಷ್ಟಿತಮ್॥
... ಅಶೋಚತಾ ಶತ್ರುಮಧ್ಯೇ ಬುದ್ಧಿಮಾಸ್ಥಾಯ ಕೇವಲಾಮ್।

ಈ ವಿಷಯದಲ್ಲಿ ಐಶ್ವರ್ಯಭ್ರಷ್ಟನಾದ ವೃತ್ರಾಸುರ ದೈತ್ಯನಿಂದ ಹಾಡಲ್ಪಟ್ಟ ಗೀತೆಯನ್ನು ಕೇಳು ಎಂದು ಹೇಳಿದರು. ವೃತ್ರಾಸುರ ದೇವತೆಗಳಿಂದ ಸೋತಿದ್ದ, ಅಸಹಾಯಕನಾಗಿದ್ದ, ಶತ್ರುಗಳ ಮಧ್ಯೆ ಇದ್ದರೂ ಪರಬ್ರಹ್ಮನಲ್ಲಿಯೇ ಮನಸ್ಸಿಟ್ಟವನಾಗಿದ್ದ, ಐಶ್ವರ್ಯಹೀನನಾದ ಅವನನ್ನು ಕುರಿತು ಶುಕ್ರಾಚಾರ್ಯರು 'ಸೋಲನ್ನು ಅನುಭವಿಸಿದಾಗಲೂ ನೀನು ವ್ಯಥೆ ಪಡುತ್ತಿಲ್ಲವಲ್ಲ? ಹೇಗೆ?' ಎಂದು ಪ್ರಶ್ನಿಸಿದರು.

ದೈತ್ಯರುಗುಗಳ ಪ್ರಶ್ನೆಗೆ ದೈತ್ಯವೃತ್ರನು –

'ನಾನು ತಪಸ್ಸಿನಿಂದ, ಸತ್ಯದಿಂದ, ಜೀವರ ಹುಟ್ಟು ಸಾವುಗಳ ಮರ್ಮ ಬಲ್ಲೆ. ಆದ್ದರಿಂದ ಹುಟ್ಟು ಸಾವುಗಳಿಂದ ಸುಖ, ದುಃಖ ಪಡುವುದಿಲ್ಲ. ಕಾಲ ಪ್ರೇರಿತರಾದ(ಪಾಶಬದ್ಧರಾದ) ಜೀವರು ತಮ್ಮ ತಮ್ಮ ಪುಣ್ಯಪಾಪಗಳಿಗನುಸಾರ ಸ್ವರ್ಗ-ನರಕಗಳಲ್ಲಿ ಸುಖದುಃಖಗಳಲ್ಲಿ ಮುಳುಗುತ್ತಾರೆ (ಅನುಭವಿಸುತ್ತಾರೆ). ಇದು ಜ್ಞಾನಿಗಳ ಹೇಳಿಕೆ. ಆಮೇಲೆ ಕರ್ಮಶೇಷದಿಂದ ಭೂಮಿಯಲ್ಲಿ ಮತ್ತೇ ಮತ್ತೇ ಹುಟ್ಟುತ್ತಾರೆ. ಕೆಲವರು ಕಾಮಬಂಧನಗಳಿಂದ ಸಾವಿರಾರು ತಿರ್ಯಗ್ಯೋನಿಗಳನ್ನು (ಪ್ರಾಣಿ, ಪಕ್ಷಿ ಕ್ರಿಮಿ ಮೊದಲಾದ) ಹೊಂದಿ ನರಕಕ್ಕೆ ಹೋಗಿ ಅಲ್ಲಿಂದ ಪ್ರಕೃತಿ ಬಂಧನಕ್ಕೆ ತುತ್ತಾಗುತ್ತಾರೆ. ಹೀಗೆ ಜನ್ಮಮರಣಚಕ್ರದಲ್ಲಿ ಸುತ್ತುತ್ತಿರುವವರನ್ನು ನಾನು ನೋಡುತ್ತಿದ್ದೇನೆ. ಕರ್ಮಾನುಸಾರಿಯಾಗಿ ಫಲ ಹೊಂದುವುದೇ' ಶಾಸ್ತ್ರದ ನಿರ್ಣಯ. ಜೀವರು ಸುಖದುಃಖಗಳನ್ನು ಇಷ್ಟಾನಿಷ್ಟಗಳನ್ನು ಅನುಭವಿಸಿ ಆ ಜನ್ಮದ ಫಲಾನುಸಾರವಾಗಿ ಮೊದಲು ನರಕ, ನಂತರ ಪ್ರಾಣಿಯೋನಿಗಳಲ್ಲಿ ಆಮೇಲೆ ಮನುಷ್ಯರಾಗಿ (ಮತ್ತೆ ಕೆಲವರು), ದೈವೀಯೋನಿಯಲ್ಲೂ ಜನಿಸುತ್ತಾರೆ. ಇವೆಲ್ಲವೂ ಅವರವರ ಕರ್ಮಫಲಾನುಸಾರಿ. ಸಮಸ್ತವಿಶ್ವ ಸೃಷ್ಟಿಕರ್ತನ ಅಧೀನ. ಸುಖದುಃಖಗಳೂ ಅವನ ವಶವೇ. ಎಲ್ಲ ಪ್ರಾಣಿಗಳು ಸರ್ವಕಾಲದಲ್ಲಿ ಎಲ್ಲರೂ ಸಂಚರಿಸುವ ದಾರಿಯಲ್ಲಿಯೇ ಹೋಗುತ್ತವೆ (ಸಂಚರಿಸುತ್ತವೆ)[೧].

---

ಭ್ರಷ್ಟೈಶ್ವರ್ಯಂ ಪುರಾವೃತ್ತಮುಶನಾ ವಾಕ್ಯಮಬ್ರವೀತ್ ।
ಕಚ್ಚಿತ್ ಪರಾಜಿತಾಸ್ಯಾದ್ಯ ನ ವ್ಯಥಾ ತೇಽಸ್ತಿ ದಾನವ ॥ – ೧೧೩/೧-೧೫

೧ ವೃತ್ರಃ –
ಸತ್ಯೇನ ತಪಸಾ ಚೈವ ವಿದಿತ್ವಾ ಸಂಕ್ಷಯಂ ಹ್ಯಹಮ್ ।
ನ ಶೋಚಾಮಿ ನ ಹೃಷ್ಯಾಮಿ ಭೂತಾನಾಮಾಗತಿಂ ಗತಿಮ್ ।...
ತಿರ್ಯಗ್ಯೋನಿಸಹಸ್ರಾಣಿ ಗತ್ವಾ ನರಕಮೇವ ಚ ।
ನಿರ್ಗಚ್ಛಂತ್ಯವಶಾ ಜೀವಾಃ ಕಾಮಬಂಧನಬಂಧನಾಃ ॥...
ಏವಂ ಸಂಸರಮಾಣಾನಿ ಜೀವಾನ್ಯಹಮದೃಷ್ಟವಾನ್ ।
ಯಥಾ ಕರ್ಮ ತಥಾ ಲಾಭ ಇತಿ ಶಾಸ್ತ್ರನಿದರ್ಶನಮ್ ॥
ತಿರ್ಯಗ್ಗಚ್ಛಂತಿ ನರಕಂ ಮಾನುಷ್ಯಂ ದೈವಮೇವ ಚ ।
ಸುಖದುಃಖೇ ಪ್ರಿಯದ್ವೇಷ್ಯೇ ಚರಿತ್ವಾ ಪೂರ್ವಮೇವ ಚ ॥ – ೧೧೩/೧೬-೨೨

ಹೀಗೆ ಸೃಷ್ಟಿಸ್ಥಿತಿಕ್ರಮ, ಕಾಲಪ್ರವೃತ್ತಿಗಳನ್ನು ಮಾತನಾಡುತ್ತಿದ್ದ ವೃತ್ರಾಸುರನನ್ನು ಕುರಿತು ಬುದ್ಧಿಶಾಲಿಗಳಾದ ಶುಕ್ರಾಚಾರ್ಯರು 'ಇದೇನು ನೀನು (ಅಸುರನಾಗಿದ್ದುಕೊಂಡು ಅಸುರಜಾತಿಗೆ ವಿರುದ್ಧವಾಗಿ) ಅಸಂಬದ್ಧವಾಗಿ ಮಾತಾಡುತ್ತಿದ್ದೀಯಲ್ಲ?' ಎಂದರು.

ಅದಕ್ಕೆ ವೃತ್ರಾಸುರನು 'ಆಚಾರ್ಯರೇ! ನಾನು ಹೇಳಿದುದರಲ್ಲಿ ಅಸಂಬದ್ಧವಾದುದು ಏನೂ ಇಲ್ಲ. ತಮಗೆ ಹಾಗೂ ಇತರ ಜ್ಞಾನಿಗಳಿಗೂ ಚೆನ್ನಾಗಿ ತಿಳಿದಂತೆ ನಾನು ಈ ಹಿಂದೆ ಜಯಾಶೆಯಿಂದ ನಾನು ಮಹಾತಪಸ್ಸನ್ನು ಮಾಡಿದೆ. ನನ ಪರಾಕ್ರಮದಿಂದ ಮೂರು ಲೋಕಗಳನ್ನೂಗೆದ್ದೆ. ಅಜೇಯನಾಗಿ, ನಿರ್ಭಯನಾಗಿಸದಾ ಆಕಾಶಮಾರ್ಗದಲ್ಲಿವಿಮಾನದಲ್ಲಿ ಸಂಚರಿಸಿದೆ. ತಪಸ್ಸಿನಿಂದ ಮಹಾಐಶ್ವರ್ಯವನ್ನು ಗಳಿಸಿದೆ. ಆದರೆ ನನ್ನ ಕರ್ಮಗಳಿಂದಲೇ ಕಳೆದುಕೊಂಡೆ. ಆದ್ದರಿಂದ ಈ ವಿಷಯದಲ್ಲಿ ಶೋಕಿಸುವುದೇನಿದೆ? ನಾನು ಧೈರ್ಯದಿಂದ ಇದ್ದೇನೆ. ನನ್ನ ಈ ಸ್ಥಿತಿಗೆ ದುಃಖಿಸುವುದೇನಿದೆ? ಹಿಂದೆ ಮಹಾತ್ಮನಾದ ಇಂದ್ರನೊಡನೆ ಯುದ್ಧ ಬಯಸಿದಾಗ ಪ್ರಭುವಾದ ಶ್ರೀಹರಿ, ನಾರಾಯಣನನ್ನು ನೋಡಿದೆ. **ವೈಕುಂಠ, ಪುರುಷ, ವಿಷ್ಣು, ಶುಕ್ಲ, ಅನಂತ, ಸನಾತನ, ಮುಂಜಕೇಶ, ಹರಿಶ್ಮಶ್ರು, ಸರ್ವಭೂತಪಿತಾಮಹ ಮೊದಲಾದ ನಾಮಗಳಿಂದ ಕರೆಯಲಾದ ನಾರಾಯಣನ ಪ್ರತ್ಯಕ್ಷದರ್ಶನವಾಯಿತು.** ನನ್ನ ತಪಸ್ಸು ಫಲಿಸಿತೆಂದು ನಾನು ಭಾವಿಸಿದೆ. ಆ ಪುಣ್ಯಶೇಷ ಇನ್ನೂ ಉಳಿದಿರುವುದರಿಂದಲೇ ನಿಮ್ಮನ್ನು ಕರ್ಮಫಲಗಳನ್ನು ತಿಳಿಯಬಯಸುತ್ತೇನೆ[1].

ಎಲೈ ಬ್ರಹ್ಮಜ್ಞಾನಿಯೇ! ಮಹೈಶ್ವರ್ಯವು ಯಾವ ವರ್ಣದಲ್ಲಿ ಇದೆ? ಅದು ಏಕೆ ಬಿಟ್ಟು ಹೋಗುತ್ತದೆ (ಮನುಷ್ಯನಿಂದ, ವ್ಯಕ್ತಿಯಿಂದ)[2].

ಯಾರಿಂದ ಜೀವರು ಜೀವಿಸುತ್ತಾರೆ. ಪ್ರವೃತ್ತಿ ಹೊಂದುತ್ತಾರೆ? ಯಾವ ಫಲವನ್ನು

---

೧ ಪ್ರತ್ಯಕ್ಷಮೇತದ್ಭವತಸ್ತಥಾನ್ಯೇಷಾಂ ಮನೀಷಿಣಾಮ್ ।
ಮಯಾ ಯಜ್ಜಯಲುಬ್ಧೇನ ಪುರಾ ತಪ್ತಂ ಮಹತ್ತಪಃ ॥...
ಅವರ್ಧಂ ತ್ರೀನ್ ಸಮಾಕ್ರಮ್ಯ ಲೋಕಾನ್ ವೈ ಸ್ವೇನ ತೇಜಸಾ ।
ಅಜೇಯಃ ಸರ್ವಭೂತಾನಾಮಾಸಂ ನಿತ್ಯಮಪೇತಭೀಃ ।
ಐಶ್ವರ್ಯಂ ತಪಸಾ ತಪ್ತಂ ಪ್ರಾಪ್ತಂ ಭ್ರಷ್ಟಂ ತಚ್ಚ ಸ್ವಕರ್ಮಭಿಃ ।
ಧೃತಿಮಾಸ್ಥಾಯ ಭಗವನ್ನ ಶೋಚಾಮಿ ತತಸ್ತ್ವಹಮ್ ।
ಯುಯುತ್ಸುನಾ ಮಹೇಂದ್ರೇಣ ಪುರಾ ಸಾರ್ಧಂ ಮಹಾತ್ಮನಾ ।
ತತೋ ಮೇ ಭಗವಾನ್ ದೃಷ್ಟೋ ಹರಿರ್ನಾರಾಯಣಃ ಪ್ರಭುಃ ।
ವೈಕುಂಠಃ ಪುರುಷೋ ವಿಷ್ಣುಃ ಶುಕ್ಲೋಽನಂತಃ ಸನಾತನಃ ।
ಮುಂಜಕೇಶೋ ಹರಿಶ್ಮಶ್ರುಃ ಸರ್ವಭೂತಪಿತಾಮಹಃ ।
ಯದಹಂ ಪ್ರಷ್ಟುಮಿಚ್ಛಾಮಿ ಭಗವಂತಂ ಕರ್ಮಣಃ ಫಲಮ್ ।

೨ ಐಶ್ವರ್ಯಂ ವೈ ಮಹದ್ಬ್ರಹ್ಮನ್ ಕಸ್ಮಿನ್ ವರ್ಣೇ ಪ್ರತಿಷ್ಠಿತಮ್ ।
ನಿವರ್ತೇತ ಚಾಪಿ ಪುನಃ ಕಥಮೈಶ್ವರ್ಯಮುತ್ತಮಮ್ ।

ಹೊಂದಿ ಶಾಶ್ವತವಾದ ತಮ್ಮ ಸ್ವರೂಪವನ್ನು ಹೊಂದುತ್ತಾರೆ? ಯಾವ ಕರ್ಮದಿಂದ ಅಥವಾ ಜ್ಞಾನದಿಂದ ನಿತ್ಯಫಲ ದೊರೆಯುತ್ತದೆ. ಅದನ್ನು ವಿಸ್ತಾರವಾಗಿ ಹೇಳಿ.'

**ಕಸ್ಮಾದ್ಭೂತಾನಿ ಜೀವಂತಿ ಪ್ರವರ್ತಂತೇಽಥ ವಾ ಪುನಃ ।**
**ಕಿಲ ವಾ ಫಲಂ ಪರಂ ಪ್ರಾಪ್ಯ ಜೀವಸ್ತಿಷ್ಠತಿ ಶಾಶ್ವತಃ ।**

ಧರ್ಮರಾಜನೇ! ವೃತ್ರನ ಪ್ರಶ್ನೆಗಳಿಗೆ ಶುಕ್ರಾಚಾರ್ಯರು ಹೇಳಿದುದನ್ನೇ ನಿನಗೂ ಹೇಳುತ್ತೇನೆ ಕೇಳು' ಎಂದರು ಭೀಷ್ಮರು[೧].

ವೃತ್ರನ ಪ್ರಶ್ನೆಗಳಿಗೆ ಶುಕ್ರಾಚಾರ್ಯರು ಸಿದ್ಧರಾಗುತ್ತಿರಲು ಅಲ್ಲಿಗೆ ಸನತ್ಕುಮಾರರು ಬಂದರು. ಅವರನ್ನು ಶುಕ್ರರು ಸತ್ಕರಿಸಿ, ವೃತ್ರನಿಗೆ ವಿಷ್ಣುವಿನ ಮಹಿಮೆಗಳನ್ನು ಹೇಳಲು ಪ್ರಾರ್ಥಿಸಲು ಅವರು ಭಗವನ್ಮಹಿಮೆಯನ್ನು ೪೯ ಶ್ಲೋಕಗಳಿಂದ ವಿಸ್ತಾರವಾಗಿ ಹೇಳುತ್ತಾ ವಿಷ್ಣುವಿನ ಸರ್ವೋತ್ತಮತ್ವದ ವಿವಿಧ ಸ್ತರಗಳನ್ನು ವರ್ಣಿಸಿದರು. ಅವುಗಳ ಭಾವ ಹೀಗಿದೆ (೧೧೪/೭-೫೫).

೧. ಜಗತ್ತೆಲ್ಲವೂ ವಿಷ್ಣುವಿನಲ್ಲಿಯೇ ಪ್ರತಿಷ್ಠಿತವಾಗಿದೆ(ಆಶ್ರಿತವಾಗಿದೆ) :

**ವಿಷ್ಣೌ ಜಗತ್ ಸ್ಥಿತಂ ಸರ್ವಂ....**

೨. ವಿಷ್ಣುವೇ ಚರಾಚರ ಪ್ರಪಂಚವನ್ನು ಸೃಜಿಸುತ್ತಾನೆ. ಪ್ರಲಯಕಾಲ ಬಂದಾಗ ಸಂಹರಿಸುತ್ತಾನೆ. ಮತ್ತೆ ಸೃಷ್ಟಿಕಾಲ ಬಂದಾಗ ಸೃಷ್ಟಿಮಾಡುತ್ತಾನೆ.

**ಸೃಜತ್ಯೇಷ ಮಹಾಬಾಹೋ ಭೂತಗ್ರಾಮಂ ಚರಾಚರಮ್ ।**
**ಅಸ್ಮಿನ್ ಗಚ್ಛಂತಿ ವಿಲಯಮಸ್ಮಾಚ್ಚ ಪ್ರಭವಂತ್ಯುತ ॥....**

೩. ಭಗವಂತನು ಕೇವಲ ಶಾಸ್ತ್ರಜ್ಞಾನ, ತಪಸ್ಸು, ಯಜ್ಞಾದಿಕರ್ಮಗಳಿಂದ ಹೊಂದಲು ಅಶಕ್ಯ. ಜಿತೇಂದ್ರಿಯನು ಹೊಂದಬಹುದು.

೪. ಅಕ್ಕಸಾಲಿಗನಂತೆ ಬೆಳ್ಳಿಯನ್ನು ಬೆಂಕಿಯಲ್ಲಿ ಹಾಕಿ ಶುಚಿಗೊಳಿಸುವಂತೆ, ಭಗವಂತನು ಸಾತ್ವಿಕರನ್ನು ನೂರಾರು ಜನ್ಮಗಳ ನಂತರ ಅತಿ ಪ್ರಯತ್ನದಿಂದ ಮುಕ್ತಗೊಳಿಸುತ್ತಾನೆ. ಮಹಾಪ್ರಯತ್ನಮಾಡಿದಲ್ಲಿ ಒಂದೇ ಜನ್ಮದಲ್ಲಿಯೇ ಶುದ್ಧಿ ಹೊಂದಲೂ ಬಹುದು.

೫. ವಿಷ್ಣುವಿನ ಪಾದಾದಿ ಅವಯವಗಳಲ್ಲಿ ಪೃಥಿವಾದಿಲೋಕಗಳಿವೆ. ೧. ವಿಷ್ಣುವಿನ – ಎರಡೂ ಪಾದಗಳು – ಪೃಥಿವೀ; ೨. ಶಿರಸ್ಸು – ಸ್ವರ್ಗ; ೩. ನಾಲ್ಕು ತೋಳುಗಳು – ನಾಲ್ಕು ದಿಕ್ಕುಗಳು; ೪. ಕಿವಿ – ಆಕಾಶ; ೫. ಕಣ್ಣು – ಸೂರ್ಯ; ೬. ಮನಸ್ಸು – ಚಂದ್ರ ;

೧ ಕೇನ ವಾ ಕರ್ಮಣಾ ಶಕ್ಯಮಥ ಜ್ಞಾನೇನ ಕೇನ ವಾ ।
ಬ್ರಹ್ಮರ್ಷೇ ತತ್ಫಲಂ ಪ್ರಾಪ್ತುಂ ತನ್ಮೇ ವ್ಯಾಖ್ಯಾತುಮರ್ಹಸಿ ॥ – ೧೧೩/೨೪-೩೪

೭. ಬುದ್ಧಿ - ಮಹತ್ತತ್ತ್ವ ; ೮. ರಸನೇಂದ್ರಿಯ(ನಾಲಿಗೆ)- ನೀರು; ೯. ಹುಬ್ಬುಗಳ ನಡುವೆ - ಸಮಸ್ತ ಗ್ರಹಗಳು; ೧೦. ಕಣ್ಣಿನಿಂದ - ನಕ್ಷತ್ರಮಂಡಲ; ೧೧. ನಾರಾಯಣನಿಂದ ವ್ಯಾಪ್ತಿ - ಸತ್ತ್ವರಸ್ತಮೋಗುಣ; ೧೨. ಸತ್ಕರ್ಮ - ಆಶ್ರಮಗಳಿಗೆ ಫಲದಾತೃ ನಾರಾಯಣನೇ; ೧೩. ಹರಿಯೇ ನಿಷ್ಕಾಮಕರ್ಮದಾತೃ ; ೧೪. ಎಲ್ಲರ ಹೃದಯದಲ್ಲಿ ಹರಿ ಇದ್ದಾನೆ ; ೧೫. ತಪಸ್ಸು ಕಾರ್ಯಕಾರಣಧರ್ಮಗಳಲ್ಲಿ ಅಂತರ್ಯಾಮಿಯಾಗಿದ್ದಾನೆ.

೧೬. ವೇದ, ಶಾಸ್ತ್ರ ಸೋಮಪಾತ್ರೆಗಳಿಂದ ಕೂಡಿದ ಹದಿನಾರು ಋತ್ವಿಕರಿಂದ ಕೂಡಿದ ಯಜ್ಞವು ನಾರಾಯಣನೇ (ಅಂತರ್ಯಾಮಿಯಾಗಿ ನಿಯಾಮಕನಾಗಿದ್ದಾನೆ).

೧೭. ಭಿನ್ನ ಭಿನ್ನ ಜೀವರಲ್ಲಿರುವ ಪರಮಾತ್ಮನ ರೂಪಗಳಿಗೆ ಭೇದವಿಲ್ಲ (ಸ್ಥಾನಭೇದವಿದ್ದರೂ)

೧೮. ಜೀವನಿಗೆ ಭಗವತ್(ಪರೋಕ್ಷ) ಜ್ಞಾನದಿಂದಲೇ ಬ್ರಹ್ಮಸಾಕ್ಷಾತ್ಕಾರ (ಅಪರೋಕ್ಷಜ್ಞಾನ).

೧೯. ವಿವಿಧ ಸ್ಥಾನಗಳಲ್ಲಿರುವ ಜೀವರ ನಿಯಾಮಕ ನಾರಾಯಣ.

೨೦. ತ್ರಿವಿಧ ಜೀವರು ಕ್ರಮವಾಗಿ ಸತ್ವ, ರಜ, ತಮೋಗುಣವುಳ್ಳವರು, ಬಿಳಿ, ಕೆಂಪು, ಕಪ್ಪು ವರ್ಣವುಳ್ಳವರಾಗಿರುತ್ತಾರೆ. ಸಾಧನೆಗನುಗುಣವಾಗಿ ವಿವಿಧ ಲೋಕಗಳಲ್ಲಿ, ಸ್ವರ್ಗಾದಿ, ನಕರಾದಿಗಳಲ್ಲಿ ಸುಖದುಃಖಗಳನ್ನು ಸಾವಿರಾರು ವರ್ಷ ಅನುಭವಿಸಿ ಮುಂದೆ ಸ್ವಯೋಗ್ಯ ಫಲ ಹೊಂದುತ್ತಾರೆ[೧](ಶ್ಲೋ. ೩೩-೫೫).

೨೧. ನಿರಂತರ ಶುದ್ಧ ಮನಸ್ಕನಾಗಿ ಭಗವತ್ತತ್ತ್ವವನ್ನು ಅನುಸಂಧಾನ ಮಾಡುವವನು ಪರಗತಿ ಹೊಂದುತ್ತಾನೆ. ಇವೇ ಮೊದಲಾದವು ನಾರಾಯಣನ ಬಲವನ್ನು ಪ್ರಭಾವವನ್ನು ತಿಳಿ ಎಂದು ಸನತ್ಕುಮಾರರು ವೃತ್ರನಿಗೆ ತಿಳಿಸಿದರು.

ಸನತ್ಕುಮಾರರ ಉಪದೇಶದಿಂದ ವೃತ್ರಾಸುರ ತುಂಬಾ ಸಂತೋಷದಿಂದ 'ನಾನು ತಮ್ಮ ಉಪದೇಶವನ್ನು ಚೆನ್ನಾಗಿ ಅರ್ಥ ಮಾಡಿಕೊಂಡಿದ್ದೇನೆ. ಮನನ ಮಾಡಿಕೊಂಡಿದ್ದೇನೆ. ಪಾಪರಹಿತನೂ, ಕಲ್ಮಶರಹಿತನೂ ಆಗಿರುವೆ. ಈ ಜಗಚ್ಚಕ್ರದ ನಿರಂತರ ಪರಿಭ್ರಮಣೆ

---

೧ ಶುಧ್ಧಾಂ ಗತಿಂ ತಾಂ ಪರಮಾಂ ಪರೈತಿ
ಶುದ್ಧೇನ ನಿತ್ಯಂ ಮನಸಾ ವಿಚಿನ್ವನ್ ।
ತತೋಽವ್ಯಯಂ ಸ್ಥಾನಮುಪೈತಿ ಬ್ರಹ್ಮ
ದುಷ್ಪ್ರಾಪಮಭ್ಯೇತಿ ಸ ಶಾಶ್ವತಂ ವೈ ॥
ಇತ್ಯೇತದಾಖ್ಯಾತ ಮಹೀನಸತ್ತ್ವ
ನಾರಾಯಣಸ್ಯೇಹ ಬಲಂ ಮಯಾ ತೇ ॥ - ೧೧೪/೨೨-೫೫

ಎಲ್ಲವೂ ಮಹಾವಿಷ್ಣುವಿನಿಂದಲೇ[೧]. ಎಲ್ಲ ಜಗತ್ತು ಅವನಲ್ಲಿಯೇ ಪ್ರತಿಷ್ಠಿತವಾಗಿದೆ ಎಂದು ಪ್ರಾಂಜಲವಾಗಿ ಒಪ್ಪಿಕೊಂಡನು.

ಹೀಗೆ ಹೇಳುತ್ತಾ ವೃತ್ರಾಸುರನು ಪ್ರಾಣತ್ಯಾಗ ಮಾಡಿದನು. ಪರಂಧಾಮ ಹೊಂದಿದನು[೨].

ಇಂತಹ ನಾರಾಯಣನೇ ನಮ್ಮ ಕೃಷ್ಣನಲ್ಲವೇ? ಎಂದು ಧರ್ಮರಾಜನು ಸಂತೋಷ ವ್ಯಕ್ತಪಡಿಸಿದನು. ಭೀಷ್ಮರು ಅದನ್ನೇ ಮತ್ತೆ ಪುರುಚ್ಚರಿಸಿದರು. ಧರ್ಮರಾಜನು ಕೂಡಾ 'ವೃತ್ರಾಸುರನು ಭಗವಂತನ ಸ್ವರೂಪವನ್ನು ಯಥಾರ್ಥವಾಗಿ ತಿಳಿದುದರಿಂದಲೇ ಪರಮಸುಖಿಯಾದನು. ತನಗಾದ ಪರಾಭವಕ್ಕೆ ದುಃಖಿಸಲಿಲ್ಲ ಹೀಗೆ ನಾನು ಭಾವಿಸುತ್ತೇನೆ' ಎಂದನು.

ಪಿತಾಮಹನೇ! ವೃತ್ರಾಸುರ ಶುದ್ಧವಂಶದಲ್ಲಿ ಹುಟ್ಟಿದ ಸ್ವಾಭಾವಿಕವಾಗಿ ಶುದ್ಧ ಜೀವ. ಅವನು ಸಾಧ್ಯವೆಂಬ ದೇವತೆ. ಅವನು ತಿರ್ಯಗ್ಯೋನಿಗಳನ್ನು ಹೊಂದದೇ ನರಕವನ್ನೂ ಹೊಂದದೆ ಮುಕ್ತನಾದ. ಈ ಪ್ರಪಂಚಕ್ಕೆ ಬರಲಿಲ್ಲ. ಹಳದಿ ಮತ್ತು ರಕ್ತವರ್ಣದ ಜೀವರು ತಿರ್ಯಗ್ಯೋನಿಗಳಿಗೆ ಹೋಗಿ, ಪ್ರಾಣಿಗಳಾಗಿಯೂ ಹುಟ್ಟುತ್ತಾರೆ. ನಾವಾದರೋ ತುಂಬಾ ಆಪತ್ತಿಗೆ ಗುರಿಯಾಗಿದ್ದೇವೆ. ಸುಖಕ್ಕಿಂತ ದುಃಖದಲ್ಲಿಯೇ ಹೆಚ್ಚಾಗಿ ಮುಳುಗಿದ್ದೇವೆ. ಇಂತಹ ನಾವು ನೀಲವರ್ಣದ ಮನುಷ್ಯನಾಗಿ ಅಥವಾ ಕೃಷ್ಣವರ್ಣದ ತಮೋ(ತಿರ್ಯಗ್ಯೋನಿ)ಗಳಲ್ಲಿ ಹುಟ್ಟುತ್ತೇವೆಯೋ ಗೊತ್ತಾಗುತ್ತಿಲ್ಲ'[೩] ಎಂದಾಗ –

---

೧ ವೃತ್ರಃ –
ಏವಂ ಗತೇ ಮೇ ನ ವಿಷಾದೋಽಸ್ತಿ ಕಶ್ಚಿತ್ ।....
ಶ್ರುತ್ವಾ ಚ ತೇ ವಾಚಮದೀನಸತ್ತ್ವ ।
ವಿಕಲ್ಮಷೋಽಸ್ಮ್ಯದ್ಯ ತಥಾ ವಿಪಾಪ್ಮಾ ॥ – ೧೧೪/೫೬
ವಿಷ್ಣೋರನಂತಸ್ಯ ಸನಾತನಂ ತತ್ .....
ಸ ವೈ ಮಹಾತ್ಮಾ ಪುರುಷೋತ್ತಮೋ ವೈ
ತಸ್ಮಿನ್ ಜಗತ್ ಸರ್ವಮಿದಂ ಪ್ರತಿಷ್ಠಿತಮ್ ॥ – ೧೧೪/೫೭
೨ ಭೀಷ್ಮ –
ಏವಮುಕ್ತ್ವಾ ಸ ಕೌಂತೇಯ ವೃತ್ರಃ ಪ್ರಾಣಾನವಾಸೃಜತ್ ।
ಯೋಜಯಿತ್ವಾ ತದಾತ್ಮಾನಂ ಪರಂ ಸ್ಥಾನಮವಾಪ್ತವಾನ್ ॥ – ೧೧೪/೫೮
೩. ಶುಕ್ಲಃ ಶುಕ್ಲಾಭಿಜಾತೀಯಃ ಸಾಧ್ಯೋ ನಾವರ್ತತೇಽನಘ ।
ತಿರ್ಯಗ್ಗತೇಶ್ಚ ನಿರ್ಮುಕ್ತೋ ನಿರಯಾಚ್ಚ ಪಿತಾಮಹ ॥ – ೧೧೪/೬೫
ವಯಂ ತು ಭೃಶಮಾಪನ್ನಾಃ ರಕ್ತಾಃ ಕಷ್ಟಮುಖೇಽಸುಖೇ ।
ಕಾಂ ಗತಿಂ ಪ್ರತಿಪತ್ಸ್ಯಾಮೋ ನೀಲಾಂ ಕೃಷ್ಣಾಧಮಾಮಥ ॥ – ೧೧೪/೬೭

ಭೀಷ್ಮರು 'ಧರ್ಮರಾಜ! ನೀವು ಪಾಂಡುರಾಜನ ಮಕ್ಕಳು. ವಿಶುದ್ಧಕುಲದಲ್ಲಿಯೇ ಹುಟ್ಟಿದ್ದೀರಿ. ಕಠಿಣವ್ರತಗಳನ್ನು ಆಚರಿಸಿದ್ದೀರಿ. ಮುಂದೆ ಈ ಜನ್ಮದ ಬಳಿಕವೂ ದೇವಲೋಕದಲ್ಲಿ ವಿಹಾರ ಮಾಡಿ ಪುನಃ ಉತ್ತಮ ಮನುಷ್ಯರಾಗಿಯೇ ಹುಟ್ಟುವಿರಿ. ಅಲ್ಲಿ ಸ್ವಲ್ಪ ಕಾಲವಿದ್ದು ಮತ್ತೆ ದೇವಲೋಕಕ್ಕೆ ಹೋಗಿ ಬಹುಬಗೆಯ ಸುಖಗಳನ್ನು ಅನುಭವಿಸುವಿರಿ. ಆದರಿಂದಲೇ ಸಿದ್ಧರೆಂದು ಕರೆಸಿಕೊಳ್ಳುವಿರಿ. ದುರ್ಗತಿ ಹೊಂದುವಿರೆಂದು ಚಿಂತಿಸಬೇಡಿರಿ. ನೀವು ನಿರ್ಮಲರೂ, ನಿಷ್ಪಾಪಿಗಳೂ ಆಗಿರುವಿರಿ. ಆದ್ದರಿಂದ ನಿಮಗೆಂದೂ ದುರ್ಗತಿ ಬರದು' ಎಂದು ಧೈರ್ಯ ಹೇಳಿದರು.

## ಸಂದೇಶಗಳು-ವಿವರಣೆಗಳು

೧. ವೃತ್ರಾಸುರನು ಅಸುರ ಜಾತಿಯಲ್ಲಿ ಹುಟ್ಟಿದ್ದರೂ, ಸಜ್ಜೀವ ಎಂದೇ ಭಾಗವತದಲ್ಲಿ ಬಂದಿದೆ (೬ನೆ ಸ್ಕಂಧ – ೧೪,೧೬,೧೭ ಅಧ್ಯಾಯಗಳು).

ಭಾಗವತ ಹಾಗೂ ಭಾರತಗಳಲ್ಲಿನ ವಿಷಯಗಳ ಸಮನ್ವಯವನ್ನು ಎಚ್ಚರಿಕೆಯಿಂದ ಅನೇಕ ಮೂಲ ಗ್ರಂಥಗಳಿಂದ ಮಾಡುವುದು.

೨. ಪಾಂಡವರೂ ಕೂಡಾ ಮಹಾಭಾರತ ಯುದ್ಧನಂತರ ಕಲಿಯುಗದಲ್ಲಿ ಅವತರಿಸಿ ತಮ್ಮ ಹಿಂದಿನ ಸಾಧನೆಯನ್ನು ಮುಂದುವರೆಸುವ ಸೂಚನೆ ಮಹಾಭಾರತದಲ್ಲಿ ಬಂದಿದೆ[೧]. ಇದನ್ನು ಶ್ರೀಮದಾಚಾರ್ಯರೂ ಮ.ತಾ.ನಿದಲ್ಲಿ ಸೂಚಿಸಿದ್ದಾರೆ[೨].

*****

---

೧ ಶುದ್ಧಾಭಿಜನಸಂಪನ್ನಾಃ ಪಾಂಡವಾಃ ಸಂಶಿತವ್ರತಾಃ ।
ವಿಹೃತ್ಯ ದೇವಲೋಕೇಷು ಪುನರ್ಮಾನುಷ್ಯಮೇಷ್ಯಥ ॥ – ೧೧೪/೬೮
ಪ್ರಜಾವಿಸರ್ಗಂ ಚ ಸುಖೇನ ಕಾಲೇ
ಪ್ರತ್ಯೇತ್ಯ ದೇವೇಷು ಸುಖಾನಿ ಭುಕ್ತ್ವಾ ।
ಸುಖೇನ ಸಂಯಾಸ್ಯಥ ಸಿದ್ಧಸಂಖ್ಯಾ
ಮಾ ವೋ ಭಯಂ ಭೂದ್ ವಿಮಲಾಃ ಸ್ಥ ಸರ್ವೇ ॥ – ೧೧೪/೬೯

೨ ಚತುಃಸಹಸ್ರೇ ತ್ರಿಶತೋತ್ತರೇ ಗತೇ ಸಂವತ್ಸರಾಣಾಂ ತು ಕಲೌ ಪೃಥಿವ್ಯಾಮ್ ।
ಜಾತಃ ಪುನಃ ವಿಪ್ರತನುಃ ಸ ಭೀಮೋ ದೈತ್ಯೈರ್ನಿಗೂಢಂ ಹರಿತತ್ತ್ವಮಾಹ ॥
ತದೈವ ಕೃಷ್ಣಾಽಪಿ ಭುವಿ ಪ್ರಜಾತಾ ಪ್ರೀತ್ಯೈ ಹರೇರಂಧತಮಸ್ಯಪಾತಯತ್ ।
ಮಹಾಸುರಾನ್ ವಿಷ್ಣುಪರಾರ್ಜುನಾದ್ಯಾಃ ಕೃತೇ ಪ್ರಜಾತಾ ಹರಿತೋಷಣಾಯ ॥....
.... ಇತ್ಯಾದಿ ಸೂಕ್ತಾನಿ ಚ ತತ್ಪ್ರಮಾಣಮ್ ॥
ಅನ್ಯಾನಿ ವಾಕ್ಯಾನಿ ಚ ವೈದಿಕಾನಿ ಸ ಪಂಚರಾತ್ರೋಕ್ತ ಪುರಾಣಕಾನಿ ।
ಪೃಷ್ಟಶ್ಚ ಭೀಷ್ಮೋಽತ್ರ ಯುಧಿಷ್ಠಿರೇಣ ತನ್ಮೋಕ್ಷಧರ್ಮೇಷ್ವಪಿ ಕಿಂಚಿದಾಹ ॥ – ೩೨/೧೨೫-೧೩೩

# ೧೦೫. ಇಂದ್ರ-ವೃತ್ರರ ಯುದ್ಧ

ವೃತ್ರಾಸುರನ ವಿಷ್ಣುಭಕ್ತಿ ಬಗ್ಗೆ ವಿಸ್ಮಿತನಾದ ಧರ್ಮರಾಜನು ಆತನು ಹೇಗೆ ವಿಷ್ಣುವಿನ ಮಹಿಮೆ ತಿಳಿದನು? ಧರ್ಮಿಷ್ಠನೂ, ವಿಷ್ಣುಭಕ್ತನೂ, ತತ್ತ್ವಜ್ಞನೂ ಆದ ವೃತ್ರಾಸುರನನ್ನು ಇಂದ್ರ ಏಕೆ ಕೊಂದ? ಕೊಂದದ್ದು ಎಷ್ಟರಮಟ್ಟಿಗೆ ಉಚಿತ? ಈ ಬಗ್ಗೆ ತಿಳಿಸಲು ಕೋರಿದಾಗ, ಭೀಷ್ಮರು ಅದನ್ನು ವಿಸ್ತಾರವಾಗಿ ಹೇಳಲಾರಂಭಿಸಿದರು.

'ಇಂದ್ರನು ತನ್ನ ಸೇನೆ ತೆಗೆದುಕೊಂಡು ವೃತ್ರನೊಡನೆ ಯುದ್ಧ ಮಾಡಲು ರಥವೇರಿ ಹೋಗಲು ವೃತ್ರನು ಇಂದ್ರನಿಗೆ ಪರ್ವತದಾಕಾರವಾಗಿ ಕಂಡನು. ವೃತ್ರನು ೫೦೦ ಯೋಜನ ಎತ್ತರ, ೩.೦೦ ಯೋಜನ ವಿಸ್ತಾರವಾಗಿ ಬೆಳೆದಿದ್ದ. ಇದನ್ನು ಕಂಡ ದೇವಸೈನ್ಯ ಭಯದಿಂದ ನಡುಗಿತು, ನೆಮ್ಮದಿಯನ್ನು ಕಳೆದುಕೊಂಡಿತು, ತಾವು ಜಯಿಸಲಾರೆವು ಎಂಬ ಭಯದಿಂದ. ಇಂದ್ರನ ಎರಡೂ ತೊಡೆಗಳು ನಿಶ್ಚೇಷ್ಟಿತವಾಗಿ ಮರಗಟ್ಟಿದವು. ಆದಾಗ್ಯೂ ತನ್ನ ಸೈನ್ಯವನ್ನು ಧೈರ್ಯದಿಂದ ಮುನ್ನಡೆಸಿದ. ಯುದ್ಧಕ್ಕೆ ಸನ್ನದ್ಧರಾಗಲು ಕೋಲಾಹಲ ಮುಗಿಲುಮುಟ್ಟಿತು. ಆದರೆ ವೃತ್ರಾಸುರನಿಗೆ ಇಂದ್ರನ ಮಹಾಸೈನ್ಯವನ್ನು ನೋಡಿದರೂ ಯುದ್ಧದ ಆತುರ, ಕಳವಳ, ಭಯವಾಗಲಿಲ್ಲ, ಅದನ್ನು ಅವನು ಅಲಕ್ಷಿಸಿದನು. ಎರಡೂ ಸೈನ್ಯ ಹಾಗೂ ಇಂದ್ರ-ವೃತ್ರರ ನಡುವೆ ವಿವಿಧ ಆಯುಧಗಳೊಡನೆ ಸೆಣಸುವ ಭಯಂಕರ ಯುದ್ಧ ಆರಂಭವಾಯಿತು. ಬ್ರಹ್ಮಾದಿ ದೇವತೆಗಳೂ, ಋಷಿಗಳು, ಗಂಧರ್ವರು, ಸಿದ್ಧರೂ, ಅಪ್ಸರೆಯರೊಂದಿಗೆ ಯುದ್ಧ ನೋಡಲು ಕುತೂಹಲದಿಂದ ಬಂದು ಆಕಾಶದಲ್ಲಿ ನೆರೆದರು.

ಇತ್ತ ವೃತ್ರಾಸುರ ಇಡೀ ಅಂತರಿಕ್ಷವನ್ನು ಆವರಿಸಿ ಇಂದ್ರನ ಮೇಲೆ ಕಲ್ಲಿನ ಮಳೆ (ಶಿಲಾವರ್ಷ) ಗರೆದನು. ದೇವತೆಗಳು ಅದನ್ನು ಶಸ್ತ್ರಗಳಿಂದ ಕಲ್ಲಿನ ರಾಶಿಯನ್ನು ಸಮಮಾಡಿದರು. ವೃತ್ರನು ಇಂದ್ರನನ್ನು ಮಾಯಾಯುದ್ಧದಿಂದ ಮೋಹಗೊಳಿಸಿದ(ಮೂರ್ಛೆ). ಇಂದ್ರನಿಗೆ ದಿಗ್ಭ್ರಮೆಯಾಯಿತು. ಆಗ ವಸಿಷ್ಠರು '**ರಥಂತರ**' ಸಾಮಮಂತ್ರಗಳಿಂದ [೧]**ಎಚ್ಚರಗೊಳಿಸಿ**

೧ ಸಾಮವೇದಕ್ಕೆ ಸಂಬಂಧಿಸಿ ಛಾಂದೋಗ್ಯೋಪನಿಷತ್ತಿನ ೨ನೇ ಅಧ್ಯಾಯದ ೧೨ನೇ ಖಂಡವು ರಥಂತರಸಾಮ ಪ್ರತಿಪಾದ್ಯವೆಂದು ಪ್ರಸಿದ್ಧವಾಗಿದೆ.

೧. 'ಅಭಿಮಂಥತಿ ಸ ಹಿಂಕಾರೋ ಧೂಮೋ ಜಾಯತೇ ಸ ಪ್ರಸ್ತಾವೋ ಜ್ವಲತಿ ಸ ಉದ್ಗೀಥೋಽಂಗಾರಾ ಭವಂತಿ ಸ ಪ್ರತಿಹಾರ ಉಪಶಾಮ್ಯತಿ ತನ್ನಿದನಂ ಸಂಶಾಮ್ಯತಿ ತನ್ನಿಧನಮೇತತ್ **ರಥಂತರಮಗ್ನೌ** ಪ್ರೋತಮ್ ॥ ೧ ॥

ಸ ಯ ಏವಮೇತದ್ **ರಥಂತರಮಗ್ನೌ** ಪ್ರೋತಂ ವೇದ ಬ್ರಹ್ಮವರ್ಚಸ್ವೀ ಅನ್ನಾದೋ ಭವತಿ ಸರ್ವಮಾಯುರೇತಿ ಜ್ಯೋಗ್ ಜೀವತಿ ಮಹಾನ್ ಪ್ರಜಯಾ ಪಶುಭಿಃ ಭವತಿ ಮಹಾನ್ ಕೀರ್ತ್ಯಾ ನ ಪ್ರತ್ಯಙ್ ಅಗ್ನಿಮಾಚಾಮೇತ್ ನ ನಿಷ್ಠೀವೇತ್ ತದ್ ವ್ರತಮ್ ॥

ಪ್ರೋತ್ಸಾಹಿಸಿದರು. ಇಂದ್ರನ ಸಾಮರ್ಥ್ಯವನ್ನು ನೆನಪಿಸಿ ಹುರಿದುಂಬಿಸಿದರು, ಕೆಳಗಿನ ಮಾತುಗಳಿಂದ.

**ದೇವಶ್ರೇಷ್ಠೋಽಸಿ ದೇವೇಂದ್ರ ಸುರಾರಿವಿನಿಬರ್ಹಣ।**
**ತ್ರೈಲೋಕ್ಯಬಲಸಂಯುಕ್ತಃ ಕಸ್ಮಾಚ್ಛಕ್ರ ವಿಷೀದಸಿ॥**
**ಏಷ ಬ್ರಹ್ಮಾ ಚ ವಿಷ್ಣುಶ್ಚ ಶಿವಶ್ಚೈವ ಜಗತ್ಪ್ರಭುಃ।**
**ಸೋಮಶ್ಚ ಭಗವಾನ್ ದೇವಃ ಸರ್ವೇ ಚ ಪರಮರ್ಷಯಃ॥**
**ಮಾ ಕಾರ್ಷೀಃ ಕಶ್ಮಲಂ ಶಕ್ರ ಕಶ್ಚಿದೇವೇತರೋ ಯಥಾ।**
**ಆರ್ಯಾಂ ಯುದ್ಧೇ ಮತಿಂ ಕೃತ್ವಾ ಜಹಿ ಶತ್ರುಂ ಸುರೇಶ್ವರ॥**
**ಏಷ ಲೋಕಗುರುಸ್ತ್ರ್ಯಕ್ಷಃ ಸರ್ವಲೋಕನಮಸ್ಕೃತಃ।**
**ನಿರೀಕ್ಷತೇ ತ್ವಾಂ ಭಗವನ್ ತ್ಯಜ ಮೋಹಂ ಸುರೇಶ್ವರ।**
**ಏತೇ ಬ್ರಹ್ಮರ್ಷಯಶ್ಚೈವ ಬೃಹಸ್ಪತಿಪುರೋಗಮಾಃ॥**
**ಸ್ತವೇನ ಶಕ್ರ ದಿವ್ಯೇನ ಸ್ತುವಂತಿ ತ್ವಾಂ ಜಯಾಯ ವೈ॥** - ೧೧೫/೨೨-೨೬

ವಸಿಷ್ಠರ ಮಾತುಗಳ ಭಾವಾನುವಾದದ ಸಾರ.

'ಎಲೈ ದೇವೇಂದ್ರ! ನೀನು ದೇವತೆಗಳಲ್ಲಿ ಶ್ರೇಷ್ಠ ಮೂರುಲೋಕದ ಬಲ ನಿನಗುಂಟು. ಏಕೆ ವಿಷಾದಪಡುವೆ (ಕರ್ತವ್ಯದ ಬಗ್ಗೆ ತೋಚದಂತಿರುವೆ). ಬ್ರಹ್ಮ, ವಿಷ್ಣು, ಶಿವ, ಸೋಮ ದೇವತೆಗಳು ಮತ್ತು ಮಹರ್ಷಿಗಳು ಬಂದಿದ್ದಾರೆ - ನಿನ್ನ ಹಿತಚಿಂತಕರು ಇವರೆಲ್ಲ. ಇತರರಂತೆ ಮನಸ್ಸಿನಲ್ಲಿ ಕಶ್ಮಲ ಇಟ್ಟುಕೊಳ್ಳದೆ (ಧೈರ್ಯಗೆಡದೆ) ಯುದ್ಧದಲ್ಲಿ ಶತ್ರುವನ್ನು ನಿಗ್ರಹಿಸಿ ಕೊಲ್ಲು. ಲೋಕಗುರುವಾದ ರುದ್ರದೇವ ನಿನ್ನನ್ನು ಕರುಣೆಯಿಂದ ನೋಡುತ್ತಿದ್ದಾನೆ. ನೀನು ಯುದ್ಧದಲ್ಲಿ ಜಯಶೀಲನಾಗುವೆ ಎಂದು ನಿರೀಕ್ಷಿಸುತ್ತಿದ್ದಾನೆ. ಕಾರಣ ಮೋಹ ಬಿಡು. ಬೃಹಸ್ಪತಿಯೇ ಮೊದಲಾದ ಮಹರ್ಷಿಗಳೂ ನಿನ್ನ ಜಯವನ್ನು ಬಯಸಿ ಸ್ತೋತ್ರ ಮಾಡುತ್ತಿದ್ದಾರೆ. ಆದ್ದರಿಂದ ಧೈರ್ಯದಿಂದ ಮುನ್ನುಗ್ಗಿ ವೃತ್ರನನ್ನು ಸಂಹರಿಸು.'

ಇದರಿಂದ ಇಂದ್ರನು ಉತ್ತೇಜಿತನಾಗಿ ಬುದ್ಧಿವಂತಿಕೆಯಿಂದ ಉಪಾಯದಿಂದ ವೃತ್ರನ ಮಾಯೆಯನ್ನು ನಾಶಮಾಡಿದನು. ಆಗಲೇ ಬೃಹಸ್ಪತ್ಯಾಚಾರ್ಯರು ಹಾಗೂ ಕೆಲವು ಮಹರ್ಷಿಗಳು ವೃತ್ರನ ಪರಾಕ್ರಮವನ್ನು ನೋಡಿ ರುದ್ರದೇವರ ಬಳಿ ಹೋಗಿ ಲೋಕದ ಹಿತಕ್ಕಾಗಿ

---

ಭಾಷ್ಯ -
ಮಂಥನಾದಿ ಸ್ಥಿತಂ ಯಸ್ತು ತನ್ನಾಮಾನಂ ಹರಿಂ ಪರಮ್।
ತತ್ತತ್ ಕ್ರಿಯೈಕಹೇತುತ್ವಾತ್ ಯೋಽಗ್ನೌ ಧ್ಯಾಯೇತ್ ಜನಾರ್ದನಮ್।
**ರಥಾಂತರಾಶ್ರಯಂ** ಪಂಚರೂಪಂ ಸ ಚ ವಿಮುಚ್ಯತೇ॥
(ಪೂರ್ಣಪ್ರಜ್ಞಸಂಶೋಧನ ಮಂದಿರ, ಬೆಂಗಳೂರು ಇವರ ಪ್ರಕಾಶನ ೨೦೦೪, ಪುಟ. ೧೫೭,೧೫೮ - ಛಾಂದೋಗ್ಯಭಾಷ್ಯ - ಶ್ರೀವೇದೇಶತೀರ್ಥಟೀಕಾಸಮೇತಮ್)

ವೃತ್ರನನ್ನು ನಾಶಮಾಡಲು, ಸಂಹರಿಸಲು ಪ್ರಾರ್ಥಿಸಿದರು. ಆಗ ರುದ್ರದೇವರ ತೇಜಸ್ಸು ಜ್ವರದ ರೂಪವನ್ನು ತಾಳಿ ವೃತ್ರನ ದೇಹವನ್ನು ಪ್ರವೇಶಿಸಿತು. ವಿಷ್ಣುವು ಲೋಕರಕ್ಷಣೆಗಾಗಿ ವಜ್ರಾಯುಧವನ್ನು ತಾನೇ ಪ್ರವೇಶಿಸಿದನು. ನಂತರ ಬೃಹಸ್ಪತ್ಯಾಚಾರ್ಯರು ಮತ್ತು ವಸಿಷ್ಠರು ಇಂದ್ರನ ಹತ್ತಿರಹೋಗಿ ರುದ್ರದೇವರೂ ಕೂಡಾ 'ಈ ವೃತ್ರ ಮಹಾಬಲಶಾಲಿ, ಕಾಮರೂಪಿ ಹಾಗೂ ಅನೇಕ ಮಾಯಾ ಶಕ್ತಿಗಳನ್ನು ಹೊಂದಿದವನು; ನೀನು ತಡ ಮಾಡದೆ ಅಲಕ್ಷಿಸದೆ ಯೋಗಶಕ್ತಿಯನ್ನು ಆಶ್ರಯಿಸಿ ಕೂಡಲೇ ಕೊಲ್ಲು. ಇವನು ಇಷ್ಟು ಬಲಿಷ್ಠನಾಗಲು ೬೦೦೦೦ವರ್ಷ ತಪಸ್ಸನ್ನು ಮಾಡಿದ್ದಾನೆ. ಬ್ರಹ್ಮನೂ ಬಲ ಹಾಗೂ ವರದಾನ ಮಾಡಿದ್ದಾನೆ.

ವಿಷ್ಣುವಿನ ತೇಜಸ್ಸು ನಿನ್ನನ್ನು ಪ್ರವೇಶಿಸಿದೆ. ಅವನನ್ನು ವಜ್ರಾಯುಧದಿಂದ ಕೊಂದುಬಿಡು ಎಂದು ಹೇಳಿದರು.

ಆಗ ಶಕ್ರನು ರುದ್ರದೇವರಿಗೆ 'ಪೂಜ್ಯನೇ! ನಿನ್ನ ಅನುಗ್ರಹದಿಂದ ಯಾರಿಗೂ ಜಯಿಸಲು ಆಗದ ವೃತ್ರನನ್ನು ಎಲ್ಲರೂ ನೋಡುತ್ತಿರುವಂತೆ ವಜ್ರಾಯುಧದಿಂದ ಕೊಲ್ಲುವೆ' ಎಂದು ನಿವೇದಿಸಿದನು.

ಇದೇ ವೇಳೆ ರುದ್ರಪ್ರೇರಿತ ಜ್ವರವು ವೃತ್ರನನ್ನು ಪ್ರವೇಶಿಸಿತು. ಇದನ್ನು ನೋಡಿದ ದೇವತೆ, ಋಷಿಗಳು ಸಂತೋಷದಿಂದ ಕೂಗಿದರು. ದೇವ ದುಂದುಭಿಗಳು ಮೊಳಗಿದವು. ಎಲ್ಲ ಅಸುರರಿಗೆ ಸ್ಮೃತಿಲೋಪವಾಯಿತು (ಯುದ್ಧ ಮಾಡುವ ಬಗ್ಗೆ ರೀತಿ). ವೃತ್ರನ ಮಾಯೆ ಎಲ್ಲ ಅಡಗಿತು (ಕಣ್ಮರೆಯಾಯಿತು). ಅವನಿಗೂ ಪ್ರಜ್ಞಾನಾಶ(ಬುದ್ಧಿನಾಶ) ಉಂಟಾಯಿತು. ದೇವತೆಗಳ ಋಷಿಗಳು ಇಂದ್ರನನ್ನು ವೃತ್ರವಧೆಗೆ ಪ್ರಚೋದಿಸುತ್ತಿರಲು ರಥಸ್ಥ ಇಂದ್ರನ ರೂಪವು ವೃತ್ರನಿಗೆ ಭಯಂಕರವಾಗಿ ತೋರಿತು. ಋಷಿಗಳು ಸ್ತೋತ್ರ ಮಾಡಿದರು.

'ಶೈವಜ್ವರ ವೃತ್ರಾಸುರನ ಶರೀರದಲ್ಲಿ ಹೀಗೆ ಪರಿಣಾಮ ಬೀರಿತು – ೧. ಮುಖ ಸುಡಲಾರಂಭಿಸಿತು; ೨. ದೇಹದ ಬಣ್ಣದಲ್ಲಿ ವಿಕಾರ ಮಾಡಿತು; ೩. ಶರೀರದಲ್ಲಿ ನಡುಕ ಉಂಟಾಯಿತು; ೪. ಶ್ವಾಸೋಚ್ಛ್ವಾಸಗಳ ವೇಗ ಅಧಿಕವಾಯಿತು; ೫. ಶರೀರದ ಮೇಲಿನ ಕೂದಲುಗಳು ನಿಮಿರಿ ನಿಂತವು; ೬. ತೀವ್ರವಾದ ನಿಶ್ವಾಸ ಉಂಟಾಯಿತು; ೭. ಅವನ ಮುಖದಿಂದ ಒಳ್ಳೆಯ, ಕೆಟ್ಟ ಶಬ್ದಗಳು ಬರತೊಡಗಿದವು; ೮. ಭಯಂಕರ ಶಬ್ದ ಹೊರಟಿತು; ೯. ಅವನ ಎರಡೂ ಪಾರ್ಶ್ವಗಳಿಂದ ಪ್ರಕಾಶಮಾನವಾದ ಉಲ್ಕೆಗಳು ಬೀಳಲಾರಂಭಿಸಿದವು; ೧೦. ವಾತಾವರಣದಲ್ಲಿ ರಣಹದ್ದುಗಳು, ಕಾಗೆಗಳು, ಬಕಪಕ್ಷಿಗಳು ಕರ್ಕಶವಾಗಿ ಕೂಗಿದವು; ೧೧. ಅಸುರರ ಮೇಲ್ಭಾಗದಲ್ಲಿ(ತಲೆಯ)ಭಯಂಕರ ಹಕ್ಕಿಗಳು ಚಕ್ರದಂತೆ ಸುತ್ತಾಡಿದವು.

ಇತ್ತ ಇಂದ್ರನು ದೇವತೆಗಳಿಂದ ಅಭಿವಂದಿತನಾಗಿ ರಥದಲ್ಲಿ ಕುಳಿತು ವಜ್ರಾಯುಧ ಹಿಡಿದು ಅಸುರನ ಕಡೆ ನುಗ್ಗಿದನು. ಅಸುರನು ಮನುಷ್ಯರು ಊಹಿಸಲು ಆಗದ ಭಾರಿ ಶಬ್ದ ಮಾಡಿದನು(ಕೂಗಿದನು). ಶೈವಜ್ವರದಿಂದ ತೀವ್ರವೇದನೆ ಉಂಟಾಯಿತು. ಹೀಗಾಗಿ ಮತ್ತೆ

ಮತ್ತೆ ಆಕಳಿಸುತ್ತಿದ್ದನು. ಇಂದ್ರನು ವಜ್ರಾಯುಧವನ್ನು ಅಸುರನ ಮೇಲೆ ಪ್ರಯೋಗಿಸಿದನು. ಮಹಾತೇಜಸ್ಸಿನಿಂದ ಕೂಡಿದ ಆಯುಧ ಅಸುರನನ್ನು ಕೆಳಗೆ ಬೀಳಿಸಿತು.

ದೇವತೆಗಳು ಅದನ್ನು ನೋಡುತ್ತಾ ಸಿಂಹನಾದ ಮಾಡಿದರು. ವೃತ್ರನನ್ನು ವಿಷ್ಣು ತೇಜಸ್ಸಿನಿಂದ ಪ್ರವೇಶಿಸಿದ. ವಜ್ರಾಯುಧದಿಂದ ಸಂಹರಿಸಿ ಮತ್ತೆ ದೇವಲೋಕವನ್ನು ಪ್ರವೇಶಿಸಿದ (೧೧೬/೧-೮)[೧].

ವೃತ್ರಾಸುರ ಶರೀರದಿಂದ ಲೋಕಕ್ಕೆ ಭಯವುಂಟು ಮಾಡಲು ಮಹಾಘೋರವಾದ ಕ್ರೂರವಾದ ಪಾಪರೂಪದ ಬ್ರಹ್ಮಹತ್ಯಾ ಪ್ರಕಟವಾಯಿತು.

'ಬ್ರಹ್ಮಹತ್ಯಾ' ಹೀಗೆ ಇದ್ದಿತಂತೆ.

೧. ಭಯಂಕರವಾದ ವಿಕಾರವಾದ ಹಲ್ಲುಗಳು; ೨. ಕಪ್ಪು ಮತ್ತು ಕಂದುಮಿಶ್ರಿತ ಹಳದಿ ಬಣ್ಣದ; ೩. ಭಯಂಕರ ಆಕಾರ; ೪. ಕೆದರಿದ ತಲೆ ಕೂದಲುಗಳು; ೫. ಘೋರವಾದ ಕಣ್ಣುಗಳು; ೬. ರುಂಡಗಳ ಮಾಲೆ ಧರಿಸಿದ; ೭. ರಕ್ತದಿಂದ ಒದ್ದೆಯಾಗಿತ್ತು; ೮. ಹರಿದ ನಾರು ಬಟ್ಟೆಗಳನ್ನು ಧರಿಸಿತ್ತು.

ಇಂತಹ ಬ್ರಹ್ಮಹತ್ಯಾ(ಕೃತ್ಯಾ) ವೃತ್ರಾಸುರನ ಶರೀರದಿಂದ ಹೊರಬಂದದ್ದೇ 'ಇಂದ್ರನನ್ನು ಹುಡುಕಲಾರಂಭಿಸಿತು. ಸ್ವರ್ಗದ ಕಡೆ ಹೋಗುತ್ತಿದ್ದ ದೇವೇಂದ್ರನ ಕತ್ತನ್ನು ಹಿಡಿದು ಅವನ ದೇಹವನ್ನು ಸೇರಿತು. ಅದರ ಭಯದಿಂದ ದೇವೇಂದ್ರನು (ಮಾನಸಸರೋವರದಲ್ಲಿನ) ಕಮಲದ ನಾಳದಲ್ಲಿ ಸೇರಿಕೊಂಡು ಅನೇಕವರ್ಷಗಳ ಕಾಲ ತಪಸ್ಸನ್ನು ಮಾಡಿದನು[೨].

ವೃತ್ರಾಸುರನ ವಧೆಯಿಂದ ಇಂದ್ರದೇವರಿಗೆ ಬ್ರಹ್ಮಹತ್ಯಾದೋಷ ಬಂತೆಂಬುದು ಕೇವಲ ಲೋಕದೃಷ್ಟಿಯಿಂದ. ಬ್ರಹ್ಮಹತ್ಯೆ ದೋಷಬಂದಾಗ ಏನು ಮಾಡಬೇಕೆಂದು ಇಂದ್ರದೇವರು ತೋರಿಸಿಕೊಟ್ಟಿದ್ದಾರೆ. ವಾಸ್ತವವಾಗಿ ವೃತ್ರಹತ್ಯೆಯಿಂದ ಇನ್ನೂ ಮಹತ್ತ್ವ ಪಡೆದನೆಂದೇ ಶ್ರುತಿ 'ವೃತ್ರಹತ್ಯಾ ಮಹಾನಾಸ' ಈ ಬಗ್ಗೆ ಮ.ತಾ.ನಿ. ಹಾಗೂ ಭಾಗವತತಾತ್ಪರ್ಯಗಳಲ್ಲಿ ವಿಶೇಷ ವಿವರಣೆಗಳಿವೆ (ಮ.ತಾ.ನಿ.ಅ-೨೨/೩೪೧,೩೫೨,೩೫೩,೩೫೪; ಐ.ಭಾ.-೨/೨/೩; ಭಾ.ತಾ.-೧೧/೪/೧೯). ಆದರೂ ಇಂದ್ರನು ನಿಶ್ಚೇಷ್ಟಿತನಾದನು. ತೇಜೋವಿಹೀನನಾದನು. ಬ್ರಹ್ಮಹತ್ಯಾದೋಷ ಕಳೆದುಕೊಳ್ಳಲು ಮಾಡಿದ ಪ್ರಯತ್ನಗಳು ವಿಫಲವಾದವು (ತಪಸ್ಸು ಆರಂಭವಾಗುವ ಮುನ್ನವೇ). ಬ್ರಹ್ಮದೇವರನ್ನು ಹೋಗಿ ನಮಿಸಿ ಬ್ರಹ್ಮಹತ್ಯಾದೋಷದ

---

೧ ವೃತ್ರಂ ತು ಹತ್ವಾ ಭಗವಾನ್ ದಾನವಾರಿರ್ಮಹಾಯಶಾಃ।
ವಜ್ರೇಣ ವಿಷ್ಣುಯುಕ್ತೇನ ದಿವಮೇವ ಸಮಾವಿಶತ್ ॥ - ೧೧೬/೯

೨ ಪೂರ್ವಂ ಹಿ ವೃತ್ರವಧತೋಽಂಬುಜನಾಲತಂತುಸಂಸ್ಥೇ ಶಚೀ ಪ್ರಣಯಿನಿ...
-ಮ.ತಾ.ನಿ.೨೨/೩೪೧

ಪರಿಹಾರವನ್ನು ಇಂದ್ರನು ಕೇಳಲು ಬ್ರಹ್ಮದೇವರು 'ಬ್ರಹ್ಮಹತ್ಯೆಗೆ' ಇಂದ್ರನನ್ನು ಬಿಟ್ಟು ಬಿಡಲು ಹೇಳಿದ. ಅದಕ್ಕೆ ಪ್ರತಿಯಾಗಿ ನಿನ್ನ ಇಚ್ಛೆಯನ್ನು ಪೂರೈಸುವೆ ಎಂದು ಹೇಳಲು, ಅದು (ಆಕೆಯು) ನಿನ್ನ ಮಾತುಗಳಿಂದ (ವರದ) ನನ್ನ ಇಚ್ಛೆ ಈಡೇರಿದಂತಾಯಿತು. ನನಗೆ ಅದಕ್ಕೆ ಬದಲಾಗಿ ಸೂಕ್ತವಾಸಸ್ಥಳವನ್ನು (ಇಂದ್ರದೇವರ ಬದಲಾಗಿ) ಕೊಡಬೇಕೆಂದು ಕೋರಿದಳು.

ಹೀಗೆ ಉಪಾಯದಿಂದ ಇಂದ್ರನಲ್ಲಿದ್ದ ಬ್ರಹ್ಮಹತ್ಯೆಯನ್ನು ಹೊರಗೆ ಕಳಿಸಿ ಈ ಕೆಳಗಿನವುಗಳಲ್ಲಿ ಸರಿಯಾಗಿ ನಾಲ್ಕು ಭಾಗಗಳಾಗಿ ಆಕೆಗೆ ವಾಸಸ್ಥಾನವನ್ನು ಕಲ್ಪಿಸಿಕೊಟ್ಟನು ಬ್ರಹ್ಮದೇವ.

| | | |
|---|---|---|
| ೧ | ಅಗ್ನಿ | ಯಾವ ಮನುಷ್ಯನು ಪ್ರಜ್ವಲಿಸುವ ಅಗ್ನಿಯ ಬಳಿ ಬಂದಾಗ ಅಜ್ಞಾನದಿಂದ ಬೀಜ, ಔಷಧಿ, ರಸಗಳಿಂದ ಹೋಮವನ್ನು ಮಾಡುವುದಿಲ್ಲವೋ ಅವನಿಗೆ ಬ್ರಹ್ಮಹತ್ಯೆ ದೋಷ ಸೇರುತ್ತದೆ (ಅಗ್ನಿಯಿಂದ). |
| ೨ | ವೃಕ್ಷ-ತೃಣ-ಔಷಧಿ (ದೇವತೆಗಳು) | ಪರ್ವಕಾಲದಲ್ಲಿ (ಸಂಕ್ರಾಂತಿ, ಗ್ರಹಣ, ಹುಣ್ಣಿಮೆ, ಅಮಾವಾಸ್ಯ ಕಾಲಗಳಲ್ಲಿ ಯಾವ ಮನುಷ್ಯರು ವೃಕ್ಷಾದಿಗಳನ್ನು ಕತ್ತರಿಸುತ್ತಾರೋ, ಮುರಿಯುತ್ತಾರೋ, ಅವರಿಗೆ ಬ್ರಹ್ಮಹತ್ಯಾ ದೋಷ ಬರುತ್ತದೆ. |
| ೩. | ಅಪ್ಸರೆಯರು | ಸ್ತ್ರೀಯರು ರಜಸ್ವಲೆಯರಾದಾಗ ಅವರೊಡನೆ ಸೇರುವ ಮನುಷ್ಯರಿಗೆ ಬ್ರಹ್ಮಹತ್ಯಾದೋಷ ಬರುತ್ತದೆ. |
| ೪ | ಆಪಃ(ನೀರಿನ ಅಭಿಮಾನಿಗಳು) | ಯಾವ ಮನುಷ್ಯನು ನೀರನ್ನು ತುಚ್ಛೀಕರಿಸಿ, ಅಲ್ಪವೆಂದು ಭಾವಿಸಿ ಕಫ, ಮೂತ್ರ, ಮಲಗಳನ್ನು ವಿಸರ್ಜಿಸುತ್ತಾರೋ ಅವರಿಗೆ ಬ್ರಹ್ಮಹತ್ಯಾದೋಷ ಬರುತ್ತದೆ. |

ಹೀಗೆ ಬ್ರಹ್ಮನಿಂದ ಆಜ್ಞಪ್ತಳಾದ 'ಬ್ರಹ್ಮಹತ್ಯೆ' ಮೇಲಿನ ನಾಲ್ಕು ಪದಾರ್ಥ/ವ್ಯಕ್ತಿಗಳಲ್ಲಿ ಸೇರಿಕೊಂಡಿತು. ಇಂದ್ರನು ಬ್ರಹ್ಮಹತ್ಯಾದೋಷದಿಂದ ಮುಕ್ತನಾದ. ನಂತರ ಇಂದ್ರದೇವರು ಬ್ರಹ್ಮ ಆದೇಶದ ಮೇರೆಗೆ ಅಶ್ವಮೇಧಯಾಗ ಮಾಡಿ, ಪಾಪ ಕಳೆದುಕೊಂಡು, ಮತ್ತೆ ತ್ರೈಲೋಕ್ಯಸಾಮ್ರಾಜ್ಯಲಕ್ಷ್ಮಿಯನ್ನು ಹೊಂದಿ ಆನಂದವಾಗಿದ್ದನು.

ವೃತ್ರನ ರಕ್ತದಿಂದ ತಲೆಯಲ್ಲಿ ಕುಚ್ಚುಗಳಿರುವ ನವಿಲು ಮೊದಲಾದ ಪಕ್ಷಿಗಳು ಹುಟ್ಟಿದವು. ಆದ್ದರಿಂದ ಈ ಪಕ್ಷಿಗಳು ತಪಸ್ವಿಗಳಿಗೆ ಅಭಕ್ಷ್ಯವಾಗಿವೆ. ಆದ್ದರಿಂದ ಧರ್ಮರಾಜನೇ ನೀನೂ ಕೂಡಾ ಬ್ರಾಹ್ಮಣರನ್ನು ಯಾವಾಗಲೂ ಸಂತೋಷಗೊಳಿಸು, ಉಪಾಯದಿಂದ. ಇಂದ್ರನಂತೆ ಪೃಥಿವಿಯಲ್ಲಿ ಸೋಲಿಲ್ಲದವನಾಗಿ ಇರುವೆ. ಈ ಇಂದ್ರದೇವರ ಈ ಕಥೆಯನ್ನು ಯಾರು ಪರ್ವಕಾಲಗಳಲ್ಲಿ ಬ್ರಾಹ್ಮಣರ ಮಧ್ಯೆ ಕೇಳುತ್ತಾರೋ ಅವರು ಪಾಪಗಳನ್ನು ಹೊಂದುವುದಿಲ್ಲ ಎಂದು ಭೀಷ್ಮರು ಧರ್ಮರಾಜನಿಗೆ ಹೇಳಿದರು.

## ಸಂದೇಶಗಳು-ವಿವರಣೆಗಳು

೧. ಪ್ರಪಂಚದಲ್ಲಿ ನಮ್ಮನ್ನು ಪ್ರಶಂಸಿಸಿದ ಮಾತ್ರಕ್ಕೆ ಮರುಳಾಗದೆ ನಮ್ಮ ಜೀವನದಲ್ಲಿ ಮಾಡಿದ ಪಾಪಗಳಿಗೆ ಪರಿಹಾರ ಕಂಡುಕೊಳ್ಳಲು ಪ್ರಯತ್ನಿಸಬೇಕು (ಧರ್ಮರಾಜನು, ತಮ್ಮನ್ನು ಜನರು ಧನ್ಯ ಧನ್ಯರೆಂದು ಕರೆಸಿಕೊಳ್ಳಲು ಮುಜುಗರಪಟ್ಟುಕೊಳ್ಳುತ್ತಿದ್ದ. ಪಾಂಡವರು ಮಹಾಪುಣ್ಯವಂತರಾಗಿದ್ದರೂ, ತಾವು ಪಾಪಿಗಳೆಂಬ ಭಾವನೆ ಧರ್ಮರಾಜನಿಗೆ ಇತ್ತು. ಇನ್ನು ಉಳಿದವರ, ನಮ್ಮಂತಹವರ ಪಾಡೇನು).

೨. ಮನುಷ್ಯ ಎಂದೂ ಧೃತಿಗೆಡದೆ ಪಾಪ, ಪುಣ್ಯಗಳಿಗೆ ಇಂದಲ್ಲ ನಾಳೆ ಕೊನೆ ಇದೆ ಎಂಬ ಧೈರ್ಯದಿಂದ ಸನ್ಮಾರ್ಗದಲ್ಲಿರಲು ಪ್ರಯತ್ನಿಸಬೇಕು. (ನೋಡಿರಿ ಅ. ೧೧೩/೧-೧೨).

೩. ವೃತ್ರಾಸುರ ದೈತ್ಯ ಆದರೂ, ವಿಷ್ಣುಭಕ್ತ. ತಪಸ್ವೀ. ಆದರೂ ಸಂಪಾದಿಸಿದ ಐಶ್ವರ್ಯ ಕಳೆದುಕೊಂಡಿದ್ದ. ದೈವರ ಸ್ಮರಣೆ ಮಾತ್ರ ಇತ್ತು. ಆತನ ವಿಷ್ಣುಸ್ಮರಣೆ ಸರ್ವಸಾಧಕರಿಗೆ ಅನುಕರಣೀಯ. ಇಲ್ಲೂ ಆ ಸ್ತೋತ್ರ ನಿತ್ಯಪಠಣೀಯ. ಭಾಗವತದಲ್ಲೂ ಇದೆ ೫/೯-೧೨ ಅಧ್ಯಾಯಗಳು ಇಲ್ಲೂ ಸ್ಮರಣೀಯವಆಗಿವೆ. ವೃತ್ರಾಸುರಕಥಾ ಪ್ರಸಂಗಗಳು.

೪. ದೈತ್ಯಜನ್ಮ ಬಂದರೂ (ಯಾವುದೇ ಜನ್ಮ ಬಂದರೂ) ಭಗವತ್ಸ್ಮರಣೆಯನ್ನು ಕೇಳಬೇಕು ಸಾಧಕರು.

೫. ವೃತ್ರಾಸುರನು ಶುಕ್ರಾಚಾರ್ಯರೊಡನೆ ಜಿಜ್ಞಾಸೆ ಆರಂಭಿಸಿದರೂ, ಆತನಿಗೆ ಉಪದೇಶವಾದುದು ಸನತ್ಕುಮಾರರಿಂದ. ಅದೆಂಥ ಭಾಗ್ಯ. ಪ್ರಾಮಾಣಿಕ ಬಯಕೆಗೆ ಶ್ರೇಷ್ಠ ಗುರುಗಳು ತಾವಾಗಿಯೇ ಬಂದು ಉಪದೇಶ ಮಾಡಿದರು. ಪರೀಕ್ಷಿತರಿಗೆ ಶುಕಾಚಾರ್ಯರು ಬಂದು ಭಾಗವತೋಪದೇಶ ಮಾಡಿದಂತೆ (ಅ. ೧೧೪).

೬. ಬೆದರಿದ ಇಂದ್ರಗೆ ವಸಿಷ್ಠರಿಂದ, ರುದ್ರದೇವರಿಂದ ಧೈರ್ಯ. ಆಪತ್ಕಾಲದಲ್ಲಿ ಹೀಗೆ ಪ್ರೋತ್ಸಾಹ ತುಂಬುತ್ತಾರೆ. ಅರ್ಜುನನಿಗೆ ಕೃಷ್ಣನಂತೆ. ಇಲ್ಲಿ ಬ್ರಹ್ಮ ದೇವತೆಗಳು, ದೇವೋತ್ತಮರಾದ ರುದ್ರದೇವರಿಂದ ಧೈರ್ಯ ಪ್ರಾಪ್ತಿ ಇಂದ್ರಗೆ. ಆದ್ದರಿಂದ ಧೈರ್ಯವಾಗಿ ಭಗವಂತನಿಗೆ ಮೊರೆ ಹೋಗುವುದು ಆಪತ್ಕಾಲ ಪರಿಹಾರಕ್ಕೆ ದಾರಿ.

೭. ವೃತ್ರನನ್ನು ಕೊಲ್ಲಲು ವಜ್ರಾಯುಧದಲ್ಲಿ ವಿಷ್ಣುವೇ ಸೇರಿ ಸಹಾಯ ಮಾಡಿದ. ವೃತ್ರನ ದೇಹವನ್ನು ಹೊಕ್ಕು ಶೈವಜ್ವರ ಅವನನ್ನು ದುರ್ಬಲಗೊಳಿಸಿತು. ಹೀಗೆ ಹರಿಹರರ ಅನುಗ್ರಹದಿಂದ ವೃತ್ರಾಸುರ ಸಂಹಾರವಾಯಿತು. ಕಾರಣ ಇಬ್ಬರ ಅನುಗ್ರಹವನ್ನು ಸಂಪಾದಿಸಲು ಪ್ರಯತ್ನಿಸಬೇಕು. ಯದ್ಯಪಿ ಹರಿ ಸರ್ವೋತ್ತಮ.

೮. ಬ್ರಹ್ಮಹತ್ಯಾದೋಷಗಳು ನಾಲ್ಕು ಜನರಿಗೆ ಹೋಯಿತು. ಅವರನ್ನು ವಿಧ್ಯುಕ್ತವಾಗಿ ಸೇವಿಸಬೇಕು. ಇಲ್ಲದಿದ್ದರೆ ಬ್ರಹ್ಮಹತ್ಯಾ ನಮ್ಮನ್ನು ಬಲಿ ತೆಗೆದುಕೊಳ್ಳುತ್ತದೆ. ಬ್ರಹ್ಮದೇವರ ಆದೇಶ ಪಾಲಿಸಬೇಕು. ಇತ್ಯಾದಿ....

# ೧೦೬. ಶಿವಜ್ವರೋತ್ಪತ್ತಿ

ವೃತ್ರನನ್ನು ಮೋಹಗೊಳಿಸಿದ ಜ್ವರವು ಹೇಗೆ ಉತ್ಪತ್ತಿ ಹೊಂದಿತು ಎಂಬುದನ್ನು ತಿಳಿಯಲು ಬಯಸುತ್ತೇನೆ ಎಂದ ಧರ್ಮರಾಜನಿಗೆ ಭೀಷ್ಮರು ಉತ್ತರಿಸುತ್ತಾರೆ.

ಲೋಕಪ್ರಸಿದ್ಧವಾದ ಈ ಜ್ವರೋತ್ಪತ್ತಿಯ ಕಥೆಯನ್ನು ಹೇಳುತ್ತೇನೆ. ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾದ **ಜ್ಯೋತಿಷ್ಕ**ವೆಂಬ ಮೇರು ಪರ್ವತದ ಶಿಖರವು ಹಿಂದೆ ಇತ್ತು. ಅದು ಸಮಸ್ತ ರತ್ನಗಳಿಂದ ಅಲಂಕೃತವಾದುದು, ಸೂರ್ಯನಿಗೆ ಸಂಬಂಧಿಸಿದುದು(ಪಾವಿತ್ರ್ಯ). ಆ ಪರ್ವತದ ತಟ(ದಂಡೆ)ದಲ್ಲಿ(ಬಂಗಾರದ ಧಾತುಗಳಿಂದ ಕೂಡಿದ), ಹಾಸಿಗೆಯ ಮೇಲೆ ಕುಳಿತಿದ್ದ ಶಿವ. ಆತನ ಪಕ್ಕದಲ್ಲಿ ಹಿಮವತ್ಪರ್ವತರಾಜನ ಮಗಳು ಪಾರ್ವತಿ ಅಲಂಕರಿಸಿದ್ದಳು. ಈ ಶಿವಪಾರ್ವತಿಯರ ಸನ್ನಿಧಾನದಲ್ಲಿ ಅನೇಕಾನೇಕದೇವತೆಗಳು ತೇಜಸ್ವಿಗಳಾದ ವಸುಗಳು ಹಾಗೆಯೇ ವೈದ್ಯಶ್ರೇಷ್ಠರಾಜ ಅಶ್ವಿನಿ ದೇವತೆಗಳು, ಯಕ್ಷೇಶ್ವರನಾದ ಕುಬೇರ, ಅಂಗಿರಸನೇ ಮೊದಲಾದ ದೇವರ್ಷಿಗಳು, ಗಂಧರ್ವವರನಾದ ವಿಶ್ವಾವಸು, ದೇವರ್ಷಿ ನಾರದ ಹಾಗೂ ಪರ್ವತರು, ಅಪ್ಸರಾ ಸಮುದಾಯ ಇವರೆಲ್ಲ ಅಲ್ಲಿಗೆ ಆಗಮಿಸಿದರು. ಇದೆಲ್ಲ ಪರಶಿವ ಪಾರ್ವತಿಯರ ದೈವೀ ವೈಭವ.

ಆಗ ಅಲ್ಲಿ ನಾನಾ ಪರಿಮಳೋಪೇತ ಗಂಧವಾಹನಾದ ವಾಯು ಸುಖವಾಗಿ ಮೆಲ್ಲಗೆ ಬೀಸುತ್ತಿದ್ದ. ಸರ್ವರ್ತು ವೃಕ್ಷಗಳು ವಿವಿಧ ಹೂಗಳಿಂದ ಕೂಡಿದ್ದವು. ದೇವತೆಗಳಲ್ಲದೆ ಶಿವನ ಪರಿವಾರಭೂತರಾದ ನಾನಾ ರೂಪಧರರಾದ ಅಗ್ನಿಸಮರಾದ ರಾಕ್ಷಸರು, ಪಿಶಾಚಿಗಳು, ಪೂಜ್ಯನಾದ ನಂದೀಶ್ವರ ಶೂಲಧಾರಿಯಾಗಿ ಶಿವನ ಬಳಿ ನಿಂತಿದ್ದನು. ವಿದ್ಯಾಧರರು ತಪೋಧನರಾದ ಸಿದ್ಧರು ರುದ್ರದೇವರನ್ನು ಸೇವಿಸುತ್ತಿದ್ದ ನದಿಗಳಲ್ಲಿ ಶ್ರೇಷ್ಠಗಳಾದ ಗಂಗೆ ದಿವ್ಯರೂಪಧರಿಸಿ ರುದ್ರದೇವರನ್ನು ಉಪಾಸನೆ ಮಾಡುತ್ತಿದ್ದಳು. ಹೀಗೆ ಶಿವಪಾರ್ವತಿಯರು ಆ ಜ್ಯೋತಿಷ್ಕ ಶಿಖರದ ತಪ್ಪಲಿನಲ್ಲಿ ವಿರಾಜಮಾನರಾಗಿದ್ದರು.

ಕೆಲವು ಕಾಲ ಕಳೆದಿತ್ತು. ಆಗ ದಕ್ಷಪ್ರಜಾಪತಿಯು ಯಾವುದೋ ಯಜ್ಞವನ್ನು ಮಾಡಲು ಉದ್ಯುಕ್ತನಾಗಿದ್ದ(ಭಾಗವತದಲ್ಲಿ ವಿಶ್ವಸೃಜಾಂ ಸತ್ರೇ - ೪/೨/೪-೮) (ಇದು ಅದು ಭಾಗವತದ ಪ್ರಸಂಗಗಳು ಒಂದೇನೋ ಅಥವಾ ಬೇರೆಯ ಪ್ರಸಂಗವೋ ಎಂಬುದು ವಿಚಾರಣೀಯವಾಗಿದೆ.)

ಆ ಯಜ್ಞಕ್ಕೆ ಹೋಗುವ ಮುನ್ನ ಇಂದ್ರಾದಿ ದೇವತೆಗಳು ರುದ್ರದೇವರ ಅನುಮತಿ ತೆಗೆದುಕೊಂಡು ಗಂಗಾದ್ವಾರ(ಹರಿದ್ವಾರ)ಕ್ಕೆ ಹೊರಟರು. ಇದನ್ನು ಗಮನಿಸಿದ ಪಾರ್ವತಿಯು ಈ ದೇವತೆಗಳು ಎಲ್ಲಿಗೆ ಏಕೆ ಹೋಗುತ್ತಿದ್ದಾರೆಂದು ಪತಿಯನ್ನು ಕೇಳಿದಳು. ಅದಕ್ಕೆ ರುದ್ರದೇವರು ದಕ್ಷಪ್ರಜಾಪತಿಯು ಅಶ್ವಮೇಧಯಜ್ಞ ಮಾಡುತ್ತಿದ್ದಾನೆ. ಅದಕ್ಕಾಗಿ ದೇವತೆಗಳೆಲ್ಲರೂ ಅಲ್ಲಿಗೆ ಹೋಗುತ್ತಿದ್ದಾರೆ ಎಂದರು. ಆಗ ಪಾರ್ವತಿಯು ಆ ಯಜ್ಞಕ್ಕೆ ನೀವೇಕೆ ಹೋಗುತ್ತಿಲ್ಲ ಎಂದು ಕೇಳಲು ಎಲ್ಲ ಯಜ್ಞಗಳಲ್ಲಿ ನನಗೆ ಹವಿರ್ಭಾಗವಿರುವುದಿಲ್ಲ. ಈ ಪದ್ಧತಿಯು ದೇವತೆಗಳೇ ಹಿಂದೆ ಆದ ನಿರ್ಣಯಕ್ಕನುಗುಣವಾಗಿ ಧರ್ಮಾನುಸಾರವಾಗಿಯೇ ಮಾಡುತ್ತಿದ್ದಾರೆ. ಆದ್ದರಿಂದ ನನಗೆ ಹವಿರ್ಭಾಗವಿಲ್ಲವೆಂದರು. ಆಗ ಪಾರ್ವತಿಯು 'ಭಗವನ್! ನೀನು ಎಲ್ಲಾ ಜೀವಿಗಳಲ್ಲಿ ಅತ್ಯಂತ ಪ್ರಭಾವಶಾಲಿ. ಗುಣಗಳಿಂದಲೂ ಉತ್ತಮ, ಅಜೇಯ. ಯಾರೂ ನಿನ್ನನ್ನು ಬಲಾತ್ಕರಿಸಲಾರರು. ತೇಜಸ್ಸು, ಯಶಸು ಹಾಗೂ ಸಂಪತ್ತುಗಳಿಂದ ಕೂಡಿರುವೆ. ಇಂತಹ ನಿನಗೆ ಹವಿರ್ದಾನ ನಿಷೇಧದಿಂದ ನನಗೆ ತುಂಬ ದುಃಖವಾಗಿದೆ. ನನ್ನ ಶರೀರ ಕಂಪಿಸುತ್ತಿದೆ. ಹೀಗೆ ಹೇಳಿದ ಸತಿಯು ದಹಿಸುತ್ತಿರುವ ಹೃದಯದಿಂದ ಮೌನ ಧರಿಸಿದಳು(ಮನಸ್ಸಿನಲ್ಲಿಯೇ ಸಂಕಟಪಟ್ಟುಕೊಂಡಳು).

ಪಾರ್ವತಿದೇವಿಯ ಇಂಗಿತವರಿತ ಪರಶಿವನು ಆಕೆ ಮುಂದೇನು ಮಾಡುವಳೆಂದು ತಿಳಿದು ನಂದೀಶ್ವರನಿಗೆ 'ನೀನು ನಿಲ್ಲು' (ನನ್ನ ಆಜ್ಞೆಯನ್ನು ನಡೆಸುವವನಾಗು) ಎಂದು ಹೇಳಿದನು. ಆಮೇಲೆ ಸರ್ವಯೋಗೇಶ್ವರೇಶ್ವರನಾದ ಶಿವನು ಯೋಗಬಲದಿಂದ ತನ್ನ ಅನುಚರರೊಡನೆ ದಕ್ಷಪ್ರಜಾಪತಿಯ ಯಜ್ಞಕ್ಕೆ ಹೋಗಿ ಆ ಯಜ್ಞವನ್ನು ಘಾತಗೊಳಿಸಿದನು, ನಾಶ ಮಾಡಿದನು. ರುದ್ರಾನುಚರರಲ್ಲಿ ಕೆಲವರು ವೇದಿಕೆಯ ಬಳಿ ಭಯಂಕರ ಸಿಂಹನಾದ ಮಾಡಿದರು. ಕೆಲವರು ಅಟ್ಟಹಾಸದಿಂದ ನಕ್ಕರು, ಮತ್ತೆ ಕೆಲವರು ರಕ್ತದ ಮಳೆಗೆರೆದರು. ಹಲವರು ಯಜ್ಞದ ಯೂಪಸ್ತಂಭ(ಬಲಿಗಂಬ)ಗಳನ್ನು ಕಿತ್ತು ಬಿಸುಟಿದರು. ಯಜ್ಞ ಮಂಟಪದ ಸುತ್ತಲೂ ಭಯಾನಕ ಮುಖವುಳ್ಳರಾಗಿ ತಿರುಗಾಡಿದರು, ಪಿಶಾಚಿಗಳು ಯಜ್ಞಪರಿಚಾರಕರನ್ನು ನುಂಗಿ ಹಾಕಿದರು.

ಹೀಗೆ ಯಜ್ಞ ಎಲ್ಲ ರೀತಿಯಲ್ಲಿ ಹಾಳಾಗುತ್ತಿರಲು ಯಜ್ಞಪುರುಷನು ಜಿಂಕೆರೂಪ ಸ್ವೀಕರಿಸಿ ಆಕಾಶಕ್ಕೆ ನೆಗೆದನು. ಅದನ್ನು ನೋಡಿ ಮಹಾರುದ್ರನು ಬಾಣಬಿಲ್ಲುಗಳನ್ನು ಹಿಡಿದು ಆ ಮೃಗವನ್ನು ಬೆನ್ನ ಹತ್ತಿ ಓಡಿದ. ಆಗ ರುದ್ರದೇವರ ಹಣೆಯಿಂದ ಬಯಂಕರವಾದ ಬೆವರಿನ ಹನಿಯು ಭೂಮಿಯ ಮೇಲೆ ಬೀಳಲು ಕಾಲಾಗ್ನಿಸದೃಶವಾದ ಅಗ್ನಿ ಜನಿಸಿತು. ಆ ಅಗ್ನಿಯಿಂದ ಕುಳ್ಳ, ಅತಿಕೆಂಪಾದ ಕಣ್ಣುಳ್ಳ, ಕಂದುಬಣ್ಣದ ಮೀಸೆ, ಗಡ್ಡವಿರುವ ಪುರುಷನು ಹುಟ್ಟಿದನು. ಆ ಪುರುಷನ ತಲೆಕೂದಲುಗಳು ಮೇಲ್ಮುಖವಾಗಿ ನಿಮಿರಿ ನಿಂತಿದ್ದವು. ಅಂಗಾಂಗಗಳೆಲ್ಲ ಗಿಡುಗ, ಗೂಬೆಗಳಿಗಿರುವ ದಟ್ಟವಾದ ಕೂದಲಿನಂತೆ ಮುಚ್ಚಿದ್ದವು. ವಿಕಾರವಾದ ಶರೀರದ ಕಪ್ಪುವರ್ಣದ ಕೆಂಪುವಸ್ತ್ರತೊಟ್ಟಿದ್ದನು ಆ ಪುರುಷ. ಆ ಪುರುಷನು ಬೆಂಕಿಯು ಹುಲ್ಲಿನ

ರಾಶಿಯನ್ನು ಸುಡುವಂತೆ ದಕ್ಷ ಯಜ್ಞವನ್ನು ಪೂರ್ಣವಾಗಿ ಭಸ್ಮ ಮಾಡಿದನು. ಅಲ್ಲಿದ್ದ ದೇವತೆಗಳು, ಋಷಿಗಳು ದಿಕ್ಕೆಟ್ಟು ದಶದಿಕ್ಕುಗಳಿಗೆ ಓಡಿದರು. ಆ ಪುರುಷನ ಸಂಚಾರದಿಂದ ಭೂಮಿ ಕಂಪಿಸಿತು. ಹೀಗೆ ಲೋಕಭಯಂಕರನಾಗಿ ಎಲ್ಲೆಡೆ ತೋರುತ್ತಿರಲು ಬ್ರಹ್ಮದೇವನು ರುದ್ರದೇವರಿಗೆ ಹೀಗೆ ಹೇಳಿದ.

'ಎಲೈ ಸರ್ವದೇವೇಶ್ವರನೇ! ನಿನಗೂ ಹವಿರ್ಭಾಗವನ್ನು ಎಲ್ಲ ದೇವತೆಗಳು ಕೊಡುವರು. ಈ ಸಂಹಾರಕಾರ್ಯವನ್ನು ನಿಲ್ಲಿಸು. ಈ ದೇವತೆಗಳು, ಋಷಿಗಳೆಲ್ಲ ನಿನ್ನ ಕ್ರೋಧದಿಂದ ಶಾಂತಿಯನ್ನು ಕಳೆದುಕೊಂಡಿದ್ದಾರೆ. ನಿನ್ನ ಬೆವರಿನಿಂದ ಹುಟ್ಟಿದ ಪುರುಷನು ಜ್ವರವೆಂಬ ಹೆಸರಿನಿಂದ ಪ್ರಖ್ಯಾತನಾಗುವನು. ಈ ಜ್ವರ ಒಂದೇ ರೂಪದಲ್ಲಿರುವವರೆಗೂ ಅದನ್ನು ಈ ಸಮಗ್ರ ಜಗತ್ತು ಧರಿಸಲಾರದು. ಆದ್ದರಿಂದ ಅದನ್ನು ವಿಭಾಗ ಮಾಡು.'

ಬ್ರಹ್ಮದೇವರುಹೇಳಿದುದಕ್ಕೆರುದ್ರದೇವರುತಮಗೆಯಜ್ಞದಲ್ಲಿಹವಿರ್ಭಾಗಸಿಗುವದೆಂದು ಭಾವಿಸಿ ಹಾಗೆಯೇ ಆಗಲಿ ಎಂದರು. ಬ್ರಹ್ಮದೇವರ ಮಾತಿಗೆ ತುಂಬಾ ಸಂತೋಷಗೊಂಡ ರುದ್ರದೇವರು ಯಜ್ಞದಲ್ಲಿ ಹವಿರ್ಭಾಗವನ್ನು ಪಡೆದರು. ಸರ್ವಪ್ರಾಣಿಗಳ ಶಾಂತಿಗಾಗಿ ಜ್ವರವನ್ನು ಅನೇಕ ಭಾಗಮಾಡಿದರು. ಅವು ಯಾವುವೆಂದರೆ ೧. ತಲೆ ಬಿಸಿಯಾಗುವುದು, ತಲೆನೋವು; ೨. ಪರ್ವತದಲ್ಲಿ ಅರಗು(ಶಿಖಾಜತು)ಲಾಕ್ಷವೆಂಬ ರಸ; ೩. ನೀರಿನಲ್ಲಿ ಬೆಳೆಯುವ ಕರಿಯ ಲಕ್ಕಿ ಗಿಡ; ೪. ಸರ್ಪಗಳ ಪೊರೆ; ೫. ನಾಯಿಗಳಲ್ಲಿ ಗರಗಸದಂತೆ ಇರುವ ಜಿಹ್ವಾಕ್ರೌರ್ಯ' ೬. ಚೌಗುಮಣ್ಣಿನ ಪ್ರದೇಶ(Saline Alkeline Soils); ೭. ಪ್ರಾಣಿಗಳ ದೃಷ್ಟಿಶಕ್ತಿ ನಾಶವಾಗುವುದು; ೮. ಮೀನುಗಳಿಗೆ ಮೂಗಿನಲ್ಲಿ ರಂಧ್ರವುಂಟಾಗುವುದು; ೯. ನವಿಲುಗಳಿಗೆ ತಲೆಯಮೇಲೆ ಹೊರ ಬಂದಿರುವ ಶಿಖಾ; ೧೦. ಕುರಿಗಳಿಗೆ ಆಗುವ ಪಿತ್ತದ ಉಲ್ಬಣ; ೧೧. ಗಿಳಿಗಳು ಪ್ರತಿಕ್ಷಣ ತ್ಯಜಿಸುವ ಮಲ; ೧೨. ಹುಲಿಗಳ ಬಳಲುವಿಕೆ; ೧೩. ಮನುಷ್ಯರಿಗೆ ಬರುವ ಜ್ವರ(ಹುಟ್ಟು ಹಾಗೂ ಮರಣಕಾಲದಲ್ಲಿ ಇದರ ಪ್ರವೇಶವಿರುತ್ತದೆ).

ಇದುವೇ ಮಹೇಶ್ವರ ಜ್ವರ. ಎಲ್ಲ ಪ್ರಾಣಿಗಳಿಗೂ ಮಾನ್ಯ ಹಾಗೂ ವಂದನೀಯವಾದುದು.

ಇಂತಹ ಜ್ವರಕ್ಕೇನೇ ವೃತ್ರಾಸುರನು ತುತ್ತಾದನು. ಆದ್ದರಿಂದ ಆಕಳಿಸುತ್ತಿದ್ದನು. ಆಗಲೇ ಇಂದ್ರ ವಜ್ರಾಯುಧವನ್ನು ವೃತ್ರನ ಮೇಲೆ ಪ್ರಹಾರ ಮಾಡಿದನು. ಆಕಳಿಸುತ್ತಿದ್ದ ವೃತ್ರನನ್ನು ಒಳಹೊಕ್ಕ ವಜ್ರಾಯುಧವು ಅವನನ್ನು ಸೀಳಿತು. ಮಹಾಯೋಗಿಯೂ, ಮಹಾಸುರನೂ ಆದ ವೃತ್ರಾಸುರನು ನಂತರ ವಿಷ್ಣುವಿನ ಶ್ರೇಷ್ಠವಾದ ಸ್ಥಾನವನ್ನು ಹೊಂದಿದನು. ವಿಷ್ಣುಭಕ್ತಿಯಿಂದಲೇ ಅವನು ಜಗತ್ತನ್ನು ವ್ಯಾಪಿಸಿದ್ದನು. ವಿಷ್ಣುವಿನ ತೇಜಸ್ಸಿನಿಂದಲೇ ಹತನಾದ, ವಿಷ್ಣುವಿನ ಸ್ಥಾನವನ್ನೇ ಹೊಂದಿದ.

'ನೋಡು ಧರ್ಮರಾಜ! ಹೀಗೆ ವೃತ್ರಾಸುರನನ್ನು ಆವರಿಸಿದ ಮಹಾಜ್ವರದ ಬಗ್ಗೆ ವಿಸ್ತಾರವಾಗಿ ಹೇಳಿದ್ದೇನೆ. ಮತ್ತೇನು ಹೇಳಲಿ' ಎಂದರು ಭೀಷ್ಮರು.

ಯಾರು ಉದಾರ ಹೃದಯದಿಂದ (ಭಕ್ತಿಯಿಂದ) ಏಕಾಗ್ರತೆಯಿಂದ ಜ್ವರದ ಉತ್ಪತ್ತಿಯನ್ನು ಪಠಿಸುತ್ತಾರೋ, ಅವರು ರೋಗಮುಕ್ತರಾಗಿ ಸುಖಿಗಳಾಗಿ ಸಂತೋಷದಿಂದ ಕೂಡಿದವರಾಗಿ ಬಯಸಿದ ಎಲ್ಲ ಇಚ್ಛೆಗಳನ್ನು ಹೊಂದುವರು.

## ಸಂದೇಶಗಳು-ವಿವರಣೆಗಳು

೧. ರುದ್ರದೇವರ ವೈಭವ ಅವರನ್ನು ಅನೇಕಾನೇಕ ದೇವತೆಗಳು ಸೇವಿಸುತ್ತಿರುವ ವರ್ಣನೆ ರುದ್ರದೇವರ ಮಹಿಮೆಯರಿಯಲು ಒಂದು ಆಕರವಾಗಿದೆ.

೨. ಭಾಗವತದಲ್ಲಿ ಬಂದಂತೆ ಇಲ್ಲೂ ದಕ್ಷನ ದುರುದ್ದೇಶಯುತ ಯಜ್ಞಾಚರಣೆ ಉಮಾದೇವಿಯ ರೂಪದಲ್ಲಿ ಪರ್ಯವಸಾನವಾಯಿತು. ತನ್ನ ಪತಿಯ ಅವಮಾನವನ್ನು ಸಹಿಸದೆ ಆಕೆ ನಂದೀಶ್ವರನ ನೇತೃತ್ವದಲ್ಲಿ ಕಳಿಸಿದ ಹಾಗೂ ಶಿವಭಕ್ತರು ಮತ್ತು ಶಿವಾನುಚರರೂ ಮಾಡಿದ ಯಜ್ಞ ಧ್ವಂಸ. ಸ್ವೋತ್ತಮದ್ರೋಹದ ಪರಿಣಾಮಗಳನ್ನು ತಿಳಿಸುತ್ತದೆ. ಸ್ವೋತ್ತಮರದ್ರೋಹದ ಪರಿಣಾಮ ಯಜ್ಞಗಳೂ ವಿಪರೀತ ಫಲ ನೀಡುತ್ತವೆ.

೩. ಶಿವಜ್ವರವು ಇಲ್ಲಿಯ ಮತ್ತೊಂದು ವಿಶೇಷ. ರುದ್ರದೇವರ ಕೋಪಾಗ್ನಿಗೆ ಯಜ್ಞ ತುತ್ತಾಯಿತು.

೪. ಬ್ರಹ್ಮದೇವರ ಮಧ್ಯಪ್ರವೇಶದಿಂದ ಶಿವನಿಗೆ ಯಜ್ಞಭಾಗ ಪ್ರಾಪ್ತಿಯಾಯಿತು.

೫. ವೃತ್ರಾಸುರನು ತುತ್ತಾದುದೂ ಈ ಶಿವಜ್ವರಕ್ಕೇ (ವಿಷ್ಣು ವಜ್ರಾಯುಧ ಪ್ರವೇಶ ಮಾಡಿದ್ದಲ್ಲದೆ). ಇದೊಂದು ಹೊಸ ವಿಷಯ ಭಾರತದಲ್ಲಿ ಬಂದಿದೆ. ಅಂತೂ ಶಿವನ ಮಹಿಮೆಗಳ ಅನಾವರಣ ಈ ಉಪಾಖ್ಯಾನದ ವಸ್ತು.

ಇತ್ಯಾದಿ...

ರಾಶಿಯನ್ನು ಸುಡುವಂತೆ ದಕ್ಷ ಯಜ್ಞವನ್ನು ಪೂರ್ಣವಾಗಿ ಭಸ್ಮ ಮಾಡಿದನು. ಅಲ್ಲಿದ್ದ ದೇವತೆಗಳು, ಋಷಿಗಳು ದಿಕ್ಕೆಟ್ಟು ದಶದಿಕ್ಕುಗಳಿಗೆ ಓಡಿದರು. ಆ ಪುರುಷನ ಸಂಚಾರದಿಂದ ಭೂಮಿ ಕಂಪಿಸಿತು. ಹೀಗೆ ಲೋಕಭಯಂಕರನಾಗಿ ಎಲ್ಲೆಡೆ ತೋರುತ್ತಿರಲು ಬ್ರಹ್ಮದೇವನು ರುದ್ರದೇವರಿಗೆ ಹೀಗೆ ಹೇಳಿದ.

'ಎಲೈ ಸರ್ವದೇವೇಶ್ವರನೇ! ನಿನಗೂ ಹವಿರ್ಭಾಗವನ್ನು ಎಲ್ಲ ದೇವತೆಗಳು ಕೊಡುವರು. ಈ ಸಂಹಾರಕಾರ್ಯವನ್ನು ನಿಲ್ಲಿಸು. ಈ ದೇವತೆಗಳು, ಋಷಿಗಳೆಲ್ಲ ನಿನ್ನ ಕ್ರೋಧದಿಂದ ಶಾಂತಿಯನ್ನು ಕಳೆದುಕೊಂಡಿದ್ದಾರೆ. ನಿನ್ನ ಬೆವರಿನಿಂದ ಹುಟ್ಟಿದ ಪುರುಷನು ಜ್ವರವೆಂಬ ಹೆಸರಿನಿಂದ ಪ್ರಖ್ಯಾತನಾಗುವನು. ಈ ಜ್ವರ ಒಂದೇ ರೂಪದಲ್ಲಿರುವವರೆಗೂ ಅದನ್ನು ಈ ಸಮಗ್ರ ಜಗತ್ತು ಧರಿಸಲಾರದು. ಆದ್ದರಿಂದ ಅದನ್ನು ವಿಭಾಗ ಮಾಡು.'

ಬ್ರಹ್ಮದೇವರುಹೇಳಿದುದಕ್ಕೆರುದ್ರದೇವರುತಮಗೆಯಜ್ಞದಲ್ಲಿಹವಿರ್ಭಾಗಸಿಗುವದೆಂದು ಭಾವಿಸಿ ಹಾಗೆಯೇ ಆಗಲಿ ಎಂದರು. ಬ್ರಹ್ಮದೇವರ ಮಾತಿಗೆ ತುಂಬಾ ಸಂತೋಷಗೊಂಡ ರುದ್ರದೇವರು ಯಜ್ಞದಲ್ಲಿ ಹವಿರ್ಭಾಗವನ್ನು ಪಡೆದರು. ಸರ್ವಪ್ರಾಣಿಗಳ ಶಾಂತಿಗಾಗಿ ಜ್ವರವನ್ನು ಅನೇಕ ಭಾಗಮಾಡಿದರು. ಅವು ಯಾವುವೆಂದರೆ ೧. ತಲೆ ಬಿಸಿಯಾಗುವುದು, ತಲೆನೋವು; ೨. ಪರ್ವತದಲ್ಲಿ ಅರಗು(ಶಿಖಾಜತು)ಲಾಕ್ಷವೆಂಬ ರಸ; ೩. ನೀರಿನಲ್ಲಿ ಬೆಳೆಯುವ ಕರಿಯ ಲಕ್ಕಿ ಗಿಡ; ೪. ಸರ್ಪಗಳ ಪೊರೆ; ೫. ನಾಯಿಗಳಲ್ಲಿ ಗರಗಸದಂತೆ ಇರುವ ಜಿಹ್ವಾಕ್ರೌರ್ಯ' ೬. ಚೌಗುಮಣ್ಣಿನ ಪ್ರದೇಶ(Saline Alkeline Soils); ೭. ಪ್ರಾಣಿಗಳ ದೃಷ್ಟಿಶಕ್ತಿ ನಾಶವಾಗುವುದು; ೮. ಮೀನುಗಳಿಗೆ ಮೂಗಿನಲ್ಲಿ ರಂಧ್ರವುಂಟಾಗುವುದು; ೯. ನವಿಲುಗಳಿಗೆ ತಲೆಯಮೇಲೆ ಹೊರ ಬಂದಿರುವ ಶಿಖಾ; ೧೦. ಕುರಿಗಳಿಗೆ ಆಗುವ ಪಿತ್ತದ ಉಲ್ಬಣ; ೧೧. ಗಿಳಿಗಳು ಪ್ರತಿಕ್ಷಣ ತ್ಯಜಿಸುವ ಮಲ; ೧೨. ಹುಲಿಗಳ ಬಳಲುವಿಕೆ; ೧೩. ಮನುಷ್ಯರಿಗೆ ಬರುವ ಜ್ವರ(ಹುಟ್ಟು ಹಾಗೂ ಮರಣಕಾಲದಲ್ಲಿ ಇದರ ಪ್ರವೇಶವಿರುತ್ತದೆ).

ಇದುವೇ ಮಹೇಶ್ವರ ಜ್ವರ. ಎಲ್ಲ ಪ್ರಾಣಿಗಳಿಗೂ ಮಾನ್ಯ ಹಾಗೂ ವಂದನೀಯವಾದುದು.

ಇಂತಹ ಜ್ವರಕ್ಕೇನೇ ವೃತ್ರಾಸುರನು ತುತ್ತಾದನು. ಆದ್ದರಿಂದ ಆಕಳಿಸುತ್ತಿದ್ದನು. ಆಗಲೇ ಇಂದ್ರ ವಜ್ರಾಯುಧವನ್ನು ವೃತ್ರನ ಮೇಲೆ ಪ್ರಹಾರ ಮಾಡಿದನು. ಆಕಳಿಸುತ್ತಿದ್ದ ವೃತ್ರನನ್ನು ಒಳಹೊಕ್ಕ ವಜ್ರಾಯುಧವು ಅವನನ್ನು ಸೀಳಿತು. ಮಹಾಯೋಗಿಯೂ, ಮಹಾಸುರನೂ ಆದ ವೃತ್ರಾಸುರನು ನಂತರ ವಿಷ್ಣುವಿನ ಶ್ರೇಷ್ಠವಾದ ಸ್ಥಾನವನ್ನು ಹೊಂದಿದನು. ವಿಷ್ಣುಭಕ್ತಿಯಿಂದಲೇ ಅವನು ಜಗತ್ತನ್ನು ವ್ಯಾಪಿಸಿದ್ದನು. ವಿಷ್ಣುವಿನ ತೇಜಸ್ಸಿನಿಂದಲೇ ಹತನಾದ, ವಿಷ್ಣುವಿನ ಸ್ಥಾನವನ್ನೇ ಹೊಂದಿದ.

'ನೋಡು ಧರ್ಮರಾಜ! ಹೀಗೆ ವೃತ್ರಾಸುರನನ್ನು ಆವರಿಸಿದ ಮಹಾಜ್ವರದ ಬಗ್ಗೆ ವಿಸ್ತಾರವಾಗಿ ಹೇಳಿದ್ದೇನೆ. ಮತ್ತೇನು ಹೇಳಲಿ' ಎಂದರು ಭೀಷ್ಮರು.

ಯಾರು ಉದಾರ ಹೃದಯದಿಂದ (ಭಕ್ತಿಯಿಂದ) ಏಕಾಗ್ರತೆಯಿಂದ ಜ್ವರದ ಉತ್ಪತ್ತಿಯನ್ನು ಪಠಿಸುತ್ತಾರೋ, ಅವರು ರೋಗಮುಕ್ತರಾಗಿ ಸುಖಿಗಳಾಗಿ ಸಂತೋಷದಿಂದ ಕೂಡಿದವರಾಗಿ ಬಯಸಿದ ಎಲ್ಲ ಇಚ್ಛೆಗಳನ್ನು ಹೊಂದುವರು.

## ಸಂದೇಶಗಳು-ವಿವರಣೆಗಳು

೧. ರುದ್ರದೇವರ ವೈಭವ ಅವರನ್ನು ಅನೇಕಾನೇಕ ದೇವತೆಗಳು ಸೇವಿಸುತ್ತಿರುವ ವರ್ಣನೆ ರುದ್ರದೇವರ ಮಹಿಮೆಯರಿಯಲು ಒಂದು ಆಕರವಾಗಿದೆ.

೨. ಭಾಗವತದಲ್ಲಿ ಬಂದಂತೆ ಇಲ್ಲೂ ದಕ್ಷನ ದುರುದ್ದೇಶಯುತ ಯಜ್ಞಾಚರಣೆ ಉಮಾದೇವಿಯ ರೂಪದಲ್ಲಿ ಪರ್ಯವಸಾನವಾಯಿತು. ತನ್ನ ಪತಿಯ ಅವಮಾನವನ್ನು ಸಹಿಸದೆ ಆಕೆ ನಂದೀಶ್ವರನ ನೇತೃತ್ವದಲ್ಲಿ ಕಳಿಸಿದ ಹಾಗೂ ಶಿವಭಕ್ತರು ಮತ್ತು ಶಿವಾನುಚರರೂ ಮಾಡಿದ ಯಜ್ಞ ಧ್ವಂಸ. ಸ್ವೋತ್ತಮದ್ರೋಹದ ಪರಿಣಾಮಗಳನ್ನು ತಿಳಿಸುತ್ತದೆ. ಸ್ವೋತ್ತಮರದ್ರೋಹದ ಪರಿಣಾಮ ಯಜ್ಞಗಳೂ ವಿಪರೀತ ಫಲ ನೀಡುತ್ತವೆ.

೩. ಶಿವಜ್ವರವು ಇಲ್ಲಿಯ ಮತ್ತೊಂದು ವಿಶೇಷ. ರುದ್ರದೇವರ ಕೋಪಾಗ್ನಿಗೆ ಯಜ್ಞ ತುತ್ತಾಯಿತು.

೪. ಬ್ರಹ್ಮದೇವರ ಮಧ್ಯಪ್ರವೇಶದಿಂದ ಶಿವನಿಗೆ ಯಜ್ಞಭಾಗ ಪ್ರಾಪ್ತಿಯಾಯಿತು.

೫. ವೃತ್ರಾಸುರನು ತುತ್ತಾದುದೂ ಈ ಶಿವಜ್ವರಕ್ಕೇ (ವಿಷ್ಣು ವಜ್ರಾಯುಧ ಪ್ರವೇಶ ಮಾಡಿದ್ದಲ್ಲದೆ). ಇದೊಂದು ಹೊಸ ವಿಷಯ ಭಾರತದಲ್ಲಿ ಬಂದಿದೆ. ಅಂತೂ ಶಿವನ ಮಹಿಮೆಗಳ ಅನಾವರಣ ಈ ಉಪಾಖ್ಯಾನದ ವಸ್ತು.

ಇತ್ಯಾದಿ...

# ೧೦೭. ದಕ್ಷಯಜ್ಞಧ್ವಂಸ - ಶಿವಸಹಸ್ರನಾಮಸ್ತೋತ್ರ

ಜನಮೇಜಯನು ವೈಶಂಪಾಯರನ್ನು ಪ್ರಶ್ನಿಸುತ್ತಾನೆ.

ವೈಶಂಪಾಯನರೇ! ವೈವಸ್ವತಮನ್ವಂತರದಲ್ಲಿ ಪ್ರಚೇತಸನ ವಂಶದಲ್ಲಿ ಹುಟ್ಟಿದ ದಕ್ಷಪ್ರಜಾಪತಿ ಮಾಡಿದ ಅಶ್ವಮೇಧಯಾಗ ಹೇಗೆ ನಾಶವಾಯಿತು?

ವೈಶಂಪಾಯನರು ಉತ್ತರಿಸಿದರು –

'ಹಿಂದೆ ಹಿಮಾಲಯಪರ್ವತದ ತಪ್ಪಲಿನಲ್ಲಿ ಋಷಿ, ಸಿದ್ಧರಿಂದ ಸೇವಿತನಾದ ಗಂಗಾದ್ವಾರದಲ್ಲಿ ದಕ್ಷಪ್ರಜಾಪತಿ ಅಶ್ವಮೇಧಯಜ್ಞ ಮಾಡಲು ಆರಂಬಿಸಿದನು. ಇದಕ್ಕೆ ದೇವದಾನವಗಂಧರ್ವರು, ನಾರದಾದಿಗಳು, ವಸುಗಳು, ಸಾಧ್ಯರು, ರುದ್ರರು, ಆದಿತ್ಯರು, ಮರುದ್ಗಣಗಳು, ರಾಕ್ಷಸರು, ಪಿಶಾಚಿಗಳು ಎಲ್ಲರೂ ಬಂದರು. ಯಜ್ಞಭಾಗಿಗಳಾದ ಇಂದ್ರಾದಿದೇವತೆಗಳೂ, ಋಷಿಗಳೂ, ಪಿತೃಗಳು ಚತುರ್ಮುಖನೊಡನೆ ಸಮಸ್ತ ಜೀವರು ಬಂದರು. ಎಲ್ಲರೂ ತಮ್ಮ ಪತ್ನಿಸಮೇತರಾಗಿ ಬಂದರು. ದೇವತೆಗಳು ವಿಮಾನದಲ್ಲಿ ಬಂದರು. ಆದರೆ ರುದ್ರದೇವರು ಮಾತ್ರ ಬರಲಿಲ್ಲ. ಇದರಿಂದ ಸಿಟ್ಟಾದ ದಧೀಚಿಮುನಿಗಳು ಯಜ್ಞಮಂಟಪದಲ್ಲಿ ಹೀಗೆ ನುಡಿದರು –

'ರುದ್ರಾರಾಧನೆಯಿಲ್ಲದ ಯಜ್ಞ ಯಜ್ಞವಲ್ಲ. ನಾವು ಮಾಡುವ ಧರ್ಮವು ಧರ್ಮವಲ್ಲ. ಇಂತಹ ಯಜ್ಞವನ್ನು ನಿಯೋಜಿಸಿದ ವ್ಯಕ್ತಿಯು ವಧಬಂಧನಕ್ಕೆ ತುತ್ತಾಗುತ್ತಾನೆ. ಇದೊಂದು ಕಾಲವೈಪರೀತ್ಯವೇ ಸರಿ. ಇದನ್ನು ನೀವ್ಯಾರು ಮೋಹಪರವಶರಾಗಿ ನೋಡುತ್ತಿಲ್ಲವಲ್ಲ(ಇಂತಹ ಅಪಚಾರವಾಗುತ್ತಿರುವುದು ನೀವು ಗಮನಿಸುತ್ತಿಲ್ಲವಲ್ಲ). ಆಗುವ ಅನರ್ಥದ ಬಗ್ಗೆ ನೀವ್ಯಾರು ತಿಳಿಯುತ್ತಿಲ್ಲವಲ್ಲ. ಹೀಗೆ ಹೇಳಿ ಆ ಮಹಾಯೋಗಿಯು ತನ್ನ ದಿವ್ಯಚಕ್ಷುಷಿನಿಂದ(ಧ್ಯಾನದ ಕಣ್ಣಿನಿಂದ) ಶಿವಪಾರ್ವತಿ, ನಾರದರು, ಇವರನ್ನು ನೋಡಿದನು(ಕೈಲಾಸದಲ್ಲಿ). ಮುಂದೆ ಆಗುವುದನ್ನೂ ನಿಶ್ಚಯಿಸಿಕೊಂಡನು(ದಧೀಚಿ)[೧].

---

೧ ದಧೀಚಿ ಃ –

ನಾಯಂ ಯಜ್ಞೋ ನ ವಾ ಧರ್ಮೋ ಯತ್ರ ರುದ್ರೋ ನ ಇಜ್ಯತೇ ।
ವಧಬಂಧಂ ಪ್ರಪನ್ನಾ ವೈ ಕಿಂ ನು ಕಾಲಸ್ಯ ಪರ್ಯಯಃ ॥
ಕಿಂ ನು ಮೋಹಾನ್ನ ಪಶ್ಯಂತಿ ವಿನಾಶಂ ಪರ್ಯುಪಸ್ಥಿತಿಮ್ ।
ಉಪಸ್ಥಿತಂ ಭಯಂ ಘೋರಂ ನ ಬುಧ್ಯಂತಿ ಮಹಾಧ್ವರೇ ।
ಏಕಮಂತ್ರಾಸ್ತು ತೇ ಸರ್ವೇ ಯೇನೇಶೋ ನ ನಿಮಂತ್ರಿತಃ ॥

ರುದ್ರಾಹ್ವಾನ ಇಲ್ಲದಿರುವ ಬಗ್ಗೆ ದೇವತೆಗಳದೆಲ್ಲ ಏಕಮತವೇ ಇತ್ತು. ಆದ್ದರಿಂದಲೇ ದಕ್ಷ ಆಹ್ವಾನಿಸಿರಲಿಲ್ಲ. ಇದನ್ನು ತಿಳಿದ ದಧೀಚಿ ಯಜ್ಞಶಾಲೆಯಿಂದ ದೂರ ಹೋಗಿ, ಹೀಗೆ ಹೇಳಿದನು.

ಪೂಜಾರ್ಹರಲ್ಲದವರನ್ನು ಪೂಜಿಸಿದರೆ, ಪೂಜಾರ್ಹರನ್ನು ಪೂಜಿಸಿದೆ ಇದ್ದರೆ ನರಹತ್ಯಾ ಪಾಪಕ್ಕೆ ಯೋಜಕನು(ಯಜಮಾನ) ಗುರಿಯಾಗುತ್ತಾನೆ. ನಾನೆಂದೂ ಸುಳ್ಳು ಹೇಳಿಲ್ಲ, ಮುಂದೂ ಅಸತ್ಯ ನುಡಿಯೇ. ದೇವರ್ಷಿಗಳ ಮುಂದೆ ನಾನು ಸತ್ಯ ಹೇಳುವೆ. ಜಗತ್ಸೃಷ್ಟಿಕರ್ತನಾದ, ಸರ್ವಜೀವರ ಭರ್ತೃವಾದ, ಯಜ್ಞದಲ್ಲಿ ಎಲ್ಲ ದೇವರಿಗಿಂತ ಮೊದಲೇ ಹವಿರ್ಭಾಗವನ್ನು ಸ್ವೀಕರಿಸಲು ಯೋಗ್ಯನಾದ ರುದ್ರನು ಬಂದು ಹವಿಸ್ಸನ್ನು ಸ್ವೀಕರಿಸುವುದು ನಿಮಗೆ ಕ್ಷೇಮ[೧].

**ವಿ.ಸೂ.:** ದಧೀಚಿಗಳು ರುದ್ರದೇವರಿಗೆ ಅಗ್ರಪೂಜೆಯನ್ನು ಪ್ರಸ್ತಾಪಿಸಿರುವುದು ಅಂತರ್ಯಾಮಿ ದೃಷ್ಟಿಯಿಂದ. ನಾರಾಯಣವರ್ಮ ಸಿದ್ಧಿ ಪಡೆದ ಅವರ ಅಭಿಪ್ರಾಯವನ್ನು ಹೀಗೆ ತಿಳಿಯುವುದೇ ಸೂಕ್ತ.

ದಧೀಚಿಗಳ ಮಾತಿಗೆ ದಕ್ಷಪ್ರಜಾಪತಿಯ ಉತ್ತರ ವಿಚಿತ್ರವಾಗಿತ್ತು. ನಮ್ಮ ಬಳಿ ಶೂಲಹಸ್ತರಾದ (ಧರಿಸುವ), ಜಟಾ ಧರಿಸಿರುವ ಅನೇಕ ರುದ್ರರು ಇದ್ದಾರೆ. ಹನ್ನೊಂದು ಸಂಖ್ಯೆಯಲ್ಲಿ ಇದ್ದಾರೆ. ಇವರನ್ನು ಬಿಟ್ಟು ಮಹೇಶ್ವರನಾದ ರುದ್ರನು ಯಾರು ಎಂದು ನನಗೆ ತಿಳಿಯದು(ಇದೊಂದು ಉದ್ದೇಶಪೂರ್ವಕವಾದ ಅವಮಾನಕರ ದಕ್ಷ ಪ್ರಜಾಪತಿಯ ಹೇಳಿಕೆ).

ಆದರೆ ದಧೀಚಿಗಳು ದಕ್ಷನ ಮಾತಿಗೆ ಉತ್ತರಿಸುತ್ತಾ 'ಇಲ್ಲಿರುವವರೆಲ್ಲರ ಅಭಿಪ್ರಾಯವು ಒಂದೇ. ಮಹೇಶ್ವರನನ್ನು ಆಹ್ವಾನಿಸದಿರುವುದು' ಎಲ್ಲರದೂ ಒಂದೇ ಅಭಿಪ್ರಾಯವಾಗಿದೆ. ನಾವಂತೂ ಶಂಕರನಿಗಿಂತ ಉತ್ತಮವಾದ ದೇವತೆಯನ್ನು ಕಂಡಿಲ್ಲ, ಆದ್ದರಿಂದ ದಕ್ಷನ ಈ ವೈಭವಪೂರ್ಣವಾದ ಯಜ್ಞ ಪೂರ್ಣವಾಗುವುದಿಲ್ಲ, ನಿರ್ವಿಘ್ನವಾಗಿ ನಡೆಯದು[೨](ಇದು ಕೂಡಾ ಅಂತರ್ಯಾಮಿ ಅಥವಾ ಔಪಚಾರಿಕ ಉತ್ತಮತ್ವ).

---

೧ ಅಪೂಜ್ಯಪೂಜನಾಚ್ಚೈವ ಪೂಜ್ಯಾನಾಂ ಚಾಪ್ಯಪೂಜನಾತ್ ।
ನೃಘಾತಕಸಮಂ ಪಾಪಂ ಶಶ್ವತ್ ಪ್ರಾಪ್ನೋತಿ ಮಾನವಃ ॥
ಆಗತಂ ಪಶುಭರ್ತಾರಂ ಸ್ರಷ್ಟಾರಂ ಜಗತಃ ಪತಿಮ್ ।
ಅಧ್ವರೇ ಹ್ಯಗ್ರಭೋಕ್ತಾರಂ ಸರ್ವೇಷಾಂ ಪಶ್ಯತಃ ಪ್ರಭುಮ್ ॥ - ೧೧೮/೧೨-೧೯

೨ ಸರ್ವೇಷಾಮೇವ ಮಂತ್ರೋಽಯಂ ಯೇನಾಽಸೌ ನ ನಿಮಂತ್ರಿತಃ ।
ಯಥಾಽಹಂ ಶಂಕರಾದೂರ್ಧ್ವಂ ನಾನ್ಯಂ ಪಶ್ಯಾಮಿ ದೈವತಮ್ ॥
ತಥಾ ದಕ್ಷಸ್ಯ ವಿಪುಲೋ ಯಜ್ಞೋಽಯಂ ನ ಭವಿಷ್ಯತಿ. ॥

ಇದಕ್ಕೆ ದಕ್ಷ ಮತ್ತೆ ಹೀಗೆ ಉತ್ತರಿಸುತ್ತಾನೆ -

ಎಲೈ ಮಹರ್ಷಿಯೇ! ವಿಧ್ಯುಕ್ತವಾಗಿ 'ಮಂತ್ರಪೂತವಾದ ಎಲ್ಲವಿಧವಾದ ಹವಿಸ್ಸನ್ನು ಬಂಗಾರದ ಪಾತ್ರೆಯಲ್ಲಿ ಯಜ್ಞೇಶನಾದ ವಿಷ್ಣುವಿಗೆ ಮೀಸಲಿಟ್ಟಿದ್ದೇನೆ. ಅದನ್ನೇ ಆತನಿಗೆ ಸಮರ್ಪಿಸುವೆ. ಅವನೇ ಪ್ರಭು, ವಿಭು ಮತ್ತು ಆಹವನೀಯ ಅಗ್ನಿಯೂ ಆಗಿದ್ದಾನೆ.

ಕೈಲಾಸದಲ್ಲಿ ಆಗಲೇ ಪಾರ್ವತಿಯು ತನ್ನ ಪತಿಯನ್ನು ಕುರಿತು -

'ನನ್ನ ಪತಿ ಯಜ್ಞದ ಹವಿಸ್ಸಿನಲ್ಲಿ ಅರ್ಧ ಅಥವಾ ಮೂರನೇ ಒಂದು ಭಾಗ ಪಡೆಯಲು ನಾನು ಯಾವ ದಾನ ಮಾಡಲಿ? ಯಾವ ನಿಯಮ ಪಾಲಿಸಲಿ? ಯಾವ ತಪಸ್ಸನ್ನು ಮಾಡಲಿ? ಪ್ರಭು, ವಿಭು ಆಹವನೀಯಾಗ್ನಿಯೂ ಆಗಿರುವ ರುದ್ರನಿಗೆ ಈ ಆಹುತಿಗಳು ದೊರೆಯುವುದು ಹೇಗೆ?(ಈ ಮಾತು ಪಾರ್ವತೀ ದಕ್ಷನಿಗೆ ಹೇಳಿದಂತೆ ತೋರುತ್ತದೆ. ಆದರೆ ಮುಂದೆ ರುದ್ರದೇವರ ಮಾತುಗಳಿವೆ. ಆದ್ದರಿಂದ ಪತಿಗೆ ಹೇಳಿದಂತೆಂದು ಅರ್ಥಮಾಡಬೇಕೇನೋ? - ವಿಚಾರಣೀಯ).

ಪಾರ್ವತೀ ಮಾತಿಗೆ ರುದ್ರದೇವರು ಹೇಳುತ್ತಾರೆ -

'ಯಜ್ಞೇಶನಾದ ನನ್ನ ವಿಷಯದಲ್ಲಿ ನೀನು ಈ ರೀತಿ ಹೇಳುವುದು ಉಚಿತವಲ್ಲ. ದೇವತೆಗಳ ಅಭಿಪ್ರಾಯ ನಾನು ಬಲ್ಲೆ. ಧ್ಯಾನರಹಿತರಾದ ಮೂರ್ಖರು ನನ್ನನ್ನು ತಿಳಿಯರು ನಿನ್ನ ಈ ರೀತಿಯ ಪತಿಮೋಹದಿಂದ ಇಂದ್ರಾದಿಗಳು ಪ್ರಜೆಗಳು ಏನು ಮಾಡಬೇಕೆಂದು ತಿಳಿಯದೆ ಮೂಢರಾಗಿದ್ದಾರೆ.'

'ಯಜ್ಞದಲ್ಲಿ ಹೋತೃಗಳು ನನ್ನನ್ನು ಋಜ್‌ಮಂತ್ರದಿಂದ ಸ್ತೋತ್ರಮಾಡುತ್ತಾರೆ. ಸಾಮವೇದಿಗಳು ರಥಂತರ ಮಂತ್ರದಿಂದ ನನ್ನ ಮಹಿಮೆ ಗಾನ ಮಾಡುತ್ತಾರೆ. ವೇದಜ್ಞ ಬ್ರಾಹ್ಮಣರು ನನ್ನನ್ನು ಉದ್ದೇಶಿಸಿ ಯಜ್ಞ ಮಾಡುತ್ತಾರೆ. ಅಧ್ವರ್ಯುಗಳು ನನಗಾಗಿ ಅಹುತಿ ನೀಡುತ್ತಾರೆ.[೧]'

ಇದನ್ನು ಕೇಳಿದ ಪಾರ್ವತಿಯು ಪತಿಯನ್ನು ಆತ್ಮಪ್ರಶಂಸೆ ಮಾಡುವವನೆಂದು ಭಾವಿಸಿದಾಗ ರುದ್ರದೇವರು 'ನಾನು ಆತ್ಮಪ್ರಶಂಸೆ ಮಾಡಿಕೊಳ್ಳುತ್ತಿಲ್ಲ. ದಕ್ಷಯಜ್ಞವಿನಾಶಕನಾದ ಅತುಲ ಪರಾಕ್ರಮಿಯನ್ನು ಸೃಷ್ಟಿ ಮಾಡುತ್ತೇನೆ ನೋಡು'[೨] ಎಂದನು.

---

೧ ಕಿಂ ನಾಮ ಯುಕ್ತಂ ವಚನಂ ಮಹೇಶೇ ॥ – ೧೧೮/೨೪
ಮಾಮಧ್ವರೇ ಶಂಸಿತಾರಃ ಸ್ತುವಂತಿ
ರಥಂತರಂ ಸಾಮಗಾಶ್ಚೋಪಗಾಂತಿ ।
ಮಾಂ ಬ್ರಾಹ್ಮಣಾ ಬ್ರಹ್ಮವಿದೋ ಯಜಂತೇ
ಮಾಮಧ್ವರ್ಯವಃ ಕಲ್ಪಯಂತೇ ಚ ಭಾಗಮ್ ॥ – ೧೧೮/೨೬

೨ ನಾತ್ಮಾನಂ ಸ್ತೌಮಿ ದೇವೇಶಿ ಪಶ್ಯಮೇ ತನುಮಧ್ಯಮೇ ।

ಹೀಗೆ ಹೇಳುತ್ತಾ ರುದ್ರದೇವರು ತಮ್ಮ ಮುಖದಿಂದ ಅಟ್ಟಹಾಸ ಮಾಡುವ ಭಯಂಕರ ರೂಪಿಯಾದ ಪುರುಷನನ್ನು ಸೃಷ್ಟಿಸಿದರು. ಹುಟ್ಟಿದ (ವೀರಭದ್ರನು) ವಿನೀತನಾಗಿ ಏನು ಮಾಡಲಿ? ಎಂದಾಗ, ತಂದೆ ರುದ್ರದೇವರು 'ದಕ್ಷಯಜ್ಞ ಧ್ವಂಸಮಾಡು ಎಂದರು. ಆಗ ಕ್ರೂರವಾದ ಆ ಭೂತವು ಪಾರ್ವತಿಯ ಕೋಪಶಾಂತಿಗಾಗಿ ದಕ್ಷನ ಯಾಗವನ್ನೆಲ್ಲ ಧ್ವಂಸ ಮಾಡತೊಡಗಿತು. ಅದೇ ವೇಳೆ ಪಾರ್ವತಿಯ ಕೋಪದಿಂದ ಮಹಾಭಯಂಕರ ಸ್ವರೂಪದ ಮಹಾಕಾಳಿ ಅಥವಾ ಭದ್ರಕಾಳಿ ಎಂಬ ಶಕ್ತಿಯೊಂದು ಉತ್ಪನ್ನವಾಯಿತು. ಆಕೆ ವೀರಭದ್ರನನ್ನು ಹಿಂಬಾಲಿಸಿದಳು. ಅವನು ರುದ್ರನಿಗೆ ಸಮಾನನೂ, ಅವನಂತೆ ಬಲರೂಪವುಳ್ಳವನಾಗಿದ್ದನು( ಅವನು ರುದ್ರನ ಮತ್ತೊಂದು ರೂಪವೇ ಆಗಿದ್ದನು ಎಂಬುದು ಪ್ರಮಾಣಸಿದ್ಧವಾದ ವಿಚಾರವೆಂದು ಭಾ.ತಾ.ದಲ್ಲಿ ಹೇಳಲಾಗಿದೆ). ವೀರಭದ್ರನು ತನ್ನ ರೋಮಕೂಪಗಳಿಂದ ಅನೇಕ ಗಣಗಳನ್ನು ಸೃಷ್ಟಿಸಿದನು. ಅವರೆಲ್ಲ ದಕ್ಷಯಜ್ಞ ನಾಶ ಮಾಡಿದವು. ಅವೆಲ್ಲವೂ ಮಹಾದೇಹ ಹಾಗೂ ಭಯಂಕರ ರೂಪಗಳಿಂದ ಕೂಡಿದ್ದವು. ಅವರೆಲ್ಲ ಸಾವಿರಾರು ಸಂಖ್ಯೆಯಲ್ಲಿ ದಕ್ಷಯಜ್ಞನಾಶಮಾಡಲಾರಂಭಿಸಿದರು[೧].

ರುದ್ರಗಣಗಳ ಭಯಾನಕ ಶಬ್ದಗಳಿಂದಾಗಿ ಯಜ್ಞಶಾಲೆಯ ವಾತಾವರಣ ಕೆಟ್ಟು ಹೋಗಿ ಆಕಾಶವೆಲ್ಲ ಆ ಧ್ವನಿಯಿಂದ ತುಂಬಿತು. ಅಷ್ಟೇ ಅಲ್ಲದೇ ಅದರ ಪರಿಣಾಮ ಪರಿಸರದ ಮೇಲೆ ಅನೇಕ ರೀತಿಯಿಂದ ಆಯಿತು. ಪರ್ವತಗಳೆಲ್ಲ ಭೇದಿಸಿದವು, ಭೂಮಿ ನಡುಗಿತು, ಸುಂಟರಗಾಳಿ ಎದ್ದಿತು. ಸಮುದ್ರ ಅಲ್ಲೋಲಕಲ್ಲೋಲವಾಯಿತು. ಅಗ್ನಿಗಳು (ಯಾಜ್ಞಿಕ) ಶಾಂತವಾದವು. ಸೂರ್ಯಪ್ರಕಾಶಹೀನನಾದ. ಗ್ರಹನಕ್ಷತ್ರಗಳೂ ಕಾಂತಿಹೀನವಾದವು. ಋಷಿ, ದೇವತೆಗಳು, ಮನುಷ್ಯರಾರೂ ಕಾಣದಾದರು, ಕತ್ತಲು ಆವರಿಸಿತು. ರುದ್ರಗಣಗಳ ರುದ್ರನರ್ತನ ಮುಗಿಲೇರಿತು. ಯಜ್ಞದ ಯೂಪಸ್ತಂಭಗಳನ್ನು ಕಿತ್ತಿದರು, ಕಂಡವರನ್ನು ಕುಕ್ಕಿದರು, ಗುದ್ದಿದರು. ಯಜ್ಞದಭಾಂಡಗಳನ್ನುಪುಡಿಪುಡಿಮಾಡಿದರು. ದಿವ್ಯಾಭರಣಗಳನ್ನೆಲ್ಲ ಕಿತ್ತು ಬಗೆದರು. ಅವು ಆಕಾಶದಲ್ಲಿನ ನಕ್ಷತ್ರಗಳಂತೆ ಕಂಡವು. ದೇವಯೋಗ್ಯವಾದ ಅನ್ನಭಕ್ಷ್ಯ

---

ಯಂ ಪ್ರಕ್ಷ್ಯಾಮಿ ವರಾರೋಹೇ ಯಾಗಾರ್ಥೇ ವರವರ್ಣಿನಿ ॥ - ೧೧೮/೨೮

೧ ತಮುವಾಚಾಕ್ಷಿಪ ಮುಖಂ ದಕ್ಷಸ್ಯೇತಿ ಮಹೇಶ್ವರಃ ।....
ದೇವ್ಯಾ ಮನ್ಯುವ್ಯಪೋವಾರ್ಥಂ ಹತೋ ದಕ್ಷಸ್ಯ ವೈ ಕ್ರತುಃ ॥
ಮನ್ಯುನಾ ಚ ಮಹಾಭೀಮಾ ಮಹಾಕಾಳೀ ಮಹೇಶ್ವರೀ ।
ಆತ್ಮನಃ ಕರ್ಮಸಾಕ್ಷಿತ್ವೇ ತೇನ ಸಾರ್ಧಂ ಸಹಾನುಗಾ ।........
ಸ ಏವ ಭಗವಾನ್ ಕ್ರೋಧಃ ಪ್ರತಿರೂಪಸಮನ್ವಿತಃ ।
ವೀರಭದ್ರ ಇತಿ ಖ್ಯಾತೋ ದೇವ್ಯಾ ಮನ್ಯುಪ್ರಮಾರ್ಜಕಃ ।
ಸೋಽಸೃಜತ್ ರೋಮಕೂಪೇಭ್ಯೋ ರೌಮ್ಯಾನ್ನಾಮ ಗಣೇಶ್ವರಾನ್ ।
ರುದ್ರತುಲ್ಯಾ ಗಣಾರೌದ್ರಾ ರುದ್ರವೀರ್ಯ ಪರಾಕ್ರಮಾಃ ।
ತೇ ನಿಪೇತುಸ್ತತಸ್ತೂರ್ಣಂ ದಕ್ಷಯಜ್ಞವಿಹಿಂಸಯಾ ॥ - ೧೧೮/೩೦-೩೬

ಪಾಯಸಾದಿಗಳ ಪರ್ವತೋಪಮೆ ರಾಶಿಗಳು ಚೆಲ್ಲಿ ಹೋಗಿದ್ದವು. ಯಜ್ಞವಾಟವೆಲ್ಲ ತುಪ್ಪದ ಪಾಯಸದ ಕೆಸರುಗಳಿಂದ, ಹಾಲಿನನದಿಗಳು ಮೊಸರು, ಬೆಣ್ಣೆ ಕಲ್ಲು ಸಕ್ಕರೆಯೆಂಬ ಮರಳುಗಳಿಂದ ಅಸ್ತವ್ಯಸ್ತವಾಗಿ ಚದುರಿಹೋಗಿತ್ತು. ಭಕ್ಷ್ಯ, ಭೋಜ್ಯ, ಲೇಹ್ಯ ಚೋಷ್ಯಗಳನ್ನೆಲ್ಲ ಭೂತಗಣಗಳು ತಿನ್ನುತ್ತಿದ್ದವು, ನೆಕ್ಕುತ್ತಿದ್ದವು, ಬಿಸಾಡುತ್ತಿದ್ದವು. ಯಜ್ಞಕ್ಕಾಗಿ ನೆರೆದ ದೇವಸೇನೆಯನ್ನು ಹೆದರಿಸಿ ಓಡಿಸಿದರು, ಭೂತಾದಿಗಳು ರುದ್ರಗಣಗಳು ದೇವಸ್ತ್ರೀಯರನ್ನು ಎಸೆಯುತ್ತಿದ್ದರು. ಎಲ್ಲ ದೇವತೆಗಳಿಂದ ಸುರಕ್ಷಿತವಾದ ಯಜ್ಞವು ರುದ್ರಕ್ರೋಧದಿಂದಾಗಿ ವೀರಭದ್ರನಿಂದ ನಾಶವಾಯಿತು. ಅಲ್ಲದೆ ಸಂತೋಷಪಟ್ಟನು (ಬಂದ ಕಾರ್ಯವಾಯಿತೆಂದು) ಯಜ್ಞದ ಶಿರಸ್ಸನ್ನೇ ಕಡಿದು ಭೈರನಾದವನ್ನು ಮಾಡಿದನು[೧].

ನಂತರ ಬ್ರಹ್ಮಾದಿದೇವತೆಗಳು ಹಾಗು ದಕ್ಷಪ್ರಜಾಪತಿಯು ಆ ವೀರಭದ್ರನನ್ನು ಕುರಿತು 'ನೀನಾರು' ಎಂದು ಪ್ರಾಂಜಲರಾಗಿ ಕೇಳಿದರು.

(ಯದ್ಯಪಿ ಬ್ರಹ್ಮದೇವರಿಗೆ ಎಲ್ಲವೂ ಗೊತ್ತಿದ್ದರೂ ಸಾಮಾನ್ಯ ಜನರಂತೆ ವಿಡಂಬನೆ ಮಾಡಿದರು ಎಂದು ಅಭಿಪ್ರಾಯ. ದಕ್ಷಪ್ರಜಾಪತಿಯು ತಾನು ರುದ್ರಭಾಗ ನೀಡದೆ ತಪ್ಪು ಮಾಡಿದುದರ ಅರಿವಾಗಿ, ಯಜ್ಞನಾಶ ರುದ್ರದೇವರಿಂದ ಆಯಿತೆಂದು ಗೊತ್ತಾಗಿ, ಪ್ರಾಂಜಲನಾಗಿ ಕೇಳುತ್ತಾನೆ. ಹೆಚ್ಚಿನ ಮಾಹಿತಿಗಾಗಿ ಭಾಗವತತಾತ್ಪರ್ಯ ಸ್ಕಂಧ ೪ರಲ್ಲಿನ ಇದೇ ವಿಷಯವನ್ನು ನೋಡಬಹುದು. ೪/೬,೭ ಅಧ್ಯಾಯಗಳನ್ನು ನೋಡುವುದು).

ವೀರಭದ್ರನು ಬ್ರಹ್ಮ ದಕ್ಷರಿಗೆ ಹೀಗೆ ಉತ್ತರಿಸಿದನು –

'ನಾನು ರುದ್ರನಲ್ಲ, ಪಾರ್ವತಿ ಅಲ್ಲ. ಪಾರ್ವತಿಗೆ ತನ್ನ ಪತಿಯಾದ ರುದ್ರದೇವರಿಗೆ ಯಜ್ಞದಲ್ಲಿ ಹವಿರ್ಭಾಗವಿಲ್ಲವೆಂಬ ವಿಷಯ ತಿಳಿದು ದುಃಖವಾಯಿತು. ಆಕೆಯ ದುಃಖ ಪರಿಹಾರಕ್ಕಾಗಿ ರುದ್ರದೇವರು ಕೋಪದಿಂದ ಸೃಷ್ಟಿಯಾದವ ನಾನು, ನನ್ನ ಹೆಸರು ವೀರಭದ್ರ. ಪಾರ್ವತಿಯ ಕೋಪದಿಂದ ಹುಟ್ಟಿದ ಸ್ತ್ರೀಯೇ ಭದ್ರಕಾಳೀ. ನನ್ನನ್ನು ಹಿಂಬಾಲಿಸುತ್ತಾಳೆ. ಇದು ಶಿವಪ್ರೇರಿತ ಯಜ್ಞಧ್ವಂಸಕ್ಕಾಗಿ ನಾವು ಬಂದಿದ್ದೇವೆ. ಆದ್ದರಿಂದ ಈಗಲಾದರೂ ರುದ್ರನನ್ನು ಶರಣಾಗು. ಇತರ ದೇವತೆಗಳ ವರಕ್ಕಿಂತ ಮಹಾದೇವನ ಕೋಪವೇ ಪ್ರಬಲವೆಂದು ತಿಳಿ[೨].'

---

೧ ತಂ ಯಜ್ಞಮದಹತ್ ಶೀಘ್ರಂ ರುದ್ರಕರ್ಮಾ ಸಮಂತತಃ।
ಚಕಾರ ಭೈರವಂ ನಾದಂ ಸರ್ವಭೂತಭಯಂಕರಮ್ ॥
ಛಿತ್ವಾ ಶಿರೋ ವೈ ಯಜ್ಞಸ್ಯ ನನಾದ ಚ ಮುಮೋದ ಚ।
ತತೋ ಬ್ರಹ್ಮಾದಯೋ ದೇವಾ ದಕ್ಷಶ್ಚೈವ ಪ್ರಜಾಪತಿಃ।
ಊಚುಃ ಪ್ರಾಂಜಲಯಃ ಸರ್ವೇ ಕಥ್ಯತಾಂ ಕೋ ಭವಾನಿತಿ ॥ – ೧೧೮/೪೯-೫೧

೨ ತವ ಯಜ್ಞವಿಘಾತಾರ್ಥಂ ಸಂಪ್ರಾಪ್ತಂ ವಿದ್ಧಿ ಮಾಮಿಹ।
ವೀರಭದ್ರ ಇತಿ ಖ್ಯಾತೋ ರುದ್ರಕೋಪಾದ್ವಿನಿಸೃತಃ।
ಭದ್ರಕಾಳೀತಿ ವಿಖ್ಯಾತಾ ದೇವ್ಯಾಃ ಕೋಪಾತ್ ವಿನಿಸೃತಾ।

ವೀರಭದ್ರನ ಮಾತನ್ನು ಕೇಳಿ ಧರ್ಮಜ್ಞಾನಿಶ್ರೇಷ್ಠವಾದ ದಕ್ಷಪ್ರಜಾಪತಿಯು ಮಹೇಶ್ವರನನ್ನು ನಮಸ್ಕರಿಸಿ ಸ್ತೋತ್ರ ಮಾಡಿ ಸಂತುಷ್ಟಗೊಳಿಸಿದನು. 'ಮುಂದೆ ಇದೇ ಅಧ್ಯಾಯದಲ್ಲಿ ಒಂದೇ ಒಂದು ಶ್ಲೋಕವು ಸ್ತೋತ್ರರೂಪವಾಗಿದೆ. ಅದು ಹೀಗಿದೆ :

**ಪ್ರಪದ್ಯೇ ದೇವಮೀಶಾನಂ ಶಾಶ್ವತಂ ಧ್ರುಮಮವ್ಯಯಮ್ ।**
**ಮಹಾದೇವಂ ಮಹಾತ್ಮಾನಂ ವಿಶ್ವಸ್ಯ ಜಗತಃ ಪತಿಮ್ ॥- ೧೧೮/೩೭**

ನಂತರ ವೈಶಂಪಾಯನರು ಜನಮೇಜಯನಿಗೆ ದಕ್ಷಯಜ್ಞದ ಸಿದ್ಧತೆ, ಯಜ್ಞನಡೆದುದು, ಅಲ್ಲಿ ರುದ್ರದೇವರಿಗೆ ಆಹ್ವಾನ ಇಲ್ಲದುದು, ದೇವಿ ಕೋಪ, ರುದ್ರಗಣಗಳಿಗೆ ಆಕೆಯ ಪ್ರೇರಣೆ ಕಳಿಸುವುದು. ಯಜ್ಞಧ್ವಂಸ ಮೊದಲಾದ ವಿಷಯಗಳನು ಶ್ಲೋಕ ೩೮-೬೪ರವರೆಗೆ ೭ ಶ್ಲೋಕಗಳಿಂದ ವರ್ಣಿಸಲಾಗಿದೆ. ನಂತರ ಯಜ್ಞ ಕುಂಡದಿಂದ ರುದ್ರಾವತರಣ ಮತ್ತು 'ನನ್ನಿಂದ ಏನಾಗಬೇಕು' ಎಂದು ದಕ್ಷನನ್ನು ಕುರಿತು ಕೇಳುತ್ತಾನೆ ರುದ್ರದೇವ.

ಇದೇ ಸಮಯದಲ್ಲಿ ದೇವಗುರುಗಳಾದ ಬೃಹಸ್ಪತ್ಯಾಚಾರ್ಯರು ಹೇಳಿದ (ದಕ್ಷ ಕೇಳಿದ) ಯಾಗ ಅಧ್ಯಾಯದ ಕ್ರಮದಂತೆ ದಕ್ಷಪ್ರಜಾಪತಿಯು ವೇದವಚನಗಳಿಂದ ಅಂಜಲೀಬದ್ಧನಾಗಿ ರುದ್ರದೇವನನ್ನು ಸ್ತುತಿಸಿದನು.

ಆ ವೇದ ಯಾವುದೆಂದರೆ - ಅಪರಾಧ ಪ್ರಜ್ಞೆಯಿಂದ ಹೆದರಿದ ದಕ್ಷ ನಡುಗುತ್ತಿದ್ದನು. ಕಣ್ಣಿನಿಂದ ನೀರು ಸುರಿಯುತ್ತಿತ್ತು. 'ಎಲೈ ರುದ್ರದೇವನೇ! ಒಂದು ವೇಳೆ ನಾನು ಭಗವಂತನಿಗೆ (ನಾರಾಯಣನಿಗೆ) ಪ್ರಿಯನಾಗಿದ್ದಲ್ಲಿ ನೀನು ನನ್ನ ವಿಷಯದಲ್ಲಿ ಪ್ರಸನ್ನನಾಗಿದ್ದಲ್ಲಿ, ನಾನು ಅನುಗ್ರಹಕ್ಕೆ ಯೋಗ್ಯನಾಗಿದ್ದಲ್ಲಿ, ನಾನು ಬಹಳ ಕಾಲದ ಪ್ರಯತ್ನದಿಂದ ಸಿದ್ಧಮಾಡಿದ ಯಜ್ಞಸಂಭಾರಗಳೆಲ್ಲ ನಾಶ ಮಾಡಲ್ಪಟ್ಟಿವೆ. ಆದರೆ ಅವೆಲ್ಲ ಉಪಯೋಗಕ್ಕೆ ಬರಬೇಕು. ಅವು ಭಗವತ್ಪ್ರೀತಿಗೆ ಸಮರ್ಪಿತವಾಗಿಲ್ಲ. ಅವೆಲ್ಲ ವ್ಯರ್ಥವಾಗದಂತೆ ನಿನ್ನಿಂದ ವರವನ್ನು ಇಚ್ಛಿಸುತ್ತೇನೆ.' ಎಂದು ದಕ್ಷಪ್ರಜಾಪತಿ ಕೇಳಲು ರುದ್ರದೇವನು 'ತಥಾಸ್ತು' ಎಂದನು. ಎಂತಹ ರುದ್ರ ಎಂದರೆ ಅವನನ್ನು 'ಖಗನ ಕಣ್ಣನ್ನು ಕಿತ್ತಿದವನೆಂದೂ (ಅಪಹರಿಸಿದವನೆಂದೂ) ಧರ್ಮಾಧ್ಯಕ್ಷನೆಂದೂ, ವಿರೂಪಾಕ್ಷನೆಂದೂ, ತ್ರಿನೇತ್ರನೆಂದೂ, ದೇವ ಹಾಗೂ ಪ್ರಜಾಪತಿ ಎಂದೂ ವರ್ಣಿಸಲಾಗಿದೆ.

---

ಪ್ರೇಷಿತಾ ದೇವದೇವೇನ ಯಜ್ಞಾಂತಿಕಮಿಹಾಗತೌ ।
ಶರಣಂ ಗಚ್ಛ ವಿಪ್ರೇಂದ್ರ ದೇವದೇವಮುಮಾಪತಿಮ್ ।
ವರಂ ಕ್ರೋಧೋಽಪಿ ದೇವಸ್ಯ ವರದಾನಂ ನ ಚಾನ್ಯತಃ ॥ - ೧೧೮/೩೩-೩೫

೧ .............
ಸಹಸಾ ದೇವದೇವೇಶೋ ಹ್ಯಗ್ನಿಕುಂಡಾತ್ ಸಮುತ್ಥಿತಃ । - ೧೧೮/೬೪
ಬಿಭ್ರತ್ ಸೂರ್ಯ ಸಹಸ್ರಸ್ಯ ತೇಜಃ ಸಂವರ್ತಕೋಪಮಃ ।
ಸ್ಮಿತಂ ಕೃತ್ವಾಽಬ್ರವೀದ್ವಾಕ್ಯಂ ಬ್ರೂಹಿ ಕಿಂಕರವಾಣಿ ತೇ ॥

೨ ತಥಾಸ್ತ್ವಿತ್ಯಾಹ ಭಗವಾನ್ ಭಗನೇತ್ರಹರೋ ಹರಃ ।
ಧರ್ಮಾಧ್ಯಕ್ಷೋ ವಿರೂಪಾಕ್ಷಸ್ತ್ರ್ಯಕ್ಷೋ ದೇವಃ ಪ್ರಜಾಪತಿಃ । ೧೧೮/೭೦

ಇಷ್ಟು ಮಹಿಮೆಯುಳ್ಳವನಾಗಿದ್ದರೂ ದಕ್ಷನ ಮೇಲೆ ಕಾರುಣ್ಯ ಹರಿಸಿದನೆಂಬ ರುದ್ರದೇವರ ಭಕ್ತವಾತ್ಸಲ್ಯವನ್ನು ವ್ಯಾಸರು ವರ್ಣಿಸಿದ್ದಾರೆ. ಅಪರಾಧವೆಸಗಿದ ದಕ್ಷನ ಮೇಲೂ ಕ್ಷಮಾವರ್ಷವನ್ನೇ ಹರಿಸಿದ ರುದ್ರದೇವರ ದಯಾಸಮುದ್ರಗುಣ ಇಲ್ಲಿ ಬಂದಿದೆ.

ನಂತರ ದಕ್ಷಪ್ರಜಾಪತಿಯು ರುದ್ರದೇವರಿಗೆ ಸಾಷ್ಟಾಂಗ ಪ್ರಣಾಮ ಮಾಡಿ (೧೦೦೦) ಒಂದು ಸಾವಿರ ನಾಮಗಳಿಂದ ಸ್ತುತಿಸಿದ ವಿವರ ಈ ಅಧ್ಯಾಯದಲ್ಲಿ ಬಂದಿದೆ. ಯುಧಿಷ್ಠಿರನ ಅಪೇಕ್ಷೆಯ ಮೇರೆಗೆ ಭೀಷ್ಮರು ಆ ಸ್ತುತಿಯನ್ನು ಅನುವಾದಿಸಿದ್ದಾರೆ.

ದಕ್ಷಪ್ರಜಾಪತಿಯು ತಾನು ರುದ್ರದೇವರನ್ನು ಏಕೆ ಆಮಂತ್ರಿಸಲಿಲ್ಲವೆನ್ನುವುದನ್ನು ಅರುಹುತ್ತಾನೆ. ಏಕೆಂದರೆ -

೧. ನಿನ್ನನ್ನು ಉದ್ದೇಶಿಸಿಯೇ ಎಲ್ಲರೂ ಯಾಗ ಮಾಡುತ್ತಾರೆ. ನೀನೇ ಯಾಗದ ಯಜಮಾನ ಆದ್ದರಿಂದ ಪ್ರತ್ಯೇಕವಾಗಿ ಆಹ್ವಾನಿಸಲಿಲ್ಲ.

೨. ಅಥವಾ ನಿನ್ನ ಮಾಯೆಯಿಂದ ಮೋಹಿತನಾಗಿ ಆಹ್ವಾನಿಸಲಿಲ್ಲ. ನಿನ್ನನ್ನು ಶರಣು ಹೊಕ್ಕಿದ್ದೇನೆ. ನನ್ನಲ್ಲಿ ಪ್ರಸನ್ನನಾಗು. ನನ್ನ ಮಾತು ಮನಸ್ಸು ಬುದ್ಧಿ ಕೃತಿ ಎಲ್ಲವೂ ನಿನಗೆ ಅರ್ಪಿತವಾಗಿವೆ.

ಹೀಗೆ ಸ್ತುತಿಸಲ್ಪಟ್ಟ ಶಂಕರನು ಸಂತೋಷಗೊಂಡು ಪ್ರಜಾಪತಿಗೆ ನುಡಿದನು.

೧. ನಿನ್ನ ಸ್ತುತಿಯಿಂದ ಸಂತುಷ್ಟನಾಗಿದ್ದೇನೆ. ಹೆಚ್ಚೇನು ಹೇಳಲಿ, ನೀನು ನನ್ನ ಮುಂಭಾಗದಲ್ಲಿಯೇ ಯಾವಾಗಲೂ ಇರುವೆ.

೨. ಸಾವಿರ ಅಶ್ವಮೇಧಯಾಗ, ನೂರು ವಾಜಪೇಯಯಾಗಗಳ ಫಲಕ್ಕೆ ಭಾಗಿಯಾಗಿರುವೆ.

೩. ನಿನ್ನ ಯಜ್ಞಕ್ಕೆ ವಿಘ್ನವಾಯಿತೆಂದು ಸಿಟ್ಟಾಗಬೇಡ (ಅಸಮಾಧಾನ, ಬೇಸರ ಬೇಡ). ಹಿಂದಿನ ಕಲ್ಪದಲ್ಲಿಯೂ ನೀನು ಮಾಡಿದ ಯಜ್ಞವನ್ನು ಧ್ವಂಸ ಮಾಡಿದ್ದೆ. ಈಗಲೂ

---

ವೇದದ ಭಾವಾನುವಾದವಿದು. ಸಂಬಂಧಪಟ್ಟ ವೇದ ಯಾವುದೆಂದು ಮೂಲದಿಂದ ತಿಳಿಯುವುದಿಲ್ಲ.

ನಾಮ್ನಾಮಷ್ಟಸಹಸ್ರೇಣ ಸ್ತುತವಾನ್ ವೃಷಭಧ್ವಜಮ್ ॥ - ೧೧೮/೭೧

ಆ ನಾಮಗಳ ವೈಶಿಷ್ಟ್ಯಗಳಾವೆಂದರೆ -

ಶ್ರೂಯತಾಂ ದೇವದೇವಸ್ಯ ನಾಮಾನ್ಯದ್ಭುತಕರ್ಮಣಃ।
ಗೂಢವ್ರತಸ್ಯ ಗುಹ್ಯಾನಿ ಪ್ರಕಾಶಾನಿ ಚ ಭಾರತಃ ॥ - ೧೧೮/೭೩

ಆತನ ನಾಮಧೇಯಗಳು ರಹಸ್ಯವೂ ಹಾಗೂ ಪ್ರಕಾಶವೂ ಆಗಿವೆ. ಸ್ತೋತ್ರದ ಮೊದಲ ಶ್ಲೋಕ -

ನಮಸ್ತೇ ದೇವದೇವೇಶ ದೇವಾರಿ ಬಲಸೂದನ।
ದೇವೇಂದ್ರಬಲವಿಷ್ಟಂಭ ದೇವದಾನವಪೂಜಿತ ॥ - ೧೧೮/೭೪

ಹಾಗೆಯೇ ನಡೆದಿದೆ (ಇದೊಂದು ಅಪರಿಹಾರ್ಯವಾದ ನಿತ್ಯಕರ್ಮವಿದ್ದಂತೆ ಇದನ್ನು ತಪ್ಪಿಸಲಾಗದು).

೪. ನಿನಗೆ ಮತ್ತೆ ವರ ಕೊಡುವೆ ಕೇಳು.

ಹಿಂದೆ ಷಡಂಗಸಹಿತ ವೇದಗಳು, ಸಾಂಖ್ಯಯೋಗ, ತರ್ಕಗಳನ್ನು ಆಶ್ರಯಮಾಡಿ ಮಹಾತಪಸ್ಸನ್ನು ಯಾರು ಆಚರಿಸುತ್ತಿದ್ದರೋ ಅಂತಹ ತಪಸ್ಸನ್ನು ಬಹುದೀರ್ಘಕಾಲ ದೇವದಾನವರು ಶ್ರದ್ಧೆಯಿಂದ ಆಚರಿಸಿದರು. ಅದಕ್ಕಿಂತಲೂ ಉತ್ತಮವಾದ ತಪಸ್ಸನ್ನು ನಿನಗೆ ತಿಳಿಸುತ್ತೇನೆ[1].

ಹಿಂದೆ ನನ್ನಿಂದ ಹೇಳಲ್ಪಟ್ಟ ಪಾಶುಪತವೆಂಬ ವ್ರತವು ಅಪೂರ್ವವಾದುದು. ಎಲ್ಲ ರೀತಿಯಿಂದಲೂ ಮಂಗಳಕರವು, ಮೋಕ್ಷಸಾಧಕರಿಗೆ ಅವಿನಾಶಿಯಾದ, ಅನೇಕವರ್ಷಗಳ ಪ್ರಯತ್ನದಿಂದ ಸಾಧ್ಯವಾದ, ಅಹಿಂಸಾ, ಅಸ್ತೇಯಾದಿ ಯಾಮಗಳಿಂದ ಕೂಡಿದ, ಶೌಚ, ಸಂತೋಷಾದಿ ನಿಯಮಗಳಿಂದ ಕೂಡಿದ ಪ್ರಾಜ್ಞರಿಂದ ಪ್ರಶಂಸೆಗೆ ಒಳಗಾದ, ವರ್ಣಾಶ್ರಮಧರ್ಮಗಳಿಂದ ವಿಪರೀತವೆನಿಸಿದರೂ ಸರಿಯಾಗಿರುವ, ಅಧ್ಯಾತ್ಮಸಾಧಕರಿಂದ ಶುಭವಾದ (ವ್ರತವು) ಹೇಳಲ್ಪಟ್ಟಿದೆ[2]. ಅಂತಹ ಪಾಶುಪತವ್ರತದಲ್ಲಿ ಹೇಳಲ್ಪಟ್ಟ ಫಲವು ನಿನಗೆ ಸಿಗಲಿ. ನಿನ್ನ ಮಾನಸಿಕ ವ್ಯಸನ(ಚಿಂತೆ)ಯನ್ನು ಬಿಟ್ಟುಬಿಡು.

ಹೀಗೆ ಹೇಳಿದ ಶಂಕರನು ಪತ್ನಿ ಉಮಾ ಹಾಗೂ ತನ್ನ ಪರಿವಾರದೊಡನೆ ಅದೃಶ್ಯನಾದ.

ಶಿವಸಹಸ್ರನಾಮಸ್ತೋತ್ರದ ಫಲ :

೧. ಪಠನ, ಶ್ರವಣ ಮಾಡುವವನಿಗೆ ಅಮಂಗಳವಿಲ್ಲ, ದೀರ್ಘಾಯುಷ್ಯ ಫಲವಿದೆ.

೨. ಹೇಗೆ ಎಲ್ಲ ದೇವತೆಗಳಲ್ಲಿ ಶಿವನು ವರಿಷ್ಠನೋ ಹಾಗೆಯೇ ಈ ಸ್ತವವು (ಸ್ತುತಿಯು) ಎಲ್ಲ ಸ್ತೋತ್ರಗಳಲ್ಲಿ ಶ್ರೇಷ್ಠ. ವೇದಕ್ಕೆ ಸಮಾನವೂ ಹೌದು.

ವಿ.ಸೂ.: 'ಇದು ವಿಷ್ಣುಸ್ತುತಿಯೇ. ಶಿವಾಂತರ್ಯಾಮಿಯಾದ ಶಿವರೂಪಿ ವಿಷ್ಣುಸ್ತುತಿ. ಆದ್ದರಿಂದ ಸ್ತೋತ್ರಗಳಲ್ಲಿ ಶ್ರೇಷ್ಠ, ದೇವತೆಗಳಲ್ಲಿ ಶಿವ, ಶಿವರೂಪಿ ವಿಷ್ಣು ಶ್ರೇಷ್ಠ.

೩. ಯಶಸ್ಸು, ರಾಜ್ಯ, ಸುಖ, ಐಶ್ವರ್ಯ, ಕಾಮ, ಅರ್ಥ, ಧನಗಳನ್ನು ಬಯಸುವವರು ಮತ್ತು ವಿದ್ಯಾಕಾಮಿಗಳಿಂದ (ವಿದ್ಯೆ ಬಯಸುವವರಿಂದ) ಭಕ್ತಿಯಿಂದ ಕೇಳಬೇಕು.

---

೧ ವೇದಾತ್ ಷಡಂಗಾದುದ್ಧೃತ್ಯ ಸಾಂಖ್ಯಯೋಗಾಚ್ಚ ಯುಕ್ತಿತಃ।
ತಪಃಸುತಪ್ತಂ ವಿಪುಲಂ ದುಶ್ಚರಂ ದೇವದಾನವೈಃ॥

೨ ಅಪೂರ್ವಂ ಸರ್ವತೋ ಭದ್ರಂ...... ವ್ರತಮ್।
ಮಯಾ ಪಾಶುಪತಂ ದಕ್ಷ ಶುಭಮುತ್ಪಾದಿತಂ ಪುರಾ।
ತಸ್ಯ ಚೀರ್ಣಸ್ಯ ತತ್ಸಮ್ಯಕ್‌ಫಲಂ ಭವತಿ ಪುಷ್ಕಲಮ್॥ - ೧೧೮/೧೯೨-೧೯೫

೪. ವ್ಯಾಧಿ, ದುಃಖ, ದೀನ, ಚೋರಗ್ರಸ್ತ, ಭಯಗ್ರಸ್ತ, ರಾಜಕಾರ್ಯದಲ್ಲಿ ನಿಯುಕ್ತನಾದವನು(ರಾಜಸೇವಕ). ಕೇಳಲು, ಪಠಿಸಲು ಮಹಾಭಯದಿಂದ ಮುಕ್ತನಾಗುತ್ತಾನೆ.

೫. ಇದೇ ದೇಹದಿಂದಲೇ ಶಿವಗಣಗಳಿಗೆ ಸಮನಾಗುತ್ತಾನೆ(ಯಥೋಚಿತವಾಗಿ) ತೇಜಸ್ಸು, ಯಶಸ್ಸುಗಳಿಂದ ಕೂಡಿದ ನಿರ್ಮಲ ಮನಸ್ಕನಾಗುತ್ತಾನೆ.

೬. ಸ್ತೋತ್ರಪಾಠಕರಿಗೆ ರಾಕ್ಷಸ ಪಿಶಾಚಾದಿಗಳ ಭಯವಿರುವುದಿಲ್ಲ.

೭. ಯಾವ ಸ್ತ್ರೀಯು ಬ್ರಹ್ಮಚಾರಿಯಾಗಿ ಶಂಕರನಲ್ಲಿ ಭಕ್ತಿಯಿಂದ ಈ ಸ್ತೋತ್ರವನ್ನು ಕೇಳುವಳೋ ಅವಳು ತಂದೆ ಹಾಗೂ ತಾಯಿಗಳ ವಂಶದಲ್ಲಿ ದೇವತೆಯಂತೆ ಮಾನ್ಯಳಾಗುತ್ತಾಳೆ(ಪೂಜ್ಯ).

೮. ಸರ್ವಕರ್ಮಸಿದ್ಧಿ, ಶ್ರವಣಕೀರ್ತನೆಗಳಿಂದ.

೯. ಸಂತತ ಕೀರ್ತನದಿಂದ ಮನಸ್ಸಿನಲ್ಲಿ ಚಿಂತಿಸಿದ್ದುದೆಲ್ಲ ದೊರಕುತ್ತದೆ.

೧೦. ಯಾರು ಇಂದ್ರಿಯನಿಗ್ರಹದಿಂದ ಮಹದೇವ, ಪಾರ್ವತಿ, ಷಣ್ಮುಖ, ನಂದೀಶ್ವರರನ್ನು ವಿಧ್ಯುಕ್ತವಾಗಿ ಪೂಜಿಸುತ್ತಾರೋ(ನೈವೇದ್ಯಾದಿಗಳನ್ನು ಕೊಡುತ್ತಾರೆ) ಇಲ್ಲಿ ನಾಮಗಳನ್ನು ಮನಸ್ಸಿನಲ್ಲಿ ಅನುಸಂಧಾನ ಮಾಡಿ, ಪಠಿಸುವರೋ ಅವರಿಗೆ ಬಯಸಿದ ಇಷ್ಟಾರ್ಥಗಳು, ಭೋಗಗಳು ಲಭಿಸುತ್ತವೆ.

೧೧. ಇಂತಹ ಉಪಾಸಕನು ಮರಣಹೊಂದಿದ ಮೇಲೆ ಸ್ವರ್ಗ ಹೊಂದುತ್ತಾನೆ. ತಿರ್ಯಗ್ಯೋನಿಗಳಲ್ಲಿ (ಪಶುಪಕ್ಷಿಉರಗಾದಿ) ಹುಟ್ಟುವುದಿಲ್ಲ ಎಂದು ವ್ಯಾಸರು ಹೇಳುತ್ತಾರೆ.

## ಸಂದೇಶಗಳು-ವಿವರಣೆಗಳು

೧. ದಕ್ಷಪ್ರಜಾಪತಿ ಮಾಡಿದ ಅಶ್ವಮೇಧಯಾಗಕ್ಕೆ ಶಂಕರದೇವನಿಗೆ ಆಹ್ವಾನವನ್ನು ಕೊಟ್ಟಿರಲಿಲ್ಲ. ಅದು ಏಕೋ ಏನೋ ಎಂದು ಇಲ್ಲಿ ಸ್ಪಷ್ಟವಾಗಿಲ್ಲ. ಆದರೆ ಇದಕ್ಕೆ ಎಲ್ಲ ದೇವತೆಗಳ ಸಮ್ಮತಿ ಇತ್ತೆಂದು ಹೇಳಲಾಗಿದೆ. ಅದಕ್ಕೂ ಕಾರಣ ಗೊತ್ತಿಲ್ಲ(ಇಲ್ಲ).

೨. ರುದ್ರದೇವರೂ ಸಹ ತಮಗೆ ದೇವತಾಯಜ್ಞಗಳಲ್ಲಿ ಹವಿರ್ಭಾಗವಿರುವುದಿಲ್ಲ. ಆದ್ದರಿಂದ ದಕ್ಷಯಜ್ಞಕ್ಕೆ ಹೋಗುವುದಿಲ್ಲವೆಂದೂ, ಆ ನಿರ್ಣಯ ಬಹು ಹಿಂದೆಯೇ ಎಲ್ಲ ದೇವತೆಗಳೂ ನಿಯಮಾನುಸಾರವಾಗಿಯೇ ಮಾಡಿದ್ದಾರೆ ಎಂದು ಹೇಳುತ್ತಾರೆ. ಆದ್ದರಿಂದ ಇದರಲ್ಲಿ ದಕ್ಷನ ಅಪರಾಧವೂ (ಇಲ್ಲವೆನ್ನಿಸುತ್ತದೆ) ಅಸ್ಪಷ್ಟ ಭಾಗವತದಲ್ಲಿ ಇದು ಬೇರೆ ರೀತಿಯಾಗಿಯೇ ಇದೆ. ಹೀಗಾಗಿ ಭಾರತ, ಭಾಗವತಗಳ ಸಮನ್ವಯ ಕಷ್ಟಕರ. ಕಾಲ,

ಪುರುಷ, ವ್ಯತ್ಯಾಸಗಳ ಮಾನದಂಡವನ್ನು ಅನುಸರಿಸಬೇಕೋ ಏನೋ ತಿಳಿಯದು. ಈ ಬಗ್ಗೆ ಸಮಗ್ರ ಚಿಂತನೆ ಮೂಡುವುದು ಅವಶ್ಯವಿದೆ (Integrated approach in thinking).

೩. ಆದರೆ ಕೊನೆಗೆ ಶಿವಸ್ತುತಿವೇಳೆ ಶಿವನಿಗೆ ಆಮಂತ್ರಣ ಕೊಡದಿದ್ದುದಕ್ಕೆ ಕ್ಷಮೆ ಯಾಚಿಸುತ್ತಾನೆ ದಕ್ಷ, ಆದ್ದರಿಂದ ಅಪರಾಧವೆಂದು ಒಪ್ಪಿತವಾಯಿತು.

೪. ಪಾರ್ವತಿಯ ಮನೋದುಃಖದ ಪರಿಹಾರಕ್ಕಾಗಿ ಯಜ್ಞಧ್ವಂಸ ನಡೆಯುತ್ತದೆ. ಭಾಗವತದಲ್ಲಿ ಸ್ವಲ್ಪ ವ್ಯತ್ಯಾಸವಿದೆ. ಧ್ವಂಸವಾದುದು ಸಮವೇ.

೫. ಒಟ್ಟಾರೆ ದಕ್ಷನಕಿಂತಲೂ ಉತ್ತಮನಾದ ರುದ್ರದೇವರಿಗೆ ಅವಮಾನವಾದುದು ದಿಟ. ಅಂತೆಯೇ ಸ್ವೋತ್ತಮದ್ರೋಹಕ್ಕೆ ಕಾರಣವಾಗಿ ಯಜ್ಞನಾಶವಾಯಿತು. ಸಾಧಕನ ಸಾಧನೆಗೆ ವಿಘ್ನಗಳು ಬರುತ್ತವೆ ಹೀಗಾದಾಗ.

ಅದಕ್ಕೆ ಅವಕಾಶ ಕೊಡಬಾರದು ಸಾಧಕನು. ಇವೆಲ್ಲದಕ್ಕೂ ಭಾಗವತತಾತ್ಪರ್ಯವೇ ಅಂತಿಮ ನಿರ್ಣಯಾಂಶವಾಗಿದೆ.

೬. ದಕ್ಷ ತಪ್ಪು ಮಾಡಿದರೂ ಒಪ್ಪಿ ಅದನ್ನು ಮುಂದುವರೆಯಲು ಬಿಡದೆ ಕ್ಷಮೆ ಯಾಚಿ-ಸುತ್ತಾನೆ. ಅದು ಸಾಧಕನಲ್ಲಿರಬೇಕಾದ ಗುಣ. ಶಿವನೂ ಕ್ಷಮಿಸಿ ಆತನ ಯಜ್ಞನಾಶವಾಗಿದ್ದರೂ, ಅದರ ಆಚರಣೆಯ ಫಲವನ್ನು ದಯಪಾಲಿಸುತ್ತಾನೆ. ಸಂಪೂರ್ಣನಾಶವಾದರೂ ಪರಿಕರಗಳಿಂದ ಯಾವ ಫಲ ಬರಬೇಕೋ, ಅದೆಲ್ಲ ಸಿಗುತ್ತದೆ ದಕ್ಷನಿಗೆ. ಅದೇ ರುದ್ರದೇವರ ಭಕ್ತವಾತ್ಸಲ್ಯ. ಉನ್ನತ ಸ್ಥಾನದಲ್ಲಿರುವವರು ಭಕ್ತರ ಬಗ್ಗೆ ರುದ್ರನಂತೆ ವರ್ತಿಸಬೇಕು.

೭. ಶಿವಸ್ತುತಿ, ಸಹಸ್ರನಾಮಗಳಲ್ಲಿ ಒಂದು. ವಿಷ್ಣುಸಹಸ್ರನಾಮದ ನಂತರದ(ವಾಯುದೇವರ) ಸಹಸ್ರನಾಮಗಳಲ್ಲಿ ಇದಕ್ಕೆ ಪ್ರಾಮುಖ್ಯತೆ ಇದೆ. ಅವನ್ನು ಎಲ್ಲರೂ ಪಠಿಸಬೇಕು.

ಇತ್ಯಾದಿ...

# ೧೦೮. ಉಶನಸನು ಶುಕ್ರತ್ವ ಹೊಂದಿದ ಕಥೆ

ಯುಧಿಷ್ಠಿರನ ಪ್ರಶ್ನೆ –

'ತಾತ! ಭೃಗುವಿನ ಮಗ ಉಶನ. ಆತನು ದೇವರ್ಷಿ, ಸುರರಿಗೆ ಅಪ್ರಿಯ, ಅಸುರರಿಗೆ ಪ್ರಿಯನಾದ ಹೇಗೆ? ಆ ಶುಕ್ರನು ದೇವತೆಗಳಿಗೆ ತೊಂದರೆಯಾಗುವಂತೆ ಅಸುರರನ್ನು ಬೆಳೆಸಿದ ಏಕೆ? ಉಶನಸನು ಮಹಾತೇಜಸ್ವಿ, ಹೇಗೆ ಶುಕ್ರ ಎಂಬ ಹೆಸರನ್ನು ಹೇಗೆ ಪಡೆದ? ಹೇಗೆ ವೃದ್ಧಿ ಹೊಂದಿದ? ಆಕಾಶದ ಮಧ್ಯದಲ್ಲಿ ಮಹಾತೇಜಸ್ವಿಯಾಗಿದ್ದರೂ ಏಕೆ ಪ್ರಯಾಣ ಮಾಡುವುದಿಲ್ಲ? ಈ ಬಗ್ಗೆ ಸಮಗ್ರವಾಗಿ ತಿಳಿಸು.'

ಅದಕ್ಕೆ ಭೀಷ್ಮರು 'ನಾನು ಕೇಳಿದುದನ್ನು ಯಥಾಶಕ್ತಿ ತಿಳಿದಷ್ಟು ತಿಳಿಸುತ್ತೇನೆ' ಎಂದು ಹೇಳುತ್ತಾ ಶುಕ್ರಾಚಾರ್ಯರ ವೃತ್ತಾಂತವನ್ನು ಹೇಳಲಾರಂಭಿಸಿದರು.

ಭೃಗುವಿನ ಮಗನಾದ, ವ್ರತನಿಷ್ಠನಾದ, ಮನನಶೀಲನಾದ ಉಶನಸನು ಕಾರುಣ್ಯನಿಮಿತ್ತ ಅಸುರರಿಗೆ ಪ್ರಿಯನಾದನು. ಯಕ್ಷರಾಕ್ಷಸರಿಗೆ ರಾಜನಾದ ಐಶ್ವರ್ಯವಂತನಾದ ಕುಬೇರನು ಜಗತ್ತಿನ ಎಲ್ಲ ಐಶ್ವರ್ಯಕ್ಕೂ ಅಧ್ಯಕ್ಷ, ಒಡೆಯನಾಗಿದ್ದ[೧].

**ಮಹಾಮುನಿಯಾದ ಉಶನಸನು ತನ್ನ ಯೋಗಶಕ್ತಿಯಿಂದ ಕುಬೇರನನ್ನು ಪ್ರವೇಶಿಸಿ ಅವನ ಸಂಪತ್ತನ್ನೆಲ್ಲ ಅಪಹರಿಸಿದನು. ಇದರಿಂದ ಬೇಸರಗೊಂಡ ಕುಬೇರ ರುದ್ರದೇವರನ್ನು ಶರಣುಹೊಂದಿದ. ಇದರಿಂದ ಕ್ರುದ್ಧರಾದ ರುದ್ರದೇವರು ತಮ್ಮ ತ್ರಿಶೂಲವನ್ನು ಹಿಡಿದುಕೊಂಡು 'ಉಶನಸ್' ಎಲ್ಲಿ ಎಲ್ಲಿ? ಎಂದು ಗರ್ಜಿಸಿದರು. ಇದನ್ನು ತಮ್ಮ ಯೋಗಶಕ್ತಿಯಿಂದ ಗ್ರಹಿಸಿದ ಉಶನಸ್ ದೂರದಲ್ಲಿ ನಿಂತು ನಂತರ ದೂರ ಹೊರಟುಹೋದರು. ನಂತರ ಮಹೇಶ್ವರನನ್ನು ಧ್ಯಾನಿಸಿ, ಅವರ ತ್ರಿಶೂಲದ ತುದಿಯಲ್ಲಿಯೇ ಕಾಣಿಸಿಕೊಂಡರು. ಇದನ್ನು ಗ್ರಹಿಸಿದ ಶಿವನು ಧನುಸ್ಸಿನ ಕೈಯಿಂದ ಶೂಲವನ್ನು ಬಗ್ಗಿಸಿದನು.**

---

೧ ಇಂದ್ರೋಽಥ ಧನದೋ ರಾಜಾ ಯಕ್ಷರಕ್ಷೋಽಧಿಪಃ ಸ ಚ।
ಪ್ರಭವಿಷ್ಣುಶ್ಚ ಕೋಶಸ್ಯ ಜಗತಶ್ಚ ತಥಾ ಪ್ರಭುಃ॥ – ೧೨೨/೮
ವಿ.ಸೂ.: ಇಂದ್ರೋಽಥ ಧನದಃ ಇತ್ಯತ್ರ ಇಂದ್ರಃ ಐಶ್ವರ್ಯವಾನ್ ಎಂದು **ಲಕ್ಷಾಲಂಕಾರದಲ್ಲಿ** ಇಂದ್ರ ಎಂದರೆ ಐಶ್ವರ್ಯವಾನ್ ಎಂಬರ್ಥವನ್ನು ಗುರುರಾಜರು ವ್ಯಾಖ್ಯಾನಿಸಿದ್ದಾರೆ.
(ಇಂದ್ರ ಶಬ್ದ ಇಲ್ಲಿ ಧನದಃ ಎಂದರೆ ಕುಬೇರಶಬ್ದಕ್ಕೆ ವಿಶೇಷಣವಾಗಿದೆ)

ಧನುಸ್ಸಿನಂತೆ ಬಗ್ಗಿದ ಕಾರಣದಿಂದಾಗಿ ಶೂಲವನ್ನು ಪಿನಾಕ ಎಂದು ರುದ್ರದೇವನು ಕರೆದನು. ಅದು ಪಿನಾಕವೆಂದೂ ಅದನ್ನು ಹಿಡಿದ ರುದ್ರನು ಪಿನಾಕಿ ಎಂದೂ ಖ್ಯಾತರಾದರು[೧].

ರುದ್ರದೇವರು ತನ್ನ ಕೈಯ ಮಧ್ಯದಲ್ಲಿ ಉಶನಸ್ ಇರುವುದನ್ನು ನೋಡಿ ತನ್ನ ಬಾಯಿಯನ್ನು ತೆರೆದು ಬಾಯಿಗೆ ಉಸನಸ್‌ನನ್ನು ಹಾಕಿಕೊಂಡನು. ಉಸನಸ್‌ನು ಬಾಯಿಮೂಲಕ ರುದ್ರದೇವರ ಉದರವನ್ನು ಸೇರಿ ಅಲ್ಲಿಯೇ ಸಂಚರಿಸತೊಡಗಿದನು.

'ಉಮಾಪತಿಯ ಜಠರದಲ್ಲಿ ಉಶನಸನು ಏಕೆ ಸಂಚರಿಸಿದನು? ಅಲ್ಲಿ ಏನು ಮಾಡಿದನು?' ಎಂದು ಧರ್ಮರಾಜನು ಕೇಳಿದಾಗ ಭೀಷ್ಮರು 'ಮಹಾವ್ರತಸ್ಥನಾದ ಮಹದೇವನು ನಂತರ ಲಕ್ಷಕೋಟಿವರ್ಷಗಳವರೆಗೆ ನೀರಿನ ಮಧ್ಯೆ ತಪಸ್ಸನ್ನು ಮಾಡಿದನು. ತಪಸ್ಸು ಮುಗಿದಾಗ ಬ್ರಹ್ಮನು ಶಿವನಿಗೆ ದರ್ಶನ ಕೊಟ್ಟು ತಪಸ್ಸಿಗೆ ಸಂಬಂಧಿಸಿದ ಕುಶಲವನ್ನು ವಿಚಾರಿಸಿದನು. ಮಹದೇವನು ತಪಸ್ಸು ಚೆನ್ನಾಗಿ ಅನುಷ್ಠಾನ ಮಾಡಲಾಯಿತು ಎಂದು ನುಡಿದನು. ತನ್ನ ಉದರದಲ್ಲಿದ್ದ ಉಶನಸನೂ ಕೂಡ ತನ್ನ ತಪಸ್ಸಿನಿಂದ ವೃದ್ಧಿ ಹೊಂದಿದ್ದನ್ನು ರುದ್ರದೇವನು ಜ್ಞಾನದೃಷ್ಟಿಯಿಂದ ತಿಳಿದನು. ರುದ್ರದೇವರ ದೇಹದಲ್ಲಿದ್ದರಿಂದಲೇ ಉಶನಸನು ಮೂರುಲೋಕದಲ್ಲಿ ಪರಾಕ್ರಮಿಯಾಗಿ(ವೀರ್ಯವಂತನಾಗಿ) ವಿರಾಜಮಾನನಾದನು.

ಮತ್ತೆ ರುದ್ರದೇವರು ಧ್ಯಾನಮಗ್ನರಾದಾಗ ಉಶನಸನು ಕಳವಳಗೊಂಡು ಜಠರದಲ್ಲಿಯೇ ಉಳಿದನು(ಹೊರಗೆ ಹೋಗಲು ಅಸಾಧ್ಯವಾಗಿ). ಆದರೆ ಉಶನಸ್‌ನು ಉದರಲ್ಲಿದ್ದುಕೊಂಡ ಶಿವನನ್ನು ಸ್ತೋತ್ರಮಾಡಿ ಸಂತುಷ್ಟಗೊಳಿಸಿ ಹೊರಹೋಗಲು ಪ್ರಯತ್ನಿಸಿದರೂ ರುದ್ರದೇವರು ಹೊರಹೋಗದಂತೆ ತಡೆದರು. ಆದರೆ ಉಶನಸನು ನನ್ನನ್ನು ಅನುಗ್ರಹಿಸೆಂದು ಮತ್ತೆ ಮತ್ತೆ ಪ್ರಾರ್ಥಿಸುತ್ತಿದ್ದನು. ಆಗ ರುದ್ರದೇವನು ತನ್ನ ಶಿಶ್ನದಮೂಲಕ (ಜನನೇಂದ್ರಿಯ) ಹೋಗೆಂದು ಹೇಳುತ್ತಾ ಉಳಿದ ಮಾರ್ಗಗಳನ್ನು ತಡೆಹಿಡಿದನು. ಹೀಗಾಗಿ ರುದ್ರದೇವರ ತೇಜಸ್ಸಿನಿಂದ ದಹಿಸಲ್ಪಡುತ್ತಾ ಉದರದಲ್ಲಿಯೇ ಸಂಚರಿಸುತ್ತಿದ್ದನು. ಹೊರಬಂದ ಶಿವನ ಜನನೇಂದ್ರಿಯದಿಂದ ವೀರ್ಯರೂಪದಿಂದ(ಶುಕ್ರ) ಹೊರಬಂದುದರಿಂದ 'ಶುಕ್ರ' ಎಂಬ ಅನ್ವರ್ಥನಾಮವನ್ನೇ ಉಶನಸ್ ಹೊಂದಿದನು[೨]. ಹೀಗಾಗಿ ಉಶನಸ್‌ನು ಆಕಾಶಮಧ್ಯದಲ್ಲಿ

---

೧ ಸಂಚಿಂತ್ಯೋಗ್ರೇಣ ತಪಸಾ ಮಹಾತ್ಮಾನಂ ಮಹೇಶ್ವರಮ್ ।
ಉಶನಾ ಯೋಗಸಿದ್ಧಾತ್ಮಾ ಶೂಲಾಗ್ರೇ ಪ್ರತ್ಯದೃಶ್ಯತ ॥
ಆನತೇನಾಥ ಶೂಲೇನ ಪಾಣಿನಾಮಿತತೇಜಸಾ ।
ಪಿನಾಕಮಿತಿ ಚೋ ವಾಚ ಶೂಲಮುಗ್ರಾಯುಧಃ ಪ್ರಭುಃ ॥
ಪಾಣಿಮಧ್ಯಗತಂ ದೃಷ್ಟ್ವಾ ಭಾರ್ಗವಂ ತಮುಮಾಪತಿಃ ।
ಆಸ್ಯಂ ವಿವೃತ್ಯ ಕುಕುದೀ ಪಾಣಿಂ ಸಂಪ್ರಾಕ್ಷಿಪಚ್ಛನೈಃ ॥
ಸ ತು ಪ್ರವಿಷ್ಟ ಉಶನಾ ಕೋಷ್ಠಂ ಮಾಹೇಶ್ವರಂ ಪ್ರಭುಃ ॥ - ೧೨೨/೧೫-೨೦

೨ ಪುರಾ ಸೋಽಂತರ್ಜಲಗತಃ ಸ್ಥಾಣುಭೂತೋ ಮಹಾವ್ರತಃ ।
ವರ್ಷಾಣಾಮಭವತ್ ರಾಜನ್ ಪ್ರಯುತಾನ್ಯರ್ಬುದಾನಿ ಚ ॥ - ೧೨೨/೨೨

ಸಂಚರಿಸಲು ಅವಕಾಶವನ್ನು ಹೊಂದಲಿಲ್ಲ. ಹೊರಗೆ ಬಂದ ಉಶನಸನು ತೇಜಸ್ಸಿನಿಂದ ಪ್ರಜ್ವಲಿಸುತ್ತಿರುವುದನ್ನು ನೋಡಿದ ಶಿವನು ಸಿಟ್ಟಿನಿಂದ ಶೂಲವನ್ನು ಮೇಲೆತ್ತಿ ಹೊಡೆಯಲು ಉದ್ಯುಕ್ತನಾಗಲು ಪಾರ್ವತಿಯು ಪತಿಯನ್ನು ತಡೆದು, 'ಪತಿದೇವನೇ! ಇವನು (ಉಶನಸ್‌ನು) ನನಗೆ ಪುತ್ರನಂತೆ ಆಗಿದ್ದಾನೆ. ಅವನು ಸಂಹಾರಕ್ಕೆ ಯೋಗ್ಯನಲ್ಲ. ನಿನ್ನ ಉದರದಿಂದ ಹೊರಬಂದ ಯಾರೇ ಆದರೂ ವಿನಾಶಹೊಂದಬಾರದಷ್ಟೇ' ಎಂದಳು[೧]. ಉಮಾದೇವಿಯ ಮಾತಿನಿಂದ ಸಂತುಷ್ಟನಾದ ಪರಮೇಶ್ವರನು ನಗುತ್ತಾ ಶುಕ್ರನು ಎಲ್ಲಿಗಾದರೂ ಇಚ್ಛೆಬಂದಲ್ಲಿ ಹೋಗಲಿ ಎಂದನು[೨].

ನಂತರ ಶುಕ್ರನು ವರದನಾದ ರುದ್ರದೇವರನ್ನು ಪಾರ್ವತಿಯನ್ನು ನಮಿಸಿ ತನ್ನ ಇಚ್ಛಾನುಸಾರ ಹೊರಟನು[೩].

ನೋಡು ಧರ್ಮರಾಜ ಭಾರ್ಗವನ ಚರಿತ್ರೆಯನ್ನು ಹೇಳಿದ್ದೇನೆ ಎಂದು ಭೀಷ್ಮರು.

## ಸಂದೇಶಗಳು–ವಿವರಣೆಗಳು

೧. ಅಸುರರಿಗೆ ಶುಕ್ರಾಚಾರ್ಯರು ಪ್ರಿಯರಾದ ಬಗ್ಗೆ ಪ್ರತ್ಯೇಕ ಇತಿಹಾಸವಿದೆ. ಅದನ್ನು ಅಲ್ಲಿಯೆ ನೋಡಬೇಕು.

---

ಉದತಿಷ್ಠತ್ತಪಸ್ತಪ್ತ್ವಾ ದುಶ್ಚರಂ ಸ ಮಹಾಹ್ರದಾತ್ ।
ತತ್ಸಂಯೋಗೇನ ವೃದ್ಧಿಂ ಚಾಪ್ಯಪಶ್ಯತ್ ಸ ತು ಶಂಕರಃ ॥
ಸ ತೇನಾಢ್ಯೋ ಮಹಾಯೋಗೀ ತಪಸಾ ಚ ಧನೇನ ಚ ।
ವ್ಯರಾಜತ ಮಹಾರಾಜ ತ್ರಿಲೋಕೇಷು ವೀರ್ಯವಾನ್ ॥
ಉಶನಾ ತು ಸಮುದ್ವಿಗ್ನೋ ನಿಲಿಲ್ಯೇ ಜಠರೇ ತತಃ ।
ತುಷ್ಟಾವ ಚ ಮಹಾಯೋಗೀ ದೇವಂ ತತ್ರಸ್ಥ ಏವ ಚ ॥
ಪ್ರಸಾದಂ ಮೇ ಕುರುಷ್ವೇತಿ ಪುನಃ ಪುನರರಿಂದಮ ।
ತಮುವಾಚ ಮಹಾದೇವೋ ಗಚ್ಛ ಶಿಶ್ನೇನ ಮೋಕ್ಷಣಮ್ ॥
ಸ ನಿಷ್ಕ್ರಮ್ಯ ಶಿಶ್ನೇನ ಶುಕ್ರತ್ವಮಭಿಪೇದಿವಾನ್ ।
ಕಾರ್ಯೇಣ ತೇನ ನಭಸೋ ನಾಗಚ್ಛತ ಚ ಮಧ್ಯತಃ ॥
ಭವೋ ರೋಷಸಮಾವಿಷ್ಟಃ ಶೂಲೋದ್ಯತ ಕರಃ ಸ್ಥಿತಃ ।
ನ್ಯವಾರಯತ ತಂ ದೇವೀ................
ಪುತ್ರತ್ವಮಗಮದ್ದೇವ್ಯಾ ವಾರಿತೇ ಶಂಕರೇ ಚ ಸಃ ॥
೧ ಹಿಂಸನೀಯ ಸ್ತ್ವಯಾ ನೈಷ ಮಮ ಪುತ್ರತ್ವಮಾಗತಃ ।
ನ ಹಿ ದೇವೋದರಾತ್ ಕಶ್ಚಿತ್ ನಿಷ್ಕ್ರಾಂತೋ ನಾಶಮರ್ಹತಿ ॥
೨ ತತಃ ಪ್ರೀತೋಽಭವದ್ದೇವ್ಯಾಃ ಪ್ರಹಸಂಶ್ಚೇದಮಬ್ರವೀತ್ ।
ಗಚ್ಛತ್ವೇಷ ಯಥಾಕಾಮಮಿತಿ ....................... ॥
೩. ತತಃ ಪ್ರಣಮ್ಯ ವರದಂ ದೇವಂ ದೇವೀಮುಮಾಂ ತಥಾ ।
ಉಶನಾ ಪ್ರಾಪ ತದ್ಧೀಮಾನ್ ಗತಿಮಿಷ್ಟಾಂ ಮಹಾಮುನಿಃ ॥ – ೧೨೨/೨೨-೩೮

೨. ತಮ್ಮ ಯೋಗಶಕ್ತಿಯಿಂದ ಕುಬೇರನ ಐಶ್ವರ್ಯ ಅಪಹರಿಸಿದ್ದು ಅದ್ಭುತ. ಇದೂ ಕೂಡಾ ಅಸುರರಿಗೆ ನೆರವಾಗಲು ಇರಬೇಕು (?). ಇದೊಂದು ಊಹೆ, ವಿಚಾರಣೀಯ.

೩. ಕುಬೇರನ ನೆರವಿಗೆ ನಿಂತವರು ರುದ್ರದೇವರು. ಸ್ನೇಹಿತ ರುದ್ರ ಮತ್ತು ಕುಬೇರನು ಉತ್ತರದಿಕ್ಪಾಲಕ. ರುದ್ರದೇವರು ಈಶಾನ್ಯದಿಕ್ಕಿಗೆ ದಿಕ್ಪಾಲಕರು. ಅಲ್ಲದೇ ಹೆಚ್ಚಾಗಿ ಕುಬೇರನು ಶರಣಾದುದಕ್ಕಾಗಿ ಬಿಡಲಿಲ್ಲ. ಶರಣಾಗತರನ್ನು ಯಾರೂ ವಿಶೇಷವಾಗಿ ರುದ್ರದೇವರಂತಹ ಸಮರ್ಥರು ಬಿಡರು. ಅವರನ್ನು ಶರಣಾದರೆ ನಮಗೆ ಏನು ತಾನೇ ಸಿಗದು?

೪. ರುದ್ರದೇವರಿಗೆ ವಿರೋಧ ಮಾಡದೆ ಅವರನ್ನು ಸ್ತುತಿ ಮಾಡುತ್ತಲೇ ಅವರ ಉದರದಲ್ಲಿದ್ದೇ ತಪಸ್ಸನ್ನು ಮಾಡುವುದು. ಅವರ ತಪಸ್ಸಿನ ಲಾಭ ಪಡೆದವರು ಉಶನಸ್. ಸ್ವೋತ್ತಮರೊಡನೆ ವಾಸ ತಪಸ್ಸಾಧನೆಗೆ ಇರಬೇಕೇ ಹೊರತು ಯಾವುದೇ ಭೋಗಭಾಗ್ಯಕ್ಕಲ್ಲ. ಅದೂ ಲಕ್ಷಾವಧಿ ವರ್ಷಗಟ್ಟಲೆ.

೫. ಅವರಿಂದ ಹೊರಬಂದುದು ಅವರ ಪುತ್ರತ್ವ ಖ್ಯಾತಿಗೂ ಸಾಧಕವಾಯಿತು. ಸ್ವೋತ್ತಮರ ಸಹವಾಸ, ಅವರ ಮಕ್ಕಳಾಗುವ ಭಾಗ್ಯ ಸಿಕ್ಕಿತು. ಇದರಲ್ಲಿ ಜಗನ್ಮಾತೆಯಾದ ಉಮಾದೇವಿಯ ಕಾರಣ್ಯಪೂರ್ಣ ಅನುಗ್ರಹ, ಉಶನಸ್ ಹೇಗೆ ಶುಕ್ರರಾದರು, ಅವರನ್ನು ಆಶ್ರಯಿಸಿದವರೂ ಶುಕ್ರರಾಗುತ್ತಾರೆ, ಶುದ್ಧರಾಗುತ್ತಾರೆ.

ಇತ್ಯಾದಿ ....

# ೧೧೯. ಮೃತ್ಯು ದಾಟುವ ಉಪಾಯ

ಧರ್ಮರಾಜನು ಭೀಷ್ಮರನ್ನು ಕೇಳುತ್ತಾನೆ –

'ತಾತ! ಭಾರೀ ಐಶ್ವರ್ಯ, ಧನ, ದೀರ್ಘಾಯುಷ್ಯ, ಮಹಾತಪಸ್ಸು, ವೇದೋಕ್ತ-ಕರ್ಮಾನುಷ್ಠಾನ, ಶಾಸ್ತ್ರಾಧ್ಯಯನ ಅಥವಾ ರಸಾಯನಸೇವನೆಗಳಿಂದ ಮುಪ್ಪು ಮರಣಗಳನ್ನು ದಾಟಬಹುದೇ?' ಇದಕ್ಕೆ ಭೀಷ್ಮರು ಜನಕಮಹಾರಾಜ ಹಾಗೂ ಸನ್ಯಾಸಿಯಾದ ಪಂಚಶಿಖರ ಸಂವಾದ ರೂಪ ಇತಿಹಾಸವನ್ನು ಹೇಳುತ್ತಾರೆ (ಭಿಕ್ಷು-ಸನ್ಯಾಸಿ-ಯತಿ).

ವಿದೇಹನಗರ ರಾಜನಾದ ಜನಕನು ವೇದಗಳನ್ನು ಬಲ್ಲವರಲ್ಲಿಯೇ ಉತ್ತಮನಾದ, ಧರ್ಮಾರ್ಥಗಳ ಬಗ್ಗೆ ಸಂಶಯ ಪರಿಹರಿಸಿಕೊಂಡ ಪಂಚಶಿಖನನ್ನು ಪ್ರಶ್ನಿಸಿದ.

ಮನುಷ್ಯನು ಯಾವ ನಡತೆಯಿಂದ ಆಚರಣೆಯಿಂದ, ತಪಸ್ಸಿನಿಂದ, ವೇದಾಧ್ಯಯನ-ದಿಂದ, ಯಜ್ಞಯಾಗಾದಿ ಕರ್ಮಗಳಿಂದ ಮುಪ್ಪು ಮತ್ತು ಮರಣಗಳನ್ನು ಗೆಲ್ಲಬಹುದು ಎಂದು.

ಇದಕ್ಕೆ ಪ್ರತ್ಯಕ್ಷ ಜ್ಞಾನಿಯಾದ (ಪರೋಕ್ಷಜ್ಞಾನಿ) ಪಂಚಶಿಖನು ಜನಕಮಹಾರಾಜನಿಗೆ ಹೀಗೆ ಉತ್ತರಿಸಿದನು.

೧. ಮುಪ್ಪು ಮರಣಗಳನ್ನು ದಾಟುವ ಯಾವುದೇ ಉಪಾಯಗಳಿಲ್ಲ. ಇವುಗಳಿಗೆ ನಿವೃತ್ತಿಯೇ ಇಲ್ಲ[೧].

೨. ಹೋದ ಹಗಲು, ರಾತ್ರಿ, ಮಾಸಗಳಾವು ಯಾವರೀತಿಯಾಗಿ ಮತ್ತೆ ಬರುವುದಿಲ್ಲವೋ ಹಾಗೇನೇ ಎಲ್ಲ ಜೀವರನ್ನು ಸಂಹರಿಸುತ್ತಾ ತಾನೊಂದೇ ಅನಂತಕಾಲದಿಂದ ನಡೆಯುತ್ತಿರುವ ಕಾಲವು ಒಂದು ಪ್ರವಾಹದಂತಿದೆ. ಈ ಭಯಂಕರ ಸಂಸಾರ ಸಮುದ್ರದಲ್ಲಿ ಕೊಚ್ಚಿಹೋಗುವ ಜೀವರನ್ನು (ದೇಹಿಗಳನ್ನು) ಹಿಡಿದು ಯಾರೂ ನಿಲ್ಲಿಸಲಾರರು. ಈ ಕಾಲಸಾಗರವನ್ನು ದಾಟಲು ಒಂದು ನೌಕೆಯೆಂಬುದೂ ಇಲ್ಲ. ಜರಾಮರಣಗಳೆಂಬ ಮಹಾ ಮೊಸಳೆಗಳು ಎಲ್ಲ ಜೀವರನ್ನು ಕೊಲ್ಲಲು ಕಾದು ನಿಂತಿವೆ[೨].

ಈ ಜೀವಿಗೆ ಸಂಬಂಧಿಸಿರುವನೆಂದು ಬೇರೆ ಯಾವ ಜೀವರೂ ಇಲ್ಲ. ಸಂಸಾರದಲ್ಲಿ ಸಂಧಿಸುವ ಪತಿ, ಪತ್ನಿ, ಮಕ್ಕಳು, ಬಂಧುಗಳೆಲ್ಲರೂ ಅನೇಕ ಕಡೆಗಳಿಂದ ಬಂದು ಒಂದೆಡೆ ಕೆಲಕಾಲ

---

೧ ನಿವೃತ್ತಿರ್ನೈತಯೋರಸ್ತಿ ನಾ ನಿವೃತ್ತಿಃ ಕಥಂಚನ। – ೧೫೧/೬

೨ ನ ಹ್ಯಹಾನಿ ನಿವರ್ತಂತೇ ನ ಮಾಸಾ ನ ಪುನಃ ಕ್ಷಪಾಃ।
ಸೋಽಯಂ ಪ್ರಪದ್ಯತೇಽಧ್ವಾನಂ ಚಿರಾಯ ಧ್ರುವಮಧ್ರುವಃ॥
.............
ಜರಾಮೃತ್ಯು ಮಹಾಗ್ರಾಹೇ ನ ಕಶ್ಚಿತ್ ಅಭಿಪದ್ಯತೇ॥ – ೧೫೧/೭,೮

ಸಂಧಿಸುವವರು ಮಾತ್ರ. ಇವರೊಡನೆ ಹಿಂದೆ ಮುಂದೆ ಆತ್ಯಂತಿಕ(ಶಾಶ್ವರ) ಸಂಬಂಧವೇನೂ ಇರದು[೧].

ಎಲ್ಲ ಜೀವರನ್ನು (ಭೂತಗಳನ್ನು) ಅವು ದುರ್ಬಲ, ಪ್ರಬಲ, ಸಣ್ಣವರು, ದೊಡ್ಡವರು ಎಂದು ನೋಡದೇ ಮುಪ್ಪು, ಮರಣಗಳು ಎಲ್ಲರನ್ನೂ ತೋಳಗಳಂತೆ ಹಿಡಿದು ತಿನ್ನುತ್ತವೆ. ಆದ್ದರಿಂದ ಇಂತಹ ಅಸ್ಥಿರತೆಗೆ ಶಾಶ್ವತವಾಗಿ ಒಳಗಾಗಿರುವ ಭೂತಗಳು ಹುಟ್ಟಿದಾಗ ಅಥವಾ ಸತ್ತಾಗ ದುಃಖಕ್ಕೆ ಕಾರಣವೇ ಇಲ್ಲ.

ನಾನು ಯಾರು? ಎಲ್ಲಿಂದ ಬಂದೆ? ಮತ್ತೆ ಎಲ್ಲಿಗೆ ನನ್ನ ಪಯಣ? ನಾನು ಯಾರಿಗ ಸಂಬಂಧಿ? ಈಗ ಎಲ್ಲಿದ್ದೇನೆ? ಮುಂದೇನಾಗುತ್ತೇನೆ? ಇಲ್ಲಿ ಬರಲು ಕಾರಣವಾದರೂ ಏನು? ಈ ವಿಷಯಗಳ ಬಗ್ಗೆ ನಮಗೇನೂ ತಿಳಿಯದು, ಕಾರಣ ನಾವೆಲ್ಲ ಸ್ವತಂತ್ರರಲ್ಲ. ರಾಜನ್! (ಜನಕನೇ!) ನಾವು ಬದುಕಿರುವಾಗಲೇ ಯಾರೂ ಸ್ವರ್ಗ, ನರಕ ನೋಡಿಲ್ಲ. ಆದ್ದರಿಂದ (ಇವುಗಳೆಲ್ಲವನ್ನು ತಿಳಿಸುವ) ವೇದವಿಧಿಗಳನ್ನು ಮೀರದೆ ಅವನ್ನು ನಂಬಿ ಅವುಗಳ ಆದೇಶದಂತೆ ಯಜ್ಞದಾನಾದಿಗಳನ್ನು ಮಾಡಬೇಕು[೨].

## ಸಂದೇಶಗಳು-ವಿವರಣೆಗಳು

೧. ಜೀವನ ದೇಹ, ಗೇಹ, ಪತ್ನಿ, ಪತಿ, ಸುತಾದಿ ಬಾಂಧವರೆಲ್ಲರ ಸಂಬಂಧಗಳು ಅಶಾಶ್ವತ.

೨. ಆದರೂ ಅವರೊಡನಿದ್ದು ವೇದೋಕ್ತವಿಧಿಗಳಿಂದ ಯಜ್ಞದಾನಾದಿ ಸತ್ಕರ್ಮಾನುಷ್ಠಾನ ಮಾಡಬೇಕು.

ಆದರಿಂದ ಅಂತಃಕರಣಶುದ್ಧಿ ದ್ವಾರಾ ಭಗವಂತನ ಜ್ಞಾನವನ್ನೂ, ವೇದಗಳಿಂದಲೇ ಸಂಪಾದಿಸಿ, ಅಪರೋಕ್ಷಜ್ಞಾನ ಪಡೆದು ಮೋಕ್ಷ ಹೊಂದಬೇಕು. ಅದುವೇ ಜರಾಮರಣ ದಾಟುವ ಉಪಾಯ.

ಇತ್ಯಾದಿ...

*****

---

೧ ನೈವಾಸ್ಯ ಭವತಾಂ ಕಶ್ಚಿತ್ ನಾಸೌ ಭವತಿ ಕಶ್ಚಿತ್ ।
ಪಥಿ ಸಂಗತಿಮೇವೇದಂ ದಾರೈರನ್ಯೈಶ್ಚ ಬಂಧುಭಿಃ ।
ನಾಯಮತ್ಯಂತ ಸಂವಾಸೋ ಲಬ್ಧಪೂರ್ವೋ ಹಿ ಕೇನಚಿತ್ ॥ - ೧೫೧/೯

೨ ಕುತೋಽಹಮಾಗತಃ ಕೋಽಸ್ಮಿ ಕ್ವ ಗಮಿಷ್ಯಾಮಿ ಕಸ್ಯ ವಾ ।
ಕಸ್ಮಿನ್ ಸ್ಥಿತಃ ಕ್ವ ಭವಿತಾ ಕಸ್ಮಾತ್ ಕಿಮನುಶೋಚಸಿ ॥
ದ್ರಷ್ಟಾ ಸ್ವರ್ಗಸ್ಯ ನಹ್ಯಸ್ತಿ ತಥೈವ ನರಕಸ್ಯ ಚ ।
ಆಗಮಾಂಸ್ತ್ವನತಿಕ್ರಮ್ಯ ದದ್ಯಾಚ್ಚೈವ ಯಜೇತ ಚ ॥ - ೧೩೧/೧೩,೧೪

# ೧೧೦. ಜನಕರಾಜ-ಸುಲಭಾ ಸಂವಾದ

## (ಮುಕ್ತರ ಲಕ್ಷಣಗಳು)

ಧರ್ಮರಾಜನು ಭೀಷ್ಮರನ್ನು ಕುರಿತು 'ತಾತ! ಗೃಹಸ್ಥಾಶ್ರಮದಲ್ಲಿದ್ದೂ ಸಿದ್ಧಿ ಪಡೆದ ಉದಾಹರಣೆ ಉಂಟೇ? ಇಂತಹ ಮೋಕ್ಷತತ್ತ್ವದ ಬಗ್ಗೆ ತಿಳಿಸು ಎಂದ[೧].

ಆದಕ್ಕೆ ಭೀಷ್ಮರು **ಸುಲಭಾದೇವಿ** ಹಾಗೂ **ಜನಕ ಮಹಾರಾಜ** ಇವರ ಸಂವಾದ ರೂಪ ಇತಿಹಾಸವನ್ನು ಧರ್ಮರಾಜನಿಗೆ ಹೇಳಿದರು.

ಸನ್ನ್ಯಾಸಧರ್ಮದ ಫಲವನ್ನು ಪಡೆದ ಧರ್ಮಧ್ವಜನೆಂದು ಪ್ರಸಿದ್ಧನಾದ ಮಿಥಿಲಾ ನಗರದ ರಾಜ ಜನಕ ಇದ್ದನು. ಅವನು ವೇದ, ಮೋಕ್ಷ ಶಾಸ್ತ್ರ ತನ್ನ ಕುಲಧರ್ಮವಾದ ರಾಜಧರ್ಮಗಳಲ್ಲಿ ನಿಷ್ಣಾತನಾಗಿ ಇಂದ್ರಿಯಗಳನ್ನು ಜಯಿಸಿದವನಾಗಿ ಭೂಮಿಯನ್ನು ಆಳುತ್ತಿದ್ದನು(ಮಿಥಿಲೆ-ವಿದೇಹನಗರ ರಾಜಧಾನಿಯಾಗಿತ್ತು). ಆತನ ಸಜ್ಜನಿಕೆಯನ್ನು ಕೇಳಿದ ವೇದಜ್ಞಾನಿಗಳು ಅವನ ಬಳಿಗೆ ಬರುತ್ತಿದ್ದರು (ಸತ್ಸಂಗಕ್ಕಾಗಿ, ಜ್ಞಾನಾಪೇಕ್ಷಿಗಳಾಗಿ). ಅಂತಹ (ಧರ್ಮಯುಗದಲ್ಲಿ) ಧರ್ಮಾಚರಣೆಯ ಕಾಲದಲ್ಲಿ '**ಸುಲಭಾ**' ಎಂಬ ಸನ್ನ್ಯಾಸಿನಿಯು, ಜನಕರಾಜನು ಮೋಕ್ಷದ ವಿಷಯವನ್ನು ಹೇಳುತ್ತಾನೆಂಬ ಪ್ರಶಂಸೆಯ ಮಾತುಗಳನ್ನು ತ್ರಿದಂಡಿ ಸನ್ನ್ಯಾಸಿಗಳಿಂದ ಕೇಳಿ, ಅದರ ಸತ್ಯಾಸತ್ಯತೆಯನ್ನು ತಿಳಿಯಲು ಕೂಡಲೇ ತನ್ನ ಯೋಗಶಕ್ತಿಯಿಂದ ಸನ್ನ್ಯಾಸವೇಷ ತ್ಯಜಿಸಿ ಸ್ಫುರದ್ರೂಪ ಧರಿಸಿ ಮಿಥಿಲೆಗೆ ಭಿಕ್ಷೆ ಬೇಡುವ ನೆಪದಿಂದ ಅರಮನೆಗೆ ಸಾಗಿ ರಾಜನನ್ನು ನೋಡಿದಳು[೨].

ತನ್ನ ಅರಮನೆಗೆ ಬಂದ ಆ ಸುಂದರ ಮಹಿಳಾ ಅತಿಥಿಯನ್ನು ಜನಕ ಮಹಾರಾಜನು ಅರ್ಘ್ಯ, ಪಾದ್ಯ, ಆಸನ, ಭೋಜನಗಳಿಂದ ಸತ್ಕರಿಸಿದನು.

---

೧ ಅಪರಿತ್ಯಜ್ಯ ಗಾರ್ಹಸ್ಥ್ಯಂ ಕುರು ರಾಜರ್ಷಿಸತ್ತಮ।
ಕಃ ಪ್ರಾಪ್ತೋ ವಿನಯಂ ಬುದ್ಧ್ಯಾ ಮೋಕ್ಷತತ್ತ್ವಂ ವದಸ್ವ ಮೇ॥ - ೧೩೨/೧(ವೈ.ಪಾ.)

೨ ಅಥ ಧರ್ಮಯುಗೇ ತಸ್ಮಿನ್ ಯೋಗಧರ್ಮಮನುಷ್ಠಿತಾ।
ಮಹೀಮನುಚಚಾರೈಕಾ ಸುಲಭಾ ನಾಮ ಭಿಕ್ಷುಕೀ॥
ತತ್ರ ತತ್ರ ಶ್ರುತೋ ಮೋಕ್ಷೇ ಕಥ್ಯಮಾನಸ್ತ್ರಿದಂಡಭಿಃ।
ಸಾ ಸುಸೂಕ್ಷ್ಮಾಂ ಕಥಾಂ ಶ್ರುತ್ವಾ ತಥ್ಯಂ ನೇತಿ ಸಸಂಶಯಾ॥
ದರ್ಶನೇ ಜಾತಸಂಕಲ್ಪಾ ಜನಕಸ್ಯ ಬಭೂವ ಹ।
ತತಃ ಸಾ ವಿಪ್ರಹಾಯಾಥ ಪೂರ್ವರೂಪಂ ಹಿ ಯೋಗತಃ॥
ಅಬಿಭ್ರದನವದ್ಯಾಂಗೀ ರೂಪಮನ್ಯದನುತ್ತಮಮ್॥
ಚಕ್ಷುರ್ನಿಮೇಷಮಾತ್ರೇಣ ಲಘ್ವಸ್ತ್ರಗತಿಗಾಮಿನೀ।
ವಿದೇಹಾನಾಂ ಪುರೀಂ ಸುಭ್ರೂರ್ಜಗಾಮ ಕಮಲೇಕ್ಷಣಾ॥
ಭೈಕ್ಷಚರ್ಯಾಪದೇಶೇನ ದದರ್ಶ ಮಿಥಿಲೇಶ್ವರಮ್। - ೧೩೨/೬-೧೨

ನಂತರ ಎಲ್ಲ ಭಾಷ್ಯಗಳನ್ನು ಬಲ್ಲ ವಿದ್ವಾಂಸರ ಮಧ್ಯೆ ಮತ್ತು ಮಂತ್ರಿಗಳ ಮಧ್ಯೆ ವಿರಾಜಮಾನನಾದ ರಾಜನನ್ನು ಮಾತನಾಡಿಸಲು ಪ್ರಚೋದಿಸಿದಳು. ನಂತರ ರಾಜನು ಯೋಗಧರ್ಮಗಳಲ್ಲಿ ತನ್ನಂತೆ ಮುಕ್ತನಾಗಿದ್ದಾನೋ ಇಲ್ಲವೋ ಎಂಬ ಸಂದೇಹದಿಂದ ತನ್ನ ಯೋಗಶಕ್ತಿಯಿಂದ ಆತನ ಕಣ್ಣುಗ್ಗಳನ್ನು, ತನ್ನ ಕಣ್ಣುಗಳಿಂದ, ತನ್ನ ಕಣ್ಣಿನ ಕಿರಣಗಳಿಂದ ರಾಜನ ಕಣ್ಣಿನ ಕಿರಣಗಳನ್ನು ಪ್ರವೇಶಿಸಿ ರಾಜನನ್ನು ತನ್ನ ಯೋಗಶಕ್ತಿಯಿಂದ ಬಂಧಿಸಿದಳು.

ಹೀಗೆ ಸುಲಭೆಯ ದುರುದ್ದೇಶವರಿತ ರಾಜನು ಮುಗುಳ್ನಗೆಯಿಂದಲೇ ಅವಳ ಮನಸ್ಸನ್ನು ಬಂಧಿಸಿದನು. ಸುಲಭೆ ತ್ರಿದಂಡಿಯಾಗಿ ಸನ್ಯಾಸ ಚಿಹ್ನೆಗಳಿಂದ ಮುಕ್ತಳಾಗಿದ್ದಳು. ರಾಜನು ರಾಜಸೂಚಕ ಛತ್ರಾದಿ ಚಿಹ್ನೆಗಳಿಂದ ಮುಕ್ತನಾಗಿದ್ದನು. ಈರ್ವರೂ ಒಂದೇ ಮನಸ್ಸಿನ ಅಧಿಷ್ಠಾನದಿಂದ ಸಂವಾದ ಮಾಡತೊಡಗಿದರು[೧].

ಮೊದಲು ಜನಕರಾಜನು ತನ್ನ ಮನಸ್ಸಿನಲ್ಲಿ ಆಕ್ರಮಿಸಿರುವ **'ಸುಲಭೆ'** ಪರಕಾಯಪ್ರವೇಶವನ್ನು ತುಂಬಾ ಗೌರವಪೂರ್ಣವಾಗಿ ಹಾಗೂ ವಿಮರ್ಶೆ ದೃಷ್ಟಿಯಿಂದ ಪ್ರಶ್ನಿಸಲಾರಂಭಿಸಿದನು. ಅದರ ಸಂಕ್ಷಿಪ್ತ ಭಾವಾನುವಾದ ಹೀಗಿದೆ.

೧. ಎಲೈ ಪೂಜ್ಯಳೇ! ನೀನು ಈ ಯೋಗಚರ್ಯೆಯನ್ನು ಯಾರಲ್ಲಿ ಕಲಿತಿರುವೆ? ಈಗ ಎಲ್ಲಿಗೆ ಹೋಗುತ್ತಿರುವೆ? ಎಲ್ಲಿಂದ ಬಂದಿರುವೆ? ನೀನು ಯಾರಿಗೆ ಸಂಬಂಧಿಸಿದವಳು?[೨]

೨. ನಿನ್ನ ಶಾಸ್ತ್ರಜ್ಞಾನ, ವಯಸ್ಸು ಜಾತಿ ವಿಷಯಗಳಲ್ಲಿ ನಿನ್ನ ಒಳ್ಳೆಯತನ ನನಗೆ ತಿಳಿಯುತ್ತಿಲ್ಲ? ಈ ಬಗ್ಗೆ ನನಗೆ ತಿಳಿಸು.

೩. ನನ್ನ ಬಗ್ಗೆ ನಿನಗೆ ತಿಳಿಸಲು ಇಚ್ಛಿಸುತ್ತೇನೆ. ಕೇಳು

i. ನೀನು ನನಗೆ ಪೂಜ್ಯಳು. ನೀನು ಗೌರವಕ್ಕೆ ಅರ್ಹಳು. ನಾನು ಛತ್ರಚಾಮರಾದಿ ರಾಜಚಿಹ್ನೆಗಳಿಂದ ಕೂಡಿದ್ದರೂ, ಅವುಗಳಿಂದ (ಸಂಗ) ಮುಕ್ತನೇ ಆಗಿದ್ದೇನೆ[೩].

---

೧ ಸುಲಭಾ ತ್ವಸ್ಯ ಧರ್ಮೇಷು ಮುಕ್ತೋ ನೇತಿ ಸಸಂಶಯಾ ।
ಸತ್ತ್ವಂ ಸತ್ತ್ವೇನ ಯೋಗಜ್ಞಾ ಪ್ರವಿವೇಶ ಮಹೀಪತೇಃ ॥
ನೇತ್ರಾಭ್ಯಾಂ ನೇತ್ರಯೋರಸ್ಯ ರಶ್ಮೀನ್ ಸಂಯೋಜ್ಯ ರಶ್ಮಿಭಿಃ ।
ಸಾ ಸ್ಮ ಸಂಚೋದಯಿಷ್ಯಂತಂ ಯೋಗಬಂಧೈರ್ಬಬಂಧ ಹ ॥
ಜನಕೋಽಪ್ಯುತ್ಸ್ಮಯನ್ರಾಜಾ ಭಾವಮಸ್ಯಾ ವಿಶೇಷಯನ್ ।
ಪ್ರತಿಜಗ್ರಾಹ ಭಾವೇನ ಭಾವಮಸ್ಯಾ ನೃಪೋತ್ತಮಃ ॥
ತದೇಕಸ್ಮಿನ್ನಧಿಷ್ಠಾನೇ ಸಂವಾದಃ ಶ್ರೂಯತಾಮಯಮ್ ।
ಛತ್ರಾದಿಷು ವಿಮುಕ್ತಸ್ಯ ಮುಕ್ತಾಯಾಶ್ಚ ತ್ರಿದಂಡಕೇ ॥ - ೧೫೨/೧೬-೧೯

೨ ಭಗವತ್ಯಾಃ ಕ್ವ ಚರ್ಯೇಯಂ ಕೃತಾ ಕ್ವ ಚ ಗಮಿಷ್ಯಸಿ ।
ಕಸ್ಯ ಚ ತ್ವಂ ಕುತೋ ವೇತಿ ಪಪ್ರಚ್ಛೈನಾಂ ಮಹೀಪತಿಃ ॥ - ೧೫೨/೨೦

೩ ಛತ್ರಾದಿಷು ವಿಶೇಷೇಷು ಮುಕ್ತಂ ಮಾ ವಿದ್ಧಿ ಸರ್ವಶಃ ।

ii. ನನ್ನ ಗುರು ಪರಾಶರಗೋತ್ರದ ಜ್ಞಾನಿಯಾದ ಪಂಚಶಿಖನೆಂಬ ಸನ್ಯಾಸಿ. ಅವರು ಸಾಂಖ್ಯ, ಯೋಗ, ರಾಜನೀತಿಶಾಸ್ತ್ರಗಳೆಂಬ ಮೂರು ವಿಧವಾದ ಮೋಕ್ಷಧರ್ಮಗಳನ್ನು ಸಂಶಯಾತೀತವಾಗಿ ತಿಳಿದುಕೊಂಡವರು. ನಾನು ಅವರಿಂದ ಮೂರುವಿಧವಾದ ಮೋಕ್ಷಧರ್ಮಗಳನ್ನು ಅವರು ನಮ್ಮಲ್ಲಿ ಒಮ್ಮೆ ಚಾತುರ್ಮಾಸ್ಯಕ್ಕೆ ಕುಳಿತಾಗ ತಿಳಿದಿದ್ದೇನೆ (೨೪,೨೫). ಅವರು ನನಗೆ ರಾಜ್ಯತ್ಯಾಗ ಮಾಡಲು ಹೇಳಲಿಲ್ಲ(೨೭)[೧].

iii. ನಾನು ಅವರ ಉಪದೇಶದಿಂದಾಗಿ ಭಗವದ್ವಿಷಯದಲ್ಲಿ ಜ್ಞಾನ ಹೊಂದಿ ವೈರಾಗ್ಯದಿಂದಲೇ ವರ್ತಿಸುತ್ತಿದ್ದೇನೆ. ಮೋಕ್ಷಕ್ಕೆ ವೈರಾಗ್ಯ ಅತಿಮುಖ್ಯವಾದ್ದರಿಂದ(೨೯). ಆದ್ದರಿಂದ ನಾನು ಸುಖದುಃಖಾದಿ ದ್ವಂದ್ವಗಳಿಂದ ಮುಕ್ತನಾಗಿ ಪರಮಾತ್ಮ ವಿಷಯಕ ಬುದ್ಧಿ ನನಗೆ ಗುರುಗಳಿಂದ ದೊರೆತಿದೆ. ರಾಜನಾಗಿ ಸಂಚರಿಸಿದರೂ ಎಲ್ಲ ಸಂಬಂಧಗಳಿಂದ ದೂರವಾಗಿಯೇ ಇದ್ದೇನೆ(೩೦,೩೧).

iv. ಪಂಚಶಿಖ ಗುರುಗಳಿಂದ ನನ್ನಲ್ಲಿ ಸ್ಥಾಪಿಸಲ್ಪಟ್ಟ ಜ್ಞಾನವು ಕರ್ಮಬೀಜವನ್ನು ಹುರಿದು ವಿಷಯಗಳಲ್ಲಿ ಪ್ರವೃತ್ತಿಯನ್ನು ಹೊಂದುವಂತೆ ಮಾಡಿದೆ(ಶ್ಲೋ.೩೪). ಜಗತ್ತಿನ ಅಸಾರವನ್ನು ತಿಳಿದವನಾಗಿ ಆ ಬಗ್ಗೆ ಅನಾಸಕ್ತಿ ಹೊಂದಿದ್ದೇನೆ (೩೫). ಹೇಗೆಂದರೆ ಒಬ್ಬನು ನನ್ನ ಒಂದು ತೋಳನ್ನು ಚಂದನಗಂಧ ಲೇಪಿಸಿ ಅಲಂಕರಿಸಲಿ, ಇನ್ನೊಬ್ಬನು ನನ್ನ ಇನ್ನೊಂದು ತೋಳನ್ನು ಕತ್ತರಿಸಿದೂ ನನ್ನ ವಿಷಯದಲ್ಲಿ ಇಬ್ಬರೂ ಸಮಾನರೇ (೩೫) ನನಗೆ ಕಲ್ಲು, ಮಣ್ಣು ಬಂಗಾರ ಎಲ್ಲವೂ ಸಮಾನ(೩೭).

v. ನಾನು ಇನ್ನೂ ಅನೇಕ ತ್ರಿದಂಡ ಸನ್ಯಾಸಿಗಳಿಂದಲೂ ಉಪದೇಶ ಪಡೆದಿದ್ದೇನೆ.

---

ಸ ತ್ವಾಂ ಸಮ್ಮಂತುಮಿಚ್ಛಾಮಿ ಮಾನಾರ್ಹಾಸಿ ಮತಾ ಹಿ ಮೇ ॥

೧ ಪಾರಾಶರ್ಯ ಸಗೋತ್ರಸ್ಯ..............................
ಭಿಕ್ಷೋಃ ಪಂಚಶಿಖಸ್ಯಾಹಂ ಶಿಷ್ಯಃ ಪರಮಸಮ್ಮತಃ ॥ - ೧೫೨/೨೪
ತೇನಾಹಂ ಸಾಂಖ್ಯಯೋಗೇನ.....................
ಶ್ರಾವಿತಸ್ತ್ರಿವಿಧಂ ಮೋಕ್ಷಂ ನ ಚ ರಾಜ್ಯಾದ್ವಿಚಾಲಿತಃ ॥ - ೨೭
ತದ್ವದ್ ಭಗವತಾ ತೇನ ಶಿಖಾಪ್ರೋಕ್ತೇನ ಭಿಕ್ಷುಣಾ ।
ಜ್ಞಾನಂ ಕೃತಮಬೀಜಂ ಮೇ ವಿಷಯೇಷು ನ ಜಾಯತೇ ॥ - ೩೪
ಮುಕ್ತಸಂಗಃ ಸ್ಥಿತೋ ರಾಜ್ಯೇ ವಿಶಿಷ್ಟೋಽನ್ಯೈಸ್ತ್ರಿದಂಡಿಭಿಃ ।
ಕಾಷಾಯಧಾರಣಂ.............................. - ೩೭
ಲಿಂಗಾನ್ಯತ್ಯರ್ಥಮೇತಾನಿ ನ ಮೋಕ್ಷಾಯೇತಿ ಮೇ ಮತಿಃ । - ೪೭
ಆ ಕಿಂಚನ್ಯೇ ನ ಮೋಕ್ಷೋಽಸ್ತಿ ಕೈಂಚನ್ಯೇ ನಾಸ್ತಿ ಬಂಧನಮ್ ॥
ಕೈಂಚನ್ಯೇ ಚೇತರೇ ಚೈವ ಜಂತುರ್ಜ್ಞಾನೇನ ಮುಚ್ಯತೇ ॥ - ೫೦
ರಾಜ್ಯೈಶ್ವರ್ಯಮಯಃ ಪಾಶಃ ಸ್ನೇಹಾಯತನಬಂಧನಃ ।
ಮೋಕ್ಷಾಶ್ಮ ನಿಶಿತೇನೇಹ ಛಿನ್ನಸ್ತ್ಯಾಗಾಸಿನಾ ಮಯಾ ॥ - ೧೫೨/೫೨

vi. ಮೋಕ್ಷ ತತ್ತ್ವ ಬಲ್ಲವರು ಉತ್ತಮ ಜ್ಞಾನ, ಸಕಲ ಕರ್ಮತ್ಯಾಗ, ಜ್ಞಾನನಿಷ್ಠೆಗಳು ಮೋಕ್ಷಕ್ಕೆ ಕಾರಣವೆನ್ನುವರು. ಕೇವಲ ಜ್ಞಾನವಾಗಲಿ, ಕರ್ಮವಾಗಲೀ, ಮೋಕ್ಷಕ್ಕೆ ಕಾರಣವಲ್ಲ. ಸರ್ವತ್ಯಾಗರೂಪ ನಿಷ್ಠೆಯೇ ಮೋಕ್ಷಕ್ಕೆ ಕಾರಣವೆನ್ನುವುದು ಪಂಚಶಿಖನ ಉಪದೇಶ(೩೮-೪೧). ತ್ರಿದಂಡಾದಿಗಳಿಗೆ ಮೋಕ್ಷಕ್ಕೆ ಜ್ಞಾನವೊಂದರಿಂದಲೇ ಆಗುವುದಾದರೆ ವ್ರತಾದಿಗಳನ್ನು ಹಿಡಿದ ರಾಜರಿಗೂ ಮೋಕ್ಷವೇಕಾಗದು? (ಅಧಿಕಾರಿ ಭೇದದಿಂದ ಸಾಧನ ಭೇದ).

vii. ಗೃಹಸ್ಥಾಶ್ರಮವು ದೋಷವೆಂದು ಸನ್ಯಾಸಸ್ವೀಕರಿಸಿದರೂ ಪೂರ್ವಸಂಗದಿಂದ ಬಿಡುಗಡೆ ಆದಂತಾಗುವುದಿಲ್ಲ. ಯಾವ ಆಶ್ರಮವೂ ಮೋಕ್ಷ ವಿರೋಧಿಯಲ್ಲ. ಒಂದು ಆಶ್ರಮ ಬಿಟ್ಟ ಮಾತ್ರದಿಂದ ಸ್ವೀಕರಿಸಿದ ಆಶ್ರಮವನ್ನು ಸಮರ್ಥವಾಗಿ ಅನುಸರಿಸಿಯೇ ತೀರುತ್ತಾನೆಂದು ಹೇಳಲಾಗದು. ಬಹಿರಂಗ ಚಿಹ್ನೆಗಳು ಮೋಕ್ಷಕ್ಕೆ ಕಾರಣ ಎಂದು ನಾನು ಭಾವಿಸಿಲ್ಲ. ಮನುಷ್ಯನು ದಾರಿದ್ರ್ಯ ಹೊಂದಿದ ಮಾತ್ರದಿಂದ ಮೋಕ್ಷ ಅಲಭ್ಯ. ಸಂಪತ್ತು ಇದ್ದ ಮಾತ್ರಕ್ಕೂ ಮೋಕ್ಷ ಲಭ್ಯವೆಂಬ ನಿಯಮವೂ ಇಲ್ಲ. ಆದ್ದರಿಂದ ಸಂಪತ್ತು ದಾರಿದ್ರ್ಯಗಳು ಮೋಕ್ಷದ ಕಾರಣ(ಸಾಧನ)ಗಳಲ್ಲ. ಐಶ್ವರ್ಯವಿರಲಿ ಇಲ್ಲದಿರಲಿ ಜ್ಞಾನದಿಂದಲೇ ಮೋಕ್ಷ. ನಾನು ಬಂಧನಕ್ಕೆ ಕಾರಣವಾದ ಧರ್ಮಾರ್ಥ ಬಂಧರಹಿತನನ್ನಾಗಿ ತಿಳಿ(ಕಾರಣ ಆದರಲ್ಲಿ ನನಗೆ ಆಸಕ್ತಿ ಇಲ್ಲ).

ರಾಜ್ಯೈಶ್ವರ್ಯ, ಅಧಿಕಾರಭೋಗ, ಸ್ನೇಹರೂಪವಾದ ಬಾಂಧವ್ಯ ಇವೆಲ್ಲವೂ ಪಾಶದಂತೆ ಬಂಧಕವಾಗಿದ್ದರೂ ಮೋಕ್ಷವೆಂಬ ತೀಕ್ಷ್ಣವಾದ ಸಾಣೆಯಲ್ಲಿ ತಿಕ್ಕಿ ತೀಡಿದ ತ್ಯಾಗವೆಂಬ ಖಡ್ಗದಿಂದ ನಾನು ಈ ಪಾಶವನ್ನು ಕತ್ತರಿಸಿದ್ದೇನೆ (**'ಅಸಂಗಶಸ್ತ್ರೇಣ ದೃಢೇನ ಛಿತ್ವಾ' ಎಂಬ ಗೀತೆ (೧೫/೩)ಯ ಭಾವ ಜನಕರಾಜನ ಮಾತಿನಲ್ಲಿದೆ**).

ಹೀಗಿರುವ ನನಗೆ (ಭವಬಂಧನದಿಂದ ಮುಕ್ತನಾದ ಜೀವನ್ಮುಕ್ತನಾದ) ನಿನ್ನ ಸ್ಥಿತಿಯನ್ನು ಕಂಡು ಕನಿಕರವಾಗುತ್ತಿದೆ. ನಿನ್ನ ರೂಪವು ನಿನಗೆ ಅನುಗುಣವಾಗಿಲ್ಲ[1].

ಮುಂದೆ ರಾಜನು ಸುಲಭೆಯ ಪರಕಾಶಪ್ರವೇಶದ ಉದ್ದೇಶ್ಯಾದಿಗಳನ್ನು ಕಟುವಾಗಿ ಟೀಕಿಸುತ್ತಾನೆ. ಆಕೆಯ ಅಪರಾಧ, ದೋಷಗಳನ್ನು ಪಟ್ಟಿಮಾಡಿ ಆಕೆಯ ಗಮನಕ್ಕೆ ತರುತ್ತಾನೆ.

೧. ನೀನು ಮೊದಲು ವೃದ್ಧಭಿಕ್ಷುಕಿ. ಆದರೆ ಈಗ ಮಾಯಾರೂಪವತಿಯಾಗಿರುವುದು ಅಪ್ರಾಮಾಣಿಕ. ಹೀಗಾಗಿ ನಿನ್ನ ಪ್ರಾಮಾಣಿಕತೆ(ಸಜ್ಜನಿಕೆಯೇ)ಸಂಶಯಾತೀತವಾಗಿಲ್ಲ(೫೪).

---

೧ ಸೋऽಹಮೇವಂಗತೋ ಮುಕ್ತೋ ....................
ಅಯಥಾರ್ಥೋ ಹಿ ತೇ ವರ್ಣೋ ವಕ್ಷ್ಯಾಮಿ ಶೃಣು ತನ್ಮಮ ॥ -೧೫೨/೫೩

೨. ನಿನ್ನ ಮೂಲಭೂತ ಸನ್ಯಾಸಿನಿಯ ವೇಷಕ್ಕೂ ಈಗಿನ ವೇಷದ ವ್ಯಾಪಾರ ಯೋಗ್ಯವಲ್ಲ. ನಾನು ವಿಷಯಸಂಗದಿಂದ ಮುಕ್ತನೋ ಅಲ್ಲವೋ ಎಂದು ತಿಳಿಯುವ ನಿನ್ನ ಭಾವನೆ ನನ್ನಲ್ಲಿ ಪ್ರವೇಶ ವ್ಯಾಪಾರ ಯೋಗ್ಯವಲ್ಲ(೫೫).

೩. ಮುಕ್ತನಾದ ಚೇತನನು ಎಂದಿಗೂ ತನ್ನನ್ನು ಮುಚ್ಚಿಟ್ಟುಕೊಳ್ಳುವುದಿಲ್ಲ. ನೀನು ನಿನ್ನ ಮೊದಲ ರೂಪ ಮುಚ್ಚಿಟ್ಟುಕೊಂಡು ನನ್ನಲ್ಲಿ ಪ್ರವೇಶ ಮಾಡಿರುವುದು ಮುಕ್ತಳಾದ ನಿನಗೆ ಲಕ್ಷಣವೆನಿಸದು(೫೬).

೪. ನನ್ನ ರಾಷ್ಟ್ರ, ಪಟ್ಟಣ, ನನ್ನನ್ನು ಪ್ರವೇಶಿಸಲು ಕಾರಣವೇನು?[೧] (೫೮)

೫. ನೀನು ಬ್ರಾಹ್ಮಣಿ, ನಾನೋ ಕ್ಷತ್ರಿಯ, ನನ್ನ ಪ್ರವೇಶ ಮಾಡಿ ವರ್ಣಸಾಂಕರ್ಯಕ್ಕೆ ಕಾರಣವಾಗಿದೆ. ನಮ್ಮಿಬ್ಬರಿಗೂ ಯಾವುದೇ ಸಂಬಂಧವಿಲ್ಲ (೫೯)(ಇದು ಮೊದಲ ದೋಷ)[೨].

೬. ನೀನು ಮೋಕ್ಷ ಧರ್ಮವನ್ನು ಆಶ್ರಯಿಸಿದವಳು (ಸನ್ಯಾಸಿಯಾಗಿ), ನಾನೋ ಗೃಹಸ್ಥ ನಿನ್ನಿಂದ ದಾರುಣ ಆಶ್ರಮಸಾಂಕರ್ಯವಾಗಿದೆ(೬೦)(ಎರಡನೆಯ ದೋಷ)[೩].

೭. ನೀನು ಸಗೋತ್ರಳೂ, ಭಿನ್ನ ಗೋತ್ರಳೋ ಗೊತ್ತಿಲ್ಲ. ನೀನು ನನ್ನನ್ನು ತಿಳಿದಿಲ್ಲ. ಒಂದು ವೇಳೆ ಸಗೋತ್ರಳಾಗಿದ್ದರೆ ಇದು ೩ನೇ ಗೋತ್ರಸಾಂಕರ್ಯ ದೋಷ ನಿನಗೆ ಬರುತ್ತದೆ [೪](೬೧).

೮. ನಿನ್ನ ಪತಿ ಜೀವಿಸಿದ್ದಾನೋ ಅಥವಾ ನಿನ್ನನ್ನು ಬಿಟ್ಟು ವಿರಕ್ತನಾಗಿದ್ದಾನೋ ಅದೂ ನಿನಗೆ ತಿಳಿಯದು. ಪರಸ್ತ್ರೀ ಸ್ಪರ್ಶ ದೋಷಕ್ಕೆ ಕಾರಣವಾದ ನಿನ್ನ ನನ್ನ ಹೃದಯಪ್ರವೇಶವು ನಾಲ್ಕನೆಯ ಧರ್ಮಸಾಂಕರ್ಯಕ್ಕೆ ನೀನು ಕಾರಣ ಆಗಿದ್ದೀಯಾ(೬೨)[೫].

ಹೀಗೆ ನೀನು ಇಂತಹ ಅಕಾರ್ಯವನ್ನು ಮಾಡಬಹುದೇ? ನೀನು ಇದನ್ನು ಅಜ್ಞಾನ ಅಥವಾ ಮಿಥ್ಯಾಜ್ಞಾನದಿಂದ ಮಾಡಿರುತ್ತೀಯಾ? ನೀನೇನಾದರೂ ಅಲ್ಪಶಾಸ್ತ್ರ ಶ್ರವಣ ಮಾಡಿದ್ದೂ ಇದೆಲ್ಲ ಮಾಡಿರುವುದರಿಂದ ಎಲ್ಲವೂ ವ್ಯರ್ಥವಾದಂತೆ.

---

೧ ಪ್ರವೇಶಸ್ತೇ ಕೃತಃ ಕೇನ ಮಮ ರಾಷ್ಟ್ರೇ ಪುರೇ ತಥಾ।
ಕಸ್ಯ ವಾ ಸನ್ನಿಸರ್ಗಾತ್ತ್ವಂ ಪ್ರವಿಷ್ಟಾ ಹೃದಯಂ ಮಮ॥ – ೧೫೨/೫೮

೨ ವರ್ಣಪ್ರವರಮುಖ್ಯಾಸಿ ಬ್ರಾಹ್ಮಣೀ ಕ್ಷತ್ರಿಯೋ ಹ್ಯಹಮ್।
ನಾವಯೋರೇಕಯೋಗೋಽಸ್ತಿ ಮಾ ಕೃಥಾ ವರ್ಣಸಂಕರಮ್॥ – ೧೫೨/೫೯

೩. ವರ್ತಸೇ ಮೋಕ್ಷಧರ್ಮೇಣ ಗಾರ್ಹಸ್ಥ್ಯೇ ತ್ವಹಮಾಶ್ರಯೇ।
ಅಯಂ ಚಾಪಿ ಸುಕಷ್ಟಸ್ತೇ ದ್ವಿತೀಯೋಽಽಶ್ರಮ ಸಂಕರಃ॥ – ೧೫೨/೬೦

೪ ಸಗೋತ್ರಾಂ ವಾಸಗೋತ್ರಾಂ ವಾ ನ ವೇದ ತ್ವಾಂ ನ ವೇತ್ಥ ಮಾಮ್।
ಸಗೋತ್ರಮಾವಿಶಂತ್ಯಾಸ್ತೇ ತೃತೀಯೋ ಗೋತ್ರಸಂಕರಃ॥ – ೧೫೨/೬೧

೫ ಅಥ ಜೀವತಿ ತೇ ಭರ್ತಾ ಪ್ರೋಷಿತೋಽಪ್ಯಥ ವಾ ಕ್ವಚಿತ್।
ಅಗಮ್ಯಾ ಪರಭಾರ್ಯೇತಿ ಚತುರ್ಥೋ ಧರ್ಮಸಂಕರಃ॥ – ೧೫೨/೬೨

೯. ಅಲ್ಲದೆ ನನ್ನ ಮನಸ್ಸಿನೊಡನೆ ಸೇರಿ ಮತ್ತೊಂದು (ಐದನೆಯ) ಅಪರಾಧ ಮಾಡಿರುವುದು ನಿನ್ನಹೃದಯದ ದೋಷವನ್ನು ನೀನೇ ಹೊರಹಾಕಿದಂತಾಯಿತು(ಶ್ಲೋಕದಲ್ಲಿ ಚತುರ್ಥ ಎಂದಿದೆ. ಬಹುಶಃ ಇದು ಪಾಠದೋಷವಿರಲು ಸಾಕು. ಲಿಪಿಕಾರರ ದೋಷ ಇರಬಹುದು)(೬೫).

೧೦. ಇಷ್ಟೇ ಅಲ್ಲದೆ ನಿನ್ನ ಸ್ತ್ರೀಸಹಜ ದೃಷ್ಟಿ ಜಯಾಪೇಕ್ಷೆಯಿಂದ ನನ್ನ ಸಭೆಯಲ್ಲಿರುವವರನ್ನು ಸೋಲಿಸಲು ಹವಣಿಸುತ್ತಿರುವೆ. ಈ ಆಕಾಂಕ್ಷೆ(ಆಶೆ)ಯಿಂದ ಇಷ್ಟೆಲ್ಲ ತಪ್ಪುಗಳಾಗುತ್ತಿವೆ. ಹೀಗೆ ಅಸೂಯೆಯಿಂದ ಯೋಗಸಿದ್ಧಿಯಲ್ಲಿ ನಾನು ಶ್ರೇಷ್ಠಳೆಂಬ ಬಿಗುಮಾನದಿಂದ ವಿಷ ಮತ್ತು ಅಮೃತವನ್ನು ಮೇಳೈಸಿ ನಿನ್ನ ಬುದ್ಧಿಯನ್ನು ನನ್ನ ಬುದ್ಧಿಯೊಡನೆ ಸೇರಿಸಿದ್ದೀಯಾ (೬೮)[1].

೧೧. ಪರಸ್ಪರ ಪ್ರೀತಿಯುಳ್ಳ ಸ್ತ್ರೀಪುರುಷರ ಮಿಲನ ಅಮೃತಕ್ಕೆ ಸಮ. ಸ್ತ್ರೀಯರಿಗೆ ಆಸಕ್ತಿಯುಳ್ಳ ಮನುಷ್ಯನು ದೊರೆಯದಿದ್ದರೆ ಅದು ವಿಷಕ್ಕೆ ಸಮ. ನೀನು ವಿಷಕ್ಕೆ ಸಮಾನವಾದ ದೋಷ ಹೊಂದಿರುವೆ. ನೀನು ನನ್ನ ಮನಸ್ಸನ್ನು ಮುಟ್ಟಬೇಡ (೬೮).

೧೨. ಗೂಢಚಾರದ ಪ್ರಯತ್ನಗಳನ್ನು ನನ್ನಲ್ಲಿ ಎಂದಿಗೂ ಮಾಡಬೇಡ (೭೦). ನೀನು ನಿನ್ನ ನಿಜಸ್ಥಿತಿಯನ್ನು ಮುಚ್ಚಿಟ್ಟುಕೊಂಡು ನನ್ನಲ್ಲಿ ವ್ಯವಹರಿಸಬಾರದಾಗಿತ್ತು(೭೧)[2].

೧೩. ರಾಜರ ವಿಷಯದಲ್ಲಿ ಮೋಸದ ಮಾರ್ಗದಿಂದ ನಡೆಯಬಾರದು. ಅದೂ ಬ್ರಾಹ್ಮಣರಲ್ಲಿ ಹಾಗೆ ನಡೆಯಬಾರದು. ಸತೀ ಧರ್ಮದಲ್ಲಿರುವ (ಪತಿವ್ರತಾ) ಸ್ತ್ರೀಯರಲ್ಲೂ ಕಳ್ಳತನದಿಂದ ವರ್ತಿಸಕೂಡದು. ಹಾಗೆ ಮಾಡಿದ್ದಲ್ಲಿ ಕಪಟತನವು ಕಪಟಿಗಳನ್ನು ನಾಶ ಮಾಡುತ್ತದೆ. ರಾಜರಿಗೆ ಅಧಿಕಾರವೇ ಬಲ, ಬ್ರಾಹ್ಮಣರಿಗೆ ವೇದವೇ ಬಲ, ಸ್ತ್ರೀಯರಿಗೆ ರೂಪ, ಯೌವನ, ಸೌಭಾಗ್ಯಗಳೇ ಬಲ (೭೩)[3]. ಆದ್ದರಿಂದ ಇವರನ್ನು ಎಂದೂ ಋಜುಮಾರ್ಗದಿಂದಲೇ ಸಮೀಪಿಸಬೇಕು.

೧೪. ಆದ್ದರಿಂದ ನೀನು ಮೊದಲೇ ನಿನ್ನ ಜಾತಿ, ನಿನ್ನ ವಿದ್ಯೆ, ನಿನ್ನ ಆಚಾರ, ನಿನ್ನ ಅಭಿಪ್ರಾಯ, ನಿನ್ನ ನಡತೆ, ನಿನ್ನ ಇಲ್ಲಿಗೆ ಬಂದ ಉದ್ದೇಶ ಇವನ್ನೆಲ್ಲ ನನಗೆ ಹೇಳಲು ಅರ್ಹಳಾಗಿದ್ದೀಯಾ[4].

---

೧ ಸಾ ಸ್ವೇನಾಮರ್ಷಜೇನ ತ್ವಮೃದ್ಧಿ ಮೋಹೇನ ಮೋಹಿತಾ ।
ಭೂಯಃ ಸೃಜಸಿ ಯೋಗಾಸ್ತ್ರಂ ವಿಷಾಮೃತಮಿವೈಕಧಾ ॥ – ೧೫೨/೬೮

೨ ....................
ತತ್ತ್ವ ಸತ್ರಪ್ರತಿಚ್ಛನ್ನಾ ಮಯಿ ನಾರ್ಹಸಿ ಗೂಹಿತುಮ್ ॥ – ೧೫೨/೭೦

೩ ನ ರಾಜಾನಂ ಮೃಷಾಗಚ್ಛೇನ್ನ ದ್ವಿಜಾತಿಂ ಕಥಂಚನ ।
ನ ಸ್ತ್ರಿಯಂ ಸ್ತ್ರೀಗುಣೋಪೇತಾಂ ಹನ್ಯುರ್ಹ್ಯೇತೇ ಮೃಷಾಗತಾಃ ॥ – ೧೫೨/೭೨

೪ ಸಾತ್ತ್ವಂ ಜಾತಿಂ ಶ್ರುತಂ ವೃತ್ತಂ ಭಾವಂ ಪ್ರಕೃತಿಮಾತ್ಮನಃ ।
ಕೃತ್ಯಮಾಗಮನೇ ಚೈವ ವಕ್ತುಮರ್ಹಸಿ ತತ್ತ್ವತಃ ॥ – ೧೫೨/೭೫

ಹೀಗೆ ಜನಕಮಹಾರಾಜನು ಅಹಿತವಾಗಿಯೂ, ಅಯೋಗ್ಯವಾಗಿಯೂ, ತಪ್ಪಾಗಿಯೂ ತೋರುವ ಮಾತುಗಳನ್ನಾಡಿ ಆಕೆಯ ವರ್ತನೆಯನ್ನು ನಿರಾಕರಿಸಿದರೂ ಸುಲಭಾ ಜನಕನ ಮನಸ್ಸಿನಿಂದ ಕದಲಲಿಲ್ಲ[೧].

ಜನಕರಾಜನ ಶರೀರ, ಮನಸ್ಸು ಬುದ್ಧಿಗಳನ್ನು ಪ್ರವೇಶಿಸಿ ಆತನನ್ನು ತನ್ನ ಯೋಗಶಕ್ತಿಯಿಂದ ಬಂಧಿಸಿದರೂ, ಆಕೆಯನ್ನು ತನ್ನ ಯೋಗಶಕ್ತಿಯಿಂದ ಅವಳ ಮನಸ್ಸನ್ನು ಬಂಧಿಸಿದ್ದ ಮಹಾರಾಜನು ಇಲ್ಲಿಯವರೆಗೂ ಕೇಳಿದ ಪ್ರಶ್ನೆಗಳಿಗೆ ಉತ್ತರರೂಪವಾಗಿ ಯೋಗಿನೀ ಸುಲಭಾ ಸನ್ಯಾಸಿನಿಯು ರಾಜನನ್ನು ತನ್ನ ಸುಂದರ ಉತ್ತರಗಳಿಂದ ನಿರುತ್ತರನನ್ನಾಗಿ ಮಾಡುತ್ತಾಳೆ. ಈ ಭಾಗ (ಮೂಲರೂಪದಲ್ಲಿರುವ ಶ್ಲೋ. ೭೮-೧೯೮ ರವರೆಗೆ ೧೧೨ ಶ್ಲೋಕಗಳು) ತುಂಬಾ ಕ್ಲಿಷ್ಟವಾಗಿಯೂ, ಸಂಕೀರ್ಣವಾಗಿಯೂ ಮನೋವೈಜ್ಞಾನಿಕ, ವಿಶ್ಲೇಷಣಾತ್ಮಕವಾಗಿವೆ ಎಂದು ತೋರುತ್ತವೆ. ಅಧ್ಯಾತ್ಮಿಕ ಮೌಲ್ಯಗಳು ಇವೆ ಎಂದು ಬೇರೆ ಹೇಳಬೇಕಾಗಿಲ್ಲ, ವೈಷ್ಣವ ಯೋಗಶಾಸ್ತ್ರದ ಹಿರಿಮೆ ಗರಿಮೆಗಳನ್ನು ಇಲ್ಲಿ ನೋಡಬಹುದು (ಪಾತಂಜಲ ಯೋಗ ವಿಷಯವಲ್ಲ).

೧. ಸುಲಭಾ ಜನಕ ಮಹಾರಾಜನ ಪ್ರಶ್ನೆರೂಪ ವಾಕ್ಯ, ಮಾತು, ಬುದ್ಧಿಗಳಿಗೆ ಸಂಬಂಧಿ ದಂತೆ ೧೮ ಗುಣ, ೧೮ ದೋಷಗಳಿವೆ ಎಂದು ನಿರೂಪಿಸುತ್ತಾಳೆ (ಜನಕನು ಪ್ರಯೋಗಿಸಿದ ವಾಕ್ಯ ಮಾತ್ರವಲ್ಲ ಯಾವುದೇ ವಾಕ್ಯಗಳಿರಲಿ).

೨. ರಾಜನ್! ನನ್ನ ಆಡುವ ಮಾತುಗಳಲ್ಲಿ ಗುಣಗಳಿವೆ. ದೋಷಗಳಿಲ್ಲ, ಉಚಿತ ಅರ್ಥಗಳಿವೆ. ಅಯೋಗ್ಯಾರ್ಥಗಳಿಲ್ಲ, ಅಧಿಕವಾದ ಮಾತುಗಳೂ ಇಲ್ಲ (ಅಧಿಕವೆಂಬ ನಿಗ್ರಹಸ್ಥಾನ ನನ್ನ ಮಾತುಗಳಲ್ಲಿ ಇರದು). ನಿಸ್ಸಂದಿಗ್ಧವಾಗಿಯೂ ಇರುತ್ತದೆ (ನನ್ನ ಮಾತುಗಳು). ಸತ್ಯಕ್ಕೆ ದೂರಮಾದ ಮಾತುಗಳಿರವು. ತಿಳಿಯಲು ಅಸಾಧ್ಯವಾದ ಪದಗಳೂ ಇರವು. ತ್ರಿವರ್ಗಕ್ಕೆ (ಧರ್ಮಾರ್ಥಕಾಮ) ವಿರೋಧಿ ಶಬ್ದಗಳೂ ಇರುವುದಿಲ್ಲ, ವ್ಯಾಕರಣವಿರೋಧಿ ಶಬ್ದಗಳೂ ಇರವು. ನನ್ನ ವಾಕ್ಯದಲ್ಲಿ ನ್ಯೂನತೆಯೂ ಇರದು (ಯಾವುದೇ ಶಬ್ದದ ಅಧ್ಯಾಹಾರ ಬೇಕಾಗಿಲ್ಲ). ಯುಕ್ತಿ ವಿರುದ್ಧ ಶಬ್ದಪ್ರಯೋಗಗಳೂ ಇರವು.

೩. ನಾನು ಕಾಮ, ಕ್ರೋಧ, ಭಯ, ಲೋಭ, ದೈನ್ಯ, ದೌರ್ಜನ್ಯ, ಲಜ್ಜೆ ಕರುಣೆ, ಹೆಮ್ಮೆ (ಗರ್ವ) ಗಳಿಂದ ಕೂಡಿಯೂ ನಾನು ಮಾತನಾಡುವುದಿಲ್ಲ.

೪. ನಾನು ಆಡುವ ಮಾತು ಕೇಳುಗರಿಗೆ ಅವಮಾನಕರವಾಗಿಯೂ ಇರದು.

೫. ನನ್ನ ಮಾತುಗಳು ಶ್ರೋತೃವಿನ ಹಿತವನ್ನೂ ಗಮನದಲ್ಲಿರಿಸುತ್ತದೆ. ಆತ್ಮವಂಚನೆ, ಪ್ರಯೋಜನವಿರುವ, ಧರ್ಮವಿರುದ್ಧವಲ್ಲದ ಮಾತುಗಳನ್ನು ಮಾತ್ರ ಹೇಳುತ್ತೇನೆ.

---

೧ ಇತ್ಯೇತೈರಸುಖೈರ್ವಾಕ್ಯೈರಯುಕ್ತೈರಸಮಂಜಸೈಃ।
ಪ್ರತ್ಯಾದಿಷ್ಟಾ ನರೇಂದ್ರೇಣ ಸುಲಭಾ ನ ವ್ಯಕಂಪತ॥ - ೧೫೨/೭೬

ರಾಜನ್! ಇಂತಹ ವಾಕ್ಯದ ಸಲ್ಲಕ್ಷಣಗಳಿಂದ ಕೂಡಿದ ನನ್ನ ಮಾತನ್ನು ಕೇಳು.ಇವಿಷ್ಟು ತನ್ನ ಮುಂದಿನ ಪ್ರತಿಕ್ರಿಯೆಯ ಪೀಠಿಕೆಯಾಗಿ ಹೇಳುತ್ತಾಳೆ, ಸನ್ಯಾಸಿನೀ ಸುಲಭಾ.

ಮುಂದೆ ಜನಕರಾಜನು ತನ್ನ ಬಗ್ಗೆ ಮಾಡಿದ ಆಕ್ಷೇಪಗಳಿಗೆ ಉತ್ತರರೂಪವಾಗಿ ಮಾತನಾಡುತ್ತಾಳೆ. ಈ ಉತ್ತರಗಳೂ ಕೂಡಾ ತುಂಬಾ ತಾತ್ತ್ವಿಕವಾಗಿವೆ, ಊಹಾತ್ಮಕವಾಗಿವೆ.

೧. ನೀನು ಯಾರು? ಯಾರ ಕಡೆಯವಳು? ಎಲ್ಲಿಂದ ಬಂದೆ? ಎಂದು ನನ್ನನ್ನು ಪ್ರಶ್ನಿಸಿದೆ? ಅದಕ್ಕೆ ಉತ್ತರ ಹೀಗಿದೆ.

ಪ್ರಪಂಚದಲ್ಲಿ ಪದಾರ್ಥಗಳಿಗೆ ಆಗುವ ಪರಸ್ಪರ ಸಂಬಂಧ ಯಾದೃಚ್ಛಿಕ (ದೈವಕೃತ). ಉದಾ: ಪಂಚೇಂದ್ರಿಯಗಳೊಡನೆ ಜೀವಕ್ಕಿರುವ ಸಂಬಂಧ; ಕಟ್ಟಿಗೆ, ಧೂಳು, ನೀರುಗಳಿಗೆ ಇರುವ ಸಂಬಂಧ, ಇವು ನಮಗೆ ಅರಿವಿಲ್ಲದೆ ಇರುತ್ತದೆ. ಹಾಗೆಯೇ –

'ತನ್ನಲ್ಲಿ ಸೇರಿರುವ ಅನೇಕ ಪದಾರ್ಥಗಳ ಜ್ಞಾನವು ಆತ್ಮನಿಗೆ ಹೇಗೆ ಇರುವುದಿಲ್ಲವೋ ಅದರಂತೆ ಮತ್ತೊಬ್ಬರ ಸಂಬಂಧವು ಆತ್ಮನಲ್ಲಿ ಬಂದಾಗ ಏಕೆ ಎಂದು ಪ್ರಶ್ನಿಸುವುದೂ ಯೋಗ್ಯವಾಗದು' (ಶ್ಲೋ. ೯೬-೧೦೦). ಹೀಗೆ ಜೀವಶರೀರದಲ್ಲಿ ಪಂಚಜ್ಞಾನ, ಕರ್ಮ, ಮನಸ್ಸು ಬುದ್ಧಿ ಸತ್ತ್ವ, ಅಹಂಕಾರ, ಗ್ರಹಗಳ ಅನುಕೂಲಾದಿ ಕಾಲ, ಯೋನಿಸಂಘಾತ, ಆಕೃತಿ, ವ್ಯಕ್ತಿ, ಸುಖದುಃಖ ಮೊದಲಾದ ದ್ವಂದ್ವಗಳು, ಕಾಲ, ಪಂಚಮಹಾಭೂತಗಳು, ಸದ್ಭಾವ, ಅಸದ್ಭಾವ ಎಂಬ ಸಂಬಂಧಗಳು, ವಿಧಿ, ಶುಕ್ರ, ಬಲ – ಹೀಗೆ ೩೦ ಗುಣಗಳು, ೩೦ ಕಲೆಗಳಿಂದ ಪೂರ್ಣವಾದುದೇ ಶರೀರ. ಈ ಕಲಾಗಳಿಗೆ ಅವ್ಯಕ್ತನಾಮಕ ಪ್ರಕೃತಿಯೇ ಕಾರಣ (ಈ ವಿಷಯದಲ್ಲಿ ಅಲ್ಪ ಸ್ವಲ್ಪ ವಿಭಿನ್ನ ಅಭಿಪ್ರಾಯಗಳೂ ಇವೆ, ಚಿಂತನೆಗಳಲ್ಲಿ).

ಒಟ್ಟಾರೆ ಈ ಮೂವತ್ತು ಕಲಾಗಳಿಂದ ಶರೀರದ ಅಭಿವ್ಯಕ್ತಿ ನಾವೆಲ್ಲರೂ ಈ ಪ್ರಕೃತಿಯ ಕಾರ್ಯ.

೨. ಮುಂದೆ ಜಗತ್ತಿನಲ್ಲಿ ನಡೆಯುತ್ತಿರುವ ಸೃಷ್ಟಿ ಬಗ್ಗೆ(ಪುರುಷ, ಸ್ತ್ರೀಯರ ಸಂಗಮ, ಗರ್ಭಧಾರಣೆಯಿಂದ ಹಿಡಿದು ಮಗುವಿನ ಜನನ, ಅದರ ಜೀವನದ ವಿವಿಧಾವಸ್ಥೆಗಳು ಶೈಶವ, ಕೌಮಾರ, ಯೌವನ (ವಾರ್ಧಕ್ಯ), ಇವು ಯಾರಿಗೂ ತಿಳಿಯುವುದಿಲ್ಲ. ಪ್ರಪಂಚದ ಸ್ವಭಾವವಿದು. ಆದ್ದರಿಂದ ಯಾವನು ಎಲ್ಲಿಂದ ಬಂದಿದ್ದಾನೆ? ಯಾರಿಗೆ ಸಂಬಂಧಿಸಿದ್ದಾನೆ ಇತ್ಯಾದಿ ಪ್ರಶ್ನೆಗಳಿಗೆ ಅವಕಾಶವೇ ಇಲ್ಲ.

೩. ನೀನು ನಿನ್ನಲ್ಲಿರುವ ಪರಮಾತ್ಮನನ್ನು ಹೇಗೆ ನೋಡುತ್ತೀಯೋ ಅದರಂತೆ ಬೇರೆ ಇರುವ ಆತ್ಮನನ್ನು ಏಕೆ ನೋಡುತ್ತಿಲ್ಲ. ನಿಜವಾಗಿಯೂ ನೀನು ಜೀವನ್ಮುಕ್ತನಾಗಿದ್ದಲ್ಲಿ ನಿನ್ನಲ್ಲಿ ಪರರಲ್ಲಿಯೂ ಸಮಾನ ಬುದ್ಧಿ ಇದ್ದಿದ್ದರೆ ಸಮತ್ವವನ್ನು ಕಾಣಬೇಕಿತ್ತಲ್ಲವೆ? ನನ್ನನ್ನು ನೀನು ಯಾರು? ಎಲ್ಲಿಯವಳು ಯಾರಿಗೆ ಸೇರಿದವಳು ಎಂದೇಕೆ ಪ್ರಶ್ನಿಸುವೆ? ಕಾರಣ ನೀನು

ದ್ವಂದ್ವಗಳಿಂದ ಮುಕ್ತನಲ್ಲವೆ? ಬೇಕು ಬೇಡ, ಇಚ್ಛಾ-ದ್ವೇಷಗಳೆಂಬ ದ್ವಂದ್ವವಿಲ್ಲದವನಿಗೆ ನನ್ನ ಬಗೆಗಿನ ಪ್ರಶ್ನೆಗಳು ಹೇಗೆ ತಾನೇ ಹುಟ್ಟುತ್ತವೆ?

ಶತ್ರು, ಮಿತ್ರ, ಉದಾಸೀನರು, ಜಯಾಪಜಯ, ಸಂಧಿವಿಗ್ರಹಗಳು ಇವುಗಳಲ್ಲಿ ಅವಕ್ಕೆ ತಕ್ಕಂತೆ ಬೇರೆ ಬೇರೆ ಪ್ರವೃತ್ತಿಗಳಿರುವ ರಾಜರಲ್ಲಿ ಮುಕ್ತರಲಕ್ಷಣ ಇಲ್ಲಿರಲು ಸಾಧ್ಯ?

೪. ನೀನು ಚಕ್ರವರ್ತಿಯಾಗಿದ್ದರೂ ನಿನ್ನ ವಾಸ್ತವ ಇರುವಿಕೆ ತುಂಬ ಪರಿಮಿತ. ನಿನ್ನ ಅಧಿ-ಕಾರ ಸೀಮಿತ; ನಿನಗೆ ನೂರಾರು ದುಃಖಗಳು ಇರುತ್ತವೆ ರಾಜನೆಂದ ಮೇಲೆ. ರಾಜನು ಸದಾ ಪರತಂತ್ರನೇ ಸರಿ. ಅವನು ಎಲ್ಲ ಕಾರ್ಯಗಳಿಗೂ ಪರಾವಲಂಬಿ, ದಾನ ಇತ್ಯಾದಿಗಳಲ್ಲಿ. ನನ್ನದೆಂದು ತಿಳಿದುಕೊಂಡಿರುವ ರಾಜ್ಯ, ಕೋಶ, ಸೈನ್ಯ, ಮಂತ್ರಿ, ಪರಿವಾರ ಇವಾವೂ ಯಾರದ್ದೂ ಅಲ್ಲ. ಸಪ್ತಾಂಗಗಳಿಂದ ಕೂಡಿದ್ದು ರಾಜ್ಯ.

೫. ನನ್ನ ಶರೀರದಲ್ಲಿಯೇ ನನಗೆ ಸಂಬಂಧವಿಲ್ಲ, ಅನ್ಯರ ಶರೀರ ಸಂಬಂಧವೆಂದರೇನು? ನಾನಾದರೋ ವಿರಕ್ತಳಾಗಿ ಯೋಗನಿರತಳಾಗಿದ್ದೇನೆ. ನನ್ನನ್ನು ಕುರಿತು ನೀನು ಅಂತಹ ಮಾತುಗಳನ್ನು (ನೀನಾರು? ಎಲ್ಲಿಂದ ಬಂದೆ? ಇತ್ಯಾದಿ) ಏಕೆ ಆಡಿದೆ? ಹೀಗೆ ಮಾತಾಡಲು ನಿನಗಿರುವ ಅರ್ಹತೆಯಾದರೂ ಏನು? (ಶ್ಲೋ. ೧೬೨)

೬. ನೀನು ಪಂಚಶಿಖಮುನಿಯಿಂದ ಮೋಕ್ಷಧರ್ಮವನ್ನು ಪೂರ್ಣವಾಗಿ ಕೇಳಿದ್ದೇನೆಂದು ಹೇಳುತ್ತೀಯಾ? ಹಾಗಿದ್ದಲ್ಲಿ ಈ ರಾಜ್ಯಕೋಶ ಮೊದಲಾದ ವಿಶೇಷ ವಸ್ತುಗಳಲ್ಲಿ ಇನ್ನೂ ಅಭಿಮಾನವೇಕೆ? (ಶ್ಲೋ. ೧೬೪) ನಿನ್ನ ವರ್ತನೆ, ಮಾತುಗಳನ್ನು ನೋಡಿದರೆ, ಕೇಳಿದರೆ ನಿನಗೆ ಶ್ರವಣದ ಫಲವಾಗಿಲ್ಲ. ಅಥವಾ ಡಂಭಾಚಾರದಿಂದ ಶ್ರವಣ ಮಾಡಿದಂತೆ ಅಥವಾ ಶಾಸ್ತ್ರದಂತೆ ಭಾವಿಸುವ ಅನ್ಯಶಾಸ್ತ್ರಗಳನ್ನು ತಪ್ಪಾದ ವಿಚಾರಗಳನ್ನು ನೀನು ಕೇಳಿರಬೇಕು ಎನಿಸುತ್ತದೆ (ಶ್ಲೋ. ೧೬೫).

೭. ನೀನು ಸಾಮಾನ್ಯಮನುಷ್ಯನಂತೆ ವರ್ತಿಸುತ್ತಿದ್ದೀಯಾ. ನಾನು ನಿನ್ನ ಬುದ್ಧಿಯನ್ನು ಪ್ರವೇಶಿಸಿರುವುದರಿಂದ ನಿನಗಾದ ಅಪಕಾರವೇನು. ನೀನು ವಿಷಯಸಂಗದಿಂದ ಮುಕ್ತನಾದ ಬಳಿಕ ನಿನಗೆ ಕೇಡಾಗಲು ಹೇಗೆ ಸಾಧ್ಯ?

೮. ನಾನು ನಿನ್ನನ್ನು ಕೈಗಳಿಂದ, ತೋಳುಗಳಿಂದ, ಪಾದಗಳಿಂದ, ತೊಡೆಗಳಿಂದ ಇತರ ದೇಹಾವಯವಗಳಿಂದ ನಿನ್ನನ್ನು ಸ್ಪರ್ಶಿಸಿಲ್ಲ. ಹೀಗಿರುವಾಗ ಉತ್ತಮಕುಲದಲ್ಲಿ ಹುಟ್ಟಿದವನು. ಅಕಾರ್ಯ ಮಾಡಲು ನಾಚಿಕೆ ಪಡುವ ಮನುಷ್ಯನು ಯಾರು ತಾನೆ ಒಳ್ಳೆಯದಾಗಲಿ, ಕೆಟ್ಟದ್ದಾಗಲಿ, ರಹಸ್ಯವಾಗಿ ನಡೆದುದನ್ನು ಇಂತಹ ದೊಡ್ಡ ಸಭೆಯಲ್ಲಿ ಹೇಳಬಹುದು? ಒಳಗೆ ನಡೆದ ರಹಸ್ಯವನ್ನು ಹೊರಗೆ ಏಕೆ ಪ್ರಚಾರ ಮಾಡುತ್ತಿರುವೆ? (ಅಂದಮೇಲೆ ನೀನು ಮುಕ್ತನಲ್ಲ, ಮುಕ್ತನೆಂಬ ಭ್ರಮೆ ನಿನಗಿದೆ)

೯. ನಾನು ನಿನ್ನಲ್ಲಿ (ಪ್ರವೇಶಿಸಿರುವುದು ವಸ್ತುಸ್ಥಿತಿಯಾದರೂ ಕಮಲದೆಲೆಯಲ್ಲಿ ಸೇರಿದ ನೀರಿನಂತೆ ನಿನ್ನ ಸಂಬಂಧವಿಲ್ಲದೆಯೆ ಇದ್ದೇನೆ.

೧೦. ಒಂದು ವೇಳೆ ನಿನ್ನನ್ನು ಸ್ಪರ್ಶಿಸದ ನನ್ನ ವಿಷಯದಲ್ಲಿ ಸ್ಪರ್ಶವನ್ನು ನೀನು ತಿಳಿದಿರುವೆಯಾದರೆ, ನೀನು ಪಂಚಶಿಖನಿಂದ ಹೊಂದಿದಜ್ಞಾನವು ನಿಷ್ಫಲವೇ ಸರಿ. ಅದು ಸಂಸಾರ ತಾರಕವಲ್ಲ.

೧೧. ನೀನು ಗೃಹಸ್ಥಾಶ್ರಮದಿಂದಲೂ ಭ್ರಷ್ಟನಾಗಿ, ಮೋಕ್ಷಧರ್ಮದಿಂದಲೂ ಭ್ರಷ್ಟನಾಗಿ, ಉಭಯ ಭ್ರಷ್ಟನಾಗಿ ಕಾಣುತ್ತಿರುವೆ. ಬಾಯಲ್ಲಿ ಮೋಕ್ಷವಿಚಾರ ಮಾಡುತ್ತಾ ತ್ರಿಶಂಕುವಿನಂತೆ ಎರಡರ ನಡುವೆ ಇದ್ದೀಯಾ ರಾಜನ್!

೧೨. ಯಾರು ಒಬ್ಬ ಮುಕ್ತನಲ್ಲಿ ಮತ್ತೊಬ್ಬ ಮುಕ್ತನಲ್ಲಿ ವಿಚಾರದಿಂದ ಪರಸ್ಪರ ಭೇದವನ್ನು ಅರಿತಿರುತ್ತಾನೋ ಅವನಿಗೆ ವರ್ಣಸಂಕರದ ಬುದ್ಧಿ ಹೇಗೆ ತಾನೇ ಹುಟ್ಟೀತು? ವಿರುದ್ಧ ಗುಣವುಳ್ಳವರ ಸಮಾಯೋಗವಾದಲ್ಲಿ ಸಾಂಕರ್ಯವನ್ನು ಹೇಳಬಹುದು.

೧೩. ನಾನು ಜಾತಿಯಲ್ಲಿ ಶ್ರೇಷ್ಠಳೆಂದು ನೀನು ಹೇಳಿರುವೆ. ಅದು ಸರಿಯಲ್ಲ. ನಾನು ಜಾತಿಯಲ್ಲಿ ನಿನಗಿಂತ ಮೇಲೂ ಅಲ್ಲ, ಕೀಳೂ ಅಲ್ಲ. ನಾನು ಪ್ರಧಾನ ಎಂಬ ರಾಜರ್ಷಿಯ ಕುಲದಲ್ಲಿ ಜನಿಸಿದವಳು. ನನ್ನ ಹೆಸರು ಸುಲಭಾ, ದ್ರೋಣಗಿರಿ, ಶತಶೃಂಗಗಿರಿ, ಶಕ್ರದ್ವಾರಗಳೆಂಬ ಬೆಟ್ಟಗಳೇ ನಿನ್ನ ವಂಶದವರು ಮಾಡಿದ ಯಾಗದಲ್ಲಿ ಯೂಪಸ್ತಂಭಗಳಾಗಿದ್ದವು. ನನ್ನ ಹಿಂದಿನವರು ಮಾಡಿದ ಯಜ್ಞದಲ್ಲಿ ಮಘವನ್ ಹೆಸರಿನ ಪರ್ವತದಿಂದ ಸಹಿತವಾದ ಎಲ್ಲ ಬೆಟ್ಟಗಳೂ ಯಜ್ಞದ ಯೂಪಸ್ತಂಭಗಳಂತೆ ಒಟ್ಟಾಗಿದ್ದವು.

೧೪. ರಾಜನ್! ನಾನು ಅಂತಹ ಕುಲದಲ್ಲಿ ಹುಟ್ಟಿದವಳಾಗಿ ಬ್ರಾಹ್ಮಣವೇಷ ಬಿಟ್ಟು ವೇಷಾಂತರದಿಂದ ಬಂದಿಲ್ಲ. ನನಗೆ ತಕ್ಕಪತಿ ದೊರೆಯದಿರಲು ಮೋಕ್ಷಧರ್ಮಕ್ಕೆ ಮಾರು ಹೋಗಿ ಏಕಾಂಗಿಯಾಗಿ ಈ ಮುನಿವ್ರತವನ್ನು ಹಿಡಿದಿದ್ದೇನೆ.

೧೫. ನಾನು ವೇಷಾಂತರವನ್ನು ಧರಿಸಿದವಳೂ ಅಲ್ಲ. ಪರರ ಐಶ್ವರ್ಯದಲ್ಲಿ ಆಶೆಯೂ ಇಲ್ಲ. ಧರ್ಮ ಸಾಂಕರ್ಯ ಮಾಡಿಲ್ಲ. ಸ್ವಧರ್ಮದಲ್ಲಿ ದೃಢವ್ರತ ಹೊಂದಿದ್ದೇನೆ.

೧೬. ನಾನು ವಿಮರ್ಶೆ ಮಾಡದೆ ಮಾತಾಡುವುದಿಲ್ಲ. ಮಾತಾಡಿಲ್ಲ. ಇಲ್ಲಿಗೆ ಬಂದಿರುವುದು ಸಹ ವಿವೇಚನೆಯಿಲ್ಲದೆ ಮಾಡಿದ್ದಲ್ಲ.

೧೭. ನಿನ್ನ ಬುದ್ಧಿಯು ಮೋಕ್ಷದಲ್ಲಿ ನೆಲೆಸಿದೆ ಎಂದು ಕೇಳಿದೆ. ನಿನ್ನ ಕ್ಷೇಮ ಉದ್ದೇಶಿಸಿಯೇ ನಿನ್ನನ್ನು ಪರೀಕ್ಷಿಸಲು ಇಲ್ಲಿಗೆ ಬಂದಿದ್ದೇನೆ.

೧೮. ಯಾವರೀತಿಯಾಗಿ ಸನ್ಯಾಸಿಯು ಪಟ್ಟಣದಲ್ಲಿ ಯಾರೂ ಇಲ್ಲದ ಗೃಹದಲ್ಲಿ ಒಂದೇ ರಾತ್ರಿ ವಾಸಮಾಡಿ ಮಾರನೇ ದಿನ ಆ ಗೃಹ ಬಿಟ್ಟು ಹೋಗುವಂತೆ ನಾನು ಜ್ಞಾನಶೂನ್ಯವಾದ

ನಿನ್ನ ಶರೀರದಲ್ಲಿ ಒಂದು ರಾತ್ರಿ ನೆಲೆಸಿರುತ್ತೇನೆ. ಗೌರವದಿಂದಲೂ, ನಿನ್ನ ಪ್ರೀತಿಯ ಮಾತುಗಳಿಂದಲೂ, ಆತಿಥ್ಯದಿಂದಲೂ ನಿನ್ನಿಂದ ಸತ್ಕೃತಳಾಗಿ ನಾಳೆಯೇ ಹೋಗಿಬಿಡುತ್ತೇನೆ.

ಹೀಗೆ ಸುಲಭೆಯ ಅರ್ಥವತ್ತಾದ ಯುಕ್ತಿಯುಕ್ತವಾದ ಮಾತುಗಳನ್ನು ಕೇಳಿದ ಜನಕ ಮಹಾರಾಜನು ಮುಂದೆ ಮಾತನಾಡಲಾಗದೆ ಸುಮ್ಮನಾದನು.

## ಸಂದೇಶಗಳು-ವಿವರಣೆಗಳು

೧. ಇದೊಂದು ಸಂಕೀರ್ಣಶಾಸ್ತ್ರವಿಷಯಗಳಿಂದ ಕೂಡಿದೆ. ಕರ್ಮಯೋಗಿ ಎಂದು ಪ್ರಸಿದ್ಧನಾದ ಜನಕನನ್ನೂ ಪರೀಕ್ಷೆ ಮಾಡಿ ಆತನನ್ನು ತನ್ನ ಯುಕ್ತಿಯುಕ್ತ ಮಾತುಗಳಿಂದ ಜಯಿಸಿದ ಸುಲಭಾ ಸನ್ಯಾಸಿಯು ಆತನನ್ನೂ ಮೀರಿಸಿದ ಕರ್ಮಯೋಗಿ ಎಂದು ಹೇಳಬಹುದೆಂದು ತೋರುತ್ತದೆ.

೨. ಸುಲಭಾ ಎಂಬ ಜ್ಞಾನಿ ಬಗ್ಗೆ ಹೆಚ್ಚು ಪ್ರಚಾರವಿಲ್ಲ. ಆಕೆಯ ಪ್ರಖರವಾದ ವಿಷಯಪ್ರತಿಪಾದನೆ ಶೈಲಿ, ಜನಕನನ್ನು ನಿರುತ್ತರನನ್ನಾಗಿ ಮಾಡಿತು.

೩. ಸ್ತ್ರೀಯರಲ್ಲಿಯೂ ಇಂತಹ ವೈರಾಗ್ಯ ಎಲ್ಲ ಸ್ತ್ರೀಯರಿಗೂ, ಪುರುಷರಿಗೂ ಆದರ್ಶ, ಆಕೆಯ ಯೋಗಸಿದ್ಧಿಯೂ ಅಂತಹುದೇ.

೪. ಆಕೆಯ ಮಾತುಗಾರಿಕೆಯ ಗುಣಗಳನ್ನು ಇತ್ಯಾದಿ ಆಕೆಯ ಪಟ್ಟಿ ಮಾಡಿರುವುದು ಅನುಕರಣೀಯ (ಶ್ಲೋ. ೮೭-೯೫). ಇವೆಲ್ಲ '**ನಿರ್ದೋಷಃ ಶಬ್ದಃ ಆಗಮಃ**' ಎಂಬ ಆಗಮದ ಲಕ್ಷಣದ ವಿವರಣೆಯಂತಿದೆ.

ಇತ್ಯಾದಿ.....

# ೧೧೧. ವ್ಯಾಸರಿಂದ ಶುಕರಿಗೆ ಉಪದೇಶ

ಧರ್ಮರಾಜನು ಭೀಷ್ಮರನ್ನು ಕುರಿತು ಶುಕರಿಗೆ ಹೇಗೆ ವೈರಾಗ್ಯ ಬಂತು? ಎಂಬ ಬಗ್ಗೆ ಕೇಳಿದಾಗ, ಭೀಷ್ಮರು ಉತ್ತರಿಸುತ್ತಾರೆ.

'ಶುಕನು ಸಾಮಾನ್ಯ ಜನರಂತೆ ಭಯರಹಿತನಾಗಿ ಲೋಕದಲ್ಲಿ ಸಂಚರಿಸುತ್ತಾ ಇದ್ದ. ಅದನ್ನು ನೋಡಿ ವ್ಯಾಸರು ಸಮಗ್ರ ವೇದಾಧ್ಯಯನ ಮಾಡಿಸಿ ಹೀಗೆ ಉಪದೇಶಿಸಿದರು. ತೊಂಭತ್ತು ಶ್ಲೋಕಗಳಿಂದ ವ್ಯಾಸರು ಈ ಲೋಕದ ಅಸಾರತ್ವವನ್ನೂ, ಧರ್ಮಾದಿಗಳು ಅನಿತ್ಯವೆಂಬುದನ್ನೂ, ಮೃತ್ಯುವು ಎಲ್ಲರನ್ನೂ ಅವರಿಗೆ ತಿಳಿಯದಂತೆಯೇ ಬೆನ್ನು ಹತ್ತಿರುತ್ತದೆಯಾದ್ದರಿಂದ ಧರ್ಮದಲ್ಲಿಯೇ ಆಸಕ್ತನಾಗಿರು ಎಂಬಿವೇ ಮೊದಲಾದ ಉಪದೇಶ ಮಾಡುತ್ತಾರೆ. ಅವುಗಳಲ್ಲಿ ಕೆಲವು ಅಂಶಗಳನ್ನು ಮಾತ್ರ ನೋಡೋಣ(ಸಂಕ್ಷಿಪ್ತವಾಗಿ).

೧. ನಿತ್ಯವೂ ಜಿತೇಂದ್ರಿಯನಾಗಿದ್ದು, ಧರ್ಮಾಚರಣೆ ಮಾಡು. ದೇಹದ ಮೇಲೆ ಪರಿಣಾಮ ಬೀರುವ ಹಸಿವು, ಬಾಯಾರಿಕೆ, ತೀಕ್ಷ್ಣವಾದ ಚಳಿ, ಬಿಸಿಲುಗಳಿಂದ ಧೃತಿಗೆಡದೆ ವಾಯುಜಯ ಮಾಡಿಕೋ(ಪ್ರಾಣಾಯಾಮದಿಂದ)(ಅ. ೧೫೩-೩).

೨. ಸತ್ಯ; ಕಾಯೇನ, ವಾಚಾ, ಮನಸಾ ಪ್ರಾಮಾಣಿಕವಾಗಿರುವುದು(ಒಂದೇ ರೀತಿ); ಸಿಟ್ಟಾಗದಿರುವುದು; ಅಸೂಯೆ ಪಡದಿರುವುದು(ಬೇರೆಯವರ ಏಳಿಗೆ ಬಗ್ಗೆ); ಇಂದ್ರಿಯನಿಗ್ರಹ; ತಪಸ್ಸು (ಶಾಸ್ತ್ರಜಿಜ್ಞಾಸಾ, ದೇಹದಂಡನಾತ್ಮಕವಾದ ವ್ರತಾಚರಣೆ); ಅಹಿಂಸಾ(ಶಾಸ್ತ್ರವಿಹಿತ); ದಯೆ (ಕ್ರೌರ್ಯವಿಲ್ಲದಿರುವುದು)- ಇವುಗಳನ್ನು ಜೀವನದಲ್ಲಿ ಅಳವಡಿಸಿಕೋ(ಶ್ಲೋ. ೪).

೩. ಸತ್ಯನಿಷ್ಠೆ ಇರಲಿ; ಧರ್ಮದಲ್ಲಿ ಆಸಕ್ತಿ; ಅಪ್ರಾಮಾಣಿಕವಾದ ಎಲ್ಲ ಮಾರ್ಗ ಬಿಡು; ದೇವತೆ(ದೇವಪೂಜಾ, ಯಾಗ), ಅತಿಥಿಪೂಜೆ(ಸತ್ಕಾರ)ಗಳನ್ನು ಮಾಡಿ ಅವರಿಗೆ ನೀಡಿ ಉಳಿದ ಪದಾರ್ಥವನ್ನು ಸೇವಿಸಿ ಪ್ರಾಣಧಾರಣೆ ಮಾಡು(ಶ್ಲೋ.೫).

೪. ದೇಹ ನೀರಮೇಲಿನ ಗುಳ್ಳೆಯಂತೆ ಅನಿತ್ಯ. ಈ ದೇಹದಿಂದ ಹೇಗೆ ತಾನೆ(ಶಾಶ್ವತ) ಸುಖ ಸಿಕ್ಕೀತು? (ಶ್ಲೋ.೬)

೫. ಅರಿಷಡ್ವರ್ಗಗಳು ನಿನ್ನ ಮೇಲೆ ಬೀಳಲು ಸದಾ ಸಿದ್ಧವಾಗಿರುವಾಗ ನೀನು ಏಕೆ ತಿಳಿಯುತ್ತಿಲ್ಲ(ಶ್ಲೋ.೭).

೬. ಆಯುಷ್ಯ ದಿನೇ ದಿನೇ ವರ್ಷೇ ವರ್ಷೇ ಕ್ಷೀಣವಾಗುತ್ತಿರುವಾಗ ಉಳಿದ ಆಯುಷ್ಯವನ್ನು ಸಾರ್ಥಕ ಮಾಡಿಕೊಳ್ಳಲು ಏಕೆ ಗೊತ್ತಿಲ್ಲ?(ಶ್ಲೋ. ೮)

೭. ಲೋಕದಲ್ಲಿ ಅನೇಕರು ಕೇವಲ ದೇಹ ಪೋಷಣೆಯಲ್ಲಿ ನಿರತರು. ಅವರು ನಾಸ್ತಿಕರು (ಶ್ಲೋ. ೯).

೮. ಧರ್ಮ ವಿಷಯದಲ್ಲಿ ಅಸೂಯೆವುಳ್ಳವರು ತಪ್ಪು ದಾರಿಯಲ್ಲಿರುತ್ತಾರೆ. ಅಂತಹವರ ಜೊತೆಗೆ ಹೋಗುವವರೂ ತೊಂದರೆಗಳಿಗೆ ತುತ್ತಾಗುತ್ತಾರೆ (ಶ್ಲೋ.೧೦).

೯. ದೇವರು ಕೊಟ್ಟಿದ್ದರಲ್ಲಿ ತೃಪ್ತರಾದ, ಶಾಸ್ತ್ರಪರಾಯಣರಾದ, ಧರ್ಮಾವಲಂಬಿಗಳಾದ, ಸಜ್ಜನರ ಮಾರ್ಗವನ್ನೇ ನೀನು ಅವಲಂಬಿಸು (ಶ್ಲೋಕ. ೧೧).

೧೦. ಹಿರಿಯರ, ಧರ್ಮವೃದ್ಧರಾದ ಮಹನೀಯರ ಮಾರ್ಗ ಅನುಸರಿಸಿ ದುರ್ಮಾರ್ಗದಲ್ಲಿ ಸಾಗುವ ಮನಸ್ಸನ್ನು ನಿಗ್ರಹಿಸು(ಶ್ಲೋ. ೧೨)

೧೧. ಕಾಮಕ್ರೋಧ, ಮೃತ್ಯು, ಪಂಚೇಂದ್ರಿಯಗಳೆಂಬ ನದಿಯನ್ನು ಧೈರ್ಯವೆಂಬ ದೋಣಿಯನ್ನು ಅವಲಂಬಿಸಿ ಜೀವನದ ಕಷ್ಟಕರವಾದ ಕೋಟೆಗಳನ್ನು ದಾಟು (ಶ್ಲೋ. ೧೬).

೧೨. ಈ ಲೋಕವೆಲ್ಲ ಮೃತ್ಯುವಿನಿಂದ ಮುಪ್ಪಿನಿಂದ ಪೀಡಿತವಾಗಿದೆ. ಇಂತಹ ಭಾರಿ ಅಲೆಗಳು ಅಪ್ಪಳಿಸುತ್ತಿರುವಾಗ ಧರ್ಮವೆಂಬ ದೋಣಿಯನ್ನು ಆಶ್ರಯ ಮಾಡು (ಶ್ಲೋ.೧೭).

೧೩.ಮೃತ್ಯುವಿಗೆ ಕಾಲ ನಿಬಂಧನೆ ಇಲ್ಲ, ನಾವು ಕೂತಿರಲಿ, ನಿಂತಿರಲಿ, ಮಲಗಿರಲಿ ಯಾವಾಗಲೂ ಬೆನ್ನು ಹತ್ತಿರುತ್ತಿದೆ. ಅದರ ಪರಿಹಾರವನ್ನು ನೀನು ಏಕೆ ಅಪೇಕ್ಷಿಸುತ್ತಿಲ್ಲ (ಶ್ಲೋ.೧೮).

೧೪. ಮೃತ್ಯು ತೋಳವಿದ್ದಂತೆ. ತಮಗೆ ಬೇಕಾದುದನ್ನು ಹುಡುಕುತ್ತಾ ಹೋಗುವ ಕುರಿಗಳ ಮೇಲೆ ಎರಗುವಂತೆ ಕಾಮತೃಪ್ತಿಗಾಗಿ ಅಲೆಯು ಮನುಷ್ಯನನ್ನೂ ಮೃತ್ಯುವು ಕಬಳಿಸುತ್ತದೆ (ಶ್ಲೋ. ೧೯).

೧೫. ಸಂಸಾರವೆಂಬ ಅಂಧಕಾರಕ್ಕೆ ಧರ್ಮಬುದ್ಧಿಯೇ ದೀಪ. ಅದನ್ನು ಬೆಳಗಿಸುತ್ತಾ ಸಂಸಾರ ದಾಟು (ಶ್ಲೋ. ೨೦).

೧೬. ಅನೇಕ ಹೀನ ದೇಹಗಳನ್ನು ಹೊಂದಿದ ಮೇಲೆ ಅದೃಷ್ಟವಶಾತ್ ಸಿಕ್ಕ ಮಾನುಷಜನ್ಮವನ್ನು, ನಂತರ ಅತ್ಯಂತ ಪುಣ್ಯವಿಶೇಷದಿಂದ ಸಿಕ್ಕ, ಬ್ರಾಹ್ಮಣ ಜನ್ಮವನ್ನು ಸಾರ್ಥಕವಾಗಿಸು (ಶ್ಲೋ. ೨೧).

೧೭. ಈ ಬ್ರಾಹ್ಮಣದೇಹ ಅರ್ಥಕಾಮಕ್ಕೋಸ್ಕರ ಹುಟ್ಟಿಲ್ಲ(ಸಿಕ್ಕಿಲ್ಲ). ಇಲ್ಲಿ (ಸಿಕ್ಕಾಗ) ಕ್ಲೇಶಕರವಾದ ತಪಸ್ಸನ್ನು ಮಾಡಲು, ನಂತರ ಅತ್ಯುತ್ತಮ ಸುಖ ಹೊಂದಲು ಸಿಕ್ಕಿದೆ. ಆದ್ದರಿಂದ ಜನ್ಮಸಾರ್ಥಕ ಮಾಡಿಕೊ (ಶ್ಲೋ. ೨೨).

೧೮. ಸತ್ಯಲೋಕವೇ ಮೊದಲಾದ ದೊಡ್ಡ ದೊಡ್ಡ ಲೋಕಗಳ ವಿಷಯವನ್ನು ಹೇಳುತ್ತೀಯಾ? ಆದರೆ ಇವಕ್ಕೂ ಮಿಗಿಲಾದ ಪರಮಪದದ(ಮೋಕ್ಷ) ಬಗ್ಗೆ ನಿನಗೆ ದೃಷ್ಟಿಯೇ ಇಲ್ಲವಲ್ಲ! (ಶ್ಲೋ. ೩೨)

೧೯. ಪ್ರಭು ಯಮನು ಮತ್ತೊಬ್ಬರ ದುಃಖಗಳನ್ನು ನೋಡುವುದಿಲ್ಲ . ಎಲ್ಲ (ನಿನ್ನ) ಬಾಂಧವರ ಜೊತೆ ಎಲ್ಲರ ಪ್ರಾಣ ಅಪಹರಿಸಬಲ್ಲ. ಹೀಗಿರುವಾಗ ನಿನ್ನ ಪ್ರಾಣ ಅವನಿಗೇಕೆ ಗಣನೆಗೆ ಬರುತ್ತದೆ? ಆತನನ್ನು ತಡೆಯುವರಾರೂ ಇಲ್ಲ(ಶ್ಲೋ. ೩೫).

೨೦. ಮಗನೇ! ಶರೀರತ್ಯಾಗ ಮಾಡುವಾಗ ವ್ಯಾಕುಲವಾಗುವ ನಿನಗೆ ಸ್ಮೃತಿಸ್ಮರಣೆ ನಾಶವಾಗುತ್ತದೆ. ಹಾಗಾಗುವ ಮೊದಲೇ ಉತ್ತಮವಾದ ಸಮಾಧಿಯೋಗ ಆಚರಿಸು (ದೇವರಲ್ಲಿ ಮನಸ್ಸನ್ನಿಡು)(ಶ್ಲೋ. ೩೮).

೨೧. ಮರಣಕ್ಕೂ ಮೊದಲು ಮುಪ್ಪು ಶರೀರವನ್ನು ಜೀರ್ಣಗೊಳಿಸುತ್ತದೆ. ಎಲ್ಲ ಅವಯವಗಳ ಶಕ್ತಿಯನ್ನು ಅಪಹರಿಸುತ್ತದೆ. ಆದ್ದರಿಂದ ಇವಾಗುವ ಮೊದಲೇ ಕೇವಲ ನಿಧಿಸ್ವರೂಪನಾದ ಭಗವಂತನನ್ನು ಧ್ಯಾನಿಸು(ಶ್ಲೋ. ೪೦).

೨೨. ಮರಣಕ್ಕೂ ಮೊದಲು ಶರೀರವನ್ನು ಮೃತ್ಯು, ರೋಗ ಎಂಬ ಬಾಣಗಳಿಂದ ತುಂಡು ತುಂಡು ಮಾಡುತ್ತಾನೆ. ಕಾರಣ ಅದಕ್ಕೂ ಮೊದಲೇ ತಪಸ್ಸನ್ನು ಮಾಡು(ಶ್ಲೋ. ೪೧).

೨೩. ದೇಹದಲ್ಲಿ ತೋಳಗಳೆಂಬ ಅರಿಷಡ್ವರ್ಗಗಳು ನಿನ್ನನ್ನು ತಿನ್ನಲು ಬರುತ್ತವೆ. ಅವು ಬರುವ ಮೊದಲೇ ಪುಣ್ಯ ಸಂಪಾದಿಸು(ಶ್ಲೋ. ೪೨).

೨೪. ಮುಂದೆ ಒಬ್ಬನೇ ಅಂಧಕಾರದಲ್ಲಿ ತಿರುಗಬೇಕಾಗುತ್ತದೆ. ಪರ್ವತಶಿಖರದಲ್ಲಿ ಸುವರ್ಣಮಯ ವೃಕ್ಷಗಳನ್ನು ಮರಣಸೂಚಕವಾಗಿ ನೋಡುತ್ತೀ. ಇದನ್ನು ಕಾಣುವ ಮೊದಲೇ ಆತ್ಮೋದ್ಧಾರಕ್ಕಾಗಿ ಪ್ರಯತ್ನಿಸು (ಶ್ಲೋ. ೪೩).

೨೫. ದುಷ್ಟಸಂಗಗಳು ಮಿತ್ರರಂತೆ ನಟಿಸುವ ಶತ್ರುಗಳು ದಾರಿ ತಪ್ಪಿಸಿ ಭ್ರಷ್ಟನನ್ನಾಗಿಸುವ ಮೊದಲೇ ಪರಮಪದವಿಗೆ ಪ್ರಯತ್ನಿಸು (ಶ್ಲೋ. ೪೪).

೨೬. ಯಾವ ಧನಕ್ಕೆ ರಾಜ, ಚೋರರಿಂದ ಭಯವಿಲ್ಲವೋ, ಮೃತನಾದರೂ ನಿನ್ನೊಡನೇ ಇರುವ ಧರ್ಮಾರ್ಥಗಳನ್ನು ಸಂಪಾದಿಸು (ಶ್ಲೋ. ೪೫).

೨೭. ತಂದೆ-ತಾಯಿ ಬಂಧುಗಳು ಪ್ರಿಯ ಜನರು ಯಾರೂ ಸತ್ತ ಜೀವನೊಡನೆ ಬರುವುದಿಲ್ಲ. ಧರ್ಮ ಒಂದೇ ಬರುವುದು. ಅದನ್ನು ಸಂಪಾದಿಸು (ಶ್ಲೋ. ೪೯).

೨೮. ಮನುಷ್ಯನು ಒಳ್ಳೆಯ ಅಥವಾ ಕೆಟ್ಟ ಮಾರ್ಗಗಳಿಂದ ಸಂಪಾದಿಸಿದ ಧನಕನಕಗಳು ದೇಹನಾಶವಾದಾಗ ಅವನ ಹಿತ ಚಿಂತನೆ ಮಾಡುವುದಿಲ್ಲ. ಧರ್ಮವೊಂದೇ ಹಿಂದೆ ಬರುತ್ತದೆ (ಶ್ಲೋ. ೫೧).

೨೯. ಪರಲೋಕಕ್ಕೆ ಹೋಗುವ ಶರೀರಿಗೆ ತನಗೆ ತಾನೇ ಸಾಕ್ಷಿ ಹೊರತು, ಬೇರೆ ಯಾರೂ ಸಾಕ್ಷಿಯಾಗಿ ಬರುವುದಿಲ್ಲ (ಶ್ಲೋ. ೫೨).

೩೦. ಮನುಷ್ಯರು ಇಲ್ಲಿ ಮಾಡಿದ ಕರ್ಮಗಳಿಗೆ ಪರಲೋಕದಲ್ಲಿ ಸಾಕ್ಷಿಯಾಗಿ ಅಗ್ನಿ, ವಾಯು, ಸೂರ್ಯರೇ ಸಾಕ್ಷಿಯಾಗಿರುತ್ತಾರೆ (ಶ್ಲೋ. ೫೨).

೩೧. ನಿನಗೀಗಾಗಲೇ ೨೪ ವರ್ಷ ತೀರಿವೆ. ೨೫ನೇ ವರ್ಷ ಬಂದಿದೆ. ವಯಸ್ಸು ಹೀಗೆಯೇ ಹೋಗುತ್ತದೆ. ಆದ್ದರಿಂದ ಧರ್ಮ ಸಂಗ್ರಹಿಸು (ಶ್ಲೋ. ೬೨).

೩೨. ಮರಣ ಬೆನ್ನುಹತ್ತಿರುವ ನಿನಗೆ ಧನ, ಬಂಧು, ಪುತ್ರರು ಇವರಿಂದ ಏನಾಗಬೇಕಾಗಿದೆ? ನಿನ್ನ ಹೃದಯ ಗುಹೆಯಲ್ಲಿಯೇ ಇರುವ ಪರಮಾತ್ಮನನ್ನು ಅನುಸಂಧಾನ ಮಾಡು (ಧ್ಯಾನಿಸು). ನಿನ್ನ ತಾತ, ಮುತ್ತಾತರೆಲ್ಲ ಎಲ್ಲಿ ಹೋಗಿರುವರು ಗೊತ್ತೆ? ಯೋಚಿಸು (ಶ್ಲೋ. ೭೧).

೩೩. ನಾಳೆ ಮಾಡುವುದನ್ನು ಇಂದೇ ಮಾಡು. ಮಧ್ಯಾಹ್ನ ಮಾಡಬೇಕಾದುದನ್ನು ಬೆಳಿಗ್ಗೆಯೇ ಮಾಡು. ಮೃತ್ಯುವು ಅವನ (ಜೀವನ) ಕಾರ್ಯವಾಗಿರುವುದನ್ನು, ಆಗದೇ ಇರುವುದನ್ನು ನೋಡುವುದಿಲ್ಲ (ಶ್ಲೋ. ೭೨).

೩೪. ನಾಸ್ತಿಕರನ್ನು, ದಯಾಹೀನರನ್ನು, ಪಾಪಿಗಳನ್ನು ಅನುಸರಿಸಬೇಡ. ಭಗವಂತನನ್ನು ಹೊಂದಲು ಬಯಸಿರುವ ನಿನಗೆ ಇದು ಅವಶ್ಯ (ಶ್ಲೋ. ೭೪).

೩೫. ಯಾರು ಐಹಿಕ ಭೋಗಗಳನ್ನು ತೊರೆದು ಶಾರೀರಿಕ ತಪಸ್ಸನ್ನು ಮಾಡುವರೋ, ಅವರಿಗೆ ತಪಸ್ಸಿನಿಂದ ಪಡೆಯದ ಫಲವೇ ಇಲ್ಲ. ಆದ್ದರಿಂದ ತಪಸ್ಸೇ ಎಲ್ಲ ಫಲಗಳ ಮೂಲ (ಶ್ಲೋ. ೮೩).

೩೬. ಪ್ರತಿ ಮನುಷ್ಯನಿಗೆ (ಹಿಂದೆ) ಸಾವಿರಾರು ತಂದೆ, ತಾಯಿ, ಸಾವಿರಾರು ಮಕ್ಕಳು, ಪತ್ನಿಯರು ಬಂದಿದ್ದಾರೆ, ಮುಂದೆ ಬರುತ್ತಾರೆ. ಈ ಜೀವನು ಯಾರಿಗೆ ಸಂಬಂಧಿಸಿದ್ದಾನೆ? ಅವರೆಲ್ಲರೂ ಯಾರಿಗೆ ಸಂಬಂಧಿಸಿದವರು? (ಶ್ಲೋ. ೮೪)

೩೭. ಈ ಲೋಕದಲ್ಲಿ ಧನಿಕನಿಗೆ ಬೇರೆಯವರೂ ಬಂಧು ಜನರಂತಿರುತ್ತಾರೆ. ದರಿದ್ರರಿಗೆ ಬಂಧು ಜನರು ಬದುಕಿದ್ದಾಗಲೂ ಸತ್ತಂತಿರುತ್ತಾರೆ (ಶ್ಲೋ. ೮೬).

೩೮. ಕಾಲನೆಂಬ ಅಡುಗೆಯವನು ಕರ್ಮಫಲಕ್ಕೆ ಸಾಕ್ಷಿಭೂತನಾದ ಹಗಲು, ರಾತ್ರಿಗಳೆಂಬ ಕಟ್ಟಿಗೆಯಿಂದಲೂ, ಸೂರ್ಯನೆಂಬ ಅಗ್ನಿಯಿಂದಲೂ, ಮಾಸ, ಋತು ಎಂಬ

ಹೆಸರಿನ (ಸಂಜ್ಞಕವಾದ) ಮಗಚು ಕೈಯಿಂದ (ಮೇಲೆ ಕೆಳಗೆ ಮಾಡುತ್ತಾ) ಜೀವರನ್ನು ಒತ್ತಾಯಪೂರ್ವಕವಾಗಿ ಬೇಯಿಸುತ್ತಾನೆ (ಶ್ಲೋ. ೯೨).

೩೯. ತಾನು ಭುಂಜಿಸದ (ಉಣ್ಣದ) ಪರರಿಗೆ ಕೊಡದ ಧನದಿಂದ ಏನು ಪ್ರಯೋಜನ? ಶತ್ರುಗಳನ್ನು ಬಾಧಿಸದ ಬಲದಿಂದ ಏನು ಪ್ರಯೋಜನ? ಆಚರಣೆ ಮಾಡದ ಶಾಸ್ತ್ರಶ್ರವಣದಿಂದ ಏನು ಪ್ರಯೋಜನ? ಯಾವನು ಜಿತೇಂದ್ರಿಯನಲ್ಲವೋ, ಮನಸ್ಸನ್ನು ವಶದಲ್ಲಿಟ್ಟುಕೊಂಡಿಲ್ಲವೋ ಅಂತಹವನಿಗೆ ಈ ದೇಹದಿಂದೇನು ಪ್ರಯೋಜನ?

ಹೀಗೆ ಜೀವನಕ್ಕೆ ಅವಶ್ಯ ಬೇಕಾದ ನೂರಾರು ವಿಷಯಗಳ ಉಪದೇಶವನ್ನು ಕೇಳಿದ ಶುಕನು ತಂದೆಯನ್ನು ಬಿಟ್ಟು ಮೋಕ್ಷೋಪದೇಶಕ ಗುರುವನ್ನು ಹುಡುಕಿಕೊಂಡು ಹೊರಟನು.

## ಸಂದೇಶಗಳು-ವಿವರಣೆಗಳು

ಮೇಲಿನ ಉಪದೇಶಗಳೇ ಸಂದೇಶಗಳು. ನಮಗೆ ಇವು ಅಧ್ಯಾತ್ಮ ದಾರಿದೀಪವಾಗಿರಲಿ.

ನಾರಾಯಣನೇ ವ್ಯಾಸರು. ಶುಕರು ರುದ್ರಾವತಾರಿ. ಶುಕರನ್ನು ನಿಮಿತ್ತ ಮಾಡಿಕೊಂಡು ವ್ಯಾಸರು ನಮಗೆಲ್ಲ ಉಪದೇಶಿಸಿದ್ದಾರೆ. ಯದ್ಯಪಿ ಶುಕರು ವ್ಯಾಸರಿಂದಲೂ ಉಪದೇಶ ಮಾಡಿಕೊಳ್ಳುವುದು ಅವಶ್ಯ, ಅನಿವಾರ್ಯ. ಬ್ರಹ್ಮಪಿತನಾದ, ತನಗೆ ತಾತನಾದ ವ್ಯಾಸರಿಂದ ಶುಕರು ಉಪದೇಶ ಮಾಡಿಸಿಕೊಂಡದ್ದು ಅವರ ಭಾಗ್ಯವೇ ಸರಿ.

*****

# ೧೧೨. ಪುತ್ರಸಂತಾನಕ್ಕಾಗಿ ವ್ಯಾಸರ ತಪಸ್ಸು

ಧರ್ಮರಾಜನು ಭೀಷ್ಮರನ್ನು ವ್ಯಾಸರಿಗೆ ಶುಕನು ಹೇಗೆ ಜನಿಸಿದ? ಮಹಾಸಿದ್ಧಿಯನ್ನು ಶುಕನು ಹೇಗೆ ಹೊಂದಿದ? ಯಾವ ಸ್ತ್ರೀ ಗರ್ಭದಿಂದ ಶುಕನನ್ನು ವ್ಯಾಸರು ಪಡೆದರು? ಆತನ ಜನ್ಮಚರಿತೆಯನ್ನು ಹೇಳಿರಿ? ಬಾಲ್ಯದಲ್ಲಿಯೇ ಶುಕನಿಗೆ ಭಗವದ್ವಿಷಯಕ ಸೂಕ್ಷ್ಮಜ್ಞಾನ ಹೇಗೆ ದೊರಕಿತು? ಶುಕನ ಮಹಿಮೆ, ಭಗವಂತನ ಯೋಗ, ಆತನ ವಿಶೇಷಜ್ಞಾನಾದಿಗಳ ಬಗ್ಗೆ ಹೇಳಿರೆಂದಾಗ, ಭೀಷ್ಮರು –

'ಧರ್ಮಾನುಷ್ಠಾನವು, ವಯಸ್ಸು ತಲೆಗೂದಲಿನ ಬಿಳುಪಾಗುವಿಕೆ, ಹಣ, ಬಂಧುಗಳಿಂದ ಆಗನು. ಅದು ತಪಸ್ಸಿನಿಂದ ಮಾತ್ರ. ಅದಕ್ಕೆ ಇಂದ್ರಿಯನಿಗ್ರಹ ಬೇಕು. ಇಂದ್ರಿಯಗಳ ಸ್ವೇಚ್ಛಾಚರಣೆ ಪಾಪಸಾಧನ. ಅದರ ನಿಗ್ರಹವೇ ಸಿದ್ಧಿಗೆ ಸಾಧನ. ಸಾವಿರಾರು ಅಶ್ವಮೇಧ, ನೂರಾರು ವಾಜಪೇಯಿ ಯಾಗಗಳು ಇಂತಹ ಸಿದ್ಧಿ ಕೊಡವು.

ಹಿಂದೆ ಮೇರುಪರ್ವತದ ಶಿಖರದಲ್ಲಿ ರುದ್ರದೇವರು ತಮ್ಮ ಪರಿವಾರದೊಂದಿಗೆ (ಕರ್ಣಿಕಾರವನದಿಂದ ಅಂದವಾದ) ವಿಹಾರ ಮಾಡುತ್ತಿದ್ದರು. ಅಲ್ಲಿ ಶಿವನೊಂದಿಗೆ ಶಿವಪತ್ನಿ ಪಾರ್ವತಿಯಿದ್ದಳು. ಅಲ್ಲಿಯೇ ವ್ಯಾಸರು ಪುತ್ರನನ್ನು ಪಡೆಯಲು ಯೋಗಾಚರಣೆಯಿಂದ ಧ್ಯಾನಾಸಕ್ತರಾಗಿ ತಪಸ್ಸನ್ನು ಮಾಡುತ್ತಿದ್ದರು. ಪಂಚಭೂತಗಳ ಪರಾಕ್ರಮ(ವೀರ್ಯ)ಕ್ಕೆ ಸಮಾನವಾದ ಪರಾಕ್ರಮವುಳ್ಳ ಮಗನು ಜನಿಸಲಿ ಎಂದು ಅವರು ತಪಸ್ಸು ಮಾಡಿದರು. ನೂರು ವರ್ಷಗಳವರೆಗೆ ಅನೇಕ ರೂಪವುಳ್ಳ ಉಮಾಪತಿಯನ್ನು ಆರಾಧಿಸಿದಾಗ ಅಲ್ಲಿ ಬ್ರಹ್ಮರ್ಷಿಗಳು, ದೇವರ್ಷಿಗಳು, ಲೋಕಪಾಲಕರು ಮೊದಲಾದವರು ನೆರೆದಿದ್ದರು.

ಅಲ್ಲಿ ಮಂಗಲಕರವಾದ ಪುಷ್ಪಮಾಲೆಯನ್ನು ಧರಿಸಿ, ಚಂದ್ರನಂತೆ ಬೆಳಗುವ ರುದ್ರದೇವರು ಇದ್ದರು. ನೂರು ವರ್ಷ ಅಖಂಡ ಇಂದ್ರಿಯನಿಗ್ರಹದಿಂದ ವಾಯುವನ್ನೇ ಆಹಾರವಾಗಿಸಿಕೊಂಡು ತಪಸ್ಸನ್ನು ಮಾಡಿದ ವ್ಯಾಸರ ಶರೀರವರ್ಣ, ಮೊದಲಿನಂತೆಯೇ ಇತ್ತು. ದೇಹಕೃಶವಾಗಿರಲಿಲ್ಲ. ಮೂರು ಲೋಕಗಳಿಗೆ ಇದು ಆಶ್ಚರ್ಯವಾಗಿ ಕಂಡಿತು. ಅವರ ಜಟೆಗಳು ತಪಸ್ಸಿನಿಂದ ಅಗ್ನಿಯಂತೆ ಪ್ರಜ್ವಲಿಸುತ್ತಿದ್ದವು. ಇಂತಹ ನಿರ್ವಿಕಾರ ಶಾರೀರಿಕ ತೇಜಸ್ಸು ಇತರ ತಪಸ್ವಿಗಳಲ್ಲಿ ಸಾಧ್ಯವಿಲ್ಲವಲ್ಲ! ಆಗ ಇದ್ದ ತೇಜಸ್ಸು ಇಂದಿಗೂ ಆ ಜಟೆಗಳಲ್ಲಿ ಅಗ್ನಿಸದೃಶವಾಗಿಯೇ ಇವೆ. ಇಂತಹ ತಪಸ್ಸು ಭಕ್ತಿಯಿಂದ ಪ್ರಸನ್ನನಾದ ಮಹೇಶ್ವರನು ವ್ಯಾಸರ ಬಳಿಗೆ ಬಂದು ನಿಮಗೆ (ನನ್ನಂತಹ) ಮಗನು ಹೀಗೆಯೇ(ನೀವು ಬಯಸಿದ್ದಂತೆಯೇ)

ಹುಟ್ಟುತ್ತಾನೆ. ಎಂದರೆ ಹೇಗೆ ಅಗ್ನಿ, ವಾಯು, ಭೂಮಿ, ಜಲ ಮತ್ತು ಆಕಾಶ ಇವುಗಳು ಶುದ್ಧವೋ ಹಾಗೇ ಅತ್ಯಂತ ಪವಿತ್ರನಾದ ಮಗನು ಹುಟ್ಟುವನು ಎಂದು ರುದ್ರದೇವರು ಹೇಳಿದರು. ಅವನು ಯಾವಾಗಲೂ ಭಗವಂತನಲ್ಲಿಯೇ ಮನಸ್ಸಿಟ್ಟಿರುತ್ತಾನೆ. ಅವನನ್ನೇ ಆಶ್ರಯಿಸುತ್ತಾನೆ. ಕೀರ್ತಿವಂತನೂ ಆಗುತ್ತಾನೆ.

## ಸಂದೇಶಗಳು-ವಿವರಣೆಗಳು

೧. ಮಕ್ಕಳನ್ನು ಬಯಸುವುದು ಎಷ್ಟು ಸರಿಯೋ, ಅಷ್ಟೇ ಹುಮ್ಮಸ್ಸಿನಿಂದ ಶ್ರದ್ಧೆಯಿಂದ ಅದಕ್ಕಾಗಿ ಶಾಸ್ತ್ರಿಯವಾಗಿ ಪ್ರಯತ್ನಿಸಬೇಕು. ಅದಕ್ಕೋಸ್ಕರ ಸ್ವಯಂ ಭಗವಂತನೇ ತಪಸ್ಸನ್ನು ಮಾಡಿದ. ತನಗಿಂತ ಉತ್ತಮರು ಯಾರು ಇಲ್ಲವೇ ಇಲ್ಲ. ಆದ್ದರಿಂದ ಬ್ರಹ್ಮನ ಬದಲಾಗಿ ವಿವಾದ ಹುಟ್ಟುಹಾಕಲು ಅಸುರ ಮೋಹನಾರ್ಥವಾಗಿ ಹಾಗೂ ಸಜ್ಜನರಿಗೆ ಮಾರ್ಗದರ್ಶಕವಾಗಿಯೂ ರುದ್ರದೇವರನ್ನು ಸಂತಾನಕ್ಕಾಗಿ ತಪಸ್ಸನ್ನು ಮಾಡಿದಂತೆ ಮಾಡಿದ. ತಪಸ್ಸಿನಿಂದ ಸಿಗಲಾರದ ಯಾವ ಫಲವೂ ಇಲ್ಲ. ಸಂತಾನ ಫಲ ಅತಿ ಕನಿಷ್ಠ ಎಂದುದು. ಅದೇನೇ ಇರಲಿ ತಪಸ್ಸನ್ನು ಶ್ರದ್ಧೆಯಿಂದ ಮಾಡಿ ಜಗತ್ತಿಗೆ ಮಾದರಿಯಾಗಿ ವರ್ತಿಸಿದ, ಭಗವಂತ ವ್ಯಾಸರೂಪದಿಂದಲೇ.

೨. ಸತ್ಸಂತಾನವನ್ನೇ ಬಯಸಬೇಕು. ಪಂಚಭೂತಗಳ ಪರಾಕ್ರಮವಿರಬೇಕು. ಪ್ರಪಂಚದ ನಿರ್ಮಾಣವೇ ಪಂಚಭೂತಗಳಿಂದ. ಆದ್ದರಿಂದ ಅದನ್ನೇ ಮೂಲವೆಂದು ಬಗೆದು (ಲೋಕದೃಷ್ಟಿಯಲ್ಲಿ) ಅದನ್ನೇ ರುದ್ರದೇವರನ್ನು ಕೇಳಿ ವರ ಪಡೆದ.

೩. ಸಾಮಾನ್ಯರು (ಜೀವರು) ತಪಸ್ಸು ಮಾಡಿದರೆ ಉಪವಾಸಾದಿಗಳಿಂದ ಸೊರಗುತ್ತಾರೆ, ಕೃಶರಾಗುತ್ತಾರೆ. ಆದರೆ ವ್ಯಾಸರಿಗೆ ಯಾವ ದೈಹಿಕ ವಿಕಾರಗಳು ಆಗಲಿಲ್ಲ, ಆಗದು. ವ್ಯಾಸರು ದೇವರೇ ಆದ್ದರಿಂದ ಕಾಲ ಅವರ ಮೇಲೆ ಯಾವ ಪರಿಣಾಮ ಬೀರಲಿಲ್ಲ. ಏಕೆಂದರೆ ದ್ರವ್ಯ, ಕರ್ಮ, ಕಾಲ, ಸ್ವಭಾವ, ಜೀವ ಎಲ್ಲವೂ ಅವರಧೀನ. ಇತ್ಯಾದಿ...

*****

---

೧ ಯಥಾ ಹ್ಯಗ್ನಿರ್ಯಥಾವಾಯುರ್ಯಥಾ ಭೂಮಿರ್ಯಥಾ ಜಲಮ್ ।
ಯಥಾ ಚ ಖಂ ತಥಾ ಶುದ್ಧೋ ಭವಿಷ್ಯತಿ ಸುಯತೋ ಮಹಾನ್ । – ೧೫೫/೨೮

೨ ನ ಚಾಸ್ಯ ಹೀಯತೇ ವರ್ಣೋ ನ ಗ್ಲಾನಿರುಪಜಾಯತೇ ।
ತಾ ಏತಾದ್ಯಾಪಿ ಕೃಷ್ಣಸ್ಯ ತಪಸಾ ತೇನ ದೀಪಿತಾಃ ।
ಅಗ್ನಿವರ್ಣಾಜಟಾಸ್ತಾತ ಪ್ರಕಾಶಂತೇ ಮಹಾತ್ಮನಃ ॥ – ೧೫೫/೨೨,೨೫

# ೧೧೩. ಶುಕಾಚಾರ್ಯರ ಜನನ

ವ್ಯಾಸರು ರುದ್ರನಿಂದ ವರ ಪಡೆದು ಆಶ್ರಮಕ್ಕೆ ಬಂದು ಅಗ್ನಿ ಹುಟ್ಟಿಸಲು ಅಗ್ನಿಮಥನ ಕಟ್ಟಿಗೆಗಳನ್ನು ಕಡೆಯಲಾರಂಭಿಸಿದರು (ಉಜ್ಜಲಾರಂಭಿಸಿದರು). ಅದೇ ಹೊತ್ತಿಗೆ ಅಲ್ಲಿಗೆ ಮಹಾರೂಪವತಿಯಾದ ಘೃತಾಚಿ ಅಪ್ಸರೆಯನ್ನು ನೋಡಿ, ಅವಳಲ್ಲಿ ಕಾಮಕ್ಕೆ ಒಳಗಾದರು(ಸಾಮಾನ್ಯ ವ್ಯಕ್ತಿಯಂತೆ). ಆಕೆ ಅಲ್ಲಿಗೆ ಗಿಣಿಯ ರೂಪದಲ್ಲಿ ವ್ಯಾಸರ ಬಳಿ ಬಂದಳು. ಆಕೆಯಲ್ಲಿ ಅನುರಕ್ತಳಾದ ವ್ಯಾಸರು ಕಾಮೋದ್ವೇಗ ನಿಯಂತ್ರಿಸಲು ಪ್ರಯತ್ನಿಸಿದರೂ, ಸಾಧ್ಯವಾಗದೇ, ಅವರ ವೀರ್ಯವು ಅರಣಿಯಲ್ಲಿ ಬಿದ್ದಿತು. ಅವರು ಯಾವ ಶಂಕೆಯೂ ಇಲ್ಲದೆ ಅರಣಿಮಥನ ಮುಂದುವರೆಸಿದಾಗ ಅವುಗಳ ಮಧ್ಯದಲ್ಲಿ ಅಗ್ನಿಗೆ ಸದೃಶ ತೇಜಸ್ಸಿನಿಂದ ಕೂಡಿದ ಶುಕನು ಜನಿಸಿದ (ಹೆಣ್ಣು ಗಿಣಿಯ ದರ್ಶನದಿಂದ ವ್ಯಾಸರ ವೀರ್ಯದಿಂದ ಹುಟ್ಟಿದವನಾದ್ದರಿಂದ ಶುಕ (ಗಂಡು ಗಿಣಿ) ಎಂಬ ಹೆಸರು ಬಂದಿತು). ಅರಣೀ ಮಥನಕಾಲದಲ್ಲಿ ಜನಿಸಿದ್ದರಿಂದ ಅರಣೀಗರ್ಭಸಂಭವನೆಂದೂ ಹೆಸರಾದನು (ಶುಕ). ಯಜ್ಞದಲ್ಲಿ ಹವಿಸ್ಸು ಬಿದ್ದಾಗ ಅಗ್ನಿ ಹೇಗೆ ಪ್ರಜ್ವಲಿಸುತ್ತದೆಯೋ ಹಾಗೆ ಶುಕ ಮಹಾತೇಜಸ್ಸಿನಿಂದ ಕೂಡಿದ್ದನು. ತಂದೆಯ ರೂಪವರ್ಣದಿಂದಾಗಿ ಹೊಗೆರಹಿತ ಅಗ್ನಿಯಂತಿದ್ದ.

ಆಗ ಶುಕನಿಗೆ ಗಂಗೆ (ಸ್ತ್ರೀರೂಪದಿಂದ) ಬಂದು ಶುಕನಿಗೆ ಸ್ನಾನ ಮಾಡಿಸಿದಳು. ಅಂತರಿಕ್ಷದಿಂದ ದಂಡ ಕೃಷ್ಣಾಜಿನಗಳು ಭೂಮಿಯ ಮೇಲೆ ಬಿದ್ದವು. ಗಂಧರ್ವರು ಗಾನ ಮಾಡಿದರು, ಅಪ್ಸರೆಯರು ನರ್ತಿಸಿದರು. ದೇವದುಂದುಭಿಗಳು ಮೊಳಗಿದವು. ವಿಶ್ವಾವಸು, ಗಂಧರ್ವ, ತುಂಬುರು, ನಾರದರು, ಹಾಹಾ ಹೂಹೂ ಗಂಧರ್ವರು ಶುಕನ ಹುಟ್ಟುಹಬ್ಬವನ್ನು ಅನೇಕ ರೀತಿಯಿಂದ ಸ್ತುತಿಸಿದರು. ಇಂದ್ರಾದಿದೇವತೆಗಳು ಲೋಕಪಾಲಕರು, ದೇವತೆಗಳು, ದೇವರ್ಷಿ, ಬ್ರಹ್ಮರ್ಷಿಗಳು ಅಲ್ಲಿಗೆ ಆಗಮಿಸಿದರು. ಮಾರುತನು ಶುಕನ ಮೇಲೆ ದೇವಲೋಕದ ಎಲ್ಲ ಪುಷ್ಪಗಳನ್ನು ಸುರಿದನು (ಮಳೆಗರೆದನು). ಶುಕೋತ್ಪತ್ತಿಯಿಂದ ಜಗವೆಲ್ಲ ಮುದಗೊಂಡಿತು. ರುದ್ರದೇವರು ಉಮೆಯೊಡನೆ ಬಂದು ತಾನೇ ಶುಕನಿಗೆ ಉಪನಯನ ಮಾಡಿದನು.

ಆಗ ಶಕ್ರನು ಶುಕನಿಗೆ ದಿವ್ಯವಾದ ಕಮಂಡಲುವನ್ನು ದೇವಯೋಗ್ಯವಸ್ತ್ರಗಳನ್ನೂ ಕೊಟ್ಟನು. ಸಾವಿರಾರು ಹಂಸ, ಸಾರಸ, ಶುಕ, ಪಿಕ ಪಕ್ಷಿಗಳು ಶುಕನಿಗೆ ಪ್ರದಕ್ಷಿಣೆ ಮಾಡಿದವು. ಹೀಗೆ ಉಪನೀತನಾದ ಶುಕನು ಜಿತೇಂದ್ರಿಯನಾಗಿ, ಬ್ರಹ್ಮಚರ್ಯದಿಂದ ವ್ಯಾಸಾಶ್ರಮದಲ್ಲಿಯೇ ಇದ್ದನು. ಆದೇ ತಾನೇ ಹುಟ್ಟಿದ ಶುಕನನ್ನು ವೇದೋಪನಿಷತ್ತುಗಳು ಬ್ರಾಹ್ಮಣಾದಿಗಳು ಸೇವಿಸಿದವು. ಶುಕರು ಬೃಹಸ್ಪತ್ಯಾಚಾರ್ಯರನ್ನು ಉಪಾಧ್ಯಾಯನನ್ನಾಗಿ ವೇದಶಾಸ್ತ್ರ ರಾಜಶಾಸ್ತ್ರ ಇತಿಹಾಸಾದಿಗಳನ್ನು ಅಧ್ಯಯನ ಮಾಡಿ ಗುರುದಕ್ಷಿಣೆ ನೀಡಿ ಉಗ್ರವಾದ ತಪಸ್ಸನ್ನು ಆರಂಭಿಸಿದನು.

ಬಾಲ್ಯದಿಂದಲೇ ಶುಕನು ದೇವ, ಋಷಿ ಮಾನ್ಯನಾಗಿದ್ದ. ಆತನ ಬುದ್ಧಿ ಎಂದೂ ಗೃಹಸ್ಥಾದಿ ಆಶ್ರಮಗಳಲ್ಲಿ ಆಸಕ್ತವಾಗದೆ ಕೇವಲ ಮೋಕ್ಷದ ಮಾರ್ಗದಲ್ಲಿಯೇ ಆಸಕ್ತವಾಗಿತ್ತು.

## ಸಂದೇಶಗಳು-ವಿವರಣೆಗಳು

೧. ಒಬ್ಬ ಸಾಮಾನ್ಯ ಪುರುಷನು ಸೌಂದರ್ಯ, ರೂಪ, ಲಾವಣ್ಯಗಳಿಗೆ ಮರುಳಾಗುತ್ತಾನೆ ಎಂದು ತೋರಿಸಲು ವ್ಯಾಸರು ಘೃತಾಚಿಯ ರೂಪಕ್ಕೆ ಮರುಳಾಗಿ ವೀರ್ಯಸ್ಖಲನ ತೋರಿಸಿದರು. ಇದು ತಾತ್ಕಾಲಿಕವಾದ ಭೌತಿಕವೀರ್ಯ ಸೃಷ್ಟಿ ಮಾಡಿದ್ದೇ ಹೊರತು, ನಿಜವಾದ ಸ್ಖಲನವಲ್ಲ. ಅಪ್ರಾಕೃತ ಶರೀರ ವ್ಯಾಸರದು. ಅವರಿಗೆಲ್ಲಿ ಸ್ಖಲನಾದಿಗಳು. ಅವರೇ ಸೌಂದರ್ಯದ ಖನಿ, ಮೂಲವಸ್ತು. ಜಗತ್ತಿನಲ್ಲಿ ಹೀಗಾಗುತ್ತದೆ. ಮುಂದೆ ಕಲಿಯುಗದಲ್ಲಿ ಎಂತಹ ಶಾಸ್ತ್ರಜ್ಞನಿಗೂ ಕಾಮಕ್ರೋಧಗಳ ಉಪಟಳ ಸರ್ವೇ ಸಾಮಾನ್ಯ ಎಂಬ ನೀತಿಯನ್ನು ವ್ಯಾಸರು ತೋರಿಸಿದರು. ಇವೆಲ್ಲ ಅಸುರ ಮೋಹನಾರ್ಥಕ್ಕಾಗಿ.

೨. ಹುಟ್ಟಿದ ಮಗು ಅಸಾಮಾನ್ಯ, ಅನೈತಿಕ ಲೈಂಗಿಕ ಕ್ರಿಯೆಯಿಂದ ಹುಟ್ಟಿದ್ದರೆ ಶುಕರಂತಹ ಜ್ಞಾನ, ವೈರಾಗ್ಯ ಮೂರ್ತಿ ಹೇಗೆ ಹುಟ್ಟಲು ಸಾಧ್ಯ? ಆದ್ದರಿಂದ ವ್ಯಾಸರು ತೋರಿಸಿದ್ದು ಕೇವಲ ವಿಡಂಬನೆ.

೩. ಹುಟ್ಟಿದ ಮಗುವಿನ ಉಪನಯನ, ಎಲ್ಲವೂ ಅಸಾಮಾನ್ಯ. ಬ್ರಾಹ್ಮಣ ಶಿಶುವಿಗೆ ಜಾತಕರ್ಮ, ಉಪನಯನ ಮಾಡಿಸಲೇಬೇಕೆಂಬ ನೀತಿ ಇಲ್ಲಿದೆ. ವಾಮನದೇವರ ಉಪನಯನದ ರೀತಿಯು ಇಲ್ಲಿಯೂ ಆಗಿದೆ, ದೈವೀ.

೪. ಮಹಾಭಾರತತಾತ್ಪರ್ಯನಿರ್ಣಯದ ೧೦ನೇ ಅಧ್ಯಾಯದಲ್ಲಿ ವ್ಯಾಸಾವತಾರದ ಬಗೆಗಿನ ನಿರ್ಣಯಗಳನ್ನು ಇಲ್ಲಿ ಸ್ಮರಿಸಬೇಕು (ಶ್ಲೋ. ೬೯-೭೩)[೧].

**ಅಥಾಸ್ಯ ಪುತ್ರತ್ವಮವಾಪ್ತುಮಿಚ್ಛಂ**
**ಶ್ಚಚಾರ ರುದ್ರಃ ಸುತಪಸ್ತದೀಯಮ್ ।**
**ದದೌ ಚ ತಸ್ಮೈ ಭಗವಾನ್ ವರಂ ತಂ**
**ಸ್ವಯಂ ಚ ತಪ್ತ್ವೇವ ತಪೋ ವಿಮೋಹಯನ್ ॥** - ೧೦/೬೯

ರುದ್ರನು ವ್ಯಾಸರ ಮಗನಾಗಿ ಹುಟ್ಟಲು ಬಯಸಿ ಉತ್ತಮ ತಪಸ್ಸನ್ನು ಮಾಡಿದ. ವ್ಯಾಸರು ತಾವು ಶಿವನನ್ನು ಕುರಿತು ತಪಸ್ಸು ಮಾಡಿದಂತೆ ತೋರಿ ಅಯೋಗ್ಯರನ್ನು ಮೋಹಗೊಳಿಸುತ್ತಲೇ ಶಿವನಿಗೆ ಅವನು ಬಯಸಿದ ವರ ನೀಡಿದರು.

**ವಿಮೋಹನಾಯಾಸುರಸರ್ಗಿಣಾಂ ಪ್ರಭುಃ**
**ಸ್ವಯಂ ಕರೋತೀವ ತಪಃ ಪ್ರದರ್ಶಯೇತ್ ।**

---

೧ ಕೃಪೆ: ಅಖಿಲಭಾರತಮಾಧ್ವಮಹಾಮಂಡಲ; ಮ.ತಾ.ನಿ. ಭಾಗ-೨.

# ೧೧೩. ಶುಕಾಚಾರ್ಯರ ಜನನ

ವ್ಯಾಸರು ರುದ್ರನಿಂದ ವರ ಪಡೆದು ಆಶ್ರಮಕ್ಕೆ ಬಂದು ಅಗ್ನಿ ಹುಟ್ಟಿಸಲು ಅಗ್ನಿಮಥನ ಕಟ್ಟಿಗೆಗಳನ್ನು ಕಡೆಯಲಾರಂಭಿಸಿದರು (ಉಜ್ಜಲಾರಂಭಿಸಿದರು). ಅದೇ ಹೊತ್ತಿಗೆ ಅಲ್ಲಿಗೆ ಮಹಾರೂಪವತಿಯಾದ ಘೃತಾಚಿ ಅಪ್ಸರೆಯನ್ನು ನೋಡಿ, ಅವಳಲ್ಲಿ ಕಾಮಕ್ಕೆ ಒಳಗಾದರು(ಸಾಮಾನ್ಯ ವ್ಯಕ್ತಿಯಂತೆ). ಆಕೆ ಅಲ್ಲಿಗೆ ಗಿಣಿಯ ರೂಪದಲ್ಲಿ ವ್ಯಾಸರ ಬಳಿ ಬಂದಳು. ಆಕೆಯಲ್ಲಿ ಅನುರಕ್ತಳಾದ ವ್ಯಾಸರು ಕಾಮೋದ್ವೇಗ ನಿಯಂತ್ರಿಸಲು ಪ್ರಯತ್ನಿಸಿದರೂ, ಸಾಧ್ಯವಾಗದೇ, ಅವರ ವೀರ್ಯವು ಅರಣಿಯಲ್ಲಿ ಬಿದ್ದಿತು. ಅವರು ಯಾವ ಶಂಕೆಯೂ ಇಲ್ಲದೆ ಅರಣಿಮಥನ ಮುಂದುವರೆಸಿದಾಗ ಅವುಗಳ ಮಧ್ಯದಲ್ಲಿ ಅಗ್ನಿಗೆ ಸದೃಶ ತೇಜಸ್ಸಿನಿಂದ ಕೂಡಿದ ಶುಕನು ಜನಿಸಿದ (ಹೆಣ್ಣು ಗಿಣಿಯ ದರ್ಶನದಿಂದ ವ್ಯಾಸರ ವೀರ್ಯದಿಂದ ಹುಟ್ಟಿದವನಾದ್ದರಿಂದ ಶುಕ (ಗಂಡು ಗಿಣಿ) ಎಂಬ ಹೆಸರು ಬಂದಿತು). ಅರಣೀ ಮಥನಕಾಲದಲ್ಲಿ ಜನಿಸಿದ್ದರಿಂದ ಅರಣೀಗರ್ಭಸಂಭವನೆಂದೂ ಹೆಸರಾದನು(ಶುಕ). ಯಜ್ಞದಲ್ಲಿ ಹವಿಸ್ಸು ಬಿದ್ದಾಗ ಅಗ್ನಿ ಹೇಗೆ ಪ್ರಜ್ವಲಿಸುತ್ತದೆಯೋ ಹಾಗೆ ಶುಕ ಮಹಾತೇಜಸ್ಸಿನಿಂದ ಕೂಡಿದ್ದನು. ತಂದೆಯ ರೂಪವರ್ಣದಿಂದಾಗಿ ಹೊಗೆರಹಿತ ಅಗ್ನಿಯಂತಿದ್ದ.

ಆಗ ಶುಕನಿಗೆ ಗಂಗೆ (ಸ್ತ್ರೀರೂಪದಿಂದ) ಬಂದು ಶುಕನಿಗೆ ಸ್ನಾನ ಮಾಡಿಸಿದಳು. ಅಂತರಿಕ್ಷದಿಂದ ದಂಡ ಕೃಷ್ಣಾಜಿನಗಳು ಭೂಮಿಯ ಮೇಲೆ ಬಿದ್ದವು. ಗಂಧರ್ವರು ಗಾನ ಮಾಡಿದರು, ಅಪ್ಸರೆಯರು ನರ್ತಿಸಿದರು. ದೇವದುಂದುಭಿಗಳು ಮೊಳಗಿದವು. ವಿಶ್ವಾವಸು, ಗಂಧರ್ವ, ತುಂಬುರು, ನಾರದರು, ಹಾಹಾ ಹೂಹೂ ಗಂಧರ್ವರು ಶುಕನ ಹುಟ್ಟುಹಬ್ಬವನ್ನು ಅನೇಕ ರೀತಿಯಿಂದ ಸ್ತುತಿಸಿದರು. ಇಂದ್ರಾದಿದೇವತೆಗಳು ಲೋಕಪಾಲಕರು, ದೇವತೆಗಳು, ದೇವರ್ಷಿ, ಬ್ರಹ್ಮರ್ಷಿಗಳು ಅಲ್ಲಿಗೆ ಆಗಮಿಸಿದರು. ಮಾರುತನು ಶುಕನ ಮೇಲೆ ದೇವಲೋಕದ ಎಲ್ಲ ಪುಷ್ಪಗಳನ್ನು ಸುರಿದನು (ಮಳೆಗರೆದನು). ಶುಕೋತ್ಪತ್ತಿಯಿಂದ ಜಗವೆಲ್ಲ ಮುದಗೊಂಡಿತು. ರುದ್ರದೇವರು ಉಮೆಯೊಡನೆ ಬಂದು ತಾನೇ ಶುಕನಿಗೆ ಉಪನಯನ ಮಾಡಿದನು.

ಆಗ ಶಕ್ರನು ಶುಕನಿಗೆ ದಿವ್ಯವಾದ ಕಮಂಡಲುವನ್ನು, ದೇವಯೋಗ್ಯವಸ್ತ್ರಗಳನ್ನೂ ಕೊಟ್ಟನು. ಸಾವಿರಾರು ಹಂಸ, ಸಾರಸ, ಶುಕ, ಪಿಕ ಪಕ್ಷಿಗಳು ಶುಕನಿಗೆ ಪ್ರದಕ್ಷಿಣೆ ಮಾಡಿದವು. ಹೀಗೆ ಉಪನೀತನಾದ ಶುಕನು ಜಿತೇಂದ್ರಿಯನಾಗಿ, ಬ್ರಹ್ಮಚರ್ಯದಿಂದ ವ್ಯಾಸಾಶ್ರಮದಲ್ಲಿಯೇ ಇದ್ದನು. ಅದೇ ತಾನೇ ಹುಟ್ಟಿದ ಶುಕನನ್ನು ವೇದೋಪನಿಷತ್ತುಗಳು ಬ್ರಾಹ್ಮಣಾದಿಗಳು ಸೇವಿಸಿದವು. ಶುಕರು ಬೃಹಸ್ಪತ್ಯಾಚಾರ್ಯರನ್ನು ಉಪಾಧ್ಯಾಯನನ್ನಾಗಿ ವೇದಶಾಸ್ತ್ರ ರಾಜಶಾಸ್ತ್ರ ಇತಿಹಾಸಾದಿಗಳನ್ನು ಅಧ್ಯಯನ ಮಾಡಿ ಗುರುದಕ್ಷಿಣೆ ನೀಡಿ ಉಗ್ರವಾದ ತಪಸ್ಸನ್ನು ಆರಂಭಿಸಿದನು.

ಬಾಲ್ಯದಿಂದಲೇ ಶುಕನು ದೇವ, ಋಷಿ ಮಾನ್ಯನಾಗಿದ್ದ. ಆತನ ಬುದ್ಧಿ ಎಂದೂ ಗೃಹಸ್ಥಾದಿ ಆಶ್ರಮಗಳಲ್ಲಿ ಆಸಕ್ತವಾಗದೆ ಕೇವಲ ಮೋಕ್ಷದ ಮಾರ್ಗದಲ್ಲಿಯೇ ಆಸಕ್ತವಾಗಿತ್ತು.

## ಸಂದೇಶಗಳು-ವಿವರಣೆಗಳು

೧. ಒಬ್ಬ ಸಾಮಾನ್ಯ ಪುರುಷನು ಸೌಂದರ್ಯ, ರೂಪ, ಲಾವಣ್ಯಗಳಿಗೆ ಮರುಳಾಗುತ್ತಾನೆ ಎಂದು ತೋರಿಸಲು ವ್ಯಾಸರು ಘೃತಾಚಿಯ ರೂಪಕ್ಕೆ ಮರುಳಾಗಿ ವೀರ್ಯಸ್ಖಲನ ತೋರಿಸಿದರು. ಇದು ತಾತ್ಕಾಲಿಕವಾದ ಭೌತಿಕವೀರ್ಯ ಸೃಷ್ಟಿ ಮಾಡಿದ್ದೇ ಹೊರತು, ನಿಜವಾದ ಸ್ಖಲನವಲ್ಲ. ಅಪ್ರಾಕೃತ ಶರೀರ ವ್ಯಾಸರದು. ಅವರಿಗೆಲ್ಲಿ ಸ್ಖಲನಾದಿಗಳು. ಅವರೇ ಸೌಂದರ್ಯದ ಖನಿ, ಮೂಲವಸ್ತು. ಜಗತ್ತಿನಲ್ಲಿ ಹೀಗಾಗುತ್ತದೆ. ಮುಂದೆ ಕಲಿಯುಗದಲ್ಲಿ ಎಂತಹ ಶಾಸ್ತ್ರಜ್ಞನಿಗೂ ಕಾಮಕ್ರೋಧಗಳ ಉಪಟಳ ಸರ್ವೇ ಸಾಮಾನ್ಯ ಎಂಬ ನೀತಿಯನ್ನು ವ್ಯಾಸರು ತೋರಿಸಿದರು. ಇವೆಲ್ಲ ಅಸುರ ಮೋಹನಾರ್ಥಕ್ಕಾಗಿ.

೨. ಹುಟ್ಟಿದ ಮಗು ಅಸಾಮಾನ್ಯ, ಅನೈತಿಕ ಲೈಂಗಿಕ ಕ್ರಿಯೆಯಿಂದ ಹುಟ್ಟಿದ್ದರೆ ಶುಕರಂತಹ ಜ್ಞಾನ, ವೈರಾಗ್ಯ ಮೂರ್ತಿ ಹೇಗೆ ಹುಟ್ಟಲು ಸಾಧ್ಯ? ಆದ್ದರಿಂದ ವ್ಯಾಸರು ತೋರಿಸಿದ್ದು ಕೇವಲ ವಿಡಂಬನೆ.

೩. ಹುಟ್ಟಿದ ಮಗುವಿನ ಉಪನಯನ, ಎಲ್ಲವೂ ಅಸಾಮಾನ್ಯ. ಬ್ರಾಹ್ಮಣ ಶಿಶುವಿಗೆ ಜಾತಕರ್ಮ, ಉಪನಯನ ಮಾಡಿಸಲೇಬೇಕೆಂಬ ನೀತಿ ಇಲ್ಲಿದೆ. ವಾಮನದೇವರ ಉಪನಯನದ ರೀತಿಯು ಇಲ್ಲಿಯೂ ಆಗಿದೆ, ದೈವೀ.

೪. ಮಹಾಭಾರತತಾತ್ಪರ್ಯನಿರ್ಣಯದ ೧೦ನೇ ಅಧ್ಯಾಯದಲ್ಲಿ ವ್ಯಾಸಾವತಾರದ ಬಗೆಗಿನ ನಿರ್ಣಯಗಳನ್ನು ಇಲ್ಲಿ ಸ್ಮರಿಸಬೇಕು (ಶ್ಲೋ. ೬೯-೭೩)[೧].

**ಅಥಾಸ್ಯ ಪುತ್ರತ್ವಮವಾಪ್ತುಮಿಚ್ಛಂ**
**ಶ್ಚಚಾರ ರುದ್ರಃ ಸುತಪಸ್ತದೀಯಮ್ ।**
**ದದೌ ಚ ತಸ್ಮೈ ಭಗವಾನ್ ವರಂ ತಂ**
**ಸ್ವಯಂ ಚ ತಪ್ತ್ವೇವ ತಪೋ ವಿಮೋಹಯನ್ ॥** - ೧೦/೬೯

ರುದ್ರನು ವ್ಯಾಸರ ಮಗನಾಗಿ ಹುಟ್ಟಲು ಬಯಸಿ ಉತ್ತಮ ತಪಸ್ಸನ್ನು ಮಾಡಿದ. ವ್ಯಾಸರು ತಾವು ಶಿವನನ್ನು ಕುರಿತು ತಪಸ್ಸು ಮಾಡಿದಂತೆ ತೋರಿ ಅಯೋಗ್ಯರನ್ನು ಮೋಹಗೊಳಿಸುತ್ತಲೇ ಶಿವನಿಗೆ ಅವನು ಬಯಸಿದ ವರ ನೀಡಿದರು.

**ವಿಮೋಹನಾಯಾಸುರಸರ್ಗಿಣಾಂ ಪ್ರಭುಃ**
**ಸ್ವಯಂ ಕರೋತೀವ ತಪಃ ಪ್ರದರ್ಶಯೇತ್ ।**

---

೧ ಕೃಪೆ: ಅಖಿಲಭಾರತಮಾಧ್ವಮಹಾಮಂಡಲ; ಮ.ತಾ.ನಿ. ಭಾಗ-೨.

**ಕಾಮಾದಿದೋಷಾಂಶ್ಚ ಮೃಷೈವ ದರ್ಶಯೇ-**
**ನ್ನ ತಾವತಾ ತಸ್ಯ ಹಿ ಸಂತಿ ಕುತ್ರಚಿತ್ ॥ - ೧೦/೭೦**

ಸರ್ವಶಕ್ತರಾದ ವ್ಯಾಸರು ಅಸುರ ಸ್ವಭಾವದವರಿಗೆ ಮೋಹ ಉಂಟು ಮಾಡುವುದಕ್ಕಾಗಿಯೇ ಸ್ವತಃ ತಪಗೈಯುವಂತೆ ತೋರಿಕೊಳ್ಳುತ್ತಾರೆ. ಕಾಮಾದಿ ದೋಷಗಳನ್ನು ಸುಮ್ಮನೆ ಪ್ರದರ್ಶನ ಮಾಡುತ್ತಲಿರೆ. ಅಷ್ಟರಿಂದಲೇ ಅವರಿಗೆ ಆ ದೋಷಗಳು ಯಾವ ಕಾಲದಲ್ಲಿಯೂ ಇವೆ ಎಂದಾಗುವುದಿಲ್ಲ.

**ತತಸ್ತ್ವರಣ್ಯೋಃ ಸ ಬಭೂವ ಪುತ್ರಕಃ**
**ಶಿವಸ್ಯ ಸೋಽಭೂಚ್ಛುಕನಾಮಧೇಯಃ ।**
**ಶುಕೀ ಹಿ ಭೂತ್ವಾ ಹ್ಯಗಮದ್ಘೃತಾಚೀ**
**ವ್ಯಾಸಂ ವಿಮಥ್ನಂತಮುತಾರಣೀಂ ತಮ್ ॥ - ೧೦/೭೧**

ಹೀಗೆ ಶಿವನಿಗೆ ವ್ಯಾಸರು ವರ ಕೊಟ್ಟಿದ್ದರಿಂದ ಅರಣಿಗಳಲ್ಲಿ ಶಿವ ವ್ಯಾಸರಿಗೆ ಮಗನಾಗಿ ಹುಟ್ಟಿದ. ಮುಂದೆ ಅವನು ಶುಕ ಎಂಬ ಹೆಸರಿನವನಾದ. ಏಕೆಂದರೆ ಅರಣಿ ಮಥನ ಮಾಡುತ್ತಿದ್ದ ವ್ಯಾಸರ ಬಳಿಗೆ ಘೃತಾಚಿ ಎಂಬ ಅಪ್ಸರೆ ಹೆಣ್ಣು ಗಿಳಿಯಾಗಿ ತಾನೇ ಬಂದಿದ್ದಳು.

**ಅಕಾಮಯನ್ ಕಾಮುಕವತ್ ಸ ಭೂತ್ವಾ**
**ತಯಾರ್ಥಿತಸ್ತಂ ಶುಕನಾಮಧೇಯಮ್ ।**
**ಚಕ್ರೇ ಹ್ಯರಣ್ಯೋಸ್ತನಯಂ ಚ ಸೃಷ್ಟ್ವಾ**
**ವಿಮೋಹಯಂ ಸ್ತತ್ವಮಾರ್ಗೇಷ್ವಯೋಗ್ಯಾನ್ ॥ - ೧೦/೭೨**

ಘೃತಾಚಿಯನ್ನು ವೇದವ್ಯಾಸರು ಕಾಮಿಸಲಿಲ್ಲ. ತತ್ತ್ವಮಾರ್ಗಗಳಲ್ಲಿ ಅಯೋಗ್ಯ-ರಾದವರನ್ನು ಮೋಹಗೊಳಿಸುವುದಕ್ಕಾಗಿ ಕಾಮಿಸಿದಂತೆ ತೋರಿಕೊಂಡು, ಒಬ್ಬ ಮಗನನ್ನು ಅರಣಿಗಳಲ್ಲಿ ಹುಟ್ಟಿಸಿ ಆ ಮಗನಿಗೆ ಘೃತಾಚಿಯ ಅಪೇಕ್ಷೆಯಂತೆ ಶುಕ ಎಂದೇ ಹೆಸರಿಟ್ಟರು.

**ಶುಕಂ ತಮಾಶು ಪ್ರವಿವೇಶ ವಾಯು-**
**ರ್ವ್ಯಾಸಸ್ಯ ಸೇವಾರ್ಥಮಥಾಸ್ಯ ಸರ್ವಮ್ ।**
**ಜ್ಞಾನಂ ದದೌ ಭಗವಾನ್ ಸರ್ವ ವೇದಾನ್**
**ಸ ಭಾರತಂ ಭಾಗವತಂ ಪುರಾಣಮ್ ॥ - ೧೦/೭೩**

ವೇದವ್ಯಾಸರ ಸೇವೆಗಾಗಿ ವಾಯು ಬೇಗನೆ ಶುಕನಲ್ಲಿ ಆವೇಶಗೊಂಡ. ಭಗವಾನ್ ವ್ಯಾಸರು ಆ ಶುಕನಿಗೆ ಸರ್ವಜ್ಞತ್ವವನ್ನು ನೀಡಿದರು. ಎಲ್ಲ ವೇದಗಳನ್ನೂ ಭಾರತವನ್ನೂ ಭಾಗವತ ಮುಂತಾದ ವೈಷ್ಣವ ಪುರಾಣಗಳನ್ನೂ ಉಪದೇಶಿಸಿದರು.

ಇತ್ಯಾದಿ..

# ೧೧೪. ಮಿಥಿಲೆಗೆ ಶುಕಮುನಿಯ ಗಮನ

ಶುಕಮುನಿಯು ಮೋಕ್ಷದ ಬಗ್ಗೆ ಚಿಂತಿಸುತ್ತಾ ತಂದೆ ವ್ಯಾಸರನ್ನು ನಮಿಸಿ ನನಗೆ ಮನಃಶಾಂತಿಯಾಗುವಂತೆ ಮೋಕ್ಷಧರ್ಮ ಉಪದೇಶ ಮಾಡಲು ವಿನಂತಿಸಿದಾಗ, ವ್ಯಾಸರು ವಿವಿಧ ಮೋಕ್ಷಧರ್ಮಗಳನ್ನು ಅಧ್ಯಯನ ಮಾಡಲು ತಿಳಿಸಿದರು. ಅಂತೆಯೇ ತಂದೆಯಿಂದಲೇ ಯೋಗಶಾಸ್ತ್ರ ಮತ್ತು ಸಮಗ್ರವಾದ ಕಾಪಿಲಸಾಂಖ್ಯಶಾಸ್ತ್ರವನ್ನು ಉಪದೇಶ ಪಡೆದರು. ವ್ಯಾಸರು ತಮ್ಮ ಮಗನನ್ನು ಬ್ರಹ್ಮಜ್ಞಾನ ಸಂಪತ್ತನ್ನು, ಬ್ರಹ್ಮಜ್ಞಾನಿಗಳ ತೇಜಸ್ಸನ್ನು ಹೊಂದಿರುವನೆಂದು ತಿಳಿದುದಲ್ಲದೆ ಮೋಕ್ಷವಿದ್ಯಾ ವಿಶಾರದನೆಂದೂ ಭಾವಿಸಿದರು. ಅಲ್ಲದೆ ಮಿಥಿಲಾಧಿಪತಿಯಾದ ಜನಕರಾಜನ ಬಳಿಗೆ ಹೋಗಿ ಮೋಕ್ಷಕ್ಕೆ ಸಂಬಂಧಿಸಿದ ವಿಷಯಗಳನ್ನು ಸಮಗ್ರವಾಗಿ ತಿಳಿದುಕೊಂಡು ಬರಲು ಶುಕಮುನಿಯನ್ನು ಕಳಿಸಿದರು.

ತಾನೇ ಎಲ್ಲವನ್ನು ತಿಳಿದಿದ್ದರೂ, ಪ್ರಪಂಚದಲ್ಲಿರುವ ಇತರ ಬ್ರಹ್ಮಜ್ಞಾನಿಗಳನ್ನೂ ನೋಡಿ ಚರ್ಚಿಸಿ ಬರಲು ಶುಕರು ಮಿಥಿಲೆಗೆ ಹೊರಟರು. ದೈವೀ ಮಾನುಷ ಮಾರ್ಗದಲ್ಲಿಯೇ ಮಿಥಿಲೆಗೆ ಹೋಗಲು ವ್ಯಾಸರು ಆದೇಶಿಸಿದ ಮೇರೆಗೆ ಶುಕರು ಯಾವ ಸುಖವನ್ನು ದಾರಿಯಲ್ಲಿ ಬಯಸದೆ, ನಿರಹಂಕಾರಿಯಾಗಿ ಪಾದಚಾರಿಯಾಗಿಯೇ ಹೋದರು. ಅಂತರಿಕ್ಷದ ಮೂಲಕ ಹೋಗುವ ಸಾಮರ್ಥ್ಯವಿದ್ದರೂ, ತಂದೆಯ ಆದೇಶ ಪಾಲಿಸಿದರು ಶುಕರು[೧].

'ರಾಜ ಹೇಳಿದಂತೆ ಮಾಡು. ರಾಜನು ಮೋಕ್ಷಶಾಸ್ತ್ರವಿಶಾರದ' ಎಂದೂ ವ್ಯಾಸರು ಹೇಳಿದರು.

ಶುಕರು ದಾರಿಮಧ್ಯದಲ್ಲಿ ಬಂದ ಪರ್ವತ, ನದಿ, ಕಾನನ, ಸರ್ಪಾದಿಗಳ ಪ್ರದೇಶಗಳನ್ನೆಲ್ಲ ಪಾದಚಾರಿಯಾಗಿಯೆ ದಾಟಿ, ಮೇರುವಿನ ತಪ್ಪಲೆನ್ನಿಸಿದ ಇಲಾವೃತವರ್ಷ, ಹರಿವರ್ಷ, ಹಿಮವತ್ಪರ್ವತದ ಉತ್ತರಭಾಗದ ಕಿಂಪುರುಖಂಡ ಎಲ್ಲವನ್ನೂ ದಾಟಿ, ಭಾರತವರ್ಷಕ್ಕೆ

---

೧ ಉಕ್ತಶ್ಚ ಮಾನುಷೇಣ ತ್ವಂ ಪಥಾ ಗಚ್ಛೇತ್ಯವಿಸ್ಮಿತಃ ।
ನ ಪ್ರಭಾವೇಣ ಗಂತವ್ಯಮಂತರಿಕ್ಷಚರೇಣ ವೈ ॥
ಆರ್ಜವೇಣೈವ ಗಂತವ್ಯಂ ನ ಸುಖಾನ್ವೇಷಿಣಾ ಪಥಾ ।
ನಾನ್ವೇಷ್ಟವ್ಯಾ ವಿಶೇಷಾಸ್ತು ವಿಶೇಷಾ ಹಿ ಪ್ರಸಂಗಿನಃ ॥
ಅಹಂಕಾರೋ ನ ಕರ್ತವ್ಯೋ ಯಾಜ್ಯೇ ತಸ್ಮಿನ್ನರಾಧಿಪೇ ॥
ಸ್ಥಾತವ್ಯಂ ಚ ವಶೇ ತಸ್ಯ ಸ ತೇ ಛೇತ್ಸ್ಯತಿ ಸಂಶಯಮ್ ।
ಸ ಧರ್ಮಕುಶಲೋ ರಾಜಾ ಮೋಕ್ಷಶಾಸ್ತ್ರವಿಶಾರದಃ ॥
ಯಾಜ್ಯೋ ಮಮ ಸ ಯದ್ ಬ್ರೂಯಾದ್ ತತ್ ಕಾರ್ಯಮವಿಶಂಕಯಾ ॥ - ೧೫೭/೮-೧೦

ಬಂದರು. ಮುಂದೆ ಅನೇಕ ವಿಧವಾದ ದೇಶಗಳನ್ನು (ಚೀನ-ಹೂಣ) ದಾಟಿ ಆರ್ಯಾವರ್ತಕ್ಕೆ ಬಂದು ಮತ್ತೆ ಪಟ್ಟಣ, ನಗರ, ಉದ್ಯಾನ, ತೀರ್ಥಗಳೆಲ್ಲವನ್ನು ದಾಟಿ ವಿದೇಹ ರಾಜ್ಯಕ್ಕೆ ಬಂದರು. ಅಲ್ಲಿ ಮತ್ತೆ ಅನೇಕ ಗ್ರಾಮಾದಿಗಳನ್ನು ದಾಟಿ ಮಿಥಿಲೆಯ ಉಪವನಕ್ಕೆ ಬಂದು ನಂತರ ಮಿಥಿಲಾಪಟ್ಟಣ ಸೇರಿದರು.

ಅಲ್ಲಿ ದ್ವಾರಪಾಲಕರು ತಡೆದರು. ಆದರೆ ಶುಕರು ಮಾತ್ರ ಧ್ಯಾನ ಮಾಡುತ್ತಾ ನಿಂತಾಗ ಅವರೇ ಶುಕರನ್ನು ಒಳಗೆ ಬಿಟ್ಟರು. ನಂತರ ರಾಜಮಾರ್ಗವನ್ನೂ ಯಾವುದೇ ಸಂಶಯವಿಲ್ಲದೇ ಪ್ರವೇಶಿಸಿದ ಮೇಲೆ, ಅಲ್ಲೂ ದ್ವಾರಪಾಲಕರು ಉಗ್ರವಾದ ಮಾತುಗಳಿಂದ ತಡೆದರೂ, ಸಿಟ್ಟಾಗದೇ ಅಲ್ಲಿಯೇ ನಿಂತರು. ಅವರ ಮುಖದಲ್ಲಿ ಆಯಾಸವಾಗಲೀ, ನೀರಡಿಕೆ, ಹಸಿವು, ಸೂರ್ಯನ ಬಿಸಿಲಿನಿಂದ ಯಾವ ವಿಕಾರವೂ ಕಾಣಲಿಲ್ಲ. ಆಗ ದ್ವಾರಪಾಲಕರಲ್ಲಿ ಒಬ್ಬರು ಶುಕನನ್ನು ಪೂಜಿಸಿ, ನಮಿಸಿ, ಅರಮನೆಯ ಎರಡನೇ ಆವರಣಕ್ಕೆ ಕಳಿಸಿದ. ಅಲ್ಲೂ ಮೋಕ್ಷದ್ದೇ ಚಿಂತೆ. ಅಲ್ಲಿದ್ದ ಒಂದು ಜಗಲಿಯ ಮೇಲೆ ಕುಳಿತ.

ಅಲ್ಲಿಗೆ ರಾಜನ ಮಂತ್ರಿ ಬಂದು ನಮಿಸಿ, ಅರಮನೆಯ ೩ನೇ ಆವರಣಕ್ಕೆ ಕಳಿಸಿದ. ಅಲ್ಲಿ ಸ್ತ್ರೀಯರ ಉದ್ಯಾನವನ, ಜಲಕ್ರೀಡೆಗೆ ಜಲಾಶಯಗಳಿದ್ದವು. ಅಲ್ಲಿ ಬಂದು ಆಸನದಲ್ಲಿ ಕುಳ್ಳಿರಿಸಿ ಮಂತ್ರಿ ಹೊರಟನು. ಅಲ್ಲಿದ್ದ ಐದುನೂರು ವೇಶ್ಯೆಯರು ತಮ್ಮ ಹಾವಭಾವಗಳಿಂದ ವಿವಿಧ ಉಪಚಾರ, ಸತ್ಕಾರಗಳನ್ನು ಮಾಡಿದರೂ ಶುಕರು ನಿರ್ವಿಕಾರರೇ ಆಗಿದ್ದರು. ಅಲ್ಲಿ ಭೋಜನಾದಿಗಳು ಆದವು. ಪ್ರಮದಾವನದಲ್ಲಿ ಸುತ್ತಾಡಿಸಿ ಎಲ್ಲವನ್ನೂ ತೋರಿಸಿದರು. ಶುಕರು ಯಾವುದಕ್ಕೂ ಆಸಕ್ತಿ ತೋರದೆ ಇದ್ದರು. ಅಲ್ಲೇ ರಾತ್ರಿ ಮಲಗಿ ನಿದ್ರಿಸಿ, ಬೆಳಗಿನ ಜಾವ ಎದ್ದು ಸಂಧ್ಯಾದಿಗಳನ್ನು ಮುಗಿಸಿಕೊಂಡು, ಸ್ತ್ರೀಯರಿಂದ ಆವರಿಸಿದ್ದರೂ ಧ್ಯಾನಾದಿಗಳಲ್ಲೇ ಮಗ್ನನಾಗಿದ್ದನು. ಹೀಗೆ ಹಗಲು-ರಾತ್ರಿ ರಾಜಭವನದಲ್ಲಿ ಭಗವದ್ಧ್ಯಾನದಲ್ಲಿಯೇ ಕಳೆದರು.

*****

## ೧೧೫. ಶುಕ-ಜನಕರ ಸಂವಾದ

ಭೀಷ್ಮರು ಯುಧಿಷ್ಠಿರನಿಗೆ ಹೇಳಿದರು –

'ಮಾರನೇ ದಿನ ಬೆಳಿಗ್ಗೆ ರಾಜನು ಮಂತ್ರಿ, ಪುರೋಹಿತರೊಡನೆ ಹಾಗೂ ಅಂತಃಪುರ–ದವರನ್ನು ಮುಂದೆ ಮಾಡಿಕೊಂಡು ಆಸನ, ವಿವಿಧ ರತ್ನ, ಅರ್ಘ್ಯವನ್ನು ಶಿರಸಾ ಧರಿಸಿ ಗುರುಪುತ್ರ ಶುಕಮುನಿಯ ಬಳಿಗೆ ಬಂದನು. ಅವನ್ನು ಗುರುಪುತ್ರನಿಗೆ ಆದರಪೂರ್ವಕವಾಗಿ ಕೊಟ್ಟು ಪಾದ್ಯ, ಅರ್ಘ್ಯ ಎಲ್ಲವನ್ನೂ ಮಂತ್ರಪೂರ್ವಕವಾಗಿ ಸತ್ಕಾರವನ್ನು ಮಾಡಿದನು. ಅಲ್ಲದೆ ಗುರುಪುತ್ರನಿಗೆ ಗೋದಾನ ಮಾಡಿದನು. ಶುಕನೂ ರಾಜನ ಕುಶಲ ಆರೋಗ್ಯಕ್ಷೇಮಾದಿಗಳನ್ನು ವಿಚಾರಿಸಿದನು. ಜನಕರಾಜನು ಹೀಗೆ ಸತ್ಕರಿಸಿ ತಾನು ಭೂಮಿಯ ಮೇಲೆ ಕುಳಿತನು. ಶುಕರನ್ನು ಬಂದ ಕಾರಣವನ್ನು ರಾಜನು ಕೇಳಲಾಗಿ, ಶುಕರು ನನ್ನ ತಂದೆಯಿಂದ ಆದೇಶಿತನಾಗಿ ಮೋಕ್ಷಧರ್ಮದ ಬಗ್ಗೆ ನಿಮ್ಮಿಂದ ತಿಳಿಯಲೋಸುಗ ಬಂದಿರುವುದಾಗಿ ಹೇಳಿದರು.

ಬ್ರಾಹ್ಮಣನ ಕರ್ತವ್ಯ, ಮೋಕ್ಷದ ಸ್ವರೂಪ ಮೋಕ್ಷವನ್ನು ಪಡೆಯುವುದು ಹೇಗೆ? ಅದು ಜ್ಞಾನದಿಂದಲೋ ತಪಸ್ಸಿನಿಂದಲೋ ಎಂದು ಶುಕರು ಕೇಳಿದರು. ಅದಕ್ಕೆ ಜನಕರಾಜ ಉತ್ತರಿಸಲಾರಂಭಿಸಿದ.

೧. ಉಪನಯನವಾದ ಬಳಿಕ ವೇದಾಧ್ಯಯನ; ೨. ತಪಸ್ಸಿನಿಂದಲೂ, ಗುರುಸೇವೆಯಿಂದಲೂ, ಬ್ರಹ್ಮಚರ್ಯದಿಂದಲೂ, ವೇದವೇದಾಂಗಗಳ ಅಧ್ಯಯನ; ಹೋಮ–ಹವನಾದಿಗಳಿಂದ ದೇವ ಋಣವನ್ನೂ, ತರ್ಪಣಾದಿಗಳಿಂದ ಪಿತೃ ಋಣವನ್ನೂ ಮಾತ್ಸರ್ಯವಿಲ್ಲದೆ ತೀರಿಸಬೇಕು; ೪. ವೇದಾಧ್ಯಯನ ಮುಗಿಸಿ, ಗುರುದಕ್ಷಿಣೆ ನೀಡಿ, ಅವರ ಅನುಮತಿ ಪಡೆದು ಸಮಾವರ್ತನ ಮಾಡಿಕೊಂಡು; ೫. ಗೃಹಸ್ಥಾಶ್ರಮ ಹೊಂದಿ ಆಹಿತಾಗ್ನಿಯಾಗಿ ಪುತ್ರಪೌತ್ರರನ್ನು ಹೊಂದಿ ನಂತರ ವಾನಪ್ರಸ್ಥಾಶ್ರಮ ಅವಲಂಬಿಸಬೇಕು. ಅಲ್ಲೂ ಗಾರ್ಹಪತ್ಯಾಗ್ನಿಯನ್ನು ಆರಾಧಿಸುತ್ತಾ ಅತಿಥಿ ಸತ್ಕಾರಾದಿಗಳನ್ನು ಮಾಡಬೇಕು; ೬. ಅಗ್ನಿಯನ್ನು ತನ್ನಲ್ಲಿ ಆರೋಪಿಸಿಕೊಂಡು ರಾಗಾದಿಗಳಿಂದ ಮುಕ್ತನಾಗಿ ಸನ್ಯಾಸಾಶ್ರಮ ಸ್ವೀಕರಿಸಬೇಕು.

ಆಗ ಶುಕರು ಬ್ರಹ್ಮಚರ್ಯದಲ್ಲಿಯೇ ರಾಗಾದಿಗಳಿಂದ ದೂರನಾದಲ್ಲಿ ಗೃಹಸ್ಥಾದಿ ಆಶ್ರಮಗಳನ್ನು ಸೇವಿಸಲೇಬೇಕಾ? ಎಂದರು. ಅದಕ್ಕೆ ಜನಕರಾಜನು ಜ್ಞಾನವಿಜ್ಞಾನಗಳ

ರಹಸ್ಯವರಿಯದೆ ಮೋಕ್ಷ ದೊರಕದು. ಸದ್ಗುರುಗಳ ಸಹವಾಸದಿಂದಲೇ ಶಾಸ್ತ್ರಜ್ಞಾನ ಬರುತ್ತದೆ. ಸಂಸಾರ ದಾಟಿಸುವವನೇ ಗುರು, ನಾವಿಕ. ಗುರೂಪದಿಷ್ಟಜ್ಞಾನವೇ ನೌಕೆ. ಸಂಸಾರ ದಾಟಿದ ಮೇಲೆ ಜ್ಞಾನ ಗುರು ಇವೆಲ್ಲವನ್ನು ಬಿಡಬೇಕು. ಲೋಕದಲ್ಲಿ ಕರ್ಮಗಳು ನಾಶವಾಗಬಾರದೆಂದು ವರ್ಣಾಶ್ರಮಧರ್ಮಗಳಿವೆ.

ಬ್ರಹ್ಮಚರ್ಯಾಶ್ರಮವನ್ನು ಹೊಂದಿ ಬಳಿಕ, ಆತ್ಮತತ್ತ್ವವನ್ನು ಚೆನ್ನಾಗಿ ತಿಳಿದ ವಿದ್ವಾಂಸನಿಗೆ ಇತರ ಮೂರು ಆಶ್ರಮಗಳನ್ನು ಸ್ವೀಕರಿಸುವುದರಲ್ಲಿ ಯಾವ ಪ್ರಯೋಜನವೂ ಇಲ್ಲ[೧].

ಆದ್ದರಿಂದ ಬ್ರಹ್ಮಜ್ಞಾನ, ರಾಗಾದಿಗಳ ಜಯ ಮುಕ್ತನಾಗಲು ಬೇಕಾದ ಅರ್ಹತೆ. ವಿದ್ವಾಂಸನಾದವನ ಇತರ ಗುಣಗಳು.

೧. ರಾಜಸ, ತಾಮಸ ದೋಷಗಳನ್ನು ಸದಾ ತ್ಯಾಗ ಮಾಡಬೇಕು. ಸಾತ್ತ್ವಿಕ ಮಾರ್ಗದಲ್ಲಿಯೇ ಬುದ್ಧಿಯ ಮೂಲಕ ಪರಮಾತ್ಮನನ್ನು ಕಾಣಬೇಕು.

೨. ಸಮಸ್ತ ಪ್ರಾಣಿಗಳ ಹೃದಯದಲ್ಲಿ ಭಗವಂತನನ್ನು; ಭಗವಂತನಲ್ಲಿ ಸಮಸ್ತ ಪ್ರಾಣಿಗಳನ್ನು ಕಾಣುವವನು ಸಂಸಾರದಲ್ಲಿದ್ದರೂ ಅದರ ಲೇಪವಾಗದು, ನೀರಿನಲ್ಲಿರುವ ಪ್ರಾಣಿಯಂತೆ (ಮೀನು).

೩. ಗೂಡನ್ನು ಬಿಟ್ಟ ಪಕ್ಷಿಯು ಹೊರಗಡೆ ಹಾರಿದಾಗ ಗೂಡನ್ನು ಮರೆಯುವಂತೆ ಈ ದೇಹವೆಂಬ ಗೂಡಿನಿಂದ ಮುಕ್ತನಾದ ಜೀವನು ಸುಖದುಃಖಗಳ ದ್ವಂದ್ವದಿಂದ ಬಿಡುಗಡೆ ಹೊಂದಿ ಮೋಕ್ಷಸುಖವನ್ನು ಅನುಭವಿಸುತ್ತಾನೆ. ಈ ವಿಷಯದಲ್ಲಿ ಯಯಾತಿಯು ಹಾಡಿರುವ ಗೀತೆ ಹೀಗಿದೆ.

೪. ಯಾರು ಇತರ ಪ್ರಾಣಿಗಳನ್ನು ಭಯಗೊಳಿಸುವುದಿಲ್ಲವೋ ಇತರ ಪ್ರಾಣಿಗಳಿಂದ ತಾನು ಭಯಹೊಂದುವುದಿಲ್ಲವೋ, ಯಾರು, ಯಾವ ವಸ್ತುವನ್ನೂ ಬಯಸುವುದಿಲ್ಲವೋ (ಬ್ರಹ್ಮನನ್ನು ಬಿಟ್ಟು) ಯಾರನ್ನೂ ದ್ವೇಷಿಸುವುದಿಲ್ಲವೋ, ಅವನು ಬ್ರಹ್ಮನಲ್ಲಿ ಸ್ಥಿತಿ ಹೊಂದುತ್ತಾನೆ.

೫. ಯಾವ ಪ್ರಾಣಿಗೂ ಕಾಯೇನ ವಾಚಾ ಮನಸಾ ಪಾಪ ಮಾಡುವುದಿಲ್ಲವೋ (ಹಿಂಸಾದಿಗಳನ್ನು) ಎಲ್ಲ ಪ್ರಾಣಿಗಳಲ್ಲಿ ಭೂತದಯಾಪರನಾಗಿಯೂ, ದ್ವೇಷರಹಿತನಾಗಿಯೂ ಇರುವವನು ಬ್ರಹ್ಮನಲ್ಲಿರುತ್ತಾನೆ, ಮುಕ್ತನಾಗುತ್ತಾನೆ.

೬. ಯಾವಾಗ ಸಾಧಕನು ಕಿವಿಗೆ ಕೇಳಿಸುವ, ಕಣ್ಣಿಗೆ ಕಾಣಿಸುವ ವಸ್ತುಗಳಲ್ಲಿ, ಎಲ್ಲ ಪ್ರಾಣಿಗಳಲ್ಲಿ ಭಗವಂತನನ್ನು ಕಾಣುತ್ತಾನೋ ದ್ವಂದ್ವಗಳಿಂದ ದೂರವಾಗಿರುತ್ತಾನೋ,

---

೧ ತಮಾಸಾದ್ಯ ತು ಮುಕ್ತಸ್ಯ ದೃಷ್ಟಾರ್ಥಸ್ಯ ವಿಪಶ್ಚಿತಃ।
ತ್ರಿಷ್ವಾಶ್ರಮೇಷು ಕೋ ನ್ವರ್ಥೋ ಭವೇತ್ ಪರಮಭೀಪ್ಸತಃ॥ - ೧೫೮/೨೭

ಆಗಲೇ ಬ್ರಹ್ಮನನ್ನು ಹೊಂದುತ್ತಾನೆ.

೭. ತನ್ನ ಬಗ್ಗೆ ಬರುವ ನಿಂದಾಸ್ತುತಿಗಳನ್ನು ಸಮಾನವಾಗಿ ಸ್ವಿಕರಿಸುತ್ತಾನೋ, ಚಿನ್ನ ಕಬ್ಬಿಣವನ್ನು, ಸುಖದುಃಖ, ಪ್ರಿಯ-ಅಪ್ರಿಯ, ಜೀವನ-ಮರಣಗಳನ್ನು ಸಮಾನವಾಗಿ ನೋಡುತ್ತಾನೋ, ಆಗಲೇ ಬ್ರಹ್ಮನನ್ನು ಹೊಂದುತ್ತಾನೆ.

೮. ಇವೇ ಮೊದಲಾದವುಗಳನ್ನು ನಾನು ನಿನ್ನಲ್ಲಿ ಕಾಣುತ್ತೇನೆ[1].

ಬ್ರಹ್ಮರ್ಷಿಯೇ ನೀನು ನಿನ್ನ ತಂದೆಯ ಕರುಣೆಯಿಂದ ಅವರಿಂದ ಹೊಂದಿದ ಜ್ಞಾನದಿಂದ ನೀನು ವಿಷಯಸುಖದಿಂದ ದೂರನಾಗಿದ್ದೀಯಾ[2].

ವ್ಯಾಸರ ಅನುಗ್ರಹದಿಂದ ನನಗೂ ದಿವ್ಯಜ್ಞಾನ ಲಭಿಸಿದೆ. ಆ ದಿವ್ಯಜ್ಞಾನದ ಸಹಾಯದಿಂದಲೇ ನಿನ್ನ ನಿಜರೂಪವನ್ನು ನಾನು ತಿಳಿಯಲು ಸಮರ್ಥನಾಗಿದ್ದೇನೆ. ನಿನ್ನ ವಿಜ್ಞಾನವು ಶ್ರೇಷ್ಠ ನಿನ್ನ ಗತಿಯೂ ಶ್ರೇಷ್ಠ ಯೋಗ ಐಶ್ವರ್ಯಗಳೂ ನಿನ್ನಲ್ಲಿ ಅಧಿಕವಾಗಿವೆ. ಆದರೆ ನಿನ್ನ ಮಹಿಮೆ ನಿನಗೆ ತಿಳಿದಿರುವುದಿಲ್ಲ. ಬ್ರಹ್ಮಜ್ಞಾನಕ್ಕೆ ಪ್ರಯತ್ನವಿಲ್ಲದೆ ದೊರೆಯದು. ನಿನ್ನ ಬುದ್ಧಿ ಸ್ಥಿರ. ವಿಷಯಲೋಲುಪತೆ ನಿನ್ನಲ್ಲಿಲ್ಲ. ನೀನು ಸುಖದುಃಖಗಳಲ್ಲಿ ಯಾವ ವಿಶೇಷ ಕಾಣುತ್ತಿಲ್ಲ. ನೃತ್ಯ, ಗೀತೆ ಇವುಗಳ ಕುತೂಹಲವೂ ನಿನ್ನಲ್ಲಿಲ್ಲ. ಬಂಧುಗಳ ಬಗ್ಗೆ ಆಸಕ್ತಿ ಇಲ್ಲ. ಭಯದ ಸನ್ನಿವೇಶದಲ್ಲಿ ಭಗವಾಗುವುದಿಲ್ಲ. ಮಹಾಭಾಗ್ಯವಂತನೇ! ಕಲ್ಲು, ಮಣ್ಣು ಸುವರ್ಣಗಳನ್ನು ಸಮಾನವಾಗಿ ಕಾಣುತ್ತಿರುವೆ.

ನೀನು ಮೋಕ್ಷಮಾರ್ಗವನ್ನು ಆಶ್ರಯಿಸಿದ್ದಿ ಎಂದು ನಾನು ತಿಳಿದಿದ್ದೇನೆ.

ಬ್ರಾಹ್ಮಣನಾಗಿ ಹುಟ್ಟಿದ್ದಕ್ಕೆ ಯಾವ ಫಲವನ್ನು ಪಡೆದಿರುವೆ, ಆ ಮಾರ್ಗದಲ್ಲಿರುವೆ.

## ಸಂದೇಶಗಳು-ವಿವರಣೆಗಳು

೧. ಗುರುಗಳು, ಹಿರಿಯರನ್ನು ನೋಡಲು ವಿದ್ಯಾರ್ಜನೆಗೆ ಹೋಗುವವರು ಸಮಿತ್ಪಾಣಿಗಳಾಗಿ, ವಿನಯದಿಂದ ಅಹಂಕಾರಿಯಾಗದೆ, ತನ್ನಲ್ಲಿ ಯಾವುದೇ ಐಶ್ವರ್ಯವಿದ್ದರೂ, ನಿಜವಾಗಿಯೂ ತೋರಗೊಡದೆ ಹೋಗಬೇಕು. ವಿಷಯಗಳು ಗೊತ್ತಿದ್ದರೂ ಹಿರಿಯರ ಮುಂದೆ ಅಜ್ಞಾನಿಯಂತೆ ವರ್ತಿಸಿ ಅವರ ಅನುಗ್ರಹ ಸಂಪಾದಿಸಬೇಕು.

---

೧ ಏತತ್ ಸರ್ವಂ ಪ್ರಪಶ್ಯಾಮಿ ತ್ವಯಿ ಬುದ್ಧಿಮತಾಂ ವರ। - ೧೫೮/೪೧

೨ ಬ್ರಹ್ಮರ್ಷೇ ವಿದಿತಶ್ಚಾಸಿ ವಿಷಯಾಂತಮುಪಾಗತಃ।
ಗುರೋಸ್ತವ ಪ್ರಸಾದೇನ ತವ ಚೈವೋಪಶಿಕ್ಷಯಾ ॥
ತಸ್ಯೈವ ಚ ಪ್ರಸಾದೇನ ಪ್ರಾದುರ್ಭೂತಂ ಮಹಾಮುನೇ।
ಜ್ಞಾನಂ ದಿವ್ಯಂ ಮಮಾಪೀದಂ ತೇನಾಪಿ ವಿದಿತೋ ಮಮ ॥ - ೧೫೮/೪೨,೪೩

೨. ಜೀವನದುದ್ದಕ್ಕೂ ಬ್ರಹ್ಮಚರ್ಯ - ಸ್ತ್ರೀಯರೊಡನೆ ಅತ್ಯಂತ ಎಚ್ಚರಿಕೆಯಿಂದ ವರ್ತಿಸಬೇಕು. ಹಾಗಿದ್ದೂ ಶುಕರು ತಮ್ಮ ಸುತ್ತಲೂ ೫೦೦ ಜನ ದಾಸಿಯರಿದ್ದರೂ, ಅವರ ಹಾವಭಾವ, ಸೌಂದರ್ಯಗಳಿಗೆ ಬಲಿ ಬೀಳಲಿಲ್ಲ, ಅವರಂತೆ ಇರಬೇಕು.

೩. ತಮ್ಮ ಸ್ವರೂಪ ಇತರರಿಗೆ ತಿಳಿಯದಂತಿರಬೇಕು (ಶುಕರು ರುದ್ರದೇವರು) ಜನಕರಾಜ ಚಕ್ರವರ್ತಿ ಮಾತ್ರ. ಆದರೂ ಆತ ಮೋಕ್ಷ ಮಾರ್ಗದ ಮಾರ್ಗದರ್ಶಕನೆಂಬ ವ್ಯಾಸರ ಪ್ರಶಸ್ತಿಯನ್ನು ಶುಕರು ಚಾಚೂತಪ್ಪಲಿಲ್ಲ, ಗೌರವಿಸಿ, ಗೌರವ ಪಡೆದುಕೊಂಡು ಮುಕ್ತನೆಂಬ ಪ್ರಶಸ್ತಿ ಜನಕನಿಂದಲೇ ಬಂದಿತು. ಹಾಗೆ ಸಾಧಕ ಇರಬೇಕು.

೪. ಮಾನವರಾಗಿ ಅವತರಿಸಿದ ದೇವತೆಗಳು ಮಾನವರಂತೆ ವರ್ತಿಸಬೇಕು. ರುದ್ರದೇವರೇ ಶುಕರು. ಅವರು ತಮ್ಮ ದೇವತ್ವವನ್ನು ತೋರಿಸದೆ ಜನಕನೊಂದಿಗೆ ಮಾನವನಂತೆ ವರ್ತಿಸಿದರು. ಉಳಿದ ಜ್ಞಾನಿಗಳು ಹಾಗೆಯೇ ಇರಬೇಕು.

**ಧರ್ಮೋ ಹಿ ಧರ್ಮವಿದುಷಾಂ ಅಪಿ ದೈವತಾನಾಂ**
**ಪ್ರಾಪ್ತೇ ನರೇಷು ಜನನೇ ನರವತ್ಪ್ರವೃತ್ತಿಃ।**
**ಜ್ಞಾನಾದಿ ಗೂಹನಮುತಾಧ್ಯಯನಾದಿರತ್ರ .....**
**ತಜ್ಜ್ಞಾಪನಾರ್ಥಮವಸತ್ ಭಗವಾನ್ ಗುರೌ ಚ ॥** - ಮ.ತಾ.ನಿ.(೧೪/೪)

೫. ಜನಕನ ಉಪದೇಶಗಳೆಲ್ಲ ಸಂದೇಶಗಳೇ.

*****

# ೧೧೬. ಶುಕಾಚಾರ್ಯರಿಗೆ ವೇದವ್ಯಾಸರ ಉಪದೇಶ

## (ಮಗನಿಗೆ ತಂದೆಯ ಉಪದೇಶ)

ವೇದವ್ಯಾಸರ (ತಂದೆಯ) ಆದೇಶದ ಮೇರೆಗೆ ಶುಕರು ಜನಕರಾಜನ ಬಳಿಗೆ (ಮಿಥಿಲಾಪಟ್ಟಣಕ್ಕೆ) ಹೋಗಿ, ಆತನಿಂದ ಪ್ರವೃತ್ತ, ನಿವೃತ್ತಮಾರ್ಗಗಳ ಬಗ್ಗೆ ವಿಶೇಷವಾಗಿ ಮೋಕ್ಷಸ್ವರೂಪಾದಿಗಳ ಬಗ್ಗೆ ತಿಳುವಳಿಕೆ ಹಾಗೂ ಜನಕಮಹಾರಾಜನಿಂದ 'ನೀನು ಮೋಕ್ಷ ಮಾರ್ಗದಲ್ಲಿರುವೆ' (ತಸ್ಮಿನ್ ವೈ ವರ್ತಸೇ ವಿಪ್ರ) ಎಂಬ ಮೆಚ್ಚುಗೆಯ ಮಾತನ್ನು ಪಡೆದು ವಾಯುವೇಗದಿಂದ ಹಿಮವತ್‌ಪ್ರದೇಶದಲ್ಲಿ ಭಗವನ್ನಿಷ್ಠನಾಗಿ ಬಂದರು. ಇದೇ ಕಾಲದಲ್ಲಿ ನಾರದರು ಹಿಮಾಲಯವನ್ನು ನೋಡಲು ಬರುತ್ತಿದ್ದರು. ಆ ಪರ್ವತ ಪ್ರದೇಶ ಅಪ್ಸರೆಯರಿಂದ ತುಂಬಿತ್ತು. ಎಲ್ಲ ಕಡೆಗಳಿಂದ ಸಂಗೀತದ ನಿನಾದ ಝೇಂಕರಿಸುತ್ತಿತ್ತು. ನೂರಾರು ತರಹದ ಪರಿಸರ ಪ್ರಾಣಿ, ಪಕ್ಷಿ ಸಂಕುಲಗಳ ಸಮುದಾಯದಿಂದ ಪರಮಸುಂದರವಾಗಿತ್ತು[೧].

ಈ ಹಿಮವತ್ಪರ್ವತದಲ್ಲಿ ವಿಷ್ಣುವು ಹಿಂದೆ ಪುತ್ರಾರ್ಥಿಯಾಗಿ ತಪಸ್ಸನ್ನು ಮಾಡಿದ್ದನಂತೆ. ಇಲ್ಲಿಯೇ ದೇವತೆಗಳೆಲ್ಲ ಸ್ಕಂದನಿಂದ ಪರಾಜಿತರಾಗಿದ್ದರು. ಸ್ಕಂದನು ತನ್ನ ಶಕ್ತ್ಯಾಯುಧವನ್ನು ಮೂರು ಲೋಕದ ದೇವತೆಗಳನ್ನು ಧಿಕ್ಕರಿಸಿ ಪ್ರಯೋಗ ಮಾಡಿದ್ದನು. ಅಷ್ಟೇ ಅಲ್ಲ - ಯಾರಿಗೆ ಬ್ರಾಹ್ಮಣರು ಅತ್ಯಧಿಕ ಪ್ರಿಯರೋ, ಅಂತಹ ನನಗೆ ನನ್ನ ಬಲಕ್ಕಿಂತಲೂ ಅಧಿಕ ಬಲವುಳ್ಳವರು ಯಾರಿದ್ದಾರೆ? ನನ್ನಷ್ಟು ಬ್ರಾಹ್ಮಣಪ್ರಿಯ, ನನ್ನಂಥ ಬಲಿಷ್ಠರು ಯಾರೂ ಇಲ್ಲ, ಇದ್ದರೆ ನಾನು ಭೂಮಿಯಲ್ಲಿ ಹೂಳಿರುವ ಈ ಶಕ್ತ್ಯಾಯುಧವನ್ನು ಅಲುಗಾಡಿಸಲು, ಕಿತ್ತಲಿ ಎಂದು ಘೋಷಿಸಿದ್ದನು. ಆದರೆ ಯಾವ ದೇವತೆಯೂ ಈ ಮಾತನ್ನು (Challenge) ನಡೆಸದಿದ್ದಾಗ ವಿಷ್ಣುವು ಆ ಶಕ್ತ್ಯಾಯುಧವನ್ನು ಅಲುಗಾಡಿಸಿದ, ಎಡಗೈಯಿಂದ[೨].

---

೧ ಆತ್ಮನಾತ್ಮಾನಮಾಸ್ಥಾಯ ದೃಷ್ಟ್ವಾ ಚಾತ್ಮಾನಮಾತ್ಮನಾ ।
ಕೃತಕಾರ್ಯಃ ಸುಖೀ ಶಾಂತಸ್ತೂಷ್ಣೀಂ ಪ್ರಾಯಾದುದಙ್ಮುಖಃ ।
ಶೈಶಿರಂಗಿರಮುದ್ದಿಶ್ಯ ಸಧರ್ಮಾ ಮಾತರಿಶ್ವನಃ ॥ - ೧೫೯/೧,೨

೨ ಅಪಶ್ಯದ್ಭಗವಾನ್ ವಿಷ್ಣುಃ ಕ್ಷಿಪ್ತಂ ಸಾಸುರರಾಕ್ಷಸಮ್ ।
ಸ ಪ್ರಹಸ್ಯ ವಿಶುದ್ಧಾತ್ಮಾ ಶಕ್ತಿಂ ಪ್ರಜ್ವಲತಾಂ ತದಾ ॥
ಕಂಪಯಾಮಾಸ ಸವ್ಯೇನ ಪಾಣಿನಾ ಪುರುಷೋತ್ತಮಃ ॥ - ೧೫೯/೧೧,೧೨

ಶಕ್ತ್ಯಾಯುಧವು ಅಲುಗಾಡಲು ಸಮಗ್ರ ಭೂಮಂಡಲ ಕಂಪಿಸಿತು. ವಿಷ್ಣುವಿಗೆ ಅದನ್ನು ಕಿತ್ತು ಎಸೆಯಲು ಸಾಧ್ಯವಿದ್ದರೂ, ಅವನ ಮಾತನ್ನು (ವೈಷ್ಣವರ) ರಕ್ಷಿಸಲು, ಸತ್ಯ ಮಾಡಲು ಕಿತ್ತಲಿಲ್ಲ. ದೈತ್ಯರಾಜ ಪ್ರಹ್ಲಾದನಿಗೆ ಸ್ಕಂದನ ಬಲವನ್ನು ನೋಡೆಂದು ಛೇಡಿಸಿದ (ಹೆದರಿಸಿದ)[೧].

ಆಗ ಪ್ರಹ್ಲಾದನು ಅದನ್ನು ಕಿತ್ತಲು ಪ್ರಯತ್ನಿಸಿ ಮೂರ್ಛಿತನಾಗಿ ಬಿದ್ದ. ಇಲ್ಲಿಯೇ ಪರಶಿವನು (ಹಿಮಗಿರಿಯ ಉತ್ತರದಿಕ್ಕಿನಲ್ಲಿ) ಭಾರೀ ತಪಸ್ಸನ್ನು ಮಾಡಿದ್ದನು. ಅದೆಲ್ಲ ಪರ್ವತದ ತಪ್ಪಲು ಅಗ್ನಿಯಿಂದ ಆವೃತವಾಗಿತ್ತು. ಜಿತೇಂದ್ರಿಯರಲ್ಲದವರು ಅಲ್ಲಿಗೆ ಹೋಗಲು ಆಗುತ್ತಿರಲಿಲ್ಲ. ಮಹಾದೇವ ಅಲ್ಲಿ ದೇವಮಾನವದಿಂದ ೧೦೦೦ ವರ್ಷ ತಪಸ್ಸನ್ನು ಮಾಡಿ ದೇವತೆಗಳನ್ನೇ ಸಂತಾಪ ಪಡಿಸಿದ್ದ.

ಇಂತಹ ಹಿಮವತ್ಪರ್ವತಪ್ರಾಂತದ ಪೂರ್ವಭಾಗಕ್ಕೆ ಶುಕಾಚಾರ್ಯರು ಬಂದರೂ, ಅಲ್ಲಿ ವ್ಯಾಸರು ತಮ್ಮ ನಾಲ್ವರು ಶಿಷ್ಯರಾದ ವೈಶಂಪಾಯನ, ಜೈಮಿನಿ, ಪೈಲ-ಸುಮಂತು ಇವರಿಗೆ ವೇದಾಧ್ಯಯನ ಮಾಡಿಸುತ್ತಿದ್ದರು. ವ್ಯಾಸರು ಜ್ವಲಿಸುವ ಅಗ್ನಿಯಂತೆ ಇದ್ದ ಮಗನಾದ ಶುಕ ಬರುವುದನ್ನು ನೋಡಿದರು. ಶುಕರು ನೇರವಾಗಿ ತಂದೆ ವ್ಯಾಸರ ಬಳಿಗೆ ಬಂದು ಪಾದಪ್ರಣಾಮ ಮಾಡಿ ಮೌನದಿಂದಲೇ ಇತರ ಶಿಷ್ಯರೊಂದಿಗೆ ಕುಳಿತರು. ನಂತರ ಜನಕರಾಜನ ಬಳಿಗೆ ಹೋದ ಸಮಾಚಾರವೆಲ್ಲವನ್ನು ತಂದೆಗೆ ನಿವೇದಿಸಿದರು.

ವ್ಯಾಸರು ತಮ್ಮ ಶಿಷ್ಯರಿಗೆ ಮತ್ತು ಶುಕನಿಗೆ ಶಾಸ್ತ್ರೋಪದೇಶ ಮಾಡುತ್ತಾ ಇದ್ದಾಗ ಒಮ್ಮೆ ನಾಲ್ವರು ಶಿಷ್ಯರು ವ್ಯಾಸರನ್ನು ಕುರಿತು ಪ್ರಾಂಜಲರಾಗಿ ಹೀಗೆ ಪ್ರಾರ್ಥಿಸಿದರು.

'ಗುರುಗಳೇ! ತಮ್ಮ ದಯೆಯಿಂದ ನಾವು ಬ್ರಹ್ಮತೇಜಸ್ಸಿನಿಂದ ಕೂಡಿದ್ದೇವೆ. ನಮ್ಮ ಕೀರ್ತಿ ಎಲ್ಲೆಡೆ ಬೆಳಗಿದೆ. ನಮ್ಮ ಮೇಲೆ ಈಗ ಅನುಗ್ರಹ ಮಾಡಬೇಕು. ನಮ್ಮದೊಂದು ಆಸೆ ಇದೆ' ಎಂದರು.

ಅದಕ್ಕೆ ವ್ಯಾಸರು 'ಹೇಳಿ' ಎಂದಾಗ, ಅವರು ಪ್ರಾಂಜಲರಾಗಿ 'ತಾವು ನಮ್ಮ ಬಗ್ಗೆ ಪ್ರೀತರಾಗಿದ್ದ ಪಕ್ಷದಲ್ಲಿ ನಾವು ನಿಜಕ್ಕೂ ಧನ್ಯರೇ ಸರಿ. ನಾವು ಐವರು ಶಿಷ್ಯರು ನಿಮಗೆ ಆರನೇ ಶಿಷ್ಯನು (ಯಾರೇ ಆಗಿರಲಿ) ನಮ್ಮಷ್ಟು ಕೀರ್ತಿ ಹೊಂದಬಾರದರು. ಈ ಬಗ್ಗೆ ತಾವು ಅನುಗ್ರಹಿಸಲು ಕೋರುತ್ತೇವೆ.'

ಶಿಷ್ಯರ ಮಾತನ್ನು ಕೇಳಿದ ವೇದಾರ್ಥತತ್ತ್ವಜ್ಞರಾದ ಪರಲೋಕಾರ್ಥ ಚಿಂತಕರಾದ (ಬೇರೆ ಜನರ ಪ್ರಯೋಜನವನ್ನು ಚಿಂತಿಸುವವರಾದ ಕೇವಲ ಈ ಶಿಷ್ಯರ ಹಿತಮಾತ್ರವಲ್ಲ, ಎಲ್ಲ ಶಿಷ್ಯರ, ಎಲ್ಲ ಭಕ್ತಜನರ) ವ್ಯಾಸರು ಮೋಹಕ್ಕೆ ಕಾರಣೀಭೂತವಾದ ಮಾತುಗಳನ್ನು ಹೇಳಿದರು.

---

೧ ಶಕ್ತೇನಾಪಿ ಸಮುದ್ಧರ್ತುಂ ಕಂಪಿತಾ ಸಾ ನತೂದ್ಧತಾ ।
ರಕ್ಷಿತಾ ಸ್ಕಂದರಾಜಸ್ಯ....... ಪ್ರಹ್ಲಾದಮಿದಮಬ್ರವೀತ್ ।
ಪಶ್ಯ ವೀರ್ಯಂ ಕುಮಾರಸ್ಯ ನೈತದನ್ಯಃ ಕರಿಷ್ಯತಿ ॥ - ೧೩೯/೧೪,೧೫

ಶಿಷ್ಯರೇ!

೧. ಬ್ರಹ್ಮಲೋಕಕ್ಕೆ ಹೋಗಬಯಸುವವನು ವೇದಾಧ್ಯಯನ ಮಾಡಬಯಸಿ ಬಂದ ಬ್ರಾಹ್ಮಣನಿಗೆ, ಜ್ಞಾನ ಪಿಪಾಸುವಿಗೆ ವೇದವನ್ನು (ಅಧ್ಯಯನ), ಸೇವೆ ಮಾಡುವವನಿಗೆ ಯಾವಾಗಲೂ ಕೊಡಬೇಕು (ಅಧ್ಯಯನ ಮಾಡಿಸಬೇಕು).

೨. ನೀವು ಬಹಳ ಶಿಷ್ಯರನ್ನು ಹೊಂದಿ ವೇದವನ್ನು ವಿಸ್ತರಿಸಿ, ಬಹಳ ಜನರಿಗೆ ಪಾಠ ಹೇಳಿರಿ. ಶಿಷ್ಯನಲ್ಲದವನಿಗೆ, ಇಂದ್ರಿಯನಿಗ್ರಹವಿಲ್ಲದವನಿಗೆ, ವ್ರತ, ನಿಯಮ ಇಲ್ಲದವನಿಗೆ (ಶಿಖಾವ್ರತ, ಏಕಾದಶ್ಯಾದಿ ವೈಷ್ಣವವ್ರತ) ವೇದೋಪದೇಶವನ್ನು ಮಾಡಬೇಡಿರಿ.

೩. ಇವೇ ಶಿಷ್ಯರಲ್ಲಿರಬೇಕಾದ ಗುಣಗಳು. ಶಿಷ್ಯರ ನಡತೆಯನ್ನು ಪರೀಕ್ಷೆ ಮಾಡದೆ ಉಪದೇಶ ಮಾಡಬೇಡಿರಿ.

೪. ಬೆಂಕಿಯಲ್ಲಿ ಹಾಕಿದಾಗ ಸುವರ್ಣಶುದ್ಧಿಯಾಗುತ್ತದೋ, ಹಾಗೆ ಶಿಷ್ಯರ ಕುಲಗೋತ್ರಗುಣಾದಿಗಳನ್ನು ತಿಳಿದು, ಪರೀಕ್ಷಿಸಿದಾಗಲೇ ಅವರನ್ನು ಉಪದೇಶಕ್ಕೆ ಅರ್ಹರಾಗುತ್ತಾರೆ.

೫. ಶಿಷ್ಯರನ್ನು ಅಯೋಗ್ಯವಾದ ಹಾಗೂ ಭಯಜನಕ ಕಾರ್ಯದಲ್ಲಿ ತೊಡಗಿಸಬಾರದು (ಅನಾವಶ್ಯಕವಾಗಿ ನಿರ್ಬಂಧಕ್ಕೆ ಒಳಪಡಿಸಬಾರದು). ಶಿಷ್ಯನಲ್ಲಿ ಯಾವ ಜ್ಞಾನವಿದೆಯೋ, ಯಾವ ರೀತಿ ಪಾಠ ಹೇಳುವಿಯೋ, ಅದರಂತೆ ವಿದ್ಯಾ ಫಲಿಸುತ್ತದೆ. ಎಲ್ಲರೂ ಎಲ್ಲ ರೀತಿಯ ಕಷ್ಟಗಳಿಂದ ದೂರವಾಗಲಿ. ಎಲ್ಲರಿಗೂ ಮಂಗಳವಾಗಲಿ. ಚತುರ್ವರ್ಣದವರಿಗೂ, ಬ್ರಾಹ್ಮಣರನ್ನು ಮುಂದಿಟ್ಟುಕೊಂಡು ಧರ್ಮೋಪದೇಶ ಮಾಡಿರಿ.

೬. ವೇದಾಧ್ಯಯನ ಮಹತ್ಕಾರ್ಯ. ದೇವತೆಗಳ ಸ್ತೋತ್ರಕ್ಕಾಗಿಯೇ ಬ್ರಹ್ಮನು ವೇದಗಳನ್ನು ತನ್ನ ಬುದ್ಧಿಯಿಂದ ಹೊರಹಾಕಿದ್ದಾನೆ (ಸೃಷ್ಟಿ ಮಾಡಿದ್ದಾನೆ).

೭. ವೇದ ಬಲ್ಲ ಬ್ರಾಹ್ಮಣನನ್ನು ನಿಂದಿಸುವವನು ಎಲ್ಲರೀತಿಯ ಪರಾಭವಕ್ಕೆ ಒಳಗಾಗುತ್ತಾನೆ.

೮. ಯಾರು ಅಧರ್ಮದಿಂದ (ಅನ್ಯಾಯದಿಂದ) ಪ್ರಶ್ನಿಸುತ್ತಾನೋ (ಉತ್ತರ ಗೊತ್ತಿದ್ದೂ ಗುರುಗಳನ್ನು ಪರೀಕ್ಷಿಸಲು), ಯಾರು ಅಧರ್ಮದಿಂದ (ಸರಿಯಾದ ಉತ್ತರ ಕೊಡುವುದಿಲ್ಲವೋ) ಉತ್ತರಿಸುತ್ತಾನೋ, ಇಬ್ಬರೂ ಮರಣ ಹೊಂದುತ್ತಾರೆ. ಇಬ್ಬರಲ್ಲಿಯೂ ದ್ವೇಷ ಬೆಳೆಯುತ್ತದೆ.

೯. ಇವೇ ವೇದಾಧ್ಯಯನ ವಿಧಿ-ವಿಧಾನಗಳು. ಇವನ್ನು ತಿಳಿದು ಶಿಷ್ಯರಿಗೆ ಉಪಕಾರ ಮಾಡಿರಿ. ಇವು ನಿಮ್ಮ ಮನಸ್ಸಿನಲ್ಲಿರಲಿ (ಇವು ಅಧ್ಯಯನ, ಅಧ್ಯಾಪನದ ಮಾರ್ಗಸೂಚಿ ಗಳು).

## ಸಂದೇಶಗಳು - ವಿವರಣೆಗಳು

೧. ಸ್ಕಂದನು ತನ್ನ ಶಕ್ತ್ಯಾಯುಧ ಪ್ರಯೋಗಿಸಿ, ದೇವತೆಗಳನ್ನು ಧಿಕ್ಕರಿಸಿದಾಗ ವಿಷ್ಣುವು ಆ ಆಯುಧವನ್ನು ತನ್ನ ಎಡಗೈಯಿಂದ ಅಲುಗಾಡಿಸಿ, ತಾನು ಸ್ಕಂದೋತ್ತಮ ಎನ್ನುವುದನ್ನು ಜಾಹೀರು ಮಾಡಿದಂತಾಯಿತು. ಸ್ಕಂದ ವಿಷ್ಣುಭಕ್ತನಾದ್ದರಿಂದ, ಆತನನ್ನು ಪೂರ್ತಿ ಧಿಕ್ಕರಿಸಲಿಲ್ಲ. ಇತರ ದೇವತೆಗಳ ಗರ್ವವೂ ಇಲ್ಲಿ ಪರಿಹಾರವಾಗಿ ತಮ್ಮ ಇತಿಮಿತಿಗಳನ್ನು ಅರಿಯುವಂತಾಯಿತು.

೨. ವೈಶಂಪಾಯನರೇ ಮೊದಲಾದ ನಾಲ್ಕು ಶಿಷ್ಯರು (ಐದನೆಯವರು ಗುರುಪುತ್ರರು) ವ್ಯಾಸರನ್ನು (ತಮ್ಮ) ಗುರುಗಳನ್ನು ಹೊರತುಪಡಿಸಿ ೬ನೇ ಶಿಷ್ಯನು ಖ್ಯಾತಿ ಹೊಂದಬಾರದು ಎಂಬ ವರ ಕೇಳುತ್ತಾರೆ. ವ್ಯಾಸರು ಇದಕ್ಕೆ ನೇರ ಉತ್ತರ ಕೊಡಲಿಲ್ಲ. ಪ್ರಾಯಃ ಅದಕ್ಕೆ ಅವರ ಒಪ್ಪಿಗೆ ಇರಲಿಲ್ಲವೆಂದೆನಿಸುತ್ತದೆ.

೩. ಆ ಶಿಷ್ಯರಿಗೆ ಅವರು ನೀಡಿದ ಆದೇಶಗಳು ಅವರ ನಿಮಿತ್ತ ಎಲ್ಲ ಶಿಷ್ಯರಿಗೆ ಮತ್ತು ಗುರುಸ್ಥಾನ ಹೊಂದುವವರಿಗೆ ಕೊಟ್ಟಿದ್ದಾರೆ.

೪. ಶಿಷ್ಯನ ಯೋಗ್ಯತೆಯನ್ನು ನಿಷ್ಕರ್ಷ ಮಾಡುವ ವಿಷಯಗಳು ಅಲ್ಲಿವೆ. ಗುರುಸೇವೆ ಮಾಡುವ ಶಿಷ್ಯನಿಗೆ, ಇಂದ್ರಿಯನಿಗ್ರಹ ಇರುವವನಿಗೆ, ವ್ರತನಿಯಮದೀಕ್ಷೆ ಇರುವವನಿಗೆ ವೇದಬೋಧನೆ ಮಾಡಬೇಕು.

೫. ವೈಶಂಪಾಯನಾದಿಗಳಿಗೆ ನೀಡಿದ ಉಪದೇಶವೆಲ್ಲ ಸಂದೇಶಗಳೇ.

ಇತ್ಯಾದಿ...

*****

## ೧೧೭. ವ್ಯಾಸಕಥಾ

ಗುರುಗಳಾದವ್ಯಾಸರಮಾತನ್ನುಕೇಳಿಶಿಷ್ಯರುಮುದಗೊಂಡು, ಪರಸ್ಪರಆಲಿಂಗಿಸಿಕೊಂಡು 'ತಮ್ಮ ಉಪದೇಶದಂತೆ ವೇದಾಧ್ಯಯನ ಮಾಡುತ್ತಾ ಬರುವ ಶಿಷ್ಯರಿಗೆ ಮಾಡಿಸುತ್ತಾ, ವೇದವನ್ನು ರಕ್ಷಿಸುತ್ತೇವೆ' ಎಂದರು. ಮತ್ತೆ ವ್ಯಾಸರನ್ನು ಕುರಿತು 'ಈ ಹಿಮವತ್ಪರ್ವತದಿಂದ ಭೂಮಿಗೆ ಹೋಗಲು ಬಯಸುತ್ತೇವೆ. ವೇದಗಳನ್ನು ಮತ್ತೆ ವಿಭಾಗ ಮಾಡಿ ಪ್ರಚಾರ ಮಾಡುವ ಉದ್ದೇಶವಿದೆ. ತಮಗೆ ಇದು ಸಮ್ಮತವಾಗಿದ್ದಲ್ಲಿ ಆದೇಶ ಕೋರುತ್ತೇವೆ' ಎಂದರು.

ಶಿಷ್ಯರ ಮಾತನ್ನು ಕೇಳಿದ ವ್ಯಾಸರು 'ನೀವು ಭೂಮಿಗೆ ಅಥವಾ ಸ್ವರ್ಗಕ್ಕಾದರೂ ಹೋಗಿರಿ. ಆದರೆ ವೇದಪ್ರಚಾರ ವಿಷಯದಲ್ಲಿ ಪ್ರಮಾದವೆಸಗಬೇಡಿ.'[೧]

ಹೀಗೆ ಗುರುಗಳಿಂದ ಆದೇಶಿಸಲ್ಪಟ್ಟವರಾಗಿ ಶಿಷ್ಯರು, ಗುರುಗಳನ್ನು ಶಿರಸಾವಹಿಸಿ ಅವರಿಗೆ ಪ್ರದಕ್ಷಿಣೆಯನ್ನು ಹಾಕಿ, ಅಲ್ಲಿಂದ ಹೊರಟರು. ಭೂಮಿಗೆ ಬಂದು ಅಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರಿಗೆ ಅಗ್ನಿಹೋತ್ರಾದಿ ಯಜ್ಞಯಾಗಾದಿಗಳನ್ನು ಮಾಡಿ, ಮಾಡಿಸಿದರು. ದ್ವಿಜರಿಂದ ಪೂಜಿತರಾಗಿ, ಲೋಕದಲ್ಲಿ ಪ್ರಸಿದ್ಧರಾದರು. ಯಾಜನ, ಅಧ್ಯಾಪನದಲ್ಲಿ ನಿರತರಾದರು.

ಈ ಕಡೆ ವ್ಯಾಸರು ತಮ್ಮ ಪುತ್ರನೊಡನೆ ಏಕಾಂತದಲ್ಲಿ ಧ್ಯಾನಾಸಕ್ತರಾಗಿರಲು ಅವರ ಆಶ್ರಮಕ್ಕೆ ನಾರದರು ಬಂದು ಆಶ್ರಮದಲ್ಲಿ ವೇದಘೋಷವಿಲ್ಲದಿರುವುದನ್ನು ಗಮನಿಸಿ –

'ಎಲೈ ಮಹರ್ಷಿಯೇ! ತಾವು ಧ್ಯಾನಿಸುತ್ತಾ ಏನನ್ನೋ ಚಿಂತಿಸುತ್ತಿರುವಂತೆ ಕಾಣುತ್ತಿದ್ದೀರಿ ಏಕೆ' ಎಂದರು[೨].

೧. ವೇದಘೋಷರಹಿತವಾದ ಈ ಪರ್ವತ ರಜಸ್ಸು, ತಮಸ್ಸುಗಳಿಂದ ಆಚ್ಛಾದಿತವಾದ ರಾಹುಗ್ರಸ್ತ ಚಂದ್ರನಂತೆ ಕಾಣುತ್ತಿದೆ.

೨. ವೇದಧ್ವನಿಯಿಲ್ಲದ ಈ ಪರ್ವತ ದೇವತೆಗಳಿದ್ದರೂ, ಮೊದಲಿನಂತೆ ಶೋಭಿಸದೇ ಬೇಡರ ಮನೆಯಂತಿದೆ.

---

೧ ಕ್ಷಿತಿಂ ವಾ ದೇವಲೋಕಂ ವಾ ಗಮ್ಯತಾಂ ಯದಿ ರೋಚತೇ।
ಅಪ್ರಮಾದಶ್ಚ ವಃ ಕಾರ್ಯೋ ಬ್ರಹ್ಮ ಹಿ ಪ್ರಚುರಚ್ಛಲಮ್ ॥ – ೧೬೦/೬

೨ ಏಕೋ ಧ್ಯಾನಪರಸ್ತೂಷ್ಣೀಂ ಕಿಮಾಸ್ಸೇ ಚಿಂತಯನ್ನಿವ। – ೧೬೦/೧೨

## ಸಂದೇಶಗಳು - ವಿವರಣೆಗಳು

೧. ಸ್ಕಂದನು ತನ್ನ ಶಕ್ತ್ಯಾಯುಧ ಪ್ರಯೋಗಿಸಿ, ದೇವತೆಗಳನ್ನು ಧಿಕ್ಕರಿಸಿದಾಗ ವಿಷ್ಣುವು ಆ ಆಯುಧವನ್ನು ತನ್ನ ಎಡಗೈಯಿಂದ ಅಲುಗಾಡಿಸಿ, ತಾನು ಸ್ಕಂದೋತ್ತಮ ಎನ್ನುವುದನ್ನು ಜಾಹೀರು ಮಾಡಿದಂತಾಯಿತು. ಸ್ಕಂದ ವಿಷ್ಣುಭಕ್ತನಾದ್ದರಿಂದ, ಆತನನ್ನು ಪೂರ್ತಿ ಧಿಕ್ಕರಿಸಲಿಲ್ಲ. ಇತರ ದೇವತೆಗಳ ಗರ್ವವೂ ಇಲ್ಲಿ ಪರಿಹಾರವಾಗಿ ತಮ್ಮ ಇತಿಮಿತಿಗಳನ್ನು ಅರಿಯುವಂತಾಯಿತು.

೨. ವೈಶಂಪಾಯನರೇ ಮೊದಲಾದ ನಾಲ್ಕು ಶಿಷ್ಯರು (ಐದನೆಯವರು ಗುರುಪುತ್ರರು) ವ್ಯಾಸರನ್ನು (ತಮ್ಮ) ಗುರುಗಳನ್ನು ಹೊರತುಪಡಿಸಿ ೬ನೇ ಶಿಷ್ಯನು ಖ್ಯಾತಿ ಹೊಂದಬಾರದು ಎಂಬ ವರ ಕೇಳುತ್ತಾರೆ. ವ್ಯಾಸರು ಇದಕ್ಕೆ ನೇರ ಉತ್ತರ ಕೊಡಲಿಲ್ಲ. ಪ್ರಾಯಃ ಅದಕ್ಕೆ ಅವರ ಒಪ್ಪಿಗೆ ಇರಲಿಲ್ಲವೆಂದೆನಿಸುತ್ತದೆ.

೩. ಆ ಶಿಷ್ಯರಿಗೆ ಅವರು ನೀಡಿದ ಆದೇಶಗಳು ಅವರ ನಿಮಿತ್ತ ಎಲ್ಲ ಶಿಷ್ಯರಿಗೆ ಮತ್ತು ಗುರುಸ್ಥಾನ ಹೊಂದುವವರಿಗೆ ಕೊಟ್ಟಿದ್ದಾರೆ.

೪. ಶಿಷ್ಯನ ಯೋಗ್ಯತೆಯನ್ನು ನಿಷ್ಕರ್ಷ ಮಾಡುವ ವಿಷಯಗಳು ಅಲ್ಲಿವೆ. ಗುರುಸೇವೆ ಮಾಡುವ ಶಿಷ್ಯನಿಗೆ, ಇಂದ್ರಿಯನಿಗ್ರಹ ಇರುವವನಿಗೆ, ವ್ರತನಿಯಮದೀಕ್ಷೆ ಇರುವವನಿಗೆ ವೇದಬೋಧನೆ ಮಾಡಬೇಕು.

೫. ವೈಶಂಪಾಯನಾದಿಗಳಿಗೆ ನೀಡಿದ ಉಪದೇಶವೆಲ್ಲ ಸಂದೇಶಗಳೇ.

ಇತ್ಯಾದಿ...

# ೧೧೭. ವ್ಯಾಸಕಥಾ

ಗುರುಗಳಾದವ್ಯಾಸರಮಾತನ್ನುಕೇಳಿಶಿಷ್ಯರುಮುದಗೊಂಡು,ಪರಸ್ಪರಆಲಿಂಗಿಸಿಕೊಂಡು 'ತಮ್ಮ ಉಪದೇಶದಂತೆ ವೇದಾಧ್ಯಯನ ಮಾಡುತ್ತಾ ಬರುವ ಶಿಷ್ಯರಿಗೆ ಮಾಡಿಸುತ್ತಾ, ವೇದವನ್ನು ರಕ್ಷಿಸುತ್ತೇವೆ' ಎಂದರು. ಮತ್ತೆ ವ್ಯಾಸರನ್ನು ಕುರಿತು 'ಈ ಹಿಮವತ್ಪರ್ವತದಿಂದ ಭೂಮಿಗೆ ಹೋಗಲು ಬಯಸುತ್ತೇವೆ. ವೇದಗಳನ್ನು ಮತ್ತೆ ವಿಭಾಗ ಮಾಡಿ ಪ್ರಚಾರ ಮಾಡುವ ಉದ್ದೇಶವಿದೆ. ತಮಗೆ ಇದು ಸಮ್ಮತವಾಗಿದ್ದಲ್ಲಿ ಆದೇಶ ಕೋರುತ್ತೇವೆ' ಎಂದರು.

ಶಿಷ್ಯರ ಮಾತನ್ನು ಕೇಳಿದ ವ್ಯಾಸರು 'ನೀವು ಭೂಮಿಗೆ ಅಥವಾ ಸ್ವರ್ಗಕ್ಕಾದರೂ ಹೋಗಿರಿ. ಆದರೆ ವೇದಪ್ರಚಾರ ವಿಷಯದಲ್ಲಿ ಪ್ರಮಾದವೆಸಗಬೇಡಿ.'[೧]

ಹೀಗೆ ಗುರುಗಳಿಂದ ಆದೇಶಿಸಲ್ಪಟ್ಟವರಾಗಿ ಶಿಷ್ಯರು, ಗುರುಗಳನ್ನು ಶಿರಸಾವಹಿಸಿ ಅವರಿಗೆ ಪ್ರದಕ್ಷಿಣೆಯನ್ನು ಹಾಕಿ, ಅಲ್ಲಿಂದ ಹೊರಟರು. ಭೂಮಿಗೆ ಬಂದು ಅಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರಿಗೆ ಅಗ್ನಿಹೋತ್ರಾದಿ ಯಜ್ಞಯಾಗಾದಿಗಳನ್ನು ಮಾಡಿ, ಮಾಡಿಸಿದರು. ದ್ವಿಜರಿಂದ ಪೂಜಿತರಾಗಿ, ಲೋಕದಲ್ಲಿ ಪ್ರಸಿದ್ಧರಾದರು. ಯಾಜನ, ಅಧ್ಯಾಪನದಲ್ಲಿ ನಿರತರಾದರು.

ಈ ಕಡೆ ವ್ಯಾಸರು ತಮ್ಮ ಪುತ್ರನೊಡನೆ ಏಕಾಂತದಲ್ಲಿ ಧ್ಯಾನಾಸಕ್ತರಾಗಿರಲು ಅವರ ಆಶ್ರಮಕ್ಕೆ ನಾರದರು ಬಂದು ಆಶ್ರಮದಲ್ಲಿ ವೇದಘೋಷವಿಲ್ಲದಿರುವುದನ್ನು ಗಮನಿಸಿ –

'ಎಲೈ ಮಹರ್ಷಿಯೇ! ತಾವು ಧ್ಯಾನಿಸುತ್ತಾ ಏನನ್ನೋ ಚಿಂತಿಸುತ್ತಿರುವಂತೆ ಕಾಣುತ್ತಿದ್ದೀರಿ ಏಕೆ' ಎಂದರು[೨].

೧. ವೇದಘೋಷರಹಿತವಾದ ಈ ಪರ್ವತ ರಜಸ್ಸು ತಮಸ್ಸುಗಳಿಂದ ಆಚ್ಛಾದಿತವಾದ ರಾಹುಗ್ರಸ್ತ ಚಂದ್ರನಂತೆ ಕಾಣುತ್ತಿದೆ.

೨. ವೇದಧ್ವನಿಯಿಲ್ಲದ ಈ ಪರ್ವತ ದೇವತೆಗಳಿದ್ದರೂ, ಮೊದಲಿನಂತೆ ಶೋಭಿಸದೇ ಬೇಡರ ಮನೆಯಂತಿದೆ.

---

೧ ಕ್ಷಿತಿಂ ವಾ ದೇವಲೋಕಂ ವಾ ಗಮ್ಯತಾಂ ಯದಿ ರೋಚತೇ।
ಅಪ್ರಮಾದಶ್ಚ ವಃ ಕಾರ್ಯೋ ಬ್ರಹ್ಮ ಹಿ ಪ್ರಚುರಚ್ಛಲಮ್ ॥ – ೧೬೦/೬

೨ ಏಕೋ ಧ್ಯಾನಪರಸ್ತೂಷ್ಣಿಂ ಕಿಮಾಸ್ಸೇ ಚಿಂತಯನ್ನಿವ। – ೧೬೦/೧೨

೩. ಇಲ್ಲಿರುವ ಋಷಿಗಳು, ದೇವರ್ಷಿಗಳು, ಗಂಧರ್ವರು, ಮಹಾತೇಜಸ್ವಿಗಳು ಬ್ರಹ್ಮಘೋಷ ರಹಿತರಾದ್ದರಿಂದ, ಅವರು ತೇಜೋವಿಹೀನರಂತಿದ್ದಾರೆ (ಆಶ್ರಮದಲ್ಲಿ ವೇದಘೋಷವಿದ್ದಾಗಿನ ವೈಭವವಿಲ್ಲ ಎಂದು ಭಾವ).

೪. ಅದಕ್ಕೆ ಒಪ್ಪಿಗೆ ಸೂಚಿಸಿದ ವ್ಯಾಸರು, 'ತ್ರಿಲೋಕ ಸಂಚಾರಿಯಾದ ಸರ್ವಜ್ಞನಾದ ನೀನು ಈ ಬಗ್ಗೆ ನಾನೇನು ಮಾಡಬೇಕೆಂದು ಸೂಚಿಸು' ಎಂದರು. 'ಶಿಷ್ಯರು ಎಲ್ಲರೂ ಹೋಗಿದ್ದಾರೆ, ನನ್ನ ಮನಸ್ಸು ಅಷ್ಟಾಗಿ ನೆಮ್ಮದಿಯಿಂದ ಕೂಡಿಲ್ಲ.' ಅದಕ್ಕೆ ನಾರದರು. 'ವೇದಾಧ್ಯಯನ ಮಾಡಿ ಪುನರಾವೃತ್ತಿ ಮಾಡದಿದ್ದಲ್ಲಿ ವೇದಾಧ್ಯಯನವೇ ಕಲುಷಿತವಾಗುತ್ತದೆ. ವ್ರತಗಳನ್ನು ಆಚರಿಸಿದೇ ಬ್ರಾಹ್ಮಣನು ನಿಂದ್ಯನಾಗುತ್ತಾನೆ. ವಾಹೀಕರಾಜರು ಭೂಮಿಯಲ್ಲಿ ಕಂಳಂಕರೆನಿಸಿದ್ದಾರೆ. ಸ್ತ್ರೀಯರಿಗೆ ಕುತೂಹಲವೇ ದೋಷಕ್ಕೆ ಕಾರಣ. ಆದ್ದರಿಂದ ನಿಮ್ಮ ಮಗನೊಡನೆ ವೇದಾಧ್ಯಯನ ಮಾಡಿರಿ. ಅದರಿಂದ ರಕ್ಷೋಭಯ ಹೋಗುತ್ತದೆ.'

ನಾರದರ ಮಾತಿನಂತೆ ವ್ಯಾಸರು ಮಗನೊಡನೆ ವೇದಾಧ್ಯಯನದಲ್ಲಿ ದೀಕ್ಷಿತರಾಗಿ 'ನಿಮ್ಮಂತಾಗಲಿ' ಎಂದರು.

ಮುಂದುವರಿದ ವ್ಯಾಸರು 'ಬಾಹ್ಲೀಕರನ್ನು (ವಾಹೀಕರು) ಮಲವೆಂದೆಯಲ್ಲ, ಅವರು ಯಾರು? ಅವರ ಸ್ವಭಾವ ಎಂತಹುದು?' ಎಂದು ಕೇಳಿದಾಗ, ನಾರದರು 'ಈ ಭೂಮಂಡಲದಲ್ಲಿ ನಾಲ್ಕು ದೇಶಗಳು ಪಾಪಿಗಳಿಂದ ತುಂಬಿವೆ. ಅದರಲ್ಲಿ ಮೊದಲನೆಯದು ಯುಗಂಧರ, ಎರಡನೆಯದು ಭೂತಿಲಕ, ಮೂರನೆಯದು ಅಚ್ಯುತಶ್ಥಲ, ನಾಲ್ಕನೆಯದು ಭಾರಿ ಪಾಪಕ್ಕೆ ಅವಕಾಶವಿರುವ ದೇಶ ಬಾಹ್ಲೀಕ ದೇಶ (೧೬೦/೨೪-೨೬).

೧. ಯುಗಂಧರ ದೇಶದ ಜನರು ಜಿಂಕೆ, ಒಂಟೆ, ಕತ್ತೆಗಳ ಹಾಲನ್ನು ಕುಡಿಯುತ್ತಾರೆ.

೨. ಅಚ್ಯುತಶ್ಥಲದ ಜನರು ತಲೆಗೂದಲನ್ನು ಹರವಿಕೊಂಡು ವ್ರತಭ್ರಷ್ಟರಲ್ಲದೆ ಒಂದೇ ಕಿವಿಯವರು.

೩. ಭೂತಿಲಕದ ಜನರು (ಸಾರ್ವಜನಿಕ) ಜಲಮೂಲಗಳಿಂದ ಮಲ ವಿಸರ್ಜನೆ ಮಾಡುವುದಲ್ಲದೆ, ಆ ನೀರನ್ನೇ ಕುಡಿಯುತ್ತಾರೆ. ಆ ನೀರಿನಲ್ಲಿ ಅನ್ನ ಮಾಡುತ್ತಾರೆ. ಇಷ್ಟು ಹೊಲಸು ಜನ ಎಂದು ಭಾವ.

೪. ಬಾಹ್ಲೀಕ ದೇಶದವರು ಹರಿವಿರೋಧಿಗಳು (ಭಗವದ್ವೇಷಿಗಳು). ಹರಿಸ್ಮರಣೆ ಮಾಡುವುದೇ ಇಲ್ಲ, ದೇಹದ ಬೆಳವಣಿಗೆಯೇ ಅವರ ಜೀವನದ ಗುರಿ ಇಹಲೋಕದ ಸುಖವೇ ಮೋಕ್ಷವೆಂದು ಅವರ ಜ್ಞಾನ. ಜೀವನ ವ್ಯರ್ಥವಾಗಿ ಕಳೆಯುವವರು.

ವ್ಯಾಸಮಹರ್ಷಿಗಳೇ! ಹಿಂದೆ ಪುಷ್ಕರತೀರ್ಥಕ್ಕೆ ಬಂದ ಒಬ್ಬ ಬ್ರಾಹ್ಮಣಸ್ತ್ರೀಯನ್ನು ಅಡ್ಡಗಟ್ಟಿದ ಅಲ್ಲಿದ್ದ ಪಿಶಾಚಿಗಳು, ಮುಸುಂಡಿ ಎಂಬ ಆಯುಧ ಹಿಡಿದುಕೊಂಡು ಹೀಗೆ ನುಡಿದವು.

'ನೀನು ಯುಗಂಧರದಲ್ಲಿ ನೀರು ಕುಡಿದು, ಅಚ್ಯುತಸ್ಥಲದಲ್ಲಿ ವಾಸ ಮಾಡಿ, ಭೂತಿಲಕದಲ್ಲಿ ಸ್ನಾನಮಾಡಿ, ಬಾಹ್ಲೀಕರಾಜ್ಯವನ್ನು ಸುತ್ತಿ ಇಲ್ಲಿಗೆ ಬಂದು ಸ್ನಾನ ಮಾಡಿದ ಮಾತ್ರಕ್ಕೆ ನಿನಗೆ ಸ್ವರ್ಗ ದೊರಕದು.' ಹೀಗೆ ಅನ್ನುತ್ತಾ ಬ್ರಾಹ್ಮಣಸ್ತ್ರೀಯ ಕೈಯಲ್ಲಿದ್ದ ಗಡಿಗೆಯನ್ನು ಒಡೆದು ಮತ್ತೆ ಹೇಳಿದಳು. 'ನಿನ್ನ ಹಗಲು-ರಾತ್ರಿಗಳ ನಡತೆಯು ವಿಭಿನ್ನವಾಗಿದೆ. ಎಲ್ಲೂ ಪ್ರಾಮಾಣಿಕತೆ ಇಲ್ಲ, ಇದು ನನಗೆ ಗೊತ್ತು. ಬಾಹ್ಲೀಕರ ಸಂಸರ್ಗದಿಂದಾಗಿ ನೀನು ಅಶುಚಿಯಾಗಿದ್ದೀ. ಇಲ್ಲಿ ಸ್ನಾನಕ್ಕೆ ನಿನಗೆ ಅರ್ಹತೆ ಇಲ್ಲ. ಹರಿದ್ವೇಷ ಮಾಡುವವರಿಗೆ ಪುಣ್ಯತೀರ್ಥ ಸ್ನಾನದಿಂದ ಸ್ವರ್ಗವಾಗದು. ಅಷ್ಟೇ ಅಲ್ಲ ಅಂತಹ ಸಂಬಂಧ ಮಾಡುವವರಿಗೆ ಸದ್ಗತಿಯಿಲ್ಲ.

ಈ ಮಾತುಗಳನ್ನು ಕೇಳಿ ಗಾಬರಿಯಿಂದ ತನ್ನ ದೇಶಕ್ಕೆ ಹೋಗಿ, ಅಲ್ಲಿ ಮೂರು ವರ್ಷ ಅನಂತರೂಪಿಯಾದ ದ್ವಾದಶಾಕ್ಷರನಾಮವನ್ನು (ವಾಸುದೇವ) ಜಪಮಾಡಿ, ಮಕ್ಕಳೊಡನೆ ಮತ್ತೆ ಪುಷ್ಕರಕ್ಷೇತ್ರಕ್ಕೆ[೧] ಬಂದಾಗ, ಅದೇ ಪಿಶಾಚಿಗಳು 'ತಾಯಿ! ನಿನಗೆ ನಮಸ್ಕಾರ. ನಿನ್ನ ದರ್ಶನದಿಂದ ನಾನು ಪೂತನಾಗಿದ್ದೇನೆ. ಇಲ್ಲಿ ನೀನು ಸ್ನಾನ ಮಾಡಿ ನನಗೆ ಈ ತೀರ್ಥದ ಜಲವನ್ನು ಸಿಂಪಡಿಸು[೨] (ಪ್ರೋಕ್ಷಿಸು). ವಾಸುದೇವ ಸ್ಮರಣೆ ಮಾಡುತ್ತಾ.' ಆ ಬ್ರಾಹ್ಮಣೆಯು ತಾನು ಮಕ್ಕಳೊಡನೆ ಸ್ನಾನಮಾಡಿ ಆ ಪಿಶಾಚಿ ಸ್ತ್ರೀಗೆ ಪ್ರೋಕ್ಷಿಸಲು, ಆಕೆ ದಿವ್ಯ ಅಪ್ಸರೆಯಾಗಿ ದೇವಲೋಕಕ್ಕೆ ಹೋದಳು[೩].

ಬ್ರಾಹ್ಮಣೆಯು ಕೂಡಾ ವಿಷ್ಣುಧ್ಯಾನ ಪರಳಾಗಿ ಕೊನೆಗೆ ವಿಷ್ಣುಲೋಕಕ್ಕೆ ಹೋದಳು. ಈ ಕಥೆ ಹೇಳಿ ನಾರದರು ಮತ್ತೆ ಬರುವೆ ಎಂದು ಹೇಳಿ ಹೊರಟರು.

ನಂತರ ವ್ಯಾಸರು ಮಗ ಶುಕರೊಡನೆ ವೇದಾಭ್ಯಾಸ ಮಾಡುತ್ತಾ ಮೂರುಲೋಕಗಳನ್ನೂ ವೇದಘೋಷಗಳಿಂದ ತುಂಬಿಸಿದರು. ಹೀಗಿರುವಾಗ ಒಮ್ಮೆ ಇವರ ಪ್ರಭಾವದಿಂದ ಸಮುದ್ರದ ಗಾಳಿಯಿಂದ ಪ್ರೇರಿತವಾದ ಭಾರಿ ಬಿರುಗಾಳಿ ಬಂತು. ಆಗ ವ್ಯಾಸರು ಇನ್ನು ವೇದಾಧ್ಯಯನಕ್ಕೆ ಅನಧ್ಯಯನವೆಂದರು. ಕಾರಣವನ್ನು ಶುಕರು ಕೇಳಲು ವ್ಯಾಸರು ಹೀಗೆ ಉತ್ತರಿಸಿದರು.

'ಮಗು! ನಿನಗೆ ಈಗಾಗಲೇ ದಿವ್ಯಚಕ್ಷು(ಜ್ಞಾನ) ಬಂದಿದೆ. ಮನಸ್ಸು ಮಲಿನರಹಿತವಾಗಿದೆ. ಶುದ್ಧ ಸತ್ತ್ವ ಗುಣನಾಗಿದ್ದೀ. ಈಗ ನೀನು ಕನ್ನಡಿಯಲ್ಲಿ ಪ್ರತಿಬಿಂಬ ನೋಡುವಂತೆ ನೀನು ಬುದ್ಧಿಯಲ್ಲಿ ದೇವರನ್ನು ಸ್ಥಿರಗೊಳಿಸಿ ವೇದ ವಿಚಾರ ಮಾಡು.

---

೧ ಅನಂತಸ್ಯ ಹರೇಃ ಶುದ್ಧನಾಮ ವೈ ದ್ವಾದಶಾಕ್ಷರಮ್ ।
ವತ್ಸರತ್ರಿತಯೇ ಪೂಜೇ ಬ್ರಾಹ್ಮಣೀ ಪುನರಾಗತಾ ॥

೨ ನಮಸ್ತೇ ಬ್ರಾಹ್ಮಣಿ ಶುಭೇ ಮಾತ್ರಾऽಹಂ ತವ ದರ್ಶನಾತ್ ।
ಹರೇರ್ನಾಮ್ನಾ ಚ ಮಾಂ ಸಾಧ್ವೀ ಜಲೇನ ಸ್ಪ್ರಷ್ಟುಮರ್ಹಸಿ ॥

೩ ಜಲೇನ ಪ್ರೋಕ್ಷಯಾಮಾಸ ದ್ವಾದಶಾಕ್ಷರಸಮ್ಮತಮ್ ।
ತತ್‌ಕ್ಷಣಾತ್ ಅಭವತ್ ಶುದ್ಧಾ ಪಿಶಾಚೀ ದಿವ್ಯರೂಪಿಣೀ ।
ಅಪ್ಸರಾ ಹ್ಯಭವತ್ ದಿವ್ಯಾ ಗತಾ ಸ್ವರ್ಲೋಕಮುತ್ತಮಮ್ ॥ -೧೬೦/೩೬-೪೦

ಶುಕಾಚಾರ್ಯರು ವಾಯುವಿನ ವಿವಿಧವ್ಯಾಪಾರಗಳನ್ನು ಕೇಳಲಾಗಿ, ವ್ಯಾಸರು ವಿವರಿಸಿದರು.

ಭೂಮಿ ಹಾಗೂ ಅಂತರಿಕ್ಷದಲ್ಲಿ ಸಂಚರಿಸುವ ವಾಯುವಿಗೆ ಏಳು ಮಾರ್ಗಗಳಿವೆ. ಅವುಗಳನ್ನು ಕೇಳು ಎಂದರು.

೧. ಭೂಮಿ – ಅಂತರಿಕ್ಷದಲ್ಲಿರುವ ದೇವತೆಗಳು – ಸಾಧ್ಯರೆಂಬ ದೇವಗಣ – ಇವರ ಮಗ ಸಮಾನನೆಂಬ ದುರ್ಜಯವಾದ ವಾಯು.

೨. ಸಮಾನನ ಮಗ ಉದಾನ – ಆತನ ಮಗ ಅಪಾನ– ಅಪಾನನ ಮಗ ಪ್ರಾಣ.

೩. ಪ್ರಾಣನಿಗೆ ಸಂತಾನವಾಗಲಿಲ್ಲ. ಪ್ರಾಣಿಗಳಲ್ಲಿ ವಾಯು ವಿವಿಧ ವ್ಯಾಪಾರಗಳನ್ನು ಮಾಡುತ್ತಾನೆ. ಅವನಿಗೆ ಪ್ರಾಣ ಎನ್ನುತ್ತಾರೆ (Governing of Biological Activities).

ಪೃಥಿವೀ–ಅಂತರಿಕ್ಷಗಳಲ್ಲಿ ಸಂಚರಿಸುವ ವಾಯುವಿನ ಏಳು ಮಾರ್ಗಗಳು.

| ಫಲ | ವಾಯವಿನ ಹೆಸರು | ಮಾರ್ಗ | ವ್ಯಾಪಾರ |
|---|---|---|---|
| ೧ | ಪ್ರವಹ | ಹೊಗೆಯಿಂದ, ತಾಪದಿಂದ ಹುಟ್ಟಿದ ಮೇಘಗಳು ಸಂಚರಿಸುವ | ಅತ್ತತ್ತ ಸಂಚಾರ ಮಾಡಿಸುವ |
| ೨ | ಆವಹ | ಆಕಾಶದಲ್ಲಿ ವಿದ್ಯುತ್ತಿನೊಡನೆ ಸಂಬಂಧ ಹೊಂದಿ ಮಹಾಕಾಂತಿ ಹೊಂದಿ | ಗಟ್ಟಿಯಾಗಿ ಶಬ್ದ ಮಾಡುವುದು |
| | ಉದಾನ | ಸಕ್ಷತ್ರ, ಚಂದ್ರ, ಸೂರ್ಯರ ಉದಯ | ನಕ್ಷತ್ರ, ಚಂದ್ರ, ಸೂರ್ಯರ ಪ್ರಾಣಿಗಳ ದೇಹದಲ್ಲಿ ವ್ಯಾಪಾರ |
| ೩ | ಉದ್ವಹ | ನಾಲ್ಕು ಸಮುದ್ರಗಳಿಂದ ಜಲವನ್ನು ಆಕಾಶಮಂಡಲಕ್ಕೆ ಎತ್ತಿ ಮೇಘಗಳಿಗೆ ತಲುಪಿಸುವುದು | ಮೇಘಗಳನ್ನು ನೀರಿನ ಜೊತೆಗೆ ಸಂಯೋಜಿಸಿ ಪರ್ಜನ್ಯನಿಗೆ ಒಪ್ಪಿಸುವುದು, ಸದಾ ಚಲನಶೀಲ |
| ೪ | ಸಂವಹ | ಆಕಾಶದಲ್ಲಿ ಮೇಘನಿರ್ಮಾಣ ಪರ್ವತಗಳು | ೧. ಮೇಘಗಳನ್ನು ಒಟ್ಟುಗೂಡಿಸುವುದು ಮಳೆಗರೆಯಲು ಆರಂಭಿಸುವುದು<br>೨. ಘನೀಭೂತವಾದ ಮೇಘಗಳು ಚದರಿ ಹೋಗುತ್ತವೆ.<br>೩. ದೇವತಾ ವಿಮಾನಗಳ ಸಂಚಾರಕ್ಕೆ ಅನುಕೂಲ ಮಾಡುವುದು<br>೪. ಪರ್ವತಶಿಖರ ಧ್ವಂಸ ಮಾಡುವುದು. |

| | | | |
|---|---|---|---|
| ೫ | ವಿವಹ | ಆಕಾಶದಲ್ಲಿ | ೧. ಉತ್ಪಾತಗಳನ್ನು ಉಂಟುಮಾಡುವುದು.<br>೨. ಮೇಘಗಳ ಸಂಚಾರ ಮಾಡಿಸುವುದು |
| ೬ | ಪರಿವಹ | ಚಂದ್ರ | ಚಂದ್ರನ ಪೋಷಣೆ |
| ೭ | ಪರಾವಹ | ಪ್ರಾಣಿಗಳ ಶರೀರ (ದಕ್ಷಪ್ರಜಾಪತಿಯ ೧೦೦೦೦ ಮಕ್ಕಳು ಈ ವಾಯುವನ್ನು ಆಶ್ರಯಿಸಿ ದಿಕ್ಕುಗಳ ಕೊನೆಯನ್ನು ಸೇರಿದರು) | ಪ್ರಾಣಿಗಳ ಶರೀರದಿಂದ ಪ್ರಾಣವನ್ನು ಹೊರಹಾಕುವುದು. ಪರಾವಹ ಸ್ಪರ್ಶದಿಂದ ಜೀವ ಶರೀರದಿಂದ ಹೊರ ಹೋಗುತ್ತಾನೆ. |

**ಅಲಂ ದೇಹೇ ಮನಃ ಕೃತ್ವಾತ್ಯಕ್ತ್ವಾ ದೇಹಂ ಸುಖೀ ಭವ।**
**ಗಚ್ಛಲೋಕಾನರಜಸೋ ಯತ್ರ ಗತ್ವಾನ ಶೋಚಸಿ ॥**
**ಕಾಲ ಉವಾಚ –**

ಹೀಗೆ ಆದಿತಿಯ ಪುತ್ರರಾದ ಈ ಮಾರುತರು (ವಾಯುಗಳು) ಎಲ್ಲಾ ಕಡೆ ಸಂಚರಿಸುತ್ತಾ ಎಲ್ಲರನ್ನೂ ಧಾರಣ ಮಾಡುತ್ತಾರೆ.

ವೇದಾಧ್ಯಯನವನ್ನು ನಿಲ್ಲಿಸಿದ ವಾಯು ವಿಷ್ಣುವಿನ ಶ್ವಾಸ ಎನ್ನಿಸಿದ. ಆಗ ಜಗತ್ತಿಗೆ ದುಃಖವಾಗುತ್ತದೆ. ಆಗ ಬ್ರಹ್ಮವಾದಿಗಳು ಅಧ್ಯಯನ ಮಾಡುವುದಿಲ್ಲ. ಅದರಭಿಪ್ರಾಯ ವಾಯುವಿನ ಆ ಮಹಾಘೋಷದಿಂದ ವೇದಗಳು ಸರಿಯಾಗಿ ಕೇಳಿಸುವುದಿಲ್ಲ(ಶಿಷ್ಯರಿಗೆ).

ಹೀಗೆ ವ್ಯಾಸರು ಶುಕರಿಗೆ ಉತ್ತರಿಸಿ ವೇದಾಧ್ಯಯನವನ್ನು ಮುಂದುವರಿಸೆಂದು ಹೇಳಿ ತಾವು ಆಕಾಶಗಂಗೆ ಕಡೆ ಹೊರಟರು.

## ಸಂದೇಶಗಳು–ವಿವರಣೆಗಳು

೧. ವೇದಾಧ್ಯಾಪನ ಎಷ್ಟು ಕರ್ತವ್ಯವೋ ಅದು ಅಷ್ಟೇ ದೀಕ್ಷೆಯಿಂದಿರಬೇಕು. ಮೂಲಭೂತ ವಿಧಿನಿಯಮಗಳನ್ನು ಮರೆಯದೆ ವರ್ತಿಸಬೇಕು. ಅತ್ಯುತ್ಸಾಹ ಪ್ರಮಾದಕ್ಕೆ ಕಾರಣವಾಗಬಹುದು. ಕಂಡಕಂಡವರಿಗೆ ಅಧಿಕಾರವಿಲ್ಲದವರಿಗೆ ವೇದಪಾಠ ಹೇಳಿದಲ್ಲಿ ಅದು ಉಪದೇಶಕನನ್ನೇ ನಾಶ ಮಾಡುತ್ತದೆ.

೨. ವೈಶಂಪಾಯನಾದಿ ಶಿಷ್ಯರು ಹೊರಟು ಹೋದಮೇಲೆ ವ್ಯಾಸರು ಚಿಂತಿತರಂತೆ ಕಂಡುದು ಕೇವಲ ಲೋಕದೃಷ್ಟಿಯಿಂದ. ಆಪ್ತಶಿಷ್ಯರು ಹೋದ ಮೇಲೆ (ಭೂಲೋಕಕ್ಕೆ)

ವ್ಯಾಸರು ಶುಕರನ್ನು ಬಿಟ್ಟು ಬೇರೆ ಯಾರೂ ಇರಲಿಲ್ಲ. ಆದ್ದರಿಂದ ಸಾಮಾನ್ಯನಂತೆ ನಿರುತ್ಸಾಹಿಗಳಾಗಿದ್ದರು.

೩. ಆದರೂ ಸದಾಸಂಚಾರಿಗಳಾದ ನಾರದರಿಂದಲೂ ತಾವೇ ಸರ್ವಜ್ಞರಾದರೂ 'ಏನು ಮಾಡಲಿ' ಎಂದು ವಿನಯಪೂರ್ಣವಾಗಿ ಸಲಹೆ ಕೇಳುತ್ತಾರೆ. ತಾನು ಎಲ್ಲವನ್ನೂ ಬಲ್ಲೆ, ನನಗೆ ಯಾರ ಉಪದೇಶ ಬೇಡವೆಂಬ ಸಾಮಾನ್ಯ ಜನರ ವರ್ತನೆ ಇಲ್ಲಿಲ್ಲ. ಅದು ನಿಜಕ್ಕೂ ಅನುಕರಣೀಯ (ವ್ಯಾಸರನಡತೆ).

೪. ಗುರುಮನೆ, ಆಶ್ರಮ, ಬ್ರಾಹ್ಮಣರ, ದ್ವಿಜರ ಆವಾಸಗಳೆಂದರೆ ವೇದಘೋಷ ಇರಲೇಬೇಕು. ಇಲ್ಲದಿದ್ದರೆ ಅದು ಬೇಡರಮನೆ ಇದ್ದಂತೆ.

೫. ಒಮ್ಮೆ ಅಧ್ಯಯನ ಮುಗಿದರೂ ಪುನರಾವರ್ತನೆ(ವೇದಾದಿಶಾಸ್ತ್ರ) ಅತ್ಯಂತ ಅವಶ್ಯ. ಆದ್ದರಿಂದ **ಆವೃತ್ತಿಃ ಅಸಕೃದುಪದೇಶಾತ್** ಎಂದು ವ್ಯಾಸರೇ ಸೂತ್ರ ಮಾಡಿ ಆದೇಶಿಸಿದ್ದಾರೆ.

೬. ಪ್ರಪಂಚದಲ್ಲಿರುವ ಎಲ್ಲ ಪ್ರದೇಶಗಳೂ ಪವಿತ್ರವಲ್ಲ. ನಿಷಿದ್ಧ ದೇಶಗಳಿಗೆ ಹೋಗಬಾರದು. ಉದಾ: ಬಾಹ್ಲೀಕ ದೇಶ ಮೊದಲಾದವು. ಈ ಬಗ್ಗೆ ಧರ್ಮಶಾಸ್ತ್ರ ಗ್ರಂಥಗಳನ್ನು ಅಧ್ಯಯನ ಮಾಡಿ ಅದರಂತೆ ನಡೆಯುವುದು.

ಇತ್ಯಾದಿ...

# ೧೧೮. ನಾರದರಿಂದ ಶುಕಮುನಿಗೆ ಉಪದೇಶ

ತಂದೆ ವ್ಯಾಸರ ಅಣತಿಯಂತೆ ಶುಕರು ಸ್ವಾಧ್ಯಾಯ ನಿರತರಾಗಿದ್ದಾಗ ವೇದಾರ್ಥಗಳನ್ನು ಶುಕರಿಗೆ ಹೇಳುವ ಉದ್ದೇಶದಿಂದ ವ್ಯಾಸಾಶ್ರಮಕ್ಕೆ ಬಂದ ನಾರದರನ್ನು ವೇದೋಕ್ತ ಅರ್ಘ್ಯಾದಿಗಳಿಂದ ಪೂಜಿಸಿದರು. ನಾರದರು ಶುಕರಿಗೆ 'ನಿನ್ನನ್ನು ಮೋಕ್ಷಮಾರ್ಗದಲ್ಲಿ ಹೇಗೆ ತೊಡಗಿಸಲಿ?' ಎಂದಾಗ ಶುಕರು 'ಈ ಲೋಕದಲ್ಲಿ ಯಾವುದರಿಂದ ಹಿತವಾಗುತ್ತದೋ ಅದನ್ನೇ ನನಗೆ ಉಪದೇಶಿಸಿರಿ' ಎಂದರು[೧].

'ಹಿಂದೆ ಭಗವತ್ತತ್ತ್ವವನ್ನು ಜಿಜ್ಞಾಸಾ ಮಾಡುತ್ತಿದ್ದ ಋಷಿಗಳಿಗೆ ಸನತ್ಕುಮಾರನು ಹೇಳಿದ್ದನ್ನೇ ಹೇಳುತ್ತೇನೆ' ಎಂದರು ನಾರದರು.

ಸನತ್ಕುಮಾರರು ಹೇಳಿದ, ಮಾಡಿದ ಉಪದೇಶದ ಮುಖ್ಯಾಂಶಗಳು ಹೀಗಿವೆ.

೧. ಅಧ್ಯಾತ್ಮ ವಿದ್ಯೆಗೆ ಸಮವಾದ ಕಣ್ಣಿಲ್ಲ, ಸತ್ಯಕ್ಕೆ ಮಿಗಿಲಾದ ತಪಸ್ಸಿಲ್ಲ, ರಾಗಕ್ಕೆ ಸಮನಾದ ದುಃಖವಿಲ್ಲ(ದುಷ್ಟ ಇಚ್ಛೆ) (ಶ್ಲೋಕ. ೬).

೨. ಸದಾ ಪಾಪಸಾಧನ ಕರ್ಮಗಳಿಂದ ದೂರ, ಪುಣ್ಯಪ್ರಾಪಕ ಕರ್ಮಗಳಲ್ಲಿ ಆಸಕ್ತಿ ಇರಬೇಕು (ಶ್ಲೋಕ. ೭).

೩. ವಿಷಯಗಳ ಸಂಬಂಧವೇ ದುಃಖಕ್ಕೆ ಕಾರಣ. ಮನುಷ್ಯಜನ್ಮದಲ್ಲಿ ಪುರುಷನು ಪ್ರಾಕೃತಸುಖಗಳಲ್ಲಿ ಆಸಕ್ತಿ ಹೊಂದಿ ದುಃಖದಲ್ಲಿ ಮುಳುಗುತ್ತಾನೆ. ಆದ್ದರಿಂದ ವಿಷಯಗಳಿಂದ ದೂರ ಇರಬೇಕು (ಶ್ಲೋಕ. ೮).

೪. ಮೋಕ್ಷ ಬಯಸುವವನು ಸಕಲ ಪ್ರಯತ್ನಗಳಿಂದ ಕಾಮಕ್ರೋಧಗಳನ್ನು ಹತೋಟಿಯಲ್ಲಿಟ್ಟುಕೊಳ್ಳಬೇಕು. ಏಕೆಂದರೆ ಇವು ಶ್ರೇಯಸ್ಸನ್ನು ಹಾಳು ಮಾಡಲು ಪ್ರಯತ್ನಿಸುತ್ತಿರುತ್ತವೆ (ಶ್ಲೋಕ. ೧೦).

---

೧ ನಾರದ ಉವಾಚ :
ಕೇನ ತ್ವಾಂ ಶ್ರೇಯಸಾ ತಾತ ಯೋಜಯಾಮೀತಿ ಹೃಷ್ಟವತ್ ।
ಶುಕ ಉವಾಚ :
ಅಸ್ಮಿಂಲ್ಲೋಕೇ ಹಿತಂ ಯತ್ಸ್ಯಾತ್ ತೇನ ಮಾಂ ಯೋಕ್ತುಮರ್ಹತಿ ॥ – (೧೬೧/೩,೪)

೫. ಯಾವಾಗಲೂ ಮಾಡಿದ ತಪಸ್ಸನ್ನು ಕ್ರೋಧದಿಂದ, ಸಂಪತ್ತನ್ನು ಅಸೂಯೆಯಿಂದ, ವಿದ್ಯೆಯನ್ನು ಮಾನಾಪಮಾನಗಳಿಂದ, ತನ್ನನ್ನು ಪ್ರಮಾದದಿಂದ ರಕ್ಷಿಸಿಕೊಳ್ಳಬೇಕು. ಏಕೆಂದರೆ ಸಿಟ್ಟಾದರೆ ತಪೋನಾಶ, ಬೇರೆಯವರು ಮುಂದೆ ಬಂದುದನ್ನು ಸಹಿಸದಿದ್ದರೆ ಐಶ್ವರ್ಯನಾಶ, ಸಮಾಜ ನಮ್ಮನ್ನು ಮಾನ/ಅವಮಾನ ಮಾಡಿದರೆ ಹಿಗ್ಗದೆ, ಕುಗ್ಗದೆ ಇದ್ದರೆ ಗಳಿಸಿದ ವಿದ್ಯೆ ಉಳಿಯುತ್ತದೆ. ಇಲ್ಲದಿದ್ದರೆ ನಾಶ ಖಚಿತ. ಕರ್ತವ್ಯತ್ಯಾಗ, ಮಾಡಬಾರದ್ದನ್ನು ಮಾಡಿದರೆ (ಪ್ರಮಾದ ಎಸಗಿದರೆ) ಆತ್ಮನಾಶ, ದೇಹನಾಶ, ಬದುಕಿದ್ದರೂ ಶವದಂತಾಗುತ್ತೇವೆ. ನಮ್ಮನ್ನು ಯಾರೂ ಗೌರವಿಸುವುದಿಲ್ಲ(ಶ್ಲೋಕ. ೧೧).

೬. ಭೂತ ದಯೆಯೇ ಮಹಾಧರ್ಮ, ಪರಾಪರಾಧಗಳನ್ನು ಕ್ಷಮಿಸುವುದೇ ನಮ್ಮ ಬಲ, ಭಗವತ್ ಜ್ಞಾನವೇ ಉತ್ತಮಜ್ಞಾನ, ಸತ್ಯಕ್ಕಿಂತ ಉತ್ತಮ ನಡೆ ಮತ್ತೊಂದಿಲ್ಲ(ಶ್ಲೋಕ. ೧೨).

೭. ಸತ್ಯವಚನವೇ ಶ್ರೇಯಸ್ಸು(ಸತ್ಯ ಮಾತನಾಡುವುದು), ಸತ್ಯಕ್ಕಿಂತಲೂ ಸಜ್ಜನರ ಹಿತವೇ ಶ್ರೇಯಸ್ಕರ, ಪ್ರಾಣಿಗಳಿಗೆ ಹಿತವಾಗುವಂತೆ ವರ್ತಿಸುವುದೇ ನಿಜವಾದ ಸತ್ಯದ ಅರ್ಥ. ಅದೇ ನನ್ನ ಅಭಿಪ್ರಾಯ (ಶ್ಲೋಕ. ೧೩).

೮. ಕಾಮ್ಯಕರ್ಮಗಳ ಫಲತ್ಯಾಗ, ಹೊರ ಜಗತ್ತಿನಲ್ಲಿ ಕಾಣುವ ವಿಷಯಗಳ ಆಸೆ ಇಲ್ಲದಿರುವುದು (ವಿಷಯಗಳಲ್ಲಿ ನಿರಾಸಕ್ತಿ), ದಾನ ಸ್ವೀಕರಿಸದಿರುವುದು, ಬಾಹ್ಯ ಸಂಪತ್ತೆಲ್ಲವನ್ನು ತ್ಯಾಗ ಮಾಡುವುದು, ಇಂಥವನೇ ವಿದ್ವಾನ್, ಪಂಡಿತ (ಶ್ಲೋಕ. ೧೪).

೯. ಯಾರು ಪ್ರಾಣಿಗಳಿಂದ(ಗಳೊನಡೆ)(ಗಳನ್ನು) ನೋಡುವುದಿಲ್ಲವೋ, ಮಾತನಾಡುವುದಿಲ್ಲವೋ, ಮುಟ್ಟುವುದಿಲ್ಲವೋ, ಅವನೇ ಉತ್ತಮ ಶ್ರೇಯೋಭಾಗಿ (ಕೇವಲ ಭಗವಂತನೊಡನೆ ತದ್ಭಕ್ತರೊಡನೆ ಸಂಭಾಷಣಾದಿಗಳು ಎಂದು ಭಾವ) (ಶ್ಲೋಕ. ೧೭).

೧೦. ಯಾವ ಪ್ರಾಣಿಗಳನ್ನೂ ಹಿಂಸಿಸಬಾರದು. ಎಲ್ಲರೊಡನೆ ಮೈತ್ರಿಯಿಂದ ವ್ಯವಹರಿಸಬೇಕು. ಮನುಷ್ಯಜನ್ಮ ಹೊಂದಿ ಯಾರೊಡನೆಯೂ ಶತ್ರುಭಾವವಿರಬಾರದು (ಶ್ಲೋಕ. ೧೮).

೧೧. ಧನಸಂಗ್ರಹದಲ್ಲಿ ನಿರಾಸಕ್ತಿ, ಇದ್ದುದರಲ್ಲಿ ಸಂತೋಷಪಡುವುದು, ಯಾವುದರ ಚಾಪಲ್ಯವಿಲ್ಲದೆ ಇರುವುದು, ಇಂದ್ರಿಯಗಳನ್ನು ಗೆಲ್ಲುವುದು, ಆತ್ಮಜ್ಞಾನಿಗೆ ಶ್ರೇಯೋ ಸಾಧನಗಳು (ಶ್ಲೋಕ. ೧೯).

೧೨. ದಾನ ಸ್ವೀಕರಿಸುವ ಹವ್ಯಾಸಬಿಟ್ಟು ಜಿತೇಂದ್ರಿಯನಾಗಿ ಬಾಳು. ದುಃಖರಹಿತವಾದ ಮಾರ್ಗ ಹಿಡಿ, ಅದು ಇಹಪರಗಳ ಶ್ರೇಯಸ್ಸಿಗೆ ಸಾಧನ (ಶ್ಲೋಕ. ೨೦).

೧೩. ಅಜಿತಂ – ಗೆಲ್ಲಲು ಅಸಾಧ್ಯವಾದ ಮೋಕ್ಷವನ್ನು ಅಜಿತನಾಮಕ ಪರಮಾತ್ಮನನ್ನು ಹೊಂದುವ ಬಯಕೆ ಯಾರಿಗಿದೆಯೋ, ಅವನು ನಿತ್ಯದಲ್ಲಿ ತಪಸ್ಸನ್ನು ಆಚರಿಸುವುದನ್ನು

ಇಂದ್ರಿಯನಿಗ್ರಹವನ್ನು ಮನೋನಿಗ್ರಹವನ್ನು ವಿಷಯಗಳಲ್ಲಿ ಆಸಕ್ತಿ ಬಿಡುವುದನ್ನು ಹೊಂದಬೇಕು (ಶ್ಲೋಕ. ೨೨).

೧೪. ಸಾತ್ವಿಕಕರ್ಮಗಳಿಂದ ದೇವತ್ವ(ದೈವೀ ಸ್ವಭಾವ), ರಾಜಸಕರ್ಮಗಳಿಂದ ಮನುಷ್ಯತ್ವ(ದೇವಾಸುರಸ್ವಭಾವ), ತಾಮಸಕರ್ಮಗಳಿಂದ ಹೀನಜನ್ಮಗಳನ್ನು ಹೊಂದುತ್ತಾನೆ (ಅಸುರಸ್ವಭಾವವಿರುವ, ಕ್ರೂರಸ್ವಭಾವದ ಹಿಂಸ್ರಪಶು, ಪಕ್ಷಿ ಇತ್ಯಾದಿ) (ಶ್ಲೋಕ. ೨೫).

೧೫. ಕೇವಲ ಹೆಂಡತಿ, ಮಕ್ಕಳು, ಕುಟುಂಬದಲ್ಲಿ ಮಗ್ನರಾದವರು ಕುಗ್ಗುತ್ತಾರೆ (ದುಃಖಕ್ಕೆ ಈಡಾಗುತ್ತಾರೆ). ಕೆಸರೇ ತುಂಬಿದ ಸರೋವರಗಳಲ್ಲಿ ಸಿಲುಕುವ ಆನೆಗಳು ಮೃತಪ್ರಾಯ (ಶ್ಲೋಕ. ೩೦).

೧೬. ಮರಣ ಹೊಂದಿದ ನಂತರ ಬೇರೆ ಲೋಕಕ್ಕೆ ಹೋಗುವ ನಿನ್ನ ಹಿಂದೆ ಯಾರೂ ಇರುವುದಿಲ್ಲ, ನೀನು ಆ ಜನ್ಮದಲ್ಲಿ ಮಾಡಿದ ಪುಣ್ಯಪಾಪಗಳು ಮಾತ್ರ ನಿನ್ನನ್ನು ಅನುಸರಿಸುತ್ತವೆ (ಶ್ಲೋಕ. ೩೬).

೧೭. ತ್ಯಾಗದಿಂದ(ಫಲ) ಧರ್ಮವನ್ನು (ಸತ್ಕರ್ಮ) ತ್ಯಜಿಸು(ದೇವರಿಗೆ ಸಮರ್ಪಿಸು). ಅಧರ್ಮವನ್ನು ಅಹಿಂಸೆಯಿಂದ ತ್ಯಜಿಸು. ಸತ್ಯಾನೃತಗಳನ್ನು ಬುದ್ಧಿಯಿಂದ ತ್ಯಜಿಸು. ಭಗವಂತನನ್ನೇ ಧ್ಯಾನಿಸುತ್ತಾ ಬಂಧಕವಾದ ಬುದ್ಧಿಯನ್ನು ತ್ಯಜಿಸು ([೧]ಒಗಟಿನಂತಿದೆ ಈ ಶ್ಲೋಕ ನೋಡಿರಿ).

೧೮. ಈ ಶರೀರವೆಂತಹುದೆಂದು ನಾರದರು ವಿವರಿಸುತ್ತಾರೆ. ಎಲುಬುಗಳೆಂಬ ಸ್ತಂಭದಿಂದ ಕೂಡಿದ್ದು, ನರನಾಡಿಗಳಿಂದ ಕೂಡಿರುವ, ಮಾಂಸರಕ್ತಗಳಿಂದ ಲೇಪಿತವಾದ, ಚರ್ಮದಿಂದ ಹೊದ್ದ (ಹೊದಿಕೆಯೇ ಚರ್ಮ), ದುರ್ಗಂಧದಿಂದ ಕೂಡಿದ, ಮಲಮೂತ್ರಗಳಿರುವ, ಮುಪ್ಪು ಶೋಕಗಳಿರುವ, ರೋಗಗಳಿಗೆ ಆಶ್ರಯತಾಣವಾದ, ರೋಗಪೀಡಿತವಾದ, ರಜೋಗುಣರೂಪವಾದ ಧೂಳಿನಿಂದ ಮುಚ್ಚಿರುವ, ಪಂಚಭೂತಗಳಿಗೆ ವಾಸಸ್ಥಾನವಾದ (ಪಂಚಭೂತಗಳಿಂದ ಆಗಿರುವ) ದೇಹವನ್ನು ಬಿಟ್ಟುಬಿಡು (ಅದರ ಮೇಲೆ ಅಭಿಮಾನತ್ಯಾಗ ಮಾಡು) (ಶ್ಲೋಕ. ೪೨,೪೩).

೧೯. ಸರ್ವೋತ್ತಮನಾದ ದೇವರು, ಉತ್ತಮವಲ್ಲದ ಜಗತ್ತು, ಇವೆರಡರ ಜ್ಞಾನವುಳ್ಳವನಿಗೆ ಜ್ಞಾನದ ಕೊನೆಯನ್ನೇ ಕಾಣದು. ಜಾಗ್ರತ್, ಸ್ವಪ್ನ ಸುಷುಪ್ತಿ ಈ ಮೂರು ಅವಸ್ಥೆಗಳಲ್ಲಿ ಎಲ್ಲ ಜೀವರ ಅಂತರ್ಯಾಮಿಯಾಗಿ ಭಗವಂತನನ್ನೇ ಇಂತಹವನು ನೋಡುತ್ತಾನೆ(ಇಂತಹವನಿಗೆ) (ಶ್ಲೋಕ. ೫೧).

---

೧ ತ್ಯಜ ಧರ್ಮಂ ಅಸಂಕಲ್ಪಾತ್ ಅಧರ್ಮಂ ಚಾಪ್ಯಹಿಂಸಯಾ ।
ಉಭೇ ಸತ್ಯಾನೃತೇ ಬುದ್ಧ್ವಾ ಬುದ್ಧಿಂ ಪರಮನಿಶ್ಚಯಾತ್ ॥ - ೧೬೧/೪೧

೨೦. ಪರಮಾತ್ಮನಲ್ಲಿ ಮನಸ್ಸಿಡುವವನಿಗೆ ಅಶುಭ(ಅಮಂಗಳ) ಪದಾರ್ಥಗಳ ಸಂಬಂಧ ಆಗದು. ಅವನು ಜ್ಞಾನಬಲದಿಂದ (ಬ್ರಹ್ಮ) ಮೋಹದಿಂದ ಹುಟ್ಟುವ ಅನೇಕ ಕಷ್ಟಾರ್ಪಣ್ಯಗಳನ್ನು ದಾಟುತ್ತಾನೆ. ಅವನಿಗೆ ಜಗತ್ತಿನಲ್ಲಿ ಬೌದ್ಧಿಕವಾಗಿ ಮಾಡಬೇಕಾದ ವ್ಯವಹಾರಗಳಿಗೆ ತಡೆಯುಂಟಾಗದು (ಜ್ಞಾನಕಾರ್ಯಗಳನ್ನು ಪಾಠ-ಪ್ರವಚನ, ಇತರ ಯಜನಯಾಜನಾದಿಗಳೂ ಉಪಲಕ್ಷಣಯಾ ಸೇರುತ್ತವೆ) (ಶ್ಲೋಕ. ೫೨).

೨೧. ಆದ್ದರಿಂದ ಶುಕರೇ! ನೀವು ಕರ್ಮಗಳಿಂದ ಮುಕ್ತರಾಗಿ, ಅವುಗಳ ಬಂಧನದಿಂದ ಬಿಡುಗಡೆ ಹೊಂದಿ, ಸರ್ವಜ್ಞರಾಗಿ, ಎಲ್ಲವನ್ನೂ ಗೆದ್ದವರಾಗಿ, ಸಾಂಸಾರಿಕ ಬಂಧನರಹಿತರಾಗಿ ಸಿದ್ಧಿಯನ್ನು ಹೊಂದಿರಿ (ಶ್ಲೋಕ. ೫೮).

## ಸಂದೇಶಗಳು–ವಿವರಣೆಗಳು

ನಾರದರು ಶುಕರನ್ನು ನಿಮಿತ್ತವಾಗಿಟ್ಟುಕೊಂಡು ಸಾಧಕ ಜಗತ್ತಿಗೆ ಮಾಡಿದ ಉಪದೇಶ-ವಿದು ಎಂದು ತಿಳಿಯಬೇಕು.

# ೧೧೯. ಶುಕರಿಗೆ ನಾರದರಿಂದ ಉಪದೇಶ

೧. ಶುಕಮುನಿಗಳೇ! ಸಂಸಾರವು ಶೋಕದಿಂದ ಕೂಡಿದೆ. ಅದರ ನಾಶಕ್ಕಾಗಿ ಮಂಗಳಕರವಾದ ದುಃಖವಿರದ, ಭಗವನ್ನಿಷ್ಠಾಪ್ರದವಾದ ಶಾಸ್ತ್ರವನ್ನು ನಿಷ್ಠೆಯಿಂದ ಕೇಳಿರಿ, ಅಂತಹ ವ್ಯಕ್ತಿಯು ಉತ್ತಮಬುದ್ಧಿ(ಶಾಸ್ತ್ರಾಪರೋಕ್ಷ) ಹೊಂದಿ, ಸುಖವನ್ನು ಪಡೆಯುತ್ತಾನೆ (ಶ್ಲೋ.೧).

೨. ಪ್ರತಿದಿನವೂ ಸಾವಿರಾರು ಶೋಕಪ್ರಸಂಗಗಳೂ, ನೂರಾರು ಭಯಪ್ರಸಂಗಗಳು ಮೂರ್ಖ ಮನುಷ್ಯನನ್ನು ಆಕ್ರಮಿಸುತ್ತವೆಯೇ ಹೊರತು, ಪಂಡಿತನನ್ನಲ್ಲ(ಶ್ಲೋ.೨).

೩. ಆದ್ದರಿಂದ ಈ ಅನಿಷ್ಟನಾಶಕ್ಕೋಸ್ಕರ (ಸಂಸಾರವೆಂಬ) ನಾನು ಉಪದೇಶಿಸುವುದನ್ನು ಬುದ್ಧಿಯ ವಶದಲ್ಲಿಟ್ಟುಕೊಂಡಲ್ಲಿ ಶೋಕನಾಶವಾಗುತ್ತದೆ(ಶ್ಲೋ. ೩).

೪. ಅಪ್ರಿಯವಾದ ವಸ್ತುಗಳನ್ನು ಬಯಸುವುದರಿಂದ, ಪ್ರಿಯವಸ್ತುಗಳನ್ನು ತ್ಯಾಗ ಮಾಡುವುದರಿಂದ, ಅಲ್ಪಬುದ್ಧಿಯುಳ್ಳವರು ಮಾನಸದುಃಖಗಳಿಗೆ ಬಲಿಯಾಗುತ್ತಾರೆ (ಶ್ಲೋ. ೪).

೫. ಕಳೆದುಹೋದ ವಸ್ತುಗಳಲ್ಲಿನ ದೋಷಗಳನ್ನು ಯೋಚಿಸಬಾರದು. ಅವುಗಳ ಬಗ್ಗೆ ಆಸಕ್ತಿ ಹೆಚ್ಚಾದಂತೆ ಅವುಗಳ ಬಗ್ಗೆ ಸ್ನೇಹವೂ ಬಿಟ್ಟುಹೋಗುವುದಿಲ್ಲ(ಶ್ಲೋ. ೫)

೬. ಆಕರ್ಷಕವಾಗಿ ಕಾಣುವ ಪದಾರ್ಥದಲ್ಲಿ ದೋಷಜ್ಞಾನವಿದ್ದರೆ, ಅದರಿಂದ ವೈರಾಗ್ಯ ಉಂಟಾಗುತ್ತದೆ (ಶ್ಲೋ. ೬).

೭. ಮೃತನಾದ ವ್ಯಕ್ತಿಯ ಬಗ್ಗೆಯಾಗಲೀ, ಕಳೆದುಹೋದ ಪದಾರ್ಥದ ಬಗ್ಗೆಯಾಗಲಿ ಯಾರು ದುಃಖಿಸುತ್ತಾರೋ ಅವರು ದುಃಖದಿಂದ ದುಃಖಪ್ರಾಪ್ತಿ ಮತ್ತು ಎರಡು ಅನರ್ಥಗಳನ್ನು ಹೊಂದುವರು (ಶ್ಲೋ. ೯).

೮. ದುಃಖಕ್ಕೆ ಔಷಧಿ ಇದು, ದುಃಖದ (ಕಾರಣ) ಬಗ್ಗೆ ಚಿಂತಿಸಬಾರದು. ಅದನ್ನೇ ಯೋಚಿಸುತ್ತಿದರೆ ಆ ದುಃಖ ಹೆಚ್ಚಾಗುತ್ತದೆ (ಶ್ಲೋ. ೧೨).

೯. ಪ್ರಜ್ಞೆಯಿಂದ (ಹೆಚ್ಚಾದ ಜ್ಞಾನ) ಮನಸ್ಸಿನ ದುಮ್ಮಾನವನ್ನು ನಿವಾರಿಸಿಕೊಳ್ಳಬೇಕು. ಶರೀರದ ದುಃಖವನ್ನು (ವೇದನೆ) ಔಷಧಗಳಿಂದ ಪರಿಹರಿಸಿಕೊಳ್ಳಬೇಕು. ಇದು

ಸಾಧ್ಯವಾಗುವುದು ಜ್ಞಾನಸಾಮರ್ಥ್ಯದಿಂದ. ಆದ್ದರಿಂದ ದುಃಖವಾದಾಗ ಮಕ್ಕಳಂತೆ ಅಳಬಾರದು (ಶ್ಲೋ. ೧೩).

೧೦. ರೂಪ, ಯೌವನ, ಹಣಸಂಗ್ರಹ, ಆರೋಗ್ಯ, ಪ್ರಿಯಜನರ ಸಹವಾಸ ಇವೆಲ್ಲ ಅನಿತ್ಯ (ಶಾಶ್ವತವಲ್ಲ). ಆದ್ದರಿಂದ ಪಂಡಿತನಾದವನು ಇವುಗಳಲ್ಲಿ ಆಸಕ್ತಿ ಹೊಂದಬಾರದು (ಶ್ಲೋ. ೧೪).

೧೧. ಯಾವನು ದುಃಖವನ್ನು ತ್ಯಜಿಸುವನೋ (ದುಃಖವಾದಾಗ ಚಿಂತಿಸುವುದಿಲ್ಲವೋ, ಸುಖವನ್ನು ತ್ಯಜಿಸುವನೋ(ವೈಷಯಿಕ) ಅವನು ಗುಣಪರಿಪೂರ್ಣನಾದ ಬ್ರಹ್ಮನನ್ನು ಹೊಂದುತ್ತಾನೆ. ಅವನ ಬಗ್ಗೆ ವಿದ್ವಾಂಸರು ದುಃಖಿಸುವುದಿಲ್ಲ(ಶ್ಲೋ. ೧೭).

೧೨. ಸಂಪಾದಿತ ಸಂಪತ್ತುಗಳು ಒಂದಲ್ಲ ಒಂದು ದಿನ ನಾಶ ಹೊಂದುವುವು. ಉಚ್ಛ್ರಾಯಸ್ಥಿತಿ (ಉನ್ನತ ಸ್ಥಾನಗಳಿಗೆ ಹೋದುವು) ಗಳಿಗೆಲ್ಲ ಪತನವೇ ಗತಿ (ಕೆಳಗೆ ಬೀಳುತ್ತವೆ). ಎಲ್ಲ ಸಂಬಂಧಗಳು ವಿಯೋಗದಲ್ಲಿ ಪರ್ಯವಸಾನವಾಗುತ್ತವೆ. ಜೀವನವು ಮರಣದಲ್ಲಿ ಮುಗಿಯುತ್ತದೆ[1] (ಶ್ಲೋ. ೨೦).

೧೩. ಯಾವಾಗಲೂ ಧನಾದಿ ಸಂಗ್ರಹಗಳಲ್ಲಿಯೇ ಆಸಕ್ತನಾಗಿರುವ, ಆಶೆಗಳ ಬಗ್ಗೆ ತೃಪ್ತಿ ಇರದಿರುವ ಪುರುಷನನ್ನು ವ್ಯಾಘ್ರವು ಹಸುವನ್ನು ಕಚ್ಚಿಕೊಂಡು ಹೋಗುವಂತೆ ಮೃತ್ಯುವು ಅಪಹರಿಸುತ್ತದೆ (ಶ್ಲೋ. ೨೪).

೧೪. ಶಬ್ದ, ಸ್ಪರ್ಶ, ರೂಪ, ರಸ, ಗಂಧಾದಿಗಳು ಧನಿಕನಿಗಾಗಲೀ, ದರಿದ್ರರಿಗಾಗಲೀ ಅನುಭವಿಸುವಾಗ ಸುಖದಂತೆ ತೋರುತ್ತವೆ. ನಂತರ ಅವು ಸುಖಕರವೆನ್ನಿಸುವುದಿಲ್ಲ (ಶ್ಲೋ. ೨೬).

೧೫. ಧೈರ್ಯದಿಂದ ನಾಲಿಗೆ, ಉದರ, ಉಪಸ್ಥಗಳನ್ನು, ಕೈಕಾಲುಗಳನ್ನು, ಕಣ್ಣಿನಿಂದ ಕಣ್ಣು ಕಿವಿಗಳನ್ನು, ಮನಸ್ಸಿನಿಂದ ಮನಸ್ಸು ಮತ್ತು ಮಾತನ್ನು ವಿದ್ಯೆಯಿಂದ ರಕ್ಷಿಸಿಕೊಳ್ಳಬೇಕು[2].

ಇತ್ಯಾದಿ...

*****

೧ ಸರ್ವೇ ಕ್ಷಯಾಂತಾ ನಿಚಯಾಃ ಪತನಾಂತಾಃ ಸಮುಚ್ಛ್ರಯಾಃ।
ಸಂಯೋಗಾವಿಪ್ರಯೋಗಾಂತಾಃ ಮರಣಾಂತಂ ಹಿ ಜೀವಿತಮ್ ॥

೨ ಧೃತ್ಯಾ ಶಿಶ್ನೋದರಂ ರಕ್ಷೇತ್ ಪಾಣಿಪಾದಂ ಚ ಚಕ್ಷುಷಾ।
ಚಕ್ಷುಃ ಶ್ರೋತ್ರೇ ಚ ಮನಸಾ ಮನೋವಾಚಂ ಚ ವಿದ್ಯಯಾ ॥ ೧೬೨/೨೮

# ೧೨೦. ನಾರದರಿಂದ ಶುಕಮುನಿಗೆ ವೈರಾಗ್ಯೋಪದೇಶ

೧. ಸುಖದುಃಖಗಳ ವಿಷಯದಲ್ಲಿ ಭ್ರಮೆ ಇದ್ದಾಗ (ಯಥಾರ್ಥಜ್ಞಾನವಿರದಿದ್ದಾಗ) ಅವನನ್ನು ಉತ್ತಮವಾದ ಪ್ರಜ್ಞೆಯಾಗಲೀ, ನೀತಿಯಾಗಲೀ, ಪೌರುಷವಾಗಲೀ ರಕ್ಷಿಸದು (ಶ್ಲೋ. ೧).

೨. ಆದ್ದರಿಂದ ಜೀವನು ಸ್ವಾಭಾವಿಕವಾಗಿಯೇ ಭಗವಂತನ ವಿಷಯದಲ್ಲಿ ಪ್ರಯತ್ನಿಸಬೇಕು (ಭಗವಂತನಜ್ಞಾನ ಹೊಂದಲು). ಹೀಗೆ ಪ್ರಯತ್ನಿಸಿದಲ್ಲಿ ಮುಪ್ಪು, ಮರಣ, ರೋಗಗಳಿಂದ ತನ್ನನ್ನು ಉದ್ಧರಿಸಿಕೊಳ್ಳಬೇಕು (ಶ್ಲೋ. ೨).

೩. ದೇಹ ಸಂಬಂಧಿಯಾದ ಹಾಗೂ ಮನಸ್ಸಂಬಂಧಿಯಾದ ರೋಗಗಳು ಶರೀರಗಳನ್ನು ಬಾಧಿಸುತ್ತವೆ. ಹೇಗೆ ಶ್ರೇಷ್ಠರಾದ ಧನುರ್ಧಾರಿಗಳು ಅತ್ಯಂತ ಹರಿತವಾದ ಬಾಣಗಳನ್ನು ಬಿಲ್ಲಿಗೆ ಹೆದೆಯೇರಿಸಿ ಪ್ರಯೋಗಿಸುವಂತೆ, ಅನೇಕ ವಿಧವಾದ ರೋಗಗಳು ಜೀವನನ್ನು ಪೀಡಿಸುತ್ತವೆ (ಶ್ಲೋ. ೩).

೪. ಮನುಷ್ಯನು ಮತ್ತೊಬ್ಬರ ಅಧೀನನಾಗಿ ಕಾರ್ಯ ಮಾಡುವುದಿಲ್ಲವಾದಲ್ಲಿ, ಅವನು ಬಯಸಿದ ಇಚ್ಛೆಗಳು ಈಡೇರಬೇಕಾಗಿತ್ತು. ಅವನು ಮಾಡಿದ ಕಾರ್ಯಗಳಿಗೆ ಫಲಗಳು ಸಿಗುತ್ತಿಲ್ಲವಾದ್ದರಿಂದ ಅವನು ಸ್ವತಂತ್ರನಲ್ಲವೆಂದು ಅರ್ಥವಾಗುತ್ತದೆ.[1]

೫. ಇಂದ್ರಿಯನಿಗ್ರಹವಿರುವವರು, ದಕ್ಷರು, ಬುದ್ಧಿವಂತರಾದ ಮಾನವರು ಫಲವನ್ನು ಹೊಂದದಿರುವಂತಹ ದೃಶ್ಯಗಳು ಕಾಣುತ್ತವೆ (ಪ್ರಯತ್ನಿಸಿದರೂ). ತಾವು ಮಾಡಿದ ಕರ್ಮಗಳಿಂದ ಫಲವನ್ನು ಹೊಂದದೇ ಇರುವ ಸಜ್ಜನರನ್ನು ನೋಡುತ್ತೇವೆ (ಶ್ಲೋ. ೧೦).

೬. ಅಲ್ಲದೆ ಕೆಲ ಮೂರ್ಖರು, ಸದ್ಗುಣರಹಿತರು, ದುರ್ಜನರು, ದೊಡ್ಡವರ ಆಶೀರ್ವಾದವಿಲ್ಲದಿದ್ದರೂ ಎಲ್ಲ ಇಷ್ಟಾರ್ಥಗಳನ್ನು ಪಡೆದ ಉದಾಹರಣೆಗಳೂ ಕಾಣುತ್ತವೆ (ಶ್ಲೋ. ೧೧).

---

೧ ಯೋ ಯಮಿಚ್ಛೇತ್ ಯಥಾ ಕಾಮಂ ಕಾಮಾನಾಂ ತತ್ತದಾಪ್ನುಯಾತ್ ।
ಯದಿಸ್ಯಾನ್ನ ಪರಾಧೀನಂ ಪುರುಷಸ್ಯ ಕ್ರಿಯಾಫಲಮ್ ॥ - ೧೬೩/೯
ಯದಿ ನಾಮ ಪರೋ ನ ಭವೇತ್ ಸ ಹರಿಃ ಕಥಮಸ್ಯ ವಶೇ ಜಗದೇತದಭೂತ್ ।
ಯದಿ ನಾಮ ನ ತಸ್ಯ ವಶೇ ಸಕಲಂ ಕಥಮೇವ ತು ನಿತ್ಯಸುಖಂ ನ ಭವೇತ್ ॥
- ದ್ವಾದಶಸ್ತೋತ್ರ(೩/೫)

ಸಾಧ್ಯವಾಗುವುದು ಜ್ಞಾನಸಾಮರ್ಥ್ಯದಿಂದ. ಆದ್ದರಿಂದ ದುಃಖವಾದಾಗ ಮಕ್ಕಳಂತೆ ಅಳಬಾರದು (ಶ್ಲೋ. ೧೩).

೧೦. ರೂಪ, ಯೌವನ, ಹಣಸಂಗ್ರಹ, ಆರೋಗ್ಯ, ಪ್ರಿಯಜನರ ಸಹವಾಸ ಇವೆಲ್ಲ ಅನಿತ್ಯ (ಶಾಶ್ವತವಲ್ಲ). ಆದ್ದರಿಂದ ಪಂಡಿತನಾದವನು ಇವುಗಳಲ್ಲಿ ಆಸಕ್ತಿ ಹೊಂದಬಾರದು (ಶ್ಲೋ. ೧೪).

೧೧. ಯಾವನು ದುಃಖವನ್ನು ತ್ಯಜಿಸುವನೋ (ದುಃಖವಾದಾಗ ಚಿಂತಿಸುವುದಿಲ್ಲವೋ, ಸುಖವನ್ನು ತ್ಯಜಿಸುವನೋ(ವೈಷಯಿಕ) ಅವನು ಗುಣಪರಿಪೂರ್ಣನಾದ ಬ್ರಹ್ಮನನ್ನು ಹೊಂದುತ್ತಾನೆ. ಅವನ ಬಗ್ಗೆ ವಿದ್ವಾಂಸರು ದುಃಖಿಸುವುದಿಲ್ಲ(ಶ್ಲೋ. ೧೭).

೧೨. ಸಂಪಾದಿತ ಸಂಪತ್ತುಗಳು ಒಂದಲ್ಲ ಒಂದು ದಿನ ನಾಶ ಹೊಂದುವುವು. ಉಚ್ಛ್ರಾಯಸ್ಥಿತಿ (ಉನ್ನತ ಸ್ಥಾನಗಳಿಗೆ ಹೋದುವು) ಗಳಿಗೆಲ್ಲ ಪತನವೇ ಗತಿ (ಕೆಳಗೆ ಬೀಳುತ್ತವೆ). ಎಲ್ಲ ಸಂಬಂಧಗಳು ವಿಯೋಗದಲ್ಲಿ ಪರ್ಯವಸಾನವಾಗುತ್ತವೆ. ಜೀವನವು ಮರಣದಲ್ಲಿ ಮುಗಿಯುತ್ತದೆ[1] (ಶ್ಲೋ. ೨೦).

೧೩. ಯಾವಾಗಲೂ ಧನಾದಿ ಸಂಗ್ರಹಗಳಲ್ಲಿಯೇ ಆಸಕ್ತನಾಗಿರುವ, ಆಶೆಗಳ ಬಗ್ಗೆ ತೃಪ್ತಿ ಇರದಿರುವ ಪುರುಷನನ್ನು ವ್ಯಾಘ್ರವು ಹಸುವನ್ನು ಕಚ್ಚಿಕೊಂಡು ಹೋಗುವಂತೆ ಮೃತ್ಯುವು ಅಪಹರಿಸುತ್ತದೆ (ಶ್ಲೋ. ೨೪).

೧೪. ಶಬ್ದ, ಸ್ಪರ್ಶ, ರೂಪ, ರಸ, ಗಂಧಾದಿಗಳು ಧನಿಕನಿಗಾಗಲೀ, ದರಿದ್ರರಿಗಾಗಲೀ ಅನುಭವಿಸುವಾಗ ಸುಖದಂತೆ ತೋರುತ್ತವೆ. ನಂತರ ಅವು ಸುಖಕರವೆನ್ನಿಸುವುದಿಲ್ಲ (ಶ್ಲೋ. ೨೬).

೧೫. ಧೈರ್ಯದಿಂದ ನಾಲಿಗೆ, ಉದರ, ಉಪಸ್ಥಗಳನ್ನು, ಕೈಕಾಲುಗಳನ್ನು, ಕಣ್ಣಿನಿಂದ ಕಣ್ಣು ಕಿವಿಗಳನ್ನು, ಮನಸ್ಸಿನಿಂದ ಮನಸ್ಸು ಮತ್ತು ಮಾತನ್ನು ವಿದ್ಯೆಯಿಂದ ರಕ್ಷಿಸಿಕೊಳ್ಳಬೇಕು[2].

ಇತ್ಯಾದಿ...

*****

---

೧ ಸರ್ವೇ ಕ್ಷಯಾಂತಾ ನಿಚಯಾಃ ಪತನಾಂತಾಃ ಸಮುಚ್ಛ್ರಯಾಃ।
ಸಂಯೋಗಾವಿಪ್ರಯೋಗಾಂತಾಃ ಮರಣಾಂತಂ ಹಿ ಜೀವಿತಮ್ ॥

೨ ಧೃತ್ಯಾ ಶಿಶ್ನೋದರಂ ರಕ್ಷೇತ್ ಪಾಣಿಪಾದಂ ಚ ಚಕ್ಷುಷಾ।
ಚಕ್ಷುಃ ಶ್ರೋತ್ರೇ ಚ ಮನಸಾ ಮನೋವಾಚಂ ಚ ವಿದ್ಯಯಾ॥ ೧೬೨/೨೮

# ೧೨೦. ನಾರದರಿಂದ ಶುಕಮುನಿಗೆ ವೈರಾಗ್ಯೋಪದೇಶ

೧. ಸುಖದುಃಖಗಳ ವಿಷಯದಲ್ಲಿ ಭ್ರಮೆ ಇದ್ದಾಗ (ಯಥಾರ್ಥಜ್ಞಾನವಿರದಿದ್ದಾಗ) ಅವನನ್ನು ಉತ್ತಮವಾದ ಪ್ರಜ್ಞೆಯಾಗಲೀ, ನೀತಿಯಾಗಲೀ, ಪೌರುಷವಾಗಲೀ ರಕ್ಷಿಸದು (ಶ್ಲೋ. ೧).

೨. ಆದ್ದರಿಂದ ಜೀವನು ಸ್ವಾಭಾವಿಕವಾಗಿಯೇ ಭಗವಂತನ ವಿಷಯದಲ್ಲಿ ಪ್ರಯತ್ನಿಸಬೇಕು (ಭಗವಂತನಜ್ಞಾನ ಹೊಂದಲು). ಹೀಗೆ ಪ್ರಯತ್ನಿಸಿದಲ್ಲಿ ಮುಪ್ಪು, ಮರಣ, ರೋಗಗಳಿಂದ ತನ್ನನ್ನು ಉದ್ಧರಿಸಿಕೊಳ್ಳಬೇಕು (ಶ್ಲೋ. ೨).

೩. ದೇಹ ಸಂಬಂಧಿಯಾದ ಹಾಗೂ ಮನಸ್ಸಂಬಂಧಿಯಾದ ರೋಗಗಳು ಶರೀರಗಳನ್ನು ಬಾಧಿಸುತ್ತವೆ. ಹೇಗೆ ಶ್ರೇಷ್ಠರಾದ ಧನುರ್ಧಾರಿಗಳು ಅತ್ಯಂತ ಹರಿತವಾದ ಬಾಣಗಳನ್ನು ಬಿಲ್ಲಿಗೆ ಹೆದೆಯೇರಿಸಿ ಪ್ರಯೋಗಿಸುವಂತೆ, ಅನೇಕ ವಿಧವಾದ ರೋಗಗಳು ಜೀವನನ್ನು ಪೀಡಿಸುತ್ತವೆ (ಶ್ಲೋ. ೩).

೪. ಮನುಷ್ಯನು ಮತ್ತೊಬ್ಬರ ಅಧೀನನಾಗಿ ಕಾರ್ಯ ಮಾಡುವುದಿಲ್ಲವಾದಲ್ಲಿ, ಅವನು ಬಯಸಿದ ಇಚ್ಛೆಗಳು ಈಡೇರಬೇಕಾಗಿತ್ತು. ಅವನು ಮಾಡಿದ ಕಾರ್ಯಗಳಿಗೆ ಫಲಗಳು ಸಿಗುತ್ತಿಲ್ಲವಾದ್ದರಿಂದ ಅವನು ಸ್ವತಂತ್ರನಲ್ಲವೆಂದು ಅರ್ಥವಾಗುತ್ತದೆ[1].

೫. ಇಂದ್ರಿಯನಿಗ್ರಹವಿರುವವರು, ದಕ್ಷರು, ಬುದ್ಧಿವಂತರಾದ ಮಾನವರು ಫಲವನ್ನು ಹೊಂದದಿರುವಂತಹ ದೃಶ್ಯಗಳು ಕಾಣುತ್ತವೆ (ಪ್ರಯತ್ನಿಸಿದರೂ). ತಾವು ಮಾಡಿದ ಕರ್ಮಗಳಿಂದ ಫಲವನ್ನು ಹೊಂದದೇ ಇರುವ ಸಜ್ಜನರನ್ನು ನೋಡುತ್ತೇವೆ (ಶ್ಲೋ. ೧೦).

೬. ಅಲ್ಲದೆ ಕೆಲ ಮೂರ್ಖರು, ಸದ್ಗುಣರಹಿತರು, ದುರ್ಜನರು, ದೊಡ್ಡವರ ಆಶೀರ್ವಾದವಿಲ್ಲದಿದ್ದರೂ ಎಲ್ಲ ಇಷ್ಟಾರ್ಥಗಳನ್ನು ಪಡೆದ ಉದಾಹರಣೆಗಳೂ ಕಾಣುತ್ತವೆ (ಶ್ಲೋ. ೧೧).

---

೧ ಯೋ ಯಮಿಚ್ಛೇತ್ ಯಥಾ ಕಾಮಂ ಕಾಮಾನಾಂ ತತ್ತದಾಪ್ನುಯಾತ್ ।
ಯದಿಸ್ಯಾನ್ನ ಪರಾಧೀನಂ ಪುರುಷಸ್ಯ ಕ್ರಿಯಾಫಲಮ್ ॥ – ೧೬೩/೯
ಯದಿ ನಾಮ ಪರೋ ನ ಭವೇತ್ ಸ ಹರಿಃ ಕಥಮಸ್ಯ ವಶೇ ಜಗದೇತದಭೂತ್ ।
ಯದಿ ನಾಮ ನ ತಸ್ಯ ವಶೇ ಸಕಲಂ ಕಥಮೇವ ತು ನಿತ್ಯಸುಖಂ ನ ಭವೇತ್ ॥
– ದ್ವಾದಶಸ್ತೋತ್ರ(೩/೫)

೭. ಕೆಲವೊಮ್ಮೆ ಕೆಲಸ ಮಾಡದ ಸೋಮಾರಿಗೆ ಸಂಪತ್ತು ತಾನಾಗಿಯೇ ಬರುತ್ತದೆ. ಮತ್ತೆ ಕೆಲವರು ಕಷ್ಟಪಟ್ಟು ದುಡಿದರೂ ಸಿಗಬೇಕಾಗುವುದು ಸಿಗುವುದಿಲ್ಲ(ಶ್ಲೋ. ೧೩).

೮. ಕೆಲವರು ಯಾವಾಗಲೂ ಪರಹಿಂಸಕರು, ವಂಚಕರು ಆಗಿದ್ದರೂ ಕೂಡಾ ಸುಖಭೋಗಗಳನ್ನು ಹೊಂದಿ, ಜೀವನ ಕಳೆಯುತ್ತಾರೆ (ಶ್ಲೋ. ೧೬).

೯. ಪುತ್ರಾಪೇಕ್ಷಿಗಳಾದ ಕೆಲವರು ಅನೇಕ ಪ್ರಯತ್ನ ಮಾಡಿದರೂ ಒಂದು ಸಂತಾನವೂ ಆಗುವುದಿಲ್ಲ(ಶ್ಲೋ. ೧೬).

೧೦. ಇನ್ನು ಕೆಲವರು ಗರ್ಭಧರಿಸಿದ ಕೂಡಲೇ ಉದ್ವಿಗ್ನರಾಗಿ ಸರ್ಪದಂತೆ ವರ್ತಿಸುತ್ತಾರೆ. ಹಾಗಿದ್ದರೂ, ಅವರಿಗೆ ಆಯುಷ್ಮಂತನಾದ ಮಗ ಹುಟ್ಟುತ್ತಾನೆ (ಶ್ಲೋ. ೧೭).

೧೧. ಪುತ್ರ ಸಂತಾನಾಪೇಕ್ಷಿಗಳಿಂದ ಅನೇಕರು ಮಕ್ಕಳನ್ನು ಪಡೆಯಲು ದೇವಾರಾಧನೆ ಮಾಡಿ, ನಾನಾ ವಿಧವಾದ ದೇಹದಂಡನಾತ್ಮಕ ವ್ರತಾದಿಗಳನ್ನು(ತಪಸ್ಸನ್ನು) ಮಾಡುತ್ತಾರೆ. ಸ್ತ್ರೀಯು ಹತ್ತು ತಿಂಗಳು ಗರ್ಭ ಹೊತ್ತು ಹೆರುತ್ತಾಳೆ. ಇಷ್ಟಾದರೂ ವಂಶೋದ್ಧಾರಕ ಮಕ್ಕಳು ಹುಟ್ಟದೆ ಕುಲಕಂಟಕರಾದ ಮಕ್ಕಳೇ ಹುಟ್ಟುತ್ತಾರೆ (ಶ್ಲೋ. ೧೮).

೧೨. ಇನ್ನು ಕೆಲವರಿಗೆ ಜನಿಸುವ ಮಕ್ಕಳು ಧನಧಾನ್ಯ, ಭೋಗಭಾಗ್ಯಗಳನ್ನು ತಂದೆ ಸಂಪಾದಿಸಿದ ಆಸ್ತಿಗಳನ್ನು ಯಥೇಚ್ಛ ಅನುಭವಿಸುತ್ತಾರೆ (ಶ್ಲೋ. ೧೯).

೧೩. ಜೀವರ ಹುಟ್ಟು ಮತ್ತೆ ಪುನರ್ಜನ್ಮ ಎಲ್ಲವೂ ಒಂದು ವಾಹನದಿಂದ ಇನ್ನೊಂದು ವಾಹನಕ್ಕೆ ಇಳಿಸಿದಂತಾಗುತ್ತದೆ. ಮೊದಲ ಶರೀರ ನಾಶವಾಗಿ, ಮತ್ತೊಂದು ಬರುವ ಶರೀರವೂ ಕೂಡಾ ನಾಶವಾಗುವಂತಹುದೇ. ಗರ್ಭಧಾರಣೆ, ವಿಸರ್ಜನೆಗಳಲ್ಲಿ ಯಾರಿಗೂ ಸ್ವಾತಂತ್ರ್ಯವಿರುವುದಿಲ್ಲ. ಗರ್ಭಿಣಿ ಇಚ್ಛಿಸಲಿ, ಬಿಡಲಿ, ಗರ್ಭಸ್ರಾವವಾಗಬಹುದು. ಕೆಲವೊಮ್ಮೆ ಹುಟ್ಟಿದ ಕೂಡಲೇ ಮಗು ಸಾಯಬಹುದು. ಗರ್ಭದಲ್ಲಿರುವಾಗಲೇ ಸಾಯಬಹುದು. ಕೆಲವೊಮ್ಮೆ ಮತ್ಸರಿಗಳ ವಾಮಾಚಾರಗಳಿಂದಲೂ ಗರ್ಭಪಾತವಾಗುತ್ತದೆ. ಅದಾಗ್ಯೂ ಗರ್ಭದಿಂದ ಯಾವಾಗ ಕ್ಷೇಮವಾಗಿ ಹೊರಬರುತ್ತದೋ ಅದೇ ಸಂತಾನವೆನ್ನಿಸುತ್ತದೆ. ನಂತರ ಸ್ತ್ರೀಪುರುಷರು ಮತ್ತೆ ಸಂಗಮಿಸಲು ಸಿದ್ಧರಾಗುತ್ತಾರೆ, ಆತುರರಿರುತ್ತಾರೆ. ನೂರು ವರ್ಷ ಆಯುಷ್ಯವೆಂದು ಹುಟ್ಟುವ ಜೀವನು ಏಳನೇ ಅವಸ್ಥೆ ಎನಿಸಿದ ವಾರ್ಧಕ್ಯವನ್ನೂ ೯ನೇ ಅವಸ್ಥೆ ಎನ್ನಿಸಿದ ಪ್ರಾಣರೋಧ ಹೊಂದಿ ನೂರು ವರ್ಷ ತುಂಬುವ ಮುನ್ನವೇ ಮರಣ ಹೊಂದುತ್ತಾನೆ (ಶ್ಲೋ. ೨೦-೨೮).

ಜೀವಿಯು ಬೆಳೆದಂತೆ ಶರೀರವೂ ಬೆಳೆಯುತ್ತದೆ. ಸರ್ಪಗಳು ಚಿಕ್ಕ ಮೃಗಗಳನ್ನು ಹಿಂಸಿಸುವಂತೆ ರೋಗಗಳು ಮನುಷ್ಯರನ್ನು ಹಿಂಸಿಸುತ್ತವೆ. ಆಗ ಅವರು ಏಳಲು, ಕುಳಿತುಕೊಳ್ಳಲೂ ಶಕ್ತರಾಗುವುದಿಲ್ಲ. ರೋಗಪರಿಹಾರಕ್ಕೆ ಮನುಷ್ಯರು ಹೇರಳವಾಗಿ

ಹಣವ್ಯಯ ಮಾಡುತ್ತಾರೆ. ವೈದ್ಯರೂ ರೋಗನಿವಾರಣೆಗೆ ಪ್ರಯತ್ನಿಸಿದರೂ ವಿಫಲರಾಗುತ್ತಾರೆ. ಅಷ್ಟೇಕೆ ವೈದ್ಯರೂ ರೋಗಗಳಿಂದ ಪೀಡಿತರಾಗಿ ದುಃಖಿಗಳಾಗುತ್ತಾರೆ. ವೈದ್ಯರೂ ತಾವೂ ಕೂಡಾ ಅನೇಕ ರೀತಿಯಾಗಿ ಉಪಚರಿಸಿಕೊಂಡರೂ, ಮುಪ್ಪಿನಿಂದ ಪಾರಾಗುವುದಿಲ್ಲ. ಆನೆಗಳು ಮರಗಳನ್ನು ಬೀಳಿಸುವಂತೆ ರೋಗಗಳು ವೈದ್ಯರನ್ನೂ ಭಗ್ನರನ್ನಾಗಿ ಮಾಡುತ್ತವೆ. ಪರಾಕ್ರಮಶಾಲಿಗಳಾದ ರಾಜರನ್ನೂ ರೋಗಗಳು ಕ್ರೂರಮೃಗಗಳು ಪ್ರಾಣಿಗಳನ್ನು ಅಪಹರಿಸಿ ಕೊಲ್ಲುವಂತೆ ಕೊಲ್ಲುತ್ತವೆ.

೧೪. ನರರು ಧನ, ರಾಜ್ಯ, ತಪಸ್ಸುಗಳಿಂದ ಪ್ರಕೃತಿಯ ಪರಾಕ್ರಮವನ್ನು ಹಿಮ್ಮೆಟ್ಟಿಸಿ ನಡೆಯಲು ಸಾಧ್ಯವಿಲ್ಲ. ವಿಧಿಲಿಖಿತವನ್ನು ಯಾರೂ ಮೀರಲಾರರು (ಶ್ಲೋ. ೨೯–೩೬).

೧೫. ತಮ್ಮ ಪ್ರಯತ್ನದಂತೆ ಫಲವನ್ನು ಹೊಂದಲು ಜೀವರು ಸಮರ್ಥರಾಗಿದ್ದ ಪಕ್ಷದಲ್ಲಿ ಜೀವರಾರೂ ಸಾಯುತ್ತಿರಲಿಲ್ಲ. ತಮ್ಮ ಅಭೀಷ್ಟಗಳನ್ನು ಪಡೆಯುತ್ತಿದ್ದರು. ಅಪ್ರಿಯವಾದುದನ್ನು ನೋಡುತ್ತಿರಲಿಲ್ಲ. ದುಷ್ಕರ್ಮದ ಫಲವನ್ನು ಹೊಂದುತ್ತಿರಲಿಲ್ಲ[೧].

೧೬. ಎಲ್ಲರೂ ಊರ್ಧ್ವಲೋಕಗಳನ್ನು ಹೊಂದಲು ಇಚ್ಛಿಸುತ್ತಾರೆ. ಅದಕ್ಕೂ ಪ್ರಯತ್ನಿಸುತ್ತಾರೆ. ಆದರೆ ಅದು ಸಾಧ್ಯವಾಗದು. ಮಾಡಿದ ಪ್ರಯತ್ನಗಳು ಫಲಿಸವು (ಶ್ಲೋ. ೩೮).

೧೭. ಐಶ್ವರ್ಯಮದಮತ್ತರನ್ನು ಅಪ್ರಮತ್ತರೂ (ಒಳ್ಳೆಯ ಜಾಗರೂಕರೂ), ಶೂರರೂ, ಪರಾಕ್ರಮಿಗಳೂ ನಾನಾ ಕಾರಣಗಳಿಂದಾಗಿ ಸೇವಿಸುತ್ತಾರೆ (ಶ್ಲೋ. ೩೯)

೧೮. ಕರ್ಮಫಲಕ್ಕೆ ಅನುಗುಣವಾಗಿ ಕೆಲವರು ಪಲ್ಲಕ್ಕಿ ಹೊತ್ತು ತಿರುಗಿದರೆ, ಕೆಲವರು ಅದೇ ಪಲ್ಲಕ್ಕಿಯಲ್ಲಿ ಕುಳಿತು ಸಂಚರಿಸುತ್ತಾರೆ. ಈ ತರಹದ ಫಲವೈಷಮ್ಯಗಳು ಕಾಣುತ್ತವೆ (ಶ್ಲೋ. ೪೧).

೧೯. ಎಲ್ಲರೂ ಐಶ್ವರ್ಯ, ಸಮೃದ್ಧಿಯನ್ನು ಸ್ವಾಭಾವಿಕವಾಗಿ ಬಯಸುತ್ತಾರೆ. ಆದರೆ, ಕೆಲವರು ಮಾತ್ರ ರಥದಲ್ಲಿ ಕುಳಿತು ಸಂಚರಿಸುತ್ತಾರೆ. ಅನೇಕರು ಅನೇಕ ಸ್ತ್ರೀಯರನ್ನು ಹೊಂದಿದ್ದರೆ, ಯಾವ ಪುರುಷನನ್ನೂ ಹೊಂದದ ಅನೇಕ ವಿಧವೆಯರೂ ಇರುತ್ತಾರೆ (ವಿ–ಧವಾ : ವಿಗತ – ವಿರಹಿತ; ಧವಃ – ಪತಿ)(ಶ್ಲೋ.೪೨).

ಇವೇ ಮೊದಲಾದ ರಹಸ್ಯವಾದ ಆಖ್ಯಾನವನ್ನು ನಾರದರು ಶುಕರಿಗೆ ತಿಳಿಸಿದರು. ನಾರದರ ಮಾತುಗಳನ್ನು ಕೇಳಿದ ಶುಕರು ಯಾವುದೇ ನಿರ್ಧಾರಕ್ಕೆ ಬರದಾದರು. ಹೆಂಡತಿ, ಮಕ್ಕಳಿಂದ ಸಂಸಾರದಲ್ಲಿ ಕ್ಲೇಶವಾಗುತ್ತದೆ. ವೇದಶಾಸ್ತ್ರದ ಲಾಭ ಕಷ್ಟಸಾಧ್ಯ. ಆದ್ದರಿಂದ ಅಲ್ಪಶ್ರಮದಿಂದ

---

೧ ನ ಮ್ರಿಯೇರನ್ ನ ಜೀರ್ಯೇರನ್ ಸರ್ವೇ ಸ್ಯುಃ ಸರ್ವಕಾಮಿಕಾಃ।
ನಾಪ್ರಿಯಂ ಪ್ರತಿಪಶ್ಯೇಯುರುತ್ಥಾನಸ್ಯ ಫಲಂ ಪ್ರತಿ ॥ – ೧೬೩/೩೭

ಶ್ರೇಯಸ್ಸನ್ನು ಹೊಂದುವ ಉಪಾಯ ಯಾವುದೆಂದು ಚಿಂತಿಸತೊಡಗಿದರು. ಸಂಸಾರಕ್ಕೆ ಬರದಿರುವ ಹಾಗೆ ಪರಮಗತಿ (ಮೋಕ್ಷ)ಯನ್ನು ಹೇಗೆ ಹೊಂದಲಿ? ಸರ್ವಸಂಗವನ್ನು ಬಿಟ್ಟು ಪರಮಾತ್ಮನನ್ನೇ ಧ್ಯಾನಿಸಿ ಉತ್ತಮಗತಿಯನ್ನು ಹೊಂದುತ್ತೇನೆ. ಎಲ್ಲಿಗೆ ಹೋಗುವುದರಿಂದ ಅಕ್ಷಯವೂ, ಅವ್ಯಯವೂ, ಶಾಶ್ವತವೂ ಆಗುವೆನೋ, ಅಲ್ಲಿಗೆ ಹೋಗುತ್ತೇನೆ. ಯೋಗಮಾರ್ಗ ಬಿಟ್ಟು ಅಲ್ಲಿಗೆ ಹೋಗಲು ಬೇರೆ ದಾರಿಯಿಲ್ಲ. ಯೋಗವನ್ನು ಆಶ್ರಯಿಸಿ, ಮನೆಯಂತಿರುವ ಈ ದೇಹವನ್ನು ಬಿಟ್ಟು ವಾಯುರೂಪನಾಗಿ ತೇಜೋರಾಶಿಯಾದ ಸೂರ್ಯಮಂಡಲವನ್ನು ಪ್ರವೇಶಿಸುತ್ತೇನೆ. ಚಂದ್ರಮಂಡಲಕ್ಕೆ ಹೋದವನು ವಾಪಸು ಭೂಮಿಗೆ ಬರುತ್ತಾನೆ. ಸೂರ್ಯಮಂಡಲಕ್ಕೆ ಹೋದವನಿಗೆ ಪುನರಾಗಮನವಿಲ್ಲ. ಆದ್ದರಿಂದ ಆದಿತ್ಯಮಂಡಲಕ್ಕೆ ಹೋಗುವುದು ನನಗೆ ಯೋಗ್ಯವೆನಿಸುತ್ತದೆ. ನಿಃಸಂಶಯ ಮನಸ್ಸಿನಿಂದ ಕೂಡಿದವನಾಗಿ ಅಲ್ಲಿ ವಾಸ ಮಾಡುತ್ತೇನೆ. ನನ್ನ ಶರೀರವನ್ನು ಸೂರ್ಯಲೋಕದಲ್ಲಿಟ್ಟು ಅಲ್ಲಿರುವ ಋಷಿಗಳೊಡನೆ ಸೂರ್ಯನ ತೇಜೋರಾಶಿಯನ್ನೇ ಪ್ರವೇಸಿಸುತ್ತೇನೆ (ಶ್ಲೋ. ೪೫-೫೭).

ನನಗೆ ಭೂಮಿ, ಸ್ವರ್ಗ, ದೇವ, ದಾನವ, ಗಂಧರ್ವ, ಪಿಶಾಚಿ, ರಾಕ್ಷಸ, ಪರ್ವತಾದಿಗಳೆಲ್ಲರನ್ನೂ ನನಗೆ ಹೋಗಲು ಅನುಮತಿ ಕೇಳುತ್ತೇನೆ. ನಾನು ಪ್ರಪಂಚದಲ್ಲಿನ ಎಲ್ಲ ಪ್ರಾಣಿಗಳನ್ನೂ ಪ್ರವೇಶಿಸುತ್ತೇನೆ. ಎಲ್ಲರೂ ನೋಡಲಿ. ನಂತರ ನಾರದರ ಅನುಮತಿ ಪಡೆದು ತಂದೆಯ ಬಳಿಗೆ ಹೋದರು. ತಂದೆಗೆ ಪ್ರದಕ್ಷಿಣೆ ಹಾಕಿ ಅನುಮತಿ ಬೇಡಲು ವ್ಯಾಸರು 'ನಿನ್ನನ್ನು ನೋಡುತ್ತಾ ನೇತ್ರಾನಂದ ಹೊಂದುತ್ತೇನೆ. ಅಲ್ಲಿಯವರೆಗೆ ಹೋಗಬೇಡ ಎಂದರು. ಆದರೆ ಶುಕರು ಸ್ನೇಹಬಂಧವನ್ನು ತೊರೆದ, ನಿರಾಸಕ್ತರಾದ ಶುಕರು ತಂದೆಯನ್ನು ತ್ಯಜಿಸಿ ಸಿದ್ಧರ ಸಮೂಹದಿಂದ ಸೇವಿತವಾದ ಕೈಲಾಸಗಿರಿಯ ಕಡೆ ನಡೆದರು (ಶ್ಲೋ. ೫೮-೬೩).

*****

# ೧೨೧. ಶುಕರ ಊರ್ಧ್ವಗತಿಯ ವರ್ಣನೆ

೧. ಶುಕರು ಕೈಲಾಸಪರ್ವತದ ಶಿಖರವನ್ನೇರಿ ಅಲ್ಲಿನ ಮೈದಾನಪ್ರದೇಶದಲ್ಲಿ (ಸಮತಟ್ಟಾದ) ಕುಳಿತುಕೊಂಡು, ತಮ್ಮ ಎಲ್ಲ ಇಂದ್ರಿಗಳನ್ನು ಪಾದದಿಂದ ಶಿರಸ್ಸಿನವರೆಗೆ ಹತೋಟಿಗೆ ತಂದುಕೊಂಡು ಹೃದಯದಲ್ಲಿ ನೆಲೆಸಿರುವ ಭಗವಂತನನ್ನು ಧ್ಯಾನಿಸಲಾರಂಭಿಸಿದರು.

ಹೇಗೆಂದರೆ – ಯಥಾಶಾಸ್ತ್ರಂ ಎಂದು ಇಲ್ಲಿ ಹೇಳಲಾಗಿದೆ. ಇದರ ವಿವರಣೆ ಗೀತೆಯ ೬ನೇ ಅಧ್ಯಾಯದಲ್ಲಿದೆ[೧].

ಇದುವೇ ಯೋಗಶಾಸ್ತ್ರ ಇಲ್ಲಿ ಧ್ಯಾನದ ವಿಧಿಯನ್ನು ನಿರೂಪಿಸಲಾಗಿದೆ. ಈ ಪ್ರಕಾರ ಶುಕರು ನಾರಾಯಣಧ್ಯಾನ ಮಾಡುತ್ತಾ ಕೊನೆಗೆ ನಾರಾಯಣನ ಬಳಿಗೆ ಹೋದರೆಂಬುದು ಒಟ್ಟು ತಾತ್ಪರ್ಯ[೨].

ಇಡೀ ಅಧ್ಯಾಯದಲ್ಲಿ ಮೇಲಿನ ಗೀತಾವಿಚಾರಗಳು ಬಂದಿವೆ. ಶುಕರು ಸೂರ್ಯೋ-ದಯದ ಪೂರ್ವದಿಕ್ಕಿಗೆ ಕುಳಿತುಕೊಂಡರು. ಆ ಸ್ಥಳದಲ್ಲಿ ಮನಶ್ಚಂಚಲ ಮಾಡುವ ಪಕ್ಷಿಗಳಾಗಲಿ, ಅವುಗಳ ಶಬ್ದಗಳಾಗಲಿ ಯಾವುದೇ ಉದ್ರೇಕಗೊಳಿಸುವ ದೃಶ್ಯಗಳಿರಲಿಲ್ಲ. ಆದ್ದರಿಂದ ಧ್ಯಾನಿಸುತ್ತಾ ಹೃದಯಕಮಲದಲ್ಲಿ ಪರಮಾತ್ಮನನ್ನು ನೋಡುತ್ತಾ ಮುದಗೊಂಡರು. ನಂತರ ಮೋಕ್ಷಮಾರ್ಗಪ್ರಾಪ್ತಿಗಾಗಿ ಮಹಾಯೋಗೀಶ್ವರನಾದ ಶುಕರು ಆಕಾಶಮಾರ್ಗವನ್ನು

---

೧ ಶುಚೌ ದೇಶೇ ಪ್ರತಿಷ್ಠಾಪ್ಯ ಸ್ಥಿರಮಾಸನಮಾತ್ಮನಃ।
ನಾತ್ಯುಚ್ಛ್ರಿತಂ ನಾತಿನೀಚಂ ಚೇಲಾಜಿನಕುಶೋತ್ತರಮ್ ॥
ತತ್ರೈಕಾಗ್ರಂ ಮನಃ ಕೃತ್ವಾ ಯತಚಿತ್ತೇಂದ್ರಿಯಕ್ರಿಯಃ।
ಉಪವಿಶ್ಯಾಸನೇ ಯುಂಜ್ಯಾದ್ಯೋಗಮಾತ್ಮವಿಶುದ್ಧಯೇ ॥
ಸಮಂ ಕಾಯಶಿರೋಗ್ರೀವಂ ಧಾರಯನ್ನಚಲಂ ಸ್ಥಿರಃ।
ಸಂಪ್ರೇಕ್ಷ್ಯ ನಾಸಿಕಾಗ್ರಂ ಸ್ವಂ ದಿಶಶ್ಚಾನವಲೋಕಯನ್ ॥
ಪ್ರಶಾಂತಾತ್ಮಾ ವಿಗತಭೀರ್ಬ್ರಹ್ಮಚಾರಿವ್ರತೇ ಸ್ಥಿತಃ।
ಮನಃ ಸಂಯಮ್ಯ ಮಚ್ಚಿತ್ತೋ ಯುಕ್ತ ಆಸೀತ ಮತ್ಪರಃ ॥
ಯುಂಜನ್ನೇವಂ ಸದಾಽತ್ಮಾನಂ ಯೋಗೀ ನಿಯತಮಾನಸಃ।
ಶಾಂತಿಂ ನಿರ್ವಾಣಪರಮಾಂ ಮತ್ಸಂಸ್ಥಾಮಧಿಗಚ್ಛತಿ ॥ – ಭಗವದ್ಗೀತಾ (೬/೧೧-೧೫)

೨ ಧಾರಯಾಮಾಸ ಚಾತ್ಮಾನಂ ಯಥಾಶಾಸ್ತ್ರಂ ಮಹಾಮುನಿಃ।
ಸ ದದರ್ಶ ತದಾತ್ಮಾನಂ ಸರ್ವಸಂಗವಿನಿಃಸೃತಮ್ ॥
ಪ್ರಜಹಾಸ ತತೋಹಾಸಂ ಶುಕಃ ಸಂಪ್ರೇಕ್ಷ್ಯ ಭಾಸ್ಕರಮ್ ॥ – ೧೬೪/೨

ಹೊಕ್ಕರು, ಅತಿಕ್ರಮಿಸಿದರು. ಆಗ ಅಲ್ಲಿಗೆ ಆಗಮಿಸಿದ ನಾರದರಿಗೆ ಪ್ರದಕ್ಷಿಣೆ, ನಮಸ್ಕಾರಗಳನ್ನು ಹಾಕಿ ತನ್ನ ಯೋಗಸಿದ್ಧಿಯನ್ನು ಅರುಹಿ, ನೀವು ತಿಳಿಸಿದ ಮೋಕ್ಷಮಾರ್ಗವನ್ನನುಸರಿಸಿ ಹೋಗುವೆನೆಂದು ನಿವೇದಿಸುತ್ತಾ ಅವರ ಅನುಮತಿಯನ್ನು ಪಡೆದು, ಯೋಗಮಾರ್ಗದಿಂದ ಅಂತರಿಕ್ಷವನ್ನು ಪ್ರವೇಶಿಸಿದರು. ಮತ್ತು ವಾಯುರೂಪದಿಂದ ಆಕಾಶದಲ್ಲಿ ಸಂಚರಿಸಿದರು (ಇಲ್ಲಿಯವರೆಗೆ ಇದ್ದ ಪಂಚಭೂತ ಶರೀರತ್ಯಾಗ ಮಾಡಿದರೆಂದು ಅರ್ಥವಾಗುತ್ತದೆ). ಶುಕರು ವಾಯುಸಮಾನ ವೇಗದಿಂದ ಊರ್ಧ್ವಲೋಕಕ್ಕೆ ಹೋಗುತ್ತಿರುವುದನ್ನು ಸಕಲ ಪ್ರಾಣಿಗಳು ನೋಡಿದವು (ಯೋಗ್ಯಪ್ರಾಣಿಗಳು, ಸ್ಥಾವರ-ಜಂಗಮ). ಆ ಪ್ರಾಣಿಗಳು (ಜೀವರು) ಶುಕರನ್ನು ತಮ್ಮ ಯೋಗ್ಯತೆಗೆ ಯೋಗ್ಯವಾಗಿ ಪೂಜಿಸಿದವು. ದೇವತೆಗಳು ಪುಷ್ಪವೃಷ್ಟಿಗರೆದರು[೧]. ಶುಕರ ಪ್ರಯಾಣವನ್ನು ನೋಡಿದ ಗಂಧರ್ವ, ಅಪ್ಸರಗಣ, ಋಷಿಗಣ, ಸಂಸಿದ್ಧರು ಆಶ್ಚರ್ಯ ಚಕಿತರಾದರು(ಶುಕದೇವ ದೇವೋತ್ತಮರು, ಅವರ ವ್ಯಾಪಾರ ಸ್ವಾಭಾವಿಕವಾಗಿಯೇ ಅವರಿಗಿಂತ ಕಡಿಮೆಯವರಾದ ಇಂದ್ರಾದಿದೇವತೆಗಳಿಂದ ಹಿಡಿದ ಕೆಳಗಿನ ಯೋಗಿಗಳಿಗೆ ವಿಸ್ಮಕಾರಕವೇ ಸರಿ). ಅವರು ಪರಸ್ಪರ ಮಾತನಾಡಿಕೊಂಡರು. 'ಇವರು ನಮ್ಮ ಕಣ್ಣುಗಳನ್ನು ತಮ್ಮತ್ತ ಸೆಳೆಯುತ್ತಿದ್ದಾರೆ. ಮುಖ ಮೇಲ್ಮುಖವಾಗಿದೆ. ಶರೀರ ಕೆಳಗಡೆ ಇದೆ. ಇವರಾರು? ಎಂದು ಹೀಗೆ ಇವರ ಊರ್ಧ್ವಗಮನ ಮೂರೂ ಲೋಕಗಳಲ್ಲಿ ವಿಶ್ರುತವಾಯಿತು. ಅವರ ಗತಿಯಿಂದ ಉಂಟಾದ ಶಬ್ದ ಆಕಾಶವೆಲ್ಲವನ್ನು ಪ್ರತಿಧ್ವನಿಸುತ್ತಿತ್ತು. ಅವರೆಲ್ಲ 'ಇವರು ಎಲ್ಲ ಸಾಂಸಾರಿಕ ಬಂಧನ, ಸಂಶಯದಿಂದ ಮುಕ್ತರಾಗಿರುವಂತೆ ತೋರುತ್ತಾರೆ. ಮುಖದ ವರ್ಚಸ್ಸು ಆಶೆಯನ್ನು ಗೆದ್ದವನಂತೆ ಪ್ರತಿಬಿಂಬಿಸುತ್ತಿದೆ.

ನಂತರ ಶುಕರು ಊರ್ವಶಿ, ಪೂರ್ವಚಿತ್ತಿ ಎಂಬ ಅಪ್ಸರೆಯರು ಆಶ್ರಯಿಸಿರುವ ಮಲಯ ಎಂಬ ಪರ್ವತವನ್ನು ದಾಟಿ ಮುಂದೆ ಹೋದಾಗ, ಆ ಅಪ್ಸರೆಯರು 'ಅಹೋ ಈತನಲ್ಲಿ ವೇದಾಭ್ಯಾಸದ ಫಲರೂಪವಾದ ಪೂರ್ಣ ಏಕಾಗ್ರತೆ (ಭಗವಂತನಲ್ಲಿ) ಇದೆ. ಇಂತಹ ಅತ್ಯುತ್ತಮ ಸಿದ್ಧಿಯನ್ನು ಇವನು ತಂದೆಯಿಂದಲೇ ಪಡೆದುಕೊಂಡು ಅತ್ಯಲ್ಪ ಸಮಯದಲ್ಲಿಯೇ ಇಂದ್ರನಂತೆ ಆಕಾಶದಲ್ಲಿ ಸಂಚರಿಸುತ್ತಿದ್ದಾನೆ. ಏನಿದು ಆಶ್ಚರ್ಯ' ಎಂದು ಮಾತನಾಡಿಕೊಂಡರು. ಇವರು ಮಹಾಪಿತೃಭಕ್ತರು, ದೃಢತಪಸ್ವಿಗಳು, ತಂದೆಗೆ ತುಂಬಾ

---

೧ ತತಃ ಪ್ರದಕ್ಷಿಣಂ ಕೃತ್ವಾ ದೇವರ್ಷಿಂ ನಾರದಂ ತದಾ।
ನಿವೇದಯಾಮಾಸ ತದಾ ಸ್ವಂ ಯೋಗಂ ಪರಮರ್ಷಯೇ॥
ತ್ವತ್ಪ್ರಸಾದಾತ್ ಗಮಿಷ್ಯಾಮಿ ಗತಿಮಿಷ್ಟಾಂ ಮಹಾದ್ಯುತೇ।
ನಾರೇದೇನಾಭ್ಯನುಜ್ಞಾತಸ್ತತೋ ದ್ವೈಪಾಯನಾತ್ಮಜಃ।
ಅಭಿವಾದ್ಯ ಪುನರ್ಯೋಗಮಾಸ್ಥಾಯಾಕಾಶಮಾವಿಶತ್।
ಯಥಾಶಕ್ತಿ ಯಥಾನ್ಯಾಯಂ ಪೂಜಯಾಂ ಚಕ್ರಿರೇ ತದಾ।
ಪುಷ್ಪವರ್ಷೈಶ್ಚ ದಿವ್ಯೈಸ್ತಮವ ಚಕ್ರುರ್ದಿವೌಕಸಃ॥ - ೧೬೪/೭-೯,೧೪

ಪ್ರೀತಿಪಾತ್ರನಾದ ಮಗ ಆಗಿದ್ದಾರೆ. ಇಂತಹ ಮಗನನ್ನು ಆ ತಂದೆ ಹೇಗೆ ಬಿಟ್ಟರು? ಇದನ್ನು ಶುಕರು ಕೇಳಿ ಆಕಾಶ, ಪರ್ವತ, ಶೈಲ, ವನ, ಭೂಮಂಡಲ, ಸರೋವರ, ನದಿಗಳ ಕಡೆ ತಮ್ಮ ಗಮನ ಹರಿಸಿದರು. ನೋಡಿದ ದೇವಾದಿಗಳೆಲ್ಲ ಆದರದಿಂದ ಕೈಮುಗಿದರು.

ಆಗ ಶುಕರು ತಮ್ಮನ್ನು ನೋಡಿದ ಎಲ್ಲರಿಗೆ 'ದೇವತೆಗಳೇ ನಮ್ಮ ತಂದೆ ವ್ಯಾಸರು ಶುಕ, ಶುಕ ಎಂದು ಕೂಗಿದರೆ (ನನ್ನನ್ನು ಕರೆದರೆ) ಇಲ್ಲಿಗೆ ಬಂದರೆ ನೀವೆಲ್ಲ ಒಟ್ಟಾಗಿ ಸಮಾಧಾನದ ಮಾತನ್ನು ನನ್ನ ತಂದೆಗೆ ಹೇಳಿರಿ. ನನ್ನಲ್ಲಿರುವ ಸ್ನೇಹದಿಂದ (ನೀವು ತೋರಿದ) ನೀವೆಲ್ಲ ಈ ನನ್ನ ಮಾತನ್ನು ನಡೆಸಿಕೊಡಿರಿ. ಆಗ ಎಲ್ಲರೂ (ಎಲ್ಲ ದಿಗಭಿಮಾನಿ ದೇವತೆಗಳು, ವನ, ಕಾನನ, ಸಮುದ್ರ, ನದಿ, ಪರ್ವತಾಭಿಮಾನಿಗಳು) 'ಎಲೈ ಬ್ರಾಹ್ಮಣನೇ! ನಿನ್ನ ಆದೇಶದಂತೆ ನಡೆಯುತ್ತೇವೆ. ವ್ಯಾಸರು ಇಲ್ಲಿಗೆ ಬಂದು ನಿಮ್ಮ ಬಗ್ಗೆ ಪ್ರಶ್ನಿಸಿದಾಗ ನೀವು ಹೇಳಿದಂತೆ ಹಿತವೂ, ಪ್ರಿಯವೂ ಆದ ಮಾತನ್ನೇ ಅವರಿಗೆ ಹೇಳುತ್ತೇವೆ'[೧] ಎಂದರು.

ವಿ.ಸೂ.: ಅತ್ಯಂತ ಅನಿವಾರ್ಯವಾದ ಕೆಲಮುಖ್ಯಗಳನ್ನು ಇಲ್ಲಿ ಉದಾಹರಿಸಿದೆ. ಇದೇ ಭಾವವು ಅತ್ಯಂತ ಸಂಕ್ಷಿಪ್ತವಾಗಿ ಭಾಗವತದಲ್ಲೂ ಬಂದಿದೆ.

**ಸೂತ ಉವಾಚ -**

**ಯಂ ಪ್ರವ್ರಜಂತಮನುಪೇತಮಪೇತಕೃತ್ಯಂ**
**ದ್ವೈಪಾಯನೋ ವಿರಹಕಾತರ ಆಜುಹಾವ।**
**ಪುತ್ರೇತಿ ತನ್ಮಯತಯಾ ತರವೋಽಪಿ ನೇದುಃ**
**ತಂ ಸರ್ವಭೂತಹೃದಯಂ ಮುನಿಮಾನತೋಽಸ್ಮಿ॥** - ೧/೨/೨

## ಸಂದೇಶಗಳು-ವಿವರಣೆಗಳು

೧. ಜಿತೇಂದ್ರಿಯರಿಗೆ ಸುತ್ತಮುತ್ತಲೂ ಎಂತಹ ಉದ್ರೇಕಗೊಳಿಸುವ ಪ್ರಚೋದಕ ಸನ್ನಿವೇಶಗಳಿದ್ದರೂ, ಯಾವುದೇ ಋಣಾತ್ಮಕ, ಮಾನಸಿಕ ಉದ್ರೇಕ(ಕಾಮಾದಿಗಳ)ವಾಗದು.

೨. ನಾರದರು ಶುಕರಿಗೆ ಉಪದೇಶ ಮಾಡಿದ್ದರು (ಹಲವಾರು ವಿಷಯಗಳ ಬಗ್ಗೆ). ಆದ್ದರಿಂದ ಗುರುಸ್ಥಾನದಲ್ಲಿದ್ದರು. ಶುಕರು ರುದ್ರಾವತಾರಿಯಾದರೂ ತಮಗಿಂತಲೂ

---

೧ ಪಿತೃಶುಶ್ರೂಷಯಾ ಸಿದ್ಧಿಂ ಸಂಪ್ರಾಪ್ತೋಽಯಮನುತ್ತಮಾಮ್।
ಅಬ್ರವೀತ್ತಾಸ್ತದಾ ವಾಕ್ಯಂ ಶುಕಃ ಪರಮಧರ್ಮವಿತ್।
ಪಿತಾ ಯದ್ಯನುಗಚ್ಛೇನ್ಮಾಂ ಕ್ರೋಶಮಾನಃ ಶುಕೇತಿ ವೈ।
ತತಃ ಪ್ರತಿವಚೋದೇಯಂ ಸರ್ವೈರೇವ ಸಮಾಹಿತೈಃ।
ಏತನ್ಮೇ ಸ್ನೇಹತಃ ಸರ್ವೇ ವಚನಂ ಕರ್ತುಮರ್ಹಥ।
ಯಥಾಜ್ಞಾಪಯಸೇ ವಿಪ್ರ ಬಾಢಮೇವಂ ಭವಿಷ್ಯತಿ॥
ಋಷೇರ್ವ್ಯಾಹರತೋ ವಾಕ್ಯಂ ಪ್ರತಿಕ್ಷ್ಯಾಮಹೇ ವಯಮ್॥ - ೧೬೪/೨೧,೨೬,೨೭,೨೯

ತಾರತಮ್ಯದಲ್ಲಿಕಡಿಮೆಯವರಾದನಾರದರನ್ನುಎಂದೂಅಗೌರವಿಸದೆ, ಗುರುಸ್ಥಾನದಿಂದಲೇ ನೋಡಿ ಗೌರವಿಸುತ್ತಿದ್ದರು. ಅವತಾರಕಾಲದಲ್ಲಿತಮ್ಮಮೂಲರೂಪವನ್ನುಎಂದು ದೇವತೆಗಳು ಗಣನೆಗೆ ತಾರದೆ, ಭೂಲೋಕದ ವ್ಯವಸ್ಥೆಯನ್ನು ಅನುಸರಿಸುತ್ತಾರೆ.

೩. ಭಗವಂತನಾದ ವ್ಯಾಸರು ಮನುಷ್ಯರಂತೆ ಮಗನಾದ ಶುಕರ ವೈರಾಗ್ಯದಿಂದ ಆಶ್ರಮಬಿಟ್ಟು ಹೊರಟಾಗ ಭಾರೀ ಸ್ನೇಹವುಳ್ಳವರಂತೆ ತೋರಿಸಿದರು. ಇದೂ ಮೇಲಿನ ತತ್ತ್ವಕ್ಕೆ ಅನುಗುಣವಾಗಿಯೇ. ಮನುಷ್ಯರಾಗಿದ್ದಾಗ ಮನುಷ್ಯರಂತೆಯೇ ವ್ಯವಹರಿಸುತ್ತಾರೆ ಎನ್ನಲು ಶುಕರು ಭೀಮನ ತರುವಾಯ ಉತ್ತಮ ನಿದರ್ಶನ. ಆದ್ದರಿಂದ ಶುಕರು ಅವರಿಗೆ ಪ್ರದಕ್ಷಿಣೆ ನಮಸ್ಕಾರ ಹಾಕುತ್ತಿದ್ದರು.

೪. ಶುಕರು ಮನೋಭಿಮಾನಿಗಳು. ಆದ್ದರಿಂದ ಎಲ್ಲ ಪ್ರಾಣಿಗಳ ಮನೋಭಿಮಾನಿಗಳು. ಅಲ್ಲೆಲ್ಲ ಅವರು ವ್ಯಾಸರ ಕೂಗಿಗೆ ಪ್ರತಿಧ್ವನಿಸಿದರು.

೫. ತಮಗೆ ವೈರಾಗ್ಯ ಬಂದು ಹೊರಗೆ ಹೋದಾಗಲೂ ತಂದೆಗೆ ಸ್ಪಂದಿಸದೆ ಇರಲಿಲ್ಲ. ಲೋಕವ್ಯವಸ್ಥೆಯನ್ನು ಎಂದೂ ಮರೆ ಮಾಡಬಾರದು.

೬. ಉದಾ ಯದಾ ವಿರಕ್ತಃ ಪುರುಷಃ ಪ್ರಜಾಪತೇ ತದೈವ ಸನ್ನ್ಯಾಸವಿಧಿಃ ಶ್ರುತೌ ಶ್ರುತಃ' ಎಂದು ವಾಸುದೇವನ ನಡತೆಯಂತೆಯೇ ಶುಕರ ನಡೆ ಇಲ್ಲಿ ನೋಡಬಹುದು. ವೈರಾಗ್ಯ ಬಂದಕೂಡಲೇ ಸನ್ನ್ಯಾಸವಿಧಿಯು ಶ್ರುತಿಯಲ್ಲಿದೆ. ಆದ್ದರಿಂದ ಶುಕರು ತಂದೆಯನ್ನು ಬಿಟ್ಟು ಹೊರಟುದುದು ಶಾಸ್ತ್ರೀಯವೇ ಆಗಿತ್ತು. ಇತ್ಯಾದಿ...

*****

# ೧೨೨. ಶುಕಮುನಿ ವೃತ್ತಾಂತ

## ವ್ಯಾಸರಿಗೆ ಮಹದೇವರ ಉತ್ತರ

ನಂತರ ಶುಕರು ನಾಲ್ಕು ವಿಧವಾದ ಲೋಕಗಳನ್ನು ತೊರೆದು ಸಿದ್ಧಿಯ ಸಲುವಾಗಿ ಮುಂದೆ ಹೊರಟರು (ಧರ್ಮಾರ್ಥಕಾಮಮೋಕ್ಷವೆಂಬ). ಅಲ್ಲದೆ ಎಂಟು ವಿಧವಾದ ತಮೋಗುಣಗಳನ್ನು ಐದು ವಿಧವಾದ ರಜೋಗುಣಗಳನ್ನೂ ತ್ಯಜಿಸಿ, ಸತ್ತ್ವಗುಣವನ್ನೂ ತ್ಯಜಿಸಿ ಮುಂದೆ ತೆರಳಿದ ಶುಕರ ವ್ಯಕ್ತಿತ್ವ ಆಶ್ಚರ್ಯಪೂರ್ಣವಾಗಿತ್ತು. ಅಮೇಲೆ ಧೂಮರಹಿತವಾದ ಅಗ್ನಿಯಂತೆ ಪ್ರಾಕೃತಸತ್ತ್ವರಜಸ್ತಮೋಗುಣರಹಿತನಾದ ಪರಮಾತ್ಮನಲ್ಲಿ ಆಶ್ರಯ ಹೊಂದಿದನು (ಸೇರಿದನು).

ಆ ಸಂದರ್ಭದಲ್ಲಿ ಎಲ್ಲೆಡೆ ಉಲ್ಕೆಗಳು ಬೀಳತೊಡಗಿದವು. ದಿಕ್ಕುಗಳಲ್ಲೆಲ್ಲ ಅಗ್ನಿ ಪ್ರಜ್ವಲಿಸಿತು. ಭೂ ಕಂಪಿಸಿತು. ಶುಕರು ಬ್ರಹ್ಮನಲ್ಲಿ ಸೇರಿದಾಗ ನಡೆದ ಅದ್ಭುತಗಳಿವು. ಅಲ್ಲದೆ ವೃಕ್ಷಗಳು, ಶಾಖೆಗಳಿಂದ ಕಳಚಿದವು. ಪರ್ವತಗಳು ಶಿಖರಗಳನ್ನು ಕಡಿದುಕೊಂಡವು. ಶುಕಾಚಾರ್ಯರ ಗಮನದ ಶಬ್ದದಿಂದ ಹಿಮಾಲಯ ಸೀಳಿಯೇ ಹೋದಂತೆ ಕಾಣಿಸಿತು. ಸೂರ್ಯಪ್ರಕಾಶಿಸಲಿಲ್ಲ, ಅಗ್ನಿ ಪ್ರಜ್ವಲಿಸಲಿಲ್ಲ, ನದಿ, ಸರೋವರ, ಸಮುದ್ರಗಳು ಕ್ಷೋಭೆಗೊಂಡವು.

ಇಂದ್ರ ಸುಗಂಧಪೂರ್ಣ ಮಳೆ ಸುರಿಸಿದ. ವಾಯು ದಿವ್ಯಗಂಧಯುತವಾಗಿ ಬೀಸಿದ. ಉತ್ತರದ ಕಡೆ ಸಾಗುತ್ತಿದ್ದ ಚಿನ್ನದ ಬಣ್ಣದ ತೇರು ಬಿಳಿ ಬಣ್ಣದ ಮಲಯ ಪರ್ವತದ ಎರಡು ಶಿಖರಗಳು ಅಂಟಿಕೊಂಡಂತೆ ಶುಕರು ನೋಡಿದರು(ವಸ್ತುತಃ ಅವೆರಡೂ ಬೇರೆ ಬೇರೆ ದೂರದಲ್ಲಿದ್ದರೂ). ಆ ಶಿಖರಗಳನ್ನು ಶುಕರು ಏರಿದರು. ಶುಕರ ಸಮಾಗಮದಿಂದ ಅವೆರಡೂ ಸೀಳಿ ಹೋದವು. ಅವೆರಡರ ಮಧ್ಯೆ ಶುಕರು ಮೂಡಿ ಬಂದರು. ಅದನ್ನು ನೋಡಿದ ದೇವಗಂಧರ್ವ ಋಷಿಗಳು ಸಂತೋಷಜನಕ ಧ್ವನಿಗೈದರು. ಸಾಧು ಸಾಧು ಎಂದು. ಅದು ಎಲ್ಲೆಡೆ ಪ್ರತಿಧ್ವನಿಸಿತು. ಇವರೆಲ್ಲರೂ ಪುಷ್ಪವೃಷ್ಟಿಯಿಂದ ಶುಕರನ್ನು ಪೂಜಿಸುತ್ತಲೇ ಆಕಾಶವೆಲ್ಲ ಪುಷ್ಪಮಯವಾಯಿತು. ನಂತರ ಶುಕರು ದಾರಿಯಲ್ಲಿ ದೇವಗಂಗೆ(ಮಂದಾಕಿನಿ)ಯನ್ನು ಅಲ್ಲಿ ಜಡ ಕ್ರೀಡಾಸಕ್ತರಾದ, ವಸ್ತ್ರರಹಿತರಾದ ಅಪ್ಸರೆಯರನ್ನು ನೋಡಿದರು. ಅವರೂ ನೋಡಿದರು.

ಪುತ್ರನು ಸಿದ್ಧಿಗಾಗಿ ಸೂರ್ಯಮಂಡಲದ ಕಡೆಗೆ ಹೋಗುತ್ತಿರುವುದನ್ನು ತಿಳಿದ ವ್ಯಾಸರು ಪುತ್ರವಾತ್ಸಲ್ಯದಿಂದ ಅವನ ಮಾರ್ಗವನ್ನೇ ಅನುಸರಿಸಿ, ನಿಮಿಷಮಾತ್ರದಲ್ಲಿ ಬಂದರು[೧]. ಒಟ್ಟಾಗಿರುವ ಶಿಖರಗಳು ಇಬ್ಭಾಗವಾಗಿರುವ ದೃಶ್ಯವನ್ನು ಕಂಡು ಶುಕಮುನಿಯು ಹೊರಬಂದ ಸ್ಥಳವಿದು. ಆದ್ದರಿಂದ **ಶುಕಾಭಿಪತನ** ಎಂದು ಋಷಿಗಳು ಆ ಸ್ಥಳವನ್ನು ಪ್ರಸಿದ್ಧಿ ಮಾಡಿದ್ದರು. ಅಲ್ಲಿಗೆ ಬಂದ ವ್ಯಾಸರಿಗೆ ಋಷಿಗಳು ಶುಕರ ಮಹಿಮೆಯನ್ನು ವ್ಯಾಸರ ಮುಂದೆ ಪ್ರಶಂಸಿಸಿದರು.

ಆಗಲೇ ವ್ಯಾಸರು ವೇದಾಂಗಶಿಕ್ಷಾದಲ್ಲಿ ಹೇಳಿದಂತೆ ಉಚ್ಚಸ್ವರದಿಂದ 'ಶುಕಾ' ಎಂದು ಕೂಗಿದರು. ಆ ಧ್ವನಿಗೆ ಮೂರು ಲೋಕಗಳೂ ಕಂಪಿಸಿದವು. ಅದಕ್ಕೆ ಉತ್ತರವಾಗಿ ಶುಕರೂ ಹೇಳಿದ(ಅವರು ಎಲ್ಲ ಪ್ರಾಣಿಗಳ ಅಂತರ್ಯಾಮಿಯಾದ್ದರಿಂದ) 'ಭೋ' ಎಂಬ ಏಕಾಕ್ಷರಶಬ್ದವೂ ಇಡೀ ಪ್ರಪಂಚವನ್ನು ಪ್ರತಿಧ್ವನಿಸಿತು. ಹೀಗೆ ಶುಕರು ತಮ್ಮ ಯೋಗಪ್ರಭಾವದಿಂದ ಮರೆಮಾಚಿಕೊಂಡು ಶಬ್ದಾದಿ ಗುಣಗಳನ್ನು(ಪಂಚಭೂತಗಳ) ತ್ಯಜಿಸಿ (ಮೀರಿ) ಭಗವತ್ಪಾದಗಳನ್ನು ಸೇರಿದರು[೨].

ಪುತ್ರನ ಇಂತಹ ಮಹಾತೇಜಸ್ಸನ್ನು ಕಂಡ ವ್ಯಾಸರು ಮಗನನ್ನೇ ಯೋಚಿಸುತ್ತಾ ಹಿಮತ್ಪರ್ವತದ ಶಿಖರದಲ್ಲಿ ಕುಳಿತರು. ನಂತರ ಮಂದಾಕಿನೀ ತೀರದಲ್ಲಿ ವಸ್ತ್ರಹಿತರಾಗಿ ಜಲಕ್ರೀಡೆ ಆಡುತ್ತಿದ್ದ ಅಪ್ಸರೆಯರು ಶಿಖರದ ಮೇಲೆ ಕುಳಿತ ವ್ಯಾಸರನ್ನು ಕಂಡು ಭ್ರಾಂತಿಗೊಂಡರು, ಅಧೀರರಾದರು, ಕಳವಳಗೊಂಡರು. ಕೆಲವರು ನೀರಿನಲ್ಲಿ ಅಡಗಿ ಕೊಂಡರು, ಕೆಲವರು ಪೊದೆಗಳಲ್ಲಿ ಅವಿತುಕೊಂಡರು. ಮತ್ತೆ ಕೆಲವರು ವ್ಯಾಸರನ್ನು ನೋಡುತ್ತಲೇ ಗಾಬರಿಯಿಂದ ವಸ್ತ್ರ ಧರಿಸಲಾರಂಭಿಸಿದರು. ಅದೇ ಸ್ಥಳಕ್ಕೆ ಆಗಮಿಸಿದಾಗ (ಶುಕರು) ಅಪ್ಸರೆಯರು ಶುಕರ ಬಗ್ಗೆ ನಿರ್ಲಕ್ಷ್ಯದಿಂದ ಇದ್ದರು. ತನ್ನನ್ನು (ವ್ಯಾಸ) ಕಂಡಾಗ ಕಳವಳಗೊಂಡುದು, ಅವರಿಗೆ ನಾಚಿಕೆಯುಂಟಾಯಿತು (ತಮ್ಮಲ್ಲಿರುವ ಆಸಕ್ತಿಯಿಂದ). ಆದರೂ ಮಗನ ಬಗ್ಗೆ ಪ್ರೀತರಾದರು.

ಆಗ ಅಲ್ಲಿಗೆ ಬಂದ ಮಹದೇವರು ಶುಕವಿರಹದಿಂದ ಶೋಕಸಂತಪ್ತರಾದ ವ್ಯಾಸರನ್ನು 'ನಿಮ್ಮ ಅಪೇಕ್ಷೆಯ ಮೇರೆಗೆ ಪಂಚಭೂತಗಳನ್ನು ಮೀರಿದ ಮಗನು ಜನಿಸಿ, ಸಿದ್ಧನೂ ಆದ. ಅಂತಹ ಪುತ್ರನಬಗ್ಗೆ ಏಕೆ ಶೋಕ?' ಎಂದರು. ನಿನ್ನ ಪುತ್ರನ ಕೀರ್ತಿ ಅಚಂದ್ರಾರ್ಕವಾಗಿರುತ್ತದೆ. ಲೋಕದಲ್ಲಿ ಆತನ ಛಾಯೆ ಇರುವುದನ್ನು ನೀವು ನೋಡುತ್ತೀರಿ' ಈ ಮಾತು ಕೇಳಿ ಸಂತುಷ್ಟರಾಗಿ ವ್ಯಾಸರು ತಮ್ಮ ಆಶ್ರಮಕ್ಕೆ ತೆರಳಿದರು.

---

೧ 'ಮಹಾಯೋಗಗತಿಂ ತ್ವಗ್ರ್ಯಾಂ ವ್ಯಾಸೋಽಸ್ಥಾಯ ಮಹಾತಪಾಃ।
ನಿಮೇಷಾಂತರಮಾತ್ರೇಣ ಶುಕಾಭಿಪತನಂ ಯಯೌ॥ - ೧೬೫/೨೦

೨ ಅಂತರ್ಹಿತಃ ಪ್ರಭಾವಂ ತು ದರ್ಶಯಿತ್ವಾ ಶುಕಸ್ತದಾ।
ಗುಣಾನ್ ಸಂತ್ಯಜ್ಯ ಶಬ್ದಾದೀನ್ ಪದಮಧ್ಯಮಗತ್ಪರಮ್॥ - ೧೬೫/೨೬

'ಧರ್ಮರಾಜ! ಈ ಆಖ್ಯಾನವನ್ನು ನನಗೆ ನಾರದರು ಹೇಳಿದ್ದರು. ಈ ಇತಿಹಾಸವನ್ನು ನಿನಗೆ ಹೇಳಿದ್ದೇನೆ. ಇದನ್ನು ಅಧ್ಯಯನ ಮಾಡಿ, ಯಾರು ಇಂತಹ ಮೋಕ್ಷವೆಂಬ ಧರ್ಮದಿಂದ ಕೂಡಿರುವುದನ್ನು ಮನಸ್ಸಿನಲ್ಲಿ ಇಟ್ಟುಕೊಳ್ಳುವರೋ ಅವರೂ ಪರಮಗತಿಯನ್ನು ಹೊಂದುವರು ಎಂದು ಭೀಷ್ಮರು ಹೇಳಿದರು[೧].

## ಸಂದೇಶಗಳು-ವಿವರಣೆಗಳು

೧. ಸಾಧಕನಿಗೆ ವೈರಾಗ್ಯ ಬಂದಾಗ ಸನ್ಯಾಸಿಯಾಗಬೇಕು. ಸನ್ಯಾಸ ಜೀವನದಲ್ಲಿ ವಿಶೇಷ ಸಾಧನೆ ಗೈದು ಅದೇ ಜೀವನದಲ್ಲಿ ಹೆಚ್ಚು ಹೆಚ್ಚು ಬ್ರಹ್ಮಸಾಕ್ಷಾತ್ಕಾರಕ್ಕಾಗಿ ಪ್ರಯತ್ನಿಸಬೇಕು.

೨. ಶುಕರು ತಮ್ಮ ತಂದೆ ವ್ಯಾಸರಿಂದ; ಅವರ ಆದೇಶದ ಮೇರೆಗೆ ಜನಕನಿಂದ; ನಾರದರಿಂದ ವಿಶೇಷ ಉಪದೇಶ ಪಡೆದು ಬ್ರಹ್ಮಸಾಕ್ಷಾತ್ಕಾರ ಮಾಡಿಕೊಂಡು ಪರಮಾತ್ಮನ ಸಾನ್ನಿಧ್ಯಕ್ಕೆ ಹೊರಟ ಜೀವನ್ಮುಕ್ತರು.

೩. ಅವರು ಸೂರ್ಯಮಂಡಲ ಭೇದಿಸಿಕೊಂಡು ಭಗವಂತನ ಬಳಿಗೆ ಹೋದ ವಿವರ ಭಾರತದಲ್ಲಿ ಚಿತ್ರಗಳಂತೆ ಕಣ್ಣ ಮುಂದೆ ನಿಲ್ಲುತ್ತವೆ. ಅವನ್ನು ಅರ್ಥಮಾಡಿಕೊಳ್ಳುವ ಯೋಗ್ಯತೆ ನಮಗೆಷ್ಟು ಇದೆ ಎನ್ನುವುದು ಅಷ್ಟೇ ಪ್ರಶ್ನಾರ್ಹ. ಅವೆಲ್ಲ ಅತೀಂದ್ರಿಯ ವಿಚಾರಗಳು.

೪. ನಾವು ನಮ್ಮ ತಂದೆ-ತಾಯಿಗಳ ಸನ್ನಿದಿಯಲ್ಲಿಯೇ ಅವರು ಮೆಚ್ಚುವಷ್ಟಾದರೂ ಸಾಧನೆ ಮಾಡಬೇಕು. ಶುಕರೇ ಇದಕ್ಕೆ ಉದಾಹರಣೆ.

೫. ಶುಕರ ಸಾಧನೆ ತಂದೆಯಿಂದ ಹಿಡಿದು ಸ್ವರ್ಗಾದಿ ಎಲ್ಲ ಲೋಕದ ಗಮನ ಸೆಳೆದಿತ್ತು. ಅವರು ರುದ್ರದೇವರು. ಈ ಸಾಧನೆ ದೊಡ್ಡಲ್ಲದಿರಬಹುದು. ಆದರೆ ಲೋಕದ ದೃಷ್ಟಿಯಿಂದ ಅತ್ಯಂತ ಮಾನ್ಯ, ಅನುಕರಣೀಯ.

೬. ತಂದೆ ಮಗನ ಸಾದನೆಗೆ ಪ್ರೋತ್ಸಾಹಿಸಿದ್ದು ಅಲ್ಲದೆ, ಅವನನ್ನೇ ಬೆನ್ನು ಹತ್ತಿ ನಡೆದರು ವ್ಯಾಸರು. ವ್ಯಾಸರಿಗೆ ಅದು ದೊಡ್ಡದಲ್ಲ. ಅವರು ನಾರಾಯಣ ಅಲ್ಲವೇ? ಆದರೆ ತಂದೆಯ ಕರ್ತವ್ಯ ಜ್ಞಾಪನೆ ಮಾಡಿದ್ದಾರೆ ವ್ಯಾಸರು. ಮಕ್ಕಳ ಸಾಧನೆಯನ್ನು ನೋಡಿ ನಲಿವಂತೆ ಭಾಗ್ಯ ನಮ್ಮದಾಗಿರಲಿ. ಅವರನ್ನು ಸರ್ವವಿಧದಿಂದ ಪ್ರೋತ್ಸಾಹಿಸಬೇಕಾದುದು ತಂದೆ-ತಾಯಿಗಳ ಕರ್ತವ್ಯ. ಸಜ್ಜನನಾದ ಮಗ, ಮಗಳ ಬಗ್ಗೆ ಹೆಮ್ಮೆ, ಗರ್ವ ಇರಲಿ, ತಪ್ಪಿಲ್ಲ.

*****

---

೧ ಇತಿಹಾಸಮಿಮಂ ಪುಣ್ಯಂ ಮೋಕ್ಷಧರ್ಮಾರ್ಥ ಸಂಹಿತಮ್ ।
ಧಾರಯೇದ್ಯಃ ಶಮಪರಃ ಸ ಗಚ್ಛೇತ್ ಪರಮಾಂ ಗತಿಮ್ ॥ – ೧೬೫/೪೧

# ೧೨೩. ಉಪರಿಚರವಸುವಿನ ಚರಿತೆ

ಅಖಂಡಭೂಮಂಡಲವನ್ನಾಳಿದಹರಿಭಕ್ತನಾದಉಪರಿಚರನೆಂಬರಾಜನಿದ್ದನು. ನಾರಾಯಣನ ಅನುಗ್ರಹದಿಂದ ಆತನು ನಿತ್ಯಭಕ್ತನೂ, ಏಕಾಗ್ರತೆಯಿಂದ ಪಿತೃಗಳನ್ನು ಸೇವಿಸುವವನೂ ಆಗಿದ್ದನು. ಪಂಚರಾತ್ರಾಗಮದ ಪ್ರಕಾರ ನಾರಾಯಣನ ಅರ್ಚನೆ ಮಾಡುತ್ತಾ ಉಳಿದ ಸಾಮಗ್ರಿಗಳಿಂದ ಪಿತೃಗಳನ್ನು ಆರಾಧಿಸಿ, ಅದರ ಶೇಷವನ್ನು ಬ್ರಾಹ್ಮಣರಿಗೆ, ತನ್ನ ಆಶ್ರಯಿಸಿದವರಿಗೆ ಹಂಚಿ ಕೊನೆಗೆ ಉಳಿದ ಶೇಷಾನ್ನದಿಂದ ಭೋಜನ ಮಾಡುತ್ತಿದ್ದನು. ಸರ್ವಭೂತಗಳಿಗೆ ಹಿತಬಯಸುತ್ತಾ, ಅಹಿಂಸಾಧರ್ಮವನ್ನು ಪಾಲಿಸುತ್ತಾ ಜನಾರ್ದನನನ್ನು ಎಲ್ಲ ರೀತಿಯಿಂದ (ನವವಿಧಭಕ್ತಿಯಿಂದ) ಆರಾಧಿಸುತ್ತಿದ್ದನು. ಈತನ ನಾರಾಯಣನ ಭಕ್ತಿಯಿಂದ ಸಂತುಷ್ಟನಾದ ಇಂದ್ರನು ತನ್ನೊಡನೆ ಸಿಂಹಾಸನದಲ್ಲಿ ಹಾಗೂ ಶಯ್ಯೆಯಲ್ಲಿಯೂ ಸ್ಥಾನ ಕೊಟ್ಟಿದ್ದನು[೧].

ಉಪರಿಚರವಸು, ತಾನು ರಾಜ್ಯ, ಐಶ್ವರ್ಯ, ಹೆಂಡತಿ, ವಸ್ತು, ವಾಹನ, ಇವೆಲ್ಲವೂ ಭಗವಂತನದ್ದೇ ಎಂದು ಭಾವಿಸುತ್ತಾ ಅವನಿಗೆ ಸಮರ್ಪಿಸುತ್ತಿದ್ದನು[೨].

ಆತನುಪಂಚರಾತ್ರವಿಧಿಪ್ರಕಾರವೇಏಕಾಗ್ರಬುದ್ಧಿಯಿಂದಸಕಾಮಕರ್ಮ, ನೈಮಿತ್ತಕರ್ಮ, ಯಜ್ಞಗಳೆಲ್ಲವನ್ನೂ ಮಾಡುತ್ತಿದ್ದನು. ಆತನ ಮನೆಯಲ್ಲಿ ಪಂಚರಾತ್ರಾಗಮಜ್ಞಾನಿಗಳೇ ಎಲ್ಲರಕ್ಕಿಂತಲೂ ಮೊದಲು ಪ್ರಸಾದ ಸ್ವೀಕರಿಸುತ್ತಿದ್ದರು. ಅವರಿಗೆ ಅಗ್ರ್ಯಪೂಜೆ. ಆತ ಎಂದೂ ಸುಳ್ಳಾಡಲಿಲ್ಲ, ಶರೀರದಿಂದ ಅಣುಮಾತ್ರವೂ ಪಾಪಕರ್ಮ ಮಾಡಲಿಲ್ಲ, ಮನಸ್ಸು ವಿಷಯದೂಷಿತವಾಗಲಿಲ್ಲ, ನಿರ್ಮಲವಾಗಿತ್ತು.

ಮುಂದೆ ಭೀಷ್ಮರು ಧರ್ಮರಾಜನಿಗೆ ಉಪರಿಚರವಸು ಅನುಸರಿಸುತ್ತಿದ್ದ ಪಂಚರಾತ್ರಾಗಮವನ್ನು ಪ್ರಚಾರ ಮಾಡಿದ ಸಪ್ತರ್ಷಿಗಳು ಹಾಗೂ ಸ್ವಾಯಂಭುವಮನುಗಳ ಬಗ್ಗೆ ಹೇಳುತ್ತಾರೆ.

ಮರೀಚಿ, ಅತ್ರಿ, ಅಂಗಿರಸ, ಪುಲಸ್ತ್ಯ ಪುಲಹ, ಕ್ರತು, ವಸಿಷ್ಠರು ಇವರೇ ಸಪ್ತರ್ಷಿಗಳು. ಮಹಾತೇಜಸ್ವಿಗಳಾದ ಇವರನ್ನು ಚಿತ್ರ ಶಿಖಂಡಿಗಳೆನ್ನುತ್ತಾರೆ.

ಇವರಲ್ಲದೆ ಸ್ವಾಯಂಭುವಮನು ಕೂಡಾ ಪಂಚರಾತ್ರ ಪ್ರಚಾರಕ್ಕೆ ಕಾರಣೀಭೂತ. ಇವರಿಂದ ಹೊರಹೊಮ್ಮಿದ ಶಾಸ್ತ್ರದಲ್ಲಿ ಧರ್ಮಾರ್ಥಕಾಮಗಳನ್ನು ಮೊದಲು ಹೇಳಿ ನಂತರ

---

೧ ಪಿತೃಶೇಷೇಣ ವಿಪ್ರಾಂಶ್ಚ ಸಂವಿಭಜ್ಯಾಶ್ರಿತಾಂಶ್ಚ ಸಃ।
ಶೇಷಾನ್ನಭುಕ್ ಸತ್ಯಪರಃ ಸರ್ವಭೂತೇಷ್ವಹಿಂಸಕಃ॥
ತಸ್ಯ ನಾರಾಯಣೇ ಭಕ್ತಿಂ ವಹತೋಽಮಿತಕರ್ಶನ।
ಏಕಶಯ್ಯಾಸನಂ ಶಕ್ರೋ ದತ್ತವಾನ್ ದೇವರಾಟ್ ಸ್ವಯಮ್॥ – ೧೬೭/೨೦,೨೧

೨ ಆತ್ಮಾ ರಾಜ್ಯಂ ಧನಂ ಚೈವ ಕಲತ್ರಂ ವಾಹನಾನಿ ಚ।
ಏತದ್ಭಗವತೇ ಸರ್ವಮಿತಿ ತತ್ ಪ್ರೇಕ್ಷಿತಂ ಸದಾ॥ – ೧೬೭/೨೨

ಮೋಕ್ಷದ ಬಗ್ಗೆ ಹೇಳುತ್ತಾರೆ. ಈ ಸಪ್ತರ್ಷಿಗಳು ನಾರಾಯಣನನ್ನು ದೇವಮಾನದ ೧೦೦೦ ವರ್ಷ ಆರಾಧಿಸಿದರು. ಆಗ ಸರಸ್ವತೀ ದೇವಿಯು ಲೋಕಹಿತದೃಷ್ಟಿಯಿಂದ ಇವರನ್ನು ಪ್ರವೇಶಿಸಿದಳು. ನಂತರ ಬ್ರಾಹ್ಮಣರು ಶಬ್ದ, ಅರ್ಥ, ಯುಕ್ತಿಗಳಿಂದ ಕೂಡಿದ ಶಾಸ್ತ್ರಪ್ರಚಾರ ಮಾಡಿದರು. ಪ್ರಥಮ ಸೃಷ್ಟಿಯಲ್ಲಿ ಪಂಚರಾತ್ರಾಗಮ ರಚಿತವಾಯಿತು. ಇದರ ಆರಂಭದಲ್ಲಿ ಓಂಕಾರ ಸ್ವರ ಇದೆ.

ಋಷಿಗಳ ಆರಾಧನೆಯನ್ನು ಮೆಚ್ಚಿದ ನಾರಾಯಣ ಇವರಿಗೆ ಅದೃಶ್ಯವಾಗಿ ಹೀಗೆ ಹೇಳಿದನು.

೧. ನೀವು ಒಂದು ಲಕ್ಷ ಶ್ಲೋಕಗಳಲ್ಲಿ ರಚಿಸಿದ ಈ ಗ್ರಂಥದಲ್ಲಿ ಲೋಕತಂತ್ರವನ್ನು ಸಮಗ್ರವಾಗಿ ನಿರೂಪಿಸಿದ್ದೀರಿ.

೨. ಪ್ರವೃತ್ತಿ, ನಿವೃತ್ತಿ ಮಾರ್ಗದಲ್ಲಿ ಹೋಗುವವರಿಗೆ ಇದು ತುಂಬಾ ಅನುಕೂಲ. ನೀವು ರಚಿಸಿದ ಶಾಸ್ತ್ರಗಳು ನಾಲ್ಕು ವೇದಗಳಿಗೆ ಸಮ್ಮತವು.

೩. ನಿಮ್ಮ ಈ ಶಾಸ್ತ್ರವನ್ನು ಅನುಸರಿಸಿಯೇ ಸ್ವಾಯಂಭುವಮನು ಸ್ವತಃ ಉದ್ಧಾರವಾಗಿ ಧರ್ಮೋಪದೇಶ ಮಾಡುತ್ತಾನೆ.

೪. ಶುಕ್ರ, ಬೃಹಸ್ಪತಿಗಳೂ ಮುಂದೆ ಹುಟ್ಟಲಿರುವ ಇದನ್ನೇ ಪ್ರವಚನ ಮಾಡುತ್ತಾರೆ.

೫. ಉಪರಿಚರವಸುವು ಬೃಹಸ್ಪತಿಯ ಸನ್ನಿಧಾನದಲ್ಲೇ ಈ ಶಾಸ್ತ್ರದ ಉಪದೇಶ ಹೊಂದುತ್ತಾನೆ.

೬. ಈ ಉಪರಿಚರವಸು ಸತ್ಪುರುಷ ಮಾನ್ಯ, ನನ್ನ ಭಕ್ತ. ಈ ಶಾಸ್ತ್ರಾನುಸಾರಿಯಾಗಿಯೇ ಆತನು ಎಲ್ಲ ಕರ್ಮಾನುಷ್ಠಾನ ಮಾಡುತ್ತಾನೆ.

೭. ಇದುವೇ ಸರ್ವೋತ್ತಮಶಾಸ್ತ್ರ, ಇದು ಕೀರ್ತಿ, ಧರ್ಮದಾಯಕ, ಅರ್ಥಶಾಸ್ತ್ರವೂ ಆಗಿದೆ.

೮. ಇದನ್ನು ಪ್ರಚಾರ ಮಾಡುವುದರಿಂದ ಉತ್ತಮ ಪ್ರಜೆಗಳನ್ನು ಹೊಂದುವಿರಿ. ಉಪರಿಚರ ರಾಜ ರಾಜ್ಯಲಕ್ಷ್ಮಿಯಿಂದ ಸಮೃದ್ಧಿ ಹೊಂದುತ್ತಾನೆ.

ಹೀಗೆ ಹೇಳಿ ಭಗವಂತನು ಋಷಿಗಳನ್ನು ಬಿಟ್ಟು ಬೇರೆಡೆಗೆ ಹೋದನು (ಅದೃಶ್ಯನಾದನು).

ನಂತರ ಲೋಕಹಿತಚಿಂತಕ ಪಿತೃಗಳು ಧರ್ಮಕ್ಕೆ ಮೂಲಭೂತವಾದ ಈ ಸನಾತನ ಶಾಸ್ತ್ರವನ್ನು ಪ್ರಚಾರ ಮಾಡಿದರು. ಪ್ರಥಮಕಲ್ಪದ ಪ್ರಥಮಯುಗದಲ್ಲಿ ಸಪ್ತರ್ಷಿಗಳಲ್ಲಿ ಒಬ್ಬರಾದ ಅಂಗಿರಸರಿಗೆ ಬೃಹಸ್ಪತಿ ಮಗನಾಗಿ ಜನಿಸಿದರು. ಅವನಲ್ಲಿ ಷಡಂಗ ಹಾಗೂ

ಉಪನಿಷತ್ಸಂಪನ್ನವಾದ ಈ ಪಂಚರಾತ್ರಶಾಸ್ತ್ರವನ್ನು ಋಷಿಗಳು ಸ್ಥಾಪಿಸಿ ತಮಗೆ ಇಷ್ಟವಾದ ಸ್ಥಳಗಳಿಗೆ ಹೊರಟರು.

ಮಹಾಕಲ್ಪ ಕಳೆದ ನಂತರ ಅಂಗಿರಸಕುಲದಲ್ಲಿ ಬೃಹಸ್ಪತಿ ಜನಿಸಿದನು. ದೇವತೆಗಳು ತಮಗೆ ಪುರೋಹಿತ ಸಿಕ್ಕರೆಂದು ಸಂತೋಷಪಟ್ಟರು. ಬೃಹಸ್ಪತಿ ವಿದ್ವಾಂಸನಾಗಿ ಕರೆಯಲ್ಪಟ್ಟು ವಿದ್ವಾಂಸರ ಎಲ್ಲ ಗುಣ ಹೊಂದಿದ್ದನು. ಅವರ ಶಿಷ್ಯ ಶ್ರೇಷ್ಠ ಉಪರಿಚರವಸು ಸಪ್ತರ್ಷಿಪ್ರಣೀತ ಪಂಚರಾತ್ರಾಗಮವನ್ನು ಬೃಹಸ್ಪತಿಗಳಲ್ಲಿ ಅಧ್ಯಯನ ಮಾಡಿ ಅನೇಕ ಯಜ್ಞಗಳನ್ನು ಮಾಡಿ ಇಂದ್ರ ದೇವಲೋಕವನ್ನು ರಕ್ಷಿಸುವಂತೆ ಭೂಲೋಕವನ್ನು ರಕ್ಷಿಸುತ್ತಿದ್ದನು.

ಆತನು ಅಶ್ವಮೇಧಯಜ್ಞ ಆರಂಭಿಸಿದ. ಅದರ ಹೋತೃ ಬೃಹಸ್ಪತಿಗಳು. ಪ್ರಜಾಪತಿ ಸುತರಾದ ಏಕತ, ದ್ವಿತ, ತ್ರಿತ ಋಷಿಗಳು ಸದಸ್ಯರಾಗಿದ್ದರು. ಈ ಯಜ್ಞದಲ್ಲಿ ದನುಷ, ರೈಭ್ಯ ಮೊದಲಾದ ೧೬ ಮಂದಿ ಋಷಿಗಳು ಋತ್ವಿಜರು. ಯಜ್ಞದ ಸಂಭಾರಗಳೆಲ್ಲ ಸಿದ್ಧವಾಗಿದ್ದವು.

ಆ ಯಜ್ಞವು ಪಶುಹಿಂಸಾರಹಿತವಾಗಿತ್ತು. ರಾಜ ಹಾಗೆ ಆದೇಶಿಸಿದ್ದ. ಆತನಿಗೆ ಸಕಾಮಯಜ್ಞದ ಅಭಿಪ್ರಾಯವಿರಲಿಲ್ಲ. ಕಾಡಿನಿಂದಲೇ ಯಜ್ಞ ದ್ರವ್ಯಗಳನ್ನು ತರಿಸಿದ್ದನು. ಈ ಪರಿಯ ಯಜ್ಞದಿಂದ ಪ್ರೀತನಾದ ಶ್ರೀಹರಿ ಯಾರಿಗೂ ತಿಳಿಯದಂತೆ ರಾಜನಿಗೆ ಮಾತ್ರ ದರ್ಶನ ಕೊಟ್ಟನು. ತನ್ನ ಹವಿರ್ಭಾಗವನ್ನು ಮತ್ತು ಅಲ್ಲಿ ಪುರೋಡಾಶವನ್ನು ಸ್ವೀಕರಿಸಿದ. ಹರಿಮೇಧಸ್ಸೆಂದು ಕರೆಯಲ್ಪಡುವ ಆ ಹರಿಯು ಬೃಹಸ್ಪತಿಗೂ ಕಾಣದೇ ತನ್ನ ಭಾಗ ಸ್ವೀಕರಿಸಿದನು[೧].

ಇದರಿಂದ ಬೃಹಸ್ಪತಿ ಕೋಪಗೊಂಡು ಕೈಯಲ್ಲಿರುವ ಯಜ್ಞದ ಸ್ರುವ(ಪಾತ್ರೆ)ವನ್ನು ಎಸೆದನು. ದುಃಖದಿಂದ ಕಣ್ಣೀರನ್ನು ಸುರಿಸಿದನು. ರಾಜನಿಗೆ ಹೇಳಿದ, ನಾನು ಹವಿರ್ಭಾಗವನ್ನು ನಾರಾಯಣನಿಗೆ ಕೊಡುತ್ತೇನೆ. ಯಾವ ಸಂಶಯವಿಲ್ಲ. ಎಲ್ಲ ದೇವತೆಗಳು ಬಂದು ಸ್ವೀಕರಿಸುತ್ತಿರುವಾಗ ನಾರಾಯಣ ಅದೃಶ್ಯನಾಗಿ ಬರಲು ಕಾರಣವೇನು? ಇದನ್ನು ನೋಡಿದ ಸದಸ್ಯರು, ರಾಜನು ಬೃಹಸ್ಪತಿಗಳನ್ನು ಸಮಾಧಾನ ಮಾಡಿಸಿದರು. ರೋಷತಾಳಬೇಡವೆಂದರು. ಭಗವಂತ ಯಾರ ವಿಷಯದಲ್ಲಿ ಪ್ರಸನ್ನನಾಗುತ್ತಾನೋ ಅವನೇ ಅವನನ್ನು ಕಾಣಬಹುದು[೨].

---

೧ ನ ತತ್ರ ಪಶುಘಾತೋಽಭೂತ್ಸ ರಾಜೈವಂ ಸ್ಥಿತೋಽಭವತ್ ।
ಅಹಿಂಸ್ರಃ ಶುಚಿರಕ್ಷುದ್ರೋ ನಿರಾಶೀಃ ಕರ್ಮಸಂಸ್ತುತಃ ।
ಪ್ರೀತಸ್ತತೋಽಸ್ಯ ಭಗವಾನ್ ದೇವದೇವಃ ಪುರಾತನಃ ।
ಸಾಕ್ಷಾತ್ತಂ ದರ್ಶಯಾಮಾಸ ಸೋಽದೃಶ್ಯೋಽನ್ಯೇನ ಕೇನಚಿತ್ ।
ಸ್ವಯಂ ಭಾಗಮುಪಾಘ್ರಾಯ ಪುರೋಡಾಶಂ ಗೃಹೀತವಾನ್ ॥
ಅದೃಶ್ಯೇನ ಹೃತೋ ಭಾಗೋ ದೇವೇನ ಹರಿಮೇಧಸಾ ॥ – ೧೬೮/೧೦-೧೨

೨ ಬೃಹಸ್ಪತಿಸ್ತತಃ ಕ್ರುದ್ಧಃ ಸ್ರುವಮುದ್ಯಮ್ಯ ವೇಗಿತಃ ।
ಆಕಾಶಂ ಘ್ನನ್ ಸ್ರುವಃ ಪಾತ್ಯೆ ರೋಷಾದಶ್ರೂಣ್ಯವರ್ತಯತ್ ॥

ರಾಜ ಆಚರಿಸಿದ ಈ ಯಜ್ಞದಲ್ಲಿ ಮುಖ್ಯ ಸದಸ್ಯರಾಗಿ ಭಾಗವಹಿಸಿದ ಏಕತ, ದ್ವಿತ, ತ್ರಿತ ಮಹರ್ಷಿಗಳು ಈ ವಿಷಯದಲ್ಲಿ ತಮ್ಮ ಅನುಭವವನ್ನು ಹಂಚಿಕೊಂಡರು.

ಇವರು ಚತುರ್ಮುಖನ ಮಾನಸಪುತ್ರರು. ಒಮ್ಮೆ ಮೋಕ್ಷದ ಚಿಂತನೆಯೊಂದಿಗೆ (ಮೋಕ್ಷ ಸಿಗುವ ಬಗ್ಗೆ) ಒಂದೇ ಕಾಲಿನಲ್ಲಿ ೪೦೦೦ ವರ್ಷಕಾಲ ಸಮಾಧಿಯಲ್ಲಿಯೇ ಇದ್ದು ಕಟ್ಟಿಗೆಯಂತೆ ನಿಂತು ಮಹಾಮೇರುವಿನ ಉತ್ತರದಲ್ಲಿನ ಕ್ಷೀರಸಮುದ್ರದ ಬಳಿ ತಪಸ್ಸನ್ನು ಮಾಡಿದೆವು ಎಂದು ಹೇಳಿದರು. ನಾರಾಯಣನನ್ನು ನೋಡುವ ಉದ್ದೇಶದಿಂದ ಈ ತಪಸ್ಸನ್ನು ಮಾಡಿ, ಅದು ಮುಗಿದಾಗ ನಮಗೆ ಭಗವಂತನ ವಾಣಿಯಂತಿದ್ದ ಅಶರೀರವಾಣಿ ಕೇಳಿಸಿತು. ನಮ್ಮನ್ನು ಕ್ಷೀರಸಮುದ್ರದ ಉತ್ತರಕ್ಕೆ ಇರುವ ಶ್ವೇತದ್ವೀಪದಲ್ಲಿ ನಾರಾಯಣನಲ್ಲಿ ಏಕಾಂತದಲ್ಲಿ ಭಜಿಸುವ ಭಕ್ತರಿದ್ದಾರೆ ಅಲ್ಲಿಗೆ ಹೋಗಿರಿ. ನಿಮಗಲ್ಲಿ ಭಗವತ್ಸ್ವರೂಪ ಪ್ರತ್ಯಕ್ಷವಾಗುತ್ತದೆ[1].

ಹೀಗೆ ಕೇಳಿದ ಮೇಲೆ ನಾವು ಅಲ್ಲಿಗೆ ಹೋದರೂ, ಆ ದ್ವೀಪವೇ ನಮಗೆ ಕಾಣಲಿಲ್ಲ, ಅದರ ಅತ್ಯಂತ ಪ್ರಭೆಯ ಕಾರಣದಿಂದ. ಆಗ ನಮಗೆ ದೈವವಶಾತ್ (ಯೋಗದಿಂದ) ಹುಟ್ಟಿದ ವಿಜ್ಞಾನವು ನಮ್ಮ ಹೃದಯದಲ್ಲಿ ಪ್ರಕಟವಾಯಿತು. ಭಗವಂತನ ಸ್ವರೂಪವನ್ನು ತಪಸ್ಸಿಲ್ಲದೆ ನೋಡಲು ಸಾಧ್ಯವಿಲ್ಲವೆಂಬ ಜ್ಞಾನವು ನಮಗೆ ಗೋಚರವಾಗಿ ಮೂರು ವರ್ಷಗಳ ತಪಸ್ಸು ಮಾಡಿದೆವು.

ಮೂರು ವರ್ಷವಾದ ಮೇಲೆ ನಮಗೆ ಶುಭಲಕ್ಷಣಸಂಪನ್ನರಾದ ಕೆಲವರು ಯಾವಾಗಲೂ ಕೈ ಜೋಡಿಸಿಕೊಂಡು, ಜಪ ಮಾಡುತ್ತಿರುವವರು ನಮ್ಮ ಕಣ್ಣಿಗೆ ಕಂಡರು. ಅದು ಮಾನಸಜಪ. ಅವರಲ್ಲಿ ಕೆಲವರು ಪೂರ್ವ, ಕೆಲವರು ಉತ್ತರ ದಿಕ್ಕಿಗೆ ಅಭಿಮುಖರಾಗಿ ಜಪ ಮಾಡುತ್ತಿದ್ದರು. ಅವರ ಕಾಂತಿ ಪ್ರಳಯಕಾಲದ ಸೂರ್ಯಪ್ರಕಾಶದಂತೆ ಇತ್ತು. ಬೃಹಸ್ಪತಿಮಹರ್ಷಿಗಳೇ! ಅಲ್ಲಿ ಸಾವಿರಸೂರ್ಯರು ಒಂದೇಕಾಲದಲ್ಲಿ ಉದಿಸಿದಷ್ಟು ಮಹಾಕಾಂತಿ ಅಲ್ಲಿ ಇತ್ತು. ಅವರನ್ನು ನೋಡಿದ ಕೂಡಲೇ ನಾವು ಎದ್ದು ಕೈಮುಗಿದು, 'ನಮಃ' ಎಂದೆವು. ನಂತರ ಅವರು ಮಾತನಾಡುವ ಶಬ್ದ ಪೂಜೆಯ ಸಮರ್ಪಣೆ ತೋರಿತು. ಅಲ್ಲಿನ ಬೆಳಕಿನಿಂದ ನಮ್ಮ ಇಂದ್ರಿಯ ಬಲ ಹೋಗಿ ನಾವು ಏನನ್ನೂ ನೋಡದಾದೆವು. ಅವರು ಹೇಳುತ್ತಿದ್ದ [2]ಸ್ತೋತ್ರ

---

ಕಿಮರ್ಥಮಿಹ ನ ಪ್ರಾಪ್ತೋ ದರ್ಶನಂ ಸ ಹರಿರ್ವಿಭುಃ।
ತತಃ ಸ ತಂ ಸಮುದ್ಧೂತಂ ಭೂಮಿಪಾಲೋ ಮಹಾನ್ ವಸುಃ।
ಪ್ರಸಾದಯಾಮಾಸ ಮುನಿಂ ಸದಸ್ಯಾಸ್ತೇ ಚ ಸರ್ವಶಃ॥
ನ ಸ ಶಕ್ಯಸ್ತ್ವಯಾದ್ರಷ್ಟುಮಸ್ಮಾಭಿರ್ವಾ ಬೃಹಸ್ಪತೇ।
ಯಸ್ಯ ಪ್ರಸಾದಂ ಕುರುತೇ ಸ ವೈ ತಂ ದ್ರಷ್ಟುಮರ್ಹತಿ॥ – ೧೬೮/೧೩,೧೫,೧೬,೧೮

೧ ಏಕಾಂತಿನಸ್ತೇ ಪುರುಷಾಃ ಶ್ವೇತದ್ವೀಪನಿವಾಸಿನಃ।
ಗಚ್ಛಧ್ವಂ ತತ್ರ ಮುನಯಸ್ತತ್ರಾತ್ಮಾ ಮೇ ಪ್ರಕಾಶಿತಃ॥ – ೧೬೮/೨೬

೨ ಜಿತಂತೇ ಪುಂಡರೀಕಾಕ್ಷ ನಮಸ್ತೇ ವಿಶ್ವಭಾವನ।

ನಮಗೆ ಕೇಳಿಸಿತು. ಆ ಹೊತ್ತಿಗೆ ಸುಗಂಧಪೂರ್ಣವಾದ ಗಾಳಿ ಬೀಸಿತು. ಅಲ್ಲಿದ್ದವರು ತ್ರಿಕರಣಗಳಿಂದ, ಪಂಚರಾತ್ರವಿಧಿಯಿಂದ ಹರಿಯನ್ನು ಭಜಿಸುತ್ತಿರುವಾಗ ಅಲ್ಲಿನ ಶಬ್ದವು ಆ ಸ್ಥಳದಲ್ಲಿ ಶ್ರೀಹರಿಯ ಆಗಮನವನ್ನು ಸೂಚಿಸಿತು. ಆದರೆ ನಮಗೆ ಮಾತ್ರ ಕಾಣಲಿಲ್ಲ, ನಾವು ತುಂಬಾ ಚಿಂತಿತರಾದೆವು. ಅಲ್ಲಿ ಸಾವಿರಾರು ಜನರು ಇದ್ದರೂ, ನಮ್ಮನ್ನು ಯಾರೂ ಕಣ್ಣೆತ್ತಿ ನೋಡಲಿಲ್ಲ, ಮನಸಾರೆ ನೆನೆಯಲಿಲ್ಲ, ಸತ್ಕಾರ ಮಾಡಲಿಲ್ಲ. ಅವರೆಲ್ಲ ಏಕಾಗ್ರಮನಸ್ಸಿನಿಂದ ಭಗವಂತನನ್ನು ಧ್ಯಾನಿಸುತ್ತಿದ್ದರು.

ಅಷ್ಟರಲ್ಲಿ ನಮಗೊಂದು ಅಶರೀರವಾಣಿ ಕೇಳಿಸಿತು. 'ಎಲೈ ಪುರುಷರೇ! ಇಂದ್ರಿಯಗಳೆಲ್ಲವನ್ನು ಗೆದ್ದ ಶ್ವೇತ ಪುರುಷರನ್ನು ನೋಡಿದಿರಲ್ಲ! ಅವರೇ ನಾರಾಯಣನನ್ನು ನೋಡಲು ಅರ್ಹರು. ಇವರ ದರ್ಶನದಿಂದಲೇ ನೀವೂ ಆ ದೇವಾದಿದೇವನನ್ನು ನೋಡಿದಂತಾಯಿತು. ನೀವಿನ್ನು ವಾಪಸು ಹೋಗಿ. ಭಕ್ತನಲ್ಲದವನಿಗೆ ಅವನ ದರ್ಶನ ಆಗದು[೧].

ಮುಂದೆ ತ್ರೇತಾಯುಗದಲ್ಲಿ ವೈವಸ್ವತಮನ್ವಂತರದಲ್ಲಿ ಲೋಕಕ್ಕೆ ಒದಗುವ ಆಪತ್ಪರಿಹಾರಕ್ಕಾಗಿ ನೀವು ದೇವತೆಳಿಗೆ ಸಹಾಯ ಮಾಡಿರಿ. ಈ ಮಾತನ್ನು ಕೇಳಿಸಿಕೊಂಡು ನಮ್ಮ ಸ್ಥಳಕ್ಕೆ ಬಂದೆವು.

ಹೀಗೆ ನಾವು ಮಹಾತಪಸ್ಸನ್ನು ಮಾಡಿ ಹವ್ಯಕವ್ಯಗಳನ್ನು ಚೆನ್ನಾಗಿ ಆಚರಿಸಿದರೂ ದೇವರ ಸಾಕ್ಷಾತ್ ದರ್ಶನವಾಗಲಿಲ್ಲ. ಹಾಗಿರುವಾಗ ನೀನು ಹೇಗೆ ನೋಡಬಲ್ಲೆ?[೨] ನಾರಾಯಣನು 'ಮಹದ್ಭೂತ' ಸಮಸ್ತ ಪ್ರಾಣಿಗಳಿಂದ ಉತ್ತಮ. ಅವನೇ ಸೃಷ್ಟಿಕರ್ತ. ಹವ್ಯಕವ್ಯಗಳ ಫಲಗಳನ್ನು (ಸಾರವನ್ನು) ಸ್ವೀಕರಿಸುವವನು ಅವನೇ.

ಹೀಗೆ ಏಕತ, ದ್ವಿತ, ತ್ರಿತ ಇವರ ಹಾಗೂ ಎಲ್ಲ ಸದಸ್ಯರ ಮಾತುಗಳಿಂದ ಬೃಹಸ್ಪತಿಯ ಕೋಪ ಶಾಂತವಾಯಿತು. ನಂತರ ಅವರು ವಿಧ್ಯುಕ್ತರಾಗಿ ದೇವತೆಗಳನ್ನೆಲ್ಲ ಆರಾಧಿಸಿ ಯಜ್ಞವನ್ನು ಸಮಾಪ್ತಿಗೊಳಿಸಿದರು.

ಹೀಗೆ ಯಜ್ಞಸಮಾಪ್ತಿಗೊಳಿಸಿದ ರಾಜ ಉಪರಿಚರವಸು ಪ್ರಜೆಗಳನ್ನು ಚೆನ್ನಾಗಿ ಪಾಲಿಸಿದನು. ಸ್ವರ್ಗಕ್ಕೆ ಹೋಗಿದ್ದ ಅವನು ಬ್ರಹ್ಮಶಾಪದಿಂದ ಮತ್ತೆ ಭೂಲೋಕಕ್ಕೆ ಬಂದನು. ದಾರಿಯಲ್ಲಿಯೇ

---

ನಮಸ್ತೇಸ್ತು ಹೃಷೀಕೇಶ ಮಹಾಪುರುಷಪೂರ್ವಜ ॥

೧ ದೃಷ್ಟಾವಃ ಪುರುಷಾಃ ಶ್ವೇತಾಃ ಸರ್ವೇಂದ್ರಿಯವಿವರ್ಜಿತಾಃ ।
ದೃಷ್ಟೋ ಭವತಿ ದೇವೇಶ ಏಭಿರ್ದೃಷ್ಟೈರ್ದ್ವಿಜೋತ್ತಮಾಃ ॥ – ೧೬೮/೪೭

೨ ಏವಂ ಸುತಪಸಾ ಚೈವ ಹವ್ಯಕವ್ಯೈಸ್ತಥೈವ ಚ ।
ದೇವೋಽಸ್ಮಾಭಿರ್ನ ದೃಷ್ಟಃ ಸ ಕಥಂ ತ್ವಂ ದ್ರಷ್ಟುಮರ್ಹಸಿ ॥
ನಾರಾಯಣೋ ಮಹದ್ಭೂತಂ ವಿಶ್ವಸೃಕ್ ಹವ್ಯಕವ್ಯಭುಕ್ ॥ – ೧೬೮/೫೩

(ಮಧ್ಯದಲ್ಲಿ) ಧರ್ಮವತ್ಸಲನಾದ ರಾಜನು ನಾರಾಯಣನ ಧ್ಯಾನ ಮಾಡುತ್ತಾ ಮತ್ತೆ ಮೇಲೆ ಹೋಗಿ ಬ್ರಹ್ಮಲೋಕದ ಮೂಲಕ ಪರಮಗತಿ (ನಾರಾಯಣಲೋಕ)ಯನ್ನು ನಿಷ್ಠಾವಂತರು ಹೊಂದುವ ಗತಿಯನ್ನೇ ಹೊಂದಿದನು ಎಂದು ಭೀಷ್ಮರು ಧರ್ಮರಾಜನಿಗೆ ಹೇಳಿದರು.

ಧರ್ಮರಾಜನು ಭೀಷ್ಮರನ್ನು 'ಪಿತಾಮಹರೇ! ಮಹಾನಾರಾಯಣ ಭಕ್ತನಾದ ಉಪರಿಚರ ವಸುವಿಗೆ ಬ್ರಹ್ಮಶಾಪ ಏಕೆ ಬಂತು ತಿಳಿಸಿರಿ' ಎಂದ. ಅದಕ್ಕೆ ಭೀಷ್ಮರು ಈ ವಿಷಯದಲ್ಲಿ ಹಿಂದೆ ನಡೆದ ಋಷಿಗಳಿಗೂ, ದೇವತೆಗಳಿಗೂ ನಡೆದ ಸಂಭಾಷಣೆಯ ಇತಿಹಾಸವನ್ನು ಧರ್ಮರಾಜನಿಗೆ ಹೇಳುತ್ತಾರೆ.

ಹಿಂದೆ ಯಜ್ಞ ನಡೆದ ಪ್ರಸಂಗವೊಂದರಲ್ಲಿ ದೇವತೆಗಳು ಯಜ್ಞದಲ್ಲಿ ಅಜದಿಂದಲೇ (ಹೋತ) ಮಾಡಬೇಕೇ ಹೊರತು, ಬೇರೆ ಯಾವ ಪಶುವೂ ಅಲ್ಲವೆಂದು ಬ್ರಾಹ್ಮಣರಿಗೆ ಹೇಳಿದರು. ಆದರೆ ಬ್ರಾಹ್ಮಣರು ಬೀಜಗಳ ಮೂಲಕ ಪುರೋಡಾಶವನ್ನು ಸಿದ್ಧಪಡಿಸಿ ಯಾಗ ಮಾಡಬೇಕು. ಅಜವೆಂಬುದು ಬೀಜಕ್ಕಿರುವ ಸಂಜ್ಞೆ, ಆದ್ದರಿಂದ ಅಜನ ವಧೆ ಯಜ್ಞದಲ್ಲಿ ಕೂಡದುಎಂದರು. ಕೃತಯುಗ, ಸತ್ಯಯುಗದಲ್ಲಿಪಶುವಧೆಉಚಿತವಲ್ಲಎಂದರು. ದೇವತೆಗಳು ಇದನ್ನು ಒಪ್ಪಲಿಲ್ಲ. ಅಷ್ಟರಲ್ಲಿ ಆಕಾಶಮಾರ್ಗದಲ್ಲಿ ಉಪರಿಚರವಸು ಸಂಚರಿಸುತ್ತಾ ಬಂದಾಗ, ಋಷಿಗಳು ಈ ರಾಜನು ಯಾಜ್ಞಿಕ, ಯಜ್ಞಶೀಲ, ಸರ್ವಭೂತಹಿತರತ, ಪಕ್ಷಪಾತವಿಲ್ಲದೆ ಈ ಪ್ರಶ್ನೆಗೆ ಉತ್ತರಿಸುತ್ತಾನೆ ಎಂದು ದೇವತೆಗಳಿಗೆ ಹೋಗಿ, ಪರಸ್ಪರ ಒಪ್ಪಿ ದೇವತೆಗಳು ಮತ್ತು ಋಷಿಗಳು ರಾಜನನ್ನು ಯಾಗದಲ್ಲಿ ಅಜವನ್ನು ಹವಿಸ್ಸನ್ನಾಗಿ ಮಾಡಬೇಕೋ ಅಥವಾ ಧಾನ್ಯವನ್ನು ಮಾಡಬೇಕೋ? ಅಜಶಬ್ದದಿಂದ ವಾಚ್ಯವಾದುದು ಪ್ರಾಣಿಯೋ (ಹೋತ) ಅಥವಾ ಧಾನ್ಯವೋ ಎಂದು ದೇವತೆಗಳು, ಋಷಿಗಳು ಕೇಳಿದರು.

ಆಗ ರಾಜನು ಕೈಮುಗಿದು ಋಷಿಗಳಿಗೆ ನಿಮ್ಮ ಅಭಿಪ್ರಾಯವೇನು? ಅಜ ಎಂದರೆ ಆಡು ಎಂಬುದು ಯಾರ ಅಭಿಪ್ರಾಯವೆಂದಾಗ ಅವರು (ಋಷಿಗಳು) ದೇವತೆಗಳ ಪ್ರಕಾರ ಅಜ ಎಂದರೆ ಆಡು, ನಮ್ಮ ಪ್ರಕಾರ ಧಾನ್ಯವಿಶೇಷ ಎಂದರು. ರಾಜನು ದೇವತೆಗಳ ಅಭಿಪ್ರಾಯ ತಿಳಿದು 'ಅಜವೆಂದರೆ ಹೋತ, ಮೇಕೆ ಎಂದು ಅರ್ಥವಿಟ್ಟುಕೊಂಡು ಅದನ್ನೇ ಹೇಳಿಬಿಟ್ಟ ಈ ಮಾತನ್ನು ಕೇಳಿದ ಋಷಿಗಳು ಕುಪಿತರಾಗಿ ನೀನು ತಿಳಿದೂ, ತಿಳಿದೂ ದೇವಪಕ್ಷಪಾತಿಯಾಗಿ ಉತ್ತರಿಸಿದ್ದೀ. ಆದ್ದರಿಂದ ನೀನು ಸ್ವರ್ಗಚ್ಯುತನಾಗು. ಆಕಾಶದಲ್ಲಿ ಸಂಚಾರಶಕ್ತಿ ಹೋಗಲಿ. ನಮ್ಮ ಶಾಪದಿಂದ ಭೂಮಿಯನ್ನು ಸೀಳಿಕೊಂಡು ಪಾತಾಳಕ್ಕೆ ಹೋಗುವೆ ಎಂದು ಶಾಪ ನೀಡಿದರು.

ಹೀಗೆ ಋಷಿಗಳ ಶಾಪದಿಂದ ಕೂಡಲೇ ರಾಜನು ಅಂತರಿಕ್ಷದಿಂದ ಕೆಳಗೆ ಬಿದ್ದ. ಭೂಮಿಯಲ್ಲಿನ ಬಿಲಪ್ರವೇಶಿಸಿ ಪಾತಾಳಕ್ಕೆ ಹೋದನು. ಅದಕ್ಕೆ ಶಾಪಗ್ರಸ್ತನಾದರೂ ನಾರಾಯಣನ ಆಜ್ಞೆಯಿಂದ ಆತನ ಸ್ಮರಣೆ (ದೇವರ) ಹೋಗಲಿಲ್ಲ.

ನಮಗೆ ಕೇಳಿಸಿತು. ಆ ಹೊತ್ತಿಗೆ ಸುಗಂಧಪೂರ್ಣವಾದ ಗಾಳಿ ಬೀಸಿತು. ಅಲ್ಲಿದ್ದವರು ತ್ರಿಕರಣಗಳಿಂದ, ಪಂಚರಾತ್ರವಿಧಿಯಿಂದ ಹರಿಯನ್ನು ಭಜಿಸುತ್ತಿರುವಾಗ ಅಲ್ಲಿನ ಶಬ್ದವು ಆ ಸ್ಥಳದಲ್ಲಿ ಶ್ರೀಹರಿಯ ಆಗಮನವನ್ನು ಸೂಚಿಸಿತು. ಆದರೆ ನಮಗೆ ಮಾತ್ರ ಕಾಣಲಿಲ್ಲ. ನಾವು ತುಂಬಾ ಚಿಂತಿತರಾದೆವು. ಅಲ್ಲಿ ಸಾವಿರಾರು ಜನರು ಇದ್ದರೂ, ನಮ್ಮನ್ನು ಯಾರೂ ಕಣ್ಣೆತ್ತಿ ನೋಡಲಿಲ್ಲ. ಮನಸಾರೆ ನೆನೆಯಲಿಲ್ಲ. ಸತ್ಕಾರ ಮಾಡಲಿಲ್ಲ. ಅವರೆಲ್ಲ ಏಕಾಗ್ರಮನಸ್ಸಿನಿಂದ ಭಗವಂತನನ್ನು ಧ್ಯಾನಿಸುತ್ತಿದ್ದರು.

ಅಷ್ಟರಲ್ಲಿ ನಮಗೊಂದು ಅಶರೀರವಾಣಿ ಕೇಳಿಸಿತು. 'ಎಲೈ ಪುರುಷರೇ! ಇಂದ್ರಿಯಗಳೆಲ್ಲವನ್ನು ಗೆದ್ದ ಶ್ವೇತ ಪುರುಷರನ್ನು ನೋಡಿದಿರಲ್ಲ! ಅವರೇ ನಾರಾಯಣನನ್ನು ನೋಡಲು ಅರ್ಹರು. ಇವರ ದರ್ಶನದಿಂದಲೇ ನೀವೂ ಆ ದೇವಾದಿದೇವನನ್ನು ನೋಡಿದಂತಾಯಿತು. ನೀವಿನ್ನು ವಾಪಸು ಹೋಗಿ. ಭಕ್ತನಲ್ಲದವನಿಗೆ ಅವನ ದರ್ಶನ ಆಗದು[1].

ಮುಂದೆ ತ್ರೇತಾಯುಗದಲ್ಲಿ ವೈವಸ್ವತಮನ್ವಂತರದಲ್ಲಿ ಲೋಕಕ್ಕೆ ಒದಗುವ ಆಪತ್ಪರಿಹಾರಕ್ಕಾಗಿ ನೀವು ದೇವತಳಿಗೆ ಸಹಾಯ ಮಾಡಿರಿ. ಈ ಮಾತನ್ನು ಕೇಳಿಸಿಕೊಂಡು ನಮ್ಮ ಸ್ಥಳಕ್ಕೆ ಬಂದೆವು.

ಹೀಗೆ ನಾವು ಮಹಾತಪಸ್ಸನ್ನು ಮಾಡಿ ಹವ್ಯಕವ್ಯಗಳನ್ನು ಚೆನ್ನಾಗಿ ಆಚರಿಸಿದರೂ ದೇವರ ಸಾಕ್ಷಾತ್ ದರ್ಶನವಾಗಲಿಲ್ಲ. ಹಾಗಿರುವಾಗ ನೀನು ಹೇಗೆ ನೋಡಬಲ್ಲೆ?[2] ನಾರಾಯಣನು 'ಮಹದ್ಭೂತ' ಸಮಸ್ತ ಪ್ರಾಣಿಗಳಿಂದ ಉತ್ತಮ. ಅವನೇ ಸೃಷ್ಟಿಕರ್ತ. ಹವ್ಯಕವ್ಯಗಳ ಫಲಗಳನ್ನು (ಸಾರವನ್ನು) ಸ್ವೀಕರಿಸುವವನು ಅವನೇ.

ಹೀಗೆ ಏಕತ, ದ್ವಿತ, ತ್ರಿತ ಇವರ ಹಾಗೂ ಎಲ್ಲ ಸದಸ್ಯರ ಮಾತುಗಳಿಂದ ಬೃಹಸ್ಪತಿಯ ಕೋಪ ಶಾಂತವಾಯಿತು. ನಂತರ ಅವರು ವಿಧ್ಯುಕ್ತರಾಗಿ ದೇವತೆಗಳನ್ನೆಲ್ಲ ಆರಾಧಿಸಿ ಯಜ್ಞವನ್ನು ಸಮಾಪ್ತಿಗೊಳಿಸಿದರು.

ಹೀಗೆ ಯಜ್ಞಸಮಾಪ್ತಿಗೊಳಿಸಿದ ರಾಜ ಉಪರಿಚರವಸು ಪ್ರಜೆಗಳನ್ನು ಚೆನ್ನಾಗಿ ಪಾಲಿಸಿದನು. ಸ್ವರ್ಗಕ್ಕೆ ಹೋಗಿದ್ದ ಅವನು ಬ್ರಹ್ಮಶಾಪದಿಂದ ಮತ್ತೆ ಭೂಲೋಕಕ್ಕೆ ಬಂದನು. ದಾರಿಯಲ್ಲಿಯೇ

---

ನಮಸ್ತೇಸ್ತು ಹೃಷೀಕೇಶ ಮಹಾಪುರುಷಪೂರ್ವಜ ॥

೧ ದೃಷ್ಟಾ ವಃ ಪುರುಷಾಃ ಶ್ವೇತಾಃ ಸರ್ವೇಂದ್ರಿಯವಿವರ್ಜಿತಾಃ ।
ದೃಷ್ಟೋ ಭವತಿ ದೇವೇಶ ಏಭಿರ್ದೃಷ್ಟೈರ್ದ್ವಿಜೋತ್ತಮಾಃ ॥ – ೧೬೮/೪೭

೨ ಏವಂ ಸುತಪಸಾ ಚೈವ ಹವ್ಯಕವ್ಯೈಸ್ತಥೈವ ಚ ।
ದೇವೋಽಸ್ಮಾಭಿರ್ನ ದೃಷ್ಟಃ ಸ ಕಥಂ ತ್ವಂ ದ್ರಷ್ಟುಮರ್ಹಸಿ ॥
ನಾರಾಯಣೋ ಮಹದ್ಭೂತಂ ವಿಶ್ವಸೃಕ್ ಹವ್ಯಕವ್ಯಭುಕ್ ॥ – ೧೬೮/೫೩

(ಮಧ್ಯದಲ್ಲಿ) ಧರ್ಮವತ್ಸಲನಾದ ರಾಜನು ನಾರಾಯಣನ ಧ್ಯಾನ ಮಾಡುತ್ತಾ ಮತ್ತೆ ಮೇಲೆ ಹೋಗಿ ಬ್ರಹ್ಮಲೋಕದ ಮೂಲಕ ಪರಮಗತಿ (ನಾರಾಯಣಲೋಕ)ಯನ್ನು ನಿಷ್ಠಾವಂತರು ಹೊಂದುವ ಗತಿಯನ್ನೇ ಹೊಂದಿದನು ಎಂದು ಭೀಷ್ಮರು ಧರ್ಮರಾಜನಿಗೆ ಹೇಳಿದರು.

ಧರ್ಮರಾಜನು ಭೀಷ್ಮರನ್ನು 'ಪಿತಾಮಹರೇ! ಮಹಾನಾರಾಯಣ ಭಕ್ತನಾದ ಉಪರಿಚರ ವಸುವಿಗೆ ಬ್ರಹ್ಮಶಾಪ ಏಕೆ ಬಂತು ತಿಳಿಸಿರಿ' ಎಂದ. ಅದಕ್ಕೆ ಭೀಷ್ಮರು ಈ ವಿಷಯದಲ್ಲಿ ಹಿಂದೆ ನಡೆದ ಋಷಿಗಳಿಗೂ, ದೇವತೆಗಳಿಗೂ ನಡೆದ ಸಂಭಾಷಣೆಯ ಇತಿಹಾಸವನ್ನು ಧರ್ಮರಾಜನಿಗೆ ಹೇಳುತ್ತಾರೆ.

ಹಿಂದೆ ಯಜ್ಞ ನಡೆದ ಪ್ರಸಂಗವೊಂದರಲ್ಲಿ ದೇವತೆಗಳು ಯಜ್ಞದಲ್ಲಿ ಅಜದಿಂದಲೇ (ಹೋತ) ಮಾಡಬೇಕೇ ಹೊರತು, ಬೇರೆ ಯಾವ ಪಶುವೂ ಅಲ್ಲವೆಂದು ಬ್ರಾಹ್ಮಣರಿಗೆ ಹೇಳಿದರು. ಆದರೆ ಬ್ರಾಹ್ಮಣರು ಬೀಜಗಳ ಮೂಲಕ ಪುರೋಡಾಶವನ್ನು ಸಿದ್ಧಪಡಿಸಿ ಯಾಗ ಮಾಡಬೇಕು. ಅಜವೆಂಬುದು ಬೀಜಕ್ಕಿರುವ ಸಂಜ್ಞೆ. ಆದ್ದರಿಂದ ಅಜನ ವಧೆ ಯಜ್ಞದಲ್ಲಿ ಕೂಡದುಎಂದರು. ಕೃತಯುಗ, ಸತ್ಯಯುಗದಲ್ಲಿಪಶುವಧೆಉಚಿತವಲ್ಲಎಂದರು. ದೇವತೆಗಳು ಇದನ್ನು ಒಪ್ಪಲಿಲ್ಲ. ಅಷ್ಟರಲ್ಲಿ ಆಕಾಶಮಾರ್ಗದಲ್ಲಿ ಉಪರಿಚರವಸು ಸಂಚರಿಸುತ್ತಾ ಬಂದಾಗ, ಋಷಿಗಳು ಈ ರಾಜನು ಯಾಜ್ಞಿಕ, ಯಜ್ಞಶೀಲ, ಸರ್ವಭೂತಹಿತರತ, ಪಕ್ಷಪಾತವಿಲ್ಲದೆ ಈ ಪ್ರಶ್ನೆಗೆ ಉತ್ತರಿಸುತ್ತಾನೆ ಎಂದು ದೇವತೆಗಳಿಗೆ ಹೋಗಿ, ಪರಸ್ಪರ ಒಪ್ಪಿ ದೇವತೆಗಳು ಮತ್ತು ಋಷಿಗಳು ರಾಜನನ್ನು ಯಾಗದಲ್ಲಿ ಅಜವನ್ನು ಹವಿಸ್ಸನ್ನಾಗಿ ಮಾಡಬೇಕೋ ಅಥವಾ ಧಾನ್ಯವನ್ನು ಮಾಡಬೇಕೋ? ಅಜಶಬ್ದದಿಂದ ವಾಚ್ಯವಾದುದು ಪ್ರಾಣಿಯೋ (ಹೋತ) ಅಥವಾ ಧಾನ್ಯವೋ ಎಂದು ದೇವತೆಗಳು, ಋಷಿಗಳು ಕೇಳಿದರು.

ಆಗ ರಾಜನು ಕೈಮುಗಿದು ಋಷಿಗಳಿಗೆ ನಿಮ್ಮ ಅಭಿಪ್ರಾಯವೇನು? ಅಜ ಎಂದರೆ ಆಡು ಎಂಬುದು ಯಾರ ಅಭಿಪ್ರಾಯವೆಂದಾಗ ಅವರು (ಋಷಿಗಳು) ದೇವತೆಗಳ ಪ್ರಕಾರ ಅಜ ಎಂದರೆ ಆಡು, ನಮ್ಮ ಪ್ರಕಾರ ಧಾನ್ಯವಿಶೇಷ ಎಂದರು. ರಾಜನು ದೇವತೆಗಳ ಅಭಿಪ್ರಾಯ ತಿಳಿದು 'ಅಜವೆಂದರೆ ಹೋತ, ಮೇಕೆ ಎಂದು ಅರ್ಥವಿಟ್ಟುಕೊಂಡು ಅದನ್ನೇ ಹೇಳಿಬಿಟ್ಟ. ಈ ಮಾತನ್ನು ಕೇಳಿದ ಋಷಿಗಳು ಕುಪಿತರಾಗಿ ನೀನು ತಿಳಿದೂ, ತಿಳಿದೂ ದೇವಪಕ್ಷಪಾತಿಯಾಗಿ ಉತ್ತರಿಸಿದ್ದೀ. ಆದ್ದರಿಂದ ನೀನು ಸ್ವರ್ಗಚ್ಯುತನಾಗು. ಆಕಾಶದಲ್ಲಿ ಸಂಚಾರಶಕ್ತಿ ಹೋಗಲಿ. ನಮ್ಮ ಶಾಪದಿಂದ ಭೂಮಿಯನ್ನು ಸೀಳಿಕೊಂಡು ಪಾತಾಳಕ್ಕೆ ಹೋಗುವೆ ಎಂದು ಶಾಪ ನೀಡಿದರು.

ಹೀಗೆ ಋಷಿಗಳ ಶಾಪದಿಂದ ಕೂಡಲೇ ರಾಜನು ಅಂತರಿಕ್ಷದಿಂದ ಕೆಳಗೆ ಬಿದ್ದ. ಭೂಮಿಯಲ್ಲಿನ ಬಿಲಪ್ರವೇಶಿಸಿ ಪಾತಾಳಕ್ಕೆ ಹೋದನು. ಅದಕ್ಕೆ ಶಾಪಗ್ರಸ್ತನಾದರೂ ನಾರಾಯಣನ ಆಜ್ಞೆಯಿಂದ ಆತನ ಸ್ಮರಣೆ (ದೇವರ) ಹೋಗಲಿಲ್ಲ.

ತಮ್ಮಿಂದಾಗಿ ರಾಜನಿಗೆ ಶಾಪ ಬಂದಿದಕ್ಕೆ ದೇವತೆಗಳು ರಾಜನಿಗೆ ಪಾತಾಳಕ್ಕೆ ಹೋಗುವ ಮುನ್ನವೇ ಹೀಗೆ ಅನುಗ್ರಹಿಸಿದ್ದರು. 'ರಾಜನ್! ನಿನಗೆ ಬ್ರಾಹ್ಮಣ ಶಾಪವಿದ್ದರೂ, ಅವರು ಮಾಡುವ ಯಜ್ಞದಲ್ಲಿ ಅಗ್ನಿಗೆ ಅರ್ಪಿಸುವ 'ವಸೋರ್ಧಾರಾ' ಎಂಬ ಆಜ್ಯಧಾರೆಯನ್ನು ನಿನಗೆ ದೊರಕುವಂತೆಮಾಡಲಿ. ನಮ್ಮಧ್ಯಾನದಿಂದನಿನಗೆ ಇದುಲಭಿಸುತ್ತದೆ. ಪಾತಾಳದಲ್ಲಿರುವವರೆಗೆ ನಿನಗೆ ಹಸಿವು, ನೀರಡಿಕೆಗಳ ಬಾಧೆ ಇರದು. 'ವಸೋರ್ಧಾರಾಪಾನ' ದಿಂದ ನಿನ್ನ ತೇಜಸ್ಸು ಹೆಚ್ಚುತ್ತದೆ. ನಮ್ಮ ವರದಿಂದ ಪ್ರೀತನಾದ ನಾರಾಯಣನು ನಿನ್ನನ್ನು ಶಾಪದಿಂದ ಉದ್ಧರಿಸಿ ಬ್ರಹ್ಮಲೋಕಕ್ಕೆ ಕರೆದೊಯ್ಯುತ್ತಾನೆ ಎಂದು ಅನುಗ್ರಹಿಸಿದ್ದರು.'

ನಂತರ ದೇವತೆಗಳು, ಋಷಿಗಳು ತಮ್ಮ ಸ್ಥಾನಗಳಿಗೆ ತೆರಳಿದರು. ರಾಜನು ಯಾವಾಗಲೂ ವಿಘ್ನಪರಿಹಾರಕ್ಕಾಗಿ ವಿಷ್ವಕ್ಸೇನನ ಪೂಜೆ ಮಾಡಿದ. ನಿರಂತರ ನಾರಾಯಣನ ಮುಖದಿಂದ ಪ್ರಕಟವಾದ, ಜಪಿಸಲು ಯೋಗ್ಯವಾದ ಮಂತ್ರವನ್ನು ಸರ್ವದಾ ಜಪ ಮಾಡುತ್ತಿದ್ದ. ವಸುಮಹಾರಾಜ ಪಾತಾಳದಲ್ಲಿದ್ದರೂ ದಿನದ ಐದೂ ಕಾಲಗಳಲ್ಲಿಯೂ ಪಂಚಮಹಾಯಜ್ಞದಿಂದ ಹರಿಯನ್ನು ಆರಾದಿಸುತ್ತಿದ್ದ. ಇದರಿಂದ ಸುಪ್ರೀತನಾದ ನಾರಾಯಣನು ಗರುಡನನ್ನು ಕರೆದು ಬ್ರಾಹ್ಮಣ ಶಾಪಗ್ರಸ್ತನಾದ ರಾಜನನ್ನು ಮೊದಲಿನಂತೆ ಆಕಾಶದಲ್ಲಿ ಸಂಚರಿಸುವಂತೆ ಮಾಡು ಎಂದು ಕಳಿಸಿದನು. ಅದರಂತೆ ಗರುಡನು ರಾಜನ ಬಳಿಗೆ ಬಂದು ಆತನನ್ನು ಎತ್ತಿಕೊಂಡು ಆಕಾಶದಲ್ಲಿ ಬಿಟ್ಟನು. ಆ ಹೊತ್ತಿನಿಂದ (ಮುಹೂರ್ತದಿಂದ) ವಸುವು ಮತ್ತೆ ಉಪರಿಚರನಾದನು. ಹೀಗೆ ಉಪರಿಚರವಸು ನಿರಂತರ ನಾರಾಯಣನ ಧ್ಯಾನ ಮಾಡಿದ ಫಲವಾಗಿ ಬ್ರಾಹ್ಮಣಶಾಪದಿಂದ ಮುಕ್ತನಾಗಿ ಬ್ರಹ್ಮಲೋಕವನ್ನು ಹೊಂದಿದನು.

ಹೀಗೆ ಭೀಷ್ಮರು ಧರ್ಮರಾಜನಿಗೆ ಉಪರಿಚರವಸು ಬ್ರಾಹ್ಮಣಶಾಪ ಪಡೆದುದು, ಅದರಿಂದ ವಿಮೋಚನೆಯನ್ನು ನಾರಾಯಣನಿಂದ ಹೊಂದಿದ ಇತಿಹಾಸವನ್ನು ನಿರೂಪಿಸಿದರು.

## ಸಂದೇಶಗಳು – ವಿವರಣೆಗಳು

೧. ಆದಿಪರ್ವದ ಅಧ್ಯಾಯ ೫೭ರಲ್ಲಿ (ಬೇರೆ ಪ್ರಕಾಶನಗಳ ಪ್ರಕಾರ ೬೩, ೬೪ ರಲ್ಲಿ) ಉಪರಿಚರವಸುವಿನ ಚರಿತ್ರೆ ಬಂದಿದೆ. ಇಲ್ಲಿ ಬಂದಿರುವುದು ಅದರ ಮುಂದಿನ ಭಾಗ. ಉಪರಿಚರವಸುವಿನ ಉತ್ತರಜೀವನ.

೨. ನಾರಾಯಣನ ಭಕ್ತಿಯ ಫಲವಾಗಿ ಇಂದ್ರದೇವರ ಆಸನ, ಶಯನದಲ್ಲಿ ಭಾಗಿಯಾಗಿದ್ದ. ನಾರಾಯಣಭಕ್ತಿಯ ಫಲ ಗೊತ್ತಾಗುತ್ತದೆ. ಇದಕ್ಕೆ ಕಾರಣ ಆತನ ಪಂಚರಾತ್ರಾಗಮ ವಿಧಿ-ಗಳ ಅನುಷ್ಠಾನ. ಪಂಚರಾತ್ರಾಗಮ ಪರಮಪ್ರಮಾಣವೆಂದು ಇದರಿಂದ ತಿಳಿಯುತ್ತದೆ. ಇಂತಹ ಪ್ರಾಮಾಣ್ಯವನ್ನು ಅದ್ವೈತಿಗಳು ನಿರಾಕರಿಸುತ್ತಾರೆ ಎಂಬುದು ನಿಜಕ್ಕೂ ಸೋಜಿಗವೇ ಸರಿ (ಅದ್ವೈತ ಬ್ರ.ಸೂ.ಭಾ.-೨/೨/೪೨). ಇದರ ವಿವರಣೆಗಾಗಿ ಸಂಬಂಧಪಟ್ಟ ಭಾಷ್ಯ-ಟೀಕಾದಿಗಳನ್ನು ನೋಡುವುದು(ರಾಜನಿಂದ).

೩. ಭಗವದ್ಭಕ್ತಿಯು ಹೆಚ್ಚಾದಂತೆ ಭಗವದನುಗ್ರಹವೂ ಹೆಚ್ಚಾಗುತ್ತದೆ ಎನ್ನಲು ಉಪರಿಚರವಸುವೇ ಸಾಕ್ಷಿ.[೧] ಸ್ವಯಂ ಭಗವಂತನು ಬೃಹಸ್ಪತ್ಯಾಚಾರ್ಯರಂತಹ ಯಜ್ಞದ ಹೋತೃವಿಗೂ ದರ್ಶನ ಕೊಡದೆ, ಬಂದು ಹವಿರ್ಭಾಗವನ್ನು ಸ್ವೀಕರಿಸುತ್ತಾನೆ.

೪. ಭಗವಂತನು ತಾನು ಯಾರಿಗೆ ಒಲಿಯುತ್ತಾನೋ ಅವರಿಗೆ ದರ್ಶನ ಕೊಡುತ್ತಾನೆ. ಆಧಿಕಾರಿಕ ಜೀವರಿಗೆ ಮಾತ್ರ ದರ್ಶನಭಾಗ್ಯವೆನ್ನಲು ಉಪರಿಚರನೂ, ಅಧಿಕಾರವಿಲ್ಲದವರಿಗೆ ದರ್ಶನವಿಲ್ಲವೆನ್ನಲು ಏಕತ, ದ್ವಿತ, ತ್ರಿತ ಋಷಿಗಳೇ ಸಾಕ್ಷಿ.

೫. ಬೃಹಸ್ಪತಿಗಳು ದೇವರ ಮೇಲೇ ಕೋಪ ತೋರಿಸಿ, ತಾವು ಜಿತೇಂದ್ರಿಯರಲ್ಲವೆಂದು ಸಾಬೀತು ಮಾಡಿ, ಮತ್ತೆ ಋಷಿಮುನಿಗಳ, ಸದಸ್ಯರ, ರಾಜನ ಮಾತನ್ನು ಮನ್ನಿಸಿ ಕೋಪಶಮನ ಮಾಡಿಕೊಳ್ಳುತ್ತಾರೆ. ಕೆಲವು ವೇಳೆ ಕೋಪ ಬರುವುದು ಸಹಜ. ಅದನ್ನು ಯೋಗ್ಯರಿಂದ ಉಪದೇಶ ಪಡೆದು ಶಮನಗೊಳಿಸಿಕೊಳ್ಳಬೇಕೆನ್ನಲು ಬೃಹಸ್ಪತಿಗಳೇ ಸಾಕ್ಷಿ. ಇಲ್ಲಿ ಬೃಹಸ್ಪತಿಗಳಿಗಿಂತ ರಾಜ, ಆ ಸದಸ್ಯರು ಉತ್ತಮರೆಂಬ ಭ್ರಮೆಗೆ ತುತ್ತಾಗಬಾರದು. ರಾಜ, ಚಕ್ರವರ್ತಿ ಕಕ್ಷಾ ಆದರೆ ಬ್ರಾಹ್ಮಣನು ಋಷಿಗಳ ಕಕ್ಷೆ. ಬೃಹಸ್ಪತ್ಯಾಚಾರ್ಯರು ೧೦ನೇ ಕಕ್ಷೆಯಲ್ಲಿರುವವರು.

೬. ಉಪರಿಚರವಸು ತಾನು ಯಜ್ಞ ಮಾಡಿದಾಗ ಪಶುಗಳನ್ನು ಹಿಂಸಿಸದೆ, ಕೇವಲ ಧಾನ್ಯಗಳನ್ನು ಹವಿಸ್ಸಿಗಾಗಿ ಉಪಯೋಗಿಸಿದ್ದರೂ, ದೇವತೆಗಳು, ಋಷಿಗಳು ಕೇಳಿದಾಗ ತಾನು ಮಾಡಿದ್ದಕ್ಕೆ ವಿರುದ್ಧವಾಗಿ ಅಜ ಎಂದರೆ ಹೋತ ಎಂದು ಹೇಳಿ ಬ್ರಾಹ್ಮಣರ ಶಾಪಕ್ಕೆ ತುತ್ತಾದ. ದೇವಪಕ್ಷಪಾತ ಮಾಡಿ ಏಕೆ ಹೇಳಿದನೋ ಎಂಬುದು ಆಶ್ಚರ್ಯ. ಆದರೆ ಯಜ್ಞದಲ್ಲಿ ಪಶುಹಿಂಸೆ ವಿಹಿತವೆನ್ನುವುದು ವೇದವಿರುದ್ಧವಲ್ಲ. ಅಂತೂ ಬ್ರಾಹ್ಮಣರ ಶಾಪವೂ ಸತ್ಯವಾಯಿತು. ಅದು ಯಾರನ್ನೂ ಬಿಡದು.

೭. ಶಾಪಗ್ರಸ್ತನಾದರೂ ನಾರಾಯಣಾನುಗ್ರಹ ಆತನಿಗೆ ಯಾವಾಗಲೂ ಇತ್ತು. ಆದ್ದರಿಂದ ಸದಾ ಸ್ಮರಣಶೀಲನಾಗಿದ್ದ. ಜೊತೆಗೆ ದೇವತೆಗಳ ಅನುಗ್ರಹ. ಆದ್ದರಿಂದ ನಾರಾಯಣಾನುಗ್ರಹದಿಂದ ಮತ್ತೆ ಮೊದಲಿನಂತೆ ಅಂತರಿಕ್ಷಚರನಾದ. ಬ್ರಹ್ಮಲೋಕಕ್ಕೂ ಹೋದ.

ಹರಿಯನುಗ್ರಹದಿಂದ ಬ್ರಾಹ್ಮಣಶಾಪವನ್ನೂ ಸಹಿಸಿಕೊಂಡು ಸದ್ಗತಿ ಹೊಂದಬಹುದು ಇತ್ಯಾದಿ....

*****

---

೧ ಯಥಾ ಯಥಾ ವಿಷ್ಣುಪರಶ್ಚಿದಾತ್ಮಾ ತಥಾ ತಥಾ ಹ್ಯಸ್ಯಗತಿಃ ಪರತ್ರ। - ಮ.ತಾ.ನಿ.(೧೧/೧೭೧)

# ೧೨೪. ಹಯಗ್ರೀವದೇವರ ಕಥೆ

ಜನಮೇಜಯನು ವೈಶಂಪಾಯನರಿಗೆ ಕೇಳಿದ 'ಭಗವನ್! ತಮ್ಮಿಂದ ನಾನು ಭಗವಂತನ ವಿವಿಧ ಅವತಾರಗಳನ್ನು ಕೇಳಿದೆ. ಶ್ರೀಹರಿಯ ನರನಾರಾಯಣರೂಪದಿಂದ ಹಾಗೂ ವರಾಹರೂಪದಿಂದ ಸೃಷ್ಟಿ ಮಾಡಿದ ಪಿಂಡೋತ್ಪತ್ತಿಯ ಕಥೆಗಳನ್ನು ಕೇಳಿದ್ದೇನೆ. ಅಲ್ಲದೆ ಪ್ರವೃತ್ತಿ, ನಿವೃತ್ತಿ, ಧರ್ಮದ ವಿಷಯಗಳನ್ನು ಅದರ ವ್ಯವಸ್ಥೆಯನ್ನೂ ಕೇಳಿದ್ದೇನೆ. ಹಿಂದೆ ಹವ್ಯಕವ್ಯಗಳನ್ನು ಸ್ವೀಕರಿಸುವ ಹಯಗ್ರೀವಾವತಾರದ ಬಗ್ಗೆ ಹೇಳಿದ್ದಿರಿ. ಚತುರ್ಮುಖ ಬ್ರಹ್ಮನು ಆತನನ್ನು ಕಂಡದ್ದು ಹೇಳಲಾಗಿದೆ. ನಂತರ ಬ್ರಹ್ಮನು ಏನು ಮಾಡಿದ? ಇದನ್ನು ಹೇಳಿ ನನ್ನನ್ನು ಪವಿತ್ರನನ್ನಾಗಿ ಮಾಡಿರಿ' ಎಂದನು.

ಅದಕ್ಕೆ ವೈಶಂಪಾಯನರು ವೇದಸಮ್ಮತವಾದ ವ್ಯಾಸರು ಧರ್ಮರಾಜನಿಗೆ ಹೇಳಿದ ಈ ಕಥೆಯನ್ನೇ ನಿನಗೆ ಹೇಳುತ್ತೇನೆ.

ವ್ಯಾಸರು ಧರ್ಮರಾಜನಿಗೆ 'ಜಗತ್ಸೃಷ್ಟಿಕರ್ತನಾದ ನಾರಾಯಣನೇ ಸಮಸ್ತಭೂತಗಳ ಅಂತರ್ಯಾಮಿ. ಅವನು ಸಗುಣ ಹಾಗೂ ನಿರ್ಗುಣನೂ ಹೌದು (ವಿವಕ್ಷಾಭೇದದಿಂದ). ಭೂತಗಳ ಪ್ರಳಯ ಹಾಗೂ ನಾರಾಯಣನ ಸೇವಕಳಾದ ಲಕ್ಷ್ಮೀ ತತ್ತ್ವ(ಅವ್ಯಕ್ತ)ದ ಬಗ್ಗೆ ನೀನು ತಿಳಿ.

ಮಹಾಪ್ರಳಯಕಾಲದಲ್ಲಿ ಭೂಮಿಯು ನೀರಿನಲ್ಲಿ, ನೀರು ತೇಜಸ್ಸಿನಲ್ಲಿತೇಜಸ್ಸು ವಾಯುವಿನಲ್ಲಿ, ವಾಯು ಆಕಾಶದಲ್ಲಿ, ಆಕಾಶ ಮನಸ್ಸಿನಲ್ಲಿ, ಮನಸ್ಸು ಮಹತ್ತತ್ತ್ವದಲ್ಲಿ, ಮಹತ್ತತ್ತ್ವದಲ್ಲಿ, ಅದು ಪ್ರಕೃತಿ ಎನಿಸಿದ ಅವ್ಯಕ್ತತತ್ತ್ವದಲ್ಲಿ ಲಯವಾಯಿತು. ಅವ್ಯಕ್ತತತ್ತ್ವವು ಪುರುಷನಲ್ಲಿ (ಪರಮಾತ್ಮನಲ್ಲಿ) ಲಯವಾಯಿತು. ಆ ಪುರುಷ ಸರ್ವವ್ಯಾಪಿ. ಹೀಗಾಗಿ ಆ ಕಾಲದಲ್ಲಿ ಎಲ್ಲೆಡೆ ತಮಸ್ಸೇ (ಅಂಧಕಾರ) ತುಂಬಿ ಯಾವುದೂ ತಿಳಿಯುತ್ತಿರಲಿಲ್ಲ. ಆ ತಮಸ್ಸೆ ತ್ರಿಗುಣಮೂಲವಾದ ಗುಣಪೂರ್ಣವಾದ ಬ್ರಹ್ಮನೆನಿಸಿತು. ಅವನೇ ವಿಶ್ವರೂಪವಾದ ಪುರುಷಾಕಾರ ತಾಳಿತು. ಅದನ್ನೇ ಆ ಪುರುಷನೇ ಅನಿರುದ್ಧ ಎಂದು ಕರೆಸಿಕೊಂಡನು. ಅವನೇ ಪ್ರಕೃತಿ ನಿಯಾಮಕ, ಪ್ರಧಾನ ಅವ್ಯಕ್ತ, ತ್ರಿಗುಣ ಎಂದು ತಿಳಿ (ಇಲ್ಲಿ ಬಂದಿರುವ ಅವ್ಯಕ್ತ, ಪ್ರಧಾನ, ತ್ರಿಗುಣ ಶಬ್ದಗಳು ಭಗವದ್ವಾಚಕ– ಇವೇ ಹೆಸರು ಪ್ರಕೃತಿ ಅಭಿಮಾನಿಯಾದ ಅಚಿತ್ ಪ್ರಕೃತಿಯ ಲಕ್ಷ್ಮೀದೇವಿಯ ನಾಮಗಳೂ ಆಗಿವೆ. ಕಾರಣ ಲಕ್ಷ್ಮೀದೇವಿಯು ಪುರುಷಾಧೀನವಾದ್ದರಿಂದ). ಯಾವ ವೇದಗಳಿಗೆ ಭಗವಂತನ ಸಹಾಯ ಇರುವುದೋ ಅಂತಹ ಪ್ರಭು, ಹರಿ, ವಿಷ್ವಕ್ಸೇನನು

ಬಹುವಿಧವಾದ ಜಗತ್ಸೃಷ್ಟಿ ಮಾಡಲು ಈ ಪ್ರಳಯೋದಕದಲ್ಲಿ ಯೋಗನಿದ್ರಾದಿಂದ ಮಲಗಿದನು. ಹೀಗೆ ಚಿಂತಿಸುತ್ತಿರುವಾಗ ವಿಷ್ವಕ್ಸೇನನಿಗೆ (ಮಹತ್ತತ್ತ್ವಾಭಿಮಾನಿಯಾದ) ಚತುರ್ಮುಖ ಬ್ರಹ್ಮನು ನಾಭಿಕಮಲದಲ್ಲಿ ಜನಿಸಿದನು. ಅನಿರುದ್ಧ(ವಿಷ್ವಕ್ಸೇನ)ನಿಂದ ಜನಿಸಿದ ಬ್ರಹ್ಮನು ಪದ್ಮದಂತೆ ಕಣ್ಣುಳ್ಳವನಾಗಿ ಸಹಸ್ರಪತ್ರಕಮಲದಲ್ಲಿ ಕುಳಿತನು. ಆತನ ಕಣ್ಣಿಗೆ ಅದ್ಭುತವಾದ ಜಲಮಯವಾದ ಜಗತ್ತು ಕಂಡಿತು. ಸತ್ತ್ವಗುಣದಿಂದ ಆವಿರ್ಭೂತನಾದ ಆ ಬ್ರಹ್ಮನಿಂದ ಪ್ರಾಣಿಗಳ ಸಮುದಾಯವನ್ನು ಸೃಷ್ಟಿಸಲಾರಂಭಿಸಿದನು. ಸೂರ್ಯಕಿರಣಗಳಿಗೆ ಸದೃಶವಾದ ಪ್ರಭೆಯುಳ್ಳ ಪದ್ಮಪತ್ರದ ಮೇಲೆ ಆ ಹಿಂದೆಯೇ ನಾರಾಯಣನು ಸೃಷ್ಟಿಮಾಡಿದ ಎರಡು ಗುಣಗಳು ತಾಮಸ, ರಾಜಸ ನೀರಿನ ಬಿಂದುಗಳಂತೆ ಇದ್ದವು. ಇವುಗಳನ್ನು ಅನಿರುದ್ಧನು ನೋಡಿದ. ಅದರಲ್ಲಿ ಒಂದು ಬಿಂದು ಜೇನುತುಪ್ಪದ ಕಾಂತಿಯಂತೆ ಮನೋಹರವಾಗಿದ್ದಿತು. ಅದರಿಂದ ಮಧುನಾಮಕ ದೈತ್ಯನು ಹುಟ್ಟಿದನು. ಅದೇ ಸಮಯದಲ್ಲಿ ನಾರಾಯಣನ ಆದೇಶದಂತೆ ಅತ್ಯಂತ ಕಠಿಣವಾದ ಇನ್ನೊಂದು ಬಿಂದುವಿನಿಂದ ಕೈಟಭನೆಂಬ ರಾಕ್ಷಸನು ಜನಿಸಿದನು[೧].

ಇವರು ಗದಾಪಾಣಿಗಳಾಗಿ ಪದ್ಮದ ನಾಲವನ್ನೇ ಅನುಸರಿಸಿ ಓಡಿ ಬಂದರು. ಕಮಲದ ಮಧ್ಯದಲ್ಲಿ ಕುಳಿತಿರುವ ಮಹಾಕಾಂತಿಯುಕ್ತನಾದ ನಾಲ್ಕು ವೇದಗಳನ್ನು ಸೃಷ್ಟಿಮಾಡುತ್ತಿದ್ದ ಬ್ರಹ್ಮನನ್ನು ನೋಡಿ ಶರೀರಧಾರಣ ಮಾಡಿದ್ದ ವೇದಗಳನ್ನು(ವೇದಾಭಿಮಾನಿಗಳನ್ನು) ಬ್ರಹ್ಮನು ನೋಡುತ್ತಿರುವಂತೆಯೇ ಕೂಡಲೇ ಹಿಡಿದು, ಅಪಹರಿಸಿ ಸಮುದ್ರದ ಈಶಾನ್ಯಭಾಗದಲ್ಲಿರುವ ಭೂಮಿಯ ಒಳಗೆ (ರಸಾತಲವನ್ನು) ಪ್ರವೇಶಿಸಿದನು[೨].

ಹೀಗೆ ವೇದಗಳು ಕದಿಯಲ್ಪಡಲು, ಬ್ರಹ್ಮನು ನಾರಾಯಣನಿಗೆ 'ವೇದಗಳೇ ನನ್ನ ಶ್ರೇಷ್ಠವಾದ ಕಣ್ಣುಗಳು. ಬಲ, ಮನೆ, ತತ್ತ್ವ, ಇವೆ ಅಪಹೃತವಾಗಲು ನಾನು ಹೇಗೆ ತಾನೇ ಸೃಷ್ಟಿಯನ್ನು ಮಾಡಲಿ? ಲೋಕಗಳೆಲ್ಲ ಅಂಧಕಾರದಲ್ಲಿ ಮುಳುಗಿವೆ. ನಾನು ಮಹಾದುಃಖಿಯಾಗಿದ್ದೇನೆ. ಶೋಕಸಾಗರದಲ್ಲಿ ಮುಳುಗಿದ ನನ್ನನ್ನು ಯಾರು ಉದ್ಧರಿಸುತ್ತಾರೆ? ಯಾರು ನಷ್ಟವಾದ ವೇದಗಳು ತಂದು ಕೊಡುತ್ತಾರೆ?

---

೧ ಪೂರ್ವಮೇವ ಚ ಪದ್ಮಸ್ಯ ಪತ್ರೇ ಸೂರ್ಯಾಂಶುಸಪ್ರಭೇ।
ನಾರಾಯಣಕೃತೌ ಬಿಂದೂ ಅಪಾಮಾಸ್ತಾಂ ಗುಣೋತ್ತರೌ॥
ಸತಾಮಸೋ ಮಧುರ್ಜಾತಸ್ತದಾ ನಾರಾಯಣಾಜ್ಞಯಾ।
ಕಠಿನಸ್ತ್ವಪರೋ ಬಿಂದುಃ ಕೈಟಭೋ ರಾಜಸಸ್ತುಯಃ॥ – ೧೮೧/೨೧,೨೩

೨ ದದೃಶಾತೇಽರವಿಂದಸ್ಥಂ ಬ್ರಹ್ಮಾಣಮಮಿತಪ್ರಭಮ್।
ಸೃಂಜಂತಂ ಪ್ರಥಮಂ ವೇದಾಂಶ್ಚತುರಶ್ಚಾರುವಿಗ್ರಹಾನ್।
ಸಹಸಾ ಜಗೃಹತುರ್ವೇದಾನ್ ಬ್ರಹ್ಮಣಃ ಪಶ್ಯತಸ್ತದಾ।
ರಸಾಂ ವಿವಿಶತುಸ್ತೂರ್ಣಮುದಕ್ಪೂರ್ವೇ ಮಹೋದಧೌ॥ – ೧೮೧/೨೫-೨೭

**ವೇದಾ ಮೇ ಪರಮಂ ಚಕ್ಷುಃ .... ವೇದಾ ಮೇ ಪರಮಂ ಬಲಮ್ ।**
**ಅಂಧಕಾರಾ ಹಿ ಮೇ ಲೋಕಾಃ ಜಾತ್ವಾವೇದೈರ್ವಿನಾ ಕೃತಾಃ ॥**
**ವೇದಾನೃತೇ ಹಿ ಕಿಂ ಕುರ್ಯಾಂ ಲೋಕಾನ್ವೈಸ್ರಷ್ಟುಮುದ್ಯತಃ ।**
**ಕೋ ಹಿ ಶೋಕಾರ್ಣವೇ ಮಗ್ನಂ ಮಾಮಿತೋಽದ್ಯ ಸಮುದ್ಧರೇತ್ ॥**
**- ೧೮೧/೨೯-೩೨**

ಹೀಗೆ ಶೋಕಿಸುತ್ತಾ ನಾರಾಯಣನನ್ನು (ವೇದೋದ್ಧಾರಕನೆಂದು ನಿಶ್ಚೈಸಿ) ಸ್ತೋತ್ರ ಮಾಡಿದನು.

ವೇದಗಳೇ ಹೃದಯವಾಗಿ ಉಳ್ಳ ನಾರಾಯಣನೇ, ನನಗೆ ಪೂರ್ವಜನೇ, ನಿನಗೆ ನಮಸ್ಕಾರ. ವ್ಯಕ್ತಾವ್ಯಕ್ತಪ್ರಪಂಚವನ್ನು ಸೃಷ್ಟಿಸುವ ಅಚಿಂತ್ಯನೇ! ವಿಶ್ವಸಂಹಾರಕನೇ! ಸಮಸ್ತ ಪ್ರಾಣಿಗಳ ಅಂತರ್ಯಾಮಿಯೇ! ಅಯೋನಿಜನೇ! ನಾನು ನಿನ್ನ ಅನುಗ್ರಹದಿಂದ ಹುಟ್ಟಿದವನು, ನನ್ನ ಮೊದಲ ಜನ್ಮ ನಿನ್ನ ಮನಸ್ಸಿನಿಂದ ಆಗಿದೆ, ನಾಭಿಯಿಂದ ಹುಟ್ಟಿದ ಈಗಿನ ಜನ್ಮವು ಏಳನೆಯದು. ಪ್ರತಿಯೊಂದು ಸೃಷ್ಟಿಕಾಲದಲ್ಲಿಯೂ ನಾನು ನಿನಗೆ ಮಗನಾಗಿ ಹುಟ್ಟಿದ್ದೇನೆ. ತ್ರಿಗುಣವರ್ಜಿತನೇ! ನಿನ್ನ ಮಗನಾದ ನಾನು ಶುದ್ಧಸತ್ತ್ವಶರೀರಮಯನೆಂದು ಪ್ರಸಿದ್ಧಿ ಹೊಂದಿದ್ದೇನೆ. ನನ್ನ ಕಣ್ಣಿನಂತೆ ಇರುವ ವೇದಗಳು ಅಪಹೃತವಾಗಿವೆ. ಹಾಗಾಗಿ ನಾನು ಕುರುಡನಾಗಿದ್ದೇನೆ. ನೀನು ಯೋಗನಿದ್ರೆಯಿಂದ ಎಚ್ಚೆತ್ತು ನನ್ನ ಕಣ್ಣುಗಳನ್ನು ತಂದುಕೊಡು. ನಾನು ನಿನಗೆ ಪ್ರಿಯನು, ನೀನೂ ನನಗೆ ಪ್ರಿಯ[೧].

ಹೀಗೆ ಬ್ರಹ್ಮನಿಂದ ಸ್ತುತನಾದ ಪುರುಷ(ಅನಿರುದ್ಧ)ನು ಯೋಗನಿದ್ರೆಯನ್ನು ಬಿಟ್ಟು ವೇದರಕ್ಷಣೆಗೆ ಮುಂದಾದನು. ತನ್ನ ಯೋಗೈಶ್ವರ್ಯ (ಯೋಗಸಾಮರ್ಥ್ಯ)ದಿಂದ ಎರಡನೇ ಶರೀರವನ್ನು ಸ್ವೀಕರಿಸಿದನು.

ಚಂದ್ರನ ಕಾಂತಿಯಿಂದ ಬೆಳಗುವ ಸುಂದರ ಮೂಗಿನಿಂದ ಕೂಡಿದ ಶುದ್ಧವಾದ ವೇದಗಳೇ ಮನೆಯಾದ ಕುದುರೆಯ ಶಿರಸ್ಸನ್ನು ಹೊಂದಿದ, ರೂಪವನ್ನು ಸ್ವೀಕರಿಸಿದ. ನಕ್ಷತ್ರಗಳಿಂದಲೂ,

---

೧ ನಮಸ್ತೇ ಬ್ರಹ್ಮಹೃದಯ ನಮಸ್ತೇ ಮಮ ಪೂರ್ವಜ ।
ವ್ಯಕ್ತಾವ್ಯಕ್ತಕರಾಚಿಂತ್ಯ ಕ್ಷೇಮಂ ಪಂಥಾನಮಾಸ್ಥಿತ ।
ವಿಶ್ವಭುಕ್ ಸರ್ವಭೂತಾನಾಮಂತರಾತ್ಮನ್ನಯೋನಿಜ ।
ಅಹಂ ಪ್ರಸಾದಜಸ್ತುಭ್ಯಂ.....
ತ್ವತ್ತೋ ಮೇ ಮಾನಸಂ ಜನ್ಮ ಪ್ರಥಮಂ ದ್ವಿಜಪೂಜಿತಮ್ ।
ಇದಂ ಚ ಸಪ್ತಮಂ ಜನ್ಮ ಪದ್ಮಜಂ ಮೇಽಮಿತಪ್ರಭ ॥
ಸರ್ಗೇ ಸರ್ಗೇ ಹ್ಯಹಂ ಪುತ್ರಸ್ತವ ತ್ರಿಗುಣವರ್ಜಿತ ।
ಪ್ರಥಿತಃ ಪುಂಡರೀಕಾಕ್ಷ ಪ್ರಧಾನಗುಣಕಲ್ಪಿತಃ ।
ತೇ ಮೇ ವೇದಾ ಹೃತಾಶ್ಚಕ್ಷುರಂಧೋ ಜಾತೋಽಸ್ಮಿ ಜಾಗೃಹಿ ।
ದದಸ್ವ ಚಕ್ಷುಷೀ ಮಹ್ಯಂ ಪ್ರಿಯೋಽಹಂ ತೇ ಪ್ರಿಯೋಽಸಿ ಮೇ ॥ - ೧೮೧/೩೪-೪೩

ತಾರೆಗಳಿಂದಲೂ ಕೂಡಿರುವ ಸ್ವರ್ಗವೇ ಆತನ ತಲೆಯಾಗಿತ್ತು. ಪಾತಾಳಗಳೇ ಹಯಗ್ರೀವನ ಕಿವಿಗಳು, ಪಿಶಾಚಿಗಳಿಗೆ ಆಧಾರಭೂತವಾದ ಅಂತರಿಕ್ಷವೇ ಹಣೆ, ಗಂಗಾ ಸರಸ್ವತಿಗಳೇ ನಿತಂಬಗಳು, ಎರಡು ಸಮುದ್ರಗಳೇ ಹುಬ್ಬುಗಳು, ಸೂರ್ಯಚಂದ್ರರೇ ಕಣ್ಣುಗಳು, ಸಂಧ್ಯಾಕಾಲವೇ ನಾಸಿಕ, ಓಂಕಾರವೇ ಆಭರಣ, ವಿದ್ಯುತ್ತೇ ನಾಲಿಗೆ, ಪ್ರಸಿದ್ಧರಾದ ಪಿತೃಗಳೇ ಹಲ್ಲುಗಳು, ಗೋಲೋಕ, ಬ್ರಹ್ಮಲೋಕಗಳೇ ಕಟಿಗಳು, ಕರಾಳರಾತ್ರಿಯೇ ಹಯಗ್ರೀವದೇವರ ಕುತ್ತಿಗೆಯಾಗಿದ್ದವು.

ಹೀಗೆ ಅನೇಕ ಪ್ರಕಾರಗಳಿಂದ ಆವೃತನಾದ ಹಯಶಿರಸ್ಸನ್ನು ಹೊಂದಿದ ವಿಶ್ವೇಶ್ವರನಾದ ನಾರಾಯಣನು (ಹಯಗ್ರೀವರೂಪ ಸ್ವಿಕರಿಸಿ) ಅದೃಶ್ಯನಾಗಿ ರಸಾತಳವನ್ನು ಪ್ರವೇಶಿಸಿದನು. ಅಲ್ಲಿ ಶಿಕ್ಷಾ ವೇದಾಂಗೋಕ್ತರೀತಿಯಲ್ಲಿ 'ಓಂ; ಎಂಬ ಸ್ವರವನ್ನು ಸೃಷ್ಟಿಸಿದನು[1] (ಉಚ್ಚರಿಸಿದನು).

ಹಯವದನನ ಮುಖನಿಃಸೃತವಾದ ಓಂ ಸ್ವರವು ಎಲ್ಲೆಡೆ ಕೇಳಿ ಬಂತು. ಎಲ್ಲ ಪ್ರಾಣಿಗಳಿಗೂ ಪ್ರೇರೇಪಣೆ ಮಾಡುತ್ತಾ ರಸಾತಳಕ್ಕೂ ತಲುಪಿತು. ಅದನ್ನು ಕೇಳಿದ ವೇದಚೋರರಿಬ್ಬರೂ ಓಂಕಾರ ಯಾವ ಕಡೆಯಿಂದ ಬಂದಿತೋ, ಆ ಕಡೆ ಓಡಿ ಬಂದರು. ಈ ಮಧ್ಯೆ ಪಾತಾಳದಲ್ಲಿ (ಬಂಧಿತವಾಗಿದ್ದ) ರಸಾತಳದಲ್ಲಿದ್ದ ಎಲ್ಲ ವೇದಗಳನ್ನು (ಅಭಿಮಾನಿಗಳನ್ನು) ಹಯಗ್ರೀವದೇವರು ಹಿಡಿದು, ಅವನ್ನು ತೆಗೆದುಕೊಂಡು ಬ್ರಹ್ಮನಿಗೆ ಕೊಟ್ಟು ತನ್ನ ಮೂಲರೂಪವನ್ನು ಹೊಂದಿದರು. ಸಮುದ್ರದ ಈಶಾನ್ಯ ಭಾಗದಲ್ಲಿ ವೇದಗಳಿಗೆ ಆಶ್ರಯವಾದ ಹಯಗ್ರೀವರೂಪವನ್ನು ಅಲ್ಲಿಯೇ ಸ್ಥಾಪಿಸಿ (ತಾನೇ), ಹಯಗ್ರೀವ ಎಂಬ ಹೆಸರಿನಿಂದ ಪ್ರಖ್ಯಾತನಾದನು[2].

ಓಂಕಾರ ಶಬ್ದ ಧ್ವನಿಸಿದ ಕಡೆಗೆ ಬಂದು ನೋಡಿದಾಗ ಅಸುರರಿಗೆ ಏನೂ ಕಾಣದೆ ಮತ್ತೆ ವೇದಗಳ ಬಳಿಗೆ ಹೋದರು. ಅಲ್ಲಿ ವೇದಗಳೂ ಕಾಣಲಿಲ್ಲ. ವೇದಗಳನ್ನು ಅಡಗಿಸಿಟ್ಟ ಸ್ಥಳವೂ ಖಾಲಿಯಾಗಿತ್ತು. ನಂತರ ಅವರು ರಸಾತಲದಿಂದ ಮೇಲೆ ಬಂದಾಗ 'ಪುರುಷ'ನನ್ನು (ಸೃಷ್ಟಿಕರ್ತನಾದ) ಭಗವಂತನನ್ನು ಕಂಡರು. ಅವನು ಶ್ವೇತವರ್ಣದವನೂ, ಚಂದ್ರನಂತೆ ಶುದ್ಧ ಕಿರಣವುಳ್ಳವನೂ, ಯೋಗನಿದ್ರಾರತನೂ, ಪ್ರಳಯೋದಕದಲ್ಲಿ ಆದಿಶೇಷನನ್ನೇ

---

೧ ರಸಾಂ ಪುನಃ ಪ್ರವಿಷ್ಟಶ್ಚ ಯೋಗಂ ಪರಮಮಾಸ್ಥಿತಃ।
ಶೈಕ್ಷಂ ಸ್ವರಂ ಸಮಾಸ್ಥಾಯ ಓಮಿತಿ ಪ್ರಾಸೃಜತ್ ಸ್ವರಮ್ ॥ - ೧೮೧/೫೦

೨ ತತಸ್ತಾವಸುರೌ ಕೃತ್ವಾ ವೇದಾನ್ ಸಮಯಬಂದನಾನ್।
ರಸಾತಲೇ ವಿನಿಕ್ಷಿಪ್ಯ ಯತಃ ಶಬ್ದಸ್ತತೋ ದ್ರುತೌ ॥
ಏತಸ್ಮಿನ್ನಂತರೇ ರಾಜನ್ ದೇವೋ ಹಯಶಿರೋಧರಃ।
ಜಗ್ರಾಹ ವೇದಾನಖಿಲಾನ್ ರಸಾತಲಗತಾನ್ ಹರಿಃ।
ಪ್ರಾದಾಚ್ಚ ಬ್ರಹ್ಮಣೇ ಭೂಯಸ್ತತಃ ಸ್ವಾಂ ಪ್ರಕೃತಿಂ ಗತಃ॥ - ೧೮೧/೫೨,೫೩

ಹಾಸಿಗೆಯನ್ನಾಗಿ ಮಾಡಿಕೊಂಡವನನೂ ಆಗಿದ್ದನು. ಅವನನ್ನು ಕಂಡ ಕೂಡಲೇ ಅಟ್ಟಹಾಸದಿಂದ ನಗತೊಡಗಿದರು. ಶ್ವೇತವರ್ಣದ ಈ ಪುರುಷನೇ ವೇದವನ್ನು ಅಪಹಾರ ಮಾಡಿದವನು (ತಾವೇ ವೇದಾಪಹಾರಿಗಳೆಂದು ಅಸುರರು ಮರೆತು ಭಗವಂತನ ಮೇಲೆ ಕಳ್ಳತನದ ಆಪಾದನೆ ಮಾಡಿದರು). ಇವನು ಯಾರು? ಸರ್ಪದ ಮೇಲೆ ಮಲಗಿರುವನಲ್ಲ? ಹೀಗೆ ಮಾತನಾಡುತ್ತಿರುವ ರಜೋತಮೋಗುಣವುಳ್ಳ ದೈತ್ಯರನ್ನು ಯುದ್ಧಾರ್ಥಿಗಳೆಂದು ತಿಳಿದ ಹಯಗ್ರೀವದೇವನು ಸಂಹರಿಸಿ, ಬ್ರಹ್ಮದೇವನ ದುಃಖವನ್ನು ಪರಿಹರಿಸಿದನು. ಆತನಿಗೆ ಸೃಷ್ಟಿಕಾರ್ಯಕ್ಕೆ ಬೇಕಾದ ಬುದ್ಧಿ ಪ್ರಚೋದಿಸಿದನು. ನಂತರ ಅಲ್ಲಿಂದ ಮಾಯವಾದನು. ನಂತರ ವೇದಗಳಿಂದ ಸತ್ಕೃತನಾದ ಬ್ರಹ್ಮನು ಸಮಗ್ರ ಚರಾಚರ ಪ್ರಪಂಚವನ್ನು ಸೃಷ್ಟಿಸಿದನು. ಪರಮಾತ್ಮನೂ ನಂತರ ಪ್ರವೃತ್ತಿಧರ್ಮಕ್ಕಾಗಿ ಹಿಂದಿನ ಶರೀರವನ್ನೇ ಧರಿಸಿದನು.

ಹೀಗೆ ಶ್ರೀಹರಿಯು ಹಯಶಿರನಾದ(ತುರಂಗವದನನಾದ) ರೂಪವು ಪ್ರಸಿದ್ಧವಾದುದು. ವರದಾಯಕವಾದುದು.

ಈ ಕಥೆಯನ್ನು ಕೇಳುವ, ಸ್ಮರಿಸುವ, ಬ್ರಾಹ್ಮಣನ ಅಧ್ಯಯನ ಎಂದೂ ನಿಷ್ಫಲವಾಗುವುದಿಲ್ಲ[೧].

ಮುಂದೆ ವ್ಯಾಸರು ಧರ್ಮರಾಜನಿಗೆ ಹಯಗ್ರೀವೋಪಾಸನೆ ಮಾಡಿ ಗಾಲವ ಮುನಿ ವೇದದ ಕ್ರಮ ಪಾಠ ತಿಳಿದುದನ್ನು ಧರ್ಮರಾಜನಿಗೆ ತಿಳಿಸುತ್ತಾರೆ. ನಂತರ ಶ್ರೀಹರಿಯ ಮಹಿಮೆ, ಸರ್ವೋತ್ತಮತ್ವವನ್ನು ೧೭ ಶ್ಲೋಕಗಳಿಂದ ವರ್ಣಿಸಿದ್ದಾರೆ. ಅವು ಪಠ್ಯವೂ, ಜ್ಞೇಯವೂ ಆಗಿವೆ. (೧೮೧/೭೩-೮೯)

## ಸಂದೇಶಗಳು-ವಿವರಣೆಗಳು

೧. ನಾರಾಯಣನ ಸರ್ವೋತ್ತಮತ್ವ ಸೃಷ್ಟಿ ಹಾಗೂ ಮಹಾಪ್ರಲಯದ ಕ್ರಮದಿಂದ ತಿಳಿಯುತ್ತದೆ. 'ನಾರಾಯಣೋ ವಾ ಇದಮಗ್ರ ಆಸೀತ್' ಶ್ರುತಿಯ ವಿವರ ಇಲ್ಲೂ ಇದೆ (೧೮೧/೧೧-೧೮)

೨. ಭಗವಂತನಿಂದ ಸೃಷ್ಟನಾದ ಬ್ರಹ್ಮನು ಸೃಷ್ಟಿಯನ್ನು ಹೇಗೆ ಮಾಡಬೇಕು ಎಂಬುದನ್ನು ಕೇಳಿ ತಿಳಿಯುತ್ತಾನೆ. ಇದರಿಂದ ನಾರಾಯಣನು ಬ್ರಹ್ಮೋತ್ತಮನೆಂದು ತಿಳಿಯುತ್ತದೆ.

೩. ಮಧುಕೈಟಭರು ನಾರಾಯಣನಿಂದ ಸೃಷ್ಟವಾದ ಎರಡು ಜಲಬಿಂದುಗಳು. ಅವರು ತಮ್ಮನ್ನು ಸೃಷ್ಟಿಸಿದ ನಾರಾಯಣನನ್ನು ತಿಳಿಯದೆ, ಜ್ಞಾನದ ತವನಿಧಿಗಳಾದ ವೇದಗಳನ್ನು ಕದ್ದು ನಾರಾಯಣನಿಂದ ಹತರಾದರು. ವೇದಚೌರ್ಯಕ್ಕೆ ಶಿಕ್ಷೆ ಸ್ವನಾಶ.

---

೧ ಯೋ ಹ್ಯೇತದ್ಬ್ರಾಹ್ಮಣೋ ನಿತ್ಯಂ ಶೃಣುಯಾದ್ಧಾರಯೇ ತ ವಾ।
ನ ತಸ್ಯಾಧ್ಯಯನಂ ನಾಶಮುಪಗಚ್ಛೇತ್ ಕದಾಚನ॥ - ೧೮೧/೭೦

೪. ಬ್ರಹ್ಮದೇವರ ಸ್ತುತಿ ಅವರು ನಾರಾಯಣನಿಗಿಂತ ನ್ಯೂನ(ಕಡಿಮೆಯವರು)ರೆಂದು ತಿಳಿಸುತ್ತದೆ.

೫. ಭಗವಂತನ ಸ್ತುತಿಯಿಂದ ಜ್ಞಾನ ಬರುತ್ತದೆ. ಜ್ಞಾನಸಾಧನಗಳಾದ ವೇದಗಳೂ ಎಲ್ಲವೂ ಲಭ್ಯವಾಗುತ್ತವೆ.

೬. ಹಯಗ್ರೀವ, ನಾರಾಯಣರು ಒಂದೇ. ಅವರಲ್ಲಿ ಸಮಸ್ತ ವಿಶ್ವ ಅಡಗಿದೆ.

೭. ಯುದ್ಧ ಮಾಡದೆ ಅಸುರ ಸಂಹಾರ ಮಾಡಿದ್ದು ಹರಿಯ ಕೌಶಲ್ಯಕ್ಕೆ ಸಾಕ್ಷಿ.

ಇತ್ಯಾದಿ...

# ೧೨೫. ವ್ಯಾಸ - ಶುಕರ -ಚರಿತ್ರೆಗಳು

## ವ್ಯಾಸಾವತಾರ

ಜನಮೇಜಯನ ಪ್ರಶ್ನೆಗೆ ಉತ್ತರರೂಪದಲ್ಲಿ ವೈಶಂಪಾಯನರು ಸುಮಾರು ೭೦ ಶ್ಲೋಕಗಳಲ್ಲಿ ವಿವರಿಸಿದ್ದಾರೆ.

ಜನಮೇಜಯನ ಪ್ರಶ್ನೆ 'ಲೋಕದಲ್ಲಿ ಸಾಂಖ್ಯಶಾಸ್ತ್ರ ಯೋಗಶಾಸ್ತ್ರ ಪಂಚರಾತ್ರಾಗಮ, ವೇದಗಳಲ್ಲಿ ಆರಣ್ಯಕ ಭಾಗಗಳು, ಜ್ಞಾನಗಳು (ಜ್ಞಾನದ ಮೂಲಗಳಷ್ಟೇ) ಇವುಗಳು ಒಂದು ತತ್ತ್ವವನ್ನು ಹೇಳುತ್ತವೆಯೋ ಅಥವಾ ಬೇರೆ ಬೇರೆಯಾದ ತತ್ತ್ವಗಳನ್ನು ತಿಳಿಸುತ್ತವೆಯೋ? ಅಲ್ಲದೆ ನನಗೆ ಪ್ರವೃತ್ತಿಯಮಾರ್ಗವನ್ನೂ ಹೇಗಿದೆಯೋ ಹಾಗೆಯೇ ಹೇಳಿರಿ?

ವೈಶಂಪಾಯನರು ಉತ್ತರಿಸುವ ಮುನ್ನ ಯಮುನಾನದಿಯ ದ್ವೀಪದಲ್ಲಿ ಅವತರಿಸಿದ ವ್ಯಾಸರನ್ನು ನಮಿಸಿದರು. ನಾರಾಯಣನಿಂದ ಆರಂಭವಾದ ಚಂದ್ರವಂಶದಲ್ಲಿ ವ್ಯಾಸರು ಆರನೆಯವರೆಂದು ನೆನಪಿಸಿಕೊಂಡರು(ನಾರಾಯಣ–ಬ್ರಹ್ಮ–ವಶಿಷ್ಠ–ಶಕ್ತಿ–ಪರಾಶರರು–ವ್ಯಾಸರು ಆರನೆಯವರು– ವ್ಯಾಸರು ವೇದಮಹಾನಿಧಿಗಳು).

ಅಲ್ಲದೆ ನಾರಾಯಣನು ಹಿಂದೆ ವ್ಯಾಸರನ್ನು ಮಗನನ್ನಾಗಿಯೂ ಪಡೆದ. ಇದಕ್ಕೆ ಕಾರಣ ವೇದಗಳ ಜ್ಞಾನಕ್ಕೆ ಕಾರಣೀಭೂತನಾಗಲು. ಜನಮೇಜಯನಿಗೆ ಈ ಬಗ್ಗೆ ಸಂಶಯ ಬಂತು. ನಾರಾಯಣನ ವಂಶದಲ್ಲಿ ಆರನೇಯವರಾಗಿ ಜನಿಸಿದ ವ್ಯಾಸರು ಈಗ ಮತ್ತೊಮ್ಮೆ ಸಾಕ್ಷಾತ್ ಅವತರಿಸಿದರೇ ವ್ಯಾಸರಾಗಿ? ಎಂದು ಪ್ರಶ್ನಿಸಿದ. ಇದಕ್ಕೆ ವ್ಯಾಸರೇ ತಮ್ಮ ಶಿಷ್ಯರಾದ ಸುಮಂತು–ವೈಶಂಪಾಯನ–ಪೈಲ–ಜೈಮಿನಿಗಳಿಗೆ ಅವರೂ ಪ್ರಶ್ನಿಸಿದಾಗ ಉತ್ತರಿಸಿದ್ದರು. ಅಷ್ಟು ಹೊತ್ತಿಗೆ ವ್ಯಾಸರು (೬ನೇವರು) ಮಹಾಭಾರತ ರಚಿಸಿ, ಆಯಾಸಗೊಂಡವರಂತೆ ತೋರಿಸಿಕೊಂಡಿದ್ದರು (ಸಾಮಾನ್ಯ ಸಾಧಕನಂತೆ). ಈ ಆಖ್ಯಾನ (ನಾರಾಯಣನ ಮಗನಾಗಿ ಜನಿಸಿದ ವ್ಯಾಸರೂಪದ)ವನ್ನು ಅವರೇ ಹೀಗೆ ಹೇಳಿದ್ದರು.

ನಾರಾಯಣನು ತನ್ನ ನಾಭಿಕಮಲದಲ್ಲಿ ಬ್ರಹ್ಮನನ್ನು ಸೃಷ್ಟಿಸಿದ್ದನಷ್ಟೇ? ಆತನು ಜನಿಸಿದ ಬಳಿಕ ನಾರಾಯಣನು ಜಡಜೀವರನ್ನು, ಜ್ಞಾನಿಗಳನ್ನು ಸೃಷ್ಟಿಸಲು ಆದೇಶಿಸಿದ. ಅದಕ್ಕೆ ಬ್ರಹ್ಮನು ನನಗೆ ಈ ಸೃಷ್ಟಿಕಾರ್ಯದಲ್ಲಿ ಶಕ್ತಿ ಎಲ್ಲಿದೆ? ನನಗಂಥ ಜ್ಞಾನವಿಲ್ಲ, ನೀನೆ ತಿಳಿಸೆಂದ.

**ಕಾ ಶಕ್ತಿರ್ಮಮ ದೇವೇಶ ಪ್ರಜಾಃ ಸ್ರಷ್ಟುಂ ನಮೋಽಸ್ತು ತೇ ।**
**ಅಪ್ರಜ್ಞಾವಾನಹಂ ದೇವ ವಿಧತ್ಸ್ವ ಯದನಂತರಮ್ ॥ - ೧೮೨/೨೧**

ಬ್ರಹ್ಮನ ಪ್ರಾರ್ಥನೆಯ ಮೇರೆಗೆ ಶ್ರೀಹರಿಯು ಬ್ರಹ್ಮನಿಗೆ ಜ್ಞಾನ ಕೊಡಲು ಬುದ್ಧ್ಯಭಿಮಾನಿಯನ್ನು ಬ್ರಹ್ಮದೇವರನ್ನು ಪ್ರವೇಶಿಸು ಎಂದು ಆದೇಶಿಸಿದ[1](ಬ್ರಹ್ಮದೇವರಿಗೆ ಸೃಷ್ಟಿಮಾಡುವ ಬಗೆಯನ್ನು ಪ್ರೇರಣೆ ಮಾಡಿಸಿದ, ತಾನೇ ಮಾಡಿದನು ಕೂಡ). ನಂತರ ಸೃಷ್ಟಿ ಮಾಡಲು ಬ್ರಹ್ಮನಿಗೆ ಆದೇಶಿಸಿದ. ಅಂತೆಯೇ ದೇವ, ದಾನವ, ಗಂಧರ್ವ, ರಕ್ಷೋಗಣಗಳ ಸೃಷ್ಟಿಯಾದ ಮೇಲೆ ದಾನವದೈತ್ಯಾದಿಗಳು ಬ್ರಹ್ಮಾದಿಗಳ ವರ ಪಡೆದು, ಭೂಭಾರವಾಗಿ ಬಿಡುತ್ತಾರೆ. ಆದ್ದರಿಂದ ಭೂಭಾರ ಹರಣಕ್ಕಾಗಿ ತಾನು ಅನೇಕ ಅವತಾರ ತೆಗೆದುಕೊಳ್ಳಲು ನಾರಾಯಣ ಯೋಚಿಸಿದ. ಭೂಮಿಯನ್ನು ದೇವರು ಸಂಕರ್ಷಣ ರೂಪದಿಂದ ಧರಿಸಿದ ಕೂಡಾ. ಹೀಗೆ ಯೋಚಿಸಿ ವರಾಹ, ನರಸಿಂಹ, ವಾಮನ, ರಾಮ, ಕೃಷ್ಣರೂಪ(ಮಾನವ) ಗಳನ್ನು ತಾಳಿ ನಿಗ್ರಹಿಸಲು ಯೋಚಿಸಿದ.

ನಂತರ ಸೃಷ್ಟಿಕರ್ತನಾದ ಭಗವಂತನು (ನಿಜವಾಗಿಯೂ ದೇವತೆ ತಾನೇ ಸೃಷ್ಟ್ಯಾದಿಕರ್ತಾ-ಬ್ರಹ್ಮಾದಿಗಳು ನಿಮಿತ್ತ ಮಾತ್ರ). 'ಭೋ' ಎಂಬ ಶಬ್ದದಿಂದ ಜಗತ್ತಿನಲ್ಲಿ ಕೂಗಿ, ಪ್ರತಿಧ್ವನಿ ಉಂಟು ಮಾಡುತ್ತಾ ತನ್ನ ಈ 'ಭೋ' ಶಬ್ದೋಚ್ಚಾರಣದಿಂದ 'ಸಾರಸ್ವತ'ನನ್ನು ಸೃಷ್ಟಿಸಿದ. ಹೀಗೆ ಸಾರಸ್ವತನ ಅವತಾರ ಭಗವಂತನ ಶಬ್ದದಿಂದ ಪ್ರಾದುರ್ಭವಿಸಿತು. ಅದುವೇ 'ಅಪಾಂತರತಮ' ಎಂಬ ಭಗವಂತನ ರೂಪ (ಎಂದರೆ ನಾರಾಯಣನ ಧ್ವನಿಯಿಂದ ಆವಿರ್ಭೂತರೂಪ - ಇದೊಂದು ದೃಷ್ಟಿಯಲ್ಲಿ ಶುದ್ಧ ಸೃಷ್ಟಿ)[2].

ಈ ರೂಪ ತ್ರಿಕಾಲಜ್ಞ, ಸತ್ಯವಾದಿ ಹಾಗೂ ವ್ರತನಿಯಮನಿಷ್ಠತಮವಾಗಿದ್ದು ಅವನು ಜನಿಸಿದ ಕೂಡಲೇ ದೇವತೆಗಳೆಲ್ಲ ನಮಿಸಿದರು. ಮತ್ತೆ ಭಗವಂತ ಪ್ರಾದುರ್ಭವಿಸಿದ ಅಪಾಂತರತಮನಿಗೆ 'ನೀನು ವೇದಪ್ರವಚನ, ವ್ಯಾಖ್ಯಾನ ಮಾಡಲು ವೇದವಿಭಾಗ ಮಾಡಲು' ಆದೇಶಿಸಿದ. ಅದರಂತೆ ಸ್ವಾಯಂಭುವಮನ್ವಂತರದಲ್ಲಿ ವೇದವಿಭಾಗ ಮಾಡಿದ. ಈ ಕಾರ್ಯದಿಂದ ಹರಿಯು ತುಷ್ಟನಾಗಿ 'ದೇವಪುತ್ರನೇ! ಇದೇ ರೀತಿ ನೀನು ಮುಂದಿನ ಮನ್ವಂತಗಳಲ್ಲಿ ಧರ್ಮಪ್ರವರ್ತಕನಾಗು. ನೀನು ಮನಶ್ಚಾಂಚಲ್ಯರಹಿತನೂ ಆಗಿರುವೆ, ನಿನ್ನನ್ನು ಯಾರೂ ಹೀಗೆ ಮಾಡೆಂದು ನಿರ್ಬಂಧಿಸುವುದಿಲ್ಲ, ಹಾಗೆ ನೀನು ಇರುವೆ' ಎಂದನು[3] ನಾರಾಯಣ. ಮತ್ತೆ ಚಂದ್ರವಂಶ, ಕುರುವಂಶದಲ್ಲಿ ನೀನು ಜನಿಸುವೆ,

---

೧ ದದಾಮಿ ಬುದ್ಧಿಯೋಗಂ ತಂ ತದಿ ಯೇನ ಮಾಮುಪಯಾಂತಿ ತೇ ॥ - ಗೀತೆ. ೧೦/೧೦

೨ ಅಥ ಭೂಯೋ ಜಗತ್‌ಸ್ರಷ್ಟಾ ಭೋಃ ಶಬ್ದೇನಾನುನಾದಯನ್ ।
ಸರಸ್ವತೀಮುಚ್ಚಚಾರ ತತ್ರ ಸಾರಸ್ವತೋಽಭವತ್ ॥
ಅಪಾಂತರತಮಾ ನಾಮ ಸುತೋ ವಾಕ್ಸಂಭವೋ ವಿಭೋಃ ॥ - ೧೮೨/೩೭,೩೮

೩ ಮನ್ವಂತರೇಷು ಪುತ್ರತ್ವಮೇವಂ ಲೋಕಪ್ರವರ್ತಕಃ ।

ನಿನ್ನಿಂದಲೇ ಹುಟ್ಟುವವರು ಪರಸ್ಪರ ನಾಶ ಹೊಂದುವರು. ವಂಶನಾಶವಾಗುತ್ತದೆ. ನೀನೇ ನಾನಾಧರ್ಮಪ್ರವರ್ತಕನಾಗಿರುವೆ. ತಪೋಯುಕ್ತನಾಗಿರುವೆ, ನಿನ್ನ ಮಗನು(ಶುಕನು) ನಾರಾಯಣಮನಃಪಾರಾಯಣನಾಗುವನು. ಪರಾಶರನು ನಿನ್ನ ತಂದೆಯಾಗಿದ್ದು ನೀನು ಪರಾಶರರಿಂದ ಕನ್ಯೆಯಲ್ಲಿ(ಮತ್ಸ್ಯ-ಸತ್ಯವತೀದೇವಿ) ಜನಿಸಿ, ಕಾನೀನ (ಗರ್ಭ) ಎನಿಸುವಿ. ನಿನಗೆ ತ್ರಿಕಾಲಜ್ಞಾನವಿರುತ್ತದೆ. ಹಿಂದಾದ ಸಾವಿರಾರು ಯುಗಗಳಲ್ಲಿ ನಡೆದುದು ನಿನ್ನ ಪ್ರತ್ಯಕ್ಷಕ್ಕೆ ಬರುತ್ತಿರುತ್ತದೆ. ವೈವಸ್ವತಮನ್ವಂತರದಲ್ಲಿ ನೀನು ಅವತರಿಸುತ್ತೀ. ಆಗಲೂ ನೀನೇ ಸಪ್ತರ್ಷಿಗಳಿಂದ ಕೂಡಿ ಧರ್ಮಪ್ರವರ್ತಕನಾಗುವೆ.

ಹೀಗೆ ಭಗವಂತನು ಅಪಾಂತರಮನಿಗೆ ಮುಂದಿನ ಕಾರ್ಯಗಳನ್ನು ಸೂಚಿಸಿ, ಅವನ್ನೂ ಸಾಧಿಸು ಎಂದನು. ಇದೆಲ್ಲವನ್ನು ವ್ಯಾಸರು ತಮ್ಮ ಶಿಷ್ಯರಿಗೆ ಹೇಳಿ, ಆ ವಿಷ್ಣುವಿನ ಮಹಾ ಅನುಗ್ರಹದಿಂದ ನಾನು **ಅಪಾಂತರತಮ** ಎಂಬ ಹೆಸರಿನಿಂದ ಹುಟ್ಟಿದೆ. ಮತ್ತೆ ವಸಿಷ್ಠರ ವಶಂದಲ್ಲೂ ಪರಾಶರರ ಮಗನಾಗಿ ಜನಿಸಿದೆ. ಇದೆಲ್ಲ ನಾರಾಯಣಪ್ರಸಾದದಿಂದ. ನಾರಾಯಣನ ಅಂಶದಿಂದ ಹೇಗೆ ನಾನು ಅವತರಿಸಿದೆ ಎಂಬುದನ್ನು ತಿಳಿಯಿರಿ ಎಂದು ವೈಶಂಪಾಯನಾದಿ ಶಿಷ್ಯರಿಗೆ ಅವರ ಪ್ರಾರ್ಥನೆಯ ಮೇರೆಗೆ ವ್ಯಾಸರು ತಿಳಿಸಿದರು[೧].

ಇದೆಲ್ಲವನ್ನು ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾ ಆತನ ಪ್ರಶ್ನೆಗೆ ಉತ್ತರಿಸುತ್ತಾರೆ.

'ರಾಜನ್! ಸಾಂಖ್ಯ, ಯೋಗ, ಪಾಶುಪತ, ವೇದಾರಣ್ಯಕಗಳು, ಪಂಚರಾತ್ರದಲ್ಲಿರುವ ಜ್ಞಾನ (ವಿಷಯಗಳು) ಒಂದೇ ಗುರಿಯನ್ನು ಹೊಂದಿದ್ದರೂ, ನಾನಾಪ್ರಕಾರ(ವಿರುದ್ಧ)ಗಳಾಗಿವೆ. ಸಾಂಖ್ಯಶಾಸ್ತ್ರದ ಕರ್ತೃ ಕಪಿಲ. ಅವನನ್ನು ಪರಮಋಷಿ ಎನ್ನುತ್ತಾರೆ. ಯೋಗ ತಿಳಿದವನು ಹಿರಣ್ಯಗರ್ಭ, ಬ್ರಹ್ಮದೇವ, ಬೇರೆ ಯಾರೂ ಸರಿಯಾಗಿ ತಿಳಿದಿಲ್ಲ. ಅಪಾಂತರತಮನು ವೇದಾಚಾರ್ಯನೆನಿಸಿದ್ದಾನೆ. ಈತನಿಗೆ ಪ್ರಾಚೀಗರ್ಭ ಋಷಿ ಎಂದೂ ಅನ್ನುತ್ತಾರೆ. ಶಿವನು ಪಾಶುಪತಶಾಸ್ತ್ರಕರ್ತಾ, ಉಪದೇಶಕ. ಸಮಗ್ರ ಪಂಚರಾತ್ರ ಕರ್ತೃ ನಾರಾಯಣನೇ. ಇದುವೇ ಮೇಲೆ ತಿಳಿಸಿದ ನಾನಾಪ್ರಕಾರಕ ಜ್ಞಾನಗಳಲ್ಲಿ ಶ್ರೇಷ್ಠ(ಉಪಾದೇಯ)ವಾದುದು. ವೇದ, ಆರಣ್ಯಕಗಳು ಅಪೌರುಷೇಯವಾದ್ದರಿಂದ ಪ್ರಮಾಣಗಳೇ. ಅವುಗಳನ್ನು ಅನುಸರಿಸಿಯೇ ಪಂಚರಾತ್ರವಿದೆಯಾದ್ದರಿಂದ ಅದು ಪ್ರಮಾಣ. ಸಾಂಖ್ಯ, ಯೋಗ, ಪಾಶುಪತಗಳು ವೇದವಿರೋಧಿಗಳು. ಆದ್ದರಿಂದ ಅಪ್ರಾಮಾಣಿಕಗಳು (ಇಲ್ಲಿ ಕಪಿಲ, ಯೋಗವೆಂದರೆ

---

ಭವಿಷ್ಯಸ್ಯಚಲೋ ಬ್ರಹ್ಮನ್ ಅಪ್ರಧೃಷ್ಯಶ್ಚ ನಿತ್ಯಶಃ ॥

೧ ಸೋಽಹಂ ತಸ್ಯ ಪ್ರಸಾದೇನ ದೇವಸ್ಯ ಹರಿಮೇಧಸಃ।
ಅಪಾಂತರಮಾ ನಾಮ ತತೋ ಜಾತೋಽಽಜ್ಞಯಾ ಹರೇಃ ॥
ಪುನಶ್ಚ ಜಾತೋ ವಿಖ್ಯಾತೋ ವಸಿಷ್ಠಕುಲನಂದನಃ ॥ - ೧೮೨/೫೪

ಕಪಿಲರೂಪಿ ಪರಮಾತ್ಮನಲ್ಲ, ಬ್ರಹ್ಮದೇವರೂ ಅಲ್ಲ. ಅವರು ಕಪಿಲನೆಂಬ ಮತ್ತೊಬ್ಬನು. ಯೋಗ-ಪತಂಜಲಕೃತ ಅಪ್ರಮಾಣ). ಎಲ್ಲ ಶಾಸ್ತ್ರಗಳೂ ನಾರಾಯಣನನ್ನೇ ಧ್ಯೇಯ-ವಸ್ತುವಾಗಿ ಹೊಂದಿವೆ[1] (ವೇದಾರಣ್ಯಕ-ಪಂಚರಾತ್ರ).

ಹೀಗೆ ವ್ಯಾಸಾವತಾರದ ಕೆಲವು ಮುಖಗಳು ಈ ಅಧ್ಯಾಯದಲ್ಲಿ ಬಂದಿವೆ.

ಅಂತೂ ನಾರಾಯಣನ ಅವತಾರಗಳಲ್ಲಿ ಮೊದಲು ಅಪಾಂತರತಮ, ನಂತರ ಇಪ್ಪತ್ತೆಂಟನೇ ದ್ವಾಪರದಲ್ಲಿ ಅವನೇ ವೇದವ್ಯಾಸರಾಗಿ ಕುರುವಂಶ ಜನಕನಾಗಿ ಅವತರಿಸಿದ ವಿಷಯ ಇಲ್ಲಿ ಬಂದಿದೆ. ಅಪಾಂತರತಮ ನಾರಾಯಣನೇ ಎಂಬುದು ಹೆಚ್ಚು ಪ್ರಚಾರದಲ್ಲಿಲ್ಲವೆಂಬುದು ವಿಶೇಷ. ಈ ಸೂಕ್ಷ್ಮತೆ ತಿಳಿಯಬೇಕು.

## ಸಂದೇಶಗಳು-ವಿವರಣೆಗಳು

೧. **ಅಪಾಂತರತಮ** ಹಾಗೂ **ವೇದವ್ಯಾಸ** ಇವೆರಡೂ ನಾರಾಯಣನ ಅವತಾರಗಳೇ. ಏಳನೇ ಕಲ್ಪದ ಆರಂಭದಲ್ಲಿ ಚತುರ್ಮುಖನು ಭಗವಂತನಿಂದ ಆದಿಷ್ಟನಾಗಿ ವಿವಿಧ ಪ್ರಜಾಸೃಷ್ಟಿಯನ್ನು ಮಾಡಿದ ಮೇಲೆ, ದೈತ್ಯ, ದಾನವಾದಿ ದುರ್ಜನರ ಸಂಹಾರಕ್ಕಾಗಿ ಭಗವಂತನು ವರಾಹ, ನಾರಸಿಂಹ, ವಾಮನ, ರಾಮ ಮೊದಲಾದ ಅವತಾರಗಳನ್ನು ಮಾಡಲು ಯೋಚಿಸಿದ. ನಂತರ 'ಭೋ' ಎಂದು ಶಬ್ದೋಚ್ಚಾರ ಮಾಡಿದಾಗ ಸಾರಸ್ವತನ ಸೃಷ್ಟಿಯಾಯಿತು. ಇವನೇ ಅಪಾಂತರತಮ ಎಂದೂ ಹೆಸರಾಗಿ ಮುಂದೆ ವೇದವಿಭಾಗಾದಿ ಜ್ಞಾನಕಾರ್ಯ ಮಾಡಿದನು.

೨. ಈ ಅಪಾಂತರತಮನೇ ಮುಂದೆ ೨೮ನೇ ದ್ವಾಪರದಲ್ಲಿ ವೈವಸ್ವತಮನ್ವಂತರದಲ್ಲಿ ಪರಾಶರ ಸತ್ಯವತಿಯರ ಮಗನಾಗಿ ಅವತರಿಸಿ ಅಲ್ಲೂ ವೇದವಿಭಾಗಾದಿಗಳನ್ನೂ ಕುರುವಂಶದ ಪಿತಾಮಹನಾಗಿಯೂ ಭಗವತ್ಕಾರ್ಯ ಮಾಡಿದರು.

೩. ವ್ಯಾಸರೇ ಈ ವಿಷಯ ತಿಳಿಸಿದರೆಂದು ಈ ಅಧ್ಯಾಯದಲ್ಲಿದೆ. ತಾವು ಮಹಾವಿಷ್ಣುವಿನ ಪ್ರಸಾದದಿಂದ ನಾರಾಯಣನ ಅಂಶದಿಂದ ಹುಟ್ಟಿದೆ ಎಂದು ಹೇಳುವುದು ಲೋಕದೃಷ್ಟಿಯಿಂದಲೇ ಹೊರತು, ಈ ಮೂಲರೂಪ/ಅವತಾರಗಳಲ್ಲಿ ಯಾವುದೇ ಭೇದವಿಲ್ಲ.

---

೧ ತಮೇವ ಶಾಸ್ತ್ರಕರ್ತಾರಂ ಪ್ರವದಂತಿ ಮನೀಷಿಣಃ।
ನಿಷ್ಠಾಂ ನಾರಾಯಣಮೃಷಿಂ ನಾನ್ಯೋಽಸ್ತಿ ಚ ವಾದಿನಃ।
ಪಂಚರಾತ್ರವಿದೋ ಯೇ ತು .... ವಾಸುದೇವಂ ವಿಶಂತಿ ತೇ।
ಪಂಚರಾತ್ರಸ್ಯ ಕೃತ್ಸ್ನಸ್ಯ ವಕ್ತಾ ನಾರಾಯಣಃ ಸ್ವಯಮ್।
ಜ್ಞಾನೇಷ್ವೇತೇಷು ರಾಜೇಂದ್ರ ಸರ್ವೇಷ್ವೇತದ್ವಿಶಿಷ್ಯತೇ॥

೪. ಪಂಚರಾತ್ರಾಗಮವು ಅಪ್ರಮಾಣವೆಂದು ಕೆಲವರು ಹೇಳುತ್ತಾರೆ. ಅದನ್ನು ರಚಿಸಿದವನು ಸಾಕ್ಷಾತ್ ನಾರಾಯಣ. ಇದು ವೇದಾನುಸಾರಿ ಆದ್ದರಿಂದ ಅತ್ಯಂತ ಪ್ರಮಾಣವೆಂಬುದು ಆಚಾರ್ಯರ ನಿಲುವು. ಹಾಗೆಯೇ ವೇದ ಅರಣ್ಯಕಗಳು ಅಪೌರುಷೇಯ. ಆದ್ದರಿಂದ ಅವೂ ಪ್ರಮಾಣಗಳೇ. ಸಾಂಖ್ಯ, ಯೋಗ, ಪಾಶುಪತಾಗಮಗಳು ಪ್ರಮಾಣವಲ್ಲ. ಕಾರಣ ಅವುಗಳು ವೇದವಿರೋಧಿಗಳಾದ್ದರಿಂದ. ಆದರೆ ವೇದಾದ್ಯುಕ್ತ ಸಾಂಖ್ಯ(ಶುದ್ಧಾತ್ಮತತ್ತ್ವವಿಜ್ಞಾನ) ದತ್ತಾತ್ರೇಯಕೃತ ಯೋಗಶಾಸ್ತ್ರಗಳು ಪ್ರಮಾಣಗಳೇ. ಪಾಶುಪತಮತವಂತೂ ರುದ್ರದೇವರು ಅಸುರಮೋಹನಾರ್ಥವಾಗಿ ವಿಷ್ಣುವಿನ ಆಜ್ಞೆಯಿಂದ ಮಾಡಿದ ಗ್ರಂಥ. ಆದ್ದರಿಂದ ಪಾಶುಪತಮತ ಅಪ್ರಮಾಣ. ಇವುಗಳ ಹೆಚ್ಚಿನ ವಿವರಣೆಗಳನ್ನು ಬೇರೆ ಗ್ರಂಥಗಳಿಂದ ತಿಳಿಯಬೇಕು.

ಇತ್ಯಾದಿ....

# ೧೨೬. ಇಂದ್ರದೇವರಿಗೆ ನಾರದರ ಉಪದೇಶ

## ಬ್ರಾಹ್ಮಣನಕಥೆ

ಧರ್ಮರಾಜನು ಭೀಷ್ಮರಿಗೆ 'ಬ್ರಹ್ಮಚರ್ಯಾದಿ ಆಶ್ರಮಧರ್ಮಗಳನ್ನು ಪಾಲಿಸುವವರಿಗೆ ಯಾವುದು ಶ್ರೇಷ್ಠವಾದ ಧರ್ಮ' ಎಂದು ಕೇಳಿದನು. ಅದಕ್ಕೆ ಭೀಷ್ಮರು 'ಯಾವ ಆಶ್ರಮಧರ್ಮಿಗೆ ಯಾವ ವಿಷಯದಲ್ಲಿ ನಿಶ್ಚಯಜ್ಞಾನವಿರುತ್ತದೋ ಅದೇ ಶ್ರೇಷ್ಠವೆಂದು ಆತನು ತಿಳಿದಿರುತ್ತಾನೆ. ಬೇರೆಯದನ್ನಲ್ಲ. ಈ ವಿಷಯದಲ್ಲಿ ನಾರದರು ಇಂದ್ರನಿಗೆ ಹೇಳಿದ ಕಥೆಯನ್ನೇ ಹೇಳುವೆ ಕೇಳು' ಎಂದರು.

ಭೀಷ್ಮರು ಮುಂದುವರೆದು (ನಾರದರು ಹೇಳಿದುದನ್ನು) ಗಂಗಾತೀರದಲ್ಲಿ ಚಂದ್ರವಂಶದ ಅತ್ರಿಗೋತ್ರೋದ್ಭವನಾದ, ಸಿಟ್ಟನ್ನು ಗೆದ್ದ ಧರ್ಮನಿಷ್ಠನಾದ, ನಿತ್ಯತೃಪ್ತನಾದ, ಜಿತೇಂದ್ರಿಯನಾದ, ಸಂಶಯರಹಿತನಾದ ಒಬ್ಬ ಬ್ರಾಹ್ಮಣನು **ಮಹಾಪದ್ಮ** ಎಂಬ ಶ್ರೇಷ್ಠವಾದ ಪಟ್ಟಣದಲ್ಲಿ ವಾಸವಾಗಿದ್ದನು. ಅಹಿಂಸಾರಹಿತನಾಗಿ, ನ್ಯಾಯಾರ್ಜಿತ ಧನದಿಂದ ಇದ್ದನು. ತುಂಬು ಕುಟುಂಬಿಯಾದ ಆತನಿಗೆ ಮಕ್ಕಳು (ಅನೇಕ) ಇದ್ದರು ಕುಲಧರ್ಮದಲ್ಲಿ ರತನಾಗಿದ್ದು ಕಾಲಕ್ರಮೇಣ ಆತನು ವೇದೋಕ್ತವಾದ, ಶಾಸ್ತ್ರೋಕ್ತವಾದ ಹಾಗೂ ಶಿಷ್ಟಾಚಾರೋಕ್ತವಾದ – ಹೀಗೆ ಮೂರುವಿಧವಾದ ಧರ್ಮಗಳಲ್ಲಿ ಯಾವುದನ್ನು ಆಚರಿಸಿದರೆ ನನಗೆ ಕ್ಷೇಮವಾದೀತು? ಯಾವುದು ನನ್ನ ಕರ್ತವ್ಯ ಎಂದು ಚಿಂತಿಸುತ್ತಿದ್ದ. ಆದರೆ ಆತನಿಗೆ ನಿಶ್ಚಯವಾಗಿ ಯಾವುದೆಂದು ತಿಳಿಯಲಿಲ್ಲ.

ಹೀಗೆ ಚಿಂತಿಸುತ್ತಿರುವಾಗ ಆತನ ಮನೆಗೆ ಒಬ್ಬ ಬ್ರಾಹ್ಮಣ ಅತಿಥಿ ಬಂದ. ಅವನಿಗೆ ಯೋಗ್ಯ ಸತ್ಕಾರ ಮಾಡಿದನು. ಬಂದ ಅತಿಥಿಗೆ ಈ ಬ್ರಾಹ್ಮಣನು ನಾನೀಗ ಗೃಹಸ್ಥಧರ್ಮರತನಾಗಿದ್ದೇನೆ. ಇದನ್ನು ನನ್ನ ಮಕ್ಕಳಿಗೆ ವಹಿಸಿ, ನಾನು ಶ್ರೇಷ್ಠವಾದ ಧರ್ಮದಲ್ಲಿರಲು ಬಯಸಿದ್ದೇನೆ. ಅಂತಹ ಧರ್ಮ ಯಾವುದು? ಎಂದನು. ನಾನು ಏಕಾಕಿಯಾಗಿ ಭಗವಂತನಲ್ಲಿಯೇ ಆಸಕ್ತನಾಗಿರಲು ಬಯಸಿದ್ದೇನೆ. ಆದರೆ, ಇದನ್ನು ಇಲ್ಲಿಯವರೆಗೆ ಅನುಸರಿಸಿಕೊಂಡು ಬಂದ ಗೃಹಸ್ಥಧರ್ಮವನ್ನು ಬಿಟ್ಟು ಆಚರಿಸಲು ಮನಸ್ಸಾಗುತ್ತಿಲ್ಲ[೧].

ಇಲ್ಲಿಯವರೆಗೆ ನನ್ನ ಆಯುಷ್ಯ ಮಕ್ಕಳೆಂಬ ಫಲದ ಆಶ್ರಯದಲ್ಲಿಯೇ ಕಳೆದುಹೋಯಿತು. ಇನ್ನಾದರೂ ಪರಲೋಕಸಾಧನೆ ಮಾಡಲು ಬಯಸಿದ್ದೇನೆ. ಸಂಸಾರಸಾಗರ ದಾಟಿಸುವ ದೋಣಿ ಯಾವುದೆಂದು ನನಗೆ ಜಿಜ್ಞಾಸೆ ಈಗ ಹುಟ್ಟಿದೆ. ಸದ್ಯ ಪ್ರಪಂಚದಲ್ಲಿ ಸಜ್ಜನರು ಇದ್ದಾರಾದರೂ ಅವರು ಜನಮಧ್ಯೆ ತಾವು ಧರ್ಮಾತ್ಮರೆಂದು ತೋರಿಸಿಕೊಳ್ಳುವವರಾಗಿದ್ದಾರೆ. ಇನ್ನು ಕೆಲವರು

---

೧ ಅಹಮಾತ್ಮಾನಮಾತ್ಮಸ್ಥಮೇಕ ಏವಾತ್ಮನಿ ಸ್ಥಿತಃ।
ಕರ್ತುಂ ಕಾಂಕ್ಷಾಮಿ ನೇಚ್ಛಾಮಿ ಬದ್ಧಃ ಸಾಧಾರಣೈರ್ಗುಣೈಃ॥ – ೧೮೭/೩

ವಿರಕ್ತರಾದವರು. ತಮ್ಮ ಜೀವನ ನಿರ್ವಹಣೆಗಾಗಿ ಪರಾವಲಂಬಿಗಳಾಗಿದ್ದಾರೆ. ಹೀಗಾಗಿ ನನಗೆ ಗೃಹಸ್ಥ ಸನ್ಯಾಸಧರ್ಮಗಳ ಬಗ್ಗೆ ಅಭಿರುಚಿಯಿಲ್ಲವಾಗಿದೆ. ಆದ್ದರಿಂದ ಧರ್ಮಾಸಕ್ತಿ ಇರುವ ನನಗೆ ಯೋಗ್ಯಮಾರ್ಗ ಯಾವುದೆಂದು ತಿಳಿಸು' ಎಂದು ಅತಿಥಿಗೆ ಬೇಡಿದ ಈ ಬ್ರಾಹ್ಮಣ.

ಅದಕ್ಕೆ ಆ ಅತಿಥಿಯು ಈ ವಿಷಯದಲ್ಲಿ ನನಗೂ ಸಂಶಯವೇ ಇದೆ. ನನಗೂ ನಿನ್ನಂತೆ ಆಸೆ ಇದೆ. ಆದರೆ ಯೋಗ್ಯಧರ್ಮ ಯಾವುದೆಂದು ತಿಳಿಯೆ. ಕೆಲವರು ಮೋಕ್ಷವನ್ನು ಕೆಲವರು ಯಜ್ಞಫಲವನ್ನು ಮತ್ತೆ ಕೆಲವರು ವಾನಪ್ರಸ್ಥಾಶ್ರಮವನ್ನು ಇನ್ನು ಕೆಲವರು ಗೃಹಸ್ಥಾಶ್ರಮವೇ ಧರ್ಮ ಎನ್ನುತ್ತಾರೆ. ಕೆಲವರು ರಾಜಧರ್ಮ, ಕೆಲವರು ಅಧ್ಯಾತ್ಮಮಾರ್ಗ, ಕೆಲವರು ಗುರುಹಿರಿಯರ ಸೇವೆ, ಕೆಲವರು ಮೌನವ್ರತಗಳನ್ನು ಆಶ್ರಯಿಸುತ್ತಾರೆ. ಮತ್ತೆ ಕೆಲವರು ತಂದೆತಾಯಿಗಳ ಸೇವೆಯನ್ನು ಅಹಿಂಸಾಧರ್ಮ, ಸತ್ಯಧರ್ಮ, ಕ್ಷತ್ರಿಯರು ಯುದ್ಧದಲ್ಲಿ ಮಡಿಯುವುದನ್ನು, ಮತ್ತೆ ಕೆಲವರು ಉಂಛವೃತ್ತಿಯನ್ನು ಆಶ್ರಯಿಸಿ ಸಿದ್ಧರಾಗಿ ಸ್ವರ್ಗಕ್ಕೆ ಹೋಗುತ್ತಾರೆ. ಮತ್ತೆ ಕೆಲವರು ವೇದಾಧ್ಯಯನ, ವೇದೋಕ್ತವ್ರತಾಚರಣೆ, ಸಂತೃಪ್ತಜೀವನ ನಡೆಸಿ ಸ್ವರ್ಗಕ್ಕೆ ಹೋಗುತ್ತಾರೆ. ಮತ್ತೆ ಕೆಲವರು ತ್ರಿಕರಣ ಶುದ್ಧಿಯಿಂದ ಸರಳ, ಋಜುಜೀವನ ನಡೆಸಿದರೂ ವಂಚಕರಿಂದ (ಅಪ್ರಾಮಾಣಿಕ ಜನರಿಂದ) ಮೋಸ ಹೊಂದಿ ಸ್ವರ್ಗಕ್ಕೆ ಹೋದವರೂ ಇದ್ದಾರೆ.

ಹೀಗೆ ಅನೇಕ ಧರ್ಮಮಾರ್ಗಗಳಿಂದ ಧರ್ಮಾಚರಣೆ ಮಾಡಿ ಸ್ವರ್ಗಕ್ಕೆ ಹೋದವರಿದ್ದಾರೆ. ಆದರೆ ಯಾವುದನ್ನು ಅನುಸರಿಸಬೇಕೆಂದು ನನಗೆ ಖಚಿತವಾಗಿ ಹೇಳಲು, ವಾಯುವಿನಂತೆ ಜೋರಾಗಿ ದಬ್ಬಲ್ಪಟ್ಟ ಮೋಡದಂತೆ ನನ್ನ ಮನಸ್ಸಿಗೆ ಸಾಧ್ಯವಾಗುತ್ತಿಲ್ಲ ಎಂದನು (ಅತಿಥಿ).

ಆದರೆ ಈ ವಿಷಯದಲ್ಲಿ ನೀನು ನೈಮಿಷಾರಣ್ಯದ ಗೋಮತೀತೀರದಲ್ಲಿರುವ '**ನಾಗ**' ಎಂಬ ಪಟ್ಟಣದಲ್ಲಿ **ಪದ್ಮನಾಭ**ನೆಂಬ '**ಮಹಾನಾಗ**' (ಸರ್ಪ) ಇದ್ದಾನೆ. ಆತನ ಬಳಿಗೆ ಹೋದರೆ ನಿನ್ನ ಪ್ರಶ್ನೆಗೆ ಉತ್ತರ ಸಿಗುತ್ತದೆ ಎಂದನು ಅತಿಥಿ.

ನೈಮಿಷಾರಣ್ಯದ ಗೊಮತೀತೀರದಲ್ಲಿ ಆ ನಾಗಪಟ್ಟಣದಲ್ಲಿ ಹಿಂದೆ ಎಲ್ಲ ದೇವತೆಗಳು ಯಾಗ ಮಾಡುತ್ತಿದ್ದರು. **ಮಾಂಧಾತ**ನೂ ಯಾಗ ಮಾಡಿ ಇಂದ್ರನನ್ನು ಮೀರಿಸಿದ್ದನು. ನಾನು ಹೇಳಿದ ಮಹಾನಾಗ ಧರ್ಮಾತ್ಮನು. ಆತನು ಕಾಯೇನ ವಾಚಾ ಮನಸಾ ಶುದ್ಧನಾಗಿದ್ದು ಧರ್ಮಿಷ್ಠನಾಗಿದ್ದ. ಪ್ರಾಣಿಗಳನ್ನು ಸಂತೋಷಗೊಳಿಸುತ್ತಿದ್ದ. ಸಾಮ, ಧಾನ, ಭೇದ, ದಂಡಗಳಿಂದ (ನಾಲ್ಕು ಉಪಾಯಗಳಿಂದ) ಎಲ್ಲ ಜನರನ್ನೂ ಸನ್ಮಾರ್ಗಕ್ಕೆ ತರುತ್ತಿದ್ದ. ಜನರ ಕಷ್ಟಗಳನ್ನು ಧ್ಯಾನ ಮಾಡಿ ತಿಳಿದು ಅವುಗಳಿಗೆ ಪರಿಹಾರ ನೀಡುತ್ತಿದ್ದ. ಇಂದಿಗೂ ಹಾಗೆಯೇ ಇದ್ದಾನೆ. ಅವನು ಮಹಾಬುದ್ಧಿವಂತನೂ, ಶಾಸ್ತ್ರಜ್ಞನು, ಅತಿಥಿಸತ್ಕಾರವನ್ನು ಚೆನ್ನಾಗಿ ಮಾಡುವವನು, ಎಲ್ಲರೂ ಬಯಸುವ ಗುಣಗಳಿಂದ ಕೂಡಿದವನೂ ಆಗಿದ್ದಾನೆ, ಸ್ವಭಾವತಃ ನೀರಿನಂತೆ ಶುದ್ಧ ಸಚ್ಚಾರಿತ್ರ್ಯಸಂಪನ್ನ ಅಸೂಯಾರಹಿತನು, ಶೀಲವಂತನೂ, ಯಜ್ಞಶೇಷವನ್ನು

ಉಣ್ಣುವವನೂ, ತನ್ನ ಮಾತುಗಳಿಂದ ಪರರಿಗೆ ಅನುಕೂಲವಾಗಿರುವವನೂ, ಪರಹಿತರತ, ಕಾರ್ಯಾಕಾರ್ಯವಿವೇಕಿ, ಯಾರೊಡನೆಯೂ ದ್ವೇಷ ಇಲ್ಲದವನೂ, ಗಂಗಾನದಿಯಂತೆ ಸತ್ಕುಲ(ನಿರ್ಮಲ) ಕುಲ(ವಂಶ)ದಲ್ಲಿ ಹುಟ್ಟಿದವನು ಆಗಿದ್ದಾನೆ.

ಬ್ರಾಹ್ಮಣನಿಗೆ ಅತಿಥಿಯ ಈ ಮಾತುಗಳಿಂದ ಮನಸ್ಸಿನ ಭಾರ ಇಳಿಯಿತು. 'ಎಲೈ ಅತಿಥಿಯೇ! ನಿನ್ನ ಮಾತುಗಳು ದೇಹಾಯಾಸದಿಂದ ಬಳಲಿದವನಿಗೆ ಹಾಸಿಗೆಯಂತೆ, ನಿಂತು ನಿಂತು ಆಯಾಸಗೊಂಡವನಿಗೆ ಆಸನ ಕೊಟ್ಟಂತೆ, ಬಾಯಾರಿದವನಿಗೆ ನೀರಿನಂತೆ, ಹಸಿವೆಯಾದವನಿಗೆ ಭೋಜನ ನೀಡಿದಂತಾಗಿವೆ. ಅಲ್ಲದೆ ಮಕ್ಕಳಿಲ್ಲದವನಿಗೆ ಪುತ್ರಪ್ರಾಪ್ತಿಯಂತೆ, ಮನಸ್ಸಿನಲ್ಲಿ ನೆನೆದ ಗೆಳೆಯ ಎದುರು ಬಂದಂತೆ, ಕುರುಡನಿಗೆ ಕಣ್ಣು ಸಿಕ್ಕಂತೆ ಆಗಿದೆ. ಆದ್ದರಿಂದ ನೀನು ಹೇಳಿದಂತೆ ಮಾಡುತ್ತೇನೆ. ಈಗಾಗಲೇ ರಾತ್ರಿಯಾಗಿದೆ. ರಾತ್ರಿ ನಮ್ಮ ಮನೆಯಲ್ಲಿಯೇ ವಿಶ್ರಾಂತಿ ಪಡೆದು ದಣಿವಾರಿಸಿಕೊಂಡು ಬೆಳಿಗ್ಗೆ ಪ್ರಯಾಣ ಮಾಡು. ಅದರಂತೆ ರಾತ್ರಿ ಅವರ ಮನೆಯಲ್ಲಿಯೇ ಇದ್ದು ರಾತ್ರಿಯೆಲ್ಲ ಮೋಕ್ಷಮಾರ್ಗದ ಬಗ್ಗೆಯೇ ಇಬ್ಬರೂ ಮಾತನಾಡುತ್ತಾ ಕಳೆದರು. ಬೆಳಿಗ್ಗೆ ಬ್ರಾಹ್ಮಣನು ಅತಿಥಿಯನ್ನು ವಿಧ್ಯುಕ್ತವಾಗಿ ಪೂಜಿಸಿ ಬೀಳ್ಕೊಟ್ಟನು. ಬ್ರಾಹ್ಮಣನೂ ತನ್ನ ಕಾರ್ಯಾರ್ಥಕ್ಕಾಗಿ ಬಾಂಧವರಿಂದ ಅನುಮತಿ ಪಡೆದು ನಾಗಪುರಕ್ಕೆ ಪ್ರಯಾಣ ಬೆಳೆಸಿದನು.

ಬ್ರಾಹ್ಮಣನು ನಾಗಪುರಕ್ಕೆ ಹೋಗುವ ದಾರಿಯಲ್ಲಿ ವಿಚಿತ್ರವಾದ ವನ, ತೀರ್ಥ, ನದಿಗಳನ್ನು ದಾಟಿ ಒಬ್ಬ ಋಷಿಯ ಬಳಿಗೆ ಹೋಗಿ, ತಾನು ಹೋಗಬೇಕಾದ ಗುರಿಯ ದಾರಿಯನ್ನು ತಿಳಿದುಕೊಂಡು ಮುಂದುವರೆದನು. ನೇರವಾಗಿ ಬ್ರಾಹ್ಮಣನು ಆ ನಾಗರಾಜನ ಮನೆಗೆ ಹೋಗಿ 'ಭೋಃ ಅಹಮಸ್ಮಿ' ನಾನು ನಿಮ್ಮಲ್ಲಿಗೆ (ನಿಮ್ಮನ್ನು) ನೋಡಲು ಬಂದಿದ್ದೇನೆ ಎಂದನು. ಆಗ ನಾಗರಾಜನ ರೂಪವತಿಯಾದ, ಧರ್ಮಿಷ್ಠಳಾದ, ಪತಿವ್ರತೆಯಾದ ಪತ್ನಿಯು ಬ್ರಾಹ್ಮಣನನ್ನು ಸ್ವಾಗತಿಸಿ, 'ನಾನೇನು ಮಾಡಲಿ. ನನ್ನ ಪತಿಯು ಸೂರ್ಯನ ರಥವನ್ನು ಹೊರಲು ಅಲ್ಲಿಗೆ ಹೋಗಿದ್ದಾನೆ (ವಾರ್ಷಿಕ – ೧ ತಿಂಗಳು). ಇನ್ನು ೧೫ ದಿನಗಳಲ್ಲಿ ವಾಪಸು ಬರುತ್ತಾನೆ. ತಾವು ಬಂದ ಕಾರ್ಯವೇನು? ಎಂದಳು.

ಬ್ರಾಹ್ಮಣನು 'ನಾನು ನಾಗರಾಜನನ್ನು ದರ್ಶನಾರ್ಥಿಯಾಗಿಯೇ ಬಂದಿದ್ದೇನೆ. ಆತನು ಬರುವವರೆಗೆ ಇದೇ ವನದಲ್ಲಿ ಮಿತಾಹಾರಿಯಾಗಿ ಕಾಯುತ್ತೇನೆ. ಬಂದಮೇಲೆ ನಾನು ಬಂದಿರುವ ವಿಷಯವನ್ನು ಶಾಂತವಾಗಿ ತಿಳಿಸು. ನನ್ನ ಬಳಿ ಬಂದು ದರ್ಶನ ನೀಡುವಂತೆ ನಿನ್ನ ಪತಿಗೆ ಹೇಳು' ಎಂದನು. ಮತ್ತೆ ನಾಗಪತ್ನಿಯನ್ನು ಸಮಾಧಾನಿಸಿ ಗೋಮತೀತೀರಕ್ಕೆ ಹೋದನು[೧].

---

೧ ಸಂಪ್ರಾಪ್ತಸ್ತ್ವೈವ ಚಾವ್ಯಗ್ರಮಾವೇದ್ಯೋऽಹಮಿಹಾಗತಃ।
ಮಮಾಭಿಗಮನಂ ಪ್ರಾಪ್ತೋ ವಾಚ್ಯಶ್ಚ ವಚನಂ ತ್ವಯಾ ॥

ಬಂದ ಬ್ರಾಹ್ಮಣ ಅತಿಥಿಯು ಗೋಮತೀತೀರದಲ್ಲಿ ಉಪವಾಸವಾಗಿದ್ದುದು(ತಮ್ಮ ಆತಿಥ್ಯ ಸ್ವೀಕರಿಸದೆ) ನಾಗರಾಜನ ಬಂಧು ಸರ್ಪಗಳಿಗೆ ಬಹಳ ದುಃಖಕ್ಕೆ ಕಾರಣವಾಯಿತು. ಅವರೆಲ್ಲ ಒಟ್ಟಾಗಿ ಬಂದು ಬ್ರಾಹ್ಮಣನ ಬಳಿ ಹೋಗಿ ನಿರಾಹಾರನಾಗಿದ್ದುಕೊಂಡು ಮಂತ್ರ ಜಪಿಸುತ್ತಿರುವುದನ್ನು ಅನೇಕ ರೀತಿಯಿಂದ ಅನೇಕಬಾರಿ ಸತ್ಕರಿಸಿ, ಧರ್ಮವತ್ಸಲನೇ! ನೀನು ಬಂದು ಆರು ದಿನವಾಯಿತು. ನಿರಾಹಾರ ಇದ್ದೀಯಾ, ನಮ್ಮಿಂದ ಏನನ್ನೂ ಬಯಸುತ್ತಿಲ್ಲ. ನಿನಗೆ ಗೆಡ್ಡೆ-ಗೆಣಸು, ಹಣ್ಣು ಎಲೆ, ಹಾಲು, ನೀರು, ಯಾವುದನ್ನಾದರೂ ಸ್ವೀಕರಿಸು. ನಿನ್ನ ಉಪವಾಸ ನಮಗೆ ಧರ್ಮಸಂಕಟವಾಗುತ್ತಿದೆ.

ನಮ್ಮ ವಂಶದಲ್ಲಿ ಯಾರೂ ಭ್ರೂಣಹತ್ಯೆ ಮಾಡಿಲ್ಲ, ರಾಜನಿಗೆ ಬೇಡವಾದವರೂ ಅಲ್ಲ, ಸುಳ್ಳು ಹೇಳುವವರಲ್ಲ, ದೇವತಾತಿಥಿಗಳಿಗೆ ನೀಡದೆ ಉಣ್ಣುವವರೂ ಅಲ್ಲ. ಆದ್ದರಿಂದ ನಮ್ಮ ಆತಿಥ್ಯ ಸ್ವೀಕರಿಸು ಎಂದರು[೧].

ಅದಕ್ಕೆ ಬ್ರಾಹ್ಮಣನು ನಿಮ್ಮ ಮಧುರ ಮಾತುಗಳೆ ನನಗೆ ಆಹಾರದಂತಿವೆ. ನಾನು ನಾಗರಾಜನು ಬರುವವರೆಗೆ ೮ ದಿನ ಕಾಯುತ್ತೇನೆ. ಆಗಲೂ ಬರದಿದ್ದಲ್ಲಿ ಆಹಾರ ಸ್ವೀಕರಿಸುತ್ತೇನೆ. ಅವನನ್ನು ನೋಡುವ ಸಲುವಾಗಿಯೇ ಈ ನಿರಾಹಾರವ್ರತ. ದುಃಖಿಸಬೇಡಿರಿ[೨]' ಎಂದಾಗ ಅವರೆಲ್ಲ ಅವನ ಅನುಮತಿ ಪಡೆದು ವಾಪಸು ತಮ್ಮ ಮನೆಗಳಿಗೆ ಹೋದರು.

ಧರ್ಮರಾಜನೇ! ನಾಗರಾಜನು ಸೂರ್ಯನಲ್ಲಿ ತನ್ನ ಕರ್ತವ್ಯ ಮುಗಿಸಿಕೊಂಡು, ಆತನ ಅನುಮತಿ ಪಡೆದು ವಾಪಸು ತನ್ನ ಮನೆಗೆ ಬಂದನು. ಹೆಂಡತಿಯು ಮನೆಗೆ ಬಂದ ಅತಿಥಿ ಬ್ರಾಹ್ಮಣನ ಬಗ್ಗೆ ಎಲ್ಲ ತಿಳಿಸಿದಳು. ನಾಗರಾಜನು ಕೇಳಿದ (ಅದಕ್ಕೂ ಮೊದಲು).

ನಾನು ಇಲ್ಲ ಎಂಬ ಕಾರಣದಿಂದ ಸ್ತ್ರೀಸ್ವಭಾವದಿಂದಾಗಿ ಧರ್ಮಮರ್ಯಾದೆಯನ್ನು ಮೀರಿ ಇಲ್ಲವಷ್ಟೇ?[೩]

ಅದಕ್ಕೆ ನಾಗಪತ್ನಿಯು ಸುದೀರ್ಘ ಉತ್ತರ ನೀಡಿದಳು.

---

ಅಹಮಪ್ಯತ್ರ ವತ್ಸ್ಯಾಮಿ ಗೋಮತ್ಯಾಃ ಪುಲಿನೇ ಶುಭೇ।
ಕಾಲಂ ಪರಿಮಿತಾಹಾರೋ ಯಥೋಕ್ತಂ ಪರಿಪಾಲಯನ್ ॥ - ೧೯೦/೧೧,೧೨

೧ ನ ಹಿ ನೋ ಭ್ರೂಣಹಾ ಕಶ್ಚಿತ್ ರಾಜಾಪಥ್ಯೋಽನೃತೋಽಪಿ ನ ವಾ।
ಪೂರ್ವಾಶೀ ವಾ ಕುಲೇ ಹ್ಯಸ್ಮಿನ್ ದೇವತಾತಿಥಿಬಂಧುಷು ॥ - ೧೯೧/೯

೨ ಯದ್ಯಷ್ಟರಾತ್ರೇ ನಿರ್ಯಾತೇ ನಾಗಮಿಷ್ಯತಿ ಪನ್ನಗಃ।
ತದಾಹಾರಂ ಕರಿಷ್ಯಾಮಿ ತನ್ನಿಮಿತ್ತಮಿದಂ ವ್ರತಮ್ ॥ - ೧೯೧/೧೦

೩ ಸ ಖಲ್ವಸ್ಯ ಕೃತಾರ್ಥೇನ ಸ್ತ್ರೀಬುದ್ಧ್ಯಾ ಮಾರ್ದವೀ ಕೃತಾ।
ಮದ್ವಿಯೋಗೇನ ಸುಶ್ರೋಣಿ ವಿಮುಕ್ತಧರ್ಮಸೇತುನಾ ॥ - ೧೯೨/೪

ಪಾತಿವ್ರತ್ಯವೆ ಪತ್ನಿಗೆ ಅತಿಶ್ರೇಷ್ಠವಾದ ಧರ್ಮ. ನಿನ್ನ ಉಪದೇಶದಿಂದ ಈ ಧರ್ಮವನ್ನು ನಾನು ಬಲ್ಲವಳಾಗಿದ್ದೇನೆ.

'ಇಂದಿಗೆ ೧೫ದಿನಗಳ ಹಿಂದೆ ಬ್ರಾಹ್ಮಣನೋರ್ವನು ಬಂದಿದ್ದಾನೆ. ಅವನು ಬಂದ ಉದ್ದೇಶ ನನಗೆ ಆತ ಹೇಳಲಿಲ್ಲ. ನಿನ್ನ ದರ್ಶನಾಕಾಂಕ್ಷಿಯಾಗಿದ್ದಾನೆ. ಗೋಮತೀತೀರದಲ್ಲಿ ವೇದಪಾರಾಯಣ ಮಾಡುತ್ತಾ ವ್ರತಶೀಲನಾಗಿದ್ದಾನೆ. ನಾಗರಾಜನು ಬಂದ ಕೂಡಲೇ ನನ್ನ ಬಳಿ ಕಳುಹಿಸಬೇಕು ಎಂಬ ಸತ್ಯಪ್ರತಿಜ್ಞೆಯನ್ನು ನನ್ನಿಂದ ಮಾಡಿಸಿದ್ದಾನೆ. ಆದ್ದರಿಂದ ಆ ಬ್ರಾಹ್ಮಣನಿಗೆ ದರ್ಶನ ಕೊಡಲು ಹೋಗುವುದು ಯೋಗ್ಯ'[೨] ಎಂದಳು ಪತ್ನಿ ನಾಗರಾಜನಿಗೆ.

ಈ ಮಾತುಗಳನ್ನು ಕೇಳಿದ ನಾಗರಾಜನಿಗೆ 'ಬ್ರಾಹ್ಮಣರೂಪದಿಂದ ಯಾರನ್ನು ಕಂಡೆ? ಅವನು ಮನುಷ್ಯನೋ, ದೇವತೆಯೋ? ಮನುಷ್ಯರಲ್ಲಿ ನನ್ನನ್ನು ನೋಡಲು ಯಾರು ತಾನೆ ಸಮರ್ಥರು? ಸಮರ್ಥರಾದೂ ನನಗೆ ತನ್ನ ಬಳಿ ಬಂದು ದರ್ಶನ ನೀಡಲು ಯಾವ ಮನುಷ್ಯನು ತಾನೇ ಆಜ್ಞೆಯನ್ನು ಮಾಡಬಲ್ಲ? ನಾವು ವಸ್ತುತಃ ಪೂಜ್ಯರೇ ಹೊರತು ಮನುಷ್ಯರನ್ನು ಸುಲಭವಾಗಿ ನೋಡಲು ಯೋಗ್ಯರಲ್ಲ. ಇದು ನನ್ನ ಅಭಿಪ್ರಾಯ'[೩] ಎಂದನು.

ಅದಕ್ಕೆ ನಾಗಪತ್ನಿಯು 'ಆ ಬ್ರಾಹ್ಮಣನನ್ನು ನೋಡಿದಾಗ ಅವನು ದೇವತೆಯಲ್ಲ ಎನಿಸಿತು. ಆದರೆ ನಿನ್ನಲ್ಲಿ ಭಕ್ತಿಯುಳ್ಳವನು ಎಂದು ಮಾತ್ರ ಹೇಳಬಲ್ಲೆ. ಆತ ನಿನ್ನ ದರ್ಶನಾಕಾಂಕ್ಷಿಯಾಗಿದ್ದಾನೆ. ನೀರನ್ನು ಬಯಸುವ ಜಾತಕಪಕ್ಷಿಯಂತೆ. ಮನಸ್ಸಿನಲ್ಲಿ ಯಾವುದೋ ಆಸೆಯನ್ನಿಟ್ಟುಕೊಂಡು ಶರಣಾಗತನಾಗಿ ಬಂದವರ ಕಣ್ಣೀರನ್ನು ಒರೆಸಿ ಸಮಾಧಾನ ಮಾಡದಿದ್ದರೆ ಅವನು ರಾಜನಾಗಲಿ, ರಾಜಪುತ್ರನಾಗಲಿ, ಭ್ರೂಣಹತ್ಯಾ ಪಾಪಕ್ಕೆ ಗುರಿಯಾಗುತ್ತಾನೆ.'

---

೧ ಪತಿವ್ರತಾ ತ್ವಂ ಭಾರ್ಯಾಯಾಃ ಪರಮೋ ಧರ್ಮ ಉಚ್ಯತೇ।
ತವೋಪದೇಶಾತ್ ನಾಗೇಂದ್ರ ತಚ್ಚ ತತ್ತ್ವೇನ ವೇದ್ಮಿ ವೈ॥ - ೧೯೨/೧೦

೨ ಸಪ್ತಾಷ್ಟದಿನಸಾಸ್ತ್ವದ್ಯ ವಿಪ್ರಸ್ಯೇ ಹಾಗತಸ್ಯ ವೈ।
ಸ ಚ ಕಾರ್ಯಂ ನ ಮೇ ಖ್ಯಾತಿ ದರ್ಶನಂ ತವ ಕಾಂಕ್ಷತಿ॥
ಗೋಮತ್ಯಾಸ್ತ್ವೇಷ ಪುಲಿನೇ ತ್ವದ್ದರ್ಶನಸಮುತ್ಸುಕಃ।
ಆಸೀನೋಽವರ್ತಯನ್ ಬ್ರಹ್ಮ ಬ್ರಾಹ್ಮಣಃ ಸಂಶಿತವ್ರತಃ।
ಅಹಂ ತ್ವನೇನ ನಾಗೇಂದ್ರ ಸಾಮಪೂರ್ವಂ ಸಮಾಹಿತಮ್।
ಪ್ರಸ್ಥಾಪ್ಯೋ ಮತ್ಸಕಾಶಂ ಸ ಸಂಪ್ರಾಪ್ತೋ ಭುಜಗೋತ್ತಮ॥ - ೧೯೨/೧೩,೧೪,೧೫

೩ ಕೋ ಹಿ ಮಾಂ ಮಾನುಷಃ ಶಕ್ತೋ ದ್ರಷ್ಟುಕಾಮೋ ಯಶಸ್ವಿನೀ।
ಸಂದರ್ಶನರುಚಿರ್ವಾಕ್ಯಮಾಜ್ಞಾಪೂರ್ವಂ ವದಿಷ್ಯತಿ॥
ವಂದನೀಯಾಶ್ಚ ವರದಾ ವಯಮಪ್ಯನುಯಾಯಿನಃ।
ಮನುಷ್ಯಾಣಾಂ ವಿಶೇಷೇಣ ನಾವೇಕ್ಷ್ಯಾ ಇತಿ ಮೇ ಮತಿಃ॥ - ೧೯೩/೨,೪

**ಆರ್ಜವೇನಾಭಿಜಾನಾಮಿ ನಾಸೌ ದೇವೋऽನಿಲಾಶನ।**
**ಏಕಂ ತ್ವಸ್ಯ ವಿಜಾನಾಮಿ ಭಕ್ತಿಮಾನತಿರೋಷಣ॥**
**ಆಶಯಾತ್ವಭಿಪನ್ನಾನಾಂ ಅಕೃತ್ವಾಶ್ರುಪ್ರಮಾರ್ಜನಾಮ್।**
**ರಾಜಾ ವಾ ರಾಜಪುತ್ರೋ ವಾ ಭ್ರೂಣಹತ್ಯೈವ ಯುಜ್ಯತೇ॥ - ೧೯೩/೫,೯**

ಹೆಂಡತಿಯ ಮಾತನ್ನು ಕೇಳಿದ ನಾಗರಾಜನು 'ಸಾಧ್ವಿಯೇ! ನಾನು ನನ್ನ ವೀರ್ಯ ಪರಾಕ್ರಮ ಸತ್ಕುಲ ಜನ್ಮ ಮುಂತಾದ ದುರಭಿಮಾನಗಳಿಂದ ಉನ್ಮತ್ತನಾಗಿಲ್ಲ. ಆದರೆ ಜಾತಿಕೃತವಾದ ಕೋಪವಿದೆ (ಸ್ವಾಭಾವಿಕ). ಆದರೂ ಆ ಕೋಪವೂ ನಿನ್ನ ಮಾತಿನಿಂದ ಭಸ್ಮವಾಯಿತು. ಇತಿಹಾಸದಲ್ಲಿ ಕ್ರೋಧವಶನಾದ ರಾವಣ ರಾಮನಿಂದ ಹತನಾದ. ಪರಶುರಾಮನಿಂದ ಕಾರ್ತವೀರ್ಯಾರ್ಜುನ ಮಕ್ಕಳೆಲ್ಲ ಹತರಾದರು.

ನಿಜವಾಗಿಯೂ ಈ ಕೋಪ ತಪಸ್ಸಿನ ಶತ್ರುವೇ ಸರಿ. ಸನ್ಮಾರ್ಗದಿಂದ ಅಧಃಪತನ ಮಾಡುತ್ತದೆ. ಆದರೆ ನಿನ್ನ ಮಾತಿನಿಂದ ಆ ಕೋಪವನ್ನು ನಿಗ್ರಹಿಸಿದ್ದೇನೆ[೧].

ಆದ್ದರಿಂದ ಸರ್ವಗುಣಸಂಪನ್ನೆಯಾದ ನಿನ್ನನ್ನು ಪತ್ನಿಯನ್ನು ಪಡೆದು ನಾನು ನನ್ನನ್ನೇ ಪ್ರಶಂಸೆ ಮಾಡಿಕೊಳ್ಳುತ್ತೇನೆ. ಅಲ್ಲದೆ ನೀನು ಹೇಳಿದಂತೆ ನಾನು ಬ್ರಾಹ್ಮಣನಿದ್ದಲ್ಲಿಗೆ ಹೋಗಿ ಅವನು ಹೇಳಿದಂತೆ ಮಾಡಿ, ಆತನು ಎಲ್ಲ ರೀತಿಯಿಂದ ಕೃತಾರ್ಥನಾಗಿ ವಾಪಸು ಹೋಗುವಂತೆ ಮಾಡುತ್ತೇನೆ.'[೨] ಎಂದು ಪತ್ನಿಗೆ ನಾಗರಾಜನು ಹೇಳಿ ಹೊರಟನು.

ಬ್ರಾಹ್ಮಣನ ಬಳಿ ಸಾಗಿದ ನಾಗರಾಜನು 'ಎಲೈ ಬ್ರಾಹ್ಮಣನೇ! ನನ್ನ ಅಪರಾಧವನ್ನು ಕ್ಷಮಿಸು. ನನ್ನ ಮೇಲೆ ಕೋಪಗೊಳ್ಳಬೇಡ. ಯಾರೂ ಇಲ್ಲದ ಈ ಗೋಮತೀತೀರದಲ್ಲಿ ಯಾರನ್ನು ಉಪಾಸಿಸುತ್ತಿದ್ದೀ? ನೀನು ಯಾರಿಗಾಗಿ ಬಂದಿರುವೆ? ಯಾವ ಪ್ರಯೋಜನಕ್ಕಾಗಿ ಬಂದಿರುವೆ?'

ಅದಕ್ಕೆ ಬ್ರಾಹ್ಮಣನು 'ನಾನು ಧರ್ಮಾರಣ್ಯ. ನಾನು ಪದ್ಮನಾಭನೆಂಬ ನಾಗನನ್ನು ನೋಡಲು ಬಂದಿದ್ದೇನೆ. ಆತನಲ್ಲಿ ನನಗೆ ಸ್ವಲ್ಪ ಕೆಲಸವಿದೆ. ನಾಗರಾಜನ ಬರುವನ್ನು ರೈತನು ಮಳೆ ಸುರಿಯುವದನ್ನು ನಿರೀಕ್ಷಿಸುವಂತೆ ನಿರೀಕ್ಷಿಸುತ್ತಿದ್ದೇನೆ. ನಾಗರಾಜನಿಗೆ ಯಾವ ಕ್ಲೇಶವೂ ಆಗದಂತೆ ಕುಶಲವಾಗಿ ಮನೆಗೆ ಬರಲಿ ಎಂದು ವೇದಪಾರಾಯಣ ಮಾಡುತ್ತಿದ್ದೇನೆ' ಎಂದು ಉತ್ತರಿಸಿದನು[೩].

---

೧ ತದೇಷ ತಪಸಾಂ ಶತ್ರುಃ ಶ್ರೇಯಸಶ್ಚ ನಿಪಾತನಃ।
ನಿಗೃಹೀತೋ ಮಯಾ ರೋಷಃ ಶ್ರುತ್ವೈವ ವಚನಂ ತವ॥ - ೧೯೩/೧೮

೨ ಏಷ ತತ್ರೈವ ಗಚ್ಛಾಮಿ ಯತ್ರ ತಿಷ್ಠತ್ಯಸೌ ದ್ವಿಜಃ।
ಸರ್ವಥಾ ಚೋಕ್ತವಾನ್ ವಾಕ್ಯಂ ನಾಕೃತಾರ್ಥಃ ಪ್ರಯಾಸ್ಯತಿ॥ - ೧೯೩/೨೦

೩. ಧರ್ಮಾರಣ್ಯಂ ಮಾಂ ವಿದ್ಧಿ ನಾಗಂ ದ್ರಷ್ಟುಮಿಹಾಗತಮ್।
ಪದ್ಮನಾಭಂ ದ್ವಿಜಶ್ರೇಷ್ಠಂ ತತ್ರ ಮೇ ಕಾರ್ಯಮಾಹಿತಮ್।

ಅದಕ್ಕೆ ನಾಗನು –

'ನೀನು ಕಾಯುತ್ತಿರುವ ಪದ್ಮನಾಭ ನಾಗನು ನಾನೇ. ನಿನ್ನ ಇಚ್ಛೆ ಏನು? ನಾನೇನು ನಿಮಗೆ ಮಾಡಲಿ? ನಮ್ಮ ಬಂಧುಜನರಿಂದ ನಿಮ್ಮ ಆಗಮನ ತಿಳಿದು ನಾನೇ ನಿಮ್ಮನ್ನು ನೋಡಲು ಬಂದಿದ್ದೇನೆ. ನನ್ನನ್ನು ನೋಡಲು ಬಂದಿರುವ ನೀನು ಕೃತಾರ್ಥನಾಗಿ ಹೋಗುವೆ. ಸಂಶಯಬೇಡ. ನಿನ್ನ ಸುಖವನ್ನು ತ್ಯಜಿಸಿ ನನ್ನ ಕಲ್ಯಾಣವನ್ನೇ ಯಾಚಿಸುತ್ತಿರುವ ನೀನು ನನ್ನನ್ನು ನನ್ನ ಬಂಧುಬಾಂಧವರನ್ನು ಗುಣಗಳಿಂದಲೇ ಕೊಂಡು ಕೊಂಡಿರುವೆ.[೧]'

ಅದಕ್ಕೆ ಬ್ರಾಹ್ಮಣನು 'ನನಗೆ ಗೊತ್ತಿಲ್ಲದೆ ಇರುವ ಒಂದು ವಿಷಯವನ್ನು ನಿನ್ನಿಂದ ತಿಳಿಯಲು ಬಯಸುತ್ತೇನೆ. ನನ್ನ ಮನಸ್ಸು ವಿಷಯಗಳಿಂದ ದೂರವಾಗಿ ಭಗವಂತನಲ್ಲೇ ನೆಟ್ಟಿದೆ. ಗತಿಪ್ರದನಾದ ಪರಬ್ರಹ್ಮನನ್ನು ಹುಡುಕುತ್ತಿದ್ದೇನೆ. ಆದರೆ ಮನಸ್ಸು ಚಂಚಲವಾಗಿದೆ. ಗೃಹವನ್ನೂ, ವೈರಾಗ್ಯವನ್ನೂ ಬಯಸುತ್ತಿದೆ. ನೀನು ನಿನ್ನ ಗುಣಗಳಿಂದ ಅತ್ಯಂತ ಪ್ರಕಾಶಮಾನವಾಗಿ ಚಂದ್ರನಂತೆ ಕಾಣುತ್ತೀ. ನನ್ನ ಪ್ರಶ್ನೆಗೆ ಉತ್ತರಿಸು. ಸಂದೇಹ ಪರಿಹರಿಸು. ನಂತರ ನಾನು ಬಂದ ಕಾರ್ಯ ಹೇಳುತ್ತೇನೆ. ದಯವಿಟ್ಟು ಅನುಗ್ರಹಿಸು.

ಬ್ರಾಹ್ಮಣನು 'ನಾಗರಾಜನೇ! ನೀನು ಸೂರ್ಯನ ಒಂದು ಚಕ್ರವನ್ನು ಧರಿಸಲು ಅಲ್ಲಿಗೆ ಹೋಗುತ್ತೀಯಷ್ಟೇ. ಸೂರ್ಯಮಂಡಲದಲ್ಲಿ ನೀನು ಕಂಡ ಆಶ್ಚರ್ಯಕರವಾದ ಘಟನೆಗಳನ್ನು ತಿಳಿಸಲು ಕೋರುತ್ತೇನೆ' ಎಂದನು. ಅದಕ್ಕೆ ನಾಗರಾಜನು

೧. ದೇವತೆಗಳಿಂದ ಸಹಿತರಾದ ಋಷಿಗಳು, ಸೂರ್ಯನ ಸಾವಿರಾರು ಕಿರಣಗಳಲ್ಲಿ ಮರದ ಶಾಖೆಗಳನ್ನು ಆಶ್ರಯಿಸಿದ ಪಕ್ಷಿಗಳಂತೆ ಆಶ್ರಯಿಸಿ ವಾಸವಾಗಿದ್ದಾರೆ.

೨. ಸೂರ್ಯಮಂಡಲದಿಂದಲೇ ವಾಯುವು ಹೊರಹೊಮ್ಮುತ್ತಾ ಸೂರ್ಯಕಿರಣಗಳನ್ನು ಆಶ್ರಯಿಸಿ, ಆಕಾಶದಲ್ಲಿ ವಿಜೃಂಭಿಸುತ್ತಾನೆ. ಇದಕ್ಕಿಂತಲೂ ಆಶ್ಚರ್ಯಕರವಾದ ಸಂಗತಿ ಯಾವುದಿದೆ(ಸೂರ್ಯಮಂಡಲ ಬರೀ ಉಷ್ಣದ ರಾಶಿ ಎಂದು ತಿಳಿದವರಿಗೆ ಅಲ್ಲಿಂದಲೇ ಗಾಳಿ ಹೊರಹೋಗುತ್ತದೆ ಎನ್ನುವುದು ಬಹುಶಃ ಈಗಿನ ಕಾಲದಲ್ಲಿ ವೈಜ್ಞಾನಿಕವಾಗಿ ವಿವರಿಸಲು ಕಷ್ಟವಿರಬಹುದು. ಆದ್ದರಿಂದ ಅಲ್ಲಿ ನಡೆಯುತ್ತಿರುವುದು ಆಶ್ಚರ್ಯಕರವೇ ಸರಿ).

೩. ಶುಕ್ರನೆಂಬ ಕಾಲಮೇಘವು ಆಕಾಶದಲ್ಲಿ ಮಳೆಗಾಲದಲ್ಲಿ ನೀರನ್ನು ಸೃಷ್ಟಿಸುತ್ತದೆ. ಆ ಮೇಘವು ಸೂರ್ಯನಿಂದಲೇ ಉತ್ಪನ್ನವಾದುದು. ಆದಕ್ಕಿಂತಲೂ ಆಶ್ಚರ್ಯಕರವಾದುದು ಯಾವುದು?

---

ತಸ್ಯ ಚಾಕ್ಲೇಶಕರಣಂ ಸ್ವಸ್ತಿಕಾರ ಸಮಾಹಿತಮ್ ॥
ವರ್ತಯಾಮ್ಯಯುತಂ ಬ್ರಹ್ಮ ಯೋಗಯುಕ್ತೋ ನಿರಾಮಯಃ ॥ – ೧೯೪/೫,೭

೧ ವಯಂ ಹಿ ಭವತಾ ಸರ್ವೇ ಗುಣಕ್ರೀತಾ ವಿಶೇಷತಃ।
ಯಸ್ತ್ವಂ ಆತ್ಮಹಿತಂ ತ್ಯಕ್ತ್ವಾ ಮಾಮೇವೇಹಾನುರುಧ್ಯಸೇ ॥ – ೧೯೪/೧೨

೪. ಸೂರ್ಯದೇವನು ಮಳೆಗಾಲದಲ್ಲಿ ಸುರಿಸಿದ ನೀರನ್ನು ಪುನಃ ಎಂಟು ತಿಂಗಳಕಾಲ ಶುದ್ಧವಾದ ತನ್ನ ಕಿರಣಗಳಿಂದ ಸಂಗ್ರಹಿಸುತ್ತಾನೆ. ಇದು ಆಶ್ಚರ್ಯಕರವಲ್ಲವೇ?

೫. ಯಾವ ಸೂರ್ಯಮಂಡಲದಲ್ಲಿ ಸಾಕ್ಷಾತ್ ಪರಮಾತ್ಮನು (ನಾರಾಯಣನು) ಅಂತರ್ಯಾಮಿಯಾಗಿ ಸನ್ನಿಹಿತನಾಗಿದ್ದಾನೆ. ಸೂರ್ಯನಿಂದಲೇ ಅನೇಕ ವಿಧವಾದ ಬೀಜಗಳು ಹುಟ್ಟುತ್ತವೆ. ಈ ಭೂಮಿಯನ್ನು ಸೂರ್ಯನೇ ಧರಿಸಿದ್ದಾನೆ. ಇದು ಆಶ್ಚರ್ಯವಲ್ಲವೇ?

೬. ನಾನು ಆಕಾಶದಲ್ಲಿ ಮತ್ತೊಂದು ಆಶ್ಚರ್ಯಗಳಲ್ಲಿ ಆಶ್ಚರ್ಯಕರವಾದುದನ್ನು ಹೇಳುತ್ತೇನೆ ಕೇಳು.

ಹಿಂದೊಮ್ಮೆ ಸೂರ್ಯನು ಮಧ್ಯಾಹ್ನ ಸಮಯದಲ್ಲಿ ಲೋಕಗಳನ್ನು ತನ್ನ ಪ್ರಖರ ಕಿರಣಗಳಿಂದ ಪ್ರಕಾಶಗೊಳಿಸುತ್ತಿದ್ದಾಗ ಅದೇ ಆಕಾಶದಲ್ಲಿ ಸೂರ್ಯನಂತೆ ಕಂಗೊಳಿಸುತ್ತಿದ್ದ ಪುರುಷನು ಎಲ್ಲ ಕಡೆ ಕಾಣಿಸಿದನು. ಅವನು ತನ್ನ ತೇಜಸ್ಸಿನಿಂದ ಎಲ್ಲ ಲೋಕಗಳನ್ನು ಪ್ರಕಾಶಗೊಳಿಸುತ್ತಾ ಆಕಾಶವನ್ನೇ ಸೀಳಿ ಬಿಡುತ್ತಾನೋ ಎನ್ನುವಂತೆ ವೇಗವಾಗಿ ಸೂರ್ಯನಿಗೆ ಎದುರಾಗಿ ಬಂದನು. ಅವನು ಅಗ್ನಿಯಂತೆ ಸಮಸ್ತ ಜ್ಯೋತಿರ್ಮಂಡಲವನ್ನು ವ್ಯಾಪಿಸಿ ನಿರ್ದಿಷ್ಟವಾಗಿ ಹೀಗೇ ಇದೆ ಎಂದು ಹೇಳಲಾರದ ರೂಪದಿಂದ ಎರಡನೆಯ ಸೂರ್ಯನಂತೆ ಕಂಗೊಳಿಸುತ್ತಿದ್ದನು.

ಆ ಮಹಾಪುರುಷನು ಸೂರ್ಯನ ಸಮೀಪಕ್ಕೆ ಬರುತ್ತಿರಲು ಸೂರ್ಯನು ತನ್ನ ಎರಡೂ ಕೈಗಳನ್ನು ಮುಂದೆ ಚಾಚಿ ಅವನನ್ನು ಸ್ವಾಗತಿಸಿದನು. ಆ ಪುರುಷನೂ ಸೂರ್ಯನನ್ನು ಪ್ರತಿಯಾ ಸಮ್ಮಾನಿಸಲು ಬಲಗೈಯನ್ನು ಚಾಚಿದನು. ನಂತರ ಆ ಪುರುಷನು ಆಕಾಶವನ್ನು ಭೇದಿಸಿ ಸೂರ್ಯಮಂಡಲವನ್ನು ಪ್ರವೇಶಿಸಿದನು. ಕ್ಷಣಮಾತ್ರದಲ್ಲಿ ಅವನ ತೇಜಸ್ಸು ಸೂರ್ಯನ ತೇಜಸ್ಸಿನೊಡನೆ ಸೇರಿ ಆದಿತ್ಯನಂತೆಯೇ ಆಯಿತು. ಹೀಗೆ ಇಬ್ಬರೂ ಪರಸ್ಪರ ಸೇರಿದಾಗ ನಿಜವಾದ ಸೂರ್ಯ ಯಾರೆಂದು ನಮಗೆ ಸಂಶಯವುಂಟಾಗಿ ರಥದಲ್ಲಿರುವ ಸೂರ್ಯನನ್ನು ಪ್ರಶ್ನಿಸಿದೆವು[೧].

ನಾಗಾದಿಗಳ ಪ್ರಶ್ನೆಗೆ ಸೂರ್ಯ ಹೀಗೆ ಉತ್ತರಿಸಿದನು.

---

೧ ಹುತಾಹುರಿವ ಜ್ಯೋತಿರ್ವ್ಯಾಪ್ಯ ತೇಜೋ ಮರೀಚಿಭಿಃ।
ಅನಿರ್ದೇಶ್ಯೇನ ರೂಪೇಣ ದ್ವಿತೀಯ ಇವ ಭಾಸ್ಕರಃ॥
ತಸ್ಯಾಭಿಗಮನಪ್ರಾಪ್ತೌ ಹಸ್ತೋ ದತ್ತೋ ವಿವಸ್ವತಮ್।
ತೇನಾಪಿ ದಕ್ಷಿಣೋ ಹಸ್ತೋ ದತ್ತಃ ಪ್ರತ್ಯರ್ಚನಾರ್ಥಿನಾ॥
ತತೋ ಭಿತ್ತ್ವೈವ ಗಗನಂ ಪ್ರವಿಷ್ಟೋ ರವಿಮಂಡಲಮ್।
ಏಕೀಭೂತಂ ಚ ತತ್ತೇಜಃ ಕ್ಷಣೇನಾದಿತ್ಯತಾಂ ಗತಮ್॥
ಅನಯೋಃ ಕೋ ಭವೇತ್ ಸೂರ್ಯೋ ರಥಸ್ಥೋಽಯೋಽಽಯಮಾಗತಃ॥ - ೧೯೫/೧೧-೧೪

ನನ್ನೆದುರು ಬಂದು ಸೂರ್ಯಮಂಡಲ ಸೇರಿದವನು ಉಂಛವೃತ್ತಿಯಲ್ಲಿದ್ದ ಒಬ್ಬ ಬ್ರಾಹ್ಮಣ ಮುನಿ. ಅವನು ಕಂದಮೂಲ, ಫಲಾಹಾರ ಮಾಡುತ್ತಾ ಕೇವಲ ನೀರನ್ನು ಸೇವಿಸುತ್ತಾ, ಕೆಲವೊಮ್ಮೆ ಕೇವಲ ವಾಯುಭಕ್ಷನಾಗಿದ್ದು ಹರಿಧ್ಯಾನಪರವಾಗಿದ್ದವನು. ಈ ಬ್ರಾಹ್ಮಣನು ಸಂಹಿತಾಮಂತ್ರಗಳಿಂದ ಭಗವಂತನನ್ನು ಸ್ತುತಿಮಾಡುತ್ತಾ ಸತ್ಕರ್ಮಾನುಷ್ಠಾನ ಮಾಡುತ್ತಾ(ಸ್ವರ್ಗದ್ವಾರವೆನಿಸಿದ), ನನ್ನ ಮೂಲಕ ಸ್ವರ್ಗಕ್ಕೆ ಹೋದನು (ಕಣದಲ್ಲಿ ಬಿದ್ದ ಕಾಳುಗಳನ್ನು ಸಂಗ್ರಹಿಸುವುದು ಉಂಛವೃತ್ತಿ. ಉದುರಿಬಿದ್ದ ಸಣ್ಣ ತೆನೆಗಳನ್ನು ಸಂಗ್ರಹಿಸುವುದು ಶಿಲವೃತ್ತಿ ಎನ್ನುತ್ತಾರೆ). ಕೇವಲ ಉಂಛವೃತ್ತಿಯಿಂದ ಸಿದ್ಧಗತಿ ಪಡೆದ ಆ ಬ್ರಾಹ್ಮಣನು ಈಗಲೂ ಸೂರ್ಯನ ಜೊತೆಗೇ ಇದ್ದು, ಅವನೂ ಭೂಮಿಯನ್ನು ಸುತ್ತುತ್ತಿದ್ದಾನೆ. ಇದು ಮಹಾ ಆಶ್ಚರ್ಯಕರವಾದುದು[೧].

ಹೀಗೆ ನಾಗರಾಜನ ಮಾತುಗಳನ್ನು ಕೇಳಿದ ಬ್ರಾಹ್ಮಣನು –

'ನೀನು ಹೇಳಿದ ಸಂಗತಿಗಳೆಲ್ಲ ಆಶ್ಚರ್ಯಕರಗಳೇ. ನನಗೆ ತುಂಬಾ ಸಂತೋಷವಾಗಿದೆ. ನನಗೆ ಯಾವುದು ಬೇಕಿತ್ತೋ, ಅದನ್ನು ನೀನು ಹೇಳಿ ಮಾರ್ಗದರ್ಶನ ಮಾಡಿದ್ದೀಯಾ. ನಿನಗೆ ಮಂಗಳವಾಗಲಿ. ನಾನು ಹೋಗಿ ಬರುತ್ತೇನೆ. ನಿನಗೆ ಎಲ್ಲಿಗಾದರೂ ಕಳಿಸಿ ಮಾಡಬೇಕಾದ ಕೆಲಸವಿದ್ದರೆ ನನ್ನನ್ನು ಸ್ಮರಿಸು. ಖಂಡಿತ ನಾನು ಬಂದು ನಿನ್ನ ಕೆಲಸ ಮಾಡಿಕೊಡುತ್ತೇನೆ' ಎಂದನು.

ಆಗ ನಾಗರಾಜನು 'ಬ್ರಾಹ್ಮಣನೇ ನಿನ್ನ ಮನಸ್ಸಿನಲ್ಲಿದ್ದ ಕಾರ್ಯ ಹೇಳದೇ(ನೀನು ಬಂದ ಕಾರ್ಯ), ಎಲ್ಲಿ ಹೋಗುವೆ? ನೀನು ಏಕೆ ಬಂದಿದ್ದಿ? ನೀನು ನಿನ್ನ ಮನಸ್ಸಿನ ಆಸೆಯನ್ನು ಹೇಳು ಅಥವಾ ಬಿಡು. ನೀನು ಬಂದ ಕಾರ್ಯ ಮುಗಿದ ಮೇಲೆಯೇ ನನ್ನ ಅನುಮತಿಯನ್ನು ಪಡೆದು ಇಲ್ಲಿಂದ ಹೋಗಬೇಕು. ಅಲ್ಲಿಯವರೆಗೆ ಹೋಗುವಂತಿಲ್ಲ' ಎಂದನು. ನನ್ನನ್ನು ಕೇವಲ ನೋಡಿ ಹೋಗುವುದು ಸರಿಯೆನಿಸದು. ನನಗೆ ನಿನಗೆ ಪರಸ್ಪರ ಪ್ರೀತಿ ಇದೆ. ಈ ನನ್ನ ಲೋಕವೆಲ್ಲವೂ ನಿನ್ನದೇ. ನನ್ನ ಮನೆಯಲ್ಲಿ ವಾಸಿಸು. ನಿನಗೆ ಯಾವ ಚಿಂತೆ?' ಎಂದಾಗ ಬ್ರಾಹ್ಮಣನು 'ನೀನು ಹೇಳಿದಂತೆಯೇ ಆಗಲಿ. ದೇವತೆಗಳೂ ನಿನ್ನ ಮಾತನ್ನು ಮೀರಲಾರರು ಇದು ಸತ್ಯ.[೨]'

---

೧ ಉಂಛವೃತ್ತಿವ್ರತೇ ಸಿದ್ಧೋ ಮುನಿರೇಷ ದಿವಂ ಗತಃ।
ಋಚಶ್ಚಾನೇನ ವಿಪ್ರೇಣ ಸಂಹಿತಾಂತರಭಿಷ್ಟುತಾಃ।
ಸ್ವರ್ಗದ್ವಾರಕೃತೋದ್ಯೋಗೋ ಯೇನಾಸೌ ತ್ರಿದಿವಂಗತಃ।
ಸಂಸಿದ್ಧೋ ಮಾನುಷೋ ಕಾಯಃ ಯೋಽಸೌ ಸಿದ್ಧಗತಿಂ ಗತಃ।
ಸೂರ್ಯೇಣ ಸಹಿತೋ ಬ್ರಹ್ಮನ್ ಪೃಥಿವೀ ಪರಿವರ್ತತೇ॥ – ೧೯೬/೧,೩,೬

೨ ಯ ಏವಾಹಂ ಸ ಏವತ್ವಮೇವಮೇತತ್ ಭುಜಂಗಮ।
ಅಹಂ ಭವಾಂಶ್ಚ ಭೂತಾನಿ ಸರ್ವೇ ಸರ್ವತ್ರಗಾಃ ಸದಾ॥ – ೧೯೭/೮
ಈ ಶ್ಲೋಕದ ಪಾಠ ಬೇರೆ ಬೇರೆ ಪ್ರಕಾಶನಗಳಲ್ಲಿ ಬೇರೆ ಬೇರೆ ಇದೆ. ಇದು ವೈಷ್ಣವಪಾಠ.

ಸೂರ್ಯಮಂಡಲಾಂತರ್ಗತನಾದ ನಾರಾಯಣನ ಯಾವ ವಿಷಯ ಹೇಳಿದೆಯೋ ಸಮಸ್ತ ಪ್ರಾಣಿಗಳೂ ಎಲ್ಲಿಗೆ ಹೋಗಿ ಸೇರುತ್ತಾರೋ ಅಂತಹ ನಾರಾಯಣನು ನಿನ್ನಲ್ಲಿ ಸನ್ನಿಹಿತನಾಗಿದ್ದಾನೆ. ನನ್ನಲ್ಲೂ ಇದ್ದಾನೆ. ಎಲ್ಲರಲ್ಲೂ ಅವನ ಸನ್ನಿಧಾನವಿದೆ.

ನಾಗರಾಜನೇ! ನನಗೆ ಪುಣ್ಯಸಂಗ್ರಹವಿಷಯದಲ್ಲಿ ಸಂಶಯವಿತ್ತು. ಸದ್ಗತಿ ಸಾಧನೆಯ ಬಗ್ಗೆ ಸಂಶಯವಿತ್ತು. ಅದೀಗ ಪರಿಹಾರವಾಯಿತು. ಉಂಛವೃತ್ತಿಯಿಂದ ಸದ್ಗತಿ ಬಗ್ಗೆ ಉದಾಹರಣೆ ಕೊಟ್ಟು ಸಂಶಯ ಪರಿಹಾರವಾಯಿತು. ಆದ್ದರಿಂದ ಇನ್ನು ಮುಂದೆ ಉಂಛವೃತ್ತಿಯನ್ನು ಆಚರಿಸಲು ಹೋಗುತ್ತೇನೆ. ನಿನ್ನಿಂದ ನನ್ನ ಉದ್ದೇಶಿಸಿದ ಕಾರ್ಯವಾಯಿತು. ನಿನಗೆ ಮಂಗಳವಾಗಲಿ. ಹೋಗಲು ಅನುಮತಿ ನೀಡು.'

ಆ ಬ್ರಾಹ್ಮಣನು (ಧರ್ಮಾರಣ್ಯ) ನಾಗರಾಜನ ಅನುಮತಿ ಪಡೆದು ಉಂಛವೃತ್ತಿಯ ದೀಕ್ಷೆಯನ್ನು ಪಡೆಯಲು ಭಾರ್ಗವಗೋತ್ರದ ಚ್ಯವನರ ಬಳಿಗೆ ಹೋದನು. ಅವರು ಬ್ರಾಹ್ಮಣನಿಗೆ ದೀಕ್ಷೆ ನೀಡಿ ಸತ್ಕರಿಸಿ ಕಳಿಸಿದರು. ನಂತರ ಆ ಬ್ರಾಹ್ಮಣನು ಉಂಛವೃತ್ತಿಯನ್ನೇ ತನ್ನ ಜೀವನವನ್ನಾಗಿಸಿಕೊಂಡು ಜೀವನ ನಿರ್ವಹಿಸುತ್ತಿದ್ದನು. ಬ್ರಾಹ್ಮಣನು ಈ ವ್ರತದ ಬಗ್ಗೆ ಚ್ಯವನರಿಗೆ ವಿವರಿಸಿದನು. ಚ್ಯವನರು ಜನಕರಾಜನ ಅರಮನೆಯಲ್ಲಿ ನಾರದರಿಗೆ ಹೇಳಿದನು, ನಾರದರು ಇಂದ್ರನಿಗೆ ಹೇಳಿದರು. ಇಂದ್ರನು ಕೂಡಾ ಇದನ್ನು ವಸುಗಳಿಗೆ ಹೇಳಿದನು. ಭೀಷ್ಮರು ಕೂಡಾ ತಮಗೆ ವಸುಗಳು ಹೇಳಿದರೆಂದು ತಿಳಿಸುತ್ತಾರೆ. ಭಾರ್ಗವರಾಮನೊಡನೆ ಅಂಬಾದೇವಿಯ ಸಲುವಾಗಿ ನಡೆದ ಸಂದರ್ಭದಲ್ಲಿ ವಸುಗಳು ಭೀಷ್ಮರಿಗೆ ಹೇಳಿದ್ದರಂತೆ. ಇದು ಧರ್ಮಕ್ಕೆ ಸಂಬಂಧಿಸಿದ ಪ್ರಶ್ನೆಗಳನ್ನು ಕೇಳಿದ ನಿನಗೆ ಈ ಕಥೆಯನ್ನು ಹೇಳುತ್ತಿದ್ದೇನೆ ಎಂದು ಭೀಷ್ಮರು ಧರ್ಮರಾಜನಿಗೆ ಹೇಳುತ್ತಾರೆ.

ಹೀಗೆ ಧರ್ಮರಾಜನೇ! ಆ ಬ್ರಾಹ್ಮಣನು, ನಾಗರಾಜನು ತಿಳಿಸಿದಂತೆ ತನ್ನ ಧರ್ಮದಲ್ಲಿ ನಿಶ್ಚಯಬುದ್ಧಿಯನ್ನು ಹೊಂದಿ ಉಂಛವೃತ್ತಿ ದೀಕ್ಷಿತನಾದ. ಮತ್ತೊಂದು ಅರಣ್ಯಕ್ಕೆ ಹೋಗಿ ಯಮನಿಯಮಗಳನ್ನು ಪಾಲಿಸುತ್ತಾ ಉಂಛ, ಶಿಲ ವೃತ್ತಿಯಿಂದ ದೊರಕಿದ ಅಲ್ಪಾಹಾರವನ್ನು ಸೇವಿಸಿ ಈ ವ್ರತದಿಂದಲೇ ಸಿದ್ಧಿಯನ್ನು ಹೊಂದಿದನು.

## ಸಂದೇಶಗಳು-ವಿವರಣೆಗಳು

೧. ಬ್ರಹ್ಮಚರ್ಯಾದಿ ಆಶ್ರಮಿಗಳಿಗೆ ಅನೇಕ ಧರ್ಮಗಳು ಹೇಳಲ್ಪಟ್ಟಿವೆ. ಅವುಗಳಲ್ಲಿಯೂ ಅತಿಮುಖ್ಯ ಯಾವುದು ಎಂಬ ಧರ್ಮರಾಜನ ಪ್ರಶ್ನೆಯೇ ಒಂದು ಶ್ರೇಷ್ಠ ಸಂದೇಶ. ಕಾರಣ

---

ಸ ಏವ ತ್ವಂ ಸ ಏವಾಹಂ ಯೋಽಹಂ ಸ ತು ಭವಾನಪಿ ।
ಅಹಂ ಭವಾಂಶ್ಚ ಭೂತಾನಿ ಸರ್ವೇ ಯತ್ರ ಗತಾಃ ಸದಾ ॥ ೩೬೪/೮
ಇದು ಗೀತಾಪ್ರೆಸ್ ಪ್ರಕಾಶನದ ಶ್ಲೋಕ.

ಎಲ್ಲ ಧರ್ಮಗಳನ್ನೂ ಅನುಷ್ಠಾನಕ್ಕೆ ತರುವುದು ಎಲ್ಲರಿಗೂ ಸಾಧ್ಯವಾಗದು. ಆದ್ದರಿಂದ ಅತಿಮುಖ್ಯವಾದುದನ್ನು ಆಚರಣೆಗೆ ತರುವ ತವಕ ಸಾಧಕನಿಗೆ ಇರಬೇಕು. (೧೮೫)

೨. ಈ ವಿಷಯದಲ್ಲಿ ಒಬ್ಬೊಬ್ಬರು ತಮಗೆ ಸರಿಯಾಗಿ ತೋರಿದುದನ್ನು ಧರ್ಮವೆನ್ನುತ್ತಾರೆ. ಅದು ಅವರ ಬುದ್ಧಿಶಕ್ತಿಯ ಇತಿಮಿತಿ (೧೮೫).

೩. ಧರ್ಮಾರಣ್ಯನ ಮನೆಗೆ ಬಂದ ಬ್ರಾಹ್ಮಣ ಅತಿಥಿಯನ್ನು ಧರ್ಮಾರಣ್ಯ ಬ್ರಾಹ್ಮಣ ತನ್ನ ಮನಸ್ಸಿನ ದುಗುಡಗಳನ್ನು ಹೇಳಿ ಸಮಾಧಾನ ಕೋರುತ್ತಾನೆ. ಆದ್ದರಿಂದ ನಮ್ಮ ಸಂದೇಹ, ಜಿಜ್ಞಾಸಾ ವಿಷಯಗಳನ್ನು ನಮ್ಮ ಸಂಪರ್ಕಕ್ಕೆ ಬರುವ ಜ್ಞಾನಿಗಳ ಮುಂದೆ ಹೇಳಿಕೊಳ್ಳಬೇಕು. ಅವರಿಂದ ಪರಿಹಾರ ಸಿಗಬಹುದು (೧೮೭).

೪. ಅತಿಥಿ ಬ್ರಾಹ್ಮಣನಿಗೆ ಧರ್ಮಾರಣ್ಯನ ಸಮಸ್ಯೆಗೆ ಉತ್ತರ ಗೊತ್ತಿರಲಿಲ್ಲ. ಅದನ್ನು ಪ್ರಾಮಾಣಿಕವಾಗಿ ಹೇಳಿ, ಮಹಾಪದ್ಮಪುರದ ನಾಗರಾಜನ ಬಳಿಗೆ ಹೋಗಲು ಹೇಳುತ್ತಾನೆ. ಸಮಸ್ಯೆ ಪರಿಹರಿಸುವ ವ್ಯಕ್ತಿ ಗೊತ್ತಿದ್ದರೆ ಅಂತಹವರ ಬಳಿಗೆ ಹೋಗಲು ಹೇಳುವ ಸೌಜನ್ಯ ಹೊಂದಿರಬೇಕು. ತನಗೆ ಗೊತ್ತಿಲ್ಲದಿದ್ದರೆ ಸಮಸ್ಯೆ ಪರಿಹಾರಕ್ಕೆ ಪರ್ಯಾಯ ಸೂಕ್ತ ವ್ಯಕ್ತಿಯನ್ನು ಸೂಚಿಸಬೇಕು (೧೮೮).

೫. ಬ್ರಾಹ್ಮಣ ಅತಿಥಿಯು ಲೋಕದಲ್ಲಿ ಮೋಕ್ಷಮಾರ್ಗ/ಸ್ವರ್ಗಮಾರ್ಗಕ್ಕೆ ಹೋಗಲು ಜನರು ತಿಳಿದುಕೊಂಡಿರುವ ದೊಡ್ಡ ಪಟ್ಟಿಯನ್ನೇ ಕೊಡುತ್ತಾನೆ. ಅದೂ ಒಂದು ತರಹದ ಜಾಣ್ಮೆ, ಲೋಕಜ್ಞಾನ (೧೮೭).

೬. ಪದ್ಮನಾಭ ಸರ್ಪ. ಕದ್ರುದೇವಿಯನ ಸಂತಾನದಲ್ಲಿ ಒಬ್ಬ. ಆತನು ಸೂರ್ಯರಥ ಚಕ್ರ ಹೊತ್ತುಕೊಂಡು ತಿರುಗುವ ಮಹಾಸಾಧಕನ ಸದಾಚಾರದ ಪಟ್ಟಿ ಪ್ರತಿಯೊಬ್ಬ ಸಾಧಕನು ತಿಳಿಯಲೇಬೇಕಾದ ಸದ್ಗುಣಗಳ ಪಟ್ಟಿ. ಅದೇ ತಪಸ್ಸು. ಅದೇ ಜನಾನುರಾಗಕ್ಕೆ ಬೇಕಾದ ಗುಣಗಳು (೧೮೮).

೭. ನಾಗರಾಜನು ಮನೆಯಲ್ಲಿಲ್ಲದುದರಿಂದ ಬ್ರಾಹ್ಮಣ ಧರ್ಮಾರಣ್ಯ ಅದೇ ಪರಿಸರದ ಗೋಮತೀತೀರದಲ್ಲಿ ವೇದಪಾರಾಯಣ ಮಾಡುತ್ತಾ ನಾಗರಾಜನ ಬರವಿಗಾಗಿ ಕಾದ, ಹೊರತು ಅವರ ಮನೆಯಲ್ಲಿ ಕಾಯಲಿಲ್ಲ. ಆತಿಥ್ಯ ಸ್ವೀಕರಿಸಲಿಲ್ಲ. ಆತ ಬರುವವರೆಗೆ ನಿರಾಹಾರಿಯಾಗಿದ್ದ. ಅದೂ ಅನುಗ್ರಹ ಸಂಪಾದನೆಯ ಮಾರ್ಗ (೧೮೯). ನಚಿಕೇತನೂ ಕೂಡಾ ಮೂರು ದಿನ ಉಪವಾಸವಿದ್ದು ಯಮನ ಬರವಿಗಾಗಿ ಕಾದ. ಶಾಮಲಾದೇವಿಯರ ಆತಿಥ್ಯ ಸ್ವಿಕರಿಸಲಿಲ್ಲ. ವಿವರಗಳಿಗೆ ಕಾಠಕೋಪನಿಷತ್, ಭಾಷ್ಯಗಳನ್ನು ನೋಡಿರಿ.

೮. ನಾಗರಾಜನು ನಿರ್ವಿಘ್ನವಾಗಿ ಮನೆಗೆ ವಾಪಸು ಬರಲಿ ಎಂದು ಮಂತ್ರಪಠಣ ಮತ್ತು ಜಪ ಮಾಡುತ್ತಿದ್ದುದು ಧರ್ಮಾರಣ್ಯನ ಉದಾತ್ತ ಧ್ಯೇಯ ತಿಳಿಸುತ್ತದೆ. ನಾಗರಾಜನ ಪ್ರಶಂಸೆಗೆ ಪಾತ್ರನಾಗುತ್ತಾನೆ (೧೯೦).

೯. ನಾಗರಾಜನ ಬಂಧುಬಾಂಧವರು ಬಂದು ಆಹಾರ ಸ್ವೀಕರಿಸಲು ಒತ್ತಾಯಿಸಿದರೂ, ಬ್ರಾಹ್ಮಣ ತನ್ನ ತಪಸ್ಸು ಬಿಡಲಿಲ್ಲ. ತನ್ನ ಕಾರ್ಯಸಾಧನೆಯ ಪ್ರತಿಕ್ಷಣವನ್ನೂ ತಪಸ್ಸನ್ನಾಗಿ ಬ್ರಾಹ್ಮಣ ಪರಿವರ್ತಿಸಿದ್ದು ಅನುಕರಣೀಯ (೧೯೧).

೧೦. ನಾಗರಾಜನ ಬಂಧುಗಳೂ ಸಹ ತಾವು ಅತಿಥಿಗಳಿಗೆ ಅನ್ನಾದಿಗಳನ್ನು ನೀಡದೇ ಉಣ್ಣುವವರಲ್ಲದ ಕುಲ, ವಂಶಕ್ಕೆ ಸೇರಿದವರೆಂದು ತಮ್ಮ ಕುಲದ ಪಾವಿತ್ರ್ಯವನ್ನು ಹೇಳಿದರು. ಅತಿಥಿಸತ್ಕಾರ ಮಾಡಲು ಅರ್ಹತೆಗಳನ್ನು ಇಲ್ಲಿ ತಿಳಿಸಲಾಗಿದೆ (೧೯೧).

೧೧. ನಾಗರಾಜನು ಕರ್ತವ್ಯದಿಂದ ಬಂದ ಕೂಡಲೇ ಹೆಂಡತಿಯನ್ನು ಎಚ್ಚರಿಸಿದ ರೀತಿ, ಪ್ರತಿಯಜಮಾನನೂ (ಮನೆಯ) ತಿಳಿದುಕೊಳ್ಳಬೇಕಾದ ಕರ್ತವ್ಯಗಳು. ಇಲ್ಲೂ ವಾಮನಾವತಾರಕ್ಕೂ ಮೊದಲು ಕಶ್ಯಪ ಅದಿತಿಯರ ಸಂವಾದ ಸ್ಮರಿಸಬಹುದಾಗಿದೆ. ಅತಿಥಿ ಸತ್ಕಾರದ ಮಹತ್ತ್ವವನ್ನು ಅಲ್ಲಿ ಕಶ್ಯಪರು, ಇಲ್ಲಿ ನಾಗರಾಜ ತುಂಬಾ ಪರಿಣಾಮಕಾರಿಯಾಗಿ ತಿಳಿಸಿದ್ದಾರೆ (ಭಾಗವತ-೮/೧೫/೧-೧೪). ನಾಗರಾಜನ ಪತ್ನಿಯ ಮಾತುಗಳು ಎಲ್ಲ ಸ್ತ್ರೀಯರಿಗೆ ಆದರ್ಶವಾಗಬೇಕು (೧೯೨,೧೯೩).

೧೨. ನಾಗರಾಜನು ತನ್ನ ಹೆಂಡತಿಯ ಒಳ್ಳೆಯ ಗುಣದಿಂದಾಗಿಯೇ ತಾನು ಕ್ರೋಧವನ್ನು ನಿಗ್ರಹಿಸಿದ್ದೇನೆ ಎಂಬ ಮಾತು ಪತ್ನಿಯಿಂದ ಪತಿ ಕಲಿಯಬೇಕಾದ ಪಾಠಕ್ಕೆ ಸಾಕ್ಷಿ (೧೯೩). ಪುರಂದರದಾಸರು ತಮ್ಮ ಪತ್ನಿಯನ್ನು ಆಕೆಯ ಸದ್ಗುಣವನ್ನು ಮನಸಾರೆ ಕೊಂಡಾಡಿರುವುದು ತೀರ ಇತ್ತೀಚಿನ ಉದಾಹರಣೆ[1].

೧೩. ನಾಗರಾಜನ ಪತ್ನಿಯ ಸದ್ಗುಣಗಳ ಪಟ್ಟಿಯೂ ಪ್ರತಿ ಸ್ತ್ರೀಯರಿಗೆ ಆದರ್ಶ (೧೯೩).

೧೪. ತನ್ನ ಸಲುವಾಗಿ ಕಾಯುತ್ತಿರುವ ಬ್ರಾಹ್ಮಣನನ್ನು ಅಲ್ಲಿಗೆ ಹೋಗಿ ಸ್ವಾಗತಿಸಿದ ಪರಿ (ನಾಗರಾಜನ) ಅಷ್ಟೇ ಅನುಕರಣೀಯ. ಅಭ್ಯಾಗತನ ಕರ್ತವ್ಯ ಇಲ್ಲಿ ವಿದಿತವಾಗುತ್ತದೆ (೧೯೪).

೧೫. ನಾಗರಾಜನು ಬ್ರಾಹ್ಮಣನಿಗೆ ಅರುಹಿದ ಆಶ್ಚರ್ಯಗಳು ಬ್ರಾಹ್ಮಣನ ಕಣ್ಣು ತೆರೆಸುತ್ತವೆ. ಆತನ ಸಮಸ್ಯೆಗೆ ಪರಿಹಾರವೂ ಸಿಗುತ್ತದೆ. ಇದು ಇಬ್ಬರಿಗೂ ತಿಳಿಯದೆ ಆದ ಸಂವಾದ. ಇಲ್ಲಿ ಭಗವಂತನ ಲೀಲೆ, ಬುದ್ಧಿಪ್ರೇರಣೆಗಳು ತುಂಬಾ ಮಾರ್ಮಿಕ (೧೯೫).

ಆಶ್ಚರ್ಯಗಳ ಪೈಕಿ ಒಬ್ಬ ಬ್ರಾಹ್ಮಣನು ಉಂಛವೃತ್ತಿಯಿಂದ ಸಾಧಿಸಿದ ಸೂರ್ಯಮಂಡಲವನ್ನು ಪ್ರವೇಸಿಸಿದ ಪರಿ ಚಿತ್ರಲಿಖಿತದಂತೆ ಪ್ರತ್ಯಕ್ಷದರ್ಶಿ ವರದಿಯಾಗಿದೆ. ಇದರಿಂದ ಪ್ರತಿ ಸಾಧಕನೂ ಸಹ ಜೀವನವನ್ನು ಪಾವನರೀತಿಯಲ್ಲಿ ನಡೆಸುವುದರಿಂದ ಎಂತಹ

---

೧ ಹೆಂಡತಿ ಸಂತತಿ ಸಾವಿರವಾಗಲಿ ದಂಡಿಗೆ ಬೆತ್ತ ಹಿಡಿಸಿದಳಯ್ಯ।

ಗತಿ ಸಿಗುತ್ತದೆ ಎನ್ನಲು ಇದು ಉದಾಹರಣೆಯಾಗಿದೆ. ಮಹಾಭಾರತದಲ್ಲೂ ದ್ರೋಣರು ತಮ್ಮ ಆರಂಭದ ಜೀವನ ಹೀಗೆಯೇ ಸಾಗಿಸಿದ್ದರು. ಮುಂದೆ ಕೌರವರ ಸಹವಾಸವು ಹರೀಚ್ಛೆಯಿಂದಾಯಿತು ಎಂಬ ವಿಷಯ ಬೇರೆ (ಮ.ತಾ.ನಿ.-೧೧/೭೧).

೧೬. ನಾಗರಾಜನು ತಿಳಿಸಿದ ಆಶ್ಚರ್ಯಗಳ ಸರಣಿ ಬ್ರಾಹ್ಮಣನ ಸಮಸ್ಯೆಗೆ ಪರಿಹಾರವಾದುದು ನಾಗರಾಜನಿಗೆ ತಿಳಿಯಲಿಲ್ಲ. ಬರೀ ತನ್ನ ಭೇಟಿಗಾಗಿ ಬಂದ ಬ್ರಾಹ್ಮಣನಿಗೆ ಯಾವ ಸತ್ಕಾರವನ್ನೂ ಮಾಡಲಿಲ್ಲವೆಂಬ ಕೊರಗು ಆತನನ್ನು ಕಾಡಿಸಿತು. ಆದ್ದರಿಂದಲೇ ಬ್ರಾಹ್ಮಣನಿಂದಲೇ ಎಲ್ಲ ತಿಳಿದುಕೊಂಡು ಹೋಗಲು ಸಮ್ಮತಿಸಿದ. ಆದ್ದರಿಂದ ಬಂದ ಅತಿಥಿಗೆ ಪೂರ್ಣ ತೃಪ್ತಿ ಆಗುವವರೆಗೆ ಅಭ್ಯಾಗತನು ಆತಿಥ್ಯವನ್ನು ಕೈಬಿಡಬಾರದು (೧೯೭).

೧೭. ಅಂತೂ ಸಾಧಕನಲ್ಲಿರಬೇಕಾದ ಗುಣಗಳು ಬ್ರಾಹ್ಮಣನಲ್ಲಿ, ಅಭ್ಯಾಗತನಲ್ಲಿರಬೇಕಾದ ಗುಣಗಳು ನಾಗರಾಜನಲ್ಲಿ ನಾವು ನೋಡುತ್ತೇವೆ.

**ವಿ.ಸೂ.:** ಸಂದೇಶಗಳು ಅಸ್ಪಷ್ಟವಾಗಿ ಕಂಡುಬಂದಲ್ಲಿ ಸಂಬಂಧಪಟ್ಟ ಅಧ್ಯಾಯಗಳ ಸಾರಾಂಶ ನೋಡಿರಿ (ಎಲ್ಲದಕ್ಕೂ ಮೂಲಗ್ರಂಥಗಳನ್ನು ನೋಡುವುದು ಅತ್ಯವಶ್ಯ).

೧೮. ಅಧ್ಯಾಯ ೧೯೭ ಶ್ಲೋಕ ೮ ರ ಅರ್ಥವು ಜೀವಬ್ರಹ್ಮರ ಐಕ್ಯಪರವಾಗಿ ಎಂಬ ಭ್ರಮೆ ಹುಟ್ಟುತ್ತದೆ. ಇದು ಈಶಾವಾಸ್ಯ ಉಪನಿಷತ್ತಿನ 'ಯೋಸೌ ಅಸೌ ಪುರುಷಃ ಸೋಽಹಮಸ್ಮಿ' ವಾಕ್ಯವನ್ನು ಹೋಲುತ್ತದೆ. ಹೆಚ್ಚಿನ ವಿವರಗಳಿಗಾಗಿ ಈ ವಾಕ್ಯದ ಉಪನಿಷದ್ಭಾಷ್ಯದಿಂದ ಗುರುಮುಖೇನ ತಿಳಿಯಬೇಕು.

ಇಲ್ಲಿನ ಸಂದರ್ಭ ಐಕ್ಯಪರವಾಗಿಲ್ಲ. ಕಾರಣ ಇಲ್ಲಿ ಒಬ್ಬ ಮುನಿ ಉಂಛವೃತ್ತಿಯಿಂದ ಹೇಗೆ ಸೂರ್ಯಮಂಡಲದ ಮೂಲಕ ಸ್ವರ್ಗ ಹೊಂದಿದ ಬಗ್ಗೆ ಇದೆ. ಹೋಗಲೀ ಅದನ್ನೇ ಮೋಕ್ಷವೆಂದರೂ ಅದ್ವೈತದ ಪ್ರಕಾರ ಉಂಛವೃತ್ತಿಯೆಂಬ ಕರ್ಮದಿಂದ ಮೋಕ್ಷವು ಸಾಧ್ಯವೇ ಇಲ್ಲ. ಉಂಛವೃತ್ತಿ, ಕರ್ಮಾಚರಣೆ, ಕರ್ಮದಿಂದ ಮೋಕ್ಷವಿಲ್ಲ. ಕೇವಲ ಐಕ್ಯಜ್ಞಾನದಿಂದ ಮೋಕ್ಷವೆನ್ನುವುದು ಅದ್ವೈತದ ನಿಲುವು. ಆದ್ದರಿಂದ ಈ ವಾಕ್ಯ ಆ ಮತದ ಪ್ರಕ್ರಿಯೆ ಪರವಾಗಿಲ್ಲ.

ಆದ್ದರಿಂದ ಇಲ್ಲಿ ಏನೇ ಇದ್ದರೂ ಅಂತರ್ಯಾಮಿ ವಿವಕ್ಷಾ ಹಾಗೂ ಸ್ಥಾನೈಕ್ಯದಿಂದ ಹೇಳಿದ ಅಭಿಪ್ರಾಯವೇ ಹೊರತು, ಐಕ್ಯಾಭಿಪ್ರಾಯಕ್ಕೆ ಅವಕಾಶವೇ ಇಲ್ಲ. ಹೆಚ್ಚಿನ ಚರ್ಚೆಯ ವಿಷಯಗಳಿಗಾಗಿ ಸಂಬಂಧಿಸಿದ ಮೂಲಗ್ರಂಥ, ಭಾಷ್ಯಾದಿಗಳನ್ನು ನೊಡುವುದು ಸೂಕ್ತ.

ವಿ.ಸೂ. : ಸಂದೇಶಗಳಲ್ಲಿನ ಕಂಸದಲ್ಲಿರುವ ಸಂಖ್ಯೆಗಳು ಅಧ್ಯಾಯದ ಸಂಕೇತಗಳಾಗಿವೆ.

*****

# ೧೨೭. ಜಾಪಕೋಪಾಖ್ಯಾನ

ಧರ್ಮರಾಜನು ಭೀಷ್ಮರನ್ನು ಕುರಿತು 'ಈ ಹಿಂದೆ, ತಾತ! ನೀನು ಕಾಲ, ಮೃತ್ಯು, ಯಮ ಹಾಗೂ ಬ್ರಾಹ್ಮಣರ ನಡುವೆ ನಡೆದ ವಿವಾದ ಹಾಗೂ ಬ್ರಾಹ್ಮಣ ಮತ್ತು ಇಕ್ಷ್ವಾಕು ರಾಜರ ಮಧ್ಯೆ ನಡೆದ ವಿವಾದಗಳನ್ನು ಹೇಳಿದ್ದೆ. ಅವನ್ನು ವಿವರವಾಗಿ ತಿಳಿಸು' ಎಂದು ಕೇಳಿದಾಗ ಭೀಷ್ಮರು ಅದನ್ನು ಹೇಳಲಾರಂಭಿಸಿದರು.

(ವೇದ)ವೇದಾಂಗ(ಆರು)ಗಳನ್ನು ತಿಳಿದ, ಧರ್ಮಬುದ್ಧಿಯ ಮಹಾಯಶಸ್ವಿಯಾದ ಜಪಶೀಲನಾದ ಬ್ರಾಹ್ಮಣನಿದ್ದನು. ಅವನು ಕುಶಿಕವಂಶದ ಪಿಪ್ಪಲಾದ ಎಂಬ ವಿದ್ವಾಂಸನ ಮಗನಾಗಿದ್ದನು. ಅವನು ಹಿಮಾಲಯ ತಪ್ಪಲಿನಲ್ಲಿ ವಾಸವಾಗಿದ್ದನು. ಆತನು ಬ್ರಹ್ಮಪ್ರಾಪ್ತಿಗಾಗಿ ಗಾಯತ್ರೀ ಜಪವನ್ನು ಒಂದುಸಾವಿರ ವರ್ಷಗಳ ಕಾಲ ತಪಸ್ಸನ್ನು ಮಾಡಿದಾಗ ವೇದಮಾತೆಯಾದ ಗಾಯತ್ರೀದೇವೀ ಪ್ರತ್ಯಕ್ಷಳಾಗಿ 'ನಿನ್ನ ತಪಸ್ಸಿಗೆ ಪ್ರೀತಳಾಗಿದ್ದೇನೆ' ಎಂದು ಹೇಳಿದರೂ ಆ ಬ್ರಾಹ್ಮಣನು ಗಾಯತ್ರಿಯನ್ನು ನೋಡದೇ ಜಪಾಸಕ್ತನಾಗಿಯೇ ಇದ್ದ. ಆತನು '**ತತ್ಸವಿತುಃ**' ಎಂಬ ನಾಲ್ಕಕ್ಷರಗಳಿಂದ ಕೂಡಿದ ಸೋಮಪಾನಾರ್ಹ '**ಭೂರ್ಭುವಃ ಸ್ವಃ**' ಎಂಬ ಮೂರು ಲೋಕಗಳನ್ನು ಸೂಚಿಸುವ ಜಗದ್ಬೀಜವಾಚಕವಾದ ೨೪ ಅಕ್ಷರಗಳಿಂದ ಗಾಯತ್ರೀಯನ್ನು ಜಪಿಸುತ್ತಿದ್ದನು. ಜಪ ಮುಗಿದ ಮೇಲೆ ಬ್ರಾಹ್ಮಣನು ಗಾಯತ್ರೀದೇವಿಯ ಪಾದಗಳಿಗೆ ಸಾಷ್ಟಾಂಗಪ್ರಣಾಮ ಮಾಡಿ 'ಅಮ್ಮ! ಭಗವದನುಗ್ರಹದಿಂದ ನಿನ್ನ ದರ್ಶನವಾಗಿದೆ. ಒಂದು ವೇಳೆ ನೀನು ಪ್ರಸನ್ನಳಾಗಿದ್ದರೆ ನನ್ನ ಮನಸ್ಸು ಯಾವಾಗಲೂ ಜಪದಲ್ಲಿಯೇ ಆಸಕ್ತವಾಗಿರುವಂತೆ ಅನುಗ್ರಹಿಸು ಎಂದು ಬೇಡಿದ[1].

---

೧ ಬ್ರಾಹ್ಮಣೋ ಜಾಪಕಃ ....... ಷಡಂಗವಿನ್ಮಹಾಪ್ರಾಜ್ಞಃ ಪೈಪ್ಪಲಾದಿಃ ಸಕೌಶಿಕಃ।
............ ವೇದೇಷು ಚೈವ ನಿಷ್ಣಾತೋ ಹಿಮವತ್ಪಾದಸಂಶ್ರಯಃ।
ಸೋಽಂತ್ಯಂ ಬ್ರಾಹ್ಮಂ ತಪಸ್ತೇಪೇ ಸಂಹಿತಾಂ ಸಂಯುತೋ ಜಪನ್ ॥
ತಸ್ಯ ವರ್ಷಸಹಸ್ರಂ ತು ನಿಯಮೇನ ತಥಾ ಗತಮ್।
ಸ ದೇವ್ಯಾ ದರ್ಶಿತಃ ಸಾಕ್ಷಾತ್ ಪ್ರೀತಾಽಸ್ಮೀತಿ ತದಾ ಕಿಲ।
ಜಪ್ಯಮಾವರ್ತಯಂಸ್ತೂಷ್ಣೀಂ ನ ಚ ತಾಂ ಕಿಂಚಿದಬ್ರವೀತ್।
ಚತುರ್ಭಿರಕ್ಷರೈರ್ಯುಕ್ತಾ ಸೋಮಪಾನೇಽಕ್ಷರಾಷ್ಟಕಾ।
ಜಗದ್ಬೀಜಸಮಾಯುಕ್ತ ಚತುರ್ವಿಂಶಾಕ್ಷರಾತ್ಮಿಕಾ।
ಸಮಾಪ್ತಜಪ್ಯಸ್ತೂತ್ಥಾಯ ಶಿರಸಾ ಪಾದಯೋಸ್ತಥಾ।
ಪಪಾತ ದೇವ್ಯಾ ಧರ್ಮಾತ್ಮಾ ವಚನಂ ಚೇದಮಬ್ರವೀತ್।
ದಿಷ್ಟ್ಯಾ ದೇವಿ ಪ್ರಸನ್ನಾ ತ್ವಂ ದರ್ಶನಂ ಚಾಗತಾ ಮಮ ॥
ಯದಿ ವಾಪಿ ಪ್ರಸನ್ನಾಸಿ ಜಪ್ಯೇ ಮೇ ರಮತಾಂ ಮನಃ ॥ - ೨೫/೪-೧೧
ವಿ.ಸೂ.: ಮೇಲಿನ ೯ ನೇ ಶ್ಲೋಕಕ್ಕೆ ಲಕ್ಷ್ಮಾಲಂಕಾರದಲ್ಲಿ ವಿಸ್ತೃತ ವ್ಯಾಖ್ಯಾನವಿದೆ.
ಚತುರ್ಭಿರಕ್ಷರೈರ್ಯುಕ್ತಾ ಸೋಮಪಾನೇಽಕ್ಷರಾಷ್ಟಕಾ ಚೇತಿ । ಜಗದ್ಬೀಜೈಃ ಭೂರ್ಭುವಃ

ಬ್ರಾಹ್ಮಣನ ಪ್ರಾರ್ಥನೆಗೆ ಗಾಯತ್ರೀದೇವಿಯು 'ನಿನ್ನ ಇಷ್ಟಾರ್ಥಗಳನ್ನೆಲ್ಲಾ ನೆರವೇರಿಸುತ್ತೇನೆ ಹೇಳು' ಎಂದಳು. ಆದರೆ ಬ್ರಾಹ್ಮಣನು ಜಪ ಮಾಡುವ ನನ್ನ ಇಚ್ಛೆಯು ಮತ್ತೇ ಹೆಚ್ಚಾಗಲಿ, ಮನಸ್ಸಿನ ಏಕಾಗ್ರತೆಯು (ಸಮಾಧಿಯು) ದಿನದಿನವೂ ವೃದ್ಧಿಸಲಿ ಎಂದು ಕೇಳಿದಾಗ ಗಾಯತ್ರಿಯು 'ಹಾಗೆಯೇ ಆಗಲಿ ಎಂದು ಹೇಳಿದಳಲ್ಲದೆ, 'ನೀನು ಇನ್ನು ಎಂದೂ ನಿನ್ನಂತಹ ಬ್ರಾಹ್ಮಣನು ಹೋಗುವ ನರಕಕ್ಕೆ ಹೋಗುವುದಿಲ್ಲ' ಎಂದೂ ಅನುಗ್ರಹಿಸಿದಳು. ಮತ್ತೆ ಬ್ರಹ್ಮನ ಸ್ಥಾನಕ್ಕೆ (ಲೋಕಕ್ಕೆ) ಹೋಗುವೆ (ವೈಕುಂಠ). ನಿನ್ನ ಪ್ರಾರ್ಥನೆಯು ಸಿದ್ಧಿಸಲಿ ಎಂದು ಹೇಳಿದಳು. ನೀನು ಏಕಾಗ್ರಮನಸ್ಸಿನಿಂದ ಜಪ ಮಾಡುವೆ. ನಿನ್ನ ಬಳಿ ಧರ್ಮ, ಕಾಲ, ಮೃತ್ಯು, ಯಮದೇವರು (ದೇವತೆಗಳು) ಬರುತ್ತಾರೆ. ನಿನಗೂ ಅವರಿಗೂ ಮಧ್ಯೆ ಧರ್ಮವಿಷಯದಲ್ಲಿ ವಿವಾದವಾಗುತ್ತದೆ ಎಂದು ನುಡಿದು ಗಾಯತ್ರಿಯು ತನ್ನ ಲೋಕಕ್ಕೆ ಹೊರಟಳು. ಬ್ರಾಹ್ಮಣನು ದೇವತಾಮಾನದ ನೂರುವರ್ಷಗಳವರೆಗೆ ಜಪವನ್ನೂ ಮಾಡುತ್ತಾ ಇದ್ದನು[೧].

ಬ್ರಾಹ್ಮಣನ ಜಪವ್ರತಕಾಲ ಮುಗಿಯಲು (ಒಂದು ನೂರು ವರ್ಷ) ಧರ್ಮದೇವತೆ ದರ್ಶನವಿತ್ತನು ಬ್ರಾಹ್ಮಣನಿಗೆ. 'ನಾನು ಧರ್ಮದೇವತೆ, ನಿನ್ನನ್ನು ನೋಡಲು ಬಂದಿರುವೆ. ನಿನ್ನ ಜಪ ಫಲ ಸಿದ್ಧಿಯಾಗಿದೆ. ನೀನು ಮಾನುಷ ಹಾಗೂ ದೇವಲೋಕಗಳನ್ನೆಲ್ಲಾ ಜಯಿಸಿರುವೆ. ದೇವಲೋಕಗಳನ್ನೂ ಮೀರಿ ಮೇಲಿನ ಲೋಕಕ್ಕೆ ಹೋಗುವೆ. ಆದ್ದರಿಂದ ನೀನು ದೇಹತ್ಯಾಗ ಮಾಡು. ನಿನಗೆ ಬೇಕಾದ ಲೋಕಗಳಿಗೆ ಹೋಗು. ದೇಹತ್ಯಾಗ ಮಾಡಿದ ಕೂಡಲೇ ಉತ್ತಮಲೋಕ ಹೊಂದುತ್ತೀ' ಎಂದನು ಧರ್ಮ.

---

ಸ್ವರಾಖ್ಯ ಲೋಕತ್ರಯವಾಚಕತ್ವಾತ್ । ಜಗದ್ಬೀಜರೂಪೈಃ ಗಾಯತ್ರ್ಯಾರಂಭೇ ಪಠ್ಯಮಾನೈಃ ಭೂರ್ಭುವಃ-ಸ್ವರಿತಿ ವ್ಯಾಹೃತಿಮಂತ್ರಾತ್ಮಕಪದತ್ರಯ್ಯೈಃ ಭೂರಾದಿಸತ್ಯಾಂತಸಪ್ತಲೋಕಸ್ಥಿತಭೂತೈಃ ಸಪ್ತವ್ಯಾಹೃತಿಪಾದ್ಯೈರ್ವಾ ಸಮಾಯುಕ್ತಾನಿ ಯಾನಿ ಚತು ರ್ವಿಂಶತ್ಯಕ್ಷರಾಣಿ ತದಾತ್ಮಿಕೇತಿ । ಉಕ್ತಾನಿ ತ್ರೀಣ್ಯಪಿ ವಾಕ್ಯಾನಿ ವಕ್ಷ್ಯಮಾಣ ಗಾಯತ್ರ್ಯಾ ವಿಶೇಷಣಾನಿ... ಅತಃ ಸುಷ್ಠೂಕ್ತಂ ಸರ್ವಜ್ಞೇನ ಭಗವತಾ ವ್ಯಾಸೇನ ॥ - (ತತ್ತ್ವಸಂಶೋಧನಸಂಸತ್, ಪಲಿಮಾರುಮಠದಿಂದ ಪ್ರಕಟಿತವಾದ ಮ.ಭಾ.ಶಾಂತಿಪರ್ವ, ಮೋಕ್ಷಧರ್ಮಪರ್ವ; ಅಧ್ಯಾಯ ೨೫, ಶ್ಲೋಕ೯)

೧ ಜಪ್ಯಂ ಪ್ರತಿ ಮಮೇಚ್ಛಯಾ ವರ್ಧತ್ವಿತಿ ಪುನಃ ಪುನಃ ।
ಮನಸಶ್ಚ ಸಮಾಧಿರ್ಮೇ ವರ್ಧೇತಾಹರಹಃ ಶುಭೇ ॥
ತತ್ತಥೇತಿ ತತೋ ದೇವೀ......................
ನಿರಯಂ ನೈವ ಯಾತಾಸಿ ಯತ್ರ ಯಾತಾ ದ್ವಿಜರ್ಷಭಾಃ ।
ಯಾಸ್ಯಸಿ ಬ್ರಹ್ಮಣಃ ಸ್ಥಾನಂ ಅನಿಮಿತ್ತಮನಿಂದಿತಮ್ ।
ನಿಯತೋ ಜಪ ಚೈವಾಗ್ರೋ ಧರ್ಮಸ್ತ್ವಂ ಸಮುಪೈಷ್ಯತಿ ।
ಕಾಲೋ ಮೃತ್ಯುರ್ಯಮಶ್ಚೈವ ಸಮಾಯಾಸ್ಯಂತಿ ತೇಽಂತಿಕಮ್ ।
ಭವಿತಾ ಚ ವಿವಾದೋಽತ್ರ ತವ ತೇಷಾಂ ಚ ಧರ್ಮತಃ ॥ - ೨೫/೧೩-೧೯

ಯದಿ ತ್ವಂ ನೇಚ್ಛಸಿ ತ್ಯಕ್ತುಂ ಶರೀರಂ ಪಶ್ಯ ವೈ ದ್ವಿಜ।
ಏಷಕಾಲಸ್ತಥಾ ಮೃತ್ಯುರ್ಯಮಶ್ಚ ತ್ವಾಮುಪಾಗತಾಃ॥ - ೨೫/೨೬,೨೮

ಅದಕ್ಕೆ ಬ್ರಾಹ್ಮಣನು ನನಗೆ ಆ ಲೋಕಗಳು ಬೇಡ. ನೀನು ಬಂದ ದಾರಿಗೆ ಹೋಗು. [೧]ಅನೇಕಾನೇಕ ಸುಖದುಃಖಗಳನ್ನು ಸಹಿಸಿಕೊಂಡು ಜಪಸಾಧನೆ ಮಾಡಿದ ಈ ದೇಹವನ್ನು ಬಿಡಲಾರೆ ಎಂದನು. ಆಗ ಧರ್ಮದೇವತೆಯು 'ಎಲೈ ಮುನಿಶ್ರೇಷ್ಠನೇ! ಈ ಶರೀರವನ್ನು ನೀನು ಬಿಡಲೇಬೇಕು. ಹಠ ಬೇಡ. ಬಿಟ್ಟು ಸ್ವರ್ಗಕ್ಕೆ ಹೋಗು. ಅಥವಾ ನಿನಗೇನು ಬೇಕು, ಅದನ್ನಾದರು ಹೇಳು' ಎಂದನು. ಪುನಃ ಬ್ರಾಹ್ಮಣನು 'ನನಗೆ ಸ್ವರ್ಗೇಚ್ಛೆ ಇಲ್ಲ. ಈ ದೇಹ ಬಿಟ್ಟು ಸ್ವರ್ಗಕ್ಕೆ ಹೋಗಲು ನನಗೆ ಆಸಕ್ತಿ ಇಲ್ಲ. ನೀನು ಹೋಗು (ನನಗೆ ಒತ್ತಾಯಿಸಬೇಡ) ಎಂದನು. ಆಗ ಧರ್ಮನು ಈ ದೇಹದ ಬಗ್ಗೆ ಅಭಿಲಾಷೆ ಇಟ್ಟುಕೊಳ್ಳದೆ ದೇಹತ್ಯಾಗ ಮಾಡು. ರಜೋಗುಣರಹಿತವಾದ ಲೋಕಳಿಗೆ ಹೋಗು. ಅಲ್ಲಿ ದುಃಖವೇ ಇರದು ಎಂದು ಹೇಳಿದರೂ ಬ್ರಾಹ್ಮಣನು 'ನನಗೆ ಜಪದಲ್ಲಿಯೇ ಎಲ್ಲಕ್ಕಿಂತ ನಿಜವಾದ ಸಂತೋಷವಿದೆ. ನಾನು ಇದೇ ಶರೀರದಿಂದ ಸ್ವರ್ಗಕ್ಕೆ ಹೋಗಬಹುದೇ ಹೇಳು' ಎಂದನು. ಕೊನೆಗೆ ಧರ್ಮನು ನಿನಗೆ ಈ ಶರೀರ ತ್ಯಾಗ ಮಾಡಲು ಇಚ್ಛೆ ಇಲ್ಲದಿದ್ದಲ್ಲಿ ನೋಡು, ಈಗ ನಿನ್ನ ಬಳಿ ಕಾಲ, ಮೃತ್ಯು, ಯಮದೇವರು ಬರುತ್ತಾರೆ(ಆಗಲಾದರೂ ನೀನು ದೇಹ ಬಿಡಬೇಕಾಗಬಹುದು) ಎಂದು ಬ್ರಾಹ್ಮಣನಿಗೆ ಹೇಳಿದನು.

ಧರ್ಮದೇವತೆ ಹೇಳಿದಂತೆ ವೈವಸ್ವತ, ಕಾಲ ಮತ್ತು ಮೃತ್ಯು(ಯಮ) ದೇವತೆಗಳು ಬ್ರಾಹ್ಮಣನಿಗೆ ದರ್ಶನ ನೀಡಿ ನುಡಿದರು 'ಎಲೈ ಬ್ರಾಹ್ಮಣನೇ! ನೀನು ಚೆನ್ನಾಗಿ ದೇಹದಂಡಿಸಿ ತಪಸ್ಸನ್ನು ಮಾಡಿರುವೆ. ಉತ್ತಮಚಾರಿತ್ರ್ಯವುಳ್ಳವನಾಗಿದ್ದೀಯಾ. ನಿನ್ನ ತಪಸ್ಸಿಗೆ ತಕ್ಕ ಫಲ ಬಂದಿದೆ' ಎಂದನು ಯಮ (ಸೂರ್ಯಪುತ್ರ ಯಮ).

'ನಿನ್ನ ತಪಸ್ಸಿಗೆ ತಕ್ಕ ಫಲವನ್ನು ಅನುಭವಿಸುವ ಕಾಲ ಬಂದಿದೆ. ಕಾಲಾಭಿಮಾನಿಯಾದ ನಾನು ನಿನಗೆ ತಿಳಿಸುತ್ತಿದ್ದೇನೆ' ಎಂದನು ಕಾಲಪುರುಷ.

'ಧರ್ಮಜ್ಞನಾದ ನಿನ್ನನ್ನು ಕರೆದುಕೊಂಡು ಹೋಗಲು ಕಾಲನಿಂದ ನಿಯಮಿತನಾದ ನಾನು, ಮೃತ್ಯುವೂ ಬಂದಿದ್ದೇವೆ ಎಂದು ಮೃತ್ಯು ಹೇಳಿದನು.

ಬ್ರಾಹ್ಮಣನು 'ಯಮ, ಕಾಲ, ಮೃತ್ಯು ದೇವತೆಗಳಿಗೆ ವಿಧ್ಯುಕ್ತವಾಗಿ ಅರ್ಘ್ಯಪಾದ್ಯಾದಿ ಸತ್ಕಾರ ಮಾಡಿ ನನ್ನ ಶಕ್ತ್ಯನುಸಾರ ನಿಮ್ಮ ಇಚ್ಛೆಯನ್ನು ನೆರವೇರಿಸಲು ಇಚ್ಛಿಸುತ್ತೇನೆ ಹೇಳಿರಿ' ಎಂದನು. ಅದೇ ಸಮಯಕ್ಕೆ ತೀರ್ಥಯಾತ್ರಾ ನಿಮಿತ್ತದಿಂದ ಸಂಚಾರದಲ್ಲಿದ್ದ ಇಕ್ಷ್ವಾಕು

೧ ಬಹುದುಃಖಸುಖಂ ದೇಹಂ ನೋತ್ಸೃಜೇಯಮಹಂ ವಿಭೋ।
ರಮೇ ಜಪನ್ಮಹಾಭಾಗ ಕೃತಂ ಲೋಕೈಃ ಸನಾತನೈಃ॥
ಸಶರೀರೇಣ ಗಂತವ್ಯೋ ಮಯಾ ಸ್ವರ್ಗೋ ನ ವಾ ವಿಭೋ॥ - ೨೫/೨೨,೨೭

ರಾಜನೂ ಬಂದಾಗ ಬ್ರಾಹ್ಮಣನು [೧]ರಾಜನನ್ನೂ ಅರ್ಘ್ಯಾದಿಗಳಿಂದ ಸತ್ಕರಿಸಿ, 'ರಾಜನ್! ನಾನು ನಿಮಗೇನು (ಸೇವೆ) ಮಾಡಲಿ' ಎಂದು ಕೇಳಿದನು.

[೨]ರಾಜನು 'ಬ್ರಾಹ್ಮಣನೇ! ನಿನಗೆ ದಾನಪ್ರತಿಗ್ರಹಗಳಾದಿ ಷಟ್ಕರ್ಮಗಳನ್ನು ಮಾಡಲು ಅಧಿಕಾರವಿದೆ. ನಾನು ಕ್ಷತ್ರಿಯರಾಜ. ನನಗೆ ನಿನ್ನಿಂದ ಹೊಂದಬೇಕಾದುದೇನೂ ಇಲ್ಲ. ನಿನಗಿಷ್ಟವಾದ ಧನ, ಐಶ್ವರ್ಯ ಕೇಳು ಕೊಡುವೆ' ಎಂದ.

[೩]ಆಗ ಬ್ರಾಹ್ಮಣನು 'ಪ್ರವೃತ್ತ, ನಿವೃತ್ತ ಧರ್ಮಾನುಷ್ಠಾನ ಮಾಡುವ ಎರಡು ವಿಧ ಬ್ರಾಹ್ಮಣರು ಇದ್ದಾರೆ. ನಾನು ನಿವೃತ್ತ ಧರ್ಮಾನುಷ್ಠಾನ ಮಾಡುವ ಬ್ರಾಹ್ಮಣ. ನಾನು ಪ್ರತಿಗ್ರಹದಿಂದ ನಿವೃತ್ತನಾಗಿದ್ದೇನೆ. ಆದ್ದರಿಂದ ಪ್ರವೃತ್ತಧರ್ಮಿ ಬ್ರಾಹ್ಮಣನಿಗೆ ನೀನು ದಾನ ಕೊಡಬಹುದು. ನನಗೆ ಬೇಡ' ಎಂದು ಹೇಳುತ್ತಾನೆ. 'ನೀನು ಹೇಳು ನಿನಗೇನು ಬೇಕು. ನನ್ನ ತಪಸ್ಸಿನಿಂದ ನಿನಗೆ ಬೇಕಾದುದನ್ನು ಕೊಡುವೆನು' ಎಂದೂ ಬ್ರಾಹ್ಮಣನು ಹೇಳಿದಾಗ ರಾಜನು [೪]'ನಾನು ಕ್ಷತ್ರಿಯ. ಕೊಡು ಎಂಬ ಶಬ್ದ ನಾನೆಂದೂ ಹೇಳಿಲ್ಲ. ಕೊಡು ಎಂದು ನಾನೇನಾದರೂ ಕೇಳುವುದಿದ್ದರೆ ಅದು ಯುದ್ಧ ಮಾತ್ರ. ಅದೊಂದೇ ನಾನು ಹೇಳುವೆ ಎಂದನು.

[೫]ರಾಜನ ಕ್ಷತ್ರಿಯಧರ್ಮದೀಕ್ಷೆ ಅರಿತ ಬ್ರಾಹ್ಮಣನು 'ನಿಜ. ನಿನ್ನಂತೆ ನಾನೂ ಸ್ವಧರ್ಮದಲ್ಲಿಯೇ ಸಂತುಷ್ಟನಾಗಿದ್ದೇನೆ. ಆದ್ದರಿಂದ ನಮ್ಮಿಬ್ಬರಲ್ಲಿ ವಾದ ಪ್ರತಿವಾದಗಳಿಗೆ ಅವಕಾಶವಿಲ್ಲ. ನಿನಗಿಷ್ಟ ಬಂದಂತೆ ನಡೆ' ಎಂದು ಹೇಳಿದನು.

ನಂತರ ರಾಜ ಹಾಗೂ ಬ್ರಾಹ್ಮಣರ ಮಧ್ಯೆ ದಾನ ಸ್ವಿಕಾರ, ತಪಃಫಲ ಸ್ವೀಕಾರಗಳ ಬಗ್ಗೆ ಕೋಲಾಹಲಪೂರ್ಣ ವಾದ ವಿವಾದ ಉಂಟಾಯಿತು. ಇಬ್ಬರೂ ತಮ್ಮ ತಮ್ಮ ಮಾತಿಗೆ ಕಟ್ಟು ಬಿದ್ದರು. ವಿವಾದದ ಭಾವ ಹೀಗಿದೆ.

---

೧ ಸ್ವಾಗತಂ ಸೂರ್ಯಪುತ್ರಾಯ ಕಾಲಾಯ ಚ ಮಹಾತ್ಮನೇ।
ಮೃತ್ಯವೇ ಚಾಥ ಧರ್ಮಾಯ ಕಿಂ ಕಾರ್ಯಂ ಕರವಾಣಿ ಚ॥
ಸ್ವಾಗತಂ ತೇ ಮಹಾರಾಜ ಬ್ರೂಹಿ ಯದ್ ಯದಿಹೇಚ್ಛಸಿ।
ಸ್ವಶಕ್ತ್ಯಾ ಕಿಂ ಕರೋಮೀಹ ತದ್ಭವಾನ್ ಪ್ರಬ್ರವೀತು ಮೇ॥ – ೨೫/೩೩,೩೮

೨ ರಾಜಾಹಂ ಬ್ರಾಹ್ಮಣಶ್ಚ ತ್ವಂ ಯದಿ ಷಟ್ಕರ್ಮ ಸಂಸ್ಥಿತಃ।
ದದಾಮಿ ವಸು ಕಿಂಚಿತ್ತೇ ಪ್ರಾರ್ಥಿತಂ ತದ್ ವದಸ್ವ ಮೇ॥ – ೨೫/೩೯

೩ .......... ನಿವೃತ್ತೋಽಸ್ಮಿ ಪ್ರತಿಗ್ರಹಾತ್॥ – ೨೫/೪೦

೪ ಕ್ಷತ್ರಿಯೋಽಹಂ ನ ಜಾನಾಮಿ ದೇಹೀತಿ ವಚನಂ ಕ್ವಚಿತ್।
ಪ್ರಯಚ್ಛ ಯುದ್ಧಮಿತ್ಯೇವ ವಾದಿನಃ ಸ್ಮೋ ದ್ವಿಜೋತ್ತಮ॥ – ೨೫/೪೨

೫ ತುಷ್ಯಸಿ ತ್ವಂ ಸ್ವಧರ್ಮೇಣ ತಥಾ ತುಷ್ಟಾ ವಯಂ ನೃಪ।
ಅನ್ಯೋನ್ಯಸ್ಯೋತ್ತರಂ ನಾಸ್ತಿ ಯದಿಷ್ಟಂ ತತ್ ಸಮಾಚರ॥ – ೨೫/೪೩

**ರಾಜ** : [1]ಬ್ರಾಹ್ಮಣನೇ ನೀನು ಮೊದಲೇ ನನ್ನ ಕೈಲಾದಷ್ಟು ಕೊಡುವೆ ಎಂದೆಯಷ್ಟೆ ಆದ್ದರಿಂದ ನೀನು ಇಲ್ಲಿಯವರೆಗೆ ಮಾಡಿದ ತಪಸ್ಸಿನ ಫಲವನ್ನು ಕೊಡು.

**ಬ್ರಾಹ್ಮಣ** : ನೀನು ಯುದ್ಧವನ್ನು ಬಿಟ್ಟು ಬೇರೇ ಏನನ್ನೂ ಯಾಚಿಸೆ ಎಂದು ಕೊಟ್ಟಿಕೊಂಡು ಈಗ ಮತ್ತೆ ತಪಃಫಲ ಕೇಳುತ್ತಿರುವೆಯಲ್ಲ ಏಕೆ ಹೇಳು?

**ರಾಜ** : ಬ್ರಾಹ್ಮಣನೇ! ಬ್ರಾಹ್ಮಣರು ವಾಗ್ವಜ್ರರೆಂದು ಪ್ರಸಿದ್ಧಿ (ಅವರ ಮಾತುಗಳು ವಜ್ರಾಯುಧವಿದ್ದಂತೆ). ಕ್ಷತ್ರಿಯರು ಬಾಹುಬಲಾಶ್ರಿತರು. ಈಗ ನಿನ್ನೊಡನೆ ವಾಗ್ಯುದ್ಧವೇ ನಡೆಯುತ್ತಿದೆಯಲ್ಲ ಏನಿದು?

**ಬ್ರಾಹ್ಮಣ** : ನಾನು ಪ್ರತಿಜ್ಞೆಯಿಂದ ಹಿಂದೆ ಸರಿದಿಲ್ಲ. ನನ್ನ ಶಕ್ತ್ಯನುಸಾರ ಏನು ಕೊಡಲಿ ಹೇಳು? ತಡ ಮಾಡಬೇಡ. ಶಕ್ತಿ ಇದ್ದಾಗ ಬೇಗನೇ ಕೊಡಬೇಕೆಂಬುದೇ ಧರ್ಮ.

[2]**ರಾಜ** : ಹಾಗಾದರೆ ನಿನಗೆ ಇಚ್ಛೆ ಇದ್ದರೆ ನೀನು ೧೦೦೦ ವರ್ಷ ಮಾಡಿದ ತಪಸ್ಸಿನ ಫಲ ಕೊಡು.

[3]**ಬ್ರಾಹ್ಮಣ** : ಸರಿ, ನಾನು ಮಾಡಿದ ಜಪದ ಉತ್ತಮಫಲವನ್ನು ಸ್ವೀಕರಿಸು. ಫಲದ ಅರ್ಧ ಭಾಗವನ್ನಾದರೂ ಸ್ವೀಕರಿಸು. ಅಥವಾ ನೀನು ಇಚ್ಛಿಸಿದ್ದಲ್ಲಿ ಪೂರ್ಣಭಾಗವನ್ನೂ ಸ್ವೀಕರಿಸು.

**ರಾಜ** : ಬ್ರಾಹ್ಮಣನೇ! ನಿನಗೆ ಮಂಗಳವಾಲಿ. ನಾನು ಯಾಚಿಸಿದ ತಪಸ್ಸಿನ ಫಲ ಪಡೆದೆ. ನಾನು ಹೊರಡುವೆ. [4]ಆ ತಪಸ್ಸಿನ ಫಲವೇನೆಂದು ಹೇಳು.

[5]**ಬ್ರಾಹ್ಮಣ**: ನಾನು ನಿನಗೆ ಕೊಟ್ಟ ತಪಸ್ಸಿನ ಫಲ ಏನೆಂದು ನನಗೆ ಗೊತ್ತಿಲ್ಲ. ಈ ವಿಷಯದಲ್ಲಿ ಧರ್ಮ, ಕಾಲ, ಯಮ, ಮೃತ್ಯು ದೇವತೆಗಳೇ ಸಾಕ್ಷಿಯಾಗಿದ್ದಾರೆ.

**ರಾಜ** : ನೀನು ಮಾಡಿದ ಧರ್ಮದ ಫಲ ಏನೆಂದು ಗೊತ್ತಿಲ್ಲದ ಮೇಲೆ ಅದನ್ನು ಪಡೆದು ಏನು ಪ್ರಯೋಜನ? ಅದನ್ನು ನೀನು ತಿಳಿಸದಿದ್ದ ಮೇಲೆ ನೀನೇ ಅನುಭವಿಸು. ನಾನಂತಹ ಫಲವನ್ನು ಇಚ್ಛಿಸುವುದಿಲ್ಲ.

---

೧ ಸ್ವಶಕ್ತ್ಯಾಹಂ ದದಾನೀತಿ ತ್ವಯಾ ಪೂರ್ವಂ ಪ್ರಭಾಷಿತಮ್ ।
ಯಾಚೇ ತ್ವಾಂ ದೀಯತಾಂ ಮಹ್ಯಂ ಜಪ್ಯಸ್ಯಾಸ್ಯ ಫಲಂ ದ್ವಿಜ ॥ - ೨೫/೪೪

೨ ಯತ್ತದ್ವರ್ಷಶತಂ ಪೂರ್ಣಂ ಜಪ್ಯಂ ವೈ ಜಪತಾಂ ತ್ವಯಾ ।
ಫಲಂ ಪ್ರಾಪ್ತಂ ತತ್ ಪ್ರಯಚ್ಛ ಮಮ ದಿತ್ಸುರ್ಭವಾನ್ ಯದಿ ॥ - ೨೫/೪೮

೩ ಪರಮಂ ಗೃಹ್ಯತಾಂ ತಸ್ಯ ಫಲಂ ಯಜ್ಜಪಿತಂ ಮಯಾ ।
ಅರ್ಧಂ ತ್ವಮವಿಚಾರ್ಯೈಣ ಫಲಂ ತಸ್ಯ ಸಮಾಪ್ನುಹಿ ।
ಅಥವಾ ಸರ್ವಮೇವೇಹ ಜಪ್ಯಕಂ ಮಾಮಕಂ ಫಲಮ್ ॥.... - ೨೫/೪೯,೫೦

೪ ಕಿಂ ಚ ತಸ್ಯ ಫಲಂ ವದ ॥ - ೨೫/೫೧

೫ ಫಲಪ್ರಾಪ್ತಿಂ ನ ಜಾನಾಮಿ ದತ್ತಂ ಯಜ್ಜಪಿತಂ ಮಯಾ ।
ಅಯಂ ಧರ್ಮಶ್ಚ ಕಾಲಶ್ಚ ಯಮೋ ಮೃತ್ಯುಶ್ಚ ಸಾಕ್ಷಿಣಃ ॥ - ೨೫/೫೨

**ಅಜ್ಞಾತಮಸ್ಯ ಧರ್ಮಸ್ಯ ಫಲಂ ಮೇ ಕಿಂ ಕರಿಷ್ಯತಿ।**
**ಪ್ರಾಪ್ನೋತು ತತ್ಫಲಂ ವಿಪ್ರೋ ನಾಹಮಿಚ್ಛೇ ಸಸಂಶಯಮ್ ॥ - ೨೫/೫೩**

[೧]**ಬ್ರಾಹ್ಮಣ** : ಬೇರೆಯವರಿಗೆ ಕೊಟ್ಟುದುದನ್ನು ನಾನು ವಾಪಸು ಪಡೆಯಲಾರೆ. ನಮ್ಮಿಬ್ಬರ ಮಾತುಗಳೇ ಇದಕ್ಕೆ ಪ್ರಮಾಣ.

ರಾಜನ್! ಪಾಲನ್ನು ಪಡೆಯುವುದು ಒಮ್ಮೆ. ಒಮ್ಮೆ ಮಾತ್ರ ಕನ್ಯಾದಾನ. ದಾನ ಮಾಡುವೆ ಎಂದು ಹೇಳುವುದು ಒಂದು ಸಲ ಮಾತ್ರ. ಇವು ಮೂರೂ ಒಂದೊಂದು ಬಾರಿ ನಡೆಯುವುದು. ನಾನು ಜಪ ಮಾಡುವ ಮುನ್ನ ಅದರ ಫಲದ ಬಗ್ಗೆ ಎಂದೂ ಚಿಂತಿಸಲಿಲ್ಲ, ಆದ್ದರಿಂದ ನನಗಾದರೂ ಅದರ ಫಲ ಹೇಗೆ ತಿಳಿದೀತು (ಫಲದ ಬಗ್ಗೆ ನನಗೆ ಆಸಕ್ತಿಯೇ ಇಲ್ಲವಾದ್ದರಿಂದ).

ನೀನೇ ನನಗೆ ತಪಸ್ಸನ್ನು ಕೊಡು ಎಂದು ಯಾಚಿಸಿದ ಮೇಲೆ ನಾನು ಕೊಟ್ಟೆ ಈಗ ಅದನ್ನು ನಾನು ತೆಗೆದು ಹಾಕಲಾರೆ. ನೀನೂ ನಿನ್ನ ಸತ್ಯ ರಕ್ಷಿಸು. ನನ್ನ ತಪಸ್ಸಿನ ಫಲ ಸ್ವಿಕರಿಸು. ಮಾತಿಗೆ ತಪ್ಪಬೇಡ. ನೀನೇ ಇಲ್ಲಿಗೆ ಬಂದು ಕೇಳಿದ್ದಕ್ಕೆ ತಾನೇ ನಾನು ಕೊಟ್ಟದ್ದು, ನಾವಿಬ್ಬರೂ ಸತ್ಯ ಉಳಿಸಿಕೊಳ್ಳಬೇಕು. ಸುಳ್ಳಾಡುವವರಿಗೆ ಇಹವೂ ಇಲ್ಲ ಪರವೂ ಇಲ್ಲ, ಯಜ್ಞ, ದಾನ, ಅಧ್ಯಯನ ಇವಾವೂ ಸತ್ಯಕ್ಕಿಂತ ದೊಡ್ಡದಲ್ಲ. ಸತ್ಯವೇ ಪರಬ್ರಹ್ಮ, ಅದೇ ಯಜ್ಞ, ಅದೇ ತಪಸ್ಸು ವೇದವೇದಾಂಗ ಯಜ್ಞವ್ರತಗಳೆಲ್ಲ ಸತ್ಯದಲ್ಲಿಯೇ ಇವೆ. ಅದುವೇ ಓಂಕಾರ. ಸತ್ಯಧರ್ಮಗಳನ್ನು ತೂಗಿದಾಗ ಸತ್ಯವೇ ಭಾರವಾಗಿ ತಗ್ಗಿತು. ದರ್ಮವಿದ್ದಲ್ಲಿ ಸತ್ಯ. ಸತ್ಯನಿಷ್ಠನಾಗು. ಸುಳ್ಳಾಡಬೇಡ. ದೇಹಿ ಎಂದು ಕೇಳಿದ ಮೇಲೆ ಯಾವ ಕಾರಣದಿಂದ ಅನೃತವಾಕ್ಯ ಉಚ್ಚರಿಸಿ ಸತ್ಯವನ್ನು ಅಮಂಗಳ ಮಾಡಬೇಡ. ಕೊನೆಗೆ ಉತ್ತಮಲೋಕವೂ ನಿನಗೆ ಸಿಗದು. ಕೊಡುತ್ತೇನೆಂದು ಹೇಳಿ ಕೊಡದವನು, ಕೊಡು ಎಂದು ಹೇಳಿ ಸ್ವೀಕರಿಸಿದವನು - ಇಬ್ಬರೂ ಅನೃತವಾದಿಗಳೇ (ಸುಳ್ಳು ಹೇಳುವವರೇ).

**ರಾಜ** : ಎಲೈ ದ್ವಿಜನೇ! ಯುದ್ಧ ಮಾಡುವುದು, ಧರ್ಮರಕ್ಷಣೆಗಳು ಕ್ಷತ್ರಿಯರ ಧರ್ಮಗಳು. ಕ್ಷತ್ರಿಯರು ದಾನಶೀಲರು, ಅವರು ಹೇಗೆ ತಾನೇ ನಿಮ್ಮಿಂದ (ದಾನ) ಸ್ವೀಕರಿಸಿಯಾರು?

**ಬ್ರಾಹ್ಮಣ**: ರಾಜನ್! ನಾನು ನಿನ್ನನ್ನು ತಪಃಫಲವನ್ನು ಸ್ವೀಕರಿಸಲು ಒತ್ತಾಯ ಮಾಡಿದ್ದೆನಾ? ನಾನೇನೂ ನಿನ್ನ ಬಳಿ ಬಂದು ಕೊಡ ಬಯಸಲಿಲ್ಲವಷ್ಟೇ? ನೀನೆ ಬಂದು ಯಾಚಿಸಿದುದನ್ನು ಮರೆತೆಯಾ?

---

೧ ನಾದದೇ ಪರದತ್ತಂ ವೈ ದತ್ತಂ ವಾ ಚಾಫಲಂ ಮಯಾ।
ವಾಕ್ಯಂ ಪ್ರಮಾಣಂ ರಾಜರ್ಷೇ ಮಮಾಪಿ ತವ ಚೈವ ಹಿ। - ೨೫/೫೪
ಸಕೃದಂಶೋ ನಿಪತತಿ ಸಕೃತ್ ಕನ್ಯಾ ಪ್ರದೀಯತೇ।
ಸಕೃದೇವ ದದಾನೀತಿ ತ್ರೀಣ್ಯೇತಾನಿ ಸಕೃತ್ ಸಕೃತ್ ॥ - ೨೫/೫೫

[1]ಹೀಗೆ ರಾಜ, ಬ್ರಾಹ್ಮಣರು ವಿವಾದ ಮಾಡುತ್ತಿರುವಾಗ ಧರ್ಮದೇವತೆ ಬಂದು 'ವೃಥಾ ವಿವಾದ ಮಾಡಬೇಡಿ. ನಾನು ಧರ್ಮಪುರುಷ. ಎಲೈ ಬ್ರಾಹ್ಮಣನೇ! ನಿನಗೆ ದಾನ ಮಾಡಿದ ಫಲ ಬರುತ್ತದೆ. ರಾಜನಿಗೆ ಸತ್ಯನಿಷ್ಠೆಯ ಫಲ ಉಂಟಾಗಲಿ' ಎಂದನು. ಅದೇ ವೇಳೆ ಸ್ವರ್ಗ(ಅಭಿಮಾನಿ ದೇವತೆ) ಇಬ್ಬರಿಗೂ ವಿವಾದ ಬೇಡವೆಂದು ಹೇಳುತ್ತಾ 'ನೀವಿಬ್ಬರೂ ಫಲದಲ್ಲಿ ಸಾಮ್ಯ ಹೊಂದಿರಿ' ಎಂದನು.

[2]ಸ್ವರ್ಗದೇವತೆಯ ಮಾತನ್ನು ಕೇಳಿದ ರಾಜನು 'ನನಗೆ ಸ್ವರ್ಗಲೋಕದಿಂದ ಆಗಬೇಕಾದುದೇನೂ ಇಲ್ಲ. ಈ ಬ್ರಾಹ್ಮಣನು ನನಗೆ ದಾನ ಮಾಡಿ ಸ್ವರ್ಗಫಲ ಹೊಂದಲು ಇಚ್ಛಿಸಿದಲ್ಲಿ ನಾನೂ ಕೂಡಾ ಮಾಡಿದ ಕರ್ಮಫಲಗಳನ್ನು ದಾನ ಮಾಡುವೆ. ಆದರಿಂದ ಬ್ರಾಹ್ಮಣನು ಸ್ವರ್ಗಕ್ಕೆ ಹೋಗಲಿ' ಎಂದ.

[3]ಬ್ರಾಹ್ಮಣನು ಆಗ ನಾನು ಬಾಲ್ಯದಲ್ಲಿ ನನಗೆ ಗೊತ್ತಿಲ್ಲದೇ ಪ್ರತಿಗ್ರಹ(ದಾನ) ಸ್ವೀಕರಿಸಲು ಕೈ ಚಾಚಿರಬಹುದು. ಈಗಂತೂ ಗಾಯತ್ರೀಜಪವನ್ನು ಆರಂಭಿಸಿ ನಿವೃತ್ತಧರ್ಮದಲ್ಲಿಯೇ ಇದ್ದೇನೆ (ಆದ್ದರಿಂದ ರಾಜನ ಪುಣ್ಯಗಳು ನನಗೆ ಬೇಡ ಎಂದ). ನಾನು ತಪಸ್ವಾಧ್ಯಾಯಶೀಲ, ಪ್ರತಿಗ್ರಹದಿಂದ ನಿವೃತ್ತನಾಗಿದ್ದೇನೆ.

ಪುನಃ ರಾಜನು ಬ್ರಾಹ್ಮಣನೇ! ನೀನು ನಿನ್ನ ಅತ್ಯುತ್ತಮ ತಪಸ್ಸಿನ ಪಲವನ್ನು ಕೊಟ್ಟಲ್ಲಿ, ನಾವಿಬ್ಬರೂ ಸಂಪಾದಿಸಿದ ಫಲಗಳನ್ನು ಹಂಚಿಕೊಳ್ಳೋಣ (ಇಬ್ಬರಿಗೂ ಸಮನಾಗವಾಗಿ ಅರ್ಧ-ಅರ್ಧ). ಎಷ್ಟೆಂದರೂ ಬ್ರಾಹ್ಮಣರು ಪ್ರತಿಗ್ರಹಕ್ಕೆ ಅಧಿಕಾರಿಗಳು, ಕ್ಷತ್ರಿಯರು ಕೊಡುವವರು. ಇಬ್ಬರ ಕುಲಧರ್ಮದ ಫಲಗಳನ್ನು ಸೇರಿಸಿ ಇಬ್ಬರೂ ಸಮಾನ ಫಲ ಹೊಂದಿದವರಾಗೋಣ. ಒಂದು ವೇಳೆ ಅದೂ ಬೇಡವಾದಲ್ಲಿ ನನ್ನ ಸಂಪಾದನೆಯ ಎಲ್ಲ ಫಲವನ್ನೂ ಕೊಡುವೆ. ಅದು ನನ್ನ ಮೇಲಿನ ಅನುಗ್ರಹವೆಂದು ಬಾವಿಸಿದ್ದೇನೆ.

ಹೀಗೆ ರಾಜ ಬ್ರಾಹ್ಮಣರ ವಿವಾದ ನಡೆಯುತ್ತಿರುವಾಗಲೇ ಇಬ್ಬರು ವಿಕೃತ ವೇಷಧಾರಿಗಳಾದ ಪುರುಷರು (ಹರಿದ ಬಟ್ಟೆ ಧರಿಸಿದ) ಒಬ್ಬರನ್ನೊಬ್ಬರು ಎಳೆದಾಡುತ್ತಾ ಕಲಹ ಮಾಡುತ್ತಾ

---

೧ ದ್ವಿಜೋ ದಾನಫಲೈರ್ಯುಕ್ತೋ ರಾಜಾ ಸತ್ಯಫಲೇನ ಚ ।
ಸ್ವರ್ಗಃ ಅವಿವಾದೋಽಸ್ತು ಯುವಯೋರುಭೌ ತುಲ್ಯಫಲೌ ಯುವಾಮ್ ॥ - ೨೫/೭೬,೭೭

೨ ತಪಸ್ವಾಧ್ಯಾಯಶೀಲೋಽಹಂ ನಿವೃತ್ತಶ್ಚ ಪ್ರತಿಗ್ರಹಾತ್ ।
ಸ್ವೇನ ಕಾರ್ಯಂ ಕರಿಷ್ಯಾಮಿ ತ್ವತ್ತೋ ನೇಚ್ಛೇ ಫಲಂ ನೃಪ ॥
ಗೃಹಾಣ ಧಾರಯೇಽಹಂ ತೇ ಯಾಚಿತಂ ತೇ ಶ್ರುತಂ ಮಯಾ ।
ನ ಚೇತ್ ಗ್ರಹೀಷ್ಯಸೇ ರಾಜನ್ ಶಪಿಷ್ಯೇ ತ್ವಾಂ ನ ಸಂಶಯಃ ॥ - ೨೫/೧೧೦

೩. ಅಸ್ಮಾಕಂ ಯ ಸ್ಮೃತೋ ಮೂರ್ಧಾ ಬ್ರಹ್ಮಲೋಕಮಿತಿ ಸ್ಮೃತಮ್ ।
ತತ್ರ ಸ್ಥೌ ಹಿ ಭವಂತೌ ಹಿ ಯುವಾಭ್ಯಾಂ ನಿರ್ಜಿತಾ ವಯಮ್ ॥
ಯುವಯೋಃ ಕಾಮ ಆಪನ್ನಸ್ತತ್ಕಾಮ್ಯಮವಿಶಂಕಯಾ ॥ - ೨೫/೧೨೦

ಬಂದರು. ಅವರಲ್ಲಿ ಒಬ್ಬನು ತಾನು ಕೊಟ್ಟ ವಸ್ತ್ರವನ್ನು ಇನ್ನೊಬ್ಬನು ಧರಿಸದಿರುವುದನ್ನು ಆಕ್ಷೇಪಿಸುತ್ತಿದ್ದ. ಇನ್ನೊಬ್ಬನು ನಾನೇಕೆ ಧರಿಸಲಿ ಎನ್ನುತ್ತಿದ್ದ. ಮೊದಲನೆಯವನು ನನಗೆ ನೀನು ಏನೂ ಕೊಟ್ಟಿಲ್ಲ, ಧರಿಸುವ ಪ್ರಸಂಗವೆಲ್ಲಿಯದು? ನೀನು ಸುಳ್ಳು ಹೇಳುತ್ತಿರುವೆ ಎಂದನು. ಇವರಿಬ್ಬರೂ ಅಲ್ಲಿದ್ದ ರಾಜನಲ್ಲಿಗೆ ಬಂದು ದೂರಿದರು. ಅವರು **ವಿರೂಪ, ವಿಕೃತ**. ಧರ್ಮಾಧರ್ಮಗಳ ನಿರ್ಣಯವನ್ನು ಮಾಡಿ ಈರ್ವರಿಗೂ ಸಮಾಧಾನವಾಗುವಂತೆ ಮಾಡಲು ರಾಜನನ್ನು ಕೋರಿದರು. ಅವರ ದೂರಿನ ವಿಷಯ ಹೀಗಿತ್ತು. ಅವರು ಹೇಳುತ್ತಾರೆ.

**ವಿರೂಪ** : ರಾಜನ್! ವಿಕೃತನು ತಪಸ್ವಾಧ್ಯಾಯಶೀಲನಾದ ನನಗೆ(ವಿರೂಪ) ಒಂದು ಗೋದಾನ ಮಾಡಿದ್ದನು. ನಂತರ ನಾನು ಇವನಿಗೆ ಆ ಗೋದಾನದ ಫಲ ಬೇಡಿದೆ. ಅದರಂತೆ ಅವನು ಶುದ್ಧ ಮನಸ್ಸಿನಿಂದ ನನಗೆ ಆ ಫಲವನ್ನು ಕೊಟ್ಟನು. ನಂತರ (ದಾನಸ್ವೀಕರಿಸಿದ) ಪಾಪ ಹೋಗಲು ಪುಣ್ಯಕರ್ಮಗಳನ್ನು ಮಾಡಿದೆ. ನಾನು ಪಡೆದ ಗೋ (ಕಪಿಲ)ವಿನಿಂದ ಜನಿಸಿದ ಎರಡು ಕರುಗಳಿಂದ ಬಂದ ಬಹಳಷ್ಟು ಹಾಲನ್ನು ಸ್ವೀಕರಿಸಿ ಹೆಚ್ಚಾಗಿ ಹಾಲನ್ನು ಕರೆಯುತ್ತಿದ್ದ ಆ ಹಸುಗಳನ್ನು ಉಂಛವೃತ್ತಿಯಲ್ಲಿದ್ದ ವಿಕೃತನಿಗೆ ದಾನ ಮಾಡಿದೆನು. ವಿಧಿಬದ್ಧವಾಗಿ ಶ್ರದ್ಧೆಯಿಂದ ಆ ಗೋದಾನದ ಫಲವನ್ನು ಈತನಿಗೆ(ವಿಕೃತ) ಕೊಡಬೇಕೆಂದು ಮತ್ತೆ ಮತ್ತೆ ಬೇಡುತ್ತೇನೆ. ಮೊದಲು ದಾನ ಸ್ವೀಕರಿಸಿದ್ದು ನಾನು (ವಿರೂಪ). ಈಗ ನಾನು ದಾನ ಮಾಡಲು ಬಂದಾಗ ಈತನು (ವಿಕೃತ) ಒಲ್ಲೆ ಎನ್ನುತ್ತಿದ್ದಾನೆ. ರಾಜ ನೀನೇ ಹೇಳು ನಮ್ಮಲ್ಲಿ ಯಾರು ದೋಷಿಗಳು? ಯಾರು ಶುದ್ಧರು? ಇವನು ಕೊಟ್ಟ ದಾನವನ್ನು ನಾನು ಸ್ವೀಕರಿಸಿದೆ. ನಾನು ಕೊಡುವ ದಾನವನ್ನು ಇವನು ನಿರಾಕರಿಸುತ್ತಿದ್ದಾನೆ. ರಾಜನ್ ನೀನೇ ನ್ಯಾಯ ಹೇಳು.

ರಾಜನು ವಿಕೃತನಿಗೆ ದಾನ ಸ್ವೀಕರಿಸಲು ಸೂಚಿಸಿದ. ಆದರೆ ವಿಕೃತನು ಈ ವಿಷಯ ಹಾಗಿಲ್ಲ, ಇವನು ನನ್ನಲ್ಲಿ ಋಣ ಎಂದು ಹೇಳಿಕೊಳ್ಳುತ್ತಿದ್ದಾನೆ. ನಾನು ಅವನಿಗೆ ಕೊಡುವಾಗ ಇವನು ನನ್ನ ಋಣಿ ಎಂದು ಭಾವಿಸಿರಲಿಲ್ಲ, ಹೀಗಾಗಿ ಇವನು ಸಾಲಗಾರನಲ್ಲ, ಅವನು ನನಗೆ ಕೊಡುವುದು ಅನಾವಶ್ಯಕ.

ಮತ್ತೆ ರಾಜನು 'ಎಲೈ ವಿಕೃತನೇ! ಅವನಾಗಿ ಕೊಡುತ್ತಿರುವಾಗ ನೀನೇಕೆ ನಿರಾಕರಿಸುವೆ? ಅದಕ್ಕೆ ವಿಕೃತನು ನಾನು ಇವನಿಗೆ ದಾನ ಕೊಟ್ಟ ಮೇಲೆ ಅದನ್ನು ವಾಪಸು ಹೇಗೆ ಪಡೆಯಲಿ? ಆಗ ವಿರೂಪನು 'ನೀನು ಸ್ವೀಕರಿಸದಿದ್ದಲ್ಲಿ ರಾಜನ ದಂಡಕ್ಕೆ ಗುರಿಯಾಗುವೆ ಎಂದನು. ಮತ್ತೆ ವಿಕೃತನು ನಾನು ನಿನ್ನನ್ನು ಯಾಚಿಸದಿರುವಾಗ ಏಕೆ ಕೊಡುವೆ? ನಾನು ಹೇಗೆ ಸ್ವೀಕರಿಸಲಿ?

ಇದೆಲ್ಲವನ್ನೂ ಬ್ರಾಹ್ಮಣನು ಕೇಳುತ್ತಿದ್ದ, ರಾಜನನ್ನು ಕುರಿತು ಹೇಳಿದ. ನಾನು ಕೊಡುವುದಾಗಿ ಪ್ರತಿಜ್ಞೆ ಮಾಡಿದ್ದುದನ್ನು ನೀನು ಸ್ವೀಕರಿಸಬಹುದಲ್ಲವೇ? ನೀನೇ ಈಗ ತಾನೇ ನಿರ್ಣಯ ಕೊಟ್ಟಿರುವೆಯಲ್ಲ(ವಿರೂಪ, ವಿಕೃತ ಎಂಬ ಬ್ರಾಹ್ಮಣರಿಗೆ).

ಆಗ ರಾಜನು ಈ ವಿರೂಪ, ವಿಕೃತ ಬ್ರಾಹ್ಮಣರ ಸಮಸ್ಯೆ ಜಟಿಲವಾಗುತ್ತಿದೆ. ಈ ಬ್ರಾಹ್ಮಣನು ಹಠಮಾರಿ. ಇವನನ್ನು ಕೊಟ್ಟುದ್ದನ್ನು ಸ್ವೀಕರಿಸದಿದ್ದರೆ ನನಗೆ ಪಾಪ ಬರುತ್ತದೆ. ಏನು ಮಾಡಲಿ? ಎಂದು ಚಿಂತಾಗ್ರಸ್ತನಾಗಿ ಆ ಇಬ್ಬರಿಗೂ ಪರಿಹಾರ ಹೇಳಿದ್ದಾಯಿತು. ನೀವು ಹೋಗಿ ಎಂದನು. ತನ್ನ ಸಮಸ್ಯೆಯ ಬಗ್ಗೆ ಏನು ಮಾಡಬೇಕೆಂದು ಯೋಚಿಸುತ್ತಿರುವಾಗ ಬ್ರಾಹ್ಮಣನು 'ರಾಜನ್! ನೀನೇ ಮೊದಲು ಕೊಡು ಎಂದೆ. ನಾನು ಹಾಗೆಯೇ ಪ್ರತಿಜ್ಞೆ ಮಾಡಿದೆ. ಆದ್ದರಿಂದ ನಾನೀಗ ಕೊಡುವೆ. ನೀನು ತೆಗೆದುಕೊಳ್ಳದಿದ್ದರೆ ನನ್ನ ಶಾಪಕ್ಕೆ ಗುರಿಯಾಗುವೆ' ಎಂದ. ಆಗ ರಾಜನು ರಾಜಧರ್ಮವನ್ನು ಬಿಡದೆ ಬ್ರಾಹ್ಮಣನ ಶಾಪಕ್ಕೆ ಹೆದರಿ 'ನನ್ನ ಕೈಯನ್ನು ಎಂದೂ ಪ್ರತಿಗ್ರಹಕ್ಕಾಗಿ ನೀಡಿರಲಿಲ್ಲ. ಇದೋ ಈಗ ನೀಡುತ್ತಿದ್ದೇನೆ. ನನಗಾಗಿ ನೀನು ಯಾವ ವಿಷಯದಲ್ಲಿ ಸಾಲಗಾರ ಎಂದು ಪರಿಗಣಿಸಿ ದಾನ ಮಾಡಲು ಮುಂದಾಗಿದ್ದೀಯೋ ಅದನ್ನು ಕೊಟ್ಟು ಬಿಡು ಎಂದನು.

ಬ್ರಾಹ್ಮಣನು ತಾನು ಗಾಯತ್ರೀಜಪದಿಂದ ಬಂದಿರಬಹುದಾದ ಫಲವು ನಿನಗೆ ಸೇರಲಿ. ಅದನ್ನು ನೀನು ಸ್ವೀಕರಿಸು ಎಂದ.

ನಂತರ ರಾಜನು 'ನೀನು ಜಪದಫಲವನ್ನು ದಾನ ಮಾಡಲು ನನ್ನ ಕೈಯಲ್ಲಿ ದಾನಜಲವನ್ನು ಹಾಕಿರುವೆ. ಆದರೆ ನಮ್ಮಿಬ್ಬರಲ್ಲಿ ದಾನ ಪ್ರತಿಗ್ರಹಗಳು ಸಮವಾಗಿರಬೇಕು. ಆದ್ದರಿಂದ ನೀನು ಕೊಟ್ಟಾಯಿತು. ನನ್ನಿಂದ ಏನನ್ನಾದರೂ ಸ್ವೀಕರಿಸು ಎಂದು ಬ್ರಾಹ್ಮಣನನ್ನು ಪ್ರಾರ್ಥಿಸಿದನು.

ಆಗಲೇ ವಿರೂಪನು 'ರಾಜನ್! ನಿಮ್ಮಿಬ್ಬರ ಮನಸ್ಸನ್ನು ಪರೀಕ್ಷಿಸಲು ನಾವಿಬ್ಬರೂ (ಕಾಮ, ಕ್ರೋಧ) ಬಂದಿದ್ದೇವೆ. ನಮ್ಮಿಬ್ಬರ ವಿವಾದವನ್ನು ಕಾಲ, ಧರ್ಮ, ಮೃತ್ಯು, ಕಾಮಕ್ರೋಧಗಳು (ಅದರ ಅಭಿಮಾನಿಗಳು) ಹಾಗೂ ಜಗತ್ತೆಲ್ಲ ನೋಡುತ್ತಿವೆ. ನಿಮ್ಮಿಬ್ಬರಿಗೂ ಸಮಾನ ಫಲ ಸಿಗಲಿ. ಪುಣ್ಯಲೋಕಗಳು ಸಮಾನವಾಗಿರಲಿ. ನಿಮ್ಮಿಬ್ಬರ ಜಿಜ್ಞಾಸೆಗಾಗಿ ನಾವು ಬಂದೆವು. ಪರಬ್ರಹ್ಮ ಲೋಕವು ನಿಮಗೆ ಸಿಗಲಿ. ಅದು ನಿರ್ಮಲ ದ್ವಂದ್ವರಹಿತ, ಎಲ್ಲ ಸ್ಥಾನಕ್ಕಿಂತ ಮಿಗಿಲಾದುದು. ನೀವು ನಿಮ್ಮ ಕರ್ಮಗಳಿಂದ ಉತ್ತಮಲೋಕಕ್ಕೆ ಹೋಗಿ ನೆಲೆಸಿರಿ.

[೧]ನಂತರ ಧರ್ಮಾದಿಗಳು 'ನೀವಿಬ್ಬರೂ ನಮ್ಮೆಲರನ್ನೂ ಜಯಿಸಿದ್ದೀರಿ. ನೀವು ಬಯಸಿದ ಲೋಕಗಳಿಗೆ ನೀವು ಹೋಗಬಹುದು. ನಿಮಗೆಲ್ಲ ಸಿದ್ಧಿಸಿವೆ, ಆ ಲೋಕಗಳು.

ಹೀಗೆ ಭೀಷ್ಮರು ಧರ್ಮಾದಿಗಳು ಬ್ರಾಹ್ಮಣ ಹಾಗೂ ರಾಜನ ವಿವಾದ ವಿಷಯವನ್ನು ಧರ್ಮರಾಜನಿಗೆ ಜಾಪಕನಿಗೆ, ಜಪಶೀಲರಿಗೆ ಸಿಗುವ ಫಲವನ್ನು ಹೇಳಿದರು. ಅವು –

---

೧ ಬ್ರಹ್ಮಸ್ಥಾನಮನಾವರ್ತಂ ಏಕಮಕ್ಷರಸಂಜ್ಞಕಮ್ ।
ಅದುಃಖಮಜರಂ ಶಾಂತಂ ಸ್ಥಾನಂ ತತ್ ಪ್ರತಿಪದ್ಯತೇ ॥
ಅಥವಾ ವೀಕ್ಷತೇ ಲೋಕಾನ್ ಸರ್ವಾನ್ ನಿರಯ ಸಂಸ್ಥಿತಾನ್ ।
ನಿಸ್ಪೃಹಃ ಸರ್ವತೋ ಮುಕ್ತಃ ತತ್ರೈವ ರಮತೇ ಸುಖೀ ॥ –೨೫/೧೨೭,೧೩೦

೧. ಗಾಯತ್ರೀ ಮಂತ್ರ ಜಪಿಸುವವನು, ಪರಬ್ರಹ್ಮನ ಸ್ಥಾನಕ್ಕೆ ಹೋಗುತ್ತಾನೆ. ಬಯಸಿದರೆ ಅಗ್ನಿ, ಸೂರ್ಯಲೋಕಗಳಿಗೆ ಹೋಗಬಹುದು.

೨. ತೇಜೋರೂಪದಿಂದ ಆ ಲೋಕಗಳಲ್ಲಿನ ಸುಖವನ್ನು ಅನುಭವಿಸಬಹುದು.

೩. ಹಾಗೆಯೇ ಸೋಮ, ವಾಯು, ಭೂಮ್ಯಾಕಾಶಗಳಲ್ಲಿಯೂ ಆಸಕ್ತರಾಗಿ ಅಲ್ಲಿಯ ಗುಣಗಳನ್ನು ಹೊಂದಬಹುದು.

ಹೀಗೆ ಮೇಲಿನ ಕಲೋಕಗಳು ಅಶಾಶ್ವತವೆಂದು ತಿಳಿದು ವಿರಕ್ತರಾಗಿ ಕೊನೆಗೆ ಪರಮಪದಕ್ಕೆ, ವೈಕುಂಠಲೋಕಕ್ಕೆ ಹೋಗುತ್ತಾರೆ(ಶಾಶ್ವತ ಲೋಕಕ್ಕೆ). ಆಗ ಅಹಂಕಾರಗಳು ನೀಗಿ, ನಿರಾಮಯರಾಗಿ ಶಾಂತಿ, ಸೌಖ್ಯಗಳಿಂದ ಇರುತ್ತಾರೆ. ಅಲ್ಲಿ ಬಯಸಿದ ಕಾಮನೆಗಳೆಲ್ಲ ಸಿಗುತ್ತವೆ. ವೈಕುಂಠೇತರಲೋಕಗಳನ್ನು ನಿರಯ ಲೋಕಗಳೆಂದು ಭಾವಿಸಿ ಮುಕ್ತನಾಗಿ ವೈಕುಂಠದಲ್ಲಿ ಭಗವತ್ಸಂಬಂಧದಿಂದ ಸುಖಿಯಾಗಿ ರಮಿಸುತ್ತಾನೆ. ಇದೇ ಜಪಶೀಲನಿಗೆ ಸಿಗುವ ಗತಿ.

ವಿರೂಪನು ಜಾಪಕನಿಗೆ ಮತ್ತು ರಾಜನಿಗೆ ಸಿಗುವ ಫಲಗಳನ್ನು ಹೇಳಿದ ಮೇಲೆ ಅವರು ಏನು ಮಾಡಿದರು? ಏನು ಉತ್ತರಿಸಿದರು? ಅವರಿಗೆ ಸಿಕ್ಕ ಗತಿ ಏನು? ಇತ್ಯಾದಿಗಳನ್ನು ಧರ್ಮರಾಜನು ಹೇಳೆಂದಾಗ, ಭೀಷ್ಮರು ಉಪಾಖ್ಯಾನವನ್ನು ಮುಂದುವರಿಸಿದರು (೨೬/೧,೨).

ನಂತರ ಬ್ರಾಹ್ಮಣನು ಧರ್ಮ, ಯಮ, ಕಾಲ, ಮೃತ್ಯು ಹಾಗೂ ಸ್ವರ್ಗ (ಅಭಿಮಾನಿದೇವತೆಗಳನ್ನು) ಪೂಜಿಸಿ 'ಹಾಗೆಯೇ ಆಗಲಿ' ಎಂದನು. ಅಲ್ಲದೇ ಅಲ್ಲಿ ಸೇರಿದ್ದ ಬ್ರಾಹ್ಮಣರಿಗೆ ತಲೆಬಾಗಿ ನಮಿಸಿ, ಪೂಜಿಸಿ, ರಾಜನನ್ನು ಕುರಿತು ಹೀಗೆ ಹೇಳಿದನು.

ರಾಜರ್ಷಿಯೇ! ನನ್ನ ಜಪಫಲದಿಂದ ನೀನು ಉತ್ತಮಫಲ ಹೊಂದು. ನನಗೆ ಹೇಗಿದ್ದರೂ ಹಿಂದೆಯೇ ಜಪದಲ್ಲಿ ಶ್ರದ್ಧೆಯನ್ನು ನಿತ್ಯದಲ್ಲೂ ಇರಲಿ ಎಂಬ ವರವನ್ನು ಸಾವಿತ್ರೀದೇವಿ ಅನುಗ್ರಹಿಸಿದ್ದಾಳೆ. ನನಗೆ ಜಪ ಮಾಡಲು ಅನುಮತಿ ನೀಡು. ನಾನು ಮತ್ತೆ ಜಪದಲ್ಲಿ ನಿರತನಾಗುವೆ[1].

ಹೀಗೆ ಬ್ರಾಹ್ಮಣ ನುಡಿಯಲು ರಾಜನು ನನಗೆ ಜಪದ ಫಲ ಕೊಟ್ಟಿದ್ದರಿಂದ ನಿನ್ನ ಜಪದ ಫಲದಲ್ಲಿ ನನ್ನೊಡನೆ ನೀನೂ ಅರ್ಧ ಅನುಭವಿಸು. ನನ್ನೊಡನೆ ಆಗಮಿಸಿ ನಿನ್ನ ಜಪದ ಫಲವನ್ನು ಪಡೆ' ಎಂದನು.

---

೧ ಫಲೇನಾನೇನ ಸಂಯುಕ್ತೋ ರಾಜರ್ಷೇ ಗಚ್ಛ ಪುಣ್ಯತಾಮ್ ।
ಭವತಾ ಚಾಭ್ಯನುಜ್ಞಾತೋ ಜಪೇಯಂ ಭೂಯ ಏವ ಹಿ ॥
ವರಶ್ಚ ಮಮ ಪೂರ್ವಂ ಹಿ ದೇವ್ಯಾ ದತ್ತೋ ಮಹಾಬಲ ।
ಶ್ರದ್ಧಾ ತೇ ಜಪತೋ ನಿತ್ಯಂ ಭವಿತೇತಿ ವಿಶಾಂ ಪತೇ ॥ -೨೬/೫,೬

**ಯದ್ಯೇವಫಲಾ ಸಿದ್ಧಿಃ ಶ್ರದ್ಧಾ ಚ ಜಪಿತುಂ ತವ।**
**ಗಚ್ಛ ವಿಪ್ರ ಮಯಾ ಸಾರ್ಧಂ ಜಾಪಕಂ ಫಲಮಾಪ್ನುಹಿ।** - ೨೬/೭

ಅದಕ್ಕೆ ಬ್ರಾಹ್ಮಣನು 'ಹಿಂದೆ ನೀನು ಜಪದ ಫಲವನ್ನು ಕೊಡುವ ಮೊದಲೇ ನಿನ್ನ ಕರ್ಮಫಲವನ್ನು ಕೊಡಲು ಪ್ರಯತ್ನಿಸಿರುವೆ. ಆದ್ದರಿಂದ ನಾವಿಬ್ಬರೂ ಸಮಾನಫಲವುಳ್ಳವರಾಗಿ ಸ್ವರ್ಗಕ್ಕೆ ಹೋಗೋಣ'[೧] ಎಂದನು.

ಇವರ ನಿಶ್ಚಯವನ್ನು ತಿಳಿದ ಇಂದ್ರದೇವನು ಲೋಕಪಾಲರು, ದೇವತೆಗಳಿಂದ ಕೂಡಿಕೊಂಡು ಬ್ರಾಹ್ಮಣ ಹಾಗೂ ರಾಜನು ಇರುವೆಡೆಗೆ ಬಂದನು. ಅಲ್ಲದೆ ಸಾಧ್ಯರು, ವಿಶ್ವೇದೇವತೆಗಳು, ಮರುದ್ಗಣ, ಪೌರುಷೇಯ ಗ್ರಂಥಾಭಿಮಾನಿಗಳು, ನದಿ, ಪರ್ವತ, ಸಮುದ್ರ, ಗಂಗಾದಿತೀರ್ಥ, ತಪಸ್ಸು ವೇದಗಳು, ಗಂಧರ್ವರು, ನಾರದಾದಿಗಳು, ದೇವೇಶನಾದ ವೇದಮಯನಾದ ಚತುರ್ಮುಖಬ್ರಹ್ಮ, ದೇವದೇವನಾದ ಪ್ರಜಾಪತಿ, ಸಹಸ್ರಶೀರ್ಷನಾದ ಅಚಿಂತ್ಯನಾದ ವಿಷ್ಣು ಎಲ್ಲರೂ ಅಲ್ಲಿಗೆ ಬಂದರು. ಅಂತರಿಕ್ಷದಲ್ಲಿ ವಾದ್ಯಘೋಷಗಳು ಮೊಳಗಿದವು. ದೇವತೆಗಳು ಪುಷ್ಪವೃಷ್ಟಿ ಸುರಿಸಿದರು. ಅಪ್ಸರೆಯರು ನರ್ತಿಸಿದರು.

ಆಗಲೇ ಸ್ವರ್ಗ(ಅಭಿಮಾನಿದೇವತೆ)ಯು ಬ್ರಾಹ್ಮಣ ಹಾಗೂ ರಾಜನನ್ನು ನೀವಿಬ್ಬರೂ, ಯೋಗಸಿದ್ಧರಾಗಿರುವಿರಿ ಎಂದನು) ಅದನ್ನು ಬ್ರಾಹ್ಮಣನನ್ನು ಸಂಸಿದ್ಧ ಎಂದೂ ರಾಜನನ್ನು ಸಿದ್ಧನೆಂದೂ ಕರೆದನು[೨].

ನಂತರ ಬ್ರಾಹ್ಮಣ ಹಾಗೂ ರಾಜನು ಪ್ರಪಂಚ ವಿಷಯಗಳಿಂದ ಇಂದ್ರಿಯಗಳೆಲ್ಲವನ್ನೂ ನಿಯಂತ್ರಿಸಿ ಪ್ರಾಣಾದಿ ಪಂಚವಾಯುಗಳನ್ನು ಹೃದಯದಲ್ಲಿ ನಿಲ್ಲಿಸಿ, ಮನಸ್ಸನ್ನು ಪ್ರಾಣಾಪಾನಗಳಲ್ಲಿ ನೆಲೆಗೊಳಿಸಿ, ನಾಸಾಗ್ರವನ್ನು ನೋಡುತ್ತಾ ಯೋಗದಿಂದ ಭಗವಂತನ ಧ್ಯಾನ ಮಾಡಿದರು. ಈರ್ವರೂ ದೇಹಸಂಪರ್ಕ ಕಳೆದುಕೊಂಡು ನಿಶ್ಚೇಷ್ಟಿತರಾದರು. ತಮ್ಮ ಪ್ರಾಣವನ್ನು ಸುಷುಮ್ನಾ ನಾಡಿಯ ಮೂಲಕ ಮೂರ್ಧಸ್ಥಾನಕ್ಕೆ ಸೇರಿಸಿದರು.

---

೧ ಕೃತಃ ಪ್ರಯತ್ನಃ ಸುಮಹಾನ್ ಸರ್ವೇಷಾಂ ಸನ್ನಿಧಾವಿಹ।
ಸಹ ತುಲ್ಯಫಲೌ ಚಾವಾಂ ಗಚ್ಛಾವೋ ಯತ್ರ ನೌ ಗತಿಃ॥ -೨೬/೮

೨ ವ್ಯವಸಾಯಂ ತಯೋಸ್ತತ್ರ ವಿದಿತ್ವಾ ತ್ರಿದಶೇಶ್ವರಃ।
ಸಹದೇವೈರುಪಯಯೌ ಲೋಕಪಾಲೈಸ್ತಥೈವ ಚ।
ಸಾಧ್ಯಾ ವಿಶ್ವೇಽಥ ಮರುತೋ ವಾಕ್ಯಾನಿ ಸುಮಹಾಂತಿ ಚ॥
ಆ ಜಗಾಮ ಚ ದೇವೇಶೋ ಬ್ರಹ್ಮಾ ವೇದಮಯೋಽವ್ಯಯಃ॥
ವಿಷ್ಣುಃ ಸಹಸ್ರಶೀರ್ಷಶ್ಚ ದೇವೋಽಚಿಂತ್ಯಃ ಸಮಾಗಮತ್।
ಅಥ ಸ್ವರ್ಗಸ್ತಥಾ ರೂಪೀ ಬ್ರಾಹ್ಮಣಂ ವಾಕ್ಯಮಬ್ರವೀತ್।
ಸಂಸಿದ್ಧಸ್ತ್ವಂ ಮಹಾಭಾಗ ತ್ವಂ ಚ ಸಿದ್ಧಸ್ತಥಾ ನೃಪ॥ - ೨೬/೯-೧೪

ಮಹಾತ್ಮನಾದ ಬ್ರಾಹ್ಮಣನ ಆತ್ಮವು ಜ್ವಲಿಸುವ ಜ್ಯೋತಿರಾಕಾರ ತಾಳಿ ಸ್ವರ್ಗವನ್ನು ಸೇರಿತು. ಆಗ ಎಲ್ಲ ದಿಕ್ಕುಗಳಲ್ಲಿ ಹಾಹಾಕಾರವುಂಟಾಯಿತು. ಆ ಜ್ಯೋತಿಯು ಎಲ್ಲ ದೇವತೆಗಳ ಸ್ತುತಿಯೊಂದಿಗೆ ಬ್ರಹ್ಮನನ್ನು(ಪರ) ಪ್ರವೇಶಿಸಿತು. ಆಗಮಿಸಿದ ತೇಜಸ್ಸಿಗೆ ಚತುರ್ಮುಖಬ್ರಹ್ಮನು ಎದ್ದು ನಿಂತು ಸ್ವಾಗತ ಎಂದ ಮತ್ತು ಸತ್ಕರಿಸಿದ. ಅಲ್ಲದೆ ಜಪಶೀಲರಿಗೂ, ಯೋಗಿಗಳಿಗೂ, ಸಮಾನಫಲವೆಂದು ಸುಮಧುರವಾಣಿಯಿಂದ ಮಾತನಾಡಿದ. ಜಾಪಕರಿಗೆ ಬ್ರಹ್ಮದೇವರೇ ಎದ್ದು ಬಂದು ಸ್ವಾಗತಿಸುವರೆಂಬುದಕ್ಕೆ ಇದೇ ಪ್ರತ್ಯಕ್ಷ ನಿದರ್ಶನ. 'ಇನ್ನು ಮೇಲೆ ನೀನು ನನ್ನಲ್ಲಿಯೇ ಸುಖವಾಗಿ ವಾಸವಾಗಿರು ಎನ್ನುತ್ತಾ, ತನ್ನ ಬಾಯಿಯನ್ನು ತೆರೆಯಲು ಬ್ರಾಹ್ಮಣನು ಬ್ರಹ್ಮನ ಮುಖವನ್ನು ಪ್ರವೇಶಿಸಿದನು[೧].

ಹಾಗೆಯೇ ರಾಜನೂ ಕೂಡಾ ಪಿತಾಮಹ ಬ್ರಹ್ಮನ ಮುಖವನ್ನು ಪ್ರವೇಶಿಸಿದನು.

ಅಲ್ಲಿ ನೆರೆದ ದೇವತೆಗಳು ಬ್ರಹ್ಮದೇವನನ್ನು ವಂದಿಸಿ ಜಪ ಮಾಡುವವರನ್ನು ಬ್ರಹ್ಮದೇವರು ಹೇಗೆ ಎದ್ದು ನಿಂತು ಗೌರವಿಸುತ್ತಾರೆ ಎಂಬುದನ್ನು ನೋಡಲು ನಾವು ಇಲ್ಲಿಗೆ ಆಗಮಿಸಿದ್ದೇವೆ ಎಂದರು. ಹೀಗೆ ಯೋಗಿ ಹಾಗೂ ಜಾಪಕರಿಗೆ ಸಮಾನಫಲವನ್ನು ಕೊಟ್ಟು ಇಬ್ಬರನ್ನೂ ಸಮಸ್ಥಾನದಲ್ಲಿ ಕುಳ್ಳಿರಿಸಿ ಸಮಾನಪೂಜೆ ಮಾಡಿದಂತಾಯಿತು. ನಾವಿದನ್ನು ನೋಡಿದಂತಾಯಿತು. ಈ ಮಹಾತ್ಮರು ಎಲ್ಲ ಲೋಕಗಳನ್ನು ಸಂಚರಿಸುತ್ತಾ ತಮ್ಮ ಇಷ್ಟ ಬಂದ ಗತಿಗೆ ಹೋಗಲು ಅರ್ಹರಾಗಿದ್ದಾರೆ ಎಂದರು ದೇವತೆಗಳು.

---

೧ ಅಥ ತೌ ಸಹಿತೌ ರಾಜನ್ ಅನ್ಯೋನ್ಯೇನ ವಿಧಾನತಃ।
ವಿಷಯ ಪ್ರತಿಸಂಹಾರಮುಭಾವೇವ ಪ್ರಚಕ್ರತುಃ॥
................ ಬ್ರಾಹ್ಮಣಸ್ಯ ಮಹಾತ್ಮನಃ।
ಜ್ಯೋತಿರ್ಮಾಲಾ ಸುಮಹತೀ ಜಗಾಮ ತ್ರಿದಿವಂ ತದಾ।
ತಜ್ಜ್ಯೋತಿಃ ಸ್ತೂಯಮಾನಂ ಸ್ಮ ಬ್ರಹ್ಮಾಣಂ ಪ್ರಾವಿಶತ್ತದಾ।
ತತಃ ಸ್ವಾಗತಮಿತ್ಯಾಹ ತತ್ತೇಜಃ ಸ ಪಿತಾಮಹಃ॥
ಪ್ರಾದೇಶಮಾತ್ರಂ ಪುರುಷಂ ಪ್ರತ್ಯುದ್ಗಮ್ಯ ವಿಶಾಂಪತೇ।
ಜಾಪಕೈಸ್ತುಲ್ಯಫಲತಾ ಯೋಗಾನಾಂ ನಾತ್ರ ಸಂಶಯಃ॥
ಯೋಗಸ್ಯ ತಾವದೇತೇಭ್ಯಃ ಫಲಂ ಪ್ರತ್ಯಕ್ಷದರ್ಶನಮ್॥
ಜಾಪಕಾನಾಂ ವಿಶಿಷ್ಟಂ ತು ಪ್ರತ್ಯುಸ್ಥಾನಂ ಸಮಾಧಿಕಮ್।
ಅಥಾಸ್ಯ ಪ್ರವಿವೇಶಾಸ್ಯಂ ಬ್ರಾಹ್ಮಣೋ ವಿಗತಜ್ವರಃ॥
ರಾಜಾಪ್ಯೇತೇನ ವಿಧಿನಾ ಭಗವಂತಂ ಪಿತಾಮಹಮ್।
ಯಥೈವ ದ್ವಿಜಶಾರ್ದೂಲಸ್ತಥೈವ ಪ್ರಾವಿಶತ್ತದಾ॥
ಕೃತಪೂಜಾವಿಮೌ ತುಲ್ಯಂ ತ್ವಯಾ ತುಲ್ಯಫಲಾವಿಮೌ।
ಯೋಗಜಾಪಕಯೋರ್ದೃಷ್ಟಂ ಫಲಂ ಸುಮಹದದ್ಯ ವೈ।
ಸರ್ವಾನ್ ಲೋಕಾನ್ ಅತೀತ್ಯೈತೌ ಗಚ್ಛೇತಾಂ ಯತ್ರ ವಾಂಛಿತಮ್॥ - ೨೫/೧೫-೨೭

ನಂತರ ಬ್ರಹ್ಮದೇವರು ದೇವತೆಗಳನ್ನು ಕುರಿತು ಯಾರು ಈ ಜಾಪಕ ಬ್ರಾಹ್ಮಣನ ಚರಿತೆ ಎಂಬ ಮಹಾಸ್ಮೃತಿಯನ್ನು ಹಾಗೂ ರಾಜನ ಚರಿತೆ ಎಂಬ ಅನುಸ್ಮೃತಿಯನ್ನು ಪಠಿಸುತ್ತಾರೋ(ಅಧ್ಯಯನ- ಆಚರಣೆ) ಅವರಿಗೂ, ನನ್ನ ಲೋಕ ಪ್ರಾಪ್ತಿಯಾಗುತ್ತದೆ ಎಂದು ಹೇಳಿ ದೇವತೆಗಳು ತಮ್ಮ ಲೋಕಕ್ಕೆ ತೆರಳಲು ಅನುಮತಿಸಿದರು. ನಂತರ ತಾವು ಕೂಡಾ (ಬ್ರಹ್ಮದೇವರೂ) ಅಲ್ಲಿಯೇ ಅಂತರ್ಧಾನರಾದರು. ದೇವತೆಗಳು 'ಧರ್ಮ'ವನ್ನು ಸತ್ಕರಿಸಿ ಸಂತೋಷದಿಂದ ಅವನನ್ನು ಹಿಂಬಾಲಿಸಿದರು.

ನೋಡು ಧರ್ಮರಾಜ, ಇದುವೇ ಜಪಶೀಲರಿಗೆ, ಯೋಗಿಗಳಿಗೆ ಸಿಗುವ ಫಲದ ಪರಿಯಿದು ಎಂದು ಭೀಷ್ಮರು ಧರ್ಮರಾಜನಿಗೆ ಮತ್ತೇನು ಕೇಳ ಬಯಸುವೆ ಎಂದರು.

## ಸಂದೇಶಗಳು - ವಿವರಣೆಗಳು

೧. ಕುಶಿಕ ವಂಶದ ಪಿಪ್ಪಲಾದನ ಮಗ ಒಬ್ಬ ಬ್ರಾಹ್ಮಣ; ಹೆಸರು ನಮೂದಿಸಿಲ್ಲ. ಆತನ ಹವ್ಯಾಸ ಸದಾ ಜಪಶೀಲತೆ. **ಬ್ರಾಹ್ಮಣನೊಬ್ಬನ ಆದರ್ಶ ಏನಾಗಿರಬೇಕೆಂದು ಎನ್ನಲು ಈ ಬ್ರಾಹ್ಮಣ ಅತ್ಯಂತ ಆದರ್ಶ**. ಆಚಾರ್ಯರು **ಸ್ವಕರ್ಮ ಜಪೋಪದೇಶೌ ವಿಪ್ರಸ್ಯ** ಎಂದು ಮ.ತಾ.ನಿ. (೨೨/೯೬)ರಲ್ಲಿ ಹೇಳಿದುದಕ್ಕೆ ಈ ಬ್ರಾಹ್ಮಣ ಉತ್ತಮ ಉದಾಹರಣೆಯಾಗಿದ್ದಾನೆ. ಅಷ್ಟೇ ಆ ವಿಷಯದಲ್ಲಿ ದೀಕ್ಷೆಯುಳ್ಳವನೂ ಹೌದು. ಅದರೊಟ್ಟಿಗೆ ಧರ್ಮವೃತ್ತನೂ, ವೇದವೇದಾಂಗತತ್ತ್ವಜ್ಞಾನಿಯೂ ಆಗಿದ್ದುದು ಬ್ರಾಹ್ಮಣರ ಆದರ್ಶಕ್ಕೆ ಅನುಗುಣವಾಗಿದ್ದನು.

೨.ಆತ ಗಾಯತ್ರೀ ಮಂತ್ರ ಸಾಕ್ಷಾತ್ಕಾರ ಮಾಡಿಕೊಂಡಿದ್ದನು. ಅಂತೆಯೇ ಗಾಯತ್ರೀ ದರ್ಶನ ಹಾಗೂ ತದ್ಯೋಗ್ಯ ಫಲಭಾಗಿಯೂ ಆಗಿದ್ದನು. ಆದ್ದರಿಂದ ಬ್ರಾಹ್ಮಣನು ಯಾಂತ್ರಿಕ ಜಪಮಾತ್ರಕ್ಕೆಗಮನಕೊಡದೆಸಿದ್ಧಿಯನ್ನುಹೊಂದಲುಅವಿರತಪ್ರಯತ್ನಶೀಲನಾಗಿರಬೇಕೆಂದು ಆತನ ಚರ್ಯೆ ತಿಳಿಸುತ್ತದೆ.

೩. ಗಾಯತ್ರೀದೇವಿಯು ದರ್ಶನ ಕೊಟ್ಟರೂ ಜಪ ಬಿಟ್ಟು ಹೊರಗೆ ಬರಲಿಲ್ಲ. ಅಷ್ಟು ಜಪದಲ್ಲಿ ತಲ್ಲೀನತೆ. ಗಾಯತ್ರೀ ಬಗ್ಗೆ ಅಸಡ್ಡೆಯಿಂದಲ್ಲ. ಸಮಾಧಿಯಿಂದ ಹೊರಬಂದ ಕೂಡಲೇ ದೇವಿಯನ್ನು ನಮಿಸಿದ ಪ್ರಾಂಜಲನಾಗಿ ಬ್ರಾಹ್ಮಣ ವರ ಕೇಳಿದ್ದು 'ನನ್ನ ಮನಸ್ಸು ಜಪದಲ್ಲಿಯೇ ನಿತ್ಯ ತೊಡಗಲಿ, ವರ್ಧಿಸಲಿ, ರಮಿಸಲಿ' ಎಂದು ಇದೂ ಕೂಡಾ ಬ್ರಾಹ್ಮಣನ ಆಶೆಯಾಗಿರಬೇಕು.

೪. ಗಾಯತ್ರೀ ಜಪದ ಫಲ ಪರಬ್ರಹ್ಮಪ್ರಾಪ್ತಿ, ಅದನ್ನು ಹೊಂದಿದ ಬ್ರಾಹ್ಮಣ. ಹಾಗೇ ನಮ್ಮ ಗುರಿಯಾಗಿರಬೇಕು.

೫. ಗಾಯತ್ರೀ ಜಪದ ಫಲ ನೀಡಲು ಸ್ವಯಂ ಧರ್ಮ, ಕಾಲ, ಯಮ, ಮೃತ್ಯು, ದೇವತೆಗಳು ಬಂದರೂ ಅವರ ಗಾಯತ್ರೀಫಲ ಹೊಂದಲು ಮಾಡಿದ ಪ್ರಯತ್ನ ಬ್ರಾಹ್ಮಣನ

ನಿಷ್ಕಾಮ ಪ್ರವೃತ್ತಿಯ ಮುಂದೆ ಅವರೆಲ್ಲ ಸೋತರು. ಬ್ರಾಹ್ಮಣನು ಗೆದ್ದ. ತನ್ನ ಶರೀರವನ್ನು ತೊರೆಯಲು ಇಚ್ಛಿಸಲಿಲ್ಲ. ಆತ ಬೇಡಿದ್ದು ಇದೇ ಶರೀರದಿಂದ ಸದಾ ಜಪಶೀಲನಾಗಿರುವುದು ಅಥವಾ ಸ್ವರ್ಗಕ್ಕೆ ಸಶರೀರವಾಗಿ ಹೋಗವುದು. ಅಲ್ಲೂ ಜಪಶೀಲನಾಗಿರುವುದು.

೬. ಬ್ರಾಹ್ಮಣನ ಬಳಿಗೆ ಬಂದ ಇಕ್ಷ್ವಾಕು ರಾಜನಿಗೂ ತನ್ನ ತಪಸ್ಸನ್ನು ಧಾರೆ ಎರೆದು ಏನು ಕೊಡಲಿ? ಎಂದು ಕೇಳಿದ ಮಹಾದಾನಶೀಲ ಬ್ರಾಹ್ಮಣ, ರಾಜನಿಗೂ ಅಚ್ಚರಿ ತಂದ.

೭. ರಾಜನಾದರೂ ಆದರ್ಶ ಕ್ಷತ್ರಿಯ, ಪ್ರತಿಗ್ರಹ ಇಚ್ಛಿಸಲಿಲ್ಲ, ಬ್ರಾಹ್ಮಣನಂತೆ. ತನ್ನ ಕರ್ಮಗಳ ಫಲದಾನವೀಯಲು ಮುಂದಾದ. ಬ್ರಾಹ್ಮಣ ಒಲ್ಲೆ ಎಂದ. ಆದರ್ಶಗಳು ಹೀಗಿರಬೇಕು.

೮. ಆದರೆ ಬ್ರಾಹ್ಮಣನಿಗೆ ರಾಜನು ೧೦೦ ವರ್ಷಗಳ ತಪಸ್ಸನ್ನು ಯಾಚಿಸಿ (ಬ್ರಾಹ್ಮಣನ ಮಾತಿನ ಮೇರೆಗೆ) ಮಾತಿನಲ್ಲಿ ಸಿಕ್ಕಿ ಹಾಕಿಕೊಂಡು ಬ್ರಾಹ್ಮಣನೊಡನೆ ವಾದಿಸಿ, ಕೊನೆಗೆ ಸೋತು, ಜಪಫಲ ಪಡೆಯುವಂತಾಗುತ್ತದೆ ರಾಜನಿಗೆ. ಹೀಗೆ ಬ್ರಹ್ಮತೇಜಸ್ಸಿನ ಮುಂದೆ ರಾಜನ ಕ್ಷಾತ್ರತೇಜಸ್ಸು ಸೋಲುತ್ತದೆ. ಭಯ ಪಡುತ್ತದೆ ಶಾಪಕ್ಕೆ ಅಂಜುತ್ತದೆ.

ಆದ್ದರಿಂದ ಆಧಿಕಾರಿಕ ಸಮಾಜವನ್ನು ತಪಸ್ಸಿನಿಂದ ನಿಯಂತ್ರಿಸಬಹುದು. ಬ್ರಾಹ್ಮಣನು ತನ್ನ ತಪಸ್ಸಿನಿಂದ ನಿಷ್ಕಾಮ ಕರ್ಮಯೋಗಿಯಾಗಿ ರಾಜನನ್ನೇ ನಿಯಂತ್ರಿಸಿದ, ಮಾತಿನಲ್ಲಿ.

೯. ಆದರೆ ರಾಜನೂ ಕ್ಷತ್ರಿಯಕರ್ಮಯೋಗಿಯೂ ಆಗಿದ್ದ. ಆತನ ಯೋಗ ಧರ್ಮವೂ ಆತನನ್ನು ಕಾಪಾಡಿತು.

ಅಂತೂ ಸ್ವಸ್ವವರ್ಣಾಶ್ರಮಧರ್ಮಗಳೇ ಶ್ರೇಯಸ್ಸಿಗೆ ಕಾರಣವೆಂಬ ಪಾಠ ಉಪಾಖ್ಯಾನದ ಸಂದೇಶ.

೧೦. ಇಬ್ಬರೂ ಸಮಾನಫಲ ಭಾಗಿಗಳೆಂದು ಪರೀಕ್ಷಿಸಲು ಬಂದ ದರ್ಮ, ಕಾಲ, ಯಮ, ಮೃತ್ಯು ದೇವತೆಗಳು ಹೇಳುತ್ತಾರೆ. ತಮ್ಮನ್ನು ನೀವಿಬ್ಬರೂ ಗೆದ್ದಿದ್ದೀರಿ. ನಿಮಗೆ ಎಲ್ಲ ಲೋಕಗಳಲ್ಲಿ ಮುಕ್ತಸಂಚಾರ, ಪರಬ್ರಹ್ಮ ಪ್ರಾಪ್ತಿ ಎಂದು ಹೇಳುತ್ತಾರೆ. ನಾವು ಹೇಗಿರಬೇಕೆಂಬುದು ಇಲ್ಲಿ ಸ್ಫುಟವಾಗಿ ತಿಳಿಯುತ್ತದೆ. '**ಸ್ವಧರ್ಮೇ ನಿಧನಂ ಶ್ರೇಯಃ**' ನಮ್ಮ ಗುರಿಯಾಗಿರಲಿ.

೧೧. ಭಗವಂತನ ಮುಖವನ್ನೇ ಪ್ರವೇಶಿಸಿ ಅಲ್ಲಿ ರಮಿಸುವ ಭಾಗ್ಯ ಇವರಿಬ್ಬರದು ಸಾಯುಜ್ಯಮುಕ್ತಿ. ಆದ್ದರಿಂದ ಯೋಗ ಜಪಗಳ ಫಲ ಸಾಯುಜ್ಯಫಲ.

ಇತ್ಯಾದಿ....

# ೧೨೮. ವರಾಹಾವತಾರಚರಿತೆ

ಧರ್ಮರಾಜನು ಭೀಷ್ಮರನ್ನು ಕುರಿತು –

೧. ಕೃಷ್ಣನ ಸಮಗ್ರ ಮಹಿಮೆ ಹೇಳಿ; ೨. ಕೃಷ್ಣನು ಹಿಂದೆ ಮಾಡಿದ ಮಹತ್ಕರ್ಮ, ಅದನ್ನು ಯಥಾವತ್ತಾಗಿ ಹೇಳಿ; ೩.. ಪ್ರಭುವಾದ (ಶ್ರೀಕೃಷ್ಣನು) ತಿರ್ಯಗ್ಯೋನಿ(ಲೋಕದೃಷ್ಟಿಯಿಂದ ಕೆಟ್ಟ ಜನ್ಮ)ವನ್ನು ಹೇಗೆ ಧಾರಣ ಮಾಡಿದ? ಯಾವ ಕಾರ್ಯನಿಮಿತ್ತದಿಂದ ಅದನ್ನು ಹೊಂದಿದ?

(ಇಲ್ಲಿ ಒಟ್ಟಾರೆ ಕೃಷ್ಣನ–ಭಗವಂತನ ಹಿಂದಿನ ವರಾಹಾವತಾರವನ್ನು ಮನಸ್ಸಿನಲ್ಲಿಟ್ಟು-ಕೊಂಡು ಆ ಅವತಾರದ ವರ್ಣನೆಯನ್ನು ಧರ್ಮರಾಜನು ಕೇಳುತ್ತಾನೆ ಎಂದು ಅಧ್ಯಾಯದ ಮುಂದಿನ ಭಾಗ ನೋಡಿದಾಗ ತಿಳಿಯುತ್ತದೆ)

ಭೀಷ್ಮರು ಈ ಪ್ರಶ್ನೆಗಳಿಗೆ ಹೀಗೆ ಉತ್ತರಿಸಿದ್ದಾರೆ.

ಧರ್ಮರಾಜನೇ! ನಾನು ಹಿಂದೆ ಒಮ್ಮೆ ಬೇಟೆಗಾಗಿ ಹೋಗಿ ಮಾರ್ಕಂಡೇಯರ ಆಶ್ರಮದ ಬಳಿ ಹೋದಾಗ ಅಲ್ಲಿ ಸಾವಿರಾರು ಮಹರ್ಷಿಗಳು ಸೇರಿದುದನ್ನು ನೋಡಿದೆ. ನನ್ನನ್ನು ನೋಡಿದ ಕೂಡಲೇ ಅವರು ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿದರು. ಕಶ್ಯಪರು ಆ ಋಷಿಗಳನ್ನು ಉದ್ದೇಶಿಸಿ ಮನಸ್ಸಿಗೆ ಆಹ್ಲಾದಕರವಾದ ಭಗವಂತನ ವರಾಹಾವತಾರ ಚರಿತೆಯನ್ನು ಹೇಳುವುದನ್ನು ಕೇಳಿದೆ. ಕಶ್ಯಪರು ಹೇಳಿದ ಕಥೆ ಹೀಗಿದೆ.

ನರಕಾಸುರನೇ ಮೊದಲಾದ ಕ್ರೋಧ-ಲೋಭಾದಿ ದುರ್ಗುಣಗಳಿಂದ ಹಾಗೂ ತಮ್ಮ ಬಲದಿಂದ ಸೊಕ್ಕಿದವರಾಗಿ ದೇವತೆಗಳನ್ನು ನಿಗ್ರಹಿಸಲು ಮಹಾಪ್ರಯತ್ನವನ್ನೇ ಮಾಡುತ್ತಿದ್ದರು. ಅವರು ದೇವತೆಗಳ ಸಮೃದ್ಧಿಯನ್ನು ಸಹಿಸಲಿಲ್ಲ, ದಾನವರೆಲ್ಲರೂ ಹಿರಣ್ಯಾಕ್ಷನನ್ನು ಆಶ್ರಯಿಸಿದ್ದರು. ಹಿರಣ್ಯಾಕ್ಷನು ನಿಯುತ ವರ್ಷಗಳ ಕಾಲ (೨೦೦೦೦) ಕೇವಲ ವಾಯುಭಕ್ಷನಾಗಿ ಬ್ರಹ್ಮದೇವರನ್ನು ಕುರಿತು ತಪಸ್ಸನ್ನು ಮಾಡಿ ಅವರಿಂದ ನೂರಾರು ಸಾವಿರಾರು ವರಗಳನ್ನು ಪಡೆದು ದಾನವರೊಡನೆ ದೇವ, ಋಷಿಗಳನ್ನು ಪೀಡಿಸಿದ ಪರಿಣಾಮವಾಗಿ ಅವರೆಲ್ಲ ಎಲ್ಲೆಲ್ಲೋ ಓಡಿ ಹೋದರೂ, ಅವರಿಗೆ ಶಾಂತಿ ಕಾಣದಾಯಿತು. ಸಮಗ್ರ ಭೂಲೋಕವು ದುಃಖಿತವಾಯಿತು. ಭೂದೇವಿ ದುಃಖಿತಳಾಗಿ (ದಾನವರ

ಉಪಟಳದಿಂದಾಗಿ ಭೂಭಾರ ಹೆಚ್ಚಾಗಿ) ಕುಗ್ಗಿ ಹೋದಳು (ಹಿರಣ್ಯಾಕ್ಷ) ಭೂಮಿಯನ್ನು ನೀರಿನಲ್ಲಿ ಮುಳುಗಿಸಿದ. ಭೂಮಿಯಲ್ಲಿನ ಓಷಧಿಗಳನ್ನು ದೈತ್ಯರು ತಿಂದು ಹಾಕಿದರು. ಭೂಮಿ ಬರಡಾಯಿತು. ಏನೂ ಬೆಳೆಯದಾಯಿತು. ಮೂರೂ ಲೋಕಗಳು ಓಷಧಿರಹಿತವಾದವು. ಸ್ವಾಧ್ಯಾಯ(ವೇದಾಧ್ಯಯನ), ವಷಟ್ಕಾರ (ಯಜ್ಞ, ಯಾಗಾದಿಗಳು) ಸ್ಥಗಿತವಾದವು. ಭೂದೇವಿ ಸೂಕ್ಷ್ಮರೂಪ ತೆಗೆದುಕೊಂಡು ಪಾತಾಳ ಸೇರಿದಳು. ದೇವತೆಗಳಿಗೆ ತ್ರಾಸಾಯಿತು (ಸಂತ್ರಸ್ತರಾದರು). ಎಲ್ಲರೂ ಬ್ರಹ್ಮದೇವರನ್ನು ಕುರಿತು

ಈ ದಾನವರ, ಹಿರಣ್ಯಾಕ್ಷನ ಉಪಟಳವನ್ನು ಹೇಗೆ ನಾವು ಸಹಿಸೋಣ? ಅವನು ಭೂಮಿಯನ್ನೇ ಹಿಡಿದು ನೀರಿನಲ್ಲಿ ಮುಳುಗಿಸಿದ್ದಾನೆ. ಆ ಜಲದುರ್ಗದಲ್ಲಿ ನಾವು ಹೋಗ-ಲಾರೆವು[೧](ಪ್ರವೇಶಿಸಲಾರೆವು).

ದೇವತೆಗಳ ಪ್ರಾರ್ಥನೆಗೆ ಬ್ರಹ್ಮದೇವನು (ಮುಳುಗಿದ ಭೂಮಿಯನ್ನು ಉದ್ಧರಿಸಲು) 'ಸಮುದ್ರ ಜಲವನ್ನು ಕುಡಿಯಲು ಸಮರ್ಥರಾದ ಅಗಸ್ತ್ಯರನ್ನು ಪ್ರಾರ್ಥಿಸಿ'[೨] ಎಂದನು. ದೇವತೆಗಳ ಪ್ರಾರ್ಥನೆಯ ಮೇರೆಗೆ ಅಗಸ್ತ್ಯರು ಮನಸ್ಸಿನಲ್ಲಿ ಹರಿಧ್ಯಾನ ಮಾಡುತ್ತಾ ಮೇಘ

---

೧ ಬಲೇನ ಮತ್ತಾಃ ಶತಶೋ ನರಕಾದ್ಯಾಃ ಮಹಾಸುರಾಃ ।
ನ ಸಹಂತೇ ಸ್ಮ ದೇವಾನಾಂ ಸಮೃದ್ಧಿಂ ತಾಮನುತ್ತಮಾಮ್ ॥
ನರಕಾದ್ಯಾ ಮಹಾಘೋರಂ ಹಿರಣ್ಯಾಕ್ಷಮುಪಾಶ್ರಿತಾಃ ।
ಉದ್ಯೋಗಂ ಪರಮಂ ಚಕ್ರುರ್ದೇವಾನಾಂ ನಿಗ್ರಹೇ ತದಾ ॥
ನಿಯುತಂ ವತ್ಸರಾಣಾಂ ತು ವಾಯುಭಕ್ಷೋಽಭವತ್ತದಾ ।
ಹಿರಣ್ಯಾಕ್ಷೋ ಮಹಾರೌದ್ರೋ ಲೇಭೇ ದೇವಾತ್ ಪಿತಾಮಹಾತ್ ॥
ವರಾನಚಿಂತ್ಯಾನತುಲಾನ್ ಶತಶೋಽಥ ಸಹಸ್ರಶಃ ।
ದಾನವೈರರ್ದ್ಯಮಾನಾಸ್ತು ದೇವಾ ದೇವರ್ಷಯಸ್ತಥಾ ॥
ನ ಶರ್ಮ ಲೇಭಿರೇ ರಾಜನ್ ಕ್ಲಿಶ್ಯಮಾನಾಸ್ತತಸ್ತತಃ ।
ಪೃಥಿವೀಮಾರ್ತರೂಪಾಂ ತೇ ಸಮಪಶ್ಯನ್ ದಿವೌಕಸಃ ।
ಭಾರಾರ್ತಾಮಪ್ರಹೃಷ್ಟಾಂ ಚ ದುಃಖಿತಾಂ ಸನ್ನಿಮಜ್ಜತೀಮ್ ।
ಗೃಹೀತ್ವಾ ಪೃಥಿವೀ ದೇವೀ ಪಾತಾಲೇ ನ್ಯವಸತ್ತದಾ ।
ತತಸ್ತ್ರೈಲೋಕ್ಯಮಖಿಲಂ ನಿರೋಷಧಿಗಣಾನ್ವಿತಮ್ ॥
ನಿಃಸ್ವಾಧ್ಯಾಯವಷಟ್ಕಾರಮಭೂತ್ ಸರ್ವಂ ಸಮಂತತಃ ।
ಅಥಾದಿತೇಯಾಃ ಸಂತ್ರಸ್ತಾಃ ಬ್ರಹ್ಮಾಣಮಿದಮಬ್ರುವನ್ ।
ಕಥಂ ಶಕ್ಷ್ಯಾಮಹೇ ಬ್ರಹ್ಮನ್ ದಾನವೈರಭಿಮರ್ದನಮ್ ।
ಹಿರಣ್ಯಾಕ್ಷೇಣ ಭಗವನ್ ಗೃಹೀತೇಯಂ ವಸುಂಧರಾ ।
ನ ಶಕ್ಷ್ಯಾಮೋ ವಯಂ ತತ್ರ ಪ್ರವೇಷ್ಟುಂ ಜಲದುರ್ಗಮಮ್ ॥ – ೩೬/೭–೧೫
೨ ತಾನಾಹ ಭಗವಾನ್ ಬ್ರಹ್ಮಾ ಮುನಿರೇವ ಪ್ರಸಾದ್ಯತಾಮ್ ।
ಅಗಸ್ತ್ಯೋಽಸೌ ಮಹಾತೇಜಾಃ ಪಾತುಂ ತಜ್ಜಲಮಂಜಸಾ ॥

ಗಳ ರೂಪದಲ್ಲಿ ನಿಂತು ಸಮುದ್ರದ ನೀರನ್ನು ಕುಡಿದರು. ಸಮುದ್ರ ಒಣಗಿತು. ದೇವತೆಗಳು ಬ್ರಹ್ಮನಿಗೆ ಮುಂದೇನು ಮಾಡಬೇಕೆಂದು ಕೇಳಿದರು[೧]. ಅದಕ್ಕೆ ಬ್ರಹ್ಮನು

ಈ ಬಗ್ಗೆ ಕಾರ್ಯವೆಲ್ಲ ಮೊದಲೇ ಸಿದ್ಧವಾಗಿದೆ. ನಾರಾಯಣನು ವರಾಹರೂಪಧರಿಸಿ ಅವ್ಯಕ್ತರೂಪದಿಂದ ದೇವತೆಗಳಿಗೂ ಗೊತ್ತಾಗದಂತೆ ಇದ್ದಾನೆ. ವರಾಹನು ಭೂಮಿಯ ಒಳಗಡೆ ಇರುವ ದಾನವಾದಿಗಳನ್ನು ನಿಗ್ರಹಿಸುತ್ತಾನೆ' ಇದನ್ನು ಕೇಳಿ ದೇವತೆಗಳು ಸಂತುಷ್ಟರಾದರು[೨].

ನಂತರ ವಿಷ್ಣುವು ವರಾಹರೂಪವನ್ನು ಸ್ವೀಕರಿಸಿ ಭೂಮಿಯ ಒಳಗಡೆ ಪ್ರವೇಶಿಸಿ ದೈತ್ಯರನ್ನು ನೋಡಿದ. ಕಾಲ–ಮೃತ್ಯುವಶರಾದ, ಭಾರೀ ಸಿಟ್ಟಿನಿಂದ ಮಹಾಬಲಶಾಲಿಗಳಾದ ಅವರೆಲ್ಲ ವರಾಹನನ್ನು ಆಚೆ ಈಚೆ ಎಳೆದಾಡಿ ಸೆಳೆಯಲು ಪ್ರಯತ್ನಿಸಿದರು. ಅವರದರ್ಪ ನಡೆಯದಾಯಿತು. ಅವರೆಲ್ಲ ಭಯಾಶ್ಚರ್ಯಗಳಿಂದ ಬಸವಳಿದರು. ತಾವು ಬದುಕುವ ಬಗ್ಗೆ ಅಧೀರರಾದರು. ಆಗ ಭಗವಂತನು ಆ ದೈತ್ಯರೆಲ್ಲ ನಡುಗಿ ಹೆದರುವಂತೆ ಮಹಾಸಿಂಹನಾದ ಮಾಡಿದನು. ಆ ನಾದಕ್ಕೆ ದಾನವರು, ದೈತ್ಯರೇಕೇ ಎಲ್ಲ ಲೋಕಗಳೂ ನಡುಗಿದವು. ಹತ್ತು ದಿಕ್ಕುಗಳಲ್ಲಿ ಆ ನಿನಾದ ಪ್ರತಿಧ್ವನಿಸಿತು. ಲೋಕಗಳೆಲ್ಲ ಕ್ಷೋಭೆಗೊಂಡವು. ಇಂದ್ರಾದಿಗಳೂ ಭಯಭೀತರಾದರು. ಜಗವೆಲ್ಲ ನಿಶ್ಚೇಷ್ಟಿತವಾಯಿತು. ಇಡೀ ಪ್ರಪಂಚವೇ ಆ ಭಯಾನಕ ಧ್ವನಿಯಿಂದ ಮೋಹಗೊಂಡಿತು[೩].

---

೧ ತ್ರಾಯಸ್ವ ಲೋಕಾನ್ ವಿಪ್ರರ್ಷೇ ಜಲಮೇತಂ ಕ್ಷಯಂ ನಯ ।
ಧ್ಯಾಯನ್ ಜಲಾದನಿವಹಾನ್ ತದ್ರೂಪೇಣ ಜಲಂ ಪಪೌ ।
ಶೋಷಿತೇ ತು ಸಮುದ್ರೇ ಚ ದೇವಾಃ ಸರ್ಷಿ ಪುರೋಗಮಾಃ ।
ಬ್ರಹ್ಮಾಣಂ ಪ್ರಣಿಪತ್ಯೋಚುಃ ಮುನಿನಾ ಶೋಷಿತಂ ಜಲಮ್ ॥
ಇತಿ ಭೂಯಃ ಸಮಾಚಕ್ಷ್ವ ಕಿಂ ಕರಿಷ್ಯಾಮಹೇ ವಿಭೋ ॥

೨ ಸ್ವಯಂಭೂಸ್ತಾನುವಾಚೇದಂ ನಿಸ್ಪೃಷ್ಟೋಽತ್ರ ವಿಧಿರ್ಮಯಾ ।
ನಾವಬುಧ್ಯಂತಿ ಸಮ್ಮೂಢಾ ವಿಷ್ಣುಮವ್ಯಕ್ತದರ್ಶನಮ್ ॥
ವರಾಹರೂಪಿಣಂ ದೇವಂ.........................
ಏಷ ವೇಗೇನ ಗತ್ವಾ ಹಿ ಯತ್ರ ತೇ ದಾನವಾಧಮಾಃ ।
ಶಮಯಿಷ್ಯತಿ ತಚ್ಛ್ರುತ್ವಾ ಜಹೃಷುಃ ಸುರಸತ್ತಮಾಃ ॥ – ೩೬/೧೬–೨೨

೩ ತತಸ್ತೇ ಸಮಭಿದ್ರುತ್ಯ ವರಾಹಂ ಜಗೃಹುಃ ಸಮಮ್ ।
ಸಂಕ್ರುದ್ಧಾಶ್ಚ ವರಾಹಂ ತಂ ವ್ಯಕರ್ಷಂತ ಸಮಂತತಃ ॥
ದಾನವೇಂದ್ರಾ ಮಹಾಕಾಯಾ ಮಹಾವೀರ್ಯಬಲೋಚ್ಛ್ರಿತಾಃ ।
ನಾಶಕ್ನುವಂಶ್ಚ ಕಿಂಚಿತ್ತೇ ತಸ್ಯ ಕರ್ತುಂ ತದಾ ವಿಭೋ ॥
ತತೋಽಗಚ್ಛನ್ ವಿಸ್ಮಯಂ ತೇ ದಾನವೇಂದ್ರಾ ಭಯಂ ತಥಾ ।
ಸಂಶಯಂ ಗತಮಾತ್ಮಾನಾಂ ಮೇನಿರೇ ಚ ಸಹಸ್ರಶಃ ।
ವಿನನಾದ ಮಹಾನಾದಂ ಕ್ಷೋಭಯನ್ ದೈತ್ಯದಾನವಾನ್
ತೇನ ಸನ್ನಾದಶಬ್ದೇನ ಲೋಕಾನಾಂ ಕ್ಷೋಭ ಆಗಮತ್ ॥

ಪರಿಣಾಮವಾಗಿ ದಾನವರೆಲ್ಲ ಪ್ರಾಣ ಕಳೆದುಕೊಂಡು ಭಯಗ್ರಸ್ತರಾಗಿ ವಿಷ್ಣುತೇಜಸ್ಸಿನಿಂದ ಮೋಹಿತರಾಗಿ ಬಿದ್ದರು[೧].

ಬೆದರಿ ಬೆಂಡಾದ ದೇವತೆಗಳನ್ನು ಕಂಡು ಪಿತಾಮಹನಾದ ಬ್ರಹ್ಮನು 'ಈ ವರಾಹನು ಯೋಗೇಶ್ವರನಾದ ಹರಿಯೇ. ಹೆದರಬೇಡಿ' ಎಂದು ಹೇಳಿ ವರಾಹವನ್ನು ನಮಿಸಿದನು. ದೇವಮುನಿಗಳೂ ಮುಕ್ತಿಗಾಗಿ ನಮಿಸಿದರು. ನಂತರ ಮಹಾತೇಜಸ್ವಿಯಾದ ಹರಿಯು ಚತುರ್ಮುಖನನ್ನು ಅಭಿನಂದಿಸಿ ದೇವತೆಗಳನ್ನು ದ್ವೇಷಿಸುವ ದೈತ್ಯರನ್ನು ತನ್ನ ಉಗುರುಗಳಿಂದ ಸೀಳಿ ಹಾಕಿದನು. ಅಸ್ಥಿ ಮೇದಸ್ಸುಗಳು, ಮಾಂಸಗಳು ಮೇರು ಪರ್ವತದಂತೆ ಬಿದ್ದವು. ಇಂತಹ ಮಹಾನಾದದಿಂದ ಸಹಿತನಾದ್ದರಿಂದ ಭಗವಂತನು ಸನಾತನ ಎಂದು ಹೇಳಲ್ಪಟ್ಟಿದ್ದಾನೆ. ಅವನೇ ಮಹಾಯೋಗಿಯಾದ ಪದ್ಮನಾಭ; ಭೂತಗಳಿಂದ ಪೂಜ್ಯ ಭೂತಾಂತರ್ಯಾಮಿ[೨].

ಬಳಿಕ ದೇವತೆಗಳೆಲ್ಲ ಬ್ರಹ್ಮದೇವರನ್ನು 'ಕೇಳಿಸಿದ ಈ ನಾದ ಯಾರದು?' ಇದರಿಂದ ಜಗತ್ತೇ ಅಲ್ಲೋಲಕಲ್ಲೋಲವಾಗಿದೆ. ದೇವದಾನವರೆಲ್ಲ ಮೋಹಿತರಾಗಿದ್ದಾರಲ್ಲ? ಎಂದರು. ಈ ಮಧ್ಯೆ ವಿಷ್ಣುವು ವರಾಹರೂಪ ಹೊಂದಿದ್ದ. ಪ್ರಕಟನಾಗಿ ದೇವರ್ಷಿಗಳಿಂದ ಸ್ತುತನಾದ (ವರಾಹದೇವರಿಗೂ, ದಾನವರಿಗೂ, ಹಿರಣ್ಯಾಕ್ಷನಿಗೂ ನಡೆದ ಯುದ್ಧ)ವನ್ನು ಬ್ರಹ್ಮನು ವರ್ಣಿಸಿದನು. ಆ ಯುದ್ಧ ಜಗನ್ನಾಶವಾಗುವಂತಿತ್ತು. ನಂತರ ವರಾಹದೇವರು ಬಿಲದಲ್ಲಿ ಅಡಗಿದ ಹಿರಣ್ಯಾಕ್ಷನನ್ನು ಸಂಹರಿಸಿದರು. ಈ ಮಧುರವಾರ್ತೆಯನ್ನು ಬ್ರಹ್ಮದೇವರು ದೇವತೆಗಳಿಗೆ ಹೇಳಿದರು. ಅಲ್ಲದೇ ನೀವು ಚಂಚಲಚಿತ್ತರಾಗದೆ, ಹೆದರದೆ, ಸ್ಥಿರವಾಗಿರಿ. ಯಾರಿಗೂ ಅಸಾಧ್ಯವಾದ ಈ ಕೃತ್ಯ ಮಾಡಿದ ಮಹಾಭಾಗ್ಯವಂತನಾದ, ಅನಂತ ಪ್ರಕಾಶನಾದ ಮಹಾಯೋಗಿಯಾದ ಪುರಾಣಪುರುಷೋತ್ತಮನಾದ ಇವನೇ ಪದ್ಮನಾಭ. ನೀವ್ಯಾರೂ ಸಂತಾಪ ಪಡಬೇಡಿ, ದುಃಖಿಸಬೇಡಿರಿ, ಹೆದರಬೇಡಿರಿ. ನಾವು ಕೇಳಿದ ನಾದವೂ ಆತನದೇ. ಇವನೇ ಸಕಲಲೋಕನಮಸ್ಕೃತ್ಯ, ಅಚ್ಯುತ, ಪುಂಡರೀಕಾಕ್ಷ ಸರ್ವಜೀವರ ಸೃಷ್ಟಿಕರ್ತಾ, ಇವನೇ ಕೃಷ್ಣನಾಗಿದ್ದಾನೆ[೩].

---

೧ ತತಸ್ತೇ ದಾನವಾಃ ಸರ್ವೇ ತೇನ ನಾದೇನ ಭೀಷಿತಾಃ।
ಪೇತುರ್ಗತಾಸವಶ್ಚೈವ ವಿಷ್ಣುತೇಜಃಪ್ರಮೋಹಿತಾಃ॥

೨ ಬ್ರಹ್ಮ ಉವಾಚ –
ಯೋಗೇಶ್ವರೋಽಯಂ ಭಗವಾನ್ ವಾರಾಹಂ ರೂಪಮಾಸ್ಥಿತಃ।
ನರ್ದಮಾನೋಽತ್ರ ಸಂಯಾತಿ ಮಾ ಭೈಷ್ಟಸುರಸತ್ತಮಾಃ॥
ಏವಮುಕ್ತ್ವಾ ತತೋ ಬ್ರಹ್ಮಾ ನಮಶ್ಚಕ್ರೇ ಪಿತಾಮಹಃ।
ದೇವತಾ ಮುನಯಶ್ಚೈವ ವಿಷ್ಣುಂ ವೈ ಮುಕ್ತಿಹೇತವೇ॥
**ನಾದೇನ ತೇನ ಮಹತಾ ಸನಾತನ ಇತಿ ಸ್ಮೃತಃ।**
**ಪದ್ಮನಾಭೋ ಮಹಾಯೋಗೀ ಭೂತಾತ್ಮಾ ಭೂತಭಾವನಃ॥** – ೩೬/೨೫-೩೬

೩ ದಿವ್ಯಂ ಮಹತ್ ಯುದ್ಧಮಾಸೀನ್ಮಹಾತ್ಮನೋ।

ಗಳ ರೂಪದಲ್ಲಿ ನಿಂತು ಸಮುದ್ರದ ನೀರನ್ನು ಕುಡಿದರು. ಸಮುದ್ರ ಒಣಗಿತು. ದೇವತೆಗಳು ಬ್ರಹ್ಮನಿಗೆ ಮುಂದೇನು ಮಾಡಬೇಕೆಂದು ಕೇಳಿದರು[೧]. ಅದಕ್ಕೆ ಬ್ರಹ್ಮನು

ಈ ಬಗ್ಗೆ ಕಾರ್ಯವೆಲ್ಲ ಮೊದಲೇ ಸಿದ್ಧವಾಗಿದೆ. ನಾರಾಯಣನು ವರಾಹರೂಪಧರಿಸಿ ಅವ್ಯಕ್ತರೂಪದಿಂದ ದೇವತೆಗಳಿಗೂ ಗೊತ್ತಾಗದಂತೆ ಇದ್ದಾನೆ. ವರಾಹನು ಭೂಮಿಯ ಒಳಗಡೆ ಇರುವ ದಾನವಾದಿಗಳನ್ನು ನಿಗ್ರಹಿಸುತ್ತಾನೆ' ಇದನ್ನು ಕೇಳಿ ದೇವತೆಗಳು ಸಂತುಷ್ಟರಾದರು[೨].

ನಂತರ ವಿಷ್ಣುವು ವರಾಹರೂಪವನ್ನು ಸ್ವೀಕರಿಸಿ ಭೂಮಿಯ ಒಳಗಡೆ ಪ್ರವೇಶಿಸಿ ದೈತ್ಯರನ್ನು ನೋಡಿದ. ಕಾಲ-ಮೃತ್ಯುವಶರಾದ, ಭಾರೀ ಸಿಟ್ಟಿನಿಂದ ಮಹಾಬಲಶಾಲಿಗಳಾದ ಅವರೆಲ್ಲ ವರಾಹನನ್ನು ಆಚೆ ಈಚೆ ಎಳೆದಾಡಿ ಸೆಳೆಯಲು ಪ್ರಯತ್ನಿಸಿದರು. ಅವರದರ್ಪ ನಡೆಯದಾಯಿತು. ಅವರೆಲ್ಲ ಭಯಾಶ್ಚರ್ಯಗಳಿಂದ ಬಸವಳಿದರು. ತಾವು ಬದುಕುವ ಬಗ್ಗೆ ಅಧೀರರಾದರು. ಆಗ ಭಗವಂತನು ಆ ದೈತ್ಯರೆಲ್ಲ ನಡುಗಿ ಹೆದರುವಂತೆ ಮಹಾಸಿಂಹನಾದ ಮಾಡಿದನು. ಆ ನಾದಕ್ಕೆ ದಾನವರು, ದೈತ್ಯರೇಕೇ ಎಲ್ಲ ಲೋಕಗಳೂ ನಡುಗಿದವು. ಹತ್ತು ದಿಕ್ಕುಗಳಲ್ಲಿ ಆ ನಿನಾದ ಪ್ರತಿಧ್ವನಿಸಿತು. ಲೋಕಗಳೆಲ್ಲ ಕ್ಷೋಭೆಗೊಂಡವು. ಇಂದ್ರಾದಿಗಳೂ ಭಯಭೀತರಾದರು. ಜಗವೆಲ್ಲ ನಿಶ್ಚೇಷ್ಟಿತವಾಯಿತು. ಇಡೀ ಪ್ರಪಂಚವೇ ಆ ಭಯಾನಕ ಧ್ವನಿಯಿಂದ ಮೋಹಗೊಂಡಿತು[೩].

---

೧ ತ್ರಾಯಸ್ವ ಲೋಕಾನ್ ವಿಪ್ರರ್ಷೇ ಜಲಮೇತಂ ಕ್ಷಯಂ ನಯ।
ಧ್ಯಾಯನ್ ಜಲಾದನಿವಹಾನ್ ತದ್ರೂಪೇಣ ಜಲಂ ಪಪೌ।
ಶೋಷಿತೇ ತು ಸಮುದ್ರೇ ಚ ದೇವಾಃ ಸರ್ಷಿ ಪುರೋಗಮಾಃ।
ಬ್ರಹ್ಮಾಣಂ ಪ್ರಣಿಪತ್ಯೋಚುಃ ಮುನಿನಾ ಶೋಷಿತಂ ಜಲಮ್ ॥
ಇತಿ ಭೂಯಃ ಸಮಾಚಕ್ಷ್ವ ಕಿಂ ಕರಿಷ್ಯಾಮಹೇ ವಿಭೋ ॥

೨ ಸ್ವಯಂಭೂಸ್ತಾನುವಾಚೇದಂ ನಿಷ್ಪನ್ನೋಽತ್ರ ವಿಧಿರ್ಮಯಾ।
ನಾವಬುಧ್ಯಂತಿ ಸಮ್ಮೂಢಾ ವಿಷ್ಣುಮವ್ಯಕ್ತದರ್ಶನಮ್ ॥
ವರಾಹರೂಪಿಣಂ ದೇವಂ.........................
ಏಷ ವೇಗೇನ ಗತ್ವಾ ಹಿ ಯತ್ರ ತೇ ದಾನವಾಧಮಾಃ।
ಶಮಯಿಷ್ಯತಿ ತಚ್ಛ್ರುತ್ವಾ ಜಹೃಷುಃ ಸುರಸತ್ತಮಾಃ ॥ - ೩೬/೧೬-೨೨

೩. ತತಸ್ತೇ ಸಮಭಿದ್ರುತ್ಯ ವರಾಹಂ ಜಗೃಹುಃ ಸಮಮ್।
ಸಂಕ್ರುದ್ಧಾಶ್ಚ ವರಾಹಂ ತಂ ವ್ಯಕರ್ಷಂತ ಸಮಂತತಃ ॥
ದಾನವೇಂದ್ರಾ ಮಹಾಕಾಯಾ ಮಹಾವೀರ್ಯಬಲೋಚ್ಛ್ರಿತಾಃ।
ನಾಶಕ್ನುವಂಶ್ಚ ಕಿಂಚಿತ್ತೇ ತಸ್ಯ ಕರ್ತುಂ ತದಾ ವಿಭೋ ॥
ತತೋಽಗಚ್ಛನ್ ವಿಸ್ಮಯಂ ತೇ ದಾನವೇಂದ್ರಾ ಭಯಂ ತಥಾ।
ಸಂಶಯಂ ಗತಮಾತ್ಮಾನಾಂ ಮೇನಿರೇ ಚ ಸಹಸ್ರಶಃ।
ವಿನನಾದ ಮಹಾನಾದಂ ಕ್ಷೋಭಯನ್ ದೈತ್ಯದಾನವಾನ್
ತೇನ ಸನ್ನಾದಶಬ್ದೇನ ಲೋಕಾನಾಂ ಕ್ಷೋಭ ಆಗಮತ್ ॥

ಪರಿಣಾಮವಾಗಿ ದಾನವರೆಲ್ಲ ಪ್ರಾಣ ಕಳೆದುಕೊಂಡು ಭಯಗ್ರಸ್ತರಾಗಿ ವಿಷ್ಣುತೇಜಸ್ಸಿನಿಂದ ಮೋಹಿತರಾಗಿ ಬಿದ್ದರು[೧].

ಬೆದರಿ ಬೆಂಡಾದ ದೇವತೆಗಳನ್ನು ಕಂಡು ಪಿತಾಮಹನಾದ ಬ್ರಹ್ಮನು 'ಈ ವರಾಹನು ಯೋಗೇಶ್ವರನಾದ ಹರಿಯೇ. ಹೆದರಬೇಡಿ' ಎಂದು ಹೇಳಿ ವರಾಹವನ್ನು ನಮಿಸಿದನು. ದೇವಮುನಿಗಳೂ ಮುಕ್ತಿಗಾಗಿ ನಮಿಸಿದರು. ನಂತರ ಮಹಾತೇಜಸ್ವಿಯಾದ ಹರಿಯು ಚತುರ್ಮುಖನನ್ನು ಅಭಿನಂದಿಸಿ ದೇವತೆಗಳನ್ನು ದ್ವೇಷಿಸುವ ದೈತ್ಯರನ್ನು ತನ್ನ ಉಗುರುಗಳಿಂದ ಸೀಳಿ ಹಾಕಿದನು. ಅಸ್ಥಿ, ಮೇದಸ್ಸುಗಳು, ಮಾಂಸಗಳು ಮೇರು ಪರ್ವತದಂತೆ ಬಿದ್ದವು. ಇಂತಹ ಮಹಾನಾದದಿಂದ ಸಹಿತನಾದ್ದರಿಂದ ಭಗವಂತನು ಸನಾತನ ಎಂದು ಹೇಳಲ್ಪಟ್ಟಿದ್ದಾನೆ. ಅವನೇ ಮಹಾಯೋಗಿಯಾದ ಪದ್ಮನಾಭ; ಭೂತಗಳಿಂದ ಪೂಜ್ಯ ಭೂತಾಂತರ್ಯಾಮಿ[೨].

ಬಳಿಕ ದೇವತೆಗಳೆಲ್ಲ ಬ್ರಹ್ಮದೇವರನ್ನು 'ಕೇಳಿಸಿದ ಈ ನಾದ ಯಾರದು?' ಇದರಿಂದ ಜಗತ್ತೇ ಅಲ್ಲೋಲಕಲ್ಲೋಲವಾಗಿದೆ. ದೇವದಾನವರೆಲ್ಲ ಮೋಹಿತರಾಗಿದ್ದಾರಲ್ಲ? ಎಂದರು. ಈ ಮಧ್ಯೆ ವಿಷ್ಣುವು ವರಾಹರೂಪ ಹೊಂದಿದ್ದ, ಪ್ರಕಟನಾಗಿ ದೇವರ್ಷಿಗಳಿಂದ ಸ್ತುತನಾದ (ವರಾಹದೇವರಿಗೂ, ದಾನವರಿಗೂ, ಹಿರಣ್ಯಾಕ್ಷನಿಗೂ ನಡೆದ ಯುದ್ಧ)ವನ್ನು ಬ್ರಹ್ಮನು ವರ್ಣಿಸಿದನು. ಆ ಯುದ್ಧ ಜಗನ್ನಾಶವಾಗುವಂತಿತ್ತು. ನಂತರ ವರಾಹದೇವರು ಬಿಲದಲ್ಲಿ ಅಡಗಿದ ಹಿರಣ್ಯಾಕ್ಷನನ್ನು ಸಂಹರಿಸಿದರು. ಈ ಮಧುರವಾರ್ತೆಯನ್ನು ಬ್ರಹ್ಮದೇವರು ದೇವತೆಗಳಿಗೆ ಹೇಳಿದರು. ಅಲ್ಲದೇ ನೀವು ಚಂಚಲಚಿತ್ತರಾಗದೆ, ಹೆದರದೆ, ಸ್ಥಿರವಾಗಿರಿ. ಯಾರಿಗೂ ಅಸಾಧ್ಯವಾದ ಈ ಕೃತ್ಯ ಮಾಡಿದ ಮಹಾಭಾಗ್ಯವಂತನಾದ, ಅನಂತ ಪ್ರಕಾಶನಾದ ಮಹಾಯೋಗಿಯಾದ ಪುರಾಣಪುರುಷೋತ್ತಮನಾದ ಇವನೇ ಪದ್ಮನಾಭ. ನೀವ್ಯಾರೂ ಸಂತಾಪ ಪಡಬೇಡಿ, ದುಃಖಿಸಬೇಡಿರಿ, ಹೆದರಬೇಡಿರಿ. ನಾವು ಕೇಳಿದ ನಾದವೂ ಆತನದೇ. ಇವನೇ ಸಕಲಲೋಕನಮಸ್ಕೃತ್ಯ, ಅಚ್ಯುತ, ಪುಂಡರೀಕಾಕ್ಷ ಸರ್ವಜೀವರ ಸೃಷ್ಟಿಕರ್ತಾ, ಇವನೇ ಕೃಷ್ಣನಾಗಿದ್ದಾನೆ[೩].

---

೧ ತತಸ್ತೇ ದಾನವಾಃ ಸರ್ವೇ ತೇನ ನಾದೇನ ಭೀಷಿತಾಃ।
ಪೇತುರ್ಗತಾಸವಶ್ಚೈವ ವಿಷ್ಣುತೇಜಃಪ್ರಮೋಹಿತಾಃ॥

೨ ಬ್ರಹ್ಮ ಉವಾಚ –
ಯೋಗೇಶ್ವರೋಽಯಂ ಭಗವಾನ್ ವಾರಾಹಂ ರೂಪಮಾಸ್ಥಿತಃ।
ನರ್ದಮಾನೋಽತ್ರ ಸಂಯಾತಿ ಮಾ ಭೈಷ್ಟ ಸುರಸತ್ತಮಾಃ॥
ಏವಮುಕ್ತ್ವಾ ತತೋ ಬ್ರಹ್ಮಾ ನಮಶ್ಚಕ್ರೇ ಪಿತಾಮಹಃ।
ದೇವತಾ ಮುನಯಶ್ಚೈವ ವಿಷ್ಣುಂ ವೈ ಮುಕ್ತಿಹೇತವೇ॥
**ನಾದೇನ ತೇನ ಮಹತಾ ಸನಾತನ ಇತಿ ಸ್ಮೃತಃ।**
**ಪದ್ಮನಾಭೋ ಮಹಾಯೋಗೀ ಭೂತಾತ್ಮಾ ಭೂತಭಾವನಃ॥** – ೩೬/೨೫–೩೬

೩. ದಿವ್ಯಂ ಮಹತ್ ಯುದ್ಧಮಾಸೀನ್ಮಹಾತ್ಮನೋ।

ಇದುವೇ ಕಶ್ಯಪರು ಅಲ್ಲಿ ನೆರೆದ ಸಹಸ್ರಾರು ಮುನಿಗಳಿಗೆ ಹೇಳಿದ ವರಾಹವತಾರ ಚರಿತೆ. ಇದು ಭಾಗವತಾದಿಗಳಲ್ಲೂ (೩ನೇ ಸ್ಕಂಧ) ಬಂದಿದೆ. ಭೀಷ್ಮರು ಆರಂಭದಲ್ಲಿ ಕೃಷ್ಣನ ಮಹಿಮೆ ಹೇಳಿದ್ದರು. ಕೊನೆಗೂ ವರಾಹನೇ ಈ ನಮ್ಮ ಕೃಷ್ಣ ಎಂದು ಮುಗಿಸುತ್ತಾರೆ.

## ಸಂದೇಶಗಳು - ವಿವರಣೆಗಳು

೧. ಕೃಷ್ಣನ ಮಹಿಮೆಯನ್ನು ಸಮಗ್ರವಾಗಿ ಹೇಳಲು ಧರ್ಮರಾಜನು ಪ್ರಶ್ನಿಸಿದ ಹಿನ್ನೆಲೆಯಲ್ಲಿ ಬಂದ ಈ ಉಪಾಖ್ಯಾನದಲ್ಲಿ ವರಾಹಾವತಾರ ವರ್ಣನೆ ಇದೆ. ವರಾಹಾವತಾರ ಮತ್ಸ್ಯ, ಕೂರ್ಮಗಳಂತೆ ನೋಡಲು ಕುತ್ಸಿತ, ಅಸಹ್ಯ ರೂಪ ಅಜ್ಞರ ದೃಷ್ಟಿಯಲ್ಲಿ. ಆದರೆ ಆ ಯೋನಿಗೆ ತಕ್ಕಂತಹ ಯಾವ ದೋಷಗಳಿಲ್ಲದೆ ಜಗತ್ತಿಗೆ ಕಂಟಕರಾಗಿದ್ದ ಹಿರಣ್ಯಾಕ್ಷಾದಿಯಾಗಿ ದೈತ್ಯದಾನವರ ಸಂಹಾರವಾಗುತ್ತದೆ, ಈ ರೂಪದಿಂದಾಗಿ. ಹೀಗೆ ಇದೊಂದು ಜಗತ್ಕಲ್ಯಾಣ ಸಾಧಕ ಅವತಾರ.

೨. ಕೃಷ್ಣ ವರಾಹ ವಿಷ್ಣು ಪದ್ಮನಾಭ, ಪುಂಡರೀಕಾಕ್ಷಾದಿಗಳೆಲ್ಲವೂ ಒಂದೇ ಎಂಬ ನಿರೂಪಣೆ ಇಲ್ಲಿ ಯೋಗಿಗಳಾದ ಕಶ್ಯಪರಿಂದ ಹೇಳಲ್ಪಟ್ಟು ಮಹಾ ಸಾಧಕರಾದ ಪರಶುರಾಮಶಿಷ್ಯರಾದ ಭೀಷ್ಮರು ಅದನ್ನೇ ಧರ್ಮರಾಜನಿಗೆ ಹೇಳುವ ಮೂಲಕ ಇವುಗಳಲ್ಲಿ ವಿಷ್ಣುವಿನ ಮೂಲ ರೂಪಗಳು ವರಾಹಾದಿಗಳೆಂದು ನಿರೂಪಿತವಾಗಿ '**ನೇಹ ನಾನಾಸ್ತಿ ಕಿಂಚನ**' ಎಂಬ ಕಾಠಕೋಪನಿಷತ್ತಿನ ಪ್ರಮೇಯವು ಉದಾಹರಣಪೂರ್ವಕವಾಗಿ ಪ್ರತಿಪಾದಿತವಾಗಿದೆ. '**ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್**' ಎನ್ನುವ ಭಾರತದ ಆದಿಪರ್ವದ ಪ್ರತಿಜ್ಞೆಗೆ ಇದೂ ಒಂದು ದೃಷ್ಟಾಂತ.

೩. ನರಕಾಸುರಾದಿ ದಾನವರೂ ವರಾಹಾವತಾರದಲ್ಲಿದ್ದವರು ಎಂಬ ವಿಷಯವು ನರಕಾಸುರನು ಭಾರೀ ಪುರಾತನ ದಾನವ ಎಂದು ತಿಳಿಯುತ್ತದೆ (ಈ ಬಗ್ಗೆ ಹಲವು ಆಯಾಮಗಳಲ್ಲಿ ಚರ್ಚಿಸಲು ಅವಕಾಶವಿದೆ).

---

ಹಿರಣ್ಯಾಕ್ಷಸ್ಯ ವಿಷ್ಣೋಶ್ಚ ಸರ್ವಸಂಕ್ಷೋಭಕಾರಣಮ್ ॥
ಜಘಾನ ಚ ಹಿರಣ್ಯಾಕ್ಷಮಂತರ್ಭೂಮಿಗತಂ ಹರಿಃ ।
ತದಾಕರ್ಣ್ಯ ಮಹಾತೇಜಾ ಬ್ರಹ್ಮಾ ಮಧುರಮಬ್ರವೀತ್ ॥
ನಿಹತ್ಯ ದಾನವಪತೀನ್ ಮಹಾವರ್ಷ್ಮಾ ಮಹಾಬಲಃ ।
ಏಷ ದೇವೋ ಮಹಾಯೋಗೀ ಭೂತಾತ್ಮಾ ಭೂತಭಾವನಃ ।
ಸರ್ವಭೂತೇಶ್ವರೋ ಯೋಗೀ ಮುನಿರಾತ್ಮಾ............. ।
ಸ್ಥಿರೀಭವತ ಕೃಷ್ಣೋಽಯಂ ಸರ್ವವಿಘ್ನವಿನಾಶನಃ ।
ಪದ್ಮನಾಭೋ ಮಹಾಯೋಗೀ ಪುರುಷೋತ್ತಮಃ ।
ನ ಸಂತಾಪೋ ನ ಭೀಃ ಕಾರ್ಯಾ ಶೋಕೋ ವಾ ಸುರಸತ್ತಮೈಃ ।
ಸ ಏಷ ಹಿ ಮಹಾಬಾಹುಃ ಸರ್ವಲೋಕ ನಮಸ್ಕೃತಃ ।
ಅಚ್ಯುತಃ ಪುಂಡರೀಕಾಕ್ಷಃ ಸರ್ವಭೂತಾದಿರೀಶ್ವರಃ ॥ - ೩೬/೪೦-೪೭

೪. ಯಾವುದೇ ಕಾಲಕ್ಕೂ ತೊಂದರೆಯಾದಂತೆ ಹಿರಣ್ಯಾಕ್ಷನ ಕಾಲದಲ್ಲೂ ದೇವರ್ಷಿಗಳಿಗೆ, ಸಾಧು ಜಗತ್ತಿಗೆ, ಭೂದೇವಿಗೆ ಆದ ನೋವು ಸರ್ವ ಸಾಮಾನ್ಯ ಇಲ್ಲೂ ಇದೆ.

೫. ಭೂದೇವಿ ಪಾತಾಲದಲ್ಲಿ ವಾಸಿಸಿದಳೆಂಬುದು ಇಲ್ಲಿಯ ವಿಶೇಷ (ಹಿರಣ್ಯಾಕ್ಷನ ಭಯದಿಂದ).

೬. ದೈತ್ಯದಾನವರ ಉಪಟಳದ ಪರಿಣಾಮಗಳು ಮೂರು ಲೋಕದ ಮೇಲೂ ಆದುದು ಇಲ್ಲಿ ವಿಶೇಷ. ಧರ್ಮ, ದಾನ, ಯಜ್ಞ, ಸ್ವಾಧ್ಯಾಯಗಳೆಲ್ಲ ಮಾಯೆಯಾದವು. ದೇವತೆಗಳೂ ಅನಾಥರಾದರೆಂಬುದು ಇನ್ನೂ ವಿಶೇಷ.

೭. ಬ್ರಹ್ಮದೇವರೇ ಹಿರಣ್ಯಾಕ್ಷನಿಗೆ ವರ ಕೊಟ್ಟವರು. ಅವರೇ ದೇವತೆಗಳಿಗೆ ಅಭಯ ಕೊಡುತ್ತಾರೆ. ಅವರೇ ಗತಿ ಎಲ್ಲರಿಗೂ.

೮. ಅಗಸ್ತ್ಯರಿಂದ ಸಮುದ್ರಜಲಪಾನ ಇಲ್ಲಿಯೂ ಇದೆ.

೯. ಭಗವಂತನು (ವಿಷ್ಣುವು) ವರಾಹನಾಗಿ ದಾನವರನ್ನು ಹೆದರಿಸಿದ. ಆತನ ನಾದ ಇಲ್ಲಿಯ ಭಾರಿ ವಿಶೇಷ. 'ಸನಾತನ'ವೆಂಬ ಶಬ್ದದ ನಿರ್ವಚನ ಇಲ್ಲಿ ಬಂದಿದೆ. ಆಚಾರ್ಯರು ಇದನ್ನು ತಮ್ಮ ಸರ್ವಮೂಲಗ್ರಂಥದಲ್ಲಿ ಉದಾಹರಿಸಿದ್ದಾರೆ. ಅವನ ನಾದ ದೇವತೆಗಳಿಗೂ ಭಯವುಂಟುಮಾಡಿದ್ದು ಆಶ್ಚರ್ಯವಲ್ಲ. ಅವನ ನಾದ ಗುಣ ಅದೂ ಅದ್ಭುತ, ಪರಿಪೂರ್ಣ, ದೈತ್ಯಭಯಂಕರವಾದಂತೆ ದೇವತೆಗಳಿಗೂ ಮಾಹಾತ್ಮ್ಯ ಪ್ರದರ್ಶಕ, ಭಕ್ತಿದಾಯಕ[1].

ಇತ್ಯಾದಿ....

*****

---

೧ ಸನಾತನ ಇತಿ ಸ್ಮೃತಃ ಇತ್ಯತ್ರ ನಾದೇನ ಸಹಿತಃ ಸನಾದನಃ। ಸನಾದನ ಏವ ಸನಾತನಃ। ನಿರುಕ್ತತ್ವಾತ್ ದ ಕಾರಸ್ಯ ಸನಾತನಃ। – ಲಕ್ಷಾಲಂಕಾರ(ಮ.ಭಾ.ಶಾ.ಪ.-೩೬/೩೬; ಪು. ೨೦೪; ತತ್ತ್ವಸಂಶೋಧನ ಸಂಸತ್; ಪು. ೧೯)

# ೧೨೯. ಜನಕೋಪಾಖ್ಯಾನ

ಧರ್ಮರಾಜನು ಭೀಷ್ಮರನ್ನು ಪ್ರಶ್ನಿಸಿದ –

ಮಹಾಪ್ರಾಜ್ಞರಾದ ಭೀಷ್ಮರೇ! ತನ್ನ ಮಿಥಿಲಾಪಟ್ಟಣವು ಉರಿಯುತ್ತಿದ್ದರೂ ತನ್ನದೇನೂ ಸುಡುತ್ತಿಲ್ಲವೆಂದು ಜನಕನು ಹೇಳಿದನೆಂದು ನಾನು ಕೇಳಿದ್ದೇನೆ. ಅದಕ್ಕೇನು ಕಾರಣ?

ಭೀಷ್ಮರು ರಾಜನ್! ಈ ಬಗ್ಗೆ ಹೇಳುತ್ತೇನೆ ಎಂದು ಉತ್ತರಿಸಿದರು.

'ಜನಕಮಹಾರಾಜನು ತಾನು ಕ್ಷಾತ್ರಧರ್ಮಾನುಸಾರವಾಗಿ ಮಾಡುತ್ತಿದ್ದ ಎಲ್ಲ ಕರ್ಮಗಳನ್ನು ಭಗವಂತನಲ್ಲಿಯೇ ಭಕ್ತಿಯಿಂದ ಸಮರ್ಪಿಸುತ್ತಾ ಏಕಾಗ್ರಮನಸ್ಸಿನಿಂದ ಇದ್ದನು. ಯಾವುದೇ ಫಲಾಪೇಕ್ಷೆಯಿಲ್ಲದೆ ನಿಷ್ಕಾಮಕರ್ಮಯೋಗಿಯಾಗಿ ರಾಜ್ಯಭಾರ ಮಾಡುತ್ತಿದ್ದನು. ಯಜ್ಞಮಾಡುವಾಗ, ದಾನ ಮಾಡುವಾಗ, ಹೋಮಿಸುವಾಗ, ಭೂಮಿಯ ಪಾಲನೆ ಮಾಡುವಾಗ ಭಗವಂತನನ್ನೇ ಸರ್ವೋತ್ತಮನೆಂದು ಭಾವಿಸಿ, ಅವನಲ್ಲೇ ಮನಸ್ಸನ್ನು ಇಟ್ಟು ವ್ಯವಹರಿಸುತ್ತಿದ್ದನು.

ಸರ್ವಲೋಕೇಶ್ವರನಾದ ಶ್ರೀಹರಿಯು ಬ್ರಾಹ್ಮಣವೇಷ ಧರಿಸಿಜನಕನ ಮನಸ್ಸನ್ನು ತಿಳಿಯಲು, ಪರೀಕ್ಷಿಸಲು ಮಿಥಿಲೆಗೆ ಬಂದನು[೧]. ಅಲ್ಲಿ ತಾನು ಸ್ವಯಂ ಮಹಾಬುದ್ಧಿವಂತನಾಗಿದ್ದರೂ ಉದ್ದೇಶಪೂರ್ವಕವಾಗಿ ಒಂದು ಅಪರಾಧವನ್ನು ಎಸಗಿದ. ಇದನ್ನು ಗಮನಿಸಿದ ಬ್ರಾಹ್ಮಣರು ಇವನನ್ನು ಬಂಧಿಸಿ ರಾಜನ ಮುಂದೆ ನಿಲ್ಲಿಸಿ ಬ್ರಾಹ್ಮಣ ಮಾಡಿದ ಅಪರಾಧವನ್ನು ನಿವೇದಿಸಿದರು.

ಅಪರಾಧವೆಸಗಿದ ಬ್ರಾಹ್ಮಣನನ್ನು ನೋಡಿ ರಾಜನು –

'ನೀನು ತಪ್ಪು ಮಾಡಿದ್ದರೂ ನಿನ್ನನ್ನು ಯಾವುದೇ ಕಾರಣದಿಂದಲೂ ಶಿಕ್ಷಿಸುವುದಿಲ್ಲ. ಆದರೆ ನೀನು ನನ್ನ ರಾಜ್ಯದ ಗಡಿಯಿಂದ ಆಚೆ ಹೊರಟುಹೋಗು' ಎಂದು ಹೇಳಿದನು.'

---

೧ ಜನಕೋ ಜನದೇವಸ್ತು ಕರ್ಮಣ್ಯಾಧ್ಯಾಯ ಚಾತ್ಮನಿ।
ಸರ್ವಭಾವಮನುಪ್ರಾಪ್ಯ ಭಾವೇನ ವಿಚಚಾರ ಹ॥
ಯಜನ್ ದದಂಸ್ತಥಾ ಜುಹ್ವನ್ ಪಾಲಯನ್ ಪೃಥಿವೀಮಿಮಾಮ್।
ಅಧ್ಯಾತ್ಮವಿನ್ಮಹಾಪ್ರಾಜ್ಞಸ್ತನ್ಮಯತ್ವೇನ ನಿಷ್ಠಿತಃ।
ಸ ತಸ್ಯ ಹೃದಿ ಸಂಕಲ್ಪಂ ಜ್ಞಾತುಮೈಚ್ಛತ್ ಸ್ವಯಂ ಪ್ರಭುಃ।
ಸರ್ವಲೋಕಾಧಿಪತಿಸ್ತತ್ರ ದ್ವಿಜರೂಪೇಣ ಸಂಯುತಃ॥.... – ೫೨/೩-೬

ನ ತ್ವಾಂ ಬ್ರಾಹ್ಮಣ ದಂಡೇನ ನಿಯೋಕ್ಷ್ಯಾಮಿ ಕಥಂಚನ।
ಮಮರಾಜ್ಯಾದ್ವಿನಿರ್ಗಚ್ಛಯಾವತ್ಸೀಮಾ ಭುವೋ ಮಮ॥ - ೫೨/೭,೮

ಅದಕ್ಕೆ ಬ್ರಾಹ್ಮಣನು 'ನಿನ್ನ ರಾಜ್ಯದ ಸೀಮಾ(ಗಡಿ) ಯಾವುದು?' ಎಂದು ಕೇಳಿದ. ಇದಕ್ಕೆ ರಾಜನು ಉತ್ತರವಿಲ್ಲದೆ ನಾಚಿಕೆಯಿಂದ ತಲೆ ತಗ್ಗಿಸಿದ. ಏನೂ ಉತ್ತರಿಸದೇ ಮೌನವಹಿಸಿದ.[1]

ಆದರೆ ಆ ಬ್ರಾಹ್ಮಣನು ಮತ್ತೆ ಮತ್ತೆ 'ನಿನ್ನ ರಾಜ್ಯದ ಗಡಿಯನ್ನು ದಾಟಿ ಎಲ್ಲಿ ಹೋಗಲಿ ಹೇಳು' ಎಂದು ಒತ್ತಾಯಿಸಿದನು.

ಬ್ರಾಹ್ಮಣನ ಮಾತನ್ನು ಕೇಳಿದ ರಾಜನು ವಿಚಾರ ಮಾಡಿ 'ಭೂಮಿಯ ಒಂದು ಭಾಗವೂ ನನ್ನದಲ್ಲ. ಆದರೆ ಸಮಗ್ರ ಭೂಮಂಡಲ ನನ್ನ ಅಧಿಕಾರಕ್ಕೆ ಒಳಪಟ್ಟಿದೆ. ಹೀಗಾಗಿ ನೀನು ಇಲ್ಲಿಂದ ಹೊರಡು ಅಥವಾ ಇಲ್ಲಿಯೇ ಇರು (ನಿನ್ನನ್ನು ನಿರ್ಬಂಧಿಸಲಾರೆ) ಇದು ನನ್ನ ನಿರ್ಧಾರ' ಎಂದನು. ನಂತರ ಬ್ರಾಹ್ಮಣನು 'ರಾಜನ್ ನೀನೇ ಪದ್ಮನಾಭನ(ಪರಮಾತ್ಮನ) ಆದೇಶಾನುಸಾರ, ಆತನ ಪಾದಾವಲಂಬಿಯಾಗಿ ರಾಜ್ಯಭಾರ ಮಾಡುತ್ತಿರುವೆ. ನೀನು ನಿಜವಾಗಿಯೂ ಸಿದ್ಧಪುರುಷ. ನಿನಗೆ ಮಂಗಳವಾಗಲಿ. ನಾನು ಹೋಗಿ ಬರುವೆ.'[2] ಎಂದುತ್ತರಿಸಿ ಅಲ್ಲಿಂದ ಹೊರಟನು. ಅಲ್ಲದೆ ಜನಕರಾಜನ ಮಾನಸಿಕ ದೃಢತೆಯನ್ನು ಅಲ್ಲಿನ ಬ್ರಾಹ್ಮಣರಿಗೆ ತಿಳಿಯಪಡಿಸಲು ಮಿಥಿಲೆಗೆ ಬೆಂಕಿ ಹಚ್ಚಿದನು.

ರಾಜಧಾನಿಯೇ ಬೆಂಕಿಯಿಂದ ಉರಿಯುತ್ತಿತ್ತು. ಜನರು ಬಂದು **ಮಿಥಿಲೆಗೆ ಬೆಂಕಿ ಬಿದ್ದಿದೆ** ಎಂದು ಹೇಳಿದರೂ ನಿಶ್ಚಿಂತನಾಗಿದ್ದ ಜನಕನು 'ನನ್ನ ಸಂಪತ್ತು ನಾಶವಿಲ್ಲದ್ದು, ನಾಶವಾಗದು. ನನ್ನದೆಂಬುದು ಯಾವುದೂ ಇಲ್ಲವೇ ಇಲ್ಲ(ಎಲ್ಲವೂ ಭಗವಂತನದೇ). ಆದ್ದರಿಂದ **ಮಿಥಿಲೆ ಎಲ್ಲ ಅಗ್ನಿಜ್ವಾಲೆಯಿಂದ ಉರಿದರೂ ನನಗೆ ಸಂಬಂಧ ಪಟ್ಟದ್ದು ಯಾವುದೂ ಕೂಡಾ ಭಸ್ಮವಾಗುವುದಿಲ್ಲ** ಎಂದು ಜನರಿಗೆ ಉತ್ತರಿಸಿದ ಜನಕ.

ಹೀಗೆ ಕರ್ಮಯೋಗಿಯಾದ ರಾಜನ ಮಾತನ್ನು ಕೇಳಿ ಎಲ್ಲ ಪ್ರಜೆಗಳು ಆಶ್ಚರ್ಯ-ಚಕಿತರಾದರು. ಮಿಥಿಲೆಗೆ ಬೆಂಕಿ ಇಟ್ಟ ಭಗವಂತ ಮಿಥಿಲೆಯನ್ನು ಮೊದಲಿನಂತೆ ಮಾಡಿ ಬ್ರಾಹ್ಮಣರೂಪಿಯಾಗಿ ಮತ್ತೆ ಬಂದು ಪ್ರತ್ಯಕ್ಷನಾದ. ರಾಜನಿಗೆ, ಅಲ್ಲದೇ ಜನಕಮಹಾರಾಜನಿಗೆ 'ನಿನ್ನ ಬುದ್ಧಿಯು ಧರ್ಮದಲ್ಲಿಯೇ (ಧರ್ಮಾಚರಣೆಯಲ್ಲಿಯೇ) ನೆಲೆಸಿರಲಿ ಮತ್ತು

---

೧ ಕಾ ಸೀಮಾ ತವ ಭೂಮೇಸ್ತು ಬ್ರೂಹಿ ಧರ್ಮಂ ಮಮಾದ್ಯ ವೈ।
ತಚ್ಛ್ರುತ್ವಾ ಮೈಥಿಲೋ ರಾಜಾ ಲಜ್ಜಯಾವನತಾನನಃ।
ನೋವಾಚ ವಚನಂ ವಿಪ್ರಂ ತತ್ತ್ವಬುದ್ಧ್ಯಾ ಸಮೀಕ್ಷ್ಯ ತತ್॥ - ೫೨/೯,೧೦

೨ ತ್ವಮೇವಂ ಪದ್ಮನಾಭಸ್ಯ ನಿತ್ಯಂ ಪಕ್ಷಪದಾಹಿತಃ।
ಅಹೋ ಸಿದ್ಧಾರ್ಥರೂಪೋಽಸಿ ಗಮಿಷ್ಯೇ ಸ್ವಸ್ತಿತೇಽಸ್ತು ವೈ॥
ಇತ್ಯುಕ್ತ್ವಾ ಪ್ರಯಯೌ ವಿಪ್ರಸ್ತಜ್ಜಿಜ್ಞಾಸುರ್ದ್ವಿಜೋತ್ತಮಮ್॥
ಅದಹಚ್ಚಾಗ್ನಿನಾ ತಸ್ಯ ಮಿಥಿಲಾಂ ಭಗವಾನ್ ಸ್ವಯಮ್॥ - ೫೨/೧೪,೧೫

ಅರ್ಥದಲ್ಲೂ ಪ್ರವರ್ತಿಸಲಿ' ಎಂದು ತಾನೇ ವರವನ್ನೂ ಕೊಟ್ಟನು. ವೈರಾಗ್ಯವುಳ್ಳವನಾಗಿ ಸತ್ಯದಲ್ಲಿಯೇ ನೀನಿರು, ನಿನಗೆ ಮಂಗಳವಾಗಲಿ' ಎಂದು ಹೇಳಿ ಭಗವಂತನು ಅಲ್ಲಿಯೇ ಅಂತರ್ಧಾನನಾದ[1].

ಧರ್ಮರಾಜ ಇದುವೇ ಜನಕರಾಜನು ಮಿಥಿಲೆಯು ಸುಡುತ್ತಿದ್ದರೂ ಏಕೆ ನಿರ್ಲಿಪ್ತನಾಗಿದ್ದನೆಂಬ ನಿನ್ನ ಪ್ರಶ್ನೆಗೆ ಉತ್ತರ. ಮತ್ತೇನು ಬಯಸುತ್ತೀ ಹೇಳು ಎಂದ ಭೀಷ್ಮ

## ಸಂದೇಶಗಳು-ವಿವರಣೆಗಳು

೧. ಕರ್ಮಯೋಗಿಯಾಗಿ ಪರಿಗಣಿತವಾದ ಮಹಾನುಭಾವರಲ್ಲಿ ಜನಕ ಮಹಾರಾಜನೂ ಒಬ್ಬ ಎಂದು ಗೀತಾಭಾಷ್ಯ ಓದಿದವರಿಗೆ ತಿಳಿಯದಿರದು[2].

ಕ್ಷತ್ರವರ್ಣಾಶ್ರಮದಂತೆ ತನ್ನ ಕರ್ತವ್ಯಗಳನ್ನು (ಯಜನ, ದಾನ, ಹೋಮಕರಣ, ರಾಜ್ಯಪಾಲನೆ) ಸರ್ವೋತ್ತಮನಾದ ಭಗವಂತನಲ್ಲಿ ಸಮರ್ಪಿಸಿದ ಕರ್ಮಯೋಗಿ ಜನಕ ಮಹಾರಾಜ. ಆದ್ದರಿಂದ ಆತನ ಯೋಗಕ್ಷೇಮವನ್ನು ತೆಗೆದುಕೊಂಡ ಎನ್ನುವುದು ಈ ಉಪಾಖ್ಯಾನದ ತಿರುಳು. ಅಂತೆಯೇ ಇಡೀ ಲೋಕಕ್ಕೆ ಕೂಡಾ ಇದೇ ಸಂದೇಶ ಇದೆ. ಎಲ್ಲರೂ ತಮ್ಮ ತಮ್ಮ ವರ್ಣಾಶ್ರಮ ಉಚಿತ ಧರ್ಮಾಚರಣೆ ಮಾಡುತ್ತಿರಬೇಕು. ಅದೇ ಸಕಲ ಆಪತ್ತಿಗೆ ಪರಿಹಾರ. ಅದರಿಂದಲೇ ಶಾಸ್ತ್ರಾಪರೋಕ್ಷ, ಅಪರೋಕ್ಷಜ್ಞಾನ ನಂತರ ಮೋಕ್ಷವೂ ಕೂಡಾ. ಸತ್ಯಧರ್ಮರತಿಯೇ ಎಲ್ಲರ ಕರ್ತವ್ಯವಾಗಿರಬೇಕು.

ಇತ್ಯಾದಿ...

*****

---

೧ ಅನಂತಂ ಬತ ಮೇ ವಿತ್ತಂ ಭಾವ್ಯಂ ಮೇ ನಾಸ್ತಿ ಕಿಂಚನ ।
ಮಿಥಿಲಾಯಾಂ ಪ್ರದೀಪ್ತಾಯಾಂ ನ ಮೇ ಕಿಂಚನ ದಹ್ಯತೇ ।
ಪುನಃ ಸಂಜೀವಯಾಮಾಸ ಮಿಥಿಲಾಂ ತಾಂ ದ್ವಿಜೋತ್ತಮಃ ।
ಆತ್ಮಾನಂ ದರ್ಶಯಾಮಾಸ ವರಂ ಚಾಸ್ಮೈ ದದೌ ಪುನಃ ।
ಧರ್ಮೇ ತಿಷ್ಠತು ಸದ್ಭಾವೋ ಬುದ್ಧಿಸ್ತೇಽರ್ಥೇ ನರಾಧಿಪಃ ।
ಸತ್ಯೇ ತಿಷ್ಠಸ್ವ ನಿರ್ವಿಣ್ಣಃ ಸ್ವಸ್ತಿ ತೇಽಸ್ತು ವ್ರಜಾಮ್ಯಹಮ್ ॥- ೫೨/೧೭-೨೦

೨ ಲೋಕೇಽಸ್ಮಿನ್ ದ್ವಿವಿಧಾ ನಿಷ್ಠಾ ಪುರಾ ಪ್ರೋಕ್ತಾ ಮಯಾಽನಘ ।
ಜ್ಞಾನಯೋಗೇನ ಸಾಂಖ್ಯಾನಾಂ ಕರ್ಮಯೋಗೇನ ಯೋಗಿನಾಮ್ ॥ – ಗೀತಾ(೩/೩)
ಗೀತಾಭಾಷ್ಯ – ಗೃಹಸ್ಥಾದಿಕರ್ಮತ್ಯಾಗೇನ ಜ್ಞಾನನಿಷ್ಠಾಃ ಸನಕಾದಿವತ್ । ತತ್‌ಸ್ಥಾ ಏವ ಜ್ಞಾನನಿಷ್ಠಾಶ್ಚ ಜನಕಾದಿವತ್ । ಮದ್ಧರ್ಮಸ್ಥಾ ಏವ ಇತ್ಯರ್ಥಃ । – ೩/೩
ನಿಯತಂ ಕುರು ಕರ್ಮ ತ್ವಂ ಕರ್ಮ ಜ್ಯಾಯೋಹ್ಯಕರ್ಮಣಃ । – ಗೀತಾ(೩/೮)
ಗೀತಾಭಾಷ್ಯ – ಅತೋ ನಿಯತಂ ವರ್ಣಾಶ್ರಮೋಚಿತಂ ಕರ್ಮ ಕುರು । -೩/೮

# ೧೩೦. ಸುವರ್ಚಲೋಪಾಖ್ಯಾನ

ಧರ್ಮರಾಜನು ತಾತ ಭೀಷ್ಮರನ್ನು ಪ್ರಶ್ನಿಸುತ್ತಾನೆ –

ಜಗತ್ತಿನಲ್ಲಿ ಹೆಂಡತಿಯಿಂದ ಕೂಡಿದ (ಪತಿಯು) ಗೃಹಸ್ಥಾಶ್ರಮಿಯಾಗಿದ್ದು ಸಂಸಾರವನ್ನು ದಾಟಿರುವ ಸುಖದುಃಖ ಮೊದಲಾದ ಎಲ್ಲ ದ್ವಂದ್ವವಿಲ್ಲದವನಾಗಿರುವ ಯಾರಾದರೂ ಮಹಾಪ್ರಾಜ್ಞರಾದ ದುರ್ಲಭವಾದ ಪುರುಷನು ಇದ್ದಾನೆಯೆ?[೧]

ಈ ವಿಷಯವನ್ನು ತಿಳಿಸುವ ಒಂದು ಇತಿಹಾಸವಿದೆ. ಇದು ಸಂಸಾರ ಭಯಕ್ಕೆ ಔಷಧಿಯಂತಿದೆ. ಎಂದು ಭೀಷ್ಮರು ಹೇಳಲಾರಂಭಿಸಿದರು.

ದೇವಲ ಎಂಬ ಸರ್ವಶಾಸ್ತ್ರೋವಿದನಾದ ಸದಾಚಾರಿಯೂ, ಧಾರ್ಮಿಕನೂ, ದೇವಬ್ರಾಹ್ಮಣನ ಪೂಜಕನೂ ಆದ ಬ್ರಹ್ಮರ್ಷಿಗೆ ಸುವರ್ಚಲಾ ಎಂಬ ಸಲ್ಲಕ್ಷಣಸಂಪನ್ನೆಯಾದ ಮಗಳಿದ್ದಳು. ಈಕೆಯ ಮದುವೆಯಾಗುವ ಪುರುಷನು ಎಲ್ಲಿದ್ದಾನೆ? ಅವನು ಶ್ರೋತ್ರಿಯನೂ, ವಿದ್ವಾಂಸನೂ, ಪ್ರಿಯವಾದಿಯೂ, ಮಹಾತಪಸ್ವಿಯೂ ಎಲ್ಲಿದ್ದಾನೆ? ಎಂದು ಆಕೆಯ ತಂದೆ ಚಿಂತಿಸುತ್ತಿರಲು ಮಗಳು '**ನನ್ನನ್ನು ಕುರುಡನೂ, ಕುರುಡನಲ್ಲದವನೂ, ಆದ ವ್ಯಕ್ತಿಗೆ ವಿವಾಹ ಮಾಡಲು ವರಾನ್ವೇಷಣೆ ಮಾಡು**'[೨] ಎಂದು ತನ್ನ ಪ್ರಾರ್ಥನೆಯನ್ನು ತಂದೆಗೆ ನಿವೇದಿಸಿದಳು.

ತಂದೆಗೆ ಇದು ಒಗಟಾಗಿ ತೋರಿ ಇಂತಹ ವರ ಹೇಗೆ ತಾನೇ ಇರಲು ಸಾಧ್ಯ? ಎಂದು ಹೇಳುತ್ತಾ 'ನೀನು ಉನ್ಮತ್ತಳಂತೆ ಅಶುಭವಾದ ಮಾತನ್ನಾಡುತ್ತಿರುವೆ' ಎಂದನು. ಅದಕ್ಕೆ ಮಗಳು 'ನಾನು ಹುಚ್ಚಿಯಲ್ಲ, ಬುದ್ಧಿಪೂರ್ವಕವಾಗಿಯೇ ಹೇಳಿದ್ದೇನೆ. ನಾನು ಹೇಳಿದಂಥ ವ್ಯಕ್ತಿಯೇ ನಿಜವಾಗಿಯೂ ವೇದಜ್ಞ, ನೀನು ನನಗಾಗಿ ಆ ಯಾವ ವ್ಯಕ್ತಿಗಳಲ್ಲಿ ನನ್ನ ಬಯಕೆಯ ಗುಣಗಳಿರುವ ವ್ಯಕ್ತಿಯನ್ನು ಆರಿಸುವೆ ಎಂದಳು[೩].

ನಂತರ ತಂದೆ ತಮ್ಮ ಶಿಷ್ಯರಿಗೆ ೧. ಜಾತಿ, ಗೋತ್ರ, ಕುಲಾಚಾರಗಳಿಂದ ವಿಶುದ್ಧರಾದ, ೨. ವೇದಾಧ್ಯಯನ ಸಂಪನ್ನರಾದ, ೩. ತಂದೆ ತಾಯಿ ಕಡೆಯಿಂದ ಶುದ್ಧ

---

೧ ಅಸ್ತಿ ಕಶ್ಚಿತ್ ಯದಿ ವಿಭೋ ಸದಾರೋ ನಿಯತೋ ಗೃಹೇ।
ಅತೀತಸರ್ವಸಂಸಾರಃ ಸರ್ವದ್ವಂದ್ವ ವಿವರ್ಜಿತಃ।
ತಂ ಮೇ ಬ್ರೂಹಿ ಮಹಾಪ್ರಾಜ್ಞ ದುರ್ಲಭಃ ಪುರುಷೋ ಮಹಾನ್ ॥ – ೫೩/೧

೨ ಅಂಧಾಯ ಮಾಂ ಮಹಾಪ್ರಾಜ್ಞ ದೇಹ್ಯನಂಧಾಯ ವೈ ಪಿತಃ।
ಉನ್ಮತ್ತೇವಾ ಶುಭಂ ವಾಕ್ಯಂ ಭಾಷಸೇ ಶುಭಲೋಚನೇ ॥

೩ ನಾಹಮುನ್ಮತ್ತಭೂತಾಽದ್ಯ ಬುದ್ಧಿಪೂರ್ವಂ ಬ್ರವೀಮಿ ತೇ।
ವಿದ್ಯತೇ ಚೋತ್ಪತ್ತಿಸ್ತಾದೃಕ್ ಸ ಮಾಂ ಭರತಿ ವೇದವಿತ್ ॥
ಯೇಭ್ಯಸ್ತ್ವಂ ಮನ್ಯಸೇ ದಾತುಂ ಮಾಮಿಹಾನಯ ತಾನ್ ದ್ವಿಜಾನ್।
ತಾದೃಶಂ ತಂ ಪತಿಂ ತೇಷು ವರಯಿಷ್ಯೇ ಯಥಾ ತಥಮ್ ॥ – ೫೩/೭-೧೧

ಪರಂಪರೆಯುಳ್ಳ (ಸಾಂಕರ್ಯಾದಿ ದೋಷರಹಿತರಾದ), ೪. ರೋಗರಹಿತರಾದ (ಆರೋಗ್ಯಭಾಗ್ಯಶಾಲಿಗಳಾದ), ೫. ಬುದ್ಧಿವಂತರಾದ, ೬. ಶೀಲಸತ್ವಗುಣಸಂಪನ್ನರಾದ, **೭. ನಮ್ಮ ಗೋತ್ರದಿಂದ ಭಿನ್ನರಾದ**, ವೇದವ್ರತಾಸಕ್ತರಾದ (ಶಿಖಾದಿ ವಿಶಿಷ್ಟರಾದ), ೮. ಸ್ನಾತಕರಾದ, ೯. ತಂದೆತಾಯಿಗಳುಳ್ಳ ೧೦. ಬ್ರಾಹ್ಮಣ(ವರನನ್ನು) ಕರೆದುಕೊಂಡು ಬನ್ನಿ. ಅವರು ನನ್ನ ಮಗಳಿಗೆ ಇಷ್ಟವಾಗಿರಬೇಕು ಎಂದು ಹೇಳಿದನು.

ಹೀಗೆ ಗುರುಗಳ ಅಣತಿಯಂತೆ ಶಿಷ್ಯರು ಅಲ್ಲಲ್ಲಿರುವ ಗ್ರಾಮ ಹಾಗೂ ಆಶ್ರಮವಾಸಿಗಳಾದ ಬ್ರಾಹ್ಮಣರಿಗೆ ಈ ವಿಷಯ ತಿಳಿಸಲು, ದೇವಲ ಪುತ್ರಿಯ ಪ್ರಭಾವ ತಿಳಿದ ಬ್ರಾಹ್ಮಣ ಕುಮಾರರು ದೇವಲರ ಆಶ್ರಮಕ್ಕೆ ಬಂದರು. ದೇವಲರಿಂದ ಸತ್ಕೃತರಾದರು. ಮಗಳಿಗೆ ತಂದೆ ಬಂದ ಕನ್ಯಾಪೇಕ್ಷಿಗಳನ್ನು ನೋಡಿ ನಿನ್ನ ಇಷ್ಟದಂತೆ ವರಿಸು ಎಂದ.

ಸುವರ್ಚಲೆ ಬಂದ ಕನ್ಯಾಪೇಕ್ಷಿ ಬ್ರಾಹ್ಮಣ ಕುಮಾರರನ್ನು ನಮಿಸಿ, 'ನಿಮ್ಮಲ್ಲಿ ಅಂಧನೂ, ಅಂಧನಲ್ಲದವನೂ ಯಾರಾದೂ ಇದ್ದರೆ ನನಗೆ ವರನಾಗಬಹುದು' ಎಂದಳು. ಕನ್ಯೆಯ ಮಾತನ್ನು ಕೇಳಿದ ಬ್ರಾಹ್ಮಣ ಕುಮಾರರು ಆಕೆಯನ್ನು ಅಪ್ರಬುದ್ಧಳೆಂದು ಭಾವಿಸಿ, ಮನಸ್ಸಿನಲ್ಲಿಯೇ ದೇವಲರನ್ನು ನಿಂದಿಸಿ, ಬಂದ ದಾರಿಗೆ ವಾಪಸು ಹೊರಟರು. ಕನ್ಯೆ ಸುವರ್ಚಲಾ ತನ್ನ ತಂದೆಯ ಮನೆಯಲ್ಲಿಯೇ ಇದ್ದಳು[೧].

ಕೆಲದಿನ ಕಳೆಯಿತು (ವೇದಾಧ್ಯಯನ ಮತ್ತು ತಪಸ್ಸುಗಳಿಂದ ಕೂಡಿದ) ಬ್ರಹ್ಮವರ್ಚಸ್ವಿಯಾದ, ನ್ಯಾಯಶಾಸ್ತ್ರ ಬಲ್ಲ, ಊಹಾಪೋಹಗಳನ್ನು ಮಾಡಲು ತಿಳಿದ (Pros & Cons) ಬ್ರಾಹ್ಮಣಪ್ರಿಯನಾದ ವೇದಗಳನ್ನು, ವೇದತತ್ತ್ವಗಳನ್ನು ಬಲ್ಲ, ಕರ್ಮಸ್ವರೂಪ ಬಲ್ಲ (ಪೂರ್ವ ಮಿಮಾಂಸಾ ತತ್ತ್ವಜ್ಞಾನಿಯಾದ), ಆತ್ಮ ತತ್ತ್ವಗಳ ವಿವೇಕಿಯಾದ(ಜೀವೇಶ್ವರ, ಭೇದವಿವೇಕ ಜ್ಞಾನಿಯಾದ), ತಂದೆಯುಳ್ಳ, ಗುಣಸಾಗರನಾದ (ಸದ್ಗುಣ ಖಣಿಯಾದ) ಶ್ವೇತಕೇತುವೆಂಬ ಬ್ರಾಹ್ಮಣ ಕುಮಾರನು ಕನ್ಯಾರ್ಥಿಯಾಗಿ ದೇವಲರ ಆಶ್ರಮಕ್ಕೆ ಬಂದನು. ಅವನನ್ನು ದೇವಲರು ಸತ್ಕರಿಸಿ ಮಗಳಿಗೆ ಇವನನ್ನು ವರಿಸಲು ಹೇಳಿದರು. ಅದರಿಂದ ಕೋಪಗೊಂಡ ಮಗಳು ಸಿಟ್ಟಿನಿಂದಲೇ ಋಷಿಕುಮಾರನನ್ನು ನೋಡಿದಳು. ಶ್ವೇತಕೇತು ತಾನು ಕನ್ಯಾರ್ಥಿಯಾಗಿ ಬಂದಿರುವುದಾಗಿ ನುಡಿದ. ನಿನ್ನ ಅಪೇಕ್ಷೆಯಂತೆ 'ನಾನು(ಸಂಸಾರದ ವಿಷಯದಲ್ಲಿ) ಅಂಧನೂ, ನನಗೆ ಸಂಶಯರಹಿತವಾದ ಭಗವತ್ ತತ್ತ್ವವಿಷಯದಲ್ಲಿ

---

೧ ವಿಪ್ರಾಣಾಂ ಸಮಿತೀರ್ದೃಷ್ಟ್ವಾ ಪ್ರಣಿಪತ್ಯ ತಪೋಧನಾನ್ ।
ಯದ್ಯಸ್ತಿ ಸಮಿತೌ ವಿಪ್ರೋ ಹ್ಯಂಧೋಽನಂಧಃ ಸ ಮೇ ವರಃ ॥
ನೋಚುರ್ವಿಪ್ರಾ ಮಹಾಭಾಗಾಃ ಕನ್ಯಾಂ ಮತ್ವಾ ಹ್ಯವೇದಿಕಾಮ್ ।
ಕುತ್ಸಯಿತ್ವಾ ಮುನಿಂ ತತ್ರ ಮನಸಾ ಮುನಿಸತ್ತಮಾಃ ।
ಯಥಾ ಗತಂ ಯಯುಃ ಕ್ರುದ್ಧಾ ನಾನಾದೇಶನಿವಾಸಿನಃ ॥....
..... ಕನ್ಯಾ ಚ ಸಂಸ್ಥಿತಂ ತತ್ರ ಪಿತೃವೇಶ್ಮನಿ ಭಾಮಿನೀ ॥ - ೫೩/೧೧-೨೪

ಸಂಶಯಹೀನನಾಗಿದ್ದು ಅನಂಧನೂ ಆಗಿರುವ(ವೆ) ನನ್ನನ್ನು ವರಿಸು ಎಂದನು[೧].

ಹೀಗೆ ಶ್ವೇತಕೇತು ತಾನು ಅಂಧನೂ ಹೌದು ಅನಂಧನೂ ಹೌದೆಂದು ವಿವರಿಸಿದ.

ವಾಸ್ತವವಾಗಿ ಜೀವನು ಪರಮಾತ್ಮನ ಪ್ರೇರಣೆ, ಅನುಗ್ರಹಗಳಿಂದಲೇ ನೋಡುವುದೇ ಮೊದಲಾದ ಎಲ್ಲ ಕ್ರಿಯೆಗಳನ್ನೂ ಮಾಡುತ್ತಾನೆ. ಈ ಜೀವನಿಗೆ ಪರಮಾತ್ಮನೇ ನಿಜವಾದ ಚಕ್ಷುಸ್ಸು. ಭಗವಂತನೆಂಬ ಕಣ್ಣು ಇಲ್ಲದವನು ಪ್ರಾಣಿಸಮುದಾಯದಲ್ಲಿ ಅಂಧನೆನಿಸುವನು. ವಿಷಯಗಳ ಕಡೆಗೆ ನನಗೆ ಆಸಕ್ತಿ ಇಲ್ಲ. ವಿಷಯಗಳನ್ನು ಅನುಭವಿಸುತ್ತಿದ್ದರೂ ನಿರ್ಲಿಪ್ತನಾಗಿರುವ ಕಾರಣ ನಾನು **ಅಂಧ**[೨].

ತತ್ತ್ವಜ್ಞಾನ ವಿಷಯದಲ್ಲಿ ಸಂಶಯವಿಲ್ಲ. ಅಲ್ಲಿ ನನ್ನ ಕಣ್ಣುಗಳು ಶುದ್ಧವಾಗಿವೆ. ಆದ್ದರಿಂದ **ಅನಂಧ**. ಆದ್ದರಿಂದ ನನ್ನನ್ನು ವರಿಸು ಎಂದ ಶ್ವೇತಕೇತು.

ದುಃಶಾಸ್ತ್ರಗಳನ್ನು ತೊರೆದು, ಮೃತ್ಯುವನ್ನು ದಾಟುತ್ತಾ, ಭಗವದ್ವಿದ್ಯೆಯಿಂದ ಮೋಕ್ಷ ಸಂಪತ್ತನ್ನು ಅಮೃತವನ್ನು ಹೊಂದಿದ್ದೇನೆ. ಅಸೂಯಾರಹಿತನಾಗಿದ್ದೇನೆ. ಹೀಗೆ ನಾನು ನಿನ್ನ ಶಪಥದಂತೆ ಇದ್ದೇನೆ. ಆದ್ದರಿಂದ ನೀನು ವಿಕ್ರೀತಳಾಗಿದ್ದೀಯಾ(ಕೊಳ್ಳಲ್ಪಟ್ಟಿದ್ದೀಯಾ. ನೀನು ಬಯಸಿದ ಕನ್ಯಾಶುಲ್ಕದಿಂದ). ಅಂತೆಯೇ ನಾನು ನಿನ್ನ ಗಂಡ, ಇನ್ನು ನೀನು ನನ್ನನ್ನು ವರಿಸುವುದು ಉಚಿತವೆಂದನು ಶ್ವೇತಕೇತು.

ಇದೆಲ್ಲ ಕೇಳಿದ ಸವರ್ಚಲೆ 'ನಾನು ನಿನ್ನನ್ನು ಮನಸಾ ವರಿಸಿದ್ದೇನೆ. ಉಳಿದುದನ್ನು ನನ್ನ ತಂದೆ ನೆರವೇರಿಸುವರು, ಅವರನ್ನು ಪ್ರಾರ್ಥಿಸು(ನನ್ನೊಡನೆ ವಿವಾಹದ ಏರ್ಪಾಟಿಗಾಗಿ) ಎಂದಳು[೩]. ಏಕೆಂದರೆ ಇದು ವೇದವಿಧಿ (ತಂದೆಯೇ ವಿವಾಹದ ವ್ಯವಸ್ಥೆ ಮಾಡುವುದು).

---

೧ ಕನ್ಯೇ ಏಷ ಮಹಾಭಾಗ ಪ್ರಾಪ್ತೋ ಋಷಿಕುಮಾರಕಃ।
ವರಯ್ಯೆನಂ ಮಹಾಪ್ರಾಜ್ಞಂ ವೇದವೇದಾಂಗಪಾರಗಮ್ ॥
ತಚ್ಛ್ರುತ್ವಾ ಕುಪಿತಾ ಕನ್ಯಾ ಋಷಿಪುತ್ರಮುದೈಕ್ಷತ।
ಅಂಧೋಽಹಮತ್ರ ತತ್ತ್ವಂ ಹಿ ತಥಾ ಮನ್ಯೇ ಚ ಸರ್ವಥಾ ॥
ವಿಶಾಲನಯನಂ ವಿದ್ಧಿ ತಥಾ ಮಾಂ ಹೀನ ಗಸಂಶಯಮ್ ।
ಯೇನೇದಂ ವೀಕ್ಷತೇ ನಿತ್ಯಂ........................ ।

೨ ನ ಚಕ್ಷುರ್ವಿದ್ಯತೇ ಹ್ಯೇಷಃ ಸ ವೈ ಭೂತಾಂಧ ಉಚ್ಯತೇ।
ಲೋಕದೃಷ್ಟ್ಯಾ ಕರೋಮೀಹ ನಿತ್ಯನೈಮಿತ್ತಕಾದಿಕಮ್ ।
ಆತ್ಮದೃಷ್ಟ್ಯಾ ಚ ತತ್ಸರ್ವಂ ವಿಲಿಪ್ಯಾಮಿ ಚ ನಿತ್ಯಶಃ।
ಸ್ಥಿತೋಽಹಂ ನಿರ್ಭರಃ ಶಾಂತಃ ಕಾರ್ಯಕಾರಣಭಾವನಃ।
ಅವಿದ್ಯಯಾ ತರನ್ ಮೃತ್ಯುಂ ವಿದ್ಯಯಾ ತಂ ತಥಾಽಮೃತಮ್ ॥

೩ ತತಃ ಸುವರ್ಚಲಾ ದೃಷ್ಟ್ವಾ ಪ್ರಾಹ ತಂ ದ್ವಿಜಸತ್ತಮಮ್ ।
ಮನಸಾಽಪಿ ವೃತೋ ವಿದ್ವನ್ ಶೇಷಕರ್ತಾ ಪಿತಾ ಮಮ ॥

ಈ ವಿಷಯ ತಿಳಿದು ದೇವಲರು ಶ್ವೇತಕೇತುವನ್ನು ಸತ್ಕರಿಸಿ, ಅವನ ತಂದೆಯಾದ ಉದ್ದಾಲಕರನ್ನು ಕರೆಯಿಸಿ ಋಷಿಮುನಿಗಳ ಸಮಕ್ಷಮ ಸುವರ್ಚಲೆಯನ್ನು ಶ್ವೇತಕೇತುವಿಗೆ ಧಾರೆಯೆರೆದು ಕೊಟ್ಟರು. ನೆರೆದ ಮುನಿಗಳು ಈ ವ್ಯಾಪಾರವೆಲ್ಲ ಶ್ವೇತಕೇತುವಿನ ಅಂತರ್ಯಾಮಿಯಾದ ಹರಿಯ ವ್ಯಾಪಾರವೆಂದು ಮಾತನಾಡಿಕೊಂಡರು. ದೇವಲರೂ ಕನ್ಯಾದಾನ ಮಾಡಿ ಭಗವಂತನಾದ ಮಾಧವನು ಪ್ರೀತನಾಗಲಿ. ಸುವರ್ಚಲೆಯನ್ನು ಶ್ವೇತಕೇತುವಿಗೆ ಸಹಧರ್ಮಿಣಿಯಾಗಿ ಒಪ್ಪಿಸಿದರು[೧].

ಹೀಗೆ ಋಷಿಮುನಿಗಳ ಸಾಕ್ಷಿಕವಾಗಿ ವಿವಾಹವಾದ ಶ್ವೇತಕೇತು ಸುವರ್ಚಲೆಯೊಡನೆ ಗೃಹಸ್ಥಾಶ್ರಮ ಧರ್ಮಗಳನ್ನು ಪರಿಪಾಲಿಸುತ್ತಾ ಇದ್ದನು. ಒಮ್ಮೆ ಪತ್ನಿಗೆ ಹೀಗೆ ಹೇಳಿದನು.

೧. ನೀನು ನನ್ನ ಸಹಧರ್ಮಚಾರಿಣಿ. ಆದ್ದರಿಂದ ವೇದೋಕ್ತ ರೀತಿಯಲ್ಲಿ ನ್ಯಾಯರೀತಿಯಲ್ಲಿ ಸಹಾಯಕಳಾಗಿರು.

೨. ನಾನು ನನ್ನ ತಂದೆ ಉದ್ದಾಲಕರ ಉಪದೇಶದಪ್ರಕಾರ ನಾನು (ಸರ್ವಜ್ಞಾನಿ ವಿಶಿಷ್ಟನಾದ) ಭಗವಂತನಲ್ಲ ಎಂಬ ಭಾವದಿಂದ ಇದ್ದೇನೆ. ಮೊದಲು ಅಹಂಕಾರದಿಂದ ಇದ್ದವನು ನಂತರ ಉಪದೇಶಾನಂತರ ಅಹಂಕಾರ ತ್ಯಜಿಸಿದ್ದೇನೆ. ನೀನೂ ಭಗವತ್ಪ್ರಜ್ಞೆ ಬೆಳೆಸಿಕೊಂಡು ಸತ್ಕರ್ಮಗಳನ್ನು ಮಾಡು. ನಂತರ ನಿನಗೆ ಹಿತವಾದುದನ್ನು ಮಾಡುವೆ.

೩. ಮಮಕಾರದಿಂದ ನಾನು ಕರ್ಮ ಮಾಡುತ್ತಿಲ್ಲ. ಭಗವಂತನೇ ಎಲ್ಲ ಮಾಡಿಸುವವನು. ಇಂತಹ ಜ್ಞಾನದಿಂದ ಕರ್ಮದೋಷಗಳನ್ನು ಭಸ್ಮಮಾಡಿಕೊಳ್ಳಬೇಕು. ನಾನು ಹಾಗೆ ಆಚರಿಸುತ್ತಿದ್ದೇನೆ.

೪. ನೀನೂ ಕೂಡಾ ಹಾಗೆಯೇ ಮಾಡಬೇಕು. ಏಕೆಂದರೆ ಶ್ರೇಷ್ಠರು ನಡೆದಂತೆ ಇತರರೂ ನಡೆಯುತ್ತಾರೆ. ಆದ್ದರಿಂದ ಎಲ್ಲ ಜನರ ಸಚ್ಚಾರಿತ್ರ್ಯ ಸಿದ್ಧಿಗಾಗಿ ಭಗವತ್ಪ್ರಾಪ್ತಿಗಾಗಿ ಕರ್ತವ್ಯಗಳನ್ನು ಮಾಡಬೇಕು.

ಹೀಗೆ ಹೆಂಡತಿಗೆ ಹೇಳಿ ಸರ್ವಜ್ಞನಾದ ಭಗವಂತನಲ್ಲಿಯೇ ರತಿಯುಳ್ಳವನಾಗಿ ತನ್ನ (ಹೆಂಡತಿಯನ್ನೂ ಧರ್ಮಮಾರ್ಗದಲ್ಲಿ ನಡೆಸಿ) ದೇವತೆಗಳನ್ನು ಯಜ್ಞಗಳಿಂದ ತೃಪ್ತಿಪಡಿಸಿ, ಆಕೆಯಲ್ಲಿ ಪುತ್ರರನ್ನು ಪಡೆದನು.

---

ವೃಣೀಷ್ವ ಪಿತರಂ ಮಹ್ಯಮೇಷ ವೇದವಿಧಿಕ್ರಮಃ ॥ – ೫೩/೨೯-೩೮

೧ ಮುನೀನಾಮಗ್ರತಃ ಕನ್ಯಾಂ ಪ್ರದದೌ ಜಲಪೂರ್ವಕಮ್ ।
ಉದಾಹರಂತಿ ವೈ ತತ್ರ ಶ್ವೇತಕೇತುಂ ನಿರೀಕ್ಷ್ಯತಮ್ ॥
ಹೃತ್ಪುಂಡರೀಕ ನಿಲಯಃ ಸರ್ವಭೂತಾತ್ಮಕೋ ಹರಿಃ ।
ಶ್ವೇತಕೇತುಸ್ವರೂಪೇಣ ಸ್ಥಿತೋಽಸೌ ಮಧುಸೂದನಃ ।
ಪ್ರೀಯತಾಂ ಮಾಧವೊ ದೇವಃ ಪತ್ನೀ ಚೇಯಂ ಸುತಾ ಮಮ ।
ಪ್ರತಿಪಾದಯಾಮಿ ತೇ ಕನ್ಯಾಂ ಸಹಧರ್ಮಚರೀಂ ಶುಭಾಮ್ ॥ – ೫೩/೪೦-೪೨

ಯಾನಿ ಚೋಕ್ತಾನಿ ವೇದೇಷು ತತ್ಸರ್ವಂ ಕುರು ಶೋಭನೇ।
ಮಯಾ ಸಹ ಯಥಾನ್ಯಾಯಂ ಸಹಧರ್ಮಚರೀ ಮಮ ॥
ಅಹಮಿತ್ಯೇವ ಭಾವೇನ ಸ್ಥಿತಸ್ತ್ವಮತಥೈವ ಚ।
ತಸ್ಮಾತಿ ಕರ್ಮಾಣಿ ಕುರ್ವೀಥಾ ಕುರ್ಯಾಂ ತೇ ಚ ತತಃ ಪರಮ್ ॥
ನ ಮಮೇತಿ ಚ ಭಾವೇನ ಜ್ಞಾನಾಗ್ನಿ ನಿಲಯೇನ ಚ।
ಅನಂತರಂ ತಥಾಕುರ್ಯಾಸ್ತಾನಿ ಕರ್ಮಾಣಿ ಭಸ್ಮಸಾತ್ ॥
ಏವಂ ತ್ವಯಾ ಚ ಕರ್ತವ್ಯಂ ಸರ್ವದಾ ದುರ್ಭಗಾ ಮಯಾ ॥
ಆತ್ಮಯೋಗಪರೋ ನಿತ್ಯಂ ನಿರ್ದ್ವಂದ್ವೋ ನಿಷ್ಪರಿಗ್ರಹಃ।
ಭಾರ್ಯಾಂ ತಾಂ ಸದೃಶೀ ಪ್ರಾಪ್ಯ ಬುದ್ಧಿ ಕ್ಷೇತ್ರಜ್ಞಯೋರಿವ ॥ - ೫೩/೪೫-೫೦

## ಶ್ವೇತಕೇತು - ಸುವರ್ಚಲಾ ಸಂವಾದ

ಒಮ್ಮೆ ಸುವರ್ಚಲಾ ತನ್ನ ಪತಿಯನ್ನು 'ನೀವು ಯಾರು' ಎಂದು ಕೇಳಿದಾಗ ಶ್ವೇತಕೇತು 'ನನ್ನನ್ನು ಈಗಾಗಲೇ ಬ್ರಾಹ್ಮಣೋತ್ತಮನೇ ಸಂಬೋಧಿಸಿ ಕರೆದು ಮತ್ತೆ 'ನೀವಾರೆಂದು' ಕೇಳುವುದು ಏಕೆ? ನಾನಾರೆಂದು ತಿಳಿದೂ ಕೂಡಾ ಮತ್ತೇಕೆ ಕೇಳುವೆ ಎಂದು ಉತ್ತರಿಸುತ್ತಾನೆ'.

ಪತಿಯ ಪ್ರಶ್ನೆಗೆ ಪತ್ನಿ ಸುವರ್ಚಲೆ ನೀವಾರು ಎಂದರೆ ನಿನ್ನ ಹೃದಯದಲ್ಲಿರುವ (ಭಗವಂತನನ್ನು, ಆತ್ಮನನ್ನು) ಯಾರೆಂದು ಕೇಳುತ್ತಿದ್ದೇನೆಯೇ ಹೊರತು ನೀವು ತಿಳಿದಂತೆ ಅಲ್ಲ ಎಂದಳು. ಆಗ ಶ್ವೇತಕೇತು (ಅವನ ಪರಿಚಯವು ಹೀಗಿದೆ) ಅವನು ಮಾತನಾಡುವುದಿಲ್ಲ ಎಂದನು. ಒಂದು ಒಗಟಿನ ರೂಪದಲ್ಲಿ ಉತ್ತರಿಸಿದನು. 'ಅವನು ಮಾತನಾಡುವುದಿಲ್ಲ' ಎಂಬುದರ ವರ್ಣನೆ ನಾಲ್ಕು ಶ್ಲೋಕಗಳಿಂದ ಉತ್ತರಿಸುತ್ತಾನೆ. ಅವೆಲ್ಲವೂ ಪ್ರಾಯಃ ಒಗಟಿನಂತೆಯೇ ಇವೆ. ಹೀಗೆ ಪತಿ ಪತ್ನಿಯರ ಸಂವಾದ ಸುಮಾರು ೩೦ ಶ್ಲೋಕಗಳವರೆಗೆ ನಡೆಯುತ್ತದೆ. ಅಲ್ಲೊಂದು, ಇಲ್ಲೊಂದು ಶ್ಲೋಕಗಳು ಭಾವ ತಿಳಿದರೂ ಪ್ರತಿ ಶ್ಲೋಕಗಳ ಭಾವವು ಅಷ್ಟಾಗಿ ಸ್ಪಷ್ಟವಾಗಿ ಸಾಮಾನ್ಯರಿಗೆ ತೋರುವುದಿಲ್ಲ. ಅಲ್ಲಿ ಸಾಕಷ್ಟು ಚರ್ಚೆಗೆ ಒಳಗೊಂಡ ತಾತ್ತ್ವಿಕ ವಿಚಾರಗಳಿವೆ. ಅದು ಈ ಗ್ರಂಥದ ವ್ಯಾಪ್ತಿಗೆ ಬರದು. ಬರೆದರೂ ತುಂಬಾ

---

೧ ಪಪ್ರಚ್ಛ ಕೋ ಭವಾನತ್ರ ಬ್ರೂಹಿ ಮೇ ತದ್ ದ್ವಿಜೋತ್ತಮ।
ಶ್ವೇತಕೇತು -
ತಾಮಾಹ ಭಗವಾನ್ ವಾಗ್ಮೀ ತಯಾ ಜ್ಞಾತೋ ನ ಸಂಶಯಃ।
ದ್ವಿಜೋತ್ತಮೇತಿ ಮಾಮುಕ್ತ್ವಾ ಪುನಃ ಕಮನುಪೃಚ್ಛಸಿ ॥
ಸುವರ್ಚಲಾ
ಸಾ ತಮಾಹ ಮಹಾತ್ಮಾನಂ ಪೃಚ್ಛಾಮಿ ಹೃದಿ ಶಾಯಿನಮ್।
ತಚ್ಛ್ರುತ್ವಾ ಪ್ರತ್ಯುವಾಚೈನಾಂ ಸ ನ ವಕ್ಷ್ಯತಿ ಭಾಮಿನಿ ॥

ವಿಸ್ತಾರವಾಗಿ ಬರೆಯಬೇಕಾಗುತ್ತದೆ. ಆದ್ದರಿಂದ ಅದನ್ನು ಕೈಬಿಡಲಾಗಿದೆ. 'ನೀನಾರು' ಎಂಬ ಪ್ರಶ್ನೆ ಹಾಗೂ ಅದರ ಉತ್ತರಗಳು ಐತರೇಯ ಉಪನಿಷತ್ತಿನ ಬೃಹತೀಸಹಸ್ರ ಉಚ್ಚಾರಣೆಯ ಸಂದರ್ಭದಲ್ಲಿ ಇಂದ್ರದೇವರು ವಿಶ್ವಾಮಿತ್ರರಿಗೆ ಮತ್ತೇ ಉಚ್ಚರಿಸು ಎಂಬಂತಿದೆ. 'ನೀನಾರು' ಎಂದು ವಿಶ್ವಾಮಿತ್ರರು ಇಂದ್ರನನ್ನು ಮೇಲ್ನೋಟಕ್ಕೆ ಕೇಳಿದಂತಿದೆ. ಇಂದ್ರನು ತನ್ನಲ್ಲಿ ಆವಿಷ್ಟನಾದ ವಾಯು ಹಾಗೂ ಪರಮಾತ್ಮನೇ **ಪ್ರಾಣೋವಾ ಅಹಮಸ್ಮಿ ಋಷೇ** ಎಂಬ ಉತ್ತರದಂತಿದೆ (ಇದು ನನ್ನ ವೈಯಕ್ತಿ ಅಭಿಪ್ರಾಯ. ಇದರಲ್ಲಿ ತಪ್ಪಿದ್ದಲ್ಲಿ ವಿದ್ವಾಂಸರು ತಿಳಿಸಬಹುದು).

**ಉಪನಿಷತ್ :**

'ವಿಶ್ವಾಮಿತ್ರಂ.... ಶಂಸಿಷ್ಯಂತಂ ಇಂದ್ರ ಉಪನಿಷಸಾದ । ... ಬರಹತೀಸಹಸ್ರಂ ಶಶಂಸ । ......... ತಮಿಂದ್ರ ಉವಾಚ .... ಋಷೇ ದ್ವಿತೀಯಂ ಶಂಸ......... । ತಮಿಂದ್ರ ಉವಾಚ ...... ಋಷೇ ತೃತೀಯಂ ಶಂಸ........ । ಸ ಹೋವಾಚ ...... ತ್ವಾಮೇವ ಜಾನೀಯಂ ಇತಿ .... । ತಮಿಂದ್ರ ಉವಾಚ .... । ಪ್ರಾಣೋ ವಾ ಅಹಮಸ್ಮಿ ಋಷೇ ಪ್ರಾಣಸ್ತ್ವಂ ಪ್ರಾಣಃ ಸರ್ವಾಣಿ ಭೂತಾನಿ ॥। ಸ ಏತೇನ ರೂಪೇಣ ಸರ್ವಾ ದಿಶೋಽವಿಷ್ಟೋಽಸ್ಮಿ .... । – ಐತರೇಯಾರಣ್ಯಕ ಅಧ್ಯಾಯ – ೨

**ಭಾಷ್ಯ :**

**'ಬೃಹತೀಸಹಸ್ರಂ ಶಂಸಿಷ್ಯನ್ ಯದಾ ಸಸ್ಮಾರ ಕೇಶವಮ್ ।**
**ವಾಯುನಾ ಸಹ ದೇವೇಶಸ್ತದಾ ವಾಸವಮಾವಿಶತ್ ॥**
**ಆವಿಷ್ಟೋ ವಿಷ್ಣುನಾಥೇಂದ್ರೋ ವಾಯುನಾ ಸಹ ಕೇಶವಮ್ ।**
**ಜಾನೀಯಾಂ ತ್ವಾಮಿತಿ ಪ್ರಾಹ ತಸ್ಮಾ ಆಹ ಸ ಕೇಶವಃ ।**
**ಇಂದ್ರಾವಿಷ್ಟಃ ಪ್ರಾಣನಾಮ ....................**
**ಇಂದ್ರಾವಿಷ್ಟಃ ಕೋಽಯಮಿತಿ ಶಂಕಾಂ ಪರಿಹರನ್ ಹರಿಃ ॥**
**........................ '**

ಐತರೇಯೋಪನಿಷತ್ತಿನ ಈ ಭಾಗಕ್ಕೂ ಭಾರತದ ಶ್ವೇತಕೇತು-ಸವರ್ಚಲಾ ಸಂವಾದ ಪೂರ್ಣ ಹೋಲಿಕೆ ಎಂದು ಹೇಳುತ್ತಿಲ್ಲ. ಶ್ವೇತಕೇತುವಿನಲ್ಲಿರುವ ಭಗವಂತನ ಜಿಜ್ಞಾಸೆಯನ್ನು ಸುವರ್ಚಲಾ ಬಯಸಿ '**ಕೋ ಭವಾನ್**' ಎಂದು ಪ್ರಶ್ನಿಸುತ್ತಾಳೆ. ಆದ್ದರಿಂದ ಸೀಮಿತ ಹೋಲಿಕೆಯನ್ನು ಮಾತ್ರ ಇಲ್ಲಿ ತಿಳಿಯಬೇಕು.

೨. ಸುವರ್ಚಲೆಯು '**ನಾನು ನಿನ್ನನ್ನು ಅನುಸರಿಸಿ ಹೇಗಿರಬೇಕೆಂದು ತಿಳಿಸು**' ಎಂಬುದಾಗಿ ಕೇಳಿದಾಗ ಶ್ವೇತಕೇತುವು –

'ಶ್ರೇಷ್ಠರಾದ ಸತ್ಪುರುಷರು ಇರುವಂತೆ ಇರಬೇಕು. ಅವರು ಆಚರಿಸುವುದನ್ನೇ ಇತರರೂ ಆಚರಿಸುತ್ತಾರೆ' ಎಂದು ಲೋಕದ ನಿಯಮ ತಿಳಿಸುತ್ತಾನೆ ಶ್ವೇತಕೇತು. ತಾನು ಸತ್ಪುರುಷನೆಂಬ

ಭಾವ ಉತ್ತರದಲ್ಲಿ ವ್ಯಂಗ್ಯವಾಗಿದೆ (Suggested). ಹಾಗೆ ನಡೆಯದಿದ್ದರೆ ಆಗುವ ಸಾಮಾಜಿಕ ಅನರ್ಥಗಳನ್ನೂ ತಿಳಿಸುವುದಲ್ಲದೆ ಲೋಕದೃಷ್ಟಿಯಲ್ಲಿ ಭಗವಂತನ ಕ್ರೀಡೆ. ಭಗವಂತನಿಗೆ ಅನಂತ ವಿಭೂತಿಗಳಿವೆ. ಭೂಮಿಯಲ್ಲಿರುವ ಧೂಳಿನ ಕಣಗಳಂತೆ ಎಂದೂ ವಿವರಿಸುತ್ತಾನೆ. ಈ ಮಧ್ಯೆ 'ತತ್ತ್ವಮಸಿ' ವಾಕ್ಯಾರ್ಥದ ಛಾಯೆ ಇರುವ ವಾಕ್ಯಗಳೂ ಇಲ್ಲಿವೆ. ಅಲ್ಲದೆ ಸದಾಚಾರದ ಇತಿಮಿತಿಗಳು, ಲೋಕಮರ್ಯಾದೆ (Social Limitations - norms)ಗಳನ್ನೂ ಹೇಳುತ್ತಾ, ಇದನ್ನು ಅನುಸರಿಸದವರು ಅಸುರರೆಂದೇ ಶ್ವೇತಕೇತು ಹೇಳುತ್ತಾನೆ. ಧರ್ಮಸಾಂಕರ್ಯವನ್ನು ಮಾಡುವವರು ಅಸುರರೆಂದು ವಿವರಿಸುತ್ತಾನೆ[೧].

೩. ಶಬ್ದ ಶಬ್ದಾರ್ಥ, ಅಹಂ ಶಬ್ದದ ಅಂತರಾರ್ಥ, ಭಗವಂತನ ನಿರ್ವಿಕಾರ ಸ್ವರೂಪ (ಆಕಾಶದಂತೆ), ಭಗವಂತನ ವೇದಗಮ್ಯತ್ವವೇ ಮೊದಲಾದ ಅರ್ಥವಾಗಲು ಕಠಿನವಾದ ವಿಷಯಗಳ ಬಗ್ಗೆ ಶ್ವೇತಕೇತುವು ಪತ್ನಿಗೆ ಉಪದೇಶಿಸುತ್ತಾನೆ.

ಭಗವಂತನು ಸಾಕಲ್ಯೇನ ಶಬ್ದಗಮ್ಯನಲ್ಲದಿದ್ದರೂ ವೇದಗಮ್ಯನಾಗಿದ್ದಾನೆಂದು ಪತ್ನಿಗೆ ಉಪದೇಶಿಸುತ್ತಾನೆ. ಜಗವೆಲ್ಲ ಭಗವಂತನಿಂದ ವ್ಯಾಪ್ತವಾಗಿದೆ. ಅವನ ವಿಭೂತಿಗಳು ಐಶ್ವರ್ಯ ಹಲವು. ಅಗ್ನಿಸೂರ್ಯವಾಯುಗಳ್ಯಾವುವೂ ಭಗವತ್ಸ್ವರೂಪವನ್ನು ಪೂರ್ಣವಾಗಿ ತಿಳಿಸಲಾರರು. ಅವನು ನಮ್ಮ ಮನಸ್ಸಿನಲ್ಲಿದ್ದಾನೆ. ಆತ್ಮಜ್ಞಾನ ನಾನು ತಿಳಿದಿದ್ದು ಇಷ್ಟು ಭಗವಂತನಲ್ಲಿ ನನ್ನ ನಿನ್ನಲ್ಲಿರುವ ಜ್ಞಾನ ಇನ್ನೂ ಪೂರ್ಣವಾಗಿಲ್ಲ ದೃಢವಾಗಿಲ್ಲ. ಆದ್ದರಿಂದ ಈ ಅಜ್ಞಾನದ (ಸಂಸಾರ) ಬಂಧನದಲ್ಲಿದ್ದೇವೆ[೨].

---

೧ ಯದ್ಯದಾಚರತಿ ಶ್ರೇಷ್ಠಃ ತತ್ತದೇವೇತರೋ ಜನಃ।
ವರ್ತತೇ ತೇನ ಲೋಕೋಽಯಂ ಸಂಕೀರ್ಣಶ್ಚ ಭವಿಷ್ಯತಿ ॥
ಪರಮೇಶ್ವರಸ್ಯ ಸಂಕ್ರೀಡಾ ಲೋಕ ಸೃಷ್ಟಿರಿಯಂ ಶುಭೇ।
ಯಾವತ್ ಪಾಂಸವ ಉದ್ದಿಷ್ಟಾಸ್ತಾವತ್ಯೋಽಸ್ಯ ವಿಭೂತಯಃ।
ಯೇ ಮೂಢಾಸ್ತೇ ದುರಾತ್ಮಾನೋ ಧರ್ಮಸಂಕರಕಾರಕಾಃ।
ಮರ್ಯಾದಾಭೇದಕಾ ನೀಚಾ ನರಕೇ ಯಾಂತಿ ಜಂತವಃ।
ಆಸುರೀಂ ಯೋನಿಮಾಪನ್ನಾ ಇತಿ ದೇವಾನುಶಾಸನಮ್ ॥ – ೫೩/೫೯–೬೬

೨ ತದ್ಬ್ರಹ್ಮ ಪರಮಂ ಶುದ್ಧಮನೌಪಮ್ಯಂ ನ ಶಕ್ಯತೇ।
ನ ದೃಶ್ಯತೇ ತಥಾ ತಚ್ಚ ದೃಶ್ಯತೇ ಚ ಮತಿರ್ಮಮ ॥
ನ ಚಕ್ಷುಷಾ ನ ಮನಸಾ ನ ಚಾನ್ಯೇನ ಪರೋ ವಿಭುಃ।
ಚಿಂತ್ಯತೇ ಸೂಕ್ಷ್ಮಯಾ ಬುದ್ಧ್ಯಾ ವಾಚಾ ವಕ್ತುಂ ನ ಶಕ್ಯತೇ ॥
ವೇದಗಮ್ಯಂ ಪರಂ ಶುದ್ಧಮಿತಿ ಸತ್ಯಾ ಪರಾ ಶ್ರುತಿಃ।
ವೇದಗಮ್ಯಃ ಪರಃ ಶುದ್ಧ ಇತಿ ಮೇ ಧೀಯತೇ ಮತಿಃ ॥
ಅನೇನ ಪೂರ್ಣಮೇತದ್ಧಿ ಹೃದಿ ಭೂತಿಮಿಹೇಷ್ಯತಿ।
ಏತಾವದಾತ್ಮವಿಜ್ಞಾನಮೇತಾವದ್ ಯದಹಂ ಸ್ಮೃತಮ್ ॥

ಪತಿಯ ಉಪದೇಶದಿಂದ ಸಂತುಷ್ಟಳಾದಳು ಸುವರ್ಚಲಾ ದೇವಿ. ಪತಿಯು ಶಾಸ್ತ್ರದೃಷ್ಟಿಯಲ್ಲಿ ನಿರ್ದೇಶಿಸಿದಂತೆ ಯಾವಾಗಲೂ ಪತಿಸೇವೆಯಲ್ಲಿ ನಿರತಳಾಗಿ ತತ್ತ್ವದಲ್ಲಿ (ವಿಷ್ಣುವಿನಲ್ಲಿ) ಬುದ್ಧಿಯುಳ್ಳವಳಾಗಿದ್ದಳು. ಶ್ವೇತಕೇತುವೂ ನಿತ್ಯ ನೈಮಿತ್ತಿಕ ಕರ್ಮಾನುಷ್ಠಾನದಲ್ಲಿ ರತನಾಗಿ ಪತ್ನಿಯೊಡನೆ ಸರ್ವೋತ್ತಮನಾದ ಗೋವಿಂದ- ವಾಸುದೇವನಾಮಕ ಪರಮಾತ್ಮನಲ್ಲಿ ಮನಸ್ಸನ್ನಿರಿಸಿ ಗೃಹಸ್ಥಾಶ್ರಮ ಆಚರಿಸುತ್ತಾ ಇಬ್ಬರೂ ಬಹುಕಾಲ ಭಗವತ್ ಧ್ಯಾನ ಮಾಡಿ ಮೋಕ್ಷ ಹೊಂದಿದರು (ಭಗವಂತನನ್ನು)[೧].

ಧರ್ಮರಾಜ ನಿನ್ನ ಪ್ರಶ್ನೆಗೆ ಶ್ವೇತಕೇತು ಸುವರ್ಚಲಾ ದಂಪತಿಗಳ ಗಾರ್ಹಸ್ಥ್ಯ ಜೀವನವೇ ದೃಷ್ಟಾಂತವಾಗಿದೆ.

## ಸಂದೇಶಗಳು- ವಿವರಣೆಗಳು

೧. ಗೃಹಸ್ಥಾಶ್ರಮ ಪರಿಪಾಲನೆ ಮಾಡಿ ಮೋಕ್ಷ ಹೊಂದಿದ ದಂಪತಿಗಳ ಉಪಾಖ್ಯಾನವಿದು. ಧರ್ಮರಾಜನ ಪ್ರಶ್ನೆಗೆ ಉತ್ತರರೂಪವಾಗಿ ಭೀಷ್ಮರ ಉತ್ತರವಾಗಿ ಬಂದಿದೆ.

೨. ಸುವರ್ಚಲೆಯ ತಂದೆ ದೇವಲ ಮಹಾತಪಸ್ವೀ. ಮಗಳೂ ಮಹಾಪ್ರಾಜ್ಞೆ, ತನಗೆ ಎಂತಹ ವರ ಬೇಕೆಂದು ಕೇಳಿದ್ದೇ ಅಪ್ಪನಿಗೂ ಆಸೆ ಹೇಳುವವರೆಗೆ ಅರ್ಥವಾಗಲಿಲ್ಲ. ತಂದೆಗಿಂತ ಮಗಳೂ ಮಹಾಬುದ್ಧಿವಂತಳು. ಎಲ್ಲ ದೈವಾನುಗ್ರಹ, ಸತ್ಪ್ರಜೆ ಪಡೆಯಲೂ, ತಂದೆ ತಾಯಿಗಳು ಪಡೆದು ಬಂದಿರಬೇಕು ದೇವಲರಂತೆ.

೩. ತನ್ನ ಪ್ರಶ್ನೆಗೆ ಉತ್ತರಿಸಲಾರದ ಅನೇಕಾನೇಕ ಬ್ರಾಹ್ಮಣಕುಮಾರರು, ವಿದ್ವಾಂಸರು ತಿರುಗಿ ಹೋದರು. ಕೊನೆಗೂ ಸಿಕ್ಕ ಶ್ವೇತಕೇತು ಸುವರ್ಚಲೆಯನ್ನು ಮೆಚ್ಚಿಸಿ, ವರಿಸಿಯೇ ಬಿಟ್ಟ. ಆಕೆಗೆ ಬೇಕಾದ ಪತಿ ಸಿಕ್ಕ. ಆತನಿಗೆ ಬೇಕಾದ ಕನ್ಯೆಯೂ ಸಿಕ್ಕಳು. ಇಬ್ಬರೂ ಪ್ರತಿಭಾವಂತರು. ಅಂತಹ ಜೋಡಿಯೂ ಅಪರೂಪ.

೪. ಸುವರ್ಚಲೆ ಮದುವೆಯ ಭಾರವನ್ನು ತಂದೆಗೆ ಹಾಕಿ ತಂದೆಯನ್ನೇ ಕೇಳಲು ಶ್ವೇತಕೇತುವಿಗೆ ಹೇಳುತ್ತಾಳೆ. ಅದುವೇ ವೇದವಿಧಿ ಎನ್ನುತ್ತಾಳೆ. ಕನ್ಯೆಯ ಇತಿಮಿತಿ ತಿಳಿದು

---

ಆವಯೋರ್ನ ಚ ಸತ್ವೇ ವೈ ತಸ್ಮಾದಜ್ಞಾನ ಬಂಧನಮ್ ॥ - ೫೩/೮೨-೧೦೧

೧ ಏವಂ ಸುವರ್ಚಲಾ ಹೃಷ್ಟಾ ಪ್ರೋಕ್ತಾ ಭರ್ತ್ರಾ ಯಥಾರ್ಥವತ್ ।
ಪರಿಚರ್ಯಮಾಣಾ ಹ್ಯನಿಶಂ ತತ್ತ್ವಬುದ್ಧಿಸಮನ್ವಿತಾ ॥
ಭರ್ತಾ ಚ ತಾಮನುಪ್ರೇಕ್ಷ್ಯ ನಿತ್ಯನೈಮಿತ್ತಿಕಾನ್ವಿತಃ ।
ಪರಮಾತ್ಮನಿ ಗೋವಿಂದೇ ವಾಸುದೇವೇ ಮಹಾತ್ಮನಿ ॥
ಸಮಾಧಾಯ ಚ ಕರ್ಮಾಣಿ ತನ್ಮಯತ್ವೇನ ಭಾವಿತಃ ।
ಕಾಲೇನ ಮಹತಾ ರಾಜನ್ ಯಸ್ಮಾತ್ ತ್ವಂ ಪರಿಪೃಚ್ಛಸಿ ॥
ಗಾರ್ಹಸ್ಥ್ಯಂ ಚ ಸಮಾಸ್ಥಾಯ ಗತೌ ಜಾಯಾಪತೀ ಪರಮ್ ॥ - ೫೩/೧೦೨-೧೦೫

ವರ್ತಿಸುತ್ತಾಳೆ. ಹಾಗಿರಬೇಕು ಕನ್ಯೆಯರು. ಎಲ್ಲವನ್ನೂ ತಾನೇ ನಿರ್ಧರಿಸುವುದು ಮುಂದೆ ಅನೇಕ ಸಮಸ್ಯೆಗಳಿಗೆ (ಕಾರಣ) ಎಡೆಯಾಗಬಹುದು. ಕಾರ್ಯಾಕಾರ್ಯವ್ಯವಸ್ಥೆಗೆ ಶಾಸ್ತ್ರವಿದೆ. ಅದನ್ನು ಕಾರ್ಯಾಚರಣೆ ತರುವ ಜವಾಬ್ದಾರಿ ಪಾಲಕರದೇ ಹೊರತು ಕನ್ಯೆ/ ವರರದ್ದಲ್ಲ.

೫. ಇಂತಹ ವಧುವರರು ನೋಡಿದ ಮುನಿಗಳು ಪರಮಾತ್ಮನ ಸಾನ್ನಿಧ್ಯ ಕಂಡರು. ಹಾಗಿರಬೇಕು ಜೊಡಿ ವರವಧುಗಳು (ಲಕ್ಷ್ಮೀನಾರಾಯಣರ)

೬. ಮದುವೆ ಮೊದಲು ಕನ್ಯೆ ವರ ಪರೀಕ್ಷೆ ಮಾಡಿದಳು. ಮದುವೆಯಾದ ಮೇಲೆ ಪತಿ ಪತ್ನಿಗೆ ಹೇಗಿರಬೇಕೆಂದು ಬೋಧಿಸಿದ, ವೇದೋಕ್ತರೀತಿಯಲ್ಲಿರಲು ಅರುಹಿದ. ಆಕೆಯೂ ಒಪ್ಪಿದಳು. ಅದುವೇ ನಿಜವಾದ ದಾಂಪತ್ಯ. ವೇದೋಕ್ತ ಆಚರಣೆಗೆ ಇಬ್ಬರೂ ಸಿದ್ಧರಾಗಿರಬೇಕು.

೭. ಸಹಧರ್ಮಿಣಿಯಾಗಿರಲು ಒಪ್ಪುತ್ತಾಳೆ ಸುವರ್ಚಲಾ. ಮದುವೆಯ ನಂತರ ಇಬ್ಬರೂ ಭಗವತ್ಪರ ಚಿಂತನೆಯಲ್ಲಿ ತೊಡಗುತ್ತಾರೆ. ಗೃಹಸ್ಥಧರ್ಮ ಪರಿಪಾಲಿಸುತ್ತಾ ಸತ್ಸಂತಾನವನ್ನು ಪಡೆಯುತ್ತಾರೆ. ಅದುವೇ ನಿಜವಾದ ದಾಂಪತ್ಯ.

೮. ವಿವಾಹಪೂರ್ವದಲ್ಲಿಯೇ ಜಾಣೆಯಾದ ಸುವರ್ಚಲಾ ಆಧ್ಯಾತ್ಮಿಕ ಜ್ಞಾನದ ಹಸಿವನ್ನು ಪತಿಯನ್ನು ಪ್ರಶ್ನಿಸುವ ಮೂಲಕ ಸೂಕ್ತ ಉತ್ತರಗಳನ್ನು ಪಡೆಯುತ್ತಾ ನೀಗಿಸಿಕೊಳ್ಳುತ್ತಾಳೆ. ಪತ್ನಿ ಮಕ್ಕಳನ್ನು ಹೆರುವ ಯಂತ್ರವಲ್ಲ, ಕೇವಲ ಪತಿಸೇವೆ, ಮನೆಯ ಜವಾಬ್ದಾರಿ ನಿರ್ವಹಣೆ ಮಾತ್ರವಲ್ಲ, ಜ್ಞಾನಸಂಪಾದನೆಗೆ ಪ್ರಾಮಾಣಿಕ ಪ್ರಯತ್ನ ಮಾಡಬೇಕು ಪತಿ ಮೂಲಕ. ಕಾರಣ **'ಪತಿರೇವ ಗುರುಸ್ತ್ರೀಣಾಂ'**(ಪದ್ಮಪುರಾಣ). ಸತಿಗೆ ಪತಿಯೇ ಗುರು. ಆದ್ದರಿಂದ ಜ್ಞಾನ ಪಡೆಯುತ್ತಾಳೆ.

೯. ಜ್ಞಾನ ಪಡೆದರೂ ತನ್ನ ಕರ್ತವ್ಯ ನಿಲ್ಲದು. ಮತ್ತೂ ಶ್ರದ್ಧೆಯಿಂದ ಪತಿಸೇವೆ ಮಾಡುತ್ತಾ ಪತಿಯೊಡನೆ ಪರಲೋಕಸಾಧನೆ ಮಾಡಿದವಳು ಸುವರ್ಚಲಾ. ಅದಕ್ಕೆ ಸಹಕಾರ, ಸದುಪದೇಶ ಮಾಡಿದವನು ಶ್ವೇತಕೇತು. ಹಾಗಿರಬೇಕು ದಾಂಪತ್ಯ.

೧೦. ಇದೆಲ್ಲಕ್ಕೂ ಪತಿಯ ಪಾತ್ರ ಹಿರಿದು. ತಾನು ಸದಾಚಾರಿಯಾಗಿ ಶಾಸ್ತ್ರ ವಿದ್ವಾಂಸನಾದಾಗಲೇ ಸಂಸಾರನೌಕೆ ಸುಖವಾಗಿ ಸಾಗರದಾಟುತ್ತದೆ. ಸತಿಯನ್ನು ಸನ್ಮಾರ್ಗದಲ್ಲಿ ನಡೆಸಿ, ತಾನೂ ನಡೆದು ಇಬ್ಬರೂ ಸದ್ಗತಿಯನ್ನು ಹೊಂದಬಹುದು. ಹೀಗಾಗಿ ಇದೊಂದು ಆದರ್ಶ ದಂಪತಿಯೊಂದರ ಯಶಸ್ಸಿನ ಗಾಥೆ.

ಇತ್ಯಾದಿ.....

# ಸುವರ್ಚಲೋಪಾಖ್ಯಾನ

ಧರ್ಮರಾಜನ ಪ್ರಶ್ನೆ -

೧. ತಪಸ್ಸೆಂದರೇನು? ಅದು ಉಪವಾಸವೋ, ವೇದೋಕ್ತಾಚಾರವೋ, ಶಾಸ್ತ್ರವೋ (ಶಾಸ್ತ್ರಾಧ್ಯಯನವೋ) ಹೇಳು?

ಭೀಷ್ಮರ ಉತ್ತರ -

೧. ತಪೋಧನರು (ತಪಸ್ಸನ್ನೇ ತಮ್ಮ ಐಶ್ವರ್ಯ ಸಂಪತ್ತೆಂದು ಬಗೆದವರು) ಪಕ್ಷ ಮಾಸಗಳಲ್ಲಿ ಮಾಡುವ ಉಪವಾಸಗಳನ್ನು ತಪಸ್ಸೆನ್ನುತ್ತಾರೆ.

೨. ವೇದಪಾರಂಗತರು (ಪೂರ್ಣವೇದಾಧ್ಯಯನ ಮಾಡಿದವರು) ವೇದೋಕ್ತವ್ರತಗಳನ್ನು ತಪಸ್ಸೆನ್ನುವರು.

೩. ವೇದಪಾರಾಯಣವೇ ತಪಸ್ಸೆನ್ನುವರು ಕೆಲವರು.

೪. ವಿಧ್ಯುಕ್ತ ಸದಾಚಾರ, ಅಧ್ಯಾತ್ಮವಿದ್ಯೆಗಳು ತಪಸ್ಸೆನ್ನುವರು ಮತ್ತೆ ಕೆಲವರು.

೫. ತ್ಯಾಗ, ಶಾಂತಿ (ಭಗವನ್ನಿಷ್ಠೆ), ಇಂದ್ರಿಯನಿಗ್ರಹ, ಬ್ರಹ್ಮಚರ್ಯಗಳೇ ತಪಸ್ಸೆನ್ನುವರು ಹಲವರು.

೬. ಯಾವಾಗಲೂ ಭಗವದ್ಧ್ಯಾನ(ಭಗವಂತನ ಬಳಿ ಇರುವುದು) ಮಾಡುವವನು ನಿತ್ಯೋಪವಾಸಿ.

೭. ಸದಾ ಮನನಶೀಲನೂ, ನಿಷಿದ್ಧ ಆಹಾರ ಬಿಟ್ಟವನೂ,ನಿತ್ಯ ಅತಿಥಿ ಪ್ರಿಯನೂ, ಮಧ್ಯಾಹ್ನ ರಾತ್ರಿ ಭೋಜನಗಳ ನಡುವೆ ಯಾವುದೇ ಆಹಾರ ಸ್ವೀಕರಿಸದವನು ನಿತ್ಯೋಪವಾಸಿ ಎನ್ನಿಸುವನು.

೮. ಋತುಕಾಲದಲ್ಲಿ ಭಾರ್ಯಾಸಮಾಗಮ ಮಾಡುವವನು ಮಹಾವ್ರತನೆನಿಸುತ್ತಾನೆ.

೯. ಅತಿಥಿ ಭೃತ್ಯರು ಭೋಜನ ಮಾಡಿದ ಮೇಲೆ ಉಣ್ಣುವವನು, ಯಜ್ಞಶೇಷ ಭುಂಜಿಸುವವನು ಹೀಗೆ ಅನೇಕ ವಿಧವಾದ ತಪಸ್ಸುಗಳನ್ನು ಜ್ಞಾನಿಗಳು ಹೇಳುತ್ತಾರೆ.

೧೦. ಯಾವ ದ್ವಿಜರು ನಿತ್ಯನೈಮಿತ್ತಿಕ ಕರ್ಮ ಆಚರಿಸುತ್ತಾರೋ ಅವರು ನಿಜವಾದ ಬ್ರಾಹ್ಮಣರು ಅವರು ಅಪ್ಸರೆಯರಿಂದ ಪೂಜಿತರಾಗಿ ದಿವ್ಯಭೋಗಗಳಿಂದ ರಮಿಸುತ್ತಾರೆ (ಪರಲೋಕದಲ್ಲಿ).

೧೧. ಜ್ಞಾನಿಗಳು ಭಗವಂತನ ಜ್ಞಾನವನ್ನೇ ತಪಸ್ಸೆನ್ನುವರು. ಪರಮಾತ್ಮನು ಅಂತರ್ಯಾಮಿಯಾಗಿದ್ದು ನಿಯಾಮಕನಾಗಿದ್ದಾನೆಂದು ಅವನಲ್ಲಿ ಮಾಡುವ ಸದ್ಭಕ್ತಿಯೇ

ತಪಸ್ಸೆನ್ನುವರು (೬-೫೭/೨-೧೧ ಶ್ಲೋ.).

ಧರ್ಮರಾಜ! ಮೇಲೆ ಹೇಳುದುವೇ ವಿವಿಧ ತಪಸ್ಸುಗಳು.

ಧರ್ಮರಾಜನೇ! ಬ್ರಾಹ್ಮಣ ಸಮೂಹಕ್ಕೆ ಸುವರ್ಚಲಾ ಎಂಬ ಯೋಗನಿಷ್ಠಳಾದ ಕನ್ಯೆಯೊಬ್ಬಳು ತನ್ನಲ್ಲಿರುವ ದ್ವಂದ್ವ ಹಾಗೂ ಸಂಶಯಗಳನ್ನು ಹೇಗೆ ಕಳೆದುಕೊಂಡಳು ಎಂಬುದನ್ನು ಹೇಳುತ್ತೇನೆ ಕೇಳು ಎಂದರು ಭೀಷ್ಮರು.

ತನಗೆ ವರಾನ್ವೇಷಣೆಗೆ ತೊಡಗಿದ ತಂದೆಗೆ ಸುವರ್ಚಲೆಯು 'ನನ್ನನ್ನು ಒಳ್ಳೆಯ ಕಣ್ಣುಗಳಿರುವ ಹಾಗೂ ಅಂಧನಾದ(ವರನಿಗೆ) ಕೊಡು' ಎಂದು ಬೇಡಿದಳು.

ಆಗ ಅವರ ತಂದೆ 'ಅಂಧನೂ, ಕಣ್ಣಿರುವವನೂ ಆಗಿರುವವನಿಗೆ ಕೊಡಬೇಕೆಂಬ ನಿನ್ನ ವಿಚಾರ ಪ್ರಾರ್ಥನೆಗೆ ಯೋಗ್ಯವಲ್ಲ, ಅದು ಒಬ್ಬ ಹುಚ್ಚಿಯ ಮಾತಿನಂತಿದೆ' ಎಂದನು. ಅದಕ್ಕೆ ಕನ್ಯೆ 'ನಾನು ಉದ್ದೇಶಪೂರ್ವಕವಾಗಿಯೇ ವಿಚಾರ ಮಾಡಿಯೇ ಹೇಳುತ್ತಿದ್ದೇನೆ. ಅಂಧನೂ, ಅನಂಧನೂ ಆದವನೇ ವೇದಗಳನ್ನು ಬಲ್ಲವನು. ಅವನು ನನ್ನನ್ನು ಮದುವೆಯಾಗಲು ಅರ್ಹ. ನನ್ನನ್ನು ಕೊಡಲು ಇಚ್ಛಿಸುವ ಪುರುಷರನ್ನು ಕರೆಸು. ಅವರಲ್ಲಿ ನಾನೇ ಯೋಗ್ಯನಾದ ಒಬ್ಬರನ್ನು ಆರಿಸಿಕೊಳ್ಳುವೆ' ಎಂದಳು ಮಗಳು.

ಮಗಳ ಅಪೇಕ್ಷೆಯ ಮೇರೆಗೆ ತಂದೆಯು ಕನ್ಯಾಪೇಕ್ಷಿಗಳಾದ ಋಷಿಕುಮಾರರನ್ನು ಕರೆಸಿ ಅವರಲ್ಲಿ ಯಾರನ್ನಾದರೂ ಆರಿಸಲು ಮಗಳಿಗೆ ಹೇಳಿದ. ಅದರಂತೆ ಸುಂದರಿಯಾದ ಸುವರ್ಚಲೆಯು (ಮುಷ್ಟಿಯಲ್ಲಿ ಹಿಡಿಯಬಹುದಾದ ನಡುದೇಹ, ಸೊಂಟವುಳ್ಳ) ತಪಸ್ವಿಗಳನ್ನು 'ನಿಮ್ಮಲ್ಲಿ ಅಂಧನೂ, ಅನಂಧನೂ ಆದವರು ಯಾರಾದರೂ ಇದ್ದವರು ನನ್ನನ್ನು ವರಿಸಬಹುದು' ಎಂದಳು. ಅವರು ಏನೂ ಉತ್ತರಿಸದೆ ಬಂದ ದಾರಿಗೆ ವಾಪಸು ಹೊರಟರು.

ಬಳಿಕ ತಂದೆಯ ಮನೆಯಲ್ಲಿಯೇ ಸುವರ್ಚಲೆ ಇದ್ದಾಗ ಒಮ್ಮೆ ಕಹೋಳನ ಪತ್ನಿಯ ಸಹೋದರನಾದ ಶ್ವೇತಕೇತು ಕನ್ಯೆಗೆ 'ನಾನು ವಿಶಾಲನಯನನು(ಕಣ್ಣುಳ್ಳವನೂ) ಮತ್ತು ಅಂಧನೂ ಆಗಿದ್ದೇನೆ. ನನ್ನನ್ನು ಸ್ವೀಕರಿಸು ಎಂದ. ನಾನು ನಿನ್ನ ಹೇಳಿಕೆಯನ್ನು ಪರೀಕ್ಷಿಸಿ ಸ್ವೀಕರಿಸುವೆ ಎಂದು ಸುವರ್ಚಲೆ ಹೇಳಿದಳು. ಆಗ ಶ್ವೇತಕೇತು ಬ್ರಾಹ್ಮಣನು 'ನನ್ನ ಮನಸ್ಸು ಶಬ್ದ, ಸ್ಪರ್ಶ, ರೂಪ, ರಸಗಂಧಗಳಲ್ಲಿ ಹೋಗುವುದಿಲ್ಲ, ಕಣ್ಣಿಗೆ ಕಂಡರೂ ಅವುಗಳಲ್ಲಿ ಪ್ರವೃತ್ತನಾಗುವುದಿಲ್ಲ, ಆದ್ದರಿಂದ ನಾನು **ಅಂಧ**. ವಿಷಯಾಸಕ್ತಿ ಇಲ್ಲ, ನಾನು ಯಾರ ಅನುಗ್ರಹದಿಂದ ನೋಡುತ್ತೇನೆ, ಕೇಳುತ್ತೇನೆ ಎಲ್ಲ ಜ್ಞಾನಗಳನ್ನು ಹೊಂದುತ್ತೇನೆಯೋ ಅಂತಹ ಭಗವಂತನನ್ನು ನೋಡಲು, ಕೇಳಲು ಇಚ್ಛಿಸುತ್ತೇನೆ. ಭಗವಂತನ ವಿಷಯದಲ್ಲಿ ಕಣ್ಣಿದೆ ಆದ್ದರಿಂದ **ಅನಂಧ**.

ಹೀಗೆ ನಾನು ಅಂಧನೂ ಅನಂಧನೂ ಹೌದು. ಅಹಂ ಮಮತಾದಿಗಳು ನನಗಿಲ್ಲ. ಭಗವಂತನನ್ನು ಸರಿಯಾಗಿ ತಿಳಿದಿದ್ದೇನೆ. ನಿನಗೆ ಮತ್ತೇನು ಹೇಳಲಿ ಎಂದ ಶ್ವೇತಕೇತು ಸುವರ್ಚಲೆಗೆ.

ಸುವರ್ಚಲೆ ಶ್ವೇತಕೇತುವಿನ ಅಭಿಪ್ರಾಯ ತಿಳಿದು ಸಂತುಷ್ಟಳಾಗಿ ಆ ಮಹಾಮುನಿಯನ್ನು ನಮಸ್ಕರಿಸಿ ಪೂಜಿಸಿದಳು. ಆತನು ಆಕೆಯನ್ನು ಪತ್ನಿಯಾಗಿ ಸ್ವೀಕರಿಸಿದನು. ವೈರಾಗ್ಯದಿಂದ ಕೂಡಿದ ಆ ಕನ್ಯೆಯು ಅಂತಹ ಉತ್ತಮಪತಿಯನ್ನು ಹೊಂದಿದಳು. ಆದ್ದರಿಂದ ಒಂದೊಂದು ಶಬ್ದಕ್ಕೂ ಬೇರೆ ಬೇರೆ ಅರ್ಥವಿದೆ ಎನ್ನಲು ಇವಳ ಮಾತೇ ಉದಾಹರಣೆಯಾಗಿದೆ.

ರಾಜನ್! ನಿನ್ನ ಪ್ರಶ್ನೆಗೆ ಉತ್ತರಿಸಿದ್ದೇನೆ. ಮತ್ತೇನು ಕೇಳುವೆ ಎಂದು ಭೀಷ್ಮರು.

**ವಿ.ಸೂ. : ಈ ೫೭ನೇ ಅಧ್ಯಾಯ ೫೩ರ ಪುನರಾವರ್ತಿಯಾಗಿದೆ. ಭಗವತ್ಪಜ್ಞೆಯ ಚಕ್ಷುಸ್ಸು ತುಂಬಾ ಮುಖ್ಯ ಎಂದು ತಿಳಿಸಲು ಈ ಅಭಿಪ್ರಾಯವನ್ನು ಭೀಷ್ಮರು ಮತ್ತೆ ಹೇಳಿದ್ದಾರೆ. ಇದನ್ನು ಲಕ್ಷಾಲಂಕಾರದಲ್ಲಿ ಗುರುರಾಜರು ವ್ಯಾಖ್ಯಾನಿಸಿ ಹೀಗೆ ಹೇಳಿದ್ದಾರೆ. ಆದ್ದರಿಂದ ಇದು ಕೆಲವರು ಭಾವಿಸಿದಂತೆ ಪ್ರಕ್ಷಿಪ್ತವಲ್ಲ ಎಂದು ತಿಳಿಯುವುದು.**

'ಶಬ್ದೇ ಸ್ಪರ್ಶೇ ತಥಾ ರೂಪೇ ರಸೇ ಗಂಧೇ ಸಹೇತುಕಮ್ ।
ನ ಮೇ ಪ್ರವರ್ತತೇ ಚೇತೋ ನ ಪ್ರತ್ಯಕ್ಷಂ ಹಿ ತೇಷು ಮೇ ॥
**ಆಲೋಚನೋऽಹಂ** ತಸ್ಮಾದ್ಧಿ ನ ಗತಿರ್ವಿದ್ಯತೇ ಯತಃ ।
ಯೇನ ಪಶ್ಯತಿ ಸುಶ್ರೋಣಿ ಭಾಷತೇ ಸ್ಪೃಶತೇ ಪುನಃ ॥
ತಚ್ಚಾಕ್ಷುರ್ವಿದ್ಯತೇ ಮಹ್ಯಂ ಯೇ ಪಶ್ಯತಿ ವೈ ಸ್ಫುಟಮ್ ।
**ಸುಲೋಚನೋऽಹಂ** ಭದ್ರೇ ವೈ.................. ॥
ಸರ್ವಮಸ್ಮಿನ್ನ ಮೇऽವಿದ್ಯಾ ವಿದ್ವಾನ್ ಹಿ ಪರಮಾರ್ಥತಾ ॥

**ಲಕ್ಷಾಲಂಕಾರ :**

**ತಚ್ಚಕ್ಷುರ್ವಿದ್ಯತೇ ಮಹ್ಯಂ ಇತ್ಯತ್ರ ಪೂರ್ವಮಾಂತಂ ಜ್ಞಾತುಂ ಅಶಕ್ಯತ್ವಾತ್ ತಚ್ಚಕ್ಷುರ್ವಿದ್ಯತೇ । ತೇನಾಂಧತ್ವಂ । ಅನ್ಯತ್ರ ಚಕ್ಷುರಸ್ತಿ ತೇನಾಂಧತ್ವಮಿತ್ಯ-ಕ್ತಮಿತ್ಯುಕ್ತಮ್ । ಇದಾನೀಂ ವಿಷಯೇಷು ಚಕ್ಷುರ್ನಾಸ್ತಿ ಯಥಾಯೋಗ್ಯಂ ಹರಿರೂಪಚಕ್ಷುರಸ್ತಿ । ತೇನಾನಂಧತ್ವಂ ಉಚ್ಯತೇ ಇತಿ ವಿಭಾಗೋ ದ್ರಷ್ಟವ್ಯಃ । ಅತ ಏವ ಪುನರಾರಂಭಃ । ಸರ್ವಮಸ್ಮಿನ್ನ ಮೇऽವಿದ್ಯಾ ಇತ್ಯತ್ರ ಅಸ್ಮಿನ್ ಪರಮಾತ್ಮನಿ ಸರ್ವಂ ಜಗದಸ್ತಿ । ಮೇ ಅವಿದ್ಯಾ ಅಹಂ ಮಮತಾ ರೂಪಾ ನಾಸ್ತಿ ।**

**-ಮ.ಭಾ.ಶಾಂ.ಪ.ಮೋಕ್ಷಧರ್ಮ(ಸಂಸ್ಕೃತ ಸಂಪಾದನೆ ಭಾಗ.೧೯ ಪುಟ ೩೫೫ (ತತ್ತ್ವಸಂಶೋಧನ ಸಂಸತ್, ಉಡುಪಿ) ಪಲಿಮಾರುಮಠ, ೨೦೧೯.**

**ಸಂದೇಶಗಳು :** ಅಧ್ಯಾಯ ೫೩ಕ್ಕೆ ಕೊಟ್ಟಿದ್ದೇ ಇದಕ್ಕೂ ಅನ್ವಯಿಸುತ್ತದೆ.

*****

# ಅನುಶಾಸನಪರ್ವ

## ದಾನಧರ್ಮಪರ್ವ

## ೧೩೧. ಗೌತಮಿ-ವ್ಯಾಧ-ಸರ್ಪ-ಮೃತ್ಯು-ಕಾಲ ಇವರ ಸಂವಾದ

ಧರ್ಮರಾಜನು ಭೀಷ್ಮರನ್ನು ಕುರಿತು 'ತಾತ! ನನಗೆ ಅನೇಕ ವಿಧವಾದ ಮನಃ ಶಾಂತಿಗೆ ಸಾಧಕಗಳಾದ ಉಪಾಖ್ಯಾನಗಳನ್ನು ಹೇಳಿದ್ದೀಯಾ. ಆದರೂ ನೆಮ್ಮದಿ ಕದಡುವ ಅಪರಾಧಗಳನ್ನು ಮಾಡಿದ ನನ್ನ ಮನಸ್ಸಿಗೆ ಶಾಂತಿ ಮಾತ್ರ ಸಿಕ್ಕಿಲ್ಲ[೧].'

**ಹೀಗೆ ಧರ್ಮರಾಜನು ತನ್ನ ಅಪರಾಧ ಪ್ರಜ್ಞೆಯನ್ನು ತಾತನಿಗೆ ಬಹುವಿಧವಾಗಿ ವಿಲಾಪಮಾಡುತ್ತಾ ವಿಶೇಷವಾಗಿ ಭೀಷ್ಮರ ಶರತಲ್ಪಶಯನ ಸ್ಥಿತಿಯಿಂದ ಅವರಿಗಾಗುತ್ತಿರುವ ಹಿಂಸೆಯನ್ನು ನೋಡಿ ತಾನು ಎಂಥ ದುರ್ಗತಿಗೆ ಹೋಗುವೆನೋ ಎಂದು ಪೇಚಾಡುತ್ತಾನೆ. ದುರ್ಯೋಧನನು ನಿನ್ನ ಈ ಗತಿಯನ್ನು ನೋಡಲಿಲ್ಲ, ನಾನೂ ಬದುಕುವ ಬದಲು ಮೃತನಾಗಿದ್ದರೆ ಒಳ್ಳೆಯದಾಗಿತ್ತೇನೋ! ಎಂದು ಧರ್ಮರಾಜನು ದುಃಖಿಸುತ್ತಾನೆ. ಅಂತೂ ನಾವು ಪಾಪಕರ್ಮಗಳನ್ನು ಮಾಡುವ ಸಲುವಾಗಿಯೇ ಬ್ರಹ್ಮನಿಂದ ಸೃಷ್ಟಿಸಲ್ಪಟ್ಟಿದ್ದೇವೆ ಎಂದು ನಾನು ಭಾವಿಸಿದ್ದೇನೆ. ಆದ್ದರಿಂದ ತಾತ! ನಾವು ಈ ಪಾಪದಿಂದ ಪರಲೋಕದಲ್ಲಾದರೂ ಪಾರಾಗುವ ಮಾರ್ಗವನ್ನು ಹೇಳು ಎಂದು ಧರ್ಮರಾಜ ಭೀಷ್ಮರನ್ನು ಪ್ರಾರ್ಥಿಸಿದ[೨].**

---

೧ (ಉಪಾಖ್ಯಾನಗಳನ್ನೂ ಕೇಳಿಯೂ ಎಂದು ಗೀತಾಪ್ರೆಸ್, ಟಿ.ಆರ್.ಕೃಷ್ಣಾಚಾರ್ ಪಾಠ, ಪುಣೆಯ ಭಂಡಾರಕರ್ ಹಾಗೂ ವೈಷ್ಣವ ಪಾಠಗಳಲ್ಲಿ (ಮಾಡಿಯೂ ಕೃತ್ವಾ ಎಂದು ಪಾಠಗಳಿವೆ). ಧರ್ಮರಾಜನು ತಾನು ಭೀಷ್ಮಾದಿಗಳನ್ನು ಹಿಂಸಿಸಿ(ಸಂಹಾರ) ಮಾಡಿ, ಮಾಡಿಸಿ ಅಪರಾಧಿ ಎಂದು ಭಾವಿಸಿರುವುದರಿಂದ ಕೃತ್ವಾ ಎನ್ನುವ ಪಾಠವೇ ಸ್ವರಸ ಎಂದು ತೋರುತ್ತದೆ. ಉಪಾಖ್ಯಾನದ ಮುಂದಿನ ಶ್ಲೋಕಗಳಲ್ಲಿ ಇದು ಸರಿ ಎಂದು ವಿದಿತವಾಗುತ್ತದೆ ಶ್ಲೋಕ ಹೀಗಿದೆ.
ಶಮೋ ಬಹುವಿಧಾಕಾರಃ ಸೂಕ್ಷ್ಮ ಉಕ್ತಃ ಪಿತಾಮಹ।
ನ ಚ ಮೇ ಹೃದಯೇ ಶಾಂತಿರಸ್ತಿ ಕೃತ್ವೇ (ಶ್ರುತ್ವೇ) ದಮೀದೃಶಮ್।
ಮುಂದಿನ ಶ್ಲೋಕ ವೈಷ್ಣವ ಪಾಠವನ್ನು ದೃಢೀಕರಿಸುತ್ತದೆ
ಸ್ವ ಕೃತೇ ಕಾ ನು ಶಾಂತಿಃ ಸ್ಯಾಚ್ಛಮಾದ್ಬಹುವಿಧಾದಪಿ॥ - ೧/೨

೨ ನೂನಂ ಹಿ ಪಾಪಕರ್ಮಾಣೋ ಧಾತ್ರಾ ಸೃಷ್ಟಾಃ ವಯಂ ನೃಪ।
ಅನ್ಯಸ್ಮಿನ್ನಪಿ ಲೋಕೇ ಹಿ ಯಥಾ ಮುಚ್ಯೇಮ ಕಿಲ್ಬಿಷಾತ್।
ತಥಾ ಪ್ರಶಾಧಿ ಮಾಂ ರಾಜನ್ ಮಮ ಚೇದಿಚ್ಛಸಿ ಪ್ರಿಯಮ್॥ - ೧/೧೧,೧೨

ಅದಕ್ಕೆ ಭೀಷ್ಮರು ಧರ್ಮರಾಜನು ಕ್ಷತ್ರಿಯ ಧರ್ಮಾನುಷ್ಠಾನ ವಿಷಯದಲ್ಲಿ ನೀನು ಪರತಂತ್ರನೇ ಆಗಿದ್ದರೂ, ನೀನೇ ಹೇಗೆ ನನ್ನ ಅಂತ್ಯಕ್ಕೆ, ನನಗಾಗುತ್ತಿರುವ ಹಿಂಸೆ ಕಾರಣ ಎಂದು ಭಾವಿಸಿದ್ದೀಯಾ? ಕಾರಣ 'ಕರ್ಮ' ವಿಷಯವು ಅತೀಂದ್ರಿಯ ಹಾಗೂ ಅತಿಸೂಕ್ಷ್ಮವಾದುದು. ಅದರ ಕಾರಣಾಕಾರಣಗಳನ್ನು ನಿರ್ಧರಿಸುವುದು ಸುಲಭವಲ್ಲ[೧]. ಈ ವಿಷಯದಲ್ಲಿ (ಕರ್ಮಕಾರಣದ) ಹಿಂದೆ ಮೃತ್ಯು- ಗೌತಮಿ-ಕಾಲ-ವ್ಯಾಧ-ಸರ್ಪಗಳ ಮಧ್ಯೆ ನಡೆದ ಸಂವಾದರೂಪ ಇತಿಹಾಸವನ್ನು ಜ್ಞಾನಿಗಳು ಹೇಳುತ್ತಾರೆ. ಅದನ್ನು ಕೇಳಿದರೆ ನಿನಗೆ ಸಮಾಧಾನವಾಗುತ್ತದೆ ಎಂದು ಭೀಷ್ಮರು ಧರ್ಮರಾಜನಿಗೆ ಹೇಳಿದರು.

ಗೌತಮೀ ಎಂಬ ವೃದ್ಧಳು ತುಂಬಾ ಶಾಂತಸ್ವಭಾವದವಳು. ಒಂದು ಸರ್ಪದಿಂದ ಕಚ್ಚಲ್ಪಟ್ಟು ಮೃತನಾದ ತನ್ನ ಮಗನನ್ನು ನೋಡಿದಳು. ನಂತರ ಅರ್ಜುನಕನೆಂಬ ವ್ಯಾಧನು ಆ ಹುಡುಗನನ್ನು ಕಚ್ಚಿದ ಸರ್ಪವನ್ನು ಹಗ್ಗದಿಂದ (ಸ್ನಾಯುಪಾಶ) ಕಟ್ಟಿಕೊಂಡು ಗೌತಮಿಗೆ ತೋರಿಸುತ್ತಾ ಹೇಳಿದ. 'ನಿನ್ನ ಮಗನನ್ನು ಕೊಂದ ಈ ಸರ್ಪವನ್ನು ಬೆಂಕಿಯಲ್ಲಿ ಹಾಕಲೇ? ತುಂಡುತುಂಡಾಗಿ ಕತ್ತರಿಸಲೇ? ಏಕೆಂದರೆ ಬಾಲಹತ್ಯೆಯನ್ನು ಮಾಡಿದ ಈ ಪಾಪಿಯು ಹೆಚ್ಚು ಕಾಲ ಬದುಕಿರಬಾರದು.

ಅದಕ್ಕೆ ಗೌತಮಿಯು ಈ ಸರ್ಪವನ್ನು ಬಿಟ್ಟು ಬಿಡು. ನಿನಗೆ ವಿವೇಕವಿಲ್ಲ. ಆಗಬೇಕಾದುದು ಆಗಿರುವಾಗ (ನಡೆಯಬೇಕಾದುದು ನಡೆದಿರುವಾಗ) ಯಾರು ತಾನೇ ಇವನನ್ನು ಕೊಲ್ಲು ಎಂದು ಹೇಳುತ್ತಾರೆ. ಉಪದೇಶ ಮಾಡುತ್ತಾರೆ[೨]. ಯಾವನು ತಾನೇ ತನ್ನನ್ನು ಪಾಪದಿಂದ ಭಾರವುಳ್ಳವನನ್ನು ಮಾಡಿಕೊಳ್ಳುತ್ತಾನೆ (ಕೊಲ್ಲು ಎಂದು ಹೇಳಿ ಪಾಪದ ಭಾರ ಹೊಂದುತ್ತಾನೆ)? ಗೌತಮಿ ವ್ಯಾಧನಿಗೆ ಸರ್ಪವನ್ನು ಕೊಲ್ಲು ಎಂದರೆ ಆಕೆಗೆ ಪಾಪ ಬರುತ್ತದೆ. ಕಾರಣ ಆಗಬೇಕಾದುದು ಪುತ್ರಮರಣ, ಆಗಿಹೋಗಿದೆ. ಸರ್ಪವಧೆಯಿಂದ ಮಗನು ಮತ್ತೆ ಹುಟ್ಟಲಾರನಷ್ಟೇ. ಇದೇ ಮುಂದಿನ ಶ್ಲೋಕದಲ್ಲಿದೆ[೩]. ಗೌತಮಿ ಮುಂದುವರೆದು 'ಲೋಕದಲ್ಲಿ ಧರ್ಮಾಚರಣೆ ಮಾಡುವವರು ಹಗುರವಾಗಿ ನೀರಿನಲ್ಲಿ ನೌಕೆಗಳು ತೇಲಿ ಸಂಸಾರಸಮುದ್ರ ದಾಟುತ್ತಾರೆ. ಆದರೆ ಪಾಪ ಮಾಡಿ ಅದರ ಭಾರದಿಂದ ನೀರಿನಲ್ಲಿ ಬಿದ್ದ ಭಾರವಾದ ಶಸ್ತ್ರ ಮುಳಗಿಹೋಗುವಂತೆ ಮುಳುಗುತ್ತಾರೆ[೪] (ನರಕದಲ್ಲಿ).

---

೧ ಪರತಂತ್ರಂ ಕಥಂ ಹೇತುಮಾತ್ಮಾನಮನುಪಶ್ಯಸಿ।
ಕರ್ಮಣ್ಯಸ್ಮಿನ್ ಮಹಾಭಾಗ ಸೂಕ್ಷ್ಮಂ ಹ್ಯೇತದತೀಂದ್ರಿಯಮ್ ॥ - ೧/೧೩

೨ ಕೋ ಹ್ಯಾತ್ಮಾನಂ ಗುರುಂ ಕುರ್ಯಾತ್ ಪ್ರಾಪ್ತವ್ಯೇ ಸತಿ ಚಿಂತಯನ್ ।
ಕೋ ಹ್ಯಾತ್ಮಾನಂ ಗುರುಂ ಕುರ್ಯಾತ್ ಇತ್ಯತ್ರ 'ಗುರುಂ ಹನ ಇತಿ ಉಪದೇಷ್ಟಾರಂ ಎಂದು ಲಕ್ಷಾಲಂಕಾರ ವ್ಯಾಖ್ಯಾನವಿದೆ. - ಶ್ರೀವಾದಿರಾಜರು.(೧/೧೯)

೩. ಆದ್ದರಿಂದ ಗುರುರಾಜರು 'ಗುರುಂ ಹನ' ಎಂದು ಅರ್ಥೈಸಿದ್ದಾರೆ ಲಕ್ಷಾಲಂಕಾರದಲ್ಲಿ.

೪ ಪ್ಲವಂತೇ ಧರ್ಮಲಘವಃ ಇತ್ಯತ್ರ 'ಧರ್ಮ ಕಾರಣಾತ್ ನಿಮಿತ್ತಾತ್ ಪಾಪೇನ ಲಘವಃ' ಎಂದು

ಗೌತಮಿ ಹೇಳುತ್ತಾಳೆ - 'ವ್ಯಾಧನೇ! ಸತ್ತ ಮಗನು ವಾಪಸಾಗನು. ಆದ್ದರಿಂದ ಸರ್ಪವನ್ನು ಕೊಲ್ಲುವುದರಿಂದ ಆಗುವ ಪ್ರಯೋಜನವೇನು? ಆದ್ದರಿಂದ ಸರ್ಪವನ್ನು ಕೊಲ್ಲಬೇಡ.

ಅದಕ್ಕೆ ವ್ಯಾಧನು - 'ನನಗೆ ನೀನು ಹೇಳಿದುದು ಗೊತ್ತಿದೆ. ಆದರೆ ಪುತ್ರಶೋಕಕ್ಕೆ ಕಾರಣನಾದವನನ್ನು ಕೊಲ್ಲೆನ್ನುತ್ತಾರೆ. ದುಃಖ ಅನುಭವಿಸುವವರು ಕೊಲ್ಲು ಎನ್ನುತ್ತಾರೆ. ದುಃಖ ನಿವಾರಣೆಗೆ ಸರ್ಪ ಸಂಹಾರ ಸೂಕ್ತ. ಕೆಲವರು ಮುಂದೆ ಶ್ರೇಯಸ್ಸನ್ನು ಬಯಸಿ ಬೇಡ ಎನ್ನುತ್ತಾರೆ. ಯಾವಾಗಲೂ ದುಃಖಿಸುವವರಿಗೆ ಅವರಿಗಾಗುವ ಶೋಕ ಹೋಗುತ್ತದೆ[1].

ಅದಕ್ಕೆ ಗೌತಮಿಯು 'ಧರ್ಮಾಚರಣೆಯಿಂದ ಸುಖದಲ್ಲಿರುವವರು ಸಜ್ಜನರು, ಕೋಪರಹಿತರು, ಇತರರಿಗೆ ಯಾತನೆ ಕೊಡುವುದಿಲ್ಲ. ಬ್ರಾಹ್ಮಣರಿಗೆ ಕೋಪವಿರುವುದಿಲ್ಲ. ತಮಗೆ ಇತರರಿಂದ ಯಾತನೆಯಾದರೂ, ಅವರಿಗೆ ದುಃಖ ಕೊಡುವುದಿಲ್ಲ. ಆದ್ದರಿಂದ ಸರ್ಪದಿಂದ ನಮಗೆ ದುಃಖವಾಗಿದ್ದರೂ ಅದಕ್ಕೆ ದುಃಖಕೊಡುವುದು ಬೇಡ (ಕೊಲ್ಲುವುದು ಬೇಡ).

ಗೌತಮಿ ಮರುಪ್ರಶ್ನಿಸುತ್ತಾ - 'ಸರ್ಪಹತ್ಯೆಯಿಂದ ಆಗುವ ಲಾಭವಾದರೂ ಏನು? ಬಿಡುಗಡೆ ಮಾಡದಿದ್ದಲ್ಲಿ ಸಿಗುವ ಶಾಂತಿ ಏನು? ನಾನು ಕ್ಷಮಿಸಬೇಡ ಎನ್ನಲು ಕಾರಣವೇನು? ಸರ್ಪವನ್ನು ಬಿಡುಗಡೆ ಮಾಡದಿರಲು ಕಾರಣವಾದರೂ ಏನು? ಇದಕ್ಕೆ ವ್ಯಾಧನು ಈ ಸರ್ಪವನ್ನು ಬಿಡುಗಡೆ ಮಾಡಿದರೆ, ಅದು ಅನೇಕ ಜನರನ್ನು ಕೊಲ್ಲುತ್ತದೆ. ಜನರನ್ನು ರಕ್ಷಿಸಲು ಕೊಲ್ಲುವುದು ವಿಹಿತ. ಧರ್ಮಬಲ್ಲವರು ಪಾಪಿಗಳನ್ನು ತ್ಯಾಗ ಮಾಡುತ್ತಾರೆ. ಆದ್ದರಿಂದ ಕೊಲ್ಲುವುದು ಸರಿ.' ಅದಕ್ಕೆ ಗೌತಮಿಯು ಈ ಸರ್ಪವನ್ನು ಕೊಂದರೆ ನನ್ನ ಸತ್ತ ಮಗ ಬದುಕಿ ಬರುವನೆ? ಆದ್ದರಿಂದ ಇದನ್ನು ಕೊಲ್ಲದೇ ಬಿಟ್ಟುಬಿಡು'[2].

ಅದಕ್ಕೂ ಉತ್ತರಿಸಿದ ವ್ಯಾಧನು - 'ಅಮ್ಮಾ! ವೃತ್ರನನ್ನು ಕೊಂದ ಇಂದ್ರ ಸ್ವರ್ಗಾಧಿಪತಿಯಾದ. ಶಿವ ದಕ್ಷಧ್ವಂಸ ಮಾಡಿ (ಯಜ್ಞ) ಯಜ್ಞಭಾಗ ಪಡೆದ. ಆದ್ದರಿಂದ (ವೃತ್ರ, ದಕ್ಷಪ್ರಜಾಪತಿಯಂತೆ ಇರುವ) ಈ ಸರ್ಪವನ್ನು ಕೊಲ್ಲಲು ನನಗೆ ಆಜ್ಞೆ ಕೊಡು. ಈ ಬಗ್ಗೆ ಸಂಶಯವಿಟ್ಟುಕೊಳ್ಳಬೇಡ' ಎಂದರೂ, ಗೌತಮಿ ಕೊಲ್ಲುವ ಪಾಪ ಬುದ್ಧಿ ಮಾಡಲಿಲ್ಲ.

ಇಲ್ಲಿಯವರೆಗೆ ಬಿಗಿದ ಹಗ್ಗದ ಕಾರಣದಿಂದಾಗಿ ಉಸಿರಾಡದಿದ್ದ ಸರ್ಪ ಮೆಲ್ಲಗೆ ಸುಧಾರಿಸಿಕೊಂಡು ಮನುಷ್ಯಭಾವದಿಂದ ಮೆಲ್ಲಗೆ ಮಾತನಾಡಿತು.

---

ಲಕ್ಷಾಲಂಕಾರ ವ್ಯಾಖ್ಯಾನವಿದೆ.

೧ ಶ್ರೇಯಃ ಕ್ಷಯಃ ಶೋಚತಾಂ ನಿತ್ಯಶೋ ಹಿ। ತಸ್ಮಾತ್ತ್ಯಾಜ್ಯಂ ಜಹಿ ಶೋಕಂ ಹತೇಽಸ್ಮಿನ್ ॥' - ೧/೨೩

೨ ನಾಸ್ಮಿನ್ ಹತೇ ಪನ್ನಗೇ ಪುತ್ರಕೋ ಮೇ ಸಂಪ್ರಾಪ್ಸ್ಯತೇ ಲುಬ್ಧಕ ಜೀವಿತಂ ವೈ।
ಗುಣಂ ಚಾನ್ಯಂ ನಾಸ್ಯ ವಧೇ ಪ್ರಪಶ್ಯೇ ತಸ್ಮಾತ್ ಸರ್ಪಂ ಲುಬ್ಧಕ ಮುಂಚ ಚೈನಮ್ ॥ - ೧/೨೮

'ಎಲೈ! ಅರ್ಜುನಕನೇ (ವ್ಯಾಧನೇ) ನಾನು ಅಸ್ವತಂತ್ರ. ಈ ಬಾಲಕನನ್ನು ಯಾವುದೇ ರಾಗದ್ವೇಷಗಳಿಂದ, ಸ್ವ ಇಚ್ಛೆಯಿಂದ ಕೊಲ್ಲಲಿಲ್ಲ. ಮೃತ್ಯು ದೇವತೆಯ ಪ್ರೇರಣೆಯಿಂದ ಕಚ್ಚಿದೆನೇ ಹೊರತು ಉದ್ದೇಶಪೂರ್ವಕವಾಗಿ ಕೊಲ್ಲಲಿಲ್ಲ. ಆದ್ದರಿಂದ ನನ್ನ ಅಪರಾಧವೇನಿಲ್ಲ[೧].' ಅದಕ್ಕೆ ವ್ಯಾಧನು 'ನೀನು ಸ್ವತಂತ್ರವಾಗಿ ನಿನ್ನ ಇಚ್ಛೆಯಿಂದ ಕೊಲ್ಲದಿದ್ದರೂ, ಕಾರ್ಯವಂತೂ ನಿನ್ನಿಂದ ಆಗಿದೆ. ಅದೂ ಬಾಲಹತ್ಯೆ, ಬ್ರಹ್ಮಹತ್ಯೆ. ಆದ್ದರಿಂದ ನೀನು ವಧ್ಯನೇ.' ಅದಕ್ಕೆ ಸರ್ಪವು 'ಒಂದು ಯಜ್ಞದಲ್ಲಿ ಅನೇಕ ಋತ್ವಿಜರು ಭಾಗವಹಿಸಿದರೂ ಸ್ವರ್ಗಫಲ ಬರುವುದು ಯಜಮಾನನಿಗೇ, ಹೊರತು, ಋತ್ವಿಜರಿಗಲ್ಲ. ಆದ್ದರಿಂದ ನಾನು ಈ ಕಾರ್ಯದಲ್ಲಿ (ಬಾಲಹತ್ಯಾ) ಮೃತ್ಯುವಿನಿಂದ ಪ್ರಚೋದಿತನಾಗಿ, ಅವನು ಹೇಳಿದಂತೆ ಮಾಡಿದ್ದೇನೆ. ಆದ್ದರಿಂದ ಕೊಂದ ಪಾಪ ನನಗೆ ಬರದು. ಮೃತ್ಯುವಿಗೆ ಬರುತ್ತದೆ' ಎಂದಿತು[೨].

ಹೀಗೆ ಸರ್ಪವೆನ್ನುತ್ತಿರಲು ಮೃತ್ಯುದೇವತೆಯು ಬಂದು 'ಸರ್ಪವೇ! ನಾನು ಕಾಲಪ್ರೇರಿತನಾಗಿ ನಿನಗೆ ಪ್ರಚೋದಿಸಿದೆ. ಹೀಗಾಗಿ ನಾನೂ ಸ್ವತಂತ್ರನಾಗಿ ಕಾರಣನಲ್ಲ. ಪ್ರಪಂಚವೆಲ್ಲ ಕಾಲವಶವೇ. ಸಕಲ ಸ್ಥಾವರ-ಜಂಗಮಾತ್ಮಕ ಪ್ರಾಣಿಗಳೂ ಕಾಲವಶಗಳೇ. ಜಗತ್ತಿನಲ್ಲಿನ ಪ್ರವೃತ್ತಿ-ನಿವೃತ್ತಿಗಳು (ವ್ಯಾಪಾರಗಳೆಲ್ಲ) ಕಾಲಾಧೀನ. ಹೀಗಿರುವಾಗ ಸರ್ಪವೇ! ನನ್ನ ಮೇಲೆ ದೋಷಾರೋಪಣೆ ಮಾಡಬೇಡ' ಎಂದ ಕಾಲಪುರುಷ[೩]. 'ಆದ್ದರಿಂದ ನಾನು ನಿರ್ದೋಷಿ. ಇಷ್ಟಾದರೂ ನಾನು ದೋಷಿ ಎಂದಾದರೆ, ನೀನೂ ದೋಷಿಯೇ' ಎಂದ ಕಾಲ. ಅದಕ್ಕೆ ಸರ್ಪನು 'ಎಲೈ ಮೃತ್ಯುವೇ! ನಾನು ನಿನ್ನನ್ನು ನಿರ್ದೋಷಿ ಎಂದಾಗಲೀ, ಅಥವಾ

---

೧ ಅಸ್ವತಂತ್ರಂ ಹಿ ಮಾಂ ಮೃತ್ಯುರ್ವಿವಶಂ ಸಮಚೂಚುದತ್ ।
ತಸ್ಯಾಹಂ ವಚನಾತ್ ದಷ್ಟೋ ನ ಕೋಪೇನ ನ ಕಾಮ್ಯಯಾ ।
ನ ತತ್ರ ಕಿಲ್ಬಿಷಂ ಲುಬ್ಧ ವಿದ್ಯತೇ ಮಮ ಬಾಲಿಶ ॥ - ೧/೩೩,೩೪

೨ ಈ ವಿಷಯದಲ್ಲಿ ತುಂಬಾ ಯುಕ್ತಿಗಳಿಂದ ಕೂಡಿದ ಹತ್ತಾರು ಶ್ಲೋಕಗಳಿವೆ. ಇಲ್ಲಿ ಕೊಟ್ಟಿರುವುದು ಸಂಕ್ಷಿಪ್ತ ಭಾವಾನುವಾದ ಮಾತ್ರ.
ಲುಬ್ಧಕ ಉವಾಚ –
ಕಾರಣಂ ಯದಿ ನ ಸ್ಯಾದ್ವೈ ನ ಕರ್ತಾ ಸ್ಯಾಸ್ತ್ವಮಪ್ಯುತ ।
ವಿನಾಶೇ ಕಾರಣಂ ತ್ವಂ ಚ ತಸ್ಮಾದ್ವಧ್ಯೋಽಸಿ ಮೇ ಮತಃ ॥ - ೧/೪೧
ಸರ್ಪ ಉವಾಚ –
ಯಥಾ ಹವೀಂಷಿ ಜುಹ್ವಾನಾ ಅಗ್ನೌ ವೈ ಲುಬ್ಧಕರ್ತ್ವಿಜಃ ।
ನ ಫಲಂ ಪ್ರಾಪ್ನುವಂತ್ಯತ್ರ ಫಲಯೋಗಾತ್ ತಥಾ ಹ್ಯಹಮ್ ॥ - ೧/೪೬

೩. ಕಾಲೇನಾಹಂ ಪ್ರಣುದಿತಃ ಪನ್ನಗ ತ್ವಾಮಚೂಚುದಮ್ ।
ವಿನಾಶಹೇತುರ್ನಾಸ್ಯ ತ್ವಮಹಂ ವಾ ಪ್ರಾಣಿನಂ ಶಿಶೋಃ ॥
ಪ್ರವೃತ್ತಯಶ್ಚ ಯಾ ಲೋಕೇ ತಥೈವ ಚ ನಿವೃತ್ತಯಃ ।
ತಾಸಾಂ ಪ್ರಕೃತಯೋ ಯಾಶ್ಚ ಸರ್ವಂ ಕಾಲಾತ್ಮಕಂ ಸ್ಮೃತಮ್ ॥ - ೧/೪೮, ೫೨

ದೋಷಿಯೆಂದಾಗಲೀ ಹೇಳುವುದಿಲ್ಲ. ನಾನು ನಿನ್ನಿಂದ ಪ್ರೇರಿತನಾಗಿ ಆ ಮಗುವನ್ನು ಕಚ್ಚಿದೆ ಎಂದಷ್ಟೇ ಹೇಳುತ್ತಿದ್ದೇನೆ. ಕಾಲದಲ್ಲಿ ದೋಷವಿರಲಿ ಇಲ್ಲದಿರಲಿ ಆ ದೋಷದ ಪರೀಕ್ಷೆಗೆ ನಾವು ಅಧಿಕಾರಿಗಳಲ್ಲ. ನಾನು ಈ ದೋಷದಿಂದ ನಿವೃತ್ತಿ ಹೊಂದಬೇಕಾಗಿದೆ. ಅದೇ ನನ್ನ ಪ್ರಯೋಜನ[೧]. ಆದ್ದರಿಂದ ಎಲೈ ವ್ಯಾಧನೇ ಮೃತ್ಯುವಿನ ಮಾತನ್ನು ಕೇಳಿಯಾದರೂ ನಿರಪರಾಧಿಯಾದ ನನ್ನನ್ನು ಪೀಡಿಸಬೇಡ (ಹಗ್ಗದಿಂದ ಕಟ್ಟಿ).' ಎಂದಿತು ಸರ್ಪ.

ಅದಕ್ಕೆ ವ್ಯಾಧನು 'ಎಲೈ ಸರ್ಪವೇ! ಮೃತ್ಯುವಿನ ಮಾತಿನಿಂದ ನನಗೆ ನೀನು ಹಾಗೂ ಮೃತ್ಯು ಇಬ್ಬರೂ ಈ ಹತ್ಯೆಗೆ ಕಾರಣ ಎನಿಸುತ್ತದೆ. ಕಾರಣವನ್ನು ಕಾರಣವಲ್ಲವೆಂದು ಹೇಳಲು ಬರುವುದಿಲ್ಲವಷ್ಟೇ! ಮೃತ್ಯುವು ಕೂಡಾ ಸಜ್ಜನರಿಗೆ ದುಃಖ ಕೊಡುವವನೆಂದು ಭಾವಿಸಿದ್ದೇನೆ. ಇದಕ್ಕೆ ಕಾರಣನಾದ ನಿನ್ನನ್ನು ನಾನು ಕೊಲ್ಲುತ್ತೇನೆ' ಎಂದನು[೨].

ಇದಕ್ಕೆ ಬೇಡನು ಮತ್ತೆ 'ಮೃತ್ಯು ಸರ್ಪಗಳೇ! ನೀವಿಬ್ಬರೂ ಕಾಲವಶರಾಗಿದ್ದರೆ ಪ್ರಾಣಿಗಳ ಸುಖ, ಕ್ರೋಧಗಳಿಗೆ ಕಾರಣವೇನು?' ಎಂದನು. ಅದಕ್ಕೆ ಮೃತ್ಯುವು 'ನಾನು ಆಗಲೇ ಇದಕ್ಕೆ ಪ್ರಾಣಿಗಳ ಎಲ್ಲ ಭಾವನೆಗಳಿಗೂ (ಸುಖ, ದುಃಖ, ಭವ, ಭಾವವಿಲ್ಲ, ಪ್ರವೃತ್ತಿ, ನಿವೃತ್ತಿರೂಪ ವ್ಯಾಪಾರಗಳಿಗೆ) ಕಾಲನ ಪ್ರೇರಣೆ ಎಂದೇ ಹೇಳಿದ್ದೇನೆ. ಆದ್ದರಿಂದ ನಮ್ಮಿಬ್ಬರನ್ನೂ ಅಪರಾಧಿಗಳೆಂದು ಪರಿಗಣಿಸಬಾರದೆಂದನು.

ಹೀಗೆ ಧರ್ಮಾಧರ್ಮಗಳ ಬಗ್ಗೆ ಸಂಶಯ ನಡೆಯುತ್ತಿದ್ದಾಗಲೇ ಕಾಲದೇವತೆಯು ಸರ್ಪ, ಬೇಡ, ಮೃತ್ಯುಗಳನ್ನು ಉದ್ದೇಶಿಸಿ - [೩]'ನೋಡು ಬೇಡನೇ! ನಾನಾಗಲೀ, ಮೃತ್ಯುವಾಗಲೀ, ಬೇಡನಾಗಲಿ, ಸರ್ಪವಾಗಲೀ, ಬಾಲಕನ ಮರಣಕ್ಕೆ ಕಾರಣರಾದ ಅಪರಾಧಿಗಳಲ್ಲ.

---

೧ ನಿರ್ದೋಷಂ ದೋಷವಂತಂ ವಾ ನತ್ವಾ ಮೃತ್ಯೋ ಬ್ರವೀಮ್ಯಹಮ್ ।
ತ್ವಯಾಹಂ ಚೋದಿತ ಇತಿ ಬ್ರವೀಮ್ಯೇತಾವದೇವತು ।
ಯದಿ ಕಾಲೇ ತು ದೋಷೋಽಸ್ತಿ ಯದಿ ತತ್ರಾಪಿ ನೇಷ್ಯತೇ ।
ದೋಷೋ ನೈವ ಪರೀಕ್ಷ್ಯೋ ಮೇ ನ ಹ್ಯತ್ರಾಧಿಕೃತಾ ವಯಮ್ ॥

೨ ಮೃತ್ಯುಸ್ತ್ವಂ ಚೈವ ಹೇತುರ್ಹಿ ಜಂತೋರಸ್ಯ ವಿನಾಶನೇ ।
ಉಭಯಂ ಕಾರಣಂ ಮನ್ಯೇ ನ ಕಾರಣಮಕಾರಣಮ್ ॥
ಮೃತ್ಯುಂ ತ್ವಧಿಗಮಿಷ್ಯಾಮಿ ಧ್ರುವಂ ದುಃಖಕರಂ ಸತಾಮ್ ।
ತ್ವಾಂ ಚೈವಾಹಂ ವಧಿಷ್ಯಾಮಿ ಪಾಪಂ ಪಾಪಸ್ಯ ಕಾರಣಮ್ ॥

೩ ನೈವಾಹಂ ನಾಪ್ಯಯಂ ಮೃತ್ಯುರ್ನಾಯಂ ಲುಬ್ಧಕ ಪನ್ನಗಃ ।
ಕಿಲ್ಬಿಷೀ ಜಂತುಮರಣೇ ನ ವಯಂ ಹಿ ಪ್ರಯೋಜಕಾಃ ॥
ಅಕರೋದ್ಯದಯಂ ಕರ್ಮ ತನ್ನೋಽರ್ಜುನಕ ಚೋದಕಮ್ ।
ಪ್ರಣಾಶಹೇತುರ್ನಾನ್ಯೋಽಸ್ಯ ವಧ್ಯತೇಽಯಂ ಸ್ವಕರ್ಮಣಾ ॥
ವಿನಾಶಹೇತುಃ ಕರ್ಮಾಸ್ಯ ಸರ್ವೇ ಕರ್ಮವಶಾ ವಯಮ್ ।
ಕರ್ಮಾಣಿ ಚೋದಯಂತೀಹ ಯಥಾಽನ್ಯೋನ್ಯಂ ತಥಾ ವಯಮ್ ॥ - ೧/೬೮-೭೧

ಕಾರಣ ನಾವು ಇದಕ್ಕೆ ಪ್ರಯೋಜಕರಲ್ಲ. ವಾಸ್ತವವಾಗಿ ಬಾಲಕನು ಹಿಂದೆ ಮಾಡಿದ ಕರ್ಮಾನುಸಾರವಾಗಿ ನಾವು ಪ್ರಚೋದಕರಾಗಿದ್ದೇವೆ. ಬೇರಾವುದೂ ಬಾಲಕ ಮರಣಕ್ಕೆ ಕಾರಣವಿಲ್ಲ. ಬಾಲಕನು ತನ್ನ ಕರ್ಮದಿಂದಲೇ ಮರಣ ಹೊಂದಿದ್ದಾನೆ. ಆದ್ದರಿಂದ ಎಲ್ಲರೂ ಕರ್ಮವಶರು. ಪ್ರತಿಜೀವಿಯು ಹುಟ್ಟುವಾಗ ಕರ್ಮಗಳ ಸಹಿತವಾಗಿಯೇ ಹುಟ್ಟುತ್ತಾನೆ. ಕರ್ಮಗಳೇ ಅವನಿಗೆ ಪರಸ್ಪರ ಪ್ರಚೋದಿಸುತ್ತವೆ. ನಾವು ಹಾಗೆಯೇ. ಮನುಷ್ಯನು ಕರ್ಮಗಳಿಗನುಸಾರವಾಗಿ ಬೇರೆ ಬೇರೆ ಆಕಾರ(ಜನ್ಮಗಳನ್ನು) ಹೊಂದುತ್ತಾನೆ. ಜೀವ ಹಾಗೂ ಕರ್ಮಗಳು ನಿರಂತರ ಸಂಬಂಧಿಗಳೇ. ಆದ್ದರಿಂದ ನಾನಾಗಲೀ, ಸರ್ಪವಾಗಲೀ, ಮೃತ್ಯುವಾಗಲೀ, ಕಾಲವಾಗಲೀ, ನೀನಾಗಲೀ, ವೃದ್ಧ ಬ್ರಾಹ್ಮಣಿಯಾಗಲೀ ಬಾಲಕನ ಮರಣಕ್ಕೆ ಕಾರಣರಲ್ಲ. ಆ ಶಿಶುವಿನ ಪೂರ್ವಕರ್ಮವೇ ಕಾರಣ.'

ಹೀಗೆ ಕಾಲದೇವತೆ ಹೇಳುತ್ತಿರಲು ಬ್ರಾಹ್ಮಣಿ ಗೌತಮಿಯು 'ಬಾಲಕನು ತನ್ನ ಕರ್ಮದಿಂದಾಗಿ ಯೋಗ್ಯ ಕಾಲದಲ್ಲಿ ನಿಧನನಾಗಿದ್ದಾನೆ. ನಾನೂ ಮಗನನ್ನು ಕಳೆದುಕೊಳ್ಳುವಂತಹ ದುಷ್ಕರ್ಮ ಮಾಡಿದ್ದೆ. ಆದ್ದರಿಂದ ಮಗನು ಸರ್ಪಹತನಾದ. ಆದ್ದರಿಂದ ಕಾಲ, ಮೃತ್ಯುಗಳು ಅವರ ಮಾರ್ಗ ಹಿಡಿದು ಹೋಗಲಿ. ಎಲೈ ವ್ಯಾಧನೇ! ನೀನು ಸರ್ಪವನ್ನು ಕೊಲ್ಲದೆ ಬಿಟ್ಟುಬಿಡು'[೧] ಎಂದಳು. ಹೀಗೆ ಮಗನನ್ನು ಕಳೆದುಕೊಂಡ ತಾಯಿಯೇ ಹೇಳುತ್ತಿರಲು ಮೃತ್ಯು, ಕಾಲ, ಸರ್ಪಗಳು ಹೊರಟರು. ವ್ಯಾಧನೂ ಶಾಂತನಾದನು. ಗೌತಮಿಯೂ ದುಃಖರಹಿತಳಾದಳು.

ಆದ್ದರಿಂದ 'ಧರ್ಮರಾಜನೇ! ನೀನೂ ಕೂಡಾ ನನ್ನ ಈ ಪರಿಸ್ಥಿತಿಗೆ, ದ್ರೋಣ, ದುರ್ಯೋಧನಾದಿಗಳ ಸಂಹಾರಕ್ಕೆ ನೀನಾಗಲೀ, ದುರ್ಯೋಧನನಾಗಲೀ ಕಾರಣವೆಂದು ಭಾವಿಸದೆ, ಇವೆಲ್ಲ ಅವರವರ ಕರ್ಮಗಳಿಂದ ಸಂಪಾದಿತವಾಗಿವೆ(ಘಟಿಸಿವೆ) ಎಂದು ಭಾವಿಸಿ, ದುಃಖಿಸಬೇಡ.' ಎಂದು ಭೀಷ್ಮರು ಎಂದಾಗ, ಧರ್ಮರಾಜನು ಚಿಂತೆಯನ್ನು ಬಿಟ್ಟು ಮುಂದಿನ ಪ್ರಶ್ನೆ ಮಾಡಿದನು.

## ಸಂದೇಶಗಳು-ವಿವರಣೆಗಳು

೧. ಧರ್ಮಬಲ್ಲವನು ಧರ್ಮರಾಜ. ಮನುಷ್ಯನಾಗಿ ಅವತರಿಸಿದ ಯಮದೇವ ಮಾನುಷ ರೀತಿಯಲ್ಲಿ ವರ್ತಿಸುತ್ತಿದ್ದಾನೆ. ತನ್ನ ಮುಂದೆ ತನ್ನ ತಾತ ಶರಪಂಜರದಲ್ಲಿ ಮಲಗಿ

---

೧ ಗೌತಮೀ ಉವಾಚ –
ನೈವ ಕಾಲೋ ನ ಭುಜಗೋ ನ ಮೃತ್ಯುರಿಹ ಕಾರಣಮ್ ।
ಸ್ವಕರ್ಮಭಿರಯಂ ಬಾಲಃ ಕಾಲೇನ ನಿಧನಂ ಗತಃ ॥
ಮಯಾ ಚ ತತ್ಕೃತಂ ಕರ್ಮ ಯೇನಾಯಂ ಮೇ ಸುತೋ ಹತಃ ॥
............... ಮುಂಚಾರ್ಜುನಕ ಪನ್ನಗಮ್ ॥ – ೧/೭೬,೭೭

ದುಃಖಿಸುತ್ತಿದ್ದುದು ಮನಸ್ಸಿಗೆ ದುಃಖ ತಂದಿತು. ಒಂದೆಡೆ ಧರ್ಮಕ್ಕಾಗಿ ಯುದ್ಧ ಇನ್ನೊಂದೆಡೆ ಯುದ್ಧದ ಅನಿವಾರ್ಯ ದುಷ್ಪರಿಣಾಮಗಳನ್ನು ಸಹಿಸದ ಧರ್ಮರಾಜನ ಅವಸ್ಥೆ ಆತನ ಮಾನವೀಯ ಮೌಲ್ಯಗಳನ್ನು ಎತ್ತಿ ತೋರಿಸುತ್ತದೆ. ತನ್ನ ಸ್ವಾರ್ಥಕ್ಕಾಗಿ ಹಿರಿಯರನ್ನು ಬಲಿ ತೆಗೆದುಕೊಂಡೆನಲ್ಲ ಎಂಬ ಅಪರಾಧ ಪ್ರಜ್ಞೆ ಕಾಡುವಂತಿದೆ. ಆತನ ಸಂದೇಶ ಎಲ್ಲರಿಗೂ ಮಾದರಿ. ಆತ ಧರ್ಮದ ಪ್ರತಿಮೂರ್ತಿ. ತನಗೆ ಅನ್ಯಾಯವಾದರೂ ಸಹಿಸಬೇಕೆಂಬ ಧೋರಣೆ.

೨. ದುರ್ಯೋಧನ ದುಷ್ಟನೆಂದು ಗೊತ್ತಿದ್ದರೂ, ಆತನ ಬಗ್ಗೆಯೂ ಮೃದು ಧೋರಣೆ ತನಗೇ ಮುಳುವಾದುದು ಆತನಿಗೆ ಗೋಚರಿಸಲಿಲ್ಲ. ಅನೇಕ ವೇಳೆ, ಆತನ ಮಾತುಗಳು ವೈರುದ್ಧ್ಯಗಳಿಂದ ಕೂಡಿದ್ದವು. ಹಾಗೆ ಇರುವುದು ನ್ಯಾಯಕ್ಕೆ ಸಿಗುವ ಮರ್ಯಾದೆಯಾಗದು.

೩. ಗೌತಮಿ ಮಗನನ್ನು ಕಳೆದುಕೊಂಡರೂ, ಕಚ್ಚಿದ ಸರ್ಪವನ್ನು ಕೊಲ್ಲಲು ಅನುಮತಿ ನೀಡದ ಕ್ಷಮಾಸಮುದ್ರಳು. ಧರ್ಮರಾಜನ ಸ್ವಭಾವದವಳು.

೪. ಸತ್ತ ಮಗ ವಾಪಸು ಬರನೆಂದ ಮೇಲೆ ಅವನನ್ನು ಕಚ್ಚಿದ ಸರ್ಪಸಂಹಾರದಿಂದ ಏನು ಪ್ರಯೋಜನ? ಎಂಬ ಆಕೆಯ ವಿವೇಕ ಕ್ಷಮಾಗುಣಕ್ಕೆ ಮತ್ತೊಂದು ನಿದರ್ಶನ.

೫. ವ್ಯಾಧನು ಅನೇಕ ರೀತಿಯಿಂದ ಸರ್ಪವನ್ನು ಕೊಲ್ಲಲು ಪ್ರಲೋಭಿಸಿದರೂ, ಗೌತಮಿ ಒಪ್ಪಲಿಲ್ಲ. ಆಕೆಗೆ ಜೀವನ ಸಾವುಗಳ ಪಾರಮಾರ್ಥಿಕ ಸತ್ಯ ತಿಳಿದಿತ್ತು. ಆದ್ದರಿಂದ ವಿರೋಧಿಸಿದಳು.

೬. ಈ ಮಧ್ಯೆ ವ್ಯಾಧ ಸರ್ಪದ ಸಂಹಾರಕ್ಕೆ ಮುಂದಾದುದು, ಗೌತಮಿಯ ದುಃಖದಲ್ಲಿ ಪಾಲುಗಾರನಂತೆ ಕಂಡರೂ, ಆತನ ಸ್ವಭಾವಸಿದ್ಧವಾದ ಹಿಂಸಾಪ್ರಿಯತೆ ಎದ್ದು ಕಾಣುತ್ತದೆ. ಅದು ತಾಮಸಗುಣವೆಂದು ಗೌತಮಿಯ ವಾದ ಸಾತ್ವಿಕ ಸಂದೇಶವಾಗಿದೆ.

೭. ವ್ಯಾಧ ಈ ಉಪಾಖ್ಯಾನದ ಗೌತಮಿಯತರುವಾಯ ಎರಡನೇ ಕೇಂದ್ರಬಿಂದುವಾಗಿ ಸರ್ಪ, ಮೃತ್ಯುದೇವತೆ, ಕಾಲದೇವತೆಗಳೆಲ್ಲರನ್ನು ಬಾಲಕನ ಹತ್ಯೆಗೆ ಕಾರಣರೆಂದು ಆಪಾದಿಸುತ್ತಾನೆ. ತರ್ಕ ಮಾಡುತ್ತಾ ಹೋಗುತ್ತಾನೆ. ಈ ಇಡೀ ಉಪಾಖ್ಯಾನ ತರ್ಕ, ಅನುಮಾನಗಳ ಒಂದು ಅಧ್ಯಯನಕ್ಕೆ ಅವಕಾಶ ನೀಡುತ್ತದೆ (ಪ್ರಮಾಣಶಾಸ್ತ್ರದೃಷ್ಟಿಯಿಂದ).

೮. ಕೊನೆಯದಾಗಿ ಜಗತ್ತಿನ ಎಲ್ಲ ಪ್ರವೃತ್ತಿಗಳಿಗೆ ಆಯಾ ಜೀವನ ಪೂರ್ವಜನ್ಮದ ಕಾರಣವೆನ್ನುವ ನಿರ್ಣಯದೊಂದಿಗೆ ವೈದಿಕಕರ್ಮವಾದ ಇಲ್ಲಿ ಅನಾವರಣಗೊಂಡಿದೆ. ಹೀಗಾಗಿ ಯಾರ ಮೇಲೂ ಕ್ರೋಧಪ್ರದರ್ಶನ, ದ್ವೇಷಸಾಧನೆಗೆ ಅವಕಾಶವಿಲ್ಲವಾಗಿ ಸಮಾಜದಲ್ಲಿ ಸ್ವಾಸ್ಥ್ಯ ಕೆಡುವುದಿಲ್ಲ. ತನಗಾದ ನ್ಯಾಯಾನ್ಯಾಯಗಳಿಗೆ ತನ್ನ ಪೂರ್ವ-

ಕರ್ಮಗಳೇ ಕಾರಣವೆಂದು ಭಾವಿಸಿ ಕ್ಷಮಾಗುಣ ಮೇಳೈಸಿಕೊಂಡರೆ ಸ್ನೇಹ, ಸೌಹಾರ್ದತೆಗೆ ಚ್ಯುತಿ ಬರದು. ಮಗನನ್ನು ಕಳೆದುಕೊಂಡ ತಾಯಿ ಗೌತಮಿಯೇ ಇದಕ್ಕೆ ಸಾಕ್ಷಿಯಾಗಿ ಕಾಣುತ್ತಾಳೆ. ಆದರ್ಶಸ್ತ್ರೀ ಹಾಗೂ ಆದರ್ಶ ಸಾಧಕಳು.

೯. ಭೀಷ್ಮರೂ, ಧರ್ಮರಾಜನಿಗೆ ಇದನ್ನೇ ಉಪದೇಶಿಸಿದ ಆದರ್ಶ ಕ್ಷತ್ರಿಯಸಾಧಕರಾಗಿ ಗೋಚರಿಸುತ್ತಾರೆ.

೧೦. ಕರ್ಮ ಜಡ, ಆದರೆ, ಅದು ಜೀವನೊಟ್ಟಿಗೆ ಇದ್ದ ಕಾರಣವೇ ಹೊರತು, ಕೇವಲ ಕರ್ಮವಲ್ಲವೆಂಬ ಪ್ರಮೇಯ ಗಮನಾರ್ಹ.

೧೧. ಇಲ್ಲಿ ಬಂದಿರುವ ಕಾಲ, ಕಾಲನಾಮಕ ಶ್ರೀಹರಿಯೇ 'ಕಾಲೋಽಸ್ಮಿ ಲೋಕಕ್ಷಯ ಕೃತ್ ಪ್ರವೃದ್ಧಃ' ಎಂಬ ಗೀತಾವಾಕ್ಯ ಇಲ್ಲಿ ಸ್ಮರಿಸಬೇಕು. ಮೃತ್ಯು ಎಂದರೆ ಮೃತ್ಯುದೇವತೆ.

೧೨. ಇಲ್ಲಿನ ವ್ಯಾಧನ ವಿಚಾರಸರಣಿ ಹೇಗಾದರೂ ಮಾಡಿ ಎಲ್ಲರನ್ನೂ ಕಣ್ಣಿಗೆ ಕಂಡವರೂ, ಕಾಣದವರನ್ನೂ ದೋಷಿಗಳನ್ನಾಗಿಸುವ ಪ್ರವೃತ್ತಿ ಸಾತ್ವಿಕ ಪ್ರವೃತ್ತಿಯಲ್ಲ. ದೋಷೈಕಬುದ್ಧಿ ಬಿಟ್ಟು ವಸ್ತುನಿಷ್ಠ ಚಿಂತನೆ ಅವಶ್ಯವೆಂಬ ಸಂದೇಶ ಆತನ ವರ್ತನೆಯಿಂದ ತಿಳಿಯುತ್ತದೆ.

ಇತ್ಯಾದಿ...

## ೧೩.೨. ಸುದರ್ಶನೋಪಾಖ್ಯಾನ

ಧರ್ಮರಾಜನು ಭೀಷ್ಮಪಿತಾಮಹರನ್ನು ಕುರಿತು 'ಯಾವ ಗೃಹಸ್ಥನು ಗೃಹಸ್ಥಾಶ್ರಮವನ್ನು ಅನುಸರಿಸಿ ಮೃತ್ಯುವನ್ನು ಗೆದ್ದಿದ್ದಾನೆ ಎಂಬ ಬಗ್ಗೆ ತಿಳಿಸಿರಿ' ಎಂದಾಗ, ಭೀಷ್ಮರು ಸುದರ್ಶನೋಪಾಖ್ಯಾನವನ್ನು ಹೇಳುತ್ತಾರೆ.

ಸುದರ್ಶನ ಸೂರ್ಯವಂಶದವನು. ಆತನ ವಿವರಕ್ಕಾಗಿ ಆ ವಂಶವನ್ನು ಭೀಷ್ಮರು ವಿವರಿಸಿದರು.

| ಸಂ. | ತಂದೆ | ಮಗ | ಸಾಧನೆ |
|---|---|---|---|
| ೧ | ಮನು | ಇಕ್ಷ್ವಾಕು | – |
| ೨ | ಇಕ್ಷ್ವಾಕು | ೧೦೦ ಜನರಲ್ಲಿ ೧೦ನೆಯ ದಶಾಶ್ವ | ಮಾಹಿಷ್ಮತೀ ಪಟ್ಟಣ ರಾಜ ಮದಿರಾಶ್ವನೆಂದು ಪ್ರಖ್ಯಾತಿ, ಸದಾ ದಾನ, ತಪಸ್ಸು ಸತ್ಯಶೀಲ |
| ೩ | ದಶಾಶ್ವ | ದ್ಯುತಿಮಾನ್ (ದ್ಯುತಿಮಂತ) | ಮಹಾಭಾಗ್ಯಶಾಲಿ, ತೇಜಸ್ವೀ, ಮಹಾಬಲಿ |
| ೪ | ದ್ಯುತಿಮಂತ | ಸುವೀರ | ಧರ್ಮಾತ್ಮ ಮಹೈಶ್ವರ್ಯಶಾಲಿ, ಎರಡನೇ ಇಂದ್ರನಂತಿದ್ದ |
| ೫ | ಸುವೀರ | ದುರ್ಜಯ | ಸರ್ವಶಾಸ್ತ್ರವಿಶಾರದ, ಎಲ್ಲ ಯುದ್ಧಗಳಲ್ಲಿ ಜಯ |
| ೬ | ದುರ್ಜಯ | ದುರ್ಯೋಧನ | ಅಗ್ನಿಸದೃಶ, ಉಜ್ವಲಪ್ರತಾಪಿ, ಯುದ್ಧದಲ್ಲಿ ದುರ್ಜಯ, ರಾಜ್ಯ, ಭೂಮಿಯಲ್ಲಿನ ನಾನಾ ರತ್ನ ಧನಯುಕ್ತ, ಪ್ರಜೆಗಳೆಲ್ಲ ಧನಿಗಳು, ರಾಜ, ಸುದಕ್ಷನೂ ಶೀಲ, ಬಹುಧಾರ್ಮಿಕ, ಸ್ವಪ್ರಶಂಸೆ ಮಾಡಿಕೊಳ್ಳದವನು, ಯಜ್ಞಶೀಲ, ಮೇಧಾವಿ, ಬ್ರಾಹ್ಮಣಪ್ರಿಯ, ಸಕಲಶಾಸ್ತ್ರ ಜ್ಞಾನಿ, ದಾನಿ, ಎಲ್ಲರನ್ನೂ ಗೌರವಿಸುತ್ತಿದ್ದ. ಪತ್ನಿ ನರ್ಮದಾ ನದಿ ಅಭಿಮಾನಿದೇವತೆ. ತಾನೇ ವರಿಸಿದ ರಾಜನೀತ. ಈಕೆಯಲ್ಲಿ ಸುದರ್ಶನಾ ಎಂಬ ಮಗಳ ಜನನ. ಮಹಾಸುಂದರಿ, ಸುದರ್ಶನಾಳನ್ನು ಸಾಕ್ಷಾತ್ ಅಗ್ನಿದೇವ ಬೇಡಿ ಮದುವೆಯಾದ. ಮೊದಲು ಕೊಡೆನೆಂದ ರಾಜ ನಂತರ ಮದುವೆ ಮಾಡಿಕೊಟ್ಟ. |

ರಾಜ ದುರ್ಯೋಧನನ ಮಗಳನ್ನು ನೋಡಿ ಅನುರಕ್ತನಾದ ಅಗ್ನಿದೇವ ಬ್ರಾಹ್ಮಣ ವೇಷದಲ್ಲಿ ಬಂದು ರಾಜನನ್ನು ಯಾಚಿಸಿದ. ಸುದರ್ಶನೆಯನ್ನು ರಾಜನು ಈ ಬ್ರಾಹ್ಮಣ ಕ್ಷತ್ರಿಯನಲ್ಲವೆಂದು ಕೊಡುವುದಿಲ್ಲವೆಂದ. ಆಗ ಅಗ್ನಿ ರಾಜನ ಅಗ್ನಿವೇದಿಕೆಯಿಂದ ಅಂತರ್ಧಾನನಾದ. ದಿಙ್ಮೂಢನಾದ ರಾಜ ಋತ್ವಿಜರನ್ನು ಏಕೆಂದು ಕೇಳಿದಾಗ ಅವರು ಧ್ಯಾನದೃಷ್ಟಿಯಿಂದ ನೋಡಿ, ಅಗ್ನಿಯನ್ನು ಕೇಳಿದರು. ಅಗ್ನಿಯು ನಾನು ರಾಜಕುಮಾರಿಯನ್ನು ಬಯಸಿದ್ದೇನೆ ಎಂದ. ವಿಷಯ ರಾಜನಿಗೆ ತಿಳಿಸಿದರು. ಮಗಳನ್ನು ಯಾಚಿಸಿದವರು ಯಾರೆಂದು ತಿಳಿದು ರಾಜನಿಗೆ ಸಂತೋಷವಾಗಿ ಒಪ್ಪಿದ. ಕನ್ಯಾಶುಲ್ಕವಾಗಿ ಅಗ್ನಿಯು ಮಾಹಿಷ್ಮತಿನಗರದಲ್ಲಿ ಯಾವಾಗಲೂ ಇರಲು ಕೋರಿದ, ಅಗ್ನಿ ಒಪ್ಪಿದ. ನಂತರ ಅಗ್ನಿದೇವನಿಗೆ ರಾಜನು ಮಗಳನ್ನು ಕೊಟ್ಟು ವೈಭವದಿಂದ ಮದುವೆ ಮಾಡಿದ. ಅಗ್ನಿದೇವ ಹಾಗೂ ಸುದರ್ಶನಾದೇವಿಯ ದಾಂಪತ್ಯ ಅಸದೃಶವಾಗಿತ್ತು. ಆಕೆಯಲ್ಲಿ ಅಗ್ನಿಯಿಂದ ಜನಿಸಿದವನೇ ಸುದರ್ಶನ ಎಂಬ ಮಗ. ಅವನೂ ಶಿಶುವಾಗಿದ್ದಾಗಲೇ ಸಕಲ ವೇದಾಧ್ಯಯನ ಮಾಡಿದನು. ಚಂದ್ರನಂತೆ ಆಹ್ಲಾದಕರ ಸುರೂಪಿಯಾಗಿದ್ದನು.

ಧರ್ಮರಾಜ ಉವಾಚ

'ಕೇನ ಮೃತ್ಯುರ್ಗೃಹಸ್ಥೇನ ಧರ್ಮಮಾಶ್ರಿತ್ಯ ನಿರ್ಜಿತಃ। - ೨/೩

ತಂ ನರ್ಮದಾ ದೇವನದೀ ಪುಣ್ಯಾ ಶೀತಜಲಾ ಶಿವಾ।
ಚಕಮೇ ಪುರುಷಶ್ರೇಷ್ಠಂ ಸ್ವೇನ ಭಾವೇನ ಭಾರತ॥ - ೨/೧೮

ತಸ್ಯ ಜಜ್ಞೇ ತದಾ ನದ್ಯಾಂ ಕನ್ಯಾ ರಾಜೀವಲೋಚನಾ।
ನಾಮ್ನಾ ಸುದರ್ಶನಾ ರಾಜನ್ ರೂಪೇಣ ಚ ಸುದರ್ಶನಾ॥ - ೨/೧೯

ತಾದೃಗ್ರೂಪಾ ನ ನಾರೀಷು ಭೂತಪೂರ್ವಾ ಯುಧಿಷ್ಠಿರ।
ದುರ್ಯೋಧನ ಸುತಾ...... - ೨/೨೦

ತಾಮಗ್ನಿಶ್ಚಕಮೇ ಸಾಕ್ಷಾತ್ ರಾಜಕನ್ಯಾಂ ಸುದರ್ಶನಾಮ್। -೨/೨೧

ಅಗ್ನಿರುವಾಚ ಸುದರ್ಶನಾಂ ಪ್ರತಿ

ಭಜ ಮಾಮನವದ್ಯಾಂಗಿ ಕಾಮಾತ್ ಕಮಲಲೋಚನೇ।
........................ ಅನಂಗೋ ಬಾಧತೇ ಹಿ ಮಾಮ್॥ - ೨/೨೪,೨೫

ಸುದರ್ಶನಾ ಉವಾಚ ಅಗ್ನಿಂ ಪ್ರತಿ

ನನು ನಾಮ ಕುಲೀನಾನಾಂ ಕನ್ಯಕಾನಾಂ ವಿಶೇಷತಃ।
ಮಾತಾ ಪಿತಾ ಪ್ರಭವತಃ ಪ್ರದಾನೇ ಬಾಂಧವಾಶ್ಚ ಮೇ॥ - ೨/೩೩

ಸಾಹಂ ನಾತ್ಮವಶಾ ದೇವ ಪಿತರಂ ವರಯಸ್ವ ಮೇ॥ - ೨/೩೪

ತತಃ .....ವಿಪ್ರರೂಪೀ ಹುತವಹೋ ನೃಪಂ ಕನ್ಯಾಮಾಯಾಚತ।
ನ ತು ರಾಜಾ ಪ್ರದಾನಾಯ ತಸ್ಮೈ ಭಾವಮಕಲ್ಪಯತ್ ॥ - ೨/೩೬
ದರಿದ್ರಶ್ಚಾಸವರ್ಣಶ್ಚ ಮಮಾಯಮಿತಿ ಪಾರ್ಥಿವಃ।
ನ ದಿತ್ಸತಿ ಸುತಾಂ ತಸ್ಮೈ ತಾಂ ವಿಪ್ರಾಯ ಸುದರ್ಶನಾಮ್ ॥ - ೨/೩೭
ಅಥ ಆಹಿತೋ ಹವನಾರ್ಥಾಯ ವೇದ್ಯಾಮಗ್ನಿಃ ಪ್ರಣಶ್ಯತ ॥ - ೨/೩೮
ಅಗ್ನಿರುವಾಚ ಋತ್ವಿಜಃ ಪ್ರತಿ -
ವರಯಾಮಾತ್ಮನೋಽರ್ಥಾಯ ದುರ್ಯೋಧನಸುತಾಮಿತಿ। - ೨/೪೮
ತತಃ ಸ ರಾಜಾ ಅವಾಪ್ಯ ಪರಮಂ ಹರ್ಷಂ ತಥೇತಿ ಪ್ರಾಹ ...
ಪ್ರಾಯಾಚತ ನೃಪಃ ಶುಲ್ಕಂ ನಿತ್ಯಂ ಸಾನ್ನಿಧ್ಯಮಿಹ ತೇ...
ತಮಾಹ ಭಗವಾನಗ್ನಿರೇವಮಸ್ತ್ವಿತಿ ..... - ೨/೫೧
ಪ್ರತಿಜಗ್ರಾಹ ಚಾಗ್ನಿಸ್ತಾಂ ರಾಜಪುತ್ರೀಂ ಸುದರ್ಶನಾಮ್। - ೨/೫೪
ತಸ್ಯಾಂ ಸಮಭವತ್ ಪುತ್ರೋ ನಾಮಾಗ್ನೇಯಃ ಸುದರ್ಶನಃ।
ಶಿಶುರೇವಾಧ್ಯಗಾತ್ ಸರ್ವಂ ಸ ಚ ಬ್ರಹ್ಮ ಸನಾತನಮ್ ॥ - ೨/೫೬

ಹೀಗೆ ಸುದರ್ಶನನು ಇಕ್ಷ್ವಾಕುವಂಶದ ಪ್ರದೀಪನಾಗಿ, ಅಗ್ನಿಯ ಪುತ್ರನಾಗಿ ಪ್ರಸಿದ್ಧನಾಗಿದ್ದನು. ಇದೇ ಇಕ್ಷ್ವಾಕುಮಹಾರಾಜನ ಕಿರಿಯ ಸೋದರ ನೃಗ ಮಹಾರಾಜನ ಪಿತಾಮಹ (ತಾತ) ಓಘವಾನ್. ಇವನ ಮಗ ಓಘರಥ, ಮಗಳು ಓಘವತಿ. ಓಘವಾನ್ ತನ್ನ ಮಗಳಾದ, ದೇವತೆಯಂತೆ ಸುರೂಪಿಯಾದ ಓಘವತಿಯನ್ನು ಸುದರ್ಶನನಿಗೆ ತಾನೇ ಮದುವೆ ಮಾಡಿಕೊಟ್ಟನು (ಸ್ವಯಂವರವಿಲ್ಲದೆ).

ಸುದರ್ಶನನು ಓಘವತಿಯೊಡನೆ ಗೃಹಸ್ಥಾಶ್ರಮದಿಂದ ಕುರುಕ್ಷೇತ್ರದಲ್ಲಿ ವಾಸವಾಗಿದ್ದನು. ಗರಹಸ್ಥಾಶ್ರಮದಲ್ಲಿಯೇ ಇದ್ದು ಮೃತ್ಯುವನ್ನು ಗೆಲ್ಲುವೆನು ಎಂಬ ಪ್ರತಿಜ್ಞೆಯನ್ನು ಮಾಡಿದ್ದನು. ಪತ್ನಿ ಓಘವತಿಗೂ [1]"ನೀನು ಎಂದೂ, ನಾನು ಮನೆಯಲ್ಲಿರಲಿ, ಇಲ್ಲದಿರಲಿ, ಅತಿಥಿಗಳ ಆಶಯಗಳಿಗೆ ವಿರುದ್ಧವಾಗಿ ಹೋಗಬೇಡ. ಅತಿಥಿಯು ಯಾವುದರಿಂದ ಸಂತೋಷ

---

೧ ಯೇನ ಯೇನ ಚ ತುಷ್ಯೇತ ನಿತ್ಯಮೇವ ಸದಾಽತಿಥಿಃ।
ಅಪ್ಯಾತ್ಮನಃ ಪ್ರದಾನೇನ ನ ತೇ ಕಾರ್ಯಾ ವಿಚಾರಣಾ ॥ - ೨/೬೨
ಏತದ್ವ್ರತಂ ಮಮ ಸದಾ ಹೃದಿ ಸಂಪರಿವರ್ತತೇ। - ೨/೬೩
ನಿಷ್ಕ್ರಾಂತೇ ಮಯಿ ಕಲ್ಯಾಣಿ ತಥಾ ಸನ್ನಿಹಿತೇಽನಘೇ।
ಅತಿಥಿರ್ನಾವಮಂತವ್ಯಃ ಪ್ರಮಾಣಂ ಯದ್ಯಹಂ ತವ ॥ - ೨/೬೫
ತಮಬ್ರವೀತ್ ಓಘವತೀ ಯಥಾ ಮೂರ್ಧ್ನಿ ಕೃತಾಂಜಲಿಃ।
ನ ಮೇ ತ್ವದ್ವಚನಾತ್ ಕಿಂಚಿತ್ ಅಕರ್ತವ್ಯಂ ಕಥಂಚನ ॥ - ೨/೬೬

ಹೊಂದುವನೋ, ಅದು ನಿನ್ನನ್ನೇ ಕೊಡುವುದಾದರೂ ಕೊಟ್ಟು ಅವನನ್ನು ಸಂತೋಷಪಡಿಸು. ಇದರಲ್ಲಿ ಸಂಶಯ ಪಡಬೇಡ. ಇದು ನನ್ನ ಮನದವ್ರತ. ಗೃಹಸ್ಥರಿಗೆ ಅತಿಥಿ ಸಂತೋಷಕ್ಕಿಂತ ಮಿಗಿಲಾದುದು ಬೇರೆ ಯಾವುದೂ ಇಲ್ಲ. ನನ್ನ ಮಾತು ಪ್ರಮಾಣವಾಗುವುದಾದರೆ ಹಾಗೆ ನೀನು ನಿನ್ನ ಮನಸ್ಸಿನಲ್ಲಿ ಇದನ್ನಿಡು. ನನ್ನ ಮೇಲೆ ನಿನಗೆ ಗೌರವವಿದ್ದಲ್ಲಿ ಅತಿಥಿಯನ್ನು ಎಂದೂ ಅಗೌರವಿಸದಿರು.' ಎಂದು ಹೇಳಿದ ಸುದರ್ಶನರಾಜ ತನ್ನ ಪತ್ನಿಯಿಂದ ವಾಗ್ದಾನ ಮಾಡಿಸಿದನು.

ಹೀಗೆ ಸುದರ್ಶನನು ಗೃಹಸ್ಥಧರ್ಮಿಷ್ಠನಾಗಿಯೇ ಮೃತ್ಯುವನ್ನು ಗೆಲ್ಲುವ ಅಪರೂಪ, ಅಸದೃಶ, ಮೇಲ್ನೋಟಕ್ಕೆ ಪತ್ನಿಯ ಶೀಲವನ್ನೇ ಪಣಕ್ಕಿಡುವಂತಹ ಪ್ರತಿಜ್ಞೆಯನ್ನು ನೋಡಿದ ಮೃತ್ಯುವು ಆತನಲ್ಲಿ ದೋಷವನ್ನು ಹುಡುಕುವ ಸಲುವಾಗಿ ಯಾವಾಗಲೂ ಬೆನ್ನು ಹತ್ತಿದನು[೧] (ದೋಷ ಕಂಡಕೂಡಲೇ ಸಂಹಾರ ಮಾಡಲು).

ಒಂದು ದಿನ ಸುದರ್ಶನನು ಯಜ್ಞದ ಇಂದನಕ್ಕಾಗಿ (ಕಟ್ಟಿಗೆ) ಅರಣ್ಯಕ್ಕೆ ಹೊರಟಾಗ ಓಘವತಿಯನ್ನು ಕುರಿತು ಒಬ್ಬ ಬ್ರಾಹ್ಮಣ ಅತಿಥಿ ಬಂದು ಹೇಳಿದ[೨] –'ಎಲೈ ಸುದರ್ಶನ ರಾಜನ ರಾಣಿಯೇ! ಒಂದು ವೇಳೆ ನಿನಗೆ ಗೃಹಸ್ಥಾಶ್ರಮವು ಪ್ರಮಾಣವಾಗಿದ್ದಲ್ಲಿ ನಿನ್ನನ್ನೇ ನನಗೆ ಸಮರ್ಪಿಸಿ, ನನಗೆ ಪ್ರೀತಿ ಉಂಟುಮಾಡು' ಎಂದ. ಅದಕ್ಕೆ ಆಕೆಯು ಕೂಡಲೇ ಒಪ್ಪದೇ ಬೇರೆ ಬೇರೆ ಆತಿಥ್ಯದ ವಿಷಯಗಳನ್ನು (ಧನ, ಧಾನ್ಯ, ಗೃಹ, ಗೋವುಗಳು, ದಾಸದಾಸಿಯರು ಇತ್ಯಾದಿ) ಕೊಡುವೆ ಎಂದು ಪ್ರಾರ್ಥಿಸಿದರೂ, ಬ್ರಾಹ್ಮಣನು ಒಪ್ಪದೇ 'ಆತ್ಮಪ್ರದಾನ(ತನ್ನ ಶರೀರದಾನ)ವನ್ನೇ ಒತ್ತಾಯಿಸಿದ. ಆಗ ರಾಣಿಯು ಗಂಡನಿಗೆ ತಾನು ಕೊಟ್ಟ ಮಾತನ್ನು ಸ್ಮರಿಸಿಕೊಂಡು ಲಜ್ಜೆಯಿಂದ 'ಹಾಗೆಯೇ ಆಗಲಿ' ಎಂದಳು. ನಂತರ ಆ ವಿಪ್ರರ್ಷಿಯ ಜೊತೆ ಏಕಾಂತದಲ್ಲಿ ಸಮೀಪಿಸಿದಳು(ಕುಳಿತಳು)[೩].

ಅದೇ ವೇಳೆಗೆ ಸುದರ್ಶನನು ಯಜ್ಞೇಂಧನವನ್ನು(ಸೌದೆಗಳನ್ನು) ಸಂಗ್ರಹಿಸಿ ರೌದ್ರರೂಪ ತಾಳಿದ ಮೃತ್ಯುವಿನೊಂದಿಗೆ ಹಿಂಬಾಲಿಸಲ್ಪಟ್ಟವನಾಗಿ (ಮೃತ್ಯು ತನ್ನ ಹಿಂದಿದೆ ಎಂದು ರಾಜನಿಗೆ

---

೧ ಜಗೀಷಮಾಣಂ ತು ಗೃಹೇ ತದಾ ಮೃತ್ಯುಃ ಸುದರ್ಶನಮ್ ।
ಪೃಷ್ಠತೋಽನ್ವಗಮದ್ ರಾಜನ್ ರಂಧ್ರಾನ್ವೇಷೀ ತದಾ ಸದಾ ॥
ಅತಿಥಿರ್ಬ್ರಾಹ್ಮಣಃ ಶ್ರೀಮಾನ್ ತಾಮಾಹೌಘಮತೀಂ ತದಾ ॥ – ೨/೬೭,೬೮

೨ ಯದಿ ಪ್ರಮಾಣಂ ಧರ್ಮಸ್ತೇ ಗೃಹಸ್ಥಾಶ್ರಮ ಸಮ್ಮತಃ ।
ಪ್ರದಾನೇನಾತ್ಮನೋ ರಾಜ್ಞಿಕರ್ತುಮರ್ಹಸಿ ಮೇ ಪ್ರಿಯಮ್ ॥ – ೨/೭೩

೩ ತಯಾ ಸಂಛಂದ್ಯಮಾನೋಽನ್ಯೈರೀಪ್ಸಿತೈರ್ನೃಪಕನ್ಯಯಾ ।
ನಾನ್ಯಮಾತ್ಮಪ್ರದಾನಾತ್ ಸ ತಸ್ಯಾ ವವ್ರೇ ವರಂ ದ್ವಿಜಃ ॥ – ೨/೭೪
ಸಾ ತು ರಾಜಸುತಾ ಸ್ಮೃತ್ವಾ ಭರ್ತುರ್ವಚನಮಾದಿತಃ ।
ತಥೇತಿ ಲಜ್ಜಮಾನಾ ಸಾ ತಮುವಾಚ ದ್ವಿಜರ್ಷಭಮ್ ॥ – ೨/೭೫

ಗೊತ್ತಿಲ್ಲ) ಆಶ್ರಮಕ್ಕೆ ಬಂದನು. ಬಂದವನೇ ಪತ್ನಿಯನ್ನು ಅನೇಕ ಬಾರಿ 'ಓಘವತೀ ಎಲ್ಲಿದ್ದೀ, ಎಲ್ಲಿ ಹೋಗಿದ್ದೀ?' ಎಂದು ಕರೆದ. ಅತಿಥಿ ಬ್ರಾಹ್ಮಣನ ಹಸ್ತಸ್ಪರ್ಶ ಮಾಡಿದ ಕಾರಣದಿಂದಾಗಿ ಪತ್ನಿ ಏಕಾಂತದಲ್ಲಿದ್ದಳಷ್ಟೇ[1]. ಆದ್ದರಿಂದ ಕರೆದ ಪತಿಗೆ ಉತ್ತರಿಸಲಿಲ್ಲ(ನಾಚಿಕೆಯಿಂದ). ಆದರೆ ಪತಿ ಮಾತ್ರ ಮತ್ತೆ ಮತ್ತೆ ನನ್ನ ಸಾಧ್ವೀ ಪತ್ನಿ ಎಲ್ಲಿಗೆ ಹೋದಳು, ನನ್ನ ಬರುವಿಕೆಗಾಗಿ ಕಾಯುತ್ತಿದ್ದ ನನ್ನನ್ನು ಸ್ವಾಗತಿಸುವುದಕ್ಕಿಂತ ಬೇರೆ ಯಾವ ಕಾರ್ಯ ತಾನೇ ನಿನಗಿದೆ ಎಂದು ಕರೆದ.

ಸುದರ್ಶನನ ಮಾತುಗಳನ್ನು ಕೇಳಿದ ಆಶ್ರಮದ ಒಳಗಿದ್ದ ಅತಿಥಿ ಬ್ರಾಹ್ಮಣನು ಹೊರಗೆ ಬಂದು ಸುದರ್ಶನನಿಗೆ ಹೇಳಿದ '[2](ಎಲೈ ಸುದರ್ಶನನೇ!) ನಿನ್ನ ಪತ್ನಿಯು ಅತಿಥಿಯಾಗಿ ಬಂದ ನನ್ನನ್ನು ಸಂತೋಷಿಸುತ್ತಿದ್ದಾಳೆ. ಆಕೆಯ ಪ್ರಾಮಾಣಿಕತೆಯಲ್ಲಿ, ಸರಳನಡೆಯಲ್ಲಿ ನನ್ನ ಮನಸ್ಸು ನೆಟ್ಟಿದೆ. ಈ ವಿಷಯದಲ್ಲಿ ಯಾವುದು ಅನುರೂಪವಾದುದೆಂದು ನೀನು ಹೇಳಬೇಕು...'

ಇದೆಲ್ಲ ನೋಡುತ್ತಿದ್ದ ಮೃತ್ಯು, ಸುದರ್ಶನನ ಪ್ರತಿಜ್ಞೆ ಇನ್ನೇನು ಭಂಗವಾಗುತ್ತದೆ. ಇವನನ್ನು ಕೊಲ್ಲುವೆ ಎಂದು ಆತನನ್ನು ಹಿಂಬಾಲಿಸಿ ಬಂದನು[3]. ಆದರೆ ಸುದರ್ಶನನು ಮೃತ್ಯುವಿನ ನಿರೀಕ್ಷೆ ಸುಳ್ಳು ಮಾಡುತ್ತಾ, ಮುಗುಳ್ನಗೆಯಿಂದ ಕಾಯೇನ ವಾಚಾ ಅಸೂಯಾರಹಿತವಾಗಿ (ನನ್ನ ಹೆಂಡತಿಯನ್ನು ಅತಿಥಿರೂಪದಲ್ಲಿ ಬಂದು ಕಾಮಿಸುತ್ತಿರುವನಲ್ಲಾ ಎಂದು) ಸಿಟ್ಟಾಗದೆ ಆ ಬ್ರಾಹ್ಮಣ ಅತಿಥಿಗೆ ಹೇಳಿದ –

'ಎಲೈ ಬ್ರಾಹ್ಮಣನೇ! ನನ್ನ ಪತ್ನಿಯೊಡನೆ ನಿನ್ನ ಸಮಾಗಮ(ಸುರತ-ರತಿಕ್ರೀಡೆ) ವಾಗಲಿ. ಬಂದ ಅತಿಥಿಯ ಪೂಜೆ ಗೃಹಸ್ಥನ ಪರಮಕರ್ತವ್ಯ. ಅದೇ ನನಗೆ ಪರಮ ಪ್ರೀತ್ಯಾಸ್ಪದವಾದುದು. ಅದುವೇ ಜ್ಞಾನಿಗಳ ಮತ. ನನ್ನ ಪ್ರಾಣಗಳು, ಹೆಂಡತಿ ಮತ್ತು ನಮ್ಮ ಮನೆಯಲ್ಲಿರುವ ಯಾವುದೇ ಸಂಪತ್ತು, ಅತಿಥಿಗಳಿಗೇ ಕೊಡಬೇಕೆಂಬುದೆ ನನ್ನ ವ್ರತವಾಗಿದೆ. ಇದರಲ್ಲಿ ಯಾವುದೇ ಸಂಶಯವಿಲ್ಲ. ನಾನು ಶಪಥ ಮಾಡಿ ಹೇಳುತ್ತೇನೆ. ಪಂಚಭೂತಗಳು

---

೧ ತಸ್ಮೈ ಪ್ರತಿವಚಃ ಸಾ ತು ಭರ್ತ್ರೇ ನ ಪ್ರದದೌ ತದಾ ।
ಕರಾಭ್ಯಾಂ ತೇನ ವಿಪ್ರೇಣ ಸ್ಪೃಷ್ಟಾ ಭರ್ತೃವ್ರತಾ ಸತೀ ॥ – ೭೯
ಉಚ್ಛಿಷ್ಟಾಽಸ್ಮೀತಿ ಮನ್ವಾನಾ ಲಜ್ಜಿತಾ ಭರ್ತುರೇವ ಚ ।
ತೂಷ್ಣೀಂಭೂತಾ ಭವತ್ ಸಾಧ್ವೀ ನ ಚೋವಾಚಾಥ ಕಿಂಚನ ॥ – ೮೦

೨ ಉಟಜಸ್ಥಸ್ತು ತಂ ವಿಪ್ರಃ ಪ್ರತ್ಯುವಾಚ ಸುದರ್ಶನಮ್ ।
ಅತಿಥಿಂ ವಿದ್ಧಿ ಸಂಪ್ರಾಪ್ತಂ........................ ॥ – ೮೩
ತೈಸ್ತೈರತಿಥಿಸತ್ಕಾರೈರಾರ್ಜವೇಽಸ್ಯಾ ಶ್ರಿತಂ ಮನಃ । – ೮೪
ಅನೇನ ವಿಧಿನಾ ಸೇಯಂ ಮಾಮರ್ಚತಿ ಶುಭಾನನಾ ।
ಅನುರೂಪಂ ಯದತ್ರಾದ್ಯ ತದ್ ಭವಾನ್ ವಕ್ತುಮರ್ಹತಿ ॥ – ೮೫

೩ ಕೂಟಮುದ್ಗರಹಸ್ತಸ್ತು ಮೃತ್ಯುಸ್ತಂ ವೈ ಸಮನ್ವಯಾತ್ ।
ಜೀರ್ಣಪ್ರತಿಜ್ಞಮತ್ಯೈನಂ ವಧಿಷ್ಯಾಮೀತಿ ಚಿಂತಯನ್ ॥ – ೮೬

ಹತ್ತು ದಿಕ್ಕುಗಳು, ಬುದ್ಧಿ ಮನಸ್ಸು, ಆತ್ಮ, ಕಾಲ(ಇವುಗಳ ಅಭಿಮಾನಿ ದೇವತೆಗಳು) ನಮ್ಮ ದೇಹದಲ್ಲಿದ್ದು ನಾವು ಮಾಡುವ ಶುಭಾಶುಭ ಕರ್ಮಗಳಿಗೆ ಸಾಕ್ಷಿಯಾಗಿರುತ್ತವೆ. ಆದ್ದರಿಂದ ನಾನು ಆಡಿದ ಮಾತು ಸತ್ಯವಾಗಿದ್ದರೆ, ಈ ಸಾಕ್ಷಿದೇವತೆಗಳು ನನ್ನನ್ನು ರಕ್ಷಿಸಲಿ, ಇಲ್ಲದಿದ್ದರೆ ಸುಡಲಿ.[೧]" ಹೀಗೆ ಸುದರ್ಶನ ಹೇಳುತ್ತಿರಲು ಎಲ್ಲ ದಿಕ್ಕುಗಳಿಂದ ಅನೇಕ ಬಾರಿ 'ಈ ಮಾತು ಸತ್ಯ, ಸುಳ್ಳಲ್ಲ'[೨] ಎಂದು ಕೇಳಿ ಬಂತು.

ಆಗ ಬ್ರಾಹ್ಮಣನು ಆಶ್ರಮದಿಂದ ಹೊರಬಂದನು. ಆತನ ಶರೀರ ಭೂಮ್ಯಂತರಿಕ್ಷಗಳನ್ನು ವಾಯುವಿನಂತೆ ವ್ಯಾಪಿಸಿತ್ತು. ಬಂದು ಹೀಗೆ ನುಡಿದ ಆ ಬ್ರಾಹ್ಮಣ - 'ಸುದರ್ಶನ! ನಿನಗೆ ಮಂಗಳವಾಗಲಿ. ನಾನು ಧರ್ಮದೇವತೆ. ನಿನ್ನ ಸತ್ಯ ನೋಡಿ ಸಂತೋಷವಾಯಿತು. ನೀನು ಮೃತ್ಯುವನ್ನು ಗೆದ್ದೆ. ನಿನ್ನನ್ನು ಬೆನ್ನು ಹತ್ತಿದ್ದ ಮೃತ್ಯುವನ್ನು ವಶ ಪಡಿಸಿಕೊಂಡೆ. ಪತಿವ್ರತೆಯಾದ ನಿನ್ನ ಭಾರ್ಯೆಯನ್ನು ಮೂರು ಲೋಕದಲ್ಲಿ ಯಾರಿಗೂ ನೋಡಲು ಸಾಧ್ಯವಿಲ್ಲ. ನಿನ್ನ ಗುಣಗಳಿಂದ ಹಾಗೂ ಆಕೆಯ ಪಾತಿವ್ರತ್ಯದಿಂದ ರಕ್ಷಿತಳಾದವಳನ್ನು ಯಾರೂ ಬಲಾತ್ಕರಿಸಲಾರರು. ಆಕೆಯು ನುಡಿದುದೇ ಸತ್ಯ. ಬ್ರಹ್ಮವಾದಿಯಾದ ನಿನ್ನ ಪತ್ನಿ ಲೋಕವನ್ನು ಪವಿತ್ರೀಕರಿಸಲು ತನ್ನ ಅರ್ಧಶರೀರದಿಂದ ನದಿಯಾಗಿ ಹರಿಯುವಳು. ಇನ್ನರ್ಧ ಶರೀರದಿಂದ ನಿನ್ನನ್ನು ಅನುಸರಿಸುವಳು. ನೀನು ಈಕೆಯೊಡನೆ ಪುನರಾವೃತ್ತಿಯಿಲ್ಲದ ಶಾಶ್ವತ ಲೋಕಗಳಿಗೆ ಹೋಗುವೆ. ನೀನು ನಿನ್ನ ಗೃಹಸ್ಥಧರ್ಮದಿಂದ ಪಂಚಭೂತಗಳನ್ನು ಮೀರಿಸಿದ್ದಿ. ಮನ್ಮಥನನ್ನು ಗೆದ್ದೀಯಾ. ಕಾಮಕ್ರೋಧಗಳನ್ನು ಗೆದ್ದೀಯಾ. ನಿನ್ನ ಸೇವೆಯ ಫಲವಾಗಿ ನಿನ್ನ ಪತ್ನಿಯು ನಿನ್ನ ಸೇವೆಯಿಂದಲೇ ವಿಷಯಗಳಲ್ಲಿ ಸ್ನೇಹ, ರಾಗ, ಆಲಸ್ಯ, ಮೋಹ, ದ್ರೋಹವೆಂಬ ದ್ರೋಹಗಳನ್ನು ಗೆದ್ದಿದ್ದಾಳೆ(ವಿಹಿತವಿಷಯಗಳಲ್ಲಿ ಸ್ನೇಹವಿದೆ, ನಿಷಿದ್ಧ ವಿಷಯಗಳಲ್ಲಿ ಆಲಸ್ಯಾದಿಗಳಿವೆ. ಮಿಥ್ಯಾಜ್ಞಾನವಿಲ್ಲ, ಪತಿ, ತದನುಬಂಧಿಗಳ ಬಗ್ಗೆ ದ್ವೇಷ ಮಾಡುವುದಿಲ್ಲ)[೩].

---

೧ ಸುದರ್ಶನಸ್ತು ಮನಸಾ ಕರ್ಮಣಾ ಚಕ್ಷುಷಾ ಗಿರಾ।
ತ್ಯಕ್ತೇರ್ಷಸ್ತ್ಯಕ್ತಮನ್ಯುಶ್ಚ ಸ್ಮಯಮಾನೋಽಬ್ರವೀದಿದಮ್ ॥ - ೮೭
ಸುರತಂ ಮೇಽಸ್ತು ವಿಪ್ರಾಗ್ರ್ಯ ಪ್ರೀತಿರ್ಹಿ ಪರಮಾ ಮಮ ॥ - ೮೮
ಪ್ರಾಣಾ ಹಿ ಮಮ ದಾರಾಶ್ಚ ಯಚ್ಚಾನ್ಯದ್ ವಿದ್ಯತೇ ವಸು।
ಅತಿಥಿಭ್ಯೋ ಮಯಾ ದೇಯಮಿತಿ ಮೇ ವ್ರತಮಾಹಿತಮ್ ॥ - ೯೦
..............
೨ ತತೋ ನಾದಃ ಸಮಭವತ್ ದಿಕ್ಷು ಸರ್ವಾಸು ಭಾರತ।
ಅಸಕೃತ್ ಸತ್ಯಮಿತ್ಯೇವ ನೈತನ್ಮಿಥ್ಯೇತಿ ಸರ್ವಶಃ ॥ - ೯೫
೩. ಉಟಜಾತ್ ತು ತತಸ್ತಸ್ಮಾನ್ನಿಶ್ಚಕ್ರಾಮ ಸ ವೈ ದ್ವಿಜಃ। - ೯೬
ಉವಾಚ ಚೈನಂ (ಸುದರ್ಶನಮ್)-
ಧರ್ಮೋಽಹಮಸ್ಮಿ ಭದ್ರಂ ತೇ ಜಿಜ್ಞಾಸಾರ್ಥಂ ತವಾನಘ। - ೯೮
ಪ್ರಾಪ್ತಂ..............................

ಭೀಷ್ಮರು ಧರ್ಮರಾಜನಿಗೆ ಈ ಉಪಾಖ್ಯಾನವನ್ನು ಹೇಳುತ್ತಾ 'ಯಮಧರ್ಮನು ೧೦೦೦ ಕುದುರೆಗಳಿಂದ ಕೂಡಿದ ರಥ ತೆಗೆದುಕೊಂಡು ಸುದರ್ಶನನಿದ್ದಲ್ಲಿಗೆ ಬಂದನು. ಮೃತ್ಯು, ಆತ್ಮ ಬುದ್ಧಿ ಲೋಕಗಳು, ಪಂಚಭೂತಗಳು ಎಲ್ಲವೂ ಸುದರ್ಶನನಿಂದ ಗೆಲ್ಲಲ್ಪಟ್ಟವು. ಕಾಮಕ್ರೋಧಾದಿಗಳು ಗೆಲ್ಲಲ್ಪಟ್ಟವೆ( ಅಂದರೆ ಗುಣಗಳ ಅಭಿಮಾನಿ ದೇವತೆಗಳು ಸುದರ್ಶನನಿಗೆ ಅನುಗ್ರಹ ಮಾಡಿದರೆಂದು ಅಭಿಪ್ರಾಯ). ಆದ್ದರಿಂದ ಗೃಹಸ್ಥಾಶ್ರಮದಲ್ಲಿರುವವನಿಗೆ ಅತಿಥಿ ಪೂಜೆಗಿಂತ ಮಿಗಿಲಾದ ದೇವತೆ ಇಲ್ಲ( ದೇವತಾಪೂಜೆ, ಅತಿಥಿ ಅಧಿಷ್ಠಾನದಲ್ಲಿಯೇ).

ಧರ್ಮರಾಜನೇ! ಇದನ್ನು ನೀನು ಮನಸ್ಸಿನಲ್ಲಿರಿಸಿಕೋ. ಹಾಗೆಯೇ ಅನುಷ್ಠಾನ ಮಾಡು. ಎನ್ನುತ್ತಾ ರಾಜನೇ! ಈ ಉಪಾಖ್ಯಾನವನ್ನು ಯಾರು ಕೇಳುತ್ತಾರೋ ಅವರು ಪುಣ್ಯಲೋಕಗಳಿಗೆ ಹೋಗುತ್ತಾರೆ ಎಂದು ಉಪಸಂಹಾರ ಮಾಡಿದರು. ಈ ಉಪಾಖ್ಯಾನವು ಧನ್ಯತೆ, ಕೀರ್ತಿ, ಆಯುಷ್ಯಗಳನ್ನು ಕೊಡುತ್ತದೆಯಲ್ಲದೇ ಸರ್ವಪಾಪನಾಶಕವೂ ಆಗಿದೆ ಎಂದರು ಪಿತಾಮಹ ಭೀಷ್ಮರು.

## ಸಂದೇಶಗಳು

೧. ಮುಖ್ಯ ಸಂದೇಶ ವರ್ಣಾಶ್ರಮಧರ್ಮಗಳ ಪರಿಪಾಲನೆಯಿಂದ ದೈವಾನುಗ್ರಹ, ಸಲ್ಲೋಕಗಳ, ಸದ್ಗತಿ ಪ್ರಾಪ್ತಿ, ಪಂಚಭೂತಾದಿಗಳೂ ವಶಕ್ಕೆ ಬರುವುದು, ಅರಿಷಡ್ವರ್ಗಗಳ ಜಯ, ಇತ್ಯಾದಿ.

೨. ಇಕ್ಷ್ವಾಕುವಂಶದ ದುರ್ಜಯ, ದುರ್ಯೋಧನ, ರಾಜರು ಕ್ಷತ್ರಿಯರ ಆದರ್ಶಗಳನ್ನು ಎತ್ತಿ ಹಿಡಿದವರು.

---

ವಿಜಿತಶ್ಚ ತ್ವಯಾ ಮೃತ್ಯುಃ ಯೋಽಯಂ ತ್ವಾಮನುಗಚ್ಛತಿ ॥ - ೯೯
ನ ಚಾಸ್ತಿ ಶಕ್ತಿಸ್ತ್ರೈಲೋಕ್ಯೇ ಕಸ್ಯಚಿತ್ ಪುರುಷೋತ್ತಮ ।
ಪತಿವ್ರತಾಮಿಮಾಂ ಸಾಧ್ವೀಂ ತವೋದ್ವೀಕ್ಷಿತುಮಪ್ಯುತ ॥ - ೧೦೦
ರಕ್ಷಿತಾ ತ್ವದ್ಗುಣೈರೇಷಾ ಪತಿವ್ರತಗುಣೈಸ್ತಥಾ ।
ಏಷಾ ಹಿ ತಪಸಾ ಸ್ವೇನ ಸಂಯುಕ್ತಾ ಬ್ರಹ್ಮವಾದಿನೀ ॥ - ೧೦೨
ಪಾವನಾರ್ಥಂ ಚ ಲೋಕಸ್ಯ ಸರಿಚ್ಛ್ರೇಷ್ಠಾ ಭವಿಷ್ಯತಿ ॥
ಅರ್ಧೇನೌಘವತೀ ನಾಮ ತ್ವಾಮರ್ಧೇನಾನುಯಾಸ್ಯತಿ ।
ಶರೀರೇಣ ಮಹಾಭಾಗ ಯೋಗೋ ಹ್ಯಸ್ಯಾ ವಶೇ ಸ್ಥಿತಃ ॥ - ೧೦೩
ಅನಯಾ ಸಹ ಲೋಕಾಶ್ಚ ಗಂತಾಸಿ ತಪಸಾಽರ್ಜಿತಾನ್ ।
ಯತ್ರ ನಾವೃತ್ತಿಮಭ್ಯೇತಿ ಶಾಶ್ವತಾನ್ ತಾನ್ ಸನಾತನಾನ್ ॥ - ೧೦೪
ಅನೇನೈವ ಚ ದೇಹೇನ ಲೋಕಾಂಸ್ತ್ವಮಭಿಪತ್ಸ್ಯಸೇ ।
ನಿರ್ಜಿತಶ್ಚ ತ್ವಯಾ ಮೃತ್ಯುರೈಶ್ವರ್ಯಂ ಚ ತವೋತ್ತಮಮ್ ॥ - ೧೦೫

೩. ಇಲ್ಲಿ ಬಂದಿರುವ ದುರ್ಯೋಧನ, ಸೂರ್ಯವಂಶದವನು, ಬಹಳ ಹಿಂದಿನವನು. ಧೃತರಾಷ್ಟ್ರನ ಮಗ ದುರ್ಯೋಧನ ಚಂದ್ರವಂಶದವನು. ಹಾಗೂ ವಂಶಕ್ಕೆ ಅತ್ಯಂತ ಕೆಟ್ಟ ಹೆಸರು ತಂದ ಕುಲಪಾಂಸನ. ಹೆಸರು ಒಂದೇ ಗುಣಗಳು ಮಾತ್ರ ತದ್ವಿರುದ್ಧ.

೪. ದುರ್ಯೋಧನ(ಇಲ್ಲಿ) ತನ್ನ ಮಗಳಾದ ಸುದರ್ಶನೆಯನ್ನು ಬೇಡಿ ಬಂದ ಬ್ರಾಹ್ಮಣ ಯಾಚಕನಿಗೂ ಮದುವೆ ಮಾಡಿ ಕೊಡಲಿಲ್ಲ. ಕಾರಣ ಕ್ಷತ್ರಿಯನಿಗೇ ತನ್ನ ಮಗಳನ್ನು ಕೊಡಬೇಕೆಂಬ ವರ್ಣಧರ್ಮಪರಿಪಾಲನೆಯ ಸಾತ್ವಿಕ ಛಲ. ಆದರೆ ಬ್ರಾಹ್ಮಣರಿಗೆ ಕ್ಷತ್ರಿಯ ಕನ್ಯೆಯರನ್ನು ಕೊಟ್ಟ ಹೇರಳ ಉದಾಹರಣೆಗಳಿವೆ. ಉದಾ: ಸುಕನ್ಯೆಯನ್ನು ಚ್ಯವನರಿಗೆ ಕೊಟ್ಟಿದ್ದು ಇತ್ಯಾದಿ. ಆದರೆ ಯಾಚಿಸಿ ಬಂದ ಬ್ರಾಹ್ಮಣ ಅಗ್ನಿದೇವ ಎಂದು ತಿಳಿದ ಕೂಡಲೇ ತನ್ನ ನಿಲುವು ಬದಲಾಯಿಸಿ ಕೊಡಲೊಪ್ಪಿದ. ಇಲ್ಲೂ ತನ್ನ ಮಗಳು ದೇವತೆಯೊಬ್ಬನನ್ನು ವರಿಸಿದಂತಾಗುತ್ತದೆ ಎಂಬ ಉನ್ನತ ಆದರ್ಶ, ಆಕಾಂಕ್ಷೆ.

೫. ಬಂದ ಬ್ರಾಹ್ಮಣ ಅಗ್ನಿ ಎಂದು ಗೊತ್ತಾದುದು, ಆತನ ಪ್ರತಿಕ್ರಿಯೆಯಿಂದ. ಆತ ರಾಜನ ಯಜ್ಞವೇದಿಕೆಯಿಂದ ಮಂತ್ರಪೂರ್ವಕವಾಗಿ ಆಹ್ವಾನಿಸಿದಾಗಲೂ ಅಲ್ಲಿ ಬರದೆ ಅಂತರ್ಧಾನನಾದುದು. ಇದರಿಂದ ದೇವತೆಗಳನ್ನು ಮಂತ್ರಾಧೀನರಾಗುವ ಅವರ ಸ್ವಭಾವವನ್ನು ಹೇರಲು ಸಾಧ್ಯವಿಲ್ಲ. ಅವರು ಒಲಿದು ಬರಬೇಕೇ ಹೊರತು, ಒತ್ತಾಯದಿಂದಲ್ಲ ಎಂಬ ಸಂದೇಶ ಇಲ್ಲಿದೆ. **'ಯಮೇವೈಷ ವೃಣುತೇ ತೇನ ಲಭ್ಯಃ'** ಎಂಬ ಕಾಠಕವಾಣಿಗೆ ಇದೊಂದು ಒಳ್ಳೆಯ ಉದಾಹರಣೆ.

೬. ಒಮ್ಮೆ ಭಕ್ತರಿಗೆ ಒಲಿದರೆ, ದೇವತೆಗಳು ಏನನ್ನಾದರೂ ಬಯಸಿದುದನ್ನು ಕೊಡುವ ಸ್ವಭಾವ ದೇವತೆಗಳದು. ಆದ್ದರಿಂದಲೇ ಅಗ್ನಿ ಮಾಹಿಷ್ಮತಿ ನಗರದಲ್ಲಿ ತನ್ನ ನಿತ್ಯ ಸನ್ನಿಧಾನದ ಬೇಡಿಕೆಯನ್ನು ಅನುಗ್ರಹಿಸಿದ. ಎಂದರೆ ನಗರ, ದುರ್ಯೋಧನರಾಜ್ಯ ಅಗ್ನಿಯಂತೆ ಪವಿತ್ರವಾಗಿತ್ತು.

೭. ಈ ಪರಂಪರೆ ಮುಂದೆ ಅಗ್ನಿ-ಸುದರ್ಶನೆಯರ ಮಗ ಸುದರ್ಶನ ರಾಜ ಹಾಗೂ ಆತನ ಹೆಂಡತಿ ಓಘವತಿಯರ ಗಾರ್ಹಸ್ಥ್ಯದಾಂಪತ್ಯದಲ್ಲಿ ಮುಂದುವರೆಯಿತು. ಈ ದಂಪತಿಗಳಂತೂ ಗೃಹಸ್ಥಾಶ್ರಮಧರ್ಮಗಳನ್ನು ಅತ್ಯಂತ ಸೂಕ್ಷ್ಮವಾಗಿ ಅನುಷ್ಠಾನ ಮಾಡುತ್ತಿದ್ದುದು ಆ ಆಶ್ರಮಕ್ಕೇನೇ ಕೀರ್ತಿ ತಂದಿತು. ಎಂದರೆ ಸುದರ್ಶನ ಓಘವತಿಯರು ಗೃಹಸ್ಥಧರ್ಮದ ಪರ್ಯಾಯವಾಚಕರಾಗಿದ್ದರೆಂದು ಹೇಳಿದರೆ ತಪ್ಪಾಗದು.

೮. ಗೃಹಸ್ಥಧರ್ಮಗಳು ಅನೇಕ ಇವೆ. ಅದರಲ್ಲೂ ಕಲಶಪ್ರಾಯವಾದುದು ಆತಿಥ್ಯ ಧರ್ಮ. ಇದರಲ್ಲೂ ಸುದರ್ಶನ ದಂಪತಿಗಳದು ಗರಿಷ್ಠ ಹಾಗೂ ಅತ್ಯಂತ ಸೂಕ್ಷ್ಮ ತೋರಿಕೆಯಲ್ಲಿ ಪ್ರಶ್ನಾರ್ಹ ನಡೆ. ಪತ್ನಿಯು ತನ್ನ ಶರೀರವನ್ನು ದಾನ ಮಾಡುವಂತಹ (ಪತ್ನಿಯು ಅತಿಥಿಗೆ ಬಯಸಿದರೆ) ವಿಚಿತ್ರವ್ರತ. ಅದನ್ನು ವ್ರತವನ್ನಾಗಿ ಭಾವಿಸಿದ ಸುದರ್ಶನ, ಪತಿಯ

ಸಂಕಲ್ಪವನ್ನು ಅಷ್ಟೇ ಶ್ರದ್ಧೆಯಿಂದ ನಡೆಸಿಕೊಟ್ಟ ಪತ್ನಿ ಓಘವತಿ. ಎಂದರೆ ಬಂದ ಬ್ರಾಹ್ಮಣ ಅತಿಥಿಗೆ ತನ್ನ ಶಾರೀರಿಕೆ ಸೇವೆಯನ್ನು ಮನಃಪೂರ್ವಕವಾಗಿ ಒಪ್ಪಿದಾಗ ಆ ಅತಿಥಿ ಸಾಮಾನ್ಯ ಅತಿಥಿಯಾಗಿರದೆ, ಧರ್ಮದೇವತೆಯಾಗಿದ್ದ. ಆತನು ಬಂದುದು ದಂಪತಿಗಳ ಆತಿಥ್ಯ ಪರೀಕ್ಷೆಗೆ ಹೊರತು ಪತ್ನಿಯ ಶೀಲವನ್ನು ಕೆಡಿಸಲು, ಅತ್ಯಾಚಾರ ಮಾಡಲು ಅಲ್ಲವೆಂಬುದು ಮುಂದಿನ ಘಟನೆ ಸಾದರಪಡಿಸುತ್ತದೆ.

೯. ಇಲ್ಲಿರುವುದು ಸಾಧಕರನ್ನು ಭಗವಂತನು ಅನೇಕ ವಿಧವಾಗಿ ಪರಿಕ್ಷಿಸುತ್ತಾನೆ ಎನ್ನುವುದು. ಅದಕ್ಕೆ ಸಾಧಕರು ಎಲ್ಲ ತ್ಯಾಗಕ್ಕೂ ಸಿದ್ಧರಾಗಿರಬೇಕು ಎಂಬುದು ಸಂದೇಶ. ಸುದರ್ಶನ(ದಂಪತಿಗಳು) ತನ್ನ ಪ್ರಾಣ, ಹೆಂಡತಿ, ರಾಜ್ಯ, ಧನ, ಕನಕ, ಸಂಪತ್ತು, ಅಥವಾ ತನ್ನಲ್ಲಿರುವ ಎಲ್ಲ ಸಂಪತ್ತು ಅತಿಥಿರೂಪದ ಭಗವಂತನಿಗೆ ಸೇರಿದ್ದೆಂದು ನಂಬಿದ್ದ. ಅಂತೆಯೇ ಆತನ ಹೆಂಡತಿಯ ಪಾತಿವ್ರತ್ಯ ಸೀಮಿತ ಅರ್ಥದಲ್ಲಿರದೆ ಪತಿಯ ಇಚ್ಛೆ, ಆದೇಶಗಳನ್ನು ನಡೆಸಿಕೊಟ್ಟ ಆದರ್ಶ ಸತಿಯಾದಳು.

೧೦. ಇದರಿಂದ ಅವರು ಮೃತ್ಯುವನ್ನು ಗೆದ್ದರೂ, ಸಂಸಾರ ದಾಟಿದರು. ಸಲ್ಲೋಕ, ಸದ್ಗತಿ ಪಡೆದರು. ಎಲ್ಲ ದೇವತೆಗಳ ಅನುಗ್ರಹ ಪಡೆದರೆಂದ ಋಮೇಲೆ ಹರಿವಾಯುಗಳ ಅನುಗ್ರಹ ಸಿಕ್ಕಿತೆಂಬುದು ಕೈಮುತ್ಯಸಿದ್ಧ.

೧೧. ಒಂದು ಕಡೆ ಸುದರ್ಶನನ ಆಶ್ರಮಕ್ಕೆ ಬ್ರಾಹ್ಮಣರೂಪದಲ್ಲಿ ಧರ್ಮದೇವತೆ ಪರೀಕ್ಷೆ ಮಾಡಿದರೆ, ಇನ್ನೊಂದೆಡೆ ಸುದರ್ಶನನನ್ನು ಮೃತ್ಯುದೇವತೆ ಸುದರ್ಶನನ ವ್ರತಭಂಗವನ್ನು ಕಾಯುತ್ತಿದ್ದರೂ, ಇಬ್ಬರೂ ಸೋತರೇ ಹೊರತು ಸುದರ್ಶನ ಸೋಲಲಿಲ್ಲ. ದೇವತೆಗಳೂ ಪ್ರಸನ್ನರಾದರು. ಆದ್ದರಿಂದ ಆತಿಥ್ಯವೆಂಬ ಗೃಹಸ್ಥಧರ್ಮಪರಿಪಾಲನೆ ಮೃತ್ಯುವನ್ನು ಗೆಲ್ಲುವುದರ ಮೂಲಕ ಸಂಸಾರ ಭಯವೆಂಬ ಮೃತ್ಯುವನ್ನೂ ದಾಟಿಸಬಲ್ಲುದು. 'ಅತಿಥಿದೇವೋ ಭವ' ಎಂಬ ವೇದದ ಮಾತು ಈ ಉಪಾಖ್ಯಾನದ ಮೂಲಕ ಪೂರ್ತಿ ಅನಾವರಣಗೊಂಡಿದೆ. ಇತ್ಯಾದಿ....

## ೧೩೩. ವಿಶ್ವಾಮಿತ್ರ ಉಪಾಖ್ಯಾನ

ಧರ್ಮರಾಜನು ಭೀಷ್ಮರನ್ನು ಕುರಿತು ಪ್ರಶ್ನಿಸುತ್ತಾನೆ. ಆತನ ಪ್ರಶ್ನೆ ಆತನ ಅನಿಸಿಕೆಗಳೇ ಇಡೀ ಅಧ್ಯಾಯ ತುಂಬಿದೆ (೧೦೧ ಶ್ಲೋಕಗಳಷ್ಟು). ಇಂತಹ ಪ್ರಶ್ನೆ ತುಂಬಾ ಅಪರೂಪ. ಇಲ್ಲಿ ವಿಶ್ವಾಮಿತ್ರ ಬ್ರಾಹ್ಮಣ್ಯ ಸಂಪಾದಿಸಿದ್ದು ಹೇಗೆ? ಎಂಬ ಪ್ರಶ್ನೆ ಹಾಕಿ, ವಿಶ್ವಾಮಿತ್ರರ ಮಹತ್ತ್ವ ಅವರ ಸಾಧನೆಯ ಪಟ್ಟಿಯನ್ನೇ ಕೊಡುತ್ತಾನೆ ಧರ್ಮರಾಜ. ಒಂದು ದೃಷ್ಟಿಯಿಂದ ವಿಶ್ವಾಮಿತ್ರರ ಬಗ್ಗೆ ಒಂದು ಲಘುಟಿಪ್ಪಣಿ ಬೇಕೆಂದರೆ, ಇದೊಂದು ಆದಕ್ಕೆ ಆಹಾರ(ಉತ್ತರ) ವಾಗಿದೆ. ಧರ್ಮರಾಜನು ಹೇಳುತ್ತಾನೆ. ಕ್ಷತ್ರಿಯ, ವೈಶ್ಯ, ಶೂದ್ರರಿಂದ ಒಂದು ವೇಳೆ ಬ್ರಾಹ್ಮಣ್ಯ ಸಂಪಾದನೆ ಅಸಾಧ್ಯವೆಂದಾದರೆ, ಮಹಾತ್ಮನಾದ ಕ್ಷತ್ರಿಯನಾದ ಗಾಧಿಸುತ ವಿಶ್ವಾಮಿತ್ರ (ಜನ್ಮತಃ ಕ್ಷತ್ರಿಯ)ನಾದರೂ ಬ್ರಾಹ್ಮಣತ್ವವನ್ನು ಹೇಗೆ ಸಂಪಾದಿಸಿದ?

೧. ವಿಶ್ವಾಮಿತ್ರರು ತಮ್ಮ ಅಮಿತಪರಾಕ್ರಮದಿಂದ (ತಪಸ್ಸಿನಿಂದ) ವಶಿಷ್ಠರ ನೂರು ಮಕ್ಕಳನ್ನು ಕೊಂದರು.

೨. ಅವರು ಕೋಪಾವಿಷ್ಠರಾಗಿ ಒಮ್ಮೆ ತಮ್ಮ ದೇಹದಿಂದಲೇ ಅನೇಕ ಕಾಲಾಂತಕರಂತಹ (ಯಮನಂತಹ) ಮತ್ತು ತೀಕ್ಷ್ಣತೇಜಸ್ಸುಳ್ಳ ರಾಕ್ಷಸರನ್ನೂ, ಯಾತುಧಾನರನ್ನೂ ಸೃಷ್ಟಿಸಿದರು.

೩. ಮನುಷ್ಯಲೋಕದಲ್ಲಿ ವಿಶ್ವಾಮಿತ್ರರು ಜ್ಞಾನನಿಧಿಗಳಾದ ಬ್ರಾಹ್ಮಣರಿಂದ ಆದರಿಸಲ್ಪಟ್ಟವರಾಗಿ ನೂರಾರು ಬ್ರಹ್ಮರ್ಷಿಗಳಿಂದ ಕೂಡಿದ ಕುಶಿಕವಂಶವನ್ನು ಸ್ಥಾಪಿಸಿದರು.

೪. ಋಚೀಕರ ಪುತ್ರನಾದ ಮಹಾತಪಸ್ವಿಯಾದ ಶುನಶ್ಶೇಫರು ಹರಿಶ್ಚಂದ್ರನ ಮಹಾಯಜ್ಞದಲ್ಲಿ ಯಜ್ಞಪಶುವಾಗಿ ಮಾಡಲ್ಪಟ್ಟಿದ್ದರು. ಆಗ ವಿಶ್ವಾಮಿತ್ರರು ಶುನಃಶೇಫರನ್ನು ತಮ್ಮ ತಪಃ ಸಾಮರ್ಥ್ಯದಿಂದ ಬಿಡುಗಡೆ ಮಾಡಿಸಿದರು. ಅಲ್ಲದೆ ಶುನಃಶೇಫರನ್ನು ತನ್ನ ಮಗನನ್ನಾಗಿ ಸ್ವೀಕರಿಸಿದರು.

೫. ಶುನಃಶೇಫನನ್ನು ವಿಶ್ವಾಮಿತ್ರರ ಜ್ಯೇಷ್ಠ ಪುತ್ರನಾದ ದೇವರಾಜ ಅಣ್ಣನೆಂದು ಅಂಗೀಕರಿಸದಿದ್ದಾಗ, ನಮಸ್ಕರಿಸದಿದ್ದಾಗ ತನ್ನ ಮಕ್ಕಳನ್ನೇ (ಐವತ್ತು) ಶಪಿಸಿ, ಚಂಡಾಲರನ್ನಾಗಿ ಮಾಡಿದವರು ವಿಶ್ವಾಮಿತ್ರರು (ಕ್ಷತ್ರಿಯ ಮಕ್ಕಳು ಚಂಡಾಲರಾದರು, ಶಾಪದಿಂದ).

೬. ತನ್ನ ಬಂಧುಗಳಿಂದಲೇ ತಿರಸ್ಕೃತನಾದ ಇಕ್ಷ್ವಾಕುವಂಶದ ರಾಜ ತ್ರಿಶಂಕು ಸ್ವರ್ಗಭ್ರಷ್ಟನಾದಾಗ ವಿಶ್ವಾಮಿತ್ರರು ತಮ್ಮ ತಪಸ್ಸಿನಿಂದ ಸ್ವರ್ಗಕ್ಕೆ ಕಳಿಸಿದರು. ತ್ರಿಶಂಕು

ಈಗಲೂ ದಕ್ಷಿಣದಿಕ್ಕಿನಲ್ಲಿ ಆಕಾಶದಲ್ಲಿ ತಲೆಕೆಳಗಾಗಿ ನಿಂತಿರುವರನು (ತ್ರಿಶಂಕುಸ್ವರ್ಗವೆಂದು ಅದರ ಹೆಸರು – ವಿಶ್ವಾಮಿತ್ರರ ಕೃತಕಸ್ವರ್ಗಸೃಷ್ಟಿ ಎಂದೂ ಕರೆಯುವರು).

೭. ಬ್ರಹ್ಮರ್ಷಿ ಹಾಗೂ ರಾಜರ್ಷಿಗಳಿಂದ ಸೇವಿತವಾದ ವಿಶಾಲವಾದ – **ಕೌಶಿಕೀ** ಎಂಬ ವಿಶ್ವಾಮಿತ್ರರು ಸೃಷ್ಟಿಸಿದ ನದಿಯ ತೀರದಲ್ಲಿ ವಿಶ್ವಾಮಿತ್ರರ ತಪೋಭಂಗ ಮಾಡಿದ ರಂಭೆ ಅಪ್ಸರೆಯು ಅವರ ಶಾಪದಿಂದಾಗಿ ಪರ್ವತಳಾದಳು (ಪರ್ವತಾಕಾರ ತಾಳಿ ನಿಶ್ಚೇಷ್ಟಿತಳಾದಳು – ಅಹಲ್ಯೆಯಂತೆ)

೮. ವಿಶ್ವಾಮಿತ್ರರ ದೌರ್ಜನ್ಯಕ್ಕೆ ಹೆದರಿ ಆತ್ಮಹತ್ಯೆ ಮಾಡಿಕೊಳ್ಳಲು ಪಾಶಗಳನ್ನು ಕಟ್ಟಿಕೊಂಡು ನದಿಯಲ್ಲಿ ಮುಳುಗಿದರೂ ಮೇಲೆದ್ದರು (ಯಾರು?) ಆ ನದಿ **ವಿಪಾಶಾ** ಎಂದೇ ಹೆಸರಾಗಿದೆ.

೯. ಇಂದ್ರನನ್ನು ಸ್ತೋತ್ರಮಾಡಿ ತಮಗೆ ವಸಿಷ್ಠರ ಪುತ್ರರ ಶಾಪದಿಂದ ಬಂದ ಚಂಡಾಲತ್ವವನ್ನು ಕಳೆದುಕೊಂಡವರು ವಿಶ್ವಾಮಿತ್ರರು.

೧೦. ವಿಶ್ವಾಮಿತ್ರರು (ಉತ್ತಾನಪಾದ ಮಗನಾದ) ಧ್ರುವನಕ್ಷತ್ರದ ಸಮೀಪವಿರುವ ಬ್ರಹ್ಮರ್ಷಿಗಳ ಸಮೂಹವಾದ ಸಪ್ತರ್ಷಿಗಣಗಳ ಮಧ್ಯದಲ್ಲಿ ಯಾವಾಗಲೂ ಪ್ರಜ್ವಲಿಸುತ್ತಾ ಇರುತ್ತಾರೆ.

ಇಂತಹ ಕ್ಷಾತ್ರತೇಜಸ್ಸುಳ್ಳ ವಿಶ್ವಾಮಿತ್ರರಿಗೆ ಹೇಗೆ ಬ್ರಾಹ್ಮಣತ್ವ ಬಂತು? ಅದೂ ಕೂಡಾ ಅದೇ ಜನ್ಮದಲ್ಲಿ ಬೇರೆ (ಬ್ರಾಹ್ಮಣ) ಜನ್ಮದಲ್ಲಿ ಬಂದಿದ್ದರೆ ಆ ಮಾತು ಬೇರೆ. ಮತಂಗರು ಬ್ರಾಹ್ಮಣ್ಯ ಹೊಂದಲಿಲ್ಲವೆಂದು ಕೇಳಿದ್ದೇವೆ. ಅದು ಸರಿಯೇ. ಅವರು ಚಂಡಾಲರಾಗಿದ್ದರು. ಚಂಡಾಲಯೋನಿಯಲ್ಲಿ ಹುಟ್ಟಿದವನು ಹೇಗೆ ತಾನೇ ಬ್ರಾಹ್ಮಣನಾದನು? ಆದರೆ ವಿಶ್ವಾಮಿತ್ರರು ಕ್ಷತ್ರಿಯರಾಗಿ ಜನಿಸಿ ಬ್ರಾಹ್ಮಣ್ಯವನ್ನು ಹೇಗೆ ಸಂಪಾದಿಸಿದರೆಂದು ತಿಳಿಸು ಎಂಬುದಾಗಿ ಧರ್ಮರಾಜನು ಭೀಷ್ಮರಿಗೆ ಪ್ರಾರ್ಥಿಸುತ್ತಾನೆ[1].

ಇದಕ್ಕೆ ಪಿತಾಮಹರಾದ ಭೀಷ್ಮರು –

'ಎಲೈ ಪಾರ್ಥನೇ! ವಿಶ್ವಾಮಿತ್ರರು ಬ್ರಾಹ್ಮಣತ್ವವನ್ನು ಮತ್ತು ರಾಜರ್ಷಿತ್ವವನ್ನು ಹೇಗೆ ಹೊಂದಿದರೆಂದು ಕೇಳು' ಎಂದರು.

ಭರತನವಂಶದಲ್ಲಿ ಹಿಂದೆ 'ಅಜಮೀಢ' ರಾಜನಿದ್ದ. ಅವನು ಯಜ್ಞಶೀಲ ಹಾಗೂ ಧರ್ಮಿಷ್ಠ ಅವನ ಮಗ ಜಹ್ನು ಗಂಗೆ ಆತನ ಮಗಳಾಗಿ ಪ್ರಸಿದ್ಧಳಾದವಳು (ಸಾಕ್ಷಾತ್ ಅಲ್ಲ).

---

೧ ಬ್ರಾಹ್ಮಣ್ಯಂ ಯದಿ ದುಷ್ಪ್ರಾಪಂ ತ್ರಿಭಿರ್ವರ್ಣೈರ್ನರಾಧಿಪ।
ಕಥಂ ಪ್ರಾಪ್ತಂ ಮಹಾರಾಜ ಕ್ಷತ್ರಿಯೇಣ ಮಹಾತ್ಮನಾ ॥ – ೩/೧
ವಿಶ್ವಾಮಿತ್ರೇಣ ಧರ್ಮಾತ್ಮನ್ ಬ್ರಾಹ್ಮಣತ್ವಂ ನರರ್ಷಭ ॥ – ೩/೨

ಅವನ ಮಗ ಸಿಂಧುದ್ವೀಪ, ಆತನ ಮಗ ವಿಪಾಶಾಶ್ವ (ಬಲಾಕಾಶ್ವ). ಈತನ ಪುತ್ರ ಪಲ್ಲವ, ಧರ್ಮದ ಅಪರಾವತಾರದಂತಿದ್ದ. ಈತನ ಮಗನೇ ಇಂದ್ರಸಮಾನ ಕಾಂತಿವಂತ ಕುಶಿಕ. ಕುಶಿಕನ ಮಗನೇ ಗಾಧಿ. ಈತನು ಸಂತಾನ ಹೀನನಾಗಿರಲು (ವಾನಪ್ರಸ್ಥಾಶ್ರಮದಿಂದ) ವನವಾಸ ಮಾಡಿದನು. ಅಲ್ಲಿ ಈತನಿಗೆ ಅಸದೃಶರೂಪವತಿಯಾದ ಸತ್ಯವತೀ ಎಂಬ ಮಗಳು ಜನಿಸಿದಳು.

ಈ ಸತ್ಯವತೀಯನ್ನು ಭೃಗುವಂಶದ ಮಹಾತಪಸ್ವಿಗಳಾದ ಋಚೀಕರು (ಚ್ಯವನ-ಸುಕನ್ಯೆಯರ ಪುತ್ರರು) ಗಾಧಿಯ ಬಳಿ ಬಂದು ಯಾಚಿಸಿದರೂ, ಗಾಧಿ ಕೊಡಲಿಲ್ಲ. ಋಚೀಕರು ದರಿದ್ರರೆಂದು ಭಾವಿಸಿ. ಆದರೂ ಮತ್ತೆ ಕರೆದು ಒಂದು ಕಿವಿಮಾತ್ರ ಕಪ್ಪಾದ, ಚಂದ್ರಕಾಂತಿಯುಳ್ಳ, ವಾಯುವೇಗವುಳ್ಳ ೧೦೦೦ ಕುದುರೆಗಳನ್ನು ಕನ್ಯಾಶುಲ್ಕವಾಗಿ ಕೊಟ್ಟರೆ ಮಗಳನ್ನು ಕೊಡುವುದಾಗಿ ಹೇಳಿದ ಗಾಧಿ. ಅದಕ್ಕೊಪ್ಪಿದ ಋಚೀಕರು ವರುಣನ ಬಳಿ ಹೋಗಿ ತಮಗೆ ೧೦೦೦(ಇಂತಹ) ಕುದುರೆಗಳನ್ನು ಪ್ರಾರ್ಥಿಸಿದರು. ಅದಕ್ಕೆ ವರುಣನು ಒಪ್ಪಿ ನೀವು ಬಯಸುವ ಸ್ಥಳದಲ್ಲಿ ಮೇಲೆದ್ದು ಬರುತ್ತವೆ ಎಂದು ಹೇಳಿದರು. ಆದರಂತೆ ಋಚೀಕರು ಕನ್ಯಾಕುಬ್ಜನಗರದ ಸಮೀಪದ ಗಂಗಾತೀರದಲ್ಲಿ ಧ್ಯಾನಮಾಡಿದ ಕೂಡಲೇ ೧೦೦೦ ಕುದುರೆಗಳು ಎದ್ದು ಬಂದವು. ಅವನ್ನು ಋಚೀಕರು ಗಾಧಿಗೆ ಕೊಟ್ಟರು. ಆಶ್ಚರ್ಯಗೊಂಡ ರಾಜನು ಶಾಪಕ್ಕೆ (ಅವರ) ಹೆದರಿ ಕೂಡಲೇ ಸಾಲಂಕೃತ ಮಗಳನ್ನು ಅವರಿಗೆ ಕನ್ಯಾದಾನ ಮಾಡಿ ಕೊಟ್ಟನು. ಋಚೀಕರು ಸತ್ಯವತಿಯೊಡನೆ ಸುಖೀ ದಾಂಪತ್ಯ ಹೊಂದಿದರು. ಆಕೆಯೂ ತುಂಬಾ ಸಂತೋಷ ಹೊಂದಿದ್ದಳು. ಆಕೆಯ ಸೇವೆಗೆ ಪ್ರಸನ್ನರಾದ ಋಚೀಕರು ಬೇಕಾದ ವರವನ್ನು ಕೇಳೆಂದರು.

ಆಗ ಸತ್ಯವತಿ ದೇವಿಯು ಇದೆಲ್ಲವನ್ನು ತನ್ನ ತಾಯಿಗೆ ಹೇಳಿದಳು. ಅದಕ್ಕೆ ಆಕೆಯು ತನಗೂ ಒಬ್ಬ ಸತ್ಪುತ್ರನಾಗಲು ಅನುಗ್ರಹ ಮಾಡಲು ಅಳಿಯನಿಗೆ ಪ್ರಾರ್ಥಿಸೆಂದು ಮಗಳಿಗೆ ಹೇಳಿದಳು. ಅಂತೆಯೇ ಸತ್ಯವತಿಯು ತನ್ನ ಪತಿಗೆ ಪ್ರಾರ್ಥಿಸಲು ಅವರು 'ತಥಾಸ್ತು' ಎಂದು ಹೇಳುತ್ತಾ ನಿಮ್ಮ ತಾಯಿ ನನ್ನ ಮೇಲೆ ತೋರಿಸಿದ ಪ್ರೀತಿ ವಿಶ್ವಾಸವು ವ್ಯರ್ಥವಾಗದಿರಲೆಂದು ಹೇಳುತ್ತಾ 'ನಿನಗೆ ಹಾಗೂ ನಿನ್ನ ತಾಯಿಗೆ ಗುಣವಂತರಾದ, ವಂಶಶುಭಕರರಾದ ಪುತ್ರರು ಜನಿಸುವರು' ಎಂದರು.

'ಎಲೈ ಸತ್ಯವತಿಯೇ! ನೀನು ಹಾಗು ನಿನ್ನ ತಾಯಿ ಋತುಸ್ನಾತಳಾದ ದಿನದಂದು ಕ್ರಮವಾಗಿ ಅಶ್ವತ್ಥ ಹಾಗೂ ಔದುಂಬರ ವೃಕ್ಷವನ್ನು ಆಲಿಂಗಿಸಿರಿ. ಅದರಿಂದ ನಿಮಗೆ ಬಯಕೆ ಈಡೇರುತ್ತವೆ. ಅಲ್ಲದೆ ನಿಮ್ಮಿಬ್ಬರಿಗೆ ಪ್ರತ್ಯೇಕವಾಗಿ ಎರಡು ಅಭಿಮಂತ್ರಿಸಿದ ಚರುಗಳನ್ನು ನೀವಿಬ್ಬರೂ ಭುಂಜಿಸಿರಿ(ಉಣ್ಣಿರಿ-ತಿನ್ನಿರಿ). ಅದರಿಂದ ಸತ್ಪುತ್ರರಾಗುವರು' ಎಂದರು. ತಾಯಿಗೆ ಮತ್ತೆ ಇದೆಲ್ಲವನ್ನೂ ಹೇಳಿದಳು ಸತ್ಯವತೀದೇವಿ.

ನಂತರ ತಾಯಿಯು ಮಗಳಿಗೆ ನಾನು ನಿನಗೆ ಶಿರಸಾ ಅಭಿನಂದಿಸಿ(ಪ್ರಸನ್ನಳಾಗಿ) ಒಂದು ಮಾತನ್ನು ಹೇಳುತ್ತೇನೆ. ಅದನ್ನು ನಡೆಸಿಕೊಡು ಎಂದಳು. ಮಗಳು ಒಪ್ಪಿದಳು. ಅದರಂತೆ ಇಬ್ಬರೂ ಋಚೀಕರು ಹೇಳಿದಂತೆ ಮಾಡದೆ, ಸತ್ಯವತಿಯು ಔದುಂಬರ ವೃಕ್ಷವನ್ನೂ ತಾಯಿಯು ಅಶ್ವತ್ಥವೃಕ್ಷವನ್ನೂ ಆಲಿಂಗಿಸಿದರು. ಅಲ್ಲದೆ ಚರುಗಳನ್ನು ಅದಲು ಬದಲು ಮಾಡಿಕೊಂಡು ಉಂಡರು.

ಕೆಲವು ಕಾಲದ ಮೇಲೆ ಇಬ್ಬರೂ ಗರ್ಭಿಣಿಯರಾದರು. ಇದನ್ನು ನೋಡಿದ ಋಚೀಕರು ಬೇಸರಗೊಂಡು ಪತ್ನಿಗೆ 'ನೀನು, ನಾನು ಹೇಳಿದಂತೆ ಮಾಡದೆ ವ್ಯತ್ಯಾಸ ಮಾಡಿದ್ದೀಯಾ ಎಂದು ನಿನ್ನನ್ನು ನೋಡಿದಾಗ ತೋರುತ್ತದೆ (ಮುಖಲಕ್ಷಣದಿಂದ). ನಿನ್ನ ಚರುವಿನಲ್ಲಿ ಬ್ರಾಹ್ಮತೇಜಸ್ಸನ್ನು, ನಿನ್ನ ತಾಯಿಯ ಚರುವಿನಲ್ಲಿ ಕ್ಷಾತ್ರತೇಜಸ್ಸನ್ನು ಅಭಿಮಂತ್ರಿಸಿದ್ದೆ. ನೀವು ವ್ಯತ್ಯಾಸ ಮಾಡಿದ್ದರಿಂದಾಗಿ ನಿನಗೆ ಕ್ರೂರಕರ್ಮಿಯಾದ ಕ್ಷತ್ರಿಯಕುಮಾರನೂ, ನಿನ್ನ ತಾಯಿಗೆ ಶ್ರೇಷ್ಠನಾದ ಬ್ರಾಹ್ಮಣಪುತ್ರರು ಜನಿಸುವರೆಂದು ಋಚೀಕರು ಬೇಸರದಿಂದ ಹೇಳಿದರು. ಇದರಿಂದ ನೊಂದ ಸತ್ಯವತೀ ಶೋಕತಪ್ತಳಾಗಿ ಭೂಮಿಯ ಮೇಲೆ ಕುಸಿದಳು. ಮತ್ತೆ ಎಚ್ಚೆತ್ತು ಗಂಡನಿಗೆ 'ಸ್ವಾಮಿ ತಮ್ಮ ಪತ್ನಿಯಾಗಿ ಪ್ರಾರ್ಥಿಸುತ್ತಿದ್ದೇನೆ. ನನಗೆ ಬ್ರಾಹ್ಮಣಪುತ್ರನೇ ಜನಿಸಲಿ. ದಯವಿಟ್ಟು ಅನುಗ್ರಹಿಸಿ' ಎಂದಳು. ಅದಕ್ಕೆ ಪತಿಯು 'ಹಾಗೆಯೇ ಆಗಲಿ' ಎಂದರು. ಅಂತೆಯೇ ಸತ್ಯವತಿಗೆ ಜಮದಗ್ನಿ ಋಷಿಗಳು ತಾಯಿಗೆ ವಿಶ್ವಾಮಿತ್ರರು (ಬ್ರಹ್ಮತೇಜಸ್ಸುಳ್ಳ) ಪುತ್ರರು ಜನಿಸಿದರು.

ಹೀಗೆ ಗಾಧಿಯ ಪತ್ನಿಯು ಬ್ರಹ್ಮವಾದಿಗಳಾದ ಬ್ರಹ್ಮರ್ಷಿಯಾದ ವಿಶ್ವಾಮಿತ್ರರನ್ನು ಪಡೆದಳು. ಈ ಕಾರಣದಿಂದ ಕ್ಷತ್ರಿಯರಾಗಿ ಜನಿಸಿದರೂ, ವಿಶ್ವಾಮಿತ್ರರು ಬ್ರಾಹ್ಮಣವಂಶಕ್ಕೆ ಕಾರಣರಾದರು. ಅವರ ೫೦ ಜನ ಮಕ್ಕಳು ಬ್ರಾಹ್ಮಣವಂಶವರ್ಧನರೂ, ತಪಸ್ವಿಗಳೂ, ಬ್ರಹ್ಮಜ್ಞಾನಿಗಳೂ, ಗೋತ್ರಾಭಿವರ್ಧಕರೂ ಆದರು. ಅವರು ಯಾರೆಂದರೆ – ಮಧುಚ್ಛಂದ, ದೇವರಾತ, ಶುನಃಶೇಫ, ಯಾಜ್ಞವಲ್ಕ್ಯ, ಗಾಲವ, ಬಾಷ್ಕಲಿ, ಅಶ್ವಲಾಯನ, ಶ್ಯಾಮಾಯನ, ಗಾರ್ಗ್ಯ, ಜಾಬಾಲ, ಸುಶ್ರುತ ಮೊದಲಾದವರು.

## ಸಂದೇಶಗಳು

೧. ಮುಖ್ಯಸಂದೇಶ – ಋಚೀಕರ ತಪಃಸಾಮರ್ಥ್ಯದಿಂದ ರಾಜರ್ಷಿ, ಬ್ರಹ್ಮರ್ಷಿಗಳಾದ ವಿಶ್ವಾಮಿತ್ರರು ಸಪ್ತರ್ಷಿಗಳಲ್ಲಿ ಒಬ್ಬರಾದ ಜಮದಗ್ನಿಗಳೂ ಜನಿಸಿದರು. ಕ್ಷತ್ರಜನ್ಮದಿಂದ ಬ್ರಾಹ್ಮಣರಾಗಿ (ಅದೇ ದೇಹದಲ್ಲಿ) ಬ್ರಹ್ಮರ್ಷಿಗಳಾದುದು. ಋಚೀಕರ ಹಾಗೂ ವಿಶ್ವಾಮಿತ್ರರ ತಪಸ್ಸುಗಳ ಫಲ. ವಸಿಷ್ಠರಂಥ ಬ್ರಹ್ಮರ್ಷಿಗಳೊಂದಿಗೆ ಪೈಪೋಟಿ ಮಾಡಿದ ಛಲಗಾರರು. ವಿಶ್ವಾಮಿತ್ರರು. ಪರಶುರಾಮರಂತಹ ಭಗವದವತಾರಿಗೆ ಜನ್ಮ ಕೊಡುವ ಪವಿತ್ರರಾದ

ಜಮದಗ್ನಿಗಳ ತಂದೆಯಾಗುವ ತಪಸ್ಸು ಋಚೀಕರದು. ಆದ್ದರಿಂದ ಪ್ರತಿಯೊಬ್ಬರೂ ತಪಸ್ಸನ್ನು (ವಿದ್ಯುಕ್ತವಾದ) ಮಾಡುವ ಹವ್ಯಾಸ ಅತ್ಯಂತ ಅವಶ್ಯಕ – ವಿಶೇಷವಾಗಿ ಬ್ರಾಹ್ಮಣರಿಗೆ.

೨. ಋಚೀಕರ ಪತ್ನಿ ಹಾಗೂ ಆಕೆಯ ತಾಯಿಯ ವರ ಚರು ವ್ಯತ್ಯಾಸ, ವೃಕ್ಷಾಲಿಂಗನ ವ್ಯತ್ಯಾಸಗಳೂ ಕೂಡಾ ಫಲದಲ್ಲಿಯೂ ಅದು ಬದಲಾದುದು ಆ ಇಬ್ಬರೂ ಸ್ತ್ರೀಯರ ಪರಸ್ಪರ ವ್ಯಾಮೋಹ, ಚಾಪಲ್ಯಗಳ ದುಷ್ಪರಿಣಾಮದಲ್ಲಿ ಕೊನೆಯಾಯಿತು. ಆದ್ದರಿಂದ ಹಿರಿಯರ ಮಾತಿನಲ್ಲಿ ವಿಶ್ವಾವಿಡಬೇಕೇ ಹೊರತು, ತಮ್ಮ ವಿಚಾರಗಳನ್ನು ಹೇರಬಾರದು. ಅದರಿಂದ ವಿಪರೀತಫಲಗಳಾಗುತ್ತವೆ. ಆದರೆ ಋಚೀಕರ ಔದಾರ್ಯದಿಂದ ವಿಪರೀತ ಫಲಗಳಾಗಲಿಲ್ಲ. ಅಲ್ಲೂ ಅವರ ತಪಸ್ಸಿನ ಮಹಿಮೆ ಎದ್ದು ಕಾಣುತ್ತದೆ.

ಮಹಾಭಾರತದಲ್ಲಿಯೂ ಕೂಡಾ ವ್ಯಾಸರ ಬಳಿಗೆ ತಾನು ಹೋಗದೇ ಅಂಬಿಕೆಯು ತನ್ನ ದಾಸಿಯನ್ನು ಕಳಿಸಿದ ಫಲವಾಗಿ ಶೂದ್ರ ವಿದುರ ಹುಟ್ಟಬೇಕಾಗುತ್ತದೆ. ವಾಸ್ತವವಾಗಿ ಕ್ಷತ್ರಿಯ ಹುಟ್ಟಬೇಕಾಗಿತ್ತು, ಅಂಬಿಕೆ ತಾನೇ ಹೋಗಿದ್ದರೆ.

೩. ಗಾಧಿರಾಜ ಋಚೀಕರನ್ನು ದರಿದ್ರರೆಂದು ಭಾವಿಸಿದ್ದು ವಿಚಿತ್ರ. ಮೇಲ್ನೋಟದ ರೂಪಲಾವಣ್ಯಕ್ಕಿಂತ ಅವರ ಅಂತಸ್ತಪಸ್ಸಿನ ಪರಿಜ್ಞಾನ ಆತನಿಗೆ ಅರ್ಥವಾಗದೇ ಮೊದಲು ಮಗಳನ್ನು ಕೊಡಲು ಒಪ್ಪಲಿಲ್ಲ. ಗಾಧಿರಾಜ ವಾಸ್ತವವಾಗಿ ಇಂದ್ರಾವತಾರಿ. ಇಂದ್ರಾಂಶನಿಗೂ ಇಂತಹ ವಿಚಿತ್ರ ನಡವಳಿ. ಆದರೆ ಮತ್ತೆ ತಾನೇ ಕರೆದು ಕನ್ಯಾಶುಲ್ಕಕ್ಕೆ ಮದುವೆಗೆ ಒಪ್ಪುತ್ತಾನೆ. ಅದನ್ನು ಮೊದಲೇ ಮಾಡಬಹುದಿತ್ತು. ಆದರೆ, ಅದು ಹರೀಚ್ಛೆ. ಹೀಗಾಗಿ ಕನ್ಯಾಶುಲ್ಕ ಕೊಟ್ಟಮೇಲೆ ಕನ್ಯಾದಾನ ಮಾಡಿ, ಅಂತೂ ತನ್ನ ಗೌರವ ಉಳಿಸಿಕೊಂಡ. ಆದ್ದರಿಂದ ತಪಸ್ಸನ್ನು ಅಳೆಯುವ ಮಾನದಂಡ ಬಾಹ್ಯ ನೋಟ, ರೂಪಗಳಲ್ಲ. ಅಂತಸ್ಸತ್ವ ಬ್ರಾಹ್ಮಣರನ್ನು ಅವರ ವಿದ್ಯಾಸಾಮರ್ಥ್ಯವನ್ನು ಎಚ್ಚರಿಕೆಯಿಂದ ತಿಳಿದು ಅವರೊಂದಿಗೆ ವ್ಯವಹರಿಸಬೇಕು. ಇತ್ಯಾದಿ...

# ೧೩೪. ರಾಜರ್ಷಿ ವೀತಹವ್ಯ ಬ್ರಾಹ್ಮಣತ್ವ ಹೊಂದಿದುದು

ಧರ್ಮರಾಜನು ಭೀಷ್ಮರನ್ನು 'ತಾತ! ಸಂಪಾದಿಸಲು ಅತ್ಯಂತ ಕಷ್ಟಸಾಧ್ಯವಾದ ಬ್ರಾಹ್ಮಣ್ಯವನ್ನು ವಿಶ್ವಾಮಿತ್ರರು (ಕ್ಷತ್ರಿಯರಾದ) ಹೊಂದಿದುದನ್ನು ಕೇಳಿದೆ. ರಾಜರ್ಷಿ **ವೀತಹವ್ಯನೂ** ಬ್ರಾಹ್ಮಣತ್ವವನ್ನು ಹೊಂದಿದನು ಎಂಬುದನ್ನು ಕೇಳಿದ್ದೇನೆ. ಅದನ್ನು ವಿವರವಾಗಿ ತಿಳಿಸು' ಎಂದಾಗ, ಭೀಷ್ಮರು –

ಮಹಾತ್ಮನಾದ ಪ್ರಜಾಪತಿಯಾದ ಮನುವಿಗೆ ಧರ್ಮಾತ್ಮನಾದ ಶರ್ಯಾತಿ ಎಂಬ ಮಗನಿದ್ದನು. ಅವನ ವಂಶದಲ್ಲಿ ಧರ್ಮದರ್ಶಿಗಳಾದ (ಜ್ಞಾನಿಗಳಾದ) ಹೇಹಯ ಮತ್ತು **ತಾಳಜಂಘ** ಎಂಬ ಇಬ್ಬರು ಪುತ್ರರು ಜನಿಸಿ, ಅವರೇ ವತ್ಸದೇಶದ ರಾಜರಾದರು. ಹೇಹಯನ ಹತ್ತು ಪತ್ನಿಯರಲ್ಲಿ ನೂರು ಪುತ್ರರು ಮಹಾಶೂರರೂ, ಯುದ್ಧದಲ್ಲಿ ಪಲಾಯನ ಮಾಡದವರೂ ಹುಟ್ಟಿದರು. ಅವರೆಲ್ಲ ಸಮಾನರೂಪ, ಪರಾಕ್ರಮ, ವಿದ್ಯೆ, ಮೇಧಾವಿತನ, ವೇದ ಮತ್ತು ಧನುರ್ವೇದದಲ್ಲಿ ನೈಪುಣ್ಯತೆ ಗಳಿಸಿದ್ದರು.

ಆಗಲೇ ಕಾಶಿಯರಾಜ **ಹರ್ಯಶ್ವ**ನೆಂಬುವನು ಕುಬೇರನಂತೆ ವಿಖ್ಯಾತರಾಜನಿದ್ದನು. ಈತನ ಮೇಲೆ ದಂಡೆತ್ತಿ ಬಂದ ಹೈಹಯ ಪುತ್ರರು ಗಂಗಾ–ಯಮುನಾ ನದಿ ಮಧ್ಯೆ (ಯುದ್ಧಕ್ಷೇತ್ರ) ಯುದ್ಧದಲ್ಲಿ ಕೊಂದರು. ಹರ್ಯಶ್ವನ ಮಗ ಸುದೇವ ಮುಂದೆ ರಾಜನಾದ. ಅವನು ದೇವತೆಗಳಂತೆ ಇದ್ದ. ಧರ್ಮಸ್ವರೂಪಿಯಾಗಿಯೇ ಇದ್ದ. ಇವನನ್ನೂ ಆ ಹೈಹಯ ಪುತ್ರರು ಬಂದು ಯುದ್ಧ ಮಾಡಿ ಗೆದ್ದು ಕೊಂದರು. ಸುದೇವನ ಮಗ ದಿವೋದಾಸ ಮುಂದೆ ರಾಜನಾದ. ಇವನು ಹೈಹಯರ (ದಾಳಿಗೆ, ಅವರ ಪರಾಕ್ರಮ ತಿಳಿದು ವಾರಾಣಸಿಯನ್ನು ಮತ್ತೊಂದು ಪಟ್ಟಣವನ್ನು) ನಿರ್ಮಿಸಿದ. ಅದು ಎಲ್ಲ ವರ್ಣದ ಪ್ರಜೆಗಳಿಂದ ತುಂಬಿ ಸಮೃದ್ಧವಾಗಿತ್ತು. ಅದು ಗಂಗಾನದಿಯ ಉತ್ತರಭಾಗದಲ್ಲಿ, ಕೋಟೆಯಿಂದಾಚೆಗೆ ಹಾಗೂ ಗೋಮತೀ ನದಿಯ ದಕ್ಷಿಣದಲ್ಲಿ ದೇವತೆಗಳ ಅಮರಾವತಿಯಂತೆ ರಮ್ಯವಾಗಿತ್ತು.

ಹೀಗಿರುವಾಗ ಆ ಹೈಹಯರು ಮತ್ತೆ ಮತ್ತೆ ಇಲ್ಲೂ ತೊಂದರೆ ಕೊಡಲಾರಂಭಿಸಿದರು. ಅವರೊಡನೆ ದಿವೋದಾಸನು ದಿವ್ಯಯುದ್ಧವನ್ನೇ, ದೇವತೆಗಳು ಅಸುರರಿಗೆ ಕೊಟ್ಟಂತೆ ಮಾಡಿದನು. ನೂರು ದಿನಗಳವರೆಗೆ ನಡೆದ ಯುದ್ಧದಲ್ಲಿ ಮಕ್ಕಳು, ಸೈನ್ಯ, ಸಂಪತ್ತು ಎಲ್ಲವನ್ನು ಕಳೆದುಕೊಂಡು ದೀನನಾದನು. ಆದ್ದರಿಂದ ರಾಜಧಾನಿಯನ್ನು ತೊರೆದು ಪಲಾಯನ ಮಾಡಿ

ಭರದ್ವಾಜರ ಆಶ್ರಮಕ್ಕೆ ಹೋಗಿ, ಅವರನ್ನು ನಮಿಸಿ, ಅವರಿಗೆ ಎಲ್ಲವನ್ನು ಅರುಹಿ, 'ನಿಮಗೆ ಶರಣಾಗತನಾಗಿದ್ದೇನೆ, ನನ್ನ ವಂಶ ನಿರ್ವಂಶವಾಗಿದೆ. ನಾನೊಬ್ಬನೇ ಉಳಿದಿದ್ದೇನೆ. ನನ್ನನ್ನು ರಕ್ಷಿಸಿ' ಎಂದು ಬೇಡಿದ.

ಆಗ ಮಹಾಪ್ರತಾಪಶಾಲಿಗಳಾದ ಭರದ್ವಾಜರು 'ಹೆದರಬೇಡ. ನಿನ್ನ ಭಯ ದೂರವಾಗಲಿ. ನಿನಗೋಸ್ಕರ ಪುತ್ರಪ್ರದ ಇಷ್ಟಿ ಮಾಡುತ್ತೇನೆ. ವೀತಹವ್ಯನ ಸಹಸ್ರಪುತ್ರರು ಬಂದರೂ ನೀನು ಅವರನ್ನು ಸಹಿಸುತ್ತೀಯಾ' ಎಂದು ಹೇಳಿ ಪುತ್ರಕಾಮೇಷ್ಟಿಯಾಗ ಮಾಡಿಸಿದರು. ಅಂತೆಯೇ ದಿವೋದಾಸನಿಗೆ ಪ್ರತರ್ದನನೆಂಬ ಪುತ್ರ ಜನಿಸಿದನು. ಅವನು ಹುಟ್ಟಿದ ತಕ್ಷಣ ೧೩ ವರ್ಷದವನಾಗಿ ಬೆಳೆದು, ಎಲ್ಲ ವೇದ, ಧನುರ್ವೇದಗಳನ್ನು ಅಧ್ಯಯನ ಮಾಡಿದನು. ಭರದ್ವಾಜರ ಪುಣ್ಯದಿಂದ ಅವನು ಯೋಗಶಕ್ತಿಯಿಂದ ಕೂಡಿದ್ದು, ಲೋಕದಲ್ಲಿರುವ ಎಲ್ಲ ತೇಜಸ್ಸು ಅವನ ದೇಹದಲ್ಲಿ ಸೇರಿತು. ದಿವೋದಾಸನು ಪ್ರತರ್ದನನನ್ನು ಯುವರಾಜನನ್ನಾಗಿ ಅಭಿಷೇಕ ಮಾಡಿದನು.

ನಂತರ ಕವಚ, ಧನುರ್ಬಾಣಗಳನ್ನು ಧರಿಸಿ, ಪ್ರಜ್ವಲಿಸುವ ಅಗ್ನಿಯಂತೆ ಮಳೆ ಸುರಿಸುವ ಮೇಘಮಂಡಲದಂತೆ ದಿಗ್ವಿಜಯಕ್ಕೆ ಹೊರಟನು. ಅದನ್ನು ನೋಡಿ ತಂದೆ ದಿವೋದಾಸ ಸಂತಸಗೊಂಡ. ಇನ್ನೇನು ವೀತಹವ್ಯನ ಪುತ್ರರು ದಗ್ಧರಾದರೆಂದು ಭಾವಿಸಿದ. ಪ್ರತರ್ದನನು ರಥಾರೂಢನಾಗಿ ಗಂಗೆಯನ್ನು ದಾಟಿ ವೀತಹವ್ಯನ ಪುತ್ರರ ಪಟ್ಟಣಕ್ಕೆ ಯುದ್ಧಕ್ಕೆ ಬರಲು ಅವರೂ ಕೂಡಾ ನಗರಾಕಾರದ ರಥಗಳಿಂದ ಕೂಡಿ ಯುದ್ಧಕ್ಕೆ ಬಂದರು. ಅವರೆಲ್ಲ ಪ್ರತರ್ದನನ ಮೇಲೆ ಶಸ್ತ್ರಾಸ್ತ್ರಗಳ ಮಳೆ ಸುರಿಸಿದರೂ, ಪ್ರತರ್ದನನು ಅವರನ್ನು ಪ್ರತ್ಯಸ್ತ್ರಗಳಿಂದ ನಿವಾರಿಸಿ ಎಲ್ಲರನ್ನೂ ವಜ್ರದಂತಹ ಬಾಣಗಳಿಂದ ಸಂಹರಿಸಿದನು. ಶತ್ರುಗಳ ಶರೀರಗಳೆಲ್ಲ ರಕ್ತಸಿಕ್ತವಾಗಿ ಕಿಂಶುಕವೃಕ್ಷದಂತೆ ತೋರಿದವು. ತನ್ನ ಮಕ್ಕಳೆಲ್ಲ ಹತರಾಗಲು ವೀತಹವ್ಯನು ನಗರ(ರಾಜ್ಯ) ತ್ಯಾಗ ಮಾಡಿ ಭೃಗುಗಳ (ವಂಶದ ಋಷಿ) ಆಶ್ರಮಕ್ಕೆ ಪಲಾಯನ ಮಾಡಿ, ಭೃಗುಗಳಿಗೆ ಶರಣು ಹೋದನು. ಅವರು ಇವನಿಗೆ ಅಭಯದಾನ ಮಾಡಿ, ತಮ್ಮ ಶಿಷ್ಯರ ಮಧ್ಯೆ ಆಸನ ನೀಡಿ ಆಶ್ರಯ ಕೊಟ್ಟರು.

ಆ ಹೊತ್ತಿಗೆ ಸರಿಯಾಗಿ ಪ್ರತರ್ದನನು ಭೃಗುಗಳ ಆಶ್ರಮಕ್ಕೆ ಬಂದು, ಅವರ ಆಶ್ರಮದಲ್ಲಿದ್ದ ಶಿಷ್ಯರಿಗೆ ತಾನು ಬಂದ ವಿಷಯವನ್ನು ಭೃಗು ಋಷಿಗಳಿಗೆ ತಿಳಿಸಲು ಪ್ರಾರ್ಥಿಸಿದ. ಅದನ್ನು ತಿಳಿದ ಭೃಗುಗಳು ತಾವೇ ಹೊರಗೆ ಬಂದು ರಾಜನನ್ನು ಸ್ವಾಗತಿಸಿ, ಬಂದ ಕಾರಣ ಕೇಳಿದರು. ರಾಜನು 'ನಿಮ್ಮಲ್ಲಿಗೆ ಬಂದಿರುವ ವೀತಹವ್ಯ ರಾಜನನ್ನು ಬಿಟ್ಟು ಬಿಡಿರಿ. ಅವನ ಮಕ್ಕಳು ನನ್ನ ವಂಶವನ್ನೆಲ್ಲ ನಾಶ ಮಾಡಿದ್ದಾರೆ. ಕಾಶೀ ಪಟ್ಟಣ, ಅದರ ಐಶ್ವರ್ಯವೆಲ್ಲ ಧ್ವಂಸ ಮಾಡಿದ್ದಾರೆ. ಅವರ ದೌರ್ಜನ್ಯ, ಅಹಂಕಾರಕ್ಕೆ ಪ್ರತಿಯಾಗಿ ನಾನು ಅವರನ್ನೆಲ್ಲ ಕೊಂದಿದ್ದೇನೆ. ಉಳಿದ ಅವರ ತಂದೆ ವೀತಹವ್ಯನನ್ನು ಕೊಂದು ನನ್ನ ತಂದೆಯ ಋಣ ತೀರಿಸುತ್ತೇನೆ' ಎಂದನು.

ಅದನ್ನು ಕೇಳಿದ ಕೃಪಾಶಾಲಿಗಳಾದ ಭೃಗುಗಳು 'ನಮ್ಮ ಆಶ್ರಮದಲ್ಲಿ ಯಾವ ಕ್ಷತ್ರಿಯನೂ ಇಲ್ಲ, ಇಲ್ಲಿರುವವರೆಲ್ಲ ದ್ವಿಜೋತ್ತಮರು, ಬ್ರಾಹ್ಮಣೋತ್ತಮರು' ಎಂದರು.

ಭೃಗುಗಳ ಮಾತನ್ನು ಕೇಳಿದ ಪ್ರತರ್ದನನು ಮರು ಮಾತಾಡದೇ ಅವರ ಪಾದಗಳಿಗೆ ಎರಗಿ 'ಹಾಗಿದ್ದರೆ ನಾನು ಕೃತಕೃತ್ಯ. ತನ್ನ ವೀರ್ಯದಿಂದ ದರ್ಪಿಷ್ಟನಾದ ವೀತಹವ್ಯನನ್ನು ನಾನು ಅವನ ಜಾತಿಯಿಂದ ಬಿಡಿಸಿದ್ದೇನೆ (ವರ್ಣ ಜಾತಿ ತ್ಯಾಗ ಮಾಡಿಸಿದ್ದೇನೆ-ಜೀವಕ್ಕೆ ಹೆದರಿದ). ನನಗೆ ಆಶೀರ್ವದಿಸಿ, ಹೋಗಲು ಅನುಮತಿ ಕೊಡಿರಿ' ಎಂದನು. ಅವರಿಂದ ಅನುಮತಿ ಪಡೆದ ಪ್ರತರ್ದನನು ವಿಷತ್ಯಾಗ ಮಾಡಿದ ಸರ್ಪದಂತೆ ವಾಪಸು ಹೋದನು.

ಇತ್ತ ವೀತಹವ್ಯನು ಭೃಗುಗಳ ವಚನಮಾತ್ರದಿಂದ ಬ್ರಾಹ್ಮಣ್ಯ ಸಂಪಾದಿಸಿದ. ಮುಂದೆ ಬ್ರಹ್ಮವಾದಿಯಾದ. ಈತನ ವಂಶ ಮುಂದುವರೆದು, ಋಗ್ವೇದದಲ್ಲಿ ದ್ರಷ್ಟಾರರೂ ಆಗಿದ್ದಾರೆ. ವೀತಹವ್ಯನ ಮಗ 'ಗೃತ್ಸಮದ'. ಅವನು ಇಂದ್ರನಂತೆ ರೂಪ ಹೊಂದಿದ್ದ. ಹೀಗಾಗಿ ಒಮ್ಮೆ ದೈತ್ಯರು ಇವನನ್ನು ಇಂದ್ರನೆಂದೇ ಭ್ರಮಿಸಿ ನಿಗ್ರಹಿಸಿದ್ದರು (ಸೆರೆ ಹಿಡಿದಿದ್ದರು). ಋಗ್ವೇದದಲ್ಲಿ ಗೃತ್ಸಮದನ ಪ್ರಶಂಸಾಪರ ಮಂತ್ರಗಳಿವೆ. ಈತನ ಮಗ 'ಸಾವತಸ'. ಇವರ ವಂಶ ಹೀಗೆ ಮುಂದುವರೆಯಿತು. ಗೃತ್ಸಮದ, ಸಾವತಸ, ವಿತಸ್ಯ, ಶಿವ, ಶ್ರವ, ತಮಸ್, ಪ್ರಕಾಶ, ವಾಗೀಂದ್ರ, ಬ್ರಹ್ಮವಾಹನ, ಪ್ರಮಿತಿ, ಅಪ್ರತಿಮ, **ಋಋ**, ಶುನಕ, ಶೌನಕ – ಹೀಗೆ ಗೃತ್ಸಮದ ವಂಶ ಬೆಳೆಯಿತು. ಇದುವೇ ವೀತಹವ್ಯರಾಜ ಭೃಗುಗಳ ಅನುಗ್ರಹದಿಂದ ಬ್ರಾಹ್ಮಣ್ಯ ಪಡೆದ ಚರಿತ್ರೆ.

## ಸಂದೇಶಗಳು

೧. ವರ್ಣಾಶ್ರಮಧರ್ಮಗಳ ಆಚರಣೆ ಎಲ್ಲರ ಕರ್ತವ್ಯ. ವರ್ಣಾಶ್ರಮಧರ್ಮಗಳನ್ನು ಮನಸ್ಸಿಗೆ ಬಂದಂತೆ ಬದಲಾಯಿಸುವ ಹಕ್ಕು ಯಾರಿಗೂ ಇಲ್ಲ.

೨. ಅಪವಾದಾತ್ಮಕವಾಗಿ ಭಾರೀ ತಪಸ್ಸಿನ ಹಿನ್ನೆಲೆಯಲ್ಲಿ ವರ್ಣವ್ಯತ್ಯಾಸವಾಗುತ್ತದೆ. ಉದಾಹರಣೆಗೆ ವಿಶ್ವಾಮಿತ್ರರು ಕ್ಷತ್ರಿಯರಾಗಿ ಜನಿಸಿದರು. ಋಚೀಕರ ತಪಃಪ್ರಭಾವ ಹಾಗೂ ವಿಶ್ವಾಮಿತ್ರರ ವೈಯಕ್ತಿಕ ತಪಃಪ್ರಭಾವದಿಂದ ಬ್ರಾಹ್ಮಣ್ಯ ಪಡೆದರು. ಮೊದಲು ರಾಜರ್ಷಿಗಳಾಗಿ, ನಂತರ ಬ್ರಹ್ಮರ್ಷಿಗಳಾದರು. ವಸಿಷ್ಠರಿಂದಲೂ ಮಾನ್ಯರಾದರು. ಆದರೆ ಇದು ಅತ್ಯಂತ ಕ್ಲೇಶಿಷ್ಟ ಮಾರ್ಗ.

೩. ವೀತಹವ್ಯನು ವಿಶ್ವಾಮಿತ್ರರಂತೆ ಯಾವುದೇ ಕಷ್ಟವಿಲ್ಲದೆ ಕೇವಲ ಭೃಗುಗಳ ಅನುಗ್ರಹವಚನದಂತೆ, ಮಾತಿನಂತೆ ಬ್ರಾಹ್ಮಣನಾದನು. ಬ್ರಹ್ಮವಾದಿಯಾಗಿ ಮುಂದಿನ ಆತನ ವಂಶವೆಲ್ಲ ವೇದದ್ರಷ್ಟಾರರೂ, ಪುರಾಣಪ್ರವಚನಕಾರರೂ, ವೇದವ್ಯಾಸರ ಶಿಷ್ಯರೂ

ಭರದ್ವಾಜರ ಆಶ್ರಮಕ್ಕೆ ಹೋಗಿ, ಅವರನ್ನು ನಮಿಸಿ, ಅವರಿಗೆ ಎಲ್ಲವನ್ನು ಅರುಹಿ, 'ನಿಮಗೆ ಶರಣಾಗತನಾಗಿದ್ದೇನೆ, ನನ್ನ ವಂಶ ನಿರ್ವಂಶವಾಗಿದೆ. ನಾನೊಬ್ಬನೇ ಉಳಿದಿದ್ದೇನೆ. ನನ್ನನ್ನು ರಕ್ಷಿಸಿ.' ಎಂದು ಬೇಡಿದ.

ಆಗ ಮಹಾಪ್ರತಾಪಶಾಲಿಗಳಾದ ಭರದ್ವಾಜರು 'ಹೆದರಬೇಡ. ನಿನ್ನ ಭಯ ದೂರವಾಗಲಿ. ನಿನಗೋಸ್ಕರ ಪುತ್ರಪ್ರದ ಇಷ್ಟಿ ಮಾಡುತ್ತೇನೆ. ವೀತಹವ್ಯನ ಸಹಸ್ರಪುತ್ರರು ಬಂದರೂ ನೀನು ಅವರನ್ನು ಸಹಿಸುತ್ತೀಯಾ' ಎಂದು ಹೇಳಿ ಪುತ್ರಕಾಮೇಷ್ಟಿಯಾಗ ಮಾಡಿಸಿದರು. ಅಂತೆಯೇ ದಿವೋದಾಸನಿಗೆ ಪ್ರತರ್ದನನೆಂಬ ಪುತ್ರ ಜನಿಸಿದನು. ಅವನು ಹುಟ್ಟಿದ ತಕ್ಷಣ ೧೩ ವರ್ಷದವನಾಗಿ ಬೆಳೆದು, ಎಲ್ಲ ವೇದ, ಧನುರ್ವೇದಗಳನ್ನು ಅಧ್ಯಯನ ಮಾಡಿದನು. ಭರದ್ವಾಜರ ಪುಣ್ಯದಿಂದ ಅವನು ಯೋಗಶಕ್ತಿಯಿಂದ ಕೂಡಿದ್ದು ಲೋಕದಲ್ಲಿರುವ ಎಲ್ಲ ತೇಜಸ್ಸು ಅವನ ದೇಹದಲ್ಲಿ ಸೇರಿತು. ದಿವೋದಾಸನು ಪ್ರತರ್ದನನನ್ನು ಯುವರಾಜನನ್ನಾಗಿ ಅಭಿಷೇಕ ಮಾಡಿದನು.

ನಂತರ ಕವಚ, ಧನುರ್ಬಾಣಗಳನ್ನು ಧರಿಸಿ, ಪ್ರಜ್ವಲಿಸುವ ಅಗ್ನಿಯಂತೆ ಮಳೆ ಸುರಿಸುವ ಮೇಘಮಂಡಲದಂತೆ ದಿಗ್ವಿಜಯಕ್ಕೆ ಹೊರಟನು. ಅದನ್ನು ನೋಡಿ ತಂದೆ ದಿವೋದಾಸ ಸಂತಸಗೊಂಡ. ಇನ್ನೇನು ವೀತಹವ್ಯನ ಪುತ್ರರು ದಗ್ಧರಾದರೆಂದು ಭಾವಿಸಿದ. ಪ್ರತರ್ದನನು ರಥಾರೂಢನಾಗಿ ಗಂಗೆಯನ್ನು ದಾಟಿ ವೀತಹವ್ಯನ ಪುತ್ರರ ಪಟ್ಟಣಕ್ಕೆ ಯುದ್ಧಕ್ಕೆ ಬರಲು ಅವರೂ ಕೂಡಾ ನಗರಾಕಾರದ ರಥಗಳಿಂದ ಕೂಡಿ ಯುದ್ಧಕ್ಕೆ ಬಂದರು. ಅವರೆಲ್ಲ ಪ್ರತರ್ದನನ ಮೇಲೆ ಶಸ್ತ್ರಾಸ್ತ್ರಗಳ ಮಳೆ ಸುರಿಸಿದರೂ, ಪ್ರತರ್ದನನು ಅವರನ್ನು ಪ್ರತ್ಯಸ್ತ್ರಗಳಿಂದ ನಿವಾರಿಸಿ ಎಲ್ಲರನ್ನೂ ವಜ್ರದಂತಹ ಬಾಣಗಳಿಂದ ಸಂಹರಿಸಿದನು. ಶತ್ರುಗಳ ಶರೀರಗಳೆಲ್ಲ ರಕ್ತಸಿಕ್ತವಾಗಿ ಕಿಂಶುಕವೃಕ್ಷದಂತೆ ತೋರಿದವು. ತನ್ನ ಮಕ್ಕಳೆಲ್ಲ ಹತರಾಗಲು ವೀತಹವ್ಯನು ನಗರ(ರಾಜ್ಯ) ತ್ಯಾಗ ಮಾಡಿ ಭೃಗುಗಳ (ವಂಶದ ಋಷಿ) ಆಶ್ರಮಕ್ಕೆ ಪಲಾಯನ ಮಾಡಿ, ಭೃಗುಗಳಿಗೆ ಶರಣು ಹೋದನು. ಅವರು ಇವನಿಗೆ ಅಭಯದಾನ ಮಾಡಿ, ತಮ್ಮ ಶಿಷ್ಯರ ಮಧ್ಯೆ ಆಸನ ನೀಡಿ ಆಶ್ರಯ ಕೊಟ್ಟರು.

ಆ ಹೊತ್ತಿಗೆ ಸರಿಯಾಗಿ ಪ್ರತರ್ದನನು ಭೃಗುಗಳ ಆಶ್ರಮಕ್ಕೆ ಬಂದು, ಅವರ ಆಶ್ರಮದಲ್ಲಿದ್ದ ಶಿಷ್ಯರಿಗೆ ತಾನು ಬಂದ ವಿಷಯವನ್ನು ಭೃಗು ಋಷಿಗಳಿಗೆ ತಿಳಿಸಲು ಪ್ರಾರ್ಥಿಸಿದ. ಅದನ್ನು ತಿಳಿದ ಭೃಗುಗಳು ತಾವೇ ಹೊರಗೆ ಬಂದು ರಾಜನನ್ನು ಸ್ವಾಗತಿಸಿ, ಬಂದ ಕಾರಣ ಕೇಳಿದರು. ರಾಜನು 'ನಿಮ್ಮಲ್ಲಿಗೆ ಬಂದಿರುವ ವೀತಹವ್ಯ ರಾಜನನ್ನು ಬಿಟ್ಟು ಬಿಡಿರಿ. ಅವನ ಮಕ್ಕಳು ನನ್ನ ವಂಶವನ್ನೆಲ್ಲ ನಾಶ ಮಾಡಿದ್ದಾರೆ. ಕಾಶೀ ಪಟ್ಟಣ, ಅದರ ಐಶ್ವರ್ಯವೆಲ್ಲ ಧ್ವಂಸ ಮಾಡಿದ್ದಾರೆ. ಅವರ ದೌರ್ಜನ್ಯ, ಅಹಂಕಾರಕ್ಕೆ ಪ್ರತಿಯಾಗಿ ನಾನು ಅವರನ್ನೆಲ್ಲ ಕೊಂದಿದ್ದೇನೆ. ಉಳಿದ ಅವರ ತಂದೆ ವೀತಹವ್ಯನನ್ನು ಕೊಂದು ನನ್ನ ತಂದೆಯ ಋಣ ತೀರಿಸುತ್ತೇನೆ' ಎಂದನು.

ಅದನ್ನು ಕೇಳಿದ ಕೃಪಾಶಾಲಿಗಳಾದ ಭೃಗುಗಳು 'ನಮ್ಮ ಆಶ್ರಮದಲ್ಲಿ ಯಾವ ಕ್ಷತ್ರಿಯನೂ ಇಲ್ಲ, ಇಲ್ಲಿರುವವರೆಲ್ಲ ದ್ವಿಜೋತ್ತಮರು, ಬ್ರಾಹ್ಮಣೋತ್ತಮರು' ಎಂದರು.

ಭೃಗುಗಳ ಮಾತನ್ನು ಕೇಳಿದ ಪ್ರತರ್ದನನು ಮರು ಮಾತಾಡದೇ ಅವರ ಪಾದಗಳಿಗೆ ಎರಗಿ 'ಹಾಗಿದ್ದರೆ ನಾನು ಕೃತಕೃತ್ಯ. ತನ್ನ ವೀರ್ಯದಿಂದ ದರ್ಪಿಷ್ಟನಾದ ವೀತಹವ್ಯನನ್ನು ನಾನು ಅವನ ಜಾತಿಯಿಂದ ಬಿಡಿಸಿದ್ದೇನೆ (ವರ್ಣ ಜಾತಿ ತ್ಯಾಗ ಮಾಡಿಸಿದ್ದೇನೆ-ಜೀವಕ್ಕೆ ಹೆದರಿದ). ನನಗೆ ಆಶೀರ್ವದಿಸಿ, ಹೋಗಲು ಅನುಮತಿ ಕೊಡಿರಿ' ಎಂದನು. ಅವರಿಂದ ಅನುಮತಿ ಪಡೆದ ಪ್ರತರ್ದನನು ವಿಷತ್ಯಾಗ ಮಾಡಿದ ಸರ್ಪದಂತೆ ವಾಪಸು ಹೋದನು.

ಇತ್ತ ವೀತಹವ್ಯನು ಭೃಗುಗಳ ವಚನಮಾತ್ರದಿಂದ ಬ್ರಾಹ್ಮಣ್ಯ ಸಂಪಾದಿಸಿದ. ಮುಂದೆ ಬ್ರಹ್ಮವಾದಿಯಾದ. ಈತನ ವಂಶ ಮುಂದುವರೆದು, ಋಗ್ವೇದದಲ್ಲಿ ದ್ರಷ್ಟಾರರೂ ಆಗಿದ್ದಾರೆ. ವೀತಹವ್ಯನ ಮಗ 'ಗೃತ್ಸಮದ'. ಅವನು ಇಂದ್ರನಂತೆ ರೂಪ ಹೊಂದಿದ್ದ, ಹೀಗಾಗಿ ಒಮ್ಮೆ ದೈತ್ಯರು ಇವನನ್ನು ಇಂದ್ರನೆಂದೇ ಭ್ರಮಿಸಿ ನಿಗ್ರಹಿಸಿದ್ದರು (ಸೆರೆ ಹಿಡಿದಿದ್ದರು). ಋಗ್ವೇದದಲ್ಲಿ ಗೃತ್ಸಮದನ ಪ್ರಶಂಸಾಪರ ಮಂತ್ರಗಳಿವೆ. ಈತನ ಮಗ 'ಸಾವತಸ'. ಇವರ ವಂಶ ಹೀಗೆ ಮುಂದುವರೆಯಿತು. ಗೃತ್ಸಮದ, ಸಾವತಸ, ವಿತಸ್ಯ, ಶಿವ, ಶ್ರವ, ತಮಸ್, ಪ್ರಕಾಶ, ವಾಗೀಂದ್ರ, ಬ್ರಹ್ಮವಾಹನ, ಪ್ರಮಿತಿ, ಅಪ್ರತಿಮ, **ಋಋ**, ಶುನಕ, ಶೌನಕ – ಹೀಗೆ ಗೃತ್ಸಮದ ವಂಶ ಬೆಳೆಯಿತು. ಇದುವೇ ವೀತಹವ್ಯರಾಜ ಭೃಗುಗಳ ಅನುಗ್ರಹದಿಂದ ಬ್ರಾಹ್ಮಣ್ಯ ಪಡೆದ ಚರಿತ್ರೆ.

## ಸಂದೇಶಗಳು

೧. ವರ್ಣಾಶ್ರಮಧರ್ಮಗಳ ಆಚರಣೆ ಎಲ್ಲರ ಕರ್ತವ್ಯ. ವರ್ಣಾಶ್ರಮಧರ್ಮಗಳನ್ನು ಮನಸ್ಸಿಗೆ ಬಂದಂತೆ ಬದಲಾಯಿಸುವ ಹಕ್ಕು ಯಾರಿಗೂ ಇಲ್ಲ.

೨. ಅಪವಾದಾತ್ಮಕವಾಗಿ ಭಾರೀ ತಪಸ್ಸಿನ ಹಿನ್ನೆಲೆಯಲ್ಲಿ ವರ್ಣವ್ಯತ್ಯಾಸವಾಗುತ್ತದೆ. ಉದಾಹರಣೆಗೆ ವಿಶ್ವಾಮಿತ್ರರು ಕ್ಷತ್ರಿಯರಾಗಿ ಜನಿಸಿದರು. ಋಚೀಕರ ತಪಃಪ್ರಭಾವ ಹಾಗೂ ವಿಶ್ವಾಮಿತ್ರರ ವೈಯಕ್ತಿಕ ತಪಃಪ್ರಭಾವದಿಂದ ಬ್ರಾಹ್ಮಣ್ಯ ಪಡೆದರು. ಮೊದಲು ರಾಜರ್ಷಿಗಳಾಗಿ, ನಂತರ ಬ್ರಹ್ಮರ್ಷಿಗಳಾದರು. ವಸಿಷ್ಠರಿಂದಲೂ ಮಾನ್ಯರಾದರು. ಆದರೆ ಇದು ಅತ್ಯಂತ ಕ್ಲೇಶಿಷ್ಟ ಮಾರ್ಗ.

೩. ವೀತಹವ್ಯನು ವಿಶ್ವಾಮಿತ್ರರಂತೆ ಯಾವುದೇ ಕಷ್ಟವಿಲ್ಲದೆ ಕೇವಲ ಭೃಗುಗಳ ಅನುಗ್ರಹವಚನದಂತೆ, ಮಾತಿನಂತೆ ಬ್ರಾಹ್ಮಣನಾದನು. ಬ್ರಹ್ಮವಾದಿಯಾಗಿ ಮುಂದಿನ ಆತನ ವಂಶವೆಲ್ಲ ವೇದದ್ರಷ್ಟಾರರೂ, ಪುರಾಣಪ್ರವಚನಕಾರರೂ, ವೇದವ್ಯಾಸರ ಶಿಷ್ಯರೂ

ಆದರು(ಶೌನಕರು). ಇಲ್ಲೂ ಭೃಗುಗಳ ತಪಸ್ಸಿನ ವರ್ಗಾವಣೆ ಇದೆ. ಸುಲಭವಾಗಿ ಯಾವುದು ಆಗದು. ತಪಸ್ತ್ಯಾಗ ಬೇಕೇ ಬೇಕು.

೪. ಭರದ್ವಾಜರ ಅನುಗ್ರಹದಿಂದ ದಿವೋದಾಸ ಉದ್ಧೃತನಾದ, ಸತ್ಸಂತಾನ ಪಡೆದ. ಪ್ರತರ್ದನ, ನಿಜವಾಗಿ ಕ್ಷತ್ರಿಯನಾಗಿ ವೀತಹವ್ಯನ ಮಕ್ಕಳನ್ನೆಲ್ಲ ಸಂಹರಿಸಿ, ತಂದೆಯ ಋಣ ತೀರಿಸಿದ. ನಿಜವಾಗಿ ಕ್ಷತ್ರಿಯನಾಗಿ ಮೆರೆದ. ಪ್ರಾಮಾಣಿಕ ವರ್ಣಾಶ್ರಮಧರ್ಮಾಚರಣೆ ಎಲ್ಲ ಸಾಧನೆಗಳಿಗೆ ಸೋಪಾನಗಳು.

೫. ಪ್ರತರ್ದನನು ಭೃಗುಗಳನ್ನು ಕಂಡು, ಅವರೊಡನೆ ವೀತಹವ್ಯನನ್ನು ಹೊರಗೆ ಕಳಿಸಿಕೊಡುವ, ವ್ಯವಹಾರ ಅತ್ಯಂತ ಮನೋಜ್ಞ, ರಾಜಕೀಯ ಮುತ್ಸದ್ದಿತನ. ಭೃಗುಗಳನ್ನು ಬ್ರಾಹ್ಮಣರನ್ನುಗೌರವದಿಂದಕಂಡರೀತಿಅನುಕರಣೀಯ. ತನ್ನಶತ್ರುವಿಗೆಆಶ್ರಯಕೊಟ್ಟಿದ್ದರೂ, ಯಾವುದೇ ಭಾವಾವೇಶಕ್ಕೆ ಬಲಿಯಾಗದ ರೀತಿ, ಅತ್ಯಂತ ಆದರ್ಶವಾದುದು.

೬. ಭೃಗು ಋಷಿಗಳು ಪ್ರತರ್ದನನಿಗೆ ಕೊಟ್ಟ ಉತ್ತರವೂ ಮಾರ್ಮಿಕ. ಧಾರ್ಮಿಕ ಸಮಸ್ಯೆಯನ್ನು ಉಲ್ಬಣಗೊಳಿಸದೆ ಪರಿಹರಿಸಿದ ರೀತಿ ಅನುಕರಣೀಯ.

೭. ಸಾಮಾನ್ಯ ಸಂದೇಶ ಎಲ್ಲರಿಗೆ - ಸ್ವವರ್ಣಾಶ್ರಮಧರ್ಮಾಚರಣೆ, ಅದೇ ತಪಸ್ಸು ಶಾಸ್ತ್ರಾಧ್ಯಯನ ಮತ್ತು ಅನುಷ್ಠಾನ. ಇತ್ಯಾದಿ..

*****

# ೧೩೫. ಭಕ್ತಿನಿಷ್ಠೆ

ಧರ್ಮರಾಜನು ಪಿತಾಮಹ ಭೀಷ್ಮರನ್ನು ಕುರಿತು 'ತಾತ! ಕಾರುಣ್ಯ(ಆನೃಶಂಸತ್ವ - ಕ್ರೌರ್ಯರಹಿತ) ಗುಣವುಳ್ಳ ಜನರ ಉಪಕಾರ ಮಾಡಿದವರ ಬಗ್ಗೆ ಇರಬೇಕಾದ ಭಕ್ತಿ, ಗೌರವವುಳ್ಳ ಜನರ ನಡತೆಯ ಬಗ್ಗೆ ತಿಳಿಸಿ' ಎಂದನು. ಅದಕ್ಕೆ ಭೀಷ್ಮರು ಒಂದು ಚಿಕ್ಕ ಕಥೆಯನ್ನು ಹೇಳಿದರು. ಅಲ್ಲಿ ಕ್ರೌರ್ಯವೇ ಸ್ವಭಾವವಾದ ಬೇಡನೊಬ್ಬ ಮಾಂಸದ ಆಸೆಯಿಂದ ತನ್ನ ಸಮೀಪದಲ್ಲಿಯೇ ಓಡುತ್ತಿದ್ದ ಒಂದು ಜಿಂಕೆಗೆ ವಿಷಪೂರಿತವಾದ ಬಾಣವನ್ನು ಬಿಟ್ಟ. ಆದರೆ ಅದು ಜಿಂಕೆಗೆ ತಾಗದೆ ಒಂದು ಮರಕ್ಕೆ ತಾಗಿತು. ಭಾರೀ ವಿಷಲೇಪಿತ(Highly Toxic - Poison coated) ಬಾಣದ ಹೊಡೆತದ ಪರಿಣಾಮವಾಗಿ ಆ ವೃಕ್ಷದ ಎಲೆಗಳು, ಹಣ್ಣುಗಳು ಉದುರಿ, ಅದು ಒಣಗಿ ಹೋಯಿತು. ಆ ವೃಕ್ಷದ ಪೊಟರೆಗಳಲ್ಲಿ ಬಹಳ ಕಾಲದಿಂದ ವಾಸವಾಗಿದ್ದ ಒಂದು ಗಿಳಿ (ಶುಕ) ಮರ ಒಣಗಿದರೂ, ಆ ಪೊಟರೆಯಲ್ಲಿ ವಾಸ ಮಾಡುವುದನ್ನು ಮಾತ್ರ ಬಿಡಲಿಲ್ಲ. ಕಾರಣ ಅದಕ್ಕಿದ್ದ ಒಂದು ತರಹದ ಸದಭಿಮಾನ. ತನಗೆ ಆಶ್ರಯ ಕೊಟ್ಟ ವೃಕ್ಷ ಒಣಗಿದ ಮೇಲೆ ತಾನೇಕೆ ತನ್ನ ಬದುಕಿಗಾಗಿ ಬೇರೆ ಕಡೆ ಹೋಗಬೇಕೆಂಬ ಭಾವನಾತ್ಮಕ ಸಂಬಂಧದಿಂದಾಗಿ. ವೃಕ್ಷದ ಮೇಲಿನ ಭಕ್ತಿಯಿಂದಾಗಿ, ಪ್ರೇಮದಿಂದಾಗಿ ಪರಿಣಾಮವಾಗಿ ಗಿಳಿಯು ಚಲಿಸಲೂ ಶಕ್ತಿ ಇಲ್ಲದಾಗಿ, ಆಹಾರವಿಲ್ಲದೇ ತಾನೂ ಕುಗ್ಗಲಾರಂಭಿಸಿತು[೧].

ಇಂತಹ ಅತಿಮಾನುಷ ವರ್ತನೆಯನ್ನು ಗಮನಿಸಿದ ಇಂದ್ರದೇವರು ಆಶ್ಚರ್ಯಚಕಿತರಾದರು. ಮನುಷ್ಯರು ಕಥಂಚಿತ್ ಪರಸ್ಪರ ಸುಖದುಃಖಗಳನ್ನು ಹಂಚಿಕೊಳ್ಳುತ್ತಾರೆ. ಗಿಳಿಯಂತಹ ತುಂಬಾ ತಿರ್ಯಕ್ ಪ್ರಾಣಿ ವೃಕ್ಷದ ಸಾವಿನಲ್ಲಿ ಒಂದಾಗುತ್ತಿದ್ದುದು ಅತಿಮಾನುಷವಾಗಿ ಇಂದ್ರದೇವರಿಗೆ ಕಂಡಿತು. ಆದರೂ ಪ್ರಾಣಿಗಳಲ್ಲೂ ಇಂತಹ ಭಾವನೆಗಳಿರುತ್ತವೆ ಎಂದೂ ಇಂದ್ರನು ಭಾವಿಸಿದನು.

ನಂತರ ಬ್ರಾಹ್ಮಣವೇಷದಲ್ಲಿ ಬಂದು ಗಿಳಿಯನ್ನು ಮಾತನಾಡಿಸಿದ. 'ದಕ್ಷಪ್ರಜಾಪತಿಯ ಕುವರಿಯಾದ ವಿನತೆಯು ನಿನ್ನಂತಹ ಸಂತಾನವನ್ನು ನೋಡಿ ವಾಸ್ತವವಾಗಿ ಸುಪ್ರಜಳಾಗಿದ್ದಾಳೆ (ಸತ್ಸಂತಾನವಂತ). ನೀನೇಕೆ ಈ ಒಣಗಿಹೋದ ವೃಕ್ಷವನ್ನು ಬಿಡುತ್ತಿಲ್ಲ?'

---

೧ ಸ ತೀಕ್ಷ್ಣವಿಷದಗ್ಧೇನ ಶರೇಣಾತಿಬಲಾತ್ಕೃತಃ।
ಉತ್ಸೃಜ್ಯ ಫಲಪತ್ರಾಣಿ ಪಾದಪಃ ಶೋಷಮಾಗತಃ॥ - ೭/೫
ನ ಜಹಾತಿ ಶುಕೋ ವಾಸಂ ತಸ್ಯ ಭಕ್ತ್ಯಾ ವನಸ್ಪತೇ। - ೭/೬
ಕೃತಜ್ಞಃ ಸಹವೃಕ್ಷೇಣ ಧರ್ಮಾತ್ಮಾ ಸ ವ್ಯಶುಷ್ಯತ॥ - ೭/೭

ಅದಕ್ಕೆ ಶುಕ ಬ್ರಾಹ್ಮಣನಿಗೆ ವಂದಿಸಿ 'ಎಲೈ ದೇವರಾಜನೇ! ನಿನಗೆ ಸ್ವಾಗತ. ನೀನು ದೇವರಾಜನೆಂದು ನಾನು ನನ್ನ ತಪಸ್ಸಿನಿಂದ ತಿಳಿದಿದ್ದೇನೆ. ಅದಕ್ಕೆ ಇಂದ್ರನು 'ಸಾಧು, ಸಾಧು' ಎಂದುಗಿಳಿಯನ್ನುಪ್ರಶಂಸಿದನು. (ಗಿಳಿಯೇ! ನೀನುನಿಜಕ್ಕೂಸಭ್ಯ, ಸತ್ಪುರುಷ, ಸತ್ಕುಲಪ್ರಸೂತ, ಯಾರನ್ನೂ ದ್ವೇಷಿಸದವನು, ದಯಾಳು, ಶಾಂತಚಿತ್ತ, ಜಂಭ, ಅಹಂಕಾರಗಳಿಲ್ಲದವನು. ಯಾವುದಕ್ಕೂ ಆಸೆ ಪಡದವನು, ವೀತರಾಗನು, ಸಾಧು ಎನಿಸುವನು[೧].)

ದೇವರಾಜನ ಮಾತನ್ನು ಕೇಳಿದ ಗಿಳಿ, ಆತನನ್ನು ಪೂಜಿಸಿತು. ಮತ್ತೆ ಇಂದ್ರನು ಗಿಳಿಯನ್ನು ಕೇಳಿದ. 'ಈ ವೃಕ್ಷದಲ್ಲಿ ಎಲೆಗಳಲ್ಲ, ಫಲಗಳೂ ಇಲ್ಲ. ಪಕ್ಷಿಗಳ ವಾಸಕ್ಕೆ ಅಯೋಗ್ಯವಾದ ಈ ವೃಕ್ಷವನ್ನು ಏಕೆ ಬಿಡಲೊಲ್ಲೆ? ಈ ವನದಲ್ಲಿ ವಾಸಯೋಗ್ಯವಾದ ಸಾಕಷ್ಟು ವೃಕ್ಷಗಳಿರುವಾಗ ಇಲ್ಲಿಯೇ ಏಕಿರುವೆ? ಈ ವೃಕ್ಷ ಇನ್ನೇನು ಹೆಚ್ಚು ಬಾಳದು, ಬಿದ್ದು ಹೋಗುತ್ತದೆ. ಇದನ್ನು ಬಿಟ್ಟು ಬೇರೆ ಮರಕ್ಕೆ ಹೋಗು ಎಂದ.

ಅದಕ್ಕೆ ಗಿಳಿಯು ನಿಟ್ಟುಸಿರು ಬಿಟ್ಟು 'ದೇವತೆಗಳ ಮಾತುಗಳನ್ನು ಮೀರಬಾರದು. ನಿನ್ನ ಪ್ರಶ್ನೆಗೆ ಉತ್ತರಿಸುತ್ತೇನೆ, ಕೇಳು. ದೇವ! ನಾನು ಈ ವೃಕ್ಷದಲ್ಲಿಯೇ ಹುಟ್ಟಿದೆ, ಬೆಳೆದೆ. ರಕ್ಷಣೆ ಹೊಂದಿದೆ. ನನಗೆ ಯಾವ ಶತ್ರುವೂ ಏನೂ ತೊಂದರೆ ಕೊಡಲಿಲ್ಲ. ಆದ್ದರಿಂದ ಈ ಮರದ ಬಗ್ಗೆ ನನ್ನ ಪ್ರೀತಿ, ನಿಷ್ಠೆ, ವಿಶ್ವಾಸ, ಆದರಗಳಿವೆ. ದಯಾಗುಣದಲ್ಲಿ ನನಗೆ ಆಸಕ್ತಿ. ಸಜ್ಜನರು ದಯಾಶೀಲರು. ಅವರಿಗೆ ಅದು ಬಹಳ ಪ್ರೀತಿದಾಯಕ. ನೀನು ದೇವಾಧಿಪತಿ, ದೇವತೆಗಳು ಧರ್ಮವಿಷಯದಲ್ಲಿ ಸಂಶಯ ಬಂದಾಗ ನಿನ್ನನ್ನೇ ಕೇಳುತ್ತಾರೆ. ಕಾರಣ ನಿನ್ನಲ್ಲಿ ಅವರಿಗೆ ಭಕ್ತಿ, ನಿಷ್ಠೆ. ಹಾಗೆಯೇ ನನಗೂ ಈ ವೃಕ್ಷದ ಬಗ್ಗೆ ನಿಷ್ಠೆ, ಭಕ್ತಿ. ಕಾರಣ ನೀನು ಈ ವೃಕ್ಷವನ್ನು ಬಿಟ್ಟು ಬೇರೆಡೆ ಹೋಗಲು ಹೇಳುವುದು ಉಚಿತವಲ್ಲ. ಇಷ್ಟು ವರ್ಷಗಳ ಕಾಲ ಇದನ್ನೇ ನಂಬಿ ಬಾಳಿದ ನಾನು ಈಗ ಅದು ಒಣಗಿ ಹೋದ ಕಾರಣ ಅದನ್ನು ಹೇಗೆ ಬಿಟ್ಟು ಹೋಗಲಿ? ಅದು ವಿಶ್ವಾಸದ್ರೋಹವಾದೀತು.'

ಈ ಮಾತುಗಳಿಂದ ಇಂದ್ರನು ಗಿಳಿಯ ದಯಾಗುಣ, ಪರೋಪಕಾರ ಗುಣ, ಕೃತಜ್ಞತಾಗುಣಕ್ಕೆ ಸಂತಸಗೊಂಡು ಗಿಳಿಗೆ 'ವರವನ್ನು ಬೇಡೆಂದ'. ಅದಕ್ಕೆ ಗಿಳಿಯು ಈ ಒಣಗಿಹೋಗುತ್ತಿರುವ ವೃಕ್ಷವು ಮತ್ತೆ ಬೆಳೆಯಲಿ ಎಂದು ಬೇಡಿತು.

ಗಿಳಿಯ ವೃಕ್ಷಭಕ್ತಿಯನ್ನು ಶೀಲಸಂಪತ್ತನ್ನು ನೋಡಿ ತೃಪ್ತನಾಗಿ ಇಂದ್ರನು ವೃಕ್ಷವನ್ನು ಅಮೃತದಿಂದ ಸಿಂಪಡಿಸಿದ. ವೃಕ್ಷವು ಪತ್ರ, ಪುಷ್ಪ, ಫಲಗಳಿಂದ ಮನಕ್ಕೆ ಮುದವೀಯುವ ಶಾಖೆಗಳಿಂದ ಕೂಡಿ ಮೊದಲಿನಂತಾಯಿತು.

---

೧ ನಿರ್ವೈರಃ ಸದಯಃ ಶಾಂತಃ ದಂಭಾಹಂಕಾರವರ್ಜಿತಃ।
ನಿರಪೇಕ್ಷೋ ಮುನಿರ್ವೀತರಾಗಃ ಸಾಧುರಿಹೋಚ್ಯತೇ॥
ಶಬ್ದಾರ್ಥಕೌಸ್ತುಭಃ - ಭಾಗ. ೬ - ಪುಟ. ೨೭೪೯ - ಬಾಪ್ಕೋ ಪ್ರಕಾಶನ, ಬೆಂಗಳೂರು - ೨೦೦೦)

**ಆ ಗಿಳಿಯೂ ಕೂಡ ಸಚೇತನವಾಗಿ ಆಯುಷ್ಯ ಮುಗಿದ ಮೇಲೆ ಇಂದ್ರಲೋಕವನ್ನು ಹೊಂದಿತು.**

**ಧರ್ಮರಾಜನೇ! ಹೀಗೆಯೇ ಭಕ್ತಿಯುಳ್ಳವನನ್ನು ಆಶ್ರಯಿಸಿದ ವ್ಯಕ್ತಿಯು ವೃಕ್ಷವು ಗಿಳಿಯಿಂದ ಪಡೆದಂತೆ ಸರ್ವಾರ್ಥಸಿದ್ಧಿ (ಜೀವಿತವೇ ಮೊದಲಾದ ಎಲ್ಲ ಫಲಗಳನ್ನು) ಹೊಂದುತ್ತದೆ.**

## ಸಂದೇಶ ಮತ್ತು ವಿವರಣೆ

ವೃಕ್ಷವು ಗಿಳಿಗೆ ಆಶ್ರಯವಾಗಿತ್ತು. ಅದನ್ನು ಮರೆಯದ ಗಿಳಿಯು ಅದರ ಜೊತೆಗೆ ಜೀವಿಸಿ ಅದರೊಡನೆ ಮರಣದ ಹಂಬಲ ಹೊಂದಿತ್ತು. ವೃಕ್ಷದಿಂದ ತನಗೆ ಸಿಕ್ಕ ವಾಸಸ್ಥಾನ, ಅದರ ಎಲೆ, ಹೂವು, ಹಣ್ಣುಗಳನ್ನು ಸೇವಿಸಿ ಗಿಳಿ ಬದುಕಿತ್ತು. ಅದನ್ನು ಮರೆಯಲಿಲ್ಲ ಗಿಳಿ. ಆದ್ದರಿಂದ ತನಗೆ ಉಪಕಾರ ಮಾಡಿದವನನ್ನು ಯಾರೂ ಎಂದೂ ಮರೆಯಬಾರದು. ಮರೆತರೆ ಅವನು ಸಾಧುಪುರುಷನಾಗಲಾರ. ಮರೆಯದ ಗಿಳಿ ಸಾಧು ಎಂದು ಇಂದ್ರನಿಂದ ಪ್ರಶಂಸೆ ಪಡೆಯಿತು. ಅದರೆ ಅಸಾಧು ಜನ ಮಾಡಿದ ಉಪಕಾರ ಮರೆಯುತ್ತಾರೆ. ಅದನ್ನೇ ಆಚಾರ್ಯರು ದುರ್ಜನರ ಸ್ವಭಾವ ಎಂದು ಹೇಳಿದ್ದಾರೆ.

**ಪ್ರಾಯಃ ಸ್ವಕಾರ್ಯೇ ಪ್ರತಿಪಾದಿತೇ ಹಿ ಮದೋದ್ಧತಾ ನ ಪ್ರತಿಕರ್ತುಮೀಶತೇ ।**
**- ಮ.ತಾ.ನಿ.(೫/೨೯)**

ಸಜ್ಜನರು ಇದಕ್ಕೆ ವಿರುದ್ಧವಾಗಿರುತ್ತಾರೆ. ಗಿಳಿಯಂತೆ. ಗಿಳಿಯಂತಹ ಚಿಕ್ಕ ಪ್ರಾಣಿಯೇ ದಯಾಗುಣ ಹೊಂದಿರುವಾಗ, ಮನುಷ್ಯರು ಹೇಗಿರಬೇಕೆಂಬುದನ್ನು ಎಲ್ಲರೂ ತಿಳಿಯಬೇಕು. ಆದ್ದರಿಂದಲೇ 'ದಯಾಭೂತೇಷು' ಎಂಬ ನುಡಿ ಶಾಸ್ತ್ರದಲ್ಲಿ ಹಾಸುಹೊಕ್ಕಾಗಿದೆ. ಇದು ಸನಾತನ ಧರ್ಮ.

ಗಿಳಿಯು ಸಾಮಾನ್ಯ ಗಿಳಿಯಾಗಿರದೆ ಜ್ಞಾನಿ ಆಗಿತ್ತು. ಖಾಂಡವವನದಲ್ಲಿ ಬಂದ ಜರಿತಾರ್ಯಾದಿ ಪಕ್ಷಿಗಳಂತೆ ಎಂಬುದು ವಿಶೇಷ. ಇತ್ಯಾದಿ ....

**ವಿಷ್ಣುಭಕ್ತಿರ್ಹಿ ಸರ್ವೇಷಾಂ ಸದ್ಗುಣಾನಾಂ ಸ್ವಲಕ್ಷಣಂ** ಎಂಬ ಆಚಾರ್ಯರ ಕಥಾಲಕ್ಷಣದ ಮಾತು ಇಲ್ಲಿ ಸ್ಮರಣಾರ್ಹವಾಗಿದೆ. ಕಾರಣ ವಿಷ್ಣುಭಕ್ತಿ ಇದ್ದಲ್ಲಿ ಸದ್ಗುಣಗಳು ಇರುತ್ತವೆ,

# ೧೩೬. ಗರುಡಾಖ್ಯಾನ

(ಗರುಡನ ಮಾಹಾತ್ಮ್ಯ ಪ್ರತಿಪಾದಕ ಗರುಡಜನ್ಮ, ತಾಯಿ ವಿನತೆಯನ್ನು ಕದ್ರೂ ದಾಸ್ಯದಿಂದ ಮುಕ್ತಗೊಳಿಸಿದ ವಿಷಯಗಳು, ಆದಿಪರ್ವದಲ್ಲಿ ಒಮ್ಮೆ ಬಂದಿವೆ. ಇದೇ ಕಥೆಯು ಅನುಶಾಸನಪರ್ವದಲ್ಲಿಯೂ ಬಂದಿದೆ. ಔತ್ತರಾಯಣಪಾಠದಲ್ಲಿ ಅನುಶಾಸನಪರ್ವದಲ್ಲಿ ಈ ಕಥೆ ಕಾಣುತ್ತಿಲ್ಲ. ದಾಕ್ಷಿಣಾತ್ಯ ಹಾಗೂ ವೈಷ್ಣವಪಾಠಗಳಲ್ಲಿ ಮಾತ್ರ ಇದೆ.)

ಧರ್ಮರಾಜನು ಭೀಷ್ಮರನ್ನು ಕುರಿತು 'ಗರುಡನು ಪಕ್ಷಿಗಳಲ್ಲಿ ಶ್ರೇಷ್ಠನೆಂದು ಹೇಗೆ ಆದ ಎಂದು ಕೇಳುತ್ತಾನೆ.' ಸುಪರ್ಣನು ಸರ್ಪಗಳಿಗೆ ಶತ್ರುವಾಗಲು ಕಾರಣ, ಆತನ ಪರಾಕ್ರಮ, ಬಲಗಳ ಬಗ್ಗೆ ಕೇಳಿದಾಗ ಭೀಷ್ಮರು ಅಲ್ಲೇ ಇದ್ದ ಕೃಷ್ಣನ ಅನುಮತಿ ಪಡೆದು ಹೇಳುತ್ತಾರೆ. ಭೀಷ್ಮರು ಕೃಷ್ಣನನ್ನು ಕುರಿತು 'ನೀನೇ ಮೊದಲು ಸುಪರ್ಣ ಎಂದು ಕರೆಸಿಕೊಳ್ಳಲ್ಪಡುತ್ತಿದ್ದೆ. 'ಅತೋ ದಿವ್ಯಃ ಸ ಸುಪರ್ಣೋ...' ಎಂಬ ವೇದವು ಭಗವಂತನನ್ನೇ ಸುಪರ್ಣನೆಂದು ಕರೆದಿದೆ. ಅನಾದಿಕಾಲದಿಂದಲೂ ನೀನೇ ಸುಪರ್ಣಶಬ್ದವಾಚ್ಯನಾಗಿದ್ದಿ. ಆದ್ದರಿಂದ ನಿನ್ನ ಅನುಮತಿ ಪಡೆದು ನಾನು ಗರುಡನು ಸುಪರ್ಣ ಹೇಗಾದನು? ಆತನು ಪಕ್ಷಿಗಳಲ್ಲಿ ಶ್ರೇಷ್ಠತ್ವವನ್ನೂ ಹೇಳುತ್ತೇನೆ' ಎಂದಾಗ, ವಾಸುದೇವನು ಗರುಡನ ಜನ್ಮವನ್ನು ಧರ್ಮರಾಜನಿಗೆ ಹೇಳು, ಎನ್ನುತ್ತಾನೆ'.

ಇಲ್ಲಿ ಸುಪರ್ಣಶಬ್ದವು ವಿಷ್ಣುವಾಚಕವೆಂದು ಸ್ಪಷ್ಟವೇ ಇದೆ. ವಾದಿರಾಜರು ಲಕ್ಷಾಲಂಕಾರದಲ್ಲಿ ಇದರೊಡನೆ ವೇದವನ್ನೂ ಉದಾಹರಿಸಿ ಸಮರ್ಥಿಸಿದ್ದಾರೆ. 'ಪ್ರೋಚ್ಯತೇ' ಎಂಬ ಕ್ರಿಯಾಪದದ ಸಾರ್ಥಕ್ಯಕ್ಕಾಗಿ 'ಅಥೋ ದಿವ್ಯಃ ಸ ಸುಪರ್ಣೋ ಗರುತ್ಮಾನ್' ಇತಿ ಶ್ರುತೇಃ ಸುಪರ್ಣಃ ಪ್ರೋಚ್ಯತೇ ಪುರೇತ್ಯುಕ್ತಃ। (**ಲಕ್ಷಾಲಂಕಾರ**) ಎಂದು ವ್ಯಾಖ್ಯಾನಿಸಿದ್ದಾರೆ.

---

೧ ಯುಧಿಷ್ಠಿರ ಉವಾಚ –
ಕಥಂ ಗರುತ್ಮಾನ್ ಪಕ್ಷೀಣಾಂ ಶ್ರೈಷ್ಠ್ಯಂ ಪ್ರಾಪ ಪರಂತಪ।
ಸುಪರ್ಣೋ ವೈನತೇಯಶ್ಚ ಕೇನ ಶತ್ರುಶ್ಚ ಭೋಗಿನಾಮ್ ॥
ಕಿಂ ವೀರ್ಯಃ ಕಿಂ ಬಲಶ್ಚಾಸೌ.................... ॥ – ೧೫/೨,೩
ಭೀಷ್ಮ ಉವಾಚ –
ತ್ವಂ ಹಿ ಶೌರೇ ಮಹಾಬಾಹೋ ಸುಪರ್ಣ ಪ್ರೋಚ್ಯತೇ ಪುರಾ।
ಅನಾದಿನಿಧನೇ ಕಾಲೇ ಗರುಡಶ್ಚಾಪಿ ಕೇಶವಃ ॥ – ೧೫/೫,೬

ಅಲ್ಲದೇ ವಿಷ್ಣುಸಹಸ್ರನಾಮದಲ್ಲೂ ಸುಪರ್ಣಶಬ್ದವು ವಿಷ್ಣುನಾಮವಾಗಿ ೨ ಬಾರಿ ಹೇಳಲಾಗಿದೆ[೧].

ಅಮುಖ್ಯವೃತ್ತಿಯಿಂದ ಗರುಡನು ಸುಪರ್ಣಶಬ್ದವಾಚ್ಯನಾಗಿದ್ದಾನೆ ಎಂದು ಇದರ ಅಭಿಪ್ರಾಯ. ಪರಮಮುಖ್ಯವೃತ್ತಿಯಿಂದ ಭಗವಂತನೇ ಸುಪರ್ಣಶಬ್ದವಾಚ್ಯ ಇತರೇ ಎಲ್ಲ ಶಬ್ದಗಳಿವೆ.

ಭೀಷ್ಮರು ತಾವು ಒಮ್ಮೆ ಕೈಲಾಸಶಿಖರಪ್ರದೇಶದಲ್ಲಿ ಸಹಸ್ರಾರು ದುಷ್ಟಮೃಗಗಳನ್ನು ಕೊಲ್ಲುತ್ತಿದ್ದ ಪರಶುರಾಮ ದೇವರನ್ನು ಕಂಡು ತಮ್ಮಲ್ಲಿದ್ದ ಶಸ್ತ್ರಾಸ್ತ್ರಗಳನ್ನು ತ್ಯಜಿಸಿ, ನಮಸ್ಕರಿಸಿ, ಕುಶಲವಾರ್ತೆಗಳ ನಂತರ ಗರುಡನ ಬಲ ಮತ್ತು ಓಜಸ್ಸನ್ನು (ಧಾತುಬಲ, ಪರಾಕ್ರಮ, ಸಾಮರ್ಥ್ಯ) ಕುರಿತು ಕೇಳಿದಾಗ ಅವರು(ಪರಶುರಾಮದೇವರು) ಉತ್ತರಿಸಿದರು.

ದಕ್ಷಪ್ರಜಾಪತಿಗೆ ಇದ್ದ ಕದ್ರೂ ಹಾಗೂ ವಿನತಾ ಎಂಬ ಪುತ್ರಿಯರನ್ನು ಕಶ್ಯಪರು ಧರ್ಮದಿಂದ ವಿವಾಹವಾದರು. ಅವರು ಪತಿಯನ್ನು ಭಕ್ತಿಯಿಂದ ಸೇವಿಸಲು ಅವರಿಗೆ ಕಶ್ಯಪರು ವರ ಕೇಳಿರೆಂದಾಗ, ಕದ್ರೂದೇವಿಯು ಸಮಾನಬಲಪರಾಕ್ರಮಿಗಳಾದ ಒಂದು ಸಾವಿರ ಪುತ್ರರನ್ನು, ವಿನತಾದೇವಿಯು ಕದ್ರೂ ಪುತ್ರರಿಗೆ ಸಮಾನ ಪರಾಕ್ರಮಿಗಳಾದ ಇಬ್ಬರೇ ಪುತ್ರರನ್ನು ಕೇಳಿದಳು. ಕಶ್ಯಪರು ತಥಾಸ್ತು ಎಂದ ಮೇರೆಗೆ ಕದ್ರೂದೇವಿಯು ಕಾಲಾಂತರದಲ್ಲಿ ಒಂದು ಸಾವಿರ ಮೊಟ್ಟೆಗಳನ್ನು, ವಿನತೆಯು ಎರಡು ಮೊಟ್ಟೆಗಳನ್ನು ಪ್ರಸವಿಸಿದರು. ಈ ಪತ್ನಿಯರ ಪರಿಚಾರಕಿಯರು ಆ ಮೊಟ್ಟೆಗಳನ್ನು ದ್ರವರೂಪದ ತುಪ್ಪದ ಪಾತ್ರೆಗಳಲ್ಲಿಟ್ಟು ಕಾಪಾಡಿದರು. ಐದುನೂರು ವರ್ಷಗಳ ನಂತರ ಕದ್ರೂದೇವಿಯ ಒಂದುಸಾವಿರ ಮೊಟ್ಟೆಗಳು ಶುದ್ಧವಾದ ದೃಷ್ಟಿ ಹಾಗೂ ಶ್ವಾಸಶಕ್ತಿಯುಳ್ಳ ಪುತ್ರರು ಸರ್ಪರೂಪಗಳಾಗಿ ಹುಟ್ಟಿದವು, ಹರಿದಾಡಿದವು.

ವಿನತೆಯ ಎರಡೂ ಮೊಟ್ಟೆಗಳು ಒಡೆಯದೇ ಹಾಗೇ ಇರಲು ಆಕೆ ಸಂತಾಪದಿಂದ ಇದರಿಂದ ನಾನೇನು ಮಾಡಲಿ ಎಂದು ಒಂದು ಮೊಟ್ಟೆಯನ್ನು ಒಡೆದಳು (ಭೇದಿಸಿದಳು)[೨]. ಆಗ ಆ ಒಡೆದ ಮೊಟ್ಟೆ ಪೂರ್ಣಶರೀರವಿಲ್ಲದ, ದೇಹದ ಮೇಲ್ಭಾಗ ಮಾತ್ರವಿರುವ ಶಿಶುವನ್ನು ವಿನತೆ ನೋಡಿ ಶೋಕದಿಂದ ಆಕೆಗೆ ವ್ಯಥೆಯಾಯಿತು. ಆ ಅರ್ಧಶರೀರಿಯು ಹಾಗೆಯೇ ಪಕ್ಷಿಯಾಯಿತು. ಆ ಮಗು ತಾಯಿಯನ್ನು ದುಃಖದಿಂದ ಕಣ್ಣೀರಿಕ್ಕುತ್ತಾ ನನ್ನನ್ನು ಕೊಂದೆಯಲ್ಲ! ಎಂದು ಅನೇಕ ಬಾರಿ ಹೇಳುತ್ತಾ ನನ್ನ ಪೂರ್ಣ ಬೆಳವಣಿಗೆಗೆ ಅವಕಾಶ ನೀಡದೇ ಅಕಾಲದಲ್ಲಿ ಮೊಟ್ಟೆಯೊಡೆದು ಬಿಟ್ಟೆ. ಮತ್ಸರ ಹಾಗೂ ಕ್ರೋಧಗಳಿಗೆ ಒಳಗಾಗಿ (ಕದ್ರೂ ಬಗ್ಗೆ) ನನ್ನನ್ನು ಹೀಗೆ ಮಾಡಿದೆ. ಆದ್ದರಿಂದ ನೀನು ದಾಸಿಯಾಗುವೆ[೩]. ನಾನು ಹಾಗೂ ಮುಂದೆ ಹುಟ್ಟಲಿರುವ

---

೧ 'ಸುಪರ್ಣೋ ಭುಜಗೋತ್ತಮಃ' (೧೯೨); 'ಸುಪರ್ಣೋ ವಾಯುವಾಹನಃ' (೮೫೯)

೨ ವಿನತಾ ತೇಷು ಜಾತೇಷು ಪನ್ನಗೇಷು ಮಹಾತ್ಮಸು ।
ವಿಪುತ್ರಾ ಪುತ್ರಸಂತಾಪಾತ್ ಅಂಡಮೇಕಂ ಬಿಭೇದ ಹ ॥ - ೧೬/೧೪

೩ ಕಿಮನೇನ ಕರಿಷ್ಯೇऽಹಮಿತಿ ವಾಕ್ಯಮಭಾಷತ ।
ನ ಹಿ ಪಂಚಶತೇ ಕಾಲೇ ಪುರಾ ಪುತ್ರೌ ದದರ್ಶ ಸಾ ॥ - ೧೬/೧೫

ಇನ್ನೊಬ್ಬ ನಿನ್ನ ಮಗ, ಇಬ್ಬರೂ ವಾಯುವಿಗಿಂತ ಬಲಿಷ್ಠರಾಗುವೆವು. ನೀನು ಯಾರ ಜೊತೆ ಸ್ಪರ್ಧೆ ಮಾಡುತ್ತೀಯೋ ಆಕೆಗೆ ನೀಮ ಐದುನೂರು ವರ್ಷ ದಾಸಿಯಾಗುವೆ ಎಂದು ಕಣ್ಣೀರಿಡುತ್ತಾ ಹೇಳಿದನು[೧] (ತಾಯಿಗೆ ಶಾಪಕೊಟ್ಟಂತೆ ಮಾಡಿದ, ಶಾಪಶಬ್ದ ಹೇಳದೆ). ಮುಂದೆ ಹುಟ್ಟಲಿರುವ ತಮ್ಮನು ನಿನ್ನ ದಾಸ್ಯವನ್ನು ಬಿಡಿಸುವನು ಎಂದೂ ಹೇಳಿ(ಸೂರ್ಯನ ಸಾರಥಿಯಾಗಲು ಅಂತರಿಕ್ಷಕ್ಕೆ ಹಾರಿದನು).

ವಿನತಾದೇವಿ ಮಗನ ಶಾಪದಿಂದ ಹೆದರಿ ಇನ್ನೊಬ್ಬ ಮಗನ ಜನನವನ್ನು ಕಾಯುತ್ತಿದ್ದಳು. ಮೊದಲಮಗ ಅರುಣ ಹುಟ್ಟಿ ೫೦೦ ವರ್ಷದ ನಂತರ ಎರಡನೇ ಮೊಟ್ಟೆಯಿಂದ ಹೊರಗೆ ಬಂದವನೇ ಸರ್ಪಗಳನ್ನು ತಿನ್ನುವ ಗರುಡ. ಸುಂದರವಾದ ಮುಖ, ಶಿರಸ್ಸಿನ ಮೇಲೆ ಶಿಖಾ, ತುಂಬಿದ ಎದೆ, ಆಮೆಯ ನಖದಂತಿರುವ ನಖಗಳು, ಮಹಾನ್ ಆಕಾರ, ಕೆಂಗಣ್ಣು ಚಿಕ್ಕಪಾದ, ದೊಡ್ಡ ತಲೆ ಮೊದಲಾದ ಅಂಗಸೌಷ್ಠವದಿಂದ ಕೂಡಿದ್ದನು ಗರುಡ.

ಕಿರಿಯ ಮಗ ಸೂರ್ಯೋದಯಕ್ಕಿಂತ ಮೊದಲು ಪೂರ್ವದಿಕ್ಕಿನಲ್ಲಿ ಕೆಂಬಣ್ಣದಿಂದ ಕಾಣಿಸುವವನಾಗಿ ಅರುಣನೆನಿಸಿದನು. ಹುಟ್ಟಿದ ಕೂಡಲೇ ಗರುಡನು ಎಲ್ಲ ದಿಕ್ಕುಗಳಲ್ಲಿ ಹಾರಾಡಿ. ಬ್ರಹ್ಮದೇವರು ವ್ಯವಸ್ಥೆಗೈದ ಆಹಾರದಿಂದ ಹಾಗೂ ಎಲ್ಲ ಇಚ್ಛೆಗಳಿಂದ ಪೂಜಿತನಾಗಿ ಬೃಹದಾಕಾರ ತಾಳಿದ.

ಹೀಗೆ ಗರುಡನು ತನಗಿಷ್ಟ ಬಂದಂತೆ ಬೆಳೆಯುತ್ತಿರಲು ಕದ್ರೂ, ವಿನತೆಯರು ಸಾಗರದ ಸಮೀಪದಲ್ಲಿ '**ಉಚ್ಚೈಶ್ರವಸ್**' ಕುದುರೆಯನ್ನು ನೋಡಿದರು (ಅದು ಸಾಗರದಲ್ಲಿ ಸ್ನಾನ ಮಾಡಿ ನೀರು ಕುಡಿದು ಸಂಚರಿಸುತ್ತಿತ್ತು). ಆಗ ನಗುತ್ತಲೇ ಕದ್ರೂದೇವಿಯು ವಿನತೆಗೆ 'ಈ ಕುದುರೆಯ ಬಣ್ಣ ಯಾವುದೆಂದು ನಿನ್ನ ಅಭಿಪ್ರಾಯ ಹೇಳು' ಎಂದಳು. ಅದಕ್ಕೆ ವಿನತೆಯು ಕುದುರೆಯ 'ಒಂದೇ ಬಣ್ಣವುಳ್ಳದ್ದು ಅದು ಎಲ್ಲೆಡೆ ಬಿಳಿಯಾಗಿದೆ. ನಿನ್ನ ಅಭಿಪ್ರಾಯವೇನು' ಎಂದಳು. ಮತ್ತೆ ಕದ್ರೂದೇವಿಯು ನಾವಿಬ್ಬರೂ ಕುದುರೆಯ ಬಣ್ಣದ ಬಗ್ಗೆ ಪಂದ್ಯ, ಪಣವಿಡೋಣ. ಎಂದಾಗ ವಿನತೆಯು ಆ ಪಣವೇನೆಂದು ಹೇಳೆಂದಳು. ಅದಕ್ಕೆ ಕದ್ರೂ ಯಾರು ಸೋಲುತ್ತಾರೋ, ಅವರು ಗೆದ್ದವರ ದಾಸಿಯಾಗಬೇಕು ಎಂದಳು. ಪಂದ್ಯವೇನೆಂದರೆ, ಅಶ್ವಕ್ಕೆ ಒಂದು ಬಣ್ಣವಿದೆ,

.................................

ಮಾತರಂ ಚಪಲಾಸೀತಿ ಹತೋಽಹಮಿತಿ ಚಾಸಕೃತ್ । - ೧೬/೧೮
೧ ಈರ್ಷ್ಯಾಕ್ರೋಧಾಭಿಭೂತತ್ವಾತ್ ಯೋಽಹಮೇವಂ ಕೃತಸ್ತ್ವಯಾ ॥
ತಸ್ಮಾತ್ತ್ವಮಪಿ ಮೇ ಮಾತಃ ದಾಸೀಭಾವಂ ಗಮಿಷ್ಯಸಿ ॥ - ೧೬/೨೦
ಪಂಚವರ್ಷಶತಾನಿ ತ್ವಂ ಸ್ಪರ್ಧಸೇ ವೈ ಯಯಾ ಸಹ ।
ದಾಸೀ ತಸ್ಯಾ ಭವಿತ್ರೀತಿ ಸಾಶ್ರುಪಾತಮುವಾಚ ಹ ॥ - ೧೬/೨೧
ಏಷ ಚೈವ ಮಹಾಭಾಗೇ ಬಲೀ ಬಲವತಾಂ ವರಃ ।
ಮೋಕ್ಷಯಿಷ್ಯತಿ ತೇ ಮಾತಃ ದಾಸೀಭಾವಾನ್ಮಮಾನುಜಃ ॥ - ೧೬/೨೨

ಅನೇಕ ಬಣ್ಣಗಳಿವೆ ಎಂದು ಎರಡು ವಿಷಯಗಳಲ್ಲಿ ನಿನಗೆ ಸರಿಯಾಗಿದೆಯಾ ಪಣ ಎಂದು ಕದ್ರೂ ಹೇಳಲು, ವಿನತೆಯು ಸೋತವರು ದಾಸಿಯಾಗಬೇಕು ಎನ್ನುವುದು, ನನಗೂ ಸರಿ ಎನ್ನಿಸುತ್ತದೆ. ನಾನೀಗಾಗಲೇ ಹೇಳಿದಂತೆ ಅಶ್ವದ ಬಣ್ಣ ಒಂದೇ, ಅದು ಎಲ್ಲೆಡೆ ಬಿಳಿ. ನೀನು ಸತ್ಯವನ್ನೇ ಆಶ್ರಯಿಸು. ನಾನು ಸಹ ಸತ್ಯಕ್ಕೆ ಅಂಟಿಕೊಂಡಿದ್ದೇನೆ ಎಂದಳು[೧].

ಕದ್ರೂ ಹಾಗೂ ವಿನತೆಯರು ಪಣದ ಬಗ್ಗೆ ಒಪ್ಪಿ ಶಪಥ ಮಾಡಿದರು. ಕದ್ರೂದೇವಿ ತನ್ನ ಪುತ್ರರನ್ನು ಕರೆದು ತಾನು ವಿನತೆಯೊಡನೆ ಮಾಡಿಕೊಂಡ ಪಣದ ವಿಷಯ ಹೇಳಿ, 'ಕುದುರೆಯು ವಾಸ್ತವವಾಗಿ ಒಂದೇ ವರ್ಣದ್ದಾಗಿದೆ. ನಾನು ಅನೇಕವರ್ಣದ್ದೆಂದು ಪಣ ಕಟ್ಟಿದ್ದೇನೆ. ನಾನು ಹೇಗಾದರೂ ಗೆಲ್ಲಲೇಬೇಕು. ಅದಕ್ಕಾಗಿ ನೀವು ನನ್ನ ಮಕ್ಕಳಾಗಿ ನನ್ನನ್ನು ಗೆಲ್ಲಲು ನಾನು ಹೇಳಿದಂತೆ ಮಾಡಿರಿ. ನೀವು ಕುದುರೆಯ ಬಾಲಕ್ಕೆ ಅಂಟಿಕೊಂಡು, ಅದು ಕರಿಬಣ್ಣದ್ದಾಗಿ ತೋರುವಂತೆ ಮಾಡಿರಿ. ಆಗ ವಿನತೆ ಸೋಲುತ್ತಾಳೆ. ನನ್ನ ದಾಸಿಯಾಗುತ್ತಾಳೆ. ನನ್ನ ಮಾತನ್ನು ನಡೆಸಿಕೊಡಿರಿ. ನಿಜವಾಗಿ ಪುತ್ರರೆನಿಸಲು ನಾನು ಹೇಳಿದಂತೆ ಮಾಡಿರಿ. ಅದು ತಪ್ಪಿದ್ದರೂ, ಅಧರ್ಮವಾದರೂ ತಾಯಿ ಮಾತನ್ನು ನಡೆಸಿಕೊಡುವುದರಿಂದ ಧರ್ಮವೇ ನಿಮಗೆ ಬರುತ್ತದೆ'[೨] ಎಂದು ಹೇಳಿದಾಗ, ಪುತ್ರರು ಒಪ್ಪಲಿಲ್ಲ.

'ಅಧರ್ಮವನ್ನುನಮ್ಮಿಂದಮಾಡಿಸಬೇಡ. ಮೋಸಮಾಡಿಪಂದ್ಯ ಗೆಲ್ಲುವುದುಉಚಿತವಲ್ಲ. ಒಂದು ವೇಳೆ ಒತ್ತಾಯ ಮಾಡಿದರೆ ನೀನಿಲ್ಲದ ಕಡೆ ಹತ್ತು ದಿಕ್ಕುಗಳಿಗೆ ಓಡಿಹೋಗುತ್ತೇವೆ'[೩] ಎಂದರು ಪುತ್ರ ಸರ್ಪಗಳು. ಗುರುವೇ ಆದರೂ, ಸೊಕ್ಕಿನಿಂದ ಕೂಡಿ ಕಾರ್ಯಾಕಾರ್ಯ ತಿಳಿಯದೇ ಕೆಟ್ಟದಾರಿ ತಾಳಿದರೆ ಅವನ ಪರಿತ್ಯಾಗವು ಶಾಸ್ತ್ರದಲ್ಲಿ ಹೇಳಲ್ಪಟ್ಟಿದೆ.

---

೧ ಜಿತಾ ದಾಸೀ ಭವೇಮೋತ ತ್ವಮಹಂ ಚಾಪ್ಯಸಿತೇಕ್ಷಣೇ।
ನೈಕವರ್ಣೈಕವರ್ಣತ್ವೇ ವಿನತಾ ರೋಚತೇ ಚ ತೇ॥ - ೧೭/೧೪
ರೋಚತೇ ಮೇ ಪಣೇ ರಾಜ್ಞಿ ದಾಸೀ ತೇನ ನ ಸಂಶಯಃ।
ಸತ್ಯಮಾತಿಷ್ಠ ಭದ್ರಂ ತೇ ಸತ್ಯೇ ಸ್ಥಾಸ್ಯಾಮಿ ಚಾಪ್ಯಹಮ್॥ - ೧೭/೧೫

೨ ಏಕವರ್ಣಶ್ಚ ವಾಜೀ ಚ ಚಂದ್ರಕೋಕನದಪ್ರಭಃ।
ಸಾಹಂ ದಾಸೀ ಭವಿಷ್ಯಾಮಿ ಜಿತಾ ಪುತ್ರಾ ನ ಸಂಶಯಃ॥
ತೇ ಯೂಯಮಶ್ವಪ್ರವರಮಾವಿಶಧ್ವಮತಂದ್ರಿತಾಃ॥
ಸರ್ವೇ ತ್ವೇಕಂ ಬಾಲಧಿಗಾ ಬಾಲಾ ಭೂತ್ವಾಂಜನ ಪ್ರಭಾಃ॥ ೧೮/೪,೫

೩ ನಿಕೃತ್ಯಾ ವಿಜಯಂ ಮಾತರ್ಮಾ ಸ್ಮ ಕಾರ್ಷೀಃ ಕಥಂಚನ।
ತೇ ವಯಂ ತ್ವಾಂ ಪರಿತ್ಯಜ್ಯ ದ್ರವಿಷ್ಯಾಮ ದಿಶೋ ದಶ।
ಗುರೋರಪ್ಯವಲಿಪ್ತಸ್ಯ ಕಾರ್ಯಾಕಾರ್ಯಮಜಾನತಃ।
ಉತ್ಪಥಂ ಪ್ರತಿಪನ್ನಸ್ಯ ಪರಿತ್ಯಾಗೋ ವಿಧೀಯತೇ॥ ೧೮/೬-೧೧

ತಾಯಿಯ ಮಾತನ್ನು ಕೇಳಿ ಕೋಪದಿಂದಲೇ ಕೆಲವು ಸರ್ಪಗಳು ಮನಸ್ಸಿನಲ್ಲದ ಮನಸ್ಸಿನಿಂದ ಒಪ್ಪಿ ಆ ಅಶ್ವದ ಬಾಲದಲ್ಲಿ ಕಪ್ಪಾದ ಕೂದಲುಗಳ ಬಣ್ಣವನ್ನು ಹೊಂದಿ ಸೇರಿಕೊಂಡವು. ಓಡಿಹೋದ ಸರ್ಪಗಳನ್ನು ಕದ್ರೂ 'ಮುಂದೆ ಕುರುವಂಶದಲ್ಲಿ ಅರ್ಜುನನಿಂದ ೪ನೇಯವನಾಗಿ ಜನಮೇಜಯನು ರಾಜನಾಗಿ ಸರ್ಪಸತ್ರಮಾಡಿ ಆ ಸತ್ರದಲ್ಲಿ ನಿಮ್ಮನ್ನು ಹೋಮ ಮಾಡುತ್ತಾನೆ. ಹಿರಿಯರಾದ(ಳಾದ) ನನ್ನ ಮಾತನ್ನು ಮೀರಿ ನಡೆದುದರಿಂದ ಈ ಶಾಪ ಸುಳ್ಳಾಗದು[೧] (ಶಾಪ ಪ್ರಕಾರ ಆಗೇ ಆಗುತ್ತದೆ)' ಎಂದು ಶಪಿಸಿದಳು.

ನಂತರ ಕದ್ರು ವಿನತೆಯನ್ನು ಕುರಿತು ಕುದುರೆಯನ್ನು ನೋಡೋಣ ಎಂದಳು. ವಿನತೆಯು ನೇರಬುದ್ಧಿಯವಳಾಗಿ ಕುಟಿಲಬುದ್ಧಿಯ ಕದ್ರೂವನ್ನು ಕುರಿತು ಸ್ವಲ್ಪ ನಕ್ಕು ನುಡಿದಳು. ಇಬ್ಬರೂ ಹೋಗಿ ನೋಡಿದರು. ವಿನತೆಯು ಶುದ್ಧಚಂದ್ರವರ್ಣದ ಬಾಲವನ್ನು ಹೊಂದಿದ್ದ ಕುದುರೆಯ ಕಪ್ಪಾದ ಬಾಲವನ್ನು ಹೊಂದಿರುವುದನ್ನು ನೋಡಿ ಪೀಡಿತಳಾಗಿ ನಾಚಿಕೆಯಿಂದ ಕಣ್ಣೀರು ತುಂಬಿಸಿಕೊಂಡು 'ಆ ಅಶ್ವದ ಬಾಲ ಕಪ್ಪಾಗಿದೆ. ಪಣದಲ್ಲಿ ನೀನೇ ಗೆದ್ದೆ. ನಾನು ನಿನ್ನ ದಾಸಿ ನಿನ್ನ ಇಚ್ಛೆಯಂತೆ ನನ್ನನ್ನು ನಿನ್ನ ಕಾರ್ಯಗಳಿಗೆ ಕಳಿಸು. ಏಕೆಂದರೆ ದಾಸಿಯರು ಸ್ವಾಮಿಯ ಇಚ್ಛಾನುಸಾರ ಕಾರ್ಯ ಮಾಡಬೇಕಷ್ಟೆ ಇದರಲ್ಲಿ ಸಂಶಯವಿಲ್ಲ'[೨] ಎಂದಳು.

ಭೀಷ್ಮರು ಮುಂದುವರೆದು ಧರ್ಮರಾಜನಿಗೆ ಹೇಳುತ್ತಾರೆ 'ಪ್ರಿಯನೇ! ಕದ್ರೂದೇವಿಯು ನಗುತ್ತಾ ಧರ್ಮಿಷ್ಠಳಾದ ವಿನತೆಯನ್ನು ದಾಸಿಯಂತೆ ನಾಲ್ಕೂ ದಿಕ್ಕುಗಳಿಗೆ ಕಳಿಸಿದಳು. ವಿನತೆಯಾದರೋ ಎಲ್ಲ ಕೆಲಸಗಳನ್ನು ಮಾಡುತ್ತಿದ್ದಳು. ಆಕೆಯ ಮುಖದ ಕಾಂತಿ ಕಡಿಮೆಯಾಗಲಿಲ್ಲ, ಕ್ಷೋಭೆಗೊಳ್ಳಲಿಲ್ಲ, ಸಿಟ್ಟಾಗಲಿಲ್ಲ, ದುಃಖಿಸಲಿಲ್ಲ, ಯಾವ ವಿಕಾರಕ್ಕೂ ಒಳಗಾಗಲಿಲ್ಲ[೩]. ಇಷ್ಟು ಹೊತ್ತಿಗೆ ವಿನತೆಯ ಮಗ ಗರುಡ ವೃದ್ಧಿಗೊಂಡು

---

೧ ಉತ್ಪತ್ಸ್ಯತಿ ಹಿ ರಾಜನ್ಯಃ ಪಾಂಡವೋ ಜನಮೇಜಯಃ ।
ಚತುರ್ಥೋ ಧನ್ವಿನಾಂ ಶ್ರೇಷ್ಠಾತ್ ಕುಂತೀಪುತ್ರಾತ್ ಧನಂಜಯಾತ್ ॥
ಸ ಸರ್ಪಸತ್ರಮಾಹರ್ತಾ ಕ್ರುದ್ಧಃ ಕುರುಕುಲೋದ್ವಹಃ ।
ತಸ್ಮಿನ್ ಸತ್ರೇಽಗ್ನಿನಾ ಯುಷ್ಮಾನ್ ಪಂಚತ್ವಮುಪನೇಷ್ಯತಿ ॥
ಏವಂ ಕ್ರುದ್ಧಾಽಶಪನ್ಮಾತಾ ಪನ್ನಗಾನ್ ಧರ್ಮಚಾರಿಣಃ ।
**ಗುರೋಃ ಪರಿತ್ಯಾಗಕೃತಂ ನೈತದನ್ಯತ್ ಭವಿಷ್ಯತಿ ॥**
ತತ್ರ ಯೇ ವೃಜಿನಂ ತಸ್ಯಾ ಅನಾಪನ್ನಾ ಭುಜಂಗಮಾಃ ।
ತೇ ತಸ್ಯ ವಾಜಿನೋ ವಾಲಾ ಬಭೂವುರಸಿತಪ್ರಭಾಃ ॥ - ೧೯/೩-೭

೨ ಉವಾಚ ಕಾಳವಾಲೋಽಯಂ ತುರಗೋ ವಿಜಿತಂ ತ್ವಯಾ ।
ದಾಸೀಂ ಮಾಂ ಪ್ರೇಷಯ ಸ್ವಾರ್ಥೇ ಯಥಾ ಕಾಮವಶಾಂ ಶುಭೇ ॥
**ದಾಸ್ಯಶ್ಚ ಕಾಮಕಾರಾ ಹಿ ಭರ್ತೃಣಾಂ ನಾತ್ರ ಸಂಶಯಃ ॥** - ೧೯/೧೪,೧೫

೩. ತಾತ ಕದ್ರೂರ್ಹಸಂತೀವ ವಿನತಾಂ ಧರ್ಮಚಾರಿಣೀಮ್ ।
ದಾಸೀವತ್ ಪ್ರೇಷಯಾಮಾಸ ಸಾಚ ಸರ್ವಂ ಚಕಾರ ತತ್ ।
ಇಮಾ ದಿಶಶ್ಚ ತಸ್ರೋಽಸ್ಯಾಃ ಪ್ರೇಷ್ಯಭಾವೇನ ವರ್ಣಿತಾಃ ॥...
**ನ ವಿವರ್ಣಾ ನ ಸಂಕ್ಷುಬ್ಧಾ ನ ಚ ಕ್ರುದ್ಧಾ ನ ದುಃಖಿತಾ ॥** - ೨೦/೧-೩

ಬಲದರ್ಪಗಳೂ ಹೆಚ್ಚಾದವು. ಇದನ್ನು ನೋಡಿದ ನಾರದರು ನಗುತ್ತಾ 'ದರ್ಪವಶನಾಗಿದ್ದೀ, ಸರ್ಪರಾಜನ ತಾಯಿಯಾದ ಕದ್ರೂದೇವಿಯ ಅಂತಃಪುರದಲ್ಲಿ ನಿನ್ನ ತಾಯಿ ದಾಸಿಯಾಗಿ ದುಡಿಯುತ್ತಿರುವುದನ್ನು ನೀನು ಗಮನಿಸುತ್ತಿಲ್ಲ ಏಕೆ?'[೧] ಆದಕ್ಕೆ ಗರುಡನು 'ನನ್ನ ತಾಯಿಗೆ ಇಂಥ ಪರಿಸ್ಥಿತಿ ಏಕೆ ಬಂತು'[೨] ಎಂದು ಕೇಳಿದ ನಾರದರನ್ನು.

ನಾರದರು ವೈನತೇಯನಿಗೆ 'ಕದ್ರೂದೇವಿಯೊಡನೆ ನಿನ್ನ ತಾಯಿ ಪಣಕಟ್ಟಿ ಆಕೆಯ ಪುತ್ರರ ಸಹಾಯದಿಂದಾಗಿ ಮೋಸದಿಂದ ಸೋತಿದ್ದಾಳೆ. ಆದ್ದರಿಂದ ದಾಸಿಯಾಗಿದ್ದಾಳೆ'[೩] ಎಂದು ಹೇಳಿದರು.

ಹೇಗೆ ಸೋತಳು? ಎಂದು ಗರುಡ ಕೇಳಲು ನಾರದರು ಆದುದೆಲ್ಲವನ್ನೂ ವಿವರಿಸಿದರು. ಇದನ್ನು ಕೇಳಿದ ಗರುಡನಿಗೆ ಕೋಪವುಂಟಾಗಿ ಕದ್ರೂ ಹಾಗೂ ಆಕೆಯ ಮಕ್ಕಳನ್ನು ನಿಂದಿಸಿದನು. ಕೂಡಲೇ ತನ್ನ ತಾಯಿಯ ಬಳಿಗೆ ಹೋದ. ಆಕೆ ದೀನಳೂ, ಜಟಿಲಳೂ, ಕೃಶಳೂ ಆಗಿ, ಮೋಡದಿಂದ ಮುಚ್ಚಲ್ಪಟ್ಟ ಸೂರ್ಯಪ್ರಭೆಯಂತಿದ್ದ ತಾಯಿಯನ್ನು ನೋಡಿದನು. ಗರುಡನಿಗೆ ದುಃಖ ಉಮ್ಮಳಿಸಿತು. ಕಣ್ಣಾಲಿ ನೀರಿನಿಂದ ತುಂಬಿತು.

ಏನೂ ಮಾತನಾಡದೇ ನೇರವಾಗಿ ಕದ್ರೂ ಬಳಿ ಹೋದ. ಕದ್ರೂದೇವಿಯನ್ನು ಕುರಿತು 'ಎಲೈ ತಾಯಿಯೇ! ನೀನು ನನ್ನ ತಾಯಿಯನ್ನು ಧರ್ಮದಿಂದ ಅಥವಾ ಅಧರ್ಮದಿಂದ ಗೆದ್ದಿದ್ದರೂ ನೀನು ಹಿರಿಯಳು. ನೀನು ಮಾಡಿದ್ದೆಲ್ಲ ಧರ್ಮವೆಂದೇ ನಾನು ಭಾವಿಸುವೆ. ನನ್ನ ತಾಯಿ ಕೃಪಣಳಾಗಿ ದುಃಖಿತಳಾಗಿದ್ದಾಳೆ. ಸಾಧ್ವಿಯಾದ ಆಕೆಯನ್ನು ಬಿಡುಗಡೆ ಮಾಡು' ಎಂದು ಬೇಡಿದ. ಆದರೆ ದುರ್ಬುದ್ಧಿಯ ಕದ್ರೂ 'ನಾನು ನಿನ್ನ ತಾಯಿಗೆ ನಿನ್ನ ಇಚ್ಛೆಯಂತೆ ಪ್ರಿಯವಾದುದನ್ನು ಮಾಡೆ (ಮಾಡುವುದಿಲ್ಲ), ಬಿಡುಗಡೆ ಮಾಡುವುದಿಲ್ಲ.' ಆ ಮಾತನ್ನು ಕೇಳಿ ಗರುಡನು ಆಕೆಯನ್ನು ಒಳ್ಳೆಯ ಮಾತುಗಳಿಂದ ಸಮಾಧಾನ ಮಾಡಲು ಉದ್ಯುಕ್ತನಾದ.

'ಅಮ್ಮ! ನೀನು ಹಿರಿಯಳು. ನನ್ನ ತಾಯಿಗೆ ಪ್ರಿಯಳೇ. ನನ್ನ ಸೋದರರ ತಾಯಿ. ನೀನು ನನ್ನ ದೊಡ್ಡಮ್ಮ ಎಂಬುದರಲ್ಲಿ ಸಂಶಯವಿಲ್ಲ.'[೪] ಆದಕ್ಕೆ ಕದ್ರೂ 'ನಿನಗೆ ಮನಸ್ಸಿಗೆ ಬಂದ ಕಡೆ

೧ ತಂ ದರ್ಪವಶಮಾಪನ್ನಂ..... ನಾರದೋ.... ತಮಬ್ರವೀತ್ ॥
ದಾಸೀಂ ಪನ್ನಗರಾಜಸ್ಯ ಮಾತುರಂತರ್ಗೃಹೇ ಸತೀಮ್ ॥
........................... ನ ವೈ ಪಶ್ಯಸಿ ಮಾತರಮ್ ॥

೨ ತಮಬ್ರವೀತ್ ವೈನತೇಯೋ ಕರ್ಮ ಕಿಂ ತನ್ಮಹಾಮತೇ ।
ಜನಯಿತ್ರೀ ಮಯಿ ಸುತೇ ಜಾತಾ ದಾಸೀ ತಪಸ್ವಿನೀ ॥

೩ ಅಥಾಬ್ರವೀತ್ ಋಷಿರ್ವಾಕ್ಯಂ ದೀವ್ಯತೀ ವಿಜಿತಾ ಖಗ ।
ನಿಕೃತ್ಯಾ ಪನ್ನಗೇಂದ್ರಸ್ಯ ಮಾತ್ರಾ ಪುತ್ರೈಃ ಪುರಾ ಸಹ ॥

೪ ಗರುಡ –
ಜ್ಯೇಷ್ಠಾ ತ್ವಮಸಿ ಕಲ್ಯಾಣಿ ಮಾತುರ್ಮೇ ಭಾಮಿನಿ ಪ್ರಿಯಾ ।
ಸೋದರ್ಯೇ ಮಮ ಚಾಸಿ ತ್ವಂ ಜ್ಯೇಷ್ಠಾ ಮಾತಾ ನ ಸಂಶಯಃ ॥ – ೨೦/೪-೨೧

ಹೋಗು. ನಿನ್ನ ಒಳ್ಳೆಯ ಮಾತುಗಳಿಂದ ನಾನು ನಿನ್ನ ತಾಯಿಯನ್ನು ದಾಸ್ಯದಿಂದ ಬಿಡುಗಡೆ ಮಾಡುವುದಿಲ್ಲ. ಆದರೆ ಒಂದು ವೇಳೆ ನೀನು ನನಗೆ ಅಮೃತ ತಂದು ಕೊಟ್ಟರೆ ಆಗ ನಿನ್ನ ತಾಯಿಯನ್ನು ದಾಸ್ಯದಿಂದ ಬಿಡುಗಡೆ ಮಾಡುವೆ'[೧] ಎಂದಳು.

ಗರುಡನು ತನ್ನ ತಾಯಿಯನ್ನು ಕದ್ರೂದೇವಿಯ ದಾಸ್ಯದಿಂದ ಬಿಡುಗಡೆ ಮಾಡಿಸಲು ಅಮೃತವನ್ನು ತರಲು ಹೋಗುವ ವಿಷಯವನ್ನು ತನ್ನ ತಂದೆಯಾದ ಕಶ್ಯಪರಿಗೆ ಹೇಳಿ, ಅವರ ಆಶೀರ್ವಾದ ಪಡೆದು ಹೋಗುವಾಗ ಅವರು ಹೇಳುತ್ತಾರೆ –

'ಮಗನೇ! ದೇವತೆಗಳೂ ಅಮೃತವನ್ನು ಸಲಭವಾಗಿ ಪಡೆಯಲಾರರು. ನೀನು ಹೇಗೆ ತರುತ್ತೀಯಾ? ಅಮೃತವಿರುವ ಸ್ಥಳದ ಸುತ್ತಲೂ ಜಲದುರ್ಗ(ಕೋಟೆ), ನಂತರ ಅಗ್ನಿಯ ಆವರಣ(ಕೋಟೆ), ಅದರ ಸುತ್ತಲೂ ಶತಸಹಸ್ರ ಅಯುತ (ಹತ್ತುಸಾವಿರಲಕ್ಷ) ರಾಕ್ಷಸರು ವಜ್ರಾಯುಧದಂತಹ ಆಯುಧಧಾರಿಗಳಾಗಿ ರಕ್ಷಿಸುತ್ತಿದ್ದಾರೆ. ಅದರ ಸುತ್ತಲೂ ಅಯಪಂಜರ (ಕಬ್ಬಿಣದ ಪಂಜರವಿದೆ). ಹೀಗೆ ಅಮೃತವು ಇಂದ್ರ, ದೇವತೆಗಳು, ಸರ್ಪಗಳು, ಖಡ್ಗಾದಿ ಆಯುಧಗಳಿಂದ ರಕ್ಷಿತವಾಗಿರುವಾಗ, ಅದನ್ನು ಹೇಗೆ ತರುವೆ?'[೨] ಎಂದರು ತಂದೆ.

ಆದರೆ ಗರುಡನು 'ತಾತ! ನೀನು ಮಗನ ಅಭಿಮಾನದಿಂದ ಹೀಗೆ (ಅಶಕ್ಯವೆಂದು) ಹೇಳುತ್ತೀ. ಆದರೆ ನಾನು ಬಲವಂತನೂ, ಉಪಾಯವಂತನೂ ಆಗಿದ್ದೇನೆ. ಆದ್ದರಿಂದ ಇನ್ನೇನು ಮಾಡಲಿ ಹೇಳು'[೩] (ಅಮೃತ ತರುವುದರೊಡನೆ ಮತ್ತೇನನ್ನು ತರಲಿ ಎಂಬ ಭಾವ ಇಲ್ಲಿದೆ) ಎಂದಾಗ ತಂದೆ ಕಶ್ಯಪರು ನಸುನಕ್ಕು 'ಒಂದು ವೇಳೆ ನೀನು ಕ್ರೂರಿಗಳಾದ ಗಜ ಹಾಗೂ ಕೂರ್ಮಗಳನ್ನು ತಿಂದರೆ ನಿನಗೆ ಸಾಕಷ್ಟು ಬಲ ಬರುತ್ತದೆ. ಆದರಿಂದ ಅಮೃತ ತರಬಹುದು' ಎಂದರು. 'ಕೂರ್ಮ ಹಾಗೂ ಆನೆಗಳು ಎಲ್ಲಿವೆ?' ಎಂದು ಗರುಡ ಕೇಳಿದಾಗ, ಅವರು ನುಡಿದರು.

'ಸಮುದ್ರದ ಒಂದು ತೀರದಲ್ಲಿ ಆಕಾಶವ್ಯಾಪಿ ದೇವತೆಗಳಿಗೂ ಹೋಗಲಸಾಧ್ಯವಾದ **ಉರಗ**ವೆಂಬ ಪರ್ವತವಿದೆ. ಆ ಪರ್ವತದ ಶಿಖರಗಳಲ್ಲಿ ಫಲಪುಷ್ಪಭರಿತ ವೃಕ್ಷಗಳಿವೆ. ಅಲ್ಲೊಂದು

---

೧ ಕದ್ರೂ –
ಸೂನೃತಾಭಿಸ್ತ್ವಯಾ ಮಾತಾ ನಾದಾನೇ ಶಕ್ಯಮಂಡಜ।
ಅಮೃತಂ ಯಥಾ ಹರೇಸ್ತ್ವಂ ವಿಹಂಗ ಜನನೀಂ ತವ।
ಆದಾಸೀಂ ಮಮ ಪಶ್ಯೇಮಾಂ ವೈನತೇಯ ನ ಸಂಶಯಃ॥ – ೨೦/೨೨,೨೩

೨ ಕಶ್ಯಪ –
ತತ್ ತ್ವಮೇವಂವಿಧಂ ತಾತ ಕಥಂ ಪ್ರಾರ್ಥಯಸೇಽಮೃತಮ್।
ಸುರಕ್ಷಿತಂ ವಜ್ರಭೃತಾ ವೈನತೇಯ ವಿಹಂಗಮ।
ಇಂದ್ರೇಣ ದೇವೈರ್ನಾಗೈಶ್ಚಾ ಖಡ್ಗೈರ್ಗಿರಿ ಜಲಾಧಿಭಿಃ॥ – ೨೧/೧೧

೩. ಗರುಡ –
ಬಲವಾನುಪಾಯವಾನಸ್ಮಿ ಭೂಯಃ ಕಿಂ ಕರವಾಣಿ ತೇ॥ – ೨೧/೧೨

ಬಲಿಷ್ಠ ಆನೆ ಹದಿನಾರು ಗೋವುಗಳ ಧ್ವನಿಯಷ್ಟು ಎತ್ತರವಾಗಿದೆ. ಅದರ ಓಡಾಟದಿಂದ ಪರ್ವತವು ನಾಶವಾಗಿದೆ. ಆ ಪ್ರದೇಶದ ಭೂಮಿಯು ಇದರಿಂದಾಗಿ ಸಮತಟ್ಟಾಗಿದೆ. ಆ ಪರ್ವತದ ಹತ್ತಿರ **ಕನಕ** ಎಂಬ ಸರೋವರವಿದೆ. ಅಲ್ಲೊಂದು ಮಹಾಬಲಶಾಲಿಯಾದ ಕೂರ್ಮವಿದೆ. ಆ ಆಮೆಯೂ ಅನೇಕ ಗೋಶತದಷ್ಟು ಎತ್ತರವಾಗಿದೆ. ಆನೆಯೂ ಹಾಗೇ ಎತ್ತರವಾಗಿದೆ. ಎರಡೂ ಮಹಾಬಲಶಾಲಿಗಳು. ಹಿಂದಿನ ಜನ್ಮದಲ್ಲಿ ಇವೆರಡೂ ಮಧುಕೈಟಭ ಅಸುರರು. ಈಗ ಪರಸ್ಪರ ದ್ವೇಷಿಸುತ್ತಾ, ಕೊಲ್ಲಬಯಸುವವಾಗಿವೆ. ಆನೆ ಸರೋವರಕ್ಕೆ ನೀರು ಕುಡಿಯಲು ಹೋದರೆ ಆಮೆ ಆನೆಯನ್ನು ನೀರಿನಲ್ಲಿ ಮುಳುಗಿಸಿ ತನ್ನ ತೀಕ್ಷ್ಣವಾದ ನಖಗಳಿಂದ, ಹಲ್ಲುಗಳಿಂದ, ಉಗ್ರಹಸ್ತದಿಂದ ಪರಚಿ ಗಾಯಗೊಳಿಸುತ್ತದೆ. ಆನೆಯೂ ತನ್ನ ಪಾದ, ಸೊಂಡಿಲು, ಎರಡು ದಂತಗಳಿಂದ ಕೂರ್ಮವನ್ನು ತನ್ನ ತಂಟೆಗೆ ಬರದಂತೆ ನಿವಾರಿಸುತ್ತದೆ. ಕೂರ್ಮ ಹೊರಗೆ ಬರದೇ ಸರೋವರದ ಬಳಿಗೆ ಆನೆ ಬರದಂತೆ ತಡೆಯುತ್ತದೆ. ಆನೆ ಒಳಹೋಗಲಾರ, ಸೊಂಡಿಲನ್ನು ಒದ್ದೆ ಮಾಡಿಕೊಂಡು, ಮೈಯೆಲ್ಲ ಗಾಯದಿಂದಾಗಿ ರಕ್ತ ಮಾಡಿಸಿಕೊಂಡು ಕಾಡಿಗೆ ವಾಪಸು ಹೋಗುತ್ತದೆ.

ಮಗನೇ, ಗರುಡನೇ! ನೀನು ಆ ಕಾಡಿಗೆ ಹೋಗಿ ಆನೆ ಹಾಗೂ ಆಮೆಯನ್ನು ತಿನ್ನು. ಅವನ್ನು ಬೇರೆ ಬೇರೆಯಾಗಿ ಸೋಲಿಸಲು ಸಾಧ್ಯವಿಲ್ಲ'[೧] ಎಂದು ಕಶ್ಯಪರು ಹೇಳಿದರು.

ಆಗ ಗರುಡನು 'ಆನೆ, ಆಮೆಗಳನ್ನು ಒಟ್ಟಿಗೆ ಹೇಗೆ ಹಿಡಿಯಲು ಶಕ್ಯ' (ಕಾರಣ ಆನೆ ಭೂಮಿಯ ಮೇಲೆ, ಆಮೆ ನೀರಿನಲ್ಲಿರುವ ಪ್ರಾಣಿ) ಎಂದು ಕೇಳಲು ಕಶ್ಯಪರು 'ನೀನು ಅಲ್ಲಿಗೆ ಹೋಗು, ಮೊದಲು ಆನೆ ಯುದ್ಧಕ್ಕೆ ಬರುತ್ತದೆ. ಅದು ಯುದ್ಧ ಮಾಡಲು ಬಯಸಿದಾಗ, ಒಂದು ಮುಹೂರ್ತವಾದ ಮೇಲೆ ಆಮೆಯೂ ನೀರಿನಿಂದ ಮೇಲೆ ಎದ್ದು ಹೊರ ಬಂದಾಗ ನೀನು ಮದಿಸಿದ ಆನೆ ಹಾಗೂ ನಿರ್ಜಲ ಆಮೆಯನ್ನು (ಜಲರಹಿತ) ಒಟ್ಟಿಗೆ ಹಿಡಿ. ಇದರ ಹೊರತಾಗಿ ಬೇರಾವ ಉಪಾಯವಿಲ್ಲ' ಎಂದು ಹೇಳಿದರು.

**ಯೋದ್ಧುಕಾಮೇ ಗಜೇ ತಸ್ಮಿನ್ ಮುಹೂರ್ತಂ ಸ ಜಲೇಚರಃ ।**
**ಉತ್ತಿಷ್ಠತಿ ಜಲಾತ್ತೂರ್ಣಂ ಯೋದ್ಧುಕಾಮಃ ಪುನಃ ಪುನಃ ॥**
**ಜಲಜಂ ನಿರ್ಜಲಂ ತಾತ ಪ್ರಮತ್ತಂ ಚೈವ ವಾರಣಮ್ ।**
**ಗ್ರಹಿಷ್ಯಸಿ ಪತಂಗೇಶ ನಾನ್ಯೋ ಯೋಗೋऽತ್ರ ವಿದ್ಯತೇ ॥** – ೨೨/೨,೩

---

೧ ಕಶ್ಯಪ –
ಯದಿ ತೌ ಭಕ್ಷಯೇಸ್ತಾತ ಕ್ರೂರೌ ಕಚ್ಛಪವಾರಣೌ ।
ಅಮೃತಸ್ಯೈವ ಚಾಹರ್ತಾ ಭವಿಷ್ಯಸಿ ನ ಸಂಶಯಃ ॥ – ೨೧/೧೪
ತೌ ಗಚ್ಛ ಸಹಿತಾ ಪುತ್ರ ..... ಶಕ್ತೋऽಪಿ ಭಕ್ಷಯ ।
ನ ತೌ ಪೃಥಕ್ತಯಾ ಶಕ್ಯಾವಪ್ರಮತ್ತೌ ಬಲೇ ಸ್ಥಿತಾ ॥ – ೨೧/೨೮

ತಂದೆಯ ಮಾರ್ಗದರ್ಶನದಂತೆ ಗರುಡನು ಆನೆ, ಆಮೆ ವಾಸಮಾಡುತ್ತಿದ್ದ ವನಕ್ಕೆ ಬಂದು ಆನೆಯ ಓಡಾಟದಿಂದ ಆದ ಪರ್ವತಶಿಖರ ಮಾರ್ಗವನ್ನು ನೋಡಿ ವಿಸ್ಮಯ ಹೊಂದಿದನು. ಅವುಗಳನ್ನು ನೋಡಿ, ತನಗೆ ಆಹಾರ ದೊರಕಿದ ಬಗ್ಗೆ ಸಂತೋಷವಾಯಿತು. ಗರುಡ ಆ ಪ್ರದೇಶವನ್ನು ಶೀಘ್ರವಾಗಿ ತನ್ನ ಶರೀರವನ್ನು ಸಂಕೋಚಗೊಳಿಸಿ (ಚಿಕ್ಕದನ್ನಾಗಿ ಮಾಡಿಕೊಂಡು) ಕಷ್ಟದಿಂದಲೇ ತಲುಪಿದನು.

ಅದೇ ವೇಳೆ ಗಜವು ವಿಶ್ರಾಂತಿಗಾಗಿ ಮಹಾಶ್ವಾಸವುಳ್ಳ ಉಸಿರನ್ನು ಬಿಟ್ಟಿತು(ನಿಶ್ವಾಸ ಗಾಳಿ ಹೊರಬಂತು). ಆ ಗಾಳಿಯಿಂದ ಹಾಗೂ ಆನೆಯ ಮದಗಂಧದ ವಾಸನೆಯಿಂದ ಕೂರ್ಮವು ನೀರಿನಿಂದ ಮೇಲೆ ಎದ್ದಿತು. ಆನೆ ಆಮೆಗಳ ಮಧ್ಯೆ ಇಂದ್ರ-ಪ್ರಹ್ಲಾದರ ಯುದ್ಧದಂತೆ ತೀವ್ರ ಯುದ್ಧವನ್ನು ಗರುಡ ನೋಡಿದನು. ಹಿಂದಿನಂತೆ ಆನೆ ಸರೋವರಕ್ಕೆ ಕಾಲಿಟ್ಟ ಕೂಡಲೇ ಆಮೆ ತನ್ನ ನಖ, ದಂತಗಳಿಂದ ಪರಚಿ ಗಾಯಗೊಳಿಸಿ, ನೀರಿನಲ್ಲಿ ಬರದಂತೆ ತಡೆದರೆ, ಆನೆಯು ತನ್ನ ಸೊಂಡಿಲು, ದಂತಗಳಿಂದ ಕೂರ್ಮವನ್ನು ನೀರಿನಿಂದ ಮೇಲೆ ಬರದಂತೆ ತಡೆಯುತ್ತಿತ್ತು. ಒಂದು ಮುಹೂರ್ತದವರೆಗೆ ಹೀಗೆ ಭಯಂಕರ ಹೋರಾಟ ನಡೆದು ಕೂರ್ಮ ನೀರಿನಿಂದ ಹೊರಗೆ ಭೂಮಿಯ ಮೇಲೆ ಬಂತು. ಆನೆ ಬಾಯಾರಿಕೆಯಿಂದ ಹಿಂದೆ ಸರಿಯದೇ ಕೂರ್ಮದ ಹಿಂಭಾಗದಿಂದ ಸರೋವರದ ಕಡೆ ಹೋಯಿತು. ಇದೆಲ್ಲವನ್ನು ಗಮನಿಸುತ್ತಿದ್ದ ಗರುಡ ತಕ್ಷಣ ಆನೆ, ಆಮೆ ಇವೆರಡನ್ನೂ ಒಟ್ಟಿಗೆ ಎಡಗಾಲಿನಿಂದ ಗಜವನ್ನು, ಬಲಗಾಲಿನಿಂದ ಕೂರ್ಮವನ್ನು ಏಕಕಾಲದಲ್ಲಿ ಹಿಡಿದು (ತಂದೆ ಕಶ್ಯಪರು ಹೇಳಿದಂತೆ) ಅನಾಯಾಸವಾಗಿ ತನ್ನ ರೆಕ್ಕೆಗಳ ಬಲದಿಂದ ಆಕಾಶಕ್ಕೆ ಹಾರಿದನು. ಗರುಡನ ವಜ್ರಗರ್ಭವಾದ ತೀಕ್ಷ್ಣನಖಗಳಿಂದ ಪಾದಗಳಲ್ಲಿ ಹಿಡಿಯಲ್ಪಟ್ಟ ಆನೆ, ಆಮೆಗಳು ಆಕಾಶದಲ್ಲಿ ಪ್ರಾಣತ್ಯಾಗ ಮಾಡಿದವು[೧].

---

೧ ಮುಹೂರ್ತಮಭವತ್ ಯುದ್ಧಂ ತಯೋರ್ಭೀಮಪ್ರದರ್ಶನಮ್ ।
ಅಥ ತಸ್ಮಾತ್ ಜಲಾತ್ ರಾಜನ್ ಕಚ್ಛಪಃ ಸ್ಥಲಮಾಸ್ಥಿತಃ ।
ತಂ ದೃಷ್ಟ್ವಾ ಜಲಜಸ್ತೂರ್ಣಮಪಸರ್ಪಂತಮಾಹವಾತ್ ।
ಅಭಿದುದ್ರಾವ ವೇಗೇನ ವಜ್ರಪಾಣಿರಿವಾಸುರಮ್ ।
ತಂ ರೋಷಾತ್ ಸ್ಥಲಮುತ್ತೀರ್ಣಮಸಂಪ್ರಾಪ್ತಂ ಗಜೋತ್ತಮಮ್ ।
ಉಭಾವೇವ ಸಮಸ್ತೌ ತು ಜಗ್ರಾಹ ವಿನತಾಸುತಃ ।
ಚರಣೇನ ತು ಸವ್ಯೇನ ಜಗ್ರಾಹ ಸ ಗಜೋತ್ತಮಮ್ ।
ಪ್ರಸ್ಪಂದಮಾನಂ ಬಲವಾನ್ ದಕ್ಷಿಣೇನ ತು ಕಚ್ಛಪಮ್ ।
ಉತ್ಪಪಾತ ತತಸ್ತೂರ್ಣಂ ಪನ್ನಗೇಂದ್ರನಿಷೂದನಃ ।
ದಿವಂ ಖಂ ಚ ಸಮುತ್ಪತ್ಯ ಪಕ್ಷಾಭ್ಯಾಮಪರಾಜಿತಃ ।
ತೇನ ಚೋತ್ಪತತಾ ತೂರ್ಣಂ ಸಂಗೃಹೀತೋ ನಖೈರ್ಭೃಶಮ್ ।
ವಜ್ರಗರ್ಭೈಃ ಸುನಿಶಿತೈಃ ಪ್ರಾಣಾಂಸ್ತೂರ್ಣಂ ಮುಮೋಚತುಃ ॥ - ೨೨/೧೩-೧೯

ಆನೆ, ಆಮೆಗಳೆರಡರ ಪಾದ, ಕತ್ತುಗಳು ಕೆಳಮುಖವಾಗಿದ್ದವು. ಇವನ್ನು ಹೊತ್ತ ಗರುಡ ಕ್ರೀಡೆಯಾಡುತ್ತಾ ಹೊರಟನು. ಇದನ್ನು ಒಂದೆಡೆ ಇಳಿಸಿ, ಕುಳಿತು ತಿನ್ನಲು ಸೂಕ್ತ ವೃಕ್ಷ ಕಾಣಲಿಲ್ಲ. ಮುಂದೆ ಹೋಗುತ್ತಾ ದೇವಾರಣ್ಯ, ನೈಮಿಷಾರಣ್ಯದಲ್ಲಿ ಅನೇಕ ಶಾಖೆಗಳಿರುವ ಒಂದು ದೊಡ್ಡ ವೃಕ್ಷವನ್ನು ನೋಡಿ (ಎರಡು ಯೋಜನ ಎತ್ತರ, ನಲ್ವತ್ತು ಪರಿಮಾಣದ ಸುತ್ತಳತೆ, ಐದು ಯೋಜನ ವಿಸ್ತಾರವಾದ ಒಂದು ಶಾಖೆ ಇತ್ತು) ಅದರ ಮೇಲೆ ಕುಳಿತ ಗರುಡ. ಆತನ ವೇಗಕ್ಕೆ ಆ ಕೊಂಬೆ ಭಗ್ನವಾಗಿ ಕೆಳಗೆ ಬೀಳುವುದರಲ್ಲಿತ್ತು. ಅದರ ಕೆಳಗೆ ವಸುಗಳ ಜೊತೆ ಸತ್ರಯಾಗ ಮಾಡುತ್ತಿದ್ದ ವೈಖಾನಸಯತಿಗಳು, ವಾಲಖಿಲ್ಯ ಋಷಿಗಳನ್ನು ನೋಡಿ, ಗರುಡನು ಆ ಕೊಂಬೆಯನ್ನು ಎತ್ತಿ ಬೇರೊಂದು ಕಡೆ ಹಾರಿದ. ಅದನ್ನು ನೋಡಿದ ಋಷಿಗಳು ಇವನು ಈ ಪಕ್ಷಿರಾಜ ಎಂದು ನಿಶ್ಚಯಿಸಿ ಗರುಡನೆಂದು ಕರೆದರು. ಅದು ಗರುಡನ ಕಿವಿಗೂ ಬಿತ್ತು. ಒಬ್ಬ ದೇವದೂತ ಗರುಡನಿಗೆ ಆ ಶಾಖೆಯನ್ನು ಲವಣ ಸಮುದ್ರದ ಅಂಚಿನಲ್ಲಿರುವ **ಕುಳಿಂದ** ದೇಶದ ಕೆಳಗೆ ಬಿಡು. ಆ ದೇಶದವರು ಧರ್ಮಿಷ್ಠರಲ್ಲವೆಂದ. ಗರುಡ ಹಾಗೆಯೇ ಶಾಖೆಯನ್ನು ಅಲ್ಲಿ ಬೀಳಿಸಿದ. ಅಗ ಆ ಪ್ರದೇಶದಲ್ಲಿದ್ದ ೩೬ ದೇಶದ ಜನರು ಹತರಾದರು. ಆ ಭಯಂಕರವಾದ ದೇಶವು '**ಶಾಖಾಪತನ**' ಎಂಬ ಹೆಸರಿನಿಂದ ಪ್ರಸಿದ್ಧವಾಯಿತು[೧].

ನಂತರ ಗರುಡನು **ಕುಳಿಂದ** ದೇಶದ ಒಂದು ಪರ್ವತ ಶಿಖರದ ಮೇಲೆ ಕುಳಿತು ಆನೆ ಹಾಗೂ ಆಮೆಗಳನ್ನು ತಿಂದನು. ರಕ್ತಪಾನ ಮಾಡಿ, ಮೇದಸ್ಸನ್ನು ತಿಂದು ದೇವರಾಜನಾದ

---

೧ ನೈಮಿಷಂ ತ್ವಥ ಸಂಪ್ರಾಪ್ಯ ದೇವಾರಣ್ಯಂ ಮಹಾದ್ಯುತಿಃ।
ಅಪಶ್ಯತ ದ್ರುಮಂ ಕಂಚಿತ್ ಶಾಖಾಸ್ಕಂಧಸಮಾವೃತಮ್ ॥
ಅತ್ತುಕಾಮಸ್ತತಃ ಶಾಖಾ ತಸ್ಯ ವೇಗಾದವಾಪತತ್।
ತಾಂ ಪತಂತೀಮಭಿಪ್ರೇಕ್ಷ್ಯ .... ಚಾರ್ಷಿ ಗಣಾನಥ।
ಆಸೀನಾನ್ ವಸುಭಿಃ ಸಾರ್ಧಂ ಸತ್ರೇಣ ಜಗತೀಪತೇ।
ವೈಖಾನಸಾನ್ನಾಮ ಯತೀನ್ ವಾಲಖಿಲ್ಯಗಣಾನಪಿ।
ತುಂಡೇನ ಗೃಹ್ಯ ತಾಂ ಶಾಖಾಮುತ್ಪಪಾತ ಖಗೇಶ್ವರಃ।
ತಂ ದೃಷ್ಟ್ವಾ ಗುರು ಸಂಭಾರಂ ಪ್ರಗೃಹ್ಯೋತ್ಪತಿತಂ ಖಗಂ।
ಋಷಯಸ್ತೇಽಬ್ರುವನ್ ಸರ್ವೇ ಗರುಡೋಽಯಮಿತಿ ಸ್ಮ ಹ।
ವೈನತೇಯಾ ಕುವಿಂದೇಷು ಸಮುದ್ರಾಂತೇ ಮಹಾಬಲ।
ಪಾತ್ಯತಾಂ ಶಾಖಿನಃ ಶಾಖಾ ನ ಹಿ ತೇ ಧರ್ಮನಿಶ್ಚಯಾಃ।
ತತೋ ಗತ್ವಾ ತತಃ ಶಾಖಾಂ ಮುಮೋಚ ಪತತಾಂ ವರಃ।
ತಯಾ ಹತಾ ಜನಪದಾಸ್ತದಾ ಷಟ್‌ತ್ರಿಂಶತೋ ನೃಪ।
ಸ ದೇಶೋ ರಾಜಶಾರ್ದೂಲ ಖ್ಯಾತಃ ಪರಮದಾರುಣಃ।
ಶಾಖಾಪತನ ಇತ್ಯೇವ ಕುವಿಂದಾನಾಂ ದುರಾತ್ಮನಾಮ್ ॥ - ೨೨/೨೨-೩೭

ಇಂದ್ರನ ಮನೆಗೆ ಹೋದನು. ಅಲ್ಲಿ ಅಮೃತವನ್ನು ರಕ್ಷಿಸುತ್ತಿದ್ದ ಮಹಾತ್ಮನಾದ ಪ್ರಜ್ವಲಿಸುವ ಅಗ್ನಿಯನ್ನು ನೋಡಿ, ಅವನನ್ನು ನಮಸ್ಕರಿಸಿದನು. ಆಗ ಗರುಡನಿಗೆ ಭಯವುಂಟಾಯಿತು. ಅಮೃತವನ್ನು ರಕ್ಷಿಸುತ್ತಿದ್ದ ರಕ್ಷಕರಿಂದಾಗಲೀ, ಜಲದುರ್ಗದಿಂದಾಗಲೀ ಭಯವಾಗಲಿಲ್ಲ. ತಾನು ಪಕ್ಷಿಯೆಂದು ಗಮನಿಸಿ, ಸರ್ವಭಕ್ಷಕನಾದ ಅಗ್ನಿಯು ರಕ್ಷಣೆಗೆ ಅಲ್ಲಿರುವುದನ್ನು ನೋಡಿ ಬ್ರಹ್ಮದೇವರ ಬಳಿ ಗರುಡನು ಹೋದನು. ತನ್ನ ತಾಯಿಯನ್ನು ಕದ್ರೂದೇವಿಯ ದಾಸ್ಯದಿಂದ ಬಿಡುಗಡೆ ಮಾಡಿಸಲು ಅಮೃತ ಒಯ್ಯಬೇಕಾಗಿದೆ. ಆದರೆ ಅಮೃತವನ್ನು ಸರ್ವಭಕ್ಷಕನಾದ ಅಗ್ನಿ ಕಾಯುತ್ತಿದ್ದಾನೆ. ತಾನು ಪಕ್ಷಿ, ಆದ್ದರಿಂದ ಅಮೃತವನ್ನು ಒಯ್ಯುವ ಉಪಾಯವನ್ನು ಹೇಳಲು ಬ್ರಹ್ಮದೇವರನ್ನು ಗರುಡ ಪ್ರಾರ್ಥಿಸಲು ಬ್ರಹ್ಮದೇವರು ಅಗ್ನಿಯನ್ನು ಶಮನ ಮಾಡುವ ಉಪಾಯವನ್ನು ಹೇಳಿದನು. 'ಅಗ್ನಿಯು ನೀರಿನಿಂದ ಅಥವಾ ತುಪ್ಪದಿಂದಾಗಲಿ ಶಾಂತನಾಗುತ್ತಾನೆ. ಪ್ರಾಣಿಗಳ ಶರೀರದಲ್ಲಿರುವ ಅಗ್ನಿಯೂ ಉಪಶಮನವಾದ ಮೇಲೆ ಭೂಮಿಯಲ್ಲಿ ಪ್ರಜ್ವಲಿಸುವ ಅಗ್ನಿ ಉಪಶಮನವಾಗುವುದಿಲ್ಲವೇ? ಆದ್ದರಿಂದ ನೀನು ನವನೀತ ಅಥವಾ ಜಲವನ್ನು ಅಗ್ನಿಯ ಮೇಲೆ ಹಾಕು. ನಂತರ ನಿನ್ನ ಇಚ್ಛಾಪ್ರಕಾರ ಹೋಗು. ಅಗ್ನಿಯು ಆಗ ನಿನ್ನನ್ನು ಸುಡುವುದಿಲ್ಲ'[೧] ಎಂದನು.

ಬ್ರಹ್ಮದೇವರ ಮಾತುಗಳನ್ನು ಕೇಳಿದ ಗರುಡನು ಗೋಕುಲಕ್ಕೆ ಹೋಗಿ, ಅಲ್ಲಿ ಕಲಶದಲ್ಲಿದ್ದ ನವನೀತವನ್ನು ತಂದು ಅಮೃತವಿರುವ ಕಡೆ ಬಂದು, ಜಲದುರ್ಗ ದಾಟಿ, ಅಗ್ನಿಯ ಮೇಲೆ ನವನೀತ ಹಾಕಲಾಗಿ, ಅಗ್ನಿಯ ತೀಕ್ಷ್ಣತೆ ಕಡಿಮೆಯಾಗಿ ಉರಿಯಲಿಲ್ಲ (ಪ್ರಜ್ವಲಿಸಲಿಲ್ಲ). ಕೇವಲ ಧೂಮ, ಹೊಗೆ ಉಂಟಾಯಿತು. ನಂತರ ಗರುಡನು ಅಗ್ನಿಯನ್ನು ದಾಟಿ, ಕಾವಲುಗಾರರಾದ ರಾಕ್ಷಸರನ್ನು ಕೆಡವಿ, ಬೀಳಿಸಿ, ಸರ್ಪಗಳನ್ನು ಕೊಂದು, ಕಬ್ಬಿಣದ ಬಲೆಯನ್ನು ಮುರಿದು, ಅಮೃತದ ಕಲಶವನ್ನು ತೆಗೆದುಕೊಂಡು ವಾಯುವೇಗದಿಂದ ಹೊರಟನು. ಇದನ್ನು ತಿಳಿದ ಇಂದ್ರನು ದೇವತೆಗಳೊಡನೆ ಯುದ್ಧಕ್ಕೆ ಬಂದನು. ಇಂದ್ರದೇವರು ವಜ್ರಾಯುಧವನ್ನು ಗರುಡನ ಮೇಲೆ ಪ್ರಯೋಗಿಸಿದಾಗ ಗರುಡನು ವಜ್ರಾಯುಧಕ್ಕೆ ಗೌರವಿಸಿ ತನ್ನ ಒಂದು ಗರಿಯನ್ನು ಉದುರಿಸಿದನು. ಇದನ್ನು ನೋಡಿದ ಆಕಾಶಮಾರ್ಗದಲ್ಲಿದ್ದ ದೇವರ್ಷಿಗಳು ವಜ್ರಾಯುಧವು ಗರುಡನ ಗರಿಯಲ್ಲಿ ಸಿಲುಕಿದುದನ್ನು ಉದ್ಗರಿಸಿದರು. ಋಷಿಗಳು ಗರುಡನನ್ನು ಅಗ್ನಿ ಸಂಬಂಧಿಯೆಂದೂ ವಿಷ್ಣು ಸಂಬಂಧಿ ಎಂದೂ ತಿಳಿಯುತ್ತಾರೆ.

**ವೃತ್ರಹನ್ನೇಷ ವಜ್ರಸ್ತೇ ವರೋ ಲಬ್ಧಃ ಪಿತಾಮಹಾತ್ ।**
**ಅತಃ ಸಮ್ಮಾನಮಾಕಾಂಕ್ಷನ್ ಮುಂಚಾಮ್ಯೇಕಂ ತನೂರುಹಮ್ ॥**

---

೧ ಪಯಸಾ ಶಾಮ್ಯತೇ ವತ್ಸ ಸರ್ಪಿಷಾ ಚ ಹುತಾಶನಃ ।
ಶರೀರಸ್ಥೋಽಪಿ ಭೂತಾನಾಂ ಕಿಂ ಪುನಃ ಪ್ರಜ್ವಲನ್ ಭುವಿ ॥
ನವನೀತಂ ಪಯೋ ವಾಽಪಿ ಪಾವಕೇ ತ್ವಂ ಸಮಾದಧೇಃ ।
ತತೋ ಗಚ್ಛ ಯಥಾಕಾಮಂ ನ ತ್ವಾ ಧಕ್ಷ್ಯತಿ ಪಾವಕಃ ॥ – ೨೩/೧೩,೧೪

ಏತೇನಾಯುಧ ರಾಜೇನ ಯದಿ ಶಕ್ತೋಽಸಿ ವೃತ್ರಹನ್ ।
ಹನ್ಯಾಸ್ತಂ ಪರಶಕ್ತ್ಯಾ ಗಚ್ಛಾಮ್ಯಹಮನಾಮಯಃ ॥
ಸುಪರ್ಣಃ ಪಕ್ಷಿಗರುಡೋ ಯಸ್ಯ ಪರ್ಣೇ ವರಾಯುಧಮ್ ।
ವಿಷಕ್ತಂ ದೇವರಾಜಸ್ಯ ವೃತ್ರಹಂತುಃ ಸನಾತನಮ್ ॥
ಏವಂ ಸುಪರ್ಣೋ ವಿಹಗೋ ವೈನತೇಯಃ ಪ್ರತಾಪವಾನ್ ।
ಋಷಯಸ್ತಂ ವಿಜಾನಂತಿ ಚಾಗ್ನೇಯಂ ವೈಷ್ಣವಂ ಪುನಃ ॥ - ೨೪/೧೬-೨೧

ಹೀಗೆ ವಜ್ರಾಯುಧವು ಗರುಡನ ಮೇಲೆ ಯಾವ ಪರಿಣಾಮ ಬೀರದಿರಲು, ಇಂದ್ರನು 'ನಿನ್ನ ಪ್ರಭಾವವನ್ನು ನಾನು ತಿಳಿದಿಲ್ಲ, ನಾನು ಅಮೃತವನ್ನು ಇನ್ನು ರಕ್ಷಿಸಲಾರೆ. ನಾನು ಮತ್ತು ವಜ್ರಾಯುಧವು ಬಂದಂತೆಯೇ ನಿವೃತ್ತಿ ಹೊಂದುತ್ತಿದ್ದೇವೆ' ಹೀಗೆ ಇಂದ್ರನು ವಾಪಸು ಹೋಗುತ್ತಿರಲು, ಗರುಡನು ಅಮೃತಕಲಶವನ್ನು ತಂದು ಕದ್ರೂದೇವಿಯ ಬಳಿಗೆ ಹೋಗಿ 'ಅಮೃತವನ್ನು ತಂದಿದ್ದೇನೆ. ನನ್ನ ತಾಯಿಯನ್ನು ದಾಸೀ ಸ್ಥಾನದಿಂದ ಬಿಡುಗಡೆ ಮಾಡು[೧]' ಎನ್ನಲು, ಕದ್ರೂದೇವಿಯು ಗರುಡನನ್ನು ಸ್ವಾಗತಿಸಿ ವಿನತೆಯನ್ನು ಬಿಡುಗಡೆ ಮಾಡಲಾಗಿ ವಿನತೆಯು ತನ್ನ ಮನೆಗೆ ವಾಪಸಾದಳು[೨].

ನಂತರ ಗರುಡನು ಕದ್ರೂದೇವಿಯು ತನ್ನ ತಾಯಿಗೆ ಮೋಸಮಾಡಿ ದಾಸಿಮಾಡಿಕೊಂಡಿದುದನ್ನು ಸ್ಮರಿಸಿ, ನೆನಪಿಸಿಕೊಂಡು, ಶೀಘ್ರವಾಗಿ ಅಮೃತವನ್ನು ತೆಗೆದುಕೊಂಡು ಇಂದ್ರನ ಬಳಿಗೆ ಹಾರಿದನು. ಇದನ್ನು ನೋಡಿದ ಕದ್ರೂದೇವಿಯು ಗರುಡನನ್ನು ಕುರಿತು 'ಎಲೈ ದುರ್ಬುದ್ಧಿಯೇ! ತಂದ ಅಮೃತವನ್ನು ಏಕೆ ವಾಪಸು ಒಯ್ಯುತ್ತಿದ್ದಿಯಾ? ಇಂತಹ ಅಪರಾಧ ಮಾಡಬೇಡ' ಎಂದಳು.

ಅದಕ್ಕೆ ಗರುಡನು 'ನೀನು ಅಮೃತವನ್ನು ತೆಗೆದುಕೊಂಡು ಬಾ ಎಂದು ಹೇಳಿದ ಪ್ರಕಾರ ತಂದೆ. ನನ್ನ ತಾಯಿಯ ಬಿಡುಗಡೆಯು ಆಯಿತು. ಆದ್ದರಿಂದ ತಂದ ಅಮೃತವನ್ನು ಎಲ್ಲಿಂದ ತಂದೆನೋ ಅಲ್ಲಿಗೇ ಮತ್ತೆ ತೆಗೆದುಕೊಂಡು ಹೋಗುತ್ತೇನೆ. ಅಮೃತವನ್ನು ತಂದು ನನಗೆ ಕೊಡು ಎಂದು ನೀನು ಹೇಳಿದ್ದರೆ, ಆಗ ನಾನು ಕೊಡುತ್ತಿದ್ದೆನೋ ಅಥವಾ ಇಲ್ಲವೋ (ಆ ವಿಷಯ ಬೇರೆ). ಕಾರಣ ನೀನು ಅಮೃತಕ್ಕೆ ಯೋಗ್ಯಳಲ್ಲ. ನಾನು ಧರ್ಮದಿಂದಲೂ ಸತ್ವದಿಂದಲೂ ನನ್ನ ತಾಯಿಯನ್ನು ಬಿಡುಗಡೆಗೊಳಿಸಿದ್ದೇನೆ' ಎಂದು ಹೇಳಿದನು.

---

೧ ತದಾಹೃತಂ ಮಯಾ ಶೀಘ್ರಂ ಅಮೃತಂ ಜನನೀಕೃತೇ ।
ಅದಾಸೀ ಸಾ ಭವತ್ವದ್ಯ ವಿನತಾ ಧರ್ಮಚಾರಿಣೀ ॥ - ೨೫/೪

೨ ಸ್ವಾಗತಂ ಸ್ವಾಹೃತಂ ಚೇದಮೃತಂ ವಿನತಾತ್ಮಜ ।
ಅದಾಸೀ ಜನನೀ ತೇಽದ್ಯ ಪುತ್ರ ಕಾಮವಶಾ ಶುಭಾ ।
ಏವಮುಕ್ತೇ ತದಾ ಸಾ ಚ ಸಂಪ್ರಾಪ್ತಾ ವಿನತಾ ಗೃಹಮ್ ॥ - ೨೫/೫

**ಉಪನೀಯ ಯಥಾ ನ್ಯಾಯಂ ವಿಹಾಯ ಬಲಿನಾಂ ವರಃ।**
**ಸ್ಮೃತ್ವಾ ನಿಕೃತ್ಯಾ ವಿಜಯಂ ಮಾತುಃ ಸಂಪ್ರತಿಪದ್ಯ ಚ॥**
**ಉಜ್ಜಹಾರಾಮೃತಂ ತೂರ್ಣಮುತ್ಪಪಾತ ಚ ರಂಹಸಾ॥**
**ಕದ್ರೂ -**
**ಕಿಮರ್ಥಂ ವೈನತೇಯ ತ್ವಮಾಹೃತ್ಯಾಮೃತಮುತ್ತಮಮ್।**
**ಪುನರ್ಹರಸಿ ದುರ್ಬುದ್ಧೇ ಮಾ ಜಾತು ವೃಜಿನಂ ಕೃಥಾಃ॥** - ೨೫/೬-೧೦
**ಸುಪರ್ಣ -**
**ಅಮೃತಾಹರಣಂ ಮೇಽದ್ಯ ಯತ್ಕೃತಂ ಜನನೀ ಕೃತೇ।**
**ಭವತ್ಯಾ ವಚನಾದೇತದಾಹರಾಮೃತಮಿತ್ಯುತ॥**
**ಆಹೃತಂ ತದಿದಂ ಶೀಘ್ರಂ ಮುಕ್ತಾ ಚ ಜನನೀ ಮಮ।**
**ಹರಾಮ್ಯೇಷ ಪುನಸ್ತತ್ರ ಯತ ಏತನ್ಮಯಾಽಽಹೃತಮ್॥**
**ಯದಿ ಮಾಂ ಭವತೀ ಬ್ರೂಯಾದಮೃತಂ ಮೇ ಚ ದೀಯತಾಮ್।**
**ತಥಾ ಕುರ್ಯಾಂ ನ ವಾ ಕುರ್ಯಾಂ ನ ಹಿ ತ್ವಮಮೃತಕ್ಷಮಾ।**
**ಮಯಾ ಧರ್ಮೇಣ ಸತ್ಯೇನ ವಿನತಾ ಚ ಸಮುದ್ಧೃತಾ॥** - ೨೫/೧೧-೧೩

ನಂತರ ಗರುಡನು ಇಂದ್ರದೇವರ ಬಳಿಗೆ ಹೋಗಿ ಅಮೃತವನ್ನು ವಾಪಸು ಕೊಟ್ಟು ಅದರ ಹಿನ್ನೆಲೆಯನ್ನು ವಿವರಿಸಿದನು. ಇಂದ್ರನು ಅಂತೂ ಅಮೃತವು ದೇವರ ದಯೆಯಿಂದ ವಾಪಸು ಬಂದಿತಲ್ಲಾ ಎಂದು ಹೇಳಿ ಗರುಡನನ್ನು ಗೌರವಿಸಿದನು. ಋಷಿಗಳು ದೇವತೆಗಳೊಡನೆ ಇಂದ್ರನನ್ನು ಕೊಂಡಾಡಿದರು. ಅವರು ಹಾಗೂ ವಿಶ್ವೇದೇವತೆಗಳೂ ಸಂತುಷ್ಟರಾದರು. ಅವರೆಲ್ಲ ಇಂದ್ರನಿಗೆ **ಗರುಡನಿಗೆ ವರ ಕೊಡು** ಎಂದರು. ಇಂದ್ರನು ನಗುತ್ತಾ 'ಕೇಶವನು ವಸುದೇವನ ಮನೆಯಲ್ಲಿ ಧರ್ಮರಕ್ಷಕನಾಗಿ ಅವತರಿಸುತ್ತಾನೆ' ಎಂದು ಹೇಳಿದನು.

ಹೀಗೆ ಭೀಷ್ಮರು ಧರ್ಮರಾಜನಿಗೆ 'ಹೀಗೆ ವಿನತಾಪುತ್ರನು ಒಳ್ಳೆಯ ರೆಕ್ಕೆಗಳನ್ನು ಪಡೆದು, ಸುಪರ್ಣನೆನಿಸಿದನು. ಇದುವೇ ಸುಪರ್ಣನ ಉಪಾಖ್ಯಾನ ನಿನಗೆ ಹೇಳಿದ್ದೇನೆ' ಎಂದು ಹೇಳಿದರು.

## ಸಂದೇಶಗಳು - ವಿವರಣೆಗಳು

ಆದಿಪರ್ವದ ಆಸ್ತಿಕಉಪಪರ್ವದಲ್ಲಿ ಇದೇ ಕಥೆ ಹೆಚ್ಚು ಕಡಿಮೆ ಒಂದೇ ರೀತಿಯಾಗಿ ಬಂದಿದೆ(ಸುಮಾರು ಮೂವತ್ತು ಅಧ್ಯಾಯಗಳಲ್ಲಿ). ಅಲ್ಲಿ ಸೌತಿಗಳು ಶೌನಕಾದಿಗಳಿಗೆ ಪ್ರವಚನ ಮಾಡಿದ್ದಾಗಿ ಬಂದಿದ್ದರೆ, ಇಲ್ಲಿ ಭೀಷ್ಮರು ಧರ್ಮರಾಜನ ಪ್ರಶ್ನೆಗಳಿಗೆ ಉತ್ತರರೂಪದಲ್ಲಿ ಬಂದಿದೆ.

೧. ವಿನತೆಯ ಮಗ ಗರುಡನಿಗೆ ಪಕ್ಷಿರಾಜ, ನಂತರ ಸುಪರ್ಣ, ಗರುಡನೆಂಬ ನಾಮ ಬರಲು ಕಾರಣಗಳು ಅಲ್ಲೂ, ಇಲ್ಲೂ ಬಂದಿವೆ.

೨. ಕದ್ರೂದೇವಿ, ವಿನತಾದೇವಿಯರ ಸ್ಪರ್ಧೆಯನ್ನು ಕದ್ರೂವಿನ ಕುಟಿಲಬುದ್ಧಿಯಿಂದಾಗಿ ವಿನತೆಗೆ ದಾಸ್ಯಭಾವ ಬರುತ್ತದೆ. ದೇವತೆಗಳಲ್ಲಿಯೂ ಕುಟಿಲಬುದ್ಧಿ ಸಾಮಾನ್ಯರಿಗೆ ಆಶ್ಚರ್ಯತಂದರೂ, ಸಂಸಾರಾವಸ್ಥೆಯಲ್ಲಿ ಇದೆಲ್ಲ ಸಾಮಾನ್ಯವೆಂಬ ತತ್ತ್ವವೆಂದು ತಿಳಿಯಬೇಕು.

೩. ವಿನತೆಯ ಚಾಪಲ್ಯ, ಅವಸರ ಪಟ್ಟಿದ್ದರಿಂದ ಅರುಣನ ಬೆಳವಣಿಗೆಗೆ ಕುಂದುಂಟಾ-ಯಿತು. ಕುಂತಿಯಲ್ಲಿ ಧರ್ಮರಾಜ ಹುಟ್ಟಿದ ಮೇಲೆ ಗಾಂಧಾರಿಯು ತನ್ನ ಗರ್ಭವನ್ನು ಕುಟ್ಟಿದ ಪ್ರಸಂಗದಂತಿದೆ ಇದು. ವಿನತೆಯ ಅಸೂಯೆ, ಸಿಟ್ಟು ಇದಕ್ಕೆಲ್ಲ ಕಾರಣವೆಂದು ಅರುಣನೇ ತಾಯಿಯನ್ನು ನಿಂದಿಸಿ, ಕದ್ರೂದಾಸ್ಯವನ್ನು ಹೊಂದುವ ಶಾಪದಂತಹ ಮಾತಾಡುತ್ತಾನೆ. ತಾಯಿಗೆ ಮಗನಿಂದ ಶಾಪದಂತಹ ನಿಂದನೆಗೆ ಒಳಗಾಗುವಂತಾಗುತ್ತದೆ. ತಾಯಿಗೆ ತಾಳ್ಮೆ ಇರಬೇಕು.

೪. ಅರುಣನ ಮೊಟ್ಟೆಯೊಡೆದದ್ದು ಐದುನೂರು ವರ್ಷಗಳ ನಂತರ. ಗರುಡನು ಮತ್ತೆ ಐದುನೂರು ವರ್ಷ ನಂತರ. ಒಟ್ಟಾರೆ, ಒಂದುಸಾವಿರ ವರ್ಷ ಬೇಕಾಯಿತು. ಜೀವಿಗಳ ಜನನದ ಅವಧಿ ರೀತಿ ಬೇರೆ ಬೇರೇನೇ ಇರುತ್ತದೆ. ಅಲ್ಲಿಯವರೆಗೂ ಕಾಯಬೇಕು ಪೋಷಕರು.

೫. ದ್ಯೂತ ಧರ್ಮವಲ್ಲ ಯಾರಿಗೂ, ಕ್ಷತ್ರಿಯರಿಗೂ ಅಲ್ಲ, ಮನುಷ್ಯರಿಗೂ ಸಲ್ಲದು. ದೇವತೆಗಳೂ ಆಡಬಾರದು. ಇಲ್ಲಿ ಕದ್ರೂ, ವಿನತೆಯರದು ಪಣ, ಅದಕ್ಕಾಗಿ ಕದ್ರೂ ತನ್ನ ಮಕ್ಕಳ ಘೆನ್ನು ತನ್ನ ಪರವಾಗಿ ಕುದುರೆಯ ಬಾಲದ ಬಣ್ಣವನ್ನು ಕಪ್ಪಾಗಿಸಲು ಪ್ರಚೋದಿಸುತ್ತಾಳೆ. ಅವರು ವಿರೋಧಿಸುತ್ತಾರೆ. ಅವರಿಗಿರುವ ಧರ್ಮ ಬುದ್ಧಿ ಅವರ ತಾಯಿಗಿರಲಿಲ್ಲ. ತಾಯಿಗಿಂತ ಮಕ್ಕಳೇ ವಾಸಿ, ಧರ್ಮಿಷ್ಠರಾಗಿದ್ದರು. ಕೆಲವರು ದಾಕ್ಷಿಣ್ಯ, ಶಾಪಕ್ಕೆ ಹೆದರಿ ಅನ್ಯಾಯವಾಗಿ ಬಾಲವನ್ನು ಕಪ್ಪಾಗುವಂತೆ ಸುತ್ತಿಕೊಂಡು ವಿನತೆಗೆ ಮೋಸ ಮಾಡಲು ಶಾಮೀಲಾದರು. **ತಾಯಿಯೇ ಮಕ್ಕಳಿಗೆ ಶಾಪ ಕೊಟ್ಟ ಮತ್ತೊಂದು ದುರಂತ ಇಲ್ಲಿದೆ.** ತಾಯಿಯ ಹಠಮಾರಿತನ, ಮಕ್ಕಳ ನಾಶಕ್ಕೂ ಕಾರಣವಾಯಿತು. **ಕೆಟ್ಟ ತಾಯಿಯೂ ಇರಬಹುದು ಎನ್ನಲು ಇಲ್ಲಿ ಒಂದು ಒಳ್ಳೆಯ ನಿದರ್ಶನ ಸಿಗುತ್ತದೆ.** ಕಾರಣ ತಾಯಿಯರು ಮಕ್ಕಳಿಗೆ ಧರ್ಮೋಪದೇಶ ಮಾಡುವ ಬದಲು ತಾವೇ ಅಧರ್ಮದ ಹಾದಿ ಹಿಡಿದರೆ ಗತಿಯೇನು?

೬. ತನ್ನ ಅಕ್ಕನ ದುರ್ನೀತಿಯಿಂದ ಇದ್ದರೂ, ಅದಕ್ಕೆ ಬಲಿಯಾಗುತ್ತಾಳೆ ವಿನತೆ. ಅಕ್ಕ ಎಂದು ತಪ್ಪು ಮಾಡಿದರೂ ಪಣಕ್ಕೆ ಬಲಿಯಾದುದು ವಿನತೆಯ ದುರಂತ. ಅಕ್ಕನನ್ನು ಮೊದಲೇ ಸರಿಯಾಗಿ ಇಟ್ಟಿದ್ದರೆ ದಾಸ್ಯ ತಪ್ಪುತ್ತಿತ್ತು. ಆಕೆಯ ದಾಸ್ಯದ ಪ್ರಾರಬ್ಧ ಆಕೆಯನ್ನು ಪಣಕ್ಕೆ ಗುರಿಯಾಗಿಸಿತು. ಧರ್ಮರಾಜನು ಜೂಜಿಗೆ ಹೋಗಿ ಸೋತಂತೆ.

೭. ಅಕ್ಕಳಾಗಿ ತಂಗಿಯನ್ನೇ ದಾಸ್ಯಕ್ಕೆ ಗುರಿಮಾಡಿ, ಗುಲಾಮಳನ್ನಾಗಿ ಮಾಡಿಕೊಂಡ ಅಪರೂಪದ ಪ್ರಸಂಗ ದೇವಲೋಕದಲ್ಲಿ ನಡೆದಿದೆ. ಇನ್ನು ಮನುಷ್ಯರಲ್ಲಿ ನಡೆಯುವುದು

ಆಶ್ಚರ್ಯವಲ್ಲ. ಮನುಷ್ಯ ತನ್ನ ಅಧಿಕಾರ ಸಂಪತ್ತು, ಗತ್ತುಗಾರಿಕೆ, ಕುಟಿಲ ಬುದ್ಧಿಗಳಿಂದ ಮಾತುಗಾರಿಕೆಯಿಂದ ಅಮಾಯಕರನ್ನು ಶೋಷಣೆಗೆ ತಳ್ಳುವುದು ಈ ಜಗತ್ತಿನಲ್ಲಿ ತೀರ ಸಾಮಾನ್ಯ. ಪ್ರತಿಭಟನೆ ಮಾಡುವ ಮನಸ್ಸು ಇರದವರು ಇಂತಹ ಶೋಷಣೆಗೆ ಗುರಿಯಾಗುತ್ತಾರೆ.

೮. ಗರುಡನೂ ತಾಯಿಯ ಶೋಷಣೆಯಲ್ಲಿ ಮೂಕಪ್ರೇಕ್ಷಕನಾಗಿರುತ್ತಾನೆ. ನಾರದರು ತಿಳಿಸಿದ ಮೇಲೆ ನೆನಪಿಸಿದ ಮೇಲೆ ಕರ್ತವ್ಯಪರನಾಗಿ ತಾಯಿಯ ದಾಸ್ಯಮೋಚನೆ ಮಾಡು- ತ್ತಾನೆ. ಗರುಡನಂತಹ ಮಹಾಬಲಿಷ್ಠರಿಗೂ ಇದು ಅಸಾಧ್ಯ ಹೇಗೆ ಆಯಿತೆಂಬುದು ಆಶ್ಚರ್ಯಕರ. ತಂದೆ ಕಶ್ಯಪರೂ ಕದ್ರೂದೇವಿಗೆ (ಪತ್ನಿಗೆ) ಬುದ್ಧಿವಾದ ಹೇಳಲಿಲ್ಲವೇ? ಎಂಬ ಶಂಕೆಗೆ ಉತ್ತರ ಸಿಗದು. ಪಾಪ! ವಿನತೆ ತನ್ನ ಮಾವನ ಗಮನಕ್ಕೂ ತರದಂತಹ ಅಮಾಯಕಳಾಗುತ್ತಾಳೆ. ಎಲ್ಲವೂ ಹರಿಚಿತ್ತ, ಅವರ ಕರ್ಮಗಳೆನ್ನದೆ ವಿಧಿಯಿಲ್ಲ.

೯. ಅಮೃತ ತರುವುದು ತೀರ ಸುಲಭವೆಂದು ಕಶ್ಯಪರಿಗೆ, ಗರುಡನಿಗೆ, ಅವರ ಮಾತುಗಳಿಂದಲೇ ವ್ಯಕ್ತವಾಗುತ್ತದೆ. ಇಂದ್ರನಿಗಿಂತಲೂ ಉತ್ತಮನಾದ ಗರುಡನಿಗೆ ಅದು ಯಾವ ಕಷ್ಟದ ಕೆಲಸ! ಲೋಕದೃಷ್ಟಿಯಿಂದ ಹೇಗೆ ವರ್ತಿಸಬೇಕೋ ಹಾಗೆ ವರ್ತಿಸುತ್ತಾನೆ. ಈ ಪರ್ವಕ್ಕಿಂತ, ಆದಿಪರ್ವದಲ್ಲಿ ಗರುಡನ ಮಹಿಮೆ ತುಂಬಾ ಸ್ಪಷ್ಟವಾಗಿ ಬಂದಿದೆ. ದೇವತೆಗಳು, ಋಷಿಗಳು ಗರುಡನ ಸ್ತೋತ್ರ ಮಾಡುತ್ತಾರೆ.

೧೦. ಗರುಡನ ಪ್ರಾರ್ಥನೆ ಒಳ್ಳೆಯ ಮಾತುಗಳಿಗೂ ಕದ್ರೂದೇವಿ ಯಾವ ಬೆಲೆಯನ್ನು ಕೊಡದೇ ಕಟುಕ ಹೃದಯಳಾಗಿ ವರ್ತಿಸುತ್ತಾಳೆ. ಅಮೃತ ತರುವಂತೆ ಹೇಳುತ್ತಾಳೆ ವಿನತೆಯ ದಾಸ್ಯ ವಿಮೋಚನೆಗೆ. ಗರುಡ ಒಳ್ಳೆಯ ಮುತ್ಸದ್ದಿಯಾಗಿ ಇಲ್ಲಿ ಕಾಣುತ್ತಾನೆ. ಉಪಾಯದಿಂದ ಸಮಸ್ಯೆ ಬಗೆಹರಿಸಬೇಕೆಂಬ ಸಂದೇಶ ಇಲ್ಲಿದೆ.

೧೧. ಭೂಮಂಡಲವನ್ನೇ ಹೊರುವ ಸಾಮಾರ್ಥ್ಯವಿರುವ ಗರುಡನಿಗೆ ಗಜ, ಕೂರ್ಮಗಳನ್ನು ವೃಕ್ಷದ ಶಾಖೆ ಹೊತ್ತು ತಿರುಗಿದ್ದು ಆಶ್ಚರ್ಯವಲ್ಲ.

೧೨. ತನ್ನ ಕಾರ್ಯದ ಗೌರವವೆಷ್ಟೇ ಇದ್ದರು, ವಸುದೇವತೆಗಳೊಂದಿಗೆ ಸತ್ರಯಾಗದಲ್ಲಿದ್ದ ವೈಖಾನಸ ನಾಮಕ ಯತಿಗಳಿಗೆ, ವಾಲಖಿಲ್ಯ ಋಷಿಗಳಿಗೆ ತೊಂದರೆಯಾಗದಂತೆ ಜ್ಞಾನಕಾರ್ಯಕ್ಕೆ ತೊಂದರೆಯಾಗದಂತೆ ನೋಡಿಕೊಂಡಿದ್ದ ಗರುಡನ ಕೌಶಲಕ್ಕೆ ನಿದರ್ಶನ. ದೇವ, ಬ್ರಾಹ್ಮಣ, ಋಷಿಗಳ ದ್ರೋಹವಾಗದಂತೆ ಎಚ್ಚರಿಕೆಯಿಂದ ಇರಲು ಕಶ್ಯಪರೂ ಸೂಚಿಸಿದ್ದನ್ನು ಇಲ್ಲಿ ನೆನಪಿಸಿಕೊಂಡು ನಾವೂ ಕೂಡಾ ನಮ್ಮ ಜೀವನದಲ್ಲಿ ಸ್ವೋತ್ತಮದ್ರೋಹವಾಗದಂತೆ ಸ್ವಕಾರ್ಯ ಮಾಡಿಕೊಳ್ಳಬೇಕು.

೧೩.. ಅದೇ ಸಮಯದಲ್ಲಿ ಅಧರ್ಮಿಗಳ ನಾಶವೂ ಮಾಡಲು ಪ್ರಯತ್ನಿಸಬೇಕು. ಒಂದೇ ಪ್ರಯತ್ನದಲ್ಲಿ ಅನೇಕ ಸಾಧನೆ ಮಾಡಬೇಕು. ವೃಕ್ಷಶಾಖಾಪತನದಿಂದ ಮೂವತ್ತಾರು ದೇಶದ ಕುಪಿಂದರೆಂಬ ಪಾಪಿಗಳ ನಾಶ ಮಾಡಿದ ಗರುಡ. ಶಿಷ್ಟರಕ್ಷಣೆ, ಅಶಿಷ್ಟರ ನಾಶವೂ ಕಾರ್ಯದ ಭಾಗವಾಗಿರಬೇಕು.

೧೪. ಅಗ್ನಿ ಶಮನಕ್ಕೆ ಬ್ರಹ್ಮೋಪದೇಶ ಪಡೆಯುತ್ತಾನೆ. ಅಗ್ನಿ ಒಬ್ಬ ದೇವತೆ ತಾನೂ ದೇವತೆ. ಅಗ್ನಿಯ ಶಮನ ತಾನೇ ಮಾಡಬಹುದಿತ್ತು. ಅಗ್ನಿಗಿಂತ ತಾನು ಅತ್ಯುತ್ತಮ ದೇವತೆಯಾಗಿದ್ದರೂ, ಬ್ರಹ್ಮೋಪದೇಶದಿಂದ ಅಗ್ನಿಶಮನ ಮಾಡಿ ಅಗ್ನಿಯ ವಿರೋಧವನ್ನೂ ಪರಿಹಾರ ಮಾಡಿಕೊಂಡ ಗರುಡನ ಕೌಶಲ(ಲೌಕಿಕ) ಆದರ್ಶಮಯವಾಗಿ ತೋರುತ್ತದೆ.

೧೫. ಇಂದ್ರ ಗರುಡನಿಗಿಂತ ತಾರತಮ್ಯದಲ್ಲಿ ಕಡಿಮೆಯಾದರೂ, ವಜ್ರಾಯುಧ ಪ್ರಯೋಗಿಸಿ, ಅದರ ಮಹತ್ತ್ವ, ಅಮೃತ ರಕ್ಷಣೆಯ ಕರ್ತವ್ಯ ಮೆರೆಯುತ್ತಾನೆ. ಗರುಡ ವಜ್ರಾಯುಧಕ್ಕೆ ಗೌರವಿಸಿ, ಒಂದು ಗರಿಯನ್ನು ಮಾತ್ರ ಉದುರಿಸುತ್ತಾನೆ. ಇದೂ ಒಂದು ಕೌಶಲ.

೧೬. ಕದ್ರೂದೇವಿಗೆ ಅಮೃತ ತಂದ ವಿಷಯ ತಿಳಿಸಿ, ಉಪಾಯದಿಂದ ತಾಯಿಯ ಬಿಡುಗಡೆ ಮಾಡಿಸುತ್ತಾನೆ, ಅಮೃತವನ್ನು ಆಕೆಗೆ ಕೊಡದೇ. ಅಮೃತ ತರಲು ಹೇಳಿದ್ದಳು ಕದ್ರೂ, ಕೊಡಲು, ಸರ್ಪಗಳಿಗೆ ಕುಡಿಸುವುದು ಗರುಡನ ಕೆಲಸವಾಗಿದ್ದಿಲ್ಲ. ಕದ್ರೂವನ್ನು ಮಾತಿನಲ್ಲಿ ಸಿಕ್ಕಿಸಿ, ಆಕೆಯ ಅನೀತಿಯ ನೀತಿಯನ್ನು ಆಕೆಯ ರೀತಿಯಲ್ಲಿಯೇ ಉತ್ತರಿಸಿ, ತಾಯಿಯನ್ನು ಬಿಡಿಸುತ್ತಾನೆ : **'ನಿಕೃತ್ಯಾ ನಿಕೃತಿಂ ಹನ್ಯಾತ್ ನೈವ ಧಾರ್ಮಿಕಾನ್'** ಎಂಬ ಪ್ರಮಾಣಕ್ಕೆ ಇದೂ ಒಂದು ಉತ್ತಮ ನಿದರ್ಶನ. ಕದ್ರೂ ತಂಗಿಗೆ ಮಾಡಿದ ಮೋಸ ಆಕೆಗೇ ಮುಳುವಾಯಿತು. 'ಮಾಡಿದ್ದುಣ್ಣೋ ಮಹರಾಯ' ಎಂಬ ಲೋಕನೀತಿ, ಧರ್ಮನೀತಿಗಳ ಸಂಗಮವಿದು.

೧೭. ಇಂದ್ರನಿಂದ ಕಸಿದುಕೊಂಡ ಅಮೃತ ಇಂದ್ರನಿಗೇ ಕೊಟ್ಟು, ಇಂದ್ರನ ಸ್ನೇಹಕ್ಕೂ ಭಂಗಬರದಂತೆ ಗರುಡ ವರ್ತಿಸಿದ್ದು ಮತ್ತೊಂದು ಲೌಕಿಕ ಕೌಶಲ.

೧೮. ದೇವತೆಗಳು, ಋಷಿಗಳು ಗರುಡನಿಗೆ ವರ ಕೊಡಲು ಇಂದ್ರನಿಗೆ ಸೂಚಿಸಿದರೂ ಇಂದ್ರ ಕೊಡಲಿಲ್ಲ, ಕಾರಣ ತಾನು ಗರುಡನಿಗಿಂತ ಕಡಿಮೆ. ಅದೂ ಮಾರ್ಮಿಕವಾಗಿಯೇ ಬಂದಿದೆ. ದೇವತೆಗಳು ಹೇಳಿದ್ದೇ ಒಂದು, ಇಂದ್ರ ಉತ್ತರಿಸಿದ್ದು ಇನ್ನೊಂದು.

೧೯. ಆದಿಪರ್ವ ಹಾಗೂ ಈ ಅನುಶಾಸನಪರ್ವಗಳಲ್ಲಿ ಬಂದ ಗರುಡದೇವನ ವಿಷಯಗಳನ್ನು ಕ್ರೋಢೀಕರಿಸಿ ತಿಳಿದಾಗ ಗರುಡನ ಸಮಗ್ರ ವ್ಯಕ್ತಿ ತಿಳಿಯುತ್ತದೆ. ಗರುಡನ ಮಹಿಮೆ ಇನ್ನೂ ಅನೇಕ ಕಡೆ ಬಂದಿರುವುದನ್ನೂ ಮರೆಯಬಾರದು. (ಬಲಿಯನ್ನು ನಿಗ್ರಹಿಸಿ, ನಾರಾಯಣನ ಕಿರೀಟ ತಂದುದು, ರಾಮಾಯಣ ಯುದ್ಧದಲ್ಲಿ ಮೂರ್ಛಿತ ಕಪಿಗಳನ್ನು ತನ್ನ ಗಾಳಿಯಿಂದಲೇ ಎಚ್ಚರಿಸಿದ್ದು ಮುಂತಾದ).

ಇತ್ಯಾದಿ....

# ೧೩೭. ವಾಗ್ದಾನದ ಮಹತ್ತ್ವ

ಧರ್ಮರಾಜನು ಭೀಷ್ಮರನ್ನು 'ಲೋಕದಲ್ಲಿ ದುರಾತ್ಮರು ಬ್ರಾಹ್ಮಣರಿಗೆ ದಾನ ಕೊಡುತ್ತೇನೆ ಎಂದು ಮಾತು ಕೊಟ್ಟು ಕೊಡದಿದ್ದರೆ (ಮೋಹದಿಂದ, ಅಜ್ಞಾನದಿಂದ ಅಥವಾ ಉದ್ದೇಶಪೂರ್ವಕವಾಗಿ) ಮುಂದೇನಾಗುತ್ತದೆ (ಶಿಕ್ಷೆ)?'

ಅದಕ್ಕೆ ಭೀಷ್ಮರು ೧. ವಾಗ್ದಾನ ಮಾಡಿದ್ದು ಸ್ವಲ್ಪವಿರಲಿ, ಬಹಳವಿರಲಿ, ಕೊಡದೆ ಅವನ ಆಸೆಗಳು ಈಡೇರುವುದಿಲ್ಲ; ನಪುಂಸಕರು ಸಂತಾನ ಬಯಸಿದಂತೆ. ೨. ಜೀವನದಲ್ಲಿ ಮಾಡಿದ ಪುಣ್ಯನಾಶವಾಗುತ್ತದೆ. ೩. ಮಾಡಿದ ತಪಸ್ಸು ನಾಶವಾಗುತ್ತದೆ. **ಇದರ ಪರಿಹಾರಕ್ಕಾಗಿ ಕಪ್ಪು ಕಿವಿ ಇರುವ ಒಂದುಸಾವಿರ ಅಶ್ವಗಳ ದಾನ ಮಾಡಿದರೆ, ಆ ಪಾಪ ಹೋಗುತ್ತದೆ.**

ಈ ವಿಷಯದಲ್ಲಿ ಒಂದು ನರಿ ಹಾಗೂ ಕಪಿಗೂ ನಡೆದ ಸಂವಾದರೂಪ ಪುರಾತನ ಇತಿಹಾಸವನ್ನು ಪಿತಾಮಹ ಭೀಷ್ಮರು ಹೇಳಿದರು.

ಈ ನರಿ ಹಾಗೂ ಕಪಿಗಳು ಹಿಂದಿನ ಜನ್ಮದಲ್ಲಿ ಮನುಷ್ಯರೂ ಹಾಗೂ ಸ್ನೇಹಿತರಾಗಿದ್ದವು. ಮುಂದೆ (ಕಾರಣಾಂತರದಿಂದ) ಈ ಮನುಷ್ಯರು ಒಂದು ನರಿಯಾಗಿಯೂ, ಇನ್ನೊಂದು ಕಪಿಯಾಗಿಯೂ ಹುಟ್ಟಿದವು. ಕಪಿಗೆ ತನ್ನ ಪೂರ್ವಜನ್ಮ ಸ್ಮರಣೆ ಇತ್ತು. ಅದರ ಫಲವಾಗಿ ನರಿಯು ಸ್ಮಶಾನದ ಮಧ್ಯದಲ್ಲಿ ಕೊಳೆತ ಶವಗಳನ್ನು ತಿನ್ನುವುದನ್ನು ನೋಡಿ ಕಪಿಯು 'ಏಕೆ ತಿನ್ನುತ್ತಿದ್ದೀಯಾ? ನೀನು ಹಿಂದೆ ಮಾಡಿದ ಪಾಪವಾದರೂ ಏನು?'[೧] ಎಂದಿತು. ಅದಕ್ಕೆ ನರಿಯು 'ನಾನು ಬ್ರಾಹ್ಮಣನಿಗೆ ವಾಗ್ದಾನ ಮಾಡಿದ ದಾನವನ್ನು ಕೊಡಲಿಲ್ಲ, ಆದ್ದರಿಂದ ನರಿಯಂತಹ ಕೆಟ್ಟ ಜನ್ಮ ಬಂದು ಹಸಿವಿನಿಂದ ಕೆಟ್ಟ ಶವವನ್ನೇ ತಿನ್ನುತ್ತಿದ್ದೇನೆ'[೨] ಎಂದಿತು.

ನಂತರ ನರಿಯು ವಾನರನಿಗೆ 'ನೀನು ಯಾವ ಪಾಪ ಮಾಡಿದ ಫಲವಾಗಿ ಕಪಿಯಾಗಿ ಹುಟ್ಟಿದ್ದೀ'[೩] ಎಂದು ಕೇಳಿತು. ಅದಕ್ಕೆ ಕಪಿಯು 'ನಾನು ಬ್ರಾಹ್ಮಣರ ಫಲಗಳನ್ನು ಕದ್ದಿದ್ದೆ.

---

೧ ಕಿಂ ತ್ವಯಾ ಪಾತಕಂ ಕರ್ಮ ಕೃತಂ ಪೂರ್ವಂ ಸುದಾರುಣಮ್ ।
ಯಸ್ತ್ವಂ ಸ್ಮಶಾನೇ ಮೃತಕಾನ್ ಪಾತಕಾನತ್ಸಿ ಕುತ್ಸಿತಾನ್ ॥ - ೨೬/೧೦

೨ ಸೃಗಾಲ ಉವಾಚ-
ಬ್ರಾಹ್ಮಣಸ್ಯ ಪ್ರತಿಶ್ರುತ್ಯ ನ ಮಯಾ ತದುಪಾಕೃತಮ್ ॥ - ೨೬/೧೧

೩. ಸೃಗಾಲ ಉವಾಚ -
ಕಿಂ ತ್ವಯಾ ಪಾತಕಂ ಕರ್ಮ ಕೃತಂ ಯೇನಾಸಿ ವಾನರಃ ।

ಆದ್ದರಿಂದ ಈ ಜನ್ಮ ಬಂದಿದೆ. ಆದ್ದರಿಂದ ವಿವೇಕಿಯಾದವನು ಎಂದೂ ಬ್ರಾಹ್ಮಣರ ಸ್ವತ್ತನ್ನು ಅಪಹರಿಸಬಾರದು. ಬ್ರಾಹ್ಮಣರೊಡನೆ ಭೂ, ಗಡಿ ವಿವಾದ ಬಂದಾಗಲೂ, ಅವರಿಗೆ ಭೂಮಿಯನ್ನು ಬಿಟ್ಟುಕೊಡಬೇಕು. ಬ್ರಾಹ್ಮಣರಿಗೆ ವಾಗ್ದಾನ ಮಾಡಿದುದನ್ನು ಕೊಡಬೇಕು'[೧] ಎಂದು ಕಪಿ ನುಡಿಯಿತು.

ಭೀಷ್ಮರು ತಾವು ಈ ವಿಷಯವನ್ನು ಧರ್ಮಜ್ಞಾನಿಯಾದ ಬ್ರಾಹ್ಮಣನಿಂದಲೂ ಹಾಗೂ ಕೃಷ್ಣನ ಕಥೆಯನ್ನು ಕೇಳುವಾಗಲೂ ಈ ವಿಷಯವನ್ನು ಕೇಳಿದ್ದೇನೆ. ಆದ್ದರಿಂದ –

೧. ಬ್ರಾಹ್ಮಣರಿಗೆ ವಾಗ್ದಾನ ಮಾಡಿ ಆಸೆ ಹುಟ್ಟಿಸಿದ ಮೇಲೆ ಕೊಡಲೇಬೇಕು. ಆಸೆಯನ್ನು ಹುಟ್ಟಿಸಿಕೊಂಡ ಬ್ರಾಹ್ಮಣನು ಪ್ರಜ್ವಲಿಸುವ ಬೆಂಕಿ ಇದ್ದಂತೆ. ಅವನು ನೋಡಿದ ವಸ್ತು ಹುಲ್ಲಿನಂತೆ ಸುಟ್ಟೆ ಹೋಗುತ್ತದೆ. ಅದೇ ಬ್ರಾಹ್ಮಣನಿಗೆ ನೀಡಿದ ವಾಗ್ದಾನ ಈಡೇರಿಸಿದಲ್ಲಿ ಆ ರಾಜ್ಯದಲ್ಲಿ ಸಂತುಷ್ಟನಾದ ಬ್ರಾಹ್ಮಣನು ಚಿಕಿತ್ಸಕನಂತೆ ಇರುತ್ತಾನೆ.

೨. ಆಸೆ ಈಡೇರಿದ ಬ್ರಾಹ್ಮಣನು ಆ ರಾಜ್ಯದ ಪುತ್ರ, ಪೌತ್ರ, ಬಾಂಧವ, ಸಚಿವರನ್ನು ರಾಜ್ಯವನ್ನು ಶಾಂತಿಯಿಂದ, ಯಜ್ಞದಂತೆ ಅಭಿವೃದ್ಧಿಗೊಳಿಸುತ್ತಾನೆ.

೩. ಆಸೆ ಈಡೇರಿದ ಬ್ರಾಹ್ಮಣನ ತೇಜಸ್ಸೆಂದರೆ ಸೂರ್ಯನಂತಹುದೇ.

೪. ಬ್ರಾಹ್ಮಣರಿಗೆ ಕೊಟ್ಟ ದಾನದಿಂದ ವಿಶೇಷ ಸ್ವರ್ಗಫಲ. ಕಾರಣ ಇದೊಂದು ವಿಶೇಷವಾಗಿ ಭಗವಂತನಿಗೆ ಬೇಕಾದುದು.

೫. ದಾನದಿಂದಲೇ ದೇವತೆಗಳು, ಪಿತೃಗಳು ಜೀವಿಸಿದ್ದಾರೆ.

೬. ಬ್ರಾಹ್ಮಣನು ಸತ್ಪಾತ್ರರಲ್ಲಿಯೇ ಶ್ರೇಷ್ಠ ಅವನನ್ನು ತೀರ್ಥವೆನ್ನುತ್ತಾರೆ. ಯಾವುದೇ ಧಾರ್ಮಿಕಕಾರ್ಯದಲ್ಲಿ ಬ್ರಾಹ್ಮಣನು ಅಪೂಜಿತನಾಗಿ ಹೋಗಬಾರದು. ಅವನನ್ನು ಸತ್ಕರಿಸುವುದು ಯಜಮಾನನ ಕರ್ತವ್ಯ.

*****

---

೧ ಕಪಿರುವಾಚ –
ಸಚಾಪ್ಯಾಹ ಬ್ರಾಹ್ಮಣಾನಾಂ ಫಲಾಹಾರಃ ಪ್ಲವಂಗಮಃ।
ತಸ್ಮಾನ್ನ ಬ್ರಾಹ್ಮಣಸ್ವಂತು ಹರ್ತವ್ಯಂ ವಿದುಷಾ ಸದಾ ॥
ಸೀಮಾವಿವಾದೇ ಮೋಕ್ತವ್ಯಂ ದಾತವ್ಯಂ ಚ ಪ್ರತಿಶ್ರುತಮ್ ॥ – ೨೬/೧೪

# ೧೩೮. ಅನಧಿಕಾರಿಗೆ ಉಪದೇಶ ಕೂಡದು

ಧರ್ಮರಾಜನು ಭೀಷ್ಮರಿಗೆ 'ತಾತ! ಮೈತ್ರಿಯಿಂದಾಗಿ (ಸ್ನೇಹದ ದೆಸೆಯಿಂದ) ಜಾತಿಯಿಂದ ಹೀನನಾದವನಿಗೆ ಉಪದೇಶ ಮಾಡಿದರೆ ದೋಷವಾಗುವುದೇ? ಪಾಪ ಬರುವುದೇ' ಎಂದು ಕೇಳಿದನು.

ಅದಕ್ಕೆ ಭೀಷ್ಮರು 'ಈ ವಿಷಯದಲ್ಲಿ ನಾನು ಋಷಿಗಳಿಂದ ಕೇಳಿದುದನ್ನು ಹೇಳುತ್ತೇನೆ'

'ಜಾತಿ ಹೀನನಾದವನಿಗೆ (ಯಾರಿಗೂ) ಉಪದೇಶ ಮಾಡಬಾರದು. ಮಾಡಿದರೆ ಉಪದೇಶಮಾಡಿದ ಆಚಾರ್ಯನಿಗೆ ಮಹಾದೋಷ, ಪಾಪ ಬರುತ್ತದೆ (ಅಧಿಕಾರವಿಲ್ಲದವರಿಗೆ ಉಪದೇಶ ಬೇಡವೆಂದು ಭಾವ).

ಹಿಂದೆ ಹಿಮಾಲಯಪರ್ವತದ ಬ್ರಹ್ಮಾಶ್ರಮದಲ್ಲಿ ನಡೆದ ವೃತ್ತಾಂತ ಹೇಳುತ್ತೇನೆ ಕೇಳು.

ಆ ಆಶ್ರಮ ನಾನಾ ವೃಕ್ಷಗಳಿಂದ, ಬಳ್ಳಿ, ಮೃಗಪಕ್ಷಿಗಳಿಂದ, ಸಿದ್ಧಚಾರಣರಿಂದ, ತಪಸ್ವಿಗಳಿಂದ, ವ್ರತಾನುಷ್ಠಾನ ಮಾಡುವವರಿಂದ ಭಾಗ್ಯಶಾಲಿ ಬ್ರಾಹ್ಮಣರಿಂದ, ಜಿತೇಂದ್ರಿಯರಾದ ತಪಸ್ವಿಗಳಿಂದ ಕೂಡಿತ್ತು. ಅಲ್ಲಿ ವೇದಾಧ್ಯಯನ ನಾದ ಪೂರ್ಣವಾಗಿತ್ತು. ಅನೇಕ ವಾಲಖಿಲ್ಯ ಋಷಿಗಳೂ, ಯತಿಗಳೂ ಇದ್ದರು.

ಅಲ್ಲಿಗೆ ಒಮ್ಮೆ ಒಬ್ಬ ದಯಾದಿಂದ ಕೂಡಿದ (ಸರ್ವಭೂತದಯಾ ಗುಣದಿಂದ) ಒಬ್ಬ ಶೂದ್ರ ತುಂಬಾ ಉತ್ಸುಕತೆಯಿಂದ ಬಂದಾಗ ಅವನನ್ನು ಅಲ್ಲಿದ್ದ ಋಷಿಮುನಿಗಳು (ಆಶ್ರಮವಾಸಿಗಳು) ಸತ್ಕರಿಸಿದರು. ಅವರನ್ನು ನೋಡಿ ಸಂತೋಷಪಟ್ಟ ಆ ಶೂದ್ರನು ಆಶ್ರಮದ ಕುಲಪತಿಗಳ ಪಾದಗಳನ್ನು ಹಿಡಿದು 'ತಮ್ಮ ಅನುಗ್ರಹದಿಂದ ನಾನು ಧರ್ಮಾನುಷ್ಠಾನ ಮಾಡಲು ನನಗೆ ಸನ್ಯಾಸದೀಕ್ಷೆ ಕೊಟ್ಟು ಉಪದೇಶ ಮಾಡಿರಿ' ಎಂದನು[೧].

---

೧ ತತ್ರ ಕಶ್ಚಿತ್ ಸಮುತ್ಸಾಹಂ ಕೃತ್ವಾ ಶೂದ್ರೋ ದಯಾನ್ವಿತಃ।
ಆಗತೋ ಹ್ಯಾಶ್ರಮಪದಂ ಪೂಜಿತಶ್ಚ ತಪಸ್ವಿಭಿಃ॥
ಅಥಾಸ್ಯ ಬುದ್ಧಿರಭವತ್ ತಪಸ್ಯೇ ಭರತರ್ಷಭಃ।
ತತೋಽಬ್ರವಿತ್ ಕುಲಪತಿಂ ಪಾದೌ ಸಂಗೃಹ್ಯ ಭಾರತ॥
ಭವತ್ಪ್ರಸಾದಾದಿಚ್ಛಾಮಿ ಧರ್ಮಂ ಕರ್ತುಂ ದ್ವಿಜರ್ಷಭ।
ತನ್ಮಾಂ ತ್ವಂ ತು ಭಗವನ್ ವಕ್ತುಂ ಪ್ರವ್ರಾಜಯಿತುಮರ್ಹಸಿ॥ – ೨೭/೧೦-೧೩

ಅದಕ್ಕೊಪ್ಪಿದ ಕುಲಪತಿಗಳು 'ನಿನಗೆ ಧರ್ಮದಲ್ಲಿ ಆಸಕ್ತಿ ಇರುವುದೇ ಆದಲ್ಲಿ ಶುಶ್ರೂಷಾ ಮಾಡುತ್ತಿರು' ಎಂದರು. ಅದಕ್ಕೆ ಶೂದ್ರನು ಹೀಗೆ ಯಾಚಿಸಿದ. ನನಗೋ ಧರ್ಮದಲ್ಲಿ ಶ್ರದ್ಧೆ (ಸನ್ಯಾಸಾಶ್ರಮದಲ್ಲಿ). ನಾನಂತೂ ನನ್ನ ಮನಸ್ಸಿಗೆ ಸಂತೋಷವಾಗುವಂತೆ ಮಾಡುವೆನು. ಎಂದು ಯಾಚಿಸಿ, ಈ ಕುಲಪತಿಯ ಆಶ್ರಮದಿಂದ ಬಹುದೂರ ಹೋಗಿ ಬಂದು ಗುಡಿಸಲ(ಪರ್ಣಶಾಲೆ)ನ್ನು ಕಟ್ಟಿಕೊಂಡು ಅಲ್ಲಿ ಯಜ್ಞವೇದಿಕೆಯನ್ನು, ಶುದ್ಧವಾದ ಭೂಮಿ ಹಾಗೂ ದೇವಸ್ಥಾನಗಳನ್ನು ನಿರ್ಮಿಸಿಕೊಂಡು, ನಿಯಮಗಳನ್ನು, ಕರ್ಮಗಳನ್ನು ಅನುಷ್ಠಾನ ಮಾಡುತ್ತಾ ಇದ್ದನು (ತಾನು ಅಂದುಕೊಂಡಂತೆ ನಡೆದನು)[೧].

ಅಷ್ಟೇ ಅಲ್ಲದೆ ಅಂದುಕೊಂಡ ಕರ್ತವ್ಯಕರ್ಮ ಸಂಕಲ್ಪ ಹಾಗೂ ಸೂಕ್ತ ನಿಯಮಗಳಿಂದ ಕೂಡಿದವನಾಗಿ, ಜಿತೇಂದ್ರಿಯನಾಗಿದ್ದು ಫಲಾಹಾರಿಯಾಗಿರುತ್ತಾ, ಬಂದ ಅತಿಥಿಗಳಿಗೆ ಓಷಧಿ ಹಾಗೂ ಹಣ್ಣು-ಹಂಪಲುಗಳಿಂದ ಸತ್ಕರಿಸುತ್ತಾ ಬಹುಕಾಲ ಕಳೆದನು.

ಒಮ್ಮೆ ಒಬ್ಬ ಋಷಿಯು ಈ ಶೂದ್ರಾಶ್ರಮಕ್ಕೆ ಬಂದನು. ಆತನನ್ನು ಶೂದ್ರಮುನಿ ಸ್ವಾಗತಿಸಿ ವಿಧ್ಯುಕ್ತವಾಗಿ ಸತ್ಕರಿಸಿದ. ಬಂದ ಋಷಿಯೂ ಕೂಡಾ ಶೂದ್ರಮುನಿಯೊಡನೆ ಸೂಕ್ತ ಸಂಭಾಷಣೆ ಮಾಡಿ ಅವನನ್ನು ಯೋಗ್ಯರೀತಿಯಿಂದ ಪ್ರಶ್ನಿಸಿದ.

ಶೂದ್ರಮುನಿಯ ಆಶ್ರಮಕ್ಕೆ ಈ ಋಷಿಯು ಅನೇಕ ಬಾರಿ ಬಂದು ಹೋಗುತ್ತಿದ್ದನು. ಈ ರೀತಿಯಾಗಿ ಒಮ್ಮೆ ಋಷಿಯು ಬಂದಾಗ ಶೂದ್ರಮುನಿಯು ಪಿತೃಕಾರ್ಯ ಮಾಡುವೆನು, ಅನುಗ್ರಹಿಸಲು ಕೋರಿದಾಗ, ಋಷಿಯು ಸಮ್ಮತಿಸಿದನು. ಋಷಿಗೆ ಪಾದ್ಯಾದಿಗಳನ್ನು ಕೊಟ್ಟನು. ನಂತರ ದರ್ಭೆ, ವನದ ಓಷಧಿ, ಆಸನ, ದರ್ಭೆಯ ಚಾಪೆ ಮೊದಲಾದವುಗಳನ್ನು ಋಷಿಯ ಆತಿಥ್ಯಕ್ಕಾಗಿ ತಂದನು.

ನಂತರ ಪಿಂಡಗಳನ್ನು ಇಡಲು ದರ್ಭಪಂಕ್ತಿಗಳ ರೂಪವಾದ ಬೃಸಿಯನ್ನು ದಕ್ಷಿಣ ದಿಕ್ಕಿನಲ್ಲಿ ಪಶ್ಚಿಮ ಅಗ್ರಭಾಗವನ್ನು ಇಟ್ಟಾಗ ಋಷಿಯು ಅದು ತಪ್ಪೆಂದೂ, ದಕ್ಷಿಣಾಭಿಮುಖವಾಗಿ ಕುಳಿತು, ದರ್ಭೆಯ ಚಾಪೆಯನ್ನು ಪೂರ್ವಕ್ಕೆ ಅಗ್ರಭಾಗ ಬರುವಂತೆ ಮಾಡೆಂದು ಹೇಳಿದಾಗ, ಶೂದ್ರ ಮುನಿಯು ಹಾಗೆಯೇ ಮಾಡಿದನು. ಹವ್ಯಕವ್ಯದ ವಿಧಿಗಳನ್ನೂ ಋಷಿಗಳ ಅಣತಿಯಂತೆ ಮಾಡಿದನು. ಒಟ್ಟಾರೆ ಪಿತೃಕಾರ್ಯವನ್ನು ಋಷಿ ಹೇಳಿದಂತೆ ಮಾಡಿದ. ಪಿತೃಕಾರ್ಯ ಮುಗಿದ ಮೇಲೆ ಋಷಿಯು ತನ್ನ ಆಶ್ರಮಕ್ಕೆ ಹೋದನು.

---

೧ ಏವಮುಕ್ತಸ್ತು ಮುನಿನಾ ........................ ।
ವಿಜ್ಞಾತಮೇವಂ ಭವತು ಕರಿಷ್ಯೇ ಪ್ರಿಯಮಾತ್ಮನಃ ॥
ಗತ್ವಾಽಶ್ರಮಪದಾದ್ ದೂರಮುಟಜಾಂ ಕೃತವಾಂಸ್ತು ಸಃ ।
ತತ್ರ ವೇದಿಂ ಚ ಭೂಮಿಂ ಚ ದೇವತಾಯತಾನಿ ಚ ॥
ಅಭಿಷೇಕಾಂಶ್ಚ ನಿಯಮಾನ್ ದೇವತಾಯತನೇಷು ಚ ।
ಬಲಿಂ ಚ ಕೃತ್ವಾ ಹುತ್ವಾ ಚ ದೇವತಾಂ ಚಾಪ್ಯಪೂಜಯತ್ ॥ - ೨೭/೧೬-೧೮

**ಅಥ ತಂ ತಾಪಸಂ ಶೂದ್ರಃ ಸೋಽಬ್ರವೀದ್ ಭರತರ್ಷಭ ।**
**ಪಿತೃಕಾರ್ಯಂ ಕರಿಷ್ಯಾಮಿ ತತ್ರ ಮೇಽನುಗ್ರಹಂ ಕುರು ॥**
**ಬಾಢಮಿತ್ಯೇವ ತಂ ವಿಪ್ರ ಉವಾಚ .................... ।**
**ಅಥ ದಕ್ಷಿಣಮಾಶ್ರಿತ್ಯ ಬೃಸೀಂ ಪಶ್ಚಿಮಶೀರ್ಷಿಕಾನ್ ।**
**ಕೃತಾಮನ್ಯಾಯತೋ ದೃಷ್ಟ್ವಾ ತತಸ್ತಮೃಷಿರಬ್ರವೀತ್ ।**
**ಕುರುಷ್ವೈತಾಂ ಪೂರ್ವಶೀರ್ಷಾಂ ಭವ ಚೋದಙ್ಮುಖಃ ಶುಚಿಃ ।**
**ಸ ಚ ತತ್ ಕೃತವಾನ್ ಶೂದ್ರಃ ಸರ್ವಂ ಯದೃಷಿರಬ್ರವೀತ್ ॥**
**...............**
**ಹವ್ಯಕವ್ಯವಿಧಿಂ ಕೃತ್ಸ್ನಮುಕ್ತಂ ತೇನ ತಪಸ್ವಿನಾ ।**
**ಋಷಿಣಾ ಪಿತೃಕಾರ್ಯೇ ಚ ಯಥಾ ಧರ್ಮಪಥಿ ಸ್ಥಿತಃ ।**
**ಪಿತೃಕಾರ್ಯೇ ಕೃತೇ ಚಾಪಿ ವಿಸೃಷ್ಟಃ ಸ ಜಗಾಮ ಹ ॥** - ೨೭/೨೪-೩೦

ಹೀಗೆ ಶೂದ್ರತಪಸ್ವಿ ಬಹುಕಾಲ ಅಲ್ಲಿಯೇ ಇದ್ದು ತಪಸ್ಸನ್ನು ಮಾಡುತ್ತಾ ಮರಣಹೊಂದಿ ಮುಂದಿನ ಜನ್ಮದಲ್ಲಿ ರಾಜವಂಶವೊಂದರಲ್ಲಿ ಜನಿಸಿದನು. ಋಷಿಯು ಮುಂದೆ ಕಾಲಧರ್ಮಕ್ಕೆ ಅನುಗುಣವಾಗಿ ಮರಣಹೊಂದಿ ಅದೇ ರಾಜವಂಶದಲ್ಲಿ ಪುರೋಹಿತನಾಗಿ ಜನಿಸಿದನು. ಹೀಗೆ ಇಬ್ಬರೂ ಒಂದೇ ಕಡೆ ಹುಟ್ಟಿ ವಿದ್ಯಾಪಾರಂಗತರಾದರು. ಋಷಿಯು ಅಥರ್ವವೇದ, ಉಳಿದ ವೇದಗಳಲ್ಲಿ, ಕಲ್ಪಪ್ರಯೋಗದಲ್ಲಿಯ ಜ್ಯೌತಿಷ್ಯ, ವೇದಾಂಗದಲ್ಲೂ ಪಾರಂಗತನಾದ. ಇಬ್ಬರೂ ಸ್ನೇಹದಿಂದ ಬಹಳ ಸಂತೋಷದಿಂದ ಅಭಿವೃದ್ಧಿ ಹೊಂದಿದರು.

ರಾಜವಂಶದಲ್ಲಿ ಜನಿಸಿದ ರಾಜಕುಮಾರನು, ಆತನ ತಂದೆ ರಾಜ ಮರಣ ಹೊಂದಿದ ಮೇಲೆ ರಾಜನಾಗಿ ಅಭಿಷಿಕ್ತನಾದ. ರಾಜನಾದ ರಾಜಕುಮಾರನು, ತನ್ನ ಸ್ನೇಹಿತನನ್ನು (ಹಿಂದೆ ಋಷಿಯಾಗಿದ್ದ) ರಾಜಪುರೋಹಿತನನ್ನಾಗಿ ಅಭಿಷೇಕ ಮಾಡಿದನು. ಈ ಪುರೋಹಿತನನ್ನು ಮುಂದೆ ಮಾಡಿಕೊಂಡು ರಾಜನು ಪ್ರಜೆಗಳನ್ನು ಧರ್ಮದಿಂದ ರಾಜ್ಯವನ್ನಾಳಿದನು.

ರಾಜನು ಪುರೋಹಿತ ಮಾಡಿಸುತ್ತಿದ್ದ ಪುಣ್ಯಾಹವಾಚನ ಕಾಲದಲ್ಲಿ ಅವರನ್ನು ನೋಡಿ ನಗುತ್ತಾ ಉಪಹಾಸ ಮಾಡುತ್ತಿದ್ದನು. ಇದು ಪುರೋಹಿತನನ್ನು ಕೆರಳಿಸುತ್ತಿದ್ದರೂ, ರಾಜನನ್ನು ಎದುರು ಹಾಕಿಕೊಳ್ಳಲಾರದೆ ಸಹಿಸುತ್ತಿದ್ದನು (ಪುರೋಹಿತ).

ಒಮ್ಮೆ ಪುರೋಹಿತನು ರಾಜನನ್ನು ಒಂದು ವರವನ್ನು ಬೇಡಿದನು. ಅದಕ್ಕೆ 'ಒಂದೇಕೆ ನೂರು ವರಗಳನ್ನು ಕೊಡುವೆ. ನಿನ್ನ ಮೇಲೆ ನನಗೆ ಬಹಳ ಗೌರವ, ಸ್ನೇಹವಿರುವುದರಿಂದ ನಾನು ನಿನಗೆ ಕೊಡಲಾರದ್ದೇನೂ ಇಲ್ಲ' ಎಂದನು ರಾಜ. ಆಗ ಪುರೋಹಿತನು ಒಂದು ವರ ಕೊಡುವುದಾಗಿ ಸತ್ಯ ನುಡಿದು ಸುಳ್ಳು ಹೇಳಬಾರದು(ವರಕೊಡದಿರಬಾರದು). ಅದಕ್ಕೆ ರಾಜನು 'ಯಾವ ವರ ಕೇಳಬೇಕೆಂದುಕೊಂಡಿರುವೆಯೋ ಅದನ್ನು ತಿಳಿಯದೆ ಒಪ್ಪಲಾರೆ' ಎಂದ. ನಂತರ

ಪುರೋಹಿತನು 'ನಾನು ನಿಮ್ಮ ಸಲುವಾಗಿ ಧರ್ಮಕಾರ್ಯ, ಶಾಂತಿಕಾರ್ಯ ಮಾಡಿಸುವಾಗ ನನ್ನನ್ನು ನೋಡಿ ಏಕೆ ನಗುವಿರಿ'[೧] ಎಂದು ಕೇಳಿದ. ಮುಂದುವರೆದು 'ರಾಜನ್! ನೀನು ನಕ್ಕಾಗ ನನ್ನ ಮನಸ್ಸಿಗೆ ನಾಚಿಕೆಯಾಗುತ್ತದೆ. ಇದು ನಿನ್ನ ಪ್ರಿಯವಸ್ತುಗಳ ಆಣೆ. ಈ ಪ್ರಶ್ನೆಗೆ ಸರಿಯಾಗಿ ಉತ್ತರಿಸು' ಎಂದ ನೊಂದ ಪುರೋಹಿತ.

ಅದಕ್ಕೆ ರಾಜನು 'ಇದಕ್ಕೆ ನಮ್ಮಿಬ್ಬರ ಪೂರ್ವಜನ್ಮ ವೃತ್ತಾಂತವನ್ನು ಗೊತ್ತಿರುವ ನಾನು ಹೇಳುತ್ತೇನೆ ಕೇಳು. ನಾನು ಹಿಂದಿನ ಜನ್ಮದಲ್ಲಿ ಶೂದ್ರನಾಗಿದ್ದೆ. ನೀನೊಬ್ಬ ಋಷಿಯಾಗಿದ್ದೆ (ಉಗ್ರತಪಸ್ವಿ). ನಮ್ಮ ಆಶ್ರಮದಲ್ಲಿ ನಾನು ಪಿತೃಕಾರ್ಯ ಮಾಡುವಾಗ ಅಲ್ಲಿಗೆ ಬಂದಿದ್ದ ನೀನು ಬೃಸಿಯ ವಿಷಯದಲ್ಲೂ, ದರ್ಭೆಯ ವಿಷಯದಲ್ಲೂ, ಹವ್ಯಕವ್ಯಗಳ ವಿಷಯದಲ್ಲಿಯೂ ನನಗೆ ಉಪದೇಶ ಮಾಡಿದೆ. ಈ ದೋಷದಿಂದಾಗಿ ನೀನು ಈಗ ಪುರೋಹಿತನಾಗಿ ಜನಿಸಿದ್ದೀಯಾ. ನಾನು ರಾಜನಾಗಿ ಜನಿಸಿದೆ. ಪೂಜ್ಯನಾದ ನೀನು ಈಗ ನನ್ನನ್ನು ಪೂಜಿಸುವಂತಾಗಿದೆ. ಇದೇ ಕಾಲ ವಿಪರ್ಯಯ! ಇದಕ್ಕೆ ಕಾರಣ ನೀನು ನನಗೆ (ನಿನಗಿಂತ ನೀಚನಾದ ಶೂದ್ರ) ಉಪದೇಶ ಮಾಡಿದುದರ ಫಲ. ಈ ಕಾರಣದಿಂದ ನಿನ್ನನ್ನು ನೋಡಿದಾಗಲೆಲ್ಲ ನಗೆಯು ಬರುತ್ತಿದೆ. ನಿನ್ನನ್ನು ಅವಮಾನ ಮಾಡುವ ಉದ್ದೇಶದಿಂದಲ್ಲ, ಗುರುವಾಗಿದ್ದ ನೀನು ನನಗೀಗ ಸೇವೆ ಮಾಡುವ ಪರಿಸ್ಥಿತಿ ಒದಗಿದೆ.'[೨]

ಹೀಗೆ ಪೂರ್ವಜನ್ಮದಲ್ಲಿ ನೀನು ಮಾಡಿದ ಉಗ್ರತಪಸ್ಸು ನನಗೆ ಉಪದೇಶದಿಂದ ನಾಶವಾಯಿತು. ಆದ್ದರಿಂದ ನೀನು ಕೂಡಲೇ ಈ ಪೌರೋಹಿತ್ಯವನ್ನು ಬಿಟ್ಟು ಒಳ್ಳೆಯ ಜನ್ಮ ಪಡೆಯಲು ಪ್ರಯತ್ನಿಸು[೩]. ನಾನು ಹೇಳಿದಂತೆ ಮಾಡಿದರೆ, ನಿನಗೆ ಈಗಿನಕ್ಕಿಂತ ನೀಚಜನ್ಮ ಬರದು. ಬೇಕಾದಷ್ಟು ದ್ರವ್ಯ ತೆಗೆದುಕೋ, ಕೊಡುವೆ.'

---

೧ ಪುಣ್ಯಾಹವಾಚನೇ ನಿತ್ಯಂ ಧರ್ಮಕೃತ್ಯೇಷು ಚಾಸಕೃತ್ ।
ಶಾಂತಿಹೋಮೇಷು ಚ ಸದಾ ಕಿಂ ತ್ವಂ ಹಸಸಿ ವೀಕ್ಷ್ಯ ಮಾಮ್ ॥ - ೨೮/೪೪

೨ ಪ್ರೀಯತಾ ಹಿ ತದಾ ಬ್ರಹ್ಮನ್ ಮಮಾನುಗ್ರಹಬುದ್ಧಿನಾ ।
ಪಿತೃಕಾರ್ಯೇ ತ್ವಯಾ ಪೂರ್ವಮುಪದೇಶಃ ಕೃತೋಽನಘ ॥
ಬೃಸ್ಯಾಂ ದರ್ಭೇಷು ಹವ್ಯೇ ಚ ಕವ್ಯೇ ಚ ಮುನಿಸತ್ತಮ ॥ - ೨೮/೫೦
ಏತೇನ ಕರ್ಮದೋಷೇಣ ಪುರೋಧಾಸ್ತ್ವಮಜಾಯಥಾಃ ।
ಅಹಂ ರಾಜಾ ಚ ವಿಪ್ರೇಂದ್ರ ಪಶ್ಯ ಕಾಲಸ್ಯ ಪರ್ಯಯಮ್ ।
ಮತ್ಕೃತೇ ಹ್ಯುಪದೇಶೇನ ತ್ವಯಾ ಪ್ರಾಪ್ತಮಿದಂ ಫಲಮ್ ॥ - ೨೮/೫೧
ಏತಸ್ಮಾತ್ ಕಾರಣಾತ್ ಬ್ರಹ್ಮನ್ ಪ್ರಹಸೇ ತ್ವಾಂ ದ್ವಿಜೋತ್ತಮ ।
ನ ತ್ವಾಂ ಪರಿಭವನ್ ಬ್ರಹ್ಮನ್ ಪ್ರಹಸಾಮಿ ಗುರುರ್ಭವಾನ್ ॥

೩ ಇತಸ್ತ್ವಮಧಮಾಮನ್ಯಾಂ ಮಾ ಯೋನಿಂ ಪ್ರಾಪ್ಸ್ಯಸೇ ದ್ವಿಜ ।
ಗೃಹ್ಯತಾಂ ದ್ರವಿಣಂ ವಿಪ್ರ ಪೂತಾತ್ಮಾ ಭವ ಸತ್ತಮ ॥ - ೨೮/೫೫

ನಂತರ ಬ್ರಾಹ್ಮಣನು (ರಾಜಪುರೋಹಿತ) ರಾಜನಿಂದ ಬೀಳ್ಕೊಟ್ಟವನಾಗಿ ಬ್ರಾಹ್ಮಣರಿಗೆ ದ್ರವ್ಯದಾನ, ಗೋ, ಭೂದಾನ, ಗ್ರಾಮದಾನಗಳನ್ನೆಲ್ಲಾ ಮಾಡಿದನು[೧]. ಮತ್ತೆ ಕೃಚ್ಛ್ರಚಾಂದ್ರಾಯಣಾದಿ ವ್ರತಗಳನ್ನು ಆಚರಿಸಿ, ತೀರ್ಥಯಾತ್ರೆ ಮಾಡಿ ವಿವಿಧ ದಾನಗಳನ್ನು ಮಾಡಿದನು, ಪವಿತ್ರನಾದನು. [೨]ಮತ್ತೆ ಹಿಂದಿನ ಜನ್ಮದ ಆಶ್ರಮಕ್ಕೆ ಹೋಗಿ ಬಹಳ ತಪಸ್ಸನ್ನು ಮಾಡಿ, ಸಿದ್ಧಿಪಡೆದು ಆಶ್ರಮದವರಿಗೆ ಸಮ್ಮತನಾದ.

'ಧರ್ಮರಾಜನೇ! ಹೀಗೆ ಆ ಋಷಿ ವರ್ಣನಿಂದ ಅಧಮನಾದ ಶೂದ್ರನಿಗೆ ಉಪದೇಶಿಸಿ, ಸಂಕಷ್ಟಕ್ಕೆ ಸಿಲುಕಿದ. ಆದ್ದರಿಂದ ವರ್ಣಹೀನರಿಗೆ ಉಪದೇಶ ಮಾಡಬಾರದು. ರಾಜನೂ ಸಹ ತನ್ನ ರಾಜ್ಯದಲ್ಲಿ ಬ್ರಾಹ್ಮಣರು ವರ್ಣಾಧಮರಿಗೆ ಉಪದೇಶಿಸದಂತೆ ನೋಡಿಕೊಳ್ಳಬೇಕು. ಬ್ರಾಹ್ಮಣನು ದ್ವಿಜರಿಗೆ(ಬ್ರಾಹ್ಮಣ, ಕ್ಷತ್ರಿಯ, ವೈಶ್ಯರಿಗೆ ಮಾತ್ರ) ಉಪದೇಶಿಸಬೇಕು, ಆಗ ದೋಷ ಆಗದು. ಇದು ತುಂಬಾ ಸೂಕ್ಷ್ಮ. ಧರ್ಮದ ದಾರಿಯೂ ಸೂಕ್ಷ್ಮ. ವಿವೇಕರಹಿತರು ಅರಿಯರು. ಆದ್ದರಿಂದ ಋಷಿಗಳು ಅಯೋಗ್ಯರಿಗೆ ಉಪದೇಶ ಮಾಡುವ ಪ್ರಸಂಗ ಬಂದೀತೆಂಬ ಭಯದಿಂದ ಮೌನಿಗಳಾಗಿರುತ್ತಾರೆ. ಎಂತಹ ಧಾರ್ಮಿಕರಿಗೂ ಇಂತಹ ದುಷ್ಟೋಪದೇಶದಿಂದ ಪಾಪ ಬರದಿರದು. ಆದ್ದರಿಂದ ಧರ್ಮ ಬಯಸುವವನು ಸತ್ಯಾನೃತಗಳಿಂದ ಕೂಡಿದ ಉಪದೇಶ ಉಪದೇಶಕನನ್ನೇ ನಾಶ ಮಾಡುತ್ತದೆ. ಉಪದೇಶದಿಂದ ತನಗೆ ಧರ್ಮಸಾಧನೆಯಾದರೆ, ಮಾತ್ರ ಉಪದೇಶಿಸಬೇಕು. ಆದ್ದರಿಂದ ಸಾರ್ವಜನಿಕೋಪದೇಶ ಕ್ಲೇಶಕ್ಕೆ ಕಾರಣವಾಗುವುದರಿಂದ ಎಚ್ಚರಿಕೆಯಿಂದ ವಿಮರ್ಶಿಸಿ ಉಪದೇಶ ಕೈಕೊಳ್ಳಬೇಕು[೩].

---

೧ ತತೋ ವಿಸೃಷ್ಟೋ ರಾಜ್ಞಾತು ವಿಪ್ರೋ ದಾನಾನ್ಯನೇಕಶಃ ।
ಬ್ರಾಹ್ಮಣೇಭ್ಯೋ ದದೌ ವಿತ್ತಂ ಭೂಮಿಂ ಗ್ರಾಮಾಂಶ್ಚ ಸರ್ವಶಃ ॥ - ೨೭/೫೬

೨ ದತ್ವಾ ಗಾಶ್ಚೈವ ಸರ್ವೇಭ್ಯಃ ಪೂತಾತ್ಮಾಽಭವದಾತ್ಮವಾನ್ ।
ತಮೇವ ಚಾಶ್ರಮಂ ಗತ್ವಾ ಚಚಾರ ವಿಪುಲಂ ತಪಃ ॥ - ೨೭/೫೮
ತತಃ ಸಿದ್ಧಿಂ ಪರಾಂ ಪ್ರಾಪ್ತೋ ............................ । - ೨೭/೫೯

೩ ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಸ್ತ್ರಯೋ ವರ್ಣಾ ದ್ವಿಜಾ ತಯಃ ।
ಏತೇಷು ಕಥಯನ್ ರಾಜನ್ ಬ್ರಾಹ್ಮಣೋ ನ ಪ್ರದುಷ್ಯತಿ ॥ - ೨೭/೬೩
ನ ಪ್ರವಕ್ತವ್ಯಮಿಹ ಹಿ ಕಿಂಚಿತ್ ವರ್ಣಾವರೇ ಜನೇ ॥ - ೨೭/೬೨
ಸೂಕ್ಷ್ಮಾ ಗತಿರ್ಹಿ ಧರ್ಮಸ್ಯ ದುರ್ಜ್ಞೇಯಾ ಹ್ಯಕೃತಾತ್ಮಭಿಃ । - ೨೭/೬೪
ತಸ್ಮಾತ್ ಮೌನಾನಿ ಮುನಯೋ ದೀಕ್ಷಾಂ ಕುರ್ವಂತಿ ಚಾದೃತಾಃ ।
ದುರುಕ್ತಸ್ಯ ಭಯಾದ್ರಾಜನ್ ನಾನುಭಾಷಂತಿ ಕಿಂಚನ - ೨೭/೬೫
ಧಾರ್ಮಿಕಾ ಗುಣಸಂಪನ್ನಾಃ ಸತ್ಯಾರ್ಜವಪರಾಯಣಾಃ ।
ದುರುಕ್ತವಾಚಾಽಭಿಹತಾಃ ಪ್ರಾಪ್ನುವಂತೀಹ ದುಷ್ಕೃತಮ್ ॥ - ೨೭/೬೬

## ಸಂದೇಶಗಳು- ವಿವರಣೆಗಳು

ಮೇಲಿನ ವಿವರಣೆಗಳಲ್ಲಿ ಬಂದಿವೆ :

೧. ಅತಿಮುಖ್ಯ ಸಂದೇಶ ಅನಧಿಕಾರಿಗಳಿಗೆ ಶಾಸ್ತ್ರೋಪದೇಶ ಮಾಡಬಾರದು.

೨. ತಪಸ್ವಿ ಋಷಿಯು ಶೂದ್ರಮುನಿಗೆ ಉಪದೇಶ ಮಾಡಿದ್ದರಿಂದ ಮುಂದಿನ ಜನ್ಮದಲ್ಲಿ ಉಪದೇಶ ತೆಗೆದುಕೊಂಡವನಿಗೇ ಅಧೀನವಾಗಿರಬೇಕಾದ ಶೋಚನೀಯ ಪ್ರಸಂಗ ಬಂತು. ಹೀನಾಯವಾಗಿರಬೇಕಾಯಿತು. ರಾಜನು ಪುರೋಹಿತನನ್ನು ನೋಡಿ ಉದ್ದೇಶಪೂರ್ವಕವಾಗಿ ಅಲ್ಲದಿದ್ದರೂ, ನಗುತ್ತಿದ್ದರೂ, ಆ ಪುರೋಹಿತನು ಬಂದ ಸಿಟ್ಟನು ತಡೆದು ತಾಳ್ಮೆಯಿಂದ ಕಾರಣ ತಿಳಿದುಕೊಂಡು ವರ್ತಿಸಿದ್ದು ಅನುಕರಣೀಯ. ಅಂತಹ ಪ್ರಸಂಗದ ತಾಳ್ಮೆ ಆತನ ಉನ್ನತಿಗೆ ಕಾರಣವಾಯಿತು.

೩. ರಾಜನಾದರೂ ಪುರೋಹಿತನ ಪುನರುನ್ನತಿಗೆ ಸಹಾಯ ಮಾಡಿದ. ಪುರೋಹಿತನು ವಿವಿಧ ದಾನ ಮಾಡಿ ಉದ್ಧಾರನಾಗಲು ರಾಜನ ಸಹಾಯ ಸ್ಮರಣೀಯ. ಅದಕ್ಕೆ ಕಾರಣ ಆತನೂ ಹಿಂದಿನ ಜನ್ಮದಲ್ಲಿ ತಪಸ್ವಿ ಋಷಿಯಿಂದ ಉಪಕೃತನಾಗಿದ್ದ.

ಇತ್ಯಾದಿ...

# ೧೩೯. ವತ್ಸನಾಭೋಪಾಖ್ಯಾನ

ಧರ್ಮರಾಜನು ಭೀಷ್ಮರನ್ನು ಕುರಿತು –

'ತಾತ! ಭ್ರಾಂತಿಗೆ ಈಡಾಗಿ ತಂದೆ, ತಾಯಿ, ಗುರುಗಳನ್ನು ಅಗೌರಿಸುವ ಕೃತಘ್ನರಿಗೆ ಇರುವ ಪ್ರಾಯಶ್ಚಿತ್ತವನ್ನು ತಿಳಿಸು ಮತ್ತು ನಿರ್ಲಜ್ಜರಾಗಿ ವರ್ತಿಸುವ ಬೇರೆ ರೀತಿಯ ಕೃತಘ್ನರಿಗೂ ಯಾವ ಗತಿಯನ್ನು ಹೇಳಲಾಗಿದೆ' ಎಂದು ತಿಳಿಸೆಂದನು. ಇದಕ್ಕೆ ಭೀಷ್ಮರು 'ಕೃತಘ್ನರಿಗೆ ಶಾಶ್ವತವಾದ ನರಕವೇ ಗತಿ. ತಂದೆ, ತಾಯಿ, ಗುರುಗಳ ಆದೇಶ ಉಲ್ಲಂಘಿಸುವವರು ಮರಗಿಡಗಳಾಗಿ, ಕ್ರಿಮಿಕೀಟ, ಇರುವೆ ಮೊದಲಾದ ಜೀವಿಗಳಾಗಿ ಜನಿಸುವರು'[೧] ಎಂದು ಭೀಷ್ಮರು ಹೇಳುತ್ತಾ 'ಇಂತಹವರು ಮತ್ತೇ ಮನುಷ್ಯರಾಗಿ ಹುಟ್ಟುವುದು ದುರ್ಲಭವೆಂದು ಹೇಳಿ ಇದರ ಹಿನ್ನೆಲೆಯುಳ್ಳ ಒಂದು ಇತಿಹಾಸವನ್ನು ವರ್ಣಿಸಿದರು.

ವತ್ಸನಾಭನೆಂಬ ಮಹಾಜ್ಞಾನಿಯೂ, ಮಹರ್ಷಿಯೂ, ವ್ರತನಿಷ್ಠನೂ, ಭಾರಿ ತಪಸ್ಸನ್ನೂ ಮಾಡುತ್ತಿರಲು, ಆತನ ಸುತ್ತಲೂ ಒಂದು ಹುತ್ತ ಬೆಳೆಯಿತು. ಆಗ ಇಂದ್ರದೇವರು ಋಷಿಯ ಮೇಲೆ ೭ ದಿನಗಳ ಕಾಲ ಗುಡುಗು–ಮಿಂಚುಗಳಿಂದ ಕೂಡಿದ ಮಳೆ ಸುರಿಸಿದ. ಆ ಋಷಿಯು ಮಳೆಯಲ್ಲಿಯೇ ತಪಸ್ಸನ್ನು ಮುಂದುವರೆಸಿದ. ಮಳೆಗೆ ಆ ಹುತ್ತ ಕರಗಿತು. ಸಿಡಿಲೊಂದು ವಲ್ಮೀಕಕ್ಕೆ ಬಡಿಯಿತು. ಇದನ್ನು ನೋಡಿದ ಯಮಧರ್ಮ ಋಷಿಯ ಮೇಲಿನ ಕರುಣೆಯಿಂದ ಒಂದು ದೊಡ್ಡ ಎಮ್ಮೆಯ ವೇಷ ತಾಳಿ ಋಷಿಯ ಮೇಲೆ ನಿಂತನು (ಎಮ್ಮೆಯ ನಾಲ್ಕೂ ಕಾಲುಗಳ ಮಧ್ಯೆ ವಲ್ಮೀಕವಿರುವಂತಾಯ್ತು) ಮಳೆಯಬಾಧೆ ತಪಸ್ವಿಗೆ ಆಗಲಿಲ್ಲ. ಆತನು ತಪಸ್ಸನ್ನು ಮುಂದುವರೆಸಿದ, ಮಳೆ ನಿಂತಿತು. ಆ ಮಹಿಷ(ಎಮ್ಮೆ) ಮೆಲ್ಲಗೆ ದೂರ ಹೋಗಿ ನಿಂತಿತು. ತಪಸ್ವಿ ಎದ್ದ, ನೋಡಿದ. ಕಣ್ಣು ಹಾಯಿಸಿದೆಡೆ ಎಲ್ಲೆಡೆ ನೀರೋ ನೀರು. ಭೂಮಿ ಎಲ್ಲ ಜಲಮಯ. ವತ್ಸನಾಭನಿಗೆ ಆನಂದವಾಯಿತು.

ತನ್ನನ್ನು ಈ ಮಳೆಯಿಂದ ರಕ್ಷಿಸಿದವರು ಯಾರು? ಎಂದು ಚಿಂತಿಸಿದ. ದೂರದಲ್ಲಿ ಎಮ್ಮೆ ಕಂಡಿತು. ಅದೇ ತನ್ನನ್ನು ರಕ್ಷಿಸಿರಬೇಕೆಂದು ಭಾವಿಸಿದ. ಪ್ರಾಣಿಯೋನಿಯಾದರೂ ಕೂಡಾ

---

೧ ಕೃತಘ್ನಾನಾಂ ಗತಿಸ್ತಾತ ನರಕೇ ಶಾಶ್ವತೀಃ ಸಮಾಃ।
ಮಾತಾಪಿತೃಗುರೂಣಾಂ ಚ ಯೇ ನ ತಿಷ್ಠಂತಿ ಶಾಸನೇ।
ಕ್ರಿಮಿಕೀಟಪಿಪೀಲೇಷು ಜಾಯಂತೇ ಸ್ಥಾವರೇಷು ಚ॥ – ೨೯/೩

ತನ್ನನ್ನು ರಕ್ಷಿಸಿದ ಆದರ ಬುದ್ಧಿಗೆ ಮಾರು ಹೋದ. ಮಾರನೇ ಕ್ಷಣವೇ 'ಈ ಎಮ್ಮೆ ಎಂತಹ ದಷ್ಟಪುಷ್ಟವಾಗಿದೆ. ಕಲ್ಲುಬಂಡೆಯಾಗಿದೆ. ಮೈತುಂಬಾ ಮಾಂಸ ತುಂಬಿಕೊಂಡಿದೆ. ಇದು ಆಹಾರವಾಗಬಹುದು ಎಂದು ಯೋಚಿಸಿದ.

ಆದರೆ ಮತ್ತೆ ಆ ಋಷಿಗೆ ಧರ್ಮಬುದ್ಧಿ ಬಂದು ಎಂತಹ ದುರ್ವಿಚಾರ ಮಾಡಿದೆನಲ್ಲ, ನನ್ನನ್ನು ಮಳೆಯಿಂದ ರಕ್ಷಿಸಿದ ಪ್ರಾಣಿಗೆ ವಿಶ್ವಾಸಘಾತಕನಾದೆನಲ್ಲ, ಹೀಗೆ ನನ್ನಂಥ ಕೃತಘ್ನನಿಗೆ ಪ್ರಾಣಾಂತವೇ ಪ್ರಾಯಶ್ಚಿತ್ತ. ತಂದೆ ತಾಯಿಯರನ್ನು ಪೋಷಿಸದ, ಗುರುದಕ್ಷಿಣೆ ಕೊಡದ ಶಿಷ್ಯನಿಗೂ ಮರಣವೇ ಪ್ರಾಯಶ್ಚಿತ್ತವೆಂದು ನಿರ್ಧರಿಸಿ[೧] ತನ್ನ ಅಪರಾಧದ ಮಾರ್ಜನಕ್ಕಾಗಿ ಮೇರುಪರ್ವತದ ಶಿಖರವೇರಿ ಅಲ್ಲಿಂದ ನೆಲಕ್ಕೆ ಬೀಳಲು ಹೋದಾಗ ಯಮಧರ್ಮದೇವರು ಬಂದು ತಡೆದರು.

'ನಿನ್ನ ನಿಸ್ಸಂಗ, ತ್ಯಾಗ, ಅಪರಾಧಪ್ರಜ್ಞೆಗೆ ಮೆಚ್ಚಿದ್ದೇನೆ. ಧರ್ಮಿಷ್ಠನಾದವನು ತಾನು ಮಾಡಿದ, ಮಾಡದಿದ್ದ ಎಲ್ಲ ಕಾರ್ಯಗಳನ್ನು ಆತ್ಮವಿಮರ್ಶೆ ಮಾಡಿಕೊಳ್ಳುತ್ತಾನೆ. ಹಾಗೆ ನೀನು ದೋಷ ಇಲ್ಲದವ. ಶಕ್ತಿಯಿದ್ದಷ್ಟು ಧರ್ಮಾಚರಣೆ ಮಾಡುತ್ತೀಯಾ. ನೀನು ಪವಿತ್ರಾತ್ಮ ಹಿಂದಿರುಗು, ಮರಣಕ್ಕೆ ಎರವಾಗಬೇಡ. ದೇಹವಿರುವುದು ಸಾಧನೆಗೆ'[೨] ಎಂದರು ಯಮದೇವರು.

## ಸಂದೇಶಗಳು-ವಿವರಣೆಗಳು

೧. ತಪ್ಪು ಮಾಡುವುದು ಸಹಜ. ಆದರೆ ತನ್ನ ತಪ್ಪು-ಒಪ್ಪುಗಳ ಆತ್ಮವಿಶ್ಲೇಷಣೆ ಅತಿ ಮುಖ್ಯ. ವಿವೇಕದ ನಡೆ ಸನ್ಮಾರ್ಗಕ್ಕೆ ದಾರಿ ತೋರಿಸುತ್ತದೆ.

೨. ತಪ್ಪಿಗೆ ಸರಿಯಾಗಿ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಲು ಸಿದ್ಧನಾಗಿರಬೇಕು.

೩. ವತ್ಸನಾಭನ ಆತ್ಮನಿವೇದನೆ ವಿಶ್ಲೇಷಣೆಯ ಮಾತುಗಳು ಅನುಕರಣೀಯ.

೪. ನಾವು ಸರಿಯಿದ್ದರೆ ದೇವತೆಗಳು ಸಹಾಯ ಮಾಡುತ್ತಾರೆ. ಮಾರ್ಗದರ್ಶನ ಮಾಡುತ್ತಾರೆ.

---

೧ ಕೃತಘ್ನಾ ನರಕಂ ಯಾಂತಿ ಯೇ ಚ ವಿಶ್ವಸ್ತಘಾತಿನಃ।
ನಿಷ್ಕೃತಿಂ ನೈವ ಪಶ್ಯಾಮಿ ಕೃತಘ್ನಾನಾಂ ಕಥಂಚನ॥
ಋತೇ ಪ್ರಾಣಪರಿತ್ಯಾಗಾತ್ ಧರ್ಮಜ್ಞಾನಾಂ ವಚೋ ಯಥಾ॥
ತಸ್ಮಾತ್ಪ್ರಾಣಾನ್ ಪರಿತ್ಯಕ್ಷೇ ಪ್ರಾಯಶ್ಚಿತ್ತಾರ್ಥಮಿತ್ಯುತ॥ - ೨೯/೧೮,೨೦

೨ ಏವಂ ಧರ್ಮಭೃತಃ ಸರ್ವೇ ವಿಮೃಶಂತಿ ಕೃತಾಕೃತಮ್।
ನ ಕಶ್ಚಿತ್ ವತ್ಸನಾಭಸ್ಯ ಯಸ್ಯ ನೋಪಹತಂ ಮನಃ॥
ನಿವರ್ತಸ್ವ ಮಹಾಪ್ರಾಜ್ಞ ಪೂತಾತ್ಮಾ ಹ್ಯಸಿ ಶಾಶ್ವತಃ॥ - ೨೯/೨೪,೨೫

೫. ತಪಸ್ಸನ್ನು ಪರೀಕ್ಷಿಸಲು ದೇವತೆಗಳು ವಿಘ್ನ ಒಡ್ಡುತ್ತಾರೆ. ಇಲ್ಲಿ ಇಂದ್ರದೇವರು ವತ್ಸನಾಭನ ತಪಸ್ಸಿಗೆ ಮಳೆ ಬರಿಸಿ ತಡೆ ಒಡ್ಡಿದರು. ಆದರೆ ದೇವರು ಧರ್ಮದೇವತೆಗೆ ಪ್ರೇರೇಪಣೆ ಮಾಡಿ ತಪಸ್ಸಿಗೆ ವಿಘ್ನವಾಗದಂತೆ ಸಹಾಯ ಮಾಡಿದರು. ಆದರೆ ಪ್ರಾಯಃ ವಿಘ್ನ ಹಾಗೂ ವಿಘ್ನ ನಿವಾರಣೆಗಳು ಜೊತೆ ಜೊತೆಗೆ ನಡೆಯುತ್ತದೆ ಎಂದು ತೋರುತ್ತದೆ.

**ನ ದೇವಾ ಯಷ್ಟಿಮಾದಾಯ ರಕ್ಷಂತಿ ಪಶುಪಾಲವತ್ ।**
**ಯಂ ತು ರಕ್ಷಿತುಮಿಚ್ಛಂತಿ ಬುಧ್ಯಾ ಸಂಯೋಜಯಂತಿ ತಮ್ ॥ -ಮನುಸ್ಮೃತಿ**

೬. ಅಂತೂ ನಾವು ಮಾಡಿದ ಧರ್ಮಾಧರ್ಮಗಳ ನಿರ್ಣಾಯಕ ವ್ಯಕ್ತಿಗಳು ಧರ್ಮದೇವತೆಯೇ ಹೊರತು ನಾವಲ್ಲ.

೭. ವತ್ಸನಾಭ ಋಷಿಯು ಎಮ್ಮೆಯ ಮಾಂಸವನ್ನು ಆಹಾರವಾಗಿ ಬಯಸಿದ್ದೇ ಕೃತಘ್ನತೆಗೆ ಕಾರಣವಾಗಿ ನೋಡಲಾದುದು, ಅದಕ್ಕೆ ಪರಿಹಾರವನ್ನೂ ನೋಡಿದ್ದೇವೆ.

ಆದರೆ ಅಂತಹ ಮಾಂಸಾಹಾರದ ಬಯಕೆಯೇ ನಿಷಿದ್ಧವಲ್ಲವೇ ಬ್ರಾಹ್ಮಣನಿಗೆ ಎಂಬ ಪ್ರಶ್ನೆಯು ಉದ್ಭವಿಸುತ್ತದೆ. ಇದಕ್ಕೆ ಉತ್ತರವಾಗಲೀ, ವಿವರಣೆಯಾಗಲೀ ಕಷ್ಟಸಾಧ್ಯವೆನಿಸುತ್ತದೆ. ಕಾರಣ ಬ್ರಾಹ್ಮಣರು ಮಾಂಸಾಹಾರಿಗಳೇ ಅಲ್ಲ, ಅದರಲ್ಲೂ ಎಮ್ಮೆಯ ಮಾಂಸವನ್ನು ಅದು ಹೇಗೆ ತಾನೇ ಬಯಸಿದ ಈ ವತ್ಸನಾಭ ಎನ್ನುವ ಜಿಜ್ಞಾಸೆಗೆ ಉತ್ತರ ಕೊಡುವುದು ಅಷ್ಟು ಸುಲಭವಲ್ಲ.

ಈ ಉಪಾಖ್ಯಾನವೇ ಪ್ರಕ್ಷಿಪ್ತವೆಂದು ಹೇಳುವ ಔತ್ತರೇಯ ಪಾಠಕ್ಕೆ ಈ ಪ್ರಶ್ನೆಯೇ ಉದ್ಭವಿಸದು. ಈ ಉಪಾಖ್ಯಾನವನ್ನು ಒಪ್ಪಿರುವ ವೈಷ್ಣವಪಾಠ(ಉಡುಪಿ) ಹಾಗೂ ಟಿ. ಆರ್. ಕೃಷ್ಣಾಚಾರ್ಯರ ಪಾಠಗಳಲ್ಲಿ ಈ ಸಂಶಯ ಬರುತ್ತದೆ. ಅಥವಾ ಸಂಶಯ ಬರುವ ಶ್ಲೋಕದ ಸಾಧುತ್ವವನ್ನಾದರೂ ಅಥವಾ ಅದಕ್ಕೆ ಅರ್ಥಾಂತರದ ಸಾಧ್ಯತೆ ಬಗ್ಗೆ ಚಿಂತಿಸಬೇಕಾಗುತ್ತದೆ (ಪೀವರಶ್ಚೈವ ಬಲ್ಯಶ್ಚ ಬಹುಮಾಂಸೋ ಭವೇದಯಮ್ । ಎಂಬ ಶ್ಲೋಕಾರ್ಥದ ಅನುವಾದದ ಬಗ್ಗೆ).

ಈ ಶ್ಲೋಕಕ್ಕೆ ಲಕ್ಷಾಲಂಕಾರ ವ್ಯಾಖ್ಯಾನವಿಲ್ಲ. ಈ ಉಪಾಖ್ಯಾನದಲ್ಲಿ ಶ್ಲೋಕ ೯ರಲ್ಲಿ ಧರ್ಮಸ್ತು ಎಂಬ ಶಬ್ದಕ್ಕೆ ಯಮ ಎಂಬ ವ್ಯಾಖ್ಯಾನದ ಹೊರತಾಗಿ ಬೇರಾವ ಶಬ್ದಗಳಿಗೆ ವ್ಯಾಖ್ಯಾನವಿಲ್ಲ(ಪು. ೧೧೮, ಅನುಶಾಸನಪರ್ವ, ಪ್ರಥಮಭಾಗ, ಸಂಪುಟ – ೨೧).

*****

# ೧೪೦. ಭಂಗಾಶ್ವನೋಪಾಖ್ಯಾನ

ಭೀಷ್ಮರನ್ನು ಕುರಿತು ಧರ್ಮರಾಜನು 'ಸ್ತ್ರೀಪುರುಷರು ಪರಸ್ಪರ ಬೆರೆತಾಗ (ಮಿಲನವಾದಾಗ) ಯಾರಿಗೆ ಹೆಚ್ಚಿನ ಸುಖವಾಗುತ್ತದೆ' ಎಂಬ ಪ್ರಶ್ನೆಗೆ ಭೀಷ್ಮರು ಭಂಗಾಶ್ವ(ಸ್ವ)ನ ಹಾಗೂ ಇಂದ್ರನಿಗೆ ಉಂಟಾದ ವೈರವನ್ನು ತಿಳಿಸುವ ಒಂದು ಇತಿಹಾಸವನ್ನು ನಿರೂಪಿಸಿದರು.

ಹಿಂದೆ ಭಂಗಾಶ್ವನನೆಂಬ ಮಹಾಧಾರ್ಮಿಕನಾದ ರಾಜರ್ಷಿಯು ಪುತ್ರರಿಲ್ಲದೆ ಇದ್ದುದರಿಂದ ಪುತ್ರಾರ್ಥಿಯಾಗಿ ಇಂದ್ರನ ದ್ವೇಷಕ್ಕೆ ಕಾರಣವಾದ (ಇಂದ್ರ ಇಚ್ಛಿಸದ) ಅಗ್ನಿಷ್ಟೋಮ (ಅಗ್ನಿಷ್ಟುತ್) ಎಂಬ ಯಾಗವನ್ನು ಮಾಡಿ ನೂರು ಪುತ್ರರನ್ನು ಪಡೆದನು. ಈ ಯಾಗವು ಮನುಷ್ಯರಿಗೆ ಪ್ರಾಯಶ್ಚಿತ್ತಾರ್ಥವಾಗಿಯೂ ಹಾಗೂ ಪುತ್ರರನ್ನು ಬಯಸುವವರಿಗೆ ಹೇಳಲ್ಪಟ್ಟದ್ದಾಗಿದೆ[1].

ಇದನ್ನು ಗಮನಿಸಿದ ಇಂದ್ರನು ರಾಜನ ಬಗ್ಗೆ ಕೋಪದಿಂದ ಕೂಡಿದನು. ವ್ರತನಿಷ್ಠನಾದ ರಾಜನ ಬಗ್ಗೆ ದೋಷ ಹುಡುಕಲಾರಂಭಿಸಿದನು (ದೋಷ ಹುಡುಕಿ ಅವನನ್ನು ನಿಗ್ರಹಿಸಲು, ತೊಂದರೆ ಕೊಡಲು). ಕೆಲವು ಕಾಲ ಕಳೆಯಿತು. ಒಮ್ಮೆ ರಾಜನು ಬೇಟೆಯಾಡಲು ಅರಣ್ಯದಲ್ಲಿ ಸಂಚರಿಸುತ್ತಿರಲು ಇಂದ್ರನು ರಾಜನಿಗೆ ಮೋಹ, ಬುದ್ಧಿಭ್ರಮೆಯುಂಟಾಗುವಂತೆ ಮಾಡಿದನು[2]. ಪರಿಣಾಮವಾಗಿ ರಾಜನು ಒಂದೇ ಅಶ್ವದಿಂದ ಕೂಡಿದವನಾಗಿ ದಿಕ್ಕು ತಪ್ಪಿ ತಿರುಗುತ್ತಾ ಹಸಿವೆ, ನೀರಡಿಕೆಗಳಿಗೆ ತುತ್ತಾದ, ಓಡಾಡಿ ಓಡಾಡಿ ಶ್ರಮ ಬೇರೆ. ಆಗ ಒಂದೆಡೆ ಸುಂದರ ಸರೋವರ ನೋಡಿ, ಅದರಲ್ಲಿಳಿದು ತನ್ನ ಕುದುರೆಗೆ ನೀರು ಕುಡಿಸಿ ಒಂದು ಮರಕ್ಕೆ ಕಟ್ಟಿ ಹಾಕಿ ತಾನೂ ಸ್ನಾನ ಮಾಡಿ ಸ್ತ್ರೀಯಾಗಿ ಬಿಟ್ಟನು (ಪುರುಷಶರೀರವನ್ನೇ ಕಳೆದುಕೊಂಡು).

---

೧ ಅಗ್ನಿಷ್ಟುನ್ನಾಮ ರಾಜರ್ಷಿರಿಂದ್ರದ್ವಿಷ್ಟಂ ಮಹಾಬಲಃ।
ಅಪುತ್ರಃ ಸ ನರವ್ಯಾಘ್ರ ಪುತ್ರಾರ್ಥಂ ಯಜ್ಞಮಾಹರತ್ ॥
ಪ್ರಾಯಶ್ಚಿತ್ತೇಷು ಮರ್ತ್ಯಾನಾಂ ಪುತ್ರಕಾಮಸ್ಯ ಚೇಷ್ಯತೇ।

೨ ಕಸ್ಯಚಿತ್ತ್ವಥ ಕಾಲಸ್ಯ ಮೃಗಯಾಮಟತೋ ನೃಪ।
ಏಕಾಶ್ವೇನ ಚ ರಾಜರ್ಷಿರ್ಭ್ರಾಂತ ಇಂದ್ರೇಣ ಮೋಹಿತಃ॥
ಅಥ ಪೀತೋದಕಂ ಸೋಽಶ್ವಂ ವೃಕ್ಷೇ ಬಧ್ವಾ ನೃಪೋತ್ತಮಃ।
ಅವಗಾಹ್ಯ ತತಃ ಸ್ನಾತೋ ರಾಜಾ ಸ್ತ್ರೀತ್ವಮವಾಪ ಹ॥ - ೩೦/೩-೯

ಪುರುಷನಾದ ತಾನು ಸ್ತ್ರೀಯಾದುದನ್ನು ನೋಡಿಕೊಂಡು ಲಜ್ಜೆಯಿಂದ ಕೂಡಿದನವಾಗಿ 'ನಾನು ಈಗ ಹೇಗೆ ಅಶ್ವವನ್ನು ಏರಲಿ? ರಾಜಧಾನಿಗೆ ಹೋಗಿ ರಾಣಿಯರಿಗೆ, ಪುತ್ರರಿಗೆ, ಪ್ರಜೆಗಳಿಗೆ ಏನು ಹೇಳಲಿ? ಎಂದು ಬಹುಚಿಂತಿಸಿ, ಯೋಚಿಸಿದ. ತನ್ನ ಸ್ತ್ರೀಯರು ಸ್ವಾಭಾವಿಕವಾಗಿ ಮೃದುಸ್ವಭಾವದವರು, ತೆಳು ಶರೀರಿಗಳು, ಚಂಚಲೆಯರು, ನನಗೇಕೇ ಹೀಗಾಯಿತು? ಯಾವುದೋ ಕಾರಣವಿರಬೇಕು, ಎಂದು ಯೋಚಿಸಿ, ಬೇಸದಿಂದಲೇ ಕುದುರೆ ಏರಿ ರಾಜಧಾನಿಗೆ ಹೋದ. ಅವನನ್ನು ನೋಡಿದ ಪತ್ನಿಯರು, ಪುತ್ರರು, ಪ್ರಜೆಗಳೆಲ್ಲ ಆಶ್ಚರ್ಯ ಚಕಿತರಾದರು. ಅನಿವಾರ್ಯವಾಗಿ ತಾನೇ ನಡೆದುದೆಲ್ಲವನ್ನೂ ಹೇಳಿಕೊಂಡ ನನಗಿನ್ನೂ ಪತ್ನೀ, ಪುತ್ರ, ಐಶ್ವರ್ಯಗಳಲ್ಲಿ ತೃಪ್ತಿಯಾಗಿಲ್ಲ, ಆದರೆ, ದೈವವಶಾತ್ ನಾನು ಸ್ತ್ರೀಯಾಗಿಬಿಟ್ಟಿದ್ದೇನೆ. ನಾನು ಹೇಗೆ ರಾಜ್ಯವಾಳಲಿ, ಆದ್ದರಿಂದ ಮಕ್ಕಳೇ ನೀವು ರಾಜ್ಯವನ್ನು ಸೌಹಾರ್ದದಿಂದ ಭೋಗಿಸಿ, ನಾನು ಅರಣ್ಯಕ್ಕೆ ಹೋಗುತ್ತೇನೆ[೧]' ಎಂದು ಹೇಳಿ ನೂರು ಪುತ್ರರಿಗೆ ಪಟ್ಟಾಭಿಷೇಕ ಮಾಡಿ ಅರಣ್ಯಕ್ಕೆ ತೆರಳಿದನು.

ನಂತರ ರಾಜನು (ಸ್ತ್ರೀಯಾದ) ವನಕ್ಕೆ ಬಂದು ಅಲ್ಲಿ ಒಬ್ಬ ತಪಸ್ವಿಯೊಡನೆ ವಾಸಿಸುತ್ತಿದ್ದಾಗ, ಆತನಿಂದ ಈಕೆ ನೂರು ಪುತ್ರರನ್ನು ಪಡೆದಳು. ಈ ನೂರು ಪುತ್ರರನ್ನು ಕರೆದುಕೊಂಡು ತನ್ನ ಮೊದಲ ನೂರು ಪುತ್ರರೊಡನೆ ಕೂಡಿ ಬಾಳಲು, ಸೋದರರಂತೆ ರಾಜ್ಯವನ್ನು ಭೋಗಿಸಲು ಹೇಳಿದಳು. ಅದರಂತೆ ಅವರು (೨೦೦ ಜನ ಪುತ್ರರು) ಒಟ್ಟಿಗೆ ರಾಜ್ಯವಾಳುತ್ತಾ ಸುಖವಾಗಿದ್ದರು.

ಇದನ್ನೆಲ್ಲ ನೋಡಿದ ಇಂದ್ರನು ನಾನು ಈ ರಾಜನಿಗೆ ಸ್ತ್ರೀತ್ವ ಬರುವಂತೆ ಮಾಡಿದ್ದು ಮತ್ತಷ್ಟು ಅನುಕೂಲವಾಯಿತಲ್ಲ ಎಂದು ಚಿಂತಿಸಿ[೨], ಆ ರಾಜಕುಮಾರರ ಬಳಿಗೆ ಬ್ರಾಹ್ಮಣವೇಷದಲ್ಲಿ ಹೋಗಿ ಅವರಲ್ಲಿ ಪರಸ್ಪರ ಕಲಹ ಉಂಟುಮಾಡಿದನು[೩]. ಅವರನ್ನು ಕುರಿತು ಇಂದ್ರ ಹೀಗೆ

---

೧ ಅಥೋವಾಚ ಸ ರಾಜರ್ಷಿ ................
ತತ್ರಾವಗಾಢಃ ಸ್ತ್ರೀಭೂತೋ ವ್ಯಕ್ತಂ ದೈವಾನ್ನ ಸಂಶಯಃ।
ಅತೃಪ್ತ ಇವ ಪುತ್ರಾಣಾಂ ದಾರಾಣಾಂ ಚ ಧನಸ್ಯ ಚ।
ಉವಾಚ ಪುತ್ರಾಂಶ್ಚ.........................
ಸಂಪ್ರೀತ್ಯಾ ಭುಜ್ಯತಾಂ ರಾಜ್ಯಂ ವನಂ ಯಾಸ್ಯಾಮಿ ಪುತ್ರಕಾಃ।
ಸಪುತ್ರಾಣಾಂ ಶತಂ ರಾಜಾ ಅಭಿಷಿಚ್ಯ ವನಂ ಗತಃ॥ - ೩೦/೧೭-೨೦

೨ ತಾನ್ ದೃಷ್ಟ್ವಾ ಭ್ರಾತೃಭಾವೇನ ಭುಂಜಾನಾನ್ ರಾಜ್ಯಮುತ್ತಮಮ್।
ಚಿಂತಯಾಮಾಸ ದೇವೇಂದ್ರೋ ಮನ್ಯುನಾಽಭಪರಿಪ್ಲುತಃ॥
ಉಪಕಾರೋಽಸ್ಯ ರಾಜರ್ಷೇಃ ಕೃತೋ ನಾಪಕೃತಂ ಮಯಾ॥ - ೩೦/೨೪

೩ ತತೋ ಬ್ರಾಹ್ಮಣವೇಷೇಣ ದೇವರಾಜಃ ಶತಕ್ರತುಃ।
ಭೇದಯಾಮಾಸ ತಾನ್ ಗತ್ವಾ ನಗರಂ ವೈ ನೃಪಾತ್ಮಜಾನ್॥
........................

ಹೇಳಿದ ಭಂಗಾಶ್ವನ ಪುತ್ರರಿಗೆ – 'ನೀವು ರಾಜಪುತ್ರರು, ನಿಮ್ಮೊಡನೆ ಇರುವ ಉಳಿದವರು ತಾಪಸನ ಪುತ್ರರು. ನಿಮ್ಮ ತಂದೆಯಿಂದ ಬಂದ ರಾಜ್ಯವನ್ನು ಈಗ ಬಂದು ಋಷಿಪುತ್ರರು ಭೋಗಿಸುತ್ತಿದ್ದಾರೆ. ಇದು ನ್ಯಾಯವೇ? ಒಬ್ಬ ತಂದೆಯ ಮಕ್ಕಳಾದ ದೇವದೈತ್ಯರು ರಾಜ್ಯದ ಸಲುವಾಗಿ ಹೊಡೆದಾಡುತ್ತಾರೆ. ನೀವು ತಾಪಸನಪುತ್ರರಿಗೆ ರಾಜ್ಯ ಏಕೆ ಕೊಡುವಿರಿ?' ಎಂದು ಅವರಲ್ಲಿ ಭೇದ ನೀತಿಯನ್ನು ಬಿತ್ತಿದ ಪರಿಣಾಮವಾಗಿ ಅವರಲ್ಲಿ ಒಡಕು ಹುಟ್ಟಿತು. ಪರಸ್ಪರ ಯುದ್ಧ ಮಾಡಿ ಹತರಾದರು. ಇಂದ್ರನಿಗೆ ಸಂತೋಷವಾಯಿತು ತನ್ನ ಭೇದನೀತಿ ಸಫಲವಾದುದಕ್ಕೆ. ವಿಷಯ ತಿಳಿದ ರಾಜ(ನು) (ಸ್ತ್ರೀಯು ತಾಪಸಪತ್ನಿ) ದುಃಖದಿಂದ ರೋದಿಸಿದಳು.

ಇಂದ್ರನು ಬ್ರಾಹ್ಮಣವೇಷದಿಂದ ಬಂದು ತಾಪಸಿಯು ಅಳುವುದರ ಕಾರಣ ಕೇಳಿದನು. ತಾಪಸಿಯು ತನ್ನ ಮಕ್ಕಳು ಕಾಲದಿಂದ ನಾಶವಾದುದನ್ನು ದುಃಖದಿಂದ ಹೇಳಿದಳು. ಅಲ್ಲಿಗೆ ಹಿಂದೆ ತಾನು ರಾಜನಾಗಿದ್ದುದನ್ನು, ತನಗಿದ್ದ ನೂರು ಪುತ್ರರ ಬಗ್ಗೆ, ಸ್ತ್ರೀಯಾದ ಬಗ್ಗೆ, ನಂತರ ತಾಪಸನಿಂದ ಪಡೆದ ನೂರು ಮಕ್ಕಳು ಹೀಗೆ ತನ್ನ ಎಲ್ಲ ಹಿಂದಿನ ಕಥೆಯನ್ನು ಹೇಳಿದಳು ಬ್ರಾಹ್ಮಣನಿಗೆ. ಅದನ್ನು ಕೇಳಿದ ಬ್ರಾಹ್ಮಣನು ಆ ತಾಪಸಿಗೆ ತುಂಬಾ ಕಠೋರವಾಗಿ 'ಎಲೈ ದುರ್ಮತಿಯೇ! ನೀನು ಹಿಂದೆ ನನ್ನನ್ನು ಧಿಕ್ಕರಿಸಿ ಅನಾದರದಿಂದ ನನ್ನ ದ್ವೇಷಕ್ಕೆ ವಿಷಯವಾದ ಯಾಗ ಮಾಡಿ ನನಗೆ ದುಃಖ ಉಂಟುಮಾಡಿದ್ದರಿಂದ ನಾನು ಆ ವೈರಕ್ಕೆ ಪ್ರತೀಕಾರವನ್ನು ಹೀಗೆ ಮಾಡಿದೆ. ನಾನೇ ಇಂದ್ರ.'[೧]

ಈ ಮಾತನ್ನು ಕೇಳಿದ ಕೂಡಲೇ ತಾಪಸಿಯು ಇಂದ್ರನ ಕಾಲಿಗೆ ಬಿದ್ದು ನಮಸ್ಕರಿಸಿ[೨] 'ಎಲೈ ದೇವಶ್ರೇಷ್ಠನೇ! ನನ್ನ ಮೇಲೆ ಪ್ರಸನ್ನನಾಗು. ಸಂತಾನಾಪೇಕ್ಷಿಯಾಗಿ ನಾನು ಆ ಯಾಗ ಮಾಡಿದೆ. ನನ್ನ ಅಪರಾಧ ಕ್ಷಮಿಸು' ಎಂದು ಬೇಡಿಕೊಂಡಳು.

ಇಂದ್ರನು ಆಕೆಯ ಈ ಪ್ರಣಾಮದಿಂದ ಸಂತೋಷಗೊಂಡು 'ರಾಜನ್! ನೀನು ಸ್ತ್ರೀಯಾಗಿದ್ದಾಗ ಜನಿಸಿದ ಪುತ್ರರನ್ನು ಬದುಕಿಸಬೇಕೋ ಅಥವಾ ಪುರುಷನಾಗಿದ್ದಾಗ

---

ಭ್ರಾತೃಣಾಂ ನಾಸ್ತಿ ಸೌಭ್ರಾತ್ರಂ ಯೇಽಪ್ಯೇಕಸ್ಯ ಪಿತುಃ ಸುತಾಃ।
ರಾಜ್ಯಹೇತೋರ್ವಿವದಿತಾಃ ಕಾಶ್ಯಪಸ್ಯ ಸುರಾಸುರಾಃ॥
ಇಂದ್ರೇಣ ಭೇದಿತಾಸ್ತೇ ತು ಯುದ್ಧೇಽನ್ಯೋನ್ಯಮಪಾತಯನ್।
ತಚ್ಛ್ರುತ್ವಾ ತಾಪಸೀ ಚಾಪಿ ಸಂತಪ್ತಾ ಪ್ರರುರೋದ ಹ॥ – ೩೦/೨೫–೨೮

೧ ಇಂದ್ರದ್ವಿಷ್ಟೇನ ಯಜತಾ ಮಾಮನಾದೃತ್ಯ ದುರ್ಮತೇ।
ಇಂದ್ರೋಽಹಮಸ್ಮಿ ದುರ್ಬುದ್ಧೇ ವೈರಂ ತೇ ಯಾಪಿತಂ ಮಯಾ॥ – ೩೦/೩೬

೨ ಇಂದ್ರಂ ತು ದೃಷ್ಟ್ವಾ ರಾಜರ್ಷಿ ಪಾದಯೋಃ ಶಿರಸಾ ಗತಃ।
ಪ್ರಸೀದ ತ್ರಿದಶಶ್ರೇಷ್ಠ ಪುತ್ರಕಾಮೇನ ಸ ಕ್ರತುಃ।
ಇಷ್ಟಸ್ತ್ರಿದಶಶಾರ್ದೂಲ ತತ್ರ ಮೇ ಕ್ಷಂತುಮರ್ಹತಿ॥ – ೩೦/೩೭

ಜನಿಸಿದ ಪುತ್ರರನ್ನು ಬದುಕಿಸಬೇಕೋ' ಎಂದು ಕೇಳಿದನು. ಆಗ ತಾಪಸಿಯು ಕೈಮುಗಿದು 'ನಾನು ಸ್ತ್ರೀಯಾಗಿದ್ದಾಗ ಜನಿಸಿದ ಮಕ್ಕಳನ್ನೇ ಬದುಕಿಸು' ಎಂದು ಹೇಳಿದಳು. ಇಂದ್ರನಿಗೆ ಆಶ್ಚರ್ಯವಾಗಿ 'ಅಲ್ಲ! ನೀನು ಪುರುಷನಾಗಿದ್ದಾಗ ಜನಿಸಿದ ಪುತ್ರರು ನಿನಗೆ ಬೇಡವೇ? ಅವರು ದ್ವೇಷಕ್ಕೆ ಹೇಗೆ ಪಾತ್ರರಾಗುತ್ತಾರೆ' ಎಂದು ಮರುಪ್ರಶ್ನೆ ಮಾಡಲು, ತಾಪಸಿಯು 'ಸ್ತ್ರೀಗೆ ಪುತ್ರರಲ್ಲಿ ಹೆಚ್ಚು ಸ್ನೇಹ, ಪುರುಷರಿಗೆ ಅಷ್ಟು ಇರದು. ಆದ್ದರಿಂದ ಸ್ತ್ರೀಯಾಗಿದ್ದಾಗಿನ ಪುತ್ರರನ್ನೇ ಬದುಕಿಸು' ಎಂದಳು.

ಇಂದ್ರನಿಗೆ ಸಂತೋಷವಾಗಿ 'ನಿನ್ನ ಎಲ್ಲ ಪುತ್ರರೂ ಬದುಕಲಿ' ಎಂದ. ಅಲ್ಲದೆ 'ನೀನು ಬಯಸುವ ಮತ್ತೊಂದು ವರ ಕೊಡುವೆ. ನೀನು (ಮತ್ತೆ) ನನ್ನಿಂದ ಪುರುಷತ್ವ ಬಯಸುವೆಯೋ ಅಥವಾ ಸ್ತ್ರೀತ್ವ ಬಯಸುವೆಯೋ' ಎಂದನು. ಅದಕ್ಕೆ ಆಕೆಯು 'ಸ್ತ್ರೀತ್ವವನ್ನೇ ಬೇಡುತ್ತೇನೆ' ಎಂದಳು[೧].

ಆಗ ಶಕ್ರನು 'ಎಲೈ ವಿಭುವೇ! ಪುರುಷತ್ವವನ್ನು ಬಿಟ್ಟು ಸ್ತ್ರೀತ್ವವನ್ನು ಏಕೆ ಬಯಸುತ್ತಿಯಾ' ಎಂದು ಕೇಳಿದಾಗ, ತಾಪಸಿಯು (ರಾಜನು) 'ಸ್ತ್ರೀಪುರುಷರ ಮಿಲನವಾದಾಗ ಸ್ತ್ರೀಗೆ ಹೆಚ್ಚಿನ ಸುಖ ಉಂಟಾಗುತ್ತದೆ. ಆದ್ದರಿಂದ ನಾನು ಸ್ತ್ರೀತ್ವವನ್ನೇ ಯಾಚಿಸುತ್ತೇನೆ'[೨] ಎಂದಳು. 'ಇದರಲ್ಲಿಯೇ ನಾನು ಹೆಚ್ಚಿನ ಸುಖ ಪಡೆಯುತ್ತೇನೆ' ಎಂದು ಹೇಳಿ, ಇಂದ್ರನಿಗೆ ನೀನು ಹೋಗಬಹುದೆಂದಳು.

ಅಂತೆಯೇ ಇಂದ್ರನು ಹಾಗೆಯೇ ಆಗಲಿ ಎಂದು ಹೇಳಿ ಸ್ವರ್ಗಕ್ಕೆ ಹೋದನು.

'ನೋಡು ಧರ್ಮರಾಜ! ಹೀಗೆ ಸ್ತ್ರೀಗೇ ಸಿಗುವ ಸುಖವು ಪುರುಷರಿಗಿಂತ ಹೆಚ್ಚಿರುತ್ತದೆ' ಎಂದು ಭೀಷ್ಮರು ಹೇಳಿದರು.

## ಸಂದೇಶಗಳು

೧. ವೇದೋಕ್ತ ಯಜ್ಞಗಳು ಸರ್ವಾಭೀಷ್ಟಪ್ರದಗಳು. ಸಂತಾನಾದಿಗಳಿಗೂ ವಿಶಿಷ್ಟಯಾಗವಿದೆ. ಅದುವೇ ಅಗ್ನಿಷ್ಟುತ್ (ಅಗ್ನಿಷ್ಟೋಮ). ಆದರೆ ಇದು ಇಂದ್ರನು

---

೧ ಸರ್ವ ಏವೇ ಹ ಜೀವಂತು ಪುತ್ರಾಸ್ತೇ ಸತ್ಯವಾದಿನಿ।
ವರಂ ಚ ವೃಣು ರಾಜೇಂದ್ರ ಯಂ ತ್ವಂ ಇಚ್ಛಸಿ ಸುವ್ರತ।
ಪುರುಷತ್ವಮಥ ಸ್ತ್ರೀತ್ವಂ ಮತ್ತೋ ಯದಭಿಕಾಂಕ್ಷ್ಯಸೇ।
ಸ್ತ್ರೀತ್ವಮೇವ ವೃಣೇ ಶಕ್ರ ................ ॥ - ೩೦/೪೩-೪೬

೨ ಸ್ತ್ರಿಯಾಃ ಪುರುಷಸಂಯೋಗೇ ಪ್ರೀತಿರಭ್ಯಧಿಕಾ ಸದಾ।
ರಮೇ ಚೈವಾಧಿಕಂ ಸ್ತ್ರೀತ್ವೇ ಸತ್ಯಂ ವೈ ದೇವಸತ್ತಮ।
ಸ್ತ್ರೀಭಾವೇನ ಹಿ ತುಷ್ಯಾಮಿ........................ ॥ - ೩೦/೪೭,೪೮

ಇಚ್ಛಿಸುವುದಿಲ್ಲ. ಅಲ್ಲಿ ಇಂದ್ರನಿಗೆ ಆದರವಿಲ್ಲವೆಂದು ಇಂದ್ರನೇ ಹೇಳುತ್ತಾನೆ. ಈ ಬಗ್ಗೆ ಯಾಜ್ಞಿಕ ಪ್ರಕ್ರಿಯೆಗಳ ಚಿಂತನೆ ಅವಶ್ಯ. ಅದೇಕೆ ಇಂದ್ರವಿರೋಧಿಯಾಗುತ್ತೆ? ಎಂಬ ಬಗ್ಗೆ.

೨. ರಾಜನು ಕೇವಲ ಸಂತಾನಕ್ಕಾಗಿ ಆ ಯಾಗ ಮಾಡಿ ಸಂತಾನಪಡೆದರೂ ಆತನ ದೋಷವಿಲ್ಲವೆಂದು ತೋರಿದರೂ ಇಂದ್ರನು ಆತನ ಮೇಲೆ ಸೇಡು ತೀರಿಸಿಕೊಂಡದ್ದು ಅರ್ಥವಾಗದು. ಈ ಬಗ್ಗೆ ಚಿಂತನೆ ಅವಶ್ಯ.

೩. ರಾಜನು ಸ್ತ್ರೀಯಾದುದು ಆತನಿಗೆ ಮುಜುಗರಕ್ಕೆ ಕಾರಣವಾದುದು ಸಹಜವೇ. ಹೀಗಾಗಿ ಲಜ್ಜೆ ಪಟ್ಟುಕೊಂಡೇ ರಾಜ್ಯಕ್ಕೆ ಹೋಗಿ ಉತ್ತರಾಧಿಕಾರಿಗಳಾಗಿ ತನ್ನ ನೂರು ಮಕ್ಕಳನ್ನು ನಿಯೋಜಿಸುತ್ತಾನೆ. ಮುಂದೆ ಸಾಧನೆಗೋಸ್ಕರ ವನಕ್ಕೆ ಹೋದರೂ ಒಬ್ಬ ತಪಸ್ವಿಗೆ ಪತ್ನಿಯಾಗಿ ಆತನಿಂದ೧೦೦ ಪುತ್ರರನ್ನುಪಡೆದು ಸಂತೋಷವಾಗಿರುತ್ತಾನೆ. ಅವರನ್ನುತನ್ನಹಿಂದಿನ ರಾಜ್ಯದ ರಾಜಭೋಗಕ್ಕೆ ವ್ಯವಸ್ಥೆ ಮಾಡಿ ಕರ್ತವ್ಯ ಪೂರೈಸುತ್ತಾನೆ. ಆದ್ದರಿಂದ ಮಕ್ಕಳನ್ನು ಹೆರುವುದು ಎಷ್ಟುಮುಖ್ಯವೋ ಅಷ್ಟೇ ಮುಖ್ಯ, ಅವರ ಮುಂದಿನ ಯೋಗಕ್ಷೇಮ ನೋಡಿಕೊಂಡಿದ್ದು. ಈ ಬಗ್ಗೆ ಈ ಮಕ್ಕಳ ತಂದೆ ತಪಸ್ವಿಯ ಬಗ್ಗೆ ಭಾರತ ಏನೂ ಹೇಳುವುದಿಲ್ಲ.

೪. ಇಂದ್ರನು ಇಲ್ಲೂ ಈ ತಾಪಸಿಯ ಹಾಗೂ ಹಿಂದಿನ ರಾಜರ ಮಕ್ಕಳಿಗೆ ಭೇದನೀತಿಯಿಂದ ಅವರ ನಾಶಕ್ಕೆ ಒಡಕು ಹುಟ್ಟಿಸುತ್ತಾನೆ. ಅದನ್ನು ತಾನೇ ಹೇಳುತ್ತಾನೆ. ಅದಕ್ಕೂ ಕಾರಣ ತನ್ನ ವಿರುದ್ಧ ಮಾಡಿದ ಯಜ್ಞಎಂದೇ ಇಂದ್ರನ ಹೇಳಿಕೆ. ಆದ್ದರಿಂದ ದೇವತೆಗಳಿಗೆ ಪ್ರೀತಿಕರವಾದ ಯಜ್ಞವನ್ನೇ ಮಾಡಬೇಕು ಹೊರತು ಅವರನ್ನು ಬೇಸರಪಡಿಸುವಂತಹುದಲ್ಲ.

೫. ಆದರೆ ತಾಪಸಿಯ ಪ್ರಾಮಾಣಿಕ ಹೇಳಿಕೆಯಿಂದ ಇಂದ್ರ ಸಂತುಷ್ಟನಾಗಿ ಆಕೆಯ ಎಲ್ಲ ಮಕ್ಕಳನ್ನು ಬದುಕಿಸಿ, ಅನುಗ್ರಹಿಸುತ್ತಾನೆ. ಇದೇ ದೇವತೆಗಳು ಮಾಡುವ ಪರಮಾನುಗ್ರಹ. ಹಿಂದೆ ತಾನು ಕೊಟ್ಟ ಕಿರುಕುಳಕ್ಕೆ ಇಂದ್ರನಿಗೆ ಪಶ್ಚಾತ್ತಾಪವಾಯಿತೆಂದು ಭಾಸವಾಗುತ್ತದೆ. ಅಥವಾ ಇಲ್ಲೂ ದೇವತೆಗಳು ಮನುಷ್ಯರನ್ನು ಪರೀಕ್ಷೆ ಮಾಡಲು ಹೀಗೆ ಮಾಡಿದರೋ ಏನೋ?

೬. ತಾಪಸಿಗೂ ಪುರುಷತ್ವ ಕೊಡಲು ಇಂದ್ರ ಸಿದ್ಧವಿದ್ದರೂ ಆಕೆಯೇ ಸ್ತ್ರೀತ್ವವನ್ನೇ ಮುಂದುವರಿಸಲು ಇಚ್ಛಿಸಿದ್ದು ಕೇವಲ ಭೌತಿಕ ಆಸೆಗಾಗಿ. ಇದೊಂದು ನಿಸರ್ಗದ ನಿಯಮ ಪುರಷನು ತನ್ನ ಶಕ್ತಿಯನ್ನು ಸ್ತ್ರೀಯರಿಗೆ ಧಾರೆಯೆರೆಯುವುದರಿಂದ ಸಹಜವಾಗಿ ಅವರಿಗೆ ಸುಖ ಅಧಿಕ. ಪೌರುಷ ಕಳೆದುಕೊಳ್ಳುವ ಪುರುಷನಿಗೆ ಆಗುವ ಸುಖ ಸ್ವಾಭಾವಿಕವಾಗಿ ಕಡಿಮೆ ಎನ್ನುವುದೂ ನಿಸರ್ಗದ ನಿಯಮ.

೭. ರಾಜನು ಸ್ತ್ರೀಯಾಗಲು ಸರೋವರದ ಸ್ನಾನ ಕಾರಣವಾಯಿತು. ಅದು ಮಾಡಿದ್ದು ಇಂದ್ರದೇವ. ನಂತರ ಸ್ತ್ರೀಯಾದ ರಾಜನು ಮತ್ತೆ ಪುರುಷನಾಗಲು ಇಚ್ಛೆ ಪಡಲಿಲ್ಲ. ಇಲ್ಲಿಯ ತಾತ್ವಿಕ ಹಿನ್ನೆಲೆಯು ಜಿಜ್ಞಾಸೆಗೆ ಅರ್ಹವಾಗಿದೆ. ಪುರುಷನಿಗೆ ಸ್ತ್ರೀಯಾಗಲು ಕೆಲವು ಬಾರಿ

ಸಾಧ್ಯತೆ ಇದೆ. ಅದನ್ನೇ ಆಚಾರ್ಯರು ಶಿಖಂಡಿನೀ ಪ್ರಸಂಗದಲ್ಲಿ ನಿರ್ಣಯ ಕೊಟ್ಟಿದ್ದಾರೆ. ಅದು ಇಲ್ಲೂ ಅನ್ವಯವಾಗುತ್ತದೆ. .

**ಪುಂಸಾಂ ಸ್ತ್ರೀತ್ವಂ ಭವೇತ್ ಕ್ವಾಪಿ ತಥಾಪ್ಯಂತೇ ಪುಮಾನ್ ಭವೇತ್ ।**
**ಸ್ತ್ರೀಣಾಂ ನೈವ ಹಿ ಪುಂಸ್ತ್ವಂ ಸ್ಯಾತ್ ಬಲವತ್ಕಾರಣೈರಪಿ ॥**

**- ಮ.ತಾ.ನಿ.(೧೧/೧೧೨)**

ಇಲ್ಲಿ ರಾಜನು ಸ್ತ್ರೀಯಾಗುತ್ತಾನೆ. ನಂತರ ಮತ್ತೆ ಪುರುಷನಾಗಲು ಬಯಸಲಿಲ್ಲ. ಅದಕ್ಕೆ ರಾಜನು ಕೊಟ್ಟ ಕಾರಣ ಮೇಲೆ ಹೇಳಲಾಗಿದೆ. ಆ ಜನ್ಮದಲ್ಲಿ ಆತ ಸ್ತ್ರೀಯಾಗಿಯೇ ಇದ್ದನೆಂದು ತೋರುತ್ತದೆ. ಮತ್ತೆ ಆತನು ಮುಂದಿನ ಜನ್ಮದಲ್ಲಿಯಾದರೂ ಪುರುಷನಾಗಿಯೇ ಹುಟ್ಟಿದನೋ ಇಲ್ಲವೋ, ಇದು ಹೆಚ್ಚಿನ ಪ್ರಮಾಣಗಳ ಲಭ್ಯತೆ ಮೇಲೆ ಅವಲಂಬಿಸಿದೆ. ಅಂತೂ ಈ ವಿಷಯ ಚರ್ಚಾರ್ಹವಾಗಿದೆ.

*****

# ೧೪೧. ಅಷ್ಟಾವಕ್ರೋಪಾಖ್ಯಾನ

ಧರ್ಮರಾಜನು ಭೀಷ್ಮರಿಗೆ 'ಎಲೈ ಪಿತಾಮಹನೇ! ಸ್ತ್ರೀಯರ ವಿವಾಹಕಾಲದಲ್ಲಿ (ಪಾಣಿಗ್ರಹಣ) ಸ್ತ್ರೀಯರಿಗೆ 'ಸಹಧರ್ಮ'ದ ಬಗ್ಗೆ (ಪತಿಪತ್ನಿಯರು ಜೊತೆಯಾಗಿ ಧರ್ಮಾಚರಣೆ ಮಾಡಬೇಕೆಂಬ) ಹೇಳುತ್ತಾರಷ್ಟೆ? (ಸಹೋಭೌ ಚರತಾಂ ಧರ್ಮಂ); ೧. ಅದರ ಉದ್ದೇಶವೇನು? ಅದು ಹೇಗೆ?; ೨. ಈ ಆಚರಣೆಯು ಋಷಿಗಳ, ಪ್ರಜಾಪತಿಯ ಅಥವಾ ಅಸುರ ಪರಂಪರೆಯಿಂದ ಬಂದಿದೆಯೋ?; ೩. ಸಹಧರ್ಮ ಎಂಬುದು ವಿರುದ್ಧವಾದುದು. ಕಾರಣ ಇಲ್ಲಿರುವ ಆ ಸಹಧರ್ಮ ಮರಣಾನಂತರ ಇರದು. ಏಕೆಂದರೆ ದಂಪತಿಗಳಲ್ಲಿ ಒಬ್ಬರು ಮೊದಲು ಇನ್ನೊಬ್ಬರು ಆಮೇಲೆ ಮೃತ್ಯು ವಶರಾಗುತ್ತಾರೆ. ನಂತರ ಸಹಜವಾಗಿ ಅವರಲ್ಲಿ ಒಬ್ಬರು ಏಕಾಂಗಿಯಾಗಿ ಬಿಡುತ್ತಾರೆ. ಆದ್ದರಿಂದ ಸಹಧರ್ಮ ಹೇಗೆ ತಾನೆ ಉಳಿಯುತ್ತದೆ?; ೪. ಮನುಷ್ಯರು ನಾನಾ ಕರ್ಮಫಲ, ವಾಸನಾಗಳಿಂದ ಕೂಡಿದವರು, ಅನೇಕ ನರಕಗಳಾದವರು ಇರುತ್ತಾರೆ. ಸೂತ್ರಕಾರನು (ಧರ್ಮ) ಸ್ತ್ರೀಯರನ್ನು ಅನೃತರೆಂದು ನಿರ್ಧರಿಸಿದ್ದಾನೆ. ಹೀಗಿರುವಾಗ ಅಂತಹ ಸ್ತ್ರೀಯರೊಡನೆ ಸಹದರ್ಮ ಹೇಗೆ ಸಾಧ್ಯ? ವೇದಗಳಲ್ಲೂ ಸ್ತ್ರೀಯರು ಅನೃತರು ಎಂದು ಬರುತ್ತದೆ. ಹಾಗಾದರೆ ಈ ಸಹಧರ್ಮವೆಂಬ ದಾಂಪತ್ಯಕ್ಕೆ ಕೇವಲ ಔಪಚಾರಿಕವೇ?

ಆದ್ದರಿಂದ ತಾತ ಈ ಸಹಧರ್ಮವೆಂಬ ತತ್ತ್ವ ಯಾವಾಗಿನಿಂದ ಬಂತು? ಹೇಗೆ ಪ್ರವೃತ್ತವಾಯಿತು? ಅದರ ಸ್ವರೂಪವೇನು? ಈ ಬಗ್ಗೆ ನನಗೆ ಸಂಶಯ ಬರದಂತೆ ಸಮಗ್ರವಾಗಿ ತಿಳಿಸು?' ಎಂದನು. ಅದಕ್ಕೆ ಪಿತಾಮಹರು '**ಅಷ್ಟಾವಕ್ರ-ದಿಗ್ವನಿತೆ**' ಇವರ ಸಂವಾದ ರೂಪ ಇತಿಹಾಸವನ್ನು ನಿರೂಪಿಸಿದರು. ಅದರ ಸಾರ ಹೀಗಿದೆ.

ಹಿಂದೆ **ವದಾನ್ಯ** ಎಂಬ ಮಹಾತ್ಮನಾದ ಋಷಿಯ ಮಗಳಾದ ಸುಪ್ರಭಾ ಎಂಬ ಕನ್ಯೆಯನ್ನು ವಿವಾಹವಾಗ ಬಯಸಿ, **ಅಷ್ಟಾವಕ್ರ** ಎಂಬ ಮಹಾತಪಸ್ವಿಯು ವದಾನ್ಯರನ್ನು ಬೇಡಿದನು. ಆಕೆ ಆಗ ಭೂಲೋಕದಲ್ಲಿ ಅಪ್ರತಿಮ ಸುಂದರಿಯೂ, ಚಾರಿತ್ರ್ಯದಿಂದ ಸಾಧ್ವಿಯಾಗಿಯೂ ಇದ್ದಳು. ಈ ಅಷ್ಟಾವಕ್ರ ಋಷಿಯನ್ನು ನೋಡಿದೊಡನೆ ಅವನನ್ನು ತನ್ನ ರೂಪಾದಿಗಳಿಂದ ಆಕರ್ಷಿಸಿ ಮನಸ್ಸನ್ನು ಅಪಹರಿಸಿದಳು, ವಸಂತಋತುವಿನ ವನಸೌಂದರ್ಯದಂತೆ.

ವಿವಾಹವಾಗುವ ಪುರುಷನು (ವರನು) ಮೊದಲೇ ಮದುವೆಯಾಗಿರದ; ಪ್ರಾಜ್ಞನಾದ; ತುಂಬಾ ಸಂಚಾರ ಮಾಡುವ ಸ್ವಭಾವವಿರದ (ಹಾಗಾದರೆ ಪತ್ನಿಯೊಡನೆ ಸದಾ ಇರಲು ಅಸಾಧ್ಯವಷ್ಟೆ); ಸಂತೋಷದಾಯಕ ಮಾತುಗಳನ್ನಾಡುವ; ಸ್ಫುರದ್ರೂಪಿಯಾದ; ಕನ್ಯಾಸಮ್ಮತನಾದ; ಪ್ರಾರಬ್ಧಾಂತಗಾಮಿಯಾದ (ಹಿಡಿದ ಕೆಲಸ ಮುಗಿಸುವ ಛಾತಿ ಇರುವ); ಸನ್ನಡತೆಯ (ಶೀಲ); ಭೋಗಿಯಾದ (ಸುಖಪಡುವ ಗುಣ); ಬಾಹ್ಯಾಂತರಶುಚಿಯುಳ್ಳ; ಪತ್ನಿಯೊಡನೆ ಯಜ್ಞ ಮಾಡುವ; ತನ್ನ ಸೇವಕರಿಂದ ಹಾಗೂ ಬಂಧುಗಳಿಂದ ಕೂಡಿದವನು. ಒಳ್ಳೆಯ ನಕ್ಷತ್ರದಲ್ಲಿ (ಶುಭಮುಹೂರ್ತ) ಮದುವೆ ಮಾಡಿಕೊಳ್ಳಬೇಕು. ಅಂತಹವನೇ ಇಹಪರಗಳಲ್ಲಿ ಸುಖಿಯಾಗಿರುತ್ತಾನೆ (ಹೀಗೆ ವರನ ಗುಣಗಳನ್ನು ಬಯಸಿದ). ಋಷಿಯು (ವದಾನ್ಯನು) ಅಷ್ಟಾವಕ್ರನಿಗೆ ನನ್ನ ಮಗಳನ್ನು ನಿನಗೆ ಕೊಡಬೇಕು. ಹಾಗಾದರೆ ನೀನು ಪವಿತ್ರವಾದ ಉತ್ತರ ದಿಕ್ಕಿಗೆ ಹೋಗು, ಅಲ್ಲಿ ನೋಡುವೆ ಎಂದನು. ಅಷ್ಟಾವಕ್ರನು ಅಲ್ಲಿ ಯಾರನ್ನು (ಏನನ್ನು) ನೋಡಬೇಕೆಂದು ಹೇಳು ಎಂದಾಗ ವದಾನ್ಯನು –

'[೧]ನೀನು ಕುಬೇರನ ವಾಸಸ್ಥಾನ, ನಂತರ ಹಿಮವತ್ಪರ್ವತ, ಆಮೇಲೆ ಕೈಲಾಸಪರ್ವತವನ್ನು ಅತಿಕ್ರಮಿಸಿ, ಮುಂದೆ ನೀಲವರ್ಣದ ಅರಣ್ಯ ಪ್ರದೇಶವನ್ನು ನೋಡುವೆ. ಅಲ್ಲಿರುವ ತಪಸ್ವಿನಿಯಾದ, ಮಹಾಭಾಗ್ಯಶಾಲಿಯಾದ ವೃದ್ಧಳಾದ ದೀಕ್ಷಾಬದ್ಧಳಾದ, ವೃದ್ಧ ಸ್ತ್ರೀಯನ್ನು ನೀನು ಪ್ರಯತ್ನಪೂರ್ವಕವಾಗಿ ಪೂಜಿಸಬೇಕು. ಆಕೆಯನ್ನು ನೋಡಿ ನೀನು ಇಲ್ಲಿಗೆ ಹಿಂದಿರುಗಿದ ಮೇಲೆ ನನ್ನ ಮಗಳೊಡನೆ ಪಾಣಿಗ್ರಹಣ ಮಾಡುವೆ. ಈ [೨]ಷರತ್ತಿಗೆ ನೀನು ಒಪ್ಪಿದರೆ, ಅಲ್ಲಿಗೆ ಹೋಗಿ ದಿವ್ಯಸ್ತ್ರೀಯನ್ನು ನೋಡಿಕೊಂಡು ಬಾ' ಎಂದನು.

ಈ ಮಾತಿಗೆ ಒಪ್ಪಿದ ಅಷ್ಟಾವಕ್ರನು 'ನಿನ್ನ ವಚನವು ಸತ್ಯವಾಗಲಿ'[೩] **ಎಂದು ಹೊರಟನು.**

---

೧ ಶಿವನ ಆವಾಸಸ್ಥಾನ ಕೈಲಾಸದ ವರ್ಣನೆ ಇಲ್ಲಿ ವಿಶೇಷವಾಗಿ ಬಂದಿದೆ. ಕುಬೇರನ ವಾಸಸ್ಥಾನ ಅಲಕಾಪುರಿ, ನಂತರ ಹಿಮಾಲಯ ದಾಟಿದರೆ ಶಿವನ ಕೈಲಾಸಗಿರಿ ಬರುತ್ತದೆ. ಅದು ಸಿದ್ಧಚಾರಣ ಸೇವಿತವಾದುದು. ದಿವ್ಯಾಂಗರಾಗ ಭೂಷಿತರಾದ ಶಿವನ ಪಾರ್ಷದರಾದ ದ್ವಾರಪಾಲಕರಾದ ಪಿಶಾಚಿಗಳು ನರ್ತಿಸುತ್ತಾ ಇರುತ್ತಾರೆ. ಆತನ ಶುಭ ಪಾರ್ಷದರೂ ಅಲ್ಲಿರುತ್ತಾರೆ. ಇಲ್ಲಿಯೇ ಪಾರ್ವತಿಯು ಶಿವನನ್ನು ಪತಿಯಾಗಿ ಪಡೆಯಲು ತಪಸ್ಸು ಮಾಡಿದಳು. ಆದ್ದರಿಂದ ಇದು ಶಿವಪಾರ್ವತಿಯರಿಗೆ ತುಂಬಾ ಇಷ್ಟವಾದುದು. ಅಲ್ಲಿ ಋತುಗಳು, ಕಾಳರಾತ್ರಿ, ದಿವ್ಯಪುರುಷರು ಶಿವನನ್ನು ಉಪಾಸಿಸುತ್ತಾರೆ. (ಅ. ೪೨/೧೮-೨೭)

೨ ಇದನ್ನೇ ಕನ್ಯಾಶುಲ್ಕವೆಂದು ಹಿಂದೆ ಕರೆಯುತ್ತಿದ್ದರು. ಈ ಕನ್ಯಾಶುಲ್ಕ ಒಂದೇ ತೆರನಾಗಿರದೆ ವಿವಿಧ ರೀತಿಯಲ್ಲಿ ಪ್ರಚಲಿತವಾಗಿತ್ತು.

೩ ಯತ್ರ ತ್ವಂ ವದಸೇ ಸಾಧೋ ಭವಾನ್ ಭವತು ಸತ್ಯವಾಕ್ ।
'ವದಸೇ' ಎಂದು ಆತ್ಮನೇಪದ. ಇದು ವ್ಯಾಸಪ್ರಯೋಗ. ಆದರೆ ಪ್ರಚಲಿತವ್ಯಾಕರಣದಲ್ಲಿ ಇದು ಪರಸ್ಮೈಪದ (ವದಸಿ ಬದಲಾಗಿ ವದಸೇ ಆಗಿದೆ).

ನಂತರ ಅಷ್ಟಾವಕ್ರನು ಉತ್ತರದಿಕ್ಕಿಗೆ ಪಯಣಿಸಿ ಹಿಮಾಲಯ ಪರ್ವತಕ್ಕೆ ಹೋಗಿ ಅಲ್ಲಿಂದ ಪವಿತ್ರವಾದ 'ಬಾಹುದಾ' ನದಿಯನ್ನು ತಲುಪಿ, ನಂತರ ಅಶೋಕ ತೀರ್ಥಕ್ಕೆ ಹೋಗಿ, ಸ್ನಾನ, ದೇವತಾತರ್ಪಣಾದಿಗಳನ್ನು ಪೂರೈಸಿ ಅಲ್ಲಿಯೇ ಒಂದು ದರ್ಭಾಸನದ ಮೇಲೆ ಮಲಗಿ ರಾತ್ರಿ ಕಳೆದನು. ಬೆಳಿಗ್ಗೆ ಸ್ನಾನ, ಅಗ್ನಿಕಾರ್ಯ ಮಾಡಿ ಪಾರ್ವತೀತೀರ್ಥಕ್ಕೆ ಹೋಗಿ, ಅಲ್ಲಿ ವಿಶ್ರಾಂತಿ ತೆಗೆದುಕೊಂಡು, ಕೈಲಾಸಪರ್ವತದ ಕಡೆಗೆ ಪಯಣಿಸಿದನು. ನಂತರ ಮಂದಾಕಿನೀ ನದಿಯನ್ನು ದಾಟಿ ಕುಬೇರನಗರಕ್ಕೆ ಪ್ರವೇಶಿಸಲು ನಗರದ ರಕ್ಷಕರಾದ ಮಣಿಭದ್ರ ಮೊದಲಾದ ರಾಕ್ಷಸರು ಪೂಜಿಸಿದ ಮೇಲೆ ಕುಬೇರನಿಂದ ಸತ್ಕೃತನಾಗಿ, ಅವನ ಅರಮನೆಯಲ್ಲಿ ಒಂದು ವರ್ಷ ಕಳೆದನು. ಅಲ್ಲಿ ಉರ್ವಶೀ, ರಂಭಾ, ಘೃತಾಚೀ ಮೊದಲಾದ ಅಪ್ಸರೆಯರು ನರ್ತನ ಮಾಡುತ್ತಿದ್ದರು. ಗಂಧರ್ವರು ದಿವ್ಯಗಾನ ಮಾಡುತ್ತಿದ್ದರು. ವಿವಿಧ ವಾದ್ಯವೈಭವಗಳಿಂದ ಕುಬೇರನ ಆತಿಥ್ಯದಿಂದ ತೃಪ್ತನಾಗಿ ಅಷ್ಟಾವಕ್ರನು ಕುಬೇರನನ್ನು ಹರಸಿ, ಉತ್ತರಾಭಿಮುಖವಾಗಿ ಹೋಗುತ್ತಾ ಕೈಲಾಸಪರ್ವತವನ್ನು ನೋಡಿ, ನಮಿಸುತ್ತಾ ಆ ಪರ್ವತ ಪ್ರಾಂತದಲ್ಲಿ ಸಂಚರಿಸಿದನು. ಆ ಪರ್ವತವನ್ನು ೩ ಬಾರಿ ಪ್ರದಕ್ಷಿಣೆ ಮಾಡಿ, ಉತ್ತರಾಭಿಮುಖವಾಗಿ ಆ ಭೂಭಾಗದ ಮೈದಾನ ಪ್ರದೇಶಕ್ಕೆ ಹೊರಟನು.

ಅಲ್ಲಿಂದ ಮುಂದೆ ಪಯಣಿಸುತ್ತಾ ಸರ್ವಋತು ಫಲಪೂರ್ಣವಾದ ರಮಣೀಯವಾದ ವನವನ್ನು ದಾಟಿ ಮತ್ತೊಂದು ವನಕ್ಕೆ ಬಂದು ಅಲ್ಲಿ ದಿವ್ಯವಾದ ಒಂದು ಆಶ್ರಮವನ್ನು, ಅದರ ಸುತ್ತಲೂ ಇರುವ ರತ್ನಗಳಿಂದ ಅಲಂಕೃತವಾದ ಸುವರ್ಣಮಯವಾದ ಪರ್ವತವನ್ನು ಸರೋವರಗಳನ್ನೂ ನೋಡಿದನು. ಆ ವಾತಾವರಣ ಅಷ್ಟಾವಕ್ರನ ಮನಸ್ಸನ್ನು ಮುದಗೊಳಿಸಿತು. ಅಲ್ಲಿ ಕುಬೇರನ ಅರಮನೆಯನ್ನೂ ಮೀರಿಸುವ ಸರ್ವರತ್ನಮಯವಾದ ದಿವ್ಯ ಗೃಹವನ್ನು, ಅಲ್ಲಿ ಮನೋಹರವಾದ ಉಪ್ಪರಿಗೆಗಳನ್ನೂ, ಮಣಿಕಾಂಚನಪರ್ವತಗಳೂ, ರಮ್ಯವಾದ ವಿಮಾನಗಳೂ ಇದ್ದವು. ಅಲ್ಲಿ ಮಂದಾರಪುಷ್ಪಭರಿತವಾದ ಮಂದಾಕಿನೀ ನದಿ. ಸ್ವಯಂಪ್ರಭಾಮಣಿಗಳೂ, ವಜ್ರಖಚಿತ ಭೂಮಿಯೂ ಅಲಂಕೃತವಾಗಿತ್ತು. ಇವಲ್ಲದೆ ಅನೇಕ ದಿವ್ಯ ಮನೆಗಳಿದ್ದವು. [1]ಅಲ್ಲಿ ತಾನೆಲ್ಲಿ ವಾಸಮಾಡಬೇಕೆಂದು ಚಿಂತಿಸುತ್ತಾ ಅಷ್ಟಾವಕ್ರನು ಪ್ರಧಾನ ಗೃಹದ ದ್ವಾರಕ್ಕೆ ಬಂದು, ತಾನು ಅತಿಥಿ ಎಂದೂ ತನಗೆ ಒಳಗೆ ಅನುಮತಿ ಕೊಡಲು ಕೋರಿದನು.

ಆಗ ಆ ಮನೆಯೊಳಗಿಂದ ನಾನಾ ಮನೋಹರ ರೂಪಿಣಿಯರಾದ ಏಳು ಕನ್ಯೆಯರು ಬಂದಾಗ, ಅವರನ್ನು ನೋಡಿದ ಅಷ್ಟಾವಕ್ರನ ಮನಸ್ಸನ್ನು ಪ್ರತಿಯೊಬ್ಬರೂ ಸೆಳೆಯಲಾಗಿ ಆತನ ಮನಸ್ಸು ಚಂಚಲವಾಗಿ ಸೋತಿತು[2]. ಅವರು ಇವನನ್ನು ಒಳಗೆ ಕರೆದು ವೃದ್ಧಳಾದ,

---

೧ ಅಥ ದ್ವಾರಂ ಸಮಭಿತೋ ಗತ್ವಾ ಸ್ಥಿತ್ವಾ ತತೋಽಬ್ರವೀತ್ ।
ಅತಿಥಿಂ ಮಾಮನುಪ್ರಾಪ್ತಮನುಜಾನಂತು ಯೇಽತ್ರ ವೈ ॥ – ೪೩/೪೦

೨ ಅಥ ಕನ್ಯಾ ಪರಿವೃತಾ ಗೃಹಾತ್ ತಸ್ಮಾತ್ ವಿನಿಃಸೃತಾಃ ।

ಸರ್ವಾಭರಣಭೂಷಿತಳಾದ, ಶುದ್ಧವಸ್ತ್ರಧರಿಸಿದ, ಮಂಚದ ಮೇಲೆ ಕುಳಿತ ಸ್ತ್ರೀಯ ಬಳಿ ಕರೆದುಕೊಂಡು ಹೋದರು[೧]. 'ನಿನಗೆ ಮಂಗಳವಾಗಲಿ' ಎಂದ ಅಷ್ಟಾವಕ್ರನನ್ನು ಆ ವೃದ್ಧೆ ಆಸನ ನೀಡಿದಳು. ಅಷ್ಟಾವಕ್ರನು ಆ ಏಳು ಕನ್ಯೆಯರಲ್ಲಿ ಸ್ಪಷ್ಟ ಜ್ಞಾನವಿರುವ, ಪ್ರಶಾಂತಳಾದ ಒಬ್ಬಳು ಮಾತ್ರ ಇಲ್ಲಿರಲಿ, ಉಳಿದವರು ಹೋಗಲಿ ಎಂದಾಗ, ಅವರು ಬ್ರಾಹ್ಮಣನಿಗೆ ಪ್ರದಕ್ಷಿಣೆ ಹಾಕಿ, ನಮಸ್ಕರಿಸಿ ಹೊರಟರು.

ವೃದ್ಧೆ ಬ್ರಾಹ್ಮಣನನ್ನು ಶುಭ್ರವಾದ ಹಾಸಿಗೆಯಲ್ಲಿ ಕೂಡಿಸಿ, ಪೂಜಿಸಿದಳು (ಸತ್ಕರಿಸಿದಳು). ಬ್ರಾಹ್ಮಣನ ಅಣತಿಯಂತೆ ಆಕೆಯು ರಾತ್ರಿ ಮೀರುತ್ತಿದ್ದುದರಿಂದ ಬ್ರಾಹ್ಮಣನೊಂದಿಗೆ ಸಲ್ಲಾಪ ಮಾಡುತ್ತಾ ಮತ್ತೊಂದು ಹಾಸಿಗೆಯಲ್ಲಿ ಮಲಗಿದಳು. ಅವಳು ಅಲ್ಲಿ ನಡುಗುತ್ತಾ ಚಳಿಯ (ಶೀತ) ಕಾರಣದಿಂದ ಮಹರ್ಷಿಯ ಹಾಸಿಗೆಯನ್ನೇರಿದಳು. ಮಹರ್ಷಿಯು ಸ್ವಾಗತಿಸಿದ. ಆಕೆ ಮಹರ್ಷಿಯನ್ನು ತನ್ನ ಬಾಹುಗಳಿಂದ ಋಷಿಯನ್ನು ಆಲಿಂಗಿಸಿಕೊಂಡಳು. ಋಷಿಮಾತ್ರ ನಿರ್ವಿಕಾರನಾಗಿಯೇ ಇದ್ದ ಕಲ್ಲಿನಂತೆ, ಕಾಷ್ಠದಂತೆ. ಆ ವೃದ್ಧೆ ಹೇಳಿದಳು 'ಪೂಜ್ಯನೇ ಸ್ತ್ರೀಯರು ಪುರುಷರಷ್ಟು ಸ್ಥಿರಮತಿಗಳಲ್ಲ. ನಾನು ಕಾಮಾರ್ತಳಾಗಿದ್ದೇನೆ. ನನ್ನನ್ನು ಅಪ್ಪಿಕೋ. ಇದು ನಿನ್ನ ತಪಸ್ಸಿನ ಫಲ. ನಿನ್ನ ದರ್ಶನದಿಂದ ನಾನು ಅನುರಕ್ತಳಾಗಿದ್ದೇನೆ. ನನ್ನನ್ನು ಸ್ವೀಕರಿಸು' ಎಂದಳು. 'ನೀನು ನೋಡುತ್ತಿರುವ ಈ ಮನೆ, ಎಲ್ಲವೂ ನಿನ್ನದೇ. ನನಗೂ ನೀನೆ ಯಜಮಾನ, ನಿನ್ನ ಎಲ್ಲ ಇಚ್ಛೆಗಳನ್ನು ಪೂರೈಸುವೆ. ಈ ವನದಲ್ಲಿ ನನ್ನ ಜೊತೆ ವಿಹಾರ ಮಾಡು. ನಿನ್ನ ವಶಳಾಗಿದ್ದೇನೆ. ಮಾನುಷ ಹಾಗೂ ದಿವ್ಯ (ಅಮಾನುಷ) ಭೋಗಗಳನ್ನು ಭೋಗಿಸು'[೨] ಹೀಗೆಲ್ಲ ಆಕೆ ನುಡಿದಳು.

---

ನಾನಾ ರೂಪಾಃ ಸಪ್ತ..............................
ಯಾಂ ಯಾಮಪಶ್ಯತ್ ಕನ್ಯಾಂ ಸ ಸಾ ಸಾ ತಸ್ಯ ಮನೋಽಹರತ್ ।
ತತೋ ಧೃತಿಃ ಸಮುತ್ಪನ್ನಾ ತಸ್ಯ ವಿಪ್ರಸ್ಯ ಧೀಮತಃ।
ಸ ಚ ........... ಪ್ರವಿವೇಶ ಗೃಹಂ ದ್ವಿಜಃ॥
೧ ತತ್ರಾಪಶ್ಯಜ್ಜರಾಯುಕ್ತಾ.................................. ।
ವೃದ್ಧಾಂ ಪರ್ಯಂಕಮಾಸೀನಾಂ ಸರ್ವಾಭರಣಭೂಷಿತಾಮ್ ।
ಅಥ ತ್ವಾಂ ಸಂವಿಶನ್ ಪ್ರಾಹ ಶಯನೇ ಭಾಸ್ವರೇ ತದಾ ॥
ತ್ವಯಾಽಪಿ ಸುಪ್ಯತಾಂ ಭದ್ರೇ ರಜನೀ ಹ್ಯತಿವರ್ತತೇ।
೨ ಅಥ ಸಾ...... ಮಹರ್ಷೇರ್ವೈ ಶಯನಂ ವ್ಯವರೋಹತ।
ಸಾ ಜುಗೂಹ ಭುಜಾಭ್ಯಾಂ ತು ಋಷಿಂ....................... ।
ನಿರ್ವಿಕಾರಮೃಷಿಂ ಚಾಪಿ ಕಾಷ್ಠಕುಡ್ಯೋಪಮಂ ತದಾ।
ಉಪಗೂಹ ಚ ಮಾಂ ವಿಪ್ರ ಕಾಮಾರ್ತಾಽಹಂ ಭೃಶಂ ತ್ವಯಿ।
ಪ್ರಭುತ್ವಂ ತವ ಸರ್ವತ್ರ ಮಯಿ ಚೈವ ನ ಸಂಶಯಃ।
ತ್ವದ್ವಶಾಽಹಂ ಭವಿಷ್ಯಾಮಿ ರಂಸ್ಯಸೇ ಚ ಮಯಾ ಸಹ ॥
ಸರ್ವಾನ್ ಕಾಮಾನ್ ಉಪಾಶ್ನಾನೋ ಯೇ ದಿವ್ಯಾ ಯೇ ಚ ಮಾನುಷಾಃ॥ - ೪೩/೪೦-೬೧

ಈ ಮೋಹಕವಾದ ಮಾತುಗಳನ್ನು ಕೇಳಿದ ಅಷ್ಟಾವಕ್ರನು 'ಪರಪತ್ನಿಯನ್ನು ನಾನು ಭೋಗಿಸುವುದಿಲ್ಲ. ಅದು ಧರ್ಮಶಾಸ್ತ್ರದಿಂದ ನಿಷಿದ್ಧಕಾರ್ಯ. ನಾನು ಇನ್ನೂ ವಿವಾಹವಾಗಬೇಕಿದೆ. ನಾನು ವಿವಾಹಪೂರ್ವ ಸ್ತ್ರೀಸಂಗಕ್ಕೆ ಭಾರೀ ಪ್ರಾಯಶ್ಚಿತ್ತ ಹೇಳಲಾಗಿದೆ. ಆದ್ದರಿಂದ ನಾನು ಶುದ್ಧವಾಗಿರಲು ಅಪೇಕ್ಷಿಸುತ್ತೇನೆ. ಆದ್ದರಿಂದ ಶಾಂತಳಾಗು'[1](ನನ್ನಲ್ಲಿ ಅನುರಕ್ತಳಾಗಬೇಡ). ಬ್ರಾಹ್ಮಣನ ಮಾತನ್ನು ಕೇಳಿ ಆ ಸ್ತ್ರೀಯು 'ಸ್ತ್ರೀಯರು ರತಿಶೀಲರು. ಅವರಿಗೆ ಕಾಮದೇವನೇ ತುಂಬಾ ಇಷ್ಟತಮ. ಅವರಿಗೆ ವಾಯು, ಅಗ್ನಿ, ವರುಣ ಹೀಗೆ ಯಾವ ದೇವತೆಯೂ ಪ್ರಿಯರಲ್ಲ. ನೀನು ಸಂಯಮಿಯಾಗಿರು ಎನ್ನುತ್ತೀ. ಆದರೆ ಅಂತಹವರು ಸಾವಿರದಲ್ಲಿ ಒಬ್ಬರು. ಲಕ್ಷಕ್ಕೊಬ್ಬರು ಪತಿವ್ರತೆ ಸಿಕ್ಕಾಳು. ಸ್ತ್ರೀಯರು (ಕಾಮಿನೀ) ತಂದೆ, ತಾಯಿ, ಕುಲೀನರು, ಸಹೋದರರು, ಪತಿ, ಪುತ್ರರು, ಮೈದುನರು ಯಾರನ್ನೂ ಗಮನಿಸುವುದಿಲ್ಲ.

ನಂತರ ಅಷ್ಟಾವಕ್ರನು ಸ್ಥಿರಬುದ್ಧಿಯಿಂದ ಆಕೆಗೆ 'ನೀನು ಮನಸ್ಸಿಗೆ ಬಂದಂತೆ ಕುಳಿತುಕೋ. ನಾನೇನು ಮಾಡಲಿ' ಎಂದ. ಅದಕ್ಕೆ ಆಕೆ ಸದ್ಯದಲ್ಲಿ 'ಇಲ್ಲಿ ವಾಸ ಮಾಡು(ನಮ್ಮ ಮನೆಯಲ್ಲಿ) ನೀನು ಕೃತಕೃತ್ಯನಾಗುವೆ' ಎಂದಳು. ಋಷಿ ಒಪ್ಪಿದ. ಮುಪ್ಪಿನಿಂದ ಕೂಡಿದ ಆಕೆಯ ಬಗ್ಗೆ ಚಿಂತಿಸಿದ, ಸಂತಾಪ ಹೊಂದಿದ. ಆಕೆಯನ್ನು ನೋಡಿದ ಆತನಿಗೆ ಸಂತೋಷವಾಗಲಿಲ್ಲ ಆಕೆಯ ರೂಪವಿಕಾರದಿಂದಾಗಿ. ಅದಕ್ಕೆ ಕಾರಣ ತಿಳಿಯಲು ತಕ್ಷಣ ಯೋಗ್ಯವಲ್ಲವೆಂದು ಭಾವಿಸಿದ. ರಾತ್ರಿ ಹಾಗೆಯೇ ಕಳೆಯಿತು, ಬೆಳಗಾಯಿತು. ಆ ವನಿತೆ ಸಂಧ್ಯಾಕಾಲ ಜ್ಞಾಪಿಸಿದಳು. ಬ್ರಾಹ್ಮಣನು ಸ್ನಾನೋದಕ ತರಲು ಹೇಳಿದ ಸಂಧ್ಯೋಪಾಸನೆಗಾಗಿ (ಸ್ನಾನಾನಂತರ).

ಬ್ರಾಹ್ಮಣನ ಅಪೇಕ್ಷೆಯ ಮೇರೆಗೆ ದಿವ್ಯತೈಲ ಹಾಗೂ ಸ್ನಾನವಸ್ತ್ರಗಳನ್ನು ತಂದು, ಋಷಿಯ ಅನುಮತಿ ಪಡೆದು, ಆತನ ಎಲ್ಲ ಅಂಗಗಳಿಗೆ ತೈಲವನ್ನು ಹಚ್ಚಿ, ಸ್ನಾನ ಗೃಹಕ್ಕೆ ಕರೆತಂದು, ಭದ್ರಾಸನದ ಮೇಲೆ ಕೂಡಿಸಿ, ತನ್ನ ಸುಖಹಸ್ತಗಳಿಂದ ಸ್ನಾನ ಮಾಡಿಸಿದಳು. ನಂತರ ದಿವ್ಯ ಉಪಚಾರಗಳನ್ನು ಮಾಡಿದಳು. ನಂತರ ಉದಿಸಿದ ಸೂರ್ಯನನ್ನು ನೋಡಿದ ಋಷಿಯು ಸೂರ್ಯೋಪಾಸನೆ ಮಾಡಿದನು. ನಂತರ ಆಕೆಯು ಅಮೃತಸದೃಶ ಅನ್ನ ತಂದು ತಿನ್ನಲು ಕೊಟ್ಟಳು. ಅನ್ನದ ಬಹಳ ರುಚಿ ಆತನಿಗೆ ಹಿಡಿಸದೆ ಬಹಳ ಉಣ್ಣಲಿಲ್ಲ. ಹೀಗೆ ಹಗಲು ಹೋಗಿ ರಾತ್ರಿ ಬಂತು. ನಂತರ ಆ ಋಷಿಯನ್ನು ಮಲಗಲು ಒತ್ತಾಯಿಸಿದಳು. ಇಬ್ಬರಿಗೂ ಒಂದೇ ಶಯನವಿದ್ದುದನ್ನು ಗಮನಿಸಿದ ವಿಪ್ರನು 'ನಾನು ಪರಸ್ತ್ರೀಯರಲ್ಲಿ ಸ್ನೇಹ ಹೊಂದಿಲ್ಲ. ನೀನು ಬೇರೆ ಕಡೆ ಹೋಗಿ ವಿಶ್ರಮಿಸು'[2] ಎಂದ. ಆಗ ಆಕೆಯು 'ನಾನು ಸ್ವತಂತ್ರಳು, ನಿನಗೆ ಇದರಿಂದ

---

೧ ಪರದಾರಾನಹಂ ಭದ್ರೇ ನ ಗಚ್ಛೇಯಂ ಕಥಂಚನ।
ದೂಷಿತಂ ಧರ್ಮಶಾಸ್ತ್ರೇಷು ಪರದಾರಾಭಿಮರ್ಶನಮ್ ॥ - ೬೨

೨ ನ ಭದ್ರೇ ಪರದಾರೇಷು ಮನೋ ಮೇ ಸಂಪ್ರಸಜ್ಜತಿ ॥ - ೪೪/೧೦

ಪಾಪ ಬರದು'[೧] ಎಂದಳು. ಅಷ್ಟಾವಕ್ರನು ಆ ಮಾತಿಗೆ ಬ್ರಹ್ಮದೇವರ ಮಾತಿನಂತೆ 'ಸ್ತ್ರೀಯರು ಸ್ವತಂತ್ರರಲ್ಲ, ಅವರಿಗೆ ಸ್ವಾತಂತ್ರ್ಯವಿಲ್ಲ' ಎಂದನು. ಪುನಃ ಆ ಸ್ತ್ರೀ 'ನನಗೆ ಮೈಥುನದ ಆಸೆ (ನಿನ್ನೊಡನೆ ಸಮಾಗಮ) ಬಾಧಿಸುತ್ತಿದೆ. ನನ್ನ ಪ್ರೀತಿಯನ್ನು ನಿರಾಕರಿಸಿದರೆ ನಿನಗೆ ಪಾಪ ತಟ್ಟುತ್ತದೆ' ಎಂದಳು. ಅದಕ್ಕೆ ಅಷ್ಟಾವಕ್ರನು 'ಮನುಷ್ಯನು ಇಂದ್ರಿಯವಶನಾದರೆ ಅಧಃಪತನ ಶತಃಸಿದ್ಧ. ನಾನು ಧೈರ್ಯದಿಂದ ಇದ್ದೇನೆ. ನನ್ನನ್ನು ಒತ್ತಾಯಿಸಬೇಡ' ಎಂದ. ಆದರೆ, ಆಕೆ ಮತ್ತೇ 'ನಾನು ಶಿರಸಾ ನಮಿಸುತ್ತೇನೆ, ಅನುಗ್ರಹಿಸು. ಕಾಮತಪ್ತಳಾಗಿ ಬೀಳುತ್ತಿರುವ ನನಗೆ ಆಶ್ರಯ ನೀಡು. ನನ್ನನ್ನು ನಿನಗೆ ದಾಸಳನ್ನಾಗಿ ಮಾಡುವೆ. ಪಾಣಿಗ್ರಹಣ ಮಾಡು. ಆಗ ದೋಷ ಬರದು. ಪಾಪ ಬಂದರೆ ನನಗೇ ಬರಲಿ' ಎಂದಳು. ಅಷ್ಟಾವಕ್ರನು 'ನೀನು ಹೇಗೆ ತಾನೆ ಸ್ವತಂತ್ರಳು. ಪ್ರತಿಯೊಬ್ಬ ಸ್ತ್ರೀಗೂ ಕುಮಾರಾವಸ್ಥೆಯಲ್ಲಿ ತಂದೆಯೂ, ವಿವಾಹವಾದ ಮೇಲೆ ಪತಿಯೂ, ವಾರ್ಧಕ್ಯದಲ್ಲಿ ಪುತ್ರನೇ ರಕ್ಷಕನಾಗಿರುವಾಗ, ಸ್ತ್ರೀಯರಿಗೆ ಸ್ವಾತಂತ್ರ್ಯವೆಲ್ಲಿ? ವೃದ್ಧಳಾದ ನೀನು ರತಿಸಮರ್ಥಳಲ್ಲದಿರಬಹುದು. ಆದರೆ ನನಗೆ ನಿನ್ನಲ್ಲಿ ಆಸಕ್ತಿ ಇಲ್ಲ' ಎಂದನು.

ಅದಕ್ಕೆ ಆಕೆಯು ಮತ್ತೆ 'ನಾನು ಬಾಲ್ಯದಿಂದ ಬ್ರಹ್ಮಚಾರಿಯೇ ಇದ್ದೇನೆ. ನಾನಿನ್ನೂ ಕನ್ಯೆಯೇ. ಆದ್ದರಿಂದ ನನ್ನನ್ನು ಪತ್ನಿಯಾಗಿ ಸ್ವೀಕರಿಸು. ನನ್ನ ಆಸೆಯನ್ನು ಭಗ್ನಗೊಳಿಸಬೇಡ' ಎಂದಳು.

ಇದನ್ನು ಕೇಳಿದ ಅಷ್ಟಾವಕ್ರನು 'ನನಗೆ ಹೇಗೆ ವಿವಾಹದ ಆಸೆ ಇದೆಯೋ ನಿನಗೂ ಇದೆ. ನನಗೆ ಬಂದಿರುವ ಈ ಪ್ರಸಂಗ ವದಾನ್ಯ ಋಷಿಯ ಪರೀಕ್ಷೆಯೋ, ಅಥವಾ ನನ್ನ ವಿವಾಹಕ್ಕೆ ಬಂದಿರುವ ವಿಘ್ನವೋ? ತಿಳಿಯದಾಗಿದೆ. ಯಾವುದು ಸತ್ಯವೆಂದು ತಿಳಿಯದಾಗಿದೆ' ಎಂದು ನುಡಿದ. ಆಶ್ಚರ್ಯವಾಗುತ್ತಿದೆ (ವೃದ್ಧೆಯಾಗಿದ್ದವಳು) ಈಗ ದಿವ್ಯಾಭರಣಭೂಷಿತಳಾಗಿ ಕನ್ಯಾರೂಪ ಧರಿಸಿ ಬಂದಿದ್ದಾಳಲ್ಲ. ಹಿಂದಿನ ಅವಸ್ಥಾ ಹೇಗೆ ಹೋಯಿತು? ಕನ್ಯಾರೂಪ ಹೇಗೆ ಬಂದಿತು? ಇದಕ್ಕೇನು ಉತ್ತರ. ಅದೇನೇ ಇರಲಿ, ನಾನು ನನ್ನ ಶಕ್ತಿ ಮತ್ತು ಧೈರ್ಯ ತೋರೆಯಲಾರೆ. ನನ್ನ ವ್ರತ ಬಿಡೆನು, ಧೈರ್ಯದಿಂದಲೇ ಎದುರಿಸುತ್ತೇನೆ ಎಂದು ಅಂದುಕೊಂಡನು.

ಈ ಕಥೆ ಕೇಳಿದ ಧರ್ಮರಾಜನಿಗೂ ಆಶ್ಚರ್ಯವಾಯಿತು. 'ಆ ಕನ್ಯೆ ಬ್ರಾಹ್ಮಣನ ಶಾಪಕ್ಕೂ ಹೆದರುತ್ತಿಲ್ಲ. ಈ ಬ್ರಾಹ್ಮನನು ಅಲ್ಲಿಂದ ಹೇಗೆ ಬಂದನು' ಎಂದು ಕೇಳಿದಾಗ, ಭೀಷ್ಮರು ಮುಂದುವರಿಸಿ ಹೇಳಿದರು.

ಅಷ್ಟಾವಕ್ರನು ಆ ಕನ್ಯೆಗೆ ಕೇಳಿದ 'ನೀನು ಹೇಗೆ ನಿನ್ನ ರೂಪ(ವೃದ್ಧ) ಬದಲಾಯಿಸಿದೆ? ಸತ್ಯ ನುಡಿ. ಬ್ರಾಹ್ಮಣನ ಮುಂದೆ ಸುಳ್ಳು ಹೇಳಬೇಡ.'

---

೧ ಸ್ವತಂತ್ರಾಸ್ಮಿ ತ್ಯುವಾಚರ್ಷಿಂ ನ ಧರ್ಮಚ್ಛಲಮಸ್ತಿ ತೇ। – ೪೪/೧೧

ಬ್ರಾಹ್ಮಣನಿಗೆ ಉತ್ತರಿಸುತ್ತಾ ಆ ಸ್ತ್ರೀ ಹೇಳಿದಳು 'ಬ್ರಾಹ್ಮಣನೇ! ಸ್ತ್ರೀಪುರುಷರ ಕಾಮನೆಗಳು ಭೂಮಿ, ಅಂತರಿಕ್ಷ ಎಲ್ಲಿ ಹೋದರೂ ಇದ್ದದ್ದೇ. ನಾನು ಉತ್ತರದಿಗ್ದೇವತೆ, ಸ್ತ್ರೀಯರ ಚಾಂಚಲ್ಯ, ಕಾಮಚಪಲತೆ ನೋಡಿದಿ. ನಿನ್ನ ನಿಯಮ ಬಿಡದೇ ನೀನು ಪುಣ್ಯಲೋಕಗಳನ್ನು ಗೆದ್ದು ಬಿಟ್ಟೆ ನಿನ್ನ ಮನೋದಾರ್ಢ್ಯ ಪರೀಕ್ಷಿಸಲು ನಾನು ಪರೀಕ್ಷೆ ಮಾಡಿದೆ. ಮೈಥುನದ ಆಸೆ ವೃದ್ಧಾಪ್ಯದಲ್ಲಿ ಬಿಡದು[೧]. ದೇವರಲ್ಲಿ ವಿಶ್ವಾಸವಿದ್ದು (ಅ-ವಿಶ್ವಾಸ), ದುಶ್ಚಟಗಳ ದಾಸನಾಗದೆ, ವಿಷಯಾಸಕ್ತಿ ಇರದ, ಅತಿಯಾಗಿ ಪ್ರವಾಸ ಮಾಡದ, ವಿದ್ವಾಂಸನೂ, ಒಳ್ಳೆಯ ಚಾರಿತ್ರ್ಯವಿರುವ ಪುರುಷನು ಪತ್ನಿಯನ್ನು ಹೊಂದಿ ಸುಖ ಹೊಂದುತ್ತಾನೆ.

ನಿನ್ನ ನಡತೆಯಿಂದ ಬ್ರಹ್ಮೇಂದ್ರಾದಿಗಳು ಸಂತುಷ್ಟರಾಗಿದ್ದಾರೆ. ವದಾನ್ಯ ಮುನಿಯಿಂದ ನೀನು ಕಳಿಸಲ್ಪಟ್ಟಿದ್ದೀಯಷ್ಟೇ. ಭೋಗಾಸಕ್ತಳೂ, ಮೋಸ ಮಾಡುವವಳೂ ಆದ ಸ್ತ್ರೀಯನ್ನು ಪ್ರಿಯ ಮಾತುಗಳಿಂದ, ಅವಳನ್ನು ಬಿಟ್ಟು ದೂರ ಹೋಗದಿರುವುದರಿಂದ, ಅವಳನ್ನು ಬಿಟ್ಟು ದೂರ ಹೋಗದಿರುವುದರಿಂದಲೂ, ಸಾಧಾರಣ ವಸ್ತ್ರಗಳಿಂದಲೂ ರಕ್ಷಿಸಬೇಕು. ನಿಷಿದ್ಧವಲ್ಲದ ಪರ್ವಕಾಲವಲ್ಲದ ರಾತ್ರಿಗಳಲ್ಲಿ, ಋತುಕಾಲದ ಹೊರತಾಗಿಯೂ ಸ್ತ್ರೀಸಂಗ ಮಾಡಬಹುದು. ರಾತ್ರಿ ಕಾಲದಲ್ಲಿ ಬಹಳ ನಿಯಮಗಳಿರುವುದಿಲ್ಲ, ಆದರೆ ನಿಯಮಗಳೇ ಇಲ್ಲದೆ ನಡೆಯಬಾರದು. ನಿನಗೆ ಉಪದೇಶ ಮಾಡಲೆಂದೇ ನಾನು ಇದೆಲ್ಲವನ್ನು ಮಾಡಿದೆ[೨].

ನೀನು ಇಷ್ಟು ದೂರ ಬಂದಿದ್ದರೂ, ಕ್ಷೇಮವಾಗಿ ವಾಪಸು ಹೋಗುವೆ. ನಿನಗೆ ದಾರಿಯಶ್ರಮವಾಗದು. ಬಯಸಿದ ಕನ್ಯೆ ಹೊಂದುವೆ. ಆಕೆ ನಿನಗೆ ಪುತ್ರರನ್ನೂ ಕೊಡುವಳು. ಬ್ರಾಹ್ಮಣನ ಆಸೆ ಮೂರುಲೋಕಗಳಲ್ಲೂ ಮಾನ್ಯವೇ ಸರಿ[೩].

---

೧ ದ್ಯಾವಾಪೃಥಿವೀಮಾತ್ರೈಷಾ ಕಾಮ್ಯಾ ಬ್ರಾಹ್ಮಣಸತ್ತಮ ।
ಉತ್ತರಾಂ ಮಾಂ ದಿಶಂ ವಿದ್ಧಿ ದೃಷ್ಟಂ ಸ್ತ್ರೀ ಚಾಪಲಂ ಚ ತೇ ।
ಅವ್ಯುತ್ಥಾನೇನ ತೇ ಲೋಕಾ ಜಿತಾಃ ಸತ್ಯಪರಾಕ್ರಮ ।
ಜಿಜ್ಞಾಸೇಯಂ ಪ್ರಯುಕ್ತಾ ಮೇ ಸ್ಥಿರೀಕರ್ತುಂ ತವಾನಘ ।
ಸ್ಥವಿರಾಣಾಮಪಿ ಸ್ತ್ರೀಣಾಂ ಬಾಧತೇ ಮೈಥುನಜ್ವರಃ । - ೪೫/೫

೨ ತುಷ್ಟಃ ಪಿತಾಮಹಸ್ತೇಽದ್ಯ ತಥಾ ದೇವಾಃ ಸವಾಸವಾಃ ।
ಅಪರ್ವಾಸ್ವನಿಷಿದ್ಧಾಸು ರಾತ್ರಿಷ್ವಪ್ಯನೃತೌ ವ್ರಜೇತ್ ॥
ರಾತ್ರೌ ಚ ನಾತಿನಿಯಮೋ ನ ವೈ ಹ್ಯನಿಯಮೋ ಭವೇತ್ ।
ತವೋಪದೇಶಂ ಕರ್ತುಂ ವೈ ತಚ್ಚ ಸರ್ವಂ ಕೃತಂ ಮಯಾ ॥ - ೪೫/೭-೯

೩. ಕ್ಷೇಮೀ ಗಮಿಷ್ಯಸಿ ಗೃಹಾನ್ ಶ್ರಮಶ್ಚ ನ ಭವಿಷ್ಯತಿ ।
ಕನ್ಯಾಂ ಪ್ರಾಪ್ಸ್ಯಸಿ ತಾಂ ವಿಪ್ರ ಪುತ್ರಿಣೀ ಚ ಭವಿಷ್ಯತಿ ॥
ಅನತಿಕ್ರಮಣೀಯೈಷಾ ★★(?)ಕೃತ್ಸ್ನೈರ್ಲೋಕೈಸ್ತ್ರಿಭಿಃ ಸದಾ ।
ಋಷಿಣಾ ಪ್ರಸಾದಿತಾ ಚಾಸ್ಮಿ ತವ ಹೇತೋರ್ದ್ವಿಜರ್ಷಭ ।

**ವದಾನ್ಯನು ನಿನ್ನ ಸಲುವಾಗಿಯೇ ನನ್ನನ್ನು ಪ್ರಾರ್ಥಿಸಿದ್ದನು. ಆತನನ್ನು ಗೌರವಿಸಲು ನಾನು ಇವೆಲ್ಲವನ್ನು ಹೇಳಿದ್ದೇನೆ.**

**ಉತ್ತರ ದಿಗ್ದೇವತೆಯ ಅನುಗ್ರಹ ಪಡೆದ ಅಷ್ಟಾವಕ್ರನು ಅವಳಿಗೆ ನಮಸ್ಕರಿಸಿ, ಅನುಮತಿ ಪಡೆದು ತನ್ನ ಮನೆಗೆ ಬಂದು, ವಿಶ್ರಾಂತಿ ತೆಗೆದುಕೊಂಡು ವದಾನ್ಯ ಮಹರ್ಷಿಗಳ ಮನೆಗೆ ಹೋದನು. ಅವರಿಗೆ ತಾನು ಇಲ್ಲಿಂದ ಹೋಗಿ ಬರುವವರೆಗೆ ನಡೆದ ಎಲ್ಲ ವಿವರಗಳನ್ನೂ, ಉತ್ತರದಿಗ್ದೇವತೆ ಮಾಡಿದ ಪರೀಕ್ಷೆ ಹಾಗೂ ವದಾನ್ಯರ ಮಾತಿನಂತೆ ಮಾಡಿದುದನ್ನು ನೀಡಿದಾಗ, ವದಾನ್ಯರು ಸಂತುಷ್ಟರಾಗಿ 'ಶುಭಮುಹೂರ್ತದಂದು ನನ್ನ ಪುತ್ರಿಯ ಪಾಣಿಗ್ರಹಣ ಮಾಡು. ಕನ್ಯಾದಾನಕ್ಕೆ ನೀನು ಸತ್ಪಾತ್ರನಾಗಿದ್ದೀ' ಎಂದು ನುಡಿದರು. ಹಾಗೆಯೇ ಶುಭಮುಹೂರ್ತದಂದು ಅಷ್ಟಾವಕ್ರನು 'ಸುಪ್ರಭಾ'ಳನ್ನು ಪಾಣಿಗ್ರಹಣ ಮಾಡಿ ತನ್ನ ಆಶ್ರಮದಲ್ಲಿ ಸಂತೋಷದಿಂದ ಇದ್ದ.**

## ಸಂದೇಶಗಳು-ವಿವರಣೆಗಳು

೧. ಸಹಧರ್ಮದ ಪ್ರಶ್ನೆಗೆ (ಧರ್ಮರಾಜನ) ಉತ್ತರ ರೂಪವಾದುದು ಈ ಉಪಾಖ್ಯಾನ.

೨. ಕನ್ಯೆಯಲ್ಲಿರಬೇಕಾದ ಸದ್ಗುಣಗಳು ಅಪ್ರತಿಮರೂಪ, ಗುಣ, ಪ್ರಭಾವ, ಶೀಲ, ಸಚ್ಚಾರಿತ್ರ್ಯ - ಇವೆಲ್ಲ ಬಾಲಕಿಯು ಹೊಂದಬೇಕು. ಪೋಷಕರು (ತಂದೆ-ತಾಯಿಗಳು) ಅಂತಹ ತರಬೇತಿಯನ್ನು ಮಕ್ಕಳಿಗೆ ಕೊಡಬೇಕು (ಶ್ಲೋ. ೧೨)

೩. ವರನಲ್ಲಿರಬೇಕಾದ ಗುಣಗಳು (ಶ್ಲೋ. ೧೪,೧೫) ವಿವಾಹಪೂರ್ವ ಸ್ತ್ರೀಸಂಪರ್ಕ, ಅನಧಿಕೃತ ವಿವಾಹಾದಿಗಳು ನಿಷಿದ್ಧ. ೧೩. ಗುಣಗಳನ್ನು ಹೆಸರಿಸಲಾಗಿದೆ.

೪. ಕನ್ಯಾಶುಲ್ಕ ಹಿಂದಿನ ಕಾಲದಲ್ಲಿ ತುಂಬಾ ಪ್ರಚಲಿತವಾಗಿತ್ತು. ಅದು ಈಗಲೂ ಬ್ರಾಹ್ಮಣೇತತರಲ್ಲಿ ಅನೇಕ ಕಡೆ ರೂಢಿಯಲ್ಲಿದೆ. ಅದರಿಂದ ವರನ ಯೋಗ್ಯತೆ ತಿಳಿಯಲು ಸಹಕಾರಿ.

೫. ಅಷ್ಟಾವಕ್ರನಿಗೆ ವದಾನ್ಯರು ಹೇಳಿದ ಕನ್ಯಾಶುಲ್ಕ ಬಹಳ ಕ್ಲೇಶದಾಯಕ. ಆದರೂ ಧೈರ್ಯ, ಸ್ಥೈರ್ಯ, ಅದಕ್ಕಿಂತ ಹೆಚ್ಚಾಗಿ ಬ್ರಹ್ಮಚರ್ಯ ಬಲದಿಂದ ಪಡೆಯುವಲ್ಲಿ ಯಶಸ್ವಿಯಾಗುತ್ತಾನೆ.

೬. ದಿಗ್ದೇವತೆ ಸಂದರ್ಶನಕ್ಕೂ ಮೊದಲು ಕುಬೇರಾನುಗ್ರಹ ಸಿಗುತ್ತದೆ. ಕೈಲಾಸಪರ್ವತಾದಿಗಳ ದರ್ಶನ, ಅದಕ್ಕೆ ಹಾಕಿದ ನಮಸ್ಕಾರಗಳು ಮುಂದಿನ ದಾರಿ ವಿಘ್ನಗಳು ಇಲ್ಲವಾಗಿಸುತ್ತದೆ. ಆದ್ದರಿಂದ ಗುರಿಮುಟ್ಟುವ ಮೊದಲು ದಾರಿಯಲ್ಲಿ ವೈಷ್ಣವಕ್ಷೇತ್ರದರ್ಶನ, ವೈಷ್ಣವರ ಸಂಗ, ಅವರಿಗೆ ಗೌರವ ಕಾರ್ಯಸಿದ್ಧಿಗೆ ಸಹಕಾರವಾಗುತ್ತವೆ.

---

ತಸ್ಯ ಸಮ್ಮಾನನಾರ್ಥಂ ಮೇ ತ್ವಯಿ ವಾಕ್ಯಂ ಪ್ರಭಾಷಿತಮ್ ॥ ೪೫/೧೦-೧೩

೭. ದೇವತಾಗೃಹದ ದ್ವಾರದಲ್ಲಿಯೇ ಅಷ್ಟಾವಕ್ರನಿಗೆ ಮನಃಸ್ಥೈರ್ಯ ಕೆಡುವ ಸುಂದರ ಕನ್ಯೆಯರ ದರ್ಶನ. ಅಲ್ಲೂ ಆತನ ಬ್ರಹ್ಮಚರ್ಯವೇ ಕಾಪಾಡುತ್ತದೆ. ಕಾಮಕ್ಕೆ ಬಲಿಯಾಗಲಿಲ್ಲ ಅಷ್ಟಾವಕ್ರ.

೮. ವೃದ್ಧ ಸ್ತ್ರೀ ಮಾಡಿದ ಪರೀಕ್ಷೆಯಲ್ಲಿ ಅಷ್ಟಾವಕ್ರನ ಗೆಲುವಿಗೆ ಆತನ ಸ್ಥೈರ್ಯ, ಬ್ರಹ್ಮಚರ್ಯ ನಡೆಯೇ ಸಹಕಾರಿ. ಬ್ರಹ್ಮಚರ್ಯವೇ ಸರ್ವತ್ರ ಜಯಕ್ಕೆ ಸಹಾಯ.

೯. ವೃದ್ಧ ಸ್ತ್ರೀ-ಕನ್ಯೆ ಮಾಡಿದ ಪ್ರಲೋಭನೆಗಳಾವುವೂ ಅಷ್ಟಾವಕ್ರನ ನಡತೆಗೆ ಭಂಗವುಂಟುಮಾಡಲಿಲ್ಲ. ಆದ್ದರಿಂದ ಸಚ್ಚಾರಿತ್ರ್ಯವೇ ಕಾರ್ಯಸಾಧನೆಗೆ ಆಯುಧ. ಅದು ದಿಗ್ದೇವತೆಯ ಬಾಯಿಯಿಂದಲೇ ಬಂತು. ಆದ್ದರಿಂದ ತಾನು ಬಯಸಿದ ಕನ್ಯೆಯನ್ನು ಬಿಟ್ಟು ಬೇರೆ ಯಾರನ್ನೂ ಎಷ್ಟೇ ವೈಭವವಿದ್ದರೂ ಬಯಸಬಾರದು ಅಷ್ಟಾವಕ್ರನಂತೆ.

೧೦. ಇದರಿಂದ ಬ್ರಹ್ಮಾದಿ ಎಲ್ಲ ದೇವತೆಗಳ ಅನುಗ್ರಹ, ವದಾನ್ಯರು ಸಂತುಷ್ಟರಾಗಿ ಕನ್ಯಾದಾನ ಮಾಡಿದರು. ಇದರಿಂದ ಭಾವೀ ದಾಂಪತ್ಯ ಸುಖದಾಯಕ, ಅದಕ್ಕಾಗಿ ಮೊದಲು ಬೆಳೆಸಿಕೊಳ್ಳಬೇಕಾದುದು 'ಸುಶೀಲತೆ'

೧೧. ಕಾಮಕ್ಕೆ ವಯಸ್ಸಿನ ನಿರ್ಬಂಧವಿಲ್ಲ. ವಾರ್ಧಕ್ಯ ಬಂದರೂ ಕಾಮ ನಿರ್ಗಮಿಸದೇ ಕಾಡಿಸುತ್ತದೆ. ಇತ್ಯಾದಿ...

# ೧೪೨. ಮಾತಂಗೋಪಾಖ್ಯಾನ

ಧರ್ಮರಾಜನು ಭೀಷ್ಮರನ್ನು ಬಾಯ್ತುಂಬಾ ಅವರ ಗುಣಗಳನ್ನು ಪ್ರಶಂಸಿಸಿ ಪ್ರಶ್ನಿಸುತ್ತಾನೆ. '೧. ಕ್ಷತ್ರಿಯ, ವೈಶ್ಯ ಅಥವಾ ಶೂದ್ರ - ಯಾರೇ ಆಗಲಿ ಯಾವ ಕರ್ಮಾನುಷ್ಠಾನದಿಂದ ಬ್ರಾಹ್ಮಣ್ಯವನ್ನು ಹೊಂದುತ್ತಾನೆ?; ಯಾರಾದರೂ ಬ್ರಾಹ್ಮಣನಾಗಲು ಇಚ್ಛಿಸಿದರೆ ಅವನು ಬ್ರಾಹ್ಮಣಯೋಗ್ಯ ಮಹಾತಪಸ್ಸಿನಿಂದ, ಮಹಾಕರ್ಮಾನುಷ್ಠಾನದಿಂದ ಅಥವಾ ವೇದಾಧ್ಯಯನದಿಂದ (ಶ್ರುತೇನ) ಬ್ರಾಹ್ಮಣ್ಯವನ್ನು ಪಡೆಯುತ್ತಾನೋ?'

ಇದಕ್ಕೆ ಭೀಷ್ಮರು 'ಕ್ಷತ್ರಿಯ, ವೈಶ್ಯ, ಶೂದ್ರವರ್ಣಗಳಲ್ಲಿ ಹುಟ್ಟಿದವರು ಬ್ರಾಹ್ಮಣ್ಯವನ್ನು ಹೊಂದುವುದು ತುಂಬಾ ಅಸಾಧ್ಯವಾದುದು. ಅದು ಎಲ್ಲ ಪ್ರಾಣಿಗಳಲ್ಲಿಯೇ ಶ್ರೇಷ್ಠ ಬೇರೆ ಬೇರೆ ಯೋನಿಗಳಲ್ಲಿ ಮತ್ತೆ ಮತ್ತೆ ಜನಿಸುತ್ತಾ ಮುಂದೆಂದೋ ಬ್ರಾಹ್ಮಣನಾಗಿ ಹುಟ್ಟುತ್ತಾನೆ. ಈ ಬಗ್ಗೆ ಜ್ಞಾನಿಗಳು ಹೇಳುವ ಮತಂಗ ಹಾಗೂ ಹೆಣ್ಣು ಕತ್ತೆ, ಇವರ ಮಧ್ಯೆ ಆದ ಸಂವಾದರೂಪದ ಒಂದು ಇತಿಹಾಸವನ್ನು ಭೀಷ್ಮರು ಉದಾಹರಿಸಿದರು.

ಹಿಂದೆ ಬ್ರಾಹ್ಮಣನೊಬ್ಬನಿಗೆ ಮತಂಗನೆಂಬ ಸಾಕು ಮಗನಿದ್ದನು. ಅವನು ಆ ಬ್ರಾಹ್ಮಣನ ಔರಸಪುತ್ರನಲ್ಲದಿದ್ದರೂ, ಅನ್ಯವರ್ಣದವನಾಗಿದ್ದರೂ, ಬ್ರಾಹ್ಮಣನ ಮನೆಯಲ್ಲಿಯೇ ಬೆಳೆದಿದ್ದುದರಿಂದ, ಬ್ರಾಹ್ಮಣ ಸಂಸ್ಕಾರ ಹೊಂದಿದ್ದುದರಿಂದ, ಸಮಾನವರ್ಣ(ತುಲ್ಯವರ್ಣ)ನೆಂದೇ ಎಲ್ಲರೂ ಭಾವಿಸಿದ್ದರು. ಅವನೂ ಕೂಡಾ ಸದ್ಗುಣಿಯೇ ಆಗಿದ್ದನು.

**ದ್ವಿಜಾತೇಃ ಕಸ್ಯಚಿತ್ತಾತ ತುಲ್ಯವರ್ಣಃ ಸುತಸ್ತ್ವಭೂತ್ ।**
**ಮತಂಗೋ ನಾಮ ನಾಮ್ನಾಽಸೀತ್ ಸರ್ವೈಃ ಸಮುದಿತೋ ಗುಣೈಃ ॥ - ೩/೯**
**(ದಾಕ್ಷಿಣಾತ್ಯಪಾಠ)**
**ತುಲ್ಯವರ್ಣಃ ಅನ್ಯವರ್ಣಜೋಽಪಿ ಜಾತಕರ್ಮಾದಿಸಂಸ್ಕಾರಯೋಗಾತ್**
**ತುಲ್ಯವರ್ಣತ್ವಂ ಗತಃ। ನಾಮ - ಪ್ರಸಿದ್ಧಮ್ ।**
**- ಟಿ.ಆರ್ ಕೃಷ್ಣಾಚಾರ್ಯ ಸಂಪಾದನೆ(ಅ.ಪ.-೩), ಪುಟ.೯(೧೯೯೧)**
**ಮತಂಗಸ್ಯ ಯಥಾ ತತ್ತ್ವಂ ................।**
**ಸ್ಥಾನೇ ಮತಂಗೋ ಬ್ರಾಹ್ಮಣ್ಯಾಂ ನಾಲಭತ್ ಭರತರ್ಷಭ ।**
**ಚಂಡಾಲಯೋನೌ ಜಾತೋ ಹಿ ಕಥಂ ಬ್ರಾಹ್ಮಣ್ಯಮಾಪ್ನುಯಾತ್ ॥**
**-೩/೧೮,೧೯**

ಒಮ್ಮೆ ಮತಂಗನು ತಂದೆಯ ಆದೇಶದ ಮೇರೆಗೆ ಒಂದು ಯಜ್ಞವನ್ನು ಮಾಡಿಸಲು ಬೇರೊಂದು ಊರಿಗೆ ಕತ್ತೆ ಎಳೆಯುವ ರಥದಲ್ಲಿ ಕುಳಿತುಕೊಂಡು ಹೊರಟನು. ಆ ಕತ್ತೆ ತಾಯಿ ಹಾಲನ್ನು ಕುಡಿಯದ ಮರಿ ಕತ್ತೆಯಾದುದರಿಂದ ಅದು ಯಾವ ಕಡೆ ಹೋಗಬೇಕೋ ಆ ಕಡೆ

ಹೋಗದೇ ತಾಯಿಯಿದ್ದಲ್ಲಿಗೆ ಹೋಗುತ್ತಿದ್ದುದರಿಂದ ಮತಂಗನು ಅದಕ್ಕೆ ಚಾಟಿಯಿಂದ ಬಹಳ ಹೊಡೆದ. ಆ ಗಾಡಿ ಕೊನೆಗೆ ತಾಯಿ ಕಡೆ ಹೋಗಿ ನಿಂತಿತು. ಗಾಯಗೊಂಡ ಮಗ(ಕತ್ತೆ)ಯನ್ನು ಸಮಾಧಾನ ಮಾಡಿದ ತಾಯಿ ಕತ್ತೆ, ಮಗು ದುಃಖಿಸದಿರು. ಗಾಡಿಯಲ್ಲಿ ಚಂಡಾಲ ಕುಳಿತಿದ್ದಾನೆ ಎಂದಿತು[೧]. ಅಷ್ಟೇ ಅಲ್ಲ ಬ್ರಾಹ್ಮಣನಲ್ಲಿ ಇಂತಹ ಕ್ರೌರ್ಯವಿರುವುದಿಲ್ಲ, ಏಕೆಂದರೆ ಮೈತ್ರೀಭಾವ, ಸ್ನೇಹಭಾವವೇ ಬ್ರಾಹ್ಮಣನ ಲಕ್ಷಣ. ಅವನು ಎಲ್ಲ ಪ್ರಾಣಿಗಳಿಗೂ ಅನುಶಾಸಕ, ಮಾರ್ಗದರ್ಶಕ ಆಚಾರ್ಯನೆನಿಸಿದ್ದಾನೆ. ಬ್ರಾಹ್ಮಣನಾಗಿದ್ದರೆ ಹೀಗೆ ನಿನಗೆ ಹೊಡೆಯುತ್ತಿದ್ದನೆ? ಇವನು ಸ್ವಾಭಾವಿಕವಾಗಿ ಪಾಪಿ, ದುಷ್ಟ ಆದ್ದರಿಂದಲೇ ಚಿಕ್ಕವನಾದ ನಿನ್ನಲ್ಲಿ ದಯೆ ತೋರಲಿಲ್ಲ. ಜಾತಿಗತವಾದ ಸ್ವಭಾವವೇ ಯಾವಾಗಲೂ ಮನೋಭಾವವನ್ನು ನಿಯಂತ್ರಿಸುತ್ತದೆ[೨].

ತಾಯಿ ಕತ್ತೆಯ ಮಾತುಗಳನ್ನು ಕೇಳಿದ ಕೂಡಲೇ, ಅದರ ಹತ್ತಿರ ಹೋಗಿ ಮತಂಗನು 'ಎಲೈ ಮಂಗಲಗುಣವುಳ್ಳ ಕತ್ತೆಯೇ! (ರಾಸಭಿಯೇ) ನನ್ನ ತಾಯಿಯು ಯಾರಿಂದ ದೂಷಿತಳಾಗಿದ್ದಾಳೆ? ನನ್ನನ್ನು ನೀನು ಚಂಡಾಲನೆಂದು ಹೇಗೆ ತಿಳಿದೆ? ಹೇಳು[೩]' ಎಂದನು. 'ನನ್ನ ಬ್ರಾಹ್ಮಣನಾಶಕ ಚಂಡಾಲತ್ವವನ್ನು ಹೇಗೆ ಗ್ರಹಿಸಿದೆ? ಬ್ರಾಹ್ಮಣ್ಯ ಯಾವ ಕರ್ಮದಿಂದ ನಾಶವಾಗುತ್ತದೆ? ಇದನ್ನು ಸರಿಯಾಗಿ ನೀನು ತಿಳಿದುದನ್ನು ಪೂರ್ತಿ ಹೇಳು' ಎಂದನು.

ಆಗ ಆ ಹೆಣ್ಣು ಕತ್ತೆಯು 'ಯೌವನದಿಂದ ಸೊಕ್ಕಿದ್ದ ಬ್ರಾಹ್ಮಣಸ್ತ್ರೀಯಲ್ಲಿ ಶೂದ್ರ ಕ್ಷೌರಿಕನಿಂದ ನೀನು ಜನಿಸಿರುವೆ. ಆದ್ದರಿಂದ ನೀನು ಚಂಡಾಲನಾಗಿರುವೆ. ಆದ್ದರಿಂದಲೇ ನಿನ್ನ ಬ್ರಾಹ್ಮಣ್ಯ ನಷ್ಟವಾಗಿದೆ[೪]' ಎಂದಿತು.

ಈ ಮಾತನ್ನು ಕೇಳಿದ ಕೂಡಲೇ ಮತಂಗನು ಮನೆಗೆ ಹೋದಾಗ ತಂದೆಯು 'ಮಗನೇ! ನಿನ್ನನ್ನು ಯಜ್ಞ ಮಾಡಿಸಿ ಬಾ ಎಂದು ಹೇಳಿದ್ದೆ. ಅದನ್ನು ಮುಗಿಸದೆ ಏಕೆ ಹಿಂದಿರುಗಿದೆ? ನೀನು ಕ್ಷೇಮದಿಂದಿರುವೆಯಷ್ಟೇ?' ಎಂದನು.

---

೧ ಮಾ ಶುಚಃ ಪುತ್ರ ಚಂಡಾಲಸ್ತ್ವಧಿತಿಷ್ಠತಿ (ಸ್ತ್ವಾಭಿವಿಧ್ಯತಿ) ।

೨ ಬ್ರಾಹ್ಮಣೋ ದಾರುಣಂ ನಾಸ್ತಿ ಮೈತ್ರೋ ಬ್ರಾಹ್ಮಣ ಉಚ್ಯತೇ ।
ಆಚಾರ್ಯಃ ಸರ್ವಭೂತಾನಾಂ ಶಾಸ್ತಾ ಕಿಂ ಪ್ರಹರಿಷ್ಯತಿ ॥
ಅಯಂ ತು ಪಾಪಪ್ರಕೃತಿರ್ಬಾಲೇ ನ ಕುರುತೇ ದಯಾಮ್ ।
ಸ್ವಯೋನಿಂ ಮಾನಯತ್ಯೇಷ ಭಾವೋ ಭಾವಂ ನಿಯಚ್ಛತಿ ॥ - ೩/೧೩(ದಾ.ಪಾ.)

೩ ಬ್ರೂಹಿ ರಾಸಭಿ ಕಲ್ಯಾಣಿ ಮಾತಾ ಮೇ ಯೇನ ದೂಷಿತಾ ।
ಕಥಂ ಮಾಂ ವೇತ್ಸಿ ಚಂಡಾಲಂ ಬ್ರಾಹ್ಮಣ್ಯಂ ಯೇನ ನಶ್ಯತೇ (ಕೇನ ಮೇಽನಶತ್)
ತತ್ತ್ವೇನೈತನ್ಮಹಾಪ್ರಾಜ್ಞೇ ಬ್ರೂಹಿ ಸರ್ವಮಶೇಷತಃ ॥ - ೩/೧೬

೪ ಬ್ರಾಹ್ಮಣ್ಯಾಂ ವೃಷಲೇನ ತ್ವಂ ಮತ್ತಾಯಾಂ ನಾಪಿತೇನ ಹ ।
ಜಾತಸ್ತ್ವಮಸಿ ಚಂ(ಚಾಂ)ಡಾಲೋ ಬ್ರಾಹ್ಮಣ್ಯಂ ತೇನ ತೇಽನಶತ್ ॥ - ೩/೧೭

ತಂದೆಗೆ ಉತ್ತರಿಸಿದ ಮತಂಗ 'ಅಪ್ಪ! ಚಂಡಾಲಕುಲದಲ್ಲಿ ಅಥವಾ ಅದಕ್ಕಿಂತ ಹೀನಕುಲದಲ್ಲಿ ಹುಟ್ಟಿದವನು ಹೇಗೆ ತಾನೇ ಕುಶಲಿಯಾಗಿರಬಲ್ಲ? ಮನುಷ್ಯಯೋನಿಯೂ ಅಲ್ಲದ ಕತ್ತೆಯೊಂದು ನಾನು ಬ್ರಾಹ್ಮಣಸ್ತ್ರೀಯಲ್ಲಿ ಶೂದ್ರನಿಂದ ಹುಟ್ಟಿದ ಚಂಡಾಲನೆಂದು ತಿಳಿಸಿತು. ಆದ್ದರಿಂದ ನಾನು ಬ್ರಾಹ್ಮಣ್ಯ ಸಂಪಾದಿಸಲು ಮಹಾತಪಸ್ಸನ್ನೇ ಮಾಡುವೆ'[೧] ಎಂದು ತಂದೆಗೆ ಹೇಳಿ ಮತಂಗನು ಕಾಡಿಗೆ ಹೊರಟನು.

ಮತಂಗ ತನ್ನ ಜೀವನದಲ್ಲಿ ಮಹತ್ತರ ಬದಲಾವಣೆಗಾಗಿ ಮಹಾತಪಸ್ಸಿಗೆ ಶರಣಾಗಿ ಮಹಾರಣ್ಯಕ್ಕೆ ನಡೆದು ಭಾರೀ ತಪಸ್ಸನ್ನು ಮಾಡಿದ. ಅದೇ ಜನ್ಮದಲ್ಲಿ (ಚಂಡಾಲ) ಸುಖವಾಗಿ ಬ್ರಾಹ್ಮಣನಾಗಬೇಕೆಂಬ ಮಹದಾಶೆಯಿಂದ. ತಪಸ್ಸಿನಿಂದ ದೇವತೆಗಳಿಗೂ ತಾಪವುಂಟಾಯಿತು. ಇಂದ್ರದೇವರು ಧಾವಿಸಿ ಮತಂಗನಿಗೆ 'ಮನುಷ್ಯ ಭೋಗಗಳನ್ನು ತೊರೆದು ತಪಸ್ಸನ್ನು ಏಕೆ ಮಾಡುತ್ತಿರುವೆ? ನಿನ್ನ ಮನದ ಅಭಿಲಾಷೆಯ ವರ ಕೇಳು' ಎಂದಾಗ, ಮತಂಗನು 'ಬ್ರಾಹ್ಮಣ್ಯವನ್ನು ಇಚ್ಛಿಸುವೆ ಅದನ್ನು ಪಡೆದೇ ಹೋಗುವೆ. ಇದೇ ನಿನ್ನಿಂದ ನಾನು ಬಯಸುವ ವರ' ಎಂದನು.

ಅದನ್ನು ಕೇಳಿದ ಇಂದ್ರನು 'ಇದು ದುರ್ಲಭ. ಜಿತೇಂದ್ರಿಯರಲ್ಲದವರು ಇದನ್ನು ಹೊಂದಲಾರರು. ದುರ್ಬುದ್ಧಿಯವನೇ! ಇದರಿಂದ ನಾಶಹೊಂದುವೆ. ಈ ವರ ಬಿಡು. ತಪಸ್ಸಿನಿಂದ ವಿರಮಿಸು' ಎಂದನು.

'ತಪಸ್ಸಿನಿಂದ ಸಿದ್ಧಿಯಾಗದು. ತಪಸ್ಸು ಮಾಡಿದಾಕ್ಷಣ ಅದರಿಂದ ನಿಜಸ್ಥಿತಿ ಬದಲಾಗದು. ಅತಿಕ್ರಮಿಸಲು ಸಾಧ್ಯವಿಲ್ಲ. ಹೀಗೆ ನೀನು ಪ್ರಾರ್ಥಿಸುತ್ತಿದ್ದರೆ ನಾಶವಾಗುವೆ. ದೇವತೆ, ಅಸುರ, ಮರ್ತ್ಯ, ಇವರೆಲ್ಲಲ್ಲ ಬ್ರಾಹ್ಮಣ್ಯ ಅತಿ ಪವಿತ್ರ ಎಂದು ಭಾವಿಸಲಾಗಿದೆ. ಚಂಡಾಲಯೋನಿಯಲ್ಲಿ ಹುಟ್ಟಿದ ನಿನಗೆ ಅದು ಹೇಗೆ ತಾನೆ ದೊರಕೀತು?'[೨]

ಇಂದ್ರದೇವರು ಹೀಗೆ ಹೇಳಿ ಹೋದರೂ, ಮತಂಗ ತನ್ನ ಹಠ ಬಿಡದೆ ಮತ್ತೆ ಒಂದೇ ಕಾಲಿನಲ್ಲಿ ನಿಂತು ೧೦೦ ವರ್ಷ ತಪಸ್ಸನ್ನು ಮಾಡಿದ ಮೇಲೆ ಇಂದ್ರದೇವರು ಬಂದು ಮತಂಗನಿಗೆ ತುಂಬಾ ಪ್ರೀತಿಯಿಂದ ಹಿತೈಷಿಯಂತೆ ಉಪದೇಶ ಮಾಡಿದರು. ಅದರ ಸಾರ ಹೀಗಿದೆ.

---

೧ ಬ್ರಾಹ್ಮಣ್ಯಾಂ ವೃಷಲಾಜ್ಜಾತಂ ಪಿತರ್ವೇದಯತೀವ ಮಾಮ್ ।
ಅಮಾನುಷೀ ಗರ್ದಭೀಯಂ ತಸ್ಮಾತ್ತಪ್ಸ್ಯೇ ತಪೋ ಮಹತ್ ॥ - ೩/೨೧

೨ ಬ್ರಾಹ್ಮಣ್ಯಂ ಪ್ರಾರ್ಥಯಾನಸ್ತ್ವಮಪ್ರಾಪ್ಯಮಕೃತಾತ್ಮಭಿಃ ।
ವಿನಶಿಷ್ಯಸಿ ದುರ್ಬುದ್ಧೇ ತದುಪಾರಮ.............. ।
ದೇವತಾಸುರಮರ್ತ್ಯೇಷು ಯತ್ಪವಿತ್ರಂ ಪರಂ ಸ್ಮೃತಮ್ ।
ಚಂಡಾಲಯೋನೌ ಜಾತೇನ ನ ತತ್ಪ್ರಾಪ್ಯಂ ಕಥಂಚನ ॥ - (ದಾ.ಪಾ.-೩/೨೮-೩೦)
(ಶಿ.ಪಾ.-೨೭/೨೮-೩೦)

೧. ಮಗು! ಬ್ರಾಹ್ಮಣ್ಯ ಅತಿ ದುರ್ಲಭ. ಅಂತಹ ಶ್ರೇಷ್ಠಸ್ಥಾನ ಬಯಸುತ್ತಲೇ, ಬೇಡುತ್ತಲೇ ನಾಶವಾಗುವಿ. ವ್ಯರ್ಥಸಾಹಸ ಬೇಡ. ನಾನು ಬೇಡವೆಂದರೂ ಮಾಡುತ್ತಿರುವಿ, ಹೀಗಾದರೆ ನೀನು ಖಂಡಿತಾ ಉಳಿಯಲಾರಿ. ಇದು ನಿನ್ನ ಧರ್ಮವಲ್ಲ(ನಿಯತ).

೨. ಬ್ರಾಹ್ಮಣ ಜನ್ಮ ದೊರಕುವುದು ಅಷ್ಟು ಸಲಭವಲ್ಲ. ಪಶುಪಕ್ಷ್ಯಾದಿ ಜನ್ಮಗಳಲ್ಲಿ ಹುಟ್ಟುವ ಎಲ್ಲ ಪ್ರಾಣಿಗಳು ಪುಣ್ಯವಿಶೇಷದಿಂದ ಮೊದಲು ಚಂಡಾಲನಾಗಿಯೇ ಹುಟ್ಟುತ್ತವೆ. ಬಹಳ ಕಾಲ ಆ ಯೋನಿಗಳಲ್ಲೇ ಅನೇಕ ಜನ್ಮ ಕಳೆಯಬೇಕಾಗುತ್ತದೆ. ನಂತರ ೧೦೦೦ ವರ್ಷಗಳ ನಂತರ ಶೂದ್ರಜನ್ಮ ಬಂದು, ಅಲ್ಲೂ ಅನೇಕ ಜನ್ಮಗಳು ಕಳೆಯಬೇಕಾಗುತ್ತದೆ. ಆಮೇಲೆ ೩೦ ಬಾರಿ ಶೂದ್ರಜನ್ಮ ಬಂದ ಮೇಲೆ ವೈಶ್ಯ ಜನ್ಮ ಬರುತ್ತದೆ. ಅಲ್ಲೂ ಅನೇಕ ಜನ್ಮ ವೈಶ್ಯನಅಗಿ ಕಳೆಯಬೇಕು. ವೈಶ್ಯನಾಗಿ ೬೦ ಜನ್ಮ ಹಾಗೆ ಕಳೆದಮೇಲೆ ರಾಜನ್ಯ(ಕ್ಷತ್ರಿಯ)ನಾಗಿ ಜನಿಸುವನು. ಅಲ್ಲೂ ೬೦ ಜನ್ಮ ಕ್ಷತ್ರಿಯನಾಗಿಯೇ ಜನಿಸಬೇಕು. ನಂತರ ಬ್ರಹ್ಮಬಂಧುವಾಗಿ ಹುಟ್ಟುತ್ತಾನೆ[೧].

೩. ಬ್ರಹ್ಮಬಂಧುವಾಗಿ ಚಿರಕಾಲ ಬೇರೆ ಬೇರೆ ಜನ್ಮ ಕಳೆದಮೇಲೆ ೨೦೦ ಬಾರಿ ಹೀಗೆ ಜನ್ಮಗಳಾದ ಮೇಲೆ ಶಸ್ತ್ರಮಾರಾಟಗಾರರಾಗುವ ಜನ್ಮದಲ್ಲಿ ಹುಟ್ಟುತ್ತಾನೆ.

೪. ಶಸ್ತ್ರಾಸ್ತ್ರ ಜೀವಿಯ ಕಾಂಡಪೃಷ್ಠಯೋನಿ(ಜನ್ಮ)ಯಲ್ಲಿ ಬಹಳ ಕಾಲ ಪರಿವರ್ತನೆ ಹೊಂದುತ್ತಾ ೩೦೦ ಆವರ್ತ (ಬಾರಿ-ಜನ್ಮ) ಕಳೆದ ಮೇಲೆ ದ್ವಿಜತ್ವ ಬರುತ್ತದೆ.

೫. ಆ ದ್ವಿಜನಾಗಿ ಬಹಳಕಾಲ ಪರಿವರ್ತನೆಯಾಗುತ್ತಲೇ ಇರುತ್ತದೆ. ಅದೇ ಯೋನಿಯಲ್ಲಿ (ದ್ವಿಜ) ೪೦೦ ಆವರ್ತನಗಳಾದ ಮೇಲೆ ಶ್ರೋತ್ರೀಯ ಬ್ರಾಹ್ಮಣನಾಗಿ ಜನಿಸುತ್ತಾನೆ. ಅಲ್ಲೂ ಮತ್ತೇ ಬಹಳ ಜನ್ಮ ಕಳೆಯಬೇಕು[೨].

ಹೀಗೆ ಶ್ರೋತ್ರಿಯ ದ್ವಿಜನಾಗಿದ್ದಾಗಲೂ ಕಾಮ, ಕ್ರೋಧ, ದುಃಖ, ಸುಖ, ಮಾನಾಪಮಾನ, ಅತಿಮಾನ, ಅತಿವಾದಗಳು ಅವನನ್ನು ಬಿಡದೆ ಕಾಡಿಸುತ್ತಿರುತ್ತವೆ. ಆಗ ಈ ಅರಿಷಡ್ವರ್ಗಗಳನ್ನು ಯಾವ ದ್ವಿಜನು ಜಯಿಸುವನೋ, ಅವನಿಗೆ ಮಾತ್ರ ಸದ್ಗತಿ. ಒಂದು ವೇಳೆ ಆ ಅರಿಷಡ್ವರ್ಗಗಳಿಗೆ ಅವನು ತುತ್ತಾದರೆ, ಅನಿಗೆ ಮತ್ತೆ ಅಧಃಪತನ ಖಚಿತ[೩].

---

೧ ಮಾ ಕೃಥಾಃ ಸಾಹಸಂ ಪುತ್ರ ಮಾನುಷ್ಯಂ ಯದಿ ಗಚ್ಛತಿ।
ಸ ಜಾಯತೇ ಪುಲ್ಕಸೋ ವಾ ಚಂಡಾಲೋ ವಾಪ್ಯ ಸಂಶಯಃ॥
ತತೋ ದಶಶತೇ ಕಾಲೇ ಲಭತೇ ಶೂದ್ರತಾಮಪಿ।
ತತಸ್ತ್ರಿಂಶದ್ಗುಣೇ ಕಾಲೇ ಲಭತೇ ವೈಶ್ಯತಾಮಪಿ॥
ತತಃ ಷಷ್ಠಿ ಗುಣೇ ಕಾಲೇ ರಾಜನ್ಯೋ ನಾಮ ಜಾಯತೇ।
ತತಃ ಷಷ್ಠಿಗುಣೇ ಕಾಲೇ ಲಭತೇ ಬ್ರಹ್ಮಬಂಧುತಾಮ್॥

೨ ತತಸ್ತು ದ್ವಿಶತಕಾಲೇ ಲಭತೇ ಕಾಂಡ ಪೃಷ್ಠತಾಮ್।
ತತಸ್ತು ತ್ರಿಶತೇ ಕಾಲೇ ಲಭತೇ ದ್ವಿಜತಾಮಪಿ॥
ತತಶ್ಚತುಃಶತೇ ಕಾಲೇ ಶ್ರೋತ್ರೀಯೋ ನಾಮ ಜಾಯತೇ।

೩ ತಾಂಶ್ಚೇಜ್ಜಯತಿ ಶತ್ರೂನ್ಸತದಾ ಪ್ರಾಪ್ನೋತಿ ಸದ್ಗತಿಮ್।
ಅಥ ತೇ ವೈ ಜಯತ್ಯೇನಂ ತಾಲಂ ಪಕ್ವಮಿವಾಪತೇತ್॥ (ತಾಲಾಗ್ರಾದಿವ ಪಾತ್ಯತೇ*)
★ ಟಿ.ಆರ್.ಕೆ. (ದಾ.ಪಾ.) - ೪/೩-೧೫

ಆದ್ದರಿಂದ ಮಗನೇ! ನಾನು ಹೇಳಿದುದನ್ನು ಚೆನ್ನಾಗಿ ಮನನಮಾಡಿ ತಪಸ್ಸನ್ನು ಬಿಡು. ಬೇರೆ ಯಾವುದಾದರೂ ವರ ಬೇಡು. ಕಾರಣ ಬ್ರಾಹ್ಮಣ್ಯವು ಅತ್ಯಂತ ದುರ್ಲಭ.

ಇಂದ್ರನು ಹೀಗೆ ವಿಸ್ತಾರವಾಗಿ ಬ್ರಾಹ್ಮಣ್ಯಪ್ರಾಪ್ತಿಯನ್ನು ಹೇಳಿದರೂ ಮತಂಗನು ಮತ್ತೇ ನಿಯತವ್ರತನಾಗಿ ಒಂದೇ ಕಾಲಿನ ಮೇಲೆ ನಿಂತು ೧೦೦೦ ವರ್ಷಗಳವರೆಗೆ ಧ್ಯಾನ ಮಾಡಿದನು. ಅದನ್ನು ಗಮನಿಸಿದ ಕೃಪಾಳುವಾದ ಇಂದ್ರದೇವರು ಮತ್ತೆ ಬಂದು ಬ್ರಾಹ್ಮಣತ್ವವನ್ನು ಬಿಟ್ಟು ಬೇರೆ ವರ ಕೇಳೆಂದರು. ಅದಕ್ಕೆ ಮತಂಗನು 'ನಾನು ಈ ೧೦೦೦ ವರ್ಷಗಳ ಕಾಲ ಬ್ರಹ್ಮಚಾರಿಯಾಗಿ ಜಿತೇಂದ್ರಿಯನಾಗಿ ಏಕಾಗ್ರಚಿತ್ತದಿಂದ ಒಂದೇ ಕಾಲಿನಿಂದ ನಿಂತು ತಪವಗ್ಯೆದರೂ ನನಗೆ ಬ್ರಾಹ್ಮಣ್ಯ ಹೇಗೆ ತಾನೇ ಲಭಿಸದು?' ಎಂದು ಪ್ರಶ್ನಿಸಿದ. ಆಗ ಇಂದ್ರದೇವರು ಚಂಡಾಲಯೋನಿಯಲ್ಲಿ ಹುಟ್ಟಿದ ನಿನಗೆ ಅದೇ ಜನ್ಮದಲ್ಲಿ ಬ್ರಾಹ್ಮಣ್ಯ ಹೇಗೂ ಲಭಿಸದು. ಆದ್ದರಿಂದ ಬೇರೆ ವರ ಕೇಳೆಂದರು. ನೀನು ಮಾಡಿದ ತಪಸ್ಸು ವ್ಯರ್ಥವಾಗುವುದು ಬೇಡ.

ಆದರೆ ಮತಂಗನಿಗೆ ಅದು ತೃಪ್ತಿ ಕೊಡಲಿಲ್ಲ. ಮತ್ತೆ ಗಯಾಕ್ಷೇತ್ರಕ್ಕೆ ಹೋಗಿ ೧೦೦ ವರ್ಷಗಳ ಕಾಲ ಅಂಗುಷ್ಠದ ಮೇಲೆ ನಿಂತು ತಪಸ್ಸನ್ನು ಮಾಡಿದ. ಅಸಾಧ್ಯವಾದ ಯೋಗವನ್ನೂ ಆಶ್ರಯಿಸಿದ. ಹೀಗಾಗಿ ಅವನ ಶರೀರ ಕ್ಷೀಣಿಸಿತು. ಶರೀರದಲ್ಲಿ ನರನಾಡಿಗಳ ಹೊರತು ಬೇರೇನೂ ಕಾಣುತ್ತಿದ್ದಿಲ್ಲ. ತಪಸ್ಸನ್ನು ಮಾಡುತ್ತಾ ಬೀಳುತ್ತಿದ್ದ ಮತಂಗನನ್ನು ಇಂದ್ರದೇವರು ಬಂದು ಎತ್ತಿಹಿಡಿದು ಹೇಳಿದರು – 'ಎಲೈ ಮಗನೇ! ಈ ಜನ್ಮದಲ್ಲಿ ಬ್ರಾಹ್ಮಣ್ಯ ದುರ್ಲಭ. ಅದು ಮೇಲಾಗಿ ಕಾಮ್ರೋಧಾದಿಗಳಿಂದ ಆವೃತವಾಗಿದೆ. ನೋಡು ಮತಂಗ –

೧ ಬ್ರಾಹ್ಮಣರನ್ನು ಗೌರವಿಸುವವನು ಸುಖ ಹೊಂದುವನು. ಇಲ್ಲದಿದ್ದರೆ ದುಃಖಿಯಾಗುತ್ತಾನೆ. ಕಾರಣ ಎಲ್ಲ ಪ್ರಾಣಿಗಳಿಗೂ ತನ್ನ ಸದಾಚಾರಗಳಿಂದ ಯೋಗಕ್ಷೇಮ ಉಂಟು ಮಾಡುತ್ತಾನೆ.

೨. ಬ್ರಾಹ್ಮಣನು ತೃಪ್ತರಾದರೆ, ಪಿತೃದೇವತೆಗಳು ತೃಪ್ತರಾಗುತ್ತಾರೆ. ಆದ್ದರಿಂದ ಅವರೇ ಶ್ರೇಷ್ಠ

೩. ಬ್ರಾಹ್ಮಣನು ತಪಸ್ಸಿನಿಂದ ಎಲ್ಲವನ್ನೂ ಹೊಂದಬಲ್ಲ. ಉಳಿದವರು ಹಲವಾರು ಜನ್ಮಗಳಲ್ಲಿ ತಿರುಗುತ್ತಲೇ ಇರುತ್ತಾರೆ. ಆದ್ದರಿಂದ ಬೇರೆ ವರ ಬೇಡು.' ಹೀಗೆ ಇಂದ್ರ ಅನ್ನಲು, ಮತಂಗನು 'ನಾನು ನನ್ನ ಸಂಕಲ್ಪದಂತೆ ಬ್ರಾಹ್ಮಣ್ಯ ಪಡೆಯದೆ ದುಃಖಿತನಾಗಿದ್ದೇನೆ. ಮತ್ತೆ ನಿನ್ನ ಮಾತುಗಳು ಇನ್ನೂ ನೋಯಿಸುತ್ತಿವೆ. ಸತ್ತವನನ್ನು ಮತ್ತೆ ಸಾಯಿಸಬೇಡ. ನಿನ್ನ ಬಗ್ಗೆಯೇ ನನಗೆ ನೋವಿದೆ. ನೀನು ಬ್ರಾಹ್ಮಣ್ಯಹೊಂದಿದ್ದರೂ ಅದಕ್ಕೆ ಯೋಗ್ಯವಾದ ಅನುಕಂಪವನ್ನು ನನ್ನ ಬಗ್ಗೆ ತೋರಿಸುತ್ತಿಲ್ಲವಲ್ಲ? ನೀನೇ ಬ್ರಾಹ್ಮಣಧರ್ಮ ಪಾಲಿಸುತ್ತಿಲ್ಲ.

ಬ್ರಾಹ್ಮಣ್ಯ ದುರ್ಲಭವಿರಬಹುದು. ಆದರೆ ಬ್ರಾಹ್ಮಣ್ಯ ಹೊಂದಿದವರೂ ಕೂಡಾ ಏಕೆ ಅದಕ್ಕೆ ಉಚಿತವಾದ ಧರ್ಮಗಳನ್ನು ಆಚರಿಸುತ್ತಿಲ್ಲ? ಇದು ನಿಜವಾಗಿಯೂ ದುಃಖದ ವಿಷಯವೇ ಸರಿ. ಅಂತಹವನು ಕಡುಪಾಪಿಯಲ್ಲವೇ? ಇಂದ್ರನೇ ನಾನು ಏಕಾಂತಪ್ರಿಯ. ಪರಿಗ್ರಹ ಬಿಟ್ಟಿದ್ದೇನೆ. ಶೀತೋಷ್ಣ ಸುಖದುಃಖಾದಿ ದ್ವಂದ್ವಾದಿಗಳಿಂದ ದೂರನಾಗಿದ್ದೇನೆ. ಅಹಿಂಸಾವ್ರತ ಪಾಲಿಸುತ್ತಿದ್ದೇನೆ. ಜಿತೇಂದ್ರಿಯನಾಗಿದ್ದೇನೆ. ಹೀಗಿದ್ದರೂ ನಾನೇಕೆ ವಿಪ್ರತ್ವಕ್ಕೆ ಅರ್ಹನಾಗಲಾರೆ?'[೧]

'ಇಂದ್ರನೇ! ನಾನು ಧರ್ಮಜ್ಞ, ಆದರೂ ನನ್ನ ತಾಯಿಯ ದೋಷದಿಂದ ಇಂಥ ದುರವಸ್ಥೆಗೆ ಗುರಿಯಾಗಿದ್ದೇನೆ. ನನ್ನದು ನಿಜವಾಗಿಯೂ ದೌರ್ಭಾಗ್ಯವೇ ಸರಿ. ದೈವೇಚ್ಛೆಯನ್ನು ನಮ್ಮ ಪ್ರಯತ್ನ ಬದಲಾಯಿಸದು. ನಾನು ಸಾವಿರಾರು ವರ್ಷ ತಪಗೈದರೂ ಬ್ರಾಹ್ಮಣ್ಯ ಸಿಗಲಿಲ್ಲ.

ಆದ್ದರಿಂದ ನನಗೆ ಬ್ರಾಹ್ಮಣ್ಯ ಈ ಜನ್ಮದಲ್ಲಿ ಸಿಗದು ಎಂದಾದಲ್ಲಿ ನನಗೆ ಬೇರೆ ವರ ಕೊಡಬೇಕೆನಿಸಿದರೆ, ನಿನ್ನ ಅನುಗ್ರಹಕ್ಕೆ ನಾನು ಪಾತ್ರನಾಗಿದ್ದಲ್ಲಿ, ನನ್ನಲ್ಲಿ ಏನಾದರೂ ಪುಣ್ಯವಿದ್ದಲ್ಲಿ ಬೇರೆ ವರ ಕೊಡು'[೨] ಎಂದಾಗ, ಇಂದ್ರನು 'ತಥಾಸ್ತು' ಎಂದನು. ಮತಂಗನು 'ನನ್ನ ಮೇಲೆ ಪ್ರಸನ್ನನಾಗು. ನಿನಗೆ ತಲೆಬಾಗಿ ನಮಸ್ಕರಿಸುತ್ತೇನೆ, ನಿನ್ನ ಅನುಗ್ರಹದಿಂದ.'

೧. ನಾನು ಎಲ್ಲಿ ಬೇಕೋ ಅಲ್ಲಿ ವಿಹಾರ ಮಾಡುವಂತಾಗಲಿ; ೨. ಬೇಕಾದ ರೂಪಗಳು (ದೇಹ) ಬರಲಿ; ೩. ಸ್ವೇಚ್ಛೆಯಿಂದ ಆಕಾಶದಲ್ಲಿ ಸಂಚರಿಸುವಂತಾಗಲಿ; ೪. ಬ್ರಾಹ್ಮಣ ಕ್ಷತ್ರಿಯರಿಗೆ ವಿರೋಧವಾಗದಂತೆ ಎಲ್ಲರೂ ನನ್ನನ್ನು ಪುರಸ್ಕರಿಸಲಿ, ಮಾನ್ಯ ಮಾಡಲಿ; ೫. ನನ್ನ ಕೀರ್ತಿ ಅಕ್ಷಯವಾಗಲಿ[೩].

---

೧ ಯೋ ಪಾಪೇಭ್ಯಃ ಪಾಪತಮಸ್ತೇಷಾಮಧಮ ಏವ ಸಃ ।
ಬ್ರಾಹ್ಮಣ್ಯಂ ಯೋ ನ ಜಾನೀತೇ ಧನಂ ಲಬ್ಧ್ವೈವ ದುರ್ಲಭಮ್ ॥
ಏಕಾರಾಮೋ ಹ್ಯಹಂ ಶಕ್ರ ನಿರ್ದ್ವಂದ್ವೋ ನಿಷ್ಪರಿಗ್ರಹ ।
ಅಹಿಂಸಾದಮಮಾಸ್ಥಾಯ ಕಥಂ ನಾರ್ಹಾಮಿ ವಿಪ್ರತಾಮ್ ॥

೨ ದೈವಂ ತು ಕಥಮೇತದ್ವೈ ಯದಹಂ ಮಾತೃದೋಷತಃ ।
ಏತಾಮವಸ್ಥಾಂ ಸಂಪ್ರಾಪ್ತೋ ಧರ್ಮಜ್ಞಃ ಸನ್ ಪುರಂದರಃ ॥
ನೂನಂ ದೈವಂ ನ ಶಕ್ಯಂ ಹಿ ಪೌರುಷೇಣಾತಿವರ್ತಿತುಮ್ ।
ಯದರ್ಥಂ ಯತ್ನವಾನೇವ ನ ಲಭೇ ವಿಪ್ರತಾಂ ವಿಭೋ ॥ - ೫/೧೬-೨೦(ದಾ.ಪಾ.)

೩ ಮತಂಗ ಉವಾಚ –
ಯಥಾಕಾಮ ವಿಹಾರೀ ಸ್ಯಾಂ ಕಾಮರೂಪೀ ವಿಹಂಗಮಃ ।
ಬ್ರಹ್ಮಕ್ಷತ್ರಾವಿರೋಧೇನ ಪೂಜಾಂ ಚ ಪ್ರಾಪ್ನುಯಾಮಹಮ್ ॥
ಯಥಾ ಮಮಾಕ್ಷಯಾ ಕೀರ್ತಿರ್ಭವೇಚ್ಚಾಪಿ ಪುರಂದರ ।
ಕರ್ತುಮರ್ಹಸಿ ತದ್ದೇವ ಶಿರಸಾ ತ್ವಾಂ ಪ್ರಸಾದಯೇ ॥

ಈ ವರಗಳನ್ನು ಅನುಗ್ರಹಿಸು ಎಂದ ಮತಂಗ ಋಷಿ. ಇಂದ್ರದೇವರು ವಾತ್ಸಲ್ಯದಿಂದ 'ನೀನು ಛಂದೋದೇವ ಎಂದು ಪ್ರಪಂಚದಲ್ಲಿ ಪ್ರಖ್ಯಾತನಾಗುವೆ. ಸ್ತ್ರೀಯರಿಗೆ ಪೂಜ್ಯನಾಗುವೆ. ಅಕ್ಷಯಕೀರ್ತಿ ನಿನಗೆ ಮೂರೂ ಲೋಕಗಳಲ್ಲಿ ವ್ಯಾಪಿಸುತ್ತದೆ'[೧] ಎಂದು ವರಗಳನ್ನು ನೀಡಿ, ಅಂತರ್ಧಾನನಾದರು.

ಆದ್ದರಿಂದ ಇಂದ್ರದೇವರು ತಿಳಿಸಿದಂತೆ ಬ್ರಾಹ್ಮಣ್ಯವು ಅತಿದುರ್ಲಭ. ಇತರ ವರ್ಣದವರು ಅದೇ ಜನ್ಮದಲ್ಲಿ ಅದನ್ನು ಹೊಂದುವುದು ಅಸಾಧ್ಯ.

## ಸಂದೇಶಗಳು–ವಿವರಣೆಗಳು

೧. ವರ್ಣಾಶ್ರಮಧರ್ಮಗಳ ಪಾಲನೆಯಲ್ಲಿಯೇ ಸಾಧನೆಯ ರಹಸ್ಯ ಅಡಗಿದೆ.

೨. ಮತಂಗನ ತಾಯಿ ಬ್ರಾಹ್ಮಣಿ; ಯೌವನಮದ ಆಕೆಯನ್ನು ಹೀನ ಯೋನಿಯವನೊಡನೆ ದೇಹಸಂಪರ್ಕ ಮಾಡಿ, ವ್ಯಭಿಚಾರಿಯಾಗಿದ್ದು ಆಕೆಯನ್ನೂ, ಆಕೆಯಲ್ಲಿ ಜನಿಸಿದ ಅಮಾಯಕ ಮತಂಗನಿಗೂ ಅಧಃಪತನಕ್ಕೆ ಕೆಡವಿತು. ತಾಯಿಯ ಬಗ್ಗೆ ಭಾರತದಲ್ಲಿ ಏನೂ ಮಾಹಿತಿ ಇಲ್ಲ. ಆ ಕಾಲದಲ್ಲೂ ದುಷ್ಟಸ್ತ್ರೀಯರು ಇದ್ದರೆನ್ನಲು ಇದು ಸಾಕ್ಷಿ.

೩. ಮತಂಗನಿಗೆ ಸ್ವಾಭಾವಿಕ ಜನ್ಮದೋಷವನ್ನು (ಕ್ರೌರ್ಯವನ್ನು) ಹೆಣ್ಣುಕತ್ತೆ ಗಮನಿಸಿತು. ಆ ಕತ್ತೆ ನಿಜಕ್ಕೂ ಪೂರ್ವಜನ್ಮದಲ್ಲಿ ಮಹಾಜ್ಞಾನಿಯಾಗಿರಬೇಕು. ಈ ಜನ್ಮದಲ್ಲಿ ಕತ್ತೆಯಾಗಿದ್ದು ಮತಂಗನ ಜಾತಕವನ್ನೇ ಹೊರಹಾಕಿ, ಅವನನ್ನು ಬಡಿದೆಬ್ಬಿಸಿತು.

೪. ಮತಂಗನ ಪೂರ್ವಾಪರ ತಿಳಿಯದೆ, ಆತನ ಸಾಕುತಂದೆ ಯಜ್ಞಾದಿ ವೈದಿಕಕರ್ಮಗಳನ್ನು ಮಾಡಿಸುತ್ತಿದ್ದ. ಪ್ರಪಂಚದಲ್ಲಿ ಹೀಗೂ ಆಗುತ್ತವೆ, ಎಷ್ಟು ಸೋಜಿಗ! ಅನಧಿಕಾರಿಯಿಂದ ಯಜನಾದಿಗಳು.

೫. ಮತಂಗನ ಆಸೆ ಒಳ್ಳೆಯದು. ಆದರೆ ಯಾವ ಜ್ಞಾನಿಗಳನ್ನೂ ಕೇಳದೇ ಬ್ರಾಹ್ಮಣ್ಯ ಸಂಪಾದನೆಗೆ ತಪಸ್ಸಿಗೆ ಹೊರಟೇಬಿಟ್ಟ. ಆಗಿನ ಕಾಲದಲ್ಲಿ ಎಲ್ಲ ಸಿದ್ಧಿಯ ಮೂಲ ತಪಸ್ಸಾಗಿತ್ತು. ಆದರೆ ಅದು ತನಗೆ ವಿಹಿತವೋ? ಅಲ್ಲವೋ? ಎಂದು ಮತಂಗ ಯೋಚಿಸಲಿಲ್ಲ. ಯಾರನ್ನೂ ಕೇಳಲಿಲ್ಲ. ಆತನು ತಾನು ಜ್ಞಾನಿ ಎಂದೇ ಭ್ರಮಿಸಿದ್ದ. ತಾನೇ ಹಾಗೇ ಹೇಳಿಕೊಳ್ಳುತ್ತಾನೆ ಕೂಡ (ಅ. ೨೯/೧೮ರಲ್ಲಿ ಧರ್ಮಜ್ಞಃ ಸನ್ ಪುರಂದರ ಎಂದು).

೬. ಇಂದ್ರದೇವರು ಎಷ್ಟೇ ಹೇಳಿದರೂ (ವಾತ್ಸಲ್ಯ ಪೂರ್ಣವಾಗಿ) ಕೇಳಲಿಲ್ಲ ಮತಂಗ. ದೇವತೆಗಳ ಮಾತನ್ನೂ ಕೇಳದವರೂ ಇರುತ್ತಾರೆ.

---

೧ ಛಂದೋದೇವ ಇತಿ ಖ್ಯಾತಃ ಸ್ತ್ರೀಣಾಂ ಪೂಜ್ಯೋ ಭವಿಷ್ಯಸಿ।
ಕೀರ್ತಿಶ್ಚ ತೇಽತುಲಾ ವತ್ಸ ತ್ರಿಷು ಲೋಕೇಷು ಯಾಸ್ಯತಿ॥ – ೫/೨೩–೨೮(ದಾ.ಪಾ.)

೭. ಇಂದ್ರದೇವರು ಮಾತ್ರ ಮತಂಗನ ಬಗ್ಗೆ ಯಾವಾಗಲೂ ಮೆದು ಧೋರಣೆ, ವಾತ್ಸಲ್ಯಪೂರ್ಣ ಉಪದೇಶ ಕಠೋರ ಎಚ್ಚರಿಕೆ ಕೊಡದೆ ಬಿಡಲಿಲ್ಲ. ತಮ್ಮ ಮಾತನ್ನು ಕೇಳದಿದ್ದುದಕ್ಕೆ ಕೋಪಗೊಳ್ಳದ ಇಂದ್ರದೇವರ ಅನುಗ್ರಹ, ಭಕ್ತರಿಗೆಲ್ಲ ತುಂಬಾ ಧೈರ್ಯ ಕೊಡುತ್ತದೆ. ಅವರದು ಭಕ್ತಾಪರಾಧಸಹಿಷ್ಣುತ್ವಗುಣ. ಭಕ್ತರನ್ನು ಭಾವನಾತ್ಮಕವಾಗಿ ಅನುಗ್ರಹಿಸುತ್ತಾರೆ. ದೈವೀಗುಣ ಎಂದರೆ ಹೀಗೆ.

೮. ಮತಂಗ ತನಗೆ ಬೇಕಾದುದು ಸಿಗಲಿಲ್ಲವೆಂಬುದಕ್ಕೆ ವಿಷಾದಪಟ್ಟ ಇಂದ್ರದೇವರನ್ನು ಪ್ರಶ್ನಿಸಿದ. ದೈವಾನುಗ್ರಹದ ಮಹಿಮೆ ತಿಳಿದ. ಕೊನೆಗೂ ಬೇರೆ ವರ ಕೇಳಿ ಪಡೆದ, ಶಿರಬಾಗಿದ. ಇಂದ್ರಾನುಗ್ರಹದಿಂದ ಮೂರೂ ಲೋಕದಲ್ಲಿ '**ಛಂದೋದೇವ ಪದವಿ, ಅಪಾರಕೀರ್ತಿ**' ಪಡೆದ.

೯. ಮತಂಗರ ಮೋಕ್ಷಾಶೆಯ ಬಗ್ಗೆ ಇಲ್ಲಿ ಏನೂ ಗೊತ್ತಾಗದು. ಅವರ ಆಶೆ ಕಾಮ್ಯಕರ್ಮದ ಫಲದಂತೆ ಇದೆ. ಅದು ಮೋಕ್ಷಕ್ಕೆ ಸಾಧಕವಲ್ಲವೇನೋ! ಅವರ ಉಳಿದ ಜೀವನದ ಬಗ್ಗೆ ಬೇರೆ ಗ್ರಂಥಗಳಲ್ಲಿರಬಹುದು.

೧೦. ರಾಮಾಯಣದಲ್ಲೂ ಮತಂಗರ ಪ್ರಸ್ತಾಪ ಇದೆ (ಮ.ತಾ.ನಿ. ೫/೪೪). ಶಬರಿಗೆ ರಾಮಮಹಿಮೆ ತಿಳಿಸಿದ ಮಹಾತ್ಮರು. ಅವರೇ ಇವರೇನೋ ತಿಳಿಯದು.

೧೧. ಅಂತೂ ಮತಂಗೋಪಾಖ್ಯಾನ ನಮ್ಮ ಯೋಗ್ಯತೆಗೆ ಮೀರಿದುದನ್ನು ಬಯಸಬಾರದೆಂದು ತಿಳಿಸುತ್ತದೆ.

'**ಅಯೋಗ್ಯಮಿಚ್ಛನ್ ಪುರುಷ ಪತತ್ಯೇವ ನ ಸಂಶಯಃ**' (ಮ.ತಾ.ನಿ. ೧/೯೫). ಮತಂಗರು ನಾಶವಾಗಲು ಇಂದ್ರ ಬಿಡದೇ ಕಾಪಾಡಿದ. ಕಾರಣ ಅವರು ಸಾತ್ವಿಕರು.

**ವಿ.ಸೂ.: ಮಂತಗೋಪಾಖ್ಯಾನದಲ್ಲಿ ದಾಕ್ಷಿಣಾತ್ಯಪಾಠವನ್ನು ಉದಾಹರಿಸಲಾಗಿದೆ. ಔತ್ತರೇಯಪಾಠವೂ ಇದೆ. ಉಡುಪಿ ಪಾಠದಲ್ಲಿ ಈ ಉಪಾಖ್ಯಾನವು ೫೮-೬೦ ಅಧ್ಯಾಯಗಳಲ್ಲಿವೆ. ಪಾಠಾಂತರಗಳಂತೂ ಅಲ್ಲಲ್ಲಿ ಇದ್ದೇ ಇವೆ.**

*****

# ೧೪೩. ವಿಪುಲೋಪಾಖ್ಯಾನ

ಸ್ವೇಚ್ಛಾಚಾರಿಗಳೂ, ಕಾಮುಕರೂ, ಸ್ವೈರಿಣಿಯರೂ ಆದ ಸ್ತ್ರೀಯರ ದೋಷಗಳನ್ನು ಮಹಾಭಾರತ ವಿಸ್ತಾರವಾಗಿ ಹೇಳುತ್ತದೆ (ಇದೇ ಪರ್ವದ ಈ ಉಪಾಖ್ಯಾನದ ಮೊದಲೆರಡು ಅಧ್ಯಾಯಗಳಲ್ಲಿ ಅದೂ ಕೂಡಾ ಪಂಚಚೂಡಾ ಎಂಬ ಅಪ್ಸರೆಯ ಮೂಲಕ). ಅವರ ನಿಯಂತ್ರಣ ಅಸಾಧ್ಯ. ಸೃಷ್ಟಿಮಾಡಿದ ಬ್ರಹ್ಮನೂ ನಿಯಂತ್ರಿಸಲಾರ ಎಂಬ ಉತ್ಪ್ರೇಕ್ಷೆಯ ಮಾತುಗಳಿವೆ. ಆದರೆ, 'ವೈರಾಗ್ಯಮನಸ್ಕರೂ, ಬ್ರಹ್ಮಚರ್ಯಪಾಲಕರಾಗಿ, ತಪಸ್ಸು ಇಂದ್ರಿಯನಿಗ್ರಹ, ದೇವತಾಪೂಜೆ, ಧ್ಯಾನಾಸಕ್ತರಾದವರು, ಇಂತಹ ಮಾನಸಿಕ ದೈಹಿಕ ಕ್ಷೋಭೆಗಳಿಗೆ ಒಳಗಾಗದೇ ಶುದ್ಧರಾಗಿರುತ್ತಾರೆ ಎಂಬ ಭಾವವೂ ಇಲ್ಲಿ ಮೂಡಿವೆ. ಸ್ತ್ರೀಮಾಯೆ ಬ್ರಹ್ಮಕೃತವಾದ ಸಾಧಕರನ್ನು ಪರೀಕ್ಷಿಸುವ ಒಂದು ನಿಕಷಃ. ಅಂದ ಮಾತ್ರಕ್ಕೆ ಎಲ್ಲ ಸ್ತ್ರೀಯರು ಹಾಗೆ ಎಂತೇನಲ್ಲ. ಅಂತಹ ಸ್ತ್ರೀಯರನ್ನು ಪತ್ನಿಯನ್ನಾಗಿ ಪಡೆದವರು ತಮ್ಮ ಪತ್ನಿಯನ್ನು ಕಾಪಾಡಿಕೊಳ್ಳುವುದೂ ಕಷ್ಟಸಾಧ್ಯವಾದರೂ, ಆ ರೀತಿ ಗುರುಪತ್ನಿಯನ್ನೇ ಕಾಪಾಡಿದ '**ವಿಪುಲ**'ನೆಂಬ ಶಿಷ್ಯನ ಕಥೆಯೇ ಈ ಉಪಾಖ್ಯಾನದ ವಸ್ತು.

ಈ ಉಪಾಖ್ಯಾನವನ್ನು ಭೀಷ್ಮರು ಧರ್ಮರಾಜನಿಗೆ ಹೇಳುತ್ತಾರೆ.

**ದೇವಶರ್ಮ** ಎಂಬ ಜಗನ್ಮಾನ್ಯ ಋಷಿ ಇದ್ದ. ಆತನ ಹೆಂಡತಿ **ರುಚಿ** ಭೂಲೋಕದಲ್ಲಿ ಅಪ್ರತಿಮಸುಂದರಿ. ಪರಿಣಾಮವಾಗಿ ಆಕೆಯ ರೂಪ ದೇವಗಂಧರ್ವದಾನವರನ್ನೂ ವಿಶೇಷವಾಗಿ ಇಂದ್ರನನ್ನೂ ಮೋಹಗೊಳಿಸಿತ್ತು (ಹುಚ್ಚುಹಿಡಿಸಿತ್ತು)[೧]. ಇದು ದೇವಶರ್ಮನಿಗೂ ಗೊತ್ತಿತ್ತು. ಆದ್ದರಿಂದ ಹೆಂಡತಿಯ ರಕ್ಷಣೆಗಾಗಿ ಅತ ಸಾಕಷ್ಟು ಮುತುವರ್ಜಿ ವಹಿಸಿದ್ದ.

ಒಮ್ಮೆ ದೇವಶರ್ಮ ಯಜ್ಞ ಮಾಡಿಸಲು ಎಲ್ಲೋ ಹೋಗುವ ಪ್ರಸಂಗ ಬಂತು. ಅದಕ್ಕಾಗಿ ತನ್ನ ಆತ್ಮೀಯಶಿಷ್ಯನಾದ ಭೃಗುವಂಶೀಯನಾದ, '**ವಿಪುಲ**'ನನ್ನು ಕರೆದು ತನ್ನ ಪ್ರವಾಸ ಕಾರ್ಯ ತಿಳಿಸಿದ. ತಾನು ಬರುವವರೆಗೂ ತನ್ನ ಪತ್ನಿಯನ್ನು ಜಾಗರೂಕನಾಗಿ, ವಿಶೇಷವಾಗಿ, ಅನೇಕ ರೂಪಗಳಿಂದ ಬರುವ ಪರಸ್ತ್ರೀಕಾಮುಕನಾದ ಇಂದ್ರನಿಂದ ರಕ್ಷಣೆ ಮಾಡಲು [೨]ಸೂಚಿಸಿದ (ಗುರುದೇವಶರ್ಮ ತನ್ನ ಶಿಷ್ಯನಿಗೆ).

---

೧ ತಸ್ಯಾ ರೂಪೇಣ ಸಮ್ಮತ್ತಾ ದೇವಗಂಧರ್ವದಾನವಾಃ ।
ನಾರೀಣಾಂ ಚರಿತಜ್ಞಶ್ಚ ದೇವಶರ್ಮಾ ಮಹಾಮುನಿಃ ॥

೨ ಪುರಂದರಂ ಚ ಜಾನೀತೇ ಪರಸ್ತ್ರೀಕಾಮಚಾರಿಣಮ್ ।
ತಸ್ಮಾದ್ಯತ್ನೇನ ಭಾರ್ಯಾಯಾ ರಕ್ಷಣಂ ಸ ಚಕಾರ ಹ ॥
ಅಪ್ರಮತ್ತೇನ ತೇ ಭಾವ್ಯಂ ಸದಾ ಪ್ರತಿ ಪುರಂದರಮ್ ।
ಸ ಹಿ ರೂಪಾಣಿ ಕುರುತೇ ವಿವಿಧಾನಿ ಭೃಗೂದ್ವಹ ॥

ಹೀಗೆ ಹೇಳಲ್ಪಟ್ಟ ತಪಸ್ವಿಯೂ, ಜಿತೇಂದ್ರಿಯನೂ, ಕಠಿಣತಪಸ್ಸಿನಲ್ಲಿ ನಿರತನೂ, ಅಗ್ನಿ ಸೂರ್ಯಸದೃಶ ತೇಜಸ್ಸುಳ್ಳವನೂ, ಧರ್ಮಜ್ಞನೂ, ಸತ್ಯವಾದಿಯೂ ಆದ ವಿಪುಲನು 'ಹಾಗೆಯೇ ಆಗಲಿ'[1] ಎಂದನು.

ನಂತರ ವಿಪುಲನು 'ಶಕ್ರನು ಬರುವಾಗ ಯಾವ ಯಾವ ರೂಪಗಳಿಂದ ಬರುತ್ತಾನೆ. ಅವನ ಶರೀರ, ತೇಜಸ್ಸುಗಳು ಹೇಗಿರುತ್ತವೆ?' ಎಂದು ಕೇಳಲು ದೇವಶರ್ಮನು ಇಂದ್ರನು ಮಹಾಮಾಯಾವಿ. ಅನೇಕ ರೂಪಗಳನ್ನು ಅಲ್ಪಸಮಯದಲ್ಲಿಯೇ ತೆಗೆದುಕೊಂಡು ಪರಿಸ್ಥಿತಿಗೆ ಅನುಗುಣವಾಗಿ ಬದಲಾಯಿಸುತ್ತಾ ಇರುತ್ತಾನೆ. ಆತನು ಸ್ವೀಕರಿಸುವ ರೂಪಗಳು ಹೀಗಿರುತ್ತವೆ.

೧. ಕಿರೀಟಧಾರಿಯಾಗಿ; ೨. ವಜ್ರಾಯುಧ, ದನುರ್ಧಾರಿಯಾಗಿ; ೩. ಕುಂಡಲಧಾರಿ-ಯಾಗಿರುತ್ತಾನೆ ಮರುಮುಹೂರ್ತದಲ್ಲಿ; ೪. ಚಂಡಾಲವೇಷಧಾರಿಯಾಗಿ ಬಿಡುತ್ತಾನೆ; ೫. ಶಿಖೆಯುಳ್ಳವನಾಗಿ; ೬. ಜಟಾಧಾರಿಯಾಗಿ; ೭. ನಾರುಮುಡಿಯುಟ್ಟುಕೊಂಡು; ೮. ಭಾರೀ ಶರೀರ ಉಳ್ಳವನಾಗಿ; ೯. ಸ್ಥೂಲಶರೀರವುಳ್ಳವನಾಗಿ; ೧೦. ನಂತರ ಕೃಶಶರೀರಿಯಾಗಿಯೂ ಆಗುತ್ತಾನೆ; ೧೧. ತನ್ನ ಮೈಬಣ್ಣವನ್ನು ಗೌರ (ಬಿಳಿ), ಶ್ಯಾಮವರ್ಣ(ನೀಲಮೇಘ), ಕಪ್ಪು ರೂಪಗಳನ್ನಾಗಿಯೂ ತೆಗೆದುಕೊಳ್ಳುತ್ತಾನೆ; ೧೨. ಕುರೂಪಿಯಾಗಿ; ೧೩; ಸುರೂಪಿಯಾಗಿ; ೧೪. ಯುವಕನಾಗಿ; ೧೫. ವೃದ್ಧನಾಗಿ; ೧೬. ಜ್ಞಾನಿಯಾಗಿ(ಶಾಸ್ತ್ರಬಲ್ಲವನಾಗಿ); ೧೭. ಅಜ್ಞಾನಿ(ಜಡನಂತೆ); ೧೮. ಮೂಕನಾಗಿ; ೧೯. ಕುಳ್ಳನಾಗಿ; ೨೦. ಎತ್ತರಶರೀರನಾಗಿ; ೨೧. ಬ್ರಾಹ್ಮಣ; ೨೨. ಕ್ಷತ್ರಿಯ; ೨೩. ವೈಶ್ಯ; ೨೪. ಶೂದ್ರ; ೨೫. ಪ್ರತಿಲೋಮ-ಅನುಲೋಮ(ಸಂಕರಜಾತಿಯವನಾಗಿ)ರೂಪಗಳನ್ನು ತೆಗೆದುಕೊಳ್ಳುವ ಸಮರ್ಥನು ಇಂದ್ರ(೬+೬=೧೨ ರೂಪ).

ಅಲ್ಲದೆ ೨೬. ಗಿಳಿ-ಕಾಗೆ ರೂಪಗಳನ್ನು (ಒಂದಾದ ನಂತರ ಮತ್ತೊಂದು); ೨೭. ಹಂಸ-ಕೋಗಿಲೆ ರೂಪಗಳನ್ನು; ೨೮. ಸಿಂಹ-ಹುಲಿ-ಆನೆ ರೂಪಗಳನ್ನು ಕೂಡಾ ಧರಿಸಬಲ್ಲವನು ಶಕ್ರ. ೨೯. ದೇವ; ೩೦. ದೈತ್ಯ; ೩೧. ರಾಜರ ರೂಪಗಳನ್ನು; ೩೨. ಅತ್ಯಂತ ಸೊರಗಿದ, ವಾಯು, ವಾತ ರೋಗದಿಂದ ಭಗ್ನವಾದ ವಿಕಲಾಂಗನಾಗಿ, ಪಾರ್ಶ್ವವಾಯು ಪೀಡಿತವಾದ; ೩೩. ವಿಕಾರ ಹೊಂದಿದ ಪಕ್ಷಿ ರೂಪನಾಗಿಯೂ ಬರುತ್ತಾನೆ; ೩೪. ನಾಲ್ಕು ಪಾದ ಉಳ್ಳವನಾಗಿ(ಪ್ರಾಣಿ-ಪಶು); ೩೫. ಬಹುರೂಪ ಉಳ್ಳವನಾಗಿಯೂ; ೩೬. ನೊಣ, ಸೊಳ್ಳೆ ಮೊದಲಾದ ಕೀಟರೂಪವುಳ್ಳನಾಗಿಯೂ(ಕರ್ಣನ ತೊಡೆಯನ್ನು ಕೊರೆದ 'ಹೇತಿ ಎಂಬ ಕೀಟದಲ್ಲಿ ಇಂದ್ರನು ಪ್ರವೇಶಿಸಿದುದು ಭಾರತದಲ್ಲಿ ಪ್ರಸಿದ್ಧ - ಮ.ತಾ.ನಿ. ೧೫/೫೩) ಬರುತ್ತಾನೆ.

---

೧ ಇತ್ಯುಕ್ತೋ ವಿಪುಲಸ್ತೇನ ತಪಸ್ವೀ ನಿಯತೇಂದ್ರಿಯಃ।
ಸದೈವೋಗ್ರತಪಾ ರಾಜನ್ ಅಗ್ನ್ಯರ್ಕಸದೃಶ ದ್ಯುತಿಃ॥
ಧರ್ಮಜ್ಞಃ ಸತ್ಯವಾದೀ ಚ ತಥೇತಿ ಪ್ರತ್ಯಭಾಷತ॥ - ತಂ.ಸಂ.ಸಂ. ೭೦/೧೯-೨೭

ಹೀಗೆ ವಿಪುಲನೇ! ಇಂದ್ರನ ರೂಪಾಂತರಗಳನ್ನು ತಿಳಿಯಲು ಬ್ರಹ್ಮನಿಗೂ ಸಾಧ್ಯವಿಲ್ಲವೆಂದು ದೇವಶರ್ಮ ಉತ್ಪ್ರೇಕ್ಷಿಸುತ್ತಾನೆ[1]. ಇಷ್ಟೆಲ್ಲ ರೂಪಗಳನ್ನು ಸ್ವೀಕರಿಸುತ್ತಾ ಅಂತರ್ಧಾನನಾಗುತ್ತಾನೆ. ಜ್ಞಾನದೃಷ್ಟಿಯುಳ್ಳವರಿಗೆ ಗೋಚರವಾಗುತ್ತಾನೆ. ಮತ್ತೆ ವಾಯುಶರೀರವನ್ನೂ ತೆಗೆದುಕೊಳ್ಳುತ್ತಾನೆ. ಹೀಗೆ ಶಕ್ರನು ತನ್ನ ರೂಪಗಳನ್ನು ಬದಲಾಯಿಸಿ ಗುರುತಿಸಲ್ಪಡದಂತೆ ವರ್ತಿಸುತ್ತಾನೆ. ಆದ್ದರಿಂದ ಪ್ರಯತ್ನಪೂರ್ವಕವಾಗಿ, ನಾಯಿಯು ಹವಿಸ್ಸನ್ನು ನೆಕ್ಕದಂತೆ, ನನ್ನ ಪತ್ನಿ ರುಚಿಯನ್ನು ಇಂದ್ರನು ಸ್ಪರ್ಶಿಸದಂತೆ ರಕ್ಷಿಸು ಎಂದು ಗುರುಗಳು ಆದೇಶ ನೀಡುತ್ತಾರೆ ವಿಪುಲನಿಗೆ. ನಂತರ ಅವರು ಯಜ್ಞಕಾರ್ಯಕ್ಕೆ ಹೋದರು.

ಇತ್ತ ವಿಪುಲನು ಗುರುಪತ್ನಿಯನ್ನು ಹೇಗೆ ರಕ್ಷಿಸಬೇಕೆಂದು ಯೋಚಿಸಿದ. ಮಹಾಮಾಯಾವಿ ಇಂದ್ರ ಆಶ್ರಮವನ್ನು ಮುಚ್ಚಿದರೂ ಯಾವುದೇ ಸೂಕ್ಷ್ಮರೂಪಸ್ವೀಕರಿಸಿ ಒಳಗೆ ಯಾರಿಗೂ ತಿಳಿದಯಂತೆ ಬರಬಲ್ಲ. ವಾಯುರೂಪದಿಂದಲೂ ಬಂದು ಗುರುಪತ್ನಿಯನ್ನು ಬಲಾತ್ಕರಿಸಬಲ್ಲ. ಆದ್ದರಿಂದ ಗುರುಪತ್ನಿಯನ್ನು ಪ್ರವೇಶಿಸಿ [2]ಯೋಗಬಲದಿಂದ ರಕ್ಷಿಸುವೆ(ತಪೋಬಲದಿಂದ) ಆಕೆಯನ್ನು ಎಲ್ಲ ಅವಯವಗಳಲ್ಲಿ ನನ್ನ ಅವಯವಗಳನ್ನು ಪ್ರವೇಶಿಸುತ್ತೇನೆ. ಆಗ ಇಂದ್ರನು ಬಲಾತ್ಕಾರ ಮಾಡಿದಲ್ಲಿ ಆತನನ್ನು ಗುರುತಿಸಬಹುದು, ಧಿಕ್ಕರಿಸಬಹುದು. ಏಕೆಂದರೆ ಇಂದ್ರನು ರುಚಿಯನ್ನು ಸ್ಪರ್ಶಿಸಿದರೆ ಗುರುಗಳಿಗೆ ಗೊತ್ತಾಗುತ್ತದೆ, ಅವರ ದಿವ್ಯಜ್ಞಾನದೃಷ್ಟಿಯಿಂದ. ಆದರೆ ಗುರುಗಳ ಆಜ್ಞೆಯನ್ನು ಹೇಗಾದರೂ ಮಾಡಿ ಪಾಲಿಸಲೇಬೇಕು. ಮಾಡಿದರೆ ಅದೊಂದು ಅದ್ಭುತಕಾರ್ಯವಾಗುತ್ತದೆ. ಆದ್ದರಿಂದ ನಾನು ಯೋಗಶಕ್ತಿಯಿಂದ ಧೂಳಿನ ಕಣದ ರೂಪದಲ್ಲಿ ಗುರುಪತ್ನೀ ಶರೀರಪ್ರವೇಶಿಸಿ ಹೊರ ಬಂದರೆ ಯಾವ ದೋಷವೂ ಉಂಟಾಗದು. ಮಾನಸಿಕ ಲೇಪ – ಅಭಿಮಾನದ ವರ್ತನೆ ಪಾಪಕ್ಕೆ ಕಾರಣ. ಜ್ಞಾನಿಯ ಆಚರಣೆ ಪಾಪಕ್ಕೆ ಕಾರಣವಾಗದು. ಪತ್ನಿಯನ್ನು, ಪುತ್ರಿಯನ್ನು ಆಲಿಂಗಿಸಿದಾಗ ಅನುಸಂಧಾನಗಳೇ ಬೇರೆ, ಇಬ್ಬರೂ ಸ್ತ್ರೀಯರಾದರೂ. ಗರ್ಭದಲ್ಲಿರುವ ಪುತ್ರನಿಗೆ ಜನಿಸುವಾಗ ಹೇಗೆ ದೋಷವಿಲ್ಲವೋ ಹಾಗೆ ನಿರಭಿಮಾನದಿಂದ ನಾನು ಪತ್ನಿಯ ಎಲ್ಲ ಅವಯವಗಳಲ್ಲಿ ಜಾಗರೂಕನಾಗಿ ಸದುದ್ದೇಶದಿಂದ ಇದ್ದರೆ ನನಗಾವ ದೋಷವೂ ಇಲ್ಲ. ನಾನು ಗುರುಪತ್ನಿಯ ದೇಹದಲ್ಲಿ ನೀರಿನಲ್ಲಿರುವ ಕಮಲಪತ್ರದಂತೆ ಇದ್ದು ಇರದಂತೆ ಇರುತ್ತೇನೆ. ಹೀಗಾಗಿ ನನಗೆ ಗುರುಪತ್ನಿ ಗಮನದಂತಹ ದೋಷ ಬರದು.

ಹೀಗೆ ನಿಶ್ಚಯಿಸಿ, ಗುರುಪತ್ನಿಯ ಮುಂದೆ ಕುಳಿತು ಅನೇಕ ಉಪಾಖ್ಯಾನಗಳಿಂದ ಅವಳನ್ನು ಮರುಳುಗೊಳಿಸಿದನು (ವಶೀಕರಿಸಿಕೊಂಡ). ನಂತರ ಆಕೆಯ ಕಣ್ಣಲ್ಲಿ ತನ್ನ ಕಣ್ಣಿನ

---

೧ ನ ಶಕ್ಯಮಸ್ಯ ಗ್ರಹಣಂ ಕರ್ತುಂ ವಿಪುಲ ಕೇನಚಿತ್ ।
ಅಪಿ ವಿಶ್ವಕೃತಾ ತಾತ ಯೇನ ಸೃಷ್ಟಮಿದಂ ಜಗತ್ ॥ – ೭೦/೩೮

೨ ಯೋಗೇನಾನುಪ್ರವಿಶ್ಯೇಹ ಗುರುಪತ್ನ್ಯಾಃ ಕಳೇವರಮ್ ।
ನಿರ್ಮುಕ್ತಸ್ಯ ರಜೋರೂಪಾನ್ನಾಪರಾಧೋ ಭವೇನ್ಮಮ ॥ – ೭೦/೫೨

ಕಿರಣಗಳನ್ನು ಸೇರಿಸಿ, ವಾಯು ಆಕಾಶವನ್ನು ಪ್ರವೇಶಿಸುವಂತೆ ಗುರುಪತ್ನಿಯ ಶರೀರವನ್ನು ಪ್ರವೇಶಿಸಿದನು[೧].

ತನ್ನ ಲಕ್ಷಣಗಳನ್ನು ಅವಳ ಲಕ್ಷಣಗಳ ಜೊತೆಯಲ್ಲಿ ತನ್ನ ಮುಖವನ್ನು ಆಕೆಯ ಮುಖದೊಡನೆ ಸಂಯೋಜಿಸಿ, ಒಳಗೆ ಪ್ರವೇಶಿಸಿ, ವಿಪುಲನು ನೆರಳಿನಂತೆ ಚಲಿಸದಂತಿದ್ದನು. ಗುರುಪತ್ನಿಯ ಶರೀರದ ಚಟುವಟಿಕೆಗಳನ್ನೇ ಸ್ತಂಭನಗೊಳಿಸಿ, ಗುರುಗಳು ಯಜ್ಞ ಕಾರ್ಯ ಮುಗಿಸಿಕೊಂಡು ಬರುವವರೆಗೆ ಗುರುಪತ್ನಿಯನ್ನು ರಕ್ಷಿಸಿದನು. ತನ್ನನ್ನು ವಿಪುಲನು ಪ್ರವೇಶಿಸಿ ಇರುವ ವಿಷಯ ಗುರುಪತ್ನಿಗೆ ಗೊತ್ತಾಗಲೇ ಇಲ್ಲ.

ದೇವಶರ್ಮನು ಯಜ್ಞಕಾರ್ಯಕ್ಕೆ ಹೋದಾಗಲೇ ಇಂದ್ರದೇವರು ಸುಂದರವಾದ, ಆಸೆ ಬರಿಸುವ, ಆಕರ್ಷಕರೂಪ ಧರಿಸಿ ಆಶ್ರಮಕ್ಕೆ ಬಂದು, ಒಂದು ಕಡೆ ನಿಶ್ಚೇಷ್ಟಿತವಾದ ರೆಪ್ಪೆಗಳು ಅಲುಗಾಡಿಸದಿರುವ, ಚಿತ್ರಲಿಖಿತ ಗೊಂಬೆಯಂತಿದ್ದ ವಿಪುಲನ ದೇಹವನ್ನು, ಇನ್ನೊಂದೆಡೆ ಸುಂದರನೇತ್ರ, ದಷ್ಟಪುಷ್ಟ ನಿತಂಬ, ಸ್ತನ, ಪೂರ್ಣಚಂದ್ರನಂತಹ ಮುಖವುಳ್ಳ ರುಚಿಯನ್ನು ನೋಡಿದರು. ಅವರನ್ನು ನೋಡಿದಕೂಡಲೇ ಮೇಲೆದ್ದು ಅವನ ರೂಪಕ್ಕೆ ಆಶ್ಚರ್ಯ ಚಕಿತಳಾಗಿ ನೀನಾರು? ಎಂದು ಕೇಳಲು ಬಯಸಿದಳು ರುಚಿ. ಆದರೆ ವಿಪುಲನ ಸ್ತಂಭನದಿಂದಾಗಿ (ತಪಸ್ಸಿನ ಫಲವಾಗಿ) ಅಲುಗಾಡಲೂ ಆಗಲಿಲ್ಲ ರುಚಿಗೆ. ಆದರೆ ಇಂದ್ರದೇವನು ರುಚಿಯನ್ನು 'ನಾನು ದೇವೇಂದ್ರ. ಮನ್ಮಥನ ಬಾಧೆಯಿಂದಾಗಿ ನಿನ್ನನ್ನು ಅರಸಿ ಬಂದಿದ್ದೇನೆ. ಕಾಲಮೀರಿ ಹೋಗುವುದರಲ್ಲಿಯೇ ನನ್ನ ಬಳಿಗೆ ಬಾ ಎಂದನು[೨]. ಆದರೆ ರುಚಿಗೆ ಏಳಲೂ, ಮಾತನಾಡಲೂ, ವಿಪುಲನ ಯೋಗದಿಂದ ಆಗಲಿಲ್ಲ[೩]. ಗುರುಪತ್ನಿಯ ಇಂಗಿತ, ಮನೋವಿಕಾರವನ್ನು ಗ್ರಹಿಸಿದ ವಿಪುಲನು ತನ್ನ ಯೋಗಬಲದಿಂದ ಆಕೆಯನ್ನು ಬಲವಾಗಿ ತಡೆದ. ಆಕೆಯ ಎಲ್ಲ ಇಂದ್ರಿಯಗಳು ಬಂಧಿತವಾದವು.

---

೧ ಗುರುಪತ್ನೀಂ ಸಮಾಸೀನೋ ವಿಪುಲಃ ಸ ಮಹಾತಪಾಃ।
ಉಪಾಸೀನಾಮನಿಂದ್ಯಾಂಗೀಂ ಕಥಾರ್ಥೈಃ ಸಮಲೋಭಯತ್ ॥
ಲಕ್ಷಣಂ ಲಕ್ಷಣೇನೈವ ವದನಂ ವದನೇನ ಚ।
ಅವಿಚೇಷ್ಟನ್ನತಿಷ್ಠದ್ವೈ ಛಾಯೇವಾಂತರ್ಗತೋ ಮುನಿಃ॥
ತತೋ ವಿಷ್ಟಭ್ಯ ವಿಪುಲೋ ಗುರುಪತ್ನ್ಯಾಃ ಕಳೇವರಮ್ ।
ಉವಾಸ ರಕ್ಷಣೇ ಯುಕ್ತೋ ನ ಚ ಸಾ ತಮಬುಧ್ಯತ॥ – ೭೦/೫೯,೬೦
೨ ತಾಮಾಬಭಾಷೇ ದೇವೇಂದ್ರಃ ಸಾಮ್ನಾ ಪರಮವಲ್ಗುನಾ।
ತ್ವದರ್ಥಮಾಗತಂ ವಿದ್ಧಿ ದೇವೇಂದ್ರಂ ಮಾಂ ಶುಚಿಸ್ಮಿತೇ॥ – ೭೧/೭
ಕ್ಲಿಶ್ಯಮಾನಮನಂಗೇನ ತ್ವತ್ಸಂಕಲ್ಪಭವೇನ ಹ।
ತತ್ಪರ್ಯಾಪ್ನುಹಿ ಮಾಂ ಸುಭ್ರು ಪುರಾ ಕಾಲೋಽತಿವರ್ತತೇ॥..... – ೭೧/೮
೩ ವಕ್ತುಂ ಚ ನಾಶಕದ್ ರಾಜನ್ ವಿಷ್ಟಬ್ಧಾ ವಿಪುಲೇನ ಸಾ।
ಆಕಾರಂ ಗುರುಪತ್ನ್ಯಾಸ್ತು ವಿಜ್ಞಾಯ ಸ ಭೃಗೂದ್ವಹಃ॥

**ಬಬಂಧ ಯೋಗಬಂಧೈಶ್ಚ ತಾಪಸ್ಯಾಃ ಸರ್ವೇಂದ್ರಿಯಾಣಿ ಸಃ।**
**ತಾಂ ನಿರ್ವಿಕಾರಾಂ ದೃಷ್ಟ್ವಾತು ಪುನರೇವ ಶಚೀಪತಿಃ॥**

ಹೀಗೆ ರುಚಿ ನಿರ್ವಿಕಾರಳಾಗಿರುವುದನ್ನು ಕಂಡು ಇಂದ್ರನು ನಾಚಿಕೆಯಿಂದ ಯೋಗಮುಗ್ಧಳಾದ ಆಕೆಯನ್ನು ಕುರಿತು ಬಾ ಬಾ ಎಂದು ಕರೆದನು[೧]. ಆದರೆ ವಿಪುಲನು ಆಕೆಯ ಆ ಮಾತುಗಳನ್ನೇ ತಿರುಗಿಸಿದನು. 'ನೀನು ಇಲ್ಲಿಗೆ ಬಂದ ಉದ್ದೇಶವೇನು?' ಎಂದು ಸಂಸ್ಕಾರಭೂಷಿತವಾದ ಮಾತುಗಳು ಬಂದವು.

ಪರವಶಳಾಗಿ ತಾನು ಮಾತನಾಡಿದ ಮಾತಿನಿಂದ ನಾಚಿದಳು. ಇಂದ್ರನೂ ಹೆದರಿ ದುಃಖಿತನಾದ, ಚಿತ್ತಕ್ಷೋಭೆಗೆ ಒಳಗಾದ, ದಿಗ್ಭ್ರಮೆ ಹೊಂದಿದ.

ನಂತರ ದಿವ್ಯಚಕ್ಷುಸ್ಸಿನಿಂದ ರುಚಿಯಲ್ಲಿನ ವ್ಯತ್ಯಾಸ ಗಮನಿಸಿದ. ಗುರುಪತ್ನಿಯ ಶರೀರದಲ್ಲಿ ಕನ್ನಡಿಯಲ್ಲಿ ಪ್ರತಿಬಿಂಬದಂತೆ ಘೋರತಪಸ್ಸಿನಿಂದ ಕೂಡಿದ ವಿಪುಲಮುನಿಯನ್ನು ನೋಡಿ, ಆ ಮುನಿಯು ಶಾಪ ಕೊಡುವನೆಂದು ಭಯಗೊಂಡನು[೨].

ನಂತರ ವಿಪುಲನು ಗುರುಪತ್ನಿಯ ಶರೀರದಿಂದ ಹೊರಬಂದು, ತನ್ನ ಶರೀರ ಸೇರಿಕೊಂಡು ಹೆದರಿದ ಇಂದ್ರನನ್ನು ಕುರಿತು, [೩]'ಎಲೈ ಅಜಿತೇಂದ್ರಿಯನೇ! ಪಾಪಿಯೇ! ಕಾಮುಕನೇ! ಪುರಂದರನೇ! ನಿನ್ನನ್ನು ಮನುಷ್ಯರು (ಹೀಗಾದಲ್ಲಿ) ಬಹುಕಾಲ ಪೂಜಿಸುವುದಿಲ್ಲ. ಹಿಂದೆ ನೀನು ಅಹಲ್ಯಾಗಮನಮಾಡಿದಾಗ ಗೌತಮರು ಕೊಟ್ಟ ಶಾಪ ಮರೆತೆಯಾ? ನಾನು ಗುರುಪತ್ನಿಯನ್ನು ರಕ್ಷಿಸುತ್ತಿರುವೆ. ನೀನು ಹುಡುಗ ಬುದ್ಧಿಯವ, ಅವಿವೇಕಿ, ನೀನು ಬಂದ ದಾರಿಗೆ ಹೋಗು ಪಾಪಿ! ನನ್ನ ತೇಜಸ್ಸಿನಿಂದ ನಿನ್ನನ್ನು ಸುಡುವುದಿಲ್ಲ, ಕೃಪೆ ಮಾಡಿದ್ದೇನೆ. ಘೋರತಪಸ್ವಿಗಳಾದ ನನ್ನ ಗುರುಗಳು ನಿನ್ನನ್ನು ತಮ್ಮ ಕ್ರೋಧಾಗ್ನಿನೇತ್ರದಿಂದ ಸುಟ್ಟಾರು. ಮತ್ತೆ ಹೀಗೆ ಮಾಡಬೇಡ. ನೀನು

---

೧ ಉವಾಚ ವ್ರೀಡಿತೋ ರಾಜಂಸ್ತಾಂ ಯೋಗ ಬಲಮೋಹಿತಾಮ್।
ಏಹ್ಯೇಹೀತಿ ತತಃ ಸಾ ಪ್ರತಿವಕ್ತುಮಿಯೇಷ ಸಾ॥
ಸ ತಾಂ ವಾಚಂ ಗುರೋಃ ಪತ್ನ್ಯಾಃ ವಿಪುಲಃ ಪರ್ಯವರ್ತಯತ್।
ಭೋಃ ಕಿಮಾಗಮನೇ ಕೃತ್ಯಂ ................................ ॥ - ೭೧/೭-೧೪

೨ ದದರ್ಶ ಚ ಮುನಿಂ ತಸ್ಯಾಃ ಶರೀರಾಂತರ ಗೋಚರಮ್।
ಪ್ರಾವೇಪತ ಸುಸಂತ್ರಸ್ತಃ ಶಾಪಭೀತಸ್ತದಾ ವಿಭೋ॥ - ೭೧/೧೭,೧೮

೩. ನಾಹಂ ತ್ವಾಮದ್ಯ ಮೂಢಾತ್ಮನ್ ದಹೇಯಂ ಹಿ ಸ್ವತೇಜಸಾ।
ಕೃಪಾಯಮಾಣಸ್ತು ನ ತೇ ದಗ್ಧುಮಿಚ್ಛಾಮಿ ವಾಸವ॥
ಸ ಚ ಘೋರತಪಾ ಧೀಮಾನ್ ಗುರುರ್ಮೇ ಪಾಪಚೇತಸಮ್।
ದೃಷ್ಟ್ವಾ ತ್ವಾಂ ನಿರ್ದಹೇದದ್ಯ ಕ್ರೋಧದೀಪ್ತೇನ ಚಕ್ಷುಷಾ॥
ಮಾವಮಂಸ್ಥಾ ನ ತಪಸಾಮಸಾಧ್ಯಂ ನಾಮ ಕಿಂಚನ।
ತಚ್ಛ್ರುತ್ವಾ ವಚನಂ ಶಕ್ರೋ ವಿಪುಲಸ್ಯ ಮಹಾತ್ಮನಃ।
ಅಕಿಂಚಿದುಕ್ತ್ವಾ ವ್ರೀಡಿತಸ್ತತ್ರೈವಾಂತರ ಧೀಯತ॥ - ೭೧/೨೩-೨೭

ಬ್ರಾಹ್ಮಣರನ್ನು ಗೌರವಿಸಬೇಕು. ಬ್ರಹ್ಮತೇಜಸ್ಸಿನಿಂದ ನೀನು ನಿನ್ನ ಪುತ್ರರು, ಮಂತ್ರಿಗಳೊಂದಿಗೆ ನಾಶವಾಗಬೇಡ. ನೀನು ಅಮರನೆಂದು ತಿಳಿದು (ಮನಸ್ಸಿಗೆ ಬಂದಂತೆ) ವರ್ತಿಸುತ್ತಿದ್ದೀಯಾ. ಹಾಗೆ ಬ್ರಾಹ್ಮಣರನ್ನು ಅವಮಾನಿಸದಿರು. ತಪಸ್ಸಿಗೆ ಅಸಾಧ್ಯವಾದುದು ಯಾವುದೂ ಇಲ್ಲ (ನಿನ್ನನ್ನು ಬ್ರಾಹ್ಮಣರು ತಮ್ಮ ತಪಸ್ಸಿನಿಂದ ನಾಶ ಮಾಡಿಯಾರು ಜೋಕೆ!). ಇದನ್ನೆಲ್ಲ ಕೇಳಿದ ದೇವೇಂದ್ರ ಮರುಮಾತಾಡದೇ ಮಾಯವಾದ.

ದೇವೇಂದ್ರನು ಮಾಯವಾದ ಒಂದು ಮುಹೂರ್ತದ ನಂತರ ದೇವಶರ್ಮ ಗುರುಗಳು ಬಂದರು. ಗುರುಗಳಿಗೆ ವಿಪುಲನು ಅವರ ಪತ್ನಿಯನ್ನು ಒಪ್ಪಿಸಿದ. ನಂತರ ವಿಶ್ರಾಂತಿಯನ್ನು ಹೊಂದಿದ ಗುರುಪತ್ನಿಯೊಂದಿಗೆ ಇದ್ದ ಗುರುಗಳಿಗೆ ಶಕ್ರನು ಮಾಡಿದುದೆಲ್ಲವನ್ನು ನಿವೇದಿಸಿದ. ಗುರುಗಳು ಸಂತುಷ್ಟರಾಗಿ 'ಸಾಧು ಸಾಧು' ಎಂದು ವಿಪುಲನ ಗುರುಭಕ್ತಿ, ಧರ್ಮದಲ್ಲಿ ಸ್ಥೈರ್ಯ, ಎಲ್ಲಕ್ಕೂ ಹೆಚ್ಚಾಗಿ ಚಾರಿತ್ರ್ಯಗಳನ್ನು ಅಭಿನಂದಿಸಿದರು. ನಂತರ ಗುರುಗಳ ಅಪ್ಪಣೆ ಪಡೆದು ಉತ್ತಮೋತ್ತಮ ತಪಸ್ಸನ್ನು ಮಾಡಿದನು. ಹಾಗೆಯೇ ದೇವಶರ್ಮನೂ ತನ್ನ ಪತ್ನಿಯೊಡನೆ ಇಂದ್ರನ ಭಯವಿಲ್ಲದೆ ನಿರ್ಜನವನದಲ್ಲಿ ತಪಸ್ಸನ್ನು ಮಾಡಿದನು.

ಹೀಗೆ ಗುರುಗಳ ಆಜ್ಞೆಯನ್ನು ಪಾಲಿಸಿದ ವಿಪುಲನು ಮುಂದೆ ಭಾರಿ ತಪಸ್ಸನ್ನು ಮಾಡಿ ತನ್ನನ್ನು ಮಹಾತಪೋವೀರ್ಯಯುಕ್ತನೆಂದು ಭಾವಿಸುತ್ತಾ ತನಗಿಂತಲೂ ಹಿರಿಯರೊಂದಿಗೆ ಸ್ಪರ್ಧಾ ಮನೋಭಾವದಿಂದ ವರ್ತಿಸುತ್ತಾ ನಿರ್ಭಯನಾಗಿ, ಸಂತೋಷದಿಂದ ಮೆರೆಯಲಾರಂಭಿಸಿದನು. ತನ್ನ ಈ ಕಾರ್ಯದಿಂದ ಇಹಪರಲೋಕಗಳನ್ನು ಗೆದ್ದೆನೆಂದು ಬಗೆದನು[೧].

ಕೆಲವು ಕಾಲದ ನಂತರ ಗುರುಪತ್ನೀ ರುಚಿಯ ತಂಗಿಯ (ಮನೆಯಲ್ಲಿ) ದಾನವು (ಪ್ರದಾನ ವಿವಾಹ) ಧನಧಾನ್ಯಸಂಪನ್ನವಾದುದಾಯಿತು(ರುಚಿಯ ತಂಗಿಯ ವಿವಾಹ ನಡೆಯಿತು). ಇದೇ ಸಮಯದಲ್ಲಿ ಒಬ್ಬ ದೇವಲೋಕ ಸ್ತ್ರೀಯು ದಿವ್ಯರೂಪ ಧರಿಸಿ ಆಕಾಶಮಾರ್ಗದಲ್ಲಿ ಹೋಗುತ್ತಿದ್ದಳು. ಆಕೆಯ ಶರೀರದಿಂದ ಸುವಾಸನಾಯುಕ್ತ ಹೂವುಗಳು ರುಚಿಯ ಆಶ್ರಮದ ಹತ್ತಿರ ಬಿದ್ದವು. ಅವುಗಳನ್ನು ಕಮಲಲೋಚನೆಯಾದ ರುಚಿಯು ತೆಗೆದುಕೊಂಡಳು. ಆಗಲೇ ಅಂಗದೇಶದಿಂದ ದೂತನೊಬ್ಬ ಆಕೆಗೆ ವಿವಾಹಕ್ಕೆ ಬರಲು ಆಹ್ವಾನ ಕೊಡಲು ಶೀಘ್ರವಾಗಿ ಬಂದನು. ರುಚಿಯ ಅಕ್ಕ ಪ್ರಭಾವತಿಯು ಅಂಗದೇಶದ ರಾಜನಾದ ಚಿತ್ರರಥನ ಪತ್ನಿಯಾಗಿದ್ದಳು.

---

೧ ವಿಪುಲಸ್ತ್ವಕರೋತ್ ತೀವ್ರಂ ತಪಃ ಕೃತ್ವಾ ಗುರೋರ್ವಚಃ ।
ತಪೋಯುಕ್ತಮಥಾತ್ಮಾನಮಮನ್ಯತ ಚ ವೀರ್ಯವಾನ್ ।
ಸ ತೇನ ಕರ್ಮಣಾ ಸ್ಪರ್ಧನ್ ಪೃಥಿವೀಂ ಪೃಥಿವೀಪತೇ ।
ಚಚಾರ ಗತಭೀಃ ಪ್ರೀತೋ ಲಬ್ಧಕೀರ್ತಿರ್ವರೋ ನೃಷು ।
ಉಭೌ ಲೋಕೌ ಜಿತೌ ಚಾಪಿ ತಥೈವಾಮನ್ಯತ ಪ್ರಭುಃ ।
ಕರ್ಮಣಾ ತೇನ ಕೌರವ್ಯ ತಪಸಾ ವಿಪುಲೇನ ಚ ॥ - ೬೨/೧-೩

ಆಮಂತ್ರಣದ ಮೇರೆಗೆ ರುಚಿ ತನ್ನ ಅಕ್ಕನ ಮನೆಗೆ ಆ ಹೂವುಗಳನ್ನು ಮುಡಿದುಕೊಂಡು ಹೋದಳು. ಈ ಹೂವುಗಳನ್ನು ನೋಡಿದ ಪ್ರಭಾವತಿಯು ತಂಗಿ ರುಚಿಗೆ ತನಗೂ ಈ ಹೂವುಗಳುನ್ನು ತರಿಸಿಕೊಡಲು ಪ್ರಚೋದನೆ ಮಾಡಿದಳು. ರುಚಿಯು ಈ ವಿಷಯವನ್ನು ಪತಿ ದೇವಶರ್ಮನಿಗೆ ಹೇಳಲು ಆತನು ಶಿಷ್ಯನಾದ ವಿಪುಲನಿಗೆ ಬೇಗನೇ ಹೋಗಿ ಈ ಪುಷ್ಪಗಳನ್ನು ತೆಗೆದುಕೊಂಡು ಬಾ ಎಂದು ಕಳಿಸಿದನು. ವಿಪುಲನಾದರೂ ಗುರುಗಳ ಆದೇಶವನ್ನು ಹಿಂದೆ ಮುಂದೆ ವಿಚಾರಿಸದೇ ಹೂವುಗಳು ಬಿದ್ದ ಪ್ರದೇಶಕ್ಕೆ ಹೋಗಿ, ಅಲ್ಲಿ ತನ್ನ ತಪಃಪ್ರಭಾವದಿಂದ ಸಿಕ್ಕ ಬಾಡದಿದ್ದ ಸುಗಂಧಯುಕ್ತ ದಿವ್ಯ ಹೂವುಗಳನ್ನು ತೆಗೆದುಕೊಂಡು ಶೀಘ್ರವಾಗಿ ಚಂಪಕಾರಣ್ಯದ ಕಡೆಗೆ ಹೊರಟನು. ಕಾಡಿನ ದಾರಿಯಲ್ಲಿ ಇಬ್ಬರು ಪುರುಷರು ಪರಸ್ಪರ ಕೈಗಳನ್ನು ಹಿಡಿದುಕೊಂಡು ಚಕ್ರದಂತೆ ಸುತ್ತುತ್ತಿದ್ದರು. ನಂತರ ಇಬ್ಬರೂ ಜಗಳ ಕಾಯುತ್ತಾ ಪರಸ್ಪರ ನೀನು ಶೀಘ್ರವಾಗಿ ಹೋಗುತ್ತಿದ್ದೀ? ಎಂದೂ, ಇಲ್ಲವೆಂದೂ ಹೇಳುತ್ತಾ ಮತ್ತೇ ನೀನು ಸುಳ್ಳು ಹೇಳುತ್ತೀ ಎಂದೂ ಹೇಳಲಾರಂಭಿಸಿದರು. ಹೀಗೆ ಇಬ್ಬರೂ ವಿವಾದ ಮಾಡುತ್ತಾ ಮನಸ್ಸಿನಲ್ಲಿ ವಿಪುಲನನ್ನು ಉದ್ದೇಶಿಸಿ, ಒಂದು ಶಪಥ ಮಾಡಿದರು. 'ನಮ್ಮಿಬ್ಬರಲ್ಲಿ ಯಾರು ಸುಳ್ಳು ಹೇಳುತ್ತೇವೆಯೋ, ಅವರಿಗೆ ಬ್ರಾಹ್ಮಣನಾದ ವಿಪುಲನಿಗೆ ಆಗುವ ಗತಿಯಾಗಲಿ' ಎಂದು.

ಇದನ್ನು ಕೇಳಿದ ವಿಪುಲನಿಗೆ ವಿಷಾದವಾಯಿತು. ಈ ಪುರುಷರಿಗೆ ನಾನು ಮಾಡಿದ ಅಪರಾಧವೇನು? ಅವರೇಕೆ ಹೀಗೆ ಮಾತನಾಡಿದ್ದಾರೆ? ನಾನು ಇಷ್ಟೆಲ್ಲ ತಪಸ್ಸು ಮಾಡಿದ್ದು ವ್ಯರ್ಥಶ್ರಮವಾಯಿತಲ್ಲ ಎಂದು ಮರುಗಿದನು. ಹೀಗೆ ಯೋಚಿಸುತ್ತಾ ತಲೆ ಹಾಗೂ ಮುಖವನ್ನು ತಗ್ಗಿಸಿ ತಾನು ಮಾಡಿದ ಪಾಪದ ಬಗ್ಗೆ ಚಿಂತಿಸಿದನು.

ಮುಂದೆ ಅವನು ಚಿನ್ನ ಹಾಗೇ ಬೆಳ್ಳಿಯ ಪಗಡೆಯ ದಾಳಗಳಿಂಉದ ಪಗಡೆಯಾಟ ಆಡುತ್ತಿದ್ದ ಲೋಭ, ಸಂತೋಷಗಳಿಂದ ಕೂಡಿದ ಆರು ಪುರುಷರನ್ನು ನೋಡಿದನು. 'ಅವರೂ ವಿಪುಲನನ್ನು ಉದ್ದೇಶಿಸಿ 'ನಮ್ಮಲ್ಲಿ ಯಾರು ಲೋಭದಿಂದ ಮೋಸದ ಆಟವಾಡಿದಲ್ಲಿ ಅವರಿಗೆ ಈ ವಿಪುಲನಿಗೆ ಪರಲೋಕದಲ್ಲಿ ಆಗುವ ಗತಿಯಾಗಲಿ' ಎಂದು ಅನ್ನುವುದನ್ನು ವಿಪುಲನು ಕೇಳಿದನು. ಈ ಮಾತನ್ನು ಕೇಳಿ ವಿಪುಲನಿಗೆ 'ತಾನು ಹುಟ್ಟಿದಾಗಿನಿಂದ ಇಂತಹ ಯಾವ ಧರ್ಮ ಸಂಕರಕಾರ್ಯ ಮಾಡಿರುವುದು ಗೋಚರಿಸಲಿಲ್ಲ, ಆದರೂ ಮೊದಲಿನ ಹಾಗೂ ಈಗಿನ ಎರಡೂ ಮಾತುಗಳು ಅಪವಾದಗಳು. ಸುಳ್ಳ, ಮೋಸಗಾರ, ಅವನ ಮನಸ್ಸಿನಲ್ಲಿ ಬೆಂಕಿಯಂಖತೆ ಸುಡಹತ್ತಿದವು. ಅಂತಹ ಶಾಪವನ್ನು ಮನಸ್ಸಿನಲ್ಲಿ ತುಂಬಾ ಯೋಚಿಸಿದನು. ಹೀಗೆ ಚಿಂತಿಸುತ್ತಿರಲು ಅನೇಕ ಹಗಲು ರಾತ್ರಿಗಳು ಹೊರಟುಹೋದವು[೧]. ಕೊನೆಗೆ ಮನಸ್ಸಿಗೆ

೧ ತಸ್ಯ ಚಿಂತಯತಸ್ತಾತ ಬಹ್ವ್ಯೋ ದಿನನಿಶಾ ಯಯುಃ।
ಇದಮಾಸೀನ್ಮನಸಿ ಚ ರುಚ್ಯಾ ರಕ್ಷಣ ಕಾರಿತಮ್।
ಲಕ್ಷಣಂ ಲಕ್ಷಣೇನೈವ ವದನಂ ವದನೇನ ಚ।
ವಿಧಾಯ ನ ಮಯಾ ಚೋಕ್ತಂ ಸತ್ಯಮೇತದ್ ಗುರೋಸ್ತದಾ।

'ತಾನು ರುಚಿ(ಗುರುಪತ್ನಿ)ಯ ರಕ್ಷಣೆಗಾಗಿ ಮಾಡಿದ ಕಾರ್ಯ ನೆನಪಿಗೆ ಬಂತು. ಆಗ ರುಚಿಯ ಮುಖಕ್ಕೆ ಮುಖ ಜೋಡಿಸಿ ಪ್ರವೇಶಿಸಿದ ವಿಷಯವನ್ನು ಗುರುಗಳಿಗೆ ಹೇಳಲಿಲ್ಲ (ಸುಳ್ಳು ಹೇಳಿದೆ). ಇದೇ ತನ್ನ ಪಾಪವೇಂದು ಭಾವಿಸಿದ.

ಹೀಗೆ ಯೋಚಿಸಿ ಚಂಪಾನಗರಕ್ಕೆ ಬಂದು ಗುರುಪ್ರಿಯನಾದ ವಿಪುಲನು ಗುರುಗಳಿಗೆ ತಾನು ತಂದ ಪುಷ್ಪಗಳನ್ನು ಕೊಟ್ಟು ವಿಧ್ಯುಕ್ತವಾಗಿ ಗುರುಗಳನ್ನು ಪೂಜಿಸಿದನು.

• ಗುರುಗಳ ಆದೇಶವನ್ನು ಪಾಲಿಸಿದ ವಿಪುಲನನ್ನು ದೇವಶರ್ಮನು 'ನೀನು ಹೋದ ಕಾಡಿನಲ್ಲಿ ಏನನ್ನು ಕಂಡೆ. ನಿನ್ನನ್ನು ಅವರು ಮತ್ತು ನಾವು ದಂಪತಿಗಳು ಸಹ ಚೆನ್ನಾಗಿ ತಿಳಿದಿದ್ದೇವೆ. ಅದಕ್ಕೆ 'ಬ್ರಹ್ಮರ್ಷಿಯೇ! ನಾನು ನೋಡಿದ ಇಬ್ಬರು ಪುರುಷರು ಹಾಗೂ ಪಗಡೆ ಆಡುತ್ತಿದ್ದ ಆರು ಪುರುಷರು ಯಾರು? ಎಂದು ವಿಪುಲ ಕೇಳಿದಾಗ ಗುರುಗಳು ಇಬ್ಬರು ಪುರುಷರು ಹಗಲು ರಾತ್ರಿಗಳು(ಅಭಿಮಾನಿದೇವತೆಗಳು) ಅವು ಚಕ್ರದಂತೆ ತಿರುಗುತ್ತವೆ. ಅಲ್ಲದೆ ಆರು ಪುರುಷರು ಆರು ಋತುಗಳು (ಅಭಿಮಾನಿದೇವತೆಗಳು) ಇವರೆಲ್ಲ ನಿನ್ನ ಪಾಪಕರ್ಮಗಳನ್ನು ತಿಳಿದವರೇ. ಪಾಪಿಯಾದ ಮನಷ್ಯನು ನನ್ನನ್ನು ಯಾರು ನೋಡುವುದಿಲ್ಲ ಎಂದು ರಹಸ್ಯವಾಗಿ ಪಾಪಕರ್ಮವನ್ನು ಮಾಡಬಾರದು. ಏಕೆಂದರೆ ದಿನರಾತ್ರಿಗಳ, ಋತುಗಳ ಅಭಿಮಾನಿದೇವತೆಗಳು ನಾವು ಮಾಡುವುದೆಲ್ಲವನ್ನೂ ನೋಡುತ್ತಿರುತ್ತಾರೆ. ನೀನು ಗುರುಗಳಿಗೆ ಮಾಡಿದ ಎಲ್ಲ ಕಾರ್ಯವನ್ನು ಹೇಳದೆ (ಪೂರ್ತಿ) ಸಂತೋಷವಾಗಿರುವುದನ್ನು ನೋಡಿ ನಿನಗೆ ನಿನ್ನ ಕರ್ಮಸ್ಮರಣೆ ಮಾಡಲು ಹಾಗೆ ಅವರು ಹೇಳಿದರು. ನೀನು ಮಾಡಿದ ಆ ಕರ್ಮವನ್ನು (ಪರಕಾಯುಪ್ರವೇಶ) ವ್ಯಭಿಚಾರದ ಶಂಕೆಯಿಂದ ನನಗೆ ಹೇಳಲಿಲ್ಲವೆಂದು ತಿಳಿದು ಅವರು ನಿನಗೆ ಹಾಗೆ ಹೇಳಿದರು, ನೆನಪಿಸಿದರು.'

ವಾಸ್ತವವಾಗಿ ನೀನು ಮಾಡಿದಂತೆ ಪಾಪಕರ್ಮವನ್ನು ಮಾಡಿ ಹೇಳದಿದ್ದವನಿಗೆ ಪಾಪಿಗಳಿಗೆ ದೊರೆಯುವ ಲೋಕಗಳೇ ದೊರೆಯುತ್ತವೆ.

ನಮ್ಮ ವಿಷಯಕ್ಕೆ ಬಂದಾಗ, ನೀನು ಮಾಡಿದ್ದು ಸರಿಯೇ. ದುರ್ನಡತೆಯ ಸ್ತ್ರೀಯರನ್ನು ದಾರಿಗೆ ತರಲು ನೀನು ಮಾಡಿದಂತೆ ಮಾಡಿದ ರೀತಿಯಲ್ಲಿ ಬಿಟ್ಟು ಬೇರೆ ದಾರಿ ಇಲ್ಲವೇ ಇಲ್ಲ. ಆದ್ದರಿಂದ ನೀನು ನಿರಪರಾಧಿ. ನಿನ್ನ ಮೇಲೆ ನಾನು ಪ್ರಸನ್ನನಾಗಿದ್ದೇನೆ. ಯಾರಿಗೆ ಮನೋದೋಷವಿಲ್ಲವೋ ಅವರಿಗೆ ನಿನ್ನಂತೆ ಯಾವ ದೋಷವೂ ಬರದು. ಪತ್ನಿ, ಮಗಳು ಇಬ್ಬರನ್ನೂ ಆಲಿಂಗಿಸಿದರೂ, ಮಾನಸಿಕ ಭಾವನೆ ಬೇರೆ ರೀತಿ ತಾನೇ? ಒಬ್ಬ ಸ್ತ್ರೀಯನ್ನು ನೋಡಿದಾಗ ಯತಿಗೆ, ಕಾಮುಕನಿಗೆ ಬರುವ ವಿಚಾರಗಳೇ ಬೇರೆ. ಮನೋನಿಯಂತ್ರಣ ಇರದೇ ಜನರು ಪ್ರಾಯಃ ವಂಚಿಸಲ್ಪಡುತ್ತಾರೆ. ದುಃಖಕ್ಕೆ ಈಡಾಗುತ್ತಾರೆ. ಹಾಗೆಯೇ ರುಚಿಯನ್ನು ಪ್ರವೇಶ ಮಾಡಿದರೂ ಮನೋದೋಷವಿಲ್ಲದ ನಿನಗೆ ಯಾವ ದೋಷಗಳು

---

ಏತದಾತ್ಮನಿ ಕೌರವ್ಯ ದುಷ್ಕೃತಂ ವಿಪುಲಸ್ತದಾ ।
ಅಮನ್ಯತ ಮಹಾಭಾಗ ತಥಾ ತಚ್ಚ ನ ಸಂಶಯಃ ॥ - ೭೨/೩-೩೨

ಬರಲಿಲ್ಲ. ನೀನು ದುರ್ನಡತೆಯವನೆಂದು ಗಮನಿಸಿದ್ದರೆ ಶಪಿಸಿಬಿಡುತ್ತಿದ್ದೆ ಕೋಪದಿಂದ. ನೀನು ಎಲ್ಲವನ್ನೂ ಹೇಳಿದ್ದೀಯಾ. ನಿನಗೆ ಶುಭವಾಗಲಿ. ನೀನು ಸ್ವರ್ಗಕ್ಕೆ ಹೋಗುವೆ ಎಂದು ಗುರುಗಳು ಪ್ರಶಂಸೆ ಮಾಡಿದರು[೧].

ಹೀಗೆ ನುಡಿದ ದೇವಶರ್ಮರು ತಮ್ಮ ಪತ್ನಿ ಹಾಗೂ ಶಿಷ್ಯನೊಂದಿಗೆ ಸ್ವರ್ಗಕ್ಕೆ ಹೋಗಿ ಸುಖವಾಗಿದ್ದರು. 'ಎಲೈ ಧರ್ಮರಾಜನೇ! ಇದನ್ನು ನನಗೆ ಮಾರ್ಕಂಡೇಯರು ಗಂಗಾತೀರದಲ್ಲಿ ಬೇರೆ ಕಥಾನಕದೊಡನೆ ಹೇಳಿದ್ದರು. ಆದ್ದರಿಂದ ಸ್ತ್ರೀಯರಲ್ಲಿ ಒಳ್ಳೆಯದು, ಕೆಟ್ಟದ್ದು ಎರಡೂ ಇರುತ್ತದೆ.

**ತಸ್ಮಾದ್ಬ್ರವೀಮಿ ಪಾರ್ಥ ತ್ವಾಂ ಸ್ತ್ರಿಯಃ ಸರ್ವಾಃ ಸದೈವ ಚ ।**
**ಉಭಯಂ ದೃಶ್ಯತೇ ತಾಸು ಸತತಂ ಸಾಧ್ವಸಾಧು ಚ ॥** - ೭೩/೨೨

ಸಾಧ್ವಿಸ್ತ್ರೀಯರು ಲೋಕಮಾತೆಯರಾಗಿ ಪೂಜ್ಯರಾಗಿರುತ್ತಾರೆ. ಅವರೇ ಭೂಲೋಕ ಧಾರಕರು. ಅಸಾಧ್ವಿ ಸ್ತ್ರೀಯರು ದುರ್ನಡತೆಯುಳ್ಳವರಾಗಿ ಕುಲನಾಶಕರಾಗಿ ಪಾಪಿಗಳಾಗಿರುತ್ತಾರೆ. ಅವರ ದೇಹದ ದುಷ್ಟಲಕ್ಷಣಗಳಿಂದಲೇ ಅವರನ್ನು ತಿಳಿಯಬಹುದು.

---

೧ ಬ್ರಹ್ಮರ್ಷೇ ಮಿಥುನಂ ಕಿಂ ತತ್ತೇ ಚ ತೇ ಪುರುಷಾ ವಿಭೋ ।
ಯೇ ಮಾಂ ಜಾನಂತಿ ತತ್ತ್ವೇನ ತಾಂಶ್ಚ ತೇ ವಕ್ತುಮರ್ಹಸಿ ॥
ದೇವಶರ್ಮೋವಾಚ
ಯದ್ವೈ ತನ್ಮಿಥುನಂ ಬ್ರಹ್ಮನ್ನಹೋರಾತ್ರಂ ಹಿ ವಿದ್ಧಿ ತತ್ ।
ಚಕ್ರವತ್ಪರಿವರ್ತೇತ ತತ್ತೇ ಜಾನಾತಿ ದುಷ್ಕೃತಮ್ ॥
ಯೇ ಚ ತೇ ಪುರುಷಾ ವಿಪ್ರ ಅಕ್ಷೈರ್ದೀವ್ಯಂತಿ ಹೃಷ್ಟವತ್ ।
ಋತೂಂಸ್ತಾನಭಿಜಾನೀಹಿ ತೇ ತೇ ಜಾನಂತಿ ದುಷ್ಕೃತಮ್ ॥
ಕುರ್ವಾಣಂ ಹಿ ನರಂ ಕರ್ಮ ಪಾಪಂ ರಹಸಿ ಸರ್ವದಾ ।
ಪಶ್ಯಂತಿ ಋತವಶ್ಚಾಪಿ ತಥಾ ದಿನನಿಶೇಪ್ಯುತ ।
ತತ್ತ್ವಯಾ ಮಮ ಯತ್ಕರ್ಮ ವ್ಯಭಿಚಾರಭಯಾತ್ಮಕಮ್ ।
ನಾಖ್ಯಾತಮಿತಿ ಜಾನಂತಸ್ತೇ ತ್ವಾಮಾಹುಸ್ತಥಾ ದ್ವಿಜ ॥
ತಥಾಽಶಕ್ಯಾ ಚ ದುರ್ವೃತ್ತಾ ರಕ್ಷಿತುಂ ಪ್ರಮದಾ ದ್ವಿಜ ।
ನ ಚ ತ್ವಂ ಕೃತವಾನ್ ಕಿಂಚಿದಾಗಃ ಪ್ರೀತೋಽಸ್ಮಿ ತೇನ ತೇ ।
**ಮನೋದೋಷವಿಹೀನಾನಾಂ ನ ದೋಷಃ ಸ್ಯಾತ್ ತಥಾ ತವ ।**
**ನ ರಾಗಸ್ನೇಹಲೋಭಾಂಧಂ ಕರ್ಮಿಣಾಂ ತನ್ಮಹಾಫಲಮ್ ।**
ನಿಷ್ಕಷಾಯೋ ವಿಶುದ್ಧಸ್ತ್ವಂ ರುಚ್ಯಾವೇಶಾನ್ನ ದೂಷಿತಃ ।
ಯದಿತ್ವಹಂ ತ್ವಾಂ ದುರ್ವೃತ್ತಮದ್ರಾಕ್ಷಂ ದ್ವಿಜಸತ್ತಮ ।
ಶಪೇಯಂ ತ್ವಾಮಹಂ ಕ್ರೋಧಾನ್ನ ಮೇಽತ್ರಾಸ್ತಿ ವಿಚಾರಣಾ ।
ರಕ್ಷಿತಾ ಸಾ ತ್ವಯಾ ಪುತ್ರ ಮಮ ಚಾಪಿ ನಿವೇದಿತಾ ।
ಅಹಂ ತೇ ಪ್ರೀತಿಮಾಂಸ್ತಾತ ಸ್ವಸ್ತಿ ಸ್ವರ್ಗಂ ಗಮಿಷ್ಯತಿ ॥ - ೭೩/೩-೧೯

ವಿಪುಲನಂತೆ ಇರುವುದರಿಂದ ಮಾತ್ರ ಸ್ತ್ರೀಯರ ರಕ್ಷಣೆ ಸಾಧ್ಯ. ದುರ್ನಡತೆಯ ಸ್ತ್ರೀಯರು ಕ್ರೂರಿಗಳೂ, ಭಾರಿ ಪರಾಕ್ರಮಿಗಳೂ ಆಗಿರುತ್ತಾರೆ. ಅವರಿಗೆ ಮೈಥುನಸಂಗಮದಲ್ಲಿ ಆಸಕ್ತ ಪುರುಷರೆಲ್ಲ ಪ್ರಿಯರು. ಉಳಿದವರಾರೂ ಪ್ರಿಯರಲ್ಲ. ಇವರು ಒಬ್ಬ ಪುರುಷನೊಡನೆ ಮಾತ್ರ ರಮಿಸುವವರಲ್ಲ. ಆದ್ದರಿಂದ ಇಂತಹವರೊಡನೆ ಸ್ನೇಹ ಮಾಡಬಾರದು. ಅವರ ಸಹವಾಸ ಅನಿವಾರ್ಯವಾದಲ್ಲಿ ಅವರನ್ನು ಧರ್ಮಾನುಸಾರವಾಗಿ ಭೋಗಿಸಬೇಕು. ಬೇರೆ ಮಾರ್ಗ ಹಿಡಿದರೆ ಪುರುಷನ ವಿನಾಶ ನಿಶ್ಚಿತ[೧].

ಆದರೆ ಈ ವಿಷಯದಲ್ಲಿ ವಿಪುಲ ಮಾತ್ರ ಸ್ತ್ರೀಯ ರಕ್ಷಣೆಯನ್ನು (ಅಚಿಂತ್ಯ ಮಾರ್ಗದಿಂದ) ಮಾಡಿದನು. ಈ ಲೋಕದಲ್ಲಿ ಬೇರಾರೂ ಸ್ತ್ರೀಯರನ್ನು ರಕ್ಷಿಸಲು ಸಮರ್ಥನಾಗಲಿಲ್ಲ[೨].

## ಸಂದೇಶಗಳು

೧. ವಿಪುಲನಂತೆ ಪ್ರತಿಶಿಷ್ಯ ಇರಬೇಕು. ಗುರುಗಳ ಆದೇಶವನ್ನು ಚಾಚೂತಪ್ಪದೆ ಪಾಲಿಸಬೇಕು. ಅದುವೇ ಮೋಕ್ಷಕ್ಕೆ ಸಾಧನ.

೨. ತಾನು ಕಲಿತ ವಿದ್ಯೆಯನ್ನು ಗುರುಗಳ ಸೇವೆಗಾಗಿ ಉಪಯೋಗಿಸಬೇಕು.

೩. ಇಂದ್ರದೇವರನ್ನು ತುಂಬಾ ಕಾಮಿಯಾಗಿ ತೋರಿಸಲಾಗಿದೆ ಇಲ್ಲಿ. ಅದು ಕೇವಲ ನಟನೆ. ಪರೀಕ್ಷೆಗಾಗಿ ದೇವತೆಗಳು ಹಾಗೆ ವರ್ತಿಸುತ್ತಾರೆ.

೪. ಗುರುಪತ್ನಿ ಅಸಾಧ್ವಿಯಂತೆ ತೋರುತ್ತಾಳೆ. ಆಕೆಯ ನಡೆಯ ಅಂತರಾರ್ಥವೂ ವಿಚಾರಣೀಯವಾಗಿದೆ. ಹಾಗೆ ಇರಬಾರದು. ಯಾವುದೇ ಸ್ತ್ರೀಯು ಎಂತಹ ಪ್ರಲೋಭನೆಗೆ ಒಳಗಾದರೂ ಕೂಡಾ.

ಇತ್ಯಾದಿ....

*****

---

೧ ಸ್ತ್ರಿಯಃ ಸಾಧ್ವ್ಯೋ ಮಹಾಭಾಗಾಃ ಸಮ್ಮತಾ ಲೋಕಮಾತರಃ।
ಧಾರಯಂತಿ ಮಹೀಂ ರಾಜನ್ನಿಮಾಂ ಸವನಕಾನನಾಮ್ ॥
ಅಸಾಧ್ವ್ಯಶ್ಚಾಪಿ ದುರ್ವೃತ್ತಾಃ ಕುಲಘ್ನಾಃ ಪಾಪನಿಶ್ಚಯಾಃ।
ವಿಜ್ಞೇಯಾ ಲಕ್ಷಣೈರ್ದುಷ್ಟೈಃ ಸ್ವಗಾತ್ರಸಹಜೈರ್ನೃಪ ॥....
ನಾಸಾಮಸ್ತಿ ಪ್ರಿಯೋ ನಾಮ ಮೈಥುನೇ ಸಂಗಮೇ ನೃಭಿಃ।....
ನ ಚೈಕಸ್ಮಿನ್ ರಮಂತ್ಯೇತಾಃ ಪುರುಷೇ ಪಾಂಡುನಂದನ।
ನಾಸು ಸ್ನೇಹೋ ನೃಭಿಃ ಕಾರ್ಯಸ್ತಥೈವೇರ್ಷ್ಯಾ ಜನೇಶ್ವರ।
ಖೇದಮಾಸ್ಥಾಯ ಭುಂಜೀತ ಧರ್ಮಮಾಸ್ಥಾಯ ಚೈವ ಹಿ ॥ - ೮೩/೨೩-೨೯

೨ ತೈನೈಕೇನ ತು ರಕ್ಷಾ ವೈ ವಿಪುಲೇನ ಕೃತಾ ಸ್ತ್ರಿಯಾಃ।
ನಾನ್ಯಃ ಶಕ್ತೋ ನೃಲೋಕೇಽಸ್ಮಿನ್ ರಕ್ಷಿತುಂ ನೃಪ ಯೋಷಿತಃ ॥ ೮೩/೩೦

ಬರಲಿಲ್ಲ. ನೀನು ದುರ್ನಡತೆಯವನೆಂದು ಗಮನಿಸಿದ್ದರೆ ಶಪಿಸಿಬಿಡುತ್ತಿದ್ದೆ ಕೋಪದಿಂದ. ನೀನು ಎಲ್ಲವನ್ನೂ ಹೇಳಿದ್ದೀಯಾ. ನಿನಗೆ ಶುಭವಾಗಲಿ. ನೀನು ಸ್ವರ್ಗಕ್ಕೆ ಹೋಗುವೆ ಎಂದು ಗುರುಗಳು ಪ್ರಶಂಸೆ ಮಾಡಿದರು[೧].

ಹೀಗೆ ನುಡಿದ ದೇವಶರ್ಮರು ತಮ್ಮ ಪತ್ನಿ ಹಾಗೂ ಶಿಷ್ಯನೊಂದಿಗೆ ಸ್ವರ್ಗಕ್ಕೆ ಹೋಗಿ ಸುಖವಾಗಿದ್ದರು. 'ಎಲೈ ಧರ್ಮರಾಜನೇ! ಇದನ್ನು ನನಗೆ ಮಾರ್ಕಂಡೇಯರು ಗಂಗಾತೀರದಲ್ಲಿ ಬೇರೆ ಕಥಾನಕದೊಡನೆ ಹೇಳಿದ್ದರು. ಆದ್ದರಿಂದ ಸ್ತ್ರೀಯರಲ್ಲಿ ಒಳ್ಳೆಯದು, ಕೆಟ್ಟದ್ದು ಎರಡೂ ಇರುತ್ತದೆ.

**ತಸ್ಮಾದ್ಬ್ರವೀಮಿ ಪಾರ್ಥ ತ್ವಾಂ ಸ್ತ್ರಿಯಃ ಸರ್ವಾಃ ಸದೈವ ಚ।**
**ಉಭಯಂ ದೃಶ್ಯತೇ ತಾಸು ಸತತಂ ಸಾಧ್ವಸಾಧು ಚ॥** - ೭೩/೨೨

ಸಾಧ್ವಿಸ್ತ್ರೀಯರು ಲೋಕಮಾತೆಯರಾಗಿ ಪೂಜ್ಯರಾಗಿರುತ್ತಾರೆ. ಅವರೇ ಭೂಲೋಕ ಧಾರಕರು. ಅಸಾಧ್ವಿ ಸ್ತ್ರೀಯರು ದುರ್ನಡತೆಯುಳ್ಳವರಾಗಿ ಕುಲನಾಶಕರಾಗಿ ಪಾಪಿಗಳಾಗಿರುತ್ತಾರೆ. ಅವರ ದೇಹದ ದುಷ್ಟಲಕ್ಷಣಗಳಿಂದಲೇ ಅವರನ್ನು ತಿಳಿಯಬಹುದು.

---

೧ ಬ್ರಹ್ಮರ್ಷೇ ಮಿಥುನಂ ಕಿಂ ತತ್ತೇ ಚ ತೇ ಪುರುಷಾ ವಿಭೋ।
ಯೇ ಮಾಂ ಜಾನಂತಿ ತತ್ತ್ವೇನ ತಾಂಶ್ಚ ತೇ ವಕ್ತುಮರ್ಹಸಿ॥
ದೇವಶರ್ಮೋವಾಚ
ಯದ್ವೈ ತನ್ಮಿಥುನಂ ಬ್ರಹ್ಮನ್ನಹೋರಾತ್ರಂ ಹಿ ವಿದ್ಧಿ ತತ್।
ಚಕ್ರವತ್ಪರಿವರ್ತೇತ ತತ್ತೇ ಜಾನಾತಿ ದುಷ್ಕೃತಮ್॥
ಯೇ ಚ ತೇ ಪುರುಷಾ ವಿಪ್ರ ಅಕ್ಷೈರ್ದೀವ್ಯಂತಿ ಹೃಷ್ಟವತ್।
ಋತೂಂಸ್ತಾನಭಿಜಾನೀಹಿ ತೇ ತೇ ಜಾನಂತಿ ದುಷ್ಕೃತಮ್॥
ಕುರ್ವಾಣಂ ಹಿ ನರಂ ಕರ್ಮ ಪಾಪಂ ರಹಸಿ ಸರ್ವದಾ।
ಪಶ್ಯಂತಿ ಋತವಶ್ಚಾಪಿ ತಥಾ ದಿನನಿಶೇಪ್ಯುತ।
ತತ್ತ್ವಯಾ ಮಮ ಯತ್ಕರ್ಮ ವ್ಯಭಿಚಾರಭಯಾತ್ಮಕಮ್।
ನಾಖ್ಯಾತಮಿತಿ ಜಾನಂತಸ್ತೇ ತ್ವಾಮಾಹುಸ್ತಥಾ ದ್ವಿಜ॥
ತಥಾಽಶಕ್ಯಾ ಚ ದುರ್ವೃತ್ತಾ ರಕ್ಷಿತುಂ ಪ್ರಮದಾ ದ್ವಿಜ।
ನ ಚ ತ್ವಂ ಕೃತವಾನ್ ಕಿಂಚಿದಾಗಃ ಪ್ರೀತೋಽಸ್ಮಿ ತೇನ ತೇ।
**ಮನೋದೋಷವಿಹೀನಾನಾಂ ನ ದೋಷಃ ಸ್ಯಾತ್ ತಥಾ ತವ।**
**ನ ರಾಗಸ್ನೇಹಲೋಭಾಂಧಂ ಕರ್ಮಿಣಾಂ ತನ್ಮಹಾಫಲಮ್।**
ನಿಷ್ಕಷಾಯೋ ವಿಶುದ್ಧಸ್ತ್ವಂ ರುಚ್ಯಾವೇಶಾನ್ನ ದೂಷಿತಃ।
ಯದಿತ್ವಹಂ ತ್ವಾಂ ದುರ್ವೃತ್ತಮದ್ರಾಕ್ಷಂ ದ್ವಿಜಸತ್ತಮ।
ಶಪೇಯಂ ತ್ವಾಮಹಂ ಕ್ರೋಧಾನ್ನ ಮೇಽತ್ರಾಸ್ತಿ ವಿಚಾರಣಾ।
ರಕ್ಷಿತಾ ಸಾ ತ್ವಯಾ ಪುತ್ರ ಮಮ ಚಾಪಿ ನಿವೇದಿತಾ।
ಅಹಂ ತೇ ಪ್ರೀತಿಮಾಂಸ್ತಾತ ಸ್ವಸ್ತಿ ಸ್ವರ್ಗಂ ಗಮಿಷ್ಯತಿ॥ - ೭೩/೩-೧೯

ವಿಪುಲನಂತೆ ಇರುವುದರಿಂದ ಮಾತ್ರ ಸ್ತ್ರೀಯರ ರಕ್ಷಣೆ ಸಾಧ್ಯ. ದುರ್ನಡತೆಯ ಸ್ತ್ರೀಯರು ಕ್ರೂರಿಗಳೂ, ಭಾರಿ ಪರಾಕ್ರಮಿಗಳೂ ಆಗಿರುತ್ತಾರೆ. ಅವರಿಗೆ ಮೈಥುನಸಂಗಮದಲ್ಲಿ ಆಸಕ್ತ ಪುರುಷರೆಲ್ಲ ಪ್ರಿಯರು. ಉಳಿದವರಾರೂ ಪ್ರಿಯರಲ್ಲ. ಇವರು ಒಬ್ಬ ಪುರುಷನೊಡನೆ ಮಾತ್ರ ರಮಿಸುವವರಲ್ಲ. ಆದ್ದರಿಂದ ಇಂತಹವರೊಡನೆ ಸ್ನೇಹ ಮಾಡಬಾರದು. ಅವರ ಸಹವಾಸ ಅನಿವಾರ್ಯವಾದಲ್ಲಿ ಅವರನ್ನು ಧರ್ಮಾನುಸಾರವಾಗಿ ಭೋಗಿಸಬೇಕು. ಬೇರೆ ಮಾರ್ಗ ಹಿಡಿದರೆ ಪುರುಷನ ವಿನಾಶ ನಿಶ್ಚಿತ[1].

ಆದರೆ ಈ ವಿಷಯದಲ್ಲಿ ವಿಪುಲ ಮಾತ್ರ ಸ್ತ್ರೀಯ ರಕ್ಷಣೆಯನ್ನು (ಅಚಿಂತ್ಯ ಮಾರ್ಗದಿಂದ) ಮಾಡಿದನು. ಈ ಲೋಕದಲ್ಲಿ ಬೇರಾರೂ ಸ್ತ್ರೀಯರನ್ನು ರಕ್ಷಿಸಲು ಸಮರ್ಥನಾಗಲಿಲ್ಲ[2].

## ಸಂದೇಶಗಳು

೧. ವಿಪುಲನಂತೆ ಪ್ರತಿಶಿಷ್ಯ ಇರಬೇಕು. ಗುರುಗಳ ಆದೇಶವನ್ನು ಚಾಚೂತಪ್ಪದೆ ಪಾಲಿಸಬೇಕು. ಅದುವೇ ಮೋಕ್ಷಕ್ಕೆ ಸಾಧನ.

೨. ತಾನು ಕಲಿತ ವಿದ್ಯೆಯನ್ನು ಗುರುಗಳ ಸೇವೆಗಾಗಿ ಉಪಯೋಗಿಸಬೇಕು.

೩. ಇಂದ್ರದೇವರನ್ನು ತುಂಬಾ ಕಾಮಿಯಾಗಿ ತೋರಿಸಲಾಗಿದೆ ಇಲ್ಲಿ. ಅದು ಕೇವಲ ನಟನೆ. ಪರೀಕ್ಷೆಗಾಗಿ ದೇವತೆಗಳು ಹಾಗೆ ವರ್ತಿಸುತ್ತಾರೆ.

೪. ಗುರುಪತ್ನಿ ಅಸಾಧ್ವಿಯಂತೆ ತೋರುತ್ತಾಳೆ. ಆಕೆಯ ನಡೆಯ ಅಂತರಾರ್ಥವೂ ವಿಚಾರಣೀಯವಾಗಿದೆ. ಹಾಗೆ ಇರಬಾರದು. ಯಾವುದೇ ಸ್ತ್ರೀಯು ಎಂತಹ ಪ್ರಲೋಭನೆಗೆ ಒಳಗಾದರೂ ಕೂಡಾ.

ಇತ್ಯಾದಿ....

*****

---

೧ ಸ್ತ್ರಿಯಃ ಸಾಧ್ವ್ಯೋ ಮಹಾಭಾಗಾಃ ಸಮ್ಮತಾ ಲೋಕಮಾತರಃ।
ಧಾರಯಂತಿ ಮಹೀಂ ರಾಜನ್ನಿಮಾಂ ಸವನಕಾನನಾಮ್ ॥
ಅಸಾಧ್ವ್ಯಶ್ಚಾಪಿ ದುರ್ವೃತ್ತಾಃ ಕುಲಘ್ನಾಃ ಪಾಪನಿಶ್ಚಯಾಃ।
ವಿಜ್ಞೇಯಾ ಲಕ್ಷಣೈರ್ದುಷ್ಟೈಃ ಸ್ವಗಾತ್ರಸಹಜೈರ್ನೃಪ ॥....
ನಾಸಾಮಸ್ತಿ ಪ್ರಿಯೋ ನಾಮ ಮೈಥುನೇ ಸಂಗಮೇ ನೃಭಿಃ।....
ನ ಚೈಕಸ್ಮಿನ್ ರಮಂತ್ಯೇತಾಃ ಪುರುಷೇ ಪಾಂಡುನಂದನ।
ನಾಸು ಸ್ನೇಹೋ ನೃಭಿಃ ಕಾರ್ಯಸ್ತಥೈವೈರ್ಷ್ಯಾ ಜನೇಶ್ವರ।
ಖೇದಮಾಸ್ಥಾಯ ಭುಂಜೀತ ಧರ್ಮಮಾಸ್ಥಾಯ ಚೈವ ಹಿ ॥ - ೭೩/೨೩-೨೯

೨ ತೈನೈಕೇನ ತು ರಕ್ಷಾ ವೈ ವಿಪುಲೇನ ಕೃತಾ ಸ್ತ್ರಿಯಾಃ।
ನಾನ್ಯಃ ಶಕ್ತೋ ನೃಲೋಕೇಽಸ್ಮಿನ್ ರಕ್ಷಿತುಂ ನೃಪ ಯೋಷಿತಃ ॥ ೭೩/೩೦

# ೧೪೪. ಚ್ಯವನೋಪಾಖ್ಯಾನ

ಧರ್ಮರಾಜನು ಪಿತಾಮಹರನ್ನು ಪ್ರಶ್ನಿಸುತ್ತಾನೆ - 'ತಾತ! ಸಜ್ಜನರ ದರ್ಶನ ಹಾಗೂ ಅವರೊಡನೆ ವಾಸ ಮಾಡುವುದರಿಂದ ಎಂತಹ ಸ್ನೇಹ ಹುಟ್ಟುತ್ತದೆ? ಗೋವುಗಳ ಮಹಾಭಾಗ್ಯ ಮಹತ್ತ್ವವೇನೆಂಬುದನ್ನು ತಿಳಿಸು'.

ಇದನ್ನು ತಿಳಿಸುವ ನಹುಷರಾಜ ಹಾಗೂ ಚ್ಯವನ ಮಹರ್ಷಿಯ ಸಂವಾದವನ್ನು ಭೀಷ್ಮರು ಧರ್ಮರಾಜನಿಗೆ ಹೇಳಿದರು.

ಹಿಂದೆ ಭೃಗು ವಂಶದ ಚ್ಯವನಮಹರ್ಷಿಗಳು ಮಹಾವ್ರತಸಂಪನ್ನರಾಗಿ ಗಂಗಾ-ಯಮುನಾ ನದಿಗಳ ಮಧ್ಯದಲ್ಲಿ (ಸಂಗಮ) ಅಹಂಕಾರ, ಮಮಕಾರ, ಹರ್ಷ, ಶೋಕಾದಿಗಳನ್ನು ತ್ಯಜಿಸಿ ಹನ್ನೆರಡು ವರ್ಷಗಳ ಕಾಲ ಜಲವಾಸ ವ್ರತವನ್ನು ನಿಶ್ಚಯಿಸಿ ತಪಸ್ಸನ್ನು ಆರಂಭಿಸಿದರು. ಜಲದಲ್ಲಿ ಮರದ ತುಂಡಿನಂತೆ ಇದ್ದು ಆ ನದಿಗಳ ವೇಗ, ನದಿಗಳ ಝೋಂಕಾರಧ್ವನಿಗಳನ್ನು ಸಮವಾಗಿ ಸ್ವಿಕರಿಸಿದರು. ಅವರ ಇರುವಿಕೆ ನದೀ ಜಲಚರಗಳಿಗೆ ವಿಶ್ವಾಸ ಉಂಟು ಮಾಡಿತು. ಗಂಗಾ-ಯಮುನಾ ನದಿಗಳು ಅವುಗಳಿಗೆ ಸೇರುವ ಇತರೆ ನದಿಗಳು ಚ್ಯವನರಿಗೆ ಯಾವುದೇ ತೊಂದರೆ ಕೊಡುವುದಿರಲಿ, ಅವರಿಗೆ ಪ್ರದಕ್ಷಿಣೆ ಹಾಕಿ (ನಮಸ್ಕರಿಸಿ) ಹರಿದವು (ನದೀ ಅಭಿಮಾನಿದೇವತೆಗಳು). ಅಂತರ್ಜಲದಲ್ಲಿಯೇ ಋಷಿಗಳು ನಿದ್ರೆಗೆ ಜಾರುತ್ತಿದ್ದರು. ಅಲ್ಲಿಯೇ ಏಳುತ್ತಿದ್ದರು. ಜಲಚರಪ್ರಾಣಿಗಳಿಗಂತೂ ಅವರ ದರ್ಶನ ಆನಂದದಾಯಕವಾಗಿರುತ್ತಿತ್ತು. ಮೀನುಗಳು ಅವರ ಬಳಿ ಬಂದು ಅವರನ್ನು ಮೂಸಿ ನೋಡಿ ಹೋಗುತ್ತಿದ್ದವು. ಹೀಗೆ ಬಹುಕಾಲ ಗತಿಸಿತು[೧].

ಒಮ್ಮೆ ಮೀನುಗಳನ್ನೇ ತಮ್ಮ ಜೀವನೋಪಾಯ ಮಾಡಿಕೊಂಡ ಬೆಸ್ತರು ಬಂದು ಎರಡೂ ನದಿಗಳ ಜಲದಲ್ಲಿ ಹೊಸ ಬಲೆಯನ್ನು ಎಸೆದು ಮೀನು ಮೊದಲಾದ ಜಲಚರ

---

೧ ನಿಹತ್ಯ ಮಾನಂ ಕ್ರೋಧಂ ಚ ಪ್ರಹರ್ಷಂ ಶೋಕಮೇವ ಚ।
ವರ್ಷಾಣಿ ದ್ವಾದಶ ಮುನಿರ್ಜಲವಾಸೇ ಧೃತವ್ರತಃ॥
ಆದಧತ್ ಸರ್ವಭೂತೇಷು ವಿಸ್ರಂಭಂ ಪರಮಂ ಶುಭಮ್।
ಜಲಚರೇಷು ಸತ್ತ್ವೇಷು .................. ॥
ಗಂಗಾಯಮುನಯೋರ್ಮಧ್ಯೇ ಜಲಂ ಸಂಪ್ರವಿವೇಶ ಹ।
ಗಂಗಾ ಚ ಯಮುನಾ ಚೈವ ಸರಿತಶ್ಚಾನುಗಾಸ್ತಯೋಃ॥
ಪ್ರದಕ್ಷಿಣಂ ಋಷಿಂ ಚಕ್ರುಃ ......................... ।
ಉಪಾಜಿಘ್ರಂತ ಚ ತದಾ ಮತ್ಸ್ಯಾಸ್ತಂ ಹೃಷ್ಟಮಾನಸಾಃ। - ೮೦/೪-೧೦

ಪ್ರಾಣಿಗಳು ಬಲೆಯಲ್ಲಿ ಬಿದ್ದಮೇಲೆ ಆ ಬಲೆಯನ್ನು ನೀರಿನ ಮೇಲೆ ಎಳೆದಾಗ. ಮೀನುಗಳ ಜೊತೆಗೆ ಚ್ಯವನರೂ ಬಲೆಯಲ್ಲಿ ಸಿಕ್ಕುಹಾಕಿಕೊಂಡಿರುವುದನ್ನು ಗಮನಿಸಿದ ಬೆಸ್ತರು ಆ ವೇದಪಾರಂಗತರಾದ ಚ್ಯವನರಿಗೆ ಶಿರಸಾಷ್ಟಾಂಗ ನಮಸ್ಕಾರ ಮಾಡಿದರು. ಅದೇ ಹೊತ್ತಿಗೆ ಬಲೆಯಲ್ಲಿ ಬಿದ್ದ ಮೀನುಗಳು ಬಲೆಯಲ್ಲಿ ಸಿಕ್ಕಿದ್ದರಿಂದ ಉಂಟಾದ ದುಃಖ, ಆಯಾಸ ಹಾಗೂ ನೀರಿನಿಂದ ಹೊರಗೆ ಬಂದುದರಿಂದ ಸತ್ತು ಹೋದವು. ಇದರಿಂದ ಚ್ಯವನರಿಗೆ ಬಹಳ ದುಃಖವಾಯಿತು. ನಿಟ್ಟುಸಿರು ಬಿಟ್ಟರು. ಆ ಬೆಸ್ತರು ಚ್ಯವನರನ್ನು ತಮ್ಮ ಈ ಅಪರಾಧಕ್ಕೆ ಕ್ಷಮೆ ಕೋರಿದರು[೧].

ಆಗ ಚ್ಯವನರು ನಾನು ಅನೇಕ ವರ್ಷಗಳಿಂದ ಮೀನು ಮೊದಲಾದ ಜಲಚರಗಳೊಂದಿಗೆ ಬದುಕಿದ್ದೇನೆ, ವಾಸ ಮಾಡಿದ್ದೇನೆ. ನಾನು ಅವನ್ನು ಬಿಟ್ಟಿರಲಾರೆ. ನನ್ನ ಜೀವನ, ಮರಣಗಳೆಲ್ಲ ಅವುಗಳೊಟ್ಟಿಗೆ ಎಂದರು[೨]. ಇದನ್ನು ಕೇಳಿದ ಬೆಸ್ತರು ಆ ಪ್ರದೇಶದ ರಾಜನಾದ ನಹುಷನಿಗೆ ಹೋಗಿ, ನಡೆದುದೆಲ್ಲವನ್ನು ಹೆದರುತ್ತಾ ಪ್ರಾಂಜಲರಾಗಿ ತಿಳಿಸಿದರು[೩].

ಚ್ಯವನರು ಹೇಳಿದ ಮಾತುಗಳನ್ನು ಕೇಳಿದ ನಹುಷರಾಜನು ಕೂಡಲೇ ಪುರೋಹಿತರೊಡನೆ ನದೀ ತೀರಕ್ಕೆ ಬಂದನು. ಪ್ರಾಂಜಲನಾಗಿ ಕೈಮುಗಿದು ಚ್ಯವನರನ್ನು ಪುರೋಹಿತರಿಂದ ಪೂಜಿಸಿದನು. ತಾನು ಋಷಿಗಳ ಸೇವೆ ಮಾಡಲು ಏನು ಮಾಡಬೇಕೆಂದು ಕೇಳಲು ಚ್ಯವನರು 'ಬೆಸ್ತರು ಬಹುಶ್ರಮದಿಂದ ನನ್ನನ್ನು ಮೀನುಗಳೊಡನೆ ಹೊರಗೆ ಎಳೆದಿದ್ದಾರೆ. ನೀನು ಮತ್ಸ್ಯಗಳ ಬೆಲೆಯನ್ನು ಹಾಗೂ ನನ್ನ ಬೆಲೆಯನ್ನು ಸೇರಿಸಿ ಬೆಸ್ತರಿಗೆ ಕೊಡಲು ಸೂಚಿಸಿದರು.

ಕೂಡಲೇ ರಾಜನು ತನ್ನ ಪುರೋಹಿತನಿಗೆ ೧೦೦೦ ನಿಷ್ಕವನ್ನು ಬೆಸ್ತರಿಗೆ ಕೊಡಲು ಆದೇಶಿಸಿದ. ಅದಕ್ಕೆ ಚ್ಯವನರು ಒಂದು ಸಾವಿರ ನಿಷ್ಕವು ನನ್ನ ಬೆಲೆಯಲ್ಲ. ಯೋಚಿಸಿ ಯೋಗ್ಯಬೆಲೆ ನಿರ್ಧರಿಸು ಎನ್ನಲು, ರಾಜನು ಹತ್ತು ಸಾವಿರ ನಿಷ್ಕ ಕೊಡಲು ಹೇಳಿದ. ಅದಕ್ಕೂ ಒಪ್ಪಲಿಲ್ಲ ಋಷಿಗಳು. ನಂತರ ಒಂದುಲಕ್ಷ, ಕೋಟಿ, ಅರ್ಧರಾಜ್ಯ, ಅದೇಕೇ ಪೂರ್ಣರಾಜ್ಯ ಕೊಡುವೆನೆಂದರೂ ಋಷಿಗಳು ಅಂಗೀಕರಿಸಲಿಲ್ಲ. ರಾಜ ಚಿಂತಾಕ್ರಾಂತನಾದಾಗ ತನ್ನ

---

೧ ನಿಷಾದಾಸ್ತತ್ರ ಬಹವಸ್ತತ್ರ ಮತ್ಸ್ಯೋದ್ಧರಣನಿಶ್ಚಿತಾಃ।
ಬಬಂಧುಸ್ತತ್ರ ಮತ್ಸ್ಯಾಂಶ್ಚ........................ ॥........
ತಥಾ ಮತ್ಸ್ಯೈಃ ಪರಿವೃತಂ ಚ್ಯವನಂ..........ಆಕರ್ಷಂತ......... ।
ತಥಾ ಪ್ರಾಂಜಲಯೋ ದಾಶಾಃ ಶಿರೋಭಿಃ ಪ್ರಾಪತನ್ ಭುವಿ।
ಅಜ್ಞಾನಾತ್ ಯತ್ಕೃತಂ ಪಾಪಂ ಪ್ರಸಾದಂ ತತ್ರ ನಃ ಕುರು।

೨ ಪ್ರಾಣೋತ್ಸರ್ಗಂ ವಿಕ್ರಯಂ ವಾ ಮತ್ಸ್ಯೈಃ ಯಾಸ್ಯಾಮಹಂ ಸಹ।
ಸಂವಾಸಾತ್ ನೋತ್ಸಹೇ ತ್ಯಕ್ತುಂ ಸಲಿಲಾಧ್ಯುಷಿತಾನಿಮಾನ್ ॥

೩ ಇತ್ಯುಕ್ತಾಸ್ತೇ ನಿಷಾದಾಸ್ತು ............ ಭಯಕಂಪಿತಾಃ।
ಸರ್ವೇ ವಿಷಣ್ಣವದನಾ ನಹುಷಾಯ ನ್ಯವೇದಯನ್ ॥ - ೮೦/೧೨-೨೬

ಪುರೋಹಿತರೊಡನೆ ವಿಚಾರ ವಿನಿಮಯ ಮಾಡಿದ. ರಾಜನ ಸಮೀಪದಲ್ಲಿದ್ದ ಒಬ್ಬ ವನಚರನಾದ ಗಡ್ಡೆಗೆಣಸು ತಿಂದು ಇರುವ ಗೋವಿನಲ್ಲಿ ಜನಿಸಿದ ಒಬ್ಬ ಋಷಿಯು ತಾನು ಸುಳ್ಳು ಹೇಳುವುದಿಲ್ಲ, ಚ್ಯವನನಿಗೆ ತೃಪ್ತಿಯಾಗುವಂತಹ ಪರಿಹಾರ ಹೇಳುತ್ತೇನೆ ಎಂದ. ರಾಜನು ಒಪ್ಪಿ ಚ್ಯವನರು ಕೋಪಗೊಂಡರೆ ಮೂರು ಲೋಕಗಳನ್ನೇ ಸುಟ್ಟಾರು.ಆದ್ದರಿಂದ ನೀವು ಅಮಾತ್ಯರು, ಋತ್ವಿಜರೊಡನೆ ಅಗಾಧವಾದ ನದೀಜಲದಲ್ಲಿ ಮುಳುಗುವದರಲ್ಲಿರುವ ನನ್ನನ್ನು ಚ್ಯವನರಿಗೆ ಸೂಕ್ತ ಮೌಲ್ಯ ನಿಶ್ಚಯಿಸಿ ನೀರಿನಿಂದ ದಾಟಿಸಿರಿ ಎಂದು ಬೇಡಿಕೊಂಡನು.

ನಹುಷನ ಮಾತನ್ನು ಕೇಳಿದ ಹಸುವಿನಲ್ಲಿ (ಆಕಳಿನಲ್ಲಿ) ಜನಿಸಿದ ಆ ಋಷಿಯು ನಹುಷನ ಅಮಾತ್ಯರಿಗೆ ಹಾಗೂ ನಹುಷನಿಗೆ ಸಂತೋಷ ಉಂಟುಮಾಡುವ ವಚನವನ್ನು ನುಡಿದನು. 'ರಾಜನ್! ನಾಲ್ಕು ವರ್ಣಗಳಲ್ಲಿ ಬ್ರಾಹ್ಮಣನ ಮೌಲ್ಯಕಟ್ಟಲು ಚ್ಯವನರ ಬೆಲೆಯನ್ನು ಒಂದು ಗೋವೆಂದು ಪರಿಗಣಿಸು' ಎಂದಾಗ ನಹುಷನು ಅಮಾತ್ಯ ಹಾಗೂ ಪುರೋಹಿತರೊಡನೆ ಚ್ಯವನರ ಬಳಿಗೆ ಹೋಗಿ, 'ಎಲೈ ಮಹರ್ಷಿಗಳೇ! ಏಳಿ ಏಳಿ ಒಂದು ಗೋವನ್ನು ನಿಮ್ಮ ಬೆಲೆ ಎಂದು ನಿರ್ಧರಿಸಿ ನಿಮ್ಮನ್ನು ಕೊಳ್ಳಲಾಗಿದೆ. ನಿಮಗೆ ಇದು ಸಮ್ಮತವೆಂದು ಭಾವಿಸಿದ್ದೇನೆ.' ಎಂದನು.

ಆಗ ಚ್ಯವನರು ಎದ್ದೆ ಎದ್ದೆ! ನನ್ನನ್ನು ಸರಿಯಾಗಿ ಕೊಂಡಿದ್ದೀಯಾ. ಗೋವುಗಳಿಗೆ ಸಮಾನವಾದ ಬೆಲೆಯನ್ನು ನಾನು ಎಲ್ಲಿಯೂ ಕಂಡೇ ಇಲ್ಲ (ನೋಡಿಲ್ಲ). ರಾಜನ್! ಗೋವುಗಳ ಕೀರ್ತನೆ, ಶ್ರವಣ, ದರ್ಶನ, ದಾನಗಳೆಲ್ಲ ಪ್ರಶಸ್ತ, ಮಂಗಳಕರ ಹಾಗೂ ಸರ್ವಪಾಪ ಪರಿಹಾರಕವಾಗಿದೆ.

ಗೋವುಗಳು ಲಕ್ಷ್ಮೀವಾಸಸ್ಥಾನ, ಅವುಗಳಲ್ಲಿ ಪಾಪವಿಲ್ಲ, ಅವು ಮನುಷ್ಯರಿಗೆ ಆಹಾರವನ್ನು (ಹಾಲು ಮೊದಲಾಗಿ), ದೇವತೆಗಳಿಗೆ ಹವಿಸ್ಸನ್ನು ಕೊಡುತ್ತದೆ (ಹಾಲಿನಿಂದ ಹವಿರ್ದ್ರವ್ಯ ತಯಾರಾಗುತ್ತದೆ).

ಸ್ವಾಹಾಕಾರ ವಷಟ್ಕಾರಗಳು ಗೋವಿನಲ್ಲಿ ನಿತ್ಯವೂ ಇರುತ್ತವೆ. ಅವೇ ಯಜ್ಞಗಳ ನಿರ್ವಾಹಕಗಳು, ಯಜ್ಞಗಳಲ್ಲಿ ಅವೇನೇ ಪ್ರಧಾನ.

ಗೋವುಗಳು ಅಮೃತಸದೃಶ ಹಾಲನ್ನು ಸುರಿಸುತ್ತವೆ. ಭಾರ ಹೊರತ್ತವೆ (ಬಂಡಿ ಮೊದಲಾದವುಗಳ ಮೂಲಕ ಸಾಮಾನುಗಳ ವಾಹಕ).

ಗೋವು ತೇಜಸ್ಸಿನಿಂದ ಹಾಗೂ ದೇಹದಿಂದ ಅಗ್ನಿಗೆ ಸಮ. ಪ್ರಾಣಿಗಳಿಗೆ ಸುಖಕರ.

ಗೋವುಗಳು ಮಲಗಿ ಸುಖವಾಗಿ ಉಸಿರಾಡುವ ಪ್ರದೇಶಗಳೆಲ್ಲ ಶೋಭಾಯವಾದುವು. ಅಲ್ಲಿರುವ ದೋಷಗಳ ನಾಶವಾಗುತ್ತದೆ (ರೋಗಕಾರಕಗಳು ನಾಶವಾಗುತ್ತವೆ, ಸಗಣಿ ಸಾರಿಸುವುದರಿಂದ).

ಗೋವುಗಳು ಸ್ವರ್ಗಕ್ಕೆ ಸೋಪಾನ, ಮೆಟ್ಟಿಲು. ಸ್ವರ್ಗದಲ್ಲಿ ಪೂಜಿತವಾದುವು. ಇಷ್ಟವಾದುದನ್ನು ಕೊಡುವ ದೇವತೆಗಳು ಗೋವುಗಳು ಗೋವಿಗಿಂತ ಶ್ರೇಷ್ಠಪ್ರಾಣಿಗಳು ಇಲ್ಲವೇ ಇಲ್ಲ, ಇವೆಲ್ಲ ಗೋ ಮಹಿಮೆ.

ಈ ಮಾತುಗಳನ್ನು ಕೇಳಿದ ಬೆಸ್ತರು 'ಋಷಿಗಳೇ! ತಮ್ಮ ದರ್ಶನ, ಮಾತುಕಥೆ ಮಾಡಿರುವ ನಮಗೆ ನಿಮ್ಮ ಸ್ನೇಹ ಉಂಟಾಗಿದೆ. ಕಾರಣ ಏಳು ಹೆಜ್ಜೆ ಸಜ್ಜನರೊಡನೆ ಓಡಾಡಿದಾಗ ಸ್ನೇಹ ಉಂಟಾಗುತ್ತದೆಯಂತೆ. ತಾವು ಪುರುಷಾಗ್ನಿ ಇದ್ದಂತೆ. ಹೇಗೆ ಅಗ್ನಿಯು ಎಲ್ಲ ಹವಿಸ್ಸುಗಳನ್ನು ಉಣ್ಣುವಂತೆ ನೀವು ಹಾಗೆ ಪುರುಷಾಗ್ನಿಯಾಗಿದ್ದೀರಿ. ದಯವಿಟ್ಟು ನಮ್ಮ ಮೇಲೆ ಅನುಗ್ರಹಿಸಿ, ಈ ಗೋವನ್ನು ಸ್ವೀಕರಿಸಿ ಎಂದರು.

ಚ್ಯವನರು 'ಎಲೈ ಭಕ್ತರೇ! ದರಿದ್ರನ, ಕಷ್ಟದಲ್ಲಿರುವನ, ಋಷಿಯ ಮತ್ತು ಸರ್ಪಗಳ ದೃಷ್ಟಿ ಯಾರ ಮೇಲೆ ಬೀಳುತ್ತದೆಯೋ ಅವು ಅವನನ್ನು ಅಗ್ನಿಯು ತೃಣವನ್ನು(ಹುಲ್ಲನ್ನು) ಸುಡುವಂತೆ ನಿರ್ಮೂಲ ಮಾಡುತ್ತವೆ. ನೀವು ಕೊಡುವ ಗೋವನ್ನು ಸ್ವೀಕರಿಸುತ್ತೇನೆ. ನೀವು ಅಪರಾಧದಿಂದ ಮುಕ್ತರಾಗಿದ್ದೀರಿ. ನೀವು ಬಲೆಯಲ್ಲಿ ಹಿಡಿದ ಮೀನುಗಳೊಡನೆ ಸ್ವರ್ಗಕ್ಕೆ ಹೋಗಿರಿ' ಎಂದರು.

ಹೀಗೆ ಚ್ಯವನರ ಅನುಗ್ರಹದಿಂದ ಬೆಸ್ತರು ಮೀನುಗಳೊಡನೆ ಸ್ವರ್ಗಕ್ಕೆ ಹೋದರು. ನಂತರ ರಾಜನಿಗೆ ಆಶ್ಚರ್ಯವಾಯಿತು. ನಂತರ ಚ್ಯವನರು, ಗೋವಿನಲ್ಲಿ ಜನಿಸಿದ ಋಷಿಗಳು ರಾಜನಿಗೆ ಯೋಗ್ಯವಾದ ವರಗಳನ್ನು ಕೇಳಲು ಹೇಳಿದರು.

'ಧರ್ಮದಲ್ಲಿ ತನ್ನ ಬುದ್ಧಿ ಇರಲೆಂಬ ವರವನ್ನು ಇಂದ್ರಸಮನಾದ ರಾಜನು ಬೇಡಿದ. ಋಷಿಗಳು ಆಗಲಿ ಎಂದರು. ನಂತರ ರಾಜನು ಇಬ್ಬರೂ ಋಷಿಗಳನ್ನು ಸತ್ಕರಿಸಿದರು.

ನಂತರ ಚ್ಯವನರು ತಮ್ಮ ೧೨ ವರ್ಷಗಳ ಜಲಾಧಿವಾಸವ್ರತ ದೀಕ್ಷೆಯನ್ನು ಮುಗಿಸಿ ತಮ್ಮ ಆಶ್ರಮಕ್ಕೆ ತೆರಳಿದರು. ಗೋಜಾತ ಋಷಿಗಳೂ ಹಿಂದಿರುಗಿದರು. ನಹುಷನು ತನ್ನ ರಾಜ್ಯದ ರಾಜಧಾನಿಗೆ ಹೋದನು.

ನೋಡು ಧರ್ಮರಾಜನೇ! ಮಹಾತ್ಮರ ದರ್ಶನ ಹಾಗು ಸಹವಾಸಗಳಿಂದ ಎಂತಹ ಪ್ರೀತಿ, ಅನುಗ್ರಹ ಸಿಗುತ್ತದೆ ಎಂಬುದನ್ನು ಹೇಳಿದ್ದೇನೆ. ಗೋವುಗಳ ಮಹಾಭಾಗ್ಯ, ಮಾಹಾತ್ಮ್ಯೆ ಹಾಗೂ ಧರ್ಮನಿಶ್ಚಯವನ್ನು ತಿಳಿ ಎಂದರು.

## ಸಂದೇಶಗಳು-ವಿವರಣೆಗಳು

ಸಜ್ಜನರ ಸ್ನೇಹ, ಸಂಗತಿ, ವಾಸಗಳಿಂದ ಇಹದಲ್ಲಿ ಸುಖ, ಪರಲೋಕದಲ್ಲಿಯೂ ಸುಖ ಹಾಗೂ ಮೋಕ್ಷಕ್ಕೆ ಸಾಧನವೆಂಬುದು ಮುಖ್ಯಸಂದೇಶ. ಅದನ್ನೇ ಆಚಾರ್ಯರು –

**'ಸದ್ಭಿರ್ಹಿ ಸಂಗತಿರಿಹೈವ ಸುಖಸ್ಯ ಹೇತುಃ**
**ಮೋಕ್ಷೈಕಹೇತುರಥ ತದ್ವಿತರೀತಮನ್ಯತ್ ॥'** - ಮತಾನಿ.

ಚ್ಯವನರೇ ಸಜ್ಜನರು. ಅವರ ಸಹವಾಸ ಸಂಗತಿಯಿಂದ ಗಂಗಾದಿನದಿಗಳು ಪಾವನವಾದವು. ಅಲ್ಲಿನ ಮತ್ಸ್ಯಾದಿ ಜಲಚರಗಳು ಸ್ವರ್ಗ ಕಂಡವು. ಅವರಿಗೆ ಗೋದಾನ ಮಾಡಿದ ನಹುಷ ನಿತ್ಯ ಸದ್ಧರ್ಮರತನಾದ. ಬೆಸ್ತರೂ ಸ್ವರ್ಗಕ್ಕೆ ಹೋದರು. ಮುಂದೆ ಇದೇ ಮೊಕ್ಷಕ್ಕೆ ಸಹಕಾರಿಯಾಗುತ್ತದೆ.

ಗೋದಾನವನ್ನು ಸರ್ವರೂ ಮಾಡಬೇಕು. ಅದರ ಬೆಲೆ ಕಟ್ಟಲಾಗದು.

ಇತ್ಯಾದಿ.....

# ೧೪೫. ಚ್ಯವನ-ಕುಶಿಕರ ಸಂವಾದ

ಧರ್ಮರಾಜನು ಭೀಷ್ಮರನ್ನು ಕುರಿತು ಹಲವು ಸಂಶಯಗಳನ್ನು ಮುಂದಿಡುತ್ತಾನೆ.

೧. ಬ್ರಹ್ಮರ್ಷಿಗಳ ವಂಶದಲ್ಲಿ ಹುಟ್ಟಿದ (ಅವತರಿಸಿದ) ಪರಶುರಾಮನು ಕ್ಷತ್ರಧರ್ಮವನ್ನು ಹೇಗೆ ಆಚರಿಸಿದನು? ಅವರ ಅವತಾರದ ಬಗ್ಗೆ ವಿವರಿಸು.

೨. ಕ್ಷತ್ರಿಯ ವಂಶದಲ್ಲಿ ಜನಿಸಿದ ವಿಶ್ವಾಮಿತ್ರರು ಬ್ರಾಹ್ಮಣರು ಹೇಗೆ ಆದರು?

೩. ಋಚೀಕಪುತ್ರರಾದ ಜಮದಗ್ನಿಗಳಲ್ಲಿ ಇಲ್ಲದಂತಹ ಮತ್ತು ಕುಶಿಕ ಪುತ್ರನಾದ ಗಾಧಿ ರಾಜನಲ್ಲಿ ಇಲ್ಲದ ಅವರ ಪುತ್ರರಾದ (ಕ್ರಮವಾಗಿ) ಪರಶುರಾಮ ಹಾಗೂ ವಿಶ್ವಾಮಿತ್ರರಲ್ಲಿ ಈ ವರ್ಣ (ಬ್ರಾಹ್ಮಣ ಕ್ಷತ್ರಿಯ) ವ್ಯತ್ಯಾಸವು ಹೇಗೆ ಉಂಟಾಯಿತು.

ಈ ಮೇಲಿನ ಸಂಶಯಗಳಿಗೆ ಉತ್ತರಿಸಲು ಧರ್ಮರಾಜನು ವಿಜ್ಞಾಪಿಸಿದಾಗ ಭೀಷ್ಮರು ಸುದೀರ್ಘವಾದ (ಚ್ಯವನಋಷಿಗಳಿಗೂ ಕುಶಿಕರಾಜನಿಗೂ ನಡೆದ ಸಂವಾದರೂಪ) ಇತಿಹಾಸವನ್ನು ಹೇಳಲಾರಂಭಿಸಿದರು.

ಭೃಗು ಋಷಿಗಳ ಮಗನಾದ ಚ್ಯವನನು ದಿವ್ಯದೃಷ್ಟಿಯಿಂದ ತನ್ನ ವಂಶದಲ್ಲಿ ಮುಂದೆ ಕುಶಿಕವಂಶದ ಕ್ಷತ್ರಿಯ, ಬ್ರಾಹ್ಮಣ ವಂಶಗಳ ವ್ಯತ್ಯಾಸರೂಪ ದೋಷವನ್ನು (ಕನ್ಯಾ ಸಂಬಂಧದಿಂದಾಗಿ) ತಿಳಿದು, ಅದರ ಪರಿಣಾಮವನ್ನು ಊಹಿಸಿ, ತನ್ನ ವಂಶಕ್ಕೆ ಅಂತಹ ದೋಷ ಬರದಿರಲೆಂದು ಕುಶಿಕ ವಂಶವನ್ನೇ ಸುಟ್ಟುಹಾಕುವ ಅಪೇಕ್ಷೆಯಿಂದ ಕುಶಿಕರಾಜನಲ್ಲಿಗೆ ಹೋಗಿ ಹೀಗೆ ಮಾತನಾಡಿದನು(ಈ ಕಥೆ ಈಗಾಗಲೇ ಆದಿಪರ್ವದಲ್ಲಿ ಬಂದಿದೆ. ಅಲ್ಲಿ ಋಚೀಕರು ಅಭಿಮಂತ್ರಿಸಿಟ್ಟ ಕಲಶೋದಕಗಳ ಬದಲಾವಣೆ ಮಾಡಿದ ಋಚೀಕಪತ್ನಿ ಹಾಗೂ ಆಕೆಯ ತಾಯಿಯರ ವರ್ತನೆ ಬಗ್ಗೆ ತಿಳಿಯಬಹುದು. ಅದರಿಂದಾಗಿಯೇ ಮುಂದಿನ ಅವಾಂತರಗಳಾದುದನ್ನು ಇಲ್ಲಿ ಸ್ಮರಿಸಲಾಗಿದೆ. ಅದನ್ನು ಓದುಗರು ನೋಡಿದರೆ ಮೇಲಿನ ವಾಕ್ಯದ ಅಭಿಪ್ರಾಯವಾಗುತ್ತದೆ).

'ರಾಜನ್! ನನಗೆ ನಿನ್ನೊಡನೆ ಇರಲು, ವಾಸಮಾಡಲು ಇಚ್ಛೆ ಉಂಟಾಗಿದೆ' ಎಂದನು(ಚ್ಯವನನು). ಅದಕ್ಕೆ ಕುಶಿಕನು ತಮ್ಮ ಈ ಅಪೇಕ್ಷೆ ಸಹಧರ್ಮವು ಧರ್ಮಕ್ಕೆ ದ್ವಾರವಾಗಿದೆ(ಧರ್ಮ, ಪುಣ್ಯ ಸಂಗ್ರಹಕ್ಕೆ). ತಾವು ಇದಕ್ಕೆ ಅನುಮತಿ ನೀಡಿರಿ ಎಂದನು. ಇದು ಪಂಡಿತರಿಂದ ಆಶ್ರಿತವಾದುದು. ಕನ್ಯಾದಾನ ಕಾಲದಲ್ಲೂ ದಾನಿಗಳು ಈ ಸಹಧರ್ಮವನ್ನು ಆದೇಶಿಸುತ್ತಾರೆ.

ನಂತರ ಕುಶಿಕ ರಾಜದಂಪತಿಗಳು ಚ್ಯವನರನ್ನು ವಿಧ್ಯುಕ್ತವಾಗಿ ಪೂರ್ಣಕುಂಭದಿಂದ ಸ್ವಾಗತಿಸಿ ಅರ್ಘ್ಯ, ಪಾದ್ಯ, ಮದುಪರ್ಕಾದಿ ಉಪಚಾರಗಳಿಂದ ಗೌರವಿಸಿ ನುಡಿದರು.

'ನಾವು (ದಂಪತಿಗಳು) ತಮ್ಮ ಅಧೀನ. ನಾವು ಮಾಡಬೇಕಾದುದನ್ನು ಆಜ್ಞೆ ಮಾಡಿರಿ. ನಿಮಗೆ ರಾಜ್ಯ, ಧನ, ಗೋವುಗಳು, ಯಜ್ಞಕ್ಕೆ ಬೇಕಾದ ದಾನಗಳು – ಬೇಕಾದರೆ ಕೊಡುತ್ತೇನೆ. ಈ ಮನೆ, ಈ ಧರ್ಮಾಸನ, ಈ ರಾಜ್ಯ ತಮ್ಮದು. ತಾವೇ ಈ ಭೂಮಿಯನ್ನು ಆಳಿರಿ. ನಾನು ನಿಮ್ಮ ಅಧೀನದಲ್ಲಿರುವ ಸೇವಕನೆಂದು ಭಾವಿಸಿರಿ[೧].

ಆಗ ಚ್ಯವನರು ಬಹಳ ಸಂತೋಷದಿಂದ 'ನನಗೆ ನಿನ್ನ ರಾಜ್ಯ, ಕೋಶ, ದಾಸ ದಾಸಿಯರು, ಗೋವುಗಳು ಯಜ್ಞಗಳೂ ಯಾವೂ ಬೇಡ. ನಮ್ಮಿಬ್ಬರಿಗೆ ಸಮ್ಮತವಾದರೆ, ಒಂದು ವ್ರತವನ್ನು ಆರಂಬಿಸುತ್ತೇನೆ. ಆಗ ನೀವು ಯಾವುದೇ ಶಂಕೆ ಇಲ್ಲದೆ ಪ್ರಯತ್ನಪೂರ್ವಕವಾಗಿ ನನ್ನ ಸೇವೆ ಮಾಡಬೇಕು'[೨] ಎಂದರು. ಅದಕ್ಕೆ ರಾಜದಂಪತಿಗಳು ಸಂತೋಷದಿಂದ ಒಪ್ಪಿದರು.

ನಂತರ ಕುಶಿಕನು ಚ್ಯವನರನ್ನು ಒಂದು ಸುಂದರವಾದ ಸುಸಜ್ಜಿತವಾದ ವಾಸಯೋಗ್ಯವಾದ ಸಕಲ ಪರಿಕರಗಳಿಂದ ಮನೆಯನ್ನು ತೋರಿಸಿ, ಇಲ್ಲಿ ತಾವು ವಾಸಮಾಡಬಹುದೆಂದನು. ಆ ಹೊತ್ತಿಗೆ ಮಧ್ಯಾಹ್ನವಾಗಿತ್ತು. ತಮ್ಮ ಅನ್ನಪಾನಗಳು ವ್ಯವಸ್ಥೆ ಮಾಡಲು ಋಷಿಗಳು ಸೂಚಿಸಿದಾಗ ಆ ಸಮಯದಲ್ಲಿ ಸಿದ್ಧಪಡಿಸಿದ ಭೂರಿಭೋಜನವನ್ನು ನೀಡಿದ ರಾಜ. ಅದನ್ನುಂಡ ಋಷಿಗಳು ನಿದ್ರೆಯನ್ನು ಬಯಸಿ ನಿದ್ರೆಯಿಂದ ತಮ್ಮನ್ನು ಎಬ್ಬಿಸದೆ, ತಮ್ಮ ಪಾದಗಳನ್ನು ದಂಪತಿಗಳು ಒತ್ತುತ್ತಿರಬೇಕೆಂದು ಸೂಚಿಸಿ, ಶಯ್ಯಾಗೃಹದಲ್ಲಿ ಮಲಗಿದರು. ಅವರು ಮಲಗಿದಾಗ ಮಧ್ಯಾಹ್ನವಾಗಿತ್ತು. ರಾತ್ರಿ ಕಳೆದರೂ, ರಾಜ ಅವರನ್ನು ಎಬ್ಬಿಸಲಿಲ್ಲ. ಹಗಲೂ, ರಾತ್ರಿ ದಂಪತಿಗಳು ಎಚ್ಚೆತ್ತಿದ್ದು ಋಷಿಗಳ ಪಾದಸಂವಹನ(ಒತ್ತುವಿಕೆ) ಮಾಡುತ್ತಿದ್ದರು. ಹೀಗೆ ಋಷಿಗಳು ಒಂದೇ

---

೧ ಏತಂ ದೋಷಂ ಪುರಾ ದೃಷ್ಟ್ವಾ ಭಾರ್ಗವಶ್ಚ್ಯವನಸ್ತದಾ ।
ಆಗಾಮಿನಂ ಮಹಾಬುದ್ಧಿಃ ಸ್ವವಂಶೇ ಮುನಿಪುಂಗವಃ ॥
ಸಂಚಿಂತ್ಯ ಮನಸಾ ಸರ್ವಂ ಗುಣದೋಷಬಲಾಬಲಮ್ ।
ದಗ್ಧುಕಾಮಃ ಕುಲಂ ಸರ್ವಂ ಕುಶಿಕಾನಾಂ ತಪೋಧನಃ ।
ಚ್ಯವನಸ್ತಮನು ಪ್ರಾಪ್ಯ ಕುಶಿಕಂ ವಾಕ್ಯಮಬ್ರವೀತ್ ॥
ವಸ್ತುಮಿಚ್ಛಾ ಸಮುತ್ಪನ್ನಾ ತ್ವಯಾ ಸಹ ಮಮಾನಘ ।
ಯದಿ ರಾಜ್ಯಂ ಯದಿ ಧನಂ ಯದಿ ಗಾಃ ಸಂಶಿತವ್ರತ ।
................................ ಸರ್ವಂ ದದಾಮಿ ತೇ ॥
ರಾಜಾ ತ್ವಮಸಿ ಶಾಧ್ಯುರ್ವೀಂ ಭೃತ್ಯೋಽಹಂ ಪರವಾಂಸ್ತ್ವಯಿ ॥ – ೮೨/೮-೨೧

೨ ನ ರಾಜ್ಯಂ ಕಾಮಯೇ ರಾಜನ್ ........................ ।
ನಿಯಮಂ ಕಿಂಚಿದಾರಪ್ಸ್ಯೇ ಯುವಯೋರ್ಯದಿ ರೋಚತೇ ।
ಪರಿಚರ್ಯೋಽಸ್ಮಿ ಯತ್ತಾಭ್ಯಾಂ ಯುವಾಭ್ಯಾಮವಿಶಂಕಯಾ ॥ – ೮೨/೨೧

ಮಗ್ಗುಲಾಗಿ ೨೧ ದಿನ ನಿದ್ರೆ ಮಾಡಿದರು. ಮಧ್ಯೇ ಏಳಲೇ ಇಲ್ಲ. ದಂಪತಿಗಳು ಸೇವೆಯಲ್ಲಿ ನಿರಾಹಾರವಾಗಿಯೇ ಇದ್ದು ಸೇವೆ ಮಾಡಿದರು[೧].

ನಂತರ ತಾವಾಗಿಯೇ ಎದ್ದ ಋಷಿಗಳು ಏನೂ ಮಾತಾಡದೇ ಮನೆಯಿಂದ ಹೊರ ನಡೆದರು. ಹಸಿವು ಹಾಗೂ ಶ್ರಮದಿಂದ ಬಳಲಿದ ದಂಪತಿಗಳು ಅವರ ಹಿಂದೆಯೇ ಹೋದರೂ, ಅವರು ಮಾತ್ರ ಇವರನ್ನು ನೋಡಲಿಲ್ಲ. ಇದ್ದಕ್ಕಿದ್ದಂತೆ ಅಂತರ್ಧಾನವಾಗಿ ಬಿಟ್ಟರು. ಆಗ ರಾಜನು ಭೂಮಿಯ ಮೇಲೆ ಕುಸಿದು ಬಿದ್ದನು. ಮಹಾತೇಜಸ್ವಿಯಾದ ರಾಜನು ಒಂದು ಮುಹೂರ್ತದ ನಂತರ ಎದ್ದು ಪತ್ನಿಯೊಡನೆ ಋಷಿಗಳನ್ನು ಹುಡುಕಾಡಿದರು.

ರಾಜನು ಒಂದೆಡೆ ಹಸಿವು, ಬಳಲಿಕೆಗಳಿಂದ ವಿಷಣ್ಣನಾದ. ಋಷಿಗಳು ಮರೆಯಾದುದಕ್ಕೆ ತನ್ನ ಪುರಕ್ಕೆ ಬಂದ. ಅರಮನೆಗೂ ಹಿಂದಿರುಗಿದ. ಯಾರೊಡನೆಯೂ ಮಾತಾಡಲಿಲ್ಲ. ಋಷಿಗಳಿಗಿದ್ದ ಗೃಹಕ್ಕೆ ಬಂದು ನೋಡಲು ಚ್ಯವನರು ಶಯ್ಯಾಗೃಹದಲ್ಲಿ ಮಲಗಿದ್ದರು. ರಾಜನಿಗೆ ಆಚ್ಚರಿಯಾಯಿತು. ಅವರು ಬಂದರಲ್ಲಾ ಮತ್ತೆ ಎಂದು ಸಂತಸವಾಯಿತು. ಆದ ಶ್ರಮವೆಲ್ಲ ಆರಿ ಹೋಯಿತು. ಮತ್ತೇ ಮೊದಲಿನಂತೆ ಋಷಿಗಳ ಪಾದ ಒತ್ತಲಾರಂಬಿಸಿದರು ದಂಪತಿಗಳು. ಋಷಿಗಳು ಮತ್ತೊಂದು ಕಡೆ ಮಗ್ಗುಲಾಗಿ ನಿದ್ರೆ ಹೋದರು. ಮತ್ತೆ ೨೧ ದಿನಗಳ ನಂತರವೇ ಚ್ಯವನರು ಎದ್ದರು. ದಂಪತಿಗಳು ಮಾತ್ರ ತಮಗಾಗುತ್ತಿರುವ ಹಸಿವು, ಶ್ರಮಾದಿ ಯಾವ ವಿಕಾರವನ್ನು (ಶಾಪ) ಭಯದಿಂದ ತೋರಿಸಲಿಲ್ಲ.

ಋಷಿಗಳು. 'ನಾನು ಸ್ನಾನ ಮಾಡುವೆ. ತೈಲಾಭ್ಯಂಗ ಸಿದ್ಧಪಡಿಸಿ' ಎನ್ನಲು ದಂಪತಿಗಳು ಕಾಯಿಸಿದ, ಉತ್ತಮ ಗುಣಮಟ್ಟದ ತೈಲವನ್ನು ತಂದು ಮತ್ತೆ ಪಾದಗಳನ್ನು ಒತ್ತಿದರು. ಋಷಿ-ಗಳು ನಿರ್ವಿಕಾರವಾಗಿಯೇ ಇದ್ದರು. ರಾಜ ನೋಡುತ್ತಿರುವಂತೆಯೇ ಚ್ಯವನರು ಸ್ನಾನಗೃಹಕ್ಕೆ ತೆರಳಿದರು. ಅಲ್ಲಿದ್ದ ಸ್ನಾನದ್ರವ್ಯಗಳು ಸಿದ್ಧವಾಗಿದ್ದವು. ರಾಜ ನೋಡುತ್ತಿರುವಂತೆಯೇ ಚ್ಯವ-

---

೧ ತತಃ ಸ ಭಗವಾನ್ ಭುಕ್ತ್ವಾ ದಂಪತೀ ಪ್ರಾಹ ದರ್ಮವಿತ್ ।
ಸ್ವಪ್ತುಮಿಚ್ಛಾಮ್ಯಹಂ ನಿದ್ರಾ ಬಾಧತೇ ಮಾಮಿತಿ ಪ್ರಭೋ ॥
ನ ಪ್ರಬೋಧ್ಯೋಽಸ್ಮಿ ಸಂಸುಪ್ತಃ.................... ।
ಸಂವಾಹಿತವ್ಯೌ ಪಾದೌ ಮೇ ಜಾಗರ್ತವ್ಯಂ ಚ ವಾಂ ನಿಶಿ ।
ಸುಷ್ವಾಪೈಕೇನ ಪಾರ್ಶ್ವೇನ ದಿವಸಾನೇಕವಿಂಶತಿಮ್ ।
ಸ ತು ರಾಜಾ ನಿರಾಹಾರಃ ಸಭಾರ್ಯಃ................ ।
ಪರ್ಯುಪಾಸತ ತಂ ಹೃಷ್ಟಃ ಚ್ಯವನಾರಾಧನೇ ರತಃ ।
ಭಾರ್ಗವಸ್ತು ಸಮುತ್ತಸ್ಥೌ ಸ್ವಯಮೇವ ತಪೋಧನಃ ।
ಅಕಿಂಚಿದುಕ್ತ್ವಾ ತು ಗೃಹಾತ್ ನಿಶ್ಚಕ್ರಾಮ ಮಹಾತಪಾಃ ।
ತಯೋಸ್ತು ಪ್ರೇಕ್ಷತೋರೇವ........................ ।
ಅಂತರ್ಹಿತೋಽಭೂದ್ ರಾಜೇಂದ್ರ ತತೋ ರಾಜಾಽಪತತ್ ಕ್ಷಿತೌ ॥ – ೮೨/೨೯-೩೯

ನರು ಸ್ನಾನ ದ್ರವ್ಯಗಳನ್ನು ತ್ಯಜಿಸಿ(ತಿರಸ್ಕರಿಸಿ) ಅಂತರ್ಧಾನವಾದರು. ಆದರೂ ದಂಪತಿಗಳು ಅಸೂಯೆ ಪಡಲಿಲ್ಲ (ತಾವು ಸ್ನಾನಕ್ಕೆ ಸಿದ್ಧತೆ ಮಾಡಿದ್ದನ್ನು ತಿರಸ್ಕರಿಸಿದ್ದಕ್ಕಾಗಿ ಬೇಸರ ಹೊಂದಲಿಲ್ಲ). ಇದ್ದಕ್ಕಿದ್ದಂತೆ ನಂತರ ಸ್ನಾನಮಾಡಿ ಸಿಂಹಾಸನದ ಮೇಲೆ ಕುಳಿತಿರುವಂತೆ ದಂಪತಿಗಳಿಗೆ ದರ್ಶನ ನೀಡಿದರು (ಕಂಡರು). ಆಮೇಲೆ ರಾಜನು ಸಂತೋಷದಿಂದ 'ಅನ್ನಸಿದ್ಧವಾಗಿದೆ' ಎಂದ. ಋಷಿಗಳು ತೆಗೆದುಕೊಂಡು ಬಾ ಎಂದರು. ರಾಜನು ಪತ್ನಿಯೊಂದಿಗೆ ಸಿದ್ಧಪಡಿಸಿದ 'ವಿವಿಧ ಪ್ರಕಾರದ ಮಾಂಸಗಳು, ಶಾಕ(ತರಕಾರಿ), ಕಡುಬು, ಪಾನಕ, ಅಪೂಪ, ರಸಗಳು, ಫಲಗಳು, ಭೋಜ್ಯಗಳನ್ನು(ಮುನಿ ಭೋಜನಯೋಗ್ಯ ವಸ್ತುಗಳು, ಗೃಹಸ್ಥ ವಾನಪ್ರಸ್ಥಾಯೋಗ್ಯಗಳು) ಶಾಪಭಯದಿಂದ ತಂದನು(ತಮಗೆ ಬೇಕಾದುದನ್ನು ಆರಿಸಿ, ಉಣ್ಣಲಿ ಎಂದು ಎಲ್ಲ ತರಹದ ಭೋಜನ ಪದಾರ್ಥಗಳನ್ನು ತಂದನು). ಎಲ್ಲವನ್ನೂ ಚ್ಯವನರ ಮುಂದೆ ಇಟ್ಟ ರಾಜ, ಅವರು ಅದೆಲ್ಲವನ್ನು ಹಾಗೂ ಅದರೊಡನೆ ಶಯ್ಯಾಸನವನ್ನು ಇಟ್ಟು ಈ ಎಲ್ಲ ಪದಾರ್ಥಗಳನ್ನು ವಸ್ತ್ರದಿಂದ ಮುಚ್ಚಿ, ಎಲ್ಲವನ್ನೂ ಅಗ್ನಿಯಿಂದ ಹೊತ್ತಿಸಿಬಿಟ್ಟರು. ಆದರೂ ರಾಜ ದಂಪತಿಗಳಿಗೆ ಕೋಪ ಬರಲಿಲ್ಲ. ಋಷಿಗಳು ಮತ್ತೆ ಮಾಯವಾಗಿಬಿಟ್ಟರು. ದಂಪತಿಗಳು ಮಾತ್ರ ಆ ರಾತ್ರಿ ಅಲ್ಲಿಯೇ ಮೌನದಿಂದ ನಿಂತರು.

ಹೀಗೆ ನಿತ್ಯವೂ ರಾಜನ ಮನೆಯಲ್ಲಿ ಶಯನ, ಭೋಜನಪದಾರ್ಥಗಳನ್ನು ಸಿದ್ಧಪಡಿಸಲಾಗುತ್ತಿತ್ತು. ಒಂದು ದಿನವೂ ಕೂಡಾ ಋಷಿಗಳಿಗೆ ಅದರಲ್ಲಿ ಯಾವ ದೋಷ ಕಾಣಲು ಸಾಧ್ಯವಾಗಲಿಲ್ಲ.

ಮತ್ತೆ ಋಷಿಗಳು ಒಂದುದಿನ ಕುಶಿಕ ದಂಪತಿಗಳಿಗೆ ರಥದಲ್ಲಿ ಕೂಡಿಸಿ ಎಳೆದುಕೊಂಡು ಹೋಗಲು ಆದೇಶಿಸಿದರು. ಯಾವುದೇ ಅವಮಾನ ಪಡದೆ ರಾಜನು ಎಂತಹ ರಥ ಎಂದು ಕೇಳಲು ಋಷಿಗಳು ಆಯುಧ, ಪತಾಕೆ, ಮೊದಲಾದ ಪರಿಕರಗಳಿಂದ ಕೂಡಿದ ಯುದ್ಧರಥವನ್ನು ಸಿದ್ಧಪಡಿಸಲು ಹೇಳಿದರು. ಹಾಗೆಯೇ ದೊಡ್ಡ ರಥ ಸಿದ್ಧಮಾಡಿ, ರಥದ ಎಡಭಾಗದಲ್ಲಿ ಹೆಂಡತಿಯನ್ನು ತಾನು ಬಲಗಡೆ ನೊಗವನ್ನು ಹೊತ್ತು ಋಷಿಗಳ ಕೊನೆಗೆ ಮೂರು ತುದಿಗಳಿರುವ ವಜ್ರನಿರ್ಮಿತ, ಚೂಪಾದ ಚಾವಟಿ(ಬಾರುಕೋಲು)ಯನ್ನು ಋಷಿಗಳಿಗೆ ಕೊಟ್ಟನು. ತಾವು ಎಲ್ಲಿಗೆ ಹೋಗಬೇಕೆಂದು ಬಯಸುವಿರೋ, ಅಲ್ಲಿಗೆ ರಥವನ್ನು ಎಳೆದುಕೊಂಡು ಹೋಗುತ್ತೇವೆ ಎಂದ ರಾಜ. ಆಗ ಋಷಿಗಳು ಇಲ್ಲಿಂದ ಹೆಜ್ಜೆಯ ಮೇಲೆ ಹೆಜ್ಜೆ ಹಾಕುತ್ತಾ ಮೆಲ್ಲಗೆ ಹೋಗಲಿ. ನನಗೆ ಶ್ರಮವಾಗಬಾರದು. ನಗರವಾಸಿಗಳು ನೋಡಲಿ, ದಾರಿ ಹೋಕರನ್ನು ತಳ್ಳಕೂಡದು. ಅವರಿಗೆ ನಾನು ಧನ ದಾನ ಮಾಡುವೆ. ಬೇಡುವ ಬ್ರಾಹ್ಮಣನಿಗೆ ಬೇಡಿದುದನ್ನು ಕೊಡಲು (ಧನ, ರತ್ನಾದಿ) ವ್ಯವಸ್ಥೆ ಮಾಡು. ಯಾವುದನ್ನೂ ಸಂಶಯದಿಂದ ನೋಡದಿರು ಎಂದರು. ರಾಜನು ಎಲ್ಲ ವ್ಯವಸ್ಥೆ ಮಾಡಿದನು. ದಾನದ ಪದಾರ್ಥಗಳನ್ನು ತೆಗೆದುಕೊಂಡ ಅನೇಕರು ರಥದೊಡನೆ ಹಿಂಬಾಲಿಸಿದರು. ರಾಜನ ಎಲ್ಲ ಅಮಾತ್ಯರೂ, ಋಷಿಗಳನ್ನು ಹಿಂಬಾಲಿಸಿದರು. ಈ ದೃಶ್ಯ ನಾಗರಿಕರಿಗೆ ಅಸಹ್ಯವಾಗಿ ಹಾಹಾಕಾರ ಮಾಡಿದರು.

ಈ ಮಧ್ಯೆ ರಥ ಎಳೆಯುತ್ತಿದ್ದ ರಾಜ ದಂಪತಿಗಳಿಗೆ ಋಷಿಗಳು ಚಾವಟಿಯಿಂದ ಹೊಡೆಯುತ್ತಿದ್ದರು. ದಂಪತಿಗಳು ಮಾತ್ರ ನಿರ್ವಿಕಾರವಾಗಿಯೇ ಇದ್ದರು. ಆ ಹೊತ್ತಿಗೆ ೫೦ ದಿನಗಳು ಕಳೆದಿದ್ದವು. ದಂಪತಿಗಳು ನಿರಾಹಾರರಾಗಿದ್ದರೂ, ಚಾವಟಿಯ ಏಟುಗಳಿಂದ ಮೈಯಿಂದ ರಕ್ತ ಸುರಿಯುತ್ತಿತ್ತು. ಅವರು ಹೂವರಳಿದ ಮುತ್ತುಗದ ಮರದಂತೆ ಕಾಣುತ್ತಿದ್ದರು. ಇದನ್ನೆಲ್ಲ ನೋಡುತ್ತಿದ್ದ ನಗರವಾಸಿಗಳು ದುಃಖಿತಪ್ತರಾದರೂ ಋಷಿಯ ಶಾಪಭಯದಿಂದ ಯಾರೂ ಮಾತಾಡಲಿಲ್ಲ, ರಾಜನ ಧೈರ್ಯ ಅವರಿಗಾಗಲಿಲ್ಲ, ದಂಪತಿಗಳಿಗೆ ದಣಿವಾಗಿದ್ದರೂ, ನಿರ್ವಿಕಾರರಾದುದನ್ನು ಋಷಿಗಳು ನೋಡುತ್ತಾ ದಾರಿಹೋಕರಿಗೆ ಚ್ಯವನರು ಧನಕನಕ ದಾನ ಮಾಡಿದರು. ಕುಬೇರನಂತೆ, ರಾಜನು ಅವರು ಹೇಳಿದಂತೆ ಎಲ್ಲವನ್ನೂ ಸಂತೋಷದಿಂದಲೇ ಮಾಡಿದ (ದಾನಾದಿ ವ್ಯವಸ್ಥೆ).

ಆಗ ಮುನಿಗಳು ಪ್ರಸನ್ನರಾಗಿ ರಥದಿಂದ ಇಳಿದು, ನೊಗದಿಂದ ಬಿಡಿಸಿದರು. ಸ್ನೇಹಪೂರ್ಣವಾದ, ಗಂಭೀರವಾದ, ಮಾತುಗಳಿಂದ 'ನಿಮಗೆ ಶ್ರೇಷ್ಠವಾದ ವರವನ್ನು ಕೊಡುವೆ, ಕೇಳಿರಿ' ಎಂದರು ಋಷಿಗಳು. ತಮ್ಮ ಕೈಗಳಿಂದ ಅವರನ್ನು ಮುಟ್ಟಿದರು.

ಆಗ ರಾಜನು 'ಭಾಗವತರೇ! ನಮಗೀಗ ಶ್ರಮವಿಲ್ಲ, ನಿಮ್ಮ ಪ್ರಭಾವದಿಂದ ಮತ್ತು ಧ್ಯಾನದಿಂದ ನಾವು ಶ್ರಮರಹಿತರಾಗಿದ್ದೇವೆ' ಎಂದನು. ನಂತರ ಚ್ಯವನರು ತುಂಬಾ ಸಂತಸದಿಂದ ನಾನು ಮಾಡಿದ ಮಾತು ಎಂದೂ ವ್ಯರ್ಥವಾಗದು. ಇದು ರಮಣೀಯವಾದ ಗಂಗಾತೀರ. ನಾನಿಲ್ಲಿ ಕೆಲಕಾಲ ವ್ರತಾನುಷ್ಠಾನ ಮಾಡುತ್ತಾ ಇರುವೆ. ನೀನು ನಿನ್ನ ಪಟ್ಟಣಕ್ಕೆ ಹೋಗು. ವಿಶ್ರಾಂತಿ ತೆಗೆದುಕೊಂಡು ನಾಳೆ ಪತ್ನಿಯೊಡನೆ ಬಂದು ನೋಡು. ನಮ್ಮ ಮೇಲೆ ಕೋಪಿಸಿಕೊಳ್ಳಬೇಡ. ನಿನಗೆ ಶ್ರೇಯಸ್ಸಾಗಲಿದೆ. ನಿನ್ನ ಮನದ ಬಯಕೆಗಳು ಈಡೇರುತ್ತವೆ' ಎಂದು ನುಡಿದರು. ಆಗ ರಾಜನು 'ನನಗೆ ತಮ್ಮ ಬಗ್ಗೆ ಕೋಪವಿಲ್ಲ, ನಾನು ಪವಿತ್ರನಾಗಿದ್ದೇನೆ. ಪಾಪ ಕಳೆದುಕೊಂಡಿದ್ದೇನೆ. ನನ್ನ ವಂಶವು ತಮ್ಮಿಂದ ಉದ್ಧಾರವಾಗಿದೆ. ನಾವೀಗ ಯೌವನ, ಬಲ, ಆರೋಗ್ಯವಂತ ಶರೀರವುಳ್ಳವರಾಗಿದ್ದೇವೆ. ನೀವು ಹೊಡೆದುದರಿಂದ ಆದ ಗಾಯಗಳು ಶರೀರದಲ್ಲಿಲ್ಲ, ನಮ್ಮ ಪತ್ನಿ ದಿವ್ಯ ಅಪ್ಸರೆಯಂತೆ ಇದ್ದಾಳೆ. ಇದೆಲ್ಲ ತಮ್ಮ ಅನುಗ್ರಹದಿಂದಾಗಿದೆ. ತಾವು ಸತ್ಯಪರಾಕ್ರಮರು. ಇದೇನೂ ಆಶ್ಚರ್ಯವಲ್ಲ, ತಾವು ತಪೋಧನರಾದ್ದರಿಂದ.

ರಾಜನು ಹೀಗೆ ನುಡಿಯುತ್ತಿರಲು ಋಷಿಗಳು 'ನಾಳೆ ನಿನ್ನ ಪತ್ನಿಯೊಡನೆ ಬಾ' ಎಂದರು. ರಾಜನು ಅವರ ಅನುಮತಿ ಪಡೆದು ರಾಜಧಾನಿಗೆ ಹೋದ, ದೇವರಾಜನಂತೆ. ಆಗ ಆತನ ಅಮಾತ್ಯರೂ, ಪುರೋಹಿತರೂ, ಪ್ರಜೆಗಳು ಬಂದರು. ಎಲ್ಲರಿಂದ ಪೂಜಿತನಾಗಿ, ತನ್ನ ಪಟ್ಟಣಕ್ಕೆ ಹೋಗಿ ದಿನದ ಆಹ್ನೀಕಗಳನ್ನು ಮುಗಿಸಿ, ಭೋಜನ ಮಾಡಿ ಪತ್ನಿಯೊಡನೆ ರಾತ್ರಿ ಕಳೆದನು. ದಂಪತಿಗಳು ಋಷಿಗಳ ವರಬಲದಿಂದಾಗಿ ನವಯೌವನ ಸಂಪನ್ನರಾಗಿಯೂ, ಮುಪ್ಪಿಲ್ಲದ ದೇವತೆಗಳಂತೆ ಕಾಂತಿಯುಕ್ತರಾಗಿ ಆ ರಾತ್ರಿ ಕಳೆದರು. ಋಷಿಗಳೂ ಸಹ ತಾವು

ಬಂದ ವನವನ್ನು ತಮ್ಮ ಜ್ಞಾನಶಕ್ತಿಯಿಂದ(ತಪಃಶಕ್ತಿ) ಬಹುರತ್ನಭೂಷಿತವನ್ನಾಗಿ ಮಾಡಿದರು. (ಇಂದ್ರವನಕ್ಕಿಂತಲೂ, ಇಂದ್ರನನ್ನೂ ಮೀರುವಂತಹ ಹೆಚ್ಚು ಶೋಭಾಯಮಾನವಾಗಿ ಅಲಂಕೃತವಾಗಿತ್ತು).

ನಂತರ ಬೆಳಿಗ್ಗೆ ರಾಜನು ತನ್ನ ಆಹ್ನೀಕವನ್ನೆಲ್ಲ ಮುಗಿಸಿಕೊಂಡ ಪತ್ನಿಯೊಡನೆ ಋಷಿಗಳು ಇದ್ದ ವನಕ್ಕೆ ತೆರಳಿದನು. ಆ ವನದ ವರ್ಣನೆಯನ್ನು ವ್ಯಾಸರು ಚ್ಯವನರ ತಪೋವೈಭವವೆಂದು ಬಣ್ಣಿಸಿದ್ದಾರೆ. ಅಲ್ಲಿ ರಾಜನು ಕಂಡ ಅದ್ಭುತಗಳು ಒಂದಲ್ಲ, ಎರಡಲ್ಲ, ಅದೊಂದು ಗಂಧರ್ವ ನಗರದಂತೆ ಕಂಡಿತು ರಾಜನಿಗೆ. ಅಲ್ಲಿ ಕಂಡ ಇತರ ವೈಭವಗಳಲ್ಲಿ ಕೆಲವು ಹೀಗಿವೆ.

೧. ಸುವರ್ಣಮಯವಾದ ಸಹಸ್ರಮಣಿಸ್ತಂಭಗಳಿಂದಲೂ ದಿವ್ಯವಸ್ತುಗಳಿಂದ ಕೂಡಿದ ಒಂದು ಪ್ರಾಸಾದ (ಅರಮನೆ)[೧]; ೨. ರಮ್ಯಶಿಖರಗಳಿಂದ ಕೂಡಿದ ಸಣ್ಣ ಸಣ್ಣ ಪರ್ವತಗಳು; ೩. ಪದ್ಮಸರೋವರಗಳು; ೪. ಚಿತ್ರಶಾಲೆಗಳು; ೫. ಸುವರ್ಣಮಯವಾದ ವೇದಿಕೆಗಳು; ೬. ಅರಳಿದ ಮಾವಿನಮರಗಳು, ಅಶೋಕವೃಕ್ಷಗಳು, ಚಂಪಕ, ತಿಲಕ, ಪನಸ ಮೊದಲಾದ ಹಾಗೂ ಪುಷ್ಪಭರಿತ ಕರ್ಣಿಕಾರವೃಕ್ಷಗಳು; ೭. ಸರ್ವ ಋತು ವೃಕ್ಷಗಳು; ೮. ಎತ್ತರವಾದ ಪದ್ಮವರ್ಣೋಪೇತ ಪ್ರಾಸಾದಗಳು; ೯. ಮಾತಾಡುವ ಗಿಳಿಗಳು; ೧೦. ಅನೇಕ ಭಕ್ಷ್ಯಭೋಜ್ಯಗಳು; ೧೧. ನವಿಲು, ಚಕೋರ, ಹಂಸ, ಸಾರಸ, ಚಕ್ರಸಂಪಕ್ಷಿಗಳು; ೧೨. ಕೆಲವೆಡೆ ಅಪ್ಸರೆಯ ಗುಂಪು, ಕೆಲವೆಡೆ ತಮ್ಮ ಪತ್ನಿಯರನ್ನು ಆಲಂಗಿಸಿಕೊಂಡ ಗಂಧರ್ವರನ್ನು ನೋಡಿದನು[೨]. ಮತ್ತೆ ನೋಡಿದಾಗ ಆದಾವುದೂ ಕಾಣಲೇ ಇಲ್ಲ; ೧೩. ಅದ್ಭುತಗೀತಧ್ವನಿ, ವೇದಾಧ್ಯಯನ ಧ್ವನಿ, ಹಂಸಧ್ವನಿ ಇತ್ಯಾದಿ. ಇದೆಲ್ಲ ನೋಡಿದಾಗ ರಾಜನಿಗೆ ಇದೇನು ನಿಜವಾಗಿಯೂ ಸ್ವಪ್ನವೋ, ವಾಸ್ತವವೋ ಅಥವಾ ಭ್ರಮೆಯೋ ಎಂಬ ಭಾವನೆಗಳು ಬಂದವು[೩]. ತಾನು ಸಶರೀರನಾಗಿ ಪರಗತಿ (ಮೋಕ್ಷ) ಹೊಂದಿರುವೆನೋ, ಪವಿತ್ರವಾದ ಉತ್ತರಖಂಡಕ್ಕೆ ಬಂದಿದ್ದೇನೋ ಅಥವಾ ಇಂದ್ರನ ಅಮರಾವತಿಯಲ್ಲಿದ್ದೇನೋ ಎಂದು ರಾಜನಿಗೆ ಅನಿಸಿತಂತೆ.

---

೧ ತತೋ ದದರ್ಶ ನೃಪತಿಃ ಪ್ರಾಸಾದಂ ಸರ್ವಕಾಂಚನಮ್ ।
ಭಕ್ಷ್ಯಭೋಜ್ಯಮನಂತಂ ಚ ................................ ॥

೨ ಕ್ವಚಿದಪ್ಸರಸಾಂ ಸಂಘಾನ್ ಗಂಧರ್ವಾಣಾಂ ಚ ಪಾರ್ಥಿವ ।
ಕಾಂತಾಭಿರಪ್ಸರಾಂಸ್ತತ್ರ ಪರಿಷ್ವಕ್ತಾನ್ ದದರ್ಶ ಹ ॥

೩ ನ ದದರ್ಶ ಚ ತಾನ್ ಭೂಯೋ ದದರ್ಶ ಚ ಪುನರ್ನೃಪಃ ।
ತಂ ದೃಷ್ಟ್ವಾತ್ಯದ್ಭುತಂ ರಾಜಾ ಮನಸಾಚಿಂತಯತ್ತದಾ ॥
ಸ್ವಪ್ನೋಽಯಂ ಚಿತ್ತವಿಭ್ರಂಶ ಉತಾಹೋ ಸತ್ಯಮಿತ್ಯುತ ।
ಅಹೋ ಸಹ ಶರೀರೇಣ ಪ್ರಾಪ್ತೋಽಸ್ಮಿ ಪರಮಾಂ ಗತಿಮ್ ।
ಉತ್ತರಾನ್ ವಾ ಕುರೂನ್ ಪುಣ್ಯಾನಥ ವಾಪ್ಯಮರಾವತೀಮ್ ॥

ಇಷ್ಟೆಲ್ಲ ಆಶ್ಚರ್ಯಗಳನ್ನು ನೋಡುತ್ತಿದ್ದಂತೆ ಚ್ಯವನರನ್ನು ಮಣಿಸ್ತಂಭಗಳಿಂದ ನಿರ್ಮಿತವಾದ, ಸುವರ್ಣಮಯವಾದ ಮೇಲ್ಮಹಡಿಯಲ್ಲಿ ದಿವ್ಯವಾದ ಶಯನದಲ್ಲಿ ಮಲಗಿರುವದನ್ನು ನೋಡಿದನು[೧]. ವೇಗವಾಗಿ ಅವರನ್ನು ನೋಡಲು ಹೋಗುತ್ತಿದ್ದರೆ, ಅವರು ಅಲ್ಲಿಂದ ಮರೆಯಾದರು. ನಂತರ ಮತ್ತೊಂದು ವನದಲ್ಲಿ ಜಪ ಮಾಡುವುದನ್ನು (ಚ್ಯವನರು) ರಾಜ ನೋಡಿದನು. ಹೀಗೆ ಋಷಿಗಳು ಯೋಗಬಲದಿಂದ ರಾಜನನ್ನು ಮೋಹಗೊಳಿಸಿದರು. ಮಾರನೆಯ ಕ್ಷಣದಲ್ಲಿ ಅಪ್ಸರೆಯರು, ಗಂಧರ್ವರು, ವೃಕ್ಷಗಳೆಲ್ಲ ಅಂತರ್ಧಾನವಾದವು. ಮೊದಲಿನಂತೆ ಗಂಗಾತೀರವು ಕುಲವಲ್ಮೀಕ(ಹುತ್ತ)ಗಳಿಂದ ಮೌನದ ತಾಣವಾಗಿತ್ತು[೨].

ನಂತರ ರಾಜನು ಪತ್ನಿಗೆ ಚ್ಯವನರ ತಪೋವೈಭವವನ್ನು ಕೊಂಡಾಡಿ ಪ್ರಶಂಸಿಸಿದ. ಮೂರು ಲೋಕದ ಆಧಿಪತ್ಯಕ್ಕಿಂತ ತಪಸ್ಸೇ ಶ್ರೇಷ್ಠ ಚೆನ್ನಾಗಿ ಮಾಡಿದ ತಪಸ್ಸಿನಿಂದ ಏನೆಲ್ಲ ಸಾಧಿಸಬಹುದು ನೋಡು ರಾಣಿ! ಋಷಿಗಳು ಇಂತಹ ತಪಸ್ಸಿನಿಂದ ಆಟವಾಡುತ್ತಿದ್ದಾರೆ[೩]. ಚ್ಯವನ ಬ್ರಹ್ಮರ್ಷಿಗಳ ಪ್ರಭಾವ ಎಂತಹುದಲ್ಲ! ಇವರು ಬಯಸಿದ್ದಲ್ಲಿ ಬೇರೇ ಲೋಕಗಳನ್ನೇ ತಪಸ್ಸಿನ ಬಲದಿಂದ ಸೃಷ್ಟಿಸಿಯಾರು! ಚ್ಯವನರ ಹೊರತಾಗಿ ಬೇರೆ ಇನ್ನಾರು ತಾನೇ ಇಂತಹ ಕಾರ್ಯ ಮಾಡಬಲ್ಲರು. ಮನುಷ್ಯ ರಾಜ್ಯಂಸಪತ್ತನ್ನು ಪಡೆಯುವುದು ಸುಲಭ. ಆದರೆ ಬ್ರಾಹ್ಮಣ್ಯ ಪಡೆಯುವುದು ದುರ್ಲಭ! ಅದರ ಪ್ರಭಾವದಿಂದಲ್ಲವೇ ನಾವು ರಥ ಎಳೆಯಲು ಅಶ್ವಗಳಂತೆ ಕಟ್ಟಲ್ಪಟ್ಟಿದ್ದೆವು?[೪]

ಹೀಗೆ ಮಾತನಾಡುತ್ತಾ ಬಂದ ದಂಪತಿಗಳನ್ನು ಚ್ಯವನರು ಇಲ್ಲಿಗೆ ಬಾ ಎಂದು ಕರೆದರು. ರಾಜನು ಅಲ್ಲಿಗೆ ಹೋಗಿ ಶಿರಸಾ ನಮಿಸಿದ. ಋಷಿಗಳು ಆಶೀರ್ವದಿಸಿ ಕುಳ್ಳಿರಿಸಿದರು. ನಂತರ ಮಧುರ ಮಾತುಗಳನ್ನಾಡಿದರು, ರಾಜದಂಪತಿಗಳಿಗೆ.

---

೧ ಏವಂ ಸಂಚಿಂತಯನ್ ಏವಂ ದದರ್ಶ ಮುನಿಪುಂಗವಮ್ ।
ತಸ್ಮಿನ್ ವಿಮಾನೇ ಸೌವರ್ಣೇ ಮಣಿಸ್ತಂಭಸಮಾಕುಲೇ ।
ಮಹಾರ್ಹೇ ಶಯನೇ ದಿವ್ಯೇ ಶಯಾನಂ ಭೃಗುನಂದನಮ್ ॥
ಕ್ಷಣೇನ ತದ್ವನಂ ಚೈವ ತೇ ಚೈವಾಪ್ಸರಸಾಂ ಗಣಾಃ ॥

೨ ಗಂಧರ್ವಾಃ ಪಾದಪಾಶ್ಚೈವ ಸರ್ವಮಂತರಧೀಯತ ।
ತತಃ ಸ ರಾಜಾ ಕುಶಿಕಃ ಸಭಾರ್ಯಸ್ತೇನ ಕರ್ಮಣಾ ॥
ವಿಸ್ಮಯಂ ಪರಮಂ ಪ್ರಾಪ್ತಸ್ತದ್‌ದೃಷ್ಟ್ವಾ ಮಹದದ್ಭುತಮ್ ।

೩ ತತಃ ಪ್ರೋವಾಚ ಕುಶಿಕೋ ಭಾರ್ಯಾಂ................।
ಪ್ರಸಾದಾತ್ ಭೃಗುಮುಖ್ಯಸ್ಯ ಕಿಮನ್ಯತ್ರ ತಪೋಬಲಾತ್ ।
ತಪಸಾ ತದವಾಪ್ಯಂ ಹಿ ಯನ್ನ ಶಕ್ಯಂ ಮನೋರಥೈಃ ।
ತ್ರೈಲೋಕ್ಯರಾಜ್ಯಾದಪಿ ಹಿ... ತಪ ಏವ ಹಿ ವಿಶಿಷ್ಯತೇ ।
ತಪಸಾ ಹಿ ಸುತಪ್ತೇನ ಕ್ರೀಡತ್ಯೇಷ ತಪೋಧನಃ ॥

೪ ಇಚ್ಛನ್ನೇವ ತಪೋವೀರ್ಯಾತ್ ಅನ್ಯಾಲ್ಲೋಕಾನ್ ಸೃಜೇದಪಿ ।
ಬ್ರಾಹ್ಮಣ್ಯಂ ದುರ್ಲಭಂ ಲೋಕೇ ರಾಜ್ಯಂ ಹಿ ಸುಲಭಂ ನರೈಃ ॥ – ೮೪/೧೭-೨೯

'ನೀನು ಪಂಚೇಂದ್ರಿಯ, ಅವುಗಳ ವಿಷಯಗಳನ್ನುಗೆದ್ದಿದ್ದೀಯಾ. ಮನಸ್ಸನ್ನುಗೆದ್ದಿದ್ದೀಯಾ, ಆದ್ದರಿಂದಲೇ ಕಷ್ಟಕೋಟಲೆಗಳಿಂದ ಪಾರಾಗಿದ್ದೀಯಾ(ಸಂಕಟಗಳಿಂದ). ನನ್ನನ್ನು ಚೆನ್ನಾಗಿ ಸೇವಿಸಿದೆ. ನನಗೆ ಹೋಗಲು ಅನುಮತಿ ನೀಡು. ನಿನ್ನ ಮೇಲೆ ಪ್ರಸನ್ನನಾಗಿದ್ದೇನೆ. ವರ ಕೇಳು ಕೊಡುವೆ'[೧] ಎಂದರು. ಆಗ ರಾಜನು 'ನಾನು ತಮ್ಮ ಸನ್ನಿಧಿಯಲ್ಲಿ ನಾನು ಅಗ್ನಿಮಧ್ಯದಲ್ಲಿ ಇದ್ದಂತೆ, ಇದ್ದೆ. ನಾನು ಸುಡದೇ ಇದ್ದುದೇ ದೊಡ್ಡವಿಷಯ. ನೀವು ನನ್ನ ಸೇವೆಯಿಂದ ಪ್ರಸನ್ನರಾಗಿರುವುದೇ ಮಹಾ ವರ. ನಮ್ಮ ವಂಶ ಪವಿತ್ರವಾಯಿತು. ಅದೇ ನನ್ನ ಜೀವನದ ಫಲ. ಈ ರಾಜ್ಯ, ನನ್ನ ತಪೋರೂಪಫಲ – ಇದೆಲ್ಲ ತಮ್ಮ ಅನುಗ್ರಹದಿಂದ. ನನ್ನ ಮೇಲೆ ತಾವು ಪ್ರೀತರಾಗಿದ್ದಲ್ಲಿ ನನಗಿರುವ ಸಂಶಯವನ್ನು ಪರಿಹರಿಸಿರಿ.'[೨]

ರಾಜನ ಮಾತಿಗೆ ಸಂತೋಷದಿಂದ ಚ್ಯವನರು 'ನಾನು ನಿನಗೆ ಒಂದು ವರ ಕೊಡುತ್ತೇನೆ. ಹಾಗೂ ನಿನ್ನ ಸಂಶಯವನ್ನೂ ಪರಿಹರಿಸುತ್ತೇನೆ. ಆ ಸಂಶಯವೇನೆಂದು ಹೇಳು' ಎಂದರು.

ರಾಜನು ತುಂಬಾ ವಿನಯದಿಂದ 'ನನ್ನಲ್ಲಿ ತಾವು ಪ್ರಸನ್ನರಾಗಿದ್ದರೆ – ನನ್ನ ಮನೆಯಲ್ಲಿ ವಾಸಿಸಲು ಕಾರಣವೇನು? ಹೇಳಿರಿ? ಒಂದು ಮಗ್ಗುಲಾಗಿ ೨೧ ದಿವಸಗಳವರೆಗೆ ಮಲಗಿ, ನಂತರ ಏನೂ ಮಾತಾಡದೇ ಎದ್ದು ಮನೆಯಿಂದ ಹೊರಹೋಗಿ(ನಾನು ತಮ್ಮ ಹಿಂದೆ ಬಂದಾಗಲೂ ನನ್ನನ್ನು ಮಾತನಾಡಿಸದೆ), ಇದ್ದಕ್ಕಿದ್ದಂತೆ ಅಂತರ್ಧಾನರಾದಿರಿ, ಮತ್ತೆ ಕಂಡಿರಿ, ಪುನಃ ೨೧ ದಿನ ಇನ್ನೊಂದು ಮಗ್ಗುಲಾಗಿ, ಮಲಗಿ, ಎದ್ದು ತೈಲಾಭ್ಯಂಜನ ಮಾಡಿಕೊಂಡು ಹೊರಗೆ ಹೋದುದು, ಭೋಜನವನ್ನು ಬಯಸಿ, ತರಿಸಿ, ಅದೆಲ್ಲವನ್ನೂ ಶಯನ (ಹಾಸಿಗೆ, ಮಂಚ)ಗಳನ್ನು ಸುಟ್ಟುಹಾಕಿದ್ದು ಇದ್ದಕ್ಕಿದ್ದಂತೆ ರಥದಲ್ಲಿ ಪಯಣ, ಧನ, ಧಾನ್ಯ, ದಾನ, ವನದರ್ಶನ, ಸ್ವರ್ಗದಂತಹ ಪ್ರಾಸಾದಗಳ ದರ್ಶನ, ಮತ್ತೆ ಅಂತರ್ಧಾನ ಇವೆಲ್ಲವುಗಳ ಹಿನ್ನೆಲೆ ನನಗೆ ತಿಳಿಯಲಿಲ್ಲ. ಇವುಗಳಿಗೆ ಕಾರಣಗಳೇನು? ಅವನ್ನು ತಿಳಿಯ ಬಯಸುತ್ತೇನೆ'.

---

೧ ಸಮ್ಯಗಾರಾಧಿತಃ ಪುತ್ರ ತ್ವಯಾಽಹಂ ವದತಾಂ ವರ।
ನ ಹಿ ತೇ ವೃಜಿನಂ ಕಿಂಚಿತ್ ಸುಸೂಕ್ಷ್ಮಮಪಿ ವಿದ್ಯತೇ॥
ಪ್ರೀತೋಽಸ್ಮಿ ತವ ರಾಜೇಂದ್ರ ವರಶ್ಚ ಪ್ರತಿಗೃಹ್ಯತಾಮ್॥

೨ ಅಗ್ನಿಮಧ್ಯಗತೇನೇದಂ ಭಗವತ್ಸನ್ನಿಧೌ ಮಯಾ।
ವರ್ತಿತಂ ಭೃಗುಶಾರ್ದೂಲ ಯನ್ನ ದಗ್ಧೋಽಸ್ಮಿ ತದ್ಬಹು॥
ಏಷ ಏವ ವರೋ ಮುಖ್ಯಃ ಪ್ರಾಪ್ತೋ ಮೇ ಭೃಗುನಂದನ।
ಯತ್ಪ್ರೀತೋಽಸಿ ಸಮಾಚಾರಾತ್ ಕುಲಂ ಪೂತಂ ಮಮಾನಘ॥
ಏಷ ಮೇಽನುಗ್ರಹೋ ವಿಪ್ರ ಜೀವಿತೇ ಚ ಪ್ರಯೋಜನಮ್।
ಏತದ್ರಾಜ್ಯ ಫಲಂ ಚೈವ ತಪಶ್ಚೈತತ್ ಪರಂ ಮಮ।
ಯದಿ ತು ಪ್ರೀತಿಮಾನ್ ವಿಪ್ರ ಮಯಿ ತ್ವಂ ಭೃಗುನಂದನ॥
ಅಸ್ತಿ ಮೇ ಸಂಶಯಃ ಕಶ್ಚಿತ್ತನ್ಮೇ ವ್ಯಾಖ್ಯಾತುಮರ್ಹಸಿ॥ – ೮೪/೩೫–೪೦

೩. ಕುಶಿಕ ಉವಾಚ –

ನಾನು ಇವುಗಳ ಬಗ್ಗೆ ತುಂಬಾ ಚಿಂತಿಸಿದ್ದೇನೆ. ನನಗೆ ಇವುಗಳಿಗೆ ಕಾರಣವಾಗಲಿ, ಇದೆಲ್ಲದರ ಹಿಂದಿನ ತಮ್ಮ ಉದ್ದೇಶವೇನು, ನಾನು ಮೋಹಿತನಾಗಿದ್ದೇನೆ. ನನಗೆ ಈ ಬಗ್ಗೆ ನಿರ್ಣಯ ಮಾಡಲು ಹಗಲೂ, ರಾತ್ರಿ ಯೋಚಿಸಿದರೂ ತಿಳಿಯುತ್ತಿಲ್ಲ. ದಯವಿಟ್ಟು ಇವುಗಳ ಹಿನ್ನೆಲೆಯ ಪೂರ್ಣ ಸತ್ಯವೇನು? ದಯವಿಟ್ಟು ತಿಳಿಸಿರಿ[೧].

ರಾಜನ ಈ ಪ್ರಶ್ನೆಗಳಿಗೆ ಚ್ಯವನರು ಉತ್ತರಿಸಿದರು (ಪೂರ್ಣವಾಗಿ) 'ರಾಜನ್! ಹಿಂದೆ ನಾನು ಬ್ರಹ್ಮದೇವರು ದೇವಸಭೆಯಲ್ಲಿ ಮಾತನಾಡುವಾಗ ಕೇಳಿದುದನ್ನು ಹೇಳುತ್ತೇನೆ, ಕೇಳು.'[೨]

'ಮುಂದೆ ಬ್ರಾಹ್ಮಣ, ಕ್ಷತ್ರಿಯರ ವಿರೋಧದಿಂದ ಕುಲಸಾಂಕರ್ಯವಾಗುತ್ತದೆ. ನಿನಗೆ (ಕುಶಿಕನಿಗೆ) ತೇಜೋವೀರ್ಯಗಳಿಂದ ಕೂಡಿದ ಮೊಮ್ಮಗನು ಜನಿಸುತ್ತಾನೆ(ನಿನ್ನ ವಂಶದ ಕನ್ಯೆಯೊಬ್ಬಳಿಂದ ನನ್ನ ವಂಶದಲ್ಲಿ ಕ್ಷಾತ್ರತೇಜಸ್ಸಿನ ಆವಿರ್ಭಾವವಾಗುತ್ತೆ)[೩]. ನಿನ್ನ ಮೊಮ್ಮಗನು ಬ್ರಾಹ್ಮಣ ತೇಜಸ್ಸಿನಿಂದಲೂ, ಕ್ಷತ್ರಿಯವೀರ್ಯದಿಂದಲೂ ಯುಕ್ತನಾಗುತ್ತಾನೆ.

ಈ ವಿಷಯ ತಿಳಿದ ನನಗೆ ನನ್ನ ವಂಶದಲ್ಲಿ ಕ್ಷತ್ರಿಯ ತೇಜಸ್ಸು ಬರದಿರಲೆಂದು. ಅದು ಬರುವ ಮುನ್ನವೇ ಕುಶಿಕವಂಶವನ್ನೇ ನಾಶ ಮಾಡುವ ಉದ್ದೇಶದಿಂದ (ಸುಡುವ) ನಿನ್ನಲ್ಲಿಗೆ ಬಂದು 'ನಾನು ಮಾಡಬಯಸಿದ ವ್ರತಚರ್ಯದಲ್ಲಿ ನೀವು(ದಂಪತಿಗಳು) ಪರಿಚರ್ಯ(ಸೇವೆ) ಮಾಡಲು ನಿನ್ನ ಒಪ್ಪಿಗೆ ಕೇಳಿದೆ. ನೀನು ಒಪ್ಪಿ ಮಾಡಿದ[೪], ಪೂರ್ಣ ಮನಸ್ಸಿನಿಂದ, ನನಗೆ ತೃಪ್ತಿಯಾಗುವ ರೀತಿಯಲ್ಲಿ,

---

ಯದಿ ಪ್ರೀತೋಽಸಿ ಭಗವನ್ ತತೋ ಮೇ ವದ ಭಾರ್ಗವ।
ಕಾರಣಂ ಶ್ರೋತುಮಿಚ್ಛಾಮಿ ಮದ್ಗೃಹೇ ವಾಸಕಾರಿಣಮ್ ॥
ಶಯನಂ ಚೈಕಪಾರ್ಶ್ವೇನ ದಿವಸಾನೇಕವಿಂಶತಿಮ್।
ಅಕಿಂಚಿದುಕ್ತ್ವಾ ಗಮನಂ ಬಹಿಶ್ಚ ಮುನಿಪುಂಗವ॥
ಅಂತರ್ಧಾನಮಕಸ್ಮಾಚ್ಚ ಪುನರೇವ ಚ ದರ್ಶನಮ್ ॥
೧ ... ಅತೀವ ಹ್ಯತ್ರ ಮುಹ್ಯಾಮಿ ಚಿಂತಯಾನೋ ದಿವಾ ನಿಶಮ್।
... ಏತದಿಚ್ಛಾಮಿ ಕಾರ್ತ್ಸ್ನ್ಯೇನ ಸತ್ಯಂ ಶ್ರೋತುಂ ತಪೋಧನ॥ – ೮೫/೧-೮
೨ ಚ್ಯವನ ಉವಾಚ –
ಪಿತಾಮಹಸ್ಯ ವದತಃ ಪುರಾ ದೇವಸಮಾಗಮೇ।
ಶ್ರುತವಾನಸ್ಮಿ ಯದ್ರಾಜನ್ ತನ್ಮೇ ನಿಗದತಃ ಶೃಣು॥
೩ ಬ್ರಹ್ಮಕ್ಷತ್ರವಿರೋಧೇನ ಭವಿತಾ ಕುಲಸಂಕರಃ।
ಪೌತ್ರಸ್ತೇ ಭವಿತಾ ರಾಜನ್ ತೇಜೋವೀರ್ಯಸಮನ್ವಿತಃ॥
೪ ತತಃ ಸ್ವಕುಲರಕ್ಷಾರ್ಥಮಹಂ ತ್ವಾ ಸಮುಪಾಗಮಮ್।
ಚಿಕೀರ್ಷನ್ ಕುಶಿಕೋಚ್ಛೇದಂ ಸಂದಿಧಕ್ಷುಃ ಕುಲಂ ತವ॥
ನ ಚ ತೇ ದುಷ್ಕೃತಂ ಕಿಂಚಿದಹಮಾಸಾದಯಂ ಗೃಹೇ।
ತೇನ ಜೀವಸಿ ರಾಜರ್ಷೇ ನ ಭವೇಥಾಸ್ತತೋಽನ್ಯಥಾ॥ – ೮೫/೯-೧೪

ರಾಜರ್ಷಿಯೇ! ನಿನ್ನ ಪರಿಚರ್ಯೆಯಲ್ಲಿ ನಾನು ಒಂದು ಹುಳುಕನ್ನು (ದೋಷವನ್ನು) ಕಾಣಲಿಲ್ಲ. ಆದ್ದರಿಂದ ಬದುಕಿದ್ದೀಯಾ. ಇದೇ ಉದ್ದೇಶದಿಂದ ೨೧ ದಿನ ಮಲಗಿದೆ. ಎಬ್ಬಿಸಿದರೆ ಶಾಪ ಕೊಡುವ ಉದ್ದೇಶವಿತ್ತು. ನನಗೆ ಕೋಪ ಬರಲಿಲ್ಲ. ಕಾರಣ ನೀನು ಎಬ್ಬಿಸದೆ ಹಗಲು-ರಾತ್ರಿ ಸೇವೆ ಮಾಡಿದೆ. ಆಗಲೇ ನನಗೆ ನಿಮ್ಮ ಬಗ್ಗೆ ಸಂತೋಷವಾಯಿತು. ನಾನು ಎದ್ದು ಹೋದಾಗಲಾದರೂ ನೀನು 'ಎಲ್ಲಿಗೆ ಹೋಗುತ್ತಿದ್ದೀರಿ' ಎಂದೂ ಕೇಳಲಿಲ್ಲ. ಆಗಲೂ ನಾನು ಶಾಪ ಕೊಡಬೇಕೆಂದುಕೊಂಡಿದ್ದು ನಡೆಯಲಿಲ್ಲ. ಹಸಿವೆ, ಬಳಲಿಕೆಗಳಿಂದಾದರೂ ನನ್ನ ಮೇಲೆ ಅಸೂಯೆ ಪಡಬಹುದೆಂಬ ನನ್ನ ಎಣಿಕೆ ಸುಳ್ಳಾಯಿತು. ದಂಪತಿಗಳಿಗೆ ನನ್ನ ಮೇಲೆ ಕಿಂಚಿತ್ತಾದರೂ ಕೋಪ ಸುಳಿಯಲಿಲ್ಲ. ಆಗಲೇ ಮತ್ತೆ ನನಗೆ ನಿಮ್ಮ ಬಗ್ಗೆ ಪ್ರಸನ್ನತೆ ಉಂಟಾಯಿತು. ತರಿಸಿದ ಭೋಜನವನ್ನು ಅಗ್ನಿಗೆ ಹಾಕಿದರೂ, ನೀನು ಕೋಪಗೊಳ್ಳದೇ ಸಹಿಸಿದೆ. ರಥವನ್ನು ನೀವು ಎಳೆದಿರಿ (ಕುದುರೆಗಳಂತೆ), ನಾನು ಬೇಕಾದಂತೆ ನಿನ್ನ ಐಶ್ವರ್ಯ ದಾನ ಮಾಡಿದೆ, ಆಗಲೂ ನಿನಗೆ ಕೋಪ ಬರಲಿಲ್ಲ[೧].

ಆದರಿಂದ ನನಗೆ ಉಂಟಾದ ಪ್ರಸನ್ನತೆಯಿಂದಾಗಿ ನಿಮಗೆ ಸ್ವರ್ಗದರ್ಶನ ಮಾಡಿಸಿದೆ. ನೀನು ನೋಡಿದ್ದೆಲ್ಲ ಸ್ವರ್ಗದ ಒಂದು ದಿವ್ಯದರ್ಶನ. ಒಂದು ಮುಹೂರ್ತಕಾಲ ಸಶರೀರನಾಗಿ ಸ್ವರ್ಗಸುಖವನ್ನು ದಂಪತಿಗಳು ಅನುಭವಿಸಿದಿರಿ. ಇದೆಲ್ಲ ತಪಸ್ಸಿನ, ಧರ್ಮದ ಸಾಮರ್ಥ್ಯ ತೋರಿಸಲು ಮಾಡಿದೆ. ನಂತರ ಅಂತರ್ಧಾನಾದೆ. ನಿನ್ನ ಆಸೆ ನನಗೆ ತಿಳಿದಿದೆ. ನೀನು ರಾಜ್ಯವನ್ನಾಗಲಿ, ಇಂದ್ರಪದವಿಯನ್ನಾಗಲಿ ಬಯಸದೇ, ಅದೆಲ್ಲವನ್ನೂ ತಿರಸ್ಕರಿಸಿ ಬ್ರಾಹ್ಮಣ್ಯವನ್ನು ತಪಸ್ಸನ್ನು ಬಯಸುತ್ತೀಯಾ. ನೀನು ತಿಳಿದಂತೆ ಬ್ರಾಹ್ಮಣ್ಯ ದುರ್ಲಭವಾದುದು. ಬ್ರಾಹ್ಮಣ್ಯನಾದ ಮೇಲೆ ಋಷಿಯಾಗುವುದು, ಅದರ ಮೇಲೆ ತಪಸ್ವಿಯಾಗುವುದು ಮತ್ತೂ ದುರ್ಲಭ[೨].

---

೧ ಯದಾ ತ್ವಯಾ ಸ್ವಭಾರ್ಯೇಣ ಸಂಸುಪ್ತೋ ನ ಪ್ರಬೋಧಿತಃ।
ಅಹಂ ತದೈವ ತೇ ಪ್ರೀತೋ ಮನಸಾ ರಾಜಸತ್ತಮ॥
ನ ಚ ತೇಽಭೂತ್ ಸುಸೂಕ್ಷ್ಮೋಽಪಿ ಮನ್ಯುರ್ಮನಸಿ ಪಾರ್ಥಿವ।
ಸ ಭಾರ್ಯಸ್ಯ ನರಶ್ರೇಷ್ಠ ತೇನ ತೇ ಪ್ರೀತಿಮಾನಹಮ್॥
ತತೋಽಹಂ ರಥಮಾರುಹ್ಯ ತ್ವಾಮವೋಽಚಂ ನರಾಧಿಪ।
ಸಭಾರ್ಯೋ ಮಾಂ ವಹಸ್ವೇತಿ ತಚ್ಚತ್ವಂ ಕೃತವಾಂಸ್ತಥಾ॥

೨ ಅವಿಶಂಕೋ ನರಪತೇ ಪ್ರೀತೋಽಹಂ ಚಾಪಿ ತೇನ ತೇ।
ಧನೋತ್ಸರ್ಗೇಽಪಿ ಚ ಕೃತೇ ನ ತ್ವಾಂ ಕ್ರೋಧಃ ಪ್ರಧರ್ಷಯತ್॥
ತತಃ ಪ್ರೀತೇನ ತೇ ರಾಜನ್ .............................।
ಪ್ರೀತ್ಯರ್ಥಂ ತವ ಚೈತನ್ಮೇ ಸ್ವರ್ಗಸಂದರ್ಶನಂ ಕೃತಮ್।
ನಿದರ್ಶನಾರ್ಥಂ ತಪಸೋ ಧರ್ಮಸ್ಯ ಚ ನರಾಧಿಪ।
ತಪೋ ಬ್ರಹ್ಮಬಲಂ ಜ್ಞಾತುಂ ತವಾಂತರ್ಹಿತಮತ್ರ ತತ್।

ಆದರೂ ನಿನ್ನ ಆಸೆ ಈಡೇರುವುದು. ಕುಶಿಕನಾದ ನಿನ್ನಿಂದ ಕೌಶಿಕನಾದ ದ್ವಿಜನು ಜನಿಸಿ, ಅವನಿಂದ ಜನಿಸುವ ಪುರುಷನು ಬ್ರಾಹ್ಮಣ್ಯವನ್ನು ಹೊಂದುವನು. ಭೃಗುಗಳ ಅನುಗ್ರಹದಿಂದ ನಿನ್ನ ವಂಶ. ಬ್ರಾಹ್ಮಣ್ಯ ಪಡೆಯುತ್ತದೆ. ನಿನ್ನ ಮೊಮ್ಮಗನು ತಪಸ್ವಿಯೂ, ಅಗ್ನಿಸಮ ತೇಜಸ್ವಿಯೂ ಆಗುವನು. ಅವನು ದೇವ, ಮನುಷ್ಯ ಹಾಗೂ ಮೂರು ಲೋಕಗಳಿಗೂ ಭಯವನ್ನುಂಟುಮಾಡುವನು (ಬ್ರಾಹ್ಮಣ್ಯದ ಪ್ರಭಾವ ತೋರಿಸುತ್ತಾನೆ).

ರಾಜರ್ಷಿಯೇ! ನಿನ್ನ ಮನಸ್ಸಿನಲ್ಲಿರುವ ವರ ಕೇಳು. ನಾನಿನ್ನು ತೀರ್ಥಯಾತ್ರೆಗೆ ಹೊರಡುತ್ತೇನೆ. ಕಾಲ ಮೀರುತ್ತಿದೆ.' ಆಗ ರಾಜನು 'ನೀವು ಪ್ರಸನ್ನರಾಗಿರುವುದೇ ನನಗೆ ನೀಡಿದ ವರ. ನೀವು ಹೇಳಿದಂತೆ ಆಗಲಿ ನನ್ನ ಪುತ್ರನಿಗೆ ಅಂತಹ ತಪಸ್ಸು ಇರಲಿ. ನನ್ನ ಕುಲವು ಬ್ರಾಹ್ಮಣ್ಯ ಪಡೆಯಲಿ. ಇದೇ ನಾನು ಬೇಡುವ ವರ, ನನ್ನ ಕುಲವು ಹೇಗೆ ಬ್ರಾಹ್ಮಣ್ಯ ಹೊಂದುತ್ತದೆ! ನನಗೆ ಪೌತ್ರನಾಗಿ ಜನಿಸುವ ಬಂಧು ಯಾರು? ಅವನು ಯಾರಿಗೆ ಸಮ್ಮತನಾಗುತ್ತಾನೆ? ತಿಳಿಸಿರಿ' ಎಂದ.

'ನಾನು ನಿಮ್ಮ ಮನೆಗೆ ಬಂದುದರ ಉದ್ದೇಶ ಹೇಳಿಯಾಗಿದೆ. ಉಳಿದ ವಿಷಯ ಹೀಗಿದೆ. ಕ್ಷತ್ರಿಯರಿಗೆ ವಾಸ್ತವವಾಗಿ ಮೊದಲಿನಿಂದಲೂ ಭೃಗುಗಳೇ ಪುರೋಹಿತರು. ಮುಂದೆ ದೈವಸಂಕಲ್ಪಾನುಸಾರ ಅವರಿಗೆ ಪರಸ್ಪರ ವಿರೋಧವುಂಟಾಗಿ ಕ್ಷತ್ರಿಯರು ಭೃಗುವಂಶವನ್ನು, ಗರ್ಭಸ್ಥ ಶಿಶುವನ್ನು ಕೊಲ್ಲುವರು. ನಂತರ ನಮ್ಮ ಕುಲದಲ್ಲಿ ಗೋತ್ರವೃದ್ಧಿ ಮಾಡುವ ಮಹಾತೇಜಸ್ವಿಯಾದ ಔರ್ವನೆಂಬುವವನು ಜನಿಸುತ್ತಾನೆ. ಕ್ಷತ್ರಿಯರ ಮೇಲಿನ ಕೋಪದಿಂದ ಅವರು ಮೂರೂ ಲೋಕದ ನಾಶಕ್ಕಾಗಿ ಕೋಪಾಗ್ನಿಯನ್ನು ಸೃಷ್ಟಿಸಿದಾಗ ಅದು ಭೂಮಿಯನ್ನು ಸುಡುತ್ತದೆ. ಕೆಲವರು ಕಾಲಾನಂತರ ಆ ಅಗ್ನಿಯನ್ನು ಸಮುದ್ರದಲ್ಲಿರುವ ವಡಾವಾಮುಖದಲ್ಲಿ ವಿಸರ್ಜಿಸಿ ತಾನೇ ಅದನ್ನು ಶಮನಗೊಳಿಸುತ್ತಾನೆ. ಅವನ ಮಗ ಋಚೀಕನನ್ನು ಧನುರ್ವೇದವು ಅವನ ಬಳಿಗೆ ಬರುತ್ತದೆ (ಆತನಿಗೆ ಸಾಕ್ಷಾತ್ಕಾರವಾಗುತ್ತದೆ). ಅದನ್ನು ಆತನು ತನ್ನ ಮಗನಾದ ಜಮದಗ್ನಿಗೆ ಉಪದೇಶಿಸುತ್ತಾರೆ.

ನಿನ್ನ ಕುಲದ ಕನ್ಯೆಯನ್ನು, ನಿನ್ನ ಕುಲದ ವೃದ್ಧಿಗಾಗಿ ಋಚೀಕನು ವಿವಾಹವಾಗುತ್ತಾನೆ. ಮಹಾತೇಜಸ್ವಿಯಾದ ಅವನು ಗಾಧಿಯ ಪುತ್ರಿಯೂ, ನಿನ್ನ ಮೊಮ್ಮಗಳೂ ಆದ ಕನ್ಯೆಯನ್ನು

---

ಬ್ರಾಹ್ಮಣ್ಯಂ ಕಾಂಕ್ಷಸೇ ಹಿತ್ವಂ ತಪಶ್ಚ ಪೃಥಿವೀಪತೇ।
ಅವಮನ್ಯ ನರೇಂದ್ರತ್ವಂ ದೇವೇಂದ್ರತ್ವಂ ಚ ಪಾರ್ಥಿವ।
ಪೌತ್ರಸ್ತೇ ಭವಿತಾ ವಿಪ್ರ ತಪಸ್ವೀ ಪಾವಕದ್ಯುತಿಃ ॥..........
ಯಃ ಸ ದೇವಮನುಷ್ಯಾಣಾಂ ಭಯಮುತ್ಪಾದಯಿಷ್ಯತಿ।
ತ್ರಯಾಣಾಂ ಚೈವ ಲೋಕಾನಾಂ ಸತ್ಯಮೇತದ್ ಬ್ರವೀಮಿ ತೇ ॥
ವರಂ ಗೃಹಾಣ ರಾಜರ್ಷೇ .......................... ।
ಏಷ ಏವ ವರೋಮೇಽದ್ಯ ಯತ್ತ್ವಂ ಪ್ರೀತೋ ಮಹಾಮುನೇ ॥ - ೮೫/೧೬-೩೪

ಪತ್ನಿಯನ್ನಾಗಿ ಹೊಂದಿ ಕ್ಷತ್ರಿಯಧರ್ಮವನ್ನು ಹೊಂದಿದ ಬ್ರಾಹ್ಮಣನಾದ ಪರಶುರಾಮನನ್ನು ಪುತ್ರನನ್ನಾಗಿ ಪಡೆಯುವನು (ಜಮದಗ್ನಿಯ)

ಗಾಧಿಯ ಪುತ್ರನು ವಿಶ್ವಾಮಿತ್ರನಾಗಿ, ಕ್ಷತ್ರಿಯನಾದರೂ, ಬ್ರಾಹ್ಮಣ ಕರ್ಮ ಮಾಡುತ್ತಾ ಬೃಹಸ್ಪತಿಗೆ ಸಮನಾಗಿ ಅತ್ಯಂತ ಧಾರ್ಮಿಕನಾಗಿ ಮಹಾತಪಸ್ಸಿನಿಂದ ಕೂಡಿರುತ್ತಾನೆ. ಈ ಬ್ರಾಹ್ಮಣ ಕ್ಷತ್ರಿಯ ಪರಿವರ್ತನೆಗೆ ಅಲ್ಲಿ ಸ್ತ್ರೀಯರೇ ಕಾರಣರಾಗುತ್ತಾರೆ (ಋಚೀಕರ ಪತ್ನಿ ಮತ್ತು ಅತ್ತೆ). ಅದು ಬ್ರಹ್ಮ ಸಂಕಲ್ಪ. ಅದು ಹಾಗೆ ನಡೆಯಿತು.

ನಿನ್ನಿಂದ ಮೂರನೇ ಪುರುಷನೇ ಬ್ರಾಹ್ಮಣ್ಯ ಹೊಂದುತ್ತಾನೆ. ಹೀಗೆ ನೀನು ಭೃಗುಗಳ ಸಂಬಂಧಿಯಾಗುವೆ.

ಚ್ಯವನರ ಮಾತನ್ನು ಕೇಳಿದ ರಾಜಾ ಕುಶಿಕ ಸಂತೋಷಗೊಂಡು ಹಾಗೇ ಆಗಲಿ ಎಂದನು. ಚ್ಯವನರು ರಾಜನಿಗೆ ಮತ್ತೆ ವರ ಕೇಳಲು ಒತ್ತಾಯಿಸಲು, ರಾಜನು 'ನಮ್ಮ ಕುಲಕ್ಕೆ ಬ್ರಾಹ್ಮಣ್ಯ ಬರಲಿ, ನನಗೆ ಧರ್ಮದಲ್ಲಿ ಮನಸ್ಸು ಇರಲಿ(ಸದಾ) ಎಂದು ಬೇಡಿದನು. ಚ್ಯವನರು ಹಾಗೆಯೇ ಆಗಲಿ ಎಂದು ಮುಂದೆ ತೀರ್ಥಯಾತ್ರೆಗೆ ತೆರಳಿದರು. ಧರ್ಮರಾಜನೇ! ಇದುವೇ ಭೃಗುಗಳಿಗೂ, ಕುಶಿಕರಿಗೂ ಆದ ಸಂಬಂಧ ಎಂದರು ಭೀಷ್ಮರು. ಅಲ್ಲದೇ ವಿಶ್ವಾಮಿತ್ರರ, ಪರಶುರಾಮರ, ಉತ್ಪತ್ತಿಯೂ ಹೀಗೆ ಉಂಟಾಯಿತು ಎಂದು ಭೀಷ್ಮರು ಧರ್ಮರಾಜನಿಗೆ ವಿವರಿಸಿದರು.

## ಸಂದೇಶಗಳು-ವಿವರಣೆಗಳು

೧. ಪರಮಾತ್ಮನು ಯಾವ ವರ್ಣದಲ್ಲಿ ಅವತರಿಸುತ್ತಾನೋ ಅದಕ್ಕೆ ಅನುಗುಣವಾಗಿ ಧರ್ಮಗಳನ್ನು ಆಚರಿಸುತ್ತಾನೆ. ಆದರೂ ಪ್ರಸಂಗಕ್ಕೆ ತಕ್ಕಂತೆ ಬದಲಾವಣೆಗಳನ್ನು ಮಾಡಿಕೊಳ್ಳುತ್ತಾನೆ. ತಾನು ಬ್ರಾಹ್ಮಣನಾಗಿ ಜನಿಸಿದರೂ, ತಮ್ಮ ತಂದೆಯ ಮೇಲೆ ಆದ ಹತ್ಯಾಕಾಂಡಕ್ಕೆ ಅನುಸರಿಸಿ, ದುಷ್ಟಕ್ಷತ್ರಿಯರ ಸಂಹಾರ ಮಾಡುತ್ತಾನೆ. ಯದ್ಯಪಿ ಭಗವಂತನಿಗೆ ಯಾವ ವಿಧಿನಿಷೇಧಗಳು ಇಲ್ಲದಿದ್ದರೂ, ದೇಶಕಾಲೋಚಿತವಾಗಿ ವರ್ತಿಸುತ್ತಾನೆ. ಹಾಗೆಯೇ ಎಲ್ಲರೂ ಆಚರಿಸಲು ಭಗವಂತನ ಆಚರಣೆಗಳೇ ಆದರ್ಶವಾಗುತ್ತವೆ. ಋಚೀಕರ ಪತ್ನಿ ಹಾಗೂ ಅತ್ತೆಯರು ಚರು ವ್ಯತ್ಯಾಸಾದಿಗಳನ್ನು ಮಾಡಿಕೊಂಡ ನಿಮಿತ್ತವಾಗಿ. ವರ್ಣವ್ಯತ್ಯಾಸವಾದ ಸಂತತಿ ಜನಿಸಿದ್ದು ಇತಿಹಾಸ.

೨. ತಮ್ಮ ವಂಶ ನಾಶಕರಾಗಿ ಬಂದ ಉದ್ದೇಶ ತಿಳಿಯದಿದ್ದ ಕುಶಿಕರು ಚ್ಯವನರಿಗೆ ಮಾಡಿದ ಆತಿಥ್ಯ ಅತ್ಯಪೂರ್ವ. 'ಅತಿಥಿದೇವೋ ಭವ' ಎಂಬ ಶ್ರುತ್ಯನುಷ್ಠಾನ ಕುಶಿಕರಾಜನಲ್ಲಿ ಪೂರ್ಣವಾಗಿ ಕಾಣುತ್ತೇವೆ. ಹಾಗೇ ಎಲ್ಲರೂ ವರ್ತಿಸಬೇಕು.

೩. ಅತಿಥಿಗೆ ಸರ್ವರಾಜ್ಯಾದಿಗಳನ್ನು ಒಪ್ಪಿಸಿ ಸೇವಕನಂತೆ ತಾನು ಪತ್ನೀ ಸಮೇತನಾಗಿ ಸೇವಿಸುತ್ತಾನೆ. ಅತಿಥಿಗಳಿಗಾಗಿ ಹಾಗೆ ತ್ಯಾಗ ಮಾಡಬೇಕು. ಅತಿಥಿಗೆ ಬೇಸರವಾಗದಂತೆ ವರ್ತಿಸಬೇಕು. ಹಾಗೆ ಕುಶಿಕ ರಾಜದಂಪತಿಗಳು ನಡೆದರು, ಚ್ಯವನರ ನುಡಿಗಳೇ ಅದಕ್ಕೆ ಸಾಕ್ಷಿ.

೪. ಆದ್ದರಿಂದ ಚ್ಯವನರ ಉದ್ದೇಶವೇ ಸಫಲವಾಗದೆ, ಯಾವುದನ್ನು ಕೊಡಬಾರದೋ ಅದೇ ವರವನ್ನು ಒತ್ತಾಯಪೂರ್ವಕವಾಗಿ ರಾಜನಿಗೆ ಕೊಡುತ್ತಾರೆ. ಇದು ಚ್ಯವನರ ದೊಡ್ಡಸ್ತಿಕೆ. ಅತಿಥಿಯ ಜವಾಬ್ದಾರಿ ಕೂಡಾ ಸೀಮಿತವಾಗಿರಬೇಕು. ದ್ವೇಷಸಾಧನೆಯನ್ನು ಎಂದೂ ಅಮಾಯಕರ ಬಗ್ಗೆ ಮಾಡಬಾರದು. ಮುಂದೆಂದೋ ನಡೆಯುವ ಸಾಂಕರ್ಯಕ್ಕೆ ಈಗಲೇ ಕುಶಿಕವಂಶನಾಶದ, ಚ್ಯವನರ ಆಸೆ ಈಡೇರಲಿಲ್ಲ. ಕುಶಿಕರಿಗೇನೇ ವರ ಕೊಟ್ಟು ಹೋದ ಮಹಾತ್ಮರು ಚ್ಯವನರು. ಅವರೂ ಅಷ್ಟೇ ಸಾತ್ವಿಕವಾಗಿ ವರ್ತಿಸಿದರು. ಕೋಪಕ್ಕೆ ಶರಣಾಗಲಿಲ್ಲ. ಎಲ್ಲವೂ ಬ್ರಹ್ಮಚಿತ್ತ. ಅದನ್ನು ಬದಲಾಯಿಸಲಾಗದು ಎಂದು ಒಪ್ಪಿದ ಮಹಾತ್ಮರು. ಒಂದು ದೃಷ್ಟಿಯಿಂದ ಅವರು ಕುಶಿಕರನ್ನು ಪರೀಕ್ಷಿಸಲು ಬಂದುದೇ ತಪ್ಪಾಗಿತ್ತೆಂದು ತೋರುತ್ತದೆ. ಆದರೆ ಅವರು ಪರೀಕ್ಷಿಸದಿದ್ದರೆ, ಕುಶಿಕನ ಸಾತ್ವಿಕಗುಣ ಜಗತ್ತಿಗೆ ತಿಳಿಯುತ್ತಿರಲಿಲ್ಲ. ಆದ್ದರಿಂದ ಭಗವಂತನು ಪರೀಕ್ಷೆ ಮಾಡಿಸಿ ಇಬ್ಬರಿಗೂ ಒಳ್ಳೆಯದನ್ನೇ ಮಾಡಿಸುತ್ತಾನೆ.

೫. ನಮ್ಮ ಜೀವನದಲ್ಲೂ ನಾವು ಎಚ್ಚರಿಕೆಯಿಂದ ವರ್ತಿಸಿ, ನಮ್ಮನ್ನು ಪರೀಕ್ಷಿಸುವ ಅನೇಕ ಪ್ರಸಂಗಗಳು ಬರುತ್ತವೆ. ಅವು ನಮಗೆ ತಿಳಿಯದೆಯೋ, ತಿಳಿದೋ ಇರಬಹುದು. ನಾವು ಎಲ್ಲಕ್ಕೂ ಅಣಿಯಾಗಿರಬೇಕು. ನಮ್ಮ ಆಸ್ತಿ, ಸ್ವಾಸ್ತಿ ಯಾವುದೇ ವಾಸ್ತವವಾಗಿ ಭಗವದ್ದತ್ತವೆಂದು ಭಾವಿಸಬೇಕು, ಕುಶಿಕನಂತೆ. ಕುಶಿಕನು ಚ್ಯವನರಿಗೆ ಎಲ್ಲವೂ ನಿಮ್ಮದೇ, ರಾಜ್ಯ, ಕೋಶ, ನಾನು, ನನ್ನ ಪರಿವಾರವೆಲ್ಲ ನಿಮ್ಮದು ಎಂದ. ಆಚಾರ್ಯರು ಆದ್ದರಿಂದಲೇ '**ಸ್ವೀಯಂ ವೇದವಿದಾಂ ಸರ್ವಂ**' (ಮ.ತಾ.ನಿ.-೨೩/೬) - ನಮ್ಮದು ಎನ್ನುವುದು ಯಾವುದೂ ಇಲ್ಲ, ಎಲ್ಲವೂ ಬ್ರಹ್ಮಜ್ಞಾನಿಗಳ ಸ್ವತ್ತು, ಅದು ದೇವರದು.

೬. ಕುಶಿಕ ದಂಪತಿಗಳಂತೆ ಅತಿಥಿ ಸತ್ಕಾರ ಮಾಡಬೇಕು. ಎಂದು, ಎಲ್ಲೂ, ಎಷ್ಟೇ ನೋವುಗಳಾದರೂ ಸಹಿಸಿಕೊಳ್ಳಬೇಕು.

೭. ಹೀಗೆ ಸೇವೆ ಮಾಡಿದಾಗ ಇಹಪರಗಳ ಸರ್ವಾಭೀಷ್ಟಸಿದ್ಧಿ. ಇಂತಹ ತಾಳ್ಮೆ, ಸಾಮರ್ಥ್ಯ ನಮಗೆ ಭಗವಂತನು ಅನುಗ್ರಹಿಸಲಿ.

# ೧೪೬. ನೃಗೋಪಾಖ್ಯಾನ

ಬ್ರಾಹ್ಮಣ ಸ್ವತ್ತನ್ನು ಅಪಹರಿಸಿದರೆ ಆಗುವ ಅನರ್ಥದ ಬಗ್ಗೆ ನೃಗೋಪಾಖ್ಯಾನ ಹೊರಟಿದೆ. ಬ್ರಾಹ್ಮಣಪತ್ನಿ ಅಥವಾ ಬ್ರಾಹ್ಮಣರ ಸಂಪತ್ತು ಅಪಹೃತವಾದಾಗ, ಶಕ್ತಿ ಉಳ್ಳವರು ಅದನ್ನು ಬಿಡಿಸಲು ಪ್ರಯತ್ನಿಸುತ್ತಾ ಯಾರು ಮೃತರಾಗುತ್ತಾರೋ, ಅಂತಹವರಿಗೆ ನಮೋ ನಮಃ ಎನ್ನುತ್ತದೆ ಭಾರತ. ಬ್ರಹ್ಮಸ್ವ ಅಪಹಾರದ ಬಗ್ಗೆ ಸಜ್ಜನರು ನೃಗ ಮಹಾರಾಜನು(ಇಕ್ಷ್ವಾಕುವಂಶ) ಪಟ್ಟ ಕಷ್ಟವನ್ನು ಉದಾಹರಿಸುತ್ತಾರೆ.

ದ್ವಾರಾವತಿಯು ಸಮುದ್ರಮಧ್ಯದಲ್ಲಿತ್ತು, ದ್ವೀಪವಾಗಿತ್ತು. ಅಲ್ಲೊಂದು ಹುಲ್ಲು-ಲತೆಗಳು ದಟ್ಟವಾಗಿ ಬೆಳೆದ, ಅವುಗಳಿಂದ ಮುಚ್ಚಲ್ಪಟ್ಟ ಒಂದು ದೊಡ್ಡ ಬಾವಿಯಿಂದ ನೀರನ್ನು ಹೊಂದುವ ಉದ್ದೇಶದಿಂದ ಆ ಬಳ್ಳಿ ಮೊದಲಾದುವನ್ನು ತೆಗೆದ ಜನರಿಗೆ ನೀರು ಸಿಗದೆ ಅಲ್ಲಿ ಒಂದು ಭಾರೀ ಶರೀರದ, ಓತಿಕೇತ (**ಕೃಕಲಾಸ**) ಕಂಡಿತು. ಆ ಪ್ರಾಣಿಯನ್ನು ತೆಗೆದು ಹೊರಹಾಕಲು ಸಹಸ್ರಾರು ಜನರು ಪ್ರಯತ್ನಿಸಿದರೂ, ಆಗದಿದ್ದಾಗ ಅವರು ಕೃಷ್ಣನಿಗೆ ಹೇಳಿದರು. ಆ ಓತಿಕೇತ ಇದೇ ಬಾವಿಯನ್ನೇ ಆವರಿಸಿತ್ತು. ಕೃಷ್ಣನು ಬಂದು ಅನಾಯಾಸವಾಗಿ ಎಡಗೈಯಿಂದ ಮೇಲಕ್ಕೆ ಎತ್ತಿದಾಗ **ಕೃಕಲಾಸ** ಶರೀರತ್ಯಾಗಮಾಡಿ ಸುವರ್ಣವರ್ಣದ ಸ್ವರ್ಗಲೋಕೋಚಿತವಾದ ಅಲಂಕಾರದಿಂದ ಕೂಡಿದ ಮಾನವಶರೀರಿ ಕೃಷ್ಣನಿಗೆ ಸಾಷ್ಟಾಂಗ ನಮಸ್ಕಾರ ಮಾಡಿದ. ಕೃಷ್ಣನು ನೀನಾರೆಂದು (ತಿಳಿಯದವನಂತೆ) ಕೇಳಿದಾಗ. ಆತನು –

'ನಾನು ಇಕ್ಷ್ವಾಕುಕುಲದಲ್ಲಿ ಜನಿಸಿದ ಸಹಸ್ರಯಜ್ಞ ಮಾಡಿದ ನೃಗ ಎಂಬ ರಾಜನು' ಎಂದ. ಕೃಷ್ಣನು ನೀನು ಬರೀ ಶುಭಕರ್ಮ ಮಾಡಿದವನು. ಪಾಪಕರ್ಮ ಮಾಡಿಲ್ಲ, ಹಾಗಿದ್ದರೂ ಇಂತಹ ದುರ್ಗತಿ ಏಕೆ ಬಂತು? ನೀನು ಲಕ್ಷ, ನೂರು, ಎಂಟುನೂರು, ಹತ್ತುಲಕ್ಷ ಗೋದಾನ ಮಾಡಿದೆ ಎಂದು ಕೇಳಿದ್ದೇವೆ. ಆ ಪುಣ್ಯ ಎಲ್ಲಿ ಹೋಯಿತು?' ಎನ್ನಲು, ನೃಗರಾಜನು 'ಅಗ್ನಿಹೋತ್ರ ಬ್ರಾಹ್ಮಣನಿಗೆ ನಾನು ದಾನ ಮಾಡಿದ ಒಂದು ಗೋವು ಆತನು ಪ್ರವಾಸಕ್ಕೆ ಹೋದಾಗ ತಪ್ಪಿಸಿಕೊಂಡು ನಮ್ಮ ಗೋಶಾಲೆಗೆ ಸೇರಿತು. ನನ್ನ ಮರಣೋತ್ತರ ಕಾಲದ ಪುಣ್ಯ ಸಂಚಯಕ್ಕಾಗಿ ನಾನು ಗೋದಾನ ಮಾಡಿದಾಗ ಈ ಗೋವು ಇನ್ನೊಬ್ಬನಿಗೆ ಬ್ರಾಹ್ಮಣನಿಗೆ ಹೋಯಿತು ಗೋಪಾಲಕರ ಪ್ರಮಾದದಿಂದ. ಅಗ್ನಿಹೋತ್ರ ಬ್ರಾಹ್ಮಣನು ಪ್ರವಾಸದಿಂದ ಬಂದು ನೋಡಲು ಆತನ ಮನೆಯಲ್ಲಿ ಗೋವು (ದಾನಕೊಟ್ಟ)ಇರಲಿಲ್ಲ. ಅತ ಹುಡುಕಲಾಗಿ ಅದು ಆಮೇಲೆ ದಾನ ಮಾಡಿದ ಇನ್ನೊಬ್ಬ ಬ್ರಾಹ್ಮಣನ ಮನೆಯಲ್ಲಿತ್ತು. ಇಬ್ಬರೂ ಅ ಗೋವು ತಮ್ಮದು, ತಮ್ಮದು ಎಂದು ವಿವಾದ ಮಾಡುತ್ತಾ ನನ್ನ ಬಳಿ ದೂರಿದರು.

ನಾನು ಆದ ಪ್ರಮಾದದಿಂದ ನೊಂದು ಎರಡನೇ ಬ್ರಾಹ್ಮಣನಿಗೆ ನಾನೇ ಕೊಟ್ಟ ಗೋವನ್ನು ಮೊದಲನೇ ಬ್ರಾಹ್ಮಣನಿಗೆ ಕೊಡಲು ವಿನಂತಿಸಿದೆ. ಅದರ ಬದಲಾಗಿ ಹತ್ತುಸಾವಿರ ಬೇರೆ ಗೋವುಗಳನ್ನು ಕೊಡುವುದಾಗಿ ಹೇಳಿದೆ. ಅವನು 'ಈ ಗೋವು ದೇಶಕಾಲಯೋಗ್ಯವಾಗಿದೆ. ತುಂಬಾ ಹಾಲು ಕೊಡುತ್ತದೆ. ಸಾಧುಸ್ವಭಾವ ಬೇರೆ. ಇದೇ ಸದಾ ನಮ್ಮ ಮನೆಯಲ್ಲಿರಲಿ. ಈ

ಗೋ ಹಾಲೇ ಮಾತೃಸ್ತನ್ಯವಿಲ್ಲದ ನನ್ನ ಬಡಕಲಾದ ಪುತ್ರನ ತಾಯಿಗೆ ಆಹಾರವಾಗಿದೆ. ಕಾರಣ ಈ ಗೋವನ್ನು ಕೊಡಲಾರೆ ಎಂದು ಹೇಳಿ ಹೊರಟೇ ಹೋದ.

ಮೊದಲ ಬ್ರಾಹ್ಮಣನಿಗೆ ಅದರ ಬದಲಾಗಿ ಒಂದು ಲಕ್ಷ ಗೋವುಗಳನ್ನು ಕೊಡುವೆನೆಂದರೂ ಒಪ್ಪದೇ 'ನಾನು ರಾಜರ ದಾನವನ್ನೇ ಸ್ವೀಕರಿಸುವುದಿಲ್ಲ, ನನ್ನ ಜೀವನೋಪಾಯವನ್ನು ನಾನೇ ನಿರ್ವಹಿಸಬಲ್ಲೆ ಎಂದು ಹೇಳುತ್ತಾ ಕೊಟ್ಟರೆ ಅದೇ ಗೋವನ್ನು ಕೊಡು ಎಂದ.' ನಾನು ಆತನಿಗೆ ಸುವರ್ಣ, ಅಶ್ವ, ರಥಗಳನ್ನು ಕೊಡುವೆನೆಂದರೂ ಒಪ್ಪದೇ ಹೊರಟುಹೋದ.

ಮುಂದೆ ನನ್ನ ಆಯುಷ್ಯ ಮುಗಿದ ಮೇಲೆ ನಾನು ಯಮಲೋಕಕ್ಕೆ ಹೋದಾಗ ಯಮನು ನನ್ನನ್ನು ಸತ್ಕರಿಸಿ, ನಾನು ಮಾಡಿದ ಅಖಂಡ ಪುಣ್ಯಗಳು. ಹಾಗೂ ಬ್ರಾಹ್ಮಣ ಗೋದಾನದಲ್ಲಿನ ಪ್ರಮಾದದ ಪಾಪದ ಬಗ್ಗೆ ಹೇಳಿ, ಮೊದಲು ಪಾಪ ಅನುಭವಿಸುವಿಯೋ, ಅಥವಾ ಪುಣ್ಯ ಅನುಭವಿಸುವಿಯೋ ಎಂದು ಕೇಳಲು ನಾನು ಪಾಪದ ಫಲ ಅನುಭವಿಸುವೆ ಎಂದೆ. ಕೂಡಲೇ ಕೃಕಲಾಸನಾಗಿ ಇಲ್ಲಿ ಬಿದ್ದೆ. ಯಮನು ೧೦೦೦ ವರ್ಷಗಳ ನಂತರ (ಕೃಕಲಾಸನಾಗಿ) ವಾಸುದೇವನು ನಿನ್ನನ್ನು ಎತ್ತಿದಾಗ ಮತ್ತೆ ನೀನು ಸ್ವರ್ಗಕ್ಕೆ ಹೋಗುವೆ ಎಂದು ಹೇಳಿದನು.

ಕೃಷ್ಣನೇ ಈಗ ನಿನ್ನ ಅಮೃತ ಕರಸ್ಪರ್ಶದಿಂದ ನಾನು ಪಾಪದಿಂದ ದಾಟಲ್ಪಟ್ಟಿದ್ದೇನೆ. ನನಗೆ ಅನುಮತಿ ನೀಡು. ಸ್ವರ್ಗಕ್ಕೆ ಹೋಗುವೆ ಎಂದು ಹೇಳಿದ. ಭಾಗವತದಲ್ಲಿ ನೃಗರಾಜನು ಕೃಷ್ಣನನ್ನು ಕುರಿತು ಮಾಡಿದ ಸ್ತೋತ್ರದ ೫ ಶ್ಲೋಕಗಳಿವೆ. ನಂತರ ಕೃಷ್ಣನಿಗೆ ಪ್ರದಕ್ಷಿಣೆ ಹಾಕಿ ಪಾದಸ್ಪರ್ಶಮಾಡಿ ನಮಸ್ಕರಿಸಿ ಉತ್ತಮ ವಿಮಾನವೇರಿ ಸ್ವರ್ಗಕ್ಕೆ ಹೋದ ವಿವರವಿದೆ.

ನೃಗ ಹೇಳುತ್ತಾನೆ. ನಾನು ಓತಿಕೇತನಾಗಿ ಬಾವಿಯಲ್ಲಿ ಬಿದ್ದಿದ್ದರೂ ನನಗೆ ನಿನ್ನ ಸ್ಮರಣೆ ತಪ್ಪಿದ್ದಿಲ್ಲ, ನಿನ್ನ ಅನುಗ್ರಹದಿಂದ ನಾನು ಪುನೀತನಾದೆ:

ತಾವದದ್ರಾಕ್ಷಮಾತ್ಮಾನಂ ಕೃಕಲಾಸಂ ಪತನ್ ಪ್ರಭೋ ।
ಬ್ರಹ್ಮಣ್ಯಸ್ಯ ವದಾನ್ಯಸ್ಯ ತವ ದಾಸಸ್ಯ ಕೇಶವ ॥
ಸ್ಮೃತಿರ್ನಾದ್ಯಾಪಿ ವಿಧ್ವಸ್ತಾ ತವ ಸಂದರ್ಶನಾರ್ಥಿನಃ ।
ದೇವದೇವ ಜಗನ್ನಾಥ ಗೋವಿಂದ ಪುರುಷೋತ್ತಮ ॥
ನಾರಾಯಣ ಹೃಷೀಕೇಶ ಪುಣ್ಯಶ್ಲೋಕಾಚ್ಯುತಾವ್ಯಯ ।
ಅನುಜಾನೀಹಿ ಮಾಂ ಕೃಷ್ಣ ಯಾತುಂ ದೇವಗತಿಂ ಪ್ರಭೋ ॥
ಯತ್ರ ಕ್ವಾಪಿ ಸತಶ್ಚೇತೋ ಭೂಯಾನ್ಮೇ ತ್ವತ್ಪದಾಸ್ಪದಮ್ ।
ನಮಸ್ತೇ ಸರ್ವಭಾವಾಯ ಬ್ರಹ್ಮಣೇಽನಂತಶಕ್ತಯೇ ॥
ಕೃಷ್ಣಾಯ ವಾಸುದೇವಾಯ ಗೋಪಾನಾಂ ಪತಯೇ ನಮಃ ।
ಇತ್ಯುಕ್ತ್ವಾ ತಂ ಪರಿಕ್ರಮ್ಯ ಪಾದೌ ಸ್ಪೃಷ್ಟ್ವಾ ಸ್ವಮೌಲಿನಾ ॥
ಅನುಜ್ಞಾತೋ ವಿಮಾನಾಗ್ರ್ಯಮಾರುಹತ್ಪಶ್ಯತಾಂ ನೃಪಮ್ ॥

- ಭಾಗವತ(೧೦/೬೭/೩೮-೪೩)

ನೃಗನು ಸ್ವರ್ಗಕ್ಕೆ ಹೋದ ಮೇಲೆ ಕೃಷ್ಣನು ಎಲ್ಲರಿಗೂ ಹೀಗೆ ಘೋಷಿಸಿದನು[೧]. ಬ್ರಾಹ್ಮಣರ ಸ್ವತ್ತನ್ನು ಜ್ಞಾನಿಯಾದ ಪುರುಷನು (ವಿವೇಕಿಯು ವಿದ್ವಾಂಸರು) ಅಪಹರಿಸಬಾರದು. ಅಪಹರಿಸಿದರೆ ಆ ಸ್ವತ್ತು ಅಪಹರಿಸಿದವನನ್ನು ನಾಶ ಮಾಡುತ್ತದೆ. ನೃಗನನ್ನು ಬ್ರಾಹ್ಮಣ ಗೋವಿನಂತೆ ಸಜ್ಜನರ ಸಮಾಗಮ ಎಂದೂ ವ್ಯರ್ಥವಾಗುವುದಿಲ್ಲ. ನೃಗನಿಗೆ (ಓತಿಕೇತ) ದ್ವಾರಕಾವಾಸಿಗಳ ಸಮಾಗಮ. ನಂತರ ಸಜ್ಜನ ಶಿಖಾಮಣಿ ಕೃಷ್ಣನ ಸಮಾಗಮದಿಂದ ನೃಗನು ನರಕದಿಂದ ಮುಕ್ತನಾದ. ಗೋದಾನ ಮಹಾಫಲದಾಯಕವಾಗುವಂತೆ ಗೋದ್ರೋಹವೂ ದುಷ್ಫಲಕ. ಆದ್ದರಿಂದ ಗೋದ್ರೋಹ ಮಾಡಬಾರದು ಎಂದು ಭೀಷ್ಮರು ಧರ್ಮರಾಜನಿಗೆ ಉಪದೇಶಿಸುತ್ತಾರೆ.

## ಸಂದೇಶಗಳು-ವಿವರಣೆಗಳು

೧. ಕಥೆಯೇ ಸ್ಪಷ್ಟವಾಗಿ ಹೇಳುತ್ತದೆ. ಬ್ರಾಹ್ಮಣಸ್ವತ್ತನ್ನು ತಿಳಿದೋ ತಿಳಿಯದೆಯೋ ಅಪಹಾರ ಮಾಡಿದರೂ ಶಿಕ್ಷೆ ತಪ್ಪಿದ್ದಲ್ಲ. ನೃಗ ಮಹಾರಾಜನು ದಾನ ಕೊಟ್ಟ ಮೇಲೂ ಕೊಟ್ಟ ಗೋವು ರಾಜನ ಗೋಶಾಲೆ ಸೇರಿತು. ಇದರಲ್ಲಿ ರಾಜನದಾಗಲೀ, ರಾಜನ ಪರಿವಾರದವರದಾಗಲೀ ಮಹಾದೋಷವೇನೂ ಕಾಣದು. ಇದೊಂದು ಜ್ಞಾನಪೂರ್ವಕವಾದ ಅಪರಾಧವಲ್ಲದಿದ್ದರೂ, ಕೈಮೀರಿ ಹೋದುದು. ಪ್ರಾಯಃ ದಾನಕೊಟ್ಟ ಗೋವಿಗೆ ಏನಾದರೂ ಗುರುತು ಇತ್ತೋ ಇಲ್ಲೋ, ಮೂಲದಲ್ಲಿ ಇಲ್ಲ. ಯಾರಿಗೆ ಕೊಟ್ಟುದ್ದು ಅದೂ ವ್ಯವಹಾರದ ದೃಷ್ಟಿಯಿಂದ ನಿಗಾ ಇಡುವುದು ಕಷ್ಟಕರವಾದುದು. ಅದೂ ಸಾವಿರಾರು ಗೋವುಗಳನ್ನು ಪದೇ ಪದೇ ಕೊಡುತ್ತಿರುವಾಗ ಅದರ ನಿಗಾ ಹೇಗೆ ಸಾಧ್ಯ? ಎಂದು ನಾವು ಈಗಿನ ಕಾಲದಲ್ಲಿ ಪ್ರಶ್ನಿಸುತ್ತೇವೆ. ಆದ್ದರಿಂದ ಇದೊಂದು ಪ್ರಾಮಾದಿಕ ಅಪರಾಧ. ಆದರೆ ಶಾಸ್ತ್ರರೀತ್ಯಾ ಅದಕ್ಕೂ ಶಿಕ್ಷೆ ಇದೆ ಎಂದ ಮೇಲೆ, ಅದನ್ನು ಪ್ರಶ್ನಿಸುವಂತಿಲ್ಲ. ಜ್ಞಾತಾಪರಾಧಕ್ಕಂತೂ ಮಹಾಶಿಕ್ಷೆ ಕಾದಿರುತ್ತದೆ. ಕಾರಣ ಗೋದಾನಾದಿಗಳಲ್ಲಿ ತುಂಬಾ ಎಚ್ಚರವಿರಬೇಕು.

೨. ನೃಗ ತನ್ನ ಅಪರಾಧವಿದ್ದರೂ ಆತನಿಗೆ ದೇವರ ಸ್ಮರಣೆ, ತಪ್ಪಿದ್ದಿಲ್ಲ. ಅದನ್ನು ಎಲ್ಲರೂ ಗಮನಿಸಿ, ನಮಗೆ ಎಂತಹ ಶಿಕ್ಷೆ ಬರುವುದಿದ್ದರೂ ಆಗಲೂ ಹರಿಸ್ಮರಣೆ ಭಾಗ್ಯವನ್ನು ಕರುಣಿಸಲು ಆತನನ್ನೇ ಪ್ರಾರ್ಥಿಸಬೇಕು.

ಇತ್ಯಾದಿ...

*****

---

೧ ಬ್ರಾಹ್ಮಣಸ್ವಂ ನ ಹರ್ತವ್ಯಂ ಪುರುಷೇಣ ವಿಜಾನತಾ।
ಬ್ರಾಹ್ಮಣಸ್ವಂ ಹೃತಂ ಹಂತಿ ನೃಗಂ ಬ್ರಾಹ್ಮಣಗೌರಿವ॥ - ೧೦೦/೩೧

## ೧೪೭. ನಾಚಿಕೇತೋಪಾಖ್ಯಾನ

ಧರ್ಮರಾಜನು ಭೀಷ್ಮರನ್ನು ಕುರಿತು –

ಗೋವುಗಳ ದಾನದಿಂದ ಬರುವ ಫಲ ಯಾವುದು? ಎಂಬುದನ್ನು ವಿಸ್ತಾರವಾಗಿ ತಿಳಿಸಲು ಕೇಳಿದಾಗ – ಭೀಷ್ಮರು ಉದ್ದಾಲಕಿ ಋಷಿಗೂ ಹಾಗೂ ಆತನ ಮಗನಾದ ನಚಿಕೇತನಿಗೂ ನಡೆದ ಸಂವಾದರೂಪದ ಇತಿಹಾಸವನ್ನು ಹೇಳುತ್ತಾರೆ.

ಉದ್ದಾಲಕಿ ಋಷಿಯು ದೀಕ್ಷಾ ಬದ್ಧವಾಗಿ(ಯಜ್ಞ) ತನ್ನ ಮಗನಿಗೆ ದೀಕ್ಷೆ ಮುಗಿಯುವವರೆಗೆ ಸೇವೆ ಮಾಡಲು ಹೇಳಿದ. ಆ ದೀಕ್ಷೆ ಮುಗಿದ ಮೇಲೆ ಮಗನಿಗೆ ಸ್ನಾನ ಮಾಡಿದ, ಸ್ವಾಧ್ಯಾಯನಿರತನಾದ ನಾನು ನದೀ ತೀರದಲ್ಲಿ ಸಂಗ್ರಹಿಸಿಟ್ಟಿದ್ದ ಸಮಿತ್ತು, ಪುಷ್ಪಗಳನ್ನು, ದರ್ಭೆಗಳನ್ನು ಕಲಶಗಳನ್ನು ತರುವುದನ್ನು ಮರೆತೆ. ಅವುಗಳನ್ನು ತೆಗೆದುಕೊಂಡು ಬಾ ಎಂದು ಹೇಳಿದರು. ಮಗ ಅಲ್ಲಿಗೆ ಹೋಗಿ ನೋಡಿದಾಗ ಅವ್ಯಾವೂ ಇಟ್ಟ ಸ್ಥಳದಲ್ಲಿರಲಿಲ್ಲ, ಅವೆಲ್ಲ ನದೀ ಪ್ರವಾಹದಿಂದಾಗಿ ಕೊಚ್ಚಿ ಹೋಗಿದ್ದವು. ಹಾಗೆಯೇ ತಂದೆಗೆ ಮಗ ಹೇಳಿದ. ತಂದೆಗೆ ಮಗನ ಉತ್ತರ ಹಿಡಿಸದೆ ಕೋಪದಿಂದ 'ನೀನು ಯಮನನ್ನು ನೋಡು' ಎಂದ. ಮಗ ಪ್ರಸನ್ನನಾಗು ಎಂದು ಹೇಳುತ್ತಿದ್ದರೂ, ತಂದೆಯ ಆ ವಾಗ್ವಜ್ರದಿಂದ ಹತನಾಗಿ ನಚಿಕೇತ ಪ್ರಾಣತ್ಯಾಗ ಮಾಡಿ ಭೂಮಿಯ ಮೇಲೆ ಬಿದ್ದನು.

ಮಗ ಬಿದ್ದುದ್ದನ್ನು ನೋಡಿ 'ಎಂತಹ ಕೆಲಸ ಮಾಡಿಬಿಟ್ಟೆ ಎಂದು ಪಶ್ಚಾತ್ತಾಪದಿಂದ ತಂದೆ ತಾನೂ ಕುಸಿದು ಬಿದ್ದ. ಮಗನ ಶವವನ್ನು ಆಲಿಂಗಿಸಿಕೊಂಡು ಪರಿತಪಿಸಿದ. ಹೀಗೆ ಆ ಉಳಿದ ಹಗಲು ರಾತ್ರಿ ಹೋದುದೇ ಗೊತ್ತಾಗಲಿಲ್ಲ.

ಸ್ವಲ್ಪ ಹೊತ್ತಿಗೆ ತಂದೆಯ ದುಃಖದ ಕಣ್ಣೀರು ಬೀಳುವುದರಿಂದ ದರ್ಭಾಸನದಲ್ಲಿ ಮಲಗಿದ್ದ ನಚಿಕೇತನು ಮಳೆಯಿಂದ ತೊಯ್ದ ಸಸ್ಯವು ಚಿಗಿಯುವಂತೆ ಅಲುಗಾಡುತ್ತಾ ಎದ್ದನು. ಶ್ರೇಷ್ಠವಾದ (ದೇವಲೋಕದ) ಗಂಧಲೇಪನಗಳಿಂದ ಶರೀರಕ್ಕೆ ಹಚ್ಚಿಕೊಂಡವನಾಗಿ ಮಲಗಿದವನು ಎದ್ದಂತೆ (ಯಮಲೋಕದಿಂದ) ಹಿಂದಿರುಗಿ ಬಂದ ಶ್ಲಾಘನೀಯವಾದ ಮಗನನ್ನು ಕುರಿತು ತಂದೆ ಪ್ರಶ್ನೆ ಮಾಡಿದನು. 'ಮಗನೇ! ನೀನು ಶುಭಕರ್ಮಗಳಿಂದ

ಲೋಕಗಳನ್ನು ಗೆದ್ದೆಯಲ್ಲವೇ? ಅದೃಷ್ಟವಶಾತ್ ಮತ್ತೆ ವಾಪಸು ಬಂದೆ. ನಿನ್ನ ಶರೀರ ಮನುಷ್ಯರಂತೆ ಕಾಣುತ್ತಿಲ್ಲ[೧].

ಎಲೈ ತಂದೆಯೇ! ನಿನ್ನ ಆಜ್ಞೆಯ ಮೇರೆಗೆ ನಾನು ಅಲ್ಲಿ ವಿಶಾಲವಾದ ಮನೋಹರವಾದ ಸಹಸ್ರಾರು ಯೋಜನದಷ್ಟು ಸುವರ್ಣಭೂಮಿಯಲ್ಲಿದ್ದ ಸಭೆಯನ್ನು ನೋಡಿದೆ. ನನ್ನನ್ನು ನೋಡಿದ ಕೂಡಲೇ ಯಮದೇವರು ತಮ್ಮ ಮನೆಯನ್ನು ತೋರಿಸಿ, ನನಗೆ ಆಸನ ನೀಡಿದರು. ನಿಮ್ಮ ಮೇಲಿನ ಗೌರವದಿಂದ ನನ್ನನ್ನು ಅರ್ಘ್ಯಾದಿ ಪೂಜಾ ಸಲಕರಣೆಗಳಿಂದ ಸತ್ಕರಿಸಿದರು[೨].

ಎಲೈ ಧರ್ಮರಾಜನೇ! ನಾನು ನಿನ್ನ ಲೋಕಕ್ಕೆ ಬಂದಿದ್ದೇನೆ. 'ನಾನು ಯಾವ ಲೋಕಗಳನ್ನು ನೋಡಲು ಅರ್ಹನೋ ಅವನ್ನು ಕೊಡಿರಿ' (ತೋರಿಸಿರಿ) ಎಂದಾಗ, ಯಮನು 'ನೀನು ಮರಣಹೊಂದಿಲ್ಲ, ಯಮನನ್ನು ನೋಡು ಎಂದು ನಿಮ್ಮ ತಂದೆ ಹೇಳಿದ್ದಾನೆ. ನಿಮ್ಮ ತಂದೆ ಪ್ರಜ್ವಲಿಸುವ ಅಗ್ನಿಸದೃಶ. ಅವನ ಮಾತು ಸುಳ್ಳಾಗದು[೩]. ನನ್ನನ್ನು ನೋಡಿದ್ದಾಯಿತು, ವಾಪಸು ಹೋಗು. ನಿನ್ನ ತಂದೆ ದುಃಖಿಸುತ್ತಿದ್ದಾನೆ. ನಿನಗೇನು ವರ ಕೊಡಲಿ? ನಿನಗೆ ಇಷ್ಟವಾದುದನ್ನು ಕೊಡಲಿ? ಕೇಳು ಎನ್ನಲು, ನಚಿಕೇತನು, ನಾನು ವಾಪಸು ಹೋಗಲಾರದಂತಹ ರಾಜ್ಯಕ್ಕೆ

---

೧ ಕ್ಷುತ್ಪಿಪಾಸಾಸಮಾವಿಷ್ಟೋ ಮುನಿರುದ್ದಾಲಕಿಸ್ತದಾ ।
ಯಮಂ ಪಶ್ಯೇತಿ ತಂ ಪುತ್ರಮಶಪತ್ ಸ ಮಹಾತಪಾಃ ॥
ತಥಾ ಸ ಪಿತ್ರಾಽಭಿಹತೋ ವಾಗ್ವಜ್ರೇಣ ಕೃತಾಂಜಲಿಃ ।
ನಾಚಿಕೇತಂ ಪಿತಾ ದೃಷ್ಟ್ವಾ ಪತಿತಂ ದುಃಖಮೂರ್ಛಿತಃ ॥
ಕಿ ಮಯಾ ಕೃತಮಿತ್ಯುಕ್ತ್ವಾ ನಿಪಪಾತ ಮಹೀತಳೇ ।
ಪಿತ್ರ್ಯೇಣಾಶ್ರುಪ್ರಪಾತೇನ ನಾಚಿಕೇತ ಕುರೂದ್ವಹ ।
ಪ್ರಾಸ್ಪಂದಚ್ಛಯನೇ ಕೌಶ್ಯೇ ವೃಷ್ಟ್ಯಾ ಸಸ್ಯಮಿವಾಪ್ಲುತಮ್ ॥
ಅಪಿ ಪುತ್ರ ಜಿತಾಲೋಕಾಃ ಶುಭಾಸ್ತೇ ಸ್ವೇನ ಕರ್ಮಣಾ ।
ದಿಷ್ಟ್ಯಾ ಚಾಸಿ ಪುನಃ ಪ್ರಾಪ್ತೋ ನ ಹಿ ತೇ ಮಾನುಷಂ ವಪುಃ ॥ - ಅ (೧೦೧/೬-೧೨)

೨ ದೃಷ್ಟ್ವೈವ ಮಾಮಭಿಮುಖಮಾಪತಂತಂ
ಗೃಹಂ ನಿವೇದ್ಯಾಸನಮಾದಿದೇಶ ।
ವೈವಸ್ವತೋಽರ್ಘ್ಯಾದಿಭಿರರ್ಹಣೈಶ್ಚ
ಭಗವತ್ಕೃತೇ ಪೂಜಯಾಮಾಸ ಮಾಂ ಸಃ ॥ - ೧೦೧/೧೫,೧೬
...........
ಪ್ರಾಪ್ತೋಽಸ್ಮಿ ತೇ ವಿಷಯಂ ಧರ್ಮರಾಜ
ಲೋಕಾನರ್ಹೇ ಯಾನ್ ಸ್ಮ ತಾನ್ ಮೇ ವಿಧತ್ಸ್ವ ॥ - ೧೦೧/೧೬

೩ ಯಮೋಽಬ್ರವೀನ್ಮಾಂ ನ ಮೃತೋಽಸಿ ಸೌಮ್ಯ
ಯಮಂ ಪಶ್ಯೇತ್ಯಾಹ ತು ತ್ವಾಂ ತಪಸ್ವೀ ।
ಪಿತಾ ಪ್ರದೀಪ್ತಾಗ್ನಿಸಮಾನತೇಜಾ
ನ ತಚ್ಛಕ್ಯಮನೃತಂ ವಿಪ್ರ ಕರ್ತುಮ್ । - ೧೦೧/೧೭

ಬಂದಿರುವೆ. ಪುಣ್ಯವಂತರು ಗಳಿಸಿದ ಪುಣ್ಯಗಳಿಂದ ಸಮೃದ್ಧ ಲೋಕಗಳನ್ನು ನೋಡಲು ಇಚ್ಛಿಸುತ್ತೇನೆ. ಇದೇ ನಾನು ಇಚ್ಛಿಸುವ ವರ ಎಂದ.

ಆಗ ಯಮದೇವರು ಸುಂದರವಾದ ಪ್ರಕಾಶಮಾನವಾದ ರಥದಲ್ಲಿ ನನ್ನನ್ನು ಕೂರಿಸಿ, ಪುಣ್ಯವಂತರು ಸಂಪಾದಿಸುವ ಲೋಕಗಳನ್ನು ನನಗೆ ತೋರಿಸಿದರು. ನಾನು ನೋಡಿದ ಲೋಕಗಳು ಹೀಗಿದ್ದವು.

೧. ನಾನಾ ಆಕಾರಗಳು, ರತ್ನಮಯವಾದ, ಚಂದ್ರನಿಂದ ಶುಭ್ರವಾದ, ಅನೇಕ ಶತಭೌಮ ಪದಾರ್ಥಗಳಿಂದ ಕೂಡಿದ, ಸೂರ್ಯಪ್ರಕಾಶದ ಸುವರ್ಣರಜತಮಯವಾದ ಚಲಿಸುವ, ಚಲಿಸದಿರುವ, ಗೃಹಗಳು.

೨. ಭಕ್ಷ್ಯಭೋಜ್ಯಮಯ ಪರ್ವತಗಳು; ೩. ವಸ್ತ್ರ ಶಯನ, ಕಾಮ, ವೃಕ್ಷ; ೪. ನದಿ, ಬೀದಿ, ಸಭೆ, ಭಾವಿ, ಸರೋವರಗಳು, ಸಾವಿರಾರು.

೫. ಕ್ಷೀರಪ್ರವಾಹದ ನದಿಗಳು, ಇವೆಲ್ಲ ಯಾರಿಗೆ ಭೋಜ್ಯವೆಂದು ಕೇಳಲು ಯಮನು ಗೋರಸವನ್ನು ದಾನ ಮಾಡುವವರಿಗೆ ಗೋದಾನ ಮಾಡುವವರು ಎಂದನು.

೬. ಪ್ರಶಸ್ತಕಾಲ, ಪಾತ್ರ, ಗೋದಾನಪ್ರಕಾರ ತಿಳಿದು ದಾನ ಮಾಡಬೇಕು.

೭. ದಾನಪಾತ್ರರು ಸ್ವಾಧ್ಯಾಯ ಸಂಪನ್ನ ತಪಸ್ವಿ ಯಜ್ಞಾಧಿಗಳಲ್ಲಿ ನಿರತರು.

೮. ದಾನಪಾತ್ರ ಗೋವು, ಸಾಧು ಗೋವು, ಕರುಗಳಿರುವ, ಓಡಿ ಹೋಗದಿರುವ, ಕಂಚಿನಪಾತ್ರೆಯೊಡನೆ ದಾನ ಮಾಡಬೇಕು. ಆಗ ಆ ಗೋವಿನ ದೇಹದಲ್ಲಿ ಎಷ್ಟು ಕೂದಲು (ರೋಮ)ಗಳಿರುತ್ತವೋ ಅಷ್ಟು ವರ್ಷಕಾಲ ದಾನ ಮಾಡಿದವನು ಸ್ವರ್ಗದಲ್ಲಿರುತ್ತಾನೆ.

೯. ಗೋದಾನದೊಡನೆ ದೊಡ್ಡ ಎತ್ತನ್ನು ಚೆನ್ನಾಗಿ ಪಳಗಿದ, ಭಾರ ಹೊರುವ, ಬಲಿಷ್ಠವಾದುದನ್ನು ಕೊಟ್ಟರೆ, ಗೋದಾನ ಮಾಡಿದವನು ಹೊಂದುವ ಲೋಕಗಳನ್ನೇ ಹೊಂದುತ್ತಾನೆ.

೧೦. ಜೀವನೋಪಾಯರಹಿತವಾದ ಬ್ರಾಹ್ಮಣ ಸತ್ಪಾತ್ರ. ಅವನಿಗೆ ಗೋವಿಷಯದಲ್ಲಿ ಕ್ಷಮೆ, ಆಶ್ರಯ ಕೊಡುವ ಅರ್ಹತೆ ಇರಬೇಕು. ಇತ್ಯಾದಿ...

೧೧. ದೇವಲೋಕಕ್ಕೆ ಹೋಗಲು ಬಯಸುವವನು ನ್ಯಾಯದಿಂದ ಸಂಪಾದಿಸಿದ ಗೋವುಗಳನ್ನು ಬ್ರಾಹ್ಮಣರಿಗೆ ದಾನ ಮಾಡಬೇಕು.

೧೨. ಸಾಕ್ಷಾತ್ ಗೋದಾನವಾಗದಿದ್ದರೆ, ಘೃತಧೇನು ಎಂದರೆ ಧೇನುವಿನ ಆಕಾರದ ಪಾತ್ರೆಯಲ್ಲಿ ಘೃತತುಂಬಿಸಿ ಕೊಡಬಹುದು. ಅದೂ ಆಗದಿದ್ದರೆ ತಿಲಧೇನು ಅಥವಾ

ಜಲಧೇನು. ಇವೇ ಮೊದಲಾದ ಲೋಕಗಳನ್ನು ಯಮದೇವರು ತೋರಿಸಿದರು. ಉಪದೇಶ ಮಾಡಿದರು.

೧೩. ನಚಿಕೇತನು ತಂದೆ ಕೊಟ್ಟ ಶಾಪದ ಬಗ್ಗೆ ಕೋಪಿಸದೆ ಶ್ಲಾಘಿಸಿದ, ಶಾಪದಿಂದಾಗಿ ಯಮದರ್ಶನ ಯಮಲೋಕದರ್ಶನ, ಯಮಾನುಗ್ರಹವಾಯಿತೆಂದು ಗೋದಾನದಲ್ಲಿ ಆಸಕ್ತನಾಗಿರು ಎಂದು ಯಮೋಪದೇಶ ಮಾಡಿದನು.

## ಸಂದೇಶಗಳು-ವಿವರಣೆಗಳು

೧. ತಂದೆಯ ಮನಸ್ಸನ್ನು ನೋಯಿಸಬಾರದು.

೨. ಅವರ ಕೋಪಾದಿಗಳು ತೋರಿಕೆಗೆ ಮಕ್ಕಳ ಶ್ರೇಯಸ್ಸಿಗೆ ಕಾರಣವಾಗದಿದ್ದರೂ, ದೇವತಾನುಗ್ರಹಕ್ಕೆ ಕಾರಣವಾಗುತ್ತದೆ.

೩. ಗೋದಾನ ಮಾಡಬೇಕು.

ಇತ್ಯಾದಿ......

# ೧೪೮. ಫೇನಪೋಖ್ಯಾನ

ಧರ್ಮರಾಜನು ತಾತ ಭೀಷ್ಮರನ್ನು ಪ್ರಶ್ನಿಸುತ್ತಾನೆ.

'**ಫೇನಪ**' ಎಂದರೆ ಯಾರು? ಅವನು ಹಿಂದೆ ಹೇಗೆ ಗೋವುಗಳಿಂದ ತಿನ್ನಲ್ಪಟ್ಟನು(ಘಾಸಿಗೆ ಒಳಗಾದನು)? ಮೃತನಾದವನು ಹೇಗೆ ಪ್ರಾಣಪಡೆದು ಗೋಲೋಕಕ್ಕೆ ಹೋದನು? (ದೇವತೆಗಳಿಗೆ ಮಾತ್ರ ಹೋಗಲು ಸಾಧ್ಯವಾದ ಗೋಲೋಕವು ದೇವತೆಗಳ ಸ್ವಭಾವಕ್ಕೆ ವಿರುದ್ಧವಾದ ಭೂಲೋಕದಲ್ಲಿ ಹೇಗೆ ಹೊಂದಲಾದೀತು? ಈ ಬಗ್ಗೆ ನನ್ನ ಸಂಶಯವನ್ನು ಪರಿಹರಿಸು?

ಇದಕ್ಕೆ ಭೀಷ್ಮರು ಉತ್ತರಿಸುತ್ತಾ ಭೃಗುವಂಶದಲ್ಲಿದ್ದ '**ಸುಮಿತ್ರ**'ನೆಂಬ ಬ್ರಾಹ್ಮಣನು ಮಹಾತಪಸ್ವಿಯಾದ ವೇದಾಧ್ಯಯನ ಸಂಪನ್ನನಾದ, ತ್ರಿಕಾಲಸ್ನಾನ ಮಾಡುವ, ವಿದ್ಯಾವಿನಯಸಂಪನ್ನನಾದ, ತ್ರಿಕಾಲ ಸಂಧ್ಯೋಪಾಸನ ತತ್ಪರನಾದ, ಅಗ್ನಿಹೋತ್ರರತನಾದ, ದೇವಪಿತೃಅತಿಥಿಪೂಜಕನಾದವನಾಗಿ ಪ್ರಾಣಗಳನ್ನು ಉಳಿಸುವುದಕ್ಕಾಗಿ (ದೇಹಧಾರಣೆಗಾಗಿ ಮಾತ್ರ) ಕಿಂಚಿತ್ ಅಲ್ಪಾಹಾರ ಸೇವಿಸುತ್ತಿದ್ದನು (ಆತನ ಆಹಾರಸೇವನೆ ಅತ್ಯಲ್ಪವಾಗಿತ್ತು)[೧]. ಆತನ ಪವಿತ್ರವಾದ ಆಶ್ರಮವು ರುದ್ರದೇವರಿಂದ ನಿರ್ಮಿತವಾದ, ಪುರಾಣಗಳಲ್ಲಿ **ಕುಲಹಾ** ಎಂದು ಪ್ರಸಿದ್ಧವಾದ, **ತ್ರಿಶಿಖರ** ಎಂಬ ಗಿರಿಯಿಂದ ಹುಟ್ಟುವ ನದೀ ತೀರದಲ್ಲಿತ್ತು. ಆ ತೀರದಲ್ಲಿ ಕಪ್ಪಾದ ದರ್ಭೆ ಹುಲ್ಲುಗಳು ಹುಲುಸಾಗಿ ಬೆಳೆದಿದ್ದವು. ಯಾಜ್ಞೀಯ ವೃಕ್ಷಗಳಿಂದ ಕೂಡಿತ್ತು. ಆತನು ತನ್ನ ಪೂರ್ವಜರು ಹೇಳಿದ ರೀತಿಯಲ್ಲಿ ಬದುಕುತ್ತಿದ್ದ. ಆತನಿಗೆ ಅಂಗೀರಸಗೋತ್ರದ ಒಬ್ಬ ಬ್ರಾಹ್ಮಣನು ವರ್ಷಋತು(ಮಳೆಗಾಲ)ದ ಎರಡನೇ ಹುಣ್ಣಿಮೆಯಂದು (ಭಾದ್ರಪದಪೂರ್ಣಿಮೆ-ಅನಂತನ ಹುಣ್ಣಿಮೆ) ಒಂದು ಗೋದಾನ ಮಾಡಿದ್ದನು.

---

೧ ಶ್ರೂಯತೇ ಭಾರ್ಗವೇ ವಂಶೇ ಸುಮಿತ್ರೋ ನಾಮ ಭಾರತ।
ವೇದಾಧ್ಯಯನಸಂಪನ್ನೋ ವಿಫಲೇ ತಪಸಿ ಸ್ಥಿತಃ॥
ವಿನಯಾಚಾರತತ್ತ್ವಜ್ಞಃ ಸರ್ವಧರ್ಮಾರ್ಥ ಕೋವಿದಃ।
ಯತ್ತಸ್ತ್ರಿಷ್ವಣಸ್ನಾಮಿ ಸಂಧೋಪಾಸನ ತತ್ಪರಃ॥
ಅಗ್ನಿಹೋತ್ರರತಃ ....................
ಪಿತ್ರ್ನ್ ದೇವಾಂಶ್ಚ ನಿಯತಮತಿಥೀಂಶ್ಚೈವ ಪೂಜಯನ್।
ಪ್ರಾಣಸಂಧಾರಣಾರ್ಥಂ ಚ ಯತ್ಕಿಂ ಚಿದುಪಹಾರಯನ್॥ - ೧೧೫/೩-೬

[1]ಸುಮಿತ್ರನು ಆ ಗೋವನ್ನು ತನ್ನ ತಾಯಿಯಂತೆ ಅತ್ಯಂತ ಭಕ್ತಿಯಿಂದ ಸಾಕಿದನು. ಆ ಗೋವು ಇವನ ಆರೈಕೆಯಲ್ಲಿ ಮನಸ್ವಿಯಾಗಿ ಸಂಚರಿಸುತ್ತ ಸುಂದರ ಆಕಾರ ಹೊಂದಿ, ದಷ್ಟಪುಷ್ಟವಾಗಿ ಬೆಳೆಯಿತು. (ಈ ಧೇನುವಿನ ದೈಹಿಕ ವೃದ್ಧಿ ಬೆಳವಣಿಗೆಯನ್ನು ವ್ಯಾಸರು ೬ ಶ್ಲೋಕಗಳಿಂದ ವರ್ಣಿಸಿದ್ದಾರೆ). ಪ್ರಾಜಾಪತ್ಯ ಗೋವಿನ ಎಲ್ಲ ಲಕ್ಷಣಗಳನ್ನು ಹೊಂದಿ ಯುವವನಿತೆಯಂತೆ ಶೋಭಿಸುತ್ತಿತ್ತು.ಹಾಗೆಯೇ ಗೋವನ್ನು ಸಾಕುತ್ತಿದ್ದ (ಸುಮಿತ್ರ ಬ್ರಾಹ್ಮಣನ ವರ್ಣನೆಯೂ ನಾಲ್ಕು ಶ್ಲೋಕಗಳಿಂದ ಕೂಡಿದ್ದು ಬ್ರಾಹ್ಮಣರು ಹೇಗಿರಬೇಕೆಂದು ತಿಳಿಸುತ್ತದೆ).

ಈ ಗೋವು ಮುಂದೆ ಒಂದು ವೃಷಭ(ಎತ್ತು)ದ ಸಂಸರ್ಗದಿಂದ ತನ್ನಂತೆ ಇರುವ ಎರಡು ಕರುಗಳನ್ನು ಪಡೆಯಿತು. ಇಂತಹ ಗೋವನ್ನು ಸುಮಿತ್ರನು ಬೆಳೆಸುತ್ತ ಬೆಳೆಸುತ್ತಿರಲು ಆ ಗೋವಿನ ಸಂತಾನವು ಬೆಳೆದು ಬೆಳೆದು ಸಾವಿರ ಗೋವುಗಳಾದವು. ಅವುಗಳಿಗೆ ಕೊನೆಯೇ ಕಾಣಲಿಲ್ಲ. ಹೀಗೆ ಅಂಗಿರಸ ಗೋತ್ರದ ಬ್ರಾಹ್ಮಣ ಕೊಟ್ಟ ಒಂದು ಗೋವಿನಿಂದ ಬೆಳೆದ ಗೋ ಸಂತಾನ ಸಮೃದ್ಧಿಯು ಆ ಆಶ್ರಮ, ಅರಣ್ಯ ಪರಿಸರವನ್ನು ಮೇಘಗಳಿಂದ ತುಂಬಿದ ಆಕಾಶದಂತೆ ಕಂಗೊಳಿಸಿತು. ಆ ಗೋವುಗಳಲ್ಲಿ ಕೆಲವು ಪದ್ಮವರ್ಣದವು; ಕೆಲವು ಮುತ್ತುಗದ ಹೂವಿನ ಬಣ್ಣದವು; ಮತ್ತೆ ಹಲವು ಚಿನ್ನದ ಬಣ್ಣದವು; ಮತ್ತೆ ಕೆಲವು ಚಂದ್ರನ ಕಿರಣಗಳನ್ನು; ಇನ್ನು ಕೆಲವು ಬೆಳ್ಳಿಯ ಬಣ್ಣವನ್ನು; ಕೆಂಪು ಬಣ್ಣ ನೀಲಿ ಬಣ್ಣ ಲೋಹಿತ, ತಾಮ್ರ, ಕೃಷ್ಣ ಕಪಿಲ ಬಣ್ಣಗಳನ್ನು ಹೊಂದಿ ವಿಚಿತ್ರವಾಗಿ ಕಾಣುತ್ತಿದ್ದ ಗೋವಿನ ಗುಂಪುಗಳು ಕಣ್ಣಿಗೆ ಹಬ್ಬ ತರಿಸುತ್ತಿದ್ದವು[2].

## ಭಾರ್ಗವನನ್ನು ಕೊಲ್ಲಲು ನಿಶ್ಚಯ-ಗೋವುಗಳಿಂದ

ಒಮ್ಮೆ ತಮ್ಮ ಇಚ್ಛೆಗಳಿಗನುಸಾರವಾಗಿ ಬೇಡಿದ ರೂಪಗಳನ್ನು ತೆಗೆದುಕೊಳ್ಳುವ ಸಾಮರ್ಥ್ಯವುಳ್ಳ ಪುಣ್ಯವಂತರಾದ ಗೋವುಗಳು ಸ್ತ್ರೀರೂಪ ಧರಿಸಿ, ಒಂದು ಸರೋವರದಲ್ಲಿ ಆನಂದದಿಂದ ಹಾಡುತ್ತಾ ವಿಹರಿಸುತ್ತಿದ್ದಾಗ ಅವನ್ನು ನೋಡಿದ (ಬೇರೆ) ಗೋವುಗಳು 'ನೀವು ಯಾರು' ಎಂದು ಕೇಳಿದವು. ಅದಕ್ಕೆ ಆ ಸ್ತ್ರೀಯರು 'ನಾವು ಸತ್ಕರ್ಮ ಮಾಡಿದ ಗೋವುಗಳೇ. ನಾವೆಲ್ಲ ಸ್ತ್ರೀವೇಷಧರಿಸಿ ಸ್ವೇಚ್ಛೆಯಿಂದ ಸಂಚರಿಸುತ್ತಿದ್ದೇವೆ. ಇದನ್ನು ಕೇಳಿದ

---

೧ ಸ ತಾಂ ಲಬ್ಧ್ವಾ ಧರ್ಮಶೀಲ................ ।
ಸುಮಿತ್ರಃ ಪರಯಾ ಭಕ್ತ್ಯಾ ಜನನೀಮಿವ ಮಾತರಮ್ ॥
ತೇನ ಸಂಧ್ಯಕ್ಷ್ಯಮಾಣಾ ಸಾ ರೋಹಿಣೀ ಕಾಮಚಾರಿಣೀ ।
ವಿವೃದ್ಧಿಮಾಗಮತ್ ಶ್ರೇಷ್ಠಾ ಪ್ರಾಣತಶ್ಚ ಸುದರ್ಶನಮ್ ॥
ಪ್ರಾಜಾಪತ್ಯೈರ್ಗವಾಂ ನಿತ್ಯಂ ಪ್ರಶಸ್ತೈರ್ಲಕ್ಷಣೈರ್ಯುತಾ ।
ಯೌವನಸ್ಥೇನ ವನಿತಾ ಶುಶುಭೇ ರೂಪಶೋಭಯಾ ॥ - ೧೧೫/೧೩-೧೮

೨ ಯೂಯಂ ತು ಸರ್ವಾ ರೋಹಿಣ್ಯಃ ಸ ಪ್ರಜಾಃ ಸಹಪುಂಗವಾಃ ।
ಅಧೋಗಾಮಿನ್ಯ ಇತ್ಯೇವ ಪಶ್ಯಾಮೋ ಜ್ಞಾನಚಕ್ಷುಷಾ ॥ - ೧೧೬/೮

ಗೋವುಗಳು 'ಗೋವುಗಳಿಗೆ ಗೋವುಗಳೇ ಶ್ರೇಷ್ಠ ದೇವತೆ. ಅವೇ ಪರಗತಿ. ನಿಮಗೆ ಯಾವ ಸತ್ಕರ್ಮಾನುಷ್ಠಾನದಿಂದ ಪರಗತಿ ಉಂಟಾಯಿತು?' ಹೇಳಿರಿ ಎಂದಾಗ, ಆ ಸ್ತ್ರೀಯರು

೧. ನಮ್ಮ ಹವಿಸ್ಸಿನಿಂದ (ಹಸುವಿನ ಉತ್ಪನ್ನಗಳಾದ ಹಾಲು, ಮೊಸರು, ತುಪ್ಪ..) ದೇವತೆಗಳು, ಬ್ರಾಹ್ಮಣರು ತೃಪ್ತರಾಗುತ್ತಾರೆ.

೨. ಕವ್ಯದಿಂದ ಪಿತೃಗಳು, ಹವ್ಯದಿಂದ ಅಗ್ನಿ ತೃಪ್ತನಾಗುತ್ತಾನೆ (ಕವ್ಯ ಪಿತೃಗಳನ್ನು ಉದ್ದೇಶಿಸಿ ಕೊಡುವ ಅನ್ನ, ಹವ್ಯ ದೇವತೆಗಳಿಗೆ ಅರ್ಪಿಸುವ ಹೋಮದ್ರವ್ಯ. ಅನ್ನ ತುಪ್ಪ ಹಾಲು, ಪಾಯಸ, ಅಮೃತಬಳ್ಳಿ, ಗೋಧಿ, ಎಳ್ಳು ಇತ್ಯಾದಿ).

೩. ನಮ್ಮಸಂತತಿಯಿಂದಕೃಷಿಕಾರ್ಯಗಳಿಗೆಅನುಕೂಲ(ಭೂಮಿಸಿದ್ಧಮಾಡುವುದರಿಂದ ಬಿತ್ತುವುದು, ಅಂತರಬೇಸಾಯ, ಧಾನ್ಯ ಬೇರ್ಪಡಿಸುವುದು ಇತ್ಯಾದಿ..) ಧಾನ್ಯ ಮತ್ತು ಜನರನ್ನು ಕೂಡಿಸಿಕೊಂಡು ಪ್ರಯಾಣಿಸುವುದು ಇತ್ಯಾದಿ. ಇಂತಹ ಸತ್ಕರ್ಮಗಳಿಂದ ಗೋಲೋಕಪ್ರಾಪ್ತಿ. ಅಲ್ಲೂ ಯಥೇಚ್ಛೆಯಿಂದ ಸಂಚಾರವಿರುತ್ತದೆ. ಆದರೆ ನೀವಾದರೋ ನಿಮ್ಮ ಪ್ರಜೆಗಳಿಂದ ವೃಷಭ(ಎತ್ತು)ಗಳಿಂದ ಕೂಡಿದವರು, ಅಧೋಗತಿಗೆ ಹೋಗುವಿರೆಂದು ನಾವು ದಿವ್ಯದೃಷ್ಟಿಯಿಂದ ಕಂಡು ಕೊಂಡಿದ್ದೇವೆ.

---

೧ **ಗಾವಃ ಊಚುಃ**
ಗವಾಂ ಗಾವಃ ಪರಂ ದೈವಂ ಗವಾಂ ಗಾವಃ ಪರಾ ಗತಿಃ।
ಕಥಯಧ್ವಮಿಹಾಸ್ಮಾಕಂ ಕೇನ ವಾ ಸುಕೃತಾಂ ಗತಿಃ॥ - ೧೧೬/೪
ಸ್ತ್ರಿಯ ಊಚುಃ
ಅಸ್ಮಾಕಂ ಹವಿಷಾ ದೇವಾ ಬ್ರಾಹ್ಮಣಾಸ್ತರ್ಪಿತಾಸ್ತಥಾ।
ಕವ್ಯೇನ ಪಿತರಶ್ಚೈವ ಹವ್ಯೇನಾಗ್ನಿಶ್ಚ ತರ್ಪಿತಃ॥ - ೧೧೬/೫
ತದೇತೈಃ ಸುಕೃತೈಃ ಸ್ತ್ರೀತೈಃ.............................. ।
ಗೋಲೋಕಮನು ಸಂಪ್ರಾಪ್ತಾ ಯಃ ಪರಃ ಕಾಮಗೋಚರಃ॥ - ೧೧೬/೭
**ಕಪಿಲಗಾವಃ ಊಚುಃ**
ವಯಂ ನ ಚಾನನುಜ್ಞಾತಾಃ ಶಕ್ತಾ ಗಂತುಂ ಕಥಂಚನ।
ಅವೋಚನ್ನಥ ತತ್ರತ್ಯಾ ಭಾರ್ಗವೋ ವಧ್ಯತಾಮಯಮ್॥
ನ ತು ತಾಸಾಂ ಸಮೇತಾನಾಂ ಕಾಚಿತ್ ಘೋರೇಣ ಚಕ್ಷುಷಾ।
ಶಕ್ನೋತಿ ಭಾರ್ಗವಂ ದ್ರಷ್ಟುಂ ಸತ್ಕೃತೇನೋಪಸಂಯುತಾ॥
ವಯಂ ಹಿ ತಂ ವಧಿಷ್ಯಾಮಃ ಸುಮಿತ್ರಂ ನಾತ್ರ ಸಂಶಯಃ।
ಸುಕೃತಂ ಪೃಷ್ಠತಃ ಕೃತ್ವಾ ಕಿಂ ನಃ ಶ್ರೇಯೋ ವಿಧಾಸ್ಯಥ॥
ಗಾವಃ ಊಚುಃ
ಕಪಿಲಾ ಸರ್ವವರ್ಣೇಷು ಪ್ರಧಾನತ್ವಮವಾಪ್ಸ್ಯಥ।
ಗವಾಂ ಶತಫಲಾಚ್ಚೈಕಾಂ ದತ್ವಾ ಫಲಮವಾಪ್ಸ್ಯತಿ॥ ಇತ್ಯಾದಿ। - ೧೧೬/೧೫-೨೨

ಈ ಮಾತುಗಳನ್ನು ಕೇಳಿದ ಗೋವುಗಳು 'ಗೋವುಗಳಿಗೆ ಗೋವುಗಳೇ ಶ್ರೇಷ್ಠದೇವತೆ. ನಿಮಗೆ ಶರಣಾಗತರಾಗಿದ್ದೇವೆ. ನೀವೇ ನಮ್ಮನ್ನು ಗೋಲೋಕ ಪಡೆಯಲು ನೀವೇ ನಮಗೆ ಸಹಾಯಕರಾಗಬೇಕು. ನಮ್ಮನ್ನು ದಾಟಿಸಬೇಕು(ಸಂಸಾರದಿಂದ) ಎಂದಾಗ ಆ ಸ್ತ್ರೀಯರು. 'ರಂತಿದೇವರಾಜನ ಸತ್ರ(ಸಾವಿರ ವರ್ಷದ ಯಾಗ, ಯಜ್ಞ)ದಲ್ಲಿ ನೀವು ಯಜ್ಞಪಶುಗಳಾದಲ್ಲಿ ಯಜ್ಞಸಂಸ್ಕೃತರಾದ ನೀವು ಗೋಲೋಕ ಹೊಂದುವಿರಿ.[೧]'

ಸ್ತ್ರೀರೂಪ ಧರಿಸಿದ ಗೋವುಗಳ ಮಾತುಗಳನ್ನು ಕೇಳಿದ ಗೋವುಗಳು ರಂತಿದೇವನ ಬಳಿಗೆ ಹೋಗಲು ಇಚ್ಛೆಪಟ್ಟವು. ಅವುಗಳ ಸಮಸ್ಯೆ, ಭಾರ್ಗವ, ಸುಮಿತ್ರ, ತಮ್ಮನ್ನು ಅಲ್ಲಿಗೆ ಹೋಗಲು ಬಿಡುವುದಿಲ್ಲವೆಂದು. ಆತನು ಇಲ್ಲಿಯವರೆಗೆ ಮಾಡಿದ ಸತ್ಕಾರ ತಮಗೆ ಆಹಾರಾದಿಗಳನ್ನು ಕೊಟ್ಟು ಸಲಹಿದ ಉಪಕಾರದಿಂದಾಗಿ ಆತನನ್ನು ಕೇಳಲು ಅನುಮತಿ ಇಲ್ಲದೆ ಹೋಗುವುದು ಅಸಾಧ್ಯ ಎನಿಸಿದ್ದು, ಆತನನ್ನು ನೋಡುವುದು ಗೋವುಗಳಿಗೆ ಅಸಾಧ್ಯವೆಂದು ಭಾಸವಾಗಿ, ಆದರೆ ಗೋಲೋಕ ಪ್ರಾಪ್ತಿಯ ಲಾಭಕ್ಕಾಗಿ ಸುಮಿತ್ರನನ್ನು ಕೊಂದಾದರೂ ಹೋಗಲೇಬೇಕೆಂಬ ನಿರ್ಧಾರಕ್ಕೆ ಗೊವುಗಳು ಬಂದಾಗ ಕಪಿಲ ಗೋವುಗಳು ನಾವೇ ಸುಮಿತ್ರನನ್ನು ಕೊಲ್ಲುತ್ತೇವೆ ಎಂದು ಹೇಳಿದವು. ಮತ್ತು ನಮಗೆ ನೀವು ಯಾವ ಶ್ರೇಯಸ್ಸನ್ನು ಮಾಡುತ್ತೀರಿ ಎಂದಾಗ ಗೋವುಗಳು 'ನೀವು ಗೋವುಗಳಲ್ಲೆಲ್ಲ ಪ್ರಾಧಾನ್ಯ ಹೊಂದುವಿರಿ. ನೂರು ಗೋವುದಾನ ಮಾಡಿದ ಫಲ ಒಂದು ಕಪಿಲ ಗೋದಾನ ಮಾಡಿದ ಆಗಲಿ' ಎಂದು ಹೇಳಿದಾಗ, ಕಪಿಲ ಗೋವುಗಳು ಒಪ್ಪಿ ಸುಮಿತ್ರನ ವಧೆ ಮಾಡುವುದಾಗಿ ನಿಶ್ಚಯ ಮಾಡಿದವು.

ಸ್ತ್ರೀವೇಷಧಾರಿಗಳಾದ ಸ್ವರ್ಗದಿಂದ ಬಂದ ಯಥೇಚ್ಛಯಿಂದ ವಿಹಾರ ಮಾಡುತ್ತಿದ್ದ ಗೊಮಾತೆಯರು ಸುಮಿತ್ರನ ಬಳಿಗೆ ಬಂದು 'ಎಲೈ ಋಷಿಯೇ! ನಾವು ಗೋಲೋಕದಿಂದ ಬಂದ ಗೋಮಾತೆಯರು. ನೀನು ಗೋವುಗಳ ಬಗ್ಗೆ ಹೊಂದಿರುವ ಅತ್ಯುತ್ತಮ ಸೇವಾ ಬುದ್ಧಿಯಿಂದ ನಮಗೆ ತುಂಬಾ ಸಂತೋಷವಾಗಿದೆ. ನಿನಗೆ ಬೇಕಾದ ವರವನ್ನು ಕೇಳು' ಎಂದರು. ಅದನ್ನು ಕೇಳಿದ ಸುಮಿತ್ರನು 'ತಮ್ಮ ಮಾತಿನಿಂದ ನಾನು ತುಂಬಾ ಅನುಗ್ರಹೀತನಾಗಿದ್ದೇನೆ. ತುಂಬಾ ಸಂತೋಷವಾಗಿದೆ. ನನಗೆ ಗೋಭಕ್ತಿ, ಬುದ್ಧಿ ಈಗಿರುವಂತೆ ಸದಾ ಇರಲಿ. ಗೋಹತ್ಯೆ ಮಾಡುವವರು ನಾಶವಾಗಲಿ. ಬ್ರಹ್ಮದ್ವೇಷಿಗಳೂ ನಾಶವಾಗಲಿ' ಎಂದನು. ಅದಕ್ಕೆ ಅವರು 'ನಮಗೆ ಪ್ರಿಯವನ್ನೇ ಮಾತನಾಡುವ ನೀನು ನಮ್ಮೊಡನೆ ಗೋಲೋಕಕ್ಕೆ ಬಾ' ಎಂದರು. ಸುಮಿತ್ರನು 'ತಾವು ತಮಗೆ ಇಷ್ಟ ಬಂದಂತೆ ಹೋಗಿ. ನನಗೆ ಪ್ರಿಯವಾದ

---

೧ ವರ್ತತೇ ರಂತಿದೇವಸ್ಯ ಸತ್ರಂ ವರ್ಷಸಹಸ್ರಕಮ್ ।
ತತ್ರ ತಸ್ಯ ನೃಪಸ್ಯಾಶು ಪಶುತ್ವಮುಪಗಚ್ಛತ ॥
ತತಸ್ತಸ್ಯೋಪಯೋಗೇನ ಪಶುತ್ವೇ ಯಜ್ಞಸಂಸ್ಕೃತಾಃ ।
ಗೋ ಲೋಕಾನ್ ಪ್ರಾಪ್ಸ್ಯಥ ಶುಭಾಂಸ್ತೇನ ಪುಣ್ಯೇನ ಸಂಯುತಾಃ ॥ – ೧೧೬/೧೧,೧೨

ಗೋವುಗಳನ್ನು (ಶೋಚನೀಯ), ಗೋಸೇವೆಯನ್ನು ಬಿಟ್ಟ ಬರಲಾರೆ ಎಂದನು. ಆದರೆ ಆ ಗೋಮಾತೆಯರು ಕಪಿಲಾ ಗೋವುಗಳ ಭಯಂಕರ (ದಾರುಣ) ಮಾತುಗಳನ್ನು ಕೇಳಿದ್ದರಷ್ಟೇ. ಆದ್ದರಿಂದ (ಭಾರ್ಗವವಧೆಯಾಗದಿರಲೆಂದು) ಅವನ ಶರೀರವನ್ನು ಇಲ್ಲಿಯೇ ಬಿಟ್ಟು ಸೂಕ್ಷ್ಮಶರೀರವನ್ನು ಎತ್ತಿಕೊಂಡು ಹೋಗಿ ಕಪಿಲ ಗೋವುಗಳ ನಿರ್ಧಾರವನ್ನು ತಿಳಿಸಿ ತಾವು ಗೋಲೋಕಕ್ಕೆ ಕರೆದುಕೊಂಡು ಹೋಗಲು ಕಾರಣವನ್ನು ಹೇಳಿದರು. ನಂತರ ಕಪಿಲಗೋವುಗಳು ತಮ್ಮ ಯೋಜನೆಯಂತೆ ಸುಮಿತ್ರನಿದ್ದಲ್ಲಿಗೆ ಬರಲು, ಅಲ್ಲಿ ಅವನ ಶರೀರಮಾತ್ರ ನೋಡಿ, ಅದನ್ನು ತಮ್ಮ ಕೊಂಬು ಹಾಗೂ ಗೊರಸುಗಳಿಂದ ಪುಡಿ ಪುಡಿ ಮಾಡಿ, ಇತರ ಗೋವುಗಳಿಗೆ ಇದೆಲ್ಲವನ್ನು ತಿಳಿಸಿದವು(ಇದೆನ್ನೆಲ್ಲ ನೋಡಿದ) ಗೋಮಾತೆಯರು ಆ ಗೋವುಗಳಿಗೆ ಬ್ರಹ್ಮಹತ್ಯೆ ಮಾಡಿದ ನೀವು ಅಮೇಧ್ಯ ಮುಖರಾಗಿರಿ ಎಂದು ಶಪಿಸಿದರು. ಹೀಗೆ ಗೋವುಗಳು ಗೋಮಾತೆಯರಂತೆ ಕೃತಜ್ಞವಾದವು. ಭಾರ್ಗವ ಋಷಿಯೂ ಗೋಲೋಕವನ್ನು ಹೊಂದಿದನು. ಗೋವುಗಳು ಬಿಡಿಸಲ್ಪಟ್ಟವು[೧].

(ವಿ.ಸೂ. : ಭಾರ್ಗವನನ್ನು ವಧೆ ಮಾಡಿದ ಗೋವುಗಳು ಹೇಗೆ ತಾನೇ ಕೃತಜ್ಞರಾಗುತ್ತವೆ? ಕೃತಜ್ಞಾ ಶಬ್ದದ ಬದಲಿಗೆ ಕೃತಘ್ನಾ ಎಂದಿರಬೇಕಿತ್ತೇನೋ ಮತ್ತು ಗೋಮಾತೃಗಳು ಮಾತ್ರ ಸುಮಿತ್ರನನ್ನು ತಮ್ಮ ಲೋಕಕ್ಕೆ ಕರೆದುಕೊಂಡು ಹೋಗಿ ಉಪಕಾರ ಮಾಡಿವೆ. ಈ ಶ್ಲೋಕ ಸರಿಯಾಗಿಲ್ಲವೆನಿಸುತ್ತದೆ (೧೪ನೇ ಶ್ಲೋಕ). ಆದರೆ ಸಂಸ್ಕೃತ ಸಂಪಾದನೆಯಲ್ಲೂ ಹೀಗೆಯೇ ಇದೆ. ಆದ್ದರಿಂದ ಈ ಬಗ್ಗೆ ವಿಚಾರ ಮಾಡುವುದು ಅವಶ್ಯ. ಅಥವಾ ನಾನೇ (ಸರಿಯಾಗಿ ಅರ್ಥ ಮಾಡಿಕೊಂಡಿಲ್ಲವೇ?).

ಇತ್ತ ಎಲ್ಲ ಗೋವುಗಳು ರಂತಿದೇವನ ಯಜ್ಞದ ಕಡೆ ಹೋಗಿ ಅಲ್ಲಿದ್ದ ಮಹರ್ಷಿಗಳ ಸಮಕ್ಷಮ ತಮ್ಮನ್ನು ಪರಿಚಯ ಮಾಡಿಸಿಕೊಂಡವು. ರಾಜನು ಅವುಗಳಿಗೆ ನಮಿಸಿ ಆಗಮನದ ಉದ್ದೇಶ ಕೇಳಿದ. ಗೋವುಗಳು ತಮ್ಮನ್ನು ಸತ್ರದಲ್ಲಿ ಪಶುವಾಗಿ ಸ್ವೀಕರಿಸಲು ಪ್ರಾರ್ಥಿಸಿದಾಗ, ರಾಜನು ನೂರಾರು ಸಾವಿರಾರು ಸಂಖ್ಯೆಯ ಗೋವುಗಳನ್ನು ಪಶುತ್ವೇನ ಹತ್ಯೆ ಮಾಡಲು ನಾನು ಸಮರ್ಥನಲ್ಲ, ನಿಮ್ಮನ್ನು ಹತ್ಯೆ ಮಾಡಿದರೆ ನಾನು ಉದ್ಧಾರವಾಗುವುದು ಹೇಗೆ? ನಿಮ್ಮನ್ನು ಪಶುಗಳನ್ನಾಗಿ ಮಾಡಿ ಸ್ವರ್ಗಕ್ಕೆ ಕರೆದೊಯ್ಯುವಂತಹ ಯಜಮಾನನ(ಯಾಜ್ಯ)

---

೧ ತತಸ್ತು ಕಪಿಲಾಸ್ತತ್ರ ತಸ್ಯ ದೃಷ್ಟ್ವಾ ಕಳೇವರಮ್ ।
ತಥಾ ಪ್ರತಿಜ್ಞಂ ಶೃಂಗೈಶ್ಚ ಘುರೈಶ್ಚಾಪ್ಯವಚೂರ್ಣಯನ್ ॥
ಅಥ ಗೋಮಾತೃಭಿಃ ಶಪ್ತಾಸ್ತಾ ಗಾವಃ ಪೃಥಿವೀಚರಾಃ ।
ಅಮೇಧ್ಯವದನಾಃ ಕ್ಷಿಪ್ರಂ ಭವಧ್ವಂ ಬ್ರಹ್ಮಘಾತಕಾಃ ॥
ಏವಂ ಕೃತಜ್ಞಾ ಗಾವೋ ಹಿ ಯಥಾ ಗೋಮಾತರೋ ನೃಪ ।
ಋಷಿಶ್ಚ ಪ್ರಾಪ್ತವಾಂಲ್ಲೋಕಂ ಗಾವಶ್ಚ ಪರಿಮೋಕ್ಷಿತಾಃ ॥ - ೧೧೭/೧೧-೧೪

ಬಳಿಗೆ ಹೋಗಿರಿ ಎಂದನು. ಆಗ ಗೋವುಗಳು ನೀನು ನಮ್ಮನ್ನು ಉದ್ಧರಿಸಲು ಸಮರ್ಥ. ಧರ್ಮಾತ್ಮ ಹಾಗೂ ತಪಸ್ವಿ ಎಂದು ಕೇಳಿ ನಾವೇ ಸ್ವತಃ ಬಂದಿದ್ದೇವೆ[೧] ಎಂದರು.

ಅದಕ್ಕೆ ರಾಜನು 'ನಿಮಗೆ ಈ ಸತ್ರದಲ್ಲಿ ಪಶುವಾಗಲು ಆಸೆ ಇದ್ದಲ್ಲಿ ಒಂದು ಷರತ್ತಿಗೆ ಒಳಪಟ್ಟು ನಿಮ್ಮನ್ನು ಅಗ್ನಿಯಲ್ಲಿ ಹೋಮಿಸುತ್ತೇನೆ. ನಿಮ್ಮಲ್ಲಿ ಯಾರಾದರೂ ಯಾಗಮಧ್ಯದಲ್ಲಿ ಎಂದಾದರೂ ಪಶುತ್ವ ಬಯಸದಿದ್ದಲ್ಲಿ ಆಗಲೇ ಗೋ ಸತ್ರಯಾಗ ಸಮಾಪ್ತಿಯಾಗುತ್ತದೆ. ಇದಕ್ಕೆ ನಿಮ್ಮ ಒಪ್ಪಿಗೆ ಇದೆಯಾ? ಎಂದನು. ಗೋವುಗಳು ಒಪ್ಪಿದವು. ಗೋವುಗಳು ಪಶುತ್ವವನ್ನು ಯಾವಾಗ ಇಚ್ಛಿಸುವುದಿಲ್ಲವೋ ಆಗ ಯಜ್ಞ ನಿಲ್ಲಲಿ[೨] ಎಂದವು.

ಆಮೇಲೆ ನಡೆದ ಸತ್ರಯಾಗದಲ್ಲಿ ಪ್ರತಿದಿನವೂ ಸಹಸ್ರಗೋವುಗಳು ಯಜ್ಞಕ್ಕಾಗಿ ವಿನಿಯೋಗವಾದವು. ಹೀಗೆ ಅನೇಕ ವರ್ಷಗಳು ನಡೆಯಿತು ಯಾಗ. ಅಲ್ಲಿ ಸಹಸ್ರಾರು ಚರ್ಮಗಳ ರಾಶಿ, ಪರ್ವತದಂತಾಯಿತು. ಗೋವುಗಳ ಮೇದಸ್ಸು ರಕ್ತದ ನದಿಯೇ ಹರಿಯಿತು. ಆ ನದಿಯು ಈಗಲೂ '**ಚರ್ಮಣ್ವತೀ**' ಎಂದು ವಿಖ್ಯಾತವಾಗಿದೆ ಎಂದು ಭೀಷ್ಮರು ಧರ್ಮರಾಜನಿಗೆ ಹೇಳುತ್ತಾರೆ.

'ಒಮ್ಮೆ ಒಂದು ಹಸು ತನ್ನ ಕರುವನ್ನು ಕರೆದು 'ಮಗು! ಬೇಗ ಬಾ. ನನ್ನ ಸ್ತನ ಮಾಡು. ನನ್ನನ್ನು ಕೊಲ್ಲಲು ಚಂಡಾಲ ಶಸ್ತ್ರಗಳನ್ನು ಹಿಡಿದು ಕೊಂಡು ಬರುತ್ತಿದ್ದಾನೆ. ನಾನು ಸತ್ತ ಮೇಲೆ ನಿನಗೆ ನನ್ನ ಹಾಲು ಸಿಗದು ಎಂದು ದುಃಖದಿಂದ ಹೇಳಿತು[೩]. ಮನುಷ್ಯರ ಮಾತಿನಂತಿರುವ ಮಾತನ್ನು ಕೇಳಿದ ರಂತಿದೇವನು ಆ ಗೋವನ್ನು (ಅದನ್ನು ಹೋಮಕ್ಕಾಗಿ ಉಪಯೋಗಿಸುವುದನ್ನು)

---

೧ ಗಾವಃ
ಇಚ್ಛಾಮಸ್ತವ ರಾಜೇಂದ್ರ ಸತ್ರೇಽಸ್ಮಿನ್ ವಿನಿಯೋಜನಮ್ ।
ಪಶುತ್ವಮುಪಸಂಪ್ರಾಪ್ತಂ ಪ್ರಸಾದಂ ಕರ್ತುಮರ್ಹಸಿ ॥ – ೮/೩

೨ ರಂತಿದೇವ –
ಕದಾಚಿತ್ ಯದಿ ವಃ ಕಾಚಿದಕಾಮಾ ವಿನಿಯುಜ್ಯತೇ ।
ತದಾಸಮಾಪ್ತಿಃ ಸತ್ರಸ್ಯ ಗವಾಂ ಸ್ಯಾದಿತಿ ನೈಷ್ಠಿಕೀ ॥ – ೧೧೮/೮

೩. ತದಾ ಕದಾಚಿತ್ ಸ್ವಂ ವತ್ಸಂ ಗೌರುಪಾಮಂತ್ರ್ಯ ದುಃಖಿತಾ ।
ಏಹಿ ವತ್ಸ ಸ್ತನಂ ಪಿಬ ಮಾ ತ್ವಂ ಪಶ್ಚಾತ್ ಕ್ಷುಧಾರ್ದಿತಃ ॥
ತಪ್ಸ್ಯಸೇ ವಿಮನಾ ದುಃಖಂ ಘಾತಿತಾಯಾಂ ಮಯಿ ಧ್ರುವಮ್ ।
ಏತೇ ಹ್ಯಾಯಾಂತಿ ಚಂಡಾಲಾ ಸಶಸ್ತ್ರಾ ಮಾಂ ಜಿಘಾಂಸವಃ ॥
ಅಥ ಶುಶ್ರಾವ ತಾಂ ವಾಣೀಂ ಮಾನುಷೀಂ......
ರಂತಿದೇವೋ ಮಹಾರಾಜ ತತಸ್ತಾಂ ಸಮವಾರಯತ್ ।
ಸ್ಥಾಪಯಾಮಾಸ ಗೋ ಸತ್ರಂ ..................
ಯಾಸ್ತಸ್ಯ ಗಾವೋ ನಿಹತಾಃ ಗಾವೋ ಯಜ್ಞೇ ಮಹಾತ್ಮನಃ ।
ತಾ ಗೋಲೋಕಮುಪಾಜಗ್ಮುಃ ಪ್ರೋಕ್ಷಿತಾ ಬ್ರಹ್ಮವಾದಿಭಿಃ ॥

ತಡೆದು, ಯಜ್ಞ ನಿಲ್ಲಿಸಿದ. ಇನ್ನೂ ಉಳಿದ ಗೋವುಗಳೂ ಯಾಗಕ್ಕೆ ವಿನಿಯೋಗವಾಗಲಿಲ್ಲ. ವಿನಿಯೋಗವಾದ ಗೋವುಗಳು ಬ್ರಹ್ಮವಾದಿಗಳಿಂದ ಪ್ರೋಕ್ಷಿಸಲ್ಪಟ್ಟವುಗಳಾಗಿ ಗೋಲೋಕ ಸೇರಿದವು. ಉಳಿದ ಗೋವುಗಳು ಸೇರಲಿಲ್ಲ.

ರಾಜರ್ಷಿ ರಂತಿದೇವನೂ ಕೂಡಾ ಗೋಸತ್ರಯಾಗವನ್ನು ವಿಧ್ಯುಕ್ತವಾಗಿ ಮಾಡಿ ಇಂದ್ರನ ಸ್ನೇಹ ಸಂಪಾದಿಸಿ ಅಕ್ಷಯವಾದ ಸ್ವರ್ಗಕ್ಕೆ ಹೋದನು[೧].

ಫೇನಪನೂ (ಸುಮಿತ್ರನು) ಗೋಲೋಕದಲ್ಲಿ ಬಹುವರ್ಷಕಾಲ ಕಳೆದನು. ಉಳಿದವು ಕಾಡಿನಲ್ಲಿ ತಿರುಗಾಡಿದವು.

ವ್ಯಾಸರು ಹೇಳಿದ ಫೇನಪಾಖ್ಯಾನವನ್ನು ಮತ್ತು ಗೋವಿನ ಮಾಹಾತ್ಮ್ಯೆ ನಿನಗೆ ಹೇಳಿದ್ದೇನೆ. ಅಷ್ಟೇಕೆ ನಾರಾಯಣನೂ ಗೋವುಗಳ ಮಾಹಾತ್ಮ್ಯೆ ಕೇಳಿ ಅವುಗಳಲ್ಲಿ ಭಕ್ತಿ ಮಾಡಿದ್ದಾನೆ (ಅಂದರೆ ಇದು ಭಗವಂತನಿಗೆ ಸಮ್ಮತವಾದುದು ಎಂದು ತಾತ್ಪರ್ಯ). ಆದ್ದರಿಂದ ಧರ್ಮರಾಜನೇ ನೀನೂ ಕೂಡಾ ಗೋಪೂಜಕನಾಗು - ಗೋದಾನ ಮಾಡು' ಎಂದು ಭೀಷ್ಮರು ಧರ್ಮರಾಜನಿಗೆ ಹೇಳಿದರು.

## ಸಂದೇಶಗಳು-ವಿವರಣೆಗಳು

೧. ಸುಮಿತ್ರ ಒಬ್ಬ ಆದರ್ಶ ಗೋಸೇವಕ. ಗೋಸೇವೆ ಮಾಡಿದರೂ ಅದರ ಹಾಲನ್ನಾಗಲೀ, ಎಂದೂ ಕುಡಿಯದೇ ಸೇವೆ ಮಾಡಿದ ನಿಃಸ್ವಾರ್ಥಿ. ತನಗೆ ಹಸಿವು ಬಾಯಾರಿಕೆಯಾದರೂ ಗೋವಿನ ಹಾಲು ಗೋವುಗಳಿಗೆ ಮೀಸಲಾಗಿರಿಸಿದ ನಿಃಸ್ವಾರ್ಥಿ. ಆದರೆ ಹಸಿವು ನಿವಾರಣೆಗೆ ಕೇವಲ ಕರುವಿನ ಬಾಯಿಯಿಂದ ಬಂದ ನೊರೆಯನ್ನು ಮಾತ್ರ ಕುಡಿದು ಜೀವಿಸಿದ. ಪ್ರತಿಗೋಪಾಲಕ ಹೀಗಿರಬೇಕು, ಅವನ ಈ ತಪಸ್ಸು ಗೋಲೋಕಕ್ಕೆ ಕರೆದುಕೊಂಡು ಹೋಗಲು ಸಾಧನವಾಯಿತು.

೨. ಗೋಮಾತೆಯರು ಗೋಲೋಕಕ್ಕೆ ಬರಲು ಕರೆದರೂ ಗೋಸೇವೆಯಲ್ಲಿಯೇ ತನ್ನ ಸಾರ್ಥಕ್ಯ ತಿಳಿದ. ಆತ ವಧೆಗೆ ನಿಶ್ಚಯಿಸಿದ್ದ ಗೋವುಗಳ ವರ್ತನೆ ಆತಗೆ ಗೊತ್ತಿದ್ದಿಲ್ಲ.

೩. ಸುಮಿತ್ರನಿಂದ ಉಪಕೃತವಾದ ಗೋವುಗಳು ಅವನನ್ನೇ ವಧಿಸಲು ಯೋಜಿಸಿದವು. ಉಪಕಾರ ಮಾಡಿದವರಿಗೆ ಅಪಕಾರ ಮಾಡಿದ ರೀತಿ ಇತಿಹಾಸದಲ್ಲಿ ಹೊಸದೇನಲ್ಲ. ಆದರೆ ಗೋವುಗಳಲ್ಲಿ ಈ ವರ್ತನೆ ಅಪರೂಪ. ಆದರೆ ಅವುಗಳ ಉದ್ದೇಶ ಗೋಲೋಕಕ್ಕೆ ಹೋಗುವುದಾಗಿತ್ತು. ಗೋವಧೆಗೆ ಸುಮಿತ್ರನ ಒಪ್ಪಿಗೆ ಸಿಗದೆಂದು ಅವೆಲ್ಲ ಭಾವಿಸಿಯೇ ಆತನ ವಧೆಗೆ ನಿಶ್ಚಯಿಸಿದ್ದವು. ಆತನ ಶರೀರವನ್ನು ತುಳಿದು ತುಳಿದು ಪುಡಿ ಮಾಡಿ ಕೊಂದೆವೆಂಬ

---

೧ ರಂತಿದೇವೋಽಪಿ ರಾಜರ್ಷಿಃ ಇಷ್ಟ್ವಾ ಯಜ್ಞಂ ಯಥಾ ವಿಧಿ।
ತತಃ ಸಖ್ಯಂ ಸುರಪತೇಃ ತ್ರಿದಿವಂ ಚಾಕ್ಷಯಂ ಯಯೌ॥ - ೧೧೮/೧೪-೧೯

ಭ್ರಮೆಗೆ ಒಳಗಾದುದು, ಮತ್ತೊಂದು ಆಶ್ಚರ್ಯ. ಇದು ತುಂಬಾ ವಿಚಾರ್ಯ. ಇಬ್ಬರಿಗೂ ಗೋಲೋಕ ಸಿಕ್ಕಿತು.

೪. ಗೋಮಾತೆಯರ ಕೃತಜ್ಞತೆ ಸ್ಮರಣೀಯ ಗೋವುಗಳ ಕೆಟ್ಟ ಉದ್ದೇಶ ಹೇಳಿ ಸುಮಿತ್ರನನ್ನು ಗೋಲೋಕಕ್ಕೆ ಗೋಮಾತೆಯರು ಕರೆದುಕೊಂಡು ಹೋಗುತ್ತವೆ. ನಮ್ಮ ಪರಿಸರದಲ್ಲಿ ಯಾರು ಎಂತಹವರು ಎಂಬುದನ್ನು ತಿಳಿದು ನಾವು 'ಮಿತ್ರ'ರಂತೆ ವರ್ತಿಸಬೇಕು (ಮಿನೋತಿ ತ್ರಾಯತೇ ಇತಿ ಮಿತ್ರಮ್).

೫. ರಂತಿದೇವನ ಸತ್ರಯಾಗದಲ್ಲಿ ಸಹಸ್ರಾರು ಗೋವಧೆಯಾದರೂ ಅವುಗಳಿಗೆಲ್ಲ ಗೋಲೋಕ ಪ್ರಾಪ್ತಿಯಾಗಿ, ತೋರಿಕೆಗೆ ಗೋಹತ್ಯಾಯಜ್ಞ, ಫಲಿತಾಂಶ ಗೋವುಗಳಿಗೆ ಸದ್ಗತಿ. ಆದ್ದರಿಂದಲೇ ಇರಬೇಕು '**ವೈಧೀ ಹಿಂಸಾ ನ ಪಾಪಸಾಧನಂ**' ಎಂಬ ಆರ್ಷಮಾತು ವೈದಿಕ ಹಿಂಸೆಯ ಬಗ್ಗೆ ಬೆಳಕು ಚೆಲ್ಲುವ ಈ ಉಪಾಖ್ಯಾನ ತುಂಬಾ ವಿಚಾರಣೀಯವಾದುದು. ಸಾಕಷ್ಟು ವಿವಾದಾಸ್ಪದವಾಗಿದೆ ಎಂದು ಕೆಲವರು ಹೇಳುತ್ತಾರೆ.

೬. ಯಜ್ಞ ಮಾಡಿದ ರಂತಿದೇವನಿಗೆ ಪಾಪಘಟನೆಯಾಗಲಿಲ್ಲ. ಆತನು ಅಕ್ಷಯವಾದ ಸ್ವರ್ಗಕ್ಕೆ ಹೋದನು. ಆದ್ದರಿಂದ ಯಜ್ಞ ಕ್ಷತ್ರಿಯರಿಗೆ ವಿಹಿತವೆಂಬ ಪ್ರಮೇಯ ಇಲ್ಲಿದೆ. ಅದೂ ಕೂಡಾ ಪಶುಬಲಿಯಜ್ಞ.

೭. ಪಶುಯಜ್ಞ ಕೂಡಾ ಸ್ವಯಂ ಬೇಡಿ ಬಂದ ಪಶುಗಳಿಗೆ ಮಾತ್ರ ಇತ್ತು. ಅಪೇಕ್ಷೆ ಇಲ್ಲದವರೂ, ಅದು ಕಡ್ಡಾಯವಾಗಿದ್ದಿಲ್ಲವೆಂಬುದೂ ಮೊದಲೇ ರಾಜನು ಗೋವುಗಳಿಗೆ ಹೇಳಿದ್ದನೆಂಬುದೂ ಗಮನಾರ್ಹ. ಆದ್ದರಿಂದ ಮಾಂಸಕ್ಕಾಗಿ, ಯಾವುದೋ ಆಹಾರಕ್ಕಾಗಿ ಮಾಡುವ ಪಶುಬಲಿಯಾಗಿದ್ದಿಲ್ಲ ಈ ಯಜ್ಞ. ಇದು ಪೂರ್ಣವಾಗಿ ನಿಷ್ಕಾಮಕರ್ಮಯಜ್ಞ ಅಥವಾ ಸಕಾಮವಾದರೂ ಹರಿಪ್ರೀತಿಕಾಮನೆಯಿಂದ ಮಾಡಿದ್ದು ಎಂದೇ ತೋರುತ್ತದೆ. ಈ ಸಂಬಂಧಿಯಾದ ಎಲ್ಲ ಯಜ್ಞಗಳನ್ನು ತಾತ್ತ್ವಿಕವಾಗಿ ಅರ್ಥಮಾಡಿಕೊಳ್ಳಬೇಕು. ಈ ಬಗ್ಗೆ ಶಾಸ್ತ್ರೀಯ ಚಿಂತನೆ, ಚರ್ಚೆಗಳ ಅವಶ್ಯವಿದೆ.

ಇತ್ಯಾದಿ....

# ೧೪೯. ತಾರಕಾಸುರವಧೆ

ಧರ್ಮರಾಜನು ಪಿತಾಮಹ ಭೀಷ್ಮರನ್ನು ಪ್ರಶ್ನಿಸಿದ.

೧. ವೇದೋಪನಿಷತ್ತುಗಳಲ್ಲಿ ಎಲ್ಲ ಕರ್ಮಗಳಲ್ಲಿ ಯಾಗಗಳಲ್ಲಿ, ಭೂ, ಗೋ, ಸುವರ್ಣಗಳು ದಕ್ಷಿಣೆ ಎಂದು ಹೇಳಲ್ಪಟ್ಟಿವೆ.

೨. ವೇದವು '**ಸುವರ್ಣಂ ದಕ್ಷಿಣಾ**' ಎಂದು ಹೇಳುತ್ತದೆ. ಆದ್ದರಿಂದ ಸುವರ್ಣ ಯಾವುದು?, ಅದರ ಉತ್ಪತ್ತಿ, ಸ್ವರೂಪ, ಅದರ ದಾನದ ರೀತಿ, ದಾನದ ಫಲ, ಅದು ಏಕೆ ಶ್ರೇಷ್ಠ? ಜ್ಞಾನಿಗಳು ಸುವರ್ಣದಾನವನ್ನು ಏಕೆ ಗೌರವಿಸುತ್ತಾರೆ? ಯಜ್ಞಕರ್ಮಗಳಲ್ಲಿ ಅದಕ್ಕೆ ಏಕೆ ಪ್ರಾಶಸ್ತ್ಯ ಪ್ರಶಂಸಿಸುತ್ತಾರೆ? ಅದೇ ಏಕೆ ಭೂಮಿ ಹಾಗೂ ಗೋವುಗಳಿಗಿಂತ ಶ್ರೇಷ್ಠ? ಎಂಬೀ ವಿಷಯಗಳ ಬಗ್ಗೆ ಹೇಳು ಎಂದು ಪ್ರಶ್ನಿಸಿದ.

ಈ ಬಗ್ಗೆ ಭೀಷ್ಮರು ತಮ್ಮ ಅನುಭವ ಹಾಗೂ ಇತರೆ ಕಾರಣಗಳ ಸಮೇತವಾಗಿ ವಿಸ್ತಾರವಾಗಿ ಹೇಳಿದರು.

ಭೀಷ್ಮರು ತಮ್ಮ ಅನುಭವವನ್ನು ಮೊದಲು ಧರ್ಮರಾಜನಿಗೆ ಹೇಳುತ್ತಾರೆ.

'ನೋಡು ಧರ್ಮರಾಜ! ನಾನು ಒಮ್ಮೆ ನನ್ನ ತಂದೆ ಶಂತನುವಿನ ಶ್ರಾದ್ಧ ಮಾಡಲು '**ಗಂಗಾದ್ವಾರ' (ಹರಿದ್ವಾರ)**ಕ್ಕೆ ಹೋಗಿ, ಶ್ರಾದ್ಧ ಮಾಡುತ್ತಿದ್ದಾಗ ಪಿಂಡ ಸ್ವೀಕರಿಸಲು ನನ್ನ ತಂದೆ ಸಾಕ್ಷಾತ್ತಾಗಿ ತನ್ನ ಕೈಯೊಡ್ಡಿದ. ಆದರೆ ಅದು ನಿಷಿದ್ಧವಾದ್ದರಿಂದ ನಾನು ದರ್ಭೆಯಲ್ಲಿಯೇ ಅರ್ಪಿಸಿದೆ. ಇದರಿಂದ ಸಂತುಷ್ಟರಾದ ಪಿತೃಗಳು ಅಂದು ರಾತ್ರಿ ನನಗೆ ಸ್ವಪ್ನದಲ್ಲಿ ನನ್ನ ಕಾರ್ಯವನ್ನು ಮೆಚ್ಚಿ ಪ್ರಶಂಸಿಸಿ ಶ್ರಾದ್ಧ ನಿಮಿತ್ತ ಕೊಡಬೇಕಾದ ಭೂ, ಗೋದಾನಕ್ಕೆ ಪ್ರತ್ಯಾಮ್ನಾಯವಾಗಿ '**ಸುವರ್ಣ**'ವನ್ನು ಕೊಡು ಎಂದು ತಿಳಿಸಿದರು. ಸುವರ್ಣದಕ್ಷಿಣೆಯಿಂದ ನಾವು, ನಮ್ಮ ಪಿತಾಮಹರು ಪವಿತ್ರರಾಗುತ್ತೇವೆ. ಅಷ್ಟೇ ಅಲ್ಲ ಸುವರ್ಣದಾನದಿಂದ ಶ್ರಾದ್ಧಕರ್ತೃಗಳು ಕಷ್ಟಗಳಿಂದ ಮತ್ತು ನರಕದಿಂದ ಪಾರು ಮಾಡುತ್ತಾರೆ ಎಂದು ಪಿತೃದೇವತೆಗಳು ಹೇಳಿದರು. ಅನಂತರ ನಾನು ಎದ್ದು ಸುವರ್ಣದಾನ ಮಾಡಲು ನಿಶ್ಚಯಿಸಿದೆ[1].

'ಧರ್ಮರಾಜನೇ! ಪರಶುರಾಮದೇವರು ೨೧ ಬಾರಿ ಭೂಮಿಯನ್ನೆಲ್ಲ ಸುತ್ತಿ ದುಷ್ಟಕ್ಷತ್ರಿಯರನ್ನು ಸಂಹರಿಸಿ ನಂತರ ಎಲ್ಲ ಪ್ರಾಣಿಗಳ ತೇಜಸ್ಸನ್ನು ವೃದ್ಧಿ ಮಾಡುವ ಬ್ರಾಹ್ಮಣ ಕ್ಷತ್ರಿಯರಿಂದ ಪೂಜ್ಯವಾದ ಅಶ್ವಮೇಧ ಯಾಗ ಮಾಡಿದರು. ಯದ್ಯಪಿ ಪರಶುರಾಮದೇವರು ನಿಷ್ಪಾಪಿಯಾದರೂ (ಸ್ವಾಭಾವಿಕವಾಗಿ) ಲೋಕೋಪಕಾರಕ್ಕಾಗಿ ಆಗಮಸಂಪನ್ನರಾದ ಋಷಿಗಳನ್ನು, ದೇವತೆಗಳನ್ನು ಕುರಿತು 'ಕ್ರೂರ ಕರ್ಮ ಮಾಡುವವರನ್ನು ಪವಿತ್ರ ಮಾಡುವುದು ಯಾವುದಿದೆ?' ಎಂದು ಕೇಳಿದರು.

---

೧ ದಶಪೂರ್ವಾನ್ ದಶಪರಾಂಸ್ತಥಾ ಸಂತಾರಯಂತಿ ತೇ ।
ಸುವರ್ಣಂ ಯೇ ಪ್ರಯಚ್ಛಂತಿ ಏವಂ ಮೇ ಪಿತರೋಽಬ್ರುವನ್ ॥ – ೧೨೫/೨೭

**ವಿಪಾಪ್ಮಾऽಪಿ ಸ ತೇಜಸ್ವೀ............................ ।**
**ಪಪ್ರಚ್ಛಾಗಮಸಂಪನ್ನಾನ್ ಋಷೀನ್ ದೇವಾಂಶ್ಚ ಭಾರ್ಗವಃ।**
**ಪಾವನಂ ಯತ್ಪರಂ ನೄಣಾಮುಗ್ರೇ ಕರ್ಮಣಿ ವರ್ತತಾಮ್।**
**............ ಇತಿ ಜಾತ ಘೃಣೋऽಬ್ರವೀತ್ ॥ - ೧೨೫/೩೩-೩೫**

ಇದಕ್ಕೆ ವಸಿಷ್ಠರು ಉತ್ತರಿಸಿದರು -

'ಯಾರು ಸುವರ್ಣವನ್ನು ದಾನ ಕೊಡುತ್ತಾರೋ, ಅವರು ದೇವತೆಗಳನ್ನು ದಾನ ಮಾಡುತ್ತಾರೆ(ಮಾಡಿದಂತೆ). ಅಗ್ನಿಯು ಸರ್ವದೇವಸಾನ್ನಿಧ್ಯವುಳ್ಳವನು. ದೇವತೆಗಳೆಲ್ಲ ಹವಿಸ್ಸನ್ನು ಪಡೆಯುವುದು ಅಗ್ನಿಮೂಲಕ. ಆದ್ದರಿಂದ ಅಗ್ನಿಸರ್ವದೇವತೆಗಳಿಗೆ ದ್ವಾರಮೂಲ. ಸುವರ್ಣವೂ ಅಗ್ನಿಸ್ವರೂಪವೇ (ತೇಜೋರೂಪವೇ). ಆದ್ದರಿಂದ ಸುವರ್ಣಕ್ಕಿಂತ ಶ್ರೇಷ್ಠವಾದುದು ಮತ್ತೊಂದಿಲ್ಲ[೧].

ವಸಿಷ್ಠರು ಮುಂದುವರೆದು ಸುವರ್ಣದ ಬಗ್ಗೆ ಬ್ರಹ್ಮದೇವರು ಸ್ವಾಯಂಭುವಮನುವಿಗೂ, ರುದ್ರನಿಗೂ ಹಿಮಾಲಯ ಪರ್ವತದಲ್ಲಿ ಹೇಳಿದುದನ್ನು ನಾನೂ ಕೇಳಿದ್ದೆ. ಅದನ್ನೇ ನಿನಗೂ ಹೇಳುತ್ತೇನೆ ಕೇಳೆಂದರು (ಪರಶುರಾಮರಿಗೆ).

ರುದ್ರ ಹಾಗೂ ರುದ್ರಾಣಿಯರ (ಪಾರ್ವತಿಯರ) ವಿವಾಹವಾದ ಮೇಲೆ, ಅವರ ಸಮಾಗಮದ ಸಂದರ್ಭದಲ್ಲಿ (ಕಾರಣಾಂತರದಿಂದ) ಉದ್ವಿಗ್ನರಾದ ಎಲ್ಲ ದೇವತೆಗಳು ಬಂದು ರುದ್ರದೇವರಿಗೆ ನಿವೇದಿಸಿದರು.

ಭಗವನ್! ನೀನು ತಪಸ್ವಿ, ನಿನ್ನ ಪತ್ನಿ ಉಮಾದೇವಿ ತೇಜಸ್ವಿನೀ, ತಪಸ್ವಿನೀ. ನಿಮ್ಮ ಸಂಗಮದಿಂದ ಜನಿಸುವ ಪುತ್ರನು ಮೂರೂ ಲೋಕಗಳಲ್ಲಿ ಏನನ್ನೂ ಉಳಿಸುವುದಿಲ್ಲ. ಪುತ್ರನ ಸಲುವಾಗಿ ಜ್ವಲಿಸುವ ನಿನ್ನ ವೀರ್ಯವನ್ನು ನೀನು ತಡೆಹಿಡಿ, ಲೋಕಕಲ್ಯಾಣಕ್ಕಾಗಿ, ಎಂದು ಪ್ರಾರ್ಥಿಸಿದಾಗ ಶಿವನು ಒಪ್ಪಿ ಸಂತಾನೋತ್ಪಾದನೆ ಮಾಡದೆ ಹಾಗೆಯೇ ಆಗಲಿ ಎಂದ. ದೇವತೆಗಳ ಮಾತನ್ನು ಕೇಳಿದ ಉಮೆಯ ಸಿಟ್ಟಿನಿಂದ 'ಪುತ್ರನನ್ನು ಬಯಸಿದ ನನ್ನ ಪತಿಯನ್ನು ಆ ವಿಷಯದಿಂದ ಮನಸ್ಸನ್ನು ನಿವೃತ್ತಿಗೊಳಿಸಿರುವುದರಿಂದ ನೀವೆಲ್ಲರೂ ಪುತ್ರಹೀನರಾಗಿರಿ'[೩] ಎಂದು ಶಾಪ ಕೊಟ್ಟಳು.

---

೧ ದೇವತಾಸ್ತೇ ಪ್ರಯಚ್ಛಂತಿ ಸುವರ್ಣಂ ಯೇ ದದತ್ಯುತ।
ಅಗ್ನಿರ್ಹಿ ದೇವತಾಃ ಸರ್ವಾಃ ಸುವರ್ಣಂ ಚ ತದಾತ್ಮಕಮ್ ॥ - ೧೨೫/೩೬,೩೭

೨ ಅಪತ್ಯಂ ಯುವಯೋರ್ದೇವ ಬಲವದ್ ಭವಿತಾ ಪ್ರಭೋ।
ತನ್ನೂನಂ ತ್ರಿಷು ಲೋಕೇಷು ನ ಕಿಂಚಿತ್ ಶೇಷಯಿಷ್ಯತಿ ॥
ವರಂ ಪ್ರಯಚ್ಛ ಲೋಕೇಶ ತ್ರೈಲೋಕ್ಯಹಿತಕಾಮ್ಯಯಾ।
ಅಪತ್ಯಾರ್ಥಂ ನಿಗೃಹ್ಣೀಷ್ವ ತೇಜೋ ಜ್ವಲಿತಮುತ್ತಮಮ್ ॥ - ೧೨೫/೪೪, ೪೫

೩. ರುದ್ರಾಣೀ ತು ತತಃ ಕ್ರುದ್ಧಾ ಪ್ರಜೋಚ್ಛೇದೇ ತಥಾ ಕೃತೇ।
ಯಸ್ಮಾದಪತ್ಯಕಾಮೋ ವೈ ಭರ್ತಾ ಮೇ ವಿನಿವರ್ತಿತಃ।
ತಸ್ಮಾತ್ಸರ್ವೇ ಸುರಾ ಯೂಯಮನಪತ್ಯಾ ಭವಿಷ್ಯಥ ॥ - ೧೨೫/೪೮,೪೯

ಈ ಶಾಪಪ್ರಸಂಗದಲ್ಲಿ ಅಗ್ನಿದೇವ ಅಲ್ಲಿರಲಿಲ್ಲವಾಗಿ ಆತನು ಶಾಪಕ್ಕೆ ಒಳಗಾಗಲಿಲ್ಲ. ಇತರರು ಪುತ್ರಹೀನರಾದರು.

ರುದ್ರನು ತನ್ನ ಅದ್ಭುತ ತೇಜಸ್ಸನ್ನು ತಡೆಹಿಡಿದುದರಿಂದ '**ಊರ್ಧ್ವರೇತಾ**' ಎನ್ನಿಸಿದ. ಆದರೂ ಅದರ (ವೀರ್ಯದ) ಕಿಂಚಿದ್ಭಾಗ ಭೂಮಿಯಲ್ಲಿ ಜಾರಿ ಬಿದ್ದಾಗ, ಅದು ಅಗ್ನಿಯಲ್ಲಿ ಬಿದ್ದು ಅಲ್ಲಿಯೇ ತೇಜೋರೂಪಿ ಅಗ್ನಿಯ ಸಂಬಂಧ ಹೊಂದಿಗೆ '**ಒಂದೇ ಯೋನಿಯಲ್ಲಿ ಬೆರೆತು ಒಂದೇ ಮೂಲದಿಂದ ಬಂದಂತಾಯಿತು**'[೧].

(ವಿ.ಸೂ.: ಈ ಶ್ಲೋಕದ ಅನುವಾದವನ್ನು ಇತ್ತೀಚಿನ ಪ್ರಕಾಶನದಲ್ಲಿ 'ರುದ್ರನ ತೇಜಸ್ಸು ಅಗ್ನಿಯತೇಜಸ್ಸಿನೊಡನೆಮಿಲಿತವಾಗಿಸ್ವಯಂಭೂಪುರುಷನರೂಪದಲ್ಲಿಅಭಿವ್ಯಕ್ತವಾಯಿತು' ಎಂದು ಅನುವಾದ ಮಾಡಲಾಗಿದೆ. ಸ್ವಯಂಭೂ ಪುರುಷನರೂಪ ಎಂದು ಮೂಲದ ಯಾವುದೇ ಶಬ್ದವೂ ಹೇಳುವುದಿಲ್ಲ ಎಂದು ಗಮನಿಸಿದಾಗ, ಈ ಅನುವಾದ ಸರಿ ಎನ್ನಿಸದು.)

ಇದೇ ಸಮಯದಲ್ಲಿ ಇಂದ್ರ, ಏಕಾದಶರುದ್ರರು, ದ್ವಾದಶ ಆದಿತ್ಯರೂ, ಮರುತ್ ದೇವತೆಗಳು, ಅಶ್ವಿನೀದೇವತೆಗಳೇ ಮೊದಲಾದ ಎಲ್ಲ ದೇವತೆಗಳು ತಾರಕಾಸುರನಿಂದ ಪೀಡಿತರಾಗಿ ಅವನಿಂದ ಪಾರಾಗಲು ಬ್ರಹ್ಮನ ಬಳಿಗೆ ಹೋಗಿ ಪ್ರಾರ್ಥಿಸಿದರು. ತಾರಕಾಸುರನಿಗೆ ಬ್ರಹ್ಮನೇ ವರ ಕೊಟ್ಟುದರಿಂದ ಅವನನ್ನು ಸಂಹರಿಸಲು ಯಾವುದೇ ದೇವತೆಗಳಿಗೆ ಸಾಧ್ಯವಾಗುತ್ತಿರಲಿಲ್ಲ. ಅವರ ಪ್ರಾರ್ಥನೆಯನ್ನು ಮನ್ನಿಸಿದ ಬ್ರಹ್ಮನು –

'ಈ ತಾರಕಾಸುರನ ಸಂಹಾರಕ್ಕಾಗಿ ಈಗಾಗಲೇ ಯೋಚಿಸಲಾಗಿದೆ. ನೀವು ಆತಂಕ ಪಡಬೇಡಿರಿ. ತಾರಕಾಸುರನಿಂದ ವೇದ, ಧರ್ಮಗಳ ನಾಶವಾಗಬಾರದು. ಯದ್ಯಪಿ ನಿಮಗೆಲ್ಲ ರುದ್ರಾಣಿಯ ಶಾಪವಿದ್ದರೂ ಅಗ್ನಿಗೆ ಶಾಪವಿಲ್ಲ. ಆತನು ದೇವಶತ್ರುವಾದ ತಾರಕಾಸುರನನ್ನು ವಧಿಸಲು ಪುತ್ರನನ್ನು ಪಡೆಯುತ್ತಾನೆ. ಅವನು ಅಮೋಘ ಅಸ್ತ್ರದಿಂದ ತಾರಕ ಹಾಗೂ ಇತರೆ ದೇವಶತ್ರುಗಳನ್ನು ಸಂಹರಿಸುತ್ತಾನೆ. ಸನಾತನ ಸಂಕಲ್ಪವನ್ನು ಕಾಮ ಎನ್ನುವರು. ರುದ್ರದೇವರ ವೀರ್ಯವು ಜಾರಿ ಅಗ್ನಿಯಲ್ಲಿ ಬಿದ್ದಿದೆ. ಆ ತೇಜಸ್ಸನ್ನು ಅಗ್ನಿಯು ಎರಡನೆ ಅಗ್ನಿಯಂತೆ ಅಸುರರ ಸಂಹಾರಕ್ಕಾಗಿ ಗಂಗೆಯಲ್ಲಿ ದೊಡ್ಡ ಚೇತನವನ್ನಾಗಿ ಪಡೆಯುತ್ತಾನೆ. ಅಂತಹ ಚೇತನವನ್ನು ಅಗ್ನಿಯು ಜನಿಸುತ್ತಾನೆ. ಅಸುರನ ವಧೋಪಾಯ ಹೇಳಿದ್ದೇನೆ. ನೀವೀಗ ಆ ಅಗ್ನಿಯನ್ನು ಹುಡುಕಿ, ಆ ಕಾರ್ಯದಲ್ಲಿ ನಿಯೋಜಿಸಿರಿ' ಎಂದರು[೨].

---

೧ ತತ್ಪಪಾತ ತದಾ ಚಾಗ್ನೌ ವವೃಧೇ ಚಾದ್ಭುತೋಪಮಮ್ ।
ತೇಜಸ್ತೇಜಸಿ ಸಂಪೃಕ್ತಮೇಕಯೋನಿತ್ವಮಾಗತಮ್ ॥ – ೧೨೫/೫೩

೨ ಸನಾತನೋ ಹಿ ಸಂಕಲ್ಪಃ ಕಾಮ ಇತ್ಯಭಿಧೀಯತೇ ।
ರುದ್ರಸ್ಯ ತೇಜಃ ಪ್ರಸ್ಕನ್ನಮಗ್ನೌ ನಿಪತಿತಂ ಚ ತತ್ ॥
ತತ್ತೇಜೋಽಗ್ನಿರ್ಮಹದ್ಭೂತಂ ದ್ವಿತೀಯಮಿವ ಪಾವಕಮ್ ।
ವಧಾರ್ಥಂ ದೇವಶತ್ರೂಣಾಂ ಗಂಗಾಯಾಂ ಜನಯಿಷ್ಯತಿ ॥

ರುದ್ರದೇವರಿಂದ ಅಗ್ನಿಯಲ್ಲಿ ಬಿದ್ದ ಆ ವೀರ್ಯ ಅಗ್ನಿ ಎಂಬ ಅಧಿಷ್ಠಾನದಲ್ಲಿ ಬಿದ್ದಿದೆ. ಅಗ್ನಿಯಲ್ಲಿ ಆ ವೀರ್ಯೋತ್ಪನ್ನ ಚೇತನ 'ಕಾಮ', ಇಚ್ಛಾ, ಸಂಕಲ್ಪಕ್ರಿಯಾಭಿಮಾನಿ, ಕಾಮ, ಮನ್ಮಥ ಎಂಬ ಭಾವ ಇಲ್ಲಿ ಸೂಚಿತವಾಗಿದೆ. ಎಂದರೆ ಹುಟ್ಟುವ ಮಗು ಕುಮಾರ, ಮನ್ಮಥಾವತಾರಿ, ಇದೊಂದು ಅಯೋನಿಜ ಸಂತಾನ. ದ್ರುಪದ, ಕೃಪಾದಿಗಳಂತೆ.

ಬ್ರಹ್ಮದೇವರು ಮುಂದುವರೆದು ದೇವತೆಗಳು ತೇಜಸ್ವಿಗಳ ಶಾಪಗಳು ಅತಿ ತೇಜಸ್ವಿಗಳಿಗೆ ಪರಿಣಾಮ ಬೀರುವುದಿಲ್ಲ. ಬಲಗಳು ತಮಗಿಂತ ಅತಿ ಬಲಿಷ್ಠರನ್ನು ಹೊಂದಿ ದುರ್ಬಲವೇ ಆಗುತ್ತವೆ. ತಪಸ್ವಿಗಳು ವರದಿಂದ ಅವಧ್ಯರಾದವರನ್ನು ಕೊಂದಾರು. ಇಲ್ಲಿ ಸಂಕಲ್ಪಸ್ವರೂಪಿಯಾದ ಕಾಮನು ಜಗತ್ಪತಿಯಾದ. ಇವನು ಹೀಗೆಯೇ ಎಂದು ನಿರ್ದೇಶ ಮಾಡಲು ಅಸಾಧ್ಯವಾದ ಸರ್ವತ್ರವ್ಯಾಪ್ತನಾದ, ಸರ್ವಭೂತಹೃದಯವಾಸಿಯಾದ ಅಗ್ನಿ, ಅವನು (ಕಾಮನು) ರುದ್ರೋತ್ತಮವಾಗಿದ್ದಾನೆ. ಇವನನ್ನು ಹಿಡಿ, ನಿಮ್ಮ ಅಭಿಲಾಷೆಯನ್ನು ಇವನು ಈಡೇರಿಸುವನು.

(ಅಧ್ಯಾಯ ೧೨೬/೧೭-೧೭೮ ಶ್ಲೋಕಗಳನ್ನು ಗಮನಿಸಿದಾಗ -)

ರುದ್ರವೀರ್ಯದಿಂದ ಹುಟ್ಟಲಿರುವ ಮಗ ಕಾಮಾವತಾರಿಯೂ ಹಾಗೂ ಅವನಲ್ಲಿ ಸಾಕ್ಷಾತ್ ಭಗವಂತನಾದ ಹರಿಯ ಸಾನ್ನಿಧ್ಯವೂ ಇದೆ ಎಂಬ ಭಾವವು. **'ಸನಾತನತಮಃ, ಅನಲಃ, ಜಗತ್ಪತಿಃ, ಅನಿರ್ದೇಶ್ಯ, ಸರ್ವಗಃ, ಸರ್ವಭಾವನಃ, ಹೃಚ್ಛಯಃ, ಸರ್ವಭೂತಾನಾಂ,** ಎಂಬ ಭಗವಲ್ಲಿಂಗ ಶಬ್ದಗಳಲ್ಲದೆ ಅತ್ಯಂತ ಸ್ಪಷ್ಟವಾದ **'ರುದ್ರಾದಪಿಜ್ಯೇಷ್ಠಃ'** ಎಂಬ ವಿಷ್ಣುಲಿಂಗಗಳಿಂದ ಅತ್ಯಂತ ನಿರವಕಾಶವಾಗಿ ತಿಳಿಯುತ್ತದೆ. ಇನ್ನೊಂದು ಕಾರಣವೇನೆಂದರೆ ಬ್ರಹ್ಮವರಾದವಧ್ಯನನ್ನು ಕೊಲ್ಲಲು ಬ್ರಹ್ಮನಿಗಿಂತಲೂ ಶ್ರೇಷ್ಠ ಬೇಕಲ್ಲವೇ? ಆದ್ದರಿಂದ ವಿಷ್ಣುವನ್ನು ಬಿಟ್ಟರೆ ಬೇರೆ ಯಾರು ಇದ್ದಾರೆ? ಯಾರೂ ಇಲ್ಲ ಈ ವಿಷಯದಲ್ಲಿ. ಆದ್ದರಿಂದ ಕುಮಾರ ಷಣ್ಮುಖ, ಸ್ಕಂದನಲ್ಲಿದ್ದು ಆ ಬಲ ನೀಡಿದವನು ವಿಷ್ಣುವೇ ಎಂದು ಈ ವಾಕ್ಯಗಳಿಂದ ಸ್ಫುಟವಾಗುತ್ತದೆ.

---

ಅನ್ವಿಷ್ಯತಾಂ ವೈ ಜ್ವಲನಸ್ತಥಾ ಚಾದ್ಯ ನಿಯುಜ್ಯತಾಮ್ ।
ತಾರಕಸ್ಯ ವಧೋಪಾಯಃ ಕಥಿತೋ ವೈ ಮಯಾಽನಘಾಃ ॥ - ೧೨೬/೧೧-೧೪

೧ ನ ಹಿ ತೇಜಸ್ವಿನಾಂ ಶಾಪಾಸ್ತೇಜಃ ಸು ಪ್ರಭವಂತಿ ವೈ ।
ಬಲಾನ್ಯತಿ ಬಲಂ ಪ್ರಾಪ್ಯ ನ ಬಲಾನಿ ಭವಂತಿ ವೈ ॥
ಹನ್ಯಾದವಧ್ಯಾನಪಿ ವರದಾನಪಿ ಚೈವ ತಪಸ್ವಿನಃ ।
ಸಂಕಲ್ಪಾಭಿರುಚಿಃ ಕಾಮಃ ಸನಾತನತಮೋಽನಲಃ ॥
ಜಗತ್ಪತಿರನಿರ್ದೇಶ್ಯಃ ಸರ್ವಗಃ ಸರ್ವಭಾವನಃ ।
ಹೃಚ್ಛಯಃ ಸರ್ವಭೂತಾನಾಂ ಜ್ಯೇಷ್ಠೋ ರುದ್ರಾದಪಿ ಪ್ರಭುಃ ॥ - ೧೨೬/೧೫-೧೭
ಈ ವಾಕ್ಯಗಳು ಔತ್ತರೇಯ ಪಾಠದಲ್ಲೂ ಇವೆ.

ನಂತರ ಋಷಿಗಳು ದೇವತೆಗಳೊಡನೆ ಸೇರಿ ಅಗ್ನಿಯಲ್ಲಿಯೇ ಮನಸ್ಸನ್ನು ಇಟ್ಟು ಮೂರುಲೋಕಗಳಲ್ಲಿ ಹುಡುಕಿದರೂ, ತನ್ನಲ್ಲಿಯೇ ಅಡಗಿದ ಅಗ್ನಿ ಇವರ ಕಣ್ಣಿಗೆ ಬೀಳಲಿಲ್ಲ. ಆಗ ರಸಾತಳಲೋಕದಲ್ಲಿ ಇದ್ದ ಜಲಸಂಚಾರಿಯಾದ ಮಂಡೂಕ ಬಂದು ದೇವತೆಗಳಿಗೆ ಅಗ್ನಿಯು ರಸಾತಳದ ಕೆಳಗೆ ತನ್ನ ತೇಜಸ್ಸನ್ನು ಜಲದ ಜೊತೆಗೆ ಸೇರಿಸಿ ನೀರಿನಲ್ಲಿ ಮಲಗಿದ್ದಾನೆ. ನಾವು ಅದರಿಂದಾಗಿ (ನೀರು ಬಿಸಿಯಾಗಿ) ಕಾಯಲ್ಪಟ್ಟಿದ್ದೇವೆ. ನಿಮಗೆ ಅಗ್ನಿದರ್ಶನ ಬೇಕಾದರೆ ಅಲ್ಲಿಗೆ ಹೋಗಿ ಎಂದು ಹೇಳಿ ತಾನು ನೀರನ್ನು ಸೇರಿತು. ಇದನ್ನು ಗಮನಿಸಿದ ಅಗ್ನಿಯು ಮಂಡೂಕಕ್ಕೆ 'ನಿನಗೆ ರಸ ಜ್ಞಾನ ಆಗುವುದಿಲ್ಲ(ಆಗದಿರಲಿ)' ಎಂದು ಶಪಿಸಿದ. ಅಗ್ನಿ ಬೇರೆ ಕಡೆಗೆ ವಾಸಕ್ಕೆ ಹೋದ. ದೇವತೆಗಳಿಗೆ ದರ್ಶನವೀಯಲಿಲ್ಲ.

ದೇವತೆಗಳು ತಮಗೆ ಅಗ್ನಿಯ ಶಸ್ಥಾನ ತಿಳಿಸಿದ ಕಪ್ಪೆಗಳಿಗೆ 'ನೀವು ರಸಜ್ಞಾನ ರಹಿತರಾದರೂ ಅನೇಕ ವಿಧವಾದ ಶಬ್ದಗಳನ್ನು ಮಾಡುವಿರಿ (ನೀವೇನೂ ಮೂಕರಾಗುವುದಿಲ್ಲ). ನೀವು ಬಿಲವಾಸ ಮಾಡಿ, ಹೊರಗೆ ಹೋಗಲು ಆಗದೆ, ನಿರಾಹಾರವಾಗಿ ಪ್ರಾಣತೊರೆದರೂ, ಭೂಮಿಯು ನಿಮ್ಮನ್ನು ಧರಿಸುತ್ತದೆ. ತುಂಬಿದ ರಾತ್ರಿಯಲ್ಲಿ ನೀವು ಸಂಚರಿಸುವಿರಿ.' ಹೀಗೆ ಹೇಳಿ ಹೋದರು.

ನಂತರ ಐರಾವತದಂತಿದ್ದ ಒಂದು ಆನೆಯು ದೇವತೆಗಳಿಗೆ ಅಗ್ನಿಯು ಅಶ್ವತ್ಥವೃಕ್ಷದಲ್ಲಿದ್ದಾನೆ ಎಂದು ಹೇಳಿತು. ಇದನ್ನು ತಿಳಿದ ಅಗ್ನಿಯು ಆನೆಗಳಿಗೆ ನಿಮ್ಮ ನಾಲಿಗೆಯೂ ನಿಮಗೆ ತಿರುಗುಮುರುಗಾಗಲಿ, ವಿರುದ್ಧವಾಗಲಿ ಎಂದು ಶಾಪಕೊಟ್ಟನು. ನಂತರ ಅಗ್ನಿಯು ಶಮೀವೃಕ್ಷವನ್ನು ಪ್ರವೇಶಿಸಿದನು. ಆನೆಗಳಿಗೆ ದೇವತೆಗಳು 'ನಿಮ್ಮ ನಾಲಿಗೆ ನಿಮಗೆ ಪ್ರತಿಕೂಲವಾಗಿದ್ದರೂ, ನೀವು ಎಲ್ಲ ಆಹಾರವನ್ನು ತಿನ್ನುವಿರಿ. ಅಕ್ಷರಗಳ ಅಭಿವ್ಯಕ್ತಿ ಮಾಡದೆ ನೀವು ಭಾರಿ ಧ್ವನಿಯಿಂದ ಕೂಗುವಿರಿ. ಎಂದು ಹೇಳಿ ಮತ್ತೆ ಅಗ್ನಿಯನ್ನು ಹುಡುಕಲು ಹೊರಟರು. ಶಮೀವೃಕ್ಷವನ್ನು ಅಗ್ನಿಯು ಪ್ರವೇಶಿಸಿದುದನ್ನು ಒಂದು ಗಿಳಿಯು ನೋಡಿ ದೇವತೆಗಳಿಗೆ ತಿಳಿಸಲು ಅಗ್ನಿಯು 'ನೀನು ಮಾತನಾಡಲಾರೆ' ಎಂದು ಹೇಳಿ, ಅದರ ನಾಲಿಗೆಯನ್ನು ವಿರುದ್ಧವಾಗಿ ತಿರುಗಿಸಿದನು. ಅದನ್ನು ತಿಳಿದ ದೇವತೆಗಳು ಗಿಳಿಗಳಿಗೆ 'ನೀನು ಮನೋಹರವಾಗಿ ಮಾತನಾಡುವೆ. ಅದು ಮಧುರವೂ, ಅದ್ಭುತವೂ ಆಗಿರಲಿದೆ' ಎಂದು ಹೇಳಿದರು. ದೇವತೆಗಳು, ಅಗ್ನಿ ಶಮೀವೃಕ್ಷದಲ್ಲಿರುವುದನ್ನು ನೋಡಿ ಅದನ್ನೇ ಪುಣ್ಯಕಾರ್ಯಗಳಿಗೆ ತಮ್ಮ ಆಶ್ರಯಸ್ಥಾನವನ್ನಾಗಿಸಿಕೊಂಡರು.

ಅಂದಿನಿಂದ ಅಗ್ನಿಯು ಶಮೀಗರ್ಭದಲ್ಲಿರುತ್ತಾನೆ. ಅಗ್ನಿಯ ಅಭಿವ್ಯಕ್ತಿಗೆ ಮನುಷ್ಯರು ಶಮಿಯನ್ನು ಒಂದು ಉಪಾಯ ಮಾಡಿಕೊಂಡರು(ಶಮೀಕಾಷ್ಠದ ಘರ್ಷಣೆಯಿಂದ ಅಗ್ನಿ ಉತ್ಪನ್ನವಾಗುತ್ತದೆ).

ತನ್ನನ್ನು ಹಿಂಬಾಲಿಸಿ ಬಂದ ದೇವತೆಗಳನ್ನು ನೋಡಿ ವಿಷಾದದಿಂದ 'ನಿಮ್ಮ ಆಗಮನಕ್ಕೆ ಕಾರಣವೇನೆಂದು ಕೇಳಿದನು (ಅಗ್ನಿ). ದೇವತೆಗಳು ತಾರಕಾಸುರ ಸಂಹಾರಕ್ಕಾಗಿ ನಿನ್ನ

ತೇಜಸ್ಸಿನಿಂದ ಕೂಡಿದ ಮಗನನ್ನು ಪಡೆಯಲು ಪ್ರಾರ್ಥನೆ ಮಾಡಲು ಬಂದಿದ್ದೇವೆ. ನಮಗೆಲ್ಲ ಪಾರ್ವತಿಶಾಪದಿಂದಾಗಿ ಸಂತಾನವಾಗುವುದಿಲ್ಲ. ನೀನೇ ನಮಗೆ ಅಭಯದ ರಕ್ಷಕ. ಅವರ ಮಾತಿಗೆ ಒಪ್ಪಿ ಅಗ್ನಿಯು ಭಾಗೀರಥಿಯ ಬಳಿಗೆ ಹೋದನು. ಅವನು ಆಕೆಯೊಡನೆ ಸಂಯೋಗವಾದಾಗ ಭಾಗೀರಥಿಗೆ ಗರ್ಭವುಂಟಾಗಿ ಹುಲ್ಲುಗಾವಲಿನಲ್ಲಿ ಬಿದ್ದ ಅಗ್ನಿಯಂತೆ ವೃದ್ಧಿ ಹೊಂದಿತು. ಆ ಗರ್ಭದ ತೇಜಸ್ಸಿನಿಂದ ಗಂಗೆ ಸಂತಾಪ ಹೊಂದಿ ಅದನ್ನು ಸಹಿಸಲಾಗಲಿಲ್ಲ. ಆ ಒಬ್ಬ ಅಸುರ ಭೈರವ ಭಯಂಕರ ನಾದ ಮಾಡಿದನು. ಆ ನಾದಕ್ಕೆ ಗಂಗೆ ಎಚ್ಚ ತಪ್ಪಿ ಆ ಗರ್ಭ ಧರಿಸಲು ಆಗದವಳಾದಳು. ಈ ಗರ್ಭ ಧರಿಸಲಾರೆ, ಈ ಗರ್ಭಕ್ಕೂ ನನಗೂ ಯಾವುದೇ ಸೂಕ್ಷ್ಮ ಸಂಬಂಧವಿಲ್ಲ. ಇದು ಕೇವಲ ಆಪದ್ಧರ್ಮ. ಇದರ ಗುಣಾಗುಣ ನಿನಗೆ ಸೇರಿದ್ದು ಎಂದಳು ಅಗ್ನಿಗೆ. ಆಗ ಅಗ್ನಿಯು 'ಗಂಗೆಯೇ ನೀನೇ ಗರ್ಭಧರಿಸು. ನಿನಗೆ ಇದರಿಂದ ಮಹಾಫಲ ದೊರಕಲಿದೆ.' ಸಮಗ್ರ ಭೂಮಿಯನ್ನೇ ಹೊರುವ ಶಕ್ತಿ ಇರುವ ನಿನಗೆ ಈ ಗರ್ಭದಿಂದ ನಿನಗೆ ಹೊಸ ಫಲವೇನೂ ಕೊಡಲು ಇಲ್ಲ. ಎಲ್ಲ ಫಲಗಳು ನಿನ್ನಲ್ಲಿವೆ' ಹೀಗೆ ಹೇಳಿದರೂ, ಗಂಗೆ ಆ ಗರ್ಭವನ್ನು ಮೇರುಪರ್ವತದಲ್ಲಿ ವಿಸರ್ಜಿಸಿದಳು.

ಯದ್ಯಪಿ ಗಂಗೆ ಆ ಗರ್ಭಧಾರಣೆಗೆ ಸಮರ್ಥಳಾಗಿದ್ದರೂ, ರುದ್ರದೇವರ ತೇಜಸ್ಸು ಆಕೆಯನ್ನು ಸಂತಾಪಗೊಳಿಸಿತು. ಆದ್ದರಿಂದ ಅದನ್ನು ಧರಿಸಲು ಅಸಮರ್ಥಳಾದಳು. ಆ ಗರ್ಭ ಪ್ರಜ್ವಲಿಸುವ ಅಗ್ನಿಯಂತೆ ಇತ್ತು. ನಂತರ ಅಗ್ನಿಯು ಗಂಗೆಗೆ ದರ್ಶನಕೊಟ್ಟು, ನೀನು ವಿಸರ್ಜಿಸಿದ ಗರ್ಭದ ವರ್ಣವೇನು? ರೂಪವೇನು? ಎಂತಹ ತೇಜಸ್ಸಿನಿಂದ ಕೂಡಿದೆ ಎಂದು ಕೇಳಿದ. ಅದಕ್ಕೆ ಗಂಗೆಯು 'ಆ ಗರ್ಭವು ಸುವರ್ಣಮಯವಾಗಿದೆ. ತೇಜಸ್ಸಿನಲ್ಲಿ ನಿನ್ನಂತಿದೆ. ತನ್ನ ಕಾಂತಿಯಿಂದ ಪರ್ವತವನ್ನು (ಮೇರು) ಬೆಳಗಿಸಿತು. ಅದರ ಸ್ಪರ್ಶ ತಂಪಾಗಿದೆ. ಆ ಶಿಶುವಿನ ಗಂಧ, ಕದಂಬಪುಷ್ಪಗಳ ಗಂಧಕ್ಕೆ ಸಮವಾಗಿದೆ. ಅದರೊಡನೆ ಯಾವ ದ್ರವ್ಯ ಸಂಯೋಗ ಹೊಂದುತ್ತದೋ ಅದೆಲ್ಲ ಸುತ್ತಲೂ ಸುವರ್ಣವಾಗಿ ತೋರುತ್ತದೆ. ಆ ಮಗು ತನ್ನ ತೇಜಸ್ಸಿನಿಂದ ಪರ್ವತ, ನದಿ, ಚರಾಚರಲೋಕವನ್ನು ಬೆಳಗಿಸಿತು. ಎಲೈ ಅಗ್ನಿಯೇ! ನಿನ್ನ ಪುತ್ರ ಇಂತಹ ಗುಣವುಳ್ಳವ. ತೇಜಸ್ಸಿನಲ್ಲಿ ಸೂರ್ಯ ಹಾಗೂ ನಿನ್ನಂತೆ ಕಾಂತಿಯಲ್ಲಿ ಚಂದ್ರನಂತೆ ಇಷ್ಟೆಲ್ಲ ಹೇಳಿ ಗಂಗಾದೇವಿ ಅಂತರ್ಧಾನಳಾದಳು.

ಅಗ್ನಿಯೂ ದೇವತಾಕಾರ್ಯ ಮಾಡಿ ತನಗೆ ಇಷ್ಟವಾದ ದೇಶಕ್ಕೆ ಹೊರಟನು. ಈ ವ್ಯಾಪಾರಗಳಿಂದ ಲೋಕದಲ್ಲಿ ಅಗ್ನಿಯು ಗಾನಮಾಡಲ್ಪಡುತ್ತಾನೆ. ಋಷಿಗಳು, ದೇವತೆಗಳು ಇವನನ್ನು **ಹಿರಣ್ಯರೇತ** ಎಂದೂ ಮತ್ತು ಭೂಮಿದೇವಿಯೂ **ವಸುಮತಿ**ಯೆಂದು ಪ್ರಖ್ಯಾತರಾದರು.

ಹೀಗೆ ಅಗ್ನಿಯಿಂದ ಗಂಗೆಯಲ್ಲಿ ಉಂಟಾದ ಮಹಾತೇಜಸ್ವಿಯಾದ ಶಿಶುವು ಶರವಣಕ್ಕೆ (ಜಂಬುಹುಲ್ಲಿನ ಪೊದೆ) ಹೋಗಿ ಅದ್ಭುತ ದರ್ಶನ ಹೊಂದಿ ಬೆಳೆಯಿತು.

ಬಾಲ ಸೂರ್ಯನ ತೇಜಸ್ಸನ್ನು ಹೊಂದಿ ಆ ಶಿಶುವನ್ನು ನೋಡಿದ ಕೃತ್ತಿಕೆಯರು ತಮ್ಮ ಸ್ತನ್ಯಗಳಿಂದ ಹಾಲು ಕುಡಿಸಿದರು. ಆದ್ದರಿಂದ ಶಿಶು ಕಾರ್ತಿಕೇಯನೆಂದೆನಿಸಿದ. ರುದ್ರನ ವೀರ್ಯಸ್ಖಲನವಾದುದರಿಂದ ಸ್ಕಂದನೆಂದೂ, ಗುಹೆಯಲ್ಲಿ ವಾಸಿಸಿದುರಿಂದ ಗುಹ ಎಂದೂ ಕರೆಯಲ್ಪಟ್ಟನು. ಹೀಗೆ ಸುವರ್ಣವು ಅಗ್ನಿಯ ಪುತ್ರರೂಪದಲ್ಲಿ ಜನಿಸಿತು. ಅದರಲ್ಲಿ ಜಾಂಬೂನದ ಸುವರ್ಣ ಶ್ರೇಷ್ಠವಾದುದು. ಅದು ದೇವತೆಗಳಿಗೂ ಭೂಷಣವಾದುದು.

ಆಗಿನಿಂದ ಸುವರ್ಣವು ಜಾತರೂಪ ಎನಿಸಿದೆ. ಸುವರ್ಣವು ಪೂಜ್ಯನಾದ ಅಗ್ನಿಯ ರೂಪವನ್ನು ಹೊಂದಿದೆ. ಅಲ್ಲದೆ ಈಶ್ವರ, ಪ್ರಜಾಪತಿಯ ರೂಪವನ್ನು ಹೊಂದಿದೆ. ಅದನ್ನು ಪವಿತ್ರಗಳಲ್ಲಿ ಪವಿತ್ರ. ಅದನ್ನು ಅಗ್ನಿ ಮತ್ತು ಚಂದ್ರಾತ್ಮಕವೆನ್ನುವರು. ಅದು ರತ್ನಗಳಲ್ಲಿ ಉತ್ತಮವಾದ ರತ್ನ. ಭೂಷಣಗಳಲ್ಲಿ ಭೂಷಣ. ಪವಿತ್ರಗಳಲ್ಲಿ ಪವಿತ್ರವಾದುದು. ಮಂಗಳಗಳಲ್ಲಿ ಮಂಗಳವಾದುದು.

ತೇಜಸಾ ತಸ್ಯ ಗರ್ಭಸ್ಯ ಗಂಗಾ ವಿಹ್ವಲಚೇತನಾ।
ಸಂತಾಮಮಗಮತ್ ತೀವ್ರಂ ಸಾ ಸೋಢುಂ ನ ಶಶಾಕ ಹ॥ - ೧೨೬/೫೪

ಗಂಗೆಯು ಅಗ್ನಿಗೆ ಹೇಳಿದ ಮಾತು

ಉತ್ಸ್ರಕ್ಷ್ಯೇಽಹಮಿಮಂ ದುಃಖಾನ್ನ ತು ಕಾಮಾತ್ ಕಥಂಚನ। - ೫೯
ನ ಚೇತಸೋಽಸ್ತಿ ಸಂಸ್ಪರ್ಶೋ ಮಮ ದೇವ ವಿಭಾವಸೋ।
ಆಪದರ್ಥೇ ಹಿ ಸಂಬಂಧಃ ಸುಸೂಕ್ಷ್ಮೋಽಪಿ ಮಹಾದ್ಯುತೇ॥ - ೬೦
ಯದತ್ರ ಗುಣಸಂಪನ್ನಮಿತರಂ ವಾ ಹುತಾಶನ।
ತ್ವಯ್ಯೇವ ತದಹಂ ಮನ್ಯೇ ಧರ್ಮಾಧರ್ಮೌ ಚ ಕೇವಲೌ॥ - ೬೧
ತಾಮುವಾಚ ತತೋ ವಹ್ನಿರ್ಧಾರ್ಯತಾಂ ಧಾರ್ಯತಾಮಯಮ್।
ಗರ್ಭೋ ಮತ್ತೇಜಸಾ ಯುಕ್ತೋ ಮಹಾಗುಣ ಫಲೋದಯಃ। - ೬೨
ಸಾ ವಹ್ನಿನಾ ವಾರ್ಯಮಾಣಾ ದೇವೈಶ್ಚಾಪಿ ಸರಿದ್ವರಾ।
ಸಮುತ್ಸಸರ್ಜ ತಂ ಗರ್ಭಂ ಮೇರೌ ಗಿರಿವರೇ ತದಾ॥ - ೬೪

ಅಗ್ನಿಯು ಗಂಗೆಗೆ ಹೇಳಿದ ಮಾತು

........... ಕಚ್ಚಿದ್ಗರ್ಭಃ ಸುಖೋದಯಃ।
ಕೀದೃಗ್ವರ್ಣೋಽಪಿ ವಾದೇವಿ ಕೀದೃಗ್ರೂಪಶ್ಚ ದೃಶ್ಯತೇ।
ತೇಜಸಾ ಕೇನ ವಾ ಯುಕ್ತಃ ಸರ್ವಮೇತದ್ ಬ್ರವೀಹಿ ಮೇ॥ - ೬೭

ಗಂಗಾ -

ಜಾತರೂಪಃ ಸ ಗರ್ಭೋ ವೈ ತೇಜಸಾ ತ್ವಯಿ ವಾನಲಃ। - ೬೮

ಯದ್ದ್ರವ್ಯಂ ಪರಿಸಂಸ್ಪೃಷ್ಟಂ ಪೃಥಿವ್ಯಾಂ ಪರ್ವತೇಷು ವಾ ।
ತತ್ ಸರ್ವಂ ಕಾಂಚನೀಭೂತಂ............... । - ೭೦

ಪರ್ಯಧಾವತ ಶೈಲಾಂಶ್ಚ ನದೀಃ ಪ್ರಸ್ರವಣಾನಿ ಚ ।
ವ್ಯದೀಪಯತ್ ತೇಜಸಾ ಚ ತ್ರೈಲೋಕ್ಯಂ ಸ ಚರಾಚರಮ್ ॥ - ೭೧

ಏವಂ ರೂಪಂ ಸ ಭಗವಾನ್ ಪುತ್ರಸ್ತೇ ಹವ್ಯವಾಹನ ॥ - ೭೨

ಏತೈಃ ಕರ್ಮಗುಣೈರ್ಲೋಕೇ ನಾಮಾಗ್ನೇಃ ಪರಿಗೀಯತೇ ।
ಹಿರಣ್ಯರೇತಾ ಇತಿ ವೈ ಋಷಿಭಿರ್ವಿಬುಧೈಸ್ತಥಾ ॥

ಪೃಥಿವೀ ಚ ತದಾ ದೇವೀ ಖ್ಯಾತಾ ವಸುಮತೀತಿ ವೈ ॥ - ೭೪

ದದೃಶುಃ ಕೃತ್ತಿಕಾಸ್ತಂ ತು ಬಾಲಾರ್ಕ ಸದೃಶದ್ಯುತಿಮ್ ।
ಜಾತಸ್ನೇಹಾಶ್ಚ ತಂ ಬಾಲಂ ಪುಪುಷುಃ ಸ್ತನ್ಯವಿಸ್ರವೈಃ ॥ - ೭೬

ತತಃ ಸ ಕಾರ್ತಿಕೇಯ ತ್ವಮವಾಪ ಪರಮದ್ಯುತಿಃ ।
ಸ್ಕನ್ನತ್ವಾತ್ ಸ್ಕಂದತಾಂ ಚಾಪಿ ಗುಹಾವಾಸಾದ್ಗುಹೋಽಭವತ್ ॥ - ೭೭

ಏವಂ ಸುವರ್ಣಮುತ್ಪನ್ನಂ ಅಪತ್ಯಂ ಜಾತವೇದಸಃ ।
ತತ್ರ ಜಾಂಬೂನದಂ ಶ್ರೇಷ್ಠಂ ದೇವಾನಾಮಪಿ ಭೂಷಣಮ್ ॥ - ೭೮

ದೇವತೆಗಳು, ಋಷಿಗಳು ಕೃತ್ತಿಕಾ ದೇವತೆಗಳನ್ನು ಆಗರ್ಭವನ್ನು ಪೋಷಿಸಲು ಪ್ರಚೋದಿಸಿದರು. ಕಾರಣ ಅಗ್ನಿಯಿಂದ ಉಂಟಾದ ಆ ಗರ್ಭವನ್ನು ಯಾವುದೇ ದೇವತೆ ಧರಿಸಲು ಸಮರ್ಥರಿರಲಿಲ್ಲ. ಕೃತ್ತಿಕೆಯರು ಒಪ್ಪಿದರು. ಅಗ್ನಿ ಸಂತುಷ್ಟನಾದ.

ಷಣ್ಣಾಂ ತಾಸಾಂ ತತಃ ಪ್ರೀತಃ ಪಾವಕೋ ಗರ್ಭಧಾರಣಾತ್ ।
ಸ್ವೇನ ತೇಜೋವಿಸರ್ಗೇಣ ವೀರ್ಯೇಣ ಪರಮೇಣ ಚ ॥ - ೧೨೭/೭

ಹೀಗೆ ಅಗ್ನಿಯ ಪೂರ್ಣ ತೇಜಸ್ಸು ಆರು ಮಾರ್ಗಗಳಲ್ಲಿ ಪ್ರತಿಷ್ಠಿತವಾಯಿತು. ಹೀಗೆ ಅಗ್ನಿಗರ್ಭ ಅಲ್ಲಿ ಬೆಳೆಯುತ್ತಿರಲು ಅವನ ತೇಜಸ್ಸಿನಿಂದ ತಪ್ತವಾದ ದೇಹವುಳ್ಳ ಕೃತ್ತಿಕೆಯರು ಸುಖ ಹೊಂದಲಿಲ್ಲ[೧].

ನಂತರ ಕುಮಾರನ ತೇಜಸ್ಸಿನ ತಾಪದಿಂದ ಕೂಡಿದ ಆ ಕೃತ್ತಿಕೆಯರು ಏಕಕಾಲದಲ್ಲಿ ಗರ್ಭವನ್ನು ಪ್ರಸವಿಸಿದರು. ಆರು ಅಧಿಷ್ಠಾನಗಳಲ್ಲಿದ್ದ ಆ ಗರ್ಭವು ಜನಿಸಿ ಹೊರಗೆ ಬಂದು ಒಂದು ಮೂರ್ತಿಯಾಯಿತು. ಆಗ ಕೃತ್ತಿಕೆಯರ ಸಮೀಪದಿಂದ ಪೃಥಿವಿಯು ಆ ಶರೀರವನ್ನು ತೆಗೆದುಕೊಂಡಳು. ಅಗ್ನಿಪ್ರಭೆಯನ್ನು ಹೊಂದಿದ ಆ ಗರ್ಭವು ದಿವ್ಯವಾದ ಶರವಣಕ್ಕೆ

---

೧ ತತಸ್ತಾ ವರ್ಧಮಾನಸ್ಯ ಕುಮಾರಸ್ಯ ಮಹಾತ್ಮನಃ ।
ತೇಜಸಾಽಭಿಪರೀತಾಂಗ್ಯಃ ನ ಕ್ವಚಿತ್ ಶರ್ಮ ಲೇಭಿರೇ ॥ - ೧೨೮/೯

ಹೋಗಿ ನೋಡಲು ತುಂಬಾ ಮನೋಹರವಾಗಿ ಬೆಳೆಯಿತು. ಕೃತ್ತಿಕೆಯರು ಅದನ್ನು ನೋಡಿ ಸ್ನೇಹವುಂಟಾಗಿ ತಮ್ಮ ಸ್ತನ್ಯಕ್ಷೀರದಿಂದ ಪೋಷಿಸಿದರು. ಅಂದಿನಿಂದ ಮೂರುಲೋಕಗಳಲ್ಲಿ ಅವನು **ಕಾರ್ತಿಕೇಯ**ನೆಂದು ಹೆಸರನ್ನು ಹೊಂದಿದನು. ರುದ್ರದೇವರ ವೀರ್ಯ ಜಾರಿ ಅಗ್ನಿಯಲ್ಲಿ ಗರ್ಭರೂಪ ಪಡೆದುದರಿಂದ **ಸ್ಕಂದ** ಎಂದೂ, ಗುಹಾವಾಸ ಮಾಡಿದುದರಿಂದ **ಗುಹ** ಎಂದೂ ಹೆಸರಾದನು.

ಆಗ ಈ ಅಗ್ನಿಪುತ್ರನಾದ ಕುಮಾರನನ್ನು ನೋಡಲು ೩೩ ದೇವತೆಗಳೂ, ದಿಕ್ಪಾಲಕರು, ರುದ್ರ, ಬ್ರಹ್ಮ ವಿಷ್ಣು ಸಾಧ್ಯರು, ವಸುಗಳು, ಪಂಚಭೂತಾಭಿಮಾನಿಗಳು, ನಕ್ಷತ್ರಾಭಿಮಾನಿಗಳು, ಬೇರೆ ಬೇರೆ ದೇವತಾ ಗಣಗಳು ಬಂದವು. ಋಷಿಗಳು ಸ್ತೋತ್ರ ಮಾಡಿದರು. ಗಂಧರ್ವರು ಗಾನಮಾಡಿದರು[೧].

ಆರು ಮುಖ, ೧೨ ಕಣ್ಣು ಉನ್ನತವಕ್ಷಸ್ಥಳಗಳನ್ನು ಹೊಂದಿದ, ದ್ವಿಜಪ್ರಿಯನಾದ, ಸೂರ್ಯಾಗ್ನಿಪ್ರಭೆಯುಳ್ಳ, ಶರ ಎಂಬ ತೃಣಗಳ ಪೊದೆಯಲ್ಲಿ ಮಲಗಿದ, ಕುಮಾರನನ್ನು ನೋಡಿ ತುಂಬಾ ಸಂತೋಷ ಹೊಂದಿದವರಾಗಿ, ತಾರಕಾಸುರನು ಇನ್ನೇನು ಹತನಾದನೆಂದು ತಿಳಿದರು[೨] (ದೇವತೆಗಳು-ಋಷಿಗಳು).

ನಂತರ ಎಲ್ಲ ದೇವತೆಗಳು ಕುಮಾರನಿಗೆ ಸಂತೋಷವುಂಟು ಮಾಡುವವರಾಗಿ ಆಟವಾಡುವ ಅವನಿಗೆ ಕ್ರೀಡಾಸಾಮಗ್ರಿಗಳನ್ನು ಮತ್ತು ಪಕ್ಷಿಗಳನ್ನು ಕೊಟ್ಟರು[೩]. ಏನೆಂದರೆ,

| **ದೇವತೆ** | **ಕೊಟ್ಟ ಕ್ರೀಡಾ ಸಾಮಗ್ರಿ/ಪಕ್ಷಿ** |
|---|---|
| ೧. ಸುಪರ್ಣ (ಗರುಡ) | ಮಯೂರ-ನವಿಲು |
| ೨. ವರುಣ | ಕಂಪು ಬಣ್ಣದ ಕುಕ್ಕುಟ |
| ೩. ಚಂದ್ರ | ಟಗರು |
| ೪. ಗೋಮಾತೆ(ಸುರಭಿ) | ನೂರಾರು ಸಾವಿರಾರು ಗೋವುಗಳು |
| ೫. ಅಗ್ನಿ | ಹೋತ |

---

೧ ತತೋ ದೇವಾಸ್ತ್ರಯಸ್ತ್ರಿಂಶತ್ ..............
ರುದ್ರೋ ಧಾತಾ ಚ ವಿಷ್ಣುಶ್ಚ................
ಪೃಥಗ್ಭೂತಾನಿ ಚಾನ್ಯಾನಿ ಯಾನಿ ದೇವಗಣಾನಿ ವೈ ।
ಆ ಜಗ್ಮುಸ್ತತ್ರ ತಂ ದ್ರಷ್ಟುಂ ಕುಮಾರಂ ಜ್ವಲನಾತ್ಮಕಮ್ ॥ - ೧೨೮/೧೫-೧೭

೨ ಷಡಾನನಂ ಕುಮಾರಂ ತಂ ದ್ವಿಷಡಕ್ಷಂ ದ್ವಿಜಪ್ರಿಯಮ್ ।
ಶಯಾನಂ ಶರಗುಲ್ಮಸ್ಥಂ ದೃಷ್ಟ್ವಾ ದೇವಾಃ ಸಹರ್ಷಿಭಿಃ ॥
ಲೇಭಿರೇ ಪರಮಂ ಹರ್ಷಂ ಮೇನಿರೇ ಚಾಸುರಂ ಹತಮ್ ॥ - ೧೨೮/೧೮,೧೯

೩ ತತೋ ದೇವಾಃ ಪ್ರಿಯಾಣ್ಯಸ್ಯ ಸರ್ವ ಏವ ಸಮಾಚರನ್ ।
ಕ್ರೀಡತಃ ಕ್ರೀಡನೀಯಾನಿ ದದುಃ ಪಕ್ಷಿಗಣಾಂಸ್ತಥಾ ॥ - ೧೨೮/೨೦

| | |
|---|---|
| ೬. ಭೂಮಿ | ಫಲಪುಷ್ಪ |
| ೭. ಸುಧನ್ವ | ವಿಸ್ತಾರವಾದ ಗಾಡಿ, ರಥ |
| ೮. ವರುಣ | ದಿವ್ಯಗಜ – ಒಳ್ಳೆಯ ಸರ್ಪಗಳು |
| ೯. ಇಂದ್ರ | ಸಿಂಹ, ವ್ಯಾಘ್ರ, ಚಿರತೆ |
| ೧೦. ರಾಕ್ಷಸರು | ಘೋರ, ಮಾಂಸಾಹಾರಿ ಪ್ರಾಣಿಗಳು |

ಹೀಗೆ ಕುಮಾರ ದಿನೇ ದಿನೇ ವರ್ಧಮಾನವಾಗುತ್ತಿರಲು ತಾರಕಾಸುರನು ತನ್ನ ಸಂಹಾರಕನಾದ ಈ ಷಣ್ಮುಖನನ್ನು ಕೊಲ್ಲಲು ಅನೇಕ ಉಪಾಯಗಳಿಂದ ಪ್ರಯತ್ನಿಸಿದರೂ ಆಗಲಿಲ್ಲ. ದೇವತೆಗಳು ಕುಮಾರನಿಗೆ ಸೇನಾಪತ್ಯ ಪಟ್ಟಕೊಟ್ಟು ಸತ್ಕರಿಸಿ ತಾರಕಾಸುರ ಮಾಡಿದ (ಲೋಕಕ್ಕೆ) ಅನ್ಯಾಯ, ಅಪಚಾರಗಳನ್ನು ತಿಳಿಸಿದರು. ನಂತರ ಮಹಾವೀರ್ಯನು, ಮಹಾಪರಾಕ್ರಮಶಾಲಿಯಾದ ಕುಮಾರನು ಅಮೋಘವಾದ ಶಕ್ತ್ಯಾಯುಧದಿಂದ ತಾರಕಾಸುರನನ್ನು ಸಂಹರಿಸಿದನು. ಆಗ ಇಂದ್ರನು ದೇವಾಧಿಪತಿಯಾಗಿ ಮತ್ತೆ ಸ್ವರ್ಗದಲ್ಲಿ ಪ್ರತಿಷ್ಠಿತನಾದ.

ಗುಹನು ದೇವತೆಗಳ ಸೇನಾಧಿಪತಿಯಾಗಿಯೇ ಪ್ರತಾಪಶಾಲಿಯಾಗಿಯೇ ಮೆರೆದನು. ದೇವತೆಗಳ ರಕ್ಷಕನಾಗಿ ರುದ್ರಪ್ರಿಯನಾಗಿ ಇದ್ದನು[೧].

ಅಗ್ನಿಪುತ್ರನಾದ ಪೂಜ್ಯನಾದ ಗುಹನು ಹೀಗೆ ಹಿರಣ್ಯಮೂರ್ತಿಯಾಗಿ ದೇವತೆಗಳ ಸೇನಾಪತಿಯಾದನು. ಸದಾ ಕುಮಾರನಾಗಿಯೇ ಇದ್ದನು. ಆದ್ದರಿಂದ ಸುವರ್ಣವು ಮಂಗಳಪ್ರದ. ಶ್ರೇಷ್ಠವಾದ ಅಕ್ಷಯವಾದ ರತ್ನಸ್ವರೂಪವು, ಅಗ್ನಿತೇಜೋರೂಪವೂ ಗುಹನ ಜೊತೆಯೇ ಜನಿಸಿದ್ದು.

ಈ ಇತಿಹಾಸವನ್ನು ವಸಿಷ್ಠರು ಪರಶುರಾಮಗೆ ಹೇಳಿದರು. ಅವರೂ ಸುವರ್ಣದಾನ ಮಾಡಿದರು. ನೀನೂ ಕೂಡಾ ಸುವರ್ಣದಾನ ಮಾಡು ಎಂದು ಭೀಷ್ಮರು ಧರ್ಮರಾಜನಿಗೆ ಉಪದೇಶಿಸಿದರು[೨].

*****

---

೧ ತೇನ ತಸ್ಮಿನ್ ಕುಮಾರೇಣ ಕ್ರೀಡತಾ ನಿಹತೇಽಸುರೇ ।
ಸುರೇಂದ್ರಃ ಸ್ಥಾಪಿತೋ ರಾಜ್ಯೇ ದೇವಾನಾಂ ಪುನರೀಶ್ವರಃ ॥
ಸಸೇನಾಪತಿರೇವಾಥ ಬಭೌ ಸ್ಕಂದಃ ಪ್ರತಾಪವಾನ್ ।
ಈಶೋ ಗೋಪ್ತಾ ಚ ದೇವಾನಾಂ ಪ್ರಿಯಕೃತ್ ಶಂಕರಸ್ಯ ಚ ॥ – ೧೨೮/೯೯,೩೦

೨ ತಸ್ಮಾತ್ಸುವರ್ಣಂ ಮಂಗಲ್ಯಂ ರತ್ನಮಕ್ಷಯಮುತ್ತಮಮ್ ।
ಸಹಜಂ ಕಾರ್ತಿಕೇಯಸ್ಯ ವಹ್ನೇಸ್ತೇಜಃ ಪರಂ ಮತಮ್ ॥
ರಾಮಃ ಸುವರ್ಣಂ ದತ್ವಾ ಹಿ ವಿಮುಕ್ತಃ ಸರ್ವಕಿಲ್ಬಿಷೈಃ ।
ತ್ರಿವಿಷ್ಟಪೇ ಮಹತ್ ಸ್ಥಾನಮವಾಪಾ ಸುಲಭಂ ನರೈಃ ॥ – ೧೨೮/೩೨,೩೪

# ೧೫೦. ಕೀಟೋಪಾಖ್ಯಾನ

ಧರ್ಮರಾಜನು ಪಿತಾಮಹರನ್ನು ಕೇಳುತ್ತಾನೆ.

೧. ದೊಡ್ಡ ಯುದ್ಧದಲ್ಲಿ ಪ್ರಾಣತ್ಯಾಗವು ತುಂಬಾ ದುಃಖಕರ. ಅದು ತುಂಬಾ ಕಷ್ಟ

೨. ಶ್ರೀಮಂತನಾಗಲಿ, ದರಿದ್ರನಾಗಿರಲಿ, ಒಳ್ಳೆಯ ಅಥವಾ ಕೆಟ್ಟ ಜನ್ಮದಲ್ಲಿರಲಿ, ಪ್ರಾಣತ್ಯಾಗ ದುಃಖದಾಯಕ. ಇದಕ್ಕೆ ಕಾರಣವೇನು? ನೀನು ಸರ್ವಜ್ಞ ಆದ್ದರಿಂದ ನೀನು ಹೇಳಬಲ್ಲೆ.

ಅದಕ್ಕೆ ಭೀಷ್ಮರು ಹಿಂದೆ ನಡೆದ ಒಂದು ವೃತ್ತಾಂತವನ್ನು ಹೇಳಿದರು. ಅದುವೇ ವ್ಯಾಸರಿಗೂ (ಕೃಷ್ಣದ್ವೈಪಾಯನರಿಗೂ) ಹಾಗೂ ಕೀಟಕ್ಕೂ ನಡೆದ ಒಂದು ಸಂವಾದ.

ಪರಬ್ರಹ್ಮಸ್ವರೂಪಿಗಳೇ ಆದ, ಬ್ರಾಹ್ಮಣ(ಜನ್ಮತಃ)ರಾದ ವ್ಯಾಸರು(ಕೃಷ್ಣದ್ವೈಪಾಯನರು) ಹಿಂದೆ ಬಂಡಿ ಓಡಾಡುವ ಮಾರ್ಗದಲ್ಲಿ ಬೇಗ ಬೇಗನೇ ಓಡುತ್ತಾ ಹೋಗುತ್ತಿರುವ ಒಂದು ಕೀಟವನ್ನು ನೋಡಿದರು. ಎಲ್ಲ ಭೂತಗಳ ಗಮನವನ್ನು ಬಲ್ಲವರಾದ, ಸರ್ವಜ್ಞರಾದ, ಜೀವರ ಮಾತು(ಭಾಷೆ)ಗಳನ್ನು ತಿಳಿದ ವ್ಯಾಸರು ಕೀಟವನ್ನು ಕುರಿತು.

'ಎಲೈ ಕೀಟವೇ! ನೀನು ಬಹಳ ಭಯಗೊಂಡವನಂತೆ ಕಾಣುತ್ತೀಯಾ. ಬಹಳ ಧಾವಂತದಿಂದ (ಬೇಗಬೇಗನೇ ಹೋಗುವಂತೆ) ಹೋಗುವವನಂತೆ ಅನಿಸುತ್ತದೆ. ಎಲ್ಲಿಗೆ ಹೋಗುತ್ತಿದ್ದೀಯಾ? ನಿನಗೆ ಯಾರಿಂದ ಭಯ ಉಂಟಾಗಿದೆ ಹೇಳು'[೧] ಎಂದರು.

ಆಗ ಕೀಟವು ಉತ್ತರಿಸಿತು –

'ಬಹಳ ದೊಡ್ಡದಾದ ಬಂಡಿ ಶಬ್ದ ಕೇಳಿ ನನಗೆ ಭಯವುಂಟಾಗಿದೆ. ಆ ಶಬ್ದ ತುಂಬಾ ಭಯಂಕರವಾಗಿ ಕೇಳಿಸುತ್ತಿದೆ. ಅದು ನನ್ನನ್ನು ಕೊಲ್ಲದಿರಲಿ(ನನ್ನ ಮೇಲೆ ಹಾಯ್ದು) ಎಂದು ನಾನು ವೇಗವಾಗಿ ಓಡುತ್ತಿದ್ದೇನೆ. ನನಗೆ ಭಾರಿ ಭಾರವನ್ನು ಎಳೆಯುತ್ತಿರುವ ಸಣ್ಣ ಎತ್ತುಗಳ ಉಸಿರಾಟದ ಸ್ವರ ಹಾಗೂ ಬಂಡಿಯನ್ನು ಹೊಡೆಯುವವರ ವಿವಿಧ ಧ್ವನಿಗಳೂ ಕೇಳಿಸುತ್ತಿವೆ

---

೧ ಬ್ರಹ್ಮಭೂತಶ್ಚರನ್ ವಿಪ್ರಃ ಕೃಷ್ಣದ್ವೈಪಾಯನಃ ಪುರಾ ।
ದದರ್ಶ ಕೀಟಂ ಧಾವಂತಂ ಶೀಘ್ರಂ ಶಕಟವರ್ತ್ಮನಿ ॥ – ೧೬೮/೭
ಗತಿಜ್ಞಃ ಸರ್ವಭೂತಾನಾಂ ರುತಜ್ಞಶ್ಚ ಶರೀರಿಣಾಮ್ ।
ಸರ್ವಜ್ಞಃ ಸಮದರ್ಶೀ ಚ ಕೀಟಂ ವಚನಮಬ್ರವೀತ್ ॥ – ೧೬೮/೮
ಕೀಟ ಸಂತ್ರಸ್ತರೂಪೋಽಸಿ ತ್ವರಿತಶ್ಚೈವ ಲಕ್ಷ್ಯಸೇ ।
ಕ್ವ ಧಾವಸಿ ತದಾಚಕ್ಷ್ವ ಕುತಸ್ತೇ ಭಯಮಾಗತಮ್ ॥ – ೧೬೮/೯

(ಬಂಡಿ ಹೊಡೆಯುವವರು ಕೂಗುತ್ತಾ, ಎತ್ತುಗಳನ್ನು ಪ್ರಚೋದಿಸುತ್ತಾ, ಚಾಟಿಯಿಂದ ಹೊಡೆಯುವಾಗ ಮಾತನಾಡುವ ಶಬ್ದಗಳು). ನಿಕೃಷ್ಟ ಕೀಟದ ಜನ್ಮವಿರುವ ನನ್ನಂಥವನಿಂದ ಇಂತಹ ಪ್ರಾಣಾಪಾಯ ಧ್ವನಿಗಳನ್ನು ಹೇಗೆ ತಾನೇ ಸಹಿಸಲು ಸಾಧ್ಯ? ಆದ್ದರಿಂದ ಇಂತಹ ದಾರುಣ ಧ್ವನಿಯ ಬಂಡಿ ಬರುವ ದಾರಿಯನ್ನು ಬಿಟ್ಟು ಓಡುತ್ತಿದ್ದೇನೆ. ಪ್ರಾಣಿಗಳಿಗೆ ಮೃತ್ಯು ಎನ್ನುವುದು ಬಹು ದುಃಖಕರ. ಜೀವನ (ಬದುಕುವಿಕೆ) ದುರ್ಲಭ. ಸುಖದಿಂದ ದುಃಖದಕಡೆ ಸಿಲುಕಬಾರದೆಂದು ಭಯದಿಂದ ಓಡಿಹೋಗುತ್ತಿದ್ದೇನೆ೧.

ಆಗ ವ್ಯಾಸರು 'ಕೀಟವೇ! ಅಭದ್ರ ಜನ್ಮದಲ್ಲಿರುವ ನಿನಗೆ ಸುಖ ಹೇಗೆ ಸಿಕ್ಕೀತು? ಆದ್ದರಿಂದ ಮರಣವೇ ಸುಖವೆಂದು ಭಾವಿಸಿದ್ದೇನೆ. (ಸುಖದ ಸಾಧನಗಳಾದ) ಶಬ್ದ, ಸ್ಪರ್ಶ, ರಸ, ಗಂಧ, ಶ್ರೇಷ್ಠ ಹಾಗೂ ಕನಿಷ್ಠ ಭೋಗಗಳನ್ನು ತಿಳಿಯಲಾರೆ. ಅನುಭವಿಸಲಾರೆ. ಆದ್ದರಿಂದ ಮರಣವೇ ನಿನಗೆ ಲೇಸು.೨'

ಕೀಟ ವ್ಯಾಸರಿಗೆ ಮತ್ತೆ ಉತ್ತರಿಸಿತು. 'ಮಹಾಪ್ರಾಜ್ಞನೇ! ಜೀವನು ತನಗೆ ಬರುವ ಎಲ್ಲ ಜನ್ಮಗಳಲ್ಲಿ ಸುಖ ಹೊಂದುತ್ತಾನೆ. ಆದ್ದರಿಂದ ಕೀಟನಾಗಿ ಬಂದ ನಾನು ಸುಖವನ್ನು (ಅನುಭವಿಸುತ್ತಿದ್ದೇನೆ) ಇಚ್ಛಿಸುತ್ತೇನೆ. ಅದಕ್ಕಾಗಿ ಬದುಕಲು ಬಯಸುತ್ತೇನೆ.

ಮನುಷ್ಯರ ಹಾಗೂ ತಿರ್ಯಗ್ಯೋನಿಗಳ ಸುಖಭೋಗಗಳು ಬೇರೆ ಬೇರೆಯಾದರೂ ವಿಷಯ ಭೋಗಗಳು ಇದ್ದೇ ಇವೆ.

ನನ್ನ ಪೂರ್ವಜನ್ಮ ವೃತ್ತಾಂತವನ್ನು ಹೇಳುತ್ತೇನೆ ಕೇಳು, ಎಂದು ಭಗವಾನ್ ವ್ಯಾಸರಿಗೆ ಕೀಟ ಹೇಳಲಾರಂಭಿಸಿತು (ಇದೊಂದು ಸೋಜಿಗದ ಕಥೆ).

ನಾನು ಹಿಂದೆ ಬ್ರಾಹ್ಮಣರಿಗೆ ಅಪ್ರಿಯನಾದ, ಕ್ರೂರಿಯಾದ, ಜಿಪುಣನಾಗಿ ಬಡ್ಡಿ ಮೇಲೆ ಜೀವಿಸುವ ಧನಿಕ ಶೂದ್ರನಾಗಿದ್ದೆ. ನನ್ನ ಮಾತುಗಳು ಬೇರೆಯವರಿಗೆ ಚುಚ್ಚುವಂತಹದು ಆಗಿತ್ತು. ಅಲ್ಲದೆ ಮೋಸಮಾಡುವ ಬುದ್ಧಿಯ, ಕಳ್ಳಬುದ್ಧಿಯ ಸುಳ್ಳಾಡುವ, ಸಂಪಾದಿಸಿದ ಧನವನ್ನು ಬಚ್ಚಿಡುವ, ಪರಸ್ವತ್ತನ್ನು ಅಪಹರಿಸುವವನೂ ಆಗಿದ್ದೆ೩.

---

೧ ಶಕಟಸ್ಯಾಸ್ಯ ಮಹತೋ ಘೋಷಂ ಶ್ರುತ್ವಾ ಭಯಂ ಮಮ।
ಆಗತಂ ವೈ ಮಹಾಬುದ್ಧೇ ಸ್ವನ ಏಷ ಹಿ ದಾರುಣಃ॥
ಶ್ರೂಯತೇ ನ ಸ ಮಾಂ ಹನ್ಯಾದಿತಿ ತಸ್ಮಾದಪಾಕ್ರಮೇ॥ - ೧೬೮/೧೦
ದುಃಖಂ ಹಿ ಮೃತ್ಯುರ್ಭೂತಾನಾಂ ಜೀವಿತಂ ಚ ಸುದುರ್ಲಭಮ್।
ಅತೋ ಭೀತಃ ಪಲಾಯಾಮಿ ಗಚ್ಛೇಯಂ ನಾ ಸುಖಂ ಸುಖಾತ್॥ - ೧೬೮/೧೩

೨ ಇತ್ಯುಕ್ತಃ ಸ ತು ತಂ ಪ್ರಾಹ -
ಶಬ್ದಃ ಸ್ಪರ್ಶಂ ರಸಂ ಗಂಧಂ ಭೋಗಾಂಶ್ಚೋಚ್ಚಾವಚಾನ್ ಬಹೂನ್।
ನಾಭಿಜಾನಾಸಿ ಕೀಟ ತ್ವಂ ಶ್ರೇಯೋ ಮರಣ ಏವ ಚ॥ - ೧೬೮/೧೪,೧೫

೩. ಸರ್ವತ್ರ ನಿರತೋ ಜೀವ ಇತೀಹಾಪಿ ಸುಖಂ ಮಮ।

ನಾನು ಉತ್ತಮ ಭೋಜನ ಬಯಸುವವೂ ಆಗಿದ್ದೆ ಭೃತ್ಯಾತಿಥಿಗಳಿಗೆ ಉಣಬಡಿಸದೆ ಮೊದಲೇ ಉಣ್ಣುತ್ತಿದ್ದೆ ದೇವಕಾರ್ಯ ಪಿತೃಕಾರ್ಯಗಳಿಗೆ ಶ್ರದ್ಧೆಯಿಂದ ಸಿದ್ಧಪಡಿಸಿದ ಅನ್ನವನ್ನು ಲೋಭದಿಂದಾಗಿಯಾರಿಗೂ ದಾನಮಾಡುತ್ತಿರಲಿಲ್ಲ. ಒಂದುವೇಳೆಪರಿಜನರು(ಕುಟುಂಬದವರು) ದಾನ ಮಾಡಿದರೂ, ಅದನ್ನು ಕಿತ್ತುಕೊಳ್ಳುತ್ತಿದ್ದೆ ತಮಗೆ ಬಂದ ಭಯ ನಿವಾರಣೆಗೆ ಶರಣಾಗತರಾಗಿ ಬಂದಜನರಿಗೆರಕ್ಷಣೆಕೊಡದೆಅವರನ್ನುತ್ಯಾಗಮಾಡುತ್ತಿದ್ದೆ(ಅವರನ್ನುಹಿಡಿದುಕೊಟ್ಟುಅವರನಾಶಕ್ಕೆ ಕಾರಣನಾಗುತ್ತಿದ್ದೆ – ಕೌಶಿಕ ಬ್ರಾಹ್ಮಣನಂತೆ ಉಲ್ಲೇಖ ತೋರಿಸಿ[೧]). ಬೇರೆ ಮನುಷ್ಯರ ಧನಧಾನ್ಯ, ಪ್ರಿಯರು, ಪತ್ನಿಯರು, ಅವರ ವಾಹನ, ವಸ್ತ್ರ ಐಶ್ವರ್ಯವನ್ನು ನೋಡಿ ಅಸೂಯೆ ಪಡುತ್ತಿದ್ದೆ ಅಲ್ಲಿಗೆ ಪರಸುಖವನ್ನು ನೋಡಿ ಮಾತ್ಸರ್ಯ ಪಡುತ್ತಾ, ಇತರರ ಧರ್ಮ, ಅರ್ಥ, ಕಾಮಗಳನ್ನು ನಾಶಕನಾಗಿ, ಅವರ ಪಾಲಿಗೆ ಆತತಾಯಿಯಾಗಿ(ಶತ್ರು), ಮೂರ್ಖರನ್ನು ಅನುಸರಿಸುತ್ತಿದ್ದೆ ನಾನು ಹಿಂದೆ ಹೆಚ್ಚಾಗಿ ಕ್ರೌರ್ಯಾದಿ ಗುಣಗಳಿಂದಲೇ ಕೂಡಿದ್ದೆ ಅದೆಲ್ಲವನ್ನು ಈಗ ನೆನಪಿಸಿಕೊಳ್ಳುತ್ತಾ ಪ್ರಿಯ ಮಗನನ್ನು ಕಳೆದುಕೊಂಡವನಂತೆ ಪಶ್ಚಾತ್ತಾಪ ಪಡುತ್ತಿದ್ದೇನೆ[೨].

ಅಲ್ಲದೇ ನಾನು ಮಾಡಿದ ಅಲ್ಪ ಶುಭಕರ್ಮಗಳ ಫಲವನ್ನೂ ತಿಳಿದಿದ್ದೇನೆ. ವೃದ್ಧಳಾದ ತಾಯಿಯನ್ನು ಪೂಜಿಸಿದೆ. ಬ್ರಾಹ್ಮಣರನ್ನು ಪೂಜಿಸಿದೆ. ನಮ್ಮ ಮನೆಗೆ ಬಂದ

---

ಚೇತಯಾಮಿ ಮಹಾಪ್ರಾಜ್ಞ ತಸ್ಮಾದಿಚ್ಛಾಮಿ ಜೀವಿತಮ್ ॥ – ೧೬
.............
ಮಾನುಷಾಸ್ತಿರ್ಯಗಾಶ್ಚೈವ ಪೃಥಗ್ಭೋಗಾ ವಿಶೇಷತಃ ॥ – ೧೭
ಅಹಮಾಸಂ ಮನುಷ್ಯೋ ವೈ ಶೂದ್ರೋ ಬಹುಧನಃ ಪುರಾ ।
ಅಬ್ರಹ್ಮಣ್ಯೋ ನೃಶಂಸಶ್ಚ ಕದರ್ಯೋ ವೃದ್ಧಿಜೀವನಃ ॥
ವಾಕ್ ತೀಕ್ಷ್ಣೋ ನಿಕೃತಿಪ್ರಜ್ಞೋ ಮೋಷ್ಟಾ ವಿಶ್ವಸ್ಯ ಸರ್ವಶಃ ॥
.......................... ಪರಸ್ವಹರಣೇ ರತಃ ॥ –೧೬೮/೧೮,೧೯

೧ ಇದು ಮಹಾಭಾರತತಾತ್ಪರ್ಯನಿರ್ಣಯದಲ್ಲಿದೆ. (ಅ. ೨೭/೧೨೧)
– ಮತ್ತು ಗೀತಾಪ್ರೆಸ್ ಸಂಪಾದನೆ (ಮ.ಭಾ.ಕರ್ಣಪರ್ವ – ಅ. ೬೯)

೨ ದೇವಾರ್ಥಂ ಪಿತೃಯಜ್ಞಾರ್ಥಮನ್ನಂ ಶ್ರದ್ಧಾಕೃತಂ ಮಯಾ ।
ನ ದತ್ತಮರ್ಥಕಾಮೇನ ದತ್ತಮನ್ನಂ ಲುನಾಮಿ ಚ ॥
ಗುಪ್ತಂ ಶರಣಮಾಶ್ರಿತ್ಯ ಭಯೇಷು ಶರಣಾಗತಾಃ ।
ಅಕಸ್ಮಾನ್ನೋ ಭಯಾತ್ ತ್ಯಕ್ತಾ ನ ಚ ತ್ರಾತಾಽಭಯೈಷಿಣಃ ॥
ಧನಧಾನ್ಯಂ ಪ್ರಿಯಾ ದಾರಾ ಯಾನಂ ವಾಸಸ್ತಥಾದ್ಭುತಮ್ ।
ಶ್ರಿಯಂ ದೃಷ್ಟ್ವಾ ಮನುಷ್ಯಾಣಾಂ ಅಸೂಯಾಮಿ ನಿರರ್ಥಕಮ್ ॥
ಈರ್ಷ್ಯುಃ ಪರಸುಖಂ ದೃಷ್ಟ್ವಾ ಆತತಾಯ್ಯ ಬುಭೂಷಕಃ
ತ್ರಿವರ್ಗ ಹಂತಾ ಚಾನ್ಯೇಷಾಂ ......................... ॥
ನೃಶಂಸಗುಣಭೂಯಿಷ್ಠಂ ಪುರಾ ಕರ್ಮ ಕೃತಂ ಮಯಾ ।
ಸ್ಮೃತ್ವಾ ತದನುತಪ್ಯೇಽಹಂ ತ್ಯಕ್ತ್ವಾ ಪ್ರಿಯಮಿವಾತ್ಮಜಮ್ । – ೧೬೮/೨೧-೨೫

ಸತ್ಕುಲಪ್ರಸೂತನಾದ, ಸದ್ಗುಣಿಯಾದ ಬ್ರಾಹ್ಮಣನನ್ನು ಪೂಜಿಸಿದೆ. ಅದರಿಂದಾಗಿ ನನಗೆ ಹಿಂದಿನ ಸ್ಮರಣೆ ಹೋಗಿಲ್ಲ[೧]. ಅಂತಹ ಶುಭಕರ್ಮದಿಂದಾಗಿ ನನಗೆ ಈ ಕೀಟಯೋನಿಯಲ್ಲೂ ಸುಖದ ಆಸೆ ಇದೆ. ತಪೋಧನನೇ! ಆದ್ದರಿಂದ ನಿನ್ನಿಂದ ನನ್ನ ಶ್ರೇಯಃ ಸಾಧನವನ್ನು ತಿಳಿಯಲು ಇಚ್ಛೆ ಪಡುತ್ತೇನೆ.

ಕೀಟದ ಮಾತುಗಳನ್ನು ಕೇಳಿ ವ್ಯಾಸರು ಕೀಟವನ್ನು ಕುರಿತು 'ಕೀಟಜನ್ಮದಲ್ಲಿದ್ದೂ ಕೂಡಾ ನಿನಗೆ ಪೂರ್ವಜನ್ಮಸ್ಮರಣೆ ಇರುವುದು ನನ್ನ ಅನುಗ್ರಹವೆಂದು ತಿಳಿ. ನನ್ನ ತಪೋಬಲದಿಂದ ನಿನ್ನನ್ನು ನನ್ನ ದರ್ಶನ ಮಾಡಿದ್ದರಿಂದಲೇ, ಈ ಕೀಟಯೋನಿಯಿಂದ ದಾಟಿಸುವೆ. ನಿನಗೆ ಇಷ್ಟವಾದರೆ ಮನುಷ್ಯ ಜನ್ಮ ಕೊಡುವೆ. ಅಲ್ಲಿ ನೀನು ಮಹಾಧರ್ಮವನ್ನು ಸಂಪಾದಿಸುವೆ. ವಾಗಾದಿ ಇಂದ್ರಿಯಗಳಿಂದಲೂ, ಬುದ್ಧಿಯಿಂದಲೂ, ವಿವೇಕಿಯಾಗಿ ಮಂತ್ರಾರ್ಥವನ್ನು ತಿಳಿದು ಜೀವಿಸುವ ಮನುಷ್ಯನಿಗೆ ಯಾವ ಪುಣ್ಯದ ಹಾನಿಯೂ ಉಂಟಾಗದು. ಬ್ರಾಹ್ಮಣನು ಬದುಕಿ ಸೂರ್ಯಚಂದ್ರರ ಪೂಜೆ ಮಾಡುತ್ತಾನೆ. ಪುಣ್ಯಕಥೆಯನ್ನು ಪ್ರವಚನ ಮಾಡುತ್ತಾನೆ. ಅಂತಹ ಮನುಷ್ಯನಾಗುವೆ. ಅಲ್ಲಿ ಉಳಿದ ಯೋನಿಗಳು ನಿನಗೆ ಸೇವೆ ಸಲ್ಲಿಸುತ್ತಾರೆ (ಬ್ರಾಹ್ಮಣನಾದಾಗ). ನೀನು ಇಷ್ಟಪಟ್ಟರೆ ಬ್ರಾಹ್ಮಣನನ್ನಾಗಿ ಮಾಡುವೆ.[೨]'

ಈ ವ್ಯಾಸರ ಮಾತುಗಳನ್ನು ಕೇಳಿ ಕೀಟವು 'ಹಾಗೆಯೇ ಆಗಲಿ' ಎಂದು ಹೇಳಿ, ದಾರಿಯಲ್ಲಿ ನಿಂತು ಬೇರೆಲ್ಲ ಯೋನಿಗಳನ್ನೂ ನೋಡಿತು (ಈ ಘಟ್ಟದಲ್ಲಿ ಔತ್ತರೇಯಪಾಠದಲ್ಲಿ ಕೀಟವು

---

೧ ಶುಭಾನಾಮಪಿ ಜಾನಾಮಿ ಕೃತಾನಾಂ ಕರ್ಮಣಾಂ ಫಲಮ್ ।
ಮಾತಾ ಚ ಪೂಜಿತಾ ವೃದ್ಧಾ ಬ್ರಾಹ್ಮಣಾಶ್ಚಾರ್ಚಿತಾ ಮಯಾ ।
ಸಕೃತ್ ಜಾತಿಗುಣೋಪೇತಃ ಸಂಗತ್ಯಾಗೃಹಮಾಗತಃ ।
ಅತಿಥಿಃ ಪೂಜಿತೋ ಬ್ರಹ್ಮನ್ ತೇನ ಮಾಂ ನಾಜಹಾತ್ ಸ್ಮೃತಿಃ ॥
ಕರ್ಮಣಾ ತೇನ ಚೈವಾಹಂ ಸುಖಾಶಾಮಿಹ ಲಕ್ಷಯೇ ।
ತಚ್ಛ್ರೋತುಮಿಚ್ಛಾಮಿ ತ್ವತ್ತಃ ಶ್ರೇಯಸ್ತಪೋಧನ ॥ - ೧೬೮/೨೬-೨೮

೨ ಶುಭೇನ ಕರ್ಮಣಾ ಯದ್ವೈ ತಿರ್ಯಗ್ಯೋನೌ ನ ಮುಹ್ಯಸೇ ।
ಮಮೈವ ಕೀಟ ತತ್ಕರ್ಮ ಯೇನ ತ್ವಂ ನ ಪ್ರಮುಹ್ಯಸೇ ॥
ಅಹಂ ಹಿ ದರ್ಶನಾದೇವ ತಾರಯಾಮಿ ತಪೋ ಬಲಾತ್ ।
ಜಾನಾಮಿ ಪಾಪೈಃ ಸ್ವಕೃತೈರ್ಗತಂ ತ್ವಾಂ ಕೀಟ ಕೀಟತಾಮ್ ॥
ಅವಾಪ್ಸ್ಯಸಿ ಪರಂ ಧರ್ಮಂ ಮಾನುಷ್ಯೇ ಯದಿ ಮನ್ಯಸೇ ।
ವಾಗ್ಬುದ್ಧಿ ಪಾಣಿಪಾದೈಶ್ಚಾಪ್ಯುಪೇತಸ್ಯ ವಿಪಶ್ಚಿತಃ ॥
ಕಿಂ ಹೀಯತೇ ಮನುಷ್ಯಸ್ಯ ಮಂತ್ರಾರ್ಥಸ್ಯಾಪಿ ಜೀವತಃ ।
ಜೀವನ್ ಹಿ ಕುರುತೇ ಪೂಜಾಂ ವಿಪ್ರಾಗ್ರ್ಯಃ ಶಶಿಸೂರ್ಯಯೋಃ ।
ಬ್ರುವನ್ನಪಿ ಕಥಾಂ ಪುಣ್ಯಾಂ ತತ್ರ ಕೀಟತ್ವಮೇಷ್ಯಸಿ ।
ತತ್ರ ತೇಽಹಂ ವಿನೇಷ್ಯಾಮಿ ಬ್ರಹ್ಮತ್ವಂ ಯತ್ರ ಚೇಚ್ಛಸಿ ॥
ಸ ತಥೇತಿ ಪ್ರತಿಶ್ರುತ್ಯ ಕೀಟೋ ಸಮವತಿಷ್ಠತ ।
ತಮೃಷಿಂ ದ್ರಷ್ಟುಮಗಮತ್ ಸರ್ವಾಸ್ವನ್ಯಾಸು ಯೋನಿಷು ॥ - ೧೬೯/೧-೮

ಬಂಡಿಯ ದಾರಿಯಲ್ಲಿ ನಿಂತಿತು. ಆಗ ಜೋರಾಗಿ ಬಂದ ಬಂಡಿಯ ಚಕ್ರದ ಓಟದಿಂದ ಕೀಟವು ಪ್ರಾಣ ತೊರೆಯಿತು. ಅನಂತರ ವಿವಿಧ ಯೋನಿಗಳನ್ನು ಹೊಂದಿ ಕ್ಷತ್ರಿಯನಾಗಿ ಹುಟ್ಟಿತು ಎಂಬ ಭಾವನೆ ಬರುವಂತೆ ಇದೆ[೧]).

ಕೀಟ ವ್ಯಾಸರನ್ನು ಕುರಿತು ಹೀಗೆ ಹೇಳಿತು (ಇದು ತತ್ತ್ವಸಂಸತ್ ಪಾಠದ ಪ್ರಕಾರ).

'ನಾನು ಕೀಟನಾಗಿಯೇ ರಾಜನಾಗಬೇಕೆಂದು ಅಪೇಕ್ಷೆ ಪಟ್ಟಿದ್ದೆ. ಅದು ಈಗ ಲಭಿಸಿದೆ. ರಾಜಮರ್ಯಾದೆಯಿಂದ ನನಗೆ ಎಲ್ಲ ವೈಭವಗಳು ದೊರಕಿವೆ. ಅವು ಯಾವೆಂದರೆ ಸುವರ್ಣದ ಮಾಲೆಗಳನ್ನು ಧರಿಸಿದ ಆನೆಗಳು ನನ್ನನ್ನು ಹೊರುತ್ತಿವೆ. ನನ್ನ ರಥಕ್ಕೆ ಕಾಂಬೋಜದ ಕುದುರೆಗಳಿವೆ. ನನ್ನನ್ನು ಒಂಟೆ ಹೇಸಗತ್ತೆಗಳನ್ನು ಹೂಡಿದ ವಾಹನಗಳು ಕರೆದುಕೊಂಡು ಹೋಗುತ್ತಿವೆ. ನಾನು ಸುಖಪೂರ್ಣವಾದ ಶಯನಗಳಲ್ಲಿ ಮಲಗುತ್ತೇನೆ. ನಿನ್ನ ಅನುಗ್ರಹದಿಂದ ನಾನು ಕೀಟಜನ್ಮ ಹೊಂದಿಯೇ ರಾಜಪುತ್ರನಾಗಿದ್ದೇನೆ[೨].

ಮಹಾಪ್ರಾಜ್ಞನೇ! ನಾನು ನಿನಗೆ ಏನು(ಸೇವೆ) ಮಾಡಲಿ. ಆದೇಶ ನೀಡು. ನಿನ್ನ ತಪೋಬಲದಿಂದ (ಅನುಗ್ರಹದಿಂದ) ನಾನು ಇಂತಹ ಸ್ಥಾನ ಪಡೆದಿದ್ದೇನೆ.

ಆಗ ವ್ಯಾಸರು ನುಡಿದರು 'ಎಲೈ ರಾಜನೇ! ನೀನು ನನ್ನನ್ನು ವಾಕ್ ಪುಷ್ಪಗಳಿಂದ ಇಂದು ಪೂಜಿಸಿದೆ. ದೈವಾನುಗ್ರಹದಿಂದ ಕೀಟಜನ್ಮ ಹೊಂದಿಯೂ ನಿನಗೆ ಪೂರ್ವ ಸ್ಮರಣೆ ಬಂದಿದೆ[೩].

ಆದರೆ ನೀನು ಹಿಂದೆ ಶೂದ್ರನಾಗಿ ಕ್ರೌರ್ಯಾದಿ ವರ್ತನೆಯಿಂದ ಮಾಡಿದ ಪಾಪಗಳಿಗೆ ನಾಶವಿಲ್ಲ. ನೀನು ತಾಯಿಸೇವೆ ಮಾಡಿದ್ದರಿಂದ ನಿನಗೆ ನನ್ನ ದರ್ಶನ ಭಾಗ್ಯ ಸಿಕ್ಕಿದೆ. ನೀನು(ಕೀಟನಾಗಿಯೇ) ರಾಜಪುತ್ರನಾಗಿದ್ದೀಯಷ್ಟೇ. ಮುಂದೆ ಬ್ರಾಹ್ಮಣ್ಯ ಬರುತ್ತದೆ. ಎಲೈ ರಾಜನೇ! ಗೋಬ್ರಾಹ್ಮಣರ ಸಲುವಾಗಿ ರಣರಂಗದಲ್ಲಿ ಹೋರಾಡಿ ಪ್ರಾಣತ್ಯಜಿಸಿ, ರಾಜಪುತ್ರ ಸುಖಹೊಂದಿ (ಭೂರಿ ದಕ್ಷಿಣೆಯುಳ್ಳ ಯಜ್ಞಗಳನ್ನು ಮಾಡಿ), ಸ್ವರ್ಗದಲ್ಲಿ ಪರಮಾತ್ಮಧ್ಯಾನ ಮಾಡುತ್ತಾ ಸುಖದಿಂದ ಇರುವೆ.

---

೧ ಶಕಟೋ ವ್ರಜಂಶ್ಚ ಸುಮಹಾನ್ ಗತಶ್ಚ ಯದೃಚ್ಛಯಾ ।
ಚಕ್ರಾಕ್ರಮೇಣ ಭಿನ್ನಶ್ಚ ಕೀಟಃ ಪ್ರಾಣಾನ್ ಮುಮೋಚ ಹ ॥
ಸಂಭೂತಃ ಕ್ಷತ್ರಿಯ ಕುಲೇ ಪ್ರಸಾದಾದಮಿತೌಜಸಃ ॥ – ೧೬೯/೮,೯

೨ ಇದಂ ತದತುಲಂ ಸ್ಥಾನಮೀಪ್ಸಿತಂ ದಶಭಿರ್ಗುಣೈಃ ।
ಯದಹಂ ಪ್ರಾಪ್ಯ ಕೀಟತ್ವಮಾಗತೋ ರಾಜಪುತ್ರತಾಮ್ ॥
ಪ್ರಸಾದಾತ್ ಸತ್ಯಸಂಧಸ್ಯ ಭವತೋಽಮಿತತೇಜಸಃ ।
ಯದಹಂ ಕೀಟತಾಂ ಪ್ರಾಪ್ಯ ಸಂಪ್ರಾಪ್ತೋ ರಾಜಪುತ್ರತಾಮ್ ॥
ನಮಸ್ತೇಽಸ್ತು ಮಹಾಪ್ರಾಜ್ಞ ಕಿಂ ಕರೋಮಿ ಪ್ರಶಾಧಿ ಮಾಮ್ ।
ತ್ವತ್ತಪೋಬಲನಿರ್ದಿಷ್ಟಮಿದಂ ಹ್ಯಧಿಗತಂ ಮಯಾ ॥ – ೧೬೯/೧೧-೧೭

೩ ಅರ್ಚಿತೋಽಹಂ ತ್ವಯಾ ರಾಜನ್ ವಾಗ್ಭಿರದ್ಯ ಯದೃಚ್ಛಯಾ ।
ಅದ್ಯ ತೇ ಕೀಟತಾಂ ಪ್ರಾಪ್ಯ ಸ್ಮೃತಿರ್ಜಾತಾ ಜುಗುಪ್ಸಿತಾ ॥ – ೧೬೯/೧೮

ಸತ್ಕುಲಪ್ರಸೂತನಾದ, ಸದ್ಗುಣಿಯಾದ ಬ್ರಾಹ್ಮಣನನ್ನು ಪೂಜಿಸಿದೆ. ಆದರಿಂದಾಗಿ ನನಗೆ ಹಿಂದಿನ ಸ್ಮರಣೆ ಹೋಗಿಲ್ಲ[೧]. ಅಂತಹ ಶುಭಕರ್ಮದಿಂದಾಗಿ ನನಗೆ ಈ ಕೀಟಯೋನಿಯಲ್ಲೂ ಸುಖದ ಆಸೆ ಇದೆ. ತಪೋಧನನೇ! ಆದ್ದರಿಂದ ನಿನ್ನಿಂದ ನನ್ನ ಶ್ರೇಯಃ ಸಾಧನವನ್ನು ತಿಳಿಯಲು ಇಚ್ಛೆಪಡುತ್ತೇನೆ.

ಕೀಟದ ಮಾತುಗಳನ್ನು ಕೇಳಿ ವ್ಯಾಸರು ಕೀಟವನ್ನು ಕುರಿತು 'ಕೀಟಜನ್ಮದಲ್ಲಿದ್ದೂ ಕೂಡಾ ನಿನಗೆ ಪೂರ್ವಜನ್ಮಸ್ಮರಣೆ ಇರುವುದು ನನ್ನ ಅನುಗ್ರಹವೆಂದು ತಿಳಿ. ನನ್ನ ತಪೋಬಲದಿಂದ ನಿನ್ನನ್ನು, ನನ್ನ ದರ್ಶನ ಮಾಡಿದ್ದರಿಂದಲೇ, ಈ ಕೀಟಯೋನಿಯಿಂದ ದಾಟಿಸುವೆ. ನಿನಗೆ ಇಷ್ಟವಾದರೆ ಮನುಷ್ಯ ಜನ್ಮ ಕೊಡುವೆ. ಅಲ್ಲಿ ನೀನು ಮಹಾಧರ್ಮವನ್ನು ಸಂಪಾದಿಸುವೆ. ವಾಗಾದಿ ಇಂದ್ರಿಯಗಳಿಂದಲೂ, ಬುದ್ಧಿಯಿಂದಲೂ, ವಿವೇಕಿಯಾಗಿ ಮಂತ್ರಾರ್ಥವನ್ನು ತಿಳಿದು ಜೀವಿಸುವ ಮನುಷ್ಯನಿಗೆ ಯಾವ ಪುಣ್ಯದ ಹಾನಿಯೂ ಉಂಟಾಗದು. ಬ್ರಾಹ್ಮಣನು ಬದುಕಿ ಸೂರ್ಯಚಂದ್ರರ ಪೂಜೆ ಮಾಡುತ್ತಾನೆ. ಪುಣ್ಯಕಥೆಯನ್ನು ಪ್ರವಚನ ಮಾಡುತ್ತಾನೆ. ಅಂತಹ ಮನುಷ್ಯನಾಗುವೆ. ಅಲ್ಲಿ ಉಳಿದ ಯೋನಿಗಳು ನಿನಗೆ ಸೇವೆ ಸಲ್ಲಿಸುತ್ತಾರೆ (ಬ್ರಾಹ್ಮಣನಾದಾಗ). ನೀನು ಇಷ್ಟಪಟ್ಟರೆ ಬ್ರಾಹ್ಮಣನನ್ನಾಗಿ ಮಾಡುವೆ.[೨]'

ಈ ವ್ಯಾಸರ ಮಾತುಗಳನ್ನು ಕೇಳಿ ಕೀಟವು 'ಹಾಗೆಯೇ ಆಗಲಿ' ಎಂದು ಹೇಳಿ, ದಾರಿಯಲ್ಲಿ ನಿಂತು ಬೇರೆಲ್ಲ ಯೋನಿಗಳನ್ನೂ ನೋಡಿತು (ಈ ಘಟ್ಟದಲ್ಲಿ ಔತ್ತರೇಯಪಾಠದಲ್ಲಿ ಕೀಟವು

೧ ಶುಭಾನಾಮಪಿ ಜಾನಾಮಿ ಕೃತಾನಾಂ ಕರ್ಮಣಾಂ ಫಲಮ್ ।
ಮಾತಾ ಚ ಪೂಜಿತಾ ವೃದ್ಧಾ ಬ್ರಾಹ್ಮಣಾಶ್ಚಾರ್ಚಿತಾ ಮಯಾ ।
ಸಕೃತ್ ಜಾತಿಗುಣೋಪೇತಃ ಸಂಗತ್ಯಾಗೃಹಮಾಗತಃ ।
ಅತಿಥಿಃ ಪೂಜಿತೋ ಬ್ರಹ್ಮನ್ ತೇನ ಮಾಂ ನಾಜಹಾತ್ ಸ್ಮೃತಿಃ ॥
ಕರ್ಮಣಾ ತೇನ ಚೈವಾಹಂ ಸುಖಾಶಾಮಿಹ ಲಕ್ಷಯೇ ।
ತಚ್ಛ್ರೋತುಮಿಚ್ಛಾಮಿ ತ್ವತ್ತಃ ಶ್ರೇಯಸ್ತಪೋಧನ ॥ – ೧೬೮/೨೬-೨೮

೨ ಶುಭೇನ ಕರ್ಮಣಾ ಯದ್ವೈ ತಿರ್ಯಗ್ಯೋನೌ ನ ಮುಹ್ಯಸೇ ।
ಮಮೈವ ಕೀಟ ತತ್ಕರ್ಮ ಯೇನ ತ್ವಂ ನ ಪ್ರಮುಹ್ಯಸೇ ॥
ಅಹಂ ಹಿ ದರ್ಶನಾದೇವ ತಾರಯಾಮಿ ತಪೋ ಬಲಾತ್ ।
ಜಾನಾಮಿ ಪಾಪೈಃ ಸ್ವಕೃತೈರ್ಗತಂ ತ್ವಾಂ ಕೀಟ ಕೀಟತಾಮ್ ॥
ಅವಾಪ್ಸ್ಯಸಿ ಪರಂ ಧರ್ಮಂ ಮಾನುಷ್ಯೇ ಯದಿ ಮನ್ಯಸೇ ।
ವಾಗ್ಬುದ್ಧಿ ಪಾಣಿಪಾದೈಶ್ಚಾಪ್ಯುಪೇತಸ್ಯ ವಿಪಶ್ಚಿತಃ ॥
ಕಿಂ ಹೀಯತೇ ಮನುಷ್ಯಸ್ಯ ಮಂತ್ರಾರ್ಥಸ್ಯಾಪಿ ಜೀವತಃ ।
ಜೀವನ್ ಹಿ ಕುರುತೇ ಪೂಜಾಂ ವಿಪ್ರಾಗ್ರ್ಯಃ ಶಶಿಸೂರ್ಯಯೋಃ ।
ಬ್ರುವನ್ನಪಿ ಕಥಾಂ ಪುಣ್ಯಾಂ ತತ್ರ ಕೀಟತ್ವಮೇಷ್ಯಸಿ ।
ತತ್ರ ತೇಽಹಂ ವಿನೇಷ್ಯಾಮಿ ಬ್ರಹ್ಮತ್ವಂ ಯತ್ರ ಚೇಚ್ಛಸಿ ॥
ಸ ತಥೇತಿ ಪ್ರತಿಶ್ರುತ್ಯ ಕೀಟೋ ಸಮವತಿಷ್ಠತ ।
ತಮೃಷಿಂ ದ್ರಷ್ಟುಮಗಮತ್ ಸರ್ವಾಸ್ವನ್ಯಾಸು ಯೋನಿಷು ॥ – ೧೬೯/೧-೮

ಬಂಡಿಯ ದಾರಿಯಲ್ಲಿ ನಿಂತಿತು. ಆಗ ಜೋರಾಗಿ ಬಂದ ಬಂಡಿಯ ಚಕ್ರದ ಓಟದಿಂದ ಕೀಟವು ಪ್ರಾಣ ತೊರೆಯಿತು. ಅನಂತರ ವಿವಿಧ ಯೋನಿಗಳನ್ನು ಹೊಂದಿ ಕ್ಷತ್ರಿಯನಾಗಿ ಹುಟ್ಟಿತು ಎಂಬ ಭಾವನೆ ಬರುವಂತೆ ಇದೆ[1]).

ಕೀಟ ವ್ಯಾಸರನ್ನು ಕುರಿತು ಹೀಗೆ ಹೇಳಿತು (ಇದು ತತ್ತ್ವಸಂಸತ್ ಪಾಠದ ಪ್ರಕಾರ).

'ನಾನು ಕೀಟನಾಗಿಯೇ ರಾಜನಾಗಬೇಕೆಂದು ಅಪೇಕ್ಷೆ ಪಟ್ಟಿದ್ದೆ. ಅದು ಈಗ ಲಭಿಸಿದೆ. ರಾಜಮರ್ಯಾದೆಯಿಂದ ನನಗೆ ಎಲ್ಲ ವೈಭವಗಳು ದೊರಕಿವೆ. ಅವು ಯಾವೆಂದರೆ ಸುವರ್ಣದ ಮಾಲೆಗಳನ್ನು ಧರಿಸಿದ ಆನೆಗಳು ನನ್ನನ್ನು ಹೊರುತ್ತಿವೆ. ನನ್ನ ರಥಕ್ಕೆ ಕಾಂಬೋಜದ ಕುದುರೆಗಳಿವೆ. ನನ್ನನ್ನು ಒಂಟೆ ಹೇಸಗತ್ತೆಗಳನ್ನು ಹೂಡಿದ ವಾಹನಗಳು ಕರೆದುಕೊಂಡು ಹೋಗುತ್ತಿವೆ. ನಾನು ಸುಖಪೂರ್ಣವಾದ ಶಯನಗಳಲ್ಲಿ ಮಲಗುತ್ತೇನೆ. ನಿನ್ನ ಅನುಗ್ರಹದಿಂದ ನಾನು ಕೀಟಜನ್ಮ ಹೊಂದಿಯೇ ರಾಜಪುತ್ರನಾಗಿದ್ದೇನೆ[2].

ಮಹಾಪ್ರಾಜ್ಞನೇ! ನಾನು ನಿನಗೆ ಏನು(ಸೇವೆ) ಮಾಡಲಿ. ಆದೇಶ ನೀಡು. ನಿನ್ನ ತಪೋಬಲದಿಂದ (ಅನುಗ್ರಹದಿಂದ) ನಾನು ಇಂತಹ ಸ್ಥಾನ ಪಡೆದಿದ್ದೇನೆ.

ಆಗ ವ್ಯಾಸರು ನುಡಿದರು 'ಎಲೈ ರಾಜನೇ! ನೀನು ನನ್ನನ್ನು ವಾಕ್ ಪುಷ್ಪಗಳಿಂದ ಇಂದು ಪೂಜಿಸಿದೆ. ದೈವಾನುಗ್ರಹದಿಂದ ಕೀಟಜನ್ಮ ಹೊಂದಿಯೂ ನಿನಗೆ ಪೂರ್ವ ಸ್ಮರಣೆ ಬಂದಿದೆ[3].

ಆದರೆ ನೀನು ಹಿಂದೆ ಶೂದ್ರನಾಗಿ ಕ್ರೌರ್ಯಾದಿ ವರ್ತನೆಯಿಂದ ಮಾಡಿದ ಪಾಪಗಳಿಗೆ ನಾಶವಿಲ್ಲ. ನೀನು ತಾಯಿಸೇವೆ ಮಾಡಿದ್ದರಿಂದ ನಿನಗೆ ನನ್ನ ದರ್ಶನ ಭಾಗ್ಯ ಸಿಕ್ಕಿದೆ. ನೀನು(ಕೀಟನಾಗಿಯೇ) ರಾಜಪುತ್ರನಾಗಿದ್ದೀಯಷ್ಟೇ. ಮುಂದೆ ಬ್ರಾಹ್ಮಣ್ಯ ಬರುತ್ತದೆ. ಎಲೈ ರಾಜನೇ! ಗೋಬ್ರಾಹ್ಮಣರ ಸಲುವಾಗಿ ರಣರಂಗದಲ್ಲಿ ಹೋರಾಡಿ ಪ್ರಾಣತ್ಯಜಿಸಿ, ರಾಜಪುತ್ರ ಸುಖಹೊಂದಿ (ಭೂರಿ ದಕ್ಷಿಣೆಯುಳ್ಳ ಯಜ್ಞಗಳನ್ನು ಮಾಡಿ), ಸ್ವರ್ಗದಲ್ಲಿ ಪರಮಾತ್ಮಧ್ಯಾನ ಮಾಡುತ್ತಾ ಸುಖದಿಂದ ಇರುವೆ.

---

೧ ಶಕಟೋ ವ್ರಜಂಶ್ಚ ಸುಮಹಾನ್ ಗತಶ್ಚ ಯದೃಚ್ಛಯಾ ।
ಚಕ್ರಾಕ್ರಮೇಣ ಭಿನ್ನಶ್ಚ ಕೀಟಃ ಪ್ರಾಣಾನ್ ಮುಮೋಚ ಹ ॥
ಸಂಭೂತಃ ಕ್ಷತ್ರಿಯ ಕುಲೇ ಪ್ರಸಾದಾದಮಿತೌಜಸಃ ॥ – ೧೬೯/೮,೯

೨ ಇದಂ ತದತುಲಂ ಸ್ಥಾನಮೀಪ್ಸಿತಂ ದಶಭಿರ್ಗುಣೈಃ ।
ಯದಹಂ ಪ್ರಾಪ್ಯ ಕೀಟತ್ವಮಾಗತೋ ರಾಜಪುತ್ರತಾಮ್ ॥
ಪ್ರಸಾದಾತ್ ಸತ್ಯಸಂಧಸ್ಯ ಭವತೋಽಮಿತತೇಜಸಃ ।
ಯದಹಂ ಕೀಟತಾಂ ಪ್ರಾಪ್ಯ ಸಂಪ್ರಾಪ್ತೋ ರಾಜಪುತ್ರತಾಮ್ ॥
ನಮಸ್ತೇಽಸ್ತು ಮಹಾಪ್ರಾಜ್ಞ ಕಿಂ ಕರೋಮಿ ಪ್ರಶಾಧಿ ಮಾಮ್ ।
ತ್ವತ್ತಪೋಬಲನಿರ್ದಿಷ್ಟಮಿದಂ ಹ್ಯಧಿಗತಂ ಮಯಾ ॥ – ೧೬೯/೧೧-೧೭

೩ ಅರ್ಚಿತೋಽಹಂ ತ್ವಯಾ ರಾಜನ್ ವಾಗ್ಭಿರದ್ಯ ಯದೃಚ್ಛಯಾ ।
ಅದ್ಯ ತೇ ಕೀಟತಾಂ ಪ್ರಾಪ್ಯ ಸ್ಮೃತಿರ್ಜಾತಾ ಜುಗುಪ್ಸಿತಾ ॥ – ೧೬೯/೧೮

ವಸ್ತುಸ್ಥಿತಿಯಲ್ಲಿ ತಿರ್ಯಗ್ಯೋನಿಯಲ್ಲಿ ಜನಿಸಿದವನು ಮೊದಲು ಶೂದ್ರನಾಗುತ್ತಾನೆ. ನಂತರ ಕ್ರಮೇಣ ವೈಶ್ಯನೂ, ಕ್ಷತ್ರಿಯನಾಗಿ ಬ್ರಾಹ್ಮಣನಾಗುತ್ತಾನೆ. ಸದಾಚಾರವುಳ್ಳ ಬ್ರಾಹ್ಮಣನು ಸ್ವರ್ಗ ಹೊಂದುತ್ತಾನೆ[1].

ಕ್ಷತ್ರಜನ್ಮವನ್ನು ಹೊಂದಿದ ಆ ಪರಾಕ್ರಮಶಾಲಿಯಾದ ಕೀಟವು ತನ್ನ ಹಿಂದಿನ ಕೀಟಜನ್ಮವನ್ನು ಸ್ಮರಿಸುತ್ತಲೇ ಕೀಟಜನ್ಮವನ್ನು ತ್ಯಜಿಸಿ, ಮಹಾತಪಸ್ಸನ್ನು ಮಾಡಿತು. ಆಗ ವ್ಯಾಸರು ತಪಸ್ವಿಯನ್ನು ಕುರಿತು 'ಎಲೈ ಕೀಟವೇ! ಕ್ಷತ್ರಿಯರ ಮುಖ್ಯ ವ್ರತ ಪ್ರಜಾಪಾಲನೆ. ಇದನ್ನು ನೀನು ಚಿಂತಿಸುತ್ತಾ ಮಾಡುತ್ತಾ ಬ್ರಾಹ್ಮಣ ಜನ್ಮ ಹೊಂದುವೆ. ಕ್ಷತ್ರಿಯನಾಗಿರುವಾಗ ಶುಭಫಲಗಳನ್ನು ಹಂಚಿಕೊಂಡು, ಅಶುಭಫಲಗಳನ್ನು ಪ್ರಾಯಶ್ಚಿತ್ತಾದಿಗಳಿಂದ ಕಳೆದುಕೊಂಡು ಪ್ರಜಾಪರಿಪಾಲನೆ ಮಾಡು. ಸ್ವಧರ್ಮಾಚರಣೆಯಲ್ಲಿ ರತನಾಗು. ನಂತರ ಕ್ಷತ್ರಿಯ ದೇಹತ್ಯಾಗ ಮಾಡಿದ ನಂತರ ಬ್ರಾಹ್ಮಣಜನ್ಮ ಬರುತ್ತದೆ[2]. ನಂತರ ವ್ಯಾಸರ ಮಾತುಗಳನ್ನು ಕೇಳಿ ಕೀಟವು ಪ್ರಜೆಗಳನ್ನು ಧರ್ಮದಿಂದ ಪಾಲಿಸಿ, ಅರಣ್ಯಕ್ಕೆ ಹೋಗಿ, ತಪಸ್ಸನ್ನು ಮಾಡಿತು. ಅಲ್ಲಿ ಕೀಟಶರೀರ ತ್ಯಜಿಸಿ, ಪ್ರಜಾಪಾಲನೆ ಮಾಡಿದ ಪುಣ್ಯದಿಂದ ವಿಪ್ರತ್ವವನ್ನು ಹೊಂದಿತು. ಆ ಬ್ರಾಹ್ಮಣನನ್ನು ನೋಡಿ ಅಲ್ಲಿಗೆ ವ್ಯಾಸರು ಬಂದು ನುಡಿದರು –

'ಪ್ರತಿಯೊಬ್ಬರೂ ಪುಣ್ಯ ಮಾಡಿದವರು ಶುಭಯೋನಿಗಳಲ್ಲೂ (ಪವಿತ್ರಜನ್ಮ) ಪಾಪ ಮಾಡಿದವರು ಪಾಪಯೋನಿ(ಜನ್ಮ)ಗಳಲ್ಲೂ ಹುಟ್ಟುತ್ತಾರೆ. ಆದ್ದರಿಂದ ಮೃತ್ಯು ಭಯದಿಂದ ಹೆದರಬೇಡ. ಧರ್ಮಲೋಪ ಭಯದಿಂದ ನಿನಗೆ ಭಯವುಂಟಾದೀತು. ಆದ್ದರಿಂದ ಶ್ರೇಷ್ಠವಾದ ಧರ್ಮವನ್ನಾಚರಿಸು. ವ್ಯಾಸರ ಅನುಗ್ರಹವಚನವನ್ನು ಕೇಳಿದ ಪೂರ್ವಜನ್ಮದ ಕೀಟ, ಈಗ ಬ್ರಾಹ್ಮಣನಾಗಿ, ನಿಮ್ಮ ಅನುಗ್ರಹದಿಂದ ನಾನು ಮೊದಲಿನ ಸುಖಕ್ಕಿಂತ ಹೆಚ್ಚಿನ ಸುಖಕ್ಕೆ ಹೋಗುತ್ತಿದ್ದೇನೆ. ಧರ್ಮಕ್ಕೆ ಕಾರಣೀಭೂತವಾದ ಸಂಪತ್ತನ್ನು ಹೊಂದಿ ನನ್ನ ಪೂರ್ವ ಪಾಪವೆಲ್ಲ ನಷ್ಟವಾಗಿದೆ[3].

ಧರ್ಮರಾಜನಿಗೆ ಭೀಷ್ಮರು ಕೀಟೋಪಾಖ್ಯಾನವನ್ನು ಉಪಸಂಹಾರ ಮಾಡುತ್ತಾ 'ಧರ್ಮರಾಜನೇ! ವ್ಯಾಸರ ವಚನದಂತೆ ಕೀಟವು ದುರ್ಲಭವಾದ ಬ್ರಾಹ್ಮಣಜನ್ಮ ಹೊಂದಿ

---

೧ ತಿರ್ಯಗ್ಯೋನ್ಯಾಃ ಶೂದ್ರತಾಮಭ್ಯುಪೈತಿ
ಶೂದ್ರೋ ವೈಶ್ಯತ್ವಂ ಕ್ಷತ್ರಿಯತ್ವಂ ಚ ವೈಶ್ಯಃ।
ವೃತ್ತಶ್ಲಾಘೀ ಕ್ಷತ್ರಿಯೋ ಬ್ರಾಹ್ಮಣತ್ವಂ
ಸ್ವರ್ಗಂ ಪುಣ್ಯಂ ಬ್ರಾಹ್ಮಣಃ ಸಾಧುವೃತ್ತಃ॥ – ೧೧೯/೨೩

೨ ಆತ್ಮವಾನ್ ಭವ ಸುಪ್ರೀತಃ ಸ್ವಧರ್ಮಚರಣೇರತಃ।
ಕ್ಷಾತ್ರೀಂ ತನುಂ ಸಮುತ್ಸೃಜ್ಯ ತತೋ ವಿಪ್ರತ್ವಮೇಷ್ಯಸಿ॥ – ೧೨೦/೫

೩ ಸುಖಾತ್ ಸುಖತರಂ ಪ್ರಾಪ್ತೋ ಭಗವಂಸ್ತ್ವತ್ಕೃತೇ ಹ್ಯಹಮ್।
ಧರ್ಮಮೂಲಂ ಶ್ರಿಯಂ ಪ್ರಾಪ್ಯ ಪಾಪ್ಮಾ ನಷ್ಟ ಇಹಾದ್ಯ ಮೇ॥ – ೧೨೦/೧೧

ಭೂಮಿಯನ್ನು ನೂರು ಯಜ್ಞಯೂಪದಿಂದ ಲಕ್ಷಿತವನ್ನಾಗಿ (ಚಿಹ್ನಿತವನ್ನಾಗಿ ಭೂಮಿಯಲ್ಲಿ ಆಗ ನೂರು ಯಜ್ಞಗಳಿಗೆ ಬೇಕಾಗುವಂತೆ ಯೂಪಸ್ತಂಭಗಳಿದ್ದವು ಎಂದು ಭಾವ) ಮಾಡಿ ನಂತರ ಬ್ರಹ್ಮಜ್ಞಾನಿಗಳಲ್ಲಿಯೇ ಶ್ರೇಷ್ಠನಾಗಿ ಭಗವಲ್ಲೋಕವನ್ನು ಹೊಂದಿತು[೧] (ಬ್ರಾಹ್ಮಣನು ಹೊಂದಿದನು).

ಆದರಂತೆ ಧರ್ಮರಾಜನೇ! ಕುರುಕ್ಷೇತ್ರದಲ್ಲಿ ಹತರಾದ ಕ್ಷತ್ರಿಯರೂ, ಕ್ಷತ್ರಿಯಧರ್ಮಕ್ಕೆ ಅನುಸಾರವಾಗಿಯೇ ಹತರಾಗಿ ಸದ್ಗತಿ ಹೊಂದಿದ್ದಾರೆ. ಆದ್ದರಿಂದ ಅವರ ಬಗ್ಗೆ ಶೋಕಿಸಬೇಡ ಎಂದು ಭೀಷ್ಮರು ನುಡಿದರು.

## ಸಂದೇಶಗಳು- ವಿವರಣೆಗಳು

೧. ವ್ಯಾಸಾವತಾರದಲ್ಲಿ ನಡೆದ ಅನೇಕ ಘಟನೆಗಳಲ್ಲಿ ಇದೊಂದು ಅಪೂರ್ವ, ಅದ್ಭುತ ಘಟನೆಯಲ್ಲಿ ಕೀಟಜನ್ಮ ಪಡೆದ ಜೀವನನ್ನು ವ್ಯಾಸರು ಉದ್ಧರಿಸಿದ್ದು ಇಲ್ಲಿಯ ವಸ್ತು.

೨. ಕೀಟವನ್ನು ತಾವೇ ಹತ್ತಿರ ಹೋಗಿ ಮಾತನಾಡಿಸಿ, ಉದ್ಧಾರ ಮಾಡುವುದಾಗಿ ಹೇಳಿದ್ದು ಭಗವಂತನ ಭಕ್ತವಾತ್ಸಲ್ಯಕ್ಕೆ ಜ್ವಲಂತ ನಿದರ್ಶನ. ಕೀಟಜನ್ಮದಲ್ಲಿದ್ದಾಗಲೇ ಆ ಜೀವನು ಮಾಡಿದ (ಪೂರ್ವ ಶೂದ್ರಜನ್ಮದಲ್ಲಿ) ತಾಯಿ ಸೇವೆ, ಬ್ರಾಹ್ಮಣಸೇವೆಗಳನ್ನು ಗಮನಿಸಿ ದರ್ಶನಕೊಟ್ಟು ಉದ್ಧರಿಸುವೆ ಎಂದು ತಾನೇ ಬಂದು ಹೇಳಿದ್ದು ಎಲ್ಲ ಜೀವಿಗಳಿಗೆ ಭಗವಂತ ಕೊಟ್ಟಿರುವ ಭರವಸೆ ವಚನ.

೩. ಭಗವಂತನ ಸನ್ನಿಧಿಯಲ್ಲಿ ನಾವು ಹಿಂದೆ ಮಾಡಿದ/ಈ ಜನ್ಮದಲ್ಲಿ ಪಾಪಕರ್ಮಗಳ ನಿವೇದನೆ ಅತಿಮುಖ್ಯ. ನಮ್ಮಂತಹವರಿಗೆ ಭಗವಂತನು ಸಿಗುವುದಿಲ್ಲ. ಆದರೆ ಸ್ವೋತ್ತಮರ ಮುಂದೆ ನಮ್ಮ ಪಾಪಕರ್ಮಗಳ ನಿವೇದನೆ ಮಾಡುವುದನ್ನು ಅಭ್ಯಾಸಮಾಡಬೇಕು. ಅದುವೇ ಒಂದು ತರಹದ ಪ್ರಾಯಶ್ಚಿತ್ತ. **'ಪಾಪಂ ಕ್ಷರತಿ ಕೀರ್ತನಾತ್'** ಎಂದೇ ಆರ್ಷವಚನ. ಹಿಂದಿನ ಜನ್ಮದ ಪಾಪಗಳ ಪರಿಜ್ಞಾನ ಇರದಿರುವುದರಿಂದ ಈಗಿನ ಜನ್ಮದ ಪಾಪಗಳ ಬಗ್ಗೆ ಹೇಳಿಕೊಳ್ಳುವುದು ಅವಶ್ಯ.

೪. ಶೂದ್ರಜನ್ಮದಲ್ಲಿ ಮಾಡಿದ ಪಾಪಗಳಿಗೆ ಲೆಕ್ಕವಿಲ್ಲದಿದ್ದರೂ, ಆಗ ಮಾಡಿದ ಕೆಲವು ಪುಣ್ಯಕರ್ಮಗಳಿಗೆ ಭಗವಂತ ಕೊಟ್ಟ ಮಹತ್ತ್ವ ಅಪಾರ. ಆದ್ದರಿಂದ ಸಾಮಾನ್ಯ ಜೀವರು ಯಾರೂ ಹೆದರಬೇಕಿಲ್ಲ. ದೇವರಲ್ಲಿ ವಿಶ್ವಾಸ ಇರಿಸಿ, ಸತ್ಕರ್ಮಾನುಷ್ಠಾನ ಮಾಡುತ್ತಿರಬೇಕು.

---

೧ ಭಗವದ್ವಚನಾತ್ ಕೀಟೋ ಬ್ರಾಹ್ಮಣ್ಯಂ ಪ್ರಾಪ್ಯ ದುರ್ಲಭಮ್ ।
ಅಕರೋತ್ ಪೃಥಿವೀಂ ರಾಜನ್ ಯಜ್ಞಯೂಪ ಶತಾಂಕಿತಮ್ ।
ತತಃ ಸಾಲೋಕ್ಯಮಗಮತ್ ಬ್ರಹ್ಮಣೋ ಬ್ರಹ್ಮವಿತ್ತಮಃ ॥ - ೧೭೦/೧೨-೧೪

೫. ಕೀಟಜನ್ಮದಲ್ಲಿಯೇ ಕೀಟದ ಅಪೇಕ್ಷೆಯಂತೆ ರಾಜನನ್ನಾಗಿಸಿದ್ದು ನಮ್ಮ ಬುದ್ಧಿಗೆ ನಿಲುಕುವುದಿಲ್ಲ. ಆದರೆ ಅದು ಇತಿಹಾಸ, ನಂಬಲೇ ಬೇಕಾದ ಇತಿಹಾಸ.

೬. ಕೀಟಜನ್ಮದಲ್ಲಿ ರಾಜ್ಯಪ್ರಾಪ್ತಿ, ಲೋಕದ ಜನರಿಂದ ಗೌರವ, ನಂತರ ಕೀಟಜನ್ಮ ತೊರೆದು, ಬ್ರಾಹ್ಮಣ ಜನ್ಮಪ್ರಾಪ್ತಿ, ಯದ್ಯಪಿ ಸಾಮಾನ್ಯವಾಗಿ ಕೀಟಜನ್ಮದ ನಂತರ ಕ್ರಮೇಣ ಶೂದ್ರ, ವೈಶ್ಯ, ಕ್ಷತ್ರಿಯ, ಬ್ರಾಹ್ಮಣಜನ್ಮ ಬರುತ್ತವೆ. ಆದರೆ ಇಲ್ಲಿ ಕೀಟಜನ್ಮದಲ್ಲಿಯೇ ಕ್ಷತ್ರಧರ್ಮ ಪಾಲಿಸಿದ್ದರಿಂದ ಬ್ರಾಹ್ಮಣ್ಯ ಪ್ರಾಪ್ತಿಯಾಯಿತೆಂದು ಭಾರತ ಹೇಳುತ್ತದೆ, ಸ್ವಯಂ ವ್ಯಾಸರೇ ಹೇಳುತ್ತಾರೆ

೭. ಯಾವುದೋ ಜನ್ಮಬರಲಿ ಹರಿಸ್ಮರಣೆ ದೊರಕಲಿ, ಸತ್ಕರ್ಮ ಮಾಡುವ ಬುದ್ಧಿ ಭಗವಂತ ಕೊಡಲಿ ಎಂಬ ಸಂದೇಶ ಇಲ್ಲಿದೆ. ಸ್ವಧರ್ಮದಲ್ಲಿಯೇ ನಮ್ಮ ಮನಸ್ಸಿರಲಿ. ಇತ್ಯಾದಿ.

೮. ಮಹಾಭಾರತ ತಾತ್ಪರ್ಯನಿರ್ಣಯದ ಹತ್ತನೇ ಅಧ್ಯಾಯದಲ್ಲಿ ಈ ಘಟನೆಯನ್ನು ಆಚಾರ್ಯರು ಕೇವಲ ೫ ಶ್ಲೋಕಗಳಲ್ಲಿ ಸಂಗ್ರಹಿಸಿದ್ದಾರೆ.

ಆ ಐದು ಶ್ಲೋಕಗಳನ್ನು ಅನುವಾದಸಮೇತ ಇಲ್ಲಿ ಕೊಡಲಾಗಿದೆ. ಅಖಿಲ ಭಾರತ ಮಾಧ್ವಮಹಾಮಂಡಲ, ಬೆಂಗಳೂರು ಇವರ ಮ.ಭಾ.ತಾ.ನಿ. ಕನ್ನಡ ಅನುವಾದ ಭಾಗ-೨ (ಅಧ್ಯಾಯ- ೧೦) ಪುಟ. ೩೮.

**ಯೇ ಯೇ ಚ ಸಂತಸ್ತಮಸಾನುವಿಷ್ಟಾ-**
**ಸ್ತಾಂಸ್ತಾನ್ಸುವಾಕ್ಯೈಸ್ತಮಸೋ ವಿಮುಂಚನ್ ।**
**ಚಚಾರ ಲೋಕಾನ್ ಸ ಪಥಿ ಪ್ರಯಾಂತಂ**
**ಕೀಟಂ ವ್ಯಪಶ್ಯತ್ತಮುವಾಚ ಕೃಷ್ಣಃ ॥** - ೧೦/೬೩

ಯಾವ ಯಾವ ಸಜ್ಜನರು ಅಜ್ಞಾನಾವೇಶಕ್ಕೊಳಗಾಗಿದ್ದಾರೋ, ಅವರನ್ನೆಲ್ಲ ಒಳ್ಳೆಯ ಉಪದೇಶಗಳಿಂದ ಅಜ್ಞಾನಮುಕ್ತರನ್ನಾಗಿ ಮಾಡುತ್ತ ವೇದವ್ಯಾಸರು ಲೋಕಸಂಚಾರ ಮಾಡಿದರು. ಒಮ್ಮೆ ದಾರಿಯಲ್ಲಿ ಓಡಾಡುತ್ತಿದ್ದ ಒಂದು ಕೀಟವನ್ನು ಕಂಡರು. ಅದಕ್ಕೆ ಹೀಗೆ ಹೇಳಿದರು.

**ಭವಸ್ವ ರಾಜಾ ಕುಶರೀರಮೇತತ್-**
**ತ್ಯಕ್ತ್ವೇತಿ ನೈಚ್ಛತ್ತದಸೌ ತತಸ್ತಮ್ ।**
**ಅತ್ಯಕ್ತದೇಹಂ ನೃಪತಿಂ ಚಕಾರ**
**ಪುರಾ ಸ್ವಭಕ್ತಂ ವೃಷಲಂ ಸುಲುಬ್ಧಮ್ ॥** - ೧೦/೬೪

ಈ ಕೆಟ್ಟ ಶರೀರವನ್ನು ತೊರೆದು ರಾಜನಾಗು ಎಂದು ವೇದವ್ಯಾಸರು ಹೇಳಿದರು. ಆದರೆ ಅದು ಶರೀರತ್ಯಾಗ ಮಾಡಲು ಒಪ್ಪಲಿಲ್ಲ. ಅದರಿಂದ ಶರೀರತ್ಯಾಗ ಮಾಡಿಸದೆಯೆ ರಾಜನನ್ನಾಗಿ

ಮಾಡಿದರು. ಏಕೆಂದರೆ ಅವನು ಹಿಂದಿನ ಜನ್ಮದಲ್ಲಿ ತನ್ನ ಭಕ್ತನೇ ಆದ ಒಬ್ಬ ಶೂದ್ರನಾಗಿದ್ದ ಆದರೆ ಮಹಾಲೋಭಿ.

**ಲೋಭಾತ್ಸ ಕೀಟತ್ವಮುಪೇತ್ಯ ಕೃಷ್ಣ-**
**ಪ್ರಸಾದತಶ್ಚಾಶು ಬಭೂವ ರಾಜಾ ।**
**ತದೈವ ತಂ ಸರ್ವನೃಪಾಃ ಪ್ರಣೇಮು-**
**ರ್ದದುಃ ಕರಂ ಚಾಸ್ಯ ಯಥೈವ ವೈಶ್ಯಾಃ ॥** - ೧೦/೬೫

ಲೋಭದಿಂದ ಕೀಟಜನ್ಮ ಹೊಂದಿದ್ದರೂ, ವೇದವ್ಯಾಸರ ಅನುಗ್ರಹದಿಂದ ತಕ್ಷಣವೇ ರಾಜನಾದ. ಅಗಲೇ ಅವನಿಗೆ ಎಲ್ಲ ರಾಜರೂ ತಲೆಬಾಗಿದರು. ವೈಶ್ಯರಂತೆ ಕರವನ್ನೂ ಸಲ್ಲಿಸಿದರು.

**ಉವಾಚ ತಂ ಭಗವಾನ್ ಮುಕ್ತಿಮಸ್ಮಿಂ-**
**ಸ್ತವ ಕ್ಷಣೇ ದಾತುಮಹಂ ಸಮರ್ಥಃ ।**
**ತಥಾಪಿ ಸೀಮಾರ್ಥಮವಾಪ್ಯ ವಿಪ್ರ-**
**ತನುಂ ವಿಮುಕ್ತೋ ಭವ ಮತ್ಪ್ರಸಾದಾತ್ ॥** - ೧೦/೬೬

ಭಗವಾನ್ ವ್ಯಾಸರು ಆ ಕೀಟಕ್ಕೆ ಹೇಳಿದರು. ನಾನು ನಿನಗೆ ಮುಕ್ತಿಯನ್ನು ಈ ಕ್ಷಣವೇ ಕೊಡಲು ಸಮರ್ಥ. ಆದರೂ ಲೋಕ ಮರ್ಯಾದಾರಕ್ಷಣೆಗಾಗಿ ಬ್ರಾಹ್ಮಣ ಜನ್ಮ ಹೊಂದಿಯೇ ನನ್ನ ಅನುಗ್ರಹದಿಂದ ಮುಕ್ತನಾಗು.

೯. ಈ ಉಪಾಖ್ಯಾನದ ಮೂಲಗಳಲ್ಲಿ ಪರಸ್ಪರ ಸಂಗತಿಯಿಲ್ಲವೆಂದು ತೋರುತ್ತದೆ. ಮಹಾಭಾರತದ ಮೂಲಪಾಠ ಸಿಕ್ಕಿಲ್ಲವೆಂದು ತೀರ್ಮಾನಿಸಲು ಇದೂ ಒಂದು ನಿದರ್ಶನವೇ ಸರಿ. ಆದ್ದರಿಂದಲೇ **ಮಹಾಭಾರತದ ಸರಿಯಾದ ದಿಕ್ಕನ್ನು ಆಚಾರ್ಯರು ನಿರ್ಣಯದ ಮೂಲಕ ತಿಳಿಸಿದ್ದಾರೆ.**

# ೧೫೧. ಬ್ರಾಹ್ಮಣ ಮಾಹಾತ್ಮ್ಯ

ಧರ್ಮರಾಜನು ಭೀಷ್ಮರನ್ನು ಕೇಳುತ್ತಾನೆ.

೧. ಪೂಜ್ಯರು ಯಾರು? ನಮಸ್ಕಾರಕ್ಕೆ ಅರ್ಹರು ಯಾರು? ಯಾರೊಡನೆ ಹೇಗೆ ನಡೆದುಕೊಳ್ಳಬೇಕು? ಯಾರಲ್ಲಿ ಆಚಾರವು ನಾಶವಾಗುವುದಿಲ್ಲ?

ಅದಕ್ಕೆ ಭೀಷ್ಮರು ಉತ್ತರಿಸುತ್ತಾರೆ.

೧. ಬ್ರಾಹ್ಮಣರಿಗೆ ಅವಮಾನಿಸಿದರೆ ದೇವತೆಗಳೂ ನಾಶವಾದಾರು (ವಾಗುತ್ತಾರೆ). ಬ್ರಾಹ್ಮಣನಿಗೆ ನಮಸ್ಕಾರ ಮಾಡುವವನು ನಾಶವಾಗುವುದಿಲ್ಲ. ಅವರೇ ಪೂಜ್ಯರು, ನಮಸ್ಕಾರಕ್ಕೆ ಯೋಗ್ಯರು. ಅವರಲ್ಲಿ ಪುತ್ರರಂತೆ ನಡೆದುಕೊ.

೨. ಜ್ಞಾನಿಗಳು ಎಲ್ಲ ಲೋಕಗಳನ್ನೂ ಧರಿಸುವವರು(ಕಾಪಾಡುವವರು). ಅವರೇ ಮಹಾಧರ್ಮದ ಸೇತುವೆಗಳು (ಧರ್ಮದ ದಾರಿ ತೋರಿಸುವವರು). ಧನತ್ಯಾಗದಲ್ಲಿಯೇ ಸಂತೋಷ ಪಡುವವರು, ಮೌನಿಗಳು(ಮನನಶೀಲರು).

೩. ಅವರೇ ಲೋಕಗಳ, ಶಾಸ್ತ್ರಗಳ ನೇತಾರರು, ಶಾಸ್ತ್ರೋಕ್ತವಾಗಿ ನಡೆಯುವವರು, ನಡೆಸುವವರು, ಸೂಕ್ಷ್ಮಧರ್ಮ ಬಲ್ಲವರು.

೪. ಧರ್ಮ ಬಯಸುವವರು, ಯಜ್ಞ ನಿರ್ವಾಹಕರು (ಮಾಡುವವರು, ಮಾಡಿಸುವವರು).

೫. ತಮ್ಮ ಪಿತೃ, ಪಿತಾಮಹರಿಂದ ಸನಾತನ ಧರ್ಮರಕ್ಷಣೆಯ ಭಾರ ಹೊತ್ತವರೂ ಅವರೇ. ಪರಂಪರೆಯನ್ನು ಉಳಿಸುವವರೂ,

೬. ವಿಷಮಪರಿಸ್ಥಿತಿಯಲ್ಲೂ ಅವರು ಎತ್ತುಗಳಂತೆ ಭಾರವನ್ನು ಹೊತ್ತು ಸಂಕಟ ಬಂದಾಗ ವಿಷಾದಿಸುವುದಿಲ್ಲ. ಪಿತೃ, ದೇವ, ಅತಿಥಿಪೂಜಕರು, ಹವ್ಯಕವ್ಯಗಳಲ್ಲಿ ಅಗ್ರ ಭೋಜನಕ್ಕೆ ಯೋಗ್ಯರು. ಭೋಜನಮಾತ್ರದಿಂದಲೇ ಲೋಕಗಳನ್ನು ಭಯದಿಂದ ರಕ್ಷಿಸುತ್ತಾರೆ (ಬ್ರಾಹ್ಮಣ ಭೋಜನದ ಮಹತ್ತ್ವವಿದು). ಲೋಕಗಗಳಿಗೆಲ್ಲ ದೀಪಪ್ರಾಯರು, ಕಣ್ಣುಗಳುಳ್ಳವರಿಗೂ ಕಣ್ಣುಗಳು (ಶ್ರೋತ್ರಸ್ಯ ಶ್ರೋತ್ರಂ ಚಕ್ಷುಷಃ ಚಕ್ಷುಃ – ಪ್ರಾಣಸ್ಯ ಪ್ರಾಣಃ ಎಂದು ಭಗವಂತನಿಗೆ ಹೇಳಿದಂತೆ ಇವರು ಹಾಗೆ ಭಗವಂತನ ಸನ್ನಿಧಾನ ಪಾತ್ರರಾಗಿ ಲೋಕಕ್ಕೆ ಕಣ್ಣುಗಳಾಗಿ ರಕ್ಷಕರಾಗಿದ್ದಾರೆ).

೭. ಸರ್ವಕಲಾವಿದ್ಯಾಗಳಿಗೆ ಆಶ್ರಯರು (ಸರ್ವವಿದ್ಯಾಪ್ರವೀಣರು). ಎಲ್ಲ ಪ್ರಾಣಿಗಳ ಗತಿ, ಆಧ್ಯಾತ್ಮಗತಿ ಚಿಂತಕರು. ಸಂಶಯರಹಿತರು, ಪರಾವರಜ್ಞರು, ತಾರತಮ್ಯ ಜ್ಞಾನವುಳ್ಳವರು, ಶ್ರೇಷ್ಠವಾದ ಗತಿಯನ್ನು ಹೊಂದುವವರು.

೮. ತಾಪತ್ರಯದಿಂದ ಬಿಡುಗಡೆ ಹೊಂದಿದವರು, ಪಾಪಮುಕ್ತರು, ದ್ವಂದ್ವಾತೀತರು. ಜ್ಞಾನಿಗಳಿಂದ ಮಾನಿತರು. ಭೋಜನ, ಉಪವಾಸ, ಎರಡೂ ಅವರಿಗೆ ಸಮಾನ.

೯. ಇಂದ್ರಿಯ ಜಯವುಳ್ಳವರಾಗಿ ವೇದಾಧ್ಯಯನದಿಂದ (ಸ್ವಾಧ್ಯಾಯ) ಶರೀರವನ್ನು ಶೋಷಿಸುವವರು ದಂಡಿಸುವವರು.

೧೦. ಕೋಪಗೊಂಡರೆ ದೇವತೆಯನ್ನು ಅದೇವತೆಯನ್ನಾಗಿ, ಅದೇವತೆಯನ್ನು ದೇವತೆಯನ್ನಾಗಿ, ಲೋಕಗಳನ್ನು ಲೋಕಪಾಲಕರನ್ನೂ ಸೃಷ್ಟಿಸಿಯಾರು? ಶಾಪಾನುಗ್ರಹಸಮರ್ಥರು (ವಿಶ್ವಾಮಿತ್ರಾದಿಗಳಂತೆ).

೧೧. ಮಹಾತ್ಮರ ಶಾಪದಿಂದ ಸಾಗರ ಪಾನಕ್ಕೆ ಅರ್ಹವಾಗಿಲ್ಲ. ಅವರ ಕೋಪಾಗ್ನಿಯಿಂದ ದಂಡಕಾರಣ್ಯ ಇನ್ನೂ ಶಾಂತವಾಗಿಲ್ಲ.

**ಬೃಹಸ್ಪತಿಸ್ತು ತಾಂ ಶ್ರುತ್ವಾ ಮರುತ್ತಸ್ಯ ಮಹೀಪತೇಃ ।**
**ಸಮೃದ್ಧಿಮಿತಿ ದೇವೇಭ್ಯಃ ಸಂತಾಪಕರೋತ್ ಭೃಶಮ್ ॥**
**ಸಂತಪ್ಯಮಾನೋ ವೈವರ್ಣ್ಯಂ ಕೃಶತ್ವಂ ಚಾಗಮತ್ ಪರಮ್ ।**
**ಭವಿಷ್ಯತಿ ಹಿ ಮೇ ಶತ್ರುಃ ಸಂವರ್ತೋ ವಸುಮಾನಿತಿ ॥ - ಅ.(೮/೪೯,೫೦)**

೧೨. ಅವರು ದೇವತೆಗಳಿಗೂ, ದೇವತೆಗಳು ಕಾರಣಗಳಿಗೂ ಕಾರಣರು. ಪ್ರಮಾಣಗಳಿಗೂ ಪ್ರಮಾಣರು. ಯಾವ ವಿವೇಕಿಯಾದವನು ಅವರನ್ನು ಅವಮಾನಿಸಿ ಜೀವಿಸಿಯಾನು?

೧೩. ಬ್ರಾಹ್ಮಣರು ವೃದ್ಧರಿರಲಿ, ಬಾಲಕನಿರಲಿ, ಮಾನ್ಯರೇ. ತಮ್ಮಲ್ಲಿನ ವಿದ್ಯಾ, ತಪೋವಿಶೇಷಗಳಿಂದ ಅವರು ಪರಸ್ಪರ ಮಾನ್ಯ ಮಾಡುತ್ತಾರೆ.

೧೪. ಬ್ರಾಹ್ಮಣನು ವಿದ್ವಾಂಸನಲ್ಲದಿದ್ದರೂ ದೇವತೆಯೇ. ತುಂಬಾ ಪವಿತ್ರನೂ ಹೌದು. ವಿದ್ವಾಂಸರಾದರಂತೂ ಪೂರ್ಣ ಸಮುದ್ರದಂತೆ ಪರದೈವ(ನಂತೆ) ಭಾವಿಸಬೇಕು.

೧೫. ತೇಜಸ್ವಿಯಾದ ಅಗ್ನಿಯು ಸ್ಮಶಾನದಲ್ಲಿದ್ದರೂ ಹೇಗೆ ದೋಷಿಯಾಗುವುದಿಲ್ಲವೋ, ಯಜ್ಞಗಳಲ್ಲಿ ಹವಿಸ್ಸನ್ನು ಸ್ವೀಕರಿಸಿ, ಶೋಭಿಸುತ್ತಾನೋ, ಹಾಗೆ ಎಲ್ಲ ಅನಿಷ್ಟ ಕರ್ಮಗಳಲ್ಲಿ ಬ್ರಾಹ್ಮಣನು ಕಂಡು ಬಂದರೂ ಅವನು ಸರ್ವಥಾ ಮಾನ್ಯ. ಅವನನ್ನು ಶ್ರೇಷ್ಠದೇವತೆ ಎಂದು ತಿಳಿ.

ಎಂದು ಭೀಷ್ಮರು ಧರ್ಮರಾಜನಿಗೆ ಹೇಳಿ. ಬ್ರಾಹ್ಮಣವರ್ಣದ ಮಹತ್ತ್ವವನ್ನು ಪ್ರಶಂಸಿಸಿದ್ದಾರೆ.

ಆದ್ದರಿಂದ ಇಂತಹ ಮಹತ್ತ್ವ ಪಡೆಯಲು ಬ್ರಾಹ್ಮಣನು ಹೇಗೆ ಜೀವಿಸಬೇಕು ಎಂದು ಬೇರೆ ಹೇಳಬೇಕಾಗಿಲ್ಲ. ವರ್ಣಾಶ್ರಮೋಚಿತ ಧರ್ಮಕರ್ಮಗಳಲ್ಲಿ ಪ್ರಾಮಾಣಿಕವಾಗಿ ನಿತರನಾಗಿದ್ದು ಸ್ವಾಧ್ಯಾಯಾದಿಗಳಲ್ಲಿ ತನ್ನ ಜೀವನ ಮುಡುಪಿಡುವುದರಿಂದ ಇಂದ್ರಿಯನಿಗ್ರಹ ದೇಹದಂಡನೆ, ಶಾಸ್ತ್ರೋಕ್ತ ಜೀವನ ನಿರ್ವಹಣೆ ಅವನನ್ನು ಅತ್ಯಂತ ಎತ್ತರಕ್ಕೆ ನಿಲ್ಲುಸುತ್ತದೆ. ಸರ್ವಮಾನ್ಯನಾಗುತ್ತಾನೆ. ಸರ್ವವರ್ಣಗಳ ಗುರುವಾಗುತ್ತಾನೆ. ಸರ್ವಲೋಕಗುರುವಾಗುತ್ತಾನೆ.

ಈ ಅಧ್ಯಾಯದ ಕೆಲವು ಮಾತುಗಳು ಕಾವ್ಯದೃಷ್ಟಿಯಿಂದ ಉತ್ಪ್ರೇಕ್ಷೆಯ ಅಂಶಗಳೂ, ಶಾಸ್ತ್ರದೃಷ್ಟಿಯಿಂದ ಅರ್ಥವಾದವೂ ಇದರಲ್ಲಿದೆ ಎಂದರೆ ತಪ್ಪಾಗದು. ತುಂಬಾ ಎಚ್ಚರಿಕೆಯಿಂದ ಇದರ ಅಧ್ಯಯನ, ಅನುಷ್ಠಾನ ಅವಶ್ಯ[೧].

ಧರ್ಮರಾಜನು ಮತ್ತೇ ಕೇಳುತ್ತಾನೆ –

'ಬ್ರಾಹ್ಮಣರ ಪೂಜೆ, ಸತ್ಕಾರಕ್ಕೆ ಯಾವುದು ಮಾನದಂಡ? ಯಾವ ಕರ್ಮದ ಸಾಫಲ್ಯ ನೋಡಿ ಸತ್ಕಾರ ಮಾಡುತ್ತೀ? ಎಂದಾಗ ಭೀಷ್ಮರು ಕಾರ್ತವೀರ್ಯಾರ್ಜುನ ಹಾಗೂ ವಾಯುದೇವನೊಡನೆ ನಡೆದ ಸಂವಾದರೂಪದ ಇತಿಹಾಸವನ್ನು ನಿರೂಪಿಸಿದರು.

ಹಿಂದೆ ಸಹಸ್ರ ಭುಜವುಳ್ಳ ಕಾರ್ಯವೀರ್ಯಾರ್ಜುನನು ಮಾಹಿಷ್ಮತೀ ನಗರದಲ್ಲಿದ್ದು ಸಾಗರಾಂತರವಾದ ಭೂಲೋಕದ ರಾಜನಾಗಿ ಆಳುತ್ತಿದ್ದ. ಅವನು ಹೇಹಯ ಕುಲದವನು. ಅವನು ಯಜ್ಞದೀಕ್ಷಿತನಾಗಿ ದತ್ತಾತ್ರೇಯರಿಗೆ (ಬ್ರಾಹ್ಮಣದೇವತೆ, ಸಾಕ್ಷಾತ್ ವಿಷ್ಣುವೇ) ತನ್ನ ಐಶ್ವರ್ಯವನ್ನು ಕ್ಷತ್ರಧರ್ಮಕ್ಕನುಗುಣವಾಗಿ ಕೊಟ್ಟನು. ಸಂತುಷ್ಟರಾದ ದತ್ತಾತ್ರೇಯರು ಮೂರು ವರಗಳನ್ನು ಕೇಳು ಎಂದಾಗ ರಾಜನು –

'೧. ನಾನು ಸೈನ್ಯಮಧ್ಯದಲ್ಲಿರುವಾಗ ಸಹಸ್ರಬಾಹುವಾಗಿ, ಮನೆಯಲ್ಲಿ ಬೇರೆ ರೀತಿಯಲ್ಲಿ (ಸಾಮಾನ್ಯ ಮನುಷ್ಯರಂತೆ) ಇರಬೇಕು. ೨. ಯುದ್ಧದಲ್ಲಿ ಸೈನಿಕರು ನನ್ನಸಾವಿರ ಬಾಹುಗಳನ್ನು ನೋಡಬೇಕು. ೩. ನಾನು ನನ್ನ ಪರಾಕ್ರಮದಿಂದ ಎಲ್ಲ ಭೂಮಿಯನ್ನು ಧರ್ಮದಿಂದ ಗೆದ್ದು ಧರ್ಮದಿಂದಲೇ ಪಾಲಿಸಬೇಕು'[೨] ಎಂದು ಮೂರು ವರಗಳನ್ನು ಕೇಳಿದನು. ಅಲ್ಲದೆ ನಾಲ್ಕನೇ

---

೧ ಅವಿದ್ವಾಂಶ್ಚೈವ ವಿದ್ವಾಂಶ್ಚ ಬ್ರಾಹ್ಮಣೋ ದೈವತಂ ಮಹತ್ ।
ಸ್ಮಶಾನೇ ಹ್ಯಪಿ ತೇಜಸ್ವೀ ಪಾವಕೋ ನೈವ ದುಷ್ಯತಿ ।
ಹವಿರ್ಯಜ್ಞೇಷು ಚ ವಹನ್ ಭೂಯ ಏವಾಭಿಶೋಭತೇ ।
ಏವಂ ಯದ್ಯಪ್ಯನಿಷ್ಟೇಷು ವರ್ತತೇ ಸರ್ವಕರ್ಮಸು ।
ಸರ್ವಥಾ ಬ್ರಾಹ್ಮಣೋ ಮಾನ್ಯೋ ದೈವತಂ ವಿದ್ಧಿ ತತ್ಪರಮ್ ॥ – ೨೪೦/೨೦,೨೨,೨೩
ದೇವನಾಮಪಿ ಯೇ ದೇವಾಃ ಕಾರಣಂ ಕಾರಣಸ್ಯ ಚ ।
ಪ್ರಮಾಣಸ್ಯ ಪ್ರಮಾಣಂ ಚ ಕಸ್ತಾನಭಿ ಭವೇದ್ ಬುಧಃ । – ೨೪೦/೧೪

೨ ಸಹಸ್ರಬಾಹುರ್ಭೂಯಾಂ ವೈ ಚಮೂಮಧ್ಯೇ ಗೃಹೇಽನ್ಯಥಾ ।

ವರವಾಗಿ 'ನಾನು ತಪ್ಪಾಗಿ ನಡೆದರೆ, ಅಂತಹ ದುರಾಚಾರಿಯಾದ ನನ್ನನ್ನು ಸಜ್ಜನರು ಶಿಕ್ಷಿಸಬೇಕು' ಎಂದು ಕೇಳಿದಾಗ ದತ್ತಾತ್ರೇಯರು ಎಲ್ಲ ೪ ವರಗಳನ್ನು ಅನುಗ್ರಹಿಸಿದರು. ನಂತರ ಸೂರ್ಯಾಗ್ನಿ ತೇಜಸ್ಸನ್ನು ಹೊಂದಿದ ಕಾರ್ತವೀರ್ಯಾರ್ಜುನನು ರಥವನ್ನೇರಿ ವರದಿಂದ ಬಂದ ಪರಾಕ್ರಮದಿಂದ ಅಮಲೇರಿ 'ವೀರ್ಯ, ಧೈರ್ಯ, ಕೀರ್ತಿ, ಶೌಚ, ವಿಕ್ರಮ ಸಾಮರ್ಥ್ಯಗಳಲ್ಲಿ ನನ್ನ ಸಮಾನರು ಯಾರಿದ್ದಾರೆ?' ಎಂದು ಕೇಳಿದನು (ಕಂಡವರನ್ನು).

ಅವನ ಮಾತು ಮುಗಿದ ಕೂಡಲೇ ಅಂತರಿಕ್ಷದಲ್ಲಿ ಅಶರೀರವಾಣಿಯು 'ಎಲೈ ಅವಿವೇಕಿಯೇ! ಕ್ಷತ್ರಿಯನಿಗಿಂತಲೂ ಬ್ರಾಹ್ಮಣನು ಉತ್ತಮನೆಂದು ನೀನು ತಿಳಿಯುತ್ತಿಲ್ಲ. ಕ್ಷತ್ರಿಯನು ಬ್ರಾಹ್ಮಣನಿಂದ ಕೂಡಿಯೇ (ಬ್ರಾಹ್ಮಣರ ಸಲಹೆಗಳನ್ನು ತೆಗೆದುಕೊಂಡೇ) ಪ್ರಜೆಗಳನ್ನು ರಕ್ಷಿಸುತ್ತಾನೆ'[೧] ಹೀಗೆ ರಾಜನಿಗೆ ಕೇಳಿಸಿತು.

ಅಶರೀರವಾಣಿಯನ್ನು ಲೆಕ್ಕಿಸದೇ ರಾಜನು –

೧. ನನಗೆ ಕೋಪ ಬಂದರೆ ಜೀವರನ್ನು (ಭೂತಾನಿ) ಸೃಷ್ಟಿ ಮಾಡಬಲ್ಲೆ, ಅವನ್ನೂ (ಭೂತಗಳನ್ನು) ಕೊಲ್ಲಲೂ ಸಮರ್ಥ. ಕರ್ಮ, ಮನಸ್ಸು ಮಾತುಗಳಿಂದ ಬ್ರಾಹ್ಮಣನು ಕ್ಷತ್ರಿಯನಿಗಿಂತ ಶ್ರೇಷ್ಠನಲ್ಲ. ಹಿಂದೆ ಅಂತಹ ವಾದವಿತ್ತು, ಈಗ ಅದು ಅಪ್ರಸ್ತುತ.

೨. ಈಗ ವೇದನಿಷ್ಠರಾದ ಬ್ರಾಹ್ಮಣರೂ ಕೂಡಾ ಕ್ಷತ್ರಿಯರನ್ನೇ ಅವಲಂಬಿಸಿ ಬದುಕುತ್ತಾರೆ.

೩. ಪ್ರಜಾಪಾಲನಾಖ್ಯ ಧರ್ಮವು ಕ್ಷತ್ರಿಯರನ್ನಾಶ್ರಯಿಸಿದೆ. ಭೈಕ್ಷ್ಯವೃತ್ತಿಯಲ್ಲಿರುವ ಬ್ರಾಹ್ಮಣರನ್ನು ನಾನು ನನ್ನ ವಶದಲ್ಲಿಟ್ಟುಕೊಳ್ಳುತ್ತೇನೆ. ಆದ್ದರಿಂದ ನಾನೇ ಶ್ರೇಷ್ಠ

೪. ಸಾಕ್ಷಿಯಾದ ಗಾಯತ್ರಿಯ ಎದುರು ಭೂಮಿಯಲ್ಲಿ ನಾನು ಹೇಳಿದ ಮಾತು ಸತ್ಯ. ಕೃಷ್ಣಾಜಿನಧಾರಿಗಳಾದ (ನನ್ನ) ವಶರಾಗದ ಎಲ್ಲ ಬ್ರಾಹ್ಮಣರನ್ನು ಗೆಲ್ಲುತ್ತೇನೆ[೨] (ಲಕ್ಷಾಲಂಕಾರ ಶ್ಲೋ. ೨೪/೧೮ಕ್ಕೆ).

---

ಮಮ ಬಾಹುಸಹಸ್ರಂ ತು ಪಶ್ಯಂತಾಂ ಸೈನಿಕಾ ರಣೇ ॥
ವಿಕ್ರಮೇಣ ಮಹೀಂ ಕೃತ್ಸ್ನಾಂ ಜಯೇಯಂ ವಿಫಲವ್ರತ ।
ತಾಂ ಚ ಧರ್ಮೇಣ ಸಂಪ್ರಾಪ್ಯ ಪಾಲಯೇಯಮತಂದ್ರಿತಃ ॥
ಚತುರ್ಥಂ ತು ವರಂ ಯಾಚೇ...................... ।
ಅನುಶಾಸಂತು ಮಾಂ ಸಂತೋ ಮಿಥ್ಯಾವೃತ್ತಂ ತದಾಶ್ರಯಮ್ ॥ – ೨೪೧/೭-೯

೧ ತದ್ವಾಕ್ಯಾಂತೇ ಚಾಂತರಿಕ್ಷೇ ವಾಗುವಾಚಾಶರೀರಿಣೀ ।
ನ ತ್ವಂ ಮೂಢ ವಿಜಾನೀಷೇ ಬ್ರಾಹ್ಮಣಂ ಕ್ಷತ್ರಿಯಾದ್ವರಮ್ ॥
ಸಹಿತೋ ಬ್ರಾಹ್ಮಣೇನೇಹ ಕ್ಷತ್ರಿಯೋ ರಕ್ಷತಿ ಪ್ರಜಾಃ ॥ – ೨೪೧/೧೨

೨ ಕಥಿತಂ ಹಿ ಮಯಾ ಸತ್ಯಂ ಗಾಯತ್ರ್ಯಾ ಕನ್ಯಯಾ ಭುವಿ ।
ವಿಜ್ಯೇಷ್ಯಾಮ್ಯವಶಾನ್ ಸರ್ವಾನ್ ಬ್ರಾಹ್ಮಣಾಂಶ್ಚರ್ಮವಾಸಸಃ ॥ – ೨೪೧/೧೮

೫. ಇದುವರೆಗೂ ಬ್ರಾಹ್ಮಣ ಪ್ರಧಾನವಾಗಿದ್ದ ಲೋಕವನ್ನು ಕ್ಷತ್ರಪ್ರಧಾನವಾಗಿ ಮಾಡುವೆ. ನನ್ನನ್ನು ಯಾರೂ ಮೂರು ಲೋಕದಲ್ಲಿ ದೇವತೆಯಾಗಲೀ, ಮನುಷ್ಯನಾಗಲೀ, ರಾಜ್ಯಚ್ಯುತನನ್ನಾಗಿ ಮಾಡಲಾರರು. ಆದ್ದರಿಂದ ಬ್ರಾಹ್ಮಣರಿಗಿಂತ ನಾನೇ ಶ್ರೇಷ್ಠ'.[1]

ರಾಜನ ಮಾತು ಕೇಳಿ ನಿಶಾಚರಿಯಾದ ಭೂತ ಹೆದರಿತು. ಆಗ ವಾಯುವು ಅಂತರಿಕ್ಷದಲ್ಲಿದ್ದು ಮಾತನಾಡಿದನು.

'ರಾಜನ್! ಈ ದುರ್ಭಾವನೆಯನ್ನು ಬಿಡು. ಬ್ರಾಹ್ಮಣರನ್ನು ನಮಸ್ಕರಿಸು. ಅವರಿಗೆ ಅಪರಾಧ ಮಾಡಿದರೆ, ನಿನ್ನ ರಾಷ್ಟ್ರಕ್ಕೆ ಕ್ಷೋಭೆಯಾದೀತು! ಅಥವಾ ಬ್ರಾಹ್ಮಣರು ನಿನ್ನನ್ನು ರಾಷ್ಟ್ರದಿಂದ ಹೊರ ಹಾಕಿಯಾರು.'[2]

ಈ ಮಾತುಗಳನ್ನು ಕೇಳಿದ ರಾಜನು 'ನೀನು ಯಾರು' ಎಂದು ಕೇಳಿದಾಗ 'ನಾನು ದೇವದೂತನಾದ ವಾಯುದೇವ, ನಿನಗೆ ಹಿತವನ್ನು ಹೇಳುತ್ತಿದ್ದೇನೆ' ಎಂದು ಹೇಳಿದನು.

ಮತ್ತೆ ರಾಜನು 'ಆಶ್ಚರ್ಯವಿದು! ನೀನು ಬ್ರಾಹ್ಮಣರ ಬಗ್ಗೆ ತುಂಬಾ ಸ್ನೇಹ ಹಾಗೂ ಭಕ್ತಿಯನ್ನು ತೋರಿಸಿದ್ದೀಯಾ. ಭೂಮಿ, ವಾಯು, ಜಲ, ಆಕಾಶ, ಸೂರ್ಯರಿಗೆ ಸದೃಶನಾದ ಒಬ್ಬ ಬ್ರಾಹ್ಮಣೋತ್ತಮನನ್ನು ತೋರಿಸುವೆಯಾ?'[3] ಎಂದು ಕೇಳಿದನು.

**I** ಅರ್ಜುನನ ಪ್ರಶ್ನೆಗೆ ಉತ್ತರಿಸುತ್ತಾ ವಾಯುದೇವನು 'ಎಲೈ ಮೂಢನೇ! ಮಹಾತ್ಮರಾದ ಕೆಲ ಬ್ರಾಹ್ಮಣರ ಗುಣಗಳನ್ನು ಹೇಳುತ್ತೇವೆ. ನೀನು ಯಾರನ್ನು ಹೇಳಿದ್ದೀಯೋ ಅವರಿಗಿಂತಲೂ ಬ್ರಾಹ್ಮಣನು ಉತ್ತಮನು (ಪೃಥಿವೀ ಮೀರಿಸಿದ ಬ್ರಾಹ್ಮಣನ).

---

೧ ಕ್ಷತ್ರಿಯೇಷ್ವಾಶ್ರಿತೋ ಧರ್ಮಃ ಪ್ರಜಾನಾಂ ಪರಿಪಾಲನಮ್ ।
ಕ್ಷತ್ರಾದ್ವೃತ್ತಿರ್ಬ್ರಾಹ್ಮಣಾನಾಂ ತೈಃ ಕಥಂ ಬ್ರಾಹ್ಮಣೋ ವರಃ ॥
ಅದ್ಯ ಬ್ರಹ್ಮೋತ್ತರಂ ಲೋಕಂ ಕರಿಷ್ಯೇ ಕ್ಷತ್ರಿಯೋತ್ತರಮ್ ।
ನ ಚ ಮಾಂ ಚ್ಯಾವಯೇದ್ ರಾಷ್ಟ್ರಾತ್ ತ್ರಿಷು ಲೋಕೇಷು ಕಶ್ಚನ ॥
ದೇವೋ ವಾ ಮಾನುಷೋ ವಾऽಪಿ ತಸ್ಮಾತ್ ಜ್ಯೇಷ್ಠೋ ದ್ವಿಜಾದಹಮ್ ॥ – ೨೪೧/೧೬,೧೯,೨೦

೨ ತ್ಯಜೈನಂ ಕಲುಷಂ ಭಾವಂ ಬ್ರಾಹ್ಮಣೇಭ್ಯೋ ನಮಸ್ಕುರು ।
ಏತೇಷಾಂ ಕುರ್ವತಃ ಪಾಪಂ ರಾಷ್ಟ್ರಕ್ಷೋಭೋ ಹಿ ತೇ ಭವೇತ್ ॥
ಅಥವಾ ತ್ವಾಂ ಮಹೀಪಾಲ ಶಮಯಿಷ್ಯಂತಿ ವೈ ದ್ವಿಜಾಃ ।
ನಿರಸಿಷ್ಯಂತಿ ವಾ ರಾಷ್ಟ್ರಾತ್ ಹತೋತ್ಸಾಹಂ ಮಹಾಬಲಾಃ ।
ತಂ ರಾಜಾ ಕಸ್ತ್ವಮಿತ್ಯಾಹ...................... ॥
ವಾಯುರ್ವೈ ದೇವದೂತೋऽಸ್ಮಿ ಹಿತಂ ತ್ವಾಂ ಪ್ರಬ್ರವೀಮ್ಯಹಮ್ ॥ – ೨೪೧/೨೨-೨೪

೩. ಅಹೋ ತ್ವಯಾऽದ್ಯ ವಿಪ್ರೇಷು ಭಕ್ತಿರಾಗಃ ಪ್ರದರ್ಶಿತಃ ।
ಯಾದೃಶಂ ಪೃಥಿವೀಭೂತಸ್ತಾದೃಶಂ ಬ್ರೂಹಿ ವೈ ದ್ವಿಜಮ್ ॥
ವಾಯೋರ್ವಾ ಸದೃಶಂ ಕಂಚಿದ್ ಬ್ರೂಹಿ ತ್ವಂ ಬ್ರಾಹ್ಮಣೋತ್ತಮಮ್ ।
ಅಪಾಂ ವೈ ಸದೃಶಂ ಬ್ರೂಹಿ ಸೂರ್ಯಸ್ಯ ನಭಸೋऽಪಿ ವಾ ॥ – ೨೪೧/೨೨-೨೬

೧. ಭೂಮಿಯು ತನ್ನ ಸ್ವಭಾವವನ್ನು (ಧನಧಾನ್ಯ ಸಮೃದ್ಧಿ) ತ್ಯಜಿಸಿ ಅಂಗರಾಜನ ಜೊತೆ ಸ್ಪರ್ಧಿಸಿ ನಾಶವನ್ನು ಹೊಂದಿತು. ಆಗ ಬ್ರಾಹ್ಮಣರಾದ ಕಶ್ಯಪರು ಭೂಮಿಯನ್ನು ಮರು ಸ್ಥಾಪಿಸಿದರು.

೨. ಹಿಂದೆ ಅಂಗಿರಸರು ತಮ್ಮ ಸಾಮರ್ಥ್ಯದಿಂದ ಜಲವನ್ನೆಲ್ಲ ಕುಡಿದರು. ಅಷ್ಟು ಕುಡಿದರೂ ತೃಪ್ತಿಯಾಗದೇ ಜಲಪ್ರವಾಹದಿಂದ ಭೂಮಿಯನ್ನು ತುಂಬಿಸಿದರು. ಅವರು ಕೋಪಗೊಂಡಾಗ ನಾನು ಅಂಗಿರಸರ ಭಯದಿಂದ ಜಗತ್ತನ್ನು ಬಿಟ್ಟು ಅಗ್ನಿಹೋತ್ರದಲ್ಲಿ ಅವಿತುಕೊಂಡು ವಾಸಿಸಿದೆ (ವಾಯುದೇವರು).

೩. ಅಹಲ್ಯೆಯನ್ನು ಕಾಮಿಸಿದ ಇಂದ್ರನು ಗೌತಮರಿಂದ ಶಾಪಕ್ಕೆ ಗುರಿಯಾದರೂ ಧರ್ಮದ ದೃಷ್ಟಿಯಿಂದ ಹಿಂಸೆಗೆ ಒಳಗಾಗಲಿಲ್ಲ (ಇಂದ್ರದೇವರು ದೇವತಾಕಾರ್ಯಕ್ಕಾಗಿ ಅಹಲ್ಯೆಯ ಗಮನ ಮಾಡಿದ್ದು ತತ್ತ್ವ).

೪. ಶುದ್ಧವಾದ ಸ್ವಚ್ಛವಾದ ಜಲದಿಂದ ತುಂಬಿದ ಸಮುದ್ರವು ಬ್ರಾಹ್ಮಣರ ಶಾಪಕ್ಕೆ ಗುರಿಯಾಗಿ ಅದರ ನೀರು ಉಪ್ಪಾಯಿತು.

೫. ಸುವರ್ಣವರ್ಣನೂ, ಹೊಗೆರಹಿತನೂ, ಊರ್ಧ್ವಶಿಖೆಗಳ ಸಮುದಾಯ ಹೊಂದಿದ ಅಗ್ನಿಯು ಕೋಪಗೊಂಡ ಅಂಗಿರಸರ ಶಾಪದಿಂದ ತನ್ನ ಗುಣಗಳನ್ನು ಕಳೆದುಕೊಂಡನು (ಲಕ್ಷಾಲಂಕಾರ - ೨೪೨/೮).

೬. ಮಹಾಸಮುದ್ರವನ್ನು ಹಾಸ್ಯಮಾಡಿದ ಮರುತ್ತುಗಳು **ಸುವರ್ಣಧಾರಿಣಿ**ಯೆಂಬ ಬ್ರಾಹ್ಮಣಿಯಿಂದ ಶಾಪಹೊಂದಿ ಪುಡಿಪುಡಿಯಾದರು(ಚೂರ್ಣಿತರಾದರು).

೭. ಎಲೈ ಅರ್ಜುನನೇ ನೀನು ಬ್ರಾಹ್ಮಣರಿಗೆ ಸಮನೂ ಅಲ್ಲ, ಶ್ರೇಷ್ಠನೂ ಅಲ್ಲ. ಪ್ರಭುವಾದವನು ಗರ್ಭಸ್ಥ ಬ್ರಾಹ್ಮಣ ಶಿಶುವಿಗೂ ನಮಸ್ಕಾರ ಮಾಡುವನು ತಿಳಿ (ಗರ್ಭಸ್ಥ ಶಿಶುವಿಗೂ ನಮಸ್ಕರಿಸಬೇಕೆಂದ ಮೇಲೆ ಬಾಲಕ, ಯುವಕ, ಗೃಹಸ್ಥ ತಪಸ್ವಿ ಬ್ರಾಹ್ಮಣರನ್ನು ನಮಸ್ಕರಿಸಬೇಕು ಎಂದು ಹೇಳಬೇಕೆ?

೮. ದಂಡಕ ದೇಶದ ದೊಡ್ಡ ರಾಜ್ಯವು ಬ್ರಾಹ್ಮಣನಿಂದ ನಾಶವಾಯಿತು. **ತಾಳಜಂಘ**ವೆಂಬ ದೊಡ್ಡದಾದ ಕ್ಷತ್ರಿಯರ ಗುಂಪೊಂದು ಒಬ್ಬ **ಔರ್ವ**ನಿಂದ ನಾಶವಾಯಿತು.

೯. ನೀನು ಪರಮದುರ್ಲಭವಾದ ವಿಸ್ತಾರವಾದ ರಾಜ್ಯವನ್ನು ದತ್ತಾತ್ರೇಯರ ಅನುಗ್ರಹದಿಂದ ಪಡೆದಿದ್ದೀ (ಆ ದತ್ತಾತ್ರೇಯರು ಬ್ರಾಹ್ಮಣರಲ್ಲವೇ?).

೧ ಸಮೋ ನ ತ್ವಂ ದ್ವಿಜಾತಿಭ್ಯಃ ಶ್ರೇಷ್ಠಂ ವಿದ್ಧಿ ನರಾಧಿಪ।
ಗರ್ಭಸ್ಥಾನ್ ಬ್ರಾಹ್ಮಣಾನ್ ಸಮ್ಯಗ್ ನಮಸ್ಯತಿ ಕಿಲ ಪ್ರಭುಃ॥ - ೨೪೨/೧೦

೧೦. ನೀನು ಬ್ರಾಹ್ಮಣನಾದ ಅಗ್ನಿಯನ್ನು ನಿತ್ಯವೂ ಏಕೆ ಪೂಜಿಸುವೆ?[೧]

೧೧. ಈ ಸ್ಥಾವರ ಜಂಗಮಾತ್ಮಕ ಜಗತ್ತನ್ನು ಸೃಷ್ಟಿಸಿದ ಪ್ರಜಾಪತಿ ಬ್ರಾಹ್ಮಣನಲ್ಲವೇ?

ವಾಯುದೇವನು ರಾಜನಿಗೆ ಬ್ರಾಹ್ಮಣರ ಇನ್ನೂ ಕೆಲ ಮಹಿಮೆ ಹೇಳಲು ಆರಂಭಿಸಿದನು. ಹಿಂದೆ **ಅಂಗ** ಎಂಬ ರಾಜನು ಭೂಮಿಯನ್ನು ಬ್ರಾಹ್ಮಣರಿಗೆ ದಾನವಾಗಿ ಕೊಡಲು ಇಚ್ಛಿಸಿದಾಗ, ಭೂದೇವಿ ವ್ಯಥೆ ಪಟ್ಟು 'ನಾನು ಬ್ರಹ್ಮದೇವರ ಬಳಿಗೆ ಭೂಮಿಯ ಗುಣವನ್ನು ಬಿಟ್ಟುಹೋಗುವೆ' ಎಂದು ಭಾವಿಸಿದಳು. ಆಗ ಕಶ್ಯಪರು ಇದನ್ನು ನೋಡಿ ತಮ್ಮ ಸ್ವಭಾವವನ್ನು ತ್ಯಜಿಸಿ ಸಮಾಧಾನದಿಂದ ಭೂಮಿಯನ್ನು ಪ್ರವೇಶಿಸಿ ಅದರ ಗುಣಗಳು ಮೊದಲಿನಂತೆ ಇರುವಂತೆ ತಮ್ಮ ತಪಸ್ಸಿನಿಂದ ಮಾಡಿದರು. ಭೂಮಿಯ ಗುಣಗಳು ದೇವಮಾನದಲ್ಲಿ ೩೦ ಸಾವಿರ ವರ್ಷ ಕಶ್ಯಪರೇ ಇರುವಂತೆ ನೋಡಿಕೊಂಡರು. ನಂತರ ಭೂದೇವಿಯು ಬಂದು ಕಶ್ಯಪರಿಗೆ ನಮಸ್ಕರಿಸಿ ಅವರ ಮಗಳಾಗಿ **ಕಾಶ್ಯಪೀ** ಎನಿಸಿದಳು. ನೋಡು ರಾಜ! ಇಂತಹ ಕಶ್ಯಪ ಬ್ರಾಹ್ಮಣನಿಗಿಂತ ಶ್ರೇಷ್ಠನೆಂದು ಕ್ಷತ್ರಿಯನನ್ನು ತಿಳಿದಿದ್ದೀಯಾ? ಇದನ್ನು ಕೇಳಿ ರಾಜನು ಸುಮ್ಮನಾದನು.

**II** ನಂತರ ವಾಯುದೇವನು ಅಂಗಿರಸರ ಕುಲದಲ್ಲಿ ಜನಿಸಿದ ಉಚಥ್ಯರ ಚರಿತ್ರೆಯನ್ನು ಹೇಳಿದನು ರಾಜನಿಗೆ –

**ಚಂದ್ರ**ನಿಗೆ **ಭದ್ರೆ** ಎಂಬ ಸುಂದರಿಯಾದ ಮಗಳಿದ್ದಳು. ಆಕೆಗೆ ಉಚಥ್ಯರು ಯೋಗ್ಯವರವೆಂದು ಚಂದ್ರ ಭಾವಿಸಿದ. ಭದ್ರೆಯು ಕೂಡಾ ಭಾರೀ ತಪಸ್ಸನ್ನು ಮಾಡಿ ಉಚಥ್ಯರನ್ನು ವರಿಸಿದಳು. ಚಂದ್ರನು ಮಗಳನ್ನು ಉಚಥ್ಯರಿಗೆ ಪತ್ನಿಯಾಗಿ ದಾನ ಮಾಡಿದ. ಈಕೆಯನ್ನು ಮೊದಲೇ ಬಯಸಿದ್ದ ವರುಣ ಯಮುನಾತೀರಕ್ಕೆ ಬಂದು ಭದ್ರೆಯನ್ನು ಅಪಹರಿಸಿ ತನ್ನ ಲೋಕಕ್ಕೆ ಹೋಗಿ ಆಕೆಯೊಡನೆ ವಿಹರಿಸುತ್ತಾ ಇದ್ದನು. ಇದು ಉಚಥ್ಯರಿಗೆ ಗೊತ್ತಾಗಿ ಅವರು ನಾರದರನ್ನು ವರುಣನ ಬಳಿಗೆ ಹೋಗಿ ಭದ್ರೆಯನ್ನು ಉಚಥ್ಯರಿಗೆ ವಾಪಸು ಕಳಿಸಲು ಸಂದೇಶ ಕಳಿಸಿದರು. ನಾರದರು ವರುಣನಿಗೆ ಉಚಥ್ಯರ ಸಂದೇಶ ಹೇಳಿದಾಗ ವರುಣನು 'ಇವಳು (ಭದ್ರೆ), ನನ್ನ ಪ್ರೀತಿಪಾತ್ರಳಾದ ಪತ್ನಿ. ನಾನಿವಳನ್ನು ಕಳಿಸಲಾರೆ' ಎಂದು ಹೇಳಿ 'ನಾರದರನ್ನು ಕತ್ತು ಹಿಡಿದು ತಳ್ಳಿದ. ನಾರದರು ಉಚಥ್ಯರಿಗೆ ತನಗಾದ ಅವಮಾನವನ್ನು ಹಾಗೂ ಭದ್ರೆಯನ್ನು ಕಳಿಸದಿರುವ ವರುಣನ ನಿರ್ಧಾರವನ್ನು ತಿಳಿಸಿದರು. ಮುಂದಿನ ಕ್ರಮ ನಿನಗೆ ಸೇರಿದ್ದೆಂದು ನಾರದರು ಚ್ಯವನರಿಗೆ ಹೇಳಿದರು.

ಚ್ಯವನರಿಗೆ ಕೋಪ ಬಂದು ಸಮುದ್ರವನ್ನು ನಿಲ್ಲಿಸಿ ಎಲ್ಲ ನೀರನ್ನು ಕುಡಿದರು. ವರುಣನ ಪ್ರೀತಿಪಾತ್ರರು ಭದ್ರೆಯನ್ನು ಉಚಥ್ಯರ ಬಳಿಗೆ ಕಳಿಸಲು ಹೇಳಿದರೂ ಕೇಳಲಿಲ್ಲ. ನಂತರ ಉಚಥ್ಯರು ಭೂಮಿಗೆ ಆರು ಲಕ್ಷ ಮಡುಗಳಿರುವ ಸ್ಥಳ ತೋರಿಸೆಂದರು. ಉಚಥ್ಯರ

೧ ಅಗ್ನಿಂ ತ್ವಂ ಯಜಸೇ ನಿತ್ಯಂ ಕಸ್ಮಾದರ್ಜುನ ಬ್ರಾಹ್ಮಣಮ್ ॥ – ೨೪೨/೧೩

ಪ್ರಭಾವದಿಂದ ಅದೆಲ್ಲ ಮರುಭೂಮಿಯಾಯಿತು. ಸಮುದ್ರ ಆ ಪ್ರದೇಶ ಬಿಟ್ಟು ಹಿಂದೆ ಹೋಯಿತು. ನಂತರ ದ್ವಿಜೋತ್ತಮರಾದ ಉಚಥ್ಯರು ಸರಸ್ವತಿಗೆ ನೀನು ಅದೃಶ್ಯಳಾಗಿ ಮರುಭೂಮಿಗೆ ಹೋಗೆಂದರು. ಆ ಜಾಗ ಅಪವಿತ್ರವಾಗಲಿ ಎಂದರು. ಆ ಜಾಗವೆಲ್ಲ ಮರಳಿನರಾಶಿಯಾಯಿತು. ಹೀಗೆ ವರುಣನ ವ್ಯಾಪ್ತಿಗೆ ಭಾರಿ ಭಂಗ ತಂದರು ಉಚಥ್ಯರು.

ನಂತರ ವರುಣನು ಹೆದರಿ ಭದ್ರೆಯನ್ನು ಕರೆದುಕೊಂಡು ಬಂದು ಉಚಥ್ಯರಿಗೆ ಒಪ್ಪಿಸಿದ, ಉಚಥ್ಯರು ಸಂತುಷ್ಟರಾದರು. ವರುಣನನ್ನು ಶೋಕದಿಂದ ಬಿಡುಗಡೆ ಮಾಡಿದರು ನಿಗ್ರಹಿಸಲಿಲ್ಲ, ವರುಣನಿಗೆ ಹೇಳಿದರು 'ನಾನು ಇವಳನ್ನು ತಪಸ್ಸಿನಿಂದ ಪಡೆದಿದ್ದೇನೆ, ನೀನು ಕಿರುಚಾಡಿದರೂ ನಿನ್ನವಳಾಗಲು ಸಾಧ್ಯವಿಲ್ಲ'. ಹೀಗೆ ಹೇಳಿದ ಚ್ಯವನರು ಭದ್ರೆಯೊಂದಿಗೆ ತಮ್ಮ ಭವನಕ್ಕೆ ಹೊರಟರು.

ನೋಡು ಅರ್ಜುನ! ಉಚಥ್ಯರಿಗಿಂತ ಶ್ರೇಷ್ಠನಾದ ಕ್ಷತ್ರಿಯ ರಾಜನು ಇದ್ದಾನಾ ಹೇಳು ಎಂದ. ವಾಯುದೇವ ಕೇಳಿದ, ರಾಜನು ಸುಮ್ಮನಿದ್ದನು.

**III** ಮತ್ತೆ ವಾಯು ರಾಜನಿಗೆ ಬ್ರಾಹ್ಮಣರಾದ ಅಗಸ್ತ್ಯರ ಮಹಿಮೆಯನ್ನು ಕೇಳು ಎಂದರು.

ಹಿಂದೆ ಅಸುರರಿಂದ ಪರಾಜಿತರಾದ ದೇವತೆಗಳು ಉತ್ಸಾಹ ಕಳೆದುಕೊಂಡರು. ಅಸುರರು ದೇವತೆಗಳ ಯಜ್ಞಗಳನ್ನು (ಫಲಗಳನ್ನು, ಯಜ್ಞದಲ್ಲಿ ಅರ್ಪಿತವಾಗುವ ವಿವಿಧ ಹವಿಸ್ಸುಗಳನ್ನು) - ಪಿತೃಗಳ ಸ್ವಧಾಗಳನ್ನು ಅಪಹರಿಸಿದರು. ಮನುಷ್ಯರು ಮಾಡುವ ಸತ್ಕರ್ಮಪೂಜಾ ಫಲಗಳನ್ನು ಅಪಹರಿಸಿದರು. ಹೀಗೆ ಐಶ್ವರ್ಯಭ್ರಷ್ಟರಾದ ದೇವತೆಗಳು ಭೂಮಿಯಲ್ಲಿ ತಿರುಗುತ್ತಿದ್ದರು. ಹೀಗಿರುವಾಗ ಅವರು ಮಹಾತೇಜಸ್ವಿಗಳಾದ ಅಗಸ್ತ್ಯರನ್ನು ಕಂಡರು. ಅವರನ್ನು ನಮಿಸಿದ ದೇವತೆಗಳು ತಮ್ಮ ಪರಿಸ್ಥಿತಿಯನ್ನು ನಿವೇದಿಸಿಕೊಂಡು ಅಸುರರ ಭಯದಿಂದ ರಕ್ಷಿಸಲು ಕೇಳಿಕೊಂಡರು.

ಇದನ್ನು ಕೇಳಿದ ಅಗಸ್ತ್ಯರು ಪ್ರಳಯಕಾಲಾನಲದಂತೆ ಪ್ರಜ್ವಲಿಸಲು, ಆ ಜ್ವಾಲೆಯಿಂದ ದಾನವರು ದಗ್ಧರಾಗಿ ಅಂತರಿಕ್ಷದಿಂದ ಕೆಳಗೆ ಬಿದ್ದರು. ಅವರು ಸ್ವರ್ಗ ಹಾಗೂ ಭೂಲೋಕಗಳೆರಡನ್ನೂ ಬಿಟ್ಟು ದಕ್ಷಿಣದಿಕ್ಕಿಗೆ ಹೋದರು. ಬಲಿಯು ಭೂಮಿಗೆ ಬಂದು ಅಶ್ವಮೇಧ ಯಾಗವನ್ನು ಮಾಡುತ್ತಿದ್ದ, ಅವನ ಜೊತೆಯಲ್ಲಿದ್ದ ದಾನವರು ಮತ್ತು ಅಧೋಲೋಕದಲ್ಲಿದ್ದ ದಾನವರು ಅಗಸ್ತ್ಯರ ಕೋಪಾಗ್ನಿಯಿಂದ ದಗ್ಧರಾಗಲಿಲ್ಲ[೧]. (ಔ.ಪಾ.) (ಅನುವಾದ). ಇನ್ನುಳಿದ ಅಂತರಿಕ್ಷವಾಸಿಗಳೂ, ಭೂಲೋಕವಾಸಿಗಳೂ ಆದ ಮಹಾಸುರರು ದಗ್ಧರಾದರು(?)(ವೈ.ಪಾ.)(ಅನುವಾದ)(ಬೇರೆ ಬೇರೆ ಪಾಠಗಳಲ್ಲಿ ವ್ಯತ್ಯಾಸಗಳಿವೆ).

---

೧ ಬಲಿಸ್ತು ಯಜತೇ ಯಜ್ಞಮಶ್ವಮೇಧಂ ಮಹೀಂ ಗತಃ।
ಯೇಽನ್ಯೇಽಧಸ್ತಾ(ಖಸ್ಥಾ) ಮಹೀಸ್ಥಾಶ್ಚ ತೇ ನ ದಗ್ಧಾ ಮಹಾಸುರಾಃ॥ - ೨೪೪/೧೦

ಅಗಸ್ತ್ಯರು ಹೀಗೆ ದಾನವರನ್ನು ತಮ್ಮ ತಪೋಬಲದಿಂದ ಸುಟ್ಟದ್ದರಿಂದ ದೇವತೆಗಳು ತಮ್ಮ ಲೋಕಗಳನ್ನು ಪಡೆದರು. ಆ ಘರ್ಷಣೆ ಶಾಂತವಾಯಿತು. ನಂತರ ದೇವತೆಗಳು ಅಗಸ್ತ್ಯರನ್ನು ಭೂಮಿಯಲ್ಲಿರುವ ಅಸುರರನ್ನು ಸುಟ್ಟು ಹಾಕಲು ಬೇಡಿದರು(ಕೇಳಿದರು). ಅದಕ್ಕೆ ಅಗಸ್ತ್ಯರು 'ಭೂಮಿಯಲ್ಲಿರುವ ಅಸುರರನ್ನು ಕೊಲ್ಲಲಾರೆ. ಹಾಗೆ ದಹಿಸಲು ಪ್ರಯತ್ನಿಸಿದರೆ, ನನ್ನ ತಪಸ್ಸು ನಾಶವಾದೀತು'[೧] ಎಂದರು.

ರಾಜನ್! ಹೀಗೆ ಅಗಸ್ತ್ಯರು ತಮ್ಮ ತಪಸ್ಸಿನಿಂದ ದಾನವರನ್ನು ದಹಿಸಿದರು. ಇಂತಹ ಅಗಸ್ತ್ಯರಿಗಿಂತ ಶ್ರೇಷ್ಠನಾದ ಕ್ಷತ್ರಿಯ ಇದ್ದರೆ ಹೇಳೆನಲು, ರಾಜನು ಮೌನ ಧರಿಸಿದ.

**IV** ನಂತರ ವಾಯುದೇವರು ಯಶೋಶಾಲಿಗಳಾದ ವಸಿಷ್ಠರ ಮಹತ್ತ್ವವನ್ನು ತಿಳಿಸಲಾರಂಭಿಸಿದರು. 'ಅದಿತಿ ಪುತ್ರರಾದ ದೇವತೆಗಳು ವಸಿಷ್ಠರ ಮಹತ್ತ್ವವನ್ನು ತಿಳಿದು ಅವರನ್ನು ಮನಸ್ಸಿನಿಂದಲೇ (ಮನಸ್ಸಿನಲ್ಲಿಯೇ) ಸಮೀಪಿಸಿ (ಧ್ಯಾನಮಾಡಿ) ಮಾನಸಸರೋವರದ ತೀರದಲ್ಲಿ ಸತ್ರಯಾಗ ಮಾಡುತ್ತಿದ್ದರು. ಯಜ್ಞದೀಕ್ಷಿತರಾಗಿ ಕರ್ಶಿತರಾದ (ದುರ್ಬಲರಾದ, ಆಯಾಸಗೊಂಡ) ದೇವತೆಗಳನ್ನು ನೋಡಿ '**ಖಲಿ**'ಗಳೆಂಬ ದಾನವರು ಅವರನ್ನು ಕೊಲ್ಲಲು ಇಚ್ಛಿಸಿದರು. ಮಾನಸಸರೋವರದ ಸಮೀಪದಲ್ಲಿಯೇ ಬ್ರಹ್ಮದೇವರ ವರವಿದ್ದ ಒಂದು ಸರೋವರವಿತ್ತು. ಅಲ್ಲಿ ಹತರಾದ ದಾನವರನ್ನು ಮುಳುಗಿಸಲು ಅವರೆಲ್ಲ ಬದುಕುತ್ತಿದ್ದರು[೨].

ದಾನವರು ಭಾರೀ ದೊಡ್ಡ ದೊಡ್ಡ ಪರ್ವತಗಳನ್ನು, ಪರಿಘ(ಆಯುಧವಿಶೇಷ)ಗಳನ್ನು, ವೃಕ್ಷಗಳನ್ನು ತೆಗೆದುಕೊಂಡು ನೂರು ಯೋಜನ ವಿಸ್ತೀರ್ಣದ ಆ ಸರೋವರವನ್ನು ಗಲಿಬಿಲಿಗೊಳಿಸುತ್ತಾ ಎದ್ದವರಾಗಿ ಹತ್ತು ಸಾವಿರ ದೇವತೆಗಳ ಕಡೆ ಓಡಿದರು (ದೇವತೆಗಳನ್ನು ಸಂಹರಿಸಲು). ಆಗ ಆ ದೇವತೆಗಳು ಇಂದ್ರದೇವರಿಗೆ ಶರಣಾದರು. ಆದರೆ ಇಂದ್ರನೂ ಆ ದಾನವರಿಂದ ಪೀಡಿತನಾಗಲು ಆತನು ವಸಿಷ್ಠರನ್ನು ಶರಣು ಹೋದನು. ಅವರು ದೇವತೆಗಳಿಗೆ ಅಭಯಕೊಟ್ಟು ತಮ್ಮ ತಪೋಜ್ವಾಲೆಯಿಂದ ಅವರೆಲ್ಲರನ್ನೂ (೧೦೦೦೦ ದಾನವರನ್ನು) ದಹಿಸಿದರು. ಅಲ್ಲದೆ ಕೈಲಾಸಕ್ಕೆ ಹೊರಟಿದ್ದ ಗಂಗೆಯನ್ನು ಆದಿತ್ಯಸರೋವರಕ್ಕೆ (ಮಾನಸ) ತಂದರು(ಬರುವಂತೆ ಮಾಡಿದರು). ಗಂಗಾ ಪ್ರವೇಶದಿಂದ ಆ ಸರೋವರ ಒಡೆದು ಹೋಗಿ ಮುಂದೆ ಹರಿದ ನೀರು '**ಸರಯೂ**' ನದಿಯಾಯಿತು. '**ಖಲಿ**'ಗಳು ಹತರಾದರು. ಆ ದೇಶ ಉಪದ್ರವರಹಿತವಾಯಿತು.

---

೧ ಇತ್ಯುಕ್ತ ಆಹ ದೇವಾನ್ ಸ ನ [೧]ಶಕ್ನೋಮಿ ಮಹೀಗತಾನ್ ।
ದಗ್ಧುಂ ತಪೋ ಹಿ ಕ್ಷೀಯೇನ್ಮೇ [೨]ನ ಧಕ್ಷ್ಯಾಮೀತಿ ಪಾರ್ಥಿವಃ ॥
೧. ನ ಶಕ್ತೋಽಸ್ಮಿ (ಪಾ.); ೨. ನ ಶಕ್ಯಾಮೀತಿ (ಪಾ.) (ಔ.ಪಾ)

೨ ಆದೂರಾತ್ತು ತತಸ್ತೇಷಾಂ ಬ್ರಹ್ಮದತ್ತವರಂ ಸರಃ ।
ಹತಾ ಹತಾ ವೈ ತೇ ತತ್ರ ಜೀವಂತ್ಯಾಪ್ಲುತ್ಯ ದಾನವಾಃ ॥ - ೨೪೪/೧೨-೧೮

ಹೀಗೆ ಇಂದ್ರಾದಿ ದೇವತೆಗಳು ವಸಿಷ್ಠರಿಂದ ರಕ್ಷಿತರಾದರು. ಬ್ರಹ್ಮವರಪಡೆದ ದೈತ್ಯರೂ, ಮಹಾತ್ಮರಾದ ವಸಿಷ್ಠರಿಂದ ಹತರಾದರು.

ನೋಡು ರಾಜನ್! ಇಂತಹ ವಸಿಷ್ಠರ ದೇವಪಾಲನಾ ಕರ್ಮ ನಿನಗೆ ಹೇಳಿದ್ದೇನೆ. ಇಂತಹ ವಸಿಷ್ಠರಿಗಿಂತ ಮಿಗಿಲಾದ ಕ್ಷತ್ರಿಯನಿದ್ದಾನೆಯಾ ಹೇಳು?

**V** ಇದಕ್ಕೂ ರಾಜನದು ಮೌನವೇ ಉತ್ತರವಾಗಿತ್ತು. ಮತ್ತೆ ವಾಯುದೇವರು ಬ್ರಾಹ್ಮಣರಲ್ಲಿನ ಮುಖ್ಯ ಕರ್ಮವನ್ನು ಕೇಳೆಂದರು.

'ಇಂದ್ರಾದಿದೇವತೆಗಳು ಮದಕ್ಕೆ ಸಿಲುಕಿದಾಗ(ಗರ್ವಿಷ್ಠರಾದಾಗ) ಅವರ ಈ ಭೂಮಿಯನ್ನು ಚ್ಯವನರು ಅಪಹರಿಸಿದರು (ಸ್ವರ್ಗ, ಭೂ). ಎರಡೂ ಲೋಕಗಳು ಅಪಹೃತವಾಯಿತೆಂದು ಭಾವಿಸಿದ ದೇವತೆಗಳು ಬ್ರಹ್ಮನನ್ನು ಶರಣಾದರು (ಚ್ಯವನರು ಭೂಮಿಯನ್ನು **ಕಪರು** ಸ್ವರ್ಗವನ್ನು ಅಪಹರಿಸಿದರು). ಬ್ರಹ್ಮನು ದೇವತೆಗಳಿಗೆ ಬ್ರಾಹ್ಮಣರಿಗೆ ಶರಣಾಗಿ, ಅವರನ್ನು ಪ್ರಸನ್ನೀಕರಿಸಿದರೆ, ಮೊದಲಿನಂತೆ ಎರಡೂ ಲೋಕಗಳು ನಿಮ್ಮದಾಗುತ್ತವೆ ಎಂದರು.

ಅದಂತೆ ದೇವತೆಗಳು ಬ್ರಾಹ್ಮಣರಿಗೆ ಶರಣಾಗತರಾಗಲು, ಅವರು ಯಾರನ್ನು ಜಯಿಸಬೇಕೆಂದು ಕೇಳಿದರು. ಅದಕ್ಕೆ ದೇವತೆಗಳು 'ನೀವು ಕಪರನ್ನು ಜಯಿಸಿ, ಭೂಮಿಯಲ್ಲಿರುವವರನ್ನು ನಾವು ಜಯಿಸುವೆವು' ಎಂದರು. ನಂತರ ಬ್ರಾಹ್ಮಣರು ಕಪರ ನಾಶಕ್ಕೆ ಸೂಕ್ತಕರ್ಮ ಆರಂಭಿಸಲು, ಅವರು (ಕಪರು) ಬ್ರಾಹ್ಮಣರಿಗೆ ತಮ್ಮ ಧನಿ ಎಂಬ ದೂತನನ್ನು ಕಳಿಸಿದರು. ದೂತನು 'ಕಪರೆಲ್ಲ ನಿಮ್ಮಂತಿದ್ದಾರೆ. ಅವರೊಡನೆ ನಿಮಗೇಕೆ ಈ ಕರ್ಮ (ಕಪನಾಶಕ)? ಅವರೆಲ್ಲ ವೇದಜ್ಞರು, ಪ್ರಾಜ್ಞರು, ಯಾಗ ಮಾಡುವವರು, ಸತ್ಯವ್ರತರು, ಮಹರ್ಷಿಗಳಿಗೆ ಸಮರಾದವರು(ಸದೃಶರು), ಅವರಲ್ಲಿ ಲಕ್ಷ್ಮಿಯು ನೆಲೆಸಿದ್ದಾಳೆ. ಅವರು ಕೇವಲ ಭೋಗಕ್ಕಾಗಿ ಪತ್ನಿಯನ್ನು ಸೇವಿಸುವುದಿಲ್ಲ(ಋತುಕಾಲದಲ್ಲಿ ಮಾತ್ರ ಸೇವಿಸುತ್ತಾರೆ). ಮಾಂಸ ತಿನ್ನುವುದಿಲ್ಲ, ದೀಪಾಗ್ನಿಯಲ್ಲಿ ಹೋಮಮಾಡುತ್ತಾರೆ, ಹಿರಿಯರನ್ನು ಅನುಸರಿಸುತ್ತಾರೆ, ಜಿತೇಂದ್ರಿಯರು, ಮಕ್ಕಳಿಗೆ ಹಂಚಿಯೇ ಭೋಜನ ಮಾಡುತ್ತಾರೆ, ಗಾಡಿಗಳಲ್ಲಿ ಸಂಚರಿಸುತ್ತಾರೆ, ರಜಸ್ವಲೆಯರ ಸಂಗ ಮಾಡುವುದಿಲ್ಲ(ಸಮೀಪ ಹೋಗುವುದಿಲ್ಲ). ಹಿರಿಯರಿಗಿಂತ ಮೊದಲು ಊಟ ಮಾಡುವುದಿಲ್ಲ, ಹಗಲು ನಿದ್ರೆ ಮಾಡುವುದಿಲ್ಲ – ಇವುಗಳಂತಹ ಇನ್ನೂ ಅನೇಕ ಗುಣಸಂಪನ್ನರಾದ ಕಪರನ್ನು ಹೇಗೆ ಜಯಿಸುವಿರಿ? ಆದ್ದರಿಂದ ಈ ಪ್ರಯತ್ನದಿಂದ ದೂರಾಗಿ, ಆದರಿಂದ ನಿಮಗೆ ಒಳ್ಳೆಯದಾಗುತ್ತದೆ'[1] ಎಂದು ಹೇಳಿದನು.

---

೧ ಭವದ್ಭಿಃ ಸದೃಶಾಃ ಸರ್ವೇ ಕಪಾಃ ಕಿಮಿಹ ವರ್ತತೇ ।
ಸರ್ವೇ ವೇದವಿತ್ ಪ್ರಾಜ್ಞಾಃ ಸರ್ವೇ ಚ ಕ್ರತುಯಾಜಿನಃ ॥
ಸರ್ವೇ ಸತ್ಯವ್ರತಾಶ್ಚೈವ ಸರ್ವೇ ತುಲ್ಯಾ ಮಹರ್ಷಿಭಿಃ ॥ .....

ಇದಕ್ಕೆ ಉತ್ತರರೂಪವಾಗಿ ಬ್ರಾಹ್ಮಣರು – 'ಕಪರನ್ನು ನಾವು ಗೆಲ್ಲುತ್ತೇವೆ. ದೇವತೆಗಳಿಂದ ನಾವು ಪ್ರಾರ್ಥಿತರಾಗಿದ್ದೇವೆ. ಆದ್ದರಿಂದ ನಾವು ಅವರನ್ನು ವಧಿಸುತ್ತೇವೆ. ಎಲೈ ಧನಿಯೇ ನೀನು ಬಂದಂತೆಯೇ ಹೋಗು.'[1]

ಧನಿಯು ಹೋಗಿ ಕಪರಿಗೆ ಬ್ರಾಹ್ಮಣರ ಉತ್ತರ ಹೇಳಲು, ಅವರೆಲ್ಲ ಆಯುಧಪಾಣಿಗಳಾಗಿ ಬ್ರಾಹ್ಮಣರ ಮೇಲೆ ಎರಗಿದರು. ಇದನ್ನು ನೋಡಿದ ಬ್ರಾಹ್ಮಣರು ಪ್ರಾಣನಾಶಕವಾದ ಪ್ರಜ್ವಲಿಸುವ ಅಗ್ನಿಯನ್ನು ಕಪರ ವಿರುದ್ಧ ವಿಸರ್ಜಿಸಿದರು. ಹೀಗೆ ಬ್ರಾಹ್ಮಣರಿಂದ ಬಿಡಲ್ಪಟ್ಟ (ಉತ್ಸರ್ಜಿತ) ಸನಾತನ ಅಗ್ನಿಗಳು ಕಪರನ್ನು ತಿಂದು (ಸಂಹರಿಸಿ) ಆಕಾಶದಲ್ಲಿ ಮೋಡಗಳಂತೆ ಮೆರೆದವು, ಶೋಭಿಸಿದವು[2]. ಆಗ(ದೇವತೆಗಳೆಲ್ಲ) ಬ್ರಾಹ್ಮಣರನ್ನೂ ಕೀರ್ತಿಶಾಲಿಯಾದ ಬ್ರಹ್ಮನನ್ನೂ ಪ್ರಶಂಸೆ ಮಾಡಿದರು[3].

ಅನಂತರ ದೇವತೆಗಳ ತೇಜಸ್ಸು ಪರಾಕ್ರಮಗಳು ವೃದ್ಧಿಯಾದವು. ಮತ್ತೆ ತ್ರಿಲೋಕಪೂಜ್ಯತ್ವವನ್ನು ಅವರು (ದೇವತೆಗಳು) ಪಡೆದರು.

ಈ ಮಾತನ್ನು ಕೇಳಿದ ಅರ್ಜುನನು ವಾಯುದೇವನನ್ನು ಕುರಿತು 'ಪ್ರಭುವೇ! ನಾನು ಇನ್ನು ಮೇಲೆ ಬ್ರಾಹ್ಮಣರ ಸಲುವಾಗಿ ಜೀವಿಸುತ್ತೇನೆ. ಬ್ರಹ್ಮದೇವರಿಗೂ ಹಾಗೂ ಬ್ರಾಹ್ಮಣರಿಗೂ ನಿತ್ಯವೂ ನಮಸ್ಕಾರ ಮಾಡುತ್ತೇನೆ. ದತ್ತಾತ್ರೇಯ ಅನುಗ್ರಹದಿಂದ ನನಗೆ ಈ ಲೋಕದಲ್ಲಿ ಕೀರ್ತಿ ಹಾಗೂ ಮಹಾಧರ್ಮ ಪ್ರಾಪ್ತವಾಗಿದೆ. ಎಲೈ ವಾಯುದೇವನೇ! ನಿನ್ನಿಂದ ಹೇಳಲ್ಪಟ್ಟ ಬ್ರಾಹ್ಮಣರ ಎಲ್ಲ ಕರ್ಮಗಳು, ವ್ಯಾಪಾರಗಳು, ನಾನು ಜಿತೇಂದ್ರಿಯನಾಗಿ ಕೇಳಿದ್ದೇನೆ (ಕಿವಿಗೊಟ್ಟು ಶ್ರದ್ಧೆಯಿಂದ). ಅವೆಷ್ಟು ಅದ್ಭುತವಾದವುಗಳಾಗಿವೆ.'

---

ಏತೈಶ್ಚಾನ್ಯೈಶ್ಚ ಬಹುಭಿರ್ಗುಣೈರ್ಯುಕ್ತಾನ್ ಕಥಂ ಕಪಾನ್ ॥
ವಿಜೇಷ್ಯಥ ನಿವರ್ತಧ್ವಂ ನಿವೃತ್ತಾನಾಂ ಶುಭಂ ಹಿ ವಃ ॥ – ೨೪೫/೮-೧೩

೧ ಕಪಾನ್ ವಯಂ ವಿಜೇಷ್ಯಾಮೋ ಯೇ ದೇವಾಸ್ತೇ ವಯಂ ಸ್ಮೃತಾಃ ।
ತಸ್ಮಾದ್ವಧ್ಯಾಃ ಕಪಾಸ್ಮಾಕಂ ಧನಿನ್ ಯಾಹಿ ಯಥಾಗತಮ್ ॥ – ೨೪೫/೧೪
ನಾವು ಕಪರನ್ನು ಗೆಲ್ಲುವೆವು, ನಾವೇ ದೇವತೆಗಳು. ಆದ್ದರಿಂದ ಕಪರು ನಮ್ಮಿಂದ ವಧ್ಯರಾದವರು.
ಧನಿಯೇ! ಬಂದಂತೆಯೇ ಹೊರಟುಹೋಗು –(ವೈ.ಪಾ.ಅನುವಾದ, ಪು.೪೬೪, ಭಾಗ-೩೪)

೨ ಗೃಹೀತ್ವಾಸ್ತ್ರಾಣ್ಯಥೋ ವಿಪ್ರಾನ್ ಕಪಾಃ ಸರ್ವೇ ಸಮಾದ್ರವನ್ ।
ಸಮುದಗ್ರಧ್ವಜಾನ್ ದೃಷ್ಟ್ವಾ ಕಪಾನ್ ಸರ್ವೇ ದ್ವಿಜಾತಯಃ ।
ವ್ಯಸೃಜನ್ ಜ್ವಲಿತಾನಗ್ನೀನ್ ಕಪಾನಾಂ ಪ್ರಾಣನಾಶನಾನ್ ॥
ಬ್ರಹ್ಮಸೃಷ್ಟಾ ಹವ್ಯಭುಜಃ ಕಪಾನ್ ಭುಕ್ತ್ವಾ ಸನಾತನಾಃ ।
ನಭಸೀವ ಯಥಾಭ್ರಾಣಿ ವ್ಯಭ್ರಾಜಂತ ಚ ಯಶಸ್ವಿನಮ್ ।

೩ ತೇಷಾಂ ತೇಜಸ್ತಥಾ ವೀರ್ಯಂ ದೇವಾನಾಂ ವವೃಧೇ ತತಃ ।
ಅವಾಪ್ನುವಂಶ್ಚ ದೇವತ್ವಂ ತ್ರಿಷು ಲೋಕೇಷು ಪೂಜಿತಮ್ ॥

**ಜೀವಾಮ್ಯಹಂ ಬ್ರಾಹ್ಮಣಾರ್ಥೇ ಸರ್ವಥಾ ಸತತಂ ಪ್ರಭೋ।**
**ಬ್ರಹ್ಮಣೇ ಬ್ರಾಹ್ಮಣೇಭ್ಯಶ್ಚ ಪ್ರಣಮಾಮಿ ಚ ನಿತ್ಯಶಃ॥**
**ದತ್ತಾತ್ರೇಯಪ್ರಸಾದಾಚ್ಚ ಮಯಾ ಪ್ರಾಪ್ತಮಿದಂ ಯಶಃ।**
**ಲೋಕೇ ಚ ಪರಮಾ ಕೀರ್ತಿರ್ಧರ್ಮಶ್ಚ ಪರಮೋ ಮಹಾನ್॥**

**- ೨೪೫/೧೫-೨೧**

**ಅಹೋ ಬ್ರಾಹ್ಮಣ ಕರ್ಮಾಣಿ ಯಥಾ ಮಾರುತ ತತ್ತ್ವತಃ।**
**ತ್ವಯಾ ಪ್ರೋಕ್ತಾನಿ ಕಾರ್ತ್ಸ್ನ್ಯೇನ ಶ್ರುತಾನಿ ಪ್ರಯತೇನ ಹ॥**

ಅರ್ಜುನನ ಮಾತುಗಳನ್ನು ಆಲಿಸಿದ ವಾಯುದೇವನು ಅರ್ಜುನನಿಗೆ 'ಬ್ರಾಹ್ಮಣರನ್ನು ಕ್ಷತ್ರಿಯಧರ್ಮಕ್ಕೆ ಅನುಗುಣವಾಗಿ ಪಾಲಿಸು. ನಿನ್ನ ಇಂದ್ರಿಯಗಳನ್ನು ರಕ್ಷಿಸು(ನಿಗ್ರಹಿಸು), ಮುಂದಿನ ಕಾಲದಲ್ಲಿ ನಿನಗೆ ಭಾರ್ಗವರಿಂದ (ಭೃಗುವಂಶದವರಿಂದ) ಘೋರ ಭಯವುಂಟಾಗಲಿದೆ(ಎಚ್ಚರದಿಂದ ವರ್ತಿಸು)'[೧] ಎಂದು ಎಚ್ಚರಿಸಿದನು.

## ಸಂದೇಶಗಳು - ವಿವರಗಳು

೧. ಧರ್ಮರಾಜನು ಪೂಜ್ಯರು, ನಮಸ್ಕಾರಕ್ಕೆ ಯೋಗ್ಯರು ಯಾರೆಂದು ಕೇಳಿದುದಕ್ಕೆ ಉತ್ತರವಾಗಿ ಬ್ರಾಹ್ಮಣರು ಪೂಜ್ಯರು, ನಮಸ್ಕಾರಕ್ಕೆ ಯೋಗ್ಯರು ಎಂದು ಹೇಳುತ್ತಾ ಒಂದು ಅಧ್ಯಾಯದಲ್ಲಿ ಪೂಜ್ಯತ್ವವನ್ನು ನಿರ್ಣಯಿಸುವ ಬ್ರಾಹ್ಮಣ್ಯದ ಸುಮಾರು ೬೦ ಗುಣಗಳನ್ನು ವರ್ಣಿಸಿದ್ದಾರೆ. ಇದೊಂದು ದೃಷ್ಟಿಯಲ್ಲಿ ತತ್ತ್ವಗಳು.

೨೪೧-೨೪೫ರವರೆಗೆ ಐದು ಅಧ್ಯಾಯಗಳಲ್ಲಿ ಹಲವು ಬ್ರಾಹ್ಮಣರ ಗುಣಾವಿಷ್ಕಾರಗಳು ಅವು ಹೇಗೆ ಆಶ್ರಿತರಿಗೆ ಸಾಧಕವಾಗಿದ್ದವೆಂದು ವರ್ಣಿಸಲಾಗಿದೆ. ಇಂತಹ ಬ್ರಾಹ್ಮಣರಿಗಿಂತ ತಾನು ಶ್ರೇಷ್ಠನೆಂಬ ಕಾರ್ತವೀರ್ಯಾರ್ಜುನನ ದರ್ಪಿಷ್ಠ ಮಾತುಗಳಿಗೆ ಅಶರೀರವಾಣಿಯ ರೂಪದಲ್ಲಿ ದೇವದೂತ ವಾಯುವುದ ಹಲವು ಶ್ರೇಷ್ಠ ಬ್ರಾಹ್ಮಣರ ಮಹಿಮಾತಿಶಯಗಳನ್ನು ವರ್ಣಿಸಿ, ಇಂತಹ ಬ್ರಾಹ್ಮಣರನ್ನು ಮೀರಿಸಿದ ಮಾಹಾತ್ಮ್ಯವುಳಗಳ ಕ್ಷತ್ರಿಯನನ್ನು ತೋರಿಸು ಎಂದು ಕೇಳುತ್ತಾನೆ. ಪರೋಕ್ಷವಾಗಿ ಅರ್ಜುನನನ್ನೇ ಪ್ರಶ್ನಿಸಿದಾಗ ಅರ್ಜುನನು ಕೊನೆಗೆ ತನ್ನ ತಪ್ಪಿನ ಅರಿವಾಗಿ, ನಾನು ಇನ್ನು ಮುಂದೆ ಬ್ರಾಹ್ಮಣರನ್ನು ಗೌರವದಿಂದ ಕಾಣುತ್ತೇನೆ, ನಮಸ್ಕರಿಸುತ್ತೇನೆ ಎಂದು ವಾಯುದೇವನಿಗೆ ಗೌರವಪೂರ್ವಕವಾಗಿ ಹೇಳುತ್ತಾನೆ.

ಆದ್ದರಿಂದ ಬ್ರಾಹ್ಮಣರನ್ನು ಗೌರವಬುದ್ಧಿಯಿಂದ ಕಾಣುವುದು ಇಲ್ಲಿಯ ಮುಖ್ಯ ಸಂದೇಶ. ಅದಕ್ಕೆ ತಪ್ಪಿದಲ್ಲಿ ಅವರಿಗೇನೇ ಸರ್ವಸ್ವ ಹಾನಿಯೆನ್ನಲು ಕಾರ್ತವೀರ್ಯಾರ್ಜುನನೇ ದೃಷ್ಟಾಂತವಾಗುತ್ತಾನೆ. ಇದನ್ನು ದೇವದೂತನು ಹೇಳಿ ಎಚ್ಚರಿಸಿದರೂ, ಅರ್ಜುನನು ಆ

---

೧ ಬ್ರಾಹ್ಮಣಾನ್ ಕ್ಷತ್ರಧರ್ಮೇಣ ಪಾಲಯಸ್ವೇಂದ್ರಿಯಾಣಿ ಚ।
ಭೃಗುಭ್ಯಸ್ತೇ ಭಯಂ ಘೋರಂ ತತ್ತು ಕಾಲಾದ್ಭವಿಷ್ಯತಿ॥ - ೨೪೫/೮-೨೩

ಪ್ರಸಂಗ ಬಂದಾಗ ಮಾತ್ರ ಜಮದಗ್ನಿಗಳನ್ನು ಅಗೌರವಿಸಿ, ಕೊಂದ ಪರಿಣಾಮವಾಗಿ ತಾನು ಹತನಾದ, ಪರಶುರಾಮರಿಂದ. ಮತ್ತು ಆ ಕಾಲದ ದುಷ್ಟಕ್ಷತ್ರಿಯರೂ ನಾಶವಾದರು ಎಂಬುದು ಇತಿಹಾಸ.

ಆದ್ದರಿಂದ ಬ್ರಾಹ್ಮಣರನ್ನು ಎಂದೂ ಯಾವ ಕಾಲಕ್ಕೂ ಅಗೌರವಿಸಬಾರದು. ಅವರು ಚಿಕ್ಕವರಿರಲಿ, ದೊಡ್ಡವರಿರಲಿ, ಜ್ಞಾನಿಗಳಿರಲಿ, ಅಜ್ಞಾನಿಗಳಿರಲಿ, ಅವರನ್ನು ಎಂದೂ ಅವಮಾನಿಸಬಾರದು. ಗೌರವಿಸಿದರೆ, ಸಮೃದ್ಧಿ ಇಲ್ಲದಿದ್ದರೆ ಸರ್ವಸ್ವನಾಶ. ಭಾಗವತದಲ್ಲಿಯೂ ಈ ಮಾತು ಬಂದಿದೆ : 'ಶಂಕೇ ಭೃಶಂ ಬ್ರಹ್ಮಕುಲಾವಮಾನಾತ್' ಎಂದು.

**ನಾಹಂ ವಿಶಂಕೇ ಸುರರಾಜವಜ್ರಾತ್ ನ ತ್ರ್ಯಕ್ಷಶೂಲಾತ್ ನ ಯಮಸ್ಯ ದಂಡಾತ್ ।**
**ನಾಗ್ನ್ಯರ್ಕಸೋಮಾನಿಲವಿತ್ತಪಾಸ್ತ್ರಾತ್ ಶಂಕೇ ಭೃಶಂ ಬ್ರಹ್ಮಕುಲಾವಮಾನಾತ್ ॥**
**- ಭಾಗವತ (೫/೧೦/೧೮)**

'ನಾನು ದೇವೇಂದ್ರನ ವಜ್ರಾಯುಧಕ್ಕೆ ಭಯಪಡುವುದಿಲ್ಲ, ಶಿವನ ಶೂಲಕ್ಕೂ ಹೆದರುವುದಿಲ್ಲ ಯಮನ ದಂಡಕ್ಕೂ ಭಯಪಡೆನು; ಅಗ್ನಿ, ಸೂರ್ಯ, ಚಂದ್ರ, ವಾಯು, ಕುಬೇರ ಇವರ ಅಸ್ತ್ರಗಳಿಗೂ ಹೆದರುವುದಿಲ್ಲ, ಆದರೆ ಬ್ರಾಹ್ಮಣ ಸಮುದಾಯಕ್ಕೆ ಆಗುವ ಅವಮಾನದ ಅಪರಾಧಕ್ಕೆ ಮಾತ್ರ ಬಹಳ ಅಂಜುತ್ತೇನೆ (ಇದು ರಹೂಗಣ ಮಹಾರಾಜನ ಮಾತು, ಜಡಭರತರಿಗೆ).

ಇತ್ಯಾದಿ...

*****

## ೧೫೨. ದೂರ್ವಾಸರ ಮಾಹಾತ್ಮ್ಯ

ಧರ್ಮರಾಜನು ಕೃಷ್ಣನನ್ನು ಕುರಿತು 'ಬ್ರಾಹ್ಮಣ ಪೂಜೆಯಿಂದ ಆಗುವ ಫಲವನ್ನು ತಿಳಿಸು' ಎಂದು ಕೇಳಿದಾಗ, ವಾಸುದೇವನು (ಕೃಷ್ಣನು) ಹೇಳುತ್ತಾನೆ.

'ಧರ್ಮರಾಜನೇ! ಬ್ರಾಹ್ಮಣರ ಗುಣಗಳನ್ನು ಹೇಳುತ್ತೇನೆ ಕೇಳು. ಹಿಂದೆ ಪ್ರದ್ಯುಮ್ನನು ಬ್ರಾಹ್ಮಣರ ಕೋಪಕ್ಕೆ ಗುರಿಯಾಗಿ ನನ್ನನ್ನು –

'ನೀನು ಈಶ್ವರ, ನಿನಗ ಇಹ ಹಾಗೂ ಪರಲೋಕದಲ್ಲಿ ಬ್ರಾಹ್ಮಣರ ಪೂಜೆಯಿಂದಾಗುವ ಫಲವೇನು? ಯಾವಾಗಲೂ ದ್ವಿಜರನ್ನು ಪೂಜಿಸಿ ಬರುವ ಫಲವೇನು' ಕೇಳಿದನು. ಅದಕ್ಕೆ ನಾನು ಉತ್ತರಿಸಿದ್ದನ್ನು ನಿನಗೆ ಹೇಳುತ್ತೇನೆ. ಕೇಳು.

ಬ್ರಾಹ್ಮಣರ ಪೂಜೆಯ ಫಲ ತಿಳಿ –

೧. ಬ್ರಾಹ್ಮಣರು ಸಾಮಾನ್ಯರಲ್ಲ, ಅವರು ಚಂದ್ರನನ್ನೇ ಪ್ರಭುವಾಗಿ ಹೊಂದಿದವರು (ಸೋಮರಾಜಾನಃ) ಮತ್ತು ಸುಖದುಃಖಗಳಿಗೆ ಒಡೆಯರು (ನಿಯಂತ್ರಕರು).

೨. ಈ ಲೋಕದಲ್ಲಾಗಲಿ, ಪರಲೋಕದಲ್ಲಾಗಲಿ ಪ್ರಾಪ್ತವಾಗುವ ಸುಖವು ಬ್ರಾಹ್ಮಣ ಮುಖಿಯಾಗಿದೆ (ಬ್ರಾಹ್ಮಣರನ್ನು ಮುಂದೆ ಮಾಡಿಕೊಂಡಾಗಲೇ ಸುಖ).

೩. (ಕ್ಷತ್ರಿಯರಿಗೆ) ಲಭ್ಯವಾಗುವ ವಿರ್ಯ, ಆಯುಷ್ಯ, ಕೀರ್ತಿ, ಯಶಸ್ಸು ಬಲ, ಲೋಕಗಳು, ಲೋಕೇಶ್ವರತ್ವಾದಿಗಳು – ಎಲ್ಲವೂ ಬ್ರಾಹ್ಮಣರನ್ನು ಮುಂದಿಟ್ಟುಕೊಂಡಾಗಲೇ. ಹೀಗಿರುವಾಗ ನಾನು ಈಶ್ವರ(ಭಗವಂತ) ಎಂದು ಬ್ರಾಹ್ಮಣರನ್ನು ಹೇಗೆ ತಾನೇ ಆದರಿಸದಿರಲಿ? ಆದ್ದರಿಂದ ಪ್ರದ್ಯುಮ್ನನೇ ಬ್ರಾಹ್ಮಣರ ಬಗ್ಗೆ ಕೋಪಿಸಬೇಡ್.

೪. ಬ್ರಾಹ್ಮಣರು ಕೋಪಗೊಂಡರೆ ನಮ್ಮ ಎದುರಿಗೇ ಈ ಜಗತ್ತನ್ನು ಭಸ್ಮ ಮಾಡಬಲ್ಲರು. ತಮ್ಮ ತಪಃಸಾಮರ್ಥ್ಯದಿಂದ ಸಮಾನಾಂತರವಾಗಿ ಬೇರೆ ಲೋಕಗಳನ್ನು ಲೋಕಪಾಲಕರನ್ನು ಸೃಷ್ಟಿಸಬಲ್ಲರು. ಹೀಗಾಗಿ ನಾನು ಅವರನ್ನು ಹೇಗೆ ತಾನೇ ಅನುಸರಿಸದೇ ಇದ್ದೇನು?

---

೧ ಅಸ್ಮಿಂಲ್ಲೋಕೇ ರೌಗ್ಮಿಣೇಯ ತಥಾಽಮುಷ್ಮಿಂಶ್ಚ ಪುತ್ರಕ।
ಬ್ರಾಹ್ಮಣ ಪ್ರಮುಖಂ ಸೌಖ್ಯಂ ............................ ॥
ಬ್ರಾಹ್ಮಣಪ್ರಮುಖಂ ವೀರ್ಯಮಾಯುಃ ಕೀರ್ತಿರ್ಯಶೋ ಬಲಮ್।
ಲೋಕಾ ಲೋಕೇಶ್ವರಾಶ್ಚೈವ ಸರ್ವೇ ಬ್ರಾಹ್ಮಣಪೂರ್ವಕಾಃ॥
ತತ್ಕಥಂ ನಾದ್ರಿಯೇಯಂ ವೈ ಈಶ್ವರೋಽಸ್ಮೀತಿ ಪುತ್ರಕ।
ಮಾ ತೇ ಮನ್ಯುರ್ಮಹಾಬಾಹೋ ಭವತ್ವತ್ರ ದ್ವಿಜಾನ್ ಪ್ರತಿ॥ – ೨೪೭/೩-೧೦

ಪ್ರದ್ಯುಮ್ನನೇ ಬ್ರಾಹ್ಮಣರ ಸಾಮರ್ಥ್ಯವನ್ನು ತಿಳಿಸುತ್ತೇನೆ. ನಮ್ಮ ಮನೆಯಲ್ಲಿ ಹಿಂದೆ ನಾರು ಮಡಿ ಉಟ್ಟ ಬಿಲ್ವದಂಡ ಧರಿಸಿದ ದೀರ್ಘಮೀಸೆ, ಉಗುರುಗಳು ಇದ್ದ ಒಬ್ಬ ಬ್ರಾಹ್ಮಣನಿದ್ದ. ಅವನು ಈ ಭೂಮಿಯಲ್ಲಿರುವವರ ಪೈಕಿಯೇ ಬಹು ಎತ್ತರವಾಗಿದ್ದ. ಅವನು ಹೋದಲ್ಲೆಲ್ಲ ದಿವ್ಯಲೋಕಗಳಲ್ಲಿ ಭೂಲೋಕದಲ್ಲಿ ನಾಲ್ಕು ರಸ್ತೆಗಳು ಕೂಡುವ ಚತ್ವರ ಮತ್ತು ಜನ ಸೇರುವ ಸಭೆಗಳಲ್ಲಿ ಹೀಗೆ ಹೇಳುತ್ತಿದ್ದ, ಹಾಡುತ್ತಿದ್ದ[೧].

'ಬ್ರಾಹ್ಮಣರಾದ ದುರ್ವಾಸರನ್ನು ಯಾರು ತಮ್ಮ ಮನೆಯಲ್ಲಿ ಇರಿಸಿಕೊಳ್ಳುತ್ತಾರೆ, ಸತ್ಕಾರ ಮಾಡುತ್ತಾರೆ (ವಾಸ), ನನ್ನ ಈ ಷರತ್ತನ್ನು ಕೇಳಿದ ಯಾವನು ನನಗೆ ಆಶ್ರಯ ಕೊಡುವನು? ನನಗೆ ಆಶ್ರಯ ಕೊಡುವವನು ನನ್ನನ್ನು ಸಿಟ್ಟುಗೊಳಿಸಬಾರದು.'

ಈ ಮಾತುಗಳನ್ನು ಕೇಳಿ ಯಾರೂ ಅವನನ್ನು ಆದರಿಸಲಿಲ್ಲ (ತಮ್ಮ ಮನೆಯಲ್ಲಿ ಇಟ್ಟು ಕೊಳ್ಳಲಿಲ್ಲ). ಆಗ ನಾನು ಆತನನ್ನು ನಮ್ಮ ಮನೆಯಲ್ಲಿ ವಾಸಕ್ಕಾಗಿ ಇಟ್ಟುಕೊಂಡೆ. ಆತನು ಒಮ್ಮೊಮ್ಮೆ–

೧. ಸಹಸ್ರಾರು ಜನರು ಊಟ ಮಾಡುವುದನ್ನು ಒಬ್ಬನೇ ಉಣ್ಣುತ್ತಿದ್ದ.

೨. ಮತ್ತೊಮ್ಮೆ ಅತ್ಯಲ್ಪ ಭೋಜನಮಾಡಿ, ಪುನಃ ಮನೆಗೆ ವಾಪಸು ಬರುತ್ತಿರಲಿಲ್ಲ[೨].

೩. ಇದ್ದಕ್ಕಿಂದ್ದಂತೆ ನಗುತ್ತಾನೆ, ಅಳುತ್ತಾನೆ(ನಗುತ್ತಿದ್ದ, ಅಳುತ್ತಿದ್ದ). ಆತನಿಗೆ ವಯಸ್ಸಿಗೆ ಸಮರಾದವರು ಯಾರೂ ಭೂಮಿಯಲ್ಲಿ ಇರಲಿಲ್ಲ.

೪. ನಮ್ಮ ಮನೆಗೆ ಹೋಗಿ ಒಮ್ಮೆ ಮನೆಯಲ್ಲಿನ ಹಾಸಿಗೆಗಳು, ಆಸನಗಳು, ಅಲಂಕೃತ ಕನ್ಯೆಯರು, ಎಲ್ಲರನ್ನೂ ಸುಟ್ಟು ಹೊರಟುಹೋದ.

೫. ಉತ್ತಮ ವ್ರತನಿಷ್ಠನಾದ ಆ ಮುನಿ ಒಮ್ಮೆ ನನಗೆ ಹೇಳಿ, ಬೇಗನೇ ಉಣ್ಣಲು ಪಾಯಸ ಬೇಕು ಎಂದ. ಈ ಬ್ರಾಹ್ಮಣನ ಮನಸ್ಸನ್ನು ಬಲ್ಲ ನಾನು ನನ್ನ ಅರಮನೆಯ ಸಿಬ್ಬಂದಿಗೆ ಮೊದಲೇ ಹೇಳಿದ್ದೆ ಶ್ರೇಷ್ಠವಾದ ಸಾಧಾರಣವಾದ ಎಲ್ಲ ತರಹದ ಭಕ್ಷ್ಯಗಳು ಯಾವಾಗಲೂ ಸಿದ್ಧವಾಗಿರಲಿ ಎಂದು. ಆದ್ದರಿಂದ ಬಿಸಿ ಪಾಯಸವನ್ನು ತಂದು ಕೊಟ್ಟೆ. ಅದನ್ನು ಉಂಡು ಉಳಿದ ಪಾಯಸವನ್ನು 'ಲೇಪಿಸಿಕೊ' ಎಂದ ನನಗೆ ಆದೇಶಿಸಿದ. ನಾನು ಯೋಚಿಸದೆ ಆ ಉಚ್ಚಿಷ್ಟ ಪಾಯಸವನ್ನು ನನ್ನ ಮೈಗೆ–ತಲೆಗೆ ಲೇಪಿಸಿಕೊಂಡೆ. ಅಲ್ಲಿಗೆ ಸುಮ್ಮನಾಗದ ಆ ಮುನಿ ನಿನ್ನ ತಾಯಿಯನ್ನು ನೋಡಿ ನಗುತ್ತಾ ಪಾಯಸವನ್ನು ಆಕೆಗೂ ಲೇಪಿಸಿದ[೩]. ಪಾಯಸದಿಂದ

---

೧ ದುರ್ವಾಸಸಂ ವಾಸಯೇತ್ ಕೋ ಬ್ರಾಹ್ಮಣಂ ಸತ್ಕೃತಂ ಗೃಹೇ।
ಪರಿಭಾಷಾಂ ಚ ಮೇ ಶ್ರುತ್ವಾ ಕೋ ನು ದದ್ಯಾತ್ ಪ್ರತಿಶ್ರಯಮ್ ॥
ಯೋ ಮಾಂ ಕಶ್ಚಿತ್ ವಾಸಯೇತ್ ನ ಸ ಮಾಂ ಕೋಪಯೇದಿಹ। – ೨೪೭/೧೪

೨ ಸ ಸ್ಮ ಭುಂಕ್ತೇ ಸಹಸ್ರಾಣಾಂ ಬಹೂನಾಮನ್ನಮೇಕದಾ।
ಏಕದಾ ಸ್ಮಾಲ್ಪಕಂ ಭುಂಕ್ತೇ ನ ವೈತಿ ಚ ಪುನರ್ಗೃಹಾನ್।
ಅಕಸ್ಮಾಚ್ಚ ಪ್ರಹಸತಿ ತಥಾಽಕಸ್ಮಾತ್ ಪ್ರರೋದಿತಿ॥ – ೨೪೭/೧೬,೧೭

ಲೇಪಿಸಲ್ಪಟ್ಟ ರುಗ್ಮಿಣಿಯನ್ನು ರಥಕ್ಕೆ ಕುದುರೆಯಂತೆ ಹೂಡಿ ಆ ರಥವನ್ನು ಏರಿ ನನ್ನ ಮನೆಯಿಂದ ಹೊರಟರು.

ಬೆಂಕಿಯಂತೆ ಕಾಣುತ್ತಿದ್ದ ಆ ಮುನಿಯು ಅಶ್ವವನ್ನು ಓಡಿಸಲು ಚಾವಟಿಯಂತೆ ಹೊಡೆಯುವಂತೆ ನಾನು ನೋಡುತ್ತಿರುವಂತೆ ರುಗ್ಮಿಣಿಯನ್ನು ಹೊಡೆಯುತ್ತಿದ್ದನು. ಇದನ್ನು ನೋಡಿಯೂ ನನಗೆ ಮುನಿಯ ಬಗ್ಗೆ ಅಸೂಯೆ, ಕೋಪ, ದುಃಖವಾಗಲಿಲ್ಲ. ನಂತರ ರಾಜಮಾರ್ಗದಿಂದ ರಥವನ್ನು ನಗರದ ಹೊರಗೆ ಹೊರಟರು ಮುನಿಗಳು. ಇದನ್ನು ನೋಡುತ್ತಿದ್ದ ದ್ವಾರಕೆಯ ಜನರು ಕೋಪದಿಂದ ಬ್ರಾಹ್ಮಣರಾಗಿಯೇ ಎಲ್ಲರೂ ಹುಟ್ಟಬೇಕು. ಬೇರೆ ಯಾರು ತಾನೇ ಈ ರಥ ಏರಿ ಜೀವಿಸಿಯಾನು? ಬ್ರಾಹ್ಮಣರ ಕೋಪ ಸರ್ಪಕೋಪಕ್ಕಿಂತ ತೀಕ್ಷ್ಣ. ಬ್ರಾಹ್ಮಣ ಸರ್ಪದಿಂದ ಸುಟ್ಟವನಿಗೆ ಯಾವ ವೈದ್ಯನೂ ಇಲ್ಲವೇ ಇಲ್ಲ[೧]. ಹೀಗೆ ಹೋಗುತ್ತಿರುವಾಗ ರುಗ್ಮಿಣಿಯು ದಾರಿಯಲ್ಲಿ ಎಡವಲು ಆ ಮುನಿ ಆಕೆಯನ್ನು ಮತ್ತೆ ಚಾವಟಿಯಿಂದ ಹೊಡೆದನು. ನಂತರ ಕೋಪಗೊಂಡು ರಥದಿಂದ ಕೆಳಗಿಳಿದು ದಕ್ಷಿಣಾಭಿಮುಖವಾಗಿ ಓಡಿಹೋದನು.

ಹಾಗೆ ಓಡಿಹೋಗುತ್ತಿದ್ದ ಬ್ರಾಹ್ಮಣ ಮುನಿಯನ್ನು ಮೈಯೆಲ್ಲ ಪಾಯಸ ಲೇಪಿಸಿಕೊಂಡ ನಾನು ಬೆನ್ನು ಹತ್ತಿ 'ಪೂಜ್ಯರೇ ಪ್ರಸನ್ನರಾಗಿ' ಎಂದು ಹೇಳುತ್ತಾ ಓಡಿದೆ. ಆಗ ಆ ಮುನಿ ನನ್ನನ್ನು ನೋಡಿ 'ನೀನು ಕೋಪವನ್ನು ಸ್ವಾಭಾವಿಕವಾಗಿಯೇ ಗೆದ್ದೀಯಾ' ನಿನ್ನಲ್ಲಿ ಯಾವ ಅಪರಾಧವೂ ಇಲ್ಲ. ನಿನ್ನ ಬಗ್ಗೆ ನಾನು ತುಂಬಾ ಪ್ರಸನ್ನನಾಗಿದ್ದೇನೆ. ಬೇಕಾದ ವರ ಕೇಳು. ಪ್ರಸನ್ನನಾದ ನನ್ನ ವರದ ಫಲ ಹೇಗಿರುತ್ತದೆ ಎಂಬುದನ್ನು ನೋಡು ಎಂದನು.

---

ಸೋಽಸ್ಮದಾವಸಥಂ ಗತ್ವಾ ಶಯ್ಯಾಶ್ಚಾಸ್ತರಣಾನಿ ಚ।
ಕನ್ಯಾಶ್ಚಾಲಂಕೃತಾ ದಗ್ಧ್ವಾ ತತೋ ವ್ಯಪಗತಃ ಸ್ವಯಮ್।
ಕೃಷ್ಣ ಪಾಯಸಮಿಚ್ಛಾಮಿ ಭೋಕ್ತುಮಿತ್ಯೇವ ಸತ್ವರಃ।
ಸದ್ಯೈವ ತು ಮಯಾ ತಸ್ಯ ಚಿತ್ತಜ್ಞೇನ ಗೃಹೋ ಜನಃ।
ಸರ್ವಾಣ್ಯೇವಾನ್ನಪಾನಾನಿ ಭಕ್ಷ್ಯಾಶ್ಚೋಚ್ಚಾವಚಾಸ್ತಥಾ॥
ಭವಂತು ಸತ್ಕೃತಾನೀತಿ ಪೂರ್ವಮೇವ ಪ್ರಚೋದಿತಃ॥
ಕ್ಷಿಪ್ರಮಂಗಾನಿ ಲಿಂಪಸ್ವ ಪಾಯಸೇನೇತಿ ಸ ಸ್ಮ ಹ।
ತೇನೋಚ್ಛಿಷ್ಟೇನ ಗಾತ್ರಾಣಿ ಶಿರಶ್ಚೈವಾಭ್ಯಮೃಕ್ಷಯಮ್।
ತಾಮಪಿ ಸ್ಮಯಮಾನಃ ಸ ಪಾಯಸೇನಾಭ್ಯಲೇಪಯತ್॥
೧ ನ ಚ ಸ್ತೋಕಮಪ್ಯಾಸೀತ್ ದುಃಖಮೀರ್ಷ್ಯಾ ಕೃತಂ ತದಾ।
ಬ್ರಾಹ್ಮಣಾ ಏವ ಜಾಯೇರನ್ ನಾನ್ಯೋ ವರ್ಣಃ ಕಥಂಚನ॥
ಕೋ ಹ್ಯೇನಂ ರಥಮಾಸ್ಥಾಯ ಜೀವೇದನ್ಯಃ ಪುಮಾನಿವ।
ಆಶೀವಿಷವಿಷಂ ತೀಕ್ಷ್ಣಂ ತತಸ್ತೀಕ್ಷ್ಣತರಂ ವಿಷಮ್।
ಬ್ರಹ್ಮಾಶೀವಿಷದಗ್ಧಸ್ಯ ನಾಸ್ತಿ ಕಶ್ಚಿತ್ ಚಿಕಿತ್ಸಕಃ॥ - ೨೪೭/೧೮-೨೯

**ತಮುತ್ಪಥೇನ ಧಾವಂತಮನ್ವಧಾವಂ ದ್ವಿಜೋತ್ತಮಮ್ ।**
**ತಥೈವ ಪಾಯಸಾದಿಗ್ಧಃ ಪ್ರಸೀದ ಭಗವನ್ನಿತಿ ॥**
**ತತೋ ವಿಲೋಕ್ಯ ತೇಜಸ್ವೀ ಬ್ರಾಹ್ಮಣೋ ಮಾಮುವಾಚ ಹ ।**
**ಜಿತಃ ಕ್ರೋಧಸ್ತ್ವಯಾ ಕೃಷ್ಣ ಪ್ರಕೃತ್ಯೈವ ಮಹಾಭುಜ ॥**
**ನ ತೇಽಪರಾಧಮಿಹ ವೈ ದೃಷ್ಟವಾನಸ್ಮಿ ಸುವ್ರತ ।**
**ಪ್ರೀತೋಽಸ್ಮಿ ತವ ಗೋವಿಂದ ವೃಣು ಕಾಮಾನ್ ಯಥೇಪ್ಸಿತಾನ್ ।**
**ಪ್ರಸನ್ನಸ್ಯ ಚ ಮೇ ತಾತ ಪಶ್ಯ ವ್ಯುಷ್ಟಿರ್ಯಥಾ ವಿಧಾ ॥ - ೨೪೭/೩೨-೩೪**

ಶ್ರೀಕೃಷ್ಣನು ವರವನ್ನು ಕೇಳುವ ಮೊದಲೇ ದುರ್ವಾಸರು ಕೃಷ್ಣನನ್ನು ಕುರಿತು –

೧. ಮನುಷ್ಯರಿಗೆ ಎಲ್ಲಿಯವರೆಗೆ ಅನ್ನದಲ್ಲಿ ಅಭಿರುಚಿ ಇರುತ್ತದೋ ಅಲ್ಲಿಯವರೆಗೆ ನಿನ್ನಲ್ಲಿ ಅವರಿಗೆ ಭಕ್ತಿ ಇರುತ್ತದೆ.

೨. ನಿನ್ನ ಪುಣ್ಯಕೀರ್ತಿ ಲೋಕಗಳಲ್ಲಿರುವವರೆಗೆ ನೀನು ಲೋಕದಲ್ಲಿ ಶ್ರೇಷ್ಠತ್ವ ಹೊಂದುವಿ. ಎಲ್ಲ ಪ್ರಜೆಗಳಿಗೂ ನೀನು ಪ್ರೀತಿ ಪಾತ್ರನಾಗಿರುವೆ.

೩. ನಿನ್ನ ಮನೆಯಲ್ಲಿ ನಾನೇನು ಹಾಳು ಮಾಡಿದೆನೋ ಅವೆಲ್ಲ ಮೊದಲಿನಂತೆ ಆಗುತ್ತದೆ.

೪. ನೀನು ಪಾಯಸ ಲೇಪಿಸಿಕೊಂಡಿದ್ದರಿಂದ ನಿನಗೆ ಮೃತ್ಯುವಿನ ಭಯವಿಲ್ಲ.

೫. ಹೀಗೆ ಪ್ರಸನ್ನರಾಗಿ ದುರ್ವಾಸರು ಹೇಳಲು ಕೃಷ್ಣನ ಶರೀರ ಮೊದಲಿಗಿಂತ ಕಾಂತಿಯುಕ್ತವಾಗಿ ಕಂಡಿತು.

ನಂತರ ರುಗ್ಮಿಣಿಯನ್ನು ಕುರಿತು –

ಎಲೈ ಶೋಭನೆಯೇ! ನೀನು ಎಲ್ಲ ಸ್ತ್ರೀಯರಿಗಿಂತ ಶ್ರೇಷ್ಠವಾದ ಯಶಸ್ಸು ಕೀರ್ತಿಯನ್ನು ಹೊಂದುವೆ.

ನಿನಗೆ ಮುಪ್ಪು ರೋಗ, ವರ್ಣಹೀನತೆ (ಮೈಬಣ್ಣ ಕಾಂತಿ) ಉಂಟಾಗದು. ಸದಾ ಸುಂದರಿಯಾಗಿ ತೋರುವೆ. ನೀನು ಕೃಷ್ಣನನ್ನು ಸದಾ ಆರಾಧಿಸುವೆ.

೧೬ ಸಾವಿರ ಇತರ ಪತ್ನಿಯರಲ್ಲಿ ನೀನೇ ಶ್ರೇಷ್ಠಳಾಗುವೆ.

ಮತ್ತೆ ನನ್ನನ್ನು ನೋಡುತ್ತಾ ಎಲೈ ಕೇಶವನೇ! 'ನಿನ್ನ ಬುದ್ಧಿ ಬ್ರಾಹ್ಮಣರ ಬಗ್ಗೆ ಯಾವಾಗಲೂ ಹೀಗೆಯೇ ಇರಲಿ' ಎಂದು ಹೇಳಿ ಅಲ್ಲಿಯೇ ಅಂತರ್ಧಾನರಾದರು ಮುನಿಗಳು[1].

---

[1] ಯತ್ತೇ ಭಿನ್ನಂ ಚ ದಗ್ಧಂ ಚ ಯದ್ವಾ ಕಿಂಚನ ನಾಶಿತಮ್ ।
ಸರ್ವಂ ತಥೈವ ದ್ರಷ್ಟಾಸಿ ವಿಶಿಷ್ಟಂ ವಾ ಜನಾರ್ದನ ॥ - ೨೪೭/೩೭
ಏವಮೇವ ತೇ ಬುದ್ಧಿರಸ್ತು ಬ್ರಾಹ್ಮಣಾನ್ ಪ್ರತಿ ಕೇಶವ ।
ಇತ್ಯುಕ್ತ್ವಾ ಸ ತದಾ ಪುತ್ರ ತತ್ರೈವಾಂತರಧೀಯತ । - ೨೪೭/೪೪

ಮುನಿಗಳು ಅಂತರ್ಧಾನವಾದ ನಂತರ ಕೃಷ್ಣನು **'ಬ್ರಾಹ್ಮಣನು ಏನೇ ಹೇಳಿದರೂ ಅದನ್ನು ನಾನು ಮಾಡುವೆನು'** ಎಂಬ **ರಹಸ್ಯವ್ರತವನ್ನು** ರುಗ್ಮಿಣಿಯೊಡನೆ ಸಂಕಲ್ಪ ಮಾಡಿ ಮನೆಗೆ ಹೋದನು[೧].

ಮನೆಗೆ ಹೋಗಿ ಕೃಷ್ಣ ನೋಡಲು ಎಲ್ಲವೂ ಮೊದಲಿನಂತೆಯೇ ಇತ್ತು(ಮುನಿಯಿಂದ ಒಡೆಯಲ್ಪಟ್ಟ ಸುಟ್ಟ ಎಲ್ಲವೂ).

ಹೀಗೆ ಮೊದಲಿನಂತೆ ಎಲ್ಲವೂ ಆದುದನ್ನು ನೋಡಿ 'ಎಲೈ ಪ್ರದ್ಯುಮ್ನನೇ! ಇದಕ್ಕೆಲ್ಲ ಕಾರಣರಾದ ಆ ಮುನಿಯನ್ನು ಮನಸ್ಸಿನಲ್ಲೇ ಪೂಜಿಸಿದೆ[೨].'

ನೋಡು ಧರ್ಮರಾಜ! ನನ್ನನ್ನು ಪ್ರಶ್ನೆ ಮಾಡಿದ ರುಗ್ಮಿಣೀ ಪುತ್ರನಿಗೆ ದುರ್ವಾಸರ ಮಹಿಮೆಯನ್ನು ಹೀಗೆ ಹೇಳಿದೆ. ಧರ್ಮರಾಜನೇ! ನೀನು ಕೂಡಾ ಬ್ರಾಹ್ಮಣರನ್ನು ಒಳ್ಳೆಯ ಮಾತುಗಳಿಂದ, ದಾನಗಳಿಂದ ಯಾವಾಗಲೀ ಪೂಜಿಸು. ಇದುವೇ ಬ್ರಾಹ್ಮಣ ಪೂಜಾಫಲ, ಭೀಷ್ಮರು ನನ್ನ ಬಗ್ಗೆ ಏನೆಲ್ಲಾ ಹೇಳಿದ್ದಾರೋ ಅದೆಲ್ಲ ಸತ್ಯ[೩].

## ಸಂದೇಶಗಳು-ವಿವರಣೆಗಳು

೧. ಶ್ರೀಕೃಷ್ಣನು ತನ್ನ ಮಗ ಪ್ರದ್ಯುಮ್ನನಿಗೆ ಬ್ರಾಹ್ಮಣರ ಕೋಪಕ್ಕೆ ತುತ್ತಾದ ಬ್ರಾಹ್ಮಣರ ಪೂಜೆ ಸತ್ಕಾರದ ಬಗ್ಗೆ ಸ್ವಯಂ ತನ್ನ ಅನುಭವವನ್ನು ತಿಳಿಸಿ ತಿಳಿಹೇಳಿದನು. ಆದ್ದರಿಂದ ಮಕ್ಕಳಿಗೆ ತಂದೆತಾಯಿಗಳ ಕರ್ತವ್ಯವಿದು. ಮಕ್ಕಳು ದಾರಿ ತಪ್ಪಿದಾಗ ಅವರಿಗೆ ಸೂಕ್ತ ಮಾರ್ಗದರ್ಶನ ನೀಡುವುದು ಮುಂದೆ, ಅಂತಹ ತಪ್ಪು ಮಾಡದಂತೆ ಎಚ್ಚರಿಕೆ ನೀಡಿ ಸನ್ಮಾರ್ಗದಲ್ಲಿ ತರುವುದು.

೨. ಬ್ರಾಹ್ಮಣರು ಸುಖದುಃಖಗಳನ್ನು ತರಬಲ್ಲರು. ಆದ್ದರಿಂದ ಅವರನ್ನು ಸರಿಯಾಗಿ ಸತ್ಕರಿಸಿ, ನಮಗೆ ಸುಖ ಬರುವಂತೆ ಅವರೊಡನೆ ವ್ಯವಹರಿಸಬೇಕು (ಸುಖದುಃಖಯೋಃ ಈಶ್ವರಾಃ ಸೋಮರಾಜಾನಃ - ೨೪೭/೭).

---

೧ ತಸ್ಮಿನ್ನಂತರ್ಹಿತೇ ಚಾಹಮುಪಾಂಶುವ್ರತಮಾದಿಶಮ್ ।
ಯತ್ಕಿಂಚಿತ್ ಬ್ರಾಹ್ಮಣೋ ಬ್ರೂಯಾತ್ ಸರ್ವಂ ಕುರ್ಯಾಮಿತಿ ಪ್ರಭು ॥
ಏತದ್ವ್ರತಮಹಂ ಕೃತ್ವಾ ಮಾತ್ರಾ ತೇ ಸಹ ಪುತ್ರಕ ॥ - ೨೪೭/೪೫,೪೬

೨ ತತೋಽಹಂ ವಿಸ್ಮಯಂ ಪ್ರಾಪ್ತಃ ಸರ್ವಂ ದೃಷ್ಟ್ವಾ ನವಂ ದೃಢಮ್ ।
ಅಪೂಜಯಂ ಚ ಮನಸಾ ರೌಗ್ಮಿಣೇಯಂ ದ್ವಿಜಂ ತದಾ ॥ - ೨೪೭/೪೮

೩ ತಥಾ ತ್ವಮಪಿ ಕೌಂತೇಯ ಬ್ರಾಹ್ಮಣಾನ್ ಸತತಂ ಪ್ರಭೋ ।
ಪೂಜಯಸ್ವ ಮಹಾಭಾಗಾನ್ ವಾಗ್ಭಿರ್ದಾನೈಶ್ಚ ನಿತ್ಯದಾ ॥
ಏವಂ ವೃಷ್ಟಿಮಹಂ ಪ್ರಾಪ್ತೋ ಬ್ರಾಹ್ಮಣಾನಾಂ ಪ್ರಸಾದಜಾಂ ।
ಯಚ್ಚ ಮಾಮಾಹ ಭೀಷ್ಮೋಽಯಂ ತತ್ ಸತ್ಯಂ ಭರತರ್ಷಭ ॥ - ೨೪೭/೫೦,೫೧

೩. ಬ್ರಾಹ್ಮಣರನ್ನು ಮುಂದೆ ಮಾಡಿಕೊಂಡು ಇತರ ವರ್ಣಗಳು ತಮ್ಮ ಕಾರ್ಯಗಳನ್ನು ಮಾಡಬೇಕು. ಅವರೇ ಎಲ್ಲ ವರ್ಣಗಳ ಹಿತೈಷಿಗಳು (ಪುರೋಹಿತರು ಎಂಬುದರ ಅರ್ಥವಿದು). ಅವರ ಆಶೀರ್ವಾದಾದಿಗಳಿಂದಲೇ ವೀರ್ಯ, ಆಯುಷ್ಯ, ಕೀರ್ತಿ, ಬಲ ಮುಂತಾದುವು.

೪. ಸ್ವಯಂ ಶ್ರೀಕೃಷ್ಣ ತಾನು ಭಗವಂತನಾದರೂ ಬ್ರಾಹ್ಮಣರನ್ನು ಎಂದೂ ನಿರಾದರ ಮಾಡಲಿಲ್ಲ. ಆದ್ದರಿಂದಲೇ ಅವನು '**ಬ್ರಹ್ಮಣ್ಯದೇವ**' ಎನಿಸಿಕೊಂಡ. ಬ್ರಾಹ್ಮಣರನ್ನೂ ಸೇರಿಸಿಕೊಂಡು ಎಲ್ಲರಿಗೂ ಸ್ವಾಮಿಯಾಗಿದ್ದರೂ ಕೂಡಾ ಬ್ರಾಹ್ಮಣರನ್ನು ಯಾವಾಗಲೂ ಸೇವಿಸುತ್ತಿದ್ದ. ತಾನೇ ಸೇವೆ ಸಲ್ಲಿಸದಿದ್ದರೆ ಬೇರೆ ಯಾರೂ ಸೇವಿಸರೆಂದು ತಿಳಿಸಲೋಸುಗ ಉಪಾಖ್ಯಾನದಲ್ಲಿ ದುರ್ವಾಸರ ದಾಸಾನುದಾಸನಾಗಿ '**ಭಲೇ ಜಿತೇಂದ್ರಿಯ**' **ಕೋಪವನ್ನು ಗೆದ್ದವನು** ಎಂದೆನಿಸಿಕೊಂಡ. ಬ್ರಾಹ್ಮಣರ ಸೇವೆ ಮಾಡದಿದ್ದರೂ ಆತನಿಗೆ ಯಾವುದೇ ಹಾನಿಯಿಲ್ಲ, ಅದು ದೇವರ ಕರ್ತವ್ಯವಲ್ಲ. ಆದರೂ ಲೋಕಶಿಕ್ಷಣಕ್ಕಾಗಿ ಮಾಡುತ್ತಾನೆ. ಇದನ್ನು ಗೀತೆಯಲ್ಲಿ ತಾನೇ ಹೇಳಿಕೊಂಡಿದ್ದಾನೆ[೧]. ಉಳಿದವರಿಗಂತೂ ಅದು ಕರ್ತವ್ಯವೇ.

೫. ಬ್ರಾಹ್ಮಣರ ಸಾಮರ್ಥ್ಯ ಅದ್ಭುತ. ಅದು ತಪೋಮೂಲ, ಜಗತ್ತನೇ ಭಸ್ಮ ಮಾಡಬಲ್ಲರು. ಆದ್ದರಿಂದ ಅವರ ಕೋಪಕ್ಕೆ ವಿಶೇಷವಾಗಿ ರಾಜರು ಗುರಿಯಾಗಬಾರದು.

೬. ಬ್ರಾಹ್ಮಣರು (ಬ್ರಹ್ಮವಾದಿಗಳು, ತಪೋನಿಷ್ಠರು) ಸಹಸ್ರಾರು ಜನರು ಉಣ್ಣುವಷ್ಟು ಉಣ್ಣಬಲ್ಲರು, ಅತಿ ಕಡಿಮೆಯೂ ಉಂಡು ಬದುಕಬಲ್ಲರು ವರ್ಷಗಟ್ಟಲೆ ಉಪವಾಸ ಇರಬಲ್ಲರು.

೭. ದುರ್ವಾಸರು ಅವಧೂತರು, ಸ್ಥಿತಪ್ರಜ್ಞರು, ನಗುವರು, ಅಳುವರು, ಇದ್ದಕ್ಕಿದ್ದಂತೆ ಓಡಿಹೋಗುತ್ತಾರೆ. ಅವರ ಚರ್ಯೆ ಎಲ್ಲರಿಗೂ ತಿಳಿಯದು. ಕೆಲವರೇ ತಿಳಿಯಬಲ್ಲರು.

೮. ದೂರ್ವಾಸರು ಕೃಷ್ಣನ ಮೈಗೆಲ್ಲ ರುಗ್ಮಿಣಿಗೂ ಪಾಯಸ ಮೆತ್ತಿ ಊರೆಲ್ಲ ತಿರುಗಿಸಿಬಿಟ್ಟರು. ಅವರನ್ನು ಪರೀಕ್ಷೆ ಮಾಡಿದರು. ಬ್ರಾಹ್ಮಣರು ಇತರರನ್ನು ಪರೀಕ್ಷೆ ಮಾಡುತ್ತಾರೆ. ಮಾಡಬಹುದು. ಅದಕ್ಕೆ ಅವರ ಭಕ್ತರು ಜಿತೇಂದ್ರಿಯರಾಗಿ ಸಿದ್ಧರಾಗಿರಬೇಕು. ಬೇಸರಪಟ್ಟುಕೊಳ್ಳಬಾರದು. ಹೀಗೆಯೇ ಚ್ಯವನರೂ ಕುಶಿಕ ದಂಪತಿಗಳನ್ನು ಪರೀಕ್ಷಿಸಿದ್ದನ್ನು ಮಹಾಭಾರತ ಹೇಳುತ್ತದೆ (ಅನುಶಾಸನಪರ್ವ ಅ. ೮೧ರಿಂದ ೮೬)

೯. ದುರ್ವಾಸರು ಕೃಷ್ಣನ ಅರಮನೆಯಲ್ಲಿಯೇ ವಾಸವಾಗಿದ್ದರೂ ಅದರ ಕೆಲಭಾಗ ಸಲಕರಣೆ, ಕನ್ಯೆಯರನ್ನು ಸುಟ್ಟು ಹಾಕಿದ್ದರು. ಕೃಷ್ಣ-ರುಗ್ಮಿಣಿಯರು ಸಿಟ್ಟಾಗಲಿಲ್ಲ.

---

೧ ಯದಿ ಹ್ಯಹಂ ನ ವರ್ತೇಯಂ ಜಾತು ಕರ್ಮಣ್ಯತಂದ್ರಿಯಃ।
ಮಮ ವರ್ತ್ಮಾನು ವರ್ತಂತೇ ಮನುಷ್ಯಾಃ .................. । ಇತ್ಯಾದಿ – ಗೀತೆ

ಬೇಸರಪಟ್ಟುಕೊಳ್ಳಲಿಲ್ಲ. ಯಾವುದೇ ನಷ್ಟವನ್ನು ಅನುಭವಿಸಲು ಭಕ್ತರು ಸಹಿಸಲು ಸಿದ್ಧರಿರಬೇಕು. ಅಲ್ಲಿಯೇ ಜೀವನದ ಸಿದ್ಧಿ. ಆ ನಷ್ಟ ತಾತ್ಕಾಲಿಕವಾಗಿರುತ್ತದೆಯೇ ಹೊರತು ಶಾಶ್ವತವಾಗಿರುವುದಿಲ್ಲ. ಅದರ ಯೋಗಕ್ಷೇಮ ಭಗವಂತನದು ಎಂಬ ವಿಶ್ವಾಸವಿರಬೇಕು. **'ತಾಳಿದವ ಬಾಳಿಯಾನು'**.

೧೦. ಎಷ್ಟೇ ತೊಂದರೆಗಳು ಬ್ರಾಹ್ಮಣರು ನೀಡಿದರೂ ಅವರನ್ನು ಅಗೌರವಿಸದೆ **'ಪ್ರಸನ್ನರಾಗಿರಿ'** ಎಂಬ ಮಂತ್ರ ಬಿಡದೆ ಸೇವೆ ಸಲ್ಲಿಸಿದಾಗಲೇ ಸಿದ್ಧಿ.

೧೧. ಆಗಲೇ ಬ್ರಾಹ್ಮಣರು ಅಯಾಚಿತವಾಗಿ ವರ ನೀಡುತ್ತಾರೆ. ಕುಶಿಕ ದಂಪತಿಗಳಿಗೆ ಚ್ಯವನರು, ಕೃಷ್ಣನಿಗೆ ದುರ್ವಾಸರು ಏನೂ ಕೇಳದಿದ್ದರೂ ಅವರೇ ಸ್ವಯಂ ವರಗಳನ್ನು ನೀಡಿ ಹೋದರು. ಕಾರಣ ವರ ಕೇಳಿಸುವವನೂ, ಕೊಡುವವನೂ, ಭಗವಂತನೇ ಅಲ್ಲವೇ. ಸಕಲೇಂದ್ರಿಯ ಪ್ರೇರಕ ಭಗವಂತನೇ. ಇದೆಲ್ಲ ಅವನ ಲೀಲೆ ಎಂಬ ಭಾವನೆ ಜಾಗ್ರತವಾಗಿದ್ದರೆ, ಎಂತಹ ಕಷ್ಟಕಾರ್ಪಣ್ಯಗಳು ಬಂದರೂ ದೇವರು ಕೈ ಬಿಡನು.

೧೨. ಕೃಷ್ಣನ ಉಪಾಂಶುವ್ರತ ರಹಸ್ಯವ್ರತ ಎಲ್ಲರದೂ ಆಗಿರಬೇಕು. 'ಬ್ರಾಹ್ಮಣನು ಏನೇ ಹೇಳಿದರೂ (ಕೇಳಿದರೂ) ಮಾಡುವೆ' ಎಂಬ ವ್ರತ. 'ಯತ್ಕಿಂಚಿತ್ ಬ್ರಾಹ್ಮಣೋ ಬ್ರೂಯಾತ್ ಸರ್ವಂ ಕುರ್ಯಾಮಿತಿ ಪ್ರಭೋ'. ಭಗವಂತನು ನಮಗೂ ಅಂತಹ ವ್ರತ ಕೈಗೊಳ್ಳುವ ಮನಸ್ಸು, ಶಕ್ತಿ ಕೊಡಲಿ.

೧೩. ಸರ್ವೋತ್ತಮನಾದ ಕೃಷ್ಣ ಹಾಗೂ ಸ್ತ್ರೀಯರಲ್ಲಿ ಸರ್ವೋತ್ತಮಳಾದ ರುಗ್ಮಿಣಿಯು ದುರ್ವಾಸರು ವರ ಕೊಟ್ಟರೂ ಸ್ವೀಕರಿಸಿದರು. ಬ್ರಾಹ್ಮಣರು ಕೊಟ್ಟುದುದನ್ನು ತಿರಸ್ಕರಿಸಬಾರದೆಂಬ ಸಂದೇಶವನ್ನು ಜಗತ್ತಿಗೆ ತೋರಿಸಿದರು. ಇಲ್ಲದಿದ್ದರೆ ಕೃಷ್ಣ–ರುಗ್ಮಿಣಿಯರೆಲ್ಲಿ, ದೂರ್ವಾಸರೆಲ್ಲಿ, ಇದೆಲ್ಲವೂ ಹರಿಯ ಲೋಕಲೀಲೆ. **'ಧರ್ಮೋ ಹಿ ಸರ್ವವಿದುಷಾಮಪಿ'** (ಮ.ತಾ.ನಿ. ೧೪/೪) ಎಂಬ ತನ್ನದೇ ನಿಯಮಕ್ಕೆ ತಾನೇ ಒಳಗಾಗಿ ನಟನೆ ಮಾಡುತ್ತಾನೆ. ಸ್ವಾವರರಿಂದಲೂ ವರಾದಿಗಳನ್ನು ಪಡೆಯುವ ಪ್ರಸಂಗಗಳಲ್ಲಿ ಇದೂ ಒಂದು.

ಇತ್ಯಾದಿ.....

# ೧೫೩. ರುದ್ರದೇವರ ತೃತೀಯ ನೇತ್ರೋತ್ಪತ್ತಿ

ತೀರ್ಥಯಾತ್ರೆ ಮಾಡುತ್ತಾ ಹಿಂದೊಮ್ಮೆ ಅದ್ಭುತವಾದ ಕಾಂತಿಯುಳ್ಳ ಹಿಮಾಲಯ ಪರ್ವತದ ವನವನ್ನು ನೋಡಿದೆ ಎಂದು ನಾರದರು ಹೇಳುತ್ತಾ ಉಮಾಮಹೇಶ್ವರಸಂವಾದ-ವನ್ನು ಅನುವಾದ ಮಾಡುತ್ತಾರೆ. ಅವರು ನೋಡಿದ ವನದ ವರ್ಣನೆಯು ಭಾರತದಲ್ಲಿ ಬರುವ ಅಪೂರ್ವ ವರ್ಣನೆಗಳಲ್ಲಿ ಒಂದಾಗಿದೆ. ಕವಿಹೃದಯವನ್ನು ಮಾತ್ರ (ಕಾವ್ಯದೃಷ್ಟಿಯನ್ನು) ನೋಡುವವರಿಗೆ ಇದೊಂದು ಕಬ್ಬದ ಹಬ್ಬ. ಹದಿನೈದು ಶ್ಲೋಕಗಳಲ್ಲಿ ವ್ಯಾಸರು ವನದ ಪ್ರಾಣಿ, ಪಕ್ಷಿ, ವಾದ್ಯಘೋಷ, ಸಭೆಗಳ, ನೃತ್ಯಮಾಡುವ ಗಂಧರ್ವಾಪ್ಸರೆಯರ, ಊರ್ಧ್ವರೇತಸ್ಕರಾದ ವಿವಿಧ ಪುರುಷರ, ಋಷಿ, ದೇವತಾಗಣಗಳ ದಿವ್ಯಗಂಧಸೂಸುವ ವಾಯುವಿನ ಝೇಂಕಾರ, ಪಕ್ಷಿಗಳ ನಿನಾದ ಮೊದಲಾದವುಗಳನ್ನು ವರ್ಣಿಸಿದ್ದಾರೆ.

ಅಲ್ಲಿ ಬಂಗಾರಧಾತುವಿನಿಂದ ವಿಭೂಷಿತವಾದ ಪರ್ವತಪ್ರವೇಶವೊಂದರಲ್ಲಿ ರುದ್ರದೇವರು ಹುಲಿಯ ಚರ್ಮ ಉಟ್ಟು ಗಜಚರ್ಮ ಹೊದ್ದು ಸರ್ಪಯಜ್ಞೋಪವೀತ ಧರಿಸಿ, ಕೆಂಪಾದ ಕರುಳಿನ ಹಾರದಿಂದ ಅಲಂಕೃತರಾಗಿ, ಅಸುರರಿಗೆ ಭಯಂಕರರಾಗಿ ಎಲ್ಲ ಜೀವರಿಗೂ ಭಯಪರಿಹಾರಕರಾಗಿ, ಭಕ್ತರಿಗೆ ಅಭಯಂಕರರಾಗಿ, ಕಿನ್ನರ, ಗಂಧರ್ವ, ಋಷಿಗಳಿಂದ ಸ್ತೋತ್ರಮಾಡಿಸಿಕೊಳ್ಳುತ್ತಾ, ಭೂತಗಳಿಂದ ಆರಾಧನೆಗೊಳ್ಳುತ್ತಾ ಇದ್ದಾರೆ. ಅವರನ್ನು ವಾಲಖಿಲ್ಯರೂ, ಬ್ರಹ್ಮರ್ಷಿಗಳೂ, ಅಯೋನಿಜರೂ, ಯೋನಿಜರೂ, ತಪಸ್ಸಿದ್ಧ ಮಹರ್ಷಿಗಳು ಉಪಾಸನೆ ಮಾಡುತ್ತಿದ್ದಾರೆ. ಹೀಗೆ ಶಿವನ ವರ್ಣನೆಯೇ ಎಂಟು ಶ್ಲೋಕಗಳಿಂದ ಕೂಡಿದೆ.[೧]

ಆ ಕ್ಷಣದಲ್ಲಿ ಶಿವನಂತೆ ಭೂತಸ್ತ್ರೀಗಣಗಳಿಂದ ಕೂಡಿದ, ಶಿವನ ವಸ್ತ್ರಕ್ಕೆ ಸದೃಶವಾದ ವಸ್ತ್ರವನ್ನು ಧರಿಸಿದ, ಸಮಾನವ್ರತ (ಪತಿಯ) ಧಾರಿಣಿಯಾದ ಪಾರ್ವತಿಯು ಸರ್ವತೀರ್ಥಗಳಿಂದ ತಂದ ಸುವರ್ಣಕಲಶವನ್ನು ಕೈಯಲ್ಲಿ ಹಿಡಿದುಕೊಂಡು ನದೀದೇವತೆಗಳಿಂದ ಅನುಸರಿಸಿದವಳಾಗಿ ಶಿವನ ಸೇವೆಗೆ ಮಾಡಲು ಪತಿಯ ಬಳಿ ಬಂದಳು.

ಪತಿಗೆ ಹರ್ಷವುಂಟುಮಾಡಲು ಪಾರ್ವತಿಯು ಕ್ರೀಡಾರ್ಥವಾಗಿ ಶಂಕರನ ಹಿಂದೆ ನಿಂತು ತನ್ನ ಗಣಗಳನ್ನು ನೋಡಿ ನಗುತ್ತಾ ತನ್ನ ಮನೋಹರವಾದ ಎರಡೂ ಕೈಗಳಿಂದ ರುದ್ರನ ಎರಡು ಕಣ್ಣುಗಳನ್ನು ಮುಚ್ಚಿದಳು (ಅದೊಂದು ನವವಿವಾಹಿತಳು ಗಂಡನೊಡನೆ ಕಣ್ಣುಮುಚ್ಚಾಲೆ ಆಟ

---

೧ ವ್ಯಾಘ್ರಚರ್ಮ ಪರೀಧಾನೋ ಗಜಚರ್ಮೋತ್ತರಚ್ಛದಃ।
.................... ಭಯಕರ್ತಾ ಸುರದ್ವಿಷಾಮ್ ॥
ಭಯಘ್ನಃ ಸರ್ವಭೂತಾನಾಂ ಭಕ್ತಾನಾಮಭಯಂಕರಃ।
ಋಷಯೋ ವಾಲಖಿಲ್ಯಾಶ್ಚ ತಥಾ ವಿಪ್ರರ್ಷಯಶ್ಚ ಯೇ ॥...
ತತಸ್ತಂ ದೇವದೇವೇಶಂ ಭಗವಂತಮುಪಾಸತೇ ॥ - ೧೯೨/೧೮-೨೫

ಆಡಿದಂತ್ತಿತ್ತು). ಉಮಾದೇವಿಯ ಈ ಕ್ರೀಡೆಯಿಂದ ರುದ್ರನು ಕಣ್ಣು ಮುಚ್ಚಿದನು. ಪರಿಣಾಮ ಎಲ್ಲೆಡೆ ಕತ್ತಲು ಆವರಿಸಿತು. ಸೂರ್ಯಚಂದ್ರತಾರೆಯರು ನಷ್ಟರಾದರು (ಕಾಣದಾದರು). ಸ್ವಾಧ್ಯಾಯ ವಷಟ್ಕಾರಗಳು ಹೋಮ, ದೇವತೆಗಳನ್ನು ಉದ್ದೇಶಿಸಿ ಹವಿಸ್ಸಮರ್ಪಣೆ ವಷಟ್ಕಾರ ನಿಂತವು. ಲೋಕದ ಜನರು ಏನೂ ಮಾಡಲು ತೋಚದಾರರು. ಭಯ ಆವರಿಸಿ, ಜಗತ್ತು ಸಂತ್ರಸ್ತವಾಯಿತು. ಋಷಿಗಳಿಗೆ ಲೋಕಗಳಿಗೆ ಹಾಹಾಕಾರವುಂಟಾಯಿತು. ಜನ ದಿಗ್ಭ್ರಾಂತರಾದರು. ಜೀವಿತ ಸಂದಿಗ್ಧವಾಗಲು ರುದ್ರದೇವರ ಹಣೆಯಲ್ಲಿ ವಿಶಾಲವಾದ ಮೂರನೇ ಕಣ್ಣು ದ್ವಾದಶಾದಿತ್ಯರ ಪ್ರಭೆಯಂತೆ ಪ್ರಕಾಶಮಾನವಾಗಿರುವಂತೆ ಲೋಕಗಳನ್ನು ಬೆಳಗಿಸುತ್ತಾ ಉದ್ಭವಿಸಿತು.[೧]

ಶಿವನಲಲಾಟದಿಂದ ಹೊರಹೊಮ್ಮಿದ ಯುಗಾಂತಕಾಲದ ಅಗ್ನಿಯಂತೆ (ಪ್ರಲಯಾಗ್ನಿ) ಇದ್ದ ಅಗ್ನಿಯಿಂದ ದಿವ್ಯ ಔಷಧಿ ಸಸ್ಯಗಳಿಂದ ಕೂಡಿದ ಹಿಮಾಲಯಪರ್ವತವೇ ದೇವದಾನವರಾಕ್ಷಸರೆಲ್ಲ ನೋಡುತ್ತಿದ್ದಂತೆ ಸುಟ್ಟುಹೋಗಲು, ಪಾರ್ವತಿಯು ಭಯದಿಂದ ತಂದೆ (ಹಿಮವತ್ಪರ್ವತರಾಜ)ಯ ಹಿತ ಬಯಸುವಳಾಗಿ ಶಿವನ ಪಾದಗಳಿಗೆ ಎರಗಿದಳು.

ಅದನ್ನು ನೋಡಿದ ಮಹೇಶ್ವರನು ಮತ್ತೆ ಪಾರ್ವತಿಗೆ ಪ್ರಿಯವುಂಟು ಮಾಡಲು ಆ ಪರ್ವತವನ್ನು ಸೌಮ್ಯದೃಷ್ಟಿಯಿಂದ ನೋಡಲಾಗಿ, ಅದು ಮೊದಲಿನಂತಾಯಿತು. ತಂದೆಯು ಮೊದಲಿನಂತಾದುದನ್ನು ನೋಡಿದ ಪಾರ್ವತಿಯು ಪತಿಯ ಸಾಮರ್ಥ್ಯದ ಬಗ್ಗೆ ಹೆಮ್ಮೆ ಪಟ್ಟಳು. ಸಂತುಷ್ಟಳಾದಳು. ಆಶ್ಚರ್ಯಚಕಿತಳಾದ ಉಮೆ ಸರ್ವಲೋಕಕ್ಕೆ ಹಿತವಾಗಲೆಂದು ಬಯಸಿ ದೇವದೇವನಾದ ಹರನನ್ನು ಹೀಗೆ ಅರ್ಥಪೂರ್ಣವಾಗಿ ಮಾತನಾಡಿದಳು.[೨]

---

೧ ಅಗಮ್ಯ ತು ಗಿರೇಃ ಪುತ್ರೀ ದೇವದೇವಸ್ಯ ಚಾಂತಿಕಮ್ ।
ಮನಃ ಪ್ರಿಯಂ ಚಿಕೀರ್ಷಂತೀ ಕ್ರೀಡಾರ್ಥಂ ಶಂಕರಾಂತಿಕೇ ॥
ಮನೋಹರಾಭ್ಯಾಂ ಪಾಣಿಭ್ಯಾಂ ಹರನೇತ್ರೇ ಪಿಧಾಯ ತು ।
ಅವೇಕ್ಷ್ಯ ಹೃಷ್ಟಾ ಸ್ವಗಣಾನ್ ಸ್ಮಯಂತೀ ಪೃಷ್ಠತಃ ಸ್ಥಿತಾ ॥
ದೇವ್ಯಾ ಚಾಂಧೀಕೃತೇ ದೇವೇ ಕಶ್ಮಲಂ ಸಮಪದ್ಯತ ।
ನಿಮೀಲಿತೇ ಭೂತಪತೌ ನಷ್ಟಚಂದ್ರಾರ್ಕತಾರಕಮ್ ॥
ನಿಃ ಸ್ವಾಧ್ಯಾಯ ವಷಟ್ಕಾರಂ ತಮಸಾ ಚಾಭಿಸಂವೃತಮ್ ।
ವಿಷಣ್ಣಂ ಭಯಸಂತಸ್ತಂ ಜಗದಾಸೀತ್ ಭಯಾಕುಲಮ್ ॥
ತೃತೀಯಂ ಚಾಸ್ಯ ಸಂಭೂತಂ ಲಲಾಟೇ ನೇತ್ರಮಾಯತಮ್ ।
ದ್ವಾದಶಾದಿತ್ಯಸಂಕಾಶಂ ಲೋಕಾನ್ ಭಾಸಾಽವ ಭಾಸಯತ್ ॥ – ೧೯೨/೨೯–೩೪

೨ ದೃಷ್ಟಮಾತ್ರೇ ಭಗವತಾ ಸೌಮ್ಯಯುಕ್ತೇನ ಚೇತಸಾ ।
ಕ್ಷಣೇನ ಹಿಮವಾನ್ ಶೈಲಃ ಪ್ರಕೃತಿಸ್ಥೋಽಭವತ್ ಪುನಃ ॥ – ೧೯೨/೪೦,೪೧
ದೇವೀ ವಿಸ್ಮಯ ಸಂಯುಕ್ತಾ .......................
ಹಿತಾರ್ಥಂ ಸರ್ವಲೋಕಾನಾಂ ಪ್ರಜಾನಾಂ ಹಿತಕಾಮ್ಯಯಾ ।
ದೇವದೇವಂ ಮಹಾದೇವೀ ಬಭಾಷೇದಂ ವಚೋಽರ್ಥವಿತ್ ॥ – ೧೯೨/೪೪

'ಭಗವನ್! ನಿನ್ನ ನೇತ್ರಾಗ್ನಿಯಿಂದ ವನಪರ್ವತದಹನ ನೋಡಿ ನನಗೆ ಆಶ್ಚರ್ಯವಾಗಿದೆ. ನಿನ್ನ ಲಲಾಟದಲ್ಲಿ ಸೂರ್ಯಾಗ್ನಿಗಳ ತೇಜಸ್ಸನ್ನು ಮೀರುವ ಮೂರನೇ ಕಣ್ಣು ಏಕೆ ಕಾಣುತ್ತಿದೆ?

ಆ ನೇತ್ರಾಗ್ನಿಯಿಂದ ಸುಟ್ಟ ಪರ್ವತವು ನಿನ್ನ ನೋಟದಿಂದ ಮತ್ತೆ ಮೊದಲಿನಂತಾಯಿತು. ನನ್ನ ತಂದೆ ಮೊದಲಿನಂತಾದನು. ಈ ಬಗ್ಗೆ ನನ್ನ ವಿಸ್ಮಯಕ್ಕೆ ಕಾರಣವೇನು? ನಿನಗೆ ನಮಸ್ಕಾರ' ಎಂದಳು.

ನಾರದರು ತಮ್ಮ ಅನುವಾದವನ್ನು ಮುಂದುವರೆಸಿದರು. ಶಿವ-ಉಮೆಗೆ ಉತ್ತರಿಸಿದ. ಧರ್ಮಜ್ಞಳೇ! ನಿನ್ನ ಸಂಶಯ ಸರಿಯಾಗಿದೆ. ನಿನ್ನನ್ನು ಬಿಟ್ಟು ಬೇರಾರೂ ಹೀಗೆ ಪ್ರಶ್ನೆ ಮಾಡುವುದಿಲ್ಲ. ಅದು ರಹಸ್ಯವಿರಲಿ, ಇಲ್ಲದಿರಲಿ, ನಿನಗೆ ಈ ಸಭೆಯಲ್ಲಿ ಉತ್ತರಿಸುತ್ತೇನೆ. ನಾನು ಎಲ್ಲ ಶಿಖರಗಳ ಶಿಖರಸ್ಥಾನದಲ್ಲಿದ್ದೇನೆಂದು ತಿಳಿ.

ಯಾವ ರೀತಿಯಾಗಿ ಮೂರು ಲೋಕಗಳು ವಿಷ್ಣುವಿನ ಅಧೀನದಲ್ಲಿವೆಯೋ, ಆ ಲೋಕಗಳು ನನ್ನ ಅಧೀನದಲ್ಲೂ ಇವೆ. ವಿಷ್ಣುಸೃಷ್ಟಿ ಮಾಡುತ್ತಾನೆ, ನಾನು ರಕ್ಷಿಸುತ್ತೇನೆ. ಎಲೈ ಭವಾನೀ! ಆದ್ದರಿಂದ ನನಗೆ ಶುಭವಾಗಲಿ, ಅಶುಭವಾಗಲಿ, ಅದರ ಪರಿಣಾಮ ಜಗತ್ತಿಗೂ ಆಗುತ್ತದೆ. ಜಗತ್ತೂ ಶುಭಾಶುಭಗಳನ್ನು ಹೊಂದುತ್ತದೆ. ಈ ರಹಸ್ಯವನ್ನು ನೀನು ತಿಳಿಯದೆ, ದೃಢವ್ರತಳೇ! ನಿನ್ನ ಬಾಲ್ಯದ ಹುಡುಗಾಟದ ನಿಮಿತ್ತದಿಂದ (ನನ್ನ ದೃಷ್ಟಿಯಲ್ಲಿ) ಕ್ರೀಡೆಗಾಗಿ ನನ್ನ ಕಣ್ಣುಗಳನ್ನು (ಎರಡೂ) ಮುಚ್ಚಿಟ್ಟಿದೆ. ಅದರಿಂದಾಗಿ ಸೂರ್ಯಚಂದ್ರರು ನಷ್ಟರಾಗಿ ಜಗತ್ತೆಲ್ಲ ಭಯಗೊಂಡಿತು. ಜಗತ್ತೆಲ್ಲ ಅಂಧಕಾರದಿಂದ ಆವೃತವಾಗಲು ಲೋಕಗಳನ್ನು ರಕ್ಷಿಸಲು ಮೂರನೇ ನೇತ್ರವನ್ನು ಸೃಷ್ಟಿಸಿದೆ. ಈ ಕಣ್ಣಿನ ತೇಜಸ್ಸಿನಿಂದಲೇ ವೃಕ್ಷ, ಲತೆ, ಗುಲ್ಮಗಳಿಂದ ತುಂಬಿದ ಗುಹೆಗಳಲ್ಲಿ ಸರ್ಪ ಮೊದಲಾದ ಮೃಗಗಳನ್ನು ಹೊಂದಿದ ಪರ್ವತ ಸುಟ್ಟಿತು. ಎಲೈ ದೇವಿಯೇ! ನಿನ್ನ ಪ್ರೀತಿಗಾಗಿಯೇ ಮತ್ತೆ ನಾನು ಪರ್ವತವನ್ನು ಮೊದಲಿನಂತೆ ಮಾಡಿದೆ. ನಿನ್ನ ಸಂಶಯ ಪರಿಹಾರವಾಯಿತೇ? ಇನ್ನು ನೀನು ನಿರಾತಂಕಳಾಗಿರು.[೧]

---

೧ ಮದಧೀನಾಸ್ತ್ರಯೋ ಲೋಕಾ ಯಥಾ ವಿಷ್ಣೌ ತಥಾ ಮಯಿ।
ಸ್ರಷ್ಟಾ ವಿಷ್ಣುರಹಂ ಗೋಪ್ತಾ ಇತ್ಯೇತದ್ ವಿದ್ಧಿ ಭಾಮಿನಿ॥
ತಸ್ಮಾದ್ಯದಾ ಮಾಂ ಸ್ಪೃಶತಿ ಶುಭಂ ವಾ ಯದಿ ವೇತರತ್।
ತಥೈವೇದಂ ಜಗತ್ಸರ್ವಂ ತತ್ತದ್ ಭವತಿ ಶೋಭನೇ॥
ಏತದ್ ಗುಹ್ಯಮಜಾನಂತ್ಯಾ ತ್ವಯಾ ಬಾಲ್ಯಾದನಿಂದಿತೇ।
ನೇತ್ರೇ ಯೋ ಪಿಹಿತೇ ದೇವಿ ಕ್ರೀಡನಾರ್ಥಂ ದೃಢವ್ರತೇ॥
ತತ್ಕೃತೇ ನಷ್ಟಚಂದ್ರಾರ್ಕಂ ಜಗದಾಸೀತ್ ಭಯಾಕುಲಮ್।
ತೃತೀಯ ಲೋಚನಂ ಸೃಷ್ಟಂ ಲೋಕಾನ್ ಸಂರಕ್ಷಿತುಂ ಮಯಾ।
ಅಸ್ಯೈವ ತೇಜಸಾऽಕ್ಷ್ಣೋ ಮೇ ಮಥಿತೋऽಯಂ ಗಿರಿಃ ಶುಭೇ॥

## ಸಂದೇಶಗಳು- ವಿವರಣೆಗಳು (ಅ. ೧೯೨)

೧. ರುದ್ರದೇವರ ೩ನೇ ಕಣ್ಣು ಹೇಗೆ ಉತ್ಪನ್ನವಾಯಿತು, ಯಾರ ಸಂದರ್ಭದಲ್ಲಿ ಎಂಬ ಬಗ್ಗೆ ವಿಭಿನ್ನ ಆಖ್ಯಾನಗಳಿವೆ. ಒಂದು ಮನ್ಮಥನು ದೇವಕಾರ್ಯ ಮಾಡಲು ಬಂದಾಗ ಆತನನ್ನು ತನ್ನ ೩ನೇ ಕಣ್ಣಿನಿಂದ ಸುಟ್ಟನೆಂಬ ಆಖ್ಯಾಯಿಕೆ ಪ್ರಸಿದ್ಧವಾಗಿದೆ. ಇದು ಅದಕ್ಕೂ ಮೊದಲು ಆದುದು. ಉಮಾದೇವಿಯು ತನ್ನ ಪತಿಯೊಡನೆ ಕ್ರೀಡೆಗಾಗಿ ಎರಡೂ ಕಣ್ಣುಗಳನ್ನು ಮುಚ್ಚಿದಾಗ ಉತ್ಪನ್ನವಾಯಿತೆಂದು ರುದ್ರದೇವರು ಹೇಳುತ್ತಾರೆ. ರುದ್ರದೇವರ ಮಹಿಮಾತಿಶಯದಲ್ಲಿ ಇದೊಂದು.

೨. ರುದ್ರದೇವರ ವಾಸಸ್ಥಾನದವರ್ಣನೆ, ಹಿಮಾಲಯದ ಪರಿಸರ, ಅದರ ಅದ್ಭುತವರ್ಣನೆ, ಕಾವ್ಯಶಾಸ್ತ್ರದೃಷ್ಟಿಯಿಂದ ಅಸದೃಶ. ಕವಿಹೃದಯರಿಗೆ ರಸದೌತಣ. ತಾತ್ತ್ವಿಕರಿಗೆ ತತ್ತ್ವಗಳ ಸುರಿಮಳೆ.

೩. ೩ನೇ ಕಣ್ಣಿನಿಂದ ಸುಟ್ಟುಹೋದ ಹಿಮಾಲಯದ ಮರುಜನ್ಮ ರುದ್ರದೇವರ ಮಹಿಮಾದ್ಯೋತಕ. ಅವರು ಕರ್ತುಂ ಅಕರ್ತುಂ ಅನ್ಯಥಾ ಕರ್ತುಂ ಶಕ್ಯರು ಎಂಬುದಕ್ಕೆ ಇದೊಂದು ದೃಷ್ಟಾಂತ. ಅಹಂಕಾರತತ್ತ್ವಾಭಿಮಾನಿಗಳಿಗೆ ಭೂಮಿಯ ಒಂದು ಭಾಗದ ಮರುಸೃಷ್ಟಿ ವಿಶೇಷವೇನಲ್ಲ, ನಮಗೆ ಮಾತ್ರ ವಿಶೇಷ. ಅದೂ ಅವರ ಕೇವಲ ನೋಟಮಾತ್ರದಿಂದ.

೪. ರುದ್ರದೇವರ ಅಧೀನದಲ್ಲಿ ಮೂರು ಲೋಕಗಳು, ಸ್ವಾಭಾವಿಕ ಹೀಗಿರುವಾಗ ವಿಷ್ಣುವಿನ ಅಧೀನ ಇವೇ ಮೂರು ಲೋಕಗಳೆನ್ನುವುದು ಕೈಮುತ್ಯಸಿದ್ಧ (ಶ್ಲೋ. ೫೨,೫೩). ಮೇಲ್ನೋಟಕ್ಕೆ ಹರಿಹರಸಾಮ್ಯ ಹೇಳುವಂತಿದೆ ಈ ಶ್ಲೋಕಗಳು. ವಸ್ತುತಃ ಹಾಗಿಲ್ಲ.

೫. ಉಮಾದೇವಿ ಪತಿಯ ಕಣ್ಮುಚ್ಚಿ ಆಟವಾಡಿದ್ದು ಗೃಹಿಣಿಗೆ ಒಪ್ಪವಾದುದೇ. ಅದು ಲೋಕದೃಷ್ಟಿಯಲ್ಲಿ ಬಾಲ್ಯ, ಹುಡುಗಾಟ. ಅದು ಅವರ ಧರ್ಮ. ಲೋಕಕ್ಕೆ ಪರಿಣಾಮಗಳು ಬೇರೆಯೇ ಆದವು, ಆಗುವಂಥದ್ದು.

*****

---

ತ್ವತ್ಪ್ರಿಯಾರ್ಥಂ ಕೃತೋ ದೇವಿ ಪ್ರಕೃತಿಸ್ಥಃ ಪುನರ್ಮಯಾ ।
ಕಥಿತಂ ಸಂಶಯಸ್ಥಾನಂ ನಿರ್ವಿಶಂಕಾ ಭವ ಪ್ರಿಯೇ ॥ - ೧೯೨/೫೨-೫೭

# ೧೫೪. ರುದ್ರದೇವರ ಮಾಹಾತ್ಮ್ಯ

ದೇವದೇವನ ಸಮಯವನ್ನು ತಿಳಿದ ಉಮಾದೇವಿಯು ಮತ್ತೆ ಮಹದೇವನನ್ನು ಕುರಿತು ಪ್ರಶ್ನಿಸಿದಳು. 'ಪೂಜ್ಯನೇ! ಸರ್ವದೇವ ನಮಸ್ಕೃತನೇ! ನೀನು ಯಾವ ಕಾರಣದಿಂದ ಚತುರ್ಮುಖನಾದೆ? ಯಾವ ಕಾರಣದಿಂದ ಪೂರ್ವಾಭಿಮುಖಾದಿ ಮುಖವು (ಐಂದ್ರ) ಅದ್ಭುತವಾಗಿರುತ್ತದೆ? ಪಶ್ಚಿಮದ ಕಡೆ ಇರುವ ಮುಖವು ಮಂಗಳಕರವಾಗಿದೆ(ಸೌಮ್ಯ, ಹಿತಕರ)? ದಕ್ಷಿಣದ ಕಡೆಗಿರುವ ಮುಖವು ಭಯಂಕರವಾಗಿಯೂ, ಉತ್ತರದ ಕಡೆಗಿನ ಮುಖವೂ ಜಟೆಯಿಂದ ಆವೃತ(ಜಟಿಲ)ವಾಗಿದೆ? ದಿಕ್ಕುಗಳಿಗನುಸಾರವಾಗಿ ಆ ನಿಮಿತ್ತಗಳನ್ನು ತಿಳಿಯಬಸುತ್ತೇನೆ. ಈ ಸಂಶಯಗಳನ್ನು ಪರಿಹರಿಸು.

ಉಮಾದೇವಿಯ ಪ್ರಶ್ನೆಗಳಿಗೆ ಮಹದೇವರು ಉತ್ತರಿಸಿದರು.

ಹಿಂದೆ ಲೋಕಗಳಿಗೆ ಉದ್ವೇಗ ಉಂಟುಮಾಡುವ, ಭಯಂಕರರಾದ, ಗರ್ವಿಷ್ಠರಾದ ಶಸ್ತ್ರಗಳಿಂದ ಅವಧ್ಯರಾದ, ಬಲಿಷ್ಠರಾದ, ತಮಗೆ ಪರಸ್ಪರ ಹಿತ ಬಯಸುವ ಸುಂದ-ಉಪಸುಂದ ಇಬ್ಬರು ಅಸುರರಿದ್ದರು. ಇವರನ್ನು ಸಂಹರಿಸುವ ಸಲುವಾಗಿಯೇ ವಿಶ್ವಕರ್ಮನು ಮೃಗ, ಪಕ್ಷಿಗಣಗಳ, ಸ್ಥಾವರ ಎಲ್ಲ ಪದಾರ್ಥಗಳ ಸಾರವನ್ನು ಎಲ್ಲ ಕಡೆಗಳಿಂದ ಎಳ್ಳಿನಷ್ಟು ತೆಗೆದು ಒಂದು ಸ್ತ್ರೀಮೂರ್ತಿಯನ್ನು ಮಾಡಿದ್ದನು. ಆಕೆಯೇ ತಿಲೋತ್ತಮೆ(ಮಾ) ಎಂಬ ಲೋಕವಿಖ್ಯಾತಳಾದ ಅಪ್ಸರೆ. ದೇವಕಾರ್ಯವನ್ನು ಮಾಡುವ ಸಲುವಾಗಿ (ಸುಂದೋಪಸುಂದರ ಸಂಹಾರ) ತನ್ನ ಅಪ್ರತಿಮರೂಪ, ಬೆಡಗು, ಬಿನ್ನಾಣ, ಹಾವಭಾವಗಳನ್ನು ಪ್ರದರ್ಶಿಸುತ್ತಾ, ಭೂಮಿಗೆ ನನ್ನ ಬಳಿ ಬಂದಳು. ಇವಳನ್ನು ಗೌರವಿಸಿದರೆ, ದೇವತಾಕಾರ್ಯವನ್ನು ಚೆನ್ನಾಗಿ ಮಾಡುತ್ತಾಳೆ ಎಂದು ಬಗೆದು, ನಾನು ನನಗೆ ಪ್ರದಕ್ಷಿಣೆ ಹಾಕುತ್ತಿದ್ದ ಈಕೆಯನ್ನು ನೋಡಬಯಸಿ ತಿರುಗಿ ತಿರುಗಿ ನೋಡುತ್ತಿದ್ದಾಗ ನನಗೆ ನಾಲ್ಕು ಮುಖಗಳು ಉಂಟಾದವು. ಪೂರ್ವದಿಕ್ಕಿನಲ್ಲಿರುವ ನನ್ನ ಈ ಮುಖವು ಯಾವಾಗಲೂ ತಪಶ್ಚರ್ಯದಲ್ಲಿ ನಿರತವಾಗಿರುತ್ತದೆ. ದಕ್ಷಿಣಮುಖವು ಭಯಂಕರವಾಗಿದ್ದು ಪ್ರಜಾಸಂಹಾರಕವಾದುದು. ಪಶ್ಚಿಮಮುಖವು ನಿತ್ಯವೂ ಲೋಕೋಪಯೋಗಿ ಕಾರ್ಯಗಳನ್ನು ಮಾಡುತ್ತದೆ. ಉತ್ತರ ದಿಕ್ಕಿನ ಮುಖವು ಅದ್ಭುತವಾದುದು, ವೇದಾಧ್ಯಯನ ತತ್ಪರವಾಗಿರುತ್ತದೆ. ನೀನು ಕೇಳಿದ ಪ್ರಶ್ನೆಗಳಿಗೆ ಉತ್ತರಿಸಿದ್ದೇನೆ. ಸರಿ ತಾನೆ?[೧]

---

೧ ದೇವಕಾರ್ಯಮ ಕರಿಷ್ಯಂತೀ ಹಾವಭಾವಸಮನ್ವಿತಾ ।
ಮಯಾ ಬಹುಮತಾ ಚೇಯಂ ದೇವಕಾರ್ಯಂ ಕರಿಷ್ಯತಿ ॥
ಇತಿ ಮತ್ವಾ ತದಾ ಚಾಹಂ ಕುರ್ವಂತೀಂ ಮಾಂ ಪ್ರದಕ್ಷಿಣಮ್ ।
ತಥೈವ ತಾಂ ದಿದೃಕ್ಷುಶ್ಚ ಚತುರ್ವಕ್ತ್ರೋಽಭವಂ ಪ್ರಿಯೇ ॥
ಐಂದ್ರಂ ಮುಖಮಿದಂ ಪೂರ್ವಂ ತಪಶ್ಚರ್ಯಾಪರಂ ಸದಾ ।
ದಕ್ಷಿಣಂ ಮೇ ಮುಖಂ ದಿವ್ಯಂ ರೌದ್ರಂ ಸಂಹರತಿ ಪ್ರಜಾಃ ॥

ನಂತರ ಉಮಾದೇವಿಯರು ರುದ್ರದೇವರನ್ನು ಕುರಿತು 'ನಿನ್ನ ಕಂಠದಲ್ಲಿ ನವಿಲುಗರಿಯಂತೆ ಕಪ್ಪುಬಣ್ಣವು ಏಕೆ ಇದೆ?' ಎಂದು ಪ್ರಶ್ನೆ ಕೇಳಿದರು. ಅದಕ್ಕೆ ಮಹೇಶ್ವರನು 'ಹಿಂದೆ ದೇವಾಸುರರ ಅಮೃತಪಡೆಯಲು ನಾಗರಾಜನಾದ ವಾಸುಕಿಯನ್ನು ಹಗ್ಗವಾಗಿ ಮಾಡಿಕೊಂಡು ಸಮುದ್ರ ಕಡೆದಾಗ (ಮಂದರಪರ್ವತವನ್ನು ಕಡಗೋಲನ್ನಾಗಿ ಮಾಡಿ) ಸರ್ವಲೋಕವಿನಾಶಕವಾದ ವಿಷವುಂಟಾಯಿತು. ಅದನ್ನು ನೋಡಿದ ದೇವತೆಗಳೆಲ್ಲ ಬೇಸರಪಟ್ಟುಕೊಂಡಾಗ, ಲೋಕದ ಹಿತಕ್ಕಾಗಿ ನಾನು ಆ ವಿಷಯವನ್ನು ನುಂಗಿದೆ. ಅದಕ್ಕಾಗಿ ನನ್ನ ಕಂಠ ನವಿಲುಗರಿಯಂತೆ ಕಪ್ಪಾಯಿತು. ಅಂದಿನಿಂದ ನಾನು ನೀಲಕಂಠನೆಂದು ಕರೆಯಲ್ಪಡುತ್ತಿದ್ದೇನೆ. ಇನ್ನೇನು ಹೇಳಲಿ' ಎಂದರು ಮಹಾದೇವರು.

ಉಮಾದೇವಿಯು ನೀಲಕಂಠನೇ ನಿನಗೆ ನಮಸ್ಕಾರಗಳು, ಸರ್ವಲೋಕಕ್ಕೆ ಸುಖ ಕೊಡುವವನೇ! ಅನೇಕ ಆಯುಧಗಳ ಮಧ್ಯೆ ಪಿನಾಕಧನುಸ್ಸನ್ನು ಏಕೆ ಧರಿಸಲು ಇಚ್ಛಿಸಿರುವೆ? ಇದನ್ನು ಹೇಳು ಎಂದಳು ಉಮೆ. ಇದಕ್ಕೆ ಮಹೇಶ್ವರನು.

ಹಿಂದೆ ಒಂದು ಯುಗದಲ್ಲಿ ಕಣ್ವನೆಂಬ ಮಹಾಮುನಿ ಇದ್ದನು. ಆತನು ಘೋರವಾದ, ಶ್ರೇಷ್ಠವಾದ ತಪಸ್ಸನ್ನು ಬಹಳ ಕಾಲ ಮಾಡುತ್ತಿರಲು ಅವನ ತಲೆ ಮೇಲೆ ಒಂದು ಹುತ್ತ ಬೆಳೆಯಿತು. ಹುತ್ತದ ಸಂಯೋಗದಿಂದ ಆತನ ತಲೆಯ ಮೇಲೆ ಒಂದು ಬಿದಿರಿನ ಪೊದೆಯೂ ಬೆಳೆಯಿತು. ಆ ಋಷಿಯು ಅದನ್ನೂ ಧರಿಸಿಕೊಂಡು ತಪಸ್ಸನ್ನು ಹಾಗೆಯೇ ಮುಂದುವರಿಸಿದ. ತಪಸ್ಸಿನಿಂದ ಅರ್ಚಿತನಾದ, ಮೆಚ್ಚಿದ ಬ್ರಹ್ಮದೇವನು ವರಕೊಡಲು ಒಂದು ವರವನ್ನು ಕೊಟ್ಟು ತಲೆಯ ಮೇಲೆ ಬೆಳೆದಿದ್ದ ಬಿದಿರನ್ನು ನೋಡಿ ಹೀಗೆ ವಿಚಾರ ಮಾಡಿದನು. ಎಲೈ ಉಮೆ! ಈ ಬಿದಿರಿನಿಂದ ಲೋಕಕಾರ್ಯವನ್ನು ಮಾಡುವ ಉದ್ದೇಶದಿಂದ ಆ ಬಿದಿರನ್ನು ತೆಗೆದುಕೊಂಡು ೨ ಧನುಸ್ಸುಗಳನ್ನು ಮಾಡಿಸಿದನು (ವಿಶ್ವಕರ್ಮನಿಂದ) ವಿಷ್ಣುವಿನ ಹಾಗೂ ನನ್ನ ಸಾಮರ್ಥ್ಯ ತಿಳಿದ ಬ್ರಹ್ಮನು ನಮ್ಮಿಬ್ಬರಿಗೆ ಧನುಸ್ಸುಗಳನ್ನು ಕೊಟ್ಟನು.

ನನ್ನ ಧನುಸ್ಸಿಗೆ ಪಿನಾಕವೆಂದೂ ವಿಷ್ಣುವಿನ ಧನುಸ್ಸಿಗೆ ಶಾರ್ಙ್ಗ ಎಂದೂ ಉಳಿದ ಬಿದಿರಿನಿಂದ ಮೂರನೆಯ ಗಾಂಡೀವ ಧನುಸ್ಸು ಉಂಟಾಯಿತು. ಅದನ್ನು ಚಂದ್ರನಿಗೆ ಕೊಡಬೇಕೆಂದು ತಿಳಿಸಿ ಬ್ರಹ್ಮನು ತನ್ನ ಲೋಕಕ್ಕೆ ಹೋದನು. ಎಲೈ ಉಮೇ! ಹೀಗೆ ಈ ಶಸ್ತ್ರಗಳು ಬಂದವು.[೧]

---

ಲೋಕಕಾರ್ಯಪರಂ ನಿತ್ಯಂ ಪಶ್ಚಿಮಂ ಮೇ ಮುಖಂ ಪ್ರಿಯೆ।
ವೇದಾನಧೀತೇ ಸತತಮದ್ಭುತಂ ಚೋತ್ತರಂ ಮುಖಮ್ ॥ ೧೯೩/೫-೧೨

೧ ಶಸ್ತ್ರಾಗಮಂ ತೇ ವಕ್ಷ್ಯಾಮಿ ಶೃಣು ಧರ್ಮ್ಯಂ ಶುಚಿಸ್ಮಿತೇ।
ಯುಗಾಂತರೇ ಮಹಾದೇವಿ ಕಣ್ವೋ ನಾಮ ಮಹಾಮುನಿ॥
ಸ ಹಿ ದಿವ್ಯಾಂ ತಪಶ್ಚರ್ಯಾಂ ಕರ್ತುಮೇವೋಪಚಕ್ರಮೇ।
ತಥಾ ತಸ್ಯ ತಪೋ ಘೋರಂ ಚರತಃ ಕಾಲಪರ್ಯಯಾತ್।
ವಲ್ಮೀಕಂ ಪುನರುದ್ಭೂತಂ ತಸ್ಯೈವ ಶಿರಸಿ ಪ್ರಿಯೇ॥

ನಂತರ ಮತ್ತೆ ಉಮಾದೇವಿಯರು ದೇವದೇವೇಶನೇ! ಪಿನಾಕ, ಪರಶುಪ್ರಿಯನೇ! ಅನೇಕ ವಾಹನಗಳಿದ್ದರೂ, ನಿನಗೆ ಈ ವೃಷಭನೇ ಹೇಗೆ ವಾಹನವಾಯಿತು? ಈ ಸಂಶಯ ಪರಿಹರಿಸು ಎಂದಳು. ಅದಕ್ಕೆ ರುದ್ರದೇವರು 'ಆದಿಸೃಷ್ಟಿಯಲ್ಲಿ ಗೋವುಗಳೆಲ್ಲ ಬಿಳಿ ಬಣ್ಣದ್ದಾಗಿದ್ದವು. ಅವು ಒಳ್ಳೆಯ ಬಲ ಮತ್ತು ಶರೀರದಿಂದ ಕೂಡಿ ದರ್ಪದಿಂದ ಕೂಡಿ ಸಂಚರಿಸುತ್ತಿದ್ದವು. ಆ ಕಾಲದಲ್ಲಿ ನಾನು ಲೋಕಹಿತಕ್ಕಾಗಿ ಹಿಮಾಲಯಪರ್ವತದಲ್ಲಿ ಒಂದೇ ಪಾದದ ಮೇಲೆ ನಿಂತು ಬಾಹುಗಳನ್ನೆತ್ತಿ ತಪಸ್ಸನ್ನು ಮಾಡುತ್ತಿದ್ದೆ. ಆಗ ದರ್ಪಿಷ್ಠ ಗೋವುಗಳು ನನ್ನ ಬಳಿಗೆ ಬಂದು ನನ್ನನ್ನು ತಳ್ಳಿ ಅನೇಕ ಬಾರಿ ಸ್ಥಾನಭ್ರಷ್ಟನನ್ನಾಗಿ ಮಾಡಿದವು. ಅವು ನನ್ನ ಮೇಲೆ ಮಾಡಿದ ಅಪಚಾರ, ಅವಮಾನದಿಂದ ನನ್ನ ಮನಸ್ಸಿನಲ್ಲಿ ಕ್ಷೋಭೆಯುಂಟಾಯಿತು. ರೋಷಾವಿಷ್ಟನಾದುದರಿಂದ ಆ ಗೋವುಗಳೆಲ್ಲ ದಹಿಸಿ ಹೋದವು. ಗೋವುಗಳಿಗೆ ಅಂತಹ ವ್ಯಸನ ಬರಲು ಈ ವೃಷಭವು ಬಂದು ನನ್ನನ್ನು ಸಮಾಧಾನ ಪಡಿಸಿತು. ಅಂದಿನಿಂದ ಗೋವುಗಳು ಶಾಂತಸ್ವಭಾವವನ್ನೂ ವರ್ಣಭೇದವನ್ನೂ (ವಿವಿಧ ವರ್ಣಗಳ) ಹೊಂದಿದವು. ಈ ವೃಷಭವು ಪೂರ್ವಸಂಸ್ಕಾರದಿಂದಾಗಿ ಬಿಳಿಯ ಬಣ್ಣದ್ದೇ ಆಗಿದೆ. ಅಂದಿನಿಂದ ನಾನು ಇದನ್ನು ವಾಹನವನ್ನಾಗಿಯೂ, ಧ್ವಜವನ್ನಾಗಿಯೂ ಯೋಜಿಸಿದ್ದೇನೆ.

ದೇವತೆಗಳು ಹಾಗೂ ಗೋವುಗಳೂ ಸೇರಿ ನನ್ನನ್ನು ಗೋಪತಿ ಎಂದು ಕಲ್ಪಿಸಿದರು (ಕರೆದರು). ಹೀಗೆ ನಾನು ಗೋಪತಿತ್ತ್ವವನ್ನು ಹೊಂದಿದೆನು. [೧]

---

ವೇಣುರ್ವಲ್ಮೀಕಸಂಯೋಗಾನ್ಮೂರ್ಧ್ನಿ ತಸ್ಯ ಬಭೂವ ಹ।
ಧರಮಾಣಶ್ಚ ತತ್ಸರ್ವಂ ತಪಶ್ಚರ್ಯಾಂ ತಥಾಽಕರೋತ್ ॥
ತಸ್ಮೈ ಬ್ರಹ್ಮಾ ವರಂ ದಾತುಂ ಜಗಾಮ ತಪಸಾಽರ್ಚಿತಃ।
ದತ್ತ್ವಾ ತಸ್ಮೈ ವರಂ ದೇವೋ ವೇಣುಂ ದೃಷ್ಟ್ವಾ ತ್ವಚಿಂತಯತ್ ॥
ಲೋಕಕಾರ್ಯಂ ಸಮುದ್ದಿಶ್ಯ ವೇಣುನಾಽನೇನ ಭಾಮಿನಿ।
ಚಿಂತಯಿತ್ವಾ ತಮಾದಾಯ ಕಾರ್ಮುಕಾರ್ಥೇ ನ್ಯಯೋಜಯತ್ ॥
ವಿಷ್ಣೋರ್ಮಮ ಚ ಸಾಮರ್ಥ್ಯಂ ಜ್ಞಾತ್ವಾ ಲೋಕಪಿತಾಮಹಃ।
ಧನುಷೀ ದ್ವೇ ತದಾ ಪ್ರಾದಾದ್ ವಿಷ್ಣವೇ ಚ ಮಮೈವ ಚ॥
ಪಿನಾಕಂ ನಾಮ ಮೇ ಚಾಪಂ ಶಾರ್ಙ್ಗಂ ನಾಮ ಹರೇರ್ಧನುಃ।
ತೃತೀಯಮವಶೇಷೇಣ ಗಾಂಡೀವಮಭವದ್ ಧನುಃ॥
ತಚ್ಚ ಸೋಮಾಯ ನಿರ್ದಿಶ್ಯ ಬ್ರಹ್ಮಾ ಲೋಕಂ ಗತಃ ಪುನಃ।
ಏತತ್ತೇ ಸರ್ವಮಾಖ್ಯಾತಂ ಶಸ್ತ್ರಾಗಮಮನಿಂದಿತೇ॥ - ೧೯೩/೨೦-೨೭

೧ ಆದಿಸರ್ಗೇ ಪುರಾ ಗಾವಃ ಶ್ವೇತವರ್ಣಾಃ ಶುಚಿಸ್ಥಿತೇ।
ಬಲಸಂಹನನೋಪೇತಾ ದರ್ಪಯುಕ್ತಾಶ್ಚರಂತಿ ತಾಃ॥
ಅಹಂ ತು ತಪ ಆತಿಷ್ಠಂ ತಸ್ಮಿನ್ ಕಾಲೇ ಶುಭಾನನೇ।
ಏಕಪಾದಶ್ಚೋರ್ಧ್ವಬಾಹುರ್ಲೋಕಾರ್ಥಂ ಹಿಮವದ್ಗಿರೌ॥
ಗಾವೋ ಮೇ ಪಾರ್ಶ್ವಮಾವಿಶ್ಯ ದರ್ಪೋತ್ಸಿಕ್ತಾಃ ಸಮಂತತಃ।

ಪಾರ್ವತಿಯು ತನ್ನ ಪತಿಯನ್ನು –

'ಪೂಜ್ಯನೇ! ಸರ್ವಭೂತೇಶನೇ! ಶೂಲಪಾಣಿಯೇ! ವೃಷಧ್ವಜನೇ! ವಿಶ್ವದಲ್ಲಿ ವಿಚಿತ್ರವಾದ, ರಮ್ಯವಾದ, ಮಂಗಳಕರವಾದ ಅನೇಕಾನೇಕ ವಾಸ ಮಾಡಲು ದೇಶಗಳಿದ್ದರೂ ಕೂಡಾ ನೀನು ಕೇಶ(ಕೂದಲು), ಅಸ್ಥಿಪಂಜರಗಳಿಂದ ಕೂಡಿದ, ಭಯಂಕರವಾದ, ನೂರಾರು ಕಪಾಲ(ತಲೆಬುರುಡೆ)ಗಳಿಂದ ಕೂಡಿದ, ನರಿ, ಹದ್ದುಗಳಿಂದ ತುಂಬಿದ, ಶವದ ಬೂದಿಯಿಂದ ಕೂಡಿದ ಚಿತಾಗ್ನಿಯಿಂದ ವಿಷಮವೂ, ಭಯಂಕರವೂ, ಆದ ಸ್ಮಶಾನದಲ್ಲಿದ್ದು ಏಕೆ ಸಂತೋಷಪಡುವೆ? ಇಂತಹ ಶವಕ್ಷೇತ್ರದಲ್ಲಿ ನೋಡಲು ಅಸಾಧ್ಯವಾದ ಹೇಗೆ ಸಂತೋಷಪಡುವೆ? ಈ ಸಂಶಯವನ್ನು ಪರಿಹರಿಸು[೧] ಎಂದು ಕೇಳಿದಳು.

ಅದಕ್ಕೆ ಮಹಾದೇವನು –

'ಎಲೈ ದೇವಿಯೇ! ಶುಚಿಸ್ಮಿತಳೇ! ನಾನು ವಾಸಮಾಡಲು ಶುದ್ಧವಾದ ಪವಿತ್ರವಾದ ದೇಶವನ್ನು ಹುಡುಕುತ್ತಿದ್ದ ನನಗೆ ಅತ್ಯಂತ ಶುಚಿರ್ಭೂತವಾದ ದೇಶ ಸಿಗಲಿಲ್ಲ. ಆಗ ನನಗೆ ಪ್ರಜೆಗಳ ಬಗ್ಗೆ ಚಿಂತೆಯುಂಟಾಯಿತು. ಎಲ್ಲ ಕಡೆ ಘೋರತರವಾದ ಲೋಕಭಯಂಕವಾದ ಭೂತಸೃಷ್ಟಿಯುಂಟಾಯಿತು. ಆ ಸೃಷ್ಟಿ ನಾನಾವರ್ಣವಿಕಾರವುಳ್ಳ, ತೀಕ್ಷ್ಣ ಹಲ್ಲುಗಳುಳ್ಳ, ಪ್ರಹಾರಶೀಲವಾದ(ಹೊಡೆಬಡಿಕಡಿ ಎಂಬ ಸ್ವಭಾವದ), ಪಿಶಾಚ, ರಾಕ್ಷಸಮುಖಗಳುಳ್ಳ, ಪ್ರಾಣಿಗಳ ಪ್ರಾಣಹರಣ ಮಾಡುವ ಭೂತಗಳು ಎಲ್ಲೆಂದರಲ್ಲಿ ಪ್ರಾಣಿಗಳನ್ನು ಕೊಲ್ಲುತ್ತಾ ಓಡಾಡಲಾರಂಬಿಸಿದವು.

---

ಸ್ಥಾನಭ್ರಂಶಂ ತು ಮೇ ದೇವೀ ಚಕ್ರಿರೇ ಬಹುಶಸ್ತಥಾ ॥
ಅಪಚಾರೇಣ ಚೈತಾಸಾಂ ಮನಃಕ್ಷೋಭೋಽಭವನ್ಮಮ ।
ತಸ್ಮಾದ್ ದಗ್ಧಾ ಯದಾ ಗಾವೋ ರೋಷಾವಿಷ್ಟೇನ ಚೇತಸಾ ॥
ತಸ್ಮಿಂಸ್ತು ವ್ಯಸನೇ ಘೋರೇ ವರ್ತಮಾನೇ ಪಶೂನ್ ಪ್ರತಿ ।
ಅನೇನ ವೃಷಭೇಣಾಹಂ ಶಮಿತಃ ಸಂಪ್ರಸಾದನೈಃ ॥
ತದಾಪ್ರಭೃತಿ ಶಾಂತಾಶ್ಚ ವರ್ಣಭೇದತ್ವಮಾಗತಾಃ ।
ಶ್ವೇತೋಽಯಂ ವೃಷಭೋ ದೇವೀ ಪೂರ್ವಸಂಸ್ಕಾರಸಂಯುತಃ ।
ವಾಹನತ್ವೇ ಧ್ವಜತ್ವೇ ಮೇ ತದಾಪ್ರಭೃತಿ ಯೋಜಿತಃ ॥
ತಸ್ಮಾನ್ಮೇ ಗೋಪತಿತ್ವಂ ಚ ದೇವ್ಯೈರ್ಗೋಭಿಶ್ಚ ಕಲ್ಪಿತಮ್ ।
ಪ್ರಸನ್ನಶ್ಚಾಭವಂ ದೇವೀ ತದಾ ಗೋಪತಿತಾಂ ಗತಃ ॥ – ೧೯೩/೩೧-೩೭

೧ ಆವಾಸೇಷು ವಿಚಿತ್ರೇಷು ರಮ್ಯೇಷು ಚ ಶುಭೇಷು ಚ ॥
ಸತ್ಸು ಚಾನ್ಯೇಷು ದೇಶೇಷು ಸ್ಮಶಾನೇ ರಮಸೇ ಕಥಮ್ ।
ಕೇಶಾಸ್ಥಿಕಲಿಲೇ ಭೀಮೇ ಕಪಾಲಶತಸಂಕುಲೇ ॥
ಸೃಗಾಲಗೃಧ್ರಸಂಪೂರ್ಣೇ ಶವಧೂಮಸಮಾಕುಲೇ ।
ಚಿತಾಗ್ನಿವಿಷಮೇ ಘೋರೇ ಗಹನೇ ಚ ಭಯಾನಕೇ ॥ – ೧೯೪/೧-೩

ಹೀಗೆ ಲೋಕದಲ್ಲಿ ಪ್ರಾಣಿಕ್ಷಯವಾಗುತ್ತಿರಲು ಬ್ರಹ್ಮದೇವರು ಇದಕ್ಕೆ ತಡೆಯೊಡ್ಡಲು ಇಚ್ಛಿಸಿ ನನ್ನನ್ನು ಈ ಭೂತನಿಗ್ರಹ ಮಾಡಲು ಸಮರ್ಥನೆಂದು ತಿಳಿದು, ನಿಯೋಜಿಸಿದನು. ಪ್ರಾಣಿಗಳ ಮೇಲಿನ ದಯೆಯಿಂದ ಇದನ್ನು ಮಾಡಿದೆ ಕೂಡಾ. ಆದ್ದರಿಂದ ನಾನಾ ಭೂತಗಳಿಂದ ಆಗುವ ಭಯದಿಂದ ರಕ್ಷಿಸುತ್ತೇನೆ. ಎಲೈ ಪವಿತ್ರ ಉಮೆಯೇ! ಸ್ಮಶಾನಕ್ಕಿಂತ ಪವಿತ್ರವಾದ ದೇಶ ಇನ್ನೊಂದಿಲ್ಲ. ಇಲ್ಲಿ ಮನುಷ್ಯರು ಬರುವುದಿಲ್ಲ. ಆದ್ದರಿಂದ ಅತ್ಯಂತ ಶುಚಿಯಾದ ದೇಶ ಎಂದು ಭಾವಿಸಿದೆ.[೧] ಆ ಭೂತಸೃಷ್ಟಿಯನ್ನು ಸ್ಮಶಾನದಲ್ಲಿಯೇ ನಿಲ್ಲಿಸಿದೆ. ನಾನು ಸ್ಮಶಾನದಲ್ಲಿದ್ದುಕೊಂಡೇ ಎಲ್ಲ ಲೋಕಗಳ ಭಯವನ್ನು ಪರಿಹರಿಸುತ್ತೇನೆ. ನಾನು ಕೂಡಾ ಭೂತಗಳನ್ನು ಬಿಟ್ಟು ವಾಸಿಸಲು ಇಚ್ಛಿಸುವುದಿಲ್ಲ. ಆದ್ದರಿಂದ ಅವು ಇರುವ ಸ್ಮಶಾನದಲ್ಲಿ ನಾನಿರಲು ಸಂತೋಷವಾಗುತ್ತದೆ.

ಪಾವಿತ್ರ್ಯವನ್ನು ಬಯಸುವ ಬ್ರಾಹ್ಮಣರು ನಿತ್ಯವೂ ಆ ಸ್ಥಾನವನ್ನು ಪವಿತ್ರವೆಂದು ಹೇಳುತ್ತಾರೆ. ಮುಮುಕ್ಷುಗಳೂ, ವ್ರತಿಗಳೂ ಕೂಡಾ ಅದನ್ನು ಸೇವಿಸುತ್ತಾರೆ.[೨] ಈ ಸ್ಮಶಾನವನ್ನು ವೀರಸ್ಥಾನವೆಂದೂ ಕರೆಯುತ್ತಾರೆ. ಇದು ನೂರಾರು ಶಿರ, ಕಪಾಲಗಳಿಂದ ತುಂಬಿ ಭಯಾನಕವಾಗಿರುತ್ತದೆ.

ಮಧ್ಯಾಹ್ನದಲ್ಲಿ ಸಂಧ್ಯಾಕಾಲದಲ್ಲಿ ರುದ್ರದೇವರ ನಕ್ಷತ್ರವಿರುವ ದಿನ, ಆಯುಷ್ಕಾಮರಾದವರು (ದೀರ್ಘಕಾಲ ಬಾಳಬೇಕೆನ್ನುವವರು), ಅಶುಚಿಗಳು (ಅಶುದ್ಧರಾದವರು), ಅಲ್ಲಿಗೆ ಹೋಗಬಾರದು. ನನ್ನನ್ನು ಬಿಟ್ಟು ಬೇರಾರೂ ಭೂತಭಯವನ್ನು ನಿವಾರಿಸಲಾರರು. ನಾನು ಅಲ್ಲಿಯೇ ಇದ್ದು ನಿತ್ಯವೂ ಪ್ರಜಾಪಾಲನೆ ಮಾಡುತ್ತೇನೆ. ನನ್ನ ಆದೇಶವಿರುವುದರಿಂದ ಭೂತಗಳು ಇಲ್ಲಿ ಯಾರನ್ನೂ ಕೊಲ್ಲುವುದಿಲ್ಲ. ಆದ್ದರಿಂದ ಲೋಕಹಿತಕ್ಕಾಗಿ ನಾನು ಸ್ಮಶಾನದಲ್ಲಿ ಸುಖವಾಗಿರುತ್ತೇನೆ. ಮತ್ತೇನನ್ನು ಕೇಳಬಯಸುವೆ ಕೇಳು ಎಂದರು ರುದ್ರದೇವರು.

---

೧ ಆಕುಲಂ ಸುಮಹಾಘೋರಂ ಪ್ರಾದುರಾಸೀತ್ ಸಮಂತತಃ।
ಸಂಭೂತಾ ಭೂತಸೃಷ್ಟಿಶ್ಚ ಘೋರಾ ಲೋಕಭಯಾವಹಾ ॥
ಯತಸ್ತತಶ್ಚರಂತಿ ಸ್ಮ ನಿಘ್ನಂತಃ ಪ್ರಾಣಿನೋ ಭೃಶಮ್ ॥
ಏವಂ ಲೋಕೇ ಕ್ಷಯಂ ಯಾತೇ ಪ್ರಾಣಿಹೀನೇ ಪಿತಾಮಹಃ।
ಚಿಂತಯಂಸ್ತತ್ಪ್ರತೀಕಾರಂ ಮಾಂ ಚ ಶಕ್ತಂ ಹಿ ನಿಗ್ರಹೇ ॥
ಏವಂ ಜ್ಞಾತ್ವಾ ತತೋ ಬ್ರಹ್ಮಾ ತಸ್ಮಿನ್ ಕರ್ಮಣ್ಯಯೋಜಯತ್।
ತಚ್ಚ ಪ್ರಾಣಿದಯಾರ್ಥಂ ತು ಮಯಾಽಪ್ಯನುಮತಂ ಪ್ರಿಯೇ ॥
ತಸ್ಮಾತ್ಸಂರಕ್ಷಿತಾ ದೇವಿ ಭೂತೇಭ್ಯಃ ಪ್ರಾಣಿನೋ ಭಯಾತ್।
ಅಸ್ಮಾತ್ ಸ್ಮಶಾನಾನ್ಮೇಧ್ಯಂ ತು ನಾಸ್ತಿ ಕಿಂಚಿದನಿಂದಿತೇ ॥
ನಿಃಸಂಪಾತಂ ಮನುಷ್ಯಾಣಾಂ ತಸ್ಮಾಚ್ಛುಚಿತಮಂ ಸ್ಮೃತಮ್ ॥ – ೧೯೪/೭–೧೧

೨ ಮೇಧ್ಯಕಾಮೈರ್ದ್ವಿಜೈರ್ನಿತ್ಯಂ ಮೇಧ್ಯಮಿತ್ಯಭಿಧೀಯತೇ।
ಆಚರದ್ಭಿರ್ವ್ರತಂ ನಿತ್ಯಂ ಮೋಕ್ಷಕಾಮೈಶ್ಚ ಸೇವ್ಯತೇ ॥ – ೧೯೪/೧೪

**ಮನ್ನಿಯೋಗಾತ್ ಭೂತಸಂಘಾ ನ ಚ ಘ್ನಂತೀಹ ಕಿಂಚನ।**
**ತಸ್ಮಾಲ್ಲೋಕಹಿತಾರ್ಥಾಯ ಸ್ಮಶಾನೇ ರಮಯಾಮ್ಯಹಮ್ ॥ - ೧೯೪/೧೮**

ಆಗ ಉಮಾದೇವಿಯರು ಪತಿಯನ್ನು –

ಎಲೈ ತ್ರಿನೇತ್ರನೇ! ನಿನ್ನರೂಪವು ಪಿಂಗಲವೂ(ಕೆಂಪು-ಕಪ್ಪುಮಿಶ್ರಿತವಾದ). ಭಯಂಕರವೂ, ವಿಕಾರವುಳ್ಳದ್ದಾಗಿಯೂ, ಭಸ್ಮಲೇಪಿಸಿಕೊಂಡುದಾಗಿಯೂ, ವಿರೂಪವಾದಕಣ್ಣುಗಳುಳ್ಳದ್ದು (ಎರಡು ಕಣ್ಣುಗಳು ಸಹಜ ಮೂರೂ ಇರುವುದು ವಿಕೃತರೂಪದಂತೆ ನೋಡುವವರಿಗೆ ತೋರುತ್ತದೆ), ತೀಕ್ಷ್ಣವಾದ ಹಲ್ಲುಗಳು ಇರುವುದಾಗಿಯೂ, ಜಟೆಗಳಿಂದ ಸುತ್ತಿದ್ದೂ ಹುಲಿ, ಸರ್ಪಗಳ ಚರ್ಮಗಳಿಂದ ಕೂಡಿದ್ದು ಕಪಿಲವರ್ಣದ ಮೀಸೆಯುಳ್ಳದ್ದೂ ಶೂಲಪಟ್ಟದ ಆಯುಧಗಳನ್ನು ಹಿಡಿದಿರುವುದು, ಒಟ್ಟಾರೆ ರೌದ್ರ, ಭಯಾನಕವೂ, ಘೋರವಾಗಿಯೂ ಇದೆ. ಇಂತಹ ರೂಪವನ್ನು ಏಕೆ ಧರಿಸಿದ್ದೀಯಾ, ಹೇಳು?[೧] ಎಂದರು.

ಅದಕ್ಕೆ ಮಹೇಶ್ವರನು 'ಹೇಳುತ್ತೇನೆ ಕೇಳು' ಎಂದನು. 'ಎಲೈ ಪ್ರಿಯಳೇ! ಲೋಕದಲ್ಲಿ ಶೀತ, ಉಷ್ಣ ಎಂದು ಎರಡು ಭಾವ (ಅವಸ್ಥಾ ಸ್ಥಿತಿ)ಗಳಿವೆ. ಒಂದು ಚಂದ್ರ, ಇನ್ನೊಂದು ಅಗ್ನಿಗೆ ಸಂಬಂಧಿಸಿದ್ದು. ಈ ಜಗತ್ತೆಲ್ಲ ಈ ಎರಡು ಭಾವಗಳಿಂದ ತುಂಬಿದೆ. ಚಾಂದ್ರಭಾವ ಸೌಮ್ಯಭಾವ, ವಿಷ್ಣುವಿನಲ್ಲೂ ಅಗ್ನಿಭಾವ ನನ್ನಲ್ಲೂ ನೆಲೆಯೂರಿದೆ. ನಾನು ಈ ಅಗ್ನಿರೂಪದಿಂದ ಎಲ್ಲ ಲೋಕಗಳನ್ನು ಧರಿಸುತ್ತೇನೆ.[೨]

ಮೇಲೆ ವರ್ಣಿತವಾದ ರೌದ್ರಾಕೃತಿಯೇ ಮೊದಲಾದುದು ನನ್ನ ಆಗ್ನೇಯ ರೂಪವಾಗಿದ್ದು ಲೋಕಹಿತವನ್ನು ಅದರಿಂದ ಮಾಡುತ್ತೇನೆ. ನಾನು ಈ ರೂಪವನ್ನು ತ್ಯಜಿಸಿ ಬೇರೆ ರೂಪವನ್ನು ಸ್ವೀಕರಿಸಿದರೆ ಲೋಕಗಳೆಲ್ಲ ವಿಪರೀತ ಪರಿಣಾಮವುಂಟಾಗುತ್ತವೆ.[೩] ಆದ್ದರಿಂದ ಲೋಕ ಹಿತಕ್ಕಾಗಿ ನಾನು ಈ ರೂಪ ಧರಿಸಿದ್ದೇನೆ.

ಮತ್ತೇನು ಕೇಳಬಯಸುವೆ ಕೇಳು ಎಂದರು ರುದ್ರದೇವರು. ಆಗ ಉಮಾದೇವಿಯು ನಿನ್ನ ಶಿರೋಭಾಗದಲ್ಲಿ ಚಂದ್ರರೇಖೆ ಏಕೆ ಶೋಭಿಸುತ್ತಿದೆ. ಅದನ್ನು ಹೇಳು? ಈ ಪ್ರಶ್ನೆಗೆ ರುದ್ರದೇವರು – 'ನಾನು ಹಿಂದೊಮ್ಮೆ ಯಾವುದೋ ಒಂದು ಕಾರಣದಿಂದ ದಕ್ಷಯಜ್ಞನಾಶ ಮಾಡಲು ಕೋಪದಿಂದ ಕೂಡಿ ಭೂತಗಳಿಂದ ಆವೃತ್ತನಾಗಿದ್ದೆ. ಆ ಯಜ್ಞದಲ್ಲಿ ಯಾವ

೧ ಭಗವನ್ ದೇವದೇವೇಶ ತ್ರಿನೇತ್ರ ವೃಷಭಧ್ವಜ।
ಭಸ್ಮದಿಗ್ಧಂ ವಿರೂಪಾಕ್ಷಂ ತೀಕ್ಷ್ಣದಂಷ್ಟ್ರಂ ಜಟಾಕುಲಮ್।
ವ್ಯಾಘ್ರೋರಗತ್ವಕ್ಸಂವೀತಂ ಕಪಿಲಸ್ಮಶ್ರುಸಂತತಮ್ ॥ - ೧೯೪/೧೯,೨೦

೨ ಸೌಮ್ಯತ್ವಂ ಸತತಂ ವಿಷ್ಣೌ ಮಯ್ಯಾಗ್ನೇಯಂ ಪ್ರತಿಷ್ಠಿತಮ್।
ಅನೇನ ವಪುಷಾ ನಿತ್ಯಂ ಸರ್ವಲೋಕಾನ್ ಬಿಭರ್ಮ್ಯಹಮ್ ॥ - ೧೯೪/೨೪

೩ ಯದ್ಯಹಂ ವಿಪರೀತಃ ಸ್ಯಾಮೇತತ್ತ್ಯಕ್ತ್ವಾ ಶುಭಾನನೇ।
ತದೈವ ಸರ್ವಲೋಕಾನಾಂ ವಿಪರೀತಂ ಪ್ರವರ್ತತೇ ॥ - ೧೯೪/೨೬

ದೇವತೆಗಳಿಗೆ ಯಜ್ಞಭಾಗ (ಹವಿಸ್ಸು) ಮೀಸಲಾಗಿತ್ತೋ, ದೇವತೆಗಳು ನನ್ನಿಂದ ಘಾತಿಗೊಳಿಸಲ್ಪಟ್ಟಿದ್ದರು. ಕೋಪಾವೇಶದಲ್ಲಿದ್ದ ನಾನು ಚಂದ್ರನನ್ನೂ ತುಂಬಾ ಹಿಂಸೆ ಮಾಡಿದೆ. ಅವನು ನಿರಪರಾಧಿ ಎಂದು ತಿಳಿದಿದ್ದರೂ, ಅವನನ್ನು ನನ್ನ ಪಾದಾಂಗುಷ್ಠದಿಂದ ಒದ್ದೆ.[೧] ಆದರೂ ಚಂದ್ರನು ಶಾಂತನಾಗಿದ್ದು ನನ್ನೊಡನೆ ಸೌಮ್ಯರೀತಿಯಿಂದಲೇ ವರ್ತಿಸಿದ. ನನ್ನ ಮೇಲೆ ಕೋಪಗೊಳ್ಳಲಿಲ್ಲ. ತಿರುಗಿ ಬೀಳಲಿಲ್ಲ. ಹೀಗಾಗಿ ನನಗೆ ಪಶ್ಚಾತ್ತಾಪವಾಯಿತು.[೨] ಅಂದಿನಿಂದ ನಾನು ಚಂದ್ರನನ್ನು ನನ್ನ ಶಿರಸ್ಸಿನಲ್ಲಿ ಧರಿಸಿದ್ದೇನೆ. ಇದರಿಂದ ನಾನು ಮಾಡಿದ ಪಾಪ ಹೋದೀತೆಂದು ನನ್ನ ಭಾವನೆಯಿತ್ತು. ಹೀಗಾಗಿ ಅಂದಿನಿಂದ ಚಂದ್ರನು ನನ್ನ ಶಿರಸ್ಸಿನಲ್ಲಿ ಶೋಭಿಸುತ್ತಿದ್ದಾನೆ.

ಹೀಗೆ ದೇವೇಶನಾದ ಪರಮೇಶ್ವರನು ನುಡಿಯಲು ಆ ಸಭೆಯಲ್ಲಿ ನೆರೆದ ಋಷಿಗಳು ಕೈಮುಗಿದು, ರುದ್ರದೇವರನ್ನು ಸ್ತೋತ್ರ ಮಾಡಿದರು. ಆ ಸ್ತೋತ್ರ ಹೀಗಿದೆ (ಅ - ೧೯೪).

**ನಮಃ ಶಂಕರ ಸರ್ವೇಶ ನಮಃ ಸರ್ವಜಗದ್ಗುರೋ ।**
**ನಮೋ ದೇವಾದಿದೇವಾಯ ನಮಃ ಶಶಿಕಲಾಧರ ॥**
**ನಮೋ ಘೋರತರಾದ್ಘೋರ ನಮೋ ರುದ್ರ ಭಯಂಕರ ।**
**ನಮಃ ಶಾಂತತರಾಚ್ಛಾಂತ ನಮಶ್ಚಂದ್ರಸ್ಯ ಪಾಲಕ ॥**
**ನಮಃ ಸೋಮಾಯ ದೇವಾಯ ನಮಸ್ತುಭ್ಯಂ ಚತುರ್ಮುಖ ।**
**ನಮೋ ಭೂತಪತೇ ಶಂಭೋ ಜಹ್ನುಕನ್ಯಾಂಬುಶೇಖರ ॥**
**ನಮಸ್ತ್ರಿಶೂಲಹಸ್ತಾಯ ಪನ್ನಗಾಭರಣಾಯ ಚ ।**
**ನಮೋಽಸ್ತು ವಿಷಮಾಕ್ಷಾಯ ದಕ್ಷಯಜ್ಞಪ್ರದಾಹಕ ॥**
**ನಮೋಽಸ್ತು ಬಹುನೇತ್ರಾಯ ಲೋಕರಕ್ಷಣ ತತ್ಪರ ।**
**ಅಹೋ ದೇವಸ್ಯ ಮಾಹಾತ್ಮ್ಯಂ ಮಹಾದೇವಸ್ಯ ವೈ ಕೃಪಾ ।**
**ಏವಂ ಧರ್ಮಪರತ್ವಂ ಚ ದೇವದೇವಸ್ಯ ಚಾರ್ಹತಿ ॥** - ೧೯೪/೩೫-೩೯

ಚಂದ್ರ ರುದ್ರದೇವರಿಗಿಂತ ಅಧಮ ದೇವತೆ. ಸೂರ್ಯಚಂದ್ರರನ್ನು ತಮ್ಮ ಕಣ್ಣಲ್ಲಿ

೧ ತದಹಂ ತೇ ಪ್ರವಕ್ಷ್ಯಾಮಿ ಶೃಣು ಕಲ್ಯಾಣಿ ಕಾರಣಮ್ ।
ಪುರಾಽಹಂ ಕಾರಣಾದ್ ದೇವಿ ಕೋಪಯುಕ್ತಃ ಶುಚಿಸ್ಮಿತೇ ।
ದಕ್ಷಯಜ್ಞವಧಾರ್ಥಾಯ ಭೂತಸಂಘಸಮಾವೃತಃ ॥
ತಸ್ಮಿನ್ ಕ್ರತುವಧೇ ಘೋರೇ ಯಜ್ಞಭಾಗನಿಮಿತ್ತತಃ ।
ದೇವಾ ವಿಭ್ರಂಶಿತಾಸ್ತೇ ವೈ ಯೇಷಾಂ ಭಾಗಃ ಕ್ರತೌ ಕೃತಃ ॥
ಸೋಮಸ್ತತ್ರ ಮಯಾ ದೇವೀ ಕುಪಿತೇನ ಭೃಶಾರ್ದಿತಃ ।
ಪಶ್ಯಂಶ್ಚಾನಪರಾಧೀ ಸನ್ ಪಾದಾಂಗುಷ್ಠೇನ ತಾಡಿತಃ ॥ - ೧೯೪/೨೯-೩೧

೨ ತಥಾಪಿ ವಿನಿಕೃತೇನಾಹಂ ಸಾಮಪೂರ್ವಂ ಪ್ರಸಾದಿತಃ ।
ತನ್ಮೇ ಚಿಂತಯತಶ್ಚಾಸೀತ್ ಪಶ್ಚಾತ್ತಾಪಃ ಪುರಾ ಪ್ರಿಯೇ ॥ - ೧೯೪/೩೨

ಧರಿಸಿರುವ ರುದ್ರದೇವರು ಚಂದ್ರನಿಗೆ ತಮ್ಮ ಶಿರಸ್ಸಿನಲ್ಲಿಯೂ ಸ್ಥಾನ ಕೊಟ್ಟು ಮತ್ತಷ್ಟು ಅನುಗ್ರಹ ಮಾಡಿದ್ದಾರೆ. ಸ್ವೋತ್ತಮಾನುಗ್ರಹ ಹೀಗಿರುತ್ತದೆ. ದೊಡ್ಡವರ ಅಪರಾಧವನ್ನು ದೊಡ್ಡದಾಗಿ ಮಾಡಬಾರದು. ಅದನ್ನು ಮರೆಯಬೇಕು. ಮುನಿಗಳ ಮಾತನ್ನು ಕೇಳಿದ ಉಮೆಯು ನಿನ್ನ ಉಪದೇಶದ ಮಾತುಗಳನ್ನು ಕೇಳಿದಂತೆಲ್ಲ ಮತ್ತೇ ಕೇಳಬೇಕೆನಿಸುತ್ತದೆ. ಮುಂದೆ ವರ್ಣಾಶ್ರಮಧರ್ಮಗಳನ್ನು ಹೇಳಲು ಪ್ರಾರ್ಥಿಸುತ್ತೇನೆ ಎಂದಾಗ ರುದ್ರದೇವರು ಅದೆಲ್ಲವನ್ನೂ ಪತ್ನಿಗೆ ಹಾಗೂ ನೆರೆದ ಋಷಿಗಳಿಗೆಲ್ಲ ಉಪದೇಶಿಸಿದ್ದಾರೆ.

## ಸಂದೇಶಗಳು-ವಿವರಣೆಗಳು (ಅ. ೧೯೩)

೧. ತಿಲೋತ್ತಮೆಯನ್ನು ರುದ್ರದೇವರು ನೋಡಿದ್ದು ಕಾಮದಿಂದಲ್ಲ. ಆಕೆ ರುದ್ರದೇವರ ಅನುಗ್ರಹ ಬೇಡಿ ಪ್ರದಕ್ಷಿಣೆ ಹಾಕುತ್ತಿದ್ದಳು. ಆಕೆಯನ್ನು ಅನುಗ್ರಹಿಸಲೇ ಅವರು ಸುತ್ತಲೂ ನೋಡಿದ್ದು, ಅನುಗ್ರಹಿಸಿದರು. ನಾಲ್ಕು ಮುಖಗಳಿಂದ ದೇವಕಾರ್ಯಗಳನ್ನೇ ಅವರು ಮಾಡಿದ್ದು.

೨. ರುದ್ರದೇವರ ಕಂಠ ನೀಲವಾಗಲು ಹಾಲಾಹಲ ವಿಷ ಕುಡಿದ ಪರಿಣಾಮ. ವಿವರ ಋಗ್ವೇದ, ಭಾಗವತ, ಭಾಗವತತಾತ್ಪರ್ಯನಿರ್ಣಯಗಳಲ್ಲಿವೆ.

೩. ಪಿನಾಕ, ಶಾರ್ಙ್ಗ, ಗಾಂಡೀವ ಧನುಸ್ಸುಗಳು ನೋಡಲು ಬಿದಿರಿನಿಂದ ತಯಾರಾದವು. ಆದರೆ ಅವುಗಳ ಬಲ ಅದ್ಭುತ. ವಿವರಗಳಿಗೆ ಮ.ತಾ.ನಿ; ಅಧ್ಯಾಯ ೪ ನೋಡಿರಿ (ಕೊನೆ ಶ್ಲೋಕಗಳು). ಗಾಂಡೀವದ ಬಗ್ಗೆ ಭಾರತದಲ್ಲಿದೆ.

೪. ರುದ್ರದೇವರ ತಪಸ್ಸು ಲೋಕಹಿತಕ್ಕಾಗಿ. ಗೋವುಗಳ ಅಪಚಾರ, ಶಿವನ ಮನಸ್ಸನ್ನೂ ಕ್ಷೋಭೆಗೊಳಿಸಿತ್ತು. ರುದ್ರದೇವರ ಮನಸ್ಸಿಗೆ ಕ್ಷೋಭೆಗೆ ಕಾರಣವಾದ ಗೋವುಗಳು ಸುಟ್ಟು ಹೋದವು. ಸ್ವೋತ್ತಮದ್ರೋಹ ಸ್ವಾತ್ಮನಾಶಕ್ಕೆ ಕಾರಣ. ಆದರೂ ರುದ್ರದೇವರು ಗೋಪತಿ ಶಬ್ದವಾಚ್ಯರಾದರು. ದೇವತೆಗಳು ಹಾಗೆ ಕರೆದರು.

೫. ನಂದೀಶ್ವರ ಹೇಗೆ ರುದ್ರದೇವರ ವಾಹನವಾಗಿ ಅನುಗ್ರಹೀತನಾದ ಎಂಬುದೂ ಇಲ್ಲಿ ಸಂದೇಶ.

## ಅಧ್ಯಾಯ - ೧೯೪

೬. ಯಾರಿಗೂ ಬೇಡವಾದ ಸ್ಮಶಾನ ರುದ್ರದೇವರ ಆವಾಸ. ಅಲ್ಲಿದ್ದೇ ಲೋಕರಕ್ಷಣೆ. ಅದುವೇ ದೊಡ್ಡವರ ಲಕ್ಷಣ. ತಾನು ಅತ್ಯಂತ ನಿಂದ್ಯವಾದ ಪ್ರದೇಶದಲ್ಲಿದ್ದು (ಸ್ಮಶಾನ) ತನ್ನ ಭಕ್ತರನ್ನು ಸಮೃದ್ಧಲೋಕದಲ್ಲಿ ಮೆರೆಸುವುದು ದೊಡ್ಡವರ ಲಕ್ಷಣ. ಅದೊಂದು ಮಾತಾಪಿತೃಹೃದಯ.

೭. ಸ್ಮಶಾನಕ್ಕೆ ಹೋಗಬಾರದ ಕಾಲಗಳೂ ಇವೆ. ಅಲ್ಲಿ ಶವಸಂಸ್ಕಾರಕ್ಕೆ ಹೋದಾಗ ಅಲ್ಲಿರುವ ಭೂತಗಳ ಭಯ ಯಾರಿಗೂ ರುದ್ರದೇವರ ದಯೆಯಿಂದ ಇರುವುದಿಲ್ಲ.

೮. ಶಿವನರೂಪ ರೌದ್ರ, ಭಯಂಕರ. ಆದರೆ ಅವರ ಹೃದಯ ದಯಾಪೂರ್ಣ.

೯. ಚಂದ್ರನನ್ನು ಹಿಂಸಿಸಿದ್ದು ಶಿವನೇ. ಆದರೂ ಆ ತಪ್ಪಿಗಾಗಿ (ಅದು ತಪ್ಪಲ್ಲ ದೊಡ್ಡವರಾದ್ದರಿಂದ) ಚಂದ್ರನನ್ನೇ ಶಿರಸ್ಸಿನಲ್ಲಿಟ್ಟುಕೊಂಡ ಕರುಣಾಮಯಿ ಶಿವ. ಮೊಮ್ಮಕ್ಕಳನ್ನು ಮರಿಮೊಮ್ಮಕ್ಕಳನ್ನು ತಲೆಯ ಮೇಲೆ ಇಟ್ಟುಕೊಳ್ಳುವ ಮುತ್ತಜ್ಜನಂತೆ. ನಿಜವಾಗಿ ದೊಡ್ಡವರು ಚಿಕ್ಕವರನ್ನು ಹಾರ್ದಿಕವಾಗಿ ಹಿಂಸಿಸರು.

೧೦. ಮಹರ್ಷಿಗಳ ಶಿವಸ್ತೋತ್ರ ನಿತ್ಯಪಠ್ಯ.

ಇತ್ಯಾದಿ...

# ಆಶ್ವಮೇಧಿಕಪರ್ವ

## ೧೫೫. ಮರುತ್ತನ ಕಥೆ

ಮರುತ್ತರಾಜನ ಕಥೆಯನ್ನು ಹೇಳುವ ಮೊದಲು ಆತನ ಪೂರ್ವಜರ ವಂಶವೃಕ್ಷವನ್ನು ವ್ಯಾಸರು ಧರ್ಮರಾಜನಿಗೆ ಹೇಳಿದರು.

ಕೃತಯುಗದಲ್ಲಿ ದಂಡಧರನಾದ '**ಮನು**' ಎಂಬ ರಾಜನಿಗೆ '**ಪ್ರಜಾತಿ**' ಎಂಬ ಮಗನೂ, ಅವನಿಗೆ **ಕ್ಷುಪ**, ನಂತರ **ಇಕ್ಷ್ವಾಕು** ಜನಿಸಿದರು. ಆತನಿಗೆ ಜನಿಸಿದ ನೂರು ಪುತ್ರರನ್ನೂ ಇಕ್ಷ್ವಾಕು ರಾಜರನ್ನಾಗಿ ಮಾಡಿದ. ಅವರಲ್ಲಿ ಹಿರಿಯ '**ವಿಂಶ**' ಆದರ್ಶರಾಜನಾಗಿದ್ದ. ಅವನ ಮಗ '**ವಿವಿಂಶ**'. ಈತನಿಗೆ ೧೫ ಜನ ಪುತ್ರರು. ಎಲ್ಲರೂ ಸತ್‌ಕ್ಷತ್ರಿಯರೂ, ಬ್ರಾಹ್ಮಣಪ್ರಿಯರು, ದಾನಧರ್ಮರತರು. ಇವರಲ್ಲಿ **ಖನೀನೇತ್ರ** ಹಿರಿಯ. ಇವನು ಸೋದರಪೀಡಕ, ಪ್ರಜಾಪೀಡಕನಾಗಲು ಅವನನ್ನು ಓಡಿಸಿ ಅವನ ಮಗ '**ಸುವರ್ಚಸ**'ನನ್ನು ಪ್ರಜೆಗಳು ರಾಜನನ್ನಾಗಿ ಮಾಡಿದರು. ಅವನು ಪ್ರಜಾಹಿತ ಕಾಪಾಡಿದ, ಶಮದಮಸಂಪನ್ನ ಸತ್ಯವಾದಿಯಾಗಿದ್ದ. ಧರ್ಮನಿತ್ಯನಾಗಿದ್ದರೂ ಒಮ್ಮೆ ಆತನ ಕೋಶವೆಲ್ಲ ಖಾಲಿಯಾಯಿತು. ಪ್ರಜೆಗಳಿಂದ ಭೃತ್ಯರಿಂದ ದುಃಖಕ್ಕೆ ಈಡಾದ. ಆಗ ಸುವರ್ಚಸನು ತನ್ನ ಕೈಯನ್ನೇ ಶಂಖವನ್ನಾಗಿಸಿ ಗಟ್ಟಿಯಾಗಿ ಊದಲು ಅವನ ಕೈಯಿಂದ ಭಾರಿಸೈನ್ಯ ಪ್ರಾದುರ್ಭವಿಸಿತು. ಅದರಿಂದ ತನ್ನ ಶತ್ರುಗಳನ್ನೆಲ್ಲ ಗೆದ್ದು '**ಕರಂಧಮ**' ಎಂದು ಪ್ರಸಿದ್ಧನಾದ[೧].

ಮುಂದೆ ತ್ರೇತಾಯುಗದಲ್ಲಿ ಈತನಿಗೆ '**ಅವಿಕ್ಷಿತ**' ಎಂಬ ಪುತ್ರ ಜನಿಸಿದ. ಈತನು ಇಂದ್ರನಿಗೆ ಸಮನಂತಿದ್ದ. ಈತ **ಕರಂಧಮ** ಚಕ್ರವರ್ತಿ ಎಂದು ಖ್ಯಾತನಾದ. ಈತನು ಯಜ್ಞಶೀಲ, ಶೌರ್ಯ, ಧೈರ್ಯ, ಜಿತೇಂದ್ರಿಯ, ತೇಜಸ್ಸಿನಲ್ಲಿ ಆದಿತ್ಯನಂತೆ ಇದ್ದ, ಬುದ್ಧಿಯಲ್ಲಿ ಬೃಹಸ್ಪತಿಗೆ, ಸ್ಥೈರ್ಯದಲ್ಲಿ ಹಿಮಾಲಯದಂತೆ, ಶ್ರೇಷ್ಠ ಪ್ರಜಾಪಾಲಕನಾಗಿ ೩ ಅಶ್ವಮೇಧಯಾಗ ಮಾಡಿದ.

---

೧ ಯದಾ ತು ಪರಮಾಮಾರ್ತಿಂ ಗತೋಽಸೌ ಸಪುರೋ ನೃಪ।
ತತಃ ಪ್ರದಧ್ಮೌ ಸ ಕರಂ ಪ್ರಾದುರಾಸೀತ್ ತತೋ ಬಲಮ್ ॥
ತತಸ್ತಾನಜಯತ್ ಸರ್ವಾನ್ ಪ್ರತಿಸೀಮಾನ್ ನರಾಧಿಪಾನ್।
ಏತಸ್ಮಾತ್ಕಾರಣಾತ್ ರಾಜನ್ ವಿಶ್ರುತಃ ಸ ಕರಂಧಮಃ॥ – ಅ. (೪/೧೭,೧೮)

ಈತನ ಮಗನೇ **ಮರುತ್ತ**. ಹತ್ತುಸಾವಿರ ಆನೆಯ ಬಲ, ಹೆಚ್ಚು ಹೇಳುವುದೇನು, ಮತ್ತೊಬ್ಬ ವಿಷ್ಣುವಿನಂತೆ ಇದ್ದ; ಆತನ ಯಜ್ಞ ಜಗದ್ವಿಖ್ಯಾತ, ಸುವರ್ಣಮಯ, ಆತ ಎಷ್ಟು ಸುವರ್ಣಪಾತ್ರೆ ಮಾಡಿಸಿದ್ದನೋ, ಅದು ಗೊತ್ತಿಲ್ಲ, ಯಜ್ಞ ಮಾಡಿದ್ದು ಮೇರುಪರ್ವತದ ಪರಿಸರ. ಅಲ್ಲಿ ಸುವರ್ಣಪರ್ವತವಿದೆ[೧].

ಮರುತ್ತ ರಾಜನ ಈ ಪರಿಯ ಪರಾಕ್ರಮ ಹಾಗೂ ಸುವರ್ಣ ಐಶ್ವರ್ಯ ಸಂಪತ್ತಿನ ಹಿನ್ನೆಲೆಯನ್ನು ಕೇಳಲು ವ್ಯಾಸರು ಆತನ ವ್ಯಕ್ತಿತ್ವವನ್ನು ಮತ್ತೆ ವಿಶದಪಡಿಸಿದರು.

ದಕ್ಷಪ್ರಜಾಪತಿಯ ಸಂತಾನ ಸುರಾಸುರರು. ಅವರದು ಯಾವಾಗಲೂ ಪರಸ್ಪರ ಸ್ಪರ್ಧಾಮನೋಭಾವ, ಕಲಹ. ಹಾಗೆಯೇ **ಅಂಗಿರಸಪುತ್ರರಾದ ಬೃಹಸ್ಪತಿ** ಹಾಗೂ **ಸಂವರ್ತ**ರದೂ ಪರಸ್ಪರ ಸ್ಪರ್ಧಾರೀತಿಯ ನಡಾವಳಿ. ಅಲ್ಲೂ ಅಣ್ಣನಾದ ಬೃಹಸ್ಪತಿಯದು ಮೇಲುಗೈ. ತಮ್ಮನನ್ನೇ ಪೀಡಿಸಿದಾಗ ಆತನು ಬೇಸತ್ತು, ಎಲ್ಲ ಸಂಪತ್ತು ತ್ಯಾಗಮಾಡಿ ದಿಗಂಬರನಾಗಿ ಕಾಡಿಗೆ ಹೋಗಿ ತಪೋನಿರತನಾದ. ಸಂವರ್ತನನೂ ತಪೋಧನನೂ ಮಹಾಜ್ಞಾನಿಯೇ ಆಗಿದ್ದನು.

ಇತ್ತ ಇಂದ್ರ ಎಲ್ಲ ದಾನವರನ್ನು ಸೋಲಿಸಿ, ತ್ರಿಲೋಕಾಧಿಪತಿಯಾದ. ಬೃಹಸ್ಪತಿಯನ್ನು ಪುರೋಹಿತನನ್ನಾಗಿ ಬೇಡಿಪಡೆದನು. ಇದಕ್ಕೂ ಮೊದಲು 'ಕರಂಧಮ' ರಾಜನು ಅಂಗಿರಸನನ್ನು ಪುರೋಹಿತನನ್ನಾಗಿ ಮಾಡಿಕೊಂಡು ಇಂದ್ರನಂತೆ ತೇಜಸ್ವಿಯೂ ಧರ್ಮಿಷ್ಠನೂ ಆಗಿದ್ದನು. ಆತ ನೆನೆಸಿಕೊಂಡ ಕೂಡಲೇ ವಾಹನಗಳು, ಯೋಧರು, ಅಮೂಲ್ಯದ್ರವ್ಯಗಳು, ಅನರ್ಘ್ಯ ವಸ್ತುಗಳು ಆತನ ಮುಖದಿಂದ ಬರುವ ನಿಃಶ್ವಾಸ ಗಾಳಿಯಿಂದ ಸೃಷ್ಟಿಯಾಗುತ್ತಿದ್ದವು. ಹೀಗಾಗಿ ಆತನು ಭೂಮಂಡಲಚಕ್ರವರ್ತಿಯಾಗಿ ಮೆರೆದು ಸಶರೀರವಾಗಿ ಕೊನೆಗೆ ಸ್ವರ್ಗಸ್ಥನಾದ[೨].

ಈತನ ಪುತ್ರ ಅವೀಕ್ಷಿತ ಶರ್ಯಾತಿಯಂತೆ ದರ್ಮಜ್ಞ, ತಂದೆಯಂತೆ ಪ್ರಜಾಪಾಲಕ, ಜನಾನುರಾಗಿ. ಈತನ ಮಗ ಮರುತ್ತ ಇಂದ್ರಸದೃಶ. ಇವನ ಗುಣಕ್ಕೆ ಭೂದೇವಿ ಮಾರು ಹೋಗಿದ್ದಳು. ಈತನು ಇಂದ್ರನೊಡನೆ ಯಾವಾಗಲೂ ಸ್ಪರ್ಧಿಸುತ್ತಿದ್ದ. ಇಂದ್ರನಿಗೆ ಈತನನ್ನು

---

೧ ತಸ್ಯ ಪುತ್ರೋಽತಿಚಕ್ರಾಮ ಪಿತರಂ ಗುಣವತ್ತಯಾ ।
ಮರುತ್ತೋ ನಾಮ ಧರ್ಮಜ್ಞಃ ಚಕ್ರವರ್ತೀ ಮಹಾಯಶಾಃ ॥
ನಾಗಾಯುತಸಮಪ್ರಾಣಃ ಸಾಕ್ಷಾದ್ವಿಷ್ಣುರಿವಾಪರಃ ।
ಮೇರುಂ ಪರ್ವತಮಾಸಾದ್ಯ ....................
ಕಾಂಚನಃ ಸುಮಹಾನ್ ಪಾದಃ ತತ್ರ ಕರ್ಮ ಚಕಾರ ಸಃ ॥ - ೪/೨೬-೨೯

೨ ಶತಕ್ರತುರಿವೌಜಸ್ವೀ ಧರ್ಮಾತ್ಮಾ ಸಂಶಿತವ್ರತಃ ।
ವಾಹನಾ ಯಸ್ಯ ಯೋಧಾಶ್ಚ ದ್ರವ್ಯಾಣಿ ವಿವಿಧಾನಿ ಚ .... ।
ಧ್ಯಾನಾದೇವಾಭವನ್ ರಾಜನ್ ಮುಖವಾತೇನ ಸರ್ವಶಃ ॥...
ಸಂಜೀವ್ಯ ಕಾಲಮಿಷ್ಟಂ ಚ ಸಶರೀರೋ ದಿವಂಗತಃ ॥ - ಅ. (೫/೧೦-೧೩)

ಹಿಂದಿಕ್ಕಲಾಗಲಿಲ್ಲ. ಅದಕ್ಕಾಗಿ ಇಂದ್ರನು ಬೃಹಸ್ಪತಿ ಆಚಾರ್ಯರಿಗೆ ಮರುತ್ತರಾಜನು ಕರೆದರೆ ಯಜ್ಞ, ಯಾಗಕಾರ್ಯಗಳನ್ನು ಮಾಡಿಸಲು ಹೋಗಬಾರದೆಂದು ನಿರ್ಬಂಧಿಸಿದ, ಮಾತನ್ನೂ ತೆಗೆದುಕೊಂಡ. ಇಂದ್ರ ಕೊಟ್ಟ ಕಾರಣ, ಮರುತ್ತ ಮರ್ತ್ಯ, ತಾನು ದೇವರಾಜ. ದೇವತೆಗಳ ಪುರೋಹಿತರು ಮನುಷ್ಯರಿಗೆ ಏಕೆ ತಾನೇ ಪುರೋಹಿತರಾಗಬೇಕು? ಮರುತ್ತ ಭೂಲೋಕರಾಜ, ಇಂದ್ರ ತ್ರಿಲೋಕಾಧಿಪತಿ.

ಬೃಹಸ್ಪತ್ಯಾಚಾರ್ಯರು ಇದನ್ನು ಕೇಳಿ –

'ಎಲೈ ಇಂದ್ರನೇ! ಅಗ್ನಿ ಸುಡದಿರಬಹುದು, ಭೂಮಿ ತಲೆಕೆಳಗಾಗಬಹುದು, ಸೂರ್ಯ ನಿಸ್ತೇಜನಾಗಬಹುದು ನಾನು ಮಾತ್ರ ನನ್ನ ಮಾತಿನಿಂದ ಹಿಂದೆ ಸರಿಯೆ ಎಂದರು[೧].

ಇಂದ್ರ ಸಂತುಷ್ಟನಾದ. ಹೀಗಿರುವಾಗ ಒಮ್ಮೆ ಮರುತ್ತ ಬೃಹಸ್ಪತಿಗಳ ಬಳಿಗೆ ಬಂದು 'ನಾನು ಈ ಹಿಂದೆ ತಮ್ಮನ್ನು ಕೇಳಿದ ಪ್ರಕಾರ, ತಮ್ಮ ಸಲಹೆಯಂತೆ ಒಂದು ಯಜ್ಞವನ್ನು ಮಾಡುವ ಸಂಕಲ್ಪ ಮಾಡಿದ್ದೇನೆ. ಅದಕ್ಕೆ ಬೇಕಾದ ಯಜ್ಞಸಂಭಾರವನ್ನೂ ಸಿದ್ಧಮಾಡಿಕೊಂಡಿದ್ದೇನೆ. ತಾವು ನಾನು ಅಂದುಕೊಂಡ ಯಜ್ಞವನ್ನು ಮಾಡಿಸಿ ಅನುಗ್ರಹಿವುದು' ಎಂದು ಪ್ರಾರ್ಥಿಸಿದ.

ಆದರೆ ಬೃಹಸ್ಪತ್ಯಾಚಾರ್ಯರು ಇಂದ್ರದೇವರು ತಿಳಿಸಿದಂತೆ ತಾವು ಮನುಷ್ಯರ ಯಜ್ಞ ಮಾಡಿಸಲು ಸಾಧ್ಯವಿಲ್ಲವೆಂದು ನುಡಿದರು. ತಮ್ಮ ಪ್ರತಿಜ್ಞೆಯನ್ನು ಹೇಳಿದರು. 'ದೇವತೆಗಳ ಪುರೋಹಿತನಾಗಿ ಮನುಷ್ಯರ ಯಜ್ಞ ಮಾಡಿಸೆ. ನೀನು ಬೇರೆ ಯಾರನ್ನಾದರೂ ಕೇಳಿಕೊ, ಎಲ್ಲಿಗಾದರೂ ಹೋಗು' ಎಂದರು. ಮರುತ್ತ ನಮ್ಮ ಪಿತಾಮಹರ ಕಾಲದಿಂದಲೂ ನಿಮ್ಮ ವಂಶದವರೇ ಯಜ್ಞ ಮಾಡಿಸುತ್ತಿದ್ದುದನ್ನು ಆಚಾರ್ಯರ ಸ್ಮರಣೆಗೆ ತಂದರೂ, ಬೃಹಸ್ಪತ್ಯಾಚಾರ್ಯರು ಒಪ್ಪಲಿಲ್ಲ ಇಂದ್ರನ ಒತ್ತಾಯಕ್ಕೆ ಒಳಗಾಗಿದ್ದರಿಂದ.

ನಂತರ ಮರುತ್ತನಿಗೆ ತುಂಬಾ ದುಃಖವಾಯಿತು. ತನ್ನ ಮಾತಿಗೆ ಬೆಲೆ ಕೊಡದ ಬಗ್ಗೆ ನಾಚಿಕೆಯಾಯಿತು. ವಿಷಾದದಿಂದ ವಾಪಸು ಬರುತ್ತಿರಲು ದಾರಿಯಲ್ಲಿ ನಾರದರು ಸಿಕ್ಕರು. ಅವರನ್ನು ವಿಧ್ಯುಕ್ತವಾಗಿ ಸತ್ಕರಿಸಿದ. ನಾರದರು ಮರುತ್ತನ ವಿಷಾದಮುಖ ನೋಡಿ ಕಾರಣ ಕೇಳಲು, ಬೃಹಸ್ಪತ್ಯಾಚಾರ್ಯರು ತಮಗೆ ವಂಚಿಸಿದ ಬಗೆ ಹೇಳಿದ. ಅದಕ್ಕೆ ನಾರದರು ಅಂಗೀರಸರ ಇನ್ನೊಬ್ಬ ಪುತ್ರ ಸಂವರ್ತ ಮಹರ್ಷಿ, ದಿಗಂಬರನಾಗಿ ಅವಧೂತನಾಗಿ ಉನ್ಮತ್ತನಂತೆ ಎಲ್ಲೆಡೆ ಸಂಚರಿಸುತ್ತಿರುತ್ತಾನೆ. ಜನರು ಅದರಿಂದ ಆತನ ಬಗ್ಗೆ ಭ್ರಾಂತರಾಗಿದ್ದಾರೆ. ಆತನು ಪ್ರಸನ್ನನಾದರೆ ನಿನಗೆ ಯಜ್ಞ ಮಾಡಿಸುತ್ತಾನೆ. ಆತನು ವಾರಣಾಸೀ ನಗರದಲ್ಲಿ ಮಹೇಶ್ವರನನ್ನು ದರ್ಶನ ಮಾಡುತ್ತಾ ತಿರುಗುತ್ತಿರುತ್ತಾನೆ. ನೀನು ನಗರ ದ್ವಾರದಲ್ಲಿ ಒಂದು ಶವವನ್ನು ಇಟ್ಟುಕೊಂಡು ಬರುವ ಜನರ ಚರ್ಯೆ ಗಮನಿಸುತ್ತಿರು. ಶವ ನೋಡಿದೊಡನೆ

---

೧ ಪೌರೋಹಿತ್ಯಮಹಂ ಕೃತ್ವಾ ತವ ದೇವ ಸುರೇಶ್ವರ।
ಯಾಜಯೇಯಂ ಕಥಂ ಮರ್ತ್ಯಂ ಮರುತ್ತಂ ಪಾಕಶಾಸನ॥ – ೫/೨೭

ಯಾವ ವ್ಯಕ್ತಿಯು ಬಂದ ದಾರಿಗೆ ಹೋಗುತ್ತಾನೆಯೋ ಅವನೇ ಸಂವರ್ತನೆಂದು ತಿಳಿದು ಆತನನ್ನು ಹಿಂಬಾಲಿಸು. ಆತನು ಒಂದು ಏಕಾಂತ ಸ್ಥಳಕ್ಕೆ ಹೋಗುತ್ತಾನೆ. ನೀನು ಆತನನ್ನು ಆಗ ಕಂಡು ಪ್ರಾರ್ಥಿಸು. ನಾನು ನಿನಗೆ ಈ ವಿಷಯ ತಿಳಿಸಿದ್ದನ್ನು ಆತನಿಗೆ ಹೇಳು. ನನ್ನ ಬಗ್ಗೆ ಕೇಳಿದರೆ 'ನಾರದರು ಅಗ್ನಿಪ್ರವೇಶ ಮಾಡಿದರೆಂದು ಹೇಳು' ಎಂದು ನಾರದರು ಮರುತ್ತನಿಗೆ ಸಂವರ್ತರನ್ನು ಕಾಣುವುದು, ಅವರನ್ನು ಪ್ರಾರ್ಥಿಸುವುದು - ಹೀಗೆ ಎಲ್ಲ ವಿವರಗಳನ್ನು ತಿಳಿಸಿದಾಗ ಮರುತ್ತ ಸಂತೋಷಗೊಂಡ[1].

ನಂತರ ನಾರದರ ಅನುಮತಿಯನ್ನು ಪಡೆದು ರಾಜನು ವಾರಣಾಸಿಗೆ ಹೋಗಿ ಅವರು ಹೇಳಿದಂತೆ ಶವ ಇಟ್ಟುಕೊಂಡು ಕಾದ. ನಾರದರು ಹೇಳಿದಂತೆ ಒಬ್ಬ ವ್ಯಕ್ತಿ ಬಂದು ನೋಡಿ ವೇಗವಾಗಿ ಹಿಂದಿರುಗಿದ. ಮರುತ್ತ ಅವರನ್ನು ಹಿಂಬಾಲಿಸಿದ. ಅವರು ಏಕಾಂತಸ್ಥಳದಲ್ಲಿ ನಿಂತಕೂಡಲೇ ತಾನೂ ಕೈಜೋಡಿಸಿ ಬೇಡಿದ. ಆದರೆ ಸಂವರ್ತನು ಧೂಳಿನಿಂದ, ಕೆಸರಿನಿಂದ, ಉಗುಳು, ಕಫಗಳಿಂದ ರಾಜನನ್ನು ಉಗಿದರೂ ರಾಜನು ಪ್ರಾಂಜಲಿಯಾಗಿ ಹಾಗೆಯೇ ಇದ್ದು ಅವರನ್ನು ಹಿಂಬಾಲಿಸುತ್ತಾ ಅವರು ಕುಳಿತುಕೊಂಡ ಒಂದು ಅಲದಮರದ ಬಳಿಗೇ ಹೋದನು.

ನಂತರ ಸಂವರ್ತನು 'ನನ್ನನ್ನು ನಿನಗೆ ತಿಳಿಸಿದವರು ಯಾರು? ಸತ್ಯ ಹೇಳಿದರೆ ನನ್ನ ಅನುಗ್ರಹವಾಗುತ್ತದೆ. ಇಲ್ಲದಿದ್ದರೆ ನಿನ್ನ ತಲೆ ಏಳು ಹೋಳಾದೀತು' ಅಂದಾಗ, ರಾಜನು ನಾರದರಿಂದ ತಮ್ಮ ಬಗ್ಗೆ ತಿಳಿಯಿತು. ಅವರು ಎಲ್ಲಿದ್ದಾರೆ ಎಂದು ಸಂವರ್ತರು ಕೇಳಲು ರಾಜನು ನಾರದರು ಹೇಳಿದಂತೆ ಹೇಳಿದನು(ಅಗ್ನಿಪ್ರವೇಶ ಮಾಡಿದರು ಎಂದು).

---

೧ ರಾಜನ್ನಂಗೀರಸಃ ಪುತ್ರಃ ಸಂವರ್ತೋ ನಾಮ ಧಾರ್ಮಿಕಃ।
ಚಂಕ್ರಮೀತಿ ದಿಶಃ ಸರ್ವಾಃ ದಿಗ್ವಾಸಾ ಮೋಹಯನ್ ಪ್ರಜಾಃ॥
ಪ್ರಸನ್ನಸ್ತ್ವಾಂ ಮಹಾತೇಜಾಃ ಸಂವರ್ತೋ ಯಾಜಯಿಷ್ಯತಿ।
ಉನ್ಮತ್ತವೇಷಂ ಬಿಭ್ರತ್ ಸ ಚಂಕ್ರಮೀತಿ ಯಥಾಸುಖಮ್ ॥
ವಾರಾಣಸೀಂ ತು ನಗರೀಂ........................... ।
ಯತ್ರ ಸಾಕ್ಷಾತ್ ಮಹಾದೇವೋ ದೇಹಾಂತೇ ಪರಮೇಶ್ವರಃ॥
ವ್ಯಾಚಷ್ಟೇ ತಾರಕಂ ಜ್ಞಾನಂ ಜಂತೂನಾಮಪವರ್ಗದಮ್।
ತಸ್ಯಾ ದ್ವಾರಂ ಸಮಾಸಾದ್ಯ ನ್ಯಸೇಥಾಃ ಕುಣಪಂ ಕ್ವಚಿತ್ ॥
ತಂ ದೃಷ್ಟ್ವಾ ಯೋ ನಿವರ್ತೇತ ಸ ಸಂವರ್ತೋ ಮಹೀಪತೇ।
....
ಬ್ರೂಯಾಸ್ತ್ವಂ ನಾರದೇನೇತಿ ಸಂಜ್ಞಪ್ತ ಇತಿ ಶತ್ರುಹನ್।
ಸ ಚೇತ್ ತ್ವಾಮನುಯುಂಜೀತ ಮಮಾನುಗಮನೇಪ್ಸಯಾ॥
ಶಂಸೇಥಾ ವಹ್ನಿಮಾರೂಢಂ ಮಾಮಪಿ ತ್ವಮಶಂಕಯಾ॥ - ಅ. (೬/೧೮-೨೭)

ನಂತರ ಸಂವರ್ತರು ನನ್ನ ಅಣ್ಣ ಇಂದ್ರಸತ್ಕೃತನಾದವನು, ಸಮರ್ಥ. ಅವನಿಂದ ಯಜ್ಞ ಮಾಡಿಸಬಹುದು ಎಂದ. ನನ್ನಲ್ಲಿ ಯಾವುದೇ ಗೃಹಕೃತ್ಯದ ಪದಾರ್ಥಗಳಿಲ್ಲ, ಎಲ್ಲ ನನ್ನ ಅಣ್ಣ ಅಪಹರಿಸಿದ್ದಾನೆ. ಆದರೂ ನಾನು ಅಣ್ಣನ ಅನುಮತಿಯಿಲ್ಲದೆ ಯಾವುದೇ ಕಾರಣಕ್ಕೂ ಯಜ್ಞ ಮಾಡಿಸಲಾರೆ. ನನಗೆ ನನ್ನ ಅಣ್ಣ ಅತ್ಯಂತ ಪೂಜ್ಯ. ಆದ್ದರಿಂದ ಅವನನ್ನು ಕೇಳೆಂದರು.

ಆಗ ರಾಜನು ತಾನು ಮಾಡಿದ ಪ್ರಯತ್ನವೆಲ್ಲಾ ತಿಳಿಸಿದ. ಬೃಹಸ್ಪತ್ಯಾಚಾರ್ಯರು ತನ್ನ ಪ್ರಾರ್ಥನೆಯನ್ನು ತಿರಸ್ಕರಿಸಿರುವುದನ್ನೂ ವಿವರಿಸಿದ. 'ಇಂದ್ರನು ತನ್ನೊಡನೆ ಸ್ಪರ್ಧೆ ಮಾಡುತ್ತಿದ್ದಾನೆ. ಆದ್ದರಿಂದ ಮತ್ತೆ ಬೃಹಸ್ಪತ್ಯಾಚಾರ್ಯರ ಬಳಿ ಹೋಗಲಾರೆ' ಎಂದಾಗ, ಸಂವರ್ತರು – 'ನೋಡು ರಾಜ! ನಾನು ನಿನಗೆ ಯಜ್ಞ ಮಾಡಿಸಿದರೂ ಇಂದ್ರ, ಬೃಹಸ್ಪತಿಗಳು ನಿನ್ನ ವಿಷಯದಲ್ಲಿ ಸಿಟ್ಟಾಗುತ್ತಾರೆ, ವಿರೋಧಿಸುತ್ತಾರೆ. ಆಗ ನೀನು ನನ್ನ ಪರವಾಗಿರಬೇಕು. ಅದಕ್ಕೆ ಮರುತ್ತನು ಒಪ್ಪಿದ. 'ನಾನು ತಮ್ಮನ್ನು ಸಮರ್ಥಿಸದಿದ್ದರೆ, ನನಗೆ ಈ ಜಗತ್ತಿನಲ್ಲಿ ಸೂರ್ಯಾದಿಗಳು ಇರುವವರೆಗೂ ಉತ್ತಮಲೋಕಗಳು ಸಿಗದಿರಲಿ. ನಿಮ್ಮನ್ನು ತ್ಯಾಗ ಮಾಡಿದ ನನಗೆ ಶುದ್ಧ ಬುದ್ಧಿ ಬರದಿರಲಿ' ಎಂದ. ಸಂವರ್ತರೂ ಒಪ್ಪಿದರು.

ಯಜ್ಞಕ್ಕೋಸ್ಕರ ಬೇಕಾದ ದ್ರವ್ಯಕ್ಕಾಗಿ ಹಿಮವತ್ಪರ್ವತದ ಹಿಂಭಾಗದಲ್ಲಿರುವ ಮೇರುಪರ್ವತದಲ್ಲಿ **ಮುಂಜವಂತವೆಂಬ** ಪರ್ವತದಲ್ಲಿ ಉಮಾಪತಿಯು ತಪೋನಿರತನಾಗಿರುತ್ತಾನೆ. ಉಮೆಯೊಡನೆ ಅಲ್ಲಿನ ಸುಂದರ ಪರ್ವತಶ್ರೇಣಿಗಳಲ್ಲಿ ವಿಹರಿಸುತ್ತಿರುತ್ತಾನೆ. ಅಲ್ಲಿ ಏಕಾದಶರುದ್ರರು, ವಸುಗಳು, ವಿಶ್ವೇದೇವತೆಗಳು, ಸಿದ್ಧಸಾಧ್ಯರು, ಯಮಕುಬೇರಾದಿಗಳು, ಭೂತಪ್ರೇತಾದಿಗಳು, ಉಮಾಪತಿಯನ್ನು ಉಪಾಸನೆ ಮಾಡುತ್ತಿರುತ್ತಾರೆ. ಮಹಾತೇಜೋಶಾಲಿಯಾದ ಮಹಾದೇವ ಇರುವ ಆ ಸ್ಥಳದಲ್ಲಿ ಸಮಶೀತೋಷ್ಣವಾಗಿದೆ. ಅದೆಲ್ಲ ಪ್ರದೇಶ ಕುಬೇರ ಭೃತ್ಯರಿಂದ ರಕ್ಷಿತವಾಗಿದೆ. ಅಲ್ಲಿಗೆ ಹೋಗಿ ರುದ್ರದೇವರನ್ನು ನಮಸ್ಕರಿಸಿ, ಸ್ತುತಿ ಮಾಡು ಎಂದು ಸಂವರ್ತರು ರಾಜನಿಗೆ ಹೇಳಿದರು.

**ಸಂವರ್ತ –**
**ನಾಹಂ ತೇನಾನನುಜ್ಞಾತಃ ತ್ವಾಮಾವಿಕ್ಷಿತ ಕರ್ಹಿಚಿತ್ ।**
**ಯಾಜಯೇಯಂ ಕಥಂಚಿದ್ವೈ ಸ ಮೇ ಪೂಜ್ಯತಮೋ ಗುರುಃ ॥** -೭/೧೧
**ಮರುತ್ತ –**
**ಬೃಹಸ್ಪತಿಂ ಗತಃ ಪೂರ್ವಮಹಂ ಸಂವರ್ತ ತಚ್ಛೃಣು ।**
**ನ ಮಾಂ ಕಾಮಯತೇ ಯಾಜ್ಯಂ ಮುನಿವಾಸವವಾರಿತಃ ॥** ೭/೧೩
**ಸ್ಪರ್ಧತೇ ಹಿ ಮಯಾ ವಿಪ್ರ ಸದಾ ಹಿ ಸ ಹಿ ವಾಸವಃ ॥** ೭/೧೫
**ತಂ ಕಾಮಯೇಽತಿಕ್ರಮಿತುಂ ವಾಸವಂ ತ್ವತ್ಕೃತೈರ್ಗುಣೈಃ ॥** ೭/೧೭
**ನ ಹಿ ಮೇ ವರ್ತತೇ ಬುದ್ಧಿರ್ಗಂತುಂ ಬ್ರಹ್ಮನ್ ಬೃಹಸ್ಪತಿಮ್ ।**
**ಪ್ರತ್ಯಾಖ್ಯಾತೋ ಹಿ ತೇನಾಸ್ಮಿ ತಥಾಽನಪಕೃತೇ ಸತಿ ॥** ೭/೧೮

ಯಾಜ್ಯಮಾನಂ ಮಯಾ ಹಿ ತ್ವಾಂ ಬೃಹಸ್ಪತಿ ಪುರಂದರೌ।
ದ್ವಿಷೇತಾಂ ಸಮಭಿಕ್ರುದ್ಧೌ ಏತದೇಕಂ ಸಮರ್ಥಯೇಃ॥ ೭/೨೦

ಮರುತ್ತ -

ಯಾವತ್ತಪೇತ್ ಸಹಸ್ರಾಂಶುಃ ತಿಷ್ಠೇರಂಶ್ಚಾಪಿ ಪರ್ವತಾಃ।
ತಾವಲ್ಲೋಕಾನ್ನ ಲಭೇಯಂ ತ್ಯಜೇಯಂ ಸಂಗತಂ ಯದಿ॥ ೭/೨೨

ಸಂವರ್ತ -

ಸಂವಿಧಾಸ್ಯೇ ಚ ತೇ ರಾಜನ್ನಕ್ಷಯಂ ದ್ರವ್ಯಮುತ್ತಮಮ್।
ಯೇನ ದೇವಾನ್ ಸಗಂಧರ್ವಾನ್ ಶಕ್ರಂ ಚಾಭಿಭವಿಷ್ಯಸಿ॥ ೭/೨೫
ಗಮಯಿಷ್ಯಾಮಿ ಚೇಂದ್ರೇಣ ಸಮತಾಮಪಿ ತೇ ಧ್ರುವಮ್।
ಪ್ರಿಯಂ ಚ ತೇ ಕರಿಷ್ಯಾಮಿ ಸತ್ಯಮೇತತ್ ಬ್ರವೀಮಿ॥ - ೭/೧೧-೨೭

ಮೇರೌ ಹಿಮವತಃ ಪೃಷ್ಠೇ ಮುಂಜವಾನ್ ನಾಮಪರ್ವತಃ।
ತಪ್ಯತೇ ತತ್ರ ಭಗವಾನ್ ತಪೋ ನಿತ್ಯಮುಮಾಪತಿಃ॥ ೮/೧

ತತ್ರ ರುದ್ರಾಶ್ಚ ಸಾಧ್ಯಾಶ್ಚ ವಿಶ್ವೇ ಚ ವಸವಸ್ತಥಾ।
ಯಮಶ್ಚ ವರುಣಶ್ಚೈವ ಕುಬೇರಶ್ಚ ಸಹಾನುಗಃ॥...
ಆದಿತ್ಯಾ ಮರುತಶ್ಚೈವ ಯಾತುಧಾನಾಶ್ಚ ಸರ್ವಶಃ।
ಉಪಾಸತೇ ಮಹಾತ್ಮಾನಂ ಬಹುರೂಪಮುಮಾಪತಿಮ್॥ - ೮/೪,೬

ಸಂವರ್ತನು ಉಪದೇಶಿಸಿದ ಸ್ತುತಿಯು ೨೯ ಶ್ಲೋಕಗಳಿಂದ ಕೂಡಿದ್ದು ಶಿವ ಹಾಗೂ ಶಿವಾಂತರ್ಯಾಮಿ ಹರಿಯ ಗುಣಗಳ ಸ್ತೋತ್ರವೂ ಆಗಿರುವುದು ವಿಶೇಷ. ಅವುಗಳಲ್ಲಿ ಕೆಲವು ಶ್ಲೋಕಗಳನ್ನು ಉದಾಹರಿಸುವ.

ತಸ್ಮೈ ಭಗವತೇ ಕೃತ್ವಾ ನಮಃ ಶರ್ವಾಯ ವೇಧಸೇ।
ಏಭಿಸ್ತಂ ನಾಮಭಿರ್ದೇವ ಸರ್ವವಿದ್ಯಾಧರಂ ಸ್ತುಹಿ॥ ೮/೧೪

ಸ್ತೋತ್ರ -

ರುದ್ರಾಯ ಶಿತಿಕಂಠಾಯ ಸುರೂಪಾಯ ಸುವರ್ಚಸೇ।
ಕಪರ್ದಿನೇ ಕರಾಲಾಯ ಹರ್ಯಕ್ಷ ವರದಾಯ ಚ॥ ೮/೧೫

ವಿರೋಚಮಾನಂ ವಪುಷಾ ದಿವ್ಯಾಭರಣಭೂಷಿತಮ್।
ಅನಾದ್ಯಂತಮಜಂ ಶಂಭುಂ ಸರ್ವವ್ಯಾಪಿನಮೀಶ್ವರಮ್॥
ಯಸ್ಯ ನಿತ್ಯಂ ವಿದುಃ ಸ್ಥಾನಂ ಮೋಕ್ಷಂ ಅಧ್ಯಾತಮಚಿಂತಕಾಃ।
ಯೋಗಿನಸ್ತತ್ವಮಾರ್ಗಸ್ಥಾಃ ಕೈವಲ್ಯಂ ಪದಮಕ್ಷರಮ್॥
ಭಕ್ತಾನಾಂ ಸುಲಭಂ ತಂ ಹಿ ದುರ್ಲಭಂ ದೂರಪಾತಿನಮ್।

ಅದೂರಸ್ಥಮಮುಂ ದೇವಂ ಪ್ರಕೃತೇಃ ಪರತಃ ಸ್ಥಿತಮ್ ॥
ನಮಾಮಿ ಸರ್ವಲೋಕಸ್ಥಂ ವ್ರಜಾಮಿ ಶರಣಂ ಶಿವಮ್ ॥ ೮/೪೨

ಹೀಗೆ ಸ್ತುತಿ ಮಾಡಿದರೆ ನೀನು ಅಕ್ಷಯವಾದ ಸುವರ್ಣ ಹೊಂದುತ್ತೀ ಎಂದು ಸಂವರ್ತರು ಹೇಳಿದ ಪ್ರಕಾರ ರಾಜನು ಗಂಗಾಧರನ ಬಳಿಗೆ ಹೋಗಿ ನಮಸ್ಕರಿಸಿ ಅಕ್ಷಯ ಧನವನ್ನು ಕುಬೇರನಂತೆ ಹೊಂದಿ ಯಜ್ಞ ಮಾಡಿದನು[೧]. ಯಜ್ಞಪಾತ್ರೆ, ಯಜ್ಞಶಾಲೆ, ಪದಾರ್ಥಗಳೆಲ್ಲ ಸುವರ್ಣರಚಿತವಾಗಿತ್ತು.

ಮರುತ್ತನು ದೇವತೆಗಳನ್ನೂ ಮೀರಿದ ಸಂಪತ್ತನ್ನು ಹೊಂದಿರುವುದನ್ನು ಕೇಳಿ ಬೃಹಸ್ಪತಿಯು ದುಃಖಪಟ್ಟನು. ಗುರುಮುಖ ಬಿಳುಚಿಕೊಂಡಿತು. ಆಗ ಇಂದ್ರದೇವ ಗುರುಗಳ ಬಳಿಗೆ ಬಂದು (ದೇವತೆಗಳೊಂದಿಗೆ) ಕಾರಣ ಕೇಳಿದನು.

ಬೃಹಸ್ಪತ್ಯಾಚಾರ್ಯರು ಇಂದ್ರನಿಗೆ ಹೇಳಿದರು – 'ಮರುತ್ತರಾಜನು ನನ್ನ ತಮ್ಮನಾದ ಸಂವರ್ತನ ಪೌರೋಹಿತ್ಯದಲ್ಲಿ ಶ್ರೇಷ್ಠರೀತಿಯಲ್ಲಿ ಉತ್ತಮದಕ್ಷಿಣೆಯಿಂದ ಯಜ್ಞವನ್ನು ಮಾಡುತ್ತಿದ್ದಾನೆಂದು ಕೇಳಿದೆ. ಅದು ನಡೆಯದಿರಲಿ ಎಂದು ನನ್ನ ಅಪೇಕ್ಷೆ ಎಂದರು. ಅದಕ್ಕೆ ಇಂದ್ರನು ಗುರುಗಳೇ! ನೀವು ಮಂತ್ರ ಬಲ್ಲ ಪುರೋಹಿತರು. ನಿಮ್ಮ ಅಪೇಕ್ಷೆಗಳು ಪೂರ್ಣಗೊಂಡಿವೆ. ಹುಟ್ಟು ಸಾವುಗಳನ್ನು ತಾವು ದಾಟಿದ್ದೀರಿ. ಹೀಗಿರುವಾಗ ಸಂವರ್ತನು ನಿಮಗೆ ಏನು ತಾನೇ ಮಾಡಬಲ್ಲ? ಯಜ್ಞದಿಂದ ಮರುತ್ತನು ಸಮೃದ್ಧನಾಗುತ್ತಿದ್ದಾನೆ. ಅವನು ನನ್ನ ಶತ್ರುವೇ ಸರಿ. ಶತ್ರು ನಮಗಿಂತ ವೃದ್ಧಿಯಾಗಬಾರದು. ಅದು ನಮಗೆ ಅಪಾಯ. ನೀನು ಹಿಂದೆಲ್ಲ ದೈತ್ಯದಾನವರು ನಮಗಿಂತ ಮುಂದೆ ಬಂದಾಗ ಅವರನ್ನು ಸಂಹರಿಸಿದ್ದೀ ತಾನೇ? ಆದ್ದರಿಂದ ಈಗ ನನ್ನ ಅಪೇಕ್ಷೆ ಏನೆಂದರೆ ಮರುತ್ತರಾಜ ಯಜ್ಞ ನಿಲ್ಲಿಸಬೇಕು ಅಥವಾ ಸಂವರ್ತ ಯಜ್ಞ ಮಾಡಿಸಬಾರದು[೨].

ಗುರುಗಳ ಮಾತಿನಂತೆ ಇಂದ್ರನು ಅಗ್ನಿಯನ್ನು ಕರೆದು ಮರುತ್ತನಿಗೆ ಈ ಸಂದೇಶ ಕಳುಹಿಸಿದನು.

---

೧ ಇತ್ಯುಕ್ತಸ್ತು ವಚಸ್ತಸ್ಯ ಚಕ್ರೇ ಕಾರಂಧಮಾತ್ಮಜಃ।
ಕುಬೇರ ಇವ ತತ್ ಪ್ರಾಪ್ಯ ಮಹಾದೇವ ಪ್ರಸಾದತಃ॥
ತತೋಽತಿಮಾನುಷಂ ಸರ್ವಂ ಚಕ್ರೇ ಯಜ್ಞಸ್ಯ ಸಂವಿಧಿಮ್। – ೮/೪೬,೪೭

೨ ಮರುತ್ತಮಾಹುಃ ..... ತಂ ಸಂವರ್ತೋ ಯಾಜಯತೀತಿ ಮೇ ಶ್ರುತಮ್।
ತದಿಚ್ಛಾಮಿ ನಃ ಸ ನ ತಂ ಯಾಜಯೇತಿ। – ೯/೪
ಯಂ ಯಂ ಸಮೃದ್ಧಂ ಪಶ್ಯಸಿ ಯತ್ರ ಯತ್ರ ದುಃಖಂ ಸಪತ್ನೇಷು ಸಮೃದ್ಧಭಾವಃ॥ – ೯/೬
ಸರ್ವೋಪಾಯೈರ್ಮಘವಂ ಸ್ತ್ವಂ ನಿಯಚ್ಛ ಸಂವರ್ತಂ ವಾ ಪಾರ್ಥಿವಂ ವಾ ಮರುತ್ತಮ್॥
– ೯/೭

'ಎಲೈ ರಾಜನೇ! ದೇವಗುರುವಾದ ಬೃಹಸ್ಪತಿಯೇ ಯಜ್ಞ ಮಾಡಿಸುತ್ತಾನೆ. ನಿನ್ನನ್ನು ಅಮರನನ್ನಾಗಿ ಮಾಡಿಸುತ್ತಾನೆ[1]. ಮೊದಲಿನಿಂದಲೂ ನಿನ್ನ ಗುರು ಬೃಹಸ್ಪತಿಯಲ್ಲವೇ? ಈಗ ನೀನು ಮರ್ತ್ಯ-ಮರಣಧರ್ಮ ಉಳ್ಳವನು.'

ಅಗ್ನಿಯು ವೇಗವಾಗಿ ಮರುತ್ತನಿಗೆ ಸಂದೇಶ ತಲುಪಿಸಲು ಹೊರಟ. ಬಂದ ಅಗ್ನಿಯನ್ನು ಮರುತ್ತನು ಸತ್ಕರಿಸಿ ದೇವತೆಗಳ ಬೃಹಸ್ಪತ್ಯಾಚಾರ್ಯರ ಕುಶಲ ಕೇಳಿದ. ಅಗ್ನಿಯು ಮರುತ್ತನಿಗೆ ಇಂದ್ರ ಸಂದೇಶ ಅರುಹಿದ.

ಸಂದೇಶ ಕೇಳಿದ ಮರುತ್ತನು ಅಗ್ನಿಗೆ ಬೃಹಸ್ಪತಿಗುರುವಿಗೆ ನನ್ನ ನಮಸ್ಕಾರ. ನನ್ನ ಯಾಗ ಸಂವರ್ತನೇ ಮಾಡಿಸುತ್ತಾನೆ. ಮರಣಶೀಲನಾದ ನನಗೆ ಯಜ್ಞ ಮಾಡಿಸುವುದು ಬೃಹಸ್ಪತಿ ಗುರುವಿಗೆ ಶೋಭಿಸದು. ಅಮರ್ತ್ಯಶೀಲನಾದ ಮಹೇಂದ್ರನಿಗೆ ಯಜ್ಞ ಮಾಡಿಸುವುದು ದೇವಗುರುಗಳಿಗೆ ಸೂಕ್ತ[2].

ಇದನ್ನು ಕೇಳಿದ ಅಗ್ನಿಯು ರಾಜನ್! 'ಬೃಹಸ್ಪತಿ ಯಜ್ಞಮಾಡಿಸಿದರೆ ಇಂದ್ರಾನುಗ್ರಹದಿಂದ ನೀನು ಸ್ವರ್ಗವೇಕೆ, ಎಲ್ಲ ಲೋಕಗಳನ್ನು ಹೊಂದಬಲ್ಲೆ, ಗೆಲ್ಲಬಲ್ಲೆ.' ಆಗ ಸಂವರ್ತನು 'ಅಗ್ನಿದೇವ! ಇನ್ನು ಮೇಲೆ ಮರುತ್ತರಾಜನನ್ನು ಬೃಹಸ್ಪತಿಗೆ ಒಪ್ಪಿಸುವ ಕಾರ್ಯದಲ್ಲಿ ನೀನು ಮಧ್ಯ ಬರಬೇಡ. ಬಂದರೆ ನನ್ನ ಕಣ್ಣಿನಲ್ಲಿರುವ ಭಯಂಕರ ಕ್ರೋಧಾಗ್ನಿ ನಿನ್ನನ್ನು ಸುಟ್ಟೀತು[3]' ಎಂದ.

ಈ ಮಾತನ್ನು ಕೇಳಿದ ಅಗ್ನಿಯು ಭಯದಿಂದ ಇಂದ್ರನ ಬಳಿ ಹೋಗಿ, ಮರುತ್ತರಾಜ ಹಾಗೂ ಸಂವರ್ತ ಹೇಳಿದುದನ್ನು ಒಪ್ಪಿಸಿದ. ಇಂದ್ರನು ಅಗ್ನಿಗೆ ಮತ್ತೊಮ್ಮೆ 'ಮರುತ್ತನಿಗೆ ನನ್ನ ಸಂದೇಶವನ್ನು ಹೇಳು, ಒಪ್ಪದಿದ್ದಲ್ಲಿ ವಜ್ರಾಯುಧವನ್ನು ಪ್ರಯೋಗಿಸುತ್ತೇನೆ' ಎಂದು ತಿಳಿಸಲು, ಅದಕ್ಕೆ ಅಗ್ನಿಯು ನಾನು ಮತ್ತೊಮ್ಮೆ ಹೋಗಲು ಸಂವರ್ತನ ಮಾತುಗಳಿಂದ ಹೆದರಿದ್ದೇನೆ. ಗಂಧರ್ವ ರಾಜನನ್ನು ಕಳಿಸು ಎಂದ. ಮತ್ತೆ ಇಂದ್ರನು 'ಅಗ್ನಿಯೇ ಎಲ್ಲವನ್ನೂ ಸುಡುವ ಶಕ್ತಿ ನಿನ್ನದು. ನಿನ್ನನ್ನು ಭಸ್ಮಮಾಡಲು ಯಾರು ತಾನೇ ಸಮರ್ಥರು? ಆದ್ದರಿಂದ ಹೋಗು' ಎಂದ. ಆಗ ಅಗ್ನಿಯು ಎಲೈ ದೇವೇಂದ್ರನೇ! ಭೂ, ಸ್ವರ್ಗಲೋಕಗಳನ್ನು ಚಾಪೆಯಂತೆ ಸುತ್ತಿಕೊಂಡ

---

೧ ಅಯಂ ವೈ ತ್ವಾಂ ಯಾಜಯಿತಾ ಬೃಹಸ್ಪತಿಃ ತಥಾಽಮರಂ ಚೈವ ಕರಿಷ್ಯತೀತಿ ।
ಅಯಂ ಗುರುರ್ಯಾಜಯತಾಂ ನೃಪ ತ್ವಾಂ ಮರ್ತ್ಯಂ ಸಂತಮಮರಂ ತ್ವಾಂ ಕರೋತು ॥
- ೯/೮,೧೫

೨ ಸಂವರ್ತೋ ಮೇ ಯಾಜಯಿತಾ ದ್ವಿಜೋತ್ತಮಃ ಬೃಹಸ್ಪತೇರಂಜಲಿರೇಷ ತಸ್ಯ ।
ನಾಸೌ ದೇವಂ ಯಾಜಯಿತ್ವಾ ಮಹೇಂದ್ರಂ ಮರ್ತ್ಯಂ ಸಂತಂ ಯಾಜಯನ್ನದ್ಯ ಶೋಭೇತ್ ॥
- ೯/೧೬

೩ ಮಾಸ್ಮೈವ ತ್ವಂ ಪುನರಾಗಾಃ ಕಥಂಚಿತ್ ಬೃಹಸ್ಪತಿಂ ಪರಿದಾತುಂ ಮರುತ್ತೇ ।
ಮಾ ತ್ವಾ ಧಕ್ಷ್ಯೇ ಚಕ್ಷುಷಾ ದಾರುಣೇನ ಸಂಕ್ರುದ್ಧೋಽಹಂ ಪಾವಕ ತನ್ನಿಬೋಧ ॥ - ೯/೧೯

ನಿನ್ನನ್ನೇ ವೃತ್ರಾಸುರ ಗೆದ್ದ. ಹಾಗಿರುವಾಗ ಬ್ರಾಹ್ಮಣನ ಸಾಮರ್ಥ್ಯದ ಬಗ್ಗೆ ನನಗೆ ಭಯವಿದೆ.' ಎಂದ. ಆದರೆ ಇಂದ್ರನು ತನ್ನ ಬಲವನ್ನು ಸಮರ್ಥಿಸಿಕೊಂಡ. 'ಕಾಲಕೇಯಾದಿ ದಾನವರನ್ನು ಸಂಹರಿಸಿದುದನ್ನು, ಪ್ರಹ್ಲಾದನಿಗೆ ಉತ್ತಮಸುಖ ಕೊಟ್ಟುದುದನ್ನು ನಾನು ಬಲ್ಲೆ. ಇಂತಹ ನನಗೆ ಮನುಷ್ಯರು (ಮರುತ್ತಾದಿಗಳು) ಏನು ತಾನೆ ಮಾಡಬಲ್ಲರು?'

ಪುನಃ ಅಗ್ನಿದೇವ 'ದೇವ! ಹಿಂದೆ ನಿನು ಅಶ್ವಿನಿದೇವತೆಗಳಿಗೆ ಸೋಮಪಾನ ನಿಷೇಧಿಸಿದ್ದಿ ತಾನೆ? ಆದರೆ, ಚ್ಯವನ ಋಷಿಗಳು ಅವರಿಗೆ ಸೋಮಪಾನಾರ್ಹರನ್ನಾಗಿ ಮಾಡಲಿಲ್ಲವೆ? ಆಗ ನಿನ್ನ ವಜ್ರಾಯುಧ ಪ್ರಯೋಗ ಚ್ಯವನರ ಮೇಲೆ ಎನು ಮಾಡಿತು?[೧] ಬ್ರಹ್ಮ ಬಲದ ಮುಂದೆ ಕ್ಷಾತ್ರಬಲ, ಇತರ ಬಲಗಳು ಉತ್ಕೃಷ್ಟವೇನಲ್ಲ[೨]. ನೀನು ಕೈಜೋಡಿಸಿ ಚ್ಯವನರಿಗೆ ಶರಣು ಹೋದುದು ನೆನಪಿಗೆ ತಂದುಕೋ' ಎಂದನು.

ಪುನಃ ಇಂದ್ರನು ಅಗ್ನಿಗೆ 'ನೀನು ಹೇಳಿದ್ದು ಸರಿಯೇ. ಆದರೆ ನಾನು ಮರುತ್ತನ ಬಲವೃದ್ಧಿಯನ್ನು ಸಹಿಸೆ. ಅವನ ಮೇಲೆ ವಜ್ರಾಯುಧವನ್ನು ಪ್ರಯೋಗಿಸುತ್ತೇನೆ. ಧೃತರಾಷ್ಟ್ರ ಗಂಧರ್ವನೇ ನೀನು ಮರುತ್ತನ ಬಳಿಗೆ ಹೋಗು, ನನ್ನ ಸಂದೇಶ ಹೇಳು. ಬೃಹಸ್ಪತ್ಯಾಚಾರ್ಯರಿಂದಲೇ ಯಜ್ಞ ಮಾಡಿಸು, ಇಲ್ಲದಿದ್ದಲ್ಲಿ ನಿನ್ನ ಮೇಲೆ ವಜ್ರಾಯುಧ ಪ್ರಯೋಗಿಸುತ್ತೇನೆ.' ಎಂದು.

ಆದರಂತೆ [೩]ಧೃತರಾಷ್ಟ್ರ ಗಂಧರ್ವನು ಮರುತ್ತನ ಬಳಿ ಹೋಗಿ ಇಂದ್ರನ ಸಂದೇಶ ಹೇಳುತ್ತಾನೆ. ಆಗ ಮರುತ್ತನು 'ಮಿತ್ರದ್ರೋಹ(ಪಾಪ)ಕ್ಕೆ ಪ್ರಾಯಶ್ಚಿತ್ತವಿಲ್ಲವೆಂಬುದು ಲೋಕದಲ್ಲಿ ಎಲ್ಲರಿಗೂ - ಇಂದ್ರ, ವಿಶ್ವೇದೇವತೆಗಳು, ವಸುಗಳು, ಅಶ್ವಿನೀದೇವತೆಗಳಿಗೆ

---

೧ ಯತ್ರ ಶರ್ಯಾತಿಂ ಚ್ಯವನೋ ಯಾಜಯಿಷ್ಯನ್
ಸಹಾಶ್ವಿಭ್ಯಾಂ ಸೋಮಮೇಕೋಽಪ್ಯ ಗೃಹ್ಣಾತ್ ।
ನ ತ್ವಂ ಕ್ರುದ್ಧಃ ಪ್ರತ್ಯಷೇಧೀಃ ಪುರಸ್ತಾತ್ ॥ - ೯/೩೧
ವಜ್ರಂ ಗೃಹೀತ್ವಾ ಚ ಪುರಂದರ ತ್ವಂ
ಸಂಪ್ರಹಾರ್ಷೀಶ್ಚ್ಯವನಸ್ಯಾತಿ ಘೋರಮ್ ।
ಸ ತೇ ವಿಪ್ರಃ ಸ ಹ ವಜ್ರೇಣ ಬಾಹುಂ
ಅಪಾಗೃಹ್ಣಾತ್ ತಪಸಾ ಜಾತಮನ್ಯುಃ ॥ - ೯/೩೨

೨ ಕ್ಷಾತ್ರಾದೇವ ಬ್ರಹ್ಮಬಲಂ ಗರೀಯೋ
ನ ಬ್ರಹ್ಮತಃ ಕಿಂಚಿದನ್ಯತ್ ಗರೀಯಃ ।
ಸೋಽಹಂ ಜಾನನ್ ಬ್ರಹ್ಮತೇಜೋ ಯಥಾವತ್
ನ ಸಂವರ್ತಂ ಗಂತುಮಿಚ್ಛಾಮಿ ಶಕ್ರ ॥ - ೯/೩೭

೩ ಈತ ಗಂಧರ್ವರಾಜ. ಈತನೇ ದ್ವಾಪರದಲ್ಲಿ ಅಂಬಿಕಾ ದೇವಿಯಲ್ಲಿ ವ್ಯಾಸರ ದರ್ಶನ ಮಾತ್ರದಿಂದ ಧೃತರಾಷ್ಟ್ರ ನಾಮಕನಾಗಿಯೇ ಜನಿಸುತ್ತಾನೆ. ಇತನ ಮಕ್ಕಳೇ ನೂರಾಒಂದು ದುರ್ಯೋಧನಾದಿಗಳು ಹಾಗೂ ದುಃಶಲಾ ಎಂಬ ಮಗಳು.

ಗೊತ್ತಿದೆ(ಬೃಹಸ್ಪತಿಗಳು ಯಜ್ಞ ಮಾಡಿಸಲು ಒಪ್ಪದೇ ಮಾಡಿದ ಮಿತ್ರದ್ರೋಹ- ಸಂವರ್ತರ ಮೇಲೆ ಬ್ರಾಹ್ಮಣರ ಮೇಲೆ ಮಾಡುತ್ತಿರುವ ಈಗಿನ ದ್ರೋಹ). ಬೃಹಸ್ಪತಿಗಳು ಇಂದ್ರನಿಗೆ, ನನಗೆ ಸಂವರ್ತರು ಯಜ್ಞ ಮಾಡಿಸಲಿ. ಆದ್ದರಿಂದ ಎಲೈ ಗಂಧರ್ವನೇ! ನನಗೆ ದೇವೇಂದ್ರನ ಅಥವಾ ನಿನ್ನ ಮಾತು ನನಗೆ ಸರಿ ಕಾಣುತ್ತಿಲ್ಲ.' ಅದಕ್ಕೆ ಧೃತರಾಷ್ಟ್ರನು 'ನೋಡು ಹಾಗಾದಲ್ಲಿ ಇಂದ್ರನು ವಜ್ರ ಪ್ರಯೋಗ ಮಾಡುತ್ತಾನೆ. ನಿನ್ನ ಕ್ಷೇಮದ ಬಗ್ಗೆ ಚಿಂತಿಸು ಎಂದ. ಅದೇ ಹೊತ್ತಿಗೆ ಇಂದ್ರನ ಗರ್ಜನೆಯ ಶಬ್ದವನ್ನೂ ಕೇಳಿದ ಮರುತ್ತನು ಸಂವರ್ತರನ್ನು ನಮ್ಮ ಯಜ್ಞದ ಸದಸ್ಯರನ್ನು ಇಂದ್ರನಿಂದ ರಕ್ಷಿಸಿ ಅಭಯದಾನವನ್ನು ಯಾಚಿಸಿದನು.

ಕೂಡಲೇ ಸಂವರ್ತರು 'ರಾಜನ್! ಇಂದ್ರಭಯ ಉಪಶಮನವಾಗಲಿ. ನಾನು '**ಸಂಸ್ತಂಭಿನಿ**' ವಿದ್ಯೆಯಿಂದ ನಿನ್ನ ಭಯ ಪರಿಹರಿಸುತ್ತೇನೆ. ಹೆದರಬೇಡ' ಎಂದರು. ಇಂದ್ರನನ್ನು ಸ್ತಂಭನಗೊಳಿಸುತ್ತೇನೆ. ಎಲ್ಲ ದೇವತೆಗಳ ಆಯುಧಗಳನ್ನೂ ಶಕ್ತಿವಿರಹಿತಗಳನ್ನಾಗಿಸಿದ್ದೇನೆ. ವಜ್ರ ಎಲ್ಲಾ ದಿಕ್ಕುಗಳಿಗೂ ಹೋಗಲಿ. ಇಂದ್ರನೇ ಅರಣ್ಯಗಳಲ್ಲಿ ಮಳೆ ಸುರಿಸಲಿ, ಬೇಕಾದ್ದಾಗಲಿ ಹೆದರಬೇಡ. ಅಗ್ನಿ ನಿಮ್ಮೆಲ್ಲರನ್ನು ರಕ್ಷಿಸಲಿ. ನಿನ್ನ ಅಭಿಲಾಷೆಗಳನ್ನು ಇಂದ್ರ ಮಳೆಯಿಂದ ಸುರಿಸಲಿ. ವಜ್ರಾಯುಧವು ಇಂದ್ರನ ಕೈಯಲ್ಲಿ ಸ್ಥಿರವಾಗಿರಲಿ[೧].

ಅದೇ ಹೊತ್ತಿಗೆ ಭಾರೀ ಗಾಳಿಯೊಡನೆ ಭಯಂಕರವಾದ ವಜ್ರಾಯುಧವು ಮಹಾಶಬ್ದವನ್ನು ಮಾಡುತ್ತಿರುವುದು ಕೇಳಿಸುತ್ತದೆ. 'ಇದನ್ನು ಕೇಳಿದ ನನ್ನ ಮನಸ್ಸು ಖಿನ್ನವಾಗುತ್ತಿದೆ, ನೆಮ್ಮದಿ ಇಲ್ಲ' ಎಂದ ರಾಜನು. 'ಅದರಿಂದ ಭಯ ಪಡಬೇಡ. ನಾನೇ ಗಾಳಿಯಾಗಿ ವಜ್ರಾಯುಧವನ್ನು ನಾಶ ಮಾಡುತ್ತೇನೆ. ಈ ಅಭಯವನ್ನು ಹೊರತು ಬೇರೇನಾದರೂ ವರ ಕೇಳು ಕೊಡುವೆ'[೨] ಎಂದರು ಗುರುಗಳಾದ ಸಂವರ್ತರು.

---

೧ ಭಯಂ ಶಕ್ರಾತ್ ವ್ಯೇತು ತೇ ರಾಜಸಿಂಹ...
ಸಂಸ್ತಂಭಿನ್ಯಾ ವಿದ್ಯಯಾ ವಜ್ರಮೇವ
ಮಾ ಭೈಸ್ತ್ವಮಸ್ಮಾದ್ ಭವ ಚಾಪಿ ಪ್ರತೀತಃ ॥
ಅಹಂ ಸಂಸ್ತಂಭಯಿಷ್ಯಾಮಿ ಮಾ ಭೈಸ್ತ್ವಂ ಶಕ್ರತೋ ನೃಪ ॥
ಸರ್ವೇಷಾಮೇವ ದೇವಾನಾಂ ಕ್ಷಪಿತಾನ್ಯಾಯುಧಾನಿ ಮೇ ॥
ದಿಶೋ ವಜ್ರಂ ವ್ರಜತಾತ್ .... ಮಾ ಭಿಭೇಸ್ತ್ವಮ್ ॥
ಅಥೋ ವಹ್ನಿಸ್ತ್ರಾತು ವಾ ಸರ್ವಶಸ್ತೇ..................
ವಜ್ರಂ ತಥಾ ಸ್ಥಾಪಯಿತಾ........................... ॥ - ೧೦/೧೩-೧೬

೨ ವಜ್ರಾದುಗ್ರಾತ್ ವ್ಯೇತು ಭಯಂ ತವಾದ್ಯ
ವಾ ತೋ ಭೂತ್ವಾ ಹನ್ಮಿ ನರೇಂದ್ರ ವಜ್ರಮ್ ।
ಭಯಂ ತ್ಯಕ್ತ್ವಾ ವರಮನ್ಯಂ ವೃಣೀಷ್ವ
ಕಂ ತೇ ಕಾಮಂ ತಪಸಾ ಯೋಜಯಾಮಿ ॥ - ೧೦/೧೮

ಆಗ ರಾಜನು 'ಗುರುಗಳೇ! ಇಂದ್ರನು ಯಜ್ಞಕ್ಕೆ ಬಂದು ಹವಿಸ್ಸನ್ನು ಸ್ವೀಕರಿಸಲಿ. ದೇವತೆಗಳು ಬಂದು ತಮ್ಮ ಯೋಗ್ಯಸ್ಥಾನಗಳನ್ನು ಅಲಂಕರಿಸಲಿ. ಆಹುತಿ ರೂಪವಾದ ಸೋಮರಸವನ್ನು ಅವರೆಲ್ಲ ಸ್ವೀಕರಿಸಲಿ, ಪಾನ ಮಾಡಲಿ'[೧] ಎಂದು ವರ ಕೇಳಿದನು.

ಮಹಾತಪಸ್ವಿಗಳಾದ ಸಂವರ್ತರು 'ನೋಡು ರಾಜನ್! ಇಂದ್ರನು ಸಪರಿವಾರವಾಗಿ ಸ್ತುತಿಸಿಕೊಳ್ಳುತ್ತಾ ವೇಗದಿಂದ ಕೂಡಿದ ಕುದುರೆಗಳಿಂದ ಕೂಡಿದ ರಥದಲ್ಲಿ ಕುಳಿತು ಬರುತ್ತಿದ್ದಾನೆ. ಆತನು ನಮ್ಮ ಮಂತ್ರದಿಂದ ಭಯಗ್ರಸ್ತನಾಗಿದ್ದಾನೆ.'[೨] ಎಂದರು.

ನಂತರ ಇಂದ್ರನು ಪರಿವಾರಸಮೇತ ಬಂದಾಗ ಸಂವರ್ತರ ನೇತೃತ್ವದಲ್ಲಿ ರಾಜನು ದೇವತೆಗಳನ್ನು ಸ್ವಾಗತಿಸಿ ಸತ್ಕರಿಸಿದನು[೩]. ಸೊಮರಸವನ್ನು ಪಾನ ಮಾಡಲು ಸಂವರ್ತರು ಪ್ರಾರ್ಥಿಸಿದರು. ಮರುತ್ತನೂ ಇಂದ್ರನನ್ನು ನಮಸ್ಕಾರಪೂರ್ವಕವಾಗಿ ಸ್ವಾಗತಿಸಿ ತನ್ನ ಧನ್ಯತೆಯನ್ನು ಯಜ್ಞದ ಸಾಫಲ್ಯತೆಯನ್ನು ನಿವೇದಿಸಿದ[೪]. ಇಂದ್ರನೂ, ಸಂವರ್ತರ ತಪೋಧನತ್ವವನ್ನೂ ಪ್ರಶಂಸಿಸಿದ. ನನ್ನ ಕೋಪ ಶಮನವಾಗಿದೆ. ನಿನ್ನನ್ನು ಪ್ರೀತಿಸುತ್ತೇನೆ ಎಂದ. ಹಾಗಿದ್ದಲ್ಲಿ ಯಜ್ಞದ ಉಳಿದ ಕಾರ್ಯಗಳನ್ನು (ಪರಿವೇಷಣಾದಿಗಳನ್ನು) ನೀನೇ ಮಾಡಿಸು ಎಂದರು ಗುರುಗಳು ಇಂದ್ರನಿಗೆ. ಇಂದ್ರದೇವರು ದೇವತೆಗಳಿಗೆ ಯಜ್ಞಮಂಟಪ, ಅತಿಥಿಗಳಿಗೆ ರಂಗಮಂಟಪ ಮೊದಲಾದವು ಸಿದ್ಧಮಾಡಿ ಎಂದು ಆದೇಶಿಸಿದ. ಕೂಡಲೇ ದೇವತೆಗಳು ಎಲ್ಲವನ್ನೂ ಸಿದ್ಧ ಪಡಿಸಿದರು. ಇಂದ್ರ ಮರುತ್ತನನ್ನು ಸತ್ಕರಿಸಿದ. 'ರಾಜನ್! ಎಲ್ಲರಿಗೂ ಹವಿಸ್ಸನ್ನು ನೀಡು'[೫] ಎಂದ. ಹವಿಸ್ಸಿಗಾಗಿ ಅಗ್ನಿದೇವತಾಕವಾದ ಲೋಹಿತ

---

೧ ಇಂದ್ರಃ ಸಾಕ್ಷಾತ್ ಸಹಸಾಽಭ್ಯೇತು ವಿಪ್ರ
ಹವಿರ್ವಿದ್ವನ್ ಪ್ರತಿಗೃಹ್ಣಾತು ಚೈವ।
ಸ್ವಂ ಸ್ವಂ ಹವಿಶ್ಚೈವ ಜುಷಂ ತು ದೇವಾಃ
ಸುತಂ ಸೋಮಂ ಪ್ರತಿಗೃಹ್ಣಂ ತು ಚೈವ॥ - ೧೦/೧೯

೨ ತತೋ ದೇವೈಃ ಸಹಿತೋ ದೇವರಾಜೋ
ರಥೇ ಯುಕ್ತ್ವಾ ತಾನ್ ಹರೀನ್ ವಾಜಿಮುಖ್ಯಾನ್।
ಆಯಾದ್ಯಜ್ಞಮಥ.... -೧೦/೨

೩ ತಮಾಯಾಂತಂ ಸಹಿತಂ ದೇವಸಂಘೈಃ
ಪ್ರತ್ಯುದ್ಯಯೌ ಸಂಪುರೋಧಾ ಮರುತ್ತಃ।
ಚಕ್ರೇ ಪೂಜಾಂ ದೇವರಾಜಾಯ ಚಾಗ್ರ್ಯಾಂ
ಯಥಾಶಾಸ್ತ್ರಂ ವಿಧಿವತ್ ಪ್ರೀಯಮಾಣಃ॥ - ೧೦/೨೨

೪ ಶಿವೇನ ಮಾಂ ಪಶ್ಯ ನಮಶ್ಚ ತೇಽಸ್ತು
ಪ್ರಾಪ್ತೋ ಯಜ್ಞಃ ಸಫಲಂ ಜೀವಿತಂ ಮೇ॥ - ೧೦/೨೪

೫ ಜಾನಾಮಿ ತೇ ಗುರುಮೇತಂ ತಪೋಧನಂ....
ಯಸ್ಯಾಹ್ವಾನಾದಾಗಂತೋಽಹಂ ನರೇಂದ್ರ

ಜಾತಿಯ ವೃಷಭವನ್ನು, ವಿಶ್ವೇದೇವತೆಗಳಿಗೆ ನೀಲಬಣ್ಣದ ವೃಷಭವು ಆಲಂಭಿಸಲ್ಪಡಲಿ. ಆಲಂಭಿತ ವೃಷಭದ ಮೇಧ್ಯದ ಹವಿಸ್ಸನ್ನು ಕತ್ತರಿಸಿ ನೀಡಲಿ ಎಂದ ಇಂದ್ರ.[೧] ಅದೇ ಪ್ರಕಾರ ಯಜ್ಞ ಮುಂದುವರೆಯಿತು. ದೇವತೆಗಳು ಹವಿಸ್ಸನ್ನು ತಾವೇ ಸ್ವೀಕರಿಸಿದರು. ಇಂದ್ರನು ಯಜ್ಞದ ಸದಸ್ಯನಾದನು. ಆಗ ಸಂವರ್ತನೂ ಅಗ್ನಿಯಂತೆಯೇ ಜ್ವಲಿಸಿದ. ದೇವತೆಗಳನ್ನು ಗಂಭೀರವಾದ, ಉಚ್ಚಧ್ವನಿಯಲ್ಲಿ ಆಹ್ವಾನಿಸಿ, ಅಗ್ನಿಯಲ್ಲಿ ಹವಿಸ್ಸನ್ನು ದಾನ ಮಾಡಿದನು. ನಂತರ ಸೋಮಪಾನಾರ್ಹ ದೇವತೆಗಳು ಸೋಮಪಾನ ಮಾಡಿದರು. ತಮ್ಮ ಲೋಕಗಳಿಗೆ ದೇವತೆಗಳು ಸಂಪ್ರೀತರಾಗಿ ಹಿಂದಿರುಗಿದರು[೨].

ನಂತರ ರಾಜನು ಬ್ರಾಹ್ಮಣರಿಗೆ ಸುವರ್ಣರಾಶಿಯನ್ನೇ ದಾನ ಮಾಡಿದ[೩]. ಮತ್ತೊಬ್ಬ ಕುಬೇರನಂತೆ ಶೋಭಾಯಮಾನವಾಗಿ ಕಂಡನು. ಉಳಿದ ಐಶ್ವರ್ಯವನ್ನು ಭದ್ರವಾಗಿ ಭಾಂಡಾಗಾರದಲ್ಲಿರಿಸಿದ. ನಂತರ ಗುರುಗಳ ಅಪ್ಪಣೆ ಪಡೆದು ರಾಜ್ಯಕ್ಕೆ ಹಿಂದಿರುಗಿ, ಭೂಮಿಯನ್ನು ಧರ್ಮದಿಂದ ಪಾಲಿಸಿದ.

ಭೀಷ್ಮರು ಹೀಗೆ ಧರ್ಮರಾಜನೇ ಅಲ್ಲಿ ಉಳಿದ ಐಶ್ವರ್ಯವನ್ನು ತಂದು ಅಶ್ವಮೇಧ-ಯಾಗ ಮಾಡು ಎಂದಾಗ, ರಾಜನು ಸಂತೋಷದಿಂದ ಒಪ್ಪಿದ, ಮಂತ್ರಿಗಳೊಂದಿಗೆ ವಿಚಾರ ಮಾಡಿದ.

ಧರ್ಮರಾಜ ಅಶ್ವಮೇಧಯಾಗ ಮಾಡಲು ದ್ರವ್ಯ ಸಂಪಾದಿಸಲು ವ್ಯಾಸಾಜ್ಞೆಯಿಂದ ಮರುತ್ತರಾಜ ಇಟ್ಟ ಕೋಶದಿಂದ ದ್ರವ್ಯ ತಂದು ಯಜ್ಞ ಮಾಡಿದನು(ಆ ಭಾಗದ ತಾತ್ಪರ್ಯನಿರ್ಣಯದ ವಚನಗಳು ಮ.ತಾ.ನಿ. ೩೦/೭೨-೮೪).

---

ಪ್ರೀತಿರ್ಮೇಽದ್ಯ ತ್ವಯಿ ಮನ್ಯುಃ ಪ್ರಣಷ್ಟಃ ... । - ೧೦/೨೫
೧ ಯದಿ ಪ್ರೀತಸ್ತ್ವಮಪಿ ವೈ ದೇವರಾಜ....
ತಸ್ಮಾತ್ ಸ್ವಯಂ ಶಾಧಿ ಯಜ್ಞೇ ವಿಧಾನಮ್ ।
ಸ್ವಯಂ ಕುರು ಮಾರ್ಗಾನ್ ಸುರೇಂದ್ರ .... । - ೧೦/೨೬
೨ ತತಃ ಪೀತ್ವಾ ಬಲಭಿತ್ ಸೋಮಮಗ್ರ್ಯಂ
ಯೇ ಚಾಪ್ಯನ್ಯೇ ಸೋಮಪಾ ವೈ ದಿವೌಕಸಃ ।
ಸರ್ವೇಽನುಜ್ಞಾತಾಃ ಪ್ರಯಯುಃ ಪ್ರಾರ್ಥಿವೇನ
ತಥಾ ಜೋಷಂ ತರ್ಪಿತಾಃ ಪ್ರೀಯಮಾಣಾಃ ॥ - ೧೦/೩೪
೩ ತತೋ ರಾಜಾ ಜಾತರೂಪಸ್ಯ ರಾಶಿಂ
ಪದೇ ಪದೇ ಕಾರಯಾಮಾಸ ಹೃಷ್ಟಃ ।
ದ್ವಿಜಾತಿಭ್ಯೋ ವಿಸೃಜನ್ ಭೂರಿವಿತ್ತಂ
ರರಾಜ ವಿತ್ತೇಶ ಇವಾರಿಹಂತಾ ॥ - ೧೦/೩೫
ತತೋ ವಿತ್ತಂ ವಿಧಿವತ್ ಸನ್ನಿಧಾಯ
ಯಥೋತ್ಸಾಹಂ ಕಾರಯಿತ್ವಾ ಚ ಕೋಶಮ್ ॥ - ೧೦/೩೬

## ಸಂದೇಶಗಳು-ವಿವರಣೆಗಳು

೧. ಮರುತ್ತರಾಜನ ಮಹದೈಶ್ವರ್ಯ ಸಂಪಾದನೆಯ ಬಗೆಯನ್ನು ಧರ್ಮರಾಜ ತಿಳಿಯಲು ವ್ಯಾಸರನ್ನು ಪ್ರಾರ್ಥಿಸಿದ್ದು, ಐಶ್ವರ್ಯ ಸಂಪಾದನೆಯ ಮಾರ್ಗವನ್ನು ತಿಳಿಯುವ ಮನೋಭೂಮಿಕೆ ಪ್ರತಿಯೊಬ್ಬ ಸಾಧಕನಿಗೆ ಇರಬೇಕು. ಇಲ್ಲದಿದ್ದರೆ, ಮಹಾಯಜ್ಞದಂತಹ ಕಾರ್ಯಗಳು ಆಗುವುದಿಲ್ಲ. ಎಲ್ಲ ವರ್ಣದವರಿಗೂ ಅವರವರ ಯೋಗ್ಯತಾನುಗುಣ ಧನಸಂಪಾದನೆ, ಸಾತ್ವಿಕಮಾರ್ಗದಲ್ಲಿರಲು ಪ್ರಯತ್ನ ಅವಶ್ಯ.

೨. ಮರುತ್ತನ ವಂಶದ ಹಿಂದಿನವರು ಮಹಾತ್ಮರು. ಕೆಲವರು ಇಂದ್ರಸದೃಶರೂ ಆಗಿದ್ದರು. ಅಂತಹ ವಂಶದಲ್ಲಿ ಬಂದ ಮರುತ್ತನೂ ಹಾಗೆಯೇ ಇದ್ದುದು ಅಚ್ಚರಿಯೇನಲ್ಲ. ಆದರ್ಶಕ್ಷತ್ರಿಯರು ಪ್ರಜಾಪಾಲಕರಾಗಿಯೂ, ಬ್ರಾಹ್ಮಣಪ್ರಿಯರಾಗಿರಬೇಕಾಗುತ್ತದೆ.

೩. ಶಮದಮಸಂಪನ್ನರೂ, ಸತ್ಯವಾದಿಗಳೂ ಆಗಿರಬೇಕು. ಖನಿನೇತ್ರ ರಾಜನು ತಾನು ರಾಜ್ಯದ ಕೋಶ, ಸೈನ್ಯಗಳನ್ನು ಕಳೆದುಕೊಂಡರೂ, ಧರ್ಮನಿತ್ಯನಾದ್ದರಿಂದ ತನ್ನ ಕೈಯನ್ನೇ ಶಂಖವನ್ನಾಗಿ ಮಾಡಿ ಗಟ್ಟಿಯಾಗಿ ಊದಿ ಭಾರಿ ಸೈನ್ಯ ಬಲ ಪಡೆದುದು ದೊಡ್ಡ ಪವಾಡ. ರುದ್ರದೇವರು ತಮ್ಮ ಒಂದು ಕೂದಲಿನಿಂದ ತನ್ನ ಮತ್ತೊಂದು ರೂಪ ಸೃಷ್ಟಿಸಿದರು (ವೀರಭದ್ರರೂಪ). ವಸಿಷ್ಠರು ಕಾಮಧೇನುವಿನಿಂದ ಎಲ್ಲವನ್ನೂ(ಸೈನ್ಯ, ಆಹಾರ, ಭೋಗಸಾಮಗ್ರಿ ಇತ್ಯಾದಿ) ಪಡೆಯುತ್ತಿದ್ದರು. ಈ ರಾಜ ತನ್ನ ಕೈಯಿಂದ ಸೈನ್ಯ ಪಡೆದುದು ಅದೊಂದು ವಿಚಿತ್ರ ತಪಸ್ಸಿನ ಫಲ. 'ಬಾಹ್ವೋಃ ರಾಜನ್ಯಃ ಕೃತಃ'. ಭಗವಂತನ ಬಾಹುಗಳಿಂದ ಕ್ಷತ್ರಿಯರು ಹುಟ್ಟಿದಂತೆ ಈ ರಾಜನ ಬಾಹುಗಳಿಂದ ಸೈನ್ಯ ಪ್ರಾದುರ್ಭವಿಸಿದ್ದು ಭಗವದನುಗ್ರಹದ ಫಲ. ಕಾರಣ ತಪೋಮೂಲವಾದ ಇಂತಹ ಸಾಧನೆಗೆ ಪ್ರತಿಯೊಬ್ಬರೂ ತಪಸ್ಸನ್ನು ಮಾಡಿ ಸಾಧನೆಗೆ ಪ್ರಯತ್ನಿಸಬೇಕು. ಆದ್ದರಿಂದಲೇ ಆತನು **ಕಾರಂಧಮ**ನೆಂದು ಪ್ರಖ್ಯಾತಿ ಹೊಂದಿದ.

೪. ಇಡೀ ವಂಶ ಮೀರಿಸಿದವನು ಮರುತ್ತ ತನ್ನ ಯಜ್ಞಾದಿಗಳಿಂದ. ಇಂದ್ರನನ್ನೇ ಎದುರು ಹಾಕಿಕೊಂಡ ಮಹಾಸಾಧಕ. ಇಂದ್ರ ತನ್ನ ಪ್ರತಿಸ್ಪರ್ಧಿ ಎಂದೇ ಭಾವಿಸಿದ್ದ. ಆದರೆ ಆತನ ಸಾಹಸಗಳು ಹಾಗಿದ್ದವು. ಯಜ್ಞಗಳೆಲ್ಲ ಸುವರ್ಣಮಯವಾಗಿದ್ದವು.

೫. ಅಣ್ಣ ಬೃಹಸ್ಪತಿಯ ಪೀಡೆ ತಾಳದೆ ಸಂವರ್ತ ಭೂಲೋಕಕ್ಕೆ ಬಂದು ವಾರಾಣಸಿಯಲ್ಲಿ ಅವಧೂತ ಚರ್ಯೆಯಲ್ಲಿದ್ದ ಮಹಾತಪಸ್ವಿ, ತಪೋಧನ. ಅಣ್ಣನೇ ತಮ್ಮನ ಶೋಷಣೆ ಮಾಡಿದ ಉದಾಹರಣೆ ಇದು. ತಮ್ಮ ಅದನ್ನು ಸಾತ್ವಿಕವಾಗಿಯೇ ಸ್ವೀಕರಿಸಿದ. ಮರುತ್ತನು ಯಜ್ಞಕ್ಕೆ ಆಹ್ವಾನಿಸಿದಾಗಲೂ ಅಣ್ಣನ ಬಗ್ಗೆ ಗೌರವದಿಂದಲೇ ವರ್ತಿಸಿದ. ಅಣ್ಣನಂತೆ ದ್ವೇಷಸಾಧಿಸಲಿಲ್ಲ. ಸಂವರ್ತನಂತೆ ಇರಬೇಕು ಸಾಧನೆಯಲ್ಲಿ.

೬. ಸ್ವಾರ್ಥಕ್ಕಾಗಿ ಬೃಹಸ್ಪತ್ಯಾಚಾರ್ಯರು ಇಂದ್ರನನ್ನೂ ಮರುತ್ತನಿಗೆ ಅಸಹಕಾರ, ಸಂವರ್ತನನ್ನು ದೂರವಾಗಿರಿಸಲು ಸೂಚಿಸಿ ತಮ್ಮ ಅಸೂಯೆಯನ್ನು ತೋರಿಸುತ್ತಾರೆ. ಅಸೂಯೆ ದೇವಗುರುಗಳನ್ನೂ ಬಿಡಲಿಲ್ಲ. ದೇವೇಂದ್ರನೂ ತನ್ನ ಪ್ರತಿಸ್ಪರ್ಧಿಯೆಂದು ಮರುತ್ತನನ್ನು ಭಾವಿಸಿ ಗುರುಗಳು ಹೇಳಿದಂತೆಯೇ ವರ್ತಿಸಿ ವಿಫಲನಾದ. ರಾಗದ್ವೇಷ, ಅಸೂಯೆಗಳು ದೇವತೆಗಳನ್ನು ಬಿಡವು ಎನ್ನಲು ಇಂದ್ರ ಬೃಹಸ್ಪತಿಗಳೇ ಸಾಕ್ಷಿ.

೭. ಮರುತ್ತ ಒಮ್ಮೆ ಸಂವರ್ತಕರಿಗೆ ಮಾತು ಕೊಟ್ಟುದುದನ್ನು ಉಳಿಸಿಕೊಂಡ. ಸಂವರ್ತರೂ ತಮ್ಮ ತಪೋಧಾರೆಯೆರೆದು ಮರುತ್ತನನ್ನು ರಕ್ಷಿಸಿದರು. ಶಿಷ್ಯವಾತ್ಸಲ್ಯ ಎಂದರೆ ಹೀಗಿರಬೇಕು.

೮. ಮರುತ್ತಗೆ ಒಂದೆಡೆ ಇಂದ್ರಾದಿಗಳಲ್ಲಿ ದೇವಗುರುಗಳಲ್ಲಿ ಭಕ್ತಿ, ಅವರೊಂದಿಗೆ ಇಂದ್ರನಂತೆ ವಿರೋಧ ಬೆಳೆಸಲಿಲ್ಲ. ಅವರನ್ನು ಭಕ್ತಿಯಿಂದ ಬರಮಾಡಿಕೊಂಡು ಆರಾಧಿಸಿ ಅವರ ಅನುಗ್ರಹ ಸಂಪಾದಿಸಿ ಉದ್ಧೃತನಾದ. ಅದಕ್ಕೆ ಸಹಾಯಹಸ್ತ ನೀಡಿದವರು ಸಂವರ್ತ ಗುರುಗಳು. ಇದೇ ನಿಜವಾದ ಸಾಧನೆ. ಕಾರಣ ವೇದೋಕ್ತ ಧರ್ಮಗಳು ಕ್ಷತ್ರಿಯರಿಗೆ ಯಜನ ದಾನಾದಿಗಳು. ಅದಕ್ಕೆ ದೇವತೆಗಳು ಅನುಗ್ರಹಿಸಲುಬೇಕು. ಆದ್ದರಿಂದ ಇಲ್ಲಿ ಇಂದ್ರ ಹಾಗೂ ಸಂವರ್ತ-ಮರುತ್ತರಾಜ ಎಲ್ಲರೂ ಆದರ್ಶವಾಗಿಯೇ ಇದ್ದಾರೆ.

೯. ಸಂವರ್ತರಂತಹ ಬ್ರಾಹ್ಮಣರ ತಪಸ್ಸಿನ ಮುಂದೆ ಇಂದ್ರನ ಬಲ ಪ್ರಯೋಗ ವಿಫಲವಾಯಿತು. ಕಾರಣ ಬ್ರಹ್ಮಬಲದ ಮುಂದೆ ಇತರ ಬಲಗಳು ಅಪ್ರಯೋಜಕ. **'ಧಿಗ್ಬಲಂ ಕ್ಷತ್ರಿಯಬಲಂ ಬ್ರಹ್ಮತೇಜೋ ಬಲಂ ಬಲಂ.**

**ಈ ಸಂದೇಶಗಳಲ್ಲಿ ತಪ್ಪಿದ್ದಲ್ಲಿ ವಿದ್ವಾಂಸರು ಸರಿಯಾದ ಮಾಹಿತಿಗಳನ್ನು ನೀಡಲು ಕೋರಲಾಗಿದೆ.**

# ೧೫೬. ಶ್ರೀಕೃಷ್ಣ ಬಣ್ಣಿಸಿದ ಇಂದ್ರ-ವೃತ್ರಾಸುರ ಯುದ್ಧ

ಕುರುಕ್ಷೇತ್ರ ಯುದ್ಧದಲ್ಲಿ ಹತರಾದ ಬಂಧುಬಾಂಧವರಿಗಾಗಿ ದುಃಖಿತನಾದ ಧರ್ಮರಾಜನಿಗೆ ವ್ಯಾಸರು ಹಾಗೂ ಶ್ರೀಕೃಷ್ಣನು ಆತನನ್ನು ಸಮಾಧಾನ ಪಡಿಸಿ, ಅಶ್ವಮೇಧಯಾಗಮಾಡಿ ಪಾಪ ಕಳೆದುಕೊಳ್ಳಲು ತಿಳಿಸಿದರು. ಯಾಗಕ್ಕೆ ಬೇಕಾದ ದ್ರವ್ಯವನ್ನು ಮರುತ್ತರಾಜನು ಯಜ್ಞಮಾಡಿ, ಅಲ್ಲಿ ಬ್ರಾಹ್ಮಣರು ಬಿಟ್ಟುಹೋದ ಹೇರಳ ಸುವರ್ಣವನ್ನು ಹೊತ್ತು ತರಲು ತಿಳಿಸಿದರು. ಧರ್ಮರಾಜ ಒಪ್ಪಿದ. ವ್ಯಾಸರು ಉಪದೇಶಿಸಿದರೂ ಧರ್ಮರಾಜನ ಮನಸ್ಸು ರಾಹುಗ್ರಸ್ತ ಸೂರ್ಯನಂತೆ, ಧೂಮಗ್ರಸ್ತ ಅಗ್ನಿಯಂತೆಯೇ ಕಾಂತಿಹೀನವಾಗಿಯೂ ದೀನಮನಸ್ಕವಾಗಿಯೂ ಇದ್ದಿತು. ಆಗ ಕೃಷ್ಣನು ಮತ್ತೆ ಸಮಾಧಾನದ ಮಾತುಗಳನ್ನು ಹೇಳಲು ಆರಂಭಿಸಿದನು[೧].

ಧರ್ಮರಾಜನೇ! ನಾರಾಯಣನ ಸದನಗಳು ಮೂರು – ವೈಕುಂಠ, ಅನಂತಾಸನ ಹಾಗೂ ಶ್ವೇತದ್ವೀಪಗಳು. ಇಲ್ಲಿಗೆ ಹೋದವರು ಮತ್ತೆ ಬಾರರು. ಉಳಿದ ಸತ್ಯಲೋಕಪರ್ಯಂತದ ಲೋಕಗಳು ಮರ್ತ್ಯಲೋಕಗಳೇ(ಹೋದವರು ಮತ್ತೆ ವಾಪಸು ಬರುತ್ತಾರೆ). ಆದ್ದರಿಂದ ಮರಣ ಹೊಂದಿದವರ ಬಗ್ಗೆ ದುಃಖಿಸಬೇಡ. ಕಾರಣ ಅವರೆಲ್ಲ ಅನಿತ್ಯಲೋಕದಲ್ಲಿದ್ದವರೇ. 'ಸರ್ವಂ ಜಿಹ್ಮಂ ಮೃತ್ಯುಪದಂ ಅಮೃತಂ ಬ್ರಹ್ಮಣಃ ಪದಮ್ ॥' ೧೧/೪.

'ಆ ಬ್ರಹ್ಮ ಭುವನಾಲ್ಲೋಕಾಃ ಪುನರಾವರ್ತಿನೋಽರ್ಜುನ। ಈ ಶ್ಲೋಕದ ಭಾವ ಇಲ್ಲಿದೆ (ಗೀತಾ- ೮/೧೬).

ನೀನಿನ್ನು ಮಾಡಬೇಕಾದ ಕರ್ತವ್ಯಗಳನ್ನು ಪೂರ್ತಿ ಮಾಡಿಲ್ಲ. ಶತ್ರುಗಳನ್ನೂ ಗೆದ್ದಿಲ್ಲ. ಆ ಶತ್ರು ನಿನ್ನಲ್ಲಿಯೇ ಇದ್ದಾನೆ. ಅವನನ್ನು ತಿಳಿದಿಲ್ಲ. ಬರೀ ಬಾಹ್ಯಶತ್ರುಗಳ ಜಯ ಮುಖ್ಯವಲ್ಲ. ಅಂತಃಶತ್ರು ಜಯವೂ ಅವಶ್ಯ. 'ಕಥಂ ಶತ್ರುಂ ಶರೀರಸ್ಥಂ ಆತ್ಮನೋ ನಾವಬುಧ್ಯಸೇ ॥ (೧೧/೫) ಇದಕ್ಕಾಗಿ ನಿನಗೆ ಇಂದ್ರವೃತ್ರಾಸುರ ಯುದ್ಧದ ವಾರ್ತೆಯನ್ನು ಹೇಳುತ್ತೇನೆ.

---

೧ ತಂ ನೃಪಂ ದೀನಮನಸಂ ನಿಹತಜ್ಞಾತಿಬಾಂಧವಮ್ ।
ಉಪಪ್ಲುತಮಿವಾದಿತ್ಯಂ ಸಧೂಮಮಿವ ಪಾವಕಮ್ ॥
ವಿಷಣ್ಣಮನಸಂ ಪಾರ್ಥಂ ಜ್ಞಾತ್ವಾ ವೃಷ್ಣಿಕುಲೋದ್ವಹಃ ।
ಆಶ್ವಾಸಯನ್ ಧರ್ಮಸುತಂ ಪ್ರವಕ್ತುಮುಪಚಕ್ರಮೇ ॥ – ೧೧/೨,೩

ಬೃಹಸ್ಪತ್ಯಾಚಾರ್ಯರ ಬದಲಾಗಿ ಒಂದು ಸಂದರ್ಭದಲ್ಲಿ ತ್ವಷ್ಟುವಿನ ಮಗನಾದ ವಿಶ್ವರೂಪಾಚಾರ್ಯನನ್ನು ಪುರೋಹಿತರನ್ನಾಗಿ ವರಿಸಿದ. ಇಂದ್ರನು ಅವರನ್ನು ಕಾರಣಾಂತರದಿಂದ ಸಂಹಾರ ಮಾಡಿದ. ಅದರಿಂದ ಕೃದ್ಧನಾದ ತ್ವಷ್ಟುಪ್ರಜಾಪತಿ ಇಂದ್ರಸಂಹಾರಕನಾದ, ವೃತ್ರನನ್ನು ಸೃಷ್ಟಿಸಿದ ಮತ್ತೊಂದು ಯಜ್ಞದಿಂದ. ಆಗ ಅನ್ವಾಹಾರ್ಯ ಅಗ್ನಿಯಿಂದ ಉದಿಸಿದ ವೃತ್ರ ಸಮಗ್ರ ಭೂಮಿಯನ್ನು ವ್ಯಾಪಿಸಿ ಭೂಮಿಯ ಗುಣಧರ್ಮವಾದ ಗಂಧವನ್ನೂ ಅಪಹರಿಸಲು ಅದು ನಿರ್ಗಂಧವಾಯಿತು. ಆಗ ಇಂದ್ರನು ವೃತ್ರನ ಮೇಲೆ ವಜ್ರಾಯುಧ ಪ್ರಯೋಗಿಸಲು ಅದರಿಂದ ಹೊಡೆಯಲ್ಪಟ್ಟವನಾಗಿ ನೀರಿನಲ್ಲಿ ಪ್ರವೇಶಿಸಿದ. ಅದರ ವಿಷಯವಾದ ರಸವನ್ನು ಅಪಹರಿಸಿದ. ಮತ್ತೆ ಇಂದ್ರ ವಜ್ರಾಯುಧದಿಂದ ವೃತ್ರನನ್ನು ಹೊಡೆಯಲು ವೃತ್ರ ತೇಜಸ್ಸನ್ನು ವ್ಯಾಪಿಸಿದ ಅದರ ಗುಣವಾದ ರೂಪವನ್ನು ಹೊಕ್ಕ. ಅಗ್ನಿ ರೂಪರಹಿತವಾಯಿತು. ನಂತರ ವಾಯು ಹಾಗು ಆಕಾಶಗಳನ್ನು ಪ್ರವೇಶಿಸಿದಾಗಲೂ ಇಂದ್ರನಿಂದ ಹೊಡೆಯಲ್ಪಟ್ಟ ವೃತ್ರ ಅವುಗಳ ಸ್ಪರ್ಶ ಹಾಗೂ ಶಬ್ದಧರ್ಮಗಳನ್ನು ಅಪಹರಿಸಿ ಅವನ್ನೂ ನಿರ್ಧರ್ಮಕಗಳನ್ನಾಗಿ ಮಾಡಿದ. ಶಬ್ದದ ವಿಷಯವಾದ ಜ್ಞಾನವೇ ಜಗತ್ತಿನಲ್ಲಿ ಕಾಣದಾಯಿತು.

ನಂತರ ನಿರುಪಾಯನಾದ ವೃತ್ರನು ಇಂದ್ರನನ್ನೇ ಪ್ರವೇಶಿಸಿ, ಅವನ ಸತ್ವವನ್ನೇ ಅಪಹರಿಸಲು ಇಂದ್ರನೂ ಮೋಹಗ್ರಸ್ತನಾದ. ಆಗ ವಸಿಷ್ಠರು ರಥಂತರಸಾಮದ ಮೂಲಕ ಇಂದ್ರನನ್ನು ಆವರಿಸಿದ ಮೋಹವನ್ನು ಪರಿಹರಿಸಿ ಅವನನ್ನು ಮೊದಲಿನಂತೆ ತೇಜಸ್ವಿಯನ್ನಾಗಿ ಮಾಡಿದರು. ನಂತರ ಇಂದ್ರನು ತನ್ನಲ್ಲಿದ್ದ (ಶರೀರಸ್ಥನಾದ) ವೃತ್ರಾಸುರನನ್ನು ವಜ್ರಾಯುಧದಿಂದ ಸಂಹರಿಸಿದನೆಂದು ನಾವು ಕೇಳಿದ್ದೇವೆ. ಆದ್ದರಿಂದ ನೀನೂ ನಿನ್ನಲ್ಲಿರುವ ಈ ಮೋಹವನ್ನು (ಬಂಧು ಹನನದಿಂದ ಪಾಪಿಯಾದೆನೆಂಬ ಮೋಹವನ್ನು) ಜ್ಞಾನಾಸಿಯಿಂದ (ಜ್ಞಾನವೆಂಬ ಖಡ್ಗದಿಂದ) ಹಾಗೂ ಅಶ್ವಮೇಧಯಾಗದಿಂದ ಪತಿಹರಿಸಿಕೊ ಎಂದು ಕೃಷ್ಣ ಧರ್ಮರಾಜನಿಗೆ ಹೇಳಿದನು[೧].

---

೧ ವೃತ್ರೇಣ ಪೃಥಿವೀ ವ್ಯಾಪ್ತಾ...... ।
ಧರಾಹರಣನಿರ್ಗಂಧೋ ವಿಷಯಃ ಸಮಪದ್ಯತ ॥.....
ಆಕಾಶಮಭಿದುದ್ರಾವ ತಂ ಶಕ್ರಂ ವಿಷಯಂ ತತಃ ।
...... ಶಬ್ದಸ್ಯ ವಿಷಯೇ ಹೃತೇ ।
ಸ ವಧ್ಯಮಾನೋ ವಜ್ರೇಣ.....
ವಿವೇಶ ಸಹಸಾ ಶಕ್ರಂ ಜಗ್ರಾಹ ವಿಷಯಂ ತತಃ ।
ತಸ್ಯ ವೃತ್ರ ಗೃಹೀತಸ್ಯ ಮೋಹಃ ಸಮಭವನ್ಮಹಾನ್ ।
ರಥಂತರೇಣ ತಂ ಸಾಮ್ನಾ ವಸಿಷ್ಠಃ ಪ್ರತ್ಯಬೋಧಯತ್ ।
ತತೋ ವೃತ್ರಂ ಶರೀರಸ್ಥಂ ಜಗ್ರಾಹ ....
ಶತಕ್ರತುರದೃಶ್ಯೇನ ವಜ್ರೇಣೇತೀಹ ನಃ ಶ್ರುತಮ್ ।

ವಿಶ್ವರೂಪಾಚಾರ್ಯರ ಸಂಹಾರದಿಂದ ತನಗೆ ಬ್ರಹ್ಮಹತ್ಯಾ ದೋಷ ಬಂತೆಂಬ ಆತಂಕ-ದಿಂದ ಇಂದ್ರದೇವರು ವೃತ್ರಾಸುರನನ್ನು ಸಂಹಾರ ಮಾಡುವ ಪ್ರಸಂಗ ಬಂತು. ಅದನ್ನೂ ಅವರು ವಜ್ರಾಯುಧವನ್ನು ಪ್ರಯೋಗಿಸಿ ಪರಿಹರಿಸಿಕೊಂಡರೆಂದು ಈ ವೃತ್ತಾಂತದಿಂದ ತಿಳಿಯುತ್ತದೆ. ವೃತ್ರಾಸುರ ಇಡೀ ವಿಶ್ವವನ್ನೇ ವ್ಯಾಪಿಸಿದ. ಅವನನ್ನು ಹೊರಗೆ ಹಾಗೂ ಒಳಗೆ ಇಂದ್ರನನ್ನೂ ಪ್ರವೇಶಿಸಿದಾಗಲೂ ವಸಿಷ್ಠರ ಅನುಗ್ರಹದಿಂದ ಸಂಹರಿಸಿ ಪರಿಹಾರ ಕಂಡುಕೊಂಡ. ವಸಿಷ್ಠರು **'ರಥಂತರ'** ಎಂಬ ಸಾಮವೇದ ವಿದ್ಯೆಯಿಂದ ಇಂದ್ರನನ್ನೂ ಕಾಪಾಡುತ್ತಾರೆ.

ಈ ವಿದ್ಯೆಯು ಛಾಂದೋಗ್ಯ ಉಪನಿಷತ್ತಿನ ೨ನೇ ಅಧ್ಯಾಯದ ೧೨ನೇ ಖಂಡದಲ್ಲಿ ಬಂದಿದೆ. ಅಗ್ನಿಯಲ್ಲಿರುವ ವಿಷ್ಣುವನ್ನು ಆಶ್ರಯಿಸಿದ ರಥಂತರಸಾಮವು ಅಗ್ನಿಸ್ಥ ವಿಷ್ಣುವಾಚಕ ಮತ್ತು ವಿಷ್ಣುವಿನಿಂದ ನಿಯಮ್ಯ[೧].

ಬ್ರಹ್ಮಹತ್ಯಾದಿ ದೋಷ ಪರಿಹಾರಕವಾದುದು ಈ ವಿದ್ಯೆ ಎಂಬುದೇ ಇಲ್ಲಿಯ ಸಂದೇಶ. ಆದ್ದರಿಂದಲೇ ಕೃಷ್ಣನು **'ಇದಂ ಧರ್ಮರಹಸ್ಯಂ ತು'** ಎಂದು ಈ ವೃತ್ತಾಂತವನ್ನು ಇಂದ್ರದೇವರೇ ಹೇಳಿದ್ದಾರೆ.

ಕೃಷ್ಣನು ತನಗೇನೂ ಗೊತ್ತಿಲ್ಲದವನಂತೆ ಈ ವೃತ್ತಾಂತವನ್ನು ಹೇಳಿ ಧರ್ಮರಾಜನನ್ನು ಎಚ್ಚರಿಸುತ್ತಾನೆ. ಕಾರಣ ಧರ್ಮರಾಜನು ಕೃಷ್ಣನಿಂದ ಉಪದೇಶ ಹೊಂದಲು ಸಾಕ್ಷಾತ್ ಅ ಕಾರಿಯಲ್ಲ. ಹೀಗೆ ಈ ವಿಷಯವನ್ನು ಊಹಿಸಬಹುದು ಎಂದು ತೋರುತ್ತದೆ.

ರಥಂತರಸಾಮಪ್ರತಿಪಾದ್ಯ ಭಗವದುಪಾಸನೆ ಹೇಗೆ?

೧. ಭಗವಂತನನ್ನು ಉಪಾಸಿಸಬೇಕಾದ ಅಧಿಷ್ಠಾನ (ಸ್ಥಳ) – ಅಗ್ನಿ

೨. ಹೇಗೆ ? – ಹಿಂಕಾರಾದಿ ಸಾಮದಿಂದ

೩. ಎಲ್ಲಿ – ಯಾರನ್ನು ಚಿಂತಿಸಬೇಕು?

---

ಇದಂ ಧರ್ಮರಹಸ್ಯಂ ತು ಶಕ್ರೇಣೋಕ್ತಂ ಮಹರ್ಷಿಷು ।
ಋಷಿಭಿಶ್ಚ ಮಮ ಪ್ರೋಕ್ತಂ ತನ್ನಿಬೋಧ ನರಾಧಿಪ ॥ – ೧೧/೬-೨೧

೧ ಅಭಿಮಂಥತಿ ಸ ಹಿಂಕಾರಃ.... ಏತದ್ ರಥಂತರ ಮಗ್ನೌ ಪ್ರೋತಮ್ ।
...... ವೇದ ಬ್ರಹ್ಮವರ್ಚಸ್ವೀ ಅನ್ನಾದೋ ಭವತಿ ।
ಸರ್ವಮಾಯುರೇತಿ..... ತದ್ ವ್ರತಂ । – ಛಾಂದೋಗ್ಯೋಪನಿಷತ್. ೨/೧೨
ಮಂಥನಾದಿ ಸ್ಥಿತಂ ಯಸ್ತು ತನ್ನಾಮಾನಂ ಹರಿಂ ಪರಮ್ ।
ತತ್ತತ್ ಕ್ರಿಯೈಕ ಹೇತುತ್ವಾತ್ ಯೋಽಗ್ನೌ ಧ್ಯಾಯೇಜ್ಜನಾರ್ದನಮ್ ।
ರಥಂತರಾಶ್ರಯಂ ಪಂಚರೂಪಂ ಸ ಚ ವಿಮುಚ್ಯತೇ ॥ – ಛಾಂ.ಭಾ.(೨/೧೨)

| ಸಂ | ಎಲ್ಲಿ | ಯಾರನ್ನು ಚಿಂತಿಸಬೇಕು |
|---|---|---|
| ಅ | ಅರಣಿಮಥನದಲ್ಲಿ (ಇಂಧನ ಸಾಮಗ್ರಿ) | ಹಿಂಕಾರಾದಿ ಪ್ರತಿಪಾದ್ಯ ಪ್ರದ್ಯುಮ್ನ |
| ಆ | ಹೊಗೆಯಲ್ಲಿ | ಪ್ರಸ್ತಾವ ಪ್ರತಿಪಾದ್ಯ ವಾಸುದೇವ |
| ಇ | ಜ್ವಾಲೆಯಲ್ಲಿ | ಉದ್ಗೀಥಪ್ರತಿಪಾದ್ಯ ನಾರಾಯಣ |
| ಈ | ಕೆಂಡದಲ್ಲಿ | ಪ್ರತಿಹಾರಪ್ರತಿಪಾದ್ಯ ಅನಿರುದ್ಧ |
| ಉ | ಬೆಂಕಿ ಸ್ವಲ್ಪ ಆರಿದಾಗ | ನಿಧನಪ್ರತಿಪಾದ್ಯ ಸಂಕರ್ಷಣ |
| ಊ | ಬೆಂಕಿ ಪೂರ್ಣ ಆರಿದಾಗ | ನಿಧನಪ್ರತಿಪಾದ್ಯ ಸಂಕರ್ಷಣ |

**ತೇ ಪಿಬಂತಃ ಕಷಾಯಾಂಶ್ಚ ಸರ್ಪಿಂಷಿ ವಿವಿಧಾನಿ ಚ।**
**ನ ಮೃತ್ಯುಮತಿವರ್ತಂತೇ ವೇಲಾಮಿವ ಮಹೋದಧಿಃ ॥**
**ರಸಾಯನವಿದಶ್ಚೈವ ಸುಪ್ರಯುಕ್ತರಸಾಯನಾಃ।**

೪. ಉಪಾಸನಾಫಲ – ಮುಕ್ತಿಯಲ್ಲಿ ಮಹಾತೇಜಸ್ವಿಯಾಗುತ್ತಾನೆ. ಯಥೇಷ್ಟ ಯೋಗ್ಯ, ಅನ್ನವುಳ್ಳವನಾಗುತ್ತಾನೆ. ನಿತ್ಯವಾದ ಪೂರ್ಣಾಯುಷ್ಯ ಯೋಗ್ಯತೆಗೆ ತಕ್ಕಂತೆ ಸಾರ್ವಜ್ಞ್ಯ ಬರುತ್ತದೆ. ಐಹಿಕ ಫಲ, ಅಪರೋಕ್ಷಜ್ಞಾನ, ವೇದಶಾಸ್ತ್ರ ಜ್ಞಾನ ಸಂಪತ್ತು, ಐಹಿಕ ಪ್ರಜಾಪಶು ಸಮೃದ್ಧಿ ಕೀರ್ತಿ.

೫. ನಿಷಿದ್ಧ ಆಚರಣೆಗಳು – ಅಗ್ನಿಗೆ ಎದುರಾಗಿ ಭೋಜನ ಮಾಡಬಾರದು. ಮತ್ತು ಕಫ ಉಗುಳುವುದನ್ನು ಮಾಡಕೂಡದು.

ಇವೆರಡೂ ವ್ರತದಂತೆ ತಪ್ಪದೆ ಆಚರಿಸಬೇಕು. ವಸಿಷ್ಠರು ಈ ಉಪಾಸನೆ ಮಾಡಿ, ವೃತ್ರಗ್ರಸ್ತ ಇಂದ್ರನನ್ನು ಆತನ ಮೋಹ ಬಿಡಿಸಿದರು. ನಂತರ ವೃತ್ರಸಂಹಾರ ಸಾಧ್ಯವಾಯಿತು ಇಂದ್ರನಿಗೆ.

ಹೆಚ್ಚಿನ ವಿವರಗಳಿಗೆ ಛಾಂದೋಗ್ಯೋಪನಿಷತ್ ಭಾಷ್ಯ – ಶ್ರೀವೇದೇಶತೀರ್ಥರ ಟೀಕಾ, ಶ್ರೀರಾಘವೇಂದ್ರತೀರ್ಥರ ಖಂಡಾರ್ಥ ನೋಡಿರಿ.

*****

# ೧೫೭. ಉದಂಕೋಪಾಖ್ಯಾನ

ಅರ್ಜುನನಿಗೆ ಅನುಗೀತೆಯ ಉಪದೇಶದ ನಂತರ ಶ್ರೀಕೃಷ್ಣನು ದ್ವಾರಕೆಗೆ ಹೋಗಲು ಅಣಿಯಾಗುತ್ತಾನೆ. ಪಾಂಡವರು ಕೃಷ್ಣನನ್ನು ಆಲಿಂಗಿಸಿ ಬೀಳ್ಕೊಡುತ್ತಾರೆ. ಅರ್ಜುನನು ವಿಶೇಷವಾಗಿ ಕಣ್ಣುಗಳು ಕಾಣುವವರೆಗೆ ಕೃಷ್ಣನನ್ನು ನೋಡುತ್ತಾ ಇದ್ದನು. ಶ್ರೀಕೃಷ್ಣನು ದ್ವಾರಕೆಗೆ ಹೋಗುವಾಗ ಕೃಷ್ಣನ ರಥ ವೇಗವಾಗಿ ಸುಸೂತ್ರವಾಗಿ ಹೋಗಲು ವಾಯುದೇವರು ಮಾರ್ಗವನ್ನು ಕಲ್ಲು ಧೂಳುಗಳನ್ನು ತಮ್ಮ ವೇಗದ ಚಲನೆಯಿಂದ ಗುಡಿಸಿದರಂತೆ. ಇಂದ್ರನು ಸುಗಂಧಯುಕ್ತ ಮಳೆ ಸುರಿಸಿ ಪುಷ್ಪಗಳನ್ನು ಸುರಿಸಿದನಂತೆ. ದಾರಿಯಲ್ಲಿ ಮರುಭೂಮಿ ಬಂತು. ಅಲ್ಲಿ (ಸಮಾಧಿಯಿಂದ ಎದ್ದ) ಉದಂಕಮಹರ್ಷಿಯನ್ನು ಕಮಲಲೋಚನನಾದ ಶ್ರೀಕೃಷ್ಣನು ಯೋಗ್ಯವಾಗಿ ಪೂಜಿಸಿದನು. ಆ ಸಿದ್ಧಮುನಿ ಉದಂಕರೂ ಕೃಷ್ಣನನ್ನು ಗೌರವಿಸಿದರು. ಶ್ರೀಕೃಷ್ಣನು ಋಷಿಗಳ ಯೋಗಕ್ಷೇಮ ವಿಚಾರಿಸಿದ.

ಉದಂಕರು ಶ್ರೀಕೃಷ್ಣನು ದ್ವಾರಕೆಗೆ ಹೋಗುತ್ತಿರುವ ಮೊದಲು ಕೃಷ್ಣನನ್ನು 'ಕುರು ಪಾಂಡವರಿಗೆ ಉಪದೇಶಿಸಿದೆಯಾ? ಪಾಂಡವ ಕೌರವರಲ್ಲಿ ಸಂಧಾನವಾಯಿತೇ? ರಾಜರೆಲ್ಲರೂ ಸುಖದಿಂದ ಇದ್ದಾರಷ್ಟೇ?' ಎಂದು ಕೇಳಲು, ಶ್ರೀಕೃಷ್ಣನು 'ತಾನು ಸಂಧಾನ ಮಾಡಲು ಪ್ರಯತ್ನಿಸಿದರೂ ಕೌರವರು ಒಪ್ಪದಿದ್ದರಿಂದ, ಪಾಂಡವರಿಂದ ಅವರೆಲ್ಲ ಪುತ್ರಮಿತ್ರಬಾಂಧವ ಸಮೇತರಾಗಿ ಹತರಾದರು' ಎಂದನು. ಉದಂಕರೇ ವಿಧಿಬರಹವನ್ನು ಯಾರೂ ಮೀರರು. ಜ್ಞಾನಿಗಳಾದ ನಿಮಗೆ ಗೊತ್ತಿರುವ ವಿಷಯವೇ ಇದು. ಕೌರವರು ಭೀಷ್ಮ ವಿದುರ ಹಾಗೂ ನನ್ನ ಮಾತುಗಳನ್ನು ತಿರಸ್ಕರಿಸಿ, ಪರಸ್ಪರ ಹೊಡೆದಾಡಿ ಯಮಸದನಕ್ಕೆ ಹೋದರು. ಉಳಿದವರು ಪಂಚಪಾಂಡವರು ಮಾತ್ರ. ಈ ಮಾತನ್ನು ಕೇಳುತ್ತಲೇ ಉದಂಕರು ಕೆರಳಿದ ಕಣ್ಣಿನಿಂದ ಕೃಷ್ಣನನ್ನು ಕುರಿತು 'ಕೃಷ್ಣ ನೀನು ಅವರ ಹನನವನ್ನು ತಡೆಯಲು ಸಮರ್ಥನಿದ್ದೆ. ಆದರೂ ಆ ಸಂಬಂಧಿಗಳು ಕುರು–ಪಾಂಡವರು ಹತರಾದರು. ಅವರನ್ನು ನೀನು ರಕ್ಷಿಸಲಿಲ್ಲ. ಆದ್ದರಿಂದ ನಿನಗೆ ಶಾಪ ಕೊಡುವೆ'[೧] ಎಂದರು. ಆಗ ಕೃಷ್ಣನು 'ಉದಂಕರೇ ನೀವು ಮಹಾತಾಪಸರು. ಸಿಟ್ಟಾಗಬೇಡಿರಿ. ನನ್ನಿಂದ ಅಧ್ಯಾತ್ಮಗೀತೆಯನ್ನು ಕೇಳಿದ ನೀವು ಶಾಪ ಕೊಡುವುದು ಯೋಗ್ಯವಲ್ಲ. ಅಲ್ಪ ತಪಸ್ಸಿನ ನೀನು ಶಪಿಸಲಾರೆ. ನಿನ್ನ ತಪಸ್ಸು ನಾಶವಾಗುವುದನ್ನು ನಾನು ಬಯಸೆನು. ಗುರುಗಳನ್ನೂ ಸಂತೋಷ ಗೊಳಿಸಿರುವಿರಿ,

---

೧ ಯಸ್ಮಾತ್ ಶಕ್ತೇನ ತೇ ಕೃಷ್ಣ ನ ತ್ರಾತಾಃ ಕುರುಪಾಂಡವಾಃ।
ಸಂಬಂಧಿನಃ ಪ್ರಿಯಸ್ತಸ್ಮಾತ್ ಶಪ್ಸ್ಯೇಽಹಂ ತ್ವಾಂ ನ ಸಂಶಯಃ॥ – ೫೩/೨೨

ಬಾಲ್ಯದಿಂದಲೂ ಬ್ರಹ್ಮಚರ್ಯಪಾಲನೆ, ಕಷ್ಟದಿಂದ ಸಂಪಾದಿಸಿದ ತಪಸ್ಸು ನನಗೆ ಶಾಪ ಕೊಡುವ ಮೂಲಕ ಹಾಳಾಗಬಾರದು. ಎಂದು ನನ್ನ ಬಯಕೆ[೧] ಎಂದನು.

ಕೃಷ್ಣನ ಮಾತನ್ನು ಮನ್ನಿಸಿದ ಉದಂಕರು [೨]ತತ್ತ್ವೋಪದೇಶ ಮಾಡಲು ಕೇಳಿದಾಗ ಕೃಷ್ಣನು ಉಪದೇಶಿಸಲಾರಂಭಿಸಿದನು.

ಉದಂಕರೇ! ಸತ್ತ್ವರಜಸ್ತಮೋಗುಣಗಳು ನನ್ನನ್ನೇ ಆಶ್ರಯಿಸಿವೆ. ನಾನು ಸೃಷ್ಟಿ ರಕ್ಷಣ ಲಯಗಳಿಗೆ ಬ್ರಹ್ಮ ವಿಷ್ಣುರುದ್ರರ ಹೆಸರಿನಿಂದ ಕಾರಣ, ನಿಯಾಮಕ.

ಎಲ್ಲ ಪ್ರಾಣಿಗಳು ನನ್ನನ್ನೇ ಆಶ್ರಯಿಸಿವೆ. ಎಲ್ಲರಿಗೂ ನಾನೇ ಅಂತರ್ಯಾಮಿ. ಈ ಬಗ್ಗೆ ಸಂಶಯಬೇಡ.

ನನ್ನಿಂದಲೇ ಎಲ್ಲ ದೈತ್ಯ, ಯಕ್ಷ, ಗಂಧರ್ವ, ಅಪ್ಸರಾದಿಗಳು ಹುಟ್ಟಿದ್ದಾರೆ.

ಜ್ಞಾನಿಗಳು ಹೇಳುವ ಸತ್, ಅಸತ್, ವ್ಯಕ್ತ, ಅವ್ಯಕ್ತ, ಕ್ಷರ, ಅಕ್ಷರ ಎಲ್ಲವೂ ನನ್ನನ್ನೇ ಆಶ್ರಯಿಸಿವೆ.

ವೇದೋಕ್ತವಾದ ಎಲ್ಲ ನಾಲ್ಕು ಆಶ್ರಮಧರ್ಮಗಳು, ಕರ್ಮಗಳೂ ನನ್ನನ್ನೇ ಆಶ್ರಯಿಸಿವೆ.

ಅಸತ್, ಸತ್, ಸದಸತ್, ಇದಕ್ಕಿಂತ ಆಚೆ ಇರುವ ಜಗತ್ತು ಇವೆಲ್ಲಕ್ಕೂ ನಾನೇ ನಿಯಾಮಕ. ಸನಾತನನಾದ ದೇವದೇವನಾದ ಪರತರ ವಸ್ತು ನಾನೇ.

ಓಂಕಾರದಿಂದ ವ್ಯಕ್ತವಾಗುವ ವೇದಗಳನ್ನು ನಾನೆಂದು ತಿಳಿ (ನಾನೇ ವೇದಪ್ರತಿಪಾದ್ಯ ಎಂದು) ಯಜ್ಞದಲ್ಲಿ ದೇವತೆಗಳಿಗೆ ಸಂತೋಷ ಕೊಡುವ ಯೂಪ(ಸ್ತಂಭ), ಸೋಮ(ರಸ), ಹೋತೃ, ಹವ್ಯ, ಅಧ್ವರ್ಯ, ಹವಿಸ್ಸು(ಸಂಸ್ಕೃತವಾದ), ಉದ್ಗಾತೃ(ಉಚ್ಚಸ್ವರದಲ್ಲಿ ಗಾನಮಾಡುವ), ಮೊದಲಾದವುಗಳೆಲ್ಲ ನನ್ನ ವಿಭೂತಿರೂಪಗಳೇ(ನನ್ನ ವಿಶೇಷ ಸಾನ್ನಿಧ್ಯವುಳ್ಳವುಗಳೇ).

ಪಾಪಮೋಚಕಗಳಾದ ಪ್ರಾಯಶ್ಚಿತ್ತ ಕರ್ಮಗಳಲ್ಲಿ ನನ್ನನ್ನೇ ಶಾಂತಿಸೂಕ್ತ (ಮಂಗಳ-ವಾಚಕಗಳಾದ)ವನ್ನು ಬ್ರಾಹ್ಮಣರು ಸ್ತೋತ್ರಗೈಯುತ್ತಾರೆ.

---

೧ ಶ್ರುತ್ವಾ ತು ಮೇ ತದಧ್ಯಾತ್ಮಂ ಮುಂಚೇಥಾಃ ಶಾಪಮದ್ಯ ವೈ।
ನ ಚ ಮಾಂ ತಪಸಾಽಲ್ಪೇನ ಶಕ್ನೋತಿ ಶಪಿತುಂ ಭವಾನ್।
ತಪಸ್ತೇ ಸುಮಹತ್ತತ್ತ್ವಂ ಗುರವಶ್ಚಾಪಿ ತೋಷಿತಾಃ।
ಕೌಮಾರಂ ಬ್ರಹ್ಮಚರ್ಯಂ ತೇ ಜಾನಾಮಿ ದ್ವಿಜಸತ್ತಮ।
ದುಃಖಾರ್ಜಿತಸ್ಯ ತಪಸಃ ತಸ್ಮಾನ್ನೇಚ್ಛಾಮಿ ತೇ ವ್ಯಯಮ್॥ - ೫೩/೨೬-೨೮

೨ ಬ್ರೂಹಿ ಕೇಶವ ತತ್ತ್ವೇನ ತ್ವಂ ಮೇಽಧ್ಯಾತ್ಮಮನಿಂದಿತಮ್।
ಶ್ರುತ್ವಾ ಶ್ರೇಯೋ ವಿಧಾಸ್ಯಾಮಿ ನ ಶಾಪಂ ತೇ ಜನಾರ್ದನ॥ - ೫೪/೧

ಜಗತ್ತಿನಲ್ಲಿ ಪ್ರವೃತ್ತ, ನಿವೃತ್ತ ಕರ್ಮ ವ್ರತ ಮಾಡುವವರಲ್ಲಿ ನಿಯಾಮಕನಾಗಿರುವವನು ನಾನೇ.

ಧರ್ಮಸಂಸ್ಥಾಪನೆ ಹಾಗೂ ಲೋಕ ಸಂರಕ್ಷಣೆಗಾಗಿ ನಾನೇ ಮೂರೂ ಲೋಕಗಳಲ್ಲಿ ಅನೇಕ ರೂಪಗಳಿಂದ, ವೇಷಗಳಿಂದ ಧರ್ಮಲೋಕಸಂರಕ್ಷಣೆ ಮಾಡುತ್ತೇನೆ.

ನಾನೇ ಬ್ರಹ್ಮ ವಿಷ್ಣು ಇಂದ್ರ – (ಬ್ರಹ್ಮ ಇಂದ್ರ ಶಬ್ದಗಳಿಂದ ಮುಖ್ಯವಾಚ್ಯನು) – ಎಲ್ಲ ಜೀವರ ಸೃಷ್ಟಿ ಸಂಹಾರಕ ನಾನೇ.

ಅಧರ್ಮ ಮಾರ್ಗದಲ್ಲಿರುವವರ ಶಿಕ್ಷಕ ನಾನೇ. ಧರ್ಮಮರ್ಯಾದಾ ರಕ್ಷಕ ನಾನೇ. ಯುಗಧರ್ಮ ಪ್ರವರ್ತಕನೂ ನಾನೇ.

ನಾನು ದೇವ, ಗಂಧರ್ವ, ನಾಗ, ಮನುಷ್ಯ, ಯೋನಿಗಳಲ್ಲಿ ಅವತರಿಸಿದಾಗ, ಆಯಾ ಯೋನಿಗಳಂತೆಯೇ ವ್ಯವಹರಿಸುತ್ತೇನೆ. ಆದ್ದರಿಂದ ಮನುಷ್ಯನಾಗಿ ಜನಿಸಿದ ನಾನು ಕೌರವರ ಬಳಿ ಹೋಗಿ ಸಂಧಿ ಮಾಡಿಕೊಳ್ಳಲು ಯಾಚಿಸಿದೆ. ಆದರೆ ನನ್ನ ಹಿತನುಡಿಯನ್ನು ಅವರು ಮೋಹಗ್ರಸ್ತರಾಗಿ ಸ್ವೀಕರಿಸಲಿಲ್ಲ. ಯುದ್ಧದ ಭಾವೀ ಭಯಂಕರ ಪರಿಣಾಮಗಳನ್ನು ನಾನು ಕೋಪದಿಂದಲೇ ಲೋಕದೃಷ್ಟಾಂತಗಳಿಂದಲೇ ಹೇಳಿದೆ. ಆದರೂ ಕಾಲಗ್ರಸ್ತರಾದ ಅವರಿಗೆ ನನ್ನ ಮಾತು ಹಿಡಿಸಲಿಲ್ಲ. ಕೊನೆಗೆ ಅವರೆಲ್ಲ ಧರ್ಮದಿಂದಲೇ ಯುದ್ಧದಲ್ಲಿ ಹತರಾದರು. ಸ್ವರ್ಗಕ್ಕೆ ಹೋಗಿದ್ದಾರೆ. ಇದರಲ್ಲಿ ಯಾವ ಸಂದೇಹವಿಲ್ಲ.

ಧರ್ಮ ಹಿಡಿದ ಪಾಂಡವರು ಲೋಕಗಳಲ್ಲಿ ವಿಖ್ಯಾತರಾಗುವರು. ಉದಂಕರೇ! ನಿಮ್ಮ ಪ್ರಶ್ನೆಗೆ ಉತ್ತರಿಸಿದ್ದೇನೆ:

**ಭಗವಾನುವಾಚ –**
**ತಮೋ ರಜಶ್ಚ ಸತ್ತ್ವಂ ಚ ವಿದ್ಧಿ ಭಾವಾನ್ ಮದಾಶ್ರಯಾನ್ ।....**
**ಸೃಷ್ಟಿಸ್ಥಿತಿಲಯಾಧ್ಯಕ್ಷೋ ವಿಷ್ಣುಬ್ರಹ್ಮೇಶಸಂಜ್ಞಿತಃ ॥**
**ತಥಾ ರುದ್ರಾನ್ ವಸೂನ್ ವಾಽಪಿ ವಿದ್ಧಿ ಮತ್ಪ್ರಭವಾನ್ ದ್ವಿಜ ।**
**ಮಯಿ ಸರ್ವಾಣಿ ಭೂತಾನಿ ಸರ್ವಭೂತೇಷು ಚಾಪ್ಯಹಮ್ ॥**
**ಸ್ಥಿತ ಇತ್ಯಭಿಜಾನೀಹಿ ಮಾ ತೇ ಭೂದತ್ರ ಸಂಶಯಃ ।**
**ಅಸಚ್ಚ ಸಚ್ಚೈವ ಚ ಯದ್ವಿಶ್ವಂ ಸದಸದತಃ ಪರಮ್ ॥**
**ತತಃ (ಮತ್ತಃ) ಪರತರಂ ನಾಸ್ತಿ ದೇವದೇವಾತ್ ಸನಾತನಾತ್ ।**
**ಓಂಕಾರಪ್ರಭವಾನ್ ವೇದಾನ್ ವಿದ್ಧಿ ಮಾಂ ತ್ವಂ ಭೃಗುದ್ವಹ ॥**
**ಲೋಕಸಂರಕ್ಷಣಾರ್ಥಾಯ ಧರ್ಮಸಂಸ್ಥಾಪನಾಯ ಚ ।**
**ತೈಸ್ತೈರ್ವೇಷೈಶ್ಚ ತ್ರಿಷು ಲೋಕೇಷು ಭಾರ್ಗವ ।**
**ಭೂತಗ್ರಾಮಸ್ಯ ಸರ್ವಸ್ಯ ಸ್ರಷ್ಟಾ ಸಂಹಾರ ಏವ ಚ ॥**

ಧರ್ಮಸ್ಯ ಸೇತುಂ ಬಧ್ನಾಮಿ ಚಲಿತೇ ಚಲಿತೇ ಯುಗೇ।
ಯದಾ ತ್ವಹಂ ದೇವಯೋನೌ ವರ್ತೇ ಭೃಗು ಕುಲೋದ್ವಹ।
ತದಾಽಹಂ ದೇವವತ್ ಸರ್ವಮಾಚರಾಮಿ ನ ಸಂಶಯಃ।
ಮಾನುಷೇ ವರ್ತಮಾನೇ ತು ಕೃಪಣಂ ಯಾಚಿತಾ ಮಹಾ ॥
ನ ಚ ತೇ ಜಾತಸಂಮೋಹಾ ವಚೋ ಗೃಹ್ಣಂತಿ ಮೇ ಹಿತಮ್ ॥
ಧರ್ಮೇಣ ನಿಹತಾ ಯುದ್ಧೇ ಗತಾಃ ಸ್ವರ್ಗಂ ನ ಸಂಶಯಃ।
ಲೋಕೇಷು ಪಾಂಡವಾಃ ಖ್ಯಾತಿಂ ಗಮಿಷ್ಯಂತಿ ದ್ವಿಜೋತ್ತಮ ॥ -೫೪/೨-೨೬

ಹೀಗೆ ಕೃಷ್ಣೋಪದೇಶ ಮುನಿ ಉದಂಕರ ಅಜ್ಞಾನಾಂಧಕಾರಕ್ಕೆ ತೆರೆಯೆಳೆಯಿತು. ಶಾಪ ಹಾಕುವೆನೆಂಬ ಭಾವ ಅಳಿಯಿತು. ಕೃಷ್ಣಾನುಗ್ರಹರೂಪ ಅಧ್ಯಾತ್ಮೋಪದೇಶ ಉದಂಕರ ಒಳಗಣ್ಣನ್ನು ತೆರೆಯಿಸಿತು. ಮನಬಿಚ್ಚಿ ನುಡಿದರು. 'ನನಗೆ ನಿನ್ನ ವಿಶ್ವರೂಪವನ್ನು ತೋರಿಸು. ಒಂದು ವೇಳೆ ನನಗೆ ಅರ್ಹತೆಯಿದ್ದಲ್ಲಿ[1].

ಉದಂಕರ ಪ್ರಾರ್ಥನೆಯನ್ನು ಮನ್ನಿಸಿದ ಸ್ವಾಮಿ ಕೃಷ್ಣನು ಅರ್ಜುನನಿಗೆ ತೋರಿಸಿದ (ವಿಶ್ವರೂಪವನ್ನು) ಶಾಶ್ವತವಾದ ವೈಷ್ಣವ ರೂಪವನ್ನು [2]ತೋರಿಸಿ, ಅನುಗ್ರಹಿಸಿದ.

ಆ ವಿಶ್ವರೂಪವನ್ನು ನೋಡಿದ ಉದಂಕರು ವಿಸ್ಮಯಗೊಂಡು ಒಂಭತ್ತು ಶ್ಲೋಕಗಳಿಂದ ಸ್ತುತಿಸಿದರು:

ಅವಿದ್ಯಾತಿಮಿರಾದಿತ್ಯಂ ಭವವ್ಯಾಧಿಮಹೌಷಧಿಮ್।
ಸಂಸಾರಾರ್ಣವಪಾರಂ ತ್ವಾಂ ಪ್ರಣಮಾಮಿ ಗತಿರ್ಭವ ॥
ಸರ್ವವೇದೈಕವೇದ್ಯಾಯ ಸರ್ವದೇವಮಯಾಯ ಚ।
ವಾಸುದೇವಾಯ ನಿತ್ಯಾಯ ನಮೋ ಭಕ್ತಪ್ರಿಯಾಯ ತೇ ॥
ದಯಯಾ ದುಃಖಮೋಹಾನ್ಮಾಂ ಸಮುದ್ಧರ್ತುಮಿಹಾರ್ಹಸಿ।
ಕರ್ಮಭಿರ್ಬಹುಭಿಃ ಪಾತ್ಯೈರ್ಬದ್ಧಂ ಪಾಹಿ ಜನಾರ್ದನ ॥
ಪದ್ಭ್ಯಾಂ ತೇ ಪೃಥಿವೀವ್ಯಾಪ್ತಾ ಶಿರಸಾ ಚಾವೃತಂ ನಭಃ।
ದ್ಯಾವಾಪೃಥಿವ್ಯೋರ್ಯನ್ಮಧ್ಯಂ ಜಠರೇಣ ತದಾವೃತಮ್ ॥
ಭುಜಾಭ್ಯಾಮಾವೃತಾಶ್ಚಾ ಶಾಸ್ತ್ವಮಿದಂ ಸರ್ವಮಚ್ಯುತ ॥ - ೫೫/೬-೧೪

---

೧ ನೂನಂ ಭವತ್ಪ್ರಸಾದೋಽಯಮಿತಿ ಮೇ ನಾತ್ರ ಸಂಶಯಃ। - ೫೫/೧
ಚಿತ್ತಂ ಚ ಸುಪ್ರಸನ್ನಂ ಮೇ ತ್ವದ್ಭಾವಗತಮಚ್ಯುತ। - ೫೫/೨
ಯದಿತ್ವನುಗ್ರಹಂ ಕಂಚಿತ್ ತತ್ತ್ವೋಽಹೋರ್ಹಂ ಜನಾರ್ದನ।
ದ್ರಷ್ಟುಮಿಚ್ಛಾಮಿ ತೇ ರೂಪಂ ವೈಷ್ಣವಂ ಮಾಂ ನಿದರ್ಶಯ ॥ - ೫೫/೩
೨ ತತಃ ಸ ತಸ್ಮೈ ಪ್ರೀತಾತ್ಮಾ ದರ್ಶಯಾಮಾಸ ತದ್ವಪುಃ।
ಶಾಶ್ವತಂ ವೈಷ್ಣವಂ ಧೀಮಾನ್ ಯದ್ದದರ್ಶ ಧನಂಜಯಃ ॥ - ೫೫/೪

ಉಂದಕರು ನಂತರ ಮೊದಲ ರೂಪವನ್ನೇ ತೋರಿಸು. ವಿಶ್ವರೂಪವನ್ನು ಉಪಸಂಹರಿಸು ಎಂದರು (ಅರ್ಜುನನಂತೆ). ಅರ್ಜುನನಂತೆ ಕೃಷ್ಣನು ಹಾಗೆಯೇ ಮಾಡಿ 'ನಿನಗೆ ವರ ಕೊಡುವೆ ಕೇಳೆಂದನು'. ಅದಕ್ಕೆ ಉದಂಕರು ನೀನು ತೋರಿಸಿದ ವಿಶ್ವರೂಪವೇ ದೊಡ್ಡ ವರ. ಮತ್ತೇನೂ ಬೇಡ. ನನಗೆ ನಿನ್ನ ರೂಪದರ್ಶನದಿಂದಲೇ ತೃಪ್ತಿಯಾಗಿದೆ[೧] ಎಂದರು.

ಅದಕ್ಕೆ ಕೃಷ್ಣನು 'ನನ್ನ ದರ್ಶನ ವ್ಯರ್ಥವಾಗದು. ವರ ಬಯಸುವುದು ಕರ್ತವ್ಯ'[೨] ಕೇಳೆಂದನು. ಅದನ್ನು ಗೌರವಿಸಿದ ಉದಂಕರು 'ನಾನು ಇಚ್ಛಿಸಿದ ಸ್ಥಳದಲ್ಲಿ ನೀರು ದೊರೆಯಲೆಂದು ಬಯಸುತ್ತೇನೆ[೩]. ಕಾರಣ ಈ ಮರುಭೂಮಿಯಲ್ಲಿ ನೀರು ಅತ್ಯಂತ ದುರ್ಲಭವಾಗಿದೆ' ಎಂದರು. ಆಗ ಕೃಷ್ಣನು 'ನಿನಗೆ ಯಾವಾಗ ನೀರಿನ ಬಯಕೆಯಾಗುವುದೋ ಆಗ ನನ್ನನ್ನು ಸ್ಮರಿಸು'[೪] ಎಂದು ನುಡಿದು ದ್ವಾರಕೆಯ ಕಡೆ ಹೊರಟನು.

ಒಮ್ಮೆ ತುಂಬಾ ಬಾಯಾರಿದ ಉದಂಕರು ತಾನಿದ್ದ ಮರುಭೂಮಿಯಲ್ಲಿ ಕೃಷ್ಣನನ್ನು ಸ್ಮರಿಸಿದ. ಆಗ ನಾಯಿಗಳಿಂದ ಸುತ್ತುವರಿದ ದಿಗಂಬರನಾದ, ಕೆಸರಿನಿಂದ ಆವೃತವಾದ(ಶರೀರವುಳ್ಳ), ನೋಡಲು ಗಾಬರಿ ಬರುವಂತಿದ್ದ, ಸೊಂಟಕ್ಕೆ ಕತ್ತಿ, ಧನುರ್ಬಾಣಗಳನ್ನು ಧರಿಸಿರುವ ಒಬ್ಬ ಚಂಡಾಲನನ್ನು ಉದಂಕನು ನೋಡಿದನು. ಚಂಡಾಲನು ಪಾತ್ರೆಯೊಂದನ್ನು ಹಿಡಿದುಕೊಂಡು ಅದರಲ್ಲಿ ಮೂತ್ರದ ಜಲಧಾರೆಯಂತೆ ಇರುವ ನೀರನ್ನು ತೋರಿಸುತ್ತಾ(ಉದಂಕನಿಗೆ) 'ಈ ನೀರನ್ನು ಬಾಯಾರಿ ಬಳಲಿದ ನೀನು ಸ್ವೀಕರಿಸು(ಕುಡಿ). ನಿನ್ನ ಬಗ್ಗೆ ನನಗೆ ತುಂಬಾ ದಯೆ ಹುಟ್ಟಿದೆ' ಎಂದನು. ಆದರೆ ಉದಂಕನು ಮೂತ್ರಸ್ಥಾನದಿಂದ ಬರುತ್ತಿದ್ದ ಆ ನೀರನ್ನು ಕುಡಿಯಲು ಇಷ್ಟಪಡದೆ ಸ್ಮರಿಸಿದ ಕೂಡಲೇ ನೀರನ್ನು ಬರುವಂತೆ ನೀಡಿದ ವರ ಕೊಟ್ಟ ಕೃಷ್ಣನನ್ನೇ ಕಠೋರವಾಗಿ ನಿಂದಿಸಿದನು. ಆದರೆ ಮಾತಂಗ ಮತ್ತೆ ಮತ್ತೆ ಆ ನೀರನ್ನು ತೋರಿಸುತ್ತಾ ಕುಡಿ, ಕುಡಿ ಎಂದರೂ ಕುಡಿಯದಿದ್ದಾಗ, ಚಂಡಾಲನ ಮಾತನ್ನು ತಿರಸ್ಕರಿಸಲು, ಆತನು ಅಲ್ಲಿಯೇ ಅದೃಶ್ಯನಾದನು.

ನಂತರ ಉದಂಕನು ತನ್ನನ್ನು ಶ್ರೀಕೃಷ್ಣನು ಹೀಗೆ ವಂಚಿಸಿರಬಹುದೆಂದು (ಪರೀಕ್ಷಿಸಿ) ಲಜ್ಜೆಯಿಂದ ಇರುತ್ತಿರಲು ಶ್ರೀಕೃಷ್ಣನು ಶಂಖಚಕ್ರಗದಾಧಾರಿಯಾಗಿ ಆಗಮಿಸಿದನು. ಆಗ ಉದಂಕನು ಕೃಷ್ಣನಿಗೆ (ನನ್ನಂಥ) ಬ್ರಾಹ್ಮಣರಿಗೆ ಚಂಡಾಲನ ಮೂತ್ರಸ್ರೋತಸ್ಸಿನಿಂದ ಬಂದ ಅಪವಿತ್ರ ನೀರನ್ನು ನೀಡುವುದು ನಿನಗೆ ಉಚಿತವಲ್ಲವೆಂದು ಹೇಳಿದನು. ಅದಕ್ಕೆ ಕೃಷ್ಣನು 'ಎಲೈ ಉದಂಕನೇ! ನಿನಗೆ ಯಾವ ರೀತಿಯಾಗಿ ಕೊಡುವುದು ಯೋಗ್ಯವಾಗಿತ್ತೋ

---

೧ ಪರ್ಯಾಪ್ತ ಏಷ ಏವಾದ್ಯ ವರಸ್ತ್ವತ್ತೋ ಮಹಾದ್ಯುತೇ।
ಯತ್ತೇ ರೂಪಮಿದಂ ಕೃಷ್ಣ ಪಶ್ಯಾಮಿ ಪ್ರಭವಾಪ್ಯಯಮ್ ॥ - ೫೫/೧೬

೨ ಅವಶ್ಯಮೇತತ್ ಕರ್ತವ್ಯಂ ಅಮೋಘಂ ದರ್ಶನಂ ಮಮ। - ೫೫/೧೭

೩ ತೋಯಮಿಚ್ಛಾಮಿ ಯತ್ರೇಷ್ಟಂ ಮರುಷ್ವೇ ತದ್ಧಿ ದುರ್ಲಭಮ್।

೪ ಏಷ್ಟವ್ಯೇ ಸತಿ ಚಿಂತ್ಯೋಽಹಮಿತ್ಯುಕ್ತ್ವಾ ದ್ವಾರಕಾಂ ಯಯೌ ॥ - ೫೫/೧೯

ಧರ್ಮಸ್ಯ ಸೇತುಂ ಬಧ್ನಾಮಿ ಚಲಿತೇ ಚಲಿತೇ ಯುಗೇ।
ಯದಾ ತ್ವಹಂ ದೇವಯೋನೌ ವರ್ತೇ ಭೃಗು ಕುಲೋದ್ವಹ।
ತದಾऽಹಂ ದೇವವತ್ ಸರ್ವಮಾಚರಾಮಿ ನ ಸಂಶಯಃ।
ಮಾನುಷೇ ವರ್ತಮಾನೇ ತು ಕೃಪಣಂ ಯಾಚಿತಾ ಮಹಾ ॥
ನ ಚ ತೇ ಜಾತಸಂಮೋಹಾ ವಚೋ ಗೃಹ್ಣಂತಿ ಮೇ ಹಿತಮ್ ॥
ಧರ್ಮೇಣ ನಿಹತಾ ಯುದ್ಧೇ ಗತಾಃ ಸ್ವರ್ಗಂ ನ ಸಂಶಯಃ।
ಲೋಕೇಷು ಪಾಂಡವಾಃ ಖ್ಯಾತಿಂ ಗಮಿಷ್ಯಂತಿ ದ್ವಿಜೋತ್ತಮ ॥ -೫೪/೨-೨೬

ಹೀಗೆ ಕೃಷ್ಣೋಪದೇಶ ಮುನಿ ಉದಂಕರ ಅಜ್ಞಾನಾಂಧಕಾರಕ್ಕೆ ತೆರೆಯೆಳೆಯಿತು. ಶಾಪ ಹಾಕುವೆನೆಂಬ ಭಾವ ಅಳಿಯಿತು. ಕೃಷ್ಣಾನುಗ್ರಹರೂಪ ಅಧ್ಯಾತ್ಮೋಪದೇಶ ಉದಂಕರ ಒಳಗಣ್ಣನ್ನು ತೆರೆಯಿಸಿತು. ಮನಬಿಚ್ಚಿ ನುಡಿದರು. 'ನನಗೆ ನಿನ್ನ ವಿಶ್ವರೂಪವನ್ನು ತೋರಿಸು. ಒಂದು ವೇಳೆ ನನಗೆ ಅರ್ಹತೆಯಿದ್ದಲ್ಲಿ[೧].

ಉದಂಕರ ಪ್ರಾರ್ಥನೆಯನ್ನು ಮನ್ನಿಸಿದ ಸ್ವಾಮಿ ಕೃಷ್ಣನು ಅರ್ಜುನನಿಗೆ ತೋರಿಸಿದ (ವಿಶ್ವರೂಪವನ್ನು) ಶಾಶ್ವತವಾದ ವೈಷ್ಣವ ರೂಪವನ್ನು [೨]ತೋರಿಸಿ, ಅನುಗ್ರಹಿಸಿದ.

ಆ ವಿಶ್ವರೂಪವನ್ನು ನೋಡಿದ ಉದಂಕರು ವಿಸ್ಮಯಗೊಂಡು ಒಂಭತ್ತು ಶ್ಲೋಕಗಳಿಂದ ಸ್ತುತಿಸಿದರು:

ಅವಿದ್ಯಾತಿಮಿರಾದಿತ್ಯಂ ಭವವ್ಯಾಧಿಮಹೌಷಧಿಮ್।
ಸಂಸಾರಾರ್ಣವಪಾರಂ ತ್ವಾಂ ಪ್ರಣಮಾಮಿ ಗತಿರ್ಭವ ॥
ಸರ್ವವೇದೈಕವೇದ್ಯಾಯ ಸರ್ವದೇವಮಯಾಯ ಚ।
ವಾಸುದೇವಾಯ ನಿತ್ಯಾಯ ನಮೋ ಭಕ್ತಪ್ರಿಯಾಯ ತೇ ॥
ದಯಯಾ ದುಃಖಮೋಹಾನ್ಮಾಂ ಸಮುದ್ಧರ್ತುಮಿಹಾರ್ಹಸಿ।
ಕರ್ಮಭಿರ್ಬಹುಭಿಃ ಪಾಶೈರ್ಬದ್ಧಂ ಪಾಹಿ ಜನಾರ್ದನ ॥
ಪದ್ಭ್ಯಾಂ ತೇ ಪೃಥಿವೀ ವ್ಯಾಪ್ತಾ ಶಿರಸಾ ಚಾವೃತಂ ನಭಃ।
ದ್ಯಾವಾಪೃಥಿವ್ಯೋರ್ಯನ್ಮಧ್ಯಂ ಜಠರೇಣ ತದಾವೃತಮ್ ॥
ಭುಜಾಭ್ಯಾಮಾವೃತಾಶ್ಚಾಶಾಸ್ತ್ವಮಿದಂ ಸರ್ವಮಚ್ಯುತ ॥ - ೫೫/೬-೧೪

---

೧ ನೂನಂ ಭವತ್ಪ್ರಸಾದೋऽಯಮಿತಿ ಮೇ ನಾತ್ರ ಸಂಶಯಃ। - ೫೫/೧
ಚಿತ್ತಂ ಚ ಸುಪ್ರಸನ್ನಂ ಮೇ ತ್ವದ್ಭಾವಗತಮಚ್ಯುತ। - ೫೫/೨
ಯದಿತ್ವನುಗ್ರಹಂ ಕಂಚಿತ್ ತತ್ತ್ವೋऽಹರ್ಹೋಽಹಂ ಜನಾರ್ದನ।
ದ್ರಷ್ಟುಮಿಚ್ಛಾಮಿ ತೇ ರೂಪಂ ವೈಷ್ಣವಂ ಮಾಂ ನಿದರ್ಶಯ ॥ - ೫೫/೩
೨ ತತಃ ಸ ತಸ್ಮೈ ಪ್ರೀತಾತ್ಮಾ ದರ್ಶಯಾಮಾಸ ತದ್ವಪುಃ।
ಶಾಶ್ವತಂ ವೈಷ್ಣವಂ ಧೀಮಾನ್ ಯದ್ದದರ್ಶ ಧನಂಜಯಃ ॥ - ೫೫/೪

ಉಂದಕರು ನಂತರ ಮೊದಲ ರೂಪವನ್ನೇ ತೋರಿಸು. ವಿಶ್ವರೂಪವನ್ನು ಉಪಸಂಹರಿಸು ಎಂದರು (ಅರ್ಜುನನಂತೆ). ಅರ್ಜುನನಂತೆ ಕೃಷ್ಣನು ಹಾಗೆಯೇ ಮಾಡಿ 'ನಿನಗೆ ವರ ಕೊಡುವೆ ಕೇಳೆಂದನು'. ಆದಕ್ಕೆ ಉದಂಕರು ನೀನು ತೋರಿಸಿದ ವಿಶ್ವರೂಪವೇ ದೊಡ್ಡ ವರ. ಮತ್ತೇನೂ ಬೇಡ. ನನಗೆ ನಿನ್ನ ರೂಪದರ್ಶನದಿಂದಲೇ ತೃಪ್ತಿಯಾಗಿದೆ[೧] ಎಂದರು.

ಆದಕ್ಕೆ ಕೃಷ್ಣನು 'ನನ್ನ ದರ್ಶನ ವ್ಯರ್ಥವಾಗದು. ವರ ಬಯಸುವುದು ಕರ್ತವ್ಯ'[೨] ಕೇಳೆಂದನು. ಅದನ್ನು ಗೌರವಿಸಿದ ಉದಂಕರು 'ನಾನು ಇಚ್ಛಿಸಿದ ಸ್ಥಳದಲ್ಲಿ ನೀರು ದೊರೆಯಲೆಂದು ಬಯಸುತ್ತೇನೆ[೩]. ಕಾರಣ ಈ ಮರುಭೂಮಿಯಲ್ಲಿ ನೀರು ಅತ್ಯಂತ ದುರ್ಲಭವಾಗಿದೆ' ಎಂದರು. ಆಗ ಕೃಷ್ಣನು 'ನಿನಗೆ ಯಾವಾಗ ನೀರಿನ ಬಯಕೆಯಾಗುವುದೋ ಆಗ ನನ್ನನ್ನು ಸ್ಮರಿಸು'[೪] ಎಂದು ನುಡಿದು ದ್ವಾರಕೆಯ ಕಡೆ ಹೊರಟನು.

ಒಮ್ಮೆ ತುಂಬಾ ಬಾಯಾರಿದ ಉದಂಕರು ತಾನಿದ್ದ ಮರುಭೂಮಿಯಲ್ಲಿ ಕೃಷ್ಣನನ್ನು ಸ್ಮರಿಸಿದ. ಆಗ ನಾಯಿಗಳಿಂದ ಸುತ್ತುವರಿದ ದಿಗಂಬರನಾದ, ಕೆಸರಿನಿಂದ ಆವೃತವಾದ(ಶರೀರವುಳ್ಳ), ನೋಡಲು ಗಾಬರಿ ಬರುವಂತಿದ್ದ, ಸೊಂಟಕ್ಕೆ ಕತ್ತಿ, ಧನುರ್ಬಾಣಗಳನ್ನು ಧರಿಸಿರುವ ಒಬ್ಬ ಚಂಡಾಲನನ್ನು ಉದಂಕನು ನೋಡಿದನು. ಚಂಡಾಲನು ಪಾತ್ರೆಯೊಂದನ್ನು ಹಿಡಿದುಕೊಂಡು ಅದರಲ್ಲಿ ಮೂತ್ರದ ಜಲಧಾರೆಯಂತೆ ಇರುವ ನೀರನ್ನು ತೋರಿಸುತ್ತಾ(ಉದಂಕನಿಗೆ) 'ಈ ನೀರನ್ನು ಬಾಯಾರಿ ಬಳಲಿದ ನೀನು ಸ್ವೀಕರಿಸು(ಕುಡಿ). ನಿನ್ನ ಬಗ್ಗೆ ನನಗೆ ತುಂಬಾ ದಯೆ ಹುಟ್ಟಿದೆ' ಎಂದನು. ಆದರೆ ಉದಂಕನು ಮೂತ್ರಸ್ಥಾನದಿಂದ ಬರುತ್ತಿದ್ದ ಆ ನೀರನ್ನು ಕುಡಿಯಲು ಇಷ್ಟಪಡದೆ ಸ್ಮರಿಸಿದ ಕೂಡಲೇ ನೀರನ್ನು ಬರುವಂತೆ ನೀಡಿದ ವರ ಕೊಟ್ಟ ಕೃಷ್ಣನನ್ನೇ ಕಠೋರವಾಗಿ ನಿಂದಿಸಿದನು. ಆದರೆ ಮಾತಂಗ ಮತ್ತೆ ಮತ್ತೆ ಆ ನೀರನ್ನು ತೋರಿಸುತ್ತಾ ಕುಡಿ, ಕುಡಿ ಎಂದರೂ ಕುಡಿಯದಿದ್ದಾಗ, ಚಂಡಾಲನ ಮಾತನ್ನು ತಿರಸ್ಕರಿಸಲು, ಆತನು ಅಲ್ಲಿಯೇ ಅದೃಶ್ಯನಾದನು.

ನಂತರ ಉದಂಕನು ತನ್ನನ್ನು ಶ್ರೀಕೃಷ್ಣನು ಹೀಗೆ ವಂಚಿಸಿರಬಹುದೆಂದು (ಪರೀಕ್ಷಿಸಿ) ಲಜ್ಜೆಯಿಂದ ಇರುತ್ತಿರಲು ಶ್ರೀಕೃಷ್ಣನು ಶಂಖಚಕ್ರಗದಾಧಾರಿಯಾಗಿ ಆಗಮಿಸಿದನು. ಆಗ ಉದಂಕನು ಕೃಷ್ಣನಿಗೆ (ನನ್ನಂಥ) ಬ್ರಾಹ್ಮಣರಿಗೆ ಚಂಡಾಲನ ಮೂತ್ರಸ್ರೋತಸ್ಸಿನಿಂದ ಬಂದ ಅಪವಿತ್ರ ನೀರನ್ನು ನೀಡುವುದು ನಿನಗೆ ಉಚಿತವಲ್ಲವೆಂದು ಹೇಳಿದನು. ಆದಕ್ಕೆ ಕೃಷ್ಣನು 'ಎಲೈ ಉದಂಕನೇ! ನಿನಗೆ ಯಾವ ರೀತಿಯಾಗಿ ಕೊಡುವುದು ಯೋಗ್ಯವಾಗಿತ್ತೋ

---

೧ ಪರ್ಯಾಪ್ತ ಏಷ ಏವಾದ್ಯ ವರಸ್ತ್ವತ್ತೋ ಮಹಾದ್ಯುತೇ।
ಯತ್ತೇ ರೂಪಮಿದಂ ಕೃಷ್ಣ ಪಶ್ಯಾಮಿ ಪ್ರಭವಾಪ್ಯಯಮ್ ॥ – ೫೫/೧೬

೨ ಅವಶ್ಯಮೇತತ್ ಕರ್ತವ್ಯಂ ಅಮೋಘಂ ದರ್ಶನಂ ಮಮ। – ೫೫/೧೭

೩ ತೋಯಮಿಚ್ಛಾಮಿ ಯತ್ರೇಷ್ಟಂ ಮರುಷ್ವೇ ತದ್ಧಿ ದುರ್ಲಭಮ್।

೪ ಏಷ್ಟವ್ಯೇ ಸತಿ ಚಿಂತ್ಯೋಽಹಮಿತ್ಯುಕ್ತ್ವಾ ದ್ವಾರಕಾಂ ಯಯೌ ॥ – ೫೫/೧೮

ಹಾಗೆ ಕೊಡಲಾಗಿತ್ತು. ಅದನ್ನು ನೀನು ಅರ್ಥಮಾಡಿಕೊಳ್ಳಲಿಲ್ಲ. ನಾನು ನಿನ್ನ ಸಲುವಾಗಿ ಇಂದ್ರನಿಗೆ ನೀರಿನ ರೂಪದಲ್ಲಿ ಅಮೃತವನ್ನೇ ಕೊಡಲು ಹೇಳಿದ್ದೆ. ದೇವೇಂದ್ರನು ಮರ್ತ್ಯರಿಗೆ (ಮನುಷ್ಯರಿಗೆ) ಅಮೃತ ಕೊಟ್ಟರೆ, ಮರ್ತ್ಯನು ಅಮೃತನಾಗುತ್ತಾನೆ. ಆದ್ದರಿಂದ ಬೇರೆ ವರ ಕೊಡು ಎಂದು ಮತ್ತೆ ಮತ್ತೆ ಒತ್ತಾಯಿಸಿದ. ನಾನು ಅಮೃತವನ್ನೇ ಕೊಡಲು ಹಟ ಹಿಡಿದೆನಾದರೂ, ಇಂದ್ರನು 'ಉದಂಕನಿಗೆ ಅಮೃತವನ್ನು ಕೊಡುವ ಭಾವ ಇದ್ದಲ್ಲಿ ನಾನು ಮಾತಂಗ(ಚಾಂಡಾಲ) ವೇಷಧರಿಸಿ ಅಮೃತ ಕೊಡುವೆ. ಅದನ್ನು ಆತನು ತಿರಸ್ಕರಿಸಿದರೆ ನಾನು ಕೊಡುವುದಿಲ್ಲವೆಂದ.' ಅಂತೆಯೇ ಇಂದ್ರನು ಚಾಂಡಾಲವೇಷಧರಿಸಿ ಅಮೃತವನ್ನೇ ಕೊಡಲು ಬಂದಿದ್ದ. ನೀನು ಅದನ್ನು ತಿರಸ್ಕರಿಸಿ ಇಂದ್ರನಿಗೆ ಅಪರಾಧ ಮಾಡಿದೆ. ಆದಾಗ್ಯೂ ನಿನ್ನ ನೀರಿನ ಬಯಕೆಯನ್ನು ಪರಿಹರಿಸುತ್ತೇನೆ. ನೀನು ಎಂದು ನೀರು ಕುಡಿಯಲು ಬಯಸುವೆಯೋ ಅಂದೇ ಈ ಮರುಭೂಮಿಯಲ್ಲಿ ರುಚಿಯಾದ ನೀರಿನ ಮಳೆ ಸುರಿಸುವಂತೆ ಮಾಡುತ್ತೇನೆ. ಆ ಮೇಘಗಳು '**ಉದಂಕಮೇಘ**'ಗಳೆಂದು ಪ್ರಸಿದ್ಧಿಗೆ ಬರುತ್ತವೆ.

ಇದರಿಂದ ಉದಂಕಮಹರ್ಷಿಯು ತುಂಬಾ ಸಂತೋಷಗೊಂಡು ಕೃಷ್ಣನ ವರದಂತೆ ಈಗಲೂ ಮರುಭೂಮಿಯಲ್ಲಿ 'ಉದಂಕಮೇಘ'ಗಳು ಮರುಭೂಮಿಯಲ್ಲಿ ಮಳೆಯನ್ನು ಸುರಿಸುತ್ತವೆ. ಎಂದು ವೈಶಂಪಾಯನರು ಜನಮೇಜಯನಿಗೆ ಹೇಳಿದರು.

**ತತೋ ದಿಗ್ವಾಸಂ ಧೀಮಾನ್ ಮಾತಂಗಂ ಮಲಪಂಕಿನಮ್ ।**
**ಅಪಶ್ಯತ ಮರೌ ತಸ್ಮಿನ್ ಶ್ವಗಣೈಃ ಪರಿವಾರಿತಮ್ ॥**
**ಭೀಷಣಂ ಬದ್ಧನಿಸ್ತ್ರಿಂಶಂ ವಾರಿ ಭೂರಿ ದ್ವಿಜೋತ್ತಮಃ ॥**

**ಮಾತಂಗ ಉವಾಚ-**

**ಏಹ್ಯುದಂಕ ಪ್ರತೀಚ್ಛಸ್ವ ಮತ್ತೋ ವಾರಿ ಭೃಗೂದ್ವಹ ।**
**ಇತ್ಯುಕ್ತಸ್ತೇನ ಸ ಮುನಿಃ ತತ್ತೋಯಂ ನಾಭ್ಯನಂದತ ॥**
**ಚುಕೋಪ ಚ ಸ ತಂ ಧೀಮಾನ್ ವಾಗ್ಭಿರುಗ್ರಾಭಿರಚ್ಯುತಮ್ ॥**
**ನ ಚಾಪಿಬತ್ ಸ ಚ ಕ್ರೋಧಾತ್ ಕ್ಷುಭಿತೇನಾಂತರಾತ್ಮನಾ ।**
**.....**
**ಉದಂಕಸ್ತಂ ತಥಾ ದೃಷ್ಟ್ವಾ ತತೋ ವ್ರೀಡಿತಮಾನಸಃ ।**
**ಮೇನೇ ಪ್ರಲಬ್ಧಮಾತ್ಮಾನಂ ಕೃಷ್ಣೇನಾಮಿತ ತೇಜಸಾ ॥**

**ಉದಂಕಃ-ಕೃಷ್ಣಂ ಉವಾಚ**

**ನ ಯುಕ್ತಂ ತಾದೃಶಂ ದಾತುಂ ತ್ವಯಾ ಪುರುಷಸತ್ತಮ ।**
**ಸಲಿಲಂ ವಿಪ್ರಮುಖ್ಯೇಭ್ಯೋ ಮಾತಂಗಸ್ರೋತಸಾ ವಿಭೋ ॥**

**ಕೃಷ್ಣ -**

**ಮಯಾ ತ್ವದರ್ಥಮುಕ್ತೋ ಹಿ ವಜ್ರಪಾಣಿಃ ಪುರಂದರಃ।**
**ಉದಂಕಾಯಾಮೃತಂ ದೇಹಿ ತೋಯರೂಪಮಿತಿ ಪ್ರಭುಃ॥**

**ಇಂದ್ರ -**

**ಸ ಮಾಮುವಾಚ ದೇವೇಂದ್ರೋ ನ ಮರ್ತ್ಯೋಽಮರ್ತ್ಯತಾಂ ವ್ರಜೇತ್।**

**ಕೃಷ್ಣಃ- ಉದಂಕಂ ಪ್ರತಿ**

**ಚಾಂಡಾಲರೂಪೀ ಭಗವಾನ್ ಸುಮಹಾಂಸ್ತೇ ವ್ಯತಿಕ್ರಮಃ।**
**ಯೇಷ್ವಹಃಸು ತವ ಬ್ರಹ್ಮನ್ ಸಲಿಲೇಪ್ಸಾ ಭವಿಷ್ಯತಿ॥**
**ತದಾ ಮರೌ ಭವಿಷ್ಯಂತಿ ಜಲಪೂರ್ಣಾಃ ಪಯೋಧರಾಃ॥**
**ರಸವಚ್ಚ ಪ್ರದಾಸ್ಯಂತಿ ತೋಯಂ.....**
**ಉದಂಕಮೇಘಾ ಇತ್ಯುಕ್ತಾಃ ಖ್ಯಾತಿಂ ಯಾಸ್ಯಂತಿ ಚಾಪಿ ತೇ।**
**ಅದ್ಯಾಪ್ಯುದಂಕಮೇಘಾಶ್ಚ ಮರೌ ವರ್ಷಂತಿ ಭಾರತ॥ - ೫೫/೨೧-೪೪**

ಭಗವಂತನಿಗೆ ಶಾಪ ಕೊಡಲು ಹೋದ ಮಹರ್ಷಿ ಉದಂಕರನ್ನು ಕೃಷ್ಣನು ಅನುಗ್ರಹಿಸಿದ ಇತಿಹಾಸವಿದು.

ಈ ಕಥೆಯನ್ನು ಜನಮೇಜಯನು ವೈಶಂಪಾಯನರನ್ನು ಉದಂಕರು ಯಾವ ತಪಸ್ಸಿನಿಂದ ಕೂಡಿದ್ದರೆಂದು ಕೇಳಲಾಗಿ ವೈಶಂಪಾಯನರು 'ಉದಂಕರು ಮಹಾಗುರುಭಕ್ತ, ತೇಜಸ್ವೀ, ಗುರುದೇವತಾರಾಧನೆಯನ್ನು ಹೊರತುಪಡಿಸಿ ಬೇರೇನನ್ನೂ ಮಾಡಲಿಲ್ಲ. ಅದೇ ಆತನ ತಪಸ್ಸು ಎಂದರು. ಆತನ ಗುರುಭಕ್ತಿಯು ಇತರಶಿಷ್ಯರಿಗೆಲ್ಲ ಆದರ್ಶವಾಗಿತ್ತು. ತಾವೂ ಹಾಗೆಯೇ ಇರಲು ಬಯಸಿದ್ದರು, ಉಳಿದ ಸಹಪಾಠಿಗಳು.

ಗೌತಮರಿಗೆ ಉದಂಕನ ಮೇಲೆ ವಿಶೇಷ ಪ್ರೀತಿ, ಅಭಿಮಾನವಿತ್ತು. ಉದಂಕನು ಇಂದ್ರಿಯನಿಗ್ರಹ, ಶೌಚಾದಿಗಳಿಂದ ಗುರುಗಳನ್ನು ಗೆದ್ದಿದ್ದನು. ಸಹಸ್ರಾರು ಶಿಷ್ಯರು ಅಧ್ಯಯನ ಮುಗಿದು ತಮ್ಮ ತಮ್ಮ ಮನೆಗಳಿಗೆ ಹೋಗಿದ್ದರೂ, ಇವನಿಗೆ ಮಾತ್ರ ಅನುಮತಿ ನೀಡಲಿಲ್ಲ ಗೌತಮರು. ಉದಂಕನಿಗೆ ಮುಪ್ಪು ಬಂದರೂ ಆತನಿಗೆ ಗೊತ್ತಾಗಲಿಲ್ಲ. ಒಮ್ಮೆ ಉದಂಕ ಕಾಡಿಗೆ ಕಾಷ್ಠ(ಕಟ್ಟಿಗೆ) ತರಲು ಹೋಗಿದ್ದ. ಅದರ ಭಾರದಿಂದ ಬಳಲಿ ಅದನ್ನು ಕೆಳಗಡೆ ಇಳಿಸಲು ಹೋದಾಗ ಹಸಿವೆಯಿಂದ ಸುಸ್ತಾಗಿ ಕುಸಿದು ಭೂಮಿಯ ಮೇಲೆ ಬಿದ್ದ. ಆಗ ಬಿದ್ದ ಕಾಷ್ಠದಲ್ಲಿ ತನ್ನ ಬಳಿಕೂದಲನ್ನು ನೋಡಿ ಆರ್ತಸ್ವರದಿಂದ ಅತ್ತನು. ಅದನ್ನು ನೋಡಿದ ತಂದೆಯ ಆದೇಶದಂತೆ ಧರ್ಮಜ್ಞಳಾದ, ಸುಂದರಿಯಾದ ಅವರ ಮಗಳು ಉದಂಕನ ಕಣ್ಣೀರನ್ನು (ಭೂಮಿಗೆ ಬೀಳದಂತೆ) ತನ್ನ ಬೊಗಸೆಯಲ್ಲಿ ಹಿಡಿದಳು. ಬಿಸಿಯಾದ ಕಣ್ಣೀರಿನಿಂದ ಸುಟ್ಟ ಮಗಳ ಕೈಗಳಿಂದ ನೀರು ಭೂಮಿಗೆ ಬಿದ್ದವಾದರೂ, ಅದನ್ನು ಧರಿಸಲು ಭೂಮಿಗೂ ಆಗಲಿಲ್ಲ.

ಆಗ ಗೌತಮರು 'ಉದಂಕ ಏಕೆ ಅಳುತ್ತಿದ್ದೀ?' ಎಂದರು. 'ಗುರುಗಳೇ! ನಿಮ್ಮಲ್ಲಿಯೇ ಮನಸ್ಸಿಟ್ಟು ನಿಮ್ಮ ಪ್ರೀತಿಗಾಗಿಯೇ, ನಿಮ್ಮ ಮೇಲಿನ ಭಕ್ತಿಯಿಂದ, ನಿಮ್ಮ ಮನೋಭಾವನೆಗಳಿಗನುಗುಣವಾಗಿ ನನ್ನ ಮನಸ್ಸು ವರ್ತಿಸುತ್ತಿದೆ. ಗುರುಸೇವಾರತ ನನಗೆ ಮುಪ್ಪು ಬಂದುದು ಇಂದಿಗೂ ತಿಳಿದಿಲ್ಲ, ಲೋಕಸುಖದ ಕಲ್ಪನೆಯೇ ನನಗಿಲ್ಲ. ನನಗೆ ನೂರುವರ್ಷ ಸಂದರೂ ನನಗೆ ನೀವು ಮನೆಗೆ ಹೋಗಲು ಅನುಮತಿ ನೀಡಿಲ್ಲ, ಆದರೆ ಗುರುಕುಲಕ್ಕೆ ಬಂದ ಸಾವಿರಾರು ವಿದ್ಯಾರ್ಥಿಗಳು ನಿಮ್ಮ ಅನುಮತಿ ಪಡೆದು ತಮ್ಮ ಊರುಗಳಿಗೆ ಹೋಗಿದ್ದಾರೆ.' ಎಂದನು ಉದಂಕ.

ಅದಕ್ಕೆ ಗುರುಗಳು 'ವತ್ಸ! ಹೌದು ನಿನ್ನ ಮೇಲಿನ ಪ್ರೀತಿ, ನಿನ್ನ ಶ್ರದ್ಧಾಪೂರ್ವಕಸೇವೆ ಗಮನಿಸುತ್ತಿರುವ ನನಗೂ ನೀನು ಇಲ್ಲಿಗೆ ಆಗಮಿಸಿ ನೂರುವರ್ಷಗಳು ಆಗಿವೆ ಎಂದು ತಿಳಿಯಲೇ ಇಲ್ಲ, ಆದರೆ, ನಿನಗೀಗ ಹೋಗುವ ಬಯಕೆ ಇದ್ದಲ್ಲಿ ನನ್ನ ಅನುಮತಿ ಪಡೆದು ಅವಶ್ಯ ಹೋಗು' ಎಂದರು.

ಉದಂಕನು 'ಗುರುಗಳೇ! ನಾನು ಹೋಗುತ್ತೇನೆ. ಆದರೆ ಹೋಗುವ ಮುನ್ನ ಗುರುದಕ್ಷಿಣೆ ಏನು ಕೊಡಲಿ, ದಯಮಾಡಿ ತಿಳಿಸಿರಿ. ಅದನ್ನು ತಂದುಕೊಟ್ಟು ತಮ್ಮ ಅನುಮತಿ ಪಡೆದು ಹೋಗುತ್ತೇನೆ' ಎಂದನು.

ಗುರುಗಳು 'ಗುರುಸೇವೆ ಮಾಡಿ ಅವರನ್ನು ಸಂತೋಷಪಡಿಸುವುದೇ ಗುರುದಕ್ಷಿಣೆ ಎಂದು ಸತ್ಪುರುಷರ ಅಭಿಪ್ರಾಯ. ನೀನು ಅದನ್ನು ಮಾಡಿರುವೆ. ಅದರಿಂದ ನನಗೆ ಸಂತೋಷವಾಗಿದೆ' ಎಂದರು. ಅದರಿಂದ ನೀನು ಹದಿನಾರುವರ್ಷದ ಯುವಕನಾಗು, ನನ್ನ ಮಗಳನ್ನು ವಿವಾಹವಾಗು ತೇಜಸ್ವಿನಿಯಾದ ನನ್ನ ಮಗಳು ನಿನ್ನನ್ನು ಚೆನ್ನಾಗಿ ಸೇವಿಸುತ್ತಾಳೆ. ಅಷ್ಟು ಸೇವೆ ಬೇರೆ ಯಾರೂ ಮಾಡಲಾರರು' ಎಂದರು.

ಗುರುಗಳ ಅನುಗ್ರಹದಿಂದ ಉದಂಕನು ಯುವಕನಾದ. ಗುರುಪುತ್ರಿಯನ್ನು ವಿವಾಹವಾದ. ನಂತರ ಗೌತಮರ ಅನುಮತಿಯನ್ನು ಪಡೆದು ಗುರುಪತ್ನಿಯಾದ ಅಹಲ್ಯೆಯ ಬಳಿ ಹೋಗಿ 'ನಿಮಗೆ ಗುರುದಕ್ಷಿಣೆ ಏನು ಕೊಡಲಿ? ನನ್ನ ಜೀವತೆತ್ತಾದರೂ ತಂದು ಕೊಡುವೆ. ಅತ್ಯಂತ ದುರ್ಲಭವಾದ ಪದಾರ್ಥವಿದ್ದರೂ, ನಿಮಗೆ ಬೇಕಾದುದನ್ನು ನನ್ನ ತಪಸ್ಸಿನಿಂದ ತಂದು ಕೊಡುವೆ. ಅದರಲ್ಲಿ ಯಾವ ಸಂಶಯವಿಲ್ಲ' ಎಂದ ಪ್ರಾರ್ಥಿಸಿದನು. ಅವರಾದರೂ ಗೌತಮರಂತೆ ನೀನು ಮಾಡಿದ ಸೇವೆಯಿಂದ ಸಂತೊಷವಾಗಿದೆ. ಬೇರೇನೂ ಬೇಡ' ಎಂದರು. ಆದರೂ ಮತ್ತೆ ಉದಂಕನ ಒತ್ತಾಯ ಮಾಡಿದಾಗ 'ಸೌದಾಸ ರಾಜಪತ್ನಿಯು ಧರಿಸಿದ ಎರಡು ಕರ್ಣಕುಂಡಲಗಳನ್ನು ತಂದು ಕೊಡು. ಅದೇ ಗುರುಗಳ ಸಲುವಾಗಿ ಸೇವೆ ಮಾಡಿದಂತಾಗುತ್ತದೆ (ಗುರುದಕ್ಷಿಣೆ)' ಎಂದರು ಗುರುಪತ್ನಿ.

ಇದನ್ನು ಕೇಳಿ ಉದಂಕನು ಅದನ್ನು ಸಂಪಾದಿಸಲು ಆಗ ರಾಕ್ಷಸನಾಗಿದ್ದ ಸೌದಾಸರಾಜನ ಬಳಿಗೆ ಪ್ರಾರ್ಥಿಸಲು ಹೊರಟರು. ಗೌತಮರಿಗೆ ಇದು ಗೊತ್ತಿರಲಿಲ್ಲ. ಅವರು ಉದಂಕ ಎಲ್ಲಿ? ಎಂದಾಗ ವಿಷಯ ತಿಳಿದು ಅಹಲ್ಯೆಗೆ 'ನೀನು ಈ ವಿಷಯ ಚೆನ್ನಾಗಿ ತಿಳಿದುಕೊಂಡು ಕೇಳಬೇಕಾಗಿತ್ತು. ಸೌದಾಸನು ಈಗ ಶಾಪಗ್ರಸ್ತನಾಗಿ ರಾಕ್ಷಸನಾಗಿದ್ದಾನೆ. ಅವನ ಬಳಿಗೆ ಹೋದ ಉದಂಕ ಬದುಕಿ ಬಾರನು' ಎಂದರು. ಅದಕ್ಕೆ ಅಹಲ್ಯೆಯು 'ನನಗೂ ಇದು ಗೊತ್ತಿರಲಿಲ್ಲ. ಆದರೆ ನಿಮ್ಮ ಅನುಗ್ರಹದಿಂದ ಶಿಷ್ಯನಿಗೆ ಭಯವಾಗದು' ಎಂದಾಗ, ಗೌತಮರು ಶಿಷ್ಯನ ಮೇಲಿನ ಕರುಣೆಯಿಂದ 'ಹಾಗೇ ಆಗಲಿ' (ಏವಮಸ್ತು) ಎಂದರು.

ಇತ್ತ ಉದಂಕನು ಸೌದಾಸ (ರಾಕ್ಷಸ) ರಾಜನು ಇದ್ದ ವನಕ್ಕೆ ಹೋಗಿ ಪ್ರಾರ್ಥಿಸಿದ. ಆದರೆ ಸೌದಾಸನು 'ನೀನು ನನ್ನ ಅದೃಷ್ಟದಿಂದ ಆಹಾರ ಸೇವಿಸುವ ಕಾಲಕ್ಕೆ (ಷಷ್ಠ) ಸರಿಯಾಗಿ ಬಂದಿದ್ದೀಯಾ. ನಿನ್ನನ್ನು ಬಿಡೆನು' ಎಂದ. ಅದಕ್ಕೆ ಉದಂಕನು 'ಹಾಗೇ ಆಗಲಿ. ನನ್ನ ಗುರುದಕ್ಷಿಣೆ ವಸ್ತುವಿಗಾಗಿ ಬಂದಿದ್ದೇನೆ. ಅದು ಸಿಕ್ಕಮೇಲೆ ಗುರುಗಳಿಗೆ ಅರ್ಪಿಸಿ ನಾನು ಮತ್ತೆ ನಿನ್ನ ಆಹಾರಕ್ಕಾಗಿ ಬರುವೆ' ಎಂದು ಮಾತು ಕೊಟ್ಟ ಉದಂಕನು –

'ರಾಜ ನೀನು ಶ್ರೇಷ್ಠ ದಾನಿ ಎಂದು ಪ್ರಸಿದ್ಧ, ನಾನು ಸತ್ಪಾತ್ರ, ನನ್ನ ಮಾತಿಗೆ ತಪ್ಪದೇ ಮತ್ತೆ ನಿನ್ನ ಆಹಾರವಾಗಿ ಬರುವೆ' ಎಂದ. ಅದಕ್ಕೆ ರಾಜನು 'ನಿನಗೆ ಬೇಕಾದ ಗುರುದಕ್ಷಿಣೆ ವಸ್ತು ನನ್ನ ಅಧೀನದಲ್ಲಿರುವುದಾದರೆ, ಅದು ಸಿಗುತ್ತದೆ. ಅದ್ಯಾವುದು?' ಎಂದು ಕೇಳಿದ ರಾಜನಿಗೆ ಉದಂಕನು 'ನಿನ್ನ ಪತ್ನಿ ಧರಿಸಿರುವ ಕರ್ಣಕುಂಡಲಗಳು ನನ್ನ ಗುರುಪತ್ನಿ ಅಪೇಕ್ಷಿಸಿದ್ದಾರೆ. ಅದು ಕೊಡಬೇಕು' ಎಂದ. ಅದಕ್ಕೆ ರಾಜನು ಟನನ್ನ ಮಾತಿನಂತೆ ನನ್ನ ಪತ್ನಿಯ ಬಳಿಗೆ ಹೋಗಿ ಕೇಳು. ಆಕೆ ಕೊಡುತ್ತಾಳೆ' ಎಂದ. 'ನಿನ್ನ ಪತ್ನಿ ಎಲ್ಲಿದ್ದಾಳೆ' ಎಂದ ಉದಂಕ. ಅದಕ್ಕೆ ರಾಜನು 'ಆಕೆಯು ಇದೇ ನಿರ್ಜನಾರಣ್ಯದಲ್ಲಿದ್ದಾಳೆ. ನಾನು ಈ ನನ್ನ ಆಹಾರ ಸ್ವೀಕಾರ ಸಮಯದಲ್ಲಿ(ಷಷ್ಠಕಾಲ) ನೀನು ನೋಡಲಾರೆ ಎಂದನು.'

ಆದರಂತೆ ಉದಂಕನು ರಾಜಪತ್ನಿಯನ್ನು ಹುಡುಕಿ, ಕಂಡು ತನ್ನ ಕೋರಿಕೆಯನ್ನು ಮುಂದಿಟ್ಟ. ಅದಕ್ಕೆ ಆ ಮದಯಂತಿ ರಾಜಪತ್ನಿಯು ರಾಜನ ಸಂದೇಶ ನೀನು ತಂದಿರುವುದಕ್ಕೆ ಏನಾದರೂ ಗುರುತನ್ನು ತಾ ಎಂದಳು. ಮತ್ತೆ ರಾಜನ ಬಳಿಗೆ ಹೋಗಿ ಹೇಳಲು ರಾಜನು ಹೀಗೆಂದ 'ಪ್ರಿಯ ಪತ್ನಿಯೇ ನಾನು ಹೊಂದಿರುವ ಈ ರಾಕ್ಷಸಗತಿ ಪ್ರೇಮಕರವಲ್ಲ(ಮಂಗಳವಲ್ಲ). ನನಗೆ ಬೇರಾವ ಮಾರ್ಗವಿಲ್ಲ. ಈ ನನ್ನ ಮಾತನ್ನು ಗುರುತೆಂದು ಭಾವಿಸಿ ಬ್ರಾಹ್ಮಣನಿಗೆ ಕುಂಡಗಳನ್ನು ಕೊಡು'[೧].

---

೧ ನ ಚೈವೈಷಾ ಗತಿಃ ಕ್ಷೇಮ್ಯಾ ನ ಚಾನ್ಯಾ ವಿದ್ಯತೇ ಗತಿಃ।
ಏತನ್ಮೇ ತತ್ತ್ವಮಾಜ್ಞಾಯ ಪ್ರಯಚ್ಛ ಮಣಿಕುಂಡಲೇ॥ – ೫೮/೨

ರಾಜನ ಮಾತನ್ನು ಉದಂಕನು ರಾಣಿಯ ಸನ್ನಿಧಿಗೆ ತಿಳಿಸಿದ. ರಾಣಿಯು ಉದಂಕರಿಗೆ ಆ ಎರಡೂ ಕರ್ಣಕುಂಡಲಗಳನ್ನು ಕೊಟ್ಟು ಕೆಲವು ಎಚ್ಚರಿಕೆಯ ಮಾತುಗಳನ್ನು ಅದರ ಮಹತ್ತ್ವವನ್ನು ತಿಳಿಸಿದಳು.

೧. ಈ ಕರ್ಣಕುಂಡಲಗಳನ್ನು ದೇವತೆಗಳು, ಯಕ್ಷರು, ನಾಗರು, ಸರ್ಪಗಳು, ನೆಲದ ಮೇಲೆ ಇಟ್ಟರೆ ಸಾಕು, ಅಪಹರಿಸಲು ಕಾಯತ್ತಿದ್ದಾರೆ. ಆದ್ದರಿಂದ ಜೋಕೆ! ಕೆಳಗೆ ಇಡಬೇಡ.

೨. ಇವು ಹಗಲು, ರಾತ್ರಿ ಹೊಳೆಯುತ್ತವೆ. ರಾತ್ರಿ ನಕ್ಷತ್ರಗಳ ಪ್ರಭೆಯನ್ನು ಇವು ಮೀರಿಸುತ್ತವೆ. ಇವುಗಳನ್ನು ಧರಿಸಿದವರಿಗೆ ಹಸಿವು, ಬಾಯಾರಿಕೆಗಳು ಇರುವುದಿಲ್ಲ, ಅಗ್ನಿ, ವಿಷಗಳ ಭಯವಿಲ್ಲ, ಮಾಂಸಾಹಾರಿ ಪ್ರಾಣಿಗಳ ಭಯವಿಲ್ಲ, ಧರಿಸುವ ವ್ಯಕ್ತಿಯ ದೇಹದ ಪ್ರಮಾಣಕ್ಕೆ ಅನುಗುಣವಾಗಿ ಇವುಗಳ ಪರಿಮಾಣವೂ ಸೂಕ್ತವಾಗಿ ಬದಲಾಗಿ ಅಂದವಾಗಿ ಕಾಣುತ್ತವೆ. ಇವು ಮೂರುಲೋಕಗಳಲ್ಲಿ ಪ್ರಖ್ಯಾತಿ ಹೊಂದಿವೆ.

ಹೀಗೆ ಮದಯಂತಿಯಿಂದ ಕರ್ಣಕುಂಡಲಗಳನ್ನು ಪಡೆದ ಉದಂಕನು ಮತ್ತೆ ರಾಜನ ಬಳಿಗೆ ಬಂದು 'ನಿನ್ನ ಪತ್ನಿಗೆ ಹೇಳಿದ ಮಾತಿನ ರಹಸ್ಯಾರ್ಥವೇನೆಂದು ಕೇಳಿದನು. ಅದಕ್ಕೆ ರಾಜನು 'ಉದಂಕರೇ! ಬ್ರಾಹ್ಮಣರು ನಾರಾಯಣನಿಂದ ಉತ್ಪನ್ನರು. ಆದ್ದರಿಂದ ಕ್ಷತ್ರಿಯರು ಬ್ರಾಹ್ಮಣರನ್ನು ಪೂಜಿಸುತ್ತಾರೆ. ನಾನೂ ಹಾಗೆಯೇ ಗೌರವಿಸುತ್ತಿದ್ದೆ. ಆದರೂ ಅಂತಹ ಬ್ರಾಹ್ಮಣನಿಂದಲೇ ನಾನು ಈ ರಾಕ್ಷಸನಾಗುವ ಪರಿಸ್ಥಿತಿ ಬಂತು. ಈಗ ನನಗೆ ನನ್ನ ಪತ್ನಿಯ ಹೊರತಾಗಿ ಯಾರೂ ಸಹಾಯಕರಿಲ್ಲ, ಗತಿಯೂ ಇಲ್ಲ, ಸ್ವರ್ಗಕ್ಕೆ ಹೋಗಲು, ಇಲ್ಲೂ ಸುಖವಾಗಿರಲು ನಿನ್ನಂತಹ ಸತ್ಪಾತ್ರ ಬ್ರಾಹ್ಮಣರೂ ಇಲ್ಲ, ಬ್ರಾಹ್ಮಣರ ದ್ವೇಷದಿಂದ ಇಹಪರಗಳಿಲ್ಲ, ಆದ್ದರಿಂದಲೇ ನನ್ನ ಇಹಪರ ಗತಿಗೋಸ್ಕರ ನನಗೆ ಈ ಕುಂಡಲಗಳನ್ನು ಕೊಡುತ್ತಿದ್ದೇನೆ. ನೀನೂ ಕೂಡಾ ಒಪ್ಪಿದಂತೆ ನಡೆ (ಕುಂಡಲಗಳನ್ನು ಗುರುಪತ್ನಿಗೆ ಕೊಟ್ಟು ನನ್ನ ಆಹಾರವಾಗಿ ವಾಪಸು ಬಾ) ಮಾತಿಗೆ ತಪ್ಪಬೇಡ' ಎಂದನು.

ಅದಕ್ಕೆ ಉದಂಕನು ನಾನು ಒಪ್ಪಿದ್ದೇನೆ. ಆದರೂ ಒಂದು ಪ್ರಶ್ನೆ ಕೇಳಬಹುದೇ ಅಂದನು. ರಾಜ ಆಗಲಿ ಎಂದ. ಉದಂಕರು 'ರಾಜನ್! ನಿನ್ನಂತಹ ಸತ್ಸಂಗ ನನಗೆ ಸಿಕ್ಕಿದೆ. ಮಾತಿನಲ್ಲಿ ಸಂಯಮವಿರುವ ವ್ಯಕ್ತಿಯನ್ನು ಬ್ರಾಹ್ಮಣನೆಂದು ಪಂಡಿತರು ಕರೆಯುತ್ತಾರೆ. ನಿನ್ನಂತಹ ಸ್ನೇಹಿತನ ವಿಷಯದಲ್ಲಿ ವಿರುದ್ಧವಾಗಿ ನಡೆದರೆ ಕಳ್ಳನಾಗುತ್ತಾನೆ. ಆದ್ದರಿಂದ ನಿನ್ನಂತಹ ಮಿತ್ರನಾದ ನನಗೆ ಬುದ್ಧಿವಾದ ಹೇಳು.

'ನಿನ್ನ ಬಳಿಯಲ್ಲಿ ನನ್ನ ಇಚ್ಛೆ ಈಡೇರಿದೆ. ನೀನು ನರಭಕ್ಷಕ. ಇಂತಹ ಪರಿಸ್ಥಿತಿಯಲ್ಲಿ ನಾನು ನಿನ್ನ ಬಳಿ ಬರುವುದು ಸರಿಯೇ ತಿಳಿಸು' ಎಂದ ಉದಂಕ. ಅದಕ್ಕೆ ರಾಜನು 'ನಿಜ, ನನ್ನ ಬಳಿ ನೀನು ಬರುವ ಅಗತ್ಯವಿಲ್ಲ, ಬಂದರೆ ನೀನು ಮೃತ್ಯುವಿಗೆ ಸಮೀಪ ಬಂದಂತಾಗುತ್ತದೆ' ಎಂದನು. ಹೀಗೆ ರಾಜನನ್ನು ಉಪಾಯದಿಂದ ಒಲಿಸಿಕೊಂಡ ಉದಂಕನು ಗುರುಗಳ ಮನೆಗೆ

ಹೋಗಲು ಸಿದ್ಧನಾದನು.

ಕುಂಡಲಗಳನ್ನು ತೆಗೆದುಕೊಂಡು ಗುರುಗಳ ಆಶ್ರಮಕ್ಕೆ ಹೋಗುವ ಮೊದಲು ಕುಂಡಲಗಳ ರಕ್ಷಣೆ ಬಗ್ಗೆ ರಾಣಿ ಮದಯಂತಿ ಹೇಳಿದುದನ್ನು ಸ್ಮರಿಸಿಕೊಳ್ಳುತ್ತಾ ಹೊರಟನು. ಮೊದಲು ಅವನ್ನು ಕೃಷ್ಣಾಜಿನದಲ್ಲಿ ಕಟ್ಟಿಕೊಂಡು ಹೊರಟಾಗ ದಾರಿಮಧ್ಯೆ ತುಂಬ ಹಸಿವಿನಿಂದ ಬಳಲಿದ. ಅಲ್ಲಿ ಒಂದು ಫಲಭರಿತ ಬಿಲ್ವವೃಕ್ಷವನ್ನು ನೋಡಿ, ಕುಂಡಲಗಳ ಕೃಷ್ಣಾಜಿನ ಗಂಟನ್ನು ಒಂದು ಟೊಂಗೆಗೆ ಕಟ್ಟಿ ಮರವೇರಿ ಹಣ್ಣುಗಳನ್ನು ಉದುರಿಸಿದ. ಹಣ್ಣುಗಳು ಬಿದ್ದಾಗ ಕೃಷ್ಣಾಜಿನದಲ್ಲಿದ್ದ ಕುಂಡಲಗಳೂ ನೆಲದ ಮೇಲೆ ಬಿದ್ದುಬಿಟ್ಟವು. ಅದನ್ನು ನೋಡಿದ **ಐರಾವತಕುಲದ ತಕ್ಷಕ ಸರ್ಪವು** ಬಾಯಿಯಿಂದ ಕಚ್ಚಿಕೊಂಡು ಕೂಡಲೇ ಒಂದು ಹುತ್ತವನ್ನು ಹೊಕ್ಕಿತು. ಇದನ್ನು ನೋಡಿದ ಉದಂಕ ಉದ್ವೇಗ ಹಾಗೂ ಸಿಟ್ಟಿನಿಂದ ಮರದಿಂದ ಹಾರಿ ಹುತ್ತವನ್ನು ಒಂದು ಕೋಲಿನಿಂದ ಅಗೆಯತೊಡಗಿದ. ಹೀಗೆ ೩೫ ದಿನ ಈ ಪ್ರಯತ್ನ ನಡೆಯಿತು. ಸರ್ಪ ಹೋದ ನಾಗಲೋಕದ ದಾರಿ ಸಿಗಲಿಲ್ಲ. ಆ ಅಗೆತದಿಂದ ಭೂಮಿಯೇ ನಲುಗಿತು.

ಅದೇ ಸಮಯಕ್ಕೆ ಅಲ್ಲಿಗೆ ರಥಾರೂಢನಾಗಿ ವಜ್ರಪಾಣಿಯಾಗಿ ಇಂದ್ರದೇವರು ಬ್ರಾಹ್ಮಣ ವೇಷದಿಂದ ಬಂದು ಉದಂಕನಿಗೆ ದೊಣ್ಣೆಯಿಂದ ನಾಗಲೋಕದ ದಾರಿಯನ್ನು ಅಗೆಯುವುದು ಅಸಾಧ್ಯವೆಂದ. ಅದನ್ನು ಕೇಳಿದ ಉದಂಕನು ಹಾಗಾದರೆ ನೀನು ನೋಡುತ್ತಿರುವಂತೆಯೇ ನಾನು ಪ್ರಾಣ ಬಿಡುತ್ತೇನೆ ಎಂದ. ಈ ಮಾತನ್ನು ಕೇಳಿದ ಇಂದ್ರನು ತನ್ನ ವಜ್ರಾಯುಧವನ್ನು (ಶಕ್ತಿಯನ್ನು) ಉದಂಕನ ದಂಡದಲ್ಲಿ ಪ್ರವೇಶಿಸಿದನು. ಉದಂಕನು ತನ್ನ ಪ್ರಯತ್ನ ಮುಂದುವರೆಸಿದಾಗ ಭೂಮಿಯು ವೇಗವಾಗಿ ನಾಗಾಲೋಕಕ್ಕೆ ದಾರಿ ಸಿಕ್ಕು ನಾಗಲೋಕದವನ್ನು ಪ್ರವೇಶಿಸಿದ. ನಾಗಲೋಕದ ಅದ್ಭುತ ವೈಭವವನ್ನು ನೋಡಿದ ಉದಂಕನು ಐದು ಯೋಜನ ವಿಸ್ತಾರದ, ನೂರು ಯೋಜನ ಉದ್ದದ ಮಹಾದ್ವಾರವನ್ನು ದಿವ್ಯಮಣಿ, ಮುತ್ತು, ಬಂಗಾರಗಳು ತುಂಬಿರುವ ಲೋಕವನ್ನು ಕಂಡ. ಇಂತಹ ವಿಸ್ತಾರವಾದ ಲೋಕದಲ್ಲಿ ಕುಂಡಲಗಳನ್ನು ಎಲ್ಲಿ ಹುಡುಕಬೇಕೆಂದು ತಿಳಿಯದೆ ದೀನನಾದ ನಿರಾಶನಾದ. ಅದೇ ವೇಳೆ ಅಲ್ಲಿ ಕಪ್ಪು ಬಿಳಿ ಕೂದಲುಗಳ ಬಾಲವಿರುವ ಕೆಂಪಾದ ಮುಖ, ಕಣ್ಣುಗಳಿಂದ ಕೂಡಿದ ತನ್ನ ತೇಜಸ್ಸಿನಿಂದ ಪ್ರಜ್ವಲಿಸುವ ಒಂದು ಕದುರೆಯು ಉದಂಕನಿಗೆ 'ಭೋ ವಿಪ್ರ! ನನ್ನ ಅಪಾನ ಸ್ಥಾನದಲ್ಲಿ ವೇಗವಾಗಿ ಊದು. ಆಗ ನಿನ್ನ ಕರ್ಣಕುಂಡಲಗಳನ್ನು ಅಪಹರಿಸಿದ ಐರಾವತಸುತನಿಂದ ಸಿಗಬಹುದು' ಎಂದಿತು. ಕೆಲಸದಲ್ಲಿ ಹೇಸಿಗೆ ಪಡಬೇಡ. ನಿನ್ನ ಗುರುಗಳ ಆಶ್ರಮದಲ್ಲಿ ನೀನೇ ಇದನ್ನು ಮಾಡಿದ್ದೀಯಾ. ಅದಕ್ಕೆ ಉದಂಕನು ನಿನಗೆ ಈ ವಿಷಯ ಹೇಗೆ ತಿಳಿಯಿತು ಎಂದ. ಆಗ ಅಶ್ವವು ಭೃಗು ನಂದನನೇ! ನಾನು ನಿನ್ನ ಗುರುವಿಗೂ ಗುರುವಾದ ಅಗ್ನಿದೇವ. ನೀನು ಗುರುಗ:ಳ ಸೇವಾಭಾಗವಾಗಿ ಶುಚಿಯಾಗಿ ಹೋಮಾದಿಗಳನ್ನು ವಿಧಿವತ್ತಾಗಿ ಮಾಡಿ ರೂಢಿಸಿದ್ದಿಯಾ. ಕಾರಣ ನಿನಗೆ ಶ್ರೇಯಸ್ಸನ್ನು ನಾನು ಬಗೆಯುತ್ತೇನೆ. ನಾನು ಹೇಳಿದಂತೆ ಮಾಡು ಎಂದಾಗ ಉದಂಕನು ಹಾಗೇ ಮಾಡಿದ.

ತಕ್ಷಣ ಗುದದ್ವಾರದಿಂದ ಅಗ್ನಿಯು ನಾಗಲೋಕವನ್ನೇ ಸುಡುವಂತೆ ಕುದುರೆಯ ರೋಮಕೂಪಗಳಿಂದ ದಟ್ಟವಾದ ಹೊಗೆ ಆವರಿಸಿತು. ಇಡೀ ಲೋಕಕ್ಕೆ ಭಯವಾಯಿತು. ಎಲ್ಲ ಸರ್ಪಗಳೂ ಬೆದರಿ ಬೆಂಡಾಗಿ ಹಾಹಾಕಾರ ಮಾಡಿದವು. ಐರಾವತನ ಮನೆಯಲ್ಲಿ ವಾಸುಕಿ ಪ್ರಮುಖರು ದುಃಖಿಸಿದರು. ಹೊಗೆಯಿಂದ ನಾಗಲೋಕ ಮುಚ್ಚಿಹೋಯಿತು. ನಂತರ ಎಲ್ಲ ನಾಗಗಳು ಉದಂಕನಿದ್ದೆಡೆ ಆಗಮಿಸಿ ಆತನ ಭಾವ ತಿಳಿದವು, ಸತ್ಕರಿಸಿದವು. ಎಲ್ಲ ಸರ್ಪಗಳೂ ಬಾಗಿ ನಮಸ್ಕರಿಸಿ, ಅರ್ಘ್ಯ, ಪಾದ್ಯ, ನೈವೇದ್ಯಾದಿಗಳಿಂದ ಪ್ರಸನ್ನೀಕರಿಸಿ(ಉದಂಕನನ್ನು) ಕರ್ಣಕುಂಡಲಗಳನ್ನು ಉದಂಕನಿಗೆ ಒಪ್ಪಿಸಿದವು. ಅವರಿಂದ ಪೂಜಿತನಾದ ಉದಂಕನು ಅಗ್ನಿಯನ್ನು ಪ್ರದಕ್ಷಿಣೆಯಿಂದ ನಮಸ್ಕರಿಸಿ ಗುರುಗಳ ಆಶ್ರಮದೆಡೆಗೆ ಬೇಗ ಹೊರಟನು. ಗುರುಪತ್ನಿಗೆ ಕುಂಡಲಗಳನ್ನು ಸಮರ್ಪಿಸಿ, ಅವರ ಅನುಗ್ರಹ ಸಂಪಾದಿಸಿದನು. ಹೀಗೆ ಉದಂಕನು ಭೂಲೋಕ, ನಾಗಲೋಕಗಳನ್ನು ಸುತ್ತಾಡಿ ಕಳೆದುಹೋದ ಕರ್ಣಕುಂಡಲಗಳನ್ನು ಗುರುಪತ್ನಿಗೆ ನೀಡಿದ ಮಹಾಪ್ರಭಾವಿಯೂ, ತಪಸ್ವಿಯೂ ಆಗಿದ್ದಾನೆ ಎಂದು ವೈಶಂಪಾಯನರು ಜನಮೇಜಯ ರಾಜನಿಗೆ ಹೇಳಿದರು.

## ಸಂದೇಶಗಳು - ವಿವರಣೆಗಳು

೧. ಉದಂಕೋಪಾಖ್ಯಾನವು ಅನುಗೀತಾ ಉಪಪರ್ವದಲ್ಲಿ ಆರು ಅಧ್ಯಾಯಗಳಲ್ಲಿ ಹರಡಿದೆ (೫೩-೫೮). ೫೬-೫೮ ಅಧ್ಯಾಯದಲ್ಲಿ ಆತನ ಗುರುಕುಲವಾಸದಲ್ಲಿ ಆತನ ಸೇವೆ ಹಾಗೂ ಗುರು-ಗುರುಪತ್ನಿ ಅನುಗ್ರಹ ಪಡೆದುದು ಬಂದಿದೆ. ೫೩-೫೫ರಲ್ಲಿ ಆತನ ಗುರುಕುಲೋತ್ತರ ಜೀವನ, ಅದರಲ್ಲೂ ಆತನ ತಪಸ್ಸು ಕೃಷ್ಣಾನುಗ್ರಹ ವಿಷಯವೂ ಬಂದಿವೆ. ಆತನ ಗೃಹಸ್ಥಜೀವನ ಇಲ್ಲೆಲ್ಲೂ ಬಂದಿಲ್ಲ.

೨. ಮೊದಲು ಉದಂಕರಿಗೆ ಕೃಷ್ಣನ ದರ್ಶನವಾಗುತ್ತಲೇ ಪಾಂಡವಕೌರವರ ಕ್ಷೇಮಾಪೇಕ್ಷಿಯಾಗಿ ವಿಷಯ ತಿಳಿದು, ಕೌರವರ ಸಂಹಾರ ವಿಷಯವು ಆತನನ್ನು ಕೆರಳಿಸಿ, ಕೃಷ್ಣನಿಗೆ ಶಾಪ ಕೊಡುವ ನೀಚನಿರ್ಧಾರ ನೋಡುತ್ತೇವೆ. ಕೃಷ್ಣಭಕ್ತನಾಗಿ ಕೃಷ್ಣನಿಗೇ ಶಾಪಕೊಡಲು ಹೋಗಲು ಕಾರಣ ದುರ್ಯೋಧನನು ಈ ಋಷಿಯ ಶಿಷ್ಯ. ಅದು ಹೇಗೋ, ದುರ್ಯೋಧನನ ಕಲಿಯ ಪ್ರಭಾವ ಬ್ರಾಹ್ಮಣರನ್ನು ಹೀಗೆ ಬಾಧಿಸಿತು. ಕೌರವರ ಸಂಹಾರಕ್ಕೆ ಕೃಷ್ಣನೇ ಕಾರಣವೆಂಬ ಉದಂಕರ ನಿರ್ಧಾರ, ಅವರಿಗೆ ಕೃಷ್ಣೋಪದೇಶಕ್ಕೆ ಕಾರಣವಾಗಿ ಅವರು ನರಕದಿಂದ ಪಾರಾದರು. ಭಕ್ತರನ್ನು ಎಂದೂ ನರಕಕ್ಕೆ ಹಾಕದ ಕೃಷ್ಣನ ಕಾರುಣ್ಯ ಇಲ್ಲಿ ದಟ್ಟವಾಗಿ ಕಾಣುತ್ತದೆ. ಭಕ್ತರ ತಪ್ಪುಗಳನ್ನು ದೇವರು ಕ್ಷಮಿಸುತ್ತಾನೆ. ತನ್ನನ್ನೇ ಶಪಿಸಲು ಹೋದವನನ್ನು ಕೂಡಾ. ದೇವರನ್ನು ಎಂದೂ ದೂಷಿಸಬಾರದು. ವಿಷಯ ಸರಿಯಾಗಿ ತಿಳಿಯುವ ಪ್ರಯತ್ನ ಮಾಡಬೇಕು. ಕೃಷ್ಣ ತಾನೇ ಎಲ್ಲ ಹೇಳಿ ದಾರಿ ತಪ್ಪಿದ ಉದಂಕನನ್ನು ಅನುಗ್ರಹಿಸಿದ. ದೇವರಿಂದ

ನಂಬಿದರೆ ಯಥಾರ್ಥಜ್ಞಾನ. ಅದರಿಂದ ಸದ್ಗತಿ ನಿಶ್ಚಿತ. ದುರ್ಗತಿಯೂ ಬರದು: '**ಜ್ಞಾನೇನೈವ ಪರಂ ಪದಂ**' ಎಂಬ ಅಣುಭಾಷ್ಯ ಇಲ್ಲಿ ಸ್ಮರಣೀಯ.

೩. ಭಗವಂತನು ಎಂದೂ ಭಕ್ತರು ಸಂಪಾದಿಸಿದ ತಪಸ್ಸನ್ನು ನಾಶ ಮಾಡುವುದಿಲ್ಲ ಎನ್ನಲು ಉದಂಕರ ಉದಾಹರಣೆಯೇ ಸಾಕ್ಷಿ (ಉದಂಕರ ತಪಸ್ಸನ್ನು ಹಾಳುಮಾಡದೆ ಅವರನ್ನು ಉದ್ಧರಿಸಿದ).

೪. ಉದಂಕರಂತಹ ಕೃಷ್ಣಭಕ್ತರನ್ನು ಬುಟ್ಟಿಗೆ ಹಾಕಿಕೊಂಡಿದ್ದ ದುರ್ಯೋಧನ. ಆದ್ದರಿಂದ ದುರ್ಯೋಧನ – ಕಲಿಯಿಂದ ಎಲ್ಲರೂ ಹುಷಾರಾಗಿರಬೇಕು.

೫. ಕೃಷ್ಣಾವತಾರದಲ್ಲಿ ವಿಶ್ವರೂಪದರ್ಶನ ಪಡೆದ ಕೊನೆಯ ಭಕ್ತ ಉದಂಕ. ಆತನೂ ಅರ್ಜುನನಂತೆ ಎಂದಿದ ಭಾರತ. ಅಂದರೆ ಉದಂಕನ ಯೋಗ್ಯತೆಗೆ ಅನುಗುಣವಾಗಿ ಎಂದೇ ಅರ್ಥ. ಕೃಷ್ಣ ಸರ್ವೋತ್ತಮನೆಂಬ ಜ್ಞಾನ ಗಟ್ಟಿ ಮಾಡಿಕೊಂಡ ಉದಂಕ. ಹಾಗೆಯೇ ಎಲ್ಲ ಸಾಧಕರೂ ತಿಳಿಯಬೇಕು.

೬. ಉದಂಕರ ಬಾಲ್ಯಜೀವನವೂ ಅತ್ಯಂತ ಆದರ್ಶ. ನಿಸ್ಸೀಮ, ನಿರ್ವ್ಯಾಜ ಗುರುಭಕ್ತಿ. ಆತನ ಭಕ್ತಿಗೆ ಅಂತರಂಗದೊಳಗೆ ಒಲಿದಿದ್ದರು ಗುರು ಗೌತಮರು. ಆದ್ದರಿಂದಲೇ ಆತನನ್ನು ಮನೆಗೆ ಕಳಿಸದೇ ನೂರಾರುವರ್ಷ ಗುರುಕುಲ ಮಾಡಿದ ಮಹಾ ಗುರುಭಕ್ತ ಸಾಮಾನ್ಯವಾಗಿ ೧೨-೧೩ ವರ್ಷ ಗುರುಕುಲವಾಸ.

೭. ಉದಂಕ ಮನುಷ್ಯನಷ್ಟೇ? ಆತನಿಗೂ ತನ್ನ ವೃದ್ಧಾಪ್ಯದ ಅರಿವಾಗಿ ತಾನೂ ಗೃಹಸ್ಥನಾಗುವ ಬಯಕೆ ಬಂತು. ಅದನ್ನು ಅರಿತ ಗುರುಗಳು ತನ್ನ ಮಗಳನ್ನೇ ಧಾರೆ ಎರೆದು ಕೊಟ್ಟರು. ಐಹಿಕ, ಆಧ್ಯಾತ್ಮಿಕ ಅನುಗ್ರಹ ಪಡೆದ ಶಿಷ್ಯ ಉದಂಕ. ಗುರುಸೇವೆ ಎಂದೂ ವ್ಯರ್ಥವಾಗದು.

೮. ಗುರುಗಳಿಗೆ ದಕ್ಷಿಣೆ ಕೊಡಲೇಬೇಕೆಂಬ ಹಠ ಉದಂಕನದು. ಗೌತಮರು ಏನನ್ನೂ ಬಯಸಲಿಲ್ಲ. ತಾವೇನೂ ಬಯಸದೇ ಶಿಷ್ಯನ ಬಯಕೆಯನ್ನು ಈಡೇರಿಸಿದವರು ಗುರುಗಳು. ಗುರುಗಳು ತನ್ನ ಶಿಷ್ಯರ ಬಗ್ಗೆ ಹೇಗಿರಬೇಕೆಂಬುದಕ್ಕೆ ಗೌತಮರು ಸಾಕ್ಷಿ. ಅಂತಹವರೇ ನಿಜವಾದ ಗುರುಗಳು. ಶಿಷ್ಯರ ಸರ್ವತೋಮುಖ ಅಭಿವೃದ್ಧಿಯನ್ನು ಊಹಿಸಿ ಅನುಗ್ರಹಿಸುವವರು.

೯. ಗುರುದಕ್ಷಿಣೆ ಮಾತ್ರವಲ್ಲ, ಗುರುಪತ್ನಿಯನ್ನೂ ಒತ್ತಾಯದಿಂದ ಅವರ ಬಯಕೆಯ ಕರ್ಣಕುಂಡಲಗಳನ್ನು ತನ್ನ ಪ್ರಾಣವನ್ನು ಪಣವಾಗಿಟ್ಟು ತಂದುಕೊಟ್ಟ ಗುರುಭಕ್ತ ಉದಂಕ. ನಾಗಲೋಕಕ್ಕೆ ಹೋಗಿ ತಂದುಕೊಟ್ಟ.

೧೦. ಗುರುದಕ್ಷಿಣೆಗಾಗಿ ಹಗಲು-ರಾತ್ರಿ ೩೫ ದಿನ ಊಟ, ನೀರು ಇಲ್ಲದೆ ಕಷ್ಟಪಟ್ಟ ಅದಕ್ಕಾಗಿ ಇಂದ್ರದೇವರೂ ಅನುಗ್ರಹಿಸಿದರು. ಗುರುಭಕ್ತಿ ಇರುವಲ್ಲಿ ದೇವತೆಗಳೂ ಅನುಗ್ರಹಿಸುವರು. ನಾಗಲೋಕದಲ್ಲಿ ಅಗ್ನಿ ಅನುಗ್ರಹಿಸಿದ. ಅದಕ್ಕೆ ಕಾರಣ ಗುರುಕುಲದಲ್ಲಿ

ಉದಂಕನು ಮಾಡಿದ ಅಗ್ನಿಸೇವೆ. ಆದ್ದರಿಂದ ಗುರುದೇವತಾಸೇವೆ ಎಂದೂ ವ್ಯರ್ಥವಲ್ಲ.

೧೧. ಉದಂಕನ ಯೋಗ್ಯತೆಯ ಮುಂದೆ ನಾಗಲೋಕದ ವಾಸುಕಿ ಮೊದಲಾದ ದೇವತಾ ಸರ್ಪಗಳು ತುಂಬಾ ದೊಡ್ಡಯೋಗ್ಯತೆಯವೇ. ಆದರೆ, ತಕ್ಷಕ ಮಾಡಿದ ತಪ್ಪಿನಿಂದ ಅವರೆಲ್ಲ ಉದಂಕನಿಗೆ ಶರಣಾಗುವಂತಾಯಿತು. ಆದ್ದರಿಂದ ಗುರುಸೇವೆ ಮಾಡುವಾಗ ಎಷ್ಟೋ ಹಿರಿಯರು ಕೂಡಾ ಬ್ರಾಹ್ಮಣನಿಗೆ ತಲೆ ಬಾಗುತ್ತವೆ. ಆದ್ದರಿಂದ ನಮ್ಮ ಉದ್ದೇಶ ಗುರುದೇವತಾಸೇವೆ ಇರಬೇಕು.

ಹೀಗೆ ವಿಧೇಯ ಶಿಷ್ಯ, ಉದಾರ ಗುರು - ಇವರ ಕಥೆಗಳು ನಮ್ಮ ಜೀವನದ ಆದರ್ಶಗಳಾಗಿರಲಿ.

೧೨. ಉದಂಕನ ಗುರುಸೇವೆ ವಿಷಯಗಳು ಆದಿಪರ್ವದಲ್ಲೂ ಬಂದಿವೆ. ಅದಕ್ಕೂ, ಇದಕ್ಕೂ ಸ್ವಲ್ಪ ವ್ಯತ್ಯಾಸವಿದೆ. ಇದು ವಿಚಾರಣೀಯವಾಗಿದೆ. ಇತ್ಯಾದಿ...

*****

# ೧೫೮. ನಕುಲೋಪಾಖ್ಯಾನ

ವೈಶಂಪಾಯನರನ್ನು ಜನಮೇಜಯ ಕೇಳಿದ –

'ಧರ್ಮರಾಜನ ಅಶ್ವಮೇಧಯಜ್ಞದ ವೇಳೆ ನಡೆದ ಯಾವುದಾದರೂ ಆಶ್ಚರ್ಯಕರ ಘಟನೆ ನಡೆದಿದ್ದರೆ ತಿಳಿಸಿರಿ' ಎಂದು. ಅದಕ್ಕೆ ವೈಶಂಪಾಯನರು ಅಶ್ವಮೇಧ ಮಹಾಯಜ್ಞ ಮುಗಿದ ಮೇಲೆ ಒಂದು ಮಹದಾಶ್ಚಾರ್ಯ ಘಟನೆ ನಡೆಯಿತು. ಅದೇನೆಂದರೆ –

ಧರ್ಮರಾಜನ ಯಜ್ಞದಲ್ಲಿ ದೇವ ಋಷಿ, ಗಂಧರ್ವ, ಕಿಂಪುರುಷ, ಕಿನ್ನರ, ಸಿದ್ಧ ವಿಪ್ರ, ನಾರದರು, ತುಂಬುರು, ವಿಶ್ವಾವಸು, ಚಿತ್ರಸೇನ ಮೊದಲಾದ ಗಂಧರ್ವರು, ದ್ವಿಜಸತ್ತಮರು (ದ್ವಿಜೋತ್ತಮರು), ವ್ಯಾಸಶಿಷ್ಯರು, ಬಂಧುಗಳು, ಜ್ಞಾನಿಗಳು, ದೀನರು, ಅಂಧರು, ಕೃಪಣರು – ಹೀಗೆ ವಿಶ್ವದ ಎಲ್ಲ ದಿಕ್ಕುಗಳಿಂದ ಬಂದವರೆಲ್ಲರೂ ಶಾಸ್ತ್ರೋಕ್ತವಾಗಿ ಸತ್ಕರಿಸಲ್ಪಟ್ಟಿದ್ದರು. ಆಗ ಧರ್ಮರಾಜನ ತಲೆಯ ಮೇಲೆ ಪುಷ್ಪವೃಷ್ಟಿ ಸುರಿಯಿತು[1].

ಆಗ ನೀಲಾಕ್ಷ ಎಂಬ ಒಂದು ಮುಂಗುಸಿಯು ಸಿಡಿಲಿನಂತೆ, ಮೃಗಪತಿಗಳನ್ನು ಭಯಗೊಳಿಸುತ್ತಾ ಘೋರವಾಗಿ ಗರ್ಜಿಸುತ್ತಾ ಬಂದು ಮನುಷ್ಯರಂತೆ ಹೀಗೆ ಮಾತನಾಡಿತು. ಆ ಮುಂಗುಸಿಯ ಶರೀರದ ಒಂದು ಭಾಗವು ಸುವರ್ಣಮಯವಾಗಿತ್ತು.

'ಎಲೈ ನರಾಧಿಪರೇ! ಧರ್ಮರಾಜನ ಯಜ್ಞವು ಕುರುಕ್ಷೇತ್ರನಿವಾಸಿಯಾದ ಉಂಛವೃತ್ತಿಯಿಂದ ಜೀವಿಸುತ್ತಿದ್ದ ಮಹಾದಾನಿಯಾದ ಬ್ರಾಹ್ಮಣನು ಮಾಡಿದ ಒಂದು ಸೇರು ಹಿಟ್ಟಿನ ದಾನಕ್ಕೆ ಸಮವಲ್ಲ[2].'

ಈ ಮಾತನ್ನು ಕೇಳಿದ ಅಲ್ಲಿದ್ದ ಎಲ್ಲ ಬ್ರಾಹ್ಮಣರೆಲ್ಲ ತುಂಬಾ ಆಶ್ಚರ್ಯದಿಂದ ಹೀಗೆ ಕೇಳಿದರು.

'ಎಲೈ ಮುಂಗುಸಿಯೇ! ನೀನಾರು? ಎಲ್ಲಿಂದ ಬಂದಿರುವೆ? ನಿನಗಿರುವ ಬಲವೇನು? ಈ ಯಜ್ಞಕ್ಕೆ ಅನೇಕ ಸಾಧುಗಳು ಬಂದಿದ್ದಾರೆ. ಶಾಸ್ತ್ರೋಕ್ತವಾಗಿಯೇ ಯಜ್ಞಸಂಭಾರಗಳನ್ನು

---

೧ ಈ ವಿವರಗಳು ಅಧ್ಯಾಯ ೯೦,೯೧,ರಲ್ಲಿ ಬಂದಿವೆ. (ವೈಷ್ಣವಪಾಠದಲ್ಲಿ ತ.ಸಂ.ಸಂ. ಉಡುಪಿ). ಗೀತಾಪ್ರೆಸ್ ಪಾಠದಲ್ಲಿ ೮೮,೮೯,೯೦ನೇ ಅಧ್ಯಾಯಗಳಲ್ಲಿ ಬಂದಿವೆ.

2 ಸಕ್ತುಪ್ರಸ್ಥೇನ ವೋ ನಾಯಂ ಯಜ್ಞಸ್ತುಲ್ಯೋ ನರಾಧಿಪಾಃ।
ಉಂಛವೃತ್ತೇರ್ವದಾನ್ಯಸ್ಯ ಕುರುಕ್ಷೇತ್ರನಿವಾಸಿನಃ॥ – ೯೨/೭

ಸಂಗ್ರಹಿಸಿ ಯಜ್ಞ ಮಾಡಲಾಗಿದೆ. ಮಂತ್ರಪೂತವಾದ ಅಗ್ನಿಯು ಆಹುತಿಗಳಿಂದ ಆರಾಧಿಸಲ್ಪಟ್ಟಿದೆ. ಮಾತ್ಸರ್ಯಕ್ಕೆ ಎಡೆ ಕೊಡದೆ ಪೂಜಾರ್ಹರು ಸತ್ಕರಿಸಲ್ಪಟ್ಟಿದ್ದಾರೆ - ದಾನ ಸ್ವೀಕರಿಸಿದ್ದಾರೆ.

ಬಹಳ ದಾನಗಳಿಂದ ಬ್ರಾಹ್ಮಣರು, ಧರ್ಮಯುದ್ಧದಿಂದ (ಯಜ್ಞಕ್ಕೂ ಮೊದಲು ಮಾಡಿದ) ಕ್ಷತ್ರಿಯರೂ, ನಾಂದೀ ಶ್ರಾದ್ಧಾದಿಗಳಿಂದ ಪಿತೃಗಳು(ಪಿತಾಮಹರು), ರಕ್ಷಣೆ ಕೊಡುವುದರಿಂದ ವೈಶ್ಯರೂ, ದಯೆಯಿಂದ ಶೂದ್ರರೂ, ಇಷ್ಟಪ್ರದಾನ ಮಾಡುವುದರಿಂದ ಸ್ತ್ರೀಯರೂ, ಯಜ್ಞದಾನಶೇಷದಿಂದ ಉಳಿದ ಪ್ರಜೆಗಳೂ ಹೀಗೆ ಎಲ್ಲರನ್ನೂ ತೃಪ್ತಿ ಪಡಿಸಲಾಗಿದೆ. ಅಲ್ಲದೆ ಜ್ಞಾನಿಗಳು, ಬಾಂಧವರೂ, ಹವಿಸ್ಸಿನಿಂದ ದೇವತೆಗಳೂ, ಶರಣಾಗತರಾಗಿ ಬಂದ ಇತರರೂ ಎಲ್ಲರೂ ತೃಪ್ತರಾಗಿ ಹೋಗಿದ್ದಾರೆ. ಹೀಗಿರುವಾಗ ನೀನು ಈ ಯಜ್ಞದ ಬಗ್ಗೆ ಹೀನಾಯವಾಗಿ ಮಾತನಾಡುತ್ತಿರುವೆಯಲ್ಲ? ಸತ್ಯ ಹೇಳು. ನೀನು ಪ್ರಾಜ್ಞನೇ ಸರಿ! (ಸಾಲದ್ದಕ್ಕೆ) ಮಹಾ ದಿವ್ಯರೂಪ ಧರಿಸಿರುವೆ! ಆದ್ದರಿಂದ ಬ್ರಾಹ್ಮಣರ ಬಳಿ ಬಂದಿರುವ ನೀನು ಉತ್ತರಿಸು. ನಿನ್ನ ವಾಕ್ಯ ಶ್ರದ್ಧಾಯೋಗ್ಯವಾಗಿದೆ, ವಿಶ್ವಾಸಯೋಗ್ಯವಾಗಿದೆ[1]!!

ಹೀಗೆ ಕೇಳಲ್ಪಟ್ಟ ಮುಂಗಸಿಯು ಪರಿಹಾಸಪೂರ್ವಕವಾಗಿ (ಅಪಹಾಸ್ಯದಿಂದ ಅಣಕಿಸುತ್ತಾ ಅವಹೇಳನ ಮಾಡುತ್ತಾ) ಗಟ್ಟಿಯಾಗಿ ನಕ್ಕು ಮಾತನಾಡಿತು.

**ಏವಂ ಪೃಷ್ಟೋ ದ್ವಿಜೈಸ್ತೈಃ ಸ [2]ಪ್ರಹಸ್ಯ ನಕುಲೋಽಬ್ರವೀತ್ ॥ - ೯೨/೧೯**

ಎಲೈ ದ್ವಿಜರೇ! ನಾನೇ ಸುಳ್ಳು ಹೇಳುತ್ತಿಲ್ಲ. ದರ್ಪದಿಂದಲೂ ಹೇಳುತ್ತಿಲ್ಲ. ನಾನು ಹೇಳುವ ಮಾತು ನೀವು ಕೇಳಿರುವಿರಿ. ಉಂಛವೃತ್ತಿಯಲ್ಲಿದ್ದ ಬ್ರಾಹ್ಮಣನು ಆಚರಿಸಿದ ದಾನಧರ್ಮ ಉತ್ತಮವೂ ಅದ್ಭುತವೂ ಆಗಿದ್ದು, ನಾನು ನೋಡಿದ್ದೇನೆ ಹಾಗೂ ಅನುಭವಿಸಿದ್ದೇನೆ. ಆತ

---

೧ ಕುತಸ್ತ್ವಂ ಸಮನುಪ್ರಾಪ್ತೋ ಯಜ್ಞಸಾಧ್ಯಸಮಾಗಮಮ್ ।
ಕಿಂ ಬಲಂ ಪರಮಂ ತೇ ಹ ಕಿಂ ಶ್ರುತಂ ಕಿಂ ಪರಾಯಣಮ್ ॥
.....
ಅವಿಲುಪ್ಯಾಗಮಂ ಕೃತ್ಸ್ನಂ ವಿವಿಧೈರ್ಯಾಜಕೈರ್ಹುತಮ್ ।
ಯಥಾಗಮಂ ಯಥಾನ್ಯಾಯಂ ಕರ್ತವ್ಯಂ ಚ ತಥಾ ಕೃತಮ್ ॥
ಪೂಜಾರ್ಹಾಃ ಪೂಜಿತಾಶ್ಚಾತ್ರ
ಮಂತ್ರಪೂತಂ ಹುತಶ್ಚಾಗ್ನಿರ್ದತ್ತಂ ದೇಯಮಮತ್ಸರಮ್ ॥
....
ದೇವಾ ಹವಿರ್ಭಿ ಪುಣ್ಯೈಶ್ಚ......
ಯದತ್ರ ತಥ್ಯಂ ತದ್ ಬ್ರೂಹಿ ಸತ್ಯಸಂಧ(!)ದ್ವಿಜಾತಿಷು ।
ಶ್ರದ್ಧೇಯ ವಾಕ್ಯಃ! ಪ್ರಾಜ್ಞಸ್ತ್ವಂ! ದಿವ್ಯರೂಪಂ! ಬಿಭರ್ಷಿ ಚ ।
ಸಮಾಗತಶ್ಚ ವಿಪ್ರೈಸ್ತ್ವಂ ತತ್ತ್ವತೋ! ವಕ್ತುಮರ್ಹಸಿ ॥ -ಅ. (೯೨/೧೧-೧೮)

೨ ಪ್ರಹಸನ್ (ಪಾಠಾಂತರ - ಟಿ.ಆರ್.ಕೆ. ಪಾಠ - ದಾಕ್ಷಿಣಾತ್ಯಭಾರತ)

ಮಾಡಿದ ದಾನದಿಂದಾಗಿ ಬ್ರಾಹ್ಮಣನು ಮಗ, ಸೊಸೆಯರಿಂದ ಕೂಡಿಕೊಂಡು ಸ್ವರ್ಗಕ್ಕೆ ಹೋದ.

ಧರ್ಮಕ್ಷೇತ್ರವಾದ ಕುರುಕ್ಷೇತ್ರದಲ್ಲಿ ಒಬ್ಬ ಉಂಛವೃತ್ತಿಯ ಬ್ರಾಹ್ಮಣ ಪತ್ನಿ, ಮಗ, ಸೊಸೆಯರೊಡನೆ ಪಾರಿವಾಳದಂತೆ (ಕಾಪಾಡಿ) ಯದೃಚ್ಛಾ ಲಾಭ ಸಂತುಷ್ಟನಾಗಿ ಜೀವನ ನಡೆಸುತ್ತಿದ್ದ. ನಿತ್ಯ ತಪಸ್ಸನ್ನು ಮಾಡುತ್ತಾ ನಿತ್ಯ ಷಷ್ಠಕಾಲದಲ್ಲಿ ಸಿಕ್ಕ ಆಹಾರದಿಂದ ಭೋಜನ ಮಾಡುತ್ತಿದ್ದನು. ಸಿಗದಿದ್ದರೆ, ಅಂದು ಉಪವಾಸ. ಮತ್ತೆ ನಾಳೆಯೇ ಅದೇ ಷಷ್ಠಕಾಲಕ್ಕೆ ಸಿಕ್ಕ ಆಹಾರದಿಂದ ಭೋಜನ, ಆತನ ದಿನಚರಿಯಾಗಿತ್ತು. ಒಮ್ಮೆ ಭೀಕರ ಬರಗಾಲದ ಪರಿಣಾಮವಾಗಿ ಕೆಲ ದಿನ ಆಹಾರ ಸಿಗದೆ ಉಪವಾಸ ಇದ್ದರು. ಒಂದು ದಿನ ಬರೀ ನೀರೇ ಆಹಾರವಾಗಿತ್ತು. ೩ ನೇ ದಿನ ಒಂದು ಸೇರಿನಷ್ಟು ಯವ(ಧಾನ್ಯ-ಗೋಧಿ) ಸಂಗ್ರಹಿಸಿದರು. ಅದನ್ನು ಹಿಟ್ಟು ಮಾಡಿ ಆಹ್ನಿಕಾದಿಗಳನ್ನು ಮಾಡಿ ಅಗ್ನಿಯಲ್ಲಿ ಹೋಮಿಸಿ, ಯಜ್ಞಶೇಷವನ್ನು ನಾಲ್ಕು ಜನ ತಿನ್ನಲು ಭಾಗಮಾಡಿಕೊಂಡರು[೧]. ಈ ತಪಸ್ವೀ ಕುಟುಂಬ ಆ ಗೋಧಿಹಿಟ್ಟನ್ನು ತಿನ್ನುವ ಹೊತ್ತಿಗೆ ಸರಿಯಾಗಿ ಒಮ್ಮೆ ದ್ವಿಜ ಅತಿಥಿ ಬಂದ. ಅವನನ್ನು ನೋಡಿ ಎಲ್ಲರೂ ಸಂತೋಷಗೊಂಡರು. ಕುಶಲಪ್ರಶ್ನೆ ಮಾಡಿ ಅರ್ಘ್ಯ, ಪಾದ್ಯ, ಆಸನಾ(ಬೃಸೀ)ದಿ ಸತ್ಕಾರಗಳನ್ನು ಮಾಡಿ ತಾವು ಸಂಪಾದಿಸಿದ ಧರ್ಮಪ್ರಾಪ್ತವಾದ ಹಿಟ್ಟಿನ ಉಂಡೆಗಳನ್ನು ಸ್ವೀಕರಿಸಲು ಪ್ರಾರ್ಥಿಸಿದರು.

ಹೀಗೆ ಪ್ರಾರ್ಥಿಸಿ ಅತಿಥಿಗೆ ಬ್ರಾಹ್ಮಣನು (ಯಜಮಾನನು) ತಾನು ಇಟ್ಟುಕೊಂಡಿದ್ದ ಹಿಟ್ಟಿನುಂಡೆಯನ್ನುಕೊಟ್ಟನು. ಅತಿಥಿಯುಅದನ್ನುಂಡ. ಆದರೆಆತನಿಗೆತೃಪ್ತಿಯಾಗಲಿಲ್ಲ(ಹಸಿವೆ

---

೧ 'ಧರ್ಮಕ್ಷೇತ್ರೇ ಕುರುಕ್ಷೇತ್ರೇ............
ಉಂಛವೃತ್ತಿರ್ದ್ವಿಜಃ ಕಶ್ಚಿತ್ ಕಾಪೋತಿರಭವತ್ ತದಾ (ಪುರಾ)।
ಸಭಾರ್ಯ ಸಹಪುತ್ರೇಣ ಸಸ್ನುಷಸ್ತಪಸಿ ಸ್ಥಿತಃ॥
ಷಷ್ಠೇಕಾಲೇ ಸದಾ ವಿಪ್ರೋ ಭುಂಕ್ತೇ ತೈಃ ಸ ಹ ಸುವ್ರತಃ॥.....
ಅಥ ಷಷ್ಠೇ ಗತೇ ಕಾಲೇ ತೇ ಯವ ಪ್ರಸ್ಥಮಾರ್ಜಯನ್।
ಯವಪ್ರಸ್ಥಂ ಚ ತತ್ ಸಕ್ತೂನ್ ಅಕುರ್ವಂತಿ ತಪಸ್ವಿನಃ॥
ಕೃತ ಜಪ್ಯಾಹ್ನಿಕಾಸ್ತೇ ತು ಹುತ್ವಾ ವಹ್ನಿಂ ಯಥಾವಿಧಿ।
ಕುಡುಪಂ ಕುಡುಪಂ ಸರ್ವೇ ವ್ಯಭಜಂತ ತಪಸ್ವಿನಃ॥ - ೯೩/೨-೧೨
ಅಥಾಗಮದ್ ದ್ವಿಜಃ ಕಶ್ಚಿತ್ ಅತಿಥಿರ್ಭುಂಜತಾಂ ತದಾ।
ತೇ ತಂ ದೃಷ್ಟ್ವಾऽತಿಥಿಂ ತತ್ರ ಪ್ರಹೃಷ್ಟಮನಸೋऽಭವನ್॥
ತೇऽಭಿವಾದ್ಯ .....
ಕುಟೀಂ ಪ್ರವೇಶಯಾಮಾಸುಃ ಕ್ಷುಧಾರ್ತಮತಿಥಿಂ ತದಾ।
ಶುಚಯಃ ಸಕ್ತವಶ್ಚೇ ಮೇ ನಿಯಮೋಪಾರ್ಜತಾಃ ಪ್ರಭೋ॥
ಪ್ರತಿಗೃಹ್ಣೀಷ್ವ ಭದ್ರಂ ತೇ ಮಯಾ ದತ್ತಾನ್ ದ್ವಿಜೋತ್ತಮ॥ - ೯೩/೧೩-೧೮

ಹರಿಯಲಿಲ್ಲ). ಆಗ ಬ್ರಾಹ್ಮಣಪತ್ನಿ ತನ್ನ ಪಾಲಿನ ಉಂಡೆ ಕೊಡಲು ಸಿದ್ಧಳಾದಳು. ಆದರೆ ಪತಿ(ಬ್ರಾಹ್ಮಣ) ಹೆಂಡತಿಯು ಹಸಿವೆಯಿಂದ ತುಂಬಾ ತೊಂದರೆಗೀಡಾಗಿದ್ದಾಳೆಂದು ಭಾವಿಸಿ, ಆಕೆಯು ಕೊಟ್ಟಿದ್ದನ್ನು ಸ್ವೀಕರಿಸಲು ಒಪ್ಪದೇ ಚಿಂತಾಪರನಾದನು. ಆಕೆ ಧರ್ಮಾರ್ಥಗಳು ನಮಗಿಬ್ಬರಿಗೂ ಸಮ(ನಾವಿಬ್ಬರೂ ಸಮಾನ ಧರ್ಮಿಗಳು). ಸ್ತ್ರೀಗೆ ಪತಿಯೇ ದೇವತೆ. ಬೀಜಸ್ಥಾನೀಯ. ಪತಿಯಿಂದ ಸತಿಗೆ ದೈಹಿಕ ಸುಖ ಹಾಗೂ ಪುತ್ರಫಲಪ್ರಾಪ್ತಿ. ನನ್ನ ಭರಣ-ಪೋಷಣ ಮಾಡುವ ಪತಿಯ ಸೇವೆ ನನಗೆ ಗತಿಪ್ರದ. ಆದ್ದರಿಂದ ಅತಿಥಿಪೂಜೆಗಾಗಿ ನನ್ನ ಪಾಲಿನ ಹಿಟ್ಟಿನ ಉಂಡೆಯನ್ನು ಸ್ವೀಕರಿಸಿ ಅತಿಥಿಗೆ ಕೊಡಿರಿ ಎಂದಾಗ, ಅದನ್ನು ಸ್ವೀಕರಿಸಿ, ಅತಿಥಿ ಬ್ರಾಹ್ಮಣನಿಗೆ ಕೊಟ್ಟನು. ಆದರೂ ಅತಿಥಿಗೆ ತೃಪ್ತಿಯಾಗದಿರಲು ಬ್ರಾಹ್ಮಣ ಚಿಂತಾಪರನಾದ.

ನಂತರ ಬ್ರಾಹ್ಮಣನ ಪುತ್ರನು 'ವೃದ್ಧ ತಂದೆಯ ಪಾಲನೆ ಪುತ್ರಧರ್ಮವೆಂದು ತ್ರಿಲೋಕಪ್ರಸಿದ್ಧವಾದ[೧]ಶ್ರುತಿ ಇದೆ ಎಂದು ಉದಾಹರಿಸಿ ತನ್ನ ಪಾಲಿನ ಉಂಡೆಯನ್ನು ಕೊಡಲು ಸಿದ್ಧನಾದ. ಅದಕ್ಕೆ ತಂದೆ ನಾನು ವೃದ್ಧ, ನಾನು ಹಸಿವೆ ಸಹಿಸಬಲ್ಲೆ, ನಾನು ತಪೋನಿರತ, ಮರಣದ ಭಯವಿಲ್ಲ ಎಂದ. ಆದರೆ ಪುತ್ರನು ನಿಮ್ಮನ್ನು ರಕ್ಷಿಸುವುದರಿಂದಲೇ ನನಗೆ ಪುತ್ರ ಎನ್ನುತ್ತಾರೆ. [೨]ಆದ್ದರಿಂದ ನಿನ್ನ ರಕ್ಷಣೆಯು ನನ್ನ ಕರ್ತವ್ಯವೆಂದ. ತಂದೆ ಅನಿವಾರ್ಯವಾಗಿ ಮಗ ಕೊಟ್ಟ ಹಿಟ್ಟಿನ ಉಂಡೆಯನ್ನು ಅತಿಥಿಗೆ ಸಂತೋಷದಿಂದಲೇ ಕೊಟ್ಟ. ಅದನ್ನೂ ತಿಂದ ಅತಿಥಿಗೆ ಮಾತ್ರ ತೃಪ್ತಿಯಾಗಲಿಲ್ಲ. ಇದರಿಂದ ಬ್ರಾಹ್ಮಣನಿಗೆ ನಾಚಿಕೆಯಾಯಿತು (ಅತಿಥಿಯ ಹಸಿವು ಇಂಗದೇ ಇದ್ದುದಕ್ಕೆ ಮತ್ತೆ ಚಿಂತಾಪರನಾದ). ನಂತರ ಸೊಸೆ ತನ್ನ ಪಾಲಿನ ಹಿಟ್ಟಿನ ಉಂಡೆಯನ್ನು ಅತಿಥಿಗೆ ಕೊಡಲು ಸಿದ್ಧಳಾಗಿ ಹೇಳಿದಳು. ನಿಮ್ಮ ಮಗನಿಂದಲೇ ನನಗೆ ಸಂತಾನ. ಅದರಿಂದ ನನಗೆ ಅಕ್ಷಯಲೋಕಗಳು. ಆಹವನೀಯ, ಗಾರ್ಹಪತ್ಯ, ದಕ್ಷಿಣಾಗ್ನಿ ಎಂಬ ಮೂರು ಅಗ್ನಿಗಳಂತೆ ತಂದೆ, ತಾತ, ಮುತ್ತಾತರ ಮೂಲಕ ಅಕ್ಷಯ ಲೋಕಪ್ರಾಪ್ತಿಯಾಗುತ್ತದೆ ಎಂದಾಗ ಮಾವನು 'ಮಗಳೇ! ನೀನು ನಿನ್ನ ವ್ರತಾಚರಣೆಗಳಿಂದ, ಹಸಿವೆಯಿಂದ ಕೃಶಳಾಗಿದ್ದೀ. ಹೀಗಿರುವ ನಿನ್ನನ್ನು ನೋಡಿ ಹೇಗೆ ತಾನೆ ನಿನ್ನ ಪಾಲಿನ ಹಿಟ್ಟಿನ ಉಂಡೆಯನ್ನು ಹೇಗೆ ಕೇಳಲಿ? ನೀನು ಹಾಗೆ ಹೇಳುವುದು ಉಚಿತವೆನಿಸದು. ನೀನಿನ್ನೂ ಬಾಲೆ, ಹಸಿವೆ ಪೀಡಿತಳು' ಎಂದ. ಅದಕ್ಕೆ ಸೊಸೆ, 'ಮಾವ! ನೀವೇ ನನಗೆ ಗುರು, ನನ್ನ ಪತಿಗೂ ದೇವತೆ. ಆದ್ದರಿಂದ ನನ್ನ ಶರೀರ ಪ್ರಾಣ ಧರ್ಮ ನಿಮ್ಮ ಸೇವೆಗಾಗಿ. ಕಾರಣ ನನ್ನ ಪಾಲಿನ ಹಿಟ್ಟನ್ನು ಸ್ವೀಕರಿಸಿ' ಎಂದಾಗ,

---

೧ ಪುತ್ರಾರ್ಥೋ ವಿಹಿತೋ ಹ್ಯೇಷ ಸ್ಥಾವಿರ್ಯೇ ಪರಿಪಾಲನ್ ।
ಶ್ರುತಿರೇಷಾಹಿ ವಿಪ್ರರ್ಷೇ ತ್ರಿಷು ಲೋಕೇಷು ಶಾಶ್ವತೀ ॥ – ೯೩/೩೭

೨ ಅಪತ್ಯಮಸ್ಮಿ ತೇ ಪುತ್ರಃ ಪ್ರಾಣಾತ್ ಪುತ್ರೋ ಹಿ ವಿಶ್ರುತಃ ।
ಆತ್ಮಾ ಪುತ್ರಃ ಸ್ಮೃತಸ್ತಸ್ಮಾತ್ ತ್ರಾಹ್ಯಾತ್ಮಾನಮಿವಾತ್ಮನಾ ॥ – ೯೩/೪೨

ಬ್ರಾಹ್ಮಣನು ಸೊಸೆಯ ನಿಷ್ಕಲ್ಮಷ ಮನಸ್ಸಿನ ದಾನಶೀಲಬುದ್ಧಿಗೆ, ಬೇಡವೆನ್ನದೆ ಸ್ವೀಕರಿಸಿ ಅತಿಥಿಗೆ ಬಡಿಸಿದ. ಅತಿಥಿಯು ಅದನ್ನು ಸ್ವೀಕರಿಸಿ ಸಂತುಷ್ಟನಾದ, ತೃಪ್ತನಾದ.

ನಂತರ ತನ್ನನ್ನು ಸಂತೃಪ್ತಿಗೊಳಿಸಿದ ಬ್ರಾಹ್ಮಣ ಕುಟುಂಬವನ್ನು ಹರಸಿ ಮಾತಾಡಿದ. ಎಲೈ ಬ್ರಾಹ್ಮಣನೇ! ನೀನು ಪ್ರಾಮಾಣಿಕವಾಗಿ ಸಂಪಾದಿಸಿದ ಈ ಹಿಟ್ಟನ್ನು ಕೊಟ್ಟಿರುವುದರಿಂದ ನಾನು ತೃಪ್ತನಾಗಿದ್ದೇನೆ. ಈ ದಾನ ದೇವತೆಗಳೂ ಮಹತ್ತ್ವಪೂರ್ಣವೆಂದು ಹೇಳುತ್ತಾರೆ. ಅದೋ ನೋಡು ಸ್ವರ್ಗದಿಂದ ಪುಷ್ಪವೃಷ್ಟಿಯಾಗುತ್ತಿದೆ. ಇಂದ್ರಾದಿ ದೇವತೆಗಳು ನಿನ್ನ ಔದಾರ್ಯಕ್ಕೆ ವಿಸ್ಮಿತರಾಗಿ ಸ್ತುತಿಸುತ್ತಿದ್ದಾರೆ. ವಿಮಾನವೇರಿದ ಬ್ರಹ್ಮರ್ಷಿಗಳೂ ನಿನ್ನ ದರ್ಶನಾಕಾಂಕ್ಷಿಗಳಾಗಿದ್ದಾರೆ. ಆ ಪುಣ್ಯದಿಂದ ನೀನು ಈಗಲೇ ಸ್ವರ್ಗಕ್ಕೆ ಹೋಗು. ನಿನ್ನ ಪಿತೃಗಳು ಉದ್ಧೃತರಾಗಿದ್ದಾರೆ. ಮುಂದಿನ ನಿನ್ನ ವಂಶದ ಸಂತಾನಗಳೆಲ್ಲ ಬರಲಿರುವ ಅನೇಕ ಯುಗಗಳವರೆಗೆ ಉದ್ಧಾರವಾಗುತ್ತಾರೆ. ನಿನ್ನ ಬ್ರಹ್ಮಚರ್ಯ, ಯಜ್ಞಶೀಲತೆ, ತಪಸ್ಸು ದಾನಶೀಲತೆ ಮೊದಲಾದ ಧರ್ಮಗಳಿಂದ ನೀನು ಸ್ವರ್ಗಯೋಗ್ಯವಾಗಿದ್ದೀಯಾ. ನಿನ್ನ ಶ್ರದ್ಧಾಪೂರ್ಣ ತಪಸ್ಸಿನಿಂದ ದೇವತೆಗಳು ಸಂತುಷ್ಟರಾಗಿದ್ದಾರೆ.

ಹಸಿವು ಪ್ರಜ್ಞೆಯನ್ನು ಕೊಲ್ಲುತ್ತದೆ, ಧರ್ಮಬುದ್ಧಿಯನ್ನು ನಾಶಮಾಡುತ್ತದೆ. ಯಾವುದೇ ಕಾರ್ಯ ಮಾಡಲು ಧೈರ್ಯವೂ ಇರದು. ಹಸಿವೆ ಗೆದ್ದವನು ಸ್ವರ್ಗವನ್ನೇ ಗೆದ್ದಂತೆ. ನೀನು ಪತ್ನಿ, ಪುತ್ರ, ಸೊಸೆ ಇವರ ಮೇಲೆ ಸ್ನೇಹವಿಡದೆ ಧರ್ಮಕ್ಕೆ ಆದ್ಯತೆ ಕೊಟ್ಟೆ, ನ್ಯಾಯಾರ್ಜಿತ ಸಂಪತ್ತು, ಸತ್ಪಾತ್ರದಾನ, ಯೋಗ್ಯಕಾಲದಲ್ಲಿ ಮಾಡುವ ದಾನ – ಎಲ್ಲಕ್ಕಿಂತಲೂ ಶ್ರದ್ಧಾಪೂರ್ವಕದಾನವೇ ಶ್ರೇಷ್ಠ ಅದನ್ನು ನೀನು ಮಾಡಿದ್ದೀಯಾ. ಮೋಹ, ಲೋಭವಿರುವೆಡೆ ಸ್ವರ್ಗದ ಬಾಗಿಲೂ ಕಾಣದು. ಲೋಭವಿದ್ದಾಗ ಸ್ವರ್ಗಕ್ಕೆ ಪ್ರವೇಶವೂ ಅಸಾಧ್ಯ. ಸಹಸ್ರದಾನ ಮಾಡಲು ಸಾಮರ್ಥ್ಯವಿದ್ದಾಗ ನೂರನ್ನಾದರೂ ಕೊಡಬೇಕು. ಆಗಲೂ ಸಹಸ್ರದಾನದ ಪುಣ್ಯ ಬರುತ್ತದೆ. ಕೊನೆಗೆ ಶಕ್ಯವಿದ್ದಷ್ಟು ನೀರು ದಾನ ಮಾಡಿದರೂ, ಅನ್ನದಾನದ ಪುಣ್ಯ ಬರುತ್ತದೆ.

ನೋಡು ಬ್ರಾಹ್ಮಣ ಹಿಂದೆ

೧. ರಂತಿದೇವರಾಜ ತನಗೆ ದಾರಿದ್ರ್ಯವಿದ್ದಾಗಲೂ ತನ್ನ ಬಳಿ ಇದ್ದ ನೀರನ್ನು ಶುದ್ಧಮನಸ್ಸಿನಿಂದ ಕೊಟ್ಟು ಸ್ವರ್ಗಕ್ಕೆ ಹೋದ.

೨. ಅನ್ಯಾಯಾರ್ಜಿತ ಮಹಾದಾನಗಳಿಗಿಂತ ಅಲ್ಪವಾದರೂ ಶ್ರದ್ಧೆಯಿಂದ ಕೊಟ್ಟರೆ ಭಗವಂತನು ಪ್ರೀತನಾಗುತ್ತಾನೆ.

೩. ನೃಗರಾಜ ಸಹಸ್ರಾರು ಗೋವು ದಾನ ಮಾಡಿದ. ಆದರೆ ಒಂದು ಗೋದಾನದಲ್ಲಿ ಪುರುಷವ್ಯತ್ಯಾಸವಾಗಿ ನರಕ ಹೊಂದಿದ (ಓತಿಕ್ಯಾತ ಎಂಬ ತಿರ್ಯಗ್ ಜನ್ಮದಲ್ಲಿ ದುಃಖ ಹೊಂದಿದ. ವಾಸ್ತವವಾಗಿ ನರಕಕ್ಕೆ ಹೋಗಲಿಲ್ಲ).

೪. ತನ್ನ ಶರೀರದ ಮಾಂಸವನ್ನೇ ಕೊಟ್ಟು ಶಿಬಿ ಚಕ್ರವರ್ತಿ ಉತ್ತಮಲೋಕಗಳಿಗೆ ಹೋದನು. ಇಂದೂ ಸಂತುಷ್ಟನಾಗಿದ್ದಾನೆ.

೫. ಕ್ರೋಧದಿಂದ ಕೂಡಿದ ದಾನ ಅದರ ಫಲದ ನಾಶಕ್ಕೆ ಕಾರಣವಾಗುತ್ತದೆ.

೬. ಎಲೈ ಬ್ರಾಹ್ಮಣನೇ ನೀನು ಇಂದು ಮಾಡಿದ ದಾನ ಬಹಳ ದಕ್ಷಿಣೆಗಳಿಂದ ಕೂಡಿದ ಹಾಗೂ ಅಶ್ವಮೇಧಯಜ್ಞದ ಫಲಗಳಿಗೆ ಸಮ.

೭. ನೀನು ಇಂದಿನ ದಾನದಿಂದ ಬ್ರಹ್ಮಲೋಕವನ್ನೇ ಗೆದ್ದೀಯಾ. ದೋಷಗಳನ್ನು ಪರಿಹರಿಸಿಕೊಂಡಿರುವ ನೀನು ಬ್ರಹ್ಮಸದನಕ್ಕೆ (ಸಭೆಗೆ) ಹೋಗು.

೮. ನಿಮಗೆಲ್ಲರಿಗೆ ದಿವ್ಯವಿಮಾನ ಸ್ವರ್ಗದಿಂದ ಬಂದಿದೆ. ಸಂತೋಷದಿಂದ ಹೋಗಿ, ನಾನು ಧರ್ಮದೇವತೆಯಾಗಿದ್ದೇನೆ.

೯. ನಿನ್ನ ಸತ್ಕರ್ಮಾನುಷ್ಠಾನದಿಂದ ನಿನ್ನ ದೇಹ ಪವಿತ್ರವಾಗಿದೆ. ಶಾಶ್ವತ ಕೀರ್ತಿ ಗಳಿಸಿರುವೆ. ಈ ಎಲ್ಲ ಪುಣ್ಯದಿಂದ ಮಗ, ಸೊಸೆ, ಪತ್ನಿಯರೊಂದಿಗೆ ಸ್ವರ್ಗಲೊಕಕ್ಕೆ ಹೋಗು.

ಹೀಗೆ ಧರ್ಮದೇವತೆ ಹೇಳುತ್ತಿರಲು ಬ್ರಾಹ್ಮಣನು ವಿಮಾನ ಏರಿ ಪತ್ನಿ ಸೊಸೆ, ಪುತ್ರರೊಂದಿಗೆ ಸ್ವರ್ಗಕ್ಕೆ ಹೋದನು. ಅವರು ಹೋದಮೇಲೆ ನಾನು (ವಾಸವಾಗಿದ್ದ ಅಲ್ಲಿಯ) ಬಿಲದಿಂದ ಹೊರಬಂದೆ. ನಂತರ ನಾನು ಬ್ರಾಹ್ಮಣನು ದಾನ ಮಾಡಿದ ಆ ಸ್ಥಳದಲ್ಲಿ ಹೊರಳಾಡಿದೆ. ಆ ಹಿಟ್ಟಿನ ಕಣಗಳು ನನ್ನ ಶರೀರಕ್ಕೆ ಅಂಟಿಕೊಂಡು. ಬ್ರಾಹ್ಮಣನ ತಪಸ್ಸಿನ ಫಲದಿಂದ ನನ್ನ ಶಿರಸ್ಸು ಬಂಗಾರಮಯವಾಯಿತು. ಅಲ್ಲದೆ ಸತ್ಯಸಂಧನಾದ ಆ ಬ್ರಾಹ್ಮಣನು ದಾನ ಮಾಡಿದ ಪದಾರ್ಥಗಳ ಪರಿಸರದಲ್ಲಿ ಓಡಾಡಿದ ಫಲವಾಗಿ ನನ್ನ ಅರ್ಧಶರೀರವೇ ಸುವರ್ಣಮಯವಾಯಿತು. ನಂತರ ನಾನು ನನ್ನ ಉಳಿದ ಶರೀರಾರ್ಧ ಹೇಗೆ ಸುವರ್ಣಮಯವಾದೀತೆಂದು ನಾನು ಸುತ್ತಮುತ್ತಲೂ ಇದ್ದ ತಪೋವನಗಳಿಗೆ ಯಜ್ಞಸ್ಥಳಗಳಿಗೆ ಹೋಗುತ್ತಿದ್ದೇನೆ. ಪಾಂಡವರ ಯಜ್ಞಸ್ಥಳಕ್ಕೂ, ಇಲ್ಲಿಗೂ ಬಂದಿದ್ದರೂ, ಇಲ್ಲೆಲ್ಲಾ ಓಡಾಡಿದರೂ ನನ್ನ ಉಳಿದ ದೇಹ ಬಂಗಾರವಾಗಿಲ್ಲ.

ಆದ್ದರಿಂದ ನಾನು ಆಗಲೇ ಹೇಳಿದಂತೆ ಈ ಯಜ್ಞವು ಆ ಬ್ರಾಹ್ಮಣನು ಗೋದಿಹಿಟ್ಟು ಕೊಟ್ಟ ದಾನದ ಮುಂದೆ ಸಮವಾಗಿ ನಿಲ್ಲಲಾರದು. ಕಾರಣ ನನ್ನ ಮೈ(ಉಳಿದ) ನಿಮ್ಮ ಯಜ್ಞದ ಫಲವಾಗಿ ಬಂಗಾರವಾಗಲಿಲ್ಲ. ಹೀಗಾಗಿ ಬ್ರಾಹ್ಮಣನು ಮಾಡಿದ ಸಕ್ತುಪ್ರಸ್ಥ (ಹಿಟ್ಟಿನದಾನ) ದಾನವು ಧರ್ಮರಾಜನ ಯಜ್ಞಕ್ಕಿಂತ ಶ್ರೇಷ್ಠ ಎಂದು ನನ್ನ ಅಭಿಮತವಾಗಿದೆ.

ಧರ್ಮರಾಜನ ಯಜ್ಞದಲ್ಲಿ ಭಾಗವಹಿಸಿದ್ದ ಬ್ರಾಹ್ಮಣರ ಮುಂದೆ ಹೀಗೆ ನುಡಿದ ಆ ಮುಂಗುಸಿಯು ಅಲ್ಲಿಂದ ಕಾಣದಾಯಿತು(ಮಾಯವಾಯಿತು, ಅಂತರ್ಧಾನವಾಯಿತು).

ಇದುವೇ ಧರ್ಮರಾಜನ ಅಶ್ವಮೇಧಯಾಗದ ಕೊನೆಗೆ ನಡೆದ ಮಹಾಶ್ಚರ್ಯಪ್ರಸಂಗ, ಸಾಮಾನ್ಯಜನರ ದೃಷ್ಟಿಯಿಂದ. ಆದರೆ, ಇದರಿಂದ ನೀನು ಆಶ್ಚರ್ಯಪಡಬೇಡ. ಮುಂಗುಸಿ ಗೇಲಿ ಮಾಡಿತೆಂದು ದುಃಖಿಸಬೇಡ. ಏಕೆಂದರೆ ಸಾವಿರಾರು ಕೋಟಿ ಋಷಿಗಳು ಯಜ್ಞ ಮಾಡದೆ ಕೇವಲ ತಪಃಪ್ರಭಾವದಿಂದಲೇ ಸ್ವರ್ಗಕ್ಕೆ ಹೋಗಿದ್ದಾರೆ. ಆದ್ದರಿಂದ ಮುಂಗುಸಿಯು ಹೇಳಿದ್ದರಲ್ಲಿ ಆಶ್ಚರ್ಯವಿಲ್ಲ, ಅದು ತುಂಬಾ ವಿಚಾರಣೀಯವಾಗಿದೆ ಎಂದು ವೈಶಂಪಾಯನರ ಅಭಿಪ್ರಾಯ.

ಜನಮೇಜಯ ಮತ್ತೇ ಕೇಳಿದ – 'ಧರ್ಮರಾಜನ ಯಜ್ಞಕ್ಕೆ ಬಂದ ಮುಂಗುಸಿ ಯಾರು? ಮನುಷ್ಯರಂತೆ ಮಾತನಾಡಿದುದನ್ನು ನೋಡಿದರೆ ಸಂಶಯ ಬರುತ್ತದೆ' ಎಂದು. ಅದಕ್ಕೆ ವೈಶಂಪಾಯನರು 'ಈ ವಿಷಯವನ್ನು ಹಿಂದೆ ನೀನು ಪ್ರಶ್ನಿಸಲಿಲ್ಲ, ಆದ್ದರಿಂದ ನಾನು ಹೇಳಲಿಲ್ಲ, ಈಗ ಹೇಳುತ್ತೇನೆ ಕೇಳು(ಅಧ್ಯಾಯ ೯೩ರಲ್ಲಿ ಮುಂಗುಸಿಯ ಕಥೆ ಬಂದ ಮೇಲೆ ೯೪,೯೫ರಲ್ಲಿ ಬೇರೆ ವಿಷಯ ಬಂದಿರಲು ಕಾರಣವನ್ನು ಇಲ್ಲಿ ವೈಶಂಪಾಯರು ಹೇಳಿದರು).

'ರಾಜನ್! ಹಿಂದೊಮ್ಮೆ ಜಮದಗ್ನಿ ಋಷಿಗಳು ಶ್ರಾದ್ಧ ಮಾಡಲು ಸಂಕಲ್ಪಿಸಿದಾಗ ಹೋಮ ಧೇನು (ಹಸು) ಬಂತು. ಅವರೇ ಹಾಲು ಕರೆದು ಪವಿತ್ರವಾದ ಪಾತ್ರೆಯಲ್ಲಿ ಇಟ್ಟಾಗ ಕ್ರೋಧಾಭಿಮಾನಿ ದೈತ್ಯನು ಬಂದು ಆ ಹಾಲನ್ನು ಪ್ರವೇಶಿಸಿ ಅದನ್ನು ಅಪವಿತ್ರಗೊಳಿಸಿದ (ಬಹುಶಃ ಅದನ್ನು ಸ್ವಲ್ಪ ಕುಡಿದು, ಎಂಜಲು ಮಾಡಿದ). ಉದ್ದೇಶ್ಯ ನಾನು ಹಾಲನ್ನು ಅಪವಿತ್ರಮಾಡಿದರೆ ಜಮದಗ್ನಿಗಳು ನನಗೆ ಏನು ಮಾಡುತ್ತಾರೆ ಎಂದು ಪರೀಕ್ಷಿಸಲು. ಆದರೆ ಆ ವಿಷಯ ತಿಳಿದೂ ಅವರು ಸಿಟ್ಟಾಗಲಿಲ್ಲ, ಆಗ ದೈತ್ಯ ಪ್ರತ್ಯಕ್ಷನಾಗಿ 'ಭೃಗುವಂಶದವರು ಬಹುಕೋಪಿಷ್ಠರೆಂಬ ಅಪವಾದವಿದೆ, ಲೋಕದಲ್ಲಿ, ಅದನ್ನು ನೀವು ಸುಳ್ಳು ಮಾಡಿದಿರಿ. ನಾನು ನಿಮ್ಮ ಅಧೀನ, ನಾನು ಸೋತೆ. ಅಪರಾಧ ಮಾಡಿದ ನನ್ನನ್ನು ನೀವು ಕ್ಷಮಿಸಿದ್ದೀರಿ. ನನಗೆ ಕರುಣೆ ತೋರಿಸಿ' ಎಂದ ಕ್ರೋಧಾಭಿಮಾನಿ ದೈತ್ಯ(ಕ್ರೋಧ). ಆಗ ಜಮದಗ್ನಿಗಳು 'ನೀನು ನನಗೆ ಅಪರಾಧವೆಸಗಿಲ್ಲ, ಆದರೆ ಹಾಲನ್ನು ಹಾಳುಗೆಡವಿದೆ. ಅದರ ಯಜಮಾನರು ಪಿತೃಗಳು. ಅವರ ಬಳಿಗೇ ಹೋಗು. ನಿನ್ನ ಅಪರಾಧವನ್ನು ವಿಜ್ಞಾಪಿಸು' ಎಂದರು. ಮುಂದೆ ಶಾಪಭಯದಿಂದ ಕ್ರೋಧನು ಅಲ್ಲಿಯೇ ಮರೆಯಾದ. ಪಿತೃಗಳ ಶಾಪದಿಂದ ಮುಂಗುಸಿಯಾಗಿ ಹುಟ್ಟಿದ ನಂತರ ಅವರನ್ನು ಸಮಾಧಾನ ಮಾಡಲು ಅವರನ್ನು ಕಂಡಾಗ ಅವರು ಕ್ರೋಧನಿಗೆ 'ನೀನು ದರ್ಮರಾಜನನ್ನು ನಿಂದಿಸಿದಾಗ ಆಕ್ಷೇಪಿಸಿದಾಗ ನಿನಗೆ ಶಾಪವಿಮೋಚನೆ' ಎಂದರು. ಹಿಂದೆ ಶಾಪಗ್ರಸ್ತ ಮುಂಗುಸಿ ಜುಗುಪ್ಸಿತನಾಗಿ ದೇಶದೇಶಗಳಲ್ಲಿನ ಯಜ್ಞಗಳನ್ನು, ಧರ್ಮಾರಣ್ಯಗಳಿಗೆ ಹೋಗುತ್ತಾ, ಸೇರು ಹಿಟ್ಟಿನ ದಾನದ ಮಹಿಮೆಯನ್ನು ಹೇಳಿ ಧರ್ಮರಾಜನ ಯಜ್ಞವನ್ನು ನಿಂದಿಸಿ ಶಾಪದಿಂದ ಮುಕ್ತನಾದನು (ಕಾಲಕ್ರಮೇಣ ಅಂಧಂತಮಸ್ಸಿಗೆ ಹೋದನು ಎನ್ನುವುದು ಆಚಾರ್ಯರ ನಿರ್ಣಯದಲ್ಲಿದೆ). ಆದ್ದರಿಂದ ಧರ್ಮಜನ ಯಜ್ಞವು ಧರ್ಮಯುತವೇ ಆಗಿತ್ತು.

ನೋಡು ಜನಮೇಜಯ ಯಾಗಸಮಾಪ್ತಿಯಾದ ನಂತರ ಇದು ನಡೆಯಿತು. ನಾವೆಲ್ಲರೂ ನೋಡುತ್ತಿದ್ದಂತೆಯೇ ಆ ಮುಂಗುಸಿ ಮಾಯವಾಯಿತು. ಆದ್ದರಿಂದ ಧರ್ಮರಾಜನ ಯಜ್ಞದ ಸಾತ್ವಿಕತೆ ಬಗ್ಗೆ ನೀನು ಸಂಶಯಪಡಬೇಡ ಎಂದು ವೈಶಂಪಾಯನರು ತಮ್ಮ ಅಭಿಪ್ರಾಯವನ್ನು ಹೇಳುತ್ತಾರೆ.

## ಸಂದೇಶಗಳು - ವಿವರಣೆಗಳು

೧. ಸಮಗ್ರ ಭೂಲೋಕದ ರಾಜರು, ಬ್ರಾಹ್ಮಣರು, ಸಮಾಜದ ಎಲ್ಲ ಸ್ತರದ ಜನರು ಧರ್ಮರಾಜನ ಯಜ್ಞದ ಬಗ್ಗೆ ತೃಪ್ತಿ ಪಡಿಸಿರುವಾಗ ಯಃಕಶ್ಚಿತ್ ಮುಂಗುಸಿ ಮಾತ್ರ ಬಂದು ಆಕ್ಷೇಪಿಸಿದುದು ಒಂದು ಪೂರ್ವಯೋಜಿತ ದೈತ್ಯರ ಸಂಚೆಂದು ಭಾರತವೇ ಹೇಳುತ್ತದೆ (ಅ. ೯೬/೪). ಅವನೇ ಜಮದಗ್ನಿಗಳ ಪಿತೃಕಾರ್ಯಕ್ಕೂ ವಿಘ್ನಮಾಡಿದನೆಂದು ಇಲ್ಲಿದೆ. ಹೀಗಾಗಿ ದೈತ್ಯರ ಸ್ವಭಾವ ಸಜ್ಜನರಿಗೆ ಹಿಂಸೆ ಕೊಡುವುದು, ಅವರ ಸತ್ಕಾರ್ಯಗಳನ್ನು ಆಕ್ಷೇಪಿಸುವುದು, ಅವರ ಮಾತ್ಸರ್ಯದ್ಯೋತಕ ನಡೆಯೇ ಆಗಿದೆ[೧]. ಔತ್ತರೇಯ ಪಾಠದಲ್ಲಿ ಧರ್ಮದೇವತೆಯೇ ಕ್ರೋಧರೂಪದಿಂದ ಬಂದ ಎನ್ನುವ ಪಾಠವು ಪೂರ್ವಾಪರ ವಿರೋಧವಾಗುತ್ತದೆ.

೨. ಕ್ರೋಧದೈತ್ಯನು ಮಾಡಿದ ತಪ್ಪಿಗೆ ಪಿತೃದೇವತೆಗಳ ಶಾಪ ಬರುತ್ತದೆ. ಶ್ರಾದ್ಧ ಪದಾರ್ಥಗಳನ್ನು ಕೆಡಸಿದರೆ ದುಷ್ಟಯೋನಿ ಬಂದೇ ಬರುತ್ತದೆ.

೩. ಮುಂಗುಸಿ ಹೇಳಿದ ಬ್ರಾಹ್ಮಣನು ಮಾಡಿದ ಹಿಟ್ಟಿನ ದಾನದ ಮಹತ್ತ್ವ ಯಾರೂ ಅಲ್ಲಗಳೆದಿಲ್ಲ. ಅದು ಸತ್ಯವೇ ಆದರೂ ಅದು ಧರ್ಮರಾಜನ ಯಜ್ಞಕ್ಕಿಂತಲೂ ಶ್ರೇಷ್ಠವೆನ್ನುವ ಮುಂಗುಸಿಯ ಮಾತುಗಳು ಆಕ್ಷೇಪಾರ್ಹ. ಎಲ್ಲಿಯ ಧರ್ಮರಾಜ? ಎಲ್ಲಿಯ ಈ ಹಿಟ್ಟಿನ ದಾನ ಮಾಡಿದ ಬ್ರಾಹ್ಮಣ?

ದಾನವನ್ನು ಅವರವರ ಸಂಪನ್ಮೂಲಕ್ಕೆ ತಕ್ಕಂತೆ ಭಕ್ತಿಯಿಂದ ಮಾಡಿದರೆ ಉತ್ತಮಫಲ ಬರುವುದೆಂಬುದು ನಿರ್ವಿವಾದವಾದರೂ ಅಧಿಕ ಸಂಪನ್ಮೂಲವಿರುವವರು ಭಕ್ತಿಯಿಂದ ಮಾಡಿದರೆ ಅವರ ಯೋಗ್ಯತೆಗೆ ತಕ್ಕಂತೆಯೂ ಫಲಾಧಿಕ್ಯ ಬರುವುದೆಂಬುದರಲ್ಲಿ ಅನುಪಪತ್ತಿಯಾದರೂ ಏನು? ಭಕ್ತಿಯಿಲ್ಲದೆ ಡಾಂಭಿಕವಾಗಿ ಮಾಡಿದ ಭಾರಿ ಸಂಪತ್ತಿನ ದಾನ ಪುಣ್ಯಪ್ರಾಪಕವಲ್ಲವೆಂಬುದು ನಿಜವಾದರೂ ಅತ್ಯುತ್ತಮ ಅಧಿಕಾರಿಗಳು ಡಾಂಭಿಕವಾಗಿ ಮಾಡಿದ್ದೆಂದು ಹೇಳಲು ಆಧಾರಬೇಕಲ್ಲ. ಧರ್ಮರಾಜನು ಮಾಡಿದ್ದು ಅತ್ಯುತ್ತಮ ಯಜ್ಞವೆಂದು ಲೋಕಗಳೆಲ್ಲ ಹೊಗಳುತ್ತಿರುವಾಗ ಕೇವಲ ಮುಂಗುಸಿಯ ಆಕ್ಷೇಪ, ಅದು ನ್ಯಾಯದ ಮುಂದೆ ನಿಲ್ಲದು. ಧರ್ಮರಾಜನ ಯಜ್ಞವನ್ನು ಮಾಡಿದವರು, ಮಾಡಿಸಿದವರು, ಭಾಗವಹಿಸಿದ ದೇವಾದಿಗಳು ಕೊಂಡಾಡಿರುವುದು ಇದೇ ಪ್ರಸಂಗದಲ್ಲಿ ಆಗಲೇ ದಾಖಲಾಗಿದೆ

---

೧ ತಚ್ಚ ಕ್ರೋಧಃ ಸ್ವರೂಪೇಣ ಪಿತರಂ ಪರ್ಯಧರ್ಷಯತ್ ।

(ಅ. ೯೦,೯೨ರಲ್ಲಿ ಬಂದಿದೆ). ಆದ್ದರಿಂದ ಮುಂಗುಸಿಯದು ಕೇವಲ ಅಸೂಯೆಯಿಂದ ಮಾಡಿದ ಆಕ್ಷೇಪ. ಅದಕ್ಕೆ ಧಾರ್ಮಿಕ ಬಣ್ಣ ಕೊಡಲಾಗಿದೆ. ದೈತ್ಯರ ಸ್ವಭಾವವೇ ಅಂತಹುದು. ದುರ್ಯೋಧನ ಕೂಡಾ ರಾಜಸೂಯದ ಔನ್ನತ್ಯವನ್ನು ಅಲ್ಲಗಳೆಯಲಿಲ್ಲ, ಆದರೆ ಅಸೂಯೆಯಿಂದ ಮುಂದೆ ಧರ್ಮರಾಜನನ್ನು ದ್ಯೂತಕ್ಕೆ ಎಳೆದು ವನಕ್ಕಟ್ಟಿದ. ಮುಂದೆ ತಾನೂ ಹಾಳಾದ. ದುರ್ಯೋಧನನಂತೆ ಕ್ರೋಧಾಭಿಮಾನಿ ದೈತ್ಯ ಧರ್ಮರಾಜನನ್ನು ನಿಂದಿಸಿದ ಫಲವಾಗಿ ತಮಸ್ಸಿಗೆ ಹೋದ ಎಂಬುದು ಇಲ್ಲಿ ಪರೋಕ್ಷವಾಗಿ ಹೇಳಲಾಗಿದೆ.

೪. ಮುಂಗುಸಿ ರೂಪದಲ್ಲಿ ಬಂದ ಕ್ರೋಧನು ಬ್ರಾಹ್ಮಣರು ಧರ್ಮರಾಜನ ಯಜ್ಞವನ್ನು ವರ್ಣಿಸಿದಾಗ ಹೇಗೆ ಪ್ರತಿಕ್ರಿಯಿಸಿದ ಎಂದು ಭಾರತವೇ ಹೇಳುತ್ತದೆ. ಅಸೂಯಾಪರರು ಇಂತಹ ಸತ್ಕಾರ್ಯವನ್ನು ಗಹಗಹಿಸಿ ನಕ್ಕು ಗೇಲಿ ಮಾಡುತ್ತಾರೆ. ಅಪಹಾಸ್ಯ ಮಾಡುತ್ತಾರೆ. ಹಾಗೆಯೇ ಮಾಡಿದ ಕ್ರೋಧರೂಪೀ ಮುಂಗುಸಿ (ಅ. ೯೨/೧೯ ನೋಡಿರಿ). ಆಗಲೇ ಲೇಖನದಲ್ಲಿ ಉದಾಹರಿಸಲಾಗಿದೆ. ಅವನು ಬ್ರಾಹ್ಮಣರ ಮಾತನ್ನು ಕೇಳಲು ಸಿದ್ಧನಿರಲಿಲ್ಲ, ತೋರಿಕೆಗೆ ಮತ್ತೊಬ್ಬ ಬ್ರಾಹ್ಮಣನ ದಾನವನ್ನು ನಿರೂಪಿಸಿ ತಾನು ನಿಷ್ಪಕ್ಷಪಕ್ಷಪಾತಿಯೆಂಬಂತೆ ವರ್ತಿಸುತ್ತಾನೆ. ಆದರೆ ಅವನ ಅಂತರಭಿಪ್ರಾಯ(ನಿಜವಾದ ಅಭಿಪ್ರಾಯ) ಬೇರೆಯಾಗಿತ್ತು.

೫. ದ್ವಾಪರದಲ್ಲಿ ಈಗಾಗಲೇ ಕ್ರೋಧತಂತ್ರದೈತ್ಯರು ಹುಟ್ಟಿಸತ್ತು ಹೋಗಿದ್ದಾರೆ (ಏಕಲವ್ಯ ಮೊದಲಾದವರು). ಈ ಮುಂಗುಸಿ ಇದೇ ಕ್ರೋಧದೈತ್ಯರ ಗುಂಪಿನ ಮತ್ತೊಬ್ಬ ದೈತ್ಯನೆಂಬ ನಿರ್ಧಾರಕ್ಕೆ ನಾವು ಬರಬಹುದು.

೬. ಮುಂಗುಸಿ ತನ್ನ ಅಭಿಪ್ರಾಯವನ್ನು ಹೇಳಿ ಕೂಡಲೇ ಅಂತರ್ಧಾನನಾಗಿ ಹೋದ. ಬ್ರಾಹ್ಮಣರ ಪ್ರತಿಕ್ರಿಯೆ ಕೇಳಲಿಲ್ಲ, ಇಲ್ಲಿಯೇ ಅವನ ಕಳ್ಳ ಹೃದಯ ತಿಳಿಯುತ್ತದೆ. ಕಾರಣ ಬ್ರಾಹ್ಮಣರು ಈ ಮೊದಲೇ ಎಲ್ಲ ಹೇಳಿಬಿಟ್ಟಿದ್ದರು. ಶಾಪಭಯವಿರಲೂ ಸಾಕು ಮುಂಗುಸಿಗೆ.

೭. ಹಿಟ್ಟಿನದಾನ ಕೊಟ್ಟ ಬ್ರಾಹ್ಮಣನಿಗೆ ಧರ್ಮದೇವತೆ ಹೇಳಿದ ಮಾತುಗಳಲ್ಲಿ ಯಾವುವೂ ಧರ್ಮವಿರೋಧಿಯಲ್ಲ.

೮. ಮುಂಗುಸಿಯ ಅರ್ಧಶರೀರ ಬಂಗಾರವಾದುದಕ್ಕೂ, ಅದು ಯಜ್ಞದ ಸ್ಥಳದಲ್ಲಿ ಹೊರಳಾಡಿದುದಕ್ಕೂ ಯಾವುದೇ ವ್ಯಾಪ್ತಿ ಇಲ್ಲ. ಈ ವಿಷಯವನ್ನು ಶ್ರೀವಾದಿರಾಜರು ಬಹು ಮಾರ್ಮಿಕವಾಗಿ ಖಂಡಿಸಿದ್ದಾರೆ. ಅದನ್ನು ಇಲ್ಲಿ ಮುಂದೆ ಕೊಡಲಾಗಿದೆ.

೯. ಕೇವಲ ಹಿಟ್ಟಿನಿಂದ ಮಾಡಿದ ಅತಿಥಿಪೂಜೆ ಆ ಬ್ರಾಹ್ಮಣನ ಪ್ರಾಮಾಣಿಕತೆ 'ಅತಿಥಿದೇವೋಭವ' ಎಂಬ ಅನುಸಂಧಾನಗಳು ಎಲ್ಲರಿಗೂ ಮಾನ್ಯ.

೧೦. ಬ್ರಾಹ್ಮಣನ ಪತ್ನಿ, ಸೊಸೆ, ಮಗ ಎಲ್ಲರೂ ಸೇರಿ ಅತಿಥಿಯ ಪೂಜೆ ಮಾಡಿದ ರೀತಿ ಅವರ ಆದರ್ಶಗಳು ಸರ್ವರಿಗೂ ಅನುಕರಣೀಯ. ಮನೆಗೆ ಬಂದ ಸೊಸೆ, ಸ್ವಯಂ ಪುತ್ರನ

ಕರ್ತವ್ಯ, ಸತೀಮಣಿಯ ಪಾತಿವ್ರತ್ಯಗಳಲ್ಲಿವೂ ಅವರಿಗೆ ಸದ್ಗತಿಗೆ ಕಾರಣವಾದವು. ಬ್ರಹ್ಮಸದನಕ್ಕೆ ಹೋಗಲು ಸ್ವರ್ಗಕ್ಕೆ ಹೋಗಲು ಸಾಧನವಾದವು.

೧೧. ಹಸಿವೆ ಮಾಡುವ ಅಹಾಹುತಗಳನ್ನು ಮಹಾಭಾರತ ಚೆನ್ನಾಗಿ ಬಣ್ಣಿಸಿದೆ. ಆದ್ದರಿಂದ ಹಸಿವೆಯನ್ನೂ ಗೆಲ್ಲಲು ಪ್ರತ್ನಿಸುವುದೇ ಮಹಾ ತಪಸ್ಸಾಗುತ್ತದೆ.

೧೨. ಧರ್ಮರಾಜನನ್ನು ಬ್ರಾಹ್ಮಣರು ನಿಂದಿಸುತ್ತಿದ್ದಾರೆಂದು ಹೇಳಿದ ತ್ರಿದಂಡ-ಸನ್ಯಾಸಿಯಾಗಿ ಬಂದ ಚಾರ್ವಾಕನೆಂಬ ರಾಕ್ಷಸನನ್ನು ರಾಜಸಭೆಯ ಬ್ರಾಹ್ಮಣರು 'ಭಸ್ಮೀಭವ' ಎಂದು ಹೇಳಿದಾಗ ಅವನು ಬೂದಿಯಾದುದು ಈಗಾಗಲೇ ಬಂದಿದೆ(ಮ.ತಾ.ನಿ. ೨೯/೧-೩). ಹಾಗೆಯೇ ಇಲ್ಲಿಯೂ ಬ್ರಾಹ್ಮಣರು ಮಾಡಬಹುದಿತ್ತು. ಆದರೆ ಹಾಗೆಯೇ ಮಾಡಲಿಲ್ಲ. ಇಲ್ಲಿಗೆ ಬಂದ ಮುಂಗುಸಿ ತಾನು ಮಾತಾಡಿದ ಕೂಡಲೇ ಅಂತರ್ಧಾನವಾಗಿ ಓಡಿಹೋದ. ಕೃಷ್ಣಾದಿಗಳೇ ಆಗಲಿ, ಬ್ರಾಹ್ಮಣರಾಗಲಿ ಏನೂ ಪ್ರತಿಕ್ರಿಯಿಸಲಿಲ್ಲ (ಕೊನೆಗೆ). ಅವರೆಲ್ಲರೂ ಕೃಷ್ಣನೊಂದಿಗೆ ನಕ್ಕರಂತೆ. ಯಃಕಶ್ಚಿತ್ ಮುಂಗುಸಿಗೆ ಯಾವ ಪ್ರತಿಕ್ರಿಯೆ ಕೊಡದೆ ಅವನಿಗಾಗುವ ಫಲವನ್ನು ತೋರಿಸಿದರು ಜ್ಞಾನಿಗಳೆಲ್ಲ. ಲೋಕದಲ್ಲೂ ಅನೇಕ ವೇಳೆ ಮೂರ್ಖರ ಮಾತುಗಳಿಗೆ ದೊಡ್ಡವರು ಪ್ರತಿಕ್ರಿಯೆ ಕೊಡುವುದಿಲ್ಲ. ಇವನೂ ಚಾರ್ವಾಕಜಾತಿಯ ರಾಕ್ಷಸ, ಕ್ರೋದನಾಮಕ ದೈತ್ಯ. ಕೃಷ್ಣಾದಿಗಳು ಮುಂಗುಸಿಯನ್ನು ನೋಡಿ ನಕ್ಕ ವಿಷಯ ಈಗ ಉಪಲಬ್ಧವಿರುವ ಯಾವ ಪಾಠದಲ್ಲಿಲ್ಲ. ಅದು ಆಚಾರ್ಯರ ನಿರ್ಣಯದಲ್ಲಿದೆ. ಇದರಿಂದ ಈ ಭಾಗ ತೆಗೆದು ಹಾಕಲಾಗಿದೆ ಎಂದು ತಿಳಿಯುತ್ತದೆ. ಆಚಾರ್ಯರು ನಿರ್ಣಯ ಮಾಡಿದ ವಿಷಯಗಳಲ್ಲಿ ಇದೂ ಒಂದು.

೧೩. ದುರ್ಯೋಧನ ಸಾಯುವಾಗಲು ಅವನ ಮಾತುಗಳಿಗೆ ಪುಷ್ಪವೃಷ್ಟಿಯಾಗಿತ್ತು. ಅವನ ಮಾತುಗಳ ಬಗ್ಗೆ ಅವನಿಗೆ ದೃಢಬುದ್ಧಿ ಬರಲೆಂದು. ಹಾಗೆಯೇ ಇಲ್ಲಿಯೂ ಕೂಡಾ ಮುಂಗುಸಿಯ ಮಾತಿಗೆ ಮುಗುಳ್ನಕ್ಕ ಕೃಷ್ಣಾದಿಗಳ ಅಭಿಪ್ರಾಯ, ಮುಂಗುಸಿಯು ಹಾಗೆಯೇ ತಿಳಿದುಕೊಂಡು (ಧರ್ಮರಾಜನ ಯಜ್ಞಫಲ ಬ್ರಾಹ್ಮಣನಿಗಿಂತ ತುಂಬಾ ಕಡಿಮೆ ಎಂದು) ತಮಸ್ಸಿಗೆ ಹೋಗಲಿ ಎಂದಾಗಿತ್ತು. ಆದ್ದರಿಂದ ಅವರು ಪ್ರತಿಕ್ರಿಯೆ ನೀಡದೆ ಮುಗುಳ್ನಕ್ಕರು. ಆದ್ದರಿಂದ ಮೌನ ಯಾವಾಗಲೂ ಸಮ್ಮತಿ ಲಕ್ಷಣವಲ್ಲ.

೧೪. ಈ ಉಪಾಖ್ಯಾನ ಹಾಗೂ ಅದರ ನಿರ್ಣಯ ಭಾಗವನ್ನು ಪರಿಶಿಷ್ಟ-೬ರಲ್ಲಿ ಕೊಡಲಾಗಿದೆ (ಅ- ೩೦/೧೫೮-೧೭೭).

*****

# ೧೫೯. ಸ್ವರ್ಗಸಿದ್ಧಿಗೆ ಪಶುಬಲಿ ಪ್ರಶಸ್ತವಲ್ಲ

ಜನಮೇಜಯ ವೈಶಂಪಾಯನರನ್ನು ಪ್ರಶ್ನಿಸುತ್ತಾನೆ.

ರಾಜರು ಯಜ್ಞದಲ್ಲಿ, ಮಹರ್ಷಿಗಳು ತಪಸ್ಸಿನಲ್ಲಿ, ಬ್ರಾಹ್ಮಣರು ಶಮದಮಗಳಲ್ಲಿ ಮತ್ತು ಭಗವಂತನಲ್ಲಿ (ಮೋಕ್ಷದಲ್ಲಿ) ಆಸಕ್ತರಾಗಿರುತ್ತಾರೆ. ಆದರೆ ಯಜ್ಞ ಮಾಡುವುದರಿಂದ ಬರುವ ಫಲವು ಬೇರೆ ಯಾವುದೇ ಕರ್ಮಗಳಿಂದ ಬರುವುದಿಲ್ಲವೆಂದು ನನ್ನ ಅನಿಸಿಕೆಯಾಗಿದೆ. ಅನೇಕ ರಾಜರು, ಬ್ರಾಹ್ಮಣರು ಯಜ್ಞಗಳಿಂದ ದೇವತಾರಾಧನೆ ಮಾಡಿ ಇಹಲೋಕದಲ್ಲಿ ಕೀರ್ತಿಯನ್ನು, ಸತ್ತಮೇಲೆ ಸ್ವರ್ಗಕ್ಕೆ ಹೋಗಿದ್ದಾರೆ. ಇಂದ್ರನು ಭಾರೀ ದಕ್ಷಿಣಾಪೂರ್ಣ ಯಜ್ಞಗಳಿಂದ ಕಳೆದುಕೊಂಡ ದೇವರಾಜ್ಯವನ್ನೆಲ್ಲ ಪಡೆದ. ಆದ್ದರಿಂದಲೇ ಧರ್ಮರಾಜನೂ ಭೀಮಾರ್ಜುನರನ್ನು ಮುಂದಿಟ್ಟುಕೊಂಡು ಸಮೃದ್ಧಿಯಿಂದ ಪರಾಕ್ರಮದಿಂದ ಇಂದ್ರನಿಗೆ ಸಮಾನನಾಗಿದ್ದಾನೆ.

ಹೀಗಿದ್ದರೂ ಮುಂಗುಸಿ ಮಹಾತ್ಮನಾದ ರಾಜನನ್ನು ಮತ್ತು ಮಹಾಯಜ್ಞವನ್ನು ಏಕೆ ನಿಂದಿಸಿತು?

ಇದಕ್ಕೆ ವೈಶಂಪಾಯನರು 'ನಾನಿಂದು ಯಜ್ಞದ ವಿಧಿವಿಧಾನಗಳನ್ನೂ, ಫಲಗಳನ್ನೂ ಹೇಳುತ್ತೇನೆ, ಕೇಳು' ಎಂದರು.

ಹಿಂದೆ ಇಂದ್ರದೇವ ಯಜ್ಞನಿರತನಾದಾಗ ಮಹರ್ಷಿಗಳು ಮಂತ್ರೋಚ್ಚಾರವನ್ನು ಋತ್ವಿಕರು ತಮ್ಮ ನಿಯತಕರ್ಮಗಳಲ್ಲಿ ನಿರತರಾಗಿದ್ದರು. ಉತ್ತಮ ಗುಣಯುಕ್ತವಾದ ಆಹುತಿಗಳನ್ನು ನೀಡುತ್ತಾ ಕ್ರಮವಾಗಿ ದೇವತೆಗಳನ್ನು ಆಹ್ವಾನಿಸುತ್ತಿದ್ದರು. ಬ್ರಾಹ್ಮಣರೆಲ್ಲ ವ್ರತನಿಷ್ಠರಾಗಿ ಪ್ರಸನ್ನಚಿತ್ತರಾಗಿ ಸುಸ್ವರದಿಂದ ನಿರಂತರ ಚತುರ್ವೇದ ಪಠಿಸುತ್ತಿರಲು ಪಶ್ವಾಲಂಬನ (ಪಶುಬಲಿ) ಕಾಲ ಬಂದಿತು. ಪಶುಗಳನ್ನು ಬಲಿಕೊಡಲು ಹಿಡಿದುಕೊಂಡು ಬಂದಾಗ ಮಹರ್ಷಿಗಳು ಆ ಪಶುಗಳ ಬಗ್ಗೆ ಕೃಪಾಪರವಶರಾದರು. ಅವುಗಳೆಲ್ಲ ದೈನ್ಯಭಾವದಿಂದ (ಇನ್ನೇನು ನಮ್ಮ ಮರಣಕಾಲ ಬಂದಿತೆಂಬ) ಇರುವುದನ್ನು ನೋಡಿದ ಮಹರ್ಷಿಗಳು ಇಂದ್ರನನ್ನು ಕಂಡು 'ಪಶುಬಲಿಯಿಂದ ಕೂಡಿದ ಯಜ್ಞವು ಮಂಗಳವಲ್ಲವೆಂದು ನುಡಿದರು. ಯಜ್ಞದಿಂದ ಮಹಾಧರ್ಮ, ಪುಣ್ಯ ಬಯಸುವ ನಿನಗೆ ಈ ಪಶುಬಲಿ ಕೊಡುವುದು ಶಾಸ್ತ್ರವಿಹಿತವಲ್ಲ, ಇದು ಅಧರ್ಮ. ಧರ್ಮಕ್ಕೆ ಬಗೆದ ಅನ್ಯಾಯವಿದು. ಆದ್ದರಿಂದ ಶಾಸ್ತ್ರವಿಧ್ಯುಕ್ತವಾಗಿಯೇ ಯಜ್ಞವು ಆಚರಿಸಲ್ಪಡಲಿ. ಅದರಿಂದ ಮಹಾಪುಣ್ಯಪ್ರಾಪ್ತಿಯಾಗುತ್ತದೆ. ಪಶುಬಲಿ ಬದಲಾಗಿ

ಮೂರುವರ್ಷ ಹಳೆಯದಾದ (ಗೋಧಿ) ಮೊದಲಾದ ಬೀಜಗಳಿಂದ ಯಜ್ಞಮಾಡು. ಇದೇ ಮಹಾಫಲ ನೀಡುತ್ತದೆ.'[೧] ಎಂದರು.

ತತ್ತ್ವದರ್ಶಿಗಳಾದ ಮಹರ್ಷಿಗಳ ಮಾತನ್ನು ಇಂದ್ರನು ಒಪ್ಪಲಿಲ್ಲ, ಸ್ವೀಕರಿಸಲಿಲ್ಲ[೨] (ಯಜ್ಞದಲ್ಲಿ ಪಶುಬಲಿ ವಿಹಿತವೆಂದು ಆತನು ಭಾವಿಸಿದನೆಂದು ತೋರುತ್ತದೆ. ಈ ಕಾರಣ ಮೂಲದಲ್ಲಿ ಸ್ಪಷ್ಟವಾಗಿಲ್ಲ).

ಈ ಮಧ್ಯ ಯಜ್ಞಪಶು ವಿಚಾರದಲ್ಲಿ ಮಹರ್ಷಿಗಳ ಮಧ್ಯೆ ಭಾರೀ ವಿವಾದ ಉಂಟಾಯಿತು. ಜಂಗಮ ಪ್ರಾಣಿಗಳಾದ ಆಡು, ಕುದುರೆಗಳ ಮೂಲಕ ಯಜ್ಞಮಾಡಬೇಕೆಂದು ಕೆಲವರೂ, ಜವೆ(ಗೋಧಿ) ಮೊದಲಾದ ಧಾನ್ಯಗಳಿಂದ ಎಂದು ಕೆಲವರೂ ಹೀಗೆ ವಿವಾದ ಉಂಟಾಯಿತು. ಈ ವಿವಾದದಿಂದ ಮಹರ್ಷಿಗಳು ಖಿನ್ನರಾದರು. ಎಲ್ಲರೂ ಇಂದ್ರನೊಡನೆ ಚರ್ಚಿಸಿ ಉಪರಿಚರ ವಸುವಿನ ಬಳಿಗೆ ಹೋಗಿ ಈ ಬಗ್ಗೆ (ಯಜ್ಞಪಶು ವಿಚಾರ) ನೀನೇ ಹೇಳೆಂದು ತಿಳಿಸೆಂದರು. ಅದಕ್ಕೆ ಆತನು ಎರಡೂ ಪಕ್ಷಗಳ ಬಲಾಬಲವನ್ನು ವಿವೇಚಿಸದೆ ಯಾವ ಯಾವ ಕಾಲದಲ್ಲಿ ಏನು ಸಿಗುತ್ತದೋ, ಅದರಿಂದ (ಪಶು ಅಥವಾ ಧಾನ್ಯ) ಯಜ್ಞಮಾಡಬೇಕೆಂದು ಸಾವಕಾಶವಾಗಿ (ಸಾಮಾನ್ಯಕಾರವಾಗಿ) ಹೇಳಿದನು. ಅಗ ಮಹರ್ಷಿಗಳು ಸ್ಪಷ್ಟವಾಗಿ ಹೇಳೆಂದು ಮತ್ತೆ ಪ್ರಶ್ನಿಸಿದಾಗ ಪುನಃ ಮೊದಲಿನಂತೆ ಉತ್ತರಿಸಿದ. ಅದರ ಫಲವಾಗಿ ರಸಾತಲಕ್ಕೆ ಹೋದನು[೩](ತಪ್ಪು ನಿರ್ಣಯ ಕೊಟ್ಟಿದ್ದರಿಂದ).

ಮುಂದೆ ವೈಶಂಪಾಯನರು ಧರ್ಮವಿರುದ್ಧವಾಗಿ (ಅನ್ಯಾಯವಾಗಿ) ಸಂಪಾದಿಸಿದ ದ್ರವ್ಯದಾನದಿಂದಾಗುವ ಫಲಗಳನ್ನು ವಿವರಿಸುತ್ತಾರೆ.

---

೧ ಆಲಂಬಸಮಯೇ ತಸ್ಮಿನ್ ಗೃಹೀತೇಷು ಪಶುಷ್ವಥ।
ಮಹರ್ಷಯೋ ಮಹಾರಾಜ ಸಂಬಭೂವುಃ ಕೃಪಾನ್ವಿತಾಃ॥
ತತೋ ದೀನಾನ್ ಪಶೂನ್ ದೃಷ್ಟ್ವಾ ಋಷಯಸ್ತೇ ತಪೋಧನಾಃ।
ಊಚುಃ ಶಕ್ರಂ ಸಮಾಗಮ್ಯ ನಾಯಂ ಯಜ್ಞವಿಧಿಃ ಶುಭಃ॥
ನ ಹಿ ಯಜ್ಞೇ ಪಶುವಧೋ ವಿಧಿದೃಷ್ಟಃ ಪುರಂದರಃ।
ಯಜ ಬೀಜೈಃ ಸಹಸ್ರಾಕ್ಷ ತ್ರಿವರ್ಷಪರಮೋಷಿತೈಃ॥
ಏಷ ಧರ್ಮೋ ಮಹಾನ್ ಶಕ್ರ ಮಹಾಗುಣಫಲೋದಯಃ॥ - ೯೪/೧೧-೧೬

೨ ಶತಕ್ರತುಸ್ತು ತದ್ವಾಕ್ಯಮೃಷಿಭಿಸ್ತತ್ತ್ವದರ್ಶಿಭಿಃ।
ಉಕ್ತಂ ನ ಪ್ರತಿಜಗ್ರಾಹ ಮಾನಮೋಹವಶಾನುಗಃ॥ - ೯೪/೧೭

೩. ತುಚ್ಛ್ರುತ್ವಾ ತು ವಸುಸ್ತೇಷಾಮವಿಚಾರ್ಯ ಬಲಾಬಲಮ್।
ಯಥೋಪನೀತೈರ್ಯಷ್ಟವ್ಯಮಿತಿ ಪ್ರೋವಾಚ ಪಾರ್ಥಿವಃ॥
ಧರ್ಮಸಂಶಯಮಾಪನ್ನಾನ್ ಸತ್ಯಂ ಬ್ರೂಹಿ ಮಹಾಮತೇ।
ಏವಮುಕ್ತೇ ಸ ನೃಪತಿಃ ಪ್ರವಿವೇಶ ರಸಾತಲಮ್॥
ಉಕ್ತ್ವೇಹ ವಿತಥಂ ರಾಜನ್ ಚೇದೀನಾಮೀಶ್ವರಃ ಪ್ರಭುಃ॥ - ೯೪/೨೧-೨೩

೧. ಧರ್ಮಬುದ್ಧಿಯಿಂದಲೇ ಮಾಡಿರಲಿ ಅದು ಧರ್ಮಫಲ ಕೊಡುವುದಿಲ್ಲ.

೨. ಅಂತಹ ದಾನಿ ಧರ್ಮಕ್ಕೆ ಅನ್ಯಾಯ ಮಾಡಿದಂತೆ. ಅವನು ಪುರುಷಾಧಮ. ಕಾರಣ ತಾನು ಧರ್ಮಿಷ್ಠನೆಂದು ಬ್ರಾಹ್ಮಣರಿಗೆ ವಿಶ್ವಾಸ ಹುಟ್ಟಿಸಿ ದಾನ ಮಾಡಿರುತ್ತಾನೆ (ಇದು ಒಂದು ತರಹ ಮೋಸ).

೩. ಇಂತಹ ಪಾಪಕರ್ಮದಿಂದಾಗಿ ಅವನು ನರಕಕ್ಕೆ ಹೋಗುತ್ತಾನೆ.

೪. ಅಂತಹ ದಾನಿಯು ಬೇಕಾದಷ್ಟು ದಾನ ಮಾಡಿದ್ದರೂ, ಅದು ಸಾತ್ವಿಕ ಫಲವೆನಿಸದೆ ಸತ್ಫಲ ನಾಶವಾಗುತ್ತದೆ.

೫. ಅಧರ್ಮಾಚರಣೆಯಲ್ಲಿರುವ ಹಿಂಸಾಕಾರ್ಯ ಮಾಡುವ ವ್ಯಕ್ತಿಗೆ ಇದರಿಂದ ಭೂಲೋಕದಲ್ಲಿ ಅಪಕೀರ್ತಿ ಹಾಗೂ ಸತ್ತ ಮೇಲೆ ಸದ್ಗತಿಯೂ ಸಿಗದು (ಅನ್ಯಾಯಾರ್ಜಿತ ದ್ರವ್ಯವನ್ನು ಅಧರ್ಮಾಚರಣೆ ಹಾಗೂ ಪರಹಿಂಸೆಗಳಿಗೆ ಉಪಯೋಗಿಸಿದರಂತೂ ಆಗುವ ಫಲ ಇಲ್ಲಿ ಹೇಳಲಾಗಿದೆ).

೬. ಮಾಡುವ ಕಾರ್ಯ(ಯಜ್ಞ)ದ ಬಗ್ಗೆ ಸಂಶಯವುಳ್ಳ ಹಾಗೂ ಲೋಭ, ಮೋಹಗಳಿರುವ ಯಾವನು ಪಶುಹಿಂಸಾರೂಪ ಯಜ್ಞಮಾಡುತ್ತಾನೋ ಅವನು ಪಾಪಿಯೇ ಸರಿ.

೭. ಮೋಹದಿಂದ ಧನಸಂಗ್ರಹಿಸಿ ಯಜ್ಞ ಮತ್ತು ದಾನ ಮಾಡುವವನು, ಅಂತಹ ಕರ್ಮದಿಂದ ಉತ್ತಮಸಿದ್ಧಿ ಹೊಂದನು. ಅನ್ಯಾಯದಿಂದ ದ್ರವ್ಯ ಸಂಪಾದಿಸಿದ್ದು ಯಜ್ಞಕ್ಕೆ ಯೋಗ್ಯವೆನ್ನುವುದು ದುರಾಗಮದ ಕಲ್ಪನೆ ಹೊರತು ಸದಾಗಮಗಳಲ್ಲಿ ಹೇಳಿಲ್ಲ.

ಆದರೆ ಗೆಡ್ಡೆ-ಗೆಣಸು, ಶಾಕ(ತರಕಾರಿ), ನೀರು, ಹಣ್ಣು ಮೊದಲಾದವನ್ನು ತನ್ನ ವೈಭವಕ್ಕನುಗುಣವಾಗಿ ಕೊಟ್ಟ ಧಾರ್ಮಿಕ ವ್ಯಕ್ತಿ ಸ್ವರ್ಗಲೋಕಕ್ಕೇ ಹೋಗುತ್ತಾನೆ[೧].

ಇದುವೇ ಧರ್ಮ, ಮಹಾಪುಣ್ಯಕರ. ದಾನ ಪ್ರಾಣಿದಯೆ, ಬ್ರಹ್ಮಚರ್ಯ, ಸತ್ಯ, ಕಾರುಣ್ಯ, ಧೈರ್ಯ ಹಾಗೂ ಕ್ಷಮಾಗಳು. ಸನಾತನ ಧರ್ಮದ ಫಲಗಳಾಗಿವೆ(ಬೇರುಗಳಾಗಿವೆ). ವಿಶ್ವಾಮಿತ್ರರೇ ಮೊದಲಾದ ರಾಜರು ಇವುಗಳಿಂದಲೇ ಸಿದ್ಧಿ ಪಡೆದುದು ಕೇಳಿದ್ದೇವೆ. ಎಲ್ಲ ವರ್ಣದವರೂ ಕೂಡಾ ತಪಸ್ಸು ದಾನಧರ್ಮಗಳನ್ನು ಆಶ್ರಯಿಸಿ ಅಗ್ನಿಯಿಂದ ಪರಿಶುದ್ಧರಾಗಿ ಸ್ವರ್ಗಕ್ಕೆ ಹೋಗುತ್ತಾರೆ.

---

೧ ಇಚ್ಛನ್(ಉಂಛಂ)* ಮೂಲಂ ಫಲಂ ಶಾಕಮುದಪಾನಂ ತಪೋಧನಮ್ (ತಪೋಧನಾಃ) ।
ದಾನಂ ವಿಭವತೋ ದತ್ವಾ ತತಃ ಸ್ವರ್ಯಾತಿ ಧಾರ್ಮಿಕಃ (ಕಾಃ) ॥ - ೯೪/೩೧
*ಕಂಸದಲ್ಲಿರುವುದು ದಾಕ್ಷಿಣಾತ್ಯ - ಔತ್ತರೇಯ ಪಾಠಗಳಾಗಿವೆ.

## ಸಂದೇಶಗಳು- ವಿವರಣೆಗಳು

೧. ಸ್ವರ್ಗಕ್ಕೆ ಹೋಗಲು ಯಜ್ಞಯಾಗಾದಿಗಳು ಮಾತ್ರ ಸಾಧನಗಳಲ್ಲ. ನ್ಯಾಯಾರ್ಜಿತ ಸಂಪತ್ತಿನಿಂದ ಕೂಡಿಕೊಂಡವರಾಗಿ ತಪಸ್ಸನ್ನು ಆಶ್ರಯಿಸಿಕೊಂಡು, ದಾನ-ಧರ್ಮಗಳನ್ನು ಮಾಡುತ್ತಲೂ ಸ್ವರ್ಗಕ್ಕೆ ಹೋದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೂ ಇದ್ದಾರೆ.

೨. ನಕುಲ ಮುಂಗುಸಿಯು ದುರುದ್ದೇಶದಿಂದ ಧರ್ಮರಾಜನನ್ನು ನಿಂದಿಸಿ ಆತನ ಯಜ್ಞವು ಕುರುಕ್ಷೇತ್ರ ನಿವಾಸಿಯಾದ ಒಬ್ಬ ಬ್ರಾಹ್ಮಣನು ಕೊಟ್ಟ ಹಿಟ್ಟಿನ ಉಂಡೆಯ ದಾನದ ಮುಂದೆ ಏನೂ ಅಲ್ಲ ಎಂದು ಹೇಳಿದುದು, ಯಜ್ಞ ಮಾಡಿಸಿದ ಬ್ರಾಹ್ಮಣರ ಅಭಿಪ್ರಾಯಕ್ಕೆ ವಿರುದ್ಧವಾಗಿತ್ತು. ಸರ್ವೋತ್ತಮನಾದ ಶ್ರೀಕೃಷ್ಣನು ಅನುಗ್ರಹ ಮಾಡಿದ ಯಜ್ಞದ ಬಗ್ಗೆ ನಕುಲನ ಆಕ್ಷೇಪ ಆಗ ಯಾರೂ ಒಪ್ಪಲಿಲ್ಲ. ಆದ್ದರಿಂದ ಅಯೋಗ್ಯರ, ಅಸೂಯಾಪರರ ನಿಂದೆ ವಿಮರ್ಶೆಗಳಿಗೆ ಯಾವುದೇ ಬೆಲೆ ಇಲ್ಲ. ಅದು ಉಪೇಕ್ಷಣೀಯ ಎಂಬ ಸಂದೇಶವಿದೆ. ಮುಂಗುಸಿಯು ಹೇಳಿದ ಬ್ರಾಹ್ಮಣನು ಮಾಡಿದ ದಾನಕ್ಕೆ ತನ್ನದೇ ಆದ ಮಹತ್ತ್ವವಿದ್ದೇ ಇದೆ. ಆತನು ಸ್ವರ್ಗಕ್ಕೆ ಹೋದ ಮಹಾತ್ಮ.

# ೧೬೦. ಅಗಸ್ತ್ಯಮಹರ್ಷಿಗಳ ಯಜ್ಞ

ಮತ್ತೆ ಜನಮೇಜಯ ಪ್ರಶ್ನಿಸುತ್ತಾನೆ –

ಉಂಛವೃತ್ತಿಯಿಂದ ಜೀವನ ಮಾಡುತ್ತಿದ್ದ ಬ್ರಾಹ್ಮಣನು ಮಾಡಿದ ಹಿಟ್ಟಿನ ಉಂಡೆಯ ದಾನದಿಂದ ಸ್ವರ್ಗಕ್ಕೆ ಹೋದುದು ಸರಿಯೇ? ಯಥಾರ್ಥವೇ? ಆದರೆ ಎಲ್ಲ ಯಜ್ಞಗಳ ವಿಷಯದಲ್ಲಿ ಹೀಗೆ ನಿರ್ಣಯ ಮಾಡಬಹುದೇ? (ಯಜ್ಞದ ಅವಶ್ಯಕತೆಯೇ ಇಲ್ಲವೆಂಬ ಭಾವ ನಕುಲ ಹೇಳಿದ ೯೪ನೇ ಅಧ್ಯಾಯದಲ್ಲಿ ಆ ತರಹದ ಭಾವ ಬರುವಂತಿದೆ)

ಅದಕ್ಕೆ ವೈಶಂಪಾಯನರು – ಹಿಂದೆ ಅಗಸ್ತ್ಯರು ಮಹಾಯಾಗ ಮಾಡುತ್ತಿದ್ದಾಗ ನಡೆದ ಇತಿಹಾಸವನ್ನು ವಿದ್ವಾಂಸರು ಉದಾಹರಿಸುತ್ತಾರೆ ಎಂದು ಅದನ್ನು ವಿವರಿಸಿದರು.

ಸಕಲ ಪ್ರಾಣಿಗಳಿಗೆ ಲೇಸನ್ನೇ ಬಯಸುವ ಸ್ವಭಾವದ ಅಗಸ್ತ್ಯರು ಒಮ್ಮೆ ೧೨ ವರ್ಷಗಳಲ್ಲಿ ಮುಗಿಯುವ ಮಹಾಯಜ್ಞದಲ್ಲಿ ದೀಕ್ಷಿತರಾದರು. ಆ ಯಜ್ಞದಲ್ಲಿ ಅಗ್ನಿದೇವನಿಗೆ ಸದೃಶರಾದ ತೇಜಸ್ವಿಗಳಾದ ಹೋತೃಗಳಿದ್ದರು. ಅವರು ಫಲಮೂಲಗಳೇ ಆಹಾರವಾಗಿಸಿಕೊಂಡಿದ್ದರು. ಕೆಲವರು ನಿರಾಹಾರಿಗಳೂ, ಕೆಲವರು ತಿನ್ನುವ ಪದಾರ್ಥಗಳನ್ನು ಕಲ್ಲಿನಿಂದ ಕುಟ್ಟಿ ತಿನ್ನುತ್ತಿದ್ದರು. ಮತ್ತೆ ಕೆಲವರು ಸೂರ್ಯಕಿರಣಗಳನ್ನೇ ಪಾನ ಮಾಡುವವರು, ಬೇರೆಯವರು ಕೊಟ್ಟ ಆಹಾರ ಸೇವಿಸುವ ಪರಿಪುಷ್ಟಿಕರು, ಯಜ್ಞಶಿಷ್ಟಾನ್ನ ಮಾತ್ರ ಭೋಜನ ಮಾಡುವ ವೈಘಸಿಕರು, (ಯಜ್ಞಶಿಷ್ಟಾನ್ನವನ್ನು ಉಣ್ಣುವರು) ಸದಾ ಭಗವಚ್ಚಿಂತನಪರರಾದ ಪ್ರಸಂಖ್ಯಾನರು, ಯತಿಗಳೂ, ಬ್ರಹ್ಮಚಾರಿಗಳೂ ಅಲ್ಲಿದ್ದರು. ಎಲ್ಲರೂ ಧರ್ಮಾಚರಣೆಯಲ್ಲಿ ಜಾಗೃತರೂ, ಜಿತೇಂದ್ರಿಯರೂ, ಕೋಪ ಗೆದ್ದವರೂ, ದಂಭ, ಮೋಹರಹಿತರೂ ಆದ ಮೊದಲಾದ ಮಹಾನುಭಾವರು, ಮಹರ್ಷಿಗಳು ಅಗಸ್ತ್ಯರು ಯಜ್ಞವನ್ನು ಅಲಂಕರಿಸಿದ್ದರು.

ಯಜ್ಞಕ್ಕಾಗಿ ಅಗಸ್ತ್ಯರು ಯಥಾಶಕ್ತಿ ಶುದ್ಧವಾಗಿ ಅನ್ನ ಸಂಪಾದಿಸಿದ್ದರು. ಯಜ್ಞಕ್ಕೆ ಅಯೋಗ್ಯವಾದುದು ಅಲ್ಲಿ ಏನೂ ಇರಲಿಲ್ಲ. ಇಂತಹ ಮಹಾತ್ಮರ ಒಡನಾಟದಲ್ಲಿ ಯಜ್ಞ ನಡೆಯುತ್ತಿತ್ತು[೧].

---

೧ ಏವಂ ವಿಧೇತ್ವಗಸ್ತ್ಯಸ್ಯ ವರ್ತಮಾನೇ ಮಹಾಧ್ವರೇ।
ನ ವವರ್ಷ ಸಹಸ್ರಾಕ್ಷಃ ತದಾ ಭರತಸತ್ತಮ॥ – ೯೫/೧೨

ಆಗ ಇಂದ್ರನು ಮಳೆ ಸುರಿಸುವುದನ್ನು ನಿಲ್ಲಿಸಿದನು. ಯಜ್ಞಕರ್ಮಮಧ್ಯದಲ್ಲಿ ಸಮಯ ಸಿಕ್ಕಾಗ ಮುನಿಗಳು ಅಗಸ್ತ್ಯರಿಗೆ ಸಂಬಂಧಿಸಿದ ವಿಷಯವನ್ನು ಪರಸ್ಪರ ಚರ್ಚಿಸುತ್ತಿದ್ದರು (ಅಗಸ್ತ್ಯರು ಮುನಿಗಳೊಡನೆ ಸೇರಿ ಧಾರ್ಮಿಕ ವಿಷಯಗಳನ್ನು ಚರ್ಚಿಸುತ್ತಿದ್ದರು).

ಮುನಿಗಳು - ಈ ಅಗಸ್ತ್ಯರು ನಮಗೆಲ್ಲ ನಿರ್ಮತ್ಸರಿಗಳಾಗಿ ಅನ್ನ ಹಾಕುತ್ತಿದ್ದಾರೆ. ಮಳೆ ಬೇರೆ ನಿಂತಿದೆ. ಹನ್ನೆರಡು ವರ್ಷ ಹೀಗೆ ಆದರೆ ಮಹಾಸತ್ರವು ಹೇಗೆ ನಡೆದೀತು? ಆದ್ದರಿಂದ ನೀವೆಲ್ಲ ವಿಚಾರಿಸಿ(ಚಿಂತಿಸಿ) ಯಜ್ಞ ನಿರ್ವಿಘ್ನವಾಗಿ ನಡೆಯಲು ಅನುಗ್ರಹಿಸಿರಿ.

ಇದನ್ನು (ಕೇಳಿಸಿಕೊಂಡ) ಅಗಸ್ತ್ಯರು ಮುನಿಗಳಿಗೆಲ್ಲ ಶಿರಸಾ ನಮಿಸಿ ಹೀಗೆ ನುಡಿದರು.

೧. ಒಂದು ವೇಳೆ ಇಂದ್ರ ಹನ್ನೆರಡುವರ್ಷ ಮಳೆ ಬರಿಸದಿದ್ದರೆ,[೧] ಹಿಂದಿನಿಂದಲೂ ನಡೆದು ಬಂದ ಚಿಂತಾಯಜ್ಞ(ಮಾನಸ) ಮಾಡುತ್ತೇನೆ.

೨. (ಶಾಲಗ್ರಾಮ)ಸ್ಪರ್ಶಯಜ್ಞ(ದೇವಪೂಜಾದಿ) ಮಾಡುತ್ತೇನೆ.

೩. ವ್ರತನಿಯಮಗಳನ್ನು ಮಾಡುತ್ತಾ ತೀರ್ಥಯಾತ್ರೆಗಳನ್ನು ಮಾಡುತ್ತಾ ಸತ್ಕರ್ಮಾನುಷ್ಠಾನರೂಪ ಯಜ್ಞ ಮಾಡುವೆ.

೪. ಬೀಜಯಜ್ಞ ಮಾಡಲೆಂದೇ ಅನೇಕ ವರ್ಷಗಳಿಂದ ಬೀಜಗಳನ್ನು ಸಂಗ್ರಹಿಸಿದ್ದೇನೆ. ಅವುಗಳಿಂದ ಯಜ್ಞ ಮಾಡುವೆ. ಅದಕ್ಕೆ ಯಾವ ವಿಘ್ನವೂ ಇರದು.

೫. ಇಂದ್ರ ಮಳೆ ಸುರಿಸಲಿ, ಬಿಡಲಿ ಯಜ್ಞ ಮಾತ್ರ ನಿಲ್ಲದು.

೬. ಇಂದ್ರನನ್ನು ಮಳೆಗಾಗಿ ಪ್ರಾರ್ಥಿಸುವೆ. ಒಂದು ವೇಳೆ ಇಂದ್ರ ನನ್ನ ಪ್ರಾರ್ಥನೆಯನ್ನು ನಿರಾಕರಿಸಿದಲ್ಲಿ ನಾನೇ ಇಂದ್ರನಾಗುತ್ತೇನೆ. ಸಮಸ್ತ ಪ್ರಜೆಗಳನ್ನು ನಾನೇ ರಕ್ಷಿಸುತ್ತೇನೆ.

೭. ಆಯಾ ಜೀವರಿಗೆ ಅವಶ್ಯವೆನ್ನಿಸುವ ವಿಶೇಷ ಆಹಾರ ಸೃಷ್ಟಿ ಮಾಡುತ್ತೇನೆ.

೮. ದೇವಲೋಕದ ಅಪ್ಸರೆಯರು, ವಿಶ್ವಾವಸು ಮೊದಲಾದ ಗಂಧರ್ವರು, ಕಿನ್ನರರು ಇಲ್ಲಿಗೆ ಬಂದು ಯಜ್ಞವನ್ನು ಉಪಾಸನೆ ಮಾಡಲಿ.

೯. ಉತ್ತರ ಕುರುಗಳಲ್ಲಿರುವ ಐಶ್ವರ್ಯವು ಇಲ್ಲಿಗೆ ಬರಲಿ. ಸ್ವರ್ಗಾದಿಗಳಲ್ಲಿರುವ ದೇವತೆಗಳು, ಸ್ವರ್ಗ, ಧರ್ಮ ಎಲ್ಲರೂ ತಾವಾಗಿಯೇ ಯಜ್ಞಕ್ಕೆ ಬರಲಿ.

---

೧ ಯದಿ ದ್ವಾದಶವರ್ಷಾಣಿ ನ ಚ ವರ್ಷತಿ ವಾಸವಃ।

.........

ಸ್ವಯಮಿಂದ್ರೋ ಭವಿಷ್ಯಾಮಿ ಜೀವಯಿಷ್ಯಾಮಿ ಚ ಪ್ರಜಾಃ ॥
ಸ್ವರ್ಗಂ ಸ್ವರ್ಗಸದಶ್ಚೈವ ಧರ್ಮಶ್ಚ ಸ್ವಯಮೇವ ಮೇ।
........................... ಉಪತಿಷ್ಠತಾಮ್ ॥ - ೯೫/೧೮-೨೮

ಹೀಗೆ ಹೇಳಿದ ಕೂಡಲೇ ಮುನಿಗಳ ತಪಃಪ್ರಭಾವದಿಂದಾಗಿ ಸಮಸ್ತ ಐಶ್ವರ್ಯಗಳು ಅಲ್ಲಿಗೆ ಬಂದವು[೧]. ಅಗಸ್ತ್ಯರ ತಪಸ್ಸಿನ ಪ್ರಭಾವ ಕಂಡ ಋಷಿಗಳು ಅವರನ್ನು ನೋಡಿ ಆನಂದಿಸಿದರು. ಮತ್ತು ಹೀಗೆ ನುಡಿದರು[೨]. 'ಮಹರ್ಷಿಗಳೇ ನಿಮ್ಮ ಮಾತಿನಿಂದ ಸಂತೋಷಗೊಂಡಿದ್ದೇವೆ. ನ್ಯಾಯದಿಂದ ಅನ್ನವನ್ನು ನಾವು ಬಯಸುತ್ತೇವೆ. ಯಜ್ಞ, ದೀಕ್ಷೆ, ಹೋಮ, ನಾವು ಬಯಸುವ ಯಾವುದೇ ವಸ್ತುಗಳು ಇಲ್ಲಿ ಎಲ್ಲ ನಮಗೆ ಸಿಗುತ್ತಿವೆ. ಈ ಪದಾರ್ಥಗಳು ನಮಗೆ ಸ್ವರ್ಗಸುಖವನ್ನೇ ಕೊಡುತ್ತಿವೆ. ನಾವು ಬ್ರಹ್ಮಚರ್ಯವನ್ನು ಪಾಲಿಸುತ್ತಾ, ನ್ಯಾಯರೀತಿಯಲ್ಲೇ ವೇದಪಾರಾಯಣ ಮಾಡುತ್ತಾ ದೇವತೆಗಳನ್ನು ಪ್ರಾರ್ಥಿಸುತ್ತೇವೆ. ಹಿಂಸಾತ್ಯಾಗ ಮಾಡಿ, ಸತ್ಕರ್ಮಾನುಷ್ಠಾನ ಮಾಡುವ ನಿಮ್ಮ ಆಚಾರ ನಮಗೆ ಇಷ್ಟವಾಗಿದೆ. ನೀವು ಯಜ್ಞದಲ್ಲಿ ಹಿಂಸೆ ಮಾಡಬಾರದೆಂದು ಹೇಳುತ್ತಿರುತ್ತೀರಿ. ಅದು ನಮಗೆ ತುಂಬಾ ಸಂತೋಷ ಕೊಟ್ಟಿದೆ[೩]. ಯಜ್ಞ ಮುಗಿದ ಬಳಿಕ ನಾವು ನಮ್ಮ ಆಶ್ರಮಗಳಿಗೆ ವಾಪಸು ಹೋಗುತ್ತೇವೆ.

ಹೀಗೆ ಎಲ್ಲ ಮಹರ್ಷಿಗಳು ಹೇಳುತ್ತಿರಲು ಇಂದ್ರನು ಅಗಸ್ತ್ಯರ ತಪೋಬಲ ನೋಡಿ ಯಥೇಷ್ಟ ಮಳೆ ಸುರಿಸಿದ. ಅಗಸ್ತ್ಯರ ಯಜ್ಞ ಮುಗಿಯುವರೆಗೂ ಇಂದ್ರನು ಅವರು ಬಯಸಿದಷ್ಟು ಮಳೆಯನ್ನು ಸುರಿಸುತ್ತಿದ್ದನು[೪]. ಅಲ್ಲದೆ ಇಂದ್ರನು ದೇವಗುರುಗಳಾದ ಬೃಹಸ್ಪತ್ಯಾಚಾರ್ಯರನ್ನು ಮುಂದೆ ಇಟ್ಟುಕೊಂಡು ಅಗಸ್ತ್ಯರ ಯಜ್ಞಭೂಮಿಗೆ ಬಂದು ಅವರನ್ನು ಸಂತೈಸಿದನು. ನಂತರ ಯಜ್ಞ ಸಮಾಪ್ತಿಯಾದ ಮೇಲೆ ಅತಿಥಿ ಮಹರ್ಷಿಗಳನ್ನು ಅಗಸ್ತ್ಯರು ವಿಧ್ಯುಕ್ತವಾಗಿ ಸತ್ಕರಿಸಿ, ಅವರವರ ಆಶ್ರಮಗಳಿಗೆ ಕಳಿಸಿಕೊಟ್ಟರು.

## ಸಂದೇಶಗಳು-ವಿವರಣೆಗಳು

೧. ಅಗಸ್ತ್ಯರ ತಪೋ ಮಹಿಮೆ ಇಂದ್ರದೇವರನ್ನು ವಿಚಲಿತರನ್ನಾಗಿ ಮಾಡಿತು. ಇಂದ್ರನು ತಾನೇ ಮಳೆ ಬರಿಸಿ, ಅವರ ಮಹಾಸತ್ರ ನಿರ್ವಿಘ್ನವಾಗಿ ಮುಗಿಯುವಂತೆ ಮಾಡುತ್ತಾನೆ. ಪ್ರಾಮಾಣಿಕ ತಪಸ್ಸು ದೇವತೋಷಣವೇ (ದೇವಸಂತೋಷಕರ) ಸರಿ.

---

೧ ಇತ್ಯುಕ್ತೇ ಸರ್ವಮೇವೈತದ್ ಅಭವತ್ತಸ್ಯ ಧೀಮತಃ।
ತಸ್ಯ ದೀಪ್ತಾಗ್ನಿಮಹಸಃ ತ್ವಗಸ್ತ್ಯಸ್ಯಾತಿತೇಜಸಾ ॥ – ೯೫/೨೯

೨ ಪ್ರೀತಾಃ ಸ್ಮ ತ್ವ ವಾಕ್ಯೇನ ನ ತ್ವಿಚ್ಛಾಮಸ್ತಪೋಧನ।
ಸ್ವೈರೇವ ಯಜ್ಞೈಸ್ತುಷ್ಟಾಃ ಸ್ಮ ನ್ಯಾಯೇನೇಚ್ಛಾಮಹೇ ವಯಮ್ ॥ – ೯೫/೩೧

೩ ಭವತಃ ಸಮ್ಯಗೇಷಾ ಹಿ ಬುದ್ಧಿರ್ಹಿಂಸಾ ವಿವರ್ಜಿತಾ।
ಏತಾಮಹಿಂಸಾಂ ಯಜ್ಞೇಷು ಬ್ರೂಯಾಸ್ತ್ವಂ ಸತತಂ ವಿಭೋ ॥ – ೯೫/೩೫

೪ ತಥಾ ಕಥಯತಾಮೇವಂ ದೇವರಾಜಃ ಪುರಂದರಃ।
ವವರ್ಷ ಸುಮಹಾತೇಜಾ ದೃಷ್ಟ್ವಾ ತಸ್ಯ ತಪೋಬಲಮ್।
ಪ್ರಸಾದಯಾಮಾಸ ಚ ತಮಗಸ್ತ್ಯಂ ತ್ರಿದಶೇಶ್ವರಃ।
ಸ್ವಯಮಭ್ಯೇತ್ಯ ರಾಜರ್ಷೇ ಪುರಸ್ಕೃತ ಬೃಹಸ್ಪತಿಮ್ ॥ – ೯೫/೩೭,೩೯

೨. ಅದುವೇ ಎಲ್ಲ ಅತಿಥಿಗಳನ್ನು ಆಕರ್ಷಿಸುತ್ತದೆ.

೩. ಇಂದ್ರ ತಾನೇ ಬಂದು ಅಗಸ್ತ್ಯರನ್ನು ಅಭಿನಂದಿಸುತ್ತಾನೆ.

೪. ಇಂದ್ರ ಅನುಗ್ರಹಿಸಲಿ, ಬಿಡಲಿ, ತಾವೇ ಪರ್ಯಾಯ ವ್ಯವಸ್ಥೆಗೆ, ಸಾತ್ವಿಕರೀತಿಯಲ್ಲಿ ಮಾಡಬಲ್ಲೆ ಎಂಬ ಅವರ ನಿಲುವು ಇಂದ್ರನನ್ನು ವಿಚಲಿತಗೊಳಿಸುತ್ತದೆ. ಆದ್ದರಿಂದ ಪ್ರಾಮಾಣಿಕವಾಗಿ ತಪಸ್ಸು ದೃಢನಿರ್ಧಾರ, ಜಿತೇಂದ್ರಿಯತ್ವ, ಮಹಾಪ್ರಯತ್ನನಿರ್ಧಾರ, ಅವರನ್ನು ನಂಬಿದವರ ಉನ್ನತಿಗೆ ಕಾರಣವಾಯಿತು. ಆದ್ದರಿಂದ ಯಜ್ಞ, ಅನ್ನದಾನ, ತಪಸ್ಸು ಎಲ್ಲ ಸಾಧಕರಿಗೆ ಅವಶ್ಯ. ಅವೇ ಸಾಧ್ಯ, ಸಾಧಕ, ಸಮರ್ಥ ಪರಿಕರಗಳಾಗುತ್ತವೆ.

೫. ಇಂದ್ರಾದಿ ದೇವತೆಗಳು ಸಾಧಕರನ್ನು ಪರೀಕ್ಷಿಸಲು ವಿಘ್ನಗಳನ್ನು ಒಡ್ಡುತ್ತಾರೆ. ಅದೂ ಸಾಧಕರಿಗೆ ತಪಸ್ಸೇ. ಆದ್ದರಿಂದ ನಮಗೆ ಬರುವ ವಿಘ್ನಗಳನ್ನು ಸರಿಯಾಗಿ ಭಾವಿಸಬೇಕು. ದೇವತಾ, ಗುರುಗಳನ್ನು, ದೇವರನ್ನು ನಿಂದಿಸಬಾರದು.

*****

# ಉಪದೇಶಪರ ಉಪಾಖ್ಯಾನಗಳು

# ಶಾಂತಿಪರ್ವ

## ರಾಜಧರ್ಮಪರ್ವ

## ೧೬೧. ಗೃಹಸ್ಥಾಶ್ರಮವೇ ಶ್ರೇಷ್ಠ

ಅರ್ಜುನನು ಧರ್ಮರಾಜನಿಗೆ ಗೃಹಸ್ಥಾಶ್ರಮವೇ ಕ್ಷತ್ರಿಯರಿಗೆ ಶ್ರೇಷ್ಠ ಸನ್ಯಾಸಾಶ್ರಮ ವಿಹಿತವಲ್ಲ, ಎಂಬ ವಿಷಯದಲ್ಲಿ ಇಂದ್ರ ಹಾಗೂ ಋಷಿಕುಮಾರರ ಮಧ್ಯೆ ನಡೆದ ಸಂವಾದರೂಪ ಇತಿಹಾಸವನ್ನು ನಿರುಪಿಸುತ್ತಾನೆ.

[೧]ಹಿಂದೆ ಮೀಸೆಯೂ ಬಂದಿರದ, ಮಂದಮತಿಗಳಾದ ಕೆಲವು ಬ್ರಾಹ್ಮಣಕುಮಾರರು ಮನೆಯನ್ನು ಬಿಟ್ಟು ವನಕ್ಕೆ ಹೋಗಿ ಸನ್ಯಾಸಿಗಳಾಗಲು ಬಯಸಿದರು. ಸುವರ್ಣಮಯವಾದ ಇವರನ್ನು ನೋಡಿದ ಇಂದ್ರನು ಕೃಪೆಯಿಂದ ಒಂದು ಪಕ್ಷಿಯ ರೂಪ ಸ್ವೀಕರಿಸಿ, ಅವರ ಬಳಿಗೆ ಬಂದು ಯಜ್ಞಶೇಷವನ್ನು ಉಣ್ಣುವವರ ಪುಣ್ಯವನ್ನು ಬೇರೆ ಯಾರೂ ಸಂಪಾದಿಸಲಾರರು, ಅವರು ಮುಂದೆ ಬಯಸಿದ ಉತ್ತಮಗತಿಯನ್ನು ಹೊಂದುವರು ಎಂದನು.

[೨]ಈ ಬಾಲಕರು ತಮ್ಮನ್ನು ಈ ಪಕ್ಷಿ ಹೊಗಳುತ್ತಿದೆ ಎಂದು ಭಾವಿಸಿದರು. ಆದರೆ ಪಕ್ಷಿಯು ಮತ್ತೆ ಅವರನ್ನು ಕುರಿತು –

'ವೇದೋಕ್ತವಾದ ಕರ್ಮಗಳೇ ತಪಸ್ಸು. ಯಜ್ಞಗಳಿಂದ ದೇವತೆಗಳನ್ನು, ಶ್ರಾದ್ಧಾದಿಗಳಿಂದ ಪಿತೃದೇವತೆಗಳನ್ನು, ಸ್ವಾಧ್ಯಾಯಾದಿಗಳಿಂದ ಋಷಿಗಳನ್ನು (ಬ್ರಹ್ಮವಂಶದವರನ್ನು) ಮತ್ತು ಗುರುಶುಶ್ರೂಷೆ ಮಾಡಿ ಗೃಹಸ್ಥಾಶ್ರಮವನ್ನು ಪರಿಪಾಲನೆ ಮಾಡುವುದೇ [೩]ವೇದೋಕ್ತವಾದ

---

೧ ತಾಪಸೈಃ ಸಹ ಸಂವಾದಂ ಶಕ್ರಸ್ಯ ಭರತರ್ಷಭಃ ।
ಕೇಚಿತ್ ಗೃಹಾನ್ ಪರಿತ್ಯಜ್ಯ ವನಮಭ್ಯಾಗಮನ್ ದ್ವಿಜಾಃ ॥ – ೧೧/೧
ಅಜಾತಶ್ಮಶ್ರವೋ ಮಂದಾಃ ಕುಲೇಜಾತಾಃ ಪ್ರವವ್ರಜುಃ ।
ಧರ್ಮೋಽಯಮಿತಿಮನ್ವಾನಾ ಬ್ರಹ್ಮಚರ್ಯೇ ವ್ಯವಸ್ಥಿತಾಃ ।
ತ್ಯಕ್ತ್ವಾ ಭ್ರಾತೄನ್ ಪಿತೄಂಶ್ಚೈವ ತಾನಿಂದ್ರೋಽನ್ವಕೃಪಾಯತ ॥ – ೧೧/೨,೩
೨ ಅಸ್ಮಾನ್ನೂನಮಯಂ ಶಾಸ್ತಿ ವಯಂ ಚ ವಿಘಸಾಶಿನಃ ।
ನಿಯೋಗೇ ಚೈವ ಧರ್ಮಾತ್ಮನ್ ಸ್ಥಾತುಮಿಚ್ಛಾಮ ಶಾಧಿ ನಃ ॥ – ೧೧/೧೦
೩ ದೇವವಂಶಾನ್ ಪಿತೃವಂಶಾನ್ ಬ್ರಹ್ಮವಂಶಾಂಶ್ಚ ಶಾಶ್ವತಾನ್ ।
ಸಂತ್ಯಜ್ಯ ಮೂಢಾ ವರ್ತಂತೇ ತತೋಯಾಂತ್ಯಶ್ರುತೀಪಥಮ್ ॥ ೧೧/೧೭
ತಪಃ ಶ್ರೇಷ್ಠಂ ಪ್ರಜಾನಾಂ ಹಿ ಮೂಲಮೇತನ್ನ ಸಂಶಯಃ ।
ಕುಟುಂಬವಿಧಿನಾನೇನ ಯಸ್ಮಿನ್ ಸರ್ವಂ ಪ್ರತಿಷ್ಠಿತಮ್ ॥ ೧೧/೨೧

ಕರ್ಮಗಳು. ಅವೇ ನಿಜವಾದ ತಪಸ್ಸು. ಅವನ್ನು ಬಿಟ್ಟು ಕಾಡಿನಲ್ಲಿ ಹುಲ್ಲು, ಗಡ್ಡೆ ಗೆಣಸು ಹಣ್ಣು ಮುಂತಾದುವನ್ನು ತಿನ್ನುವುದು ಅದುವೇ **ವಿಘಸ ಭೋಜನ**ವೆಂದು ಭಾವಿಸುವುದು ತಪ್ಪು. ಮೇಲೆ ಹೇಳಿದ ದೇವ, ಋಷಿ, ಪಿತೃ, ಅತಿಥಿ, ಬಂಧು, ಭೃತ್ಯರಿಗೆ ಯೋಗ್ಯರೀತಿಯಿಂದ ತೃಪ್ತಿಪಡಿಸಿ ಅವರಿಗೆ ನಿವೇದಿತವಾದ ನಂತರ ಉಳಿದ ಅನ್ನವೇ **ವಿಘಸಾನ್ನ**. ಆಗ ನೀವು **ವಿಘಸಾಶಿ**ಗಳೆಂದು ಕರೆಯಲ್ಪಡುತ್ತೀರಿ.

ಆದ್ದರಿಂದ ನಿಮ್ಮ ಧರ್ಮಗಳಲ್ಲಿ ನಿರತರಾಗಿ **ವಿಘಸಾಶಿ**ಗಳಾದಾಗ ನೀವು ಲೋಕಕ್ಕೆ ಗುರುಗಳಾಗುವಿರಿ. ಮುಂದೆ ಗೃಹಸ್ಥಧರ್ಮದಲ್ಲಿಯೇ ಇದ್ದು ಅಸೂಯಾರಹಿತರಾಗಿ ಸ್ವರ್ಗಲೋಕಕ್ಕೆ ಹೋಗಿ ಬಹುಕಾಲ ಇರುವಿರಿ. ಎಂದು ಪಕ್ಷಿರೂಪಿ ಇಂದ್ರನು ಋಷಿಕುಮಾರರಿಗೆ ಉಪದೇಶಿಸಲು ಕುಮಾರರು ತಮ್ಮ ತಪ್ಪನ್ನು ತಿದ್ದಿಕೊಂಡು ತಮ್ಮ ಮನೆಗೆ ಹೋಗಿ ಗೃಹಸ್ಥಾಶ್ರಮಿಗಳಾದರು[೧].

[೨]ಆದ್ದರಿಂದ ಅಣ್ಣ! ನೀನೂ ಕೂಡಾ ಸನ್ಯಾಸ ತೆಗೆದುಕೊಳ್ಳುವ ವಿಚಾರ ಬಿಟ್ಟು ಧೈರ್ಯದಿಂದ ಗೃಹಸ್ಥನಾಗಿಯೇ ಇದ್ದು ಈ ಅಖಂಡ ಭೂಮಂಡಲವನ್ನೂ ಪಾಲಿಸು. ಇದು ನಿನಗೆ ತಿಳಿಯದುದು ಏನೂ ಅಲ್ಲ ಎಂದು ಅರ್ಜುನನು ಅಣ್ಣ ಧರ್ಮರಾಜನಿಗೆ ಪ್ರಾರ್ಥಿಸಿದನು.

## ಸಂದೇಶ

ಅಧಿಕಾರಿಕ ಜೀವರು ತಮಗೆ ವಿಹಿತವಾದ ಧರ್ಮ ಆಚರಣೆ ಮಾಡಬೇಕು. ಇಲ್ಲಿ ಧರ್ಮರಾಜ ಗೃಹಸ್ಥ ಕ್ಷತ್ರಿಯ. ಇದೇ ತಾನೇ ಯುದ್ಧದಲ್ಲಿ ಗೆದ್ದು ರಾಜ್ಯವಾಳುವ ಸಂದರ್ಭದಲ್ಲಿ ಸನ್ಯಾಸೇಚ್ಛೆ ಸುತರಾಂ ನಿಷಿದ್ಧ. ಆತನಿಗೆ ಗೊತ್ತಿದ್ದರೂ ಬಂಧುನಾಶದಿಂದ ನೊಂದಮನಕ್ಕೆ ಹಾಗೆ ಅನಿಸಿದೆ. ಅದನ್ನು ಭೀಮನ ತರುವಾಯ ಇಲ್ಲಿ ಅರ್ಜುನನು ಅಣ್ಣನಿಗೆ ಸ್ವಧರ್ಮವನ್ನು ಪಾಲಿಸಲು ಪ್ರಾರ್ಥನೆ ಮಾಡುತ್ತಾ ಒಂದು ಉಪಾಖ್ಯಾನದ ಮೂಲಕ ಅರುಹಿದ್ದಾನೆ. ಕ್ಷತ್ರಿಯನಿಗೆ ಸನ್ಯಾಸ ತರವಲ್ಲ ಎಂಬುದೇ ಇಲ್ಲಿಯ ಮುಖ್ಯ ಸಂದೇಶ.

*****

---

ದತ್ವಾಽತಿಥಿಭ್ಯೋ ದೇವೇಭ್ಯ ಪಿತೃಭ್ಯಃ ಸ್ವಜನಸ್ಯ ಚ ।
ಅವಶಿಷ್ಟಾನಿ ಯೇಽಶ್ನಂತಿ ತಾನಾಹುರ್ವಿಘಸಾಶಿನಃ ।
ತಸ್ಮಾತ್ ಸ್ವಧರ್ಮಮಾಸ್ಥಾಯ ಸುವ್ರತಾಃ ಸತ್ಯವಾದಿನಃ ।
ಲೋಕಸ್ಯ ಗುರವೋ ಭೂತ್ವಾ ಭವಂತ್ಯನುಪಸ್ಕೃತಾಃ ।
ತ್ರಿದಿವಂ ಪ್ರಾಪ್ಯ ಶಕ್ರಸ್ಯ ಸ್ವರ್ಗೇಲೋಕೇ ವಿಮತ್ಸರಾಃ ।
ವಸಂತಿ ಶಾಶ್ವತೀರ್ವರ್ಷಾ ಜನಾ ದುಷ್ಕರಕಾರಿಣಃ ॥ ೧೧/೨೪-೨೬

೧ ತತಸ್ತೇ ತದ್ವಚಃ ಶ್ರುತ್ವಾ ತಸ್ಯ ಧರ್ಮಾರ್ಥಸಂಹಿತಮ್ ।
ಉತ್ಸೃಜ್ಯ ನಾಸ್ತೀತಿ ಗತಾ ಗಾರ್ಹಸ್ಥ್ಯಂ ಧರ್ಮಮಾಸ್ಥಿತಾಃ ॥ - ೧೧/೨೭

೨ ತಸ್ಮಾತ್ತ್ವಮಪಿ ದುರ್ಧರ್ಷಂ ಧೈರ್ಯಮಾಲಂಬ್ಯ ಶಾಶ್ವತಮ್ ।
ಪ್ರಶಾಧಿ ಪೃಥಿವೀಂ ಕೃತ್ಸ್ನಾಂ ಹತಾಮಿತ್ರಾಂ ನರೋತ್ತಮ ॥ - ೧೧/೨೮

## ೧೬೨. ಜನಕರಾಜ ಹಾಗೂ ಆತನ ಪತ್ನಿಯರ ಸಂವಾದ

ಹಿಂದಿನ ಅಧ್ಯಾಯದಲ್ಲಿ (ಅ-೧೭) ಭೀಮನ ಮಾತುಗಳಿಗೆ ಮನ್ನಿಸದ ಯುಧಿಷ್ಠಿರ ತನ್ನದೇ ವಾದ ಮಂಡಿಸಿದಾಗ ಮತ್ತೇ ಅರ್ಜುನನು ದುಃಖದಿಂದಲೇ ಅಣ್ಣನಿಗೆ ಜನಕರಾಜನೂ ಒಮ್ಮೆ ಸನ್ಯಾಸಿಯಾಗುವೆನೆಂದಾಗ ಆತನ ಪತ್ನಿಯು ಹೇಳಿದ ಮಾತುಗಳನ್ನು ಧರ್ಮರಾಜನಿಗೆ ನೆನಪಿಸಿ ಕರ್ತವ್ಯ ಜ್ಞಾಪಿಸುತ್ತಾನೆ.

ಐಶ್ವರ್ಯ, ಮಕ್ಕಳು, ಪತ್ನಿ ಅರಮನೆಯಲ್ಲಿ ಸ್ಥಾಪಿತ ಗಾರ್ಹಪತ್ಯಾದಿ ಅಗ್ನಿಗಳು ಇವೆಲ್ಲವನ್ನೂ ಬಿಟ್ಟು ಮೌಢ್ಯದಿಂದ ಭಿಕ್ಷೆ ಬೇಡಿ ಒಂದು ಮುಷ್ಟಿ ಧಾನ್ಯ ಬೇಡುವ ಸನ್ಯಾಸಧರ್ಮವನ್ನು ಸ್ವೀಕರಿಸಲು ನಿರ್ಧರಿಸಿದ. ಸಿಟ್ಟಿನಿಂದಲೇ ಧೀರಳಾದ ರಾಣಿಯು ರಹಸ್ಯವಾಗಿ ಪತಿಯನ್ನು ಕುರಿತು ಹೀಗೆ ನುಡಿದಳು[೧].

೧. ಧನಧಾನ್ಯಾದಿ ಸಮೃದ್ಧ ರಾಜ್ಯವನ್ನು ಬಿಟ್ಟು ಏಕೆ ಕಾಪಾಲಿಕ(ಸನ್ಯಾಸಿ) ವೃತ್ತಿಯನ್ನಾಶ್ರಯಿಸುತ್ತೀ. ಒಂದು ಮುಷ್ಟಿ ಧಾನ್ಯಕ್ಕಾಗಿ ಬೀದಿ ಬೀದಿ ಅಲೆಯಬೇಕೆ? ಅದು ಸರಿಯೆ?

೨. ಸರ್ವತ್ಯಾಗ ಮಾಡಿ ಒಂದು ಮುಷ್ಟಿ ಧಾನ್ಯಕ್ಕಾಗಿ ಅಲೆಯುವ ಪ್ರತಿಜ್ಞೆ ಸರಿಯೇ?

೩. ನೀನು ಹೋಗುವ ದಾರಿಯಿಂದ ದೇವ, ಪಿತೃ, ಋಷಿಗಳನ್ನು ಸಂತೃಪ್ತಿ ಪಡಿಸಲು ಸಾಧ್ಯವೇ?

೪. [೨]ನೀನು ಇಲ್ಲಿಯವರೆಗೆ ಸಾವಿರಾರು ವೇದವಿದ್ಯಾಸಕ್ತ ಬ್ರಾಹ್ಮಣರಿಗೆ ಆಶ್ರಯನಾಗಿ-ದ್ದವನು. ಈಗ ನಿನ್ನ ಉದರಂಭರಣಕ್ಕೆ ಮತ್ತೊಬ್ಬರ ಅನುಕಂಪಕ್ಕಾಗಿ ಕಾಯಬೇಕಲ್ಲ? ಅದು ಸರಿಯೇ?

---

೧ ಉತ್ಸೃಜ್ಯ ರಾಜ್ಯಂ ಭಿಕ್ಷಾರ್ಥೇ ಕೃತಬುದ್ಧಿಂ ನರೇಶ್ವರಮ್ ।
ವಿದೇಹರಾಜಮಹಿಷೀ ದುಃಖಿತಾ ಯದಭಾಷತ ॥
ಪಂಥಾನಂ ಪಾವಕಂ ಹಿತ್ವಾ ಜನಕೋ ಮೌಂಡ್ಯಮಾಸ್ಥಿತಃ ।
ಕೃದ್ಧಾ ಮನಸ್ವಿನೀ ಭಾರ್ಯಾ ವಿವಿಕ್ತೇ ಹೇತುಮದ್ ವಚಃ ॥

೨ ನೈತೇನಾತಿಥಯೋ ರಾಜನ್ ದೇವರ್ಷಿಪಿತರಸ್ತಥಾ ।
ಆದ್ಯಶಕ್ಯಾಸ್ತ್ವಯಾ ಭರ್ತುಂ ಮೋಘಸ್ತೇಽಯಂ ಪರಿಶ್ರಮಃ ॥
ಯಸ್ತ್ವಂ ತ್ರೈವಿದ್ಯವೃದ್ಧಾನಾಂ ಬ್ರಾಹ್ಮಣಾನಾಂ ಸಹಸ್ರಶಃ ।
ಭರ್ತಾ ಭೂತ್ವಾ ಚ ಲೋಕಸ್ಯ ಸೋಽದ್ಯ ತೈರ್ಭೃತಿಮಿಚ್ಛಸಿ ॥

೫. ಎಲ್ಲ ತ್ಯಾಗ ಮಾಡುವ ನಿನ್ನನ್ನು ಇತರರು ನಾಯಿಯಂತೆ ತಿರಸ್ಕರಿಸುವರು. ನಿನ್ನ ತಾಯಿಗೆ ಪುತ್ರನೇ ಇಲ್ಲವೆಂಬ ಭಾವನೆ, ಪತ್ನಿಯಾದ ಕೌಸಲ್ಯೆ, ನಾನು ಪತಿರಹಿತಳಾಗುತ್ತೇನೆ. ಇದು ಸರಿಯೇ?[೧]

೬. ಧರ್ಮಾರ್ಥಗಳನ್ನು ಬಯಸುವ ಕ್ಷತ್ರಿಯರಿಗೆ ನೀನು ಅವರನ್ನು ಹೇಗೆ ತೃಪ್ತಿ ಪಡಿಸುವೆ.?

೭. ಧರ್ಮಿಷ್ಠರಾದ ಪತ್ನಿಯರ ತ್ಯಾಗದಿಂದ ನಿನಗೆ ಇಹಪರಗಳಲ್ಲಿ ಸುಖವಿಲ್ಲವಾದೀತು.

೮. ನೀನು ಇಲ್ಲಿಯವರೆಗೆ ಎಲ್ಲ ಪ್ರಾಣಿಗಳಿಗೆ ನೀರನ್ನು ಕೊಡುವ ಜಲಾಶಯದಂತಿದ್ದೆ ಈಗ ನೀನು ನಿನ್ನ ನೀರಿಗಾಗಿ ಪರಾವಲಂಬಿಯಾಗುವೆ.

೯. ವನವಾಸದಲ್ಲಿ ನಿನ್ನನ್ನು ಮೃಗಗಳು, ಪ್ರಾಣಿಗಳೇ ತಿನ್ನಬಹುದು. ನಿನ್ನ ತ್ರಿದಂಡ, ಕಮಂಡಲು, ಕೃಷ್ಣಾಜಿನ ಮೊದಲಾದವುಗಳನ್ನು ವನಜೀವಿಗಳು ಅಪಹರಿಸಿದರೆ ನಿನ್ನ ಜೀವನ ಗತಿಯೇನು? ಯೋಚಿಸಿದ್ದೀಯಾ?

೧೦. ಭಿಕ್ಷೆ ಬೇಡುವವನು ಯಾವಾಗಲೂ ಕೈ ಚಾಚಿರಬೇಕಾಗುತ್ತದೆ. ಅದಕ್ಕಿಂತ ಎಲ್ಲರಿಗೂ ದಾನಾದಿಗಳನ್ನು ಮಾಡುವ ಗೃಹಸ್ಥಧರ್ಮ ಶ್ರೇಷ್ಠವಲ್ಲವೇ?[೨]

೧೧. ಸನ್ಯಾಸಿಗಿಂತಲೂ ಸನ್ಯಾಸಿಗೆ ಅನ್ನದಾನ ಮಾಡುವ ಬ್ರಾಹ್ಮಣನೇ ಶ್ರೇಷ್ಠ ಅವನ ಮೇಲೆ ಸನ್ಯಾಸಿಗಳ ಇರವು. ಅನ್ನದಾನ ಮಾಡುವವನೇ ಪ್ರಾಣದಾತೃವೂ ಆಗಿದ್ದಾನೆ. ಗೃಹಸ್ಥರೇ ಸನ್ಯಾಸಿಗಳಿಗೆ ಆಶ್ರಯದಾತರು[೩].

೧೨. [೪]ಭಾರ್ಯಾದಿಗಳನ್ನು ಕೋಪದಿಂದ ತ್ಯಾಗ ಮಾಡುವವನು ಸನ್ಯಾಸಿಯಾಗ-ಲಾರನು. ಪ್ರಾಮಾಣಿಕವಾಗಿ ಯಾರು ಅರ್ಥತ್ಯಾಗ ಮಾಡುವರೋ, ಅಂತಹ ಭಿಕ್ಷುಕನೇ ನಿಜವಾದ ಸನ್ಯಾಸಿ.

---

೧ ಅಪುತ್ರಾ ಜನನೀ ತೇಽದ್ಯ ಕೌಸಲ್ಯಾ ಚಾಪತಿಸ್ತ್ವಯಾ।
ನೈವ ತೇಽಸ್ತಿ ಪರೋ ಲೋಕೋ ನಾಪರಃ ಪಾಪಕರ್ಮಣಃ॥

೨ ತ್ಯಾಗಾನ್ನ ಭಿಕ್ಷುಕಂ ವಿದ್ಯಾನ್ನ ಮೌಢ್ಯಾನ್ನ ಚ ಯಾಚನಾತ್।
ಋಜುಸ್ತು ಯೋಽರ್ಥಂ ತ್ಯಜತಿ ನ ಸುಖಂ ವಿದ್ಧಿ ಭಿಕ್ಷುಕಮ್॥

೩. ಅನ್ನಾದ್ ಗೃಹಸ್ಥಾ ಲೋಕೇಽಸ್ಮಿನ್ ಭಿಕ್ಷವಸ್ತತ ಏವ ಚ।
ಅನ್ನಾತ್ ಪ್ರಾಣಃ ಪ್ರಭವತಿ ಅನ್ನದಃ ಪ್ರಾಣದೋ ಭವೇತ್॥

೪ ಧರ್ಮ್ಯಾನ್ ದಾರಾನ್ ಪರಿತ್ಯಜ್ಯ ಯಸ್ತ್ವಮಿಚ್ಛಸಿ ಜೀವಿತುಮ್।
ಧಾನಾಮುಷ್ಟೇರಿಹಾರ್ಥಶ್ಚೇತ್ ಪ್ರತಿಜ್ಞಾತೇ ವಿನಶ್ಯತಿ॥

೧೩. ಮನಸ್ಸಿನಿಂದ ಸಂಗತ್ಯಾಗ ಮಾಡಿದ ರಾಜನೂ ಸನ್ಯಾಸಿ ಎನಿಸಿಕೊಳ್ಳುತ್ತಾನೆ[೧]. ಮುಂಡನ(ತಲೆಗೂದಲನ್ನು ತೆಗೆದುಕೊಳ್ಳುವುದು), ಕೆಂಪುವಸ್ತ್ರಧಾರಣೆ ಮಾಡಿ, ಸನ್ಯಾಸ ಸ್ವೀಕರಿಸಿ, ಮತ್ತೊಬ್ಬರನ್ನು ಬೇಡಲು ತಿರುಗುತ್ತಾನೆ. ಅವರ ಮನಸ್ಸು ಆಸೆಗಳ ನಿಧಿ. ಆದಕ್ಕಾಗಿ ಸುಖಸಾಮಗ್ರಿಗಳನ್ನು ಯೋಚಿಸುತ್ತಿರುತ್ತಾರೆ. ಮೂರೂ ವೇದಗಳ ಅಧ್ಯಯನ ಮಾಡಿದರೂ ಅದರಲ್ಲಿನ ಕರ್ಮತ್ಯಾಗ ಮಾಡಿರುತ್ತಾರೆ. ಯಾವುದನ್ನು ತ್ಯಾಗ ಮಾಡಬೇಕೋ ಅದನ್ನು ತ್ಯಾಗ ಮಾಡದೇ ಪ್ರತಿಗ್ರಹತ್ಯಾಗ ಮಾಡಿರುವುದಿಲ್ಲ, ಇವರು ಧರ್ಮಧ್ವಜರು, ಧರ್ಮದ ಮುಖವಾಡ ಧರಿಸಿದವರು[೨].

೧೪. ತಾನೂ ಯಜ್ಞ ಯಾಗಾದಿಗಳನ್ನು ನಿತ್ಯ ಮಾಡುತ್ತಾ ಬೇರೆಯವರಿಗೂ ಅನುಕೂಲ ಮಾಡಿಕೊಡುವ ಧರ್ಮಿಷ್ಠರಿಗಿಂತ ಯಾರು ಧರ್ಮಪರಾಯಣರು ಇದ್ದಾರೆ? ಅಲ್ಲವೇ[೩].

ಲೋಕದಲ್ಲಿ ಜನಕರಾಜನು ಶ್ರೇಷ್ಠ ತತ್ತ್ವಜ್ಞಾನಿ ಎಂದು ಪ್ರಸಿದ್ಧನಾಗಿದ್ದರೂ, ಅವನೂ ಒಮ್ಮೆ ಸನ್ಯಾಸದ ಮೇಲೆ ಮೋಹ ಹೊಂದಿದ. ಹಾಗೆ ನೀನು ಆಗಬೇಡ.

ಅರ್ಜುನನು ಉಪಸಂಹಾರ ಮಾಡುತ್ತಾ ಅಣ್ಣನಿಗೆ ತಾವು ಹೇಗಿರಬೇಕು ಎಂದು ತಿಳಿಸುತ್ತಾನೆ.

೧. ನಾವು ಸದಾ ಧರ್ಮಾಚರಣೆ ಮಾಡೋಣ; ೨. ದಾನ, ತಪಸ್ಸುಗಳನ್ನು ಆಚರಿಸೋಣ; ೩. ಕಾಮಕ್ರೋಧಾದಿಗಳನ್ನು ತ್ಯಜಿಸಿ, ದಯಾ ಪರರಾಗೋಣ; ೪. ಪ್ರಜಾಪಾಲನೆಯಲ್ಲಿದ್ದು ಉತ್ತಮ ದಾನಗಳನ್ನು ಕೊಡೋಣ; ೫. ಹೀಗಿರುತ್ತಾ ಗುರುಗಳನ್ನು ಹಿರಿಯರನ್ನು ಪೂಜಿಸಿ ಇಷ್ಟವಾದ ಲೋಕಗಳನ್ನು ಹೊಂದುತ್ತೇವೆ; ೬. ದೇವತೆಗಳಿಗೆ ಅತಿಥಿಗಳಿಗೆ ಪ್ರಾಣಿಗಳಿಗೆ ಶಾಸ್ತ್ರೋಕ್ತವಾಗಿ ದೇಶಕಾಲೋಚಿತವಾಗಿ ಸಮರ್ಪಿಸಿ ತೃಪ್ತಿಪಡಿಸಿ, ಬ್ರಾಹ್ಮಣಪ್ರಿಯರಾಗಿ ಸತ್ಯವಾದಿಗಳಾಗಿ ಬಾಳಿ, ಇಷ್ಟವಾದ ಪುಣ್ಯಲೋಕಗಳನ್ನು ಹೊಂದೋಣ.

## ಸಂದೇಶಗಳು - ವಿವರಣೆಗಳು

೧. ಧರ್ಮರಾಜನು ಸನ್ಯಾಸ ತೆಗೆದುಕೊಳ್ಳಬಾರದು, ಗೃಹಸ್ಥನಾಗಿಯೇ ಇದ್ದು ಕ್ಷತ್ರಧರ್ಮಪಾಲನೆ ಮಾಡುತ್ತಾ ಇರಬೇಕೆಂಬುದನ್ನು ಇಲ್ಲಿ ಪ್ರತಿಪಾದಿಸಲಾಗಿದೆ.

---

೧ ಕಾವಾಹಂ ತವ ಕೋ ಮೇ ತ್ವಂ ಕಶ್ಚತೇ ಮಯ್ಯನುಗ್ರಹಃ ।
ಪ್ರಶಾಧಿ ಪೃಥಿವೀಂ ರಾಜನ್ ಯದಿ ತೇಽನುಗ್ರಹೋ ಭವೇತ್ ॥

೨ ಅನಿಷ್ಕಷಾಯೇ ಕಾಷಾಯಮೀಹಾರ್ಥಮಿತಿ ವಿದ್ಧಿ ತಮ್ ।
ಧರ್ಮಧ್ವಜಾನಾಂ ಮುಂಡಾನಾಂ ವೃತ್ತ್ಯರ್ಥಮಿತಿ ಮೇ ಮತಿಃ ॥

೩ ಆಗ್ನ್ಯಾಧೇ ಯಾನಿ ಗುರ್ವರ್ಥಂ ಕ್ರತೂನಪಿ ಸುದಕ್ಷಿಣಾನ್ ।
ದದಾತ್ಯಹರಹಃ ಪೂರ್ವಂ ಕೋ ನು ಧರ್ಮರತಸ್ತತಃ ॥ - ೧೮/೩-೪೦

೨. ಕ್ಷತ್ರಿಯನು ತನ್ನ ಧರ್ಮ ಬಿಟ್ಟು ಸನ್ಯಾಸಿಯಾಗುವುದು ಡಂಭಾಚಾರವೇ ಸರಿ.

೩. ಕ್ಷತ್ರಧರ್ಮದಿಂದ ಸಂಪಾದನೆಯಾಗುವ ಪುಣ್ಯವು ಸನ್ಯಾಸಧರ್ಮದಿಂದ ಆಗದು.

೪. ಜನಕ ಮಾಡಿದಂತಹ ತಪ್ಪನ್ನೇ ಧರ್ಮರಾಜ ಮಾಡಿದ್ದರಿಂದ ಆತನನ್ನು ಆತನ ಪತ್ನಿಯು ಸನ್ಮಾರ್ಗಕ್ಕೆ ತಂದಳು. ಇಲ್ಲಿ ಧರ್ಮರಾಜನನ್ನು ದಾರಿಗೆ ತರಲು ಆತನ ಸೋದರರೂ, ಪತ್ನಿಯಾದ ದ್ರೌಪದೀ, ಕೊನೆಗೆ ವ್ಯಾಸರು, ಕೃಷ್ಣರು ಉಪದೇಶ ಮಾಡುವ ಪರಿಸ್ಥಿತಿ ಬರುತ್ತದೆ. ಆತನನ್ನು ಬಹಳ ಶ್ರಮದಿಂದ ಒಪ್ಪಿಸುತ್ತಾರೆ. ಇಲ್ಲಿಯದು ಅರ್ಜುನನ ಎರಡನೇ ಪ್ರಯತ್ನ (ಅ. ೧೧ರಲ್ಲೂ ಇಂತಹುದೇ ವಿಚಾರ ಬಂದಿದೆ).

ವಿ.ಸೂ. : ಜನಕರಾಜನು ಪತ್ನಿಯ ಮಾತುಗಳನ್ನು ಕೇಳಿ ಮೊದಲಿನಂತೆ ರಾಜನಂತೆಯೇ ಕ್ಷಾತ್ರಧರ್ಮವನ್ನು ಅನುಸರಿಸಿದನು ಎಂಬ ಮಾತು ಸ್ಪಷ್ಟವಾಗಿ ಬಂದಿಲ್ಲ ಬಹುಶಃ ಆ ಶ್ಲೋಕ(ಗಳು) ತೆಗೆಯಲ್ಪಟ್ಟಿವೆ ಎಂದು ತೋರುತ್ತದೆ(ಅಂತರಿತವಾಗಿವೆ).

ಆದರೆ ಔತ್ತರೇಯ ಪಾಠವೂ ಹೀಗೆಯೇ ಇದೆ.

ಇತ್ಯಾದಿ...

# ೧೬೩. ಅಶ್ಮಕ ಮಹರ್ಷಿ, ಜನಕರ ಸಂವಾದ

ತನ್ನ ಬಂಧುಗಳ ಮರಣದಿಂದ ದುಃಖಿತಪ್ತನಾದ ಧರ್ಮರಾಜನಿಗೆ ವ್ಯಾಸರು ಸಮಾಧಾನ ಮಾಡಲು **ಅಶ್ಮಗೀತೆ**ಯನ್ನು ಉಪದೇಶಿಸಿದರು. ಇದೊಂದು **ಜನಕ**ಮಹಾರಾಜನು **ಅಶ್ಮ**ನೆಂಬ ಬ್ರಾಹ್ಮಣನನ್ನು ತನ್ನ ದುಃಖಪರಿಹಾರಕ್ಕಾಗಿ ಪ್ರಶ್ನಿಸುತ್ತಾನೆ. ತನ್ನ ಸಂಶಯವನ್ನು ಹೇಳಿ ಪರಿಹಾರ ಕೇಳುತ್ತಾನೆ.

ಬಂಧುಗಳು, ಐಶ್ವರ್ಯ ನಮ್ಮ ಹತ್ತಿರ ಬರುವಾಗ ಮತ್ತು ನಮ್ಮಿಂದ ದೂರ ಹೋಗುವಾಗ ಒಳಿತನ್ನು ಬಯಸುವವರು ಹೇಗೆ ನಡೆದುಕೊಳ್ಳಬೇಕು? (ವರ್ತಿಸಬೇಕು) ಅದಕ್ಕೆ ಅಶ್ಮಕ ಬ್ರಾಹ್ಮಣನು ದೀರ್ಘವಾದ ಉತ್ತರ ನೀಡುತ್ತಾನೆ.

೧. ಮನುಷ್ಯರಿಗೆ ಐಶ್ವರ್ಯ ಬಂದಾಗ ಅವನನ್ನು ಬಂಧುಬಾಂಧವರೆಲ್ಲ ಬೆಲ್ಲವನ್ನು ಇರುವೆಗಳು ಮುತ್ತುವಂತೆ ಮುತ್ತುತ್ತಾರೆ. ಅವನೇನಾದರೂ ಐಶ್ವರ್ಯದಿಂದ ವಂಚಿತನಾದನೆಂದರೆ ಅವನನ್ನು ನೋಡುವುದೇ ಇಲ್ಲ. ಅವನನ್ನು ಕಸದಂತೆ ಕಾಣುತ್ತಾರೆ. ತಮಗೆ ಇರುವ ಬಾಂಧವ್ಯವನ್ನು ಮರೆಯುತ್ತಾರೆ. ಬಾಂಧವ್ಯ ಕೇವಲ ಹತ್ತಿರ ಬರಲು ನಿಮಿತ್ತವಾಗಿರುತ್ತದೆಯೇ ಹೊರತು ಪ್ರೀತಿ, ವಿಶ್ವಾಸಗಳು ಅಲ್ಲಿ ನುಸುಳುವುದಿಲ್ಲ. ಐಶ್ವರ್ಯವಿದ್ದಾಗ ಕೃತಕ ಪ್ರೀತಿ ವಿಶ್ವಾಸಗಳನ್ನು ತೋರುತ್ತಾರೆಯೇ ಹೊರತು ನಿಜವಾಗಿ ಇರುವುದಿಲ್ಲ.

ಬುದ್ಧಿವಂತ ವ್ಯಕ್ತಿಗೆ ತನ್ನ ಬಂಧುಗಳ ಬಗ್ಗೆ ವಿಶೇಷವಾದ ಯಾವುದೇ ಅಭಿಮಾನವಿಟ್ಟು-ಕೊಳ್ಳದೆ ಸಮಸ್ಥಿತಿ ಇರುವ ವ್ಯಕ್ತಿಯಂತೆ ಇರಬೇಕು. ಆಗಲೇ ದುಃಖವು ಬರದು. ತನ್ನ ಶರೀರವನ್ನು ಹೆಚ್ಚು ಪ್ರೀತಿ ಮಾಡಬಾರದು. ಕಾರಣ ಶರೀರದೊಡನೆ ತಾನೂ ಹೆಚ್ಚುಕಾಲ ಇರಲು ಸಾಧ್ಯವಿಲ್ಲ. ಹೀಗಿರುವಾಗ ಬೇರೆಯವರೊಡನೆ ಯಾರು ತಾನೇ ಹೆಚ್ಚುಕಾಲ ಇರಲು ಸಾಧ್ಯ? ಕಾರಣ ಈ ದೇಹವೆಲ್ಲ ನಮಗೆ ತಿಳಿಯದಂತೆ ಮುಪ್ಪಡರಿ ನಾಶವಾಗುತ್ತದೆ[೧].

೨. ನಮ್ಮಲ್ಲಿ ಐಶ್ವರ್ಯವಿದ್ದಾಗ ಧರ್ಮಾಧರ್ಮ ಸ್ವರ್ಗ, ನರಕ ಮೊದಲಾದ ಅತೀಂದ್ರಿಯ ಪದಾರ್ಥಗಳಿಗೆ ಕಣ್ಣಿನಂತಿರುವ ವೇದದಲ್ಲಿ ಹೇಳಿದಂತೆ ಕರ್ತವ್ಯಾಚರಣೆ ಮಾಡಬೇಕು[೨].

---

೧ ನಾಯಮತ್ಯಂತಸಂವಾಸೋ ಲಭ್ಯತೇ ಜಾತು ಕೇನಚಿತ್ ।
ಅಪಿ ಸ್ವೇನ ಶರೀರೇಣ ಕಿಮುತಾನ್ಯೇನ ಕೇನಚಿತ್ ॥ - ೨೯/೫೧

೨ ನ ಹ್ಯೇವ ಪುರುಷೋ ದ್ರಷ್ಟಾ ಸ್ವರ್ಗಸ್ಯ ನರಕಸ್ಯ ವಾ ।
ಆಗಮಸ್ತು ಸತಾಂ ಚಕ್ಷುರ್ನೃಪತೇ ತಮಿಹಾಚರ ॥ - ೨೯/೫೩

೩. ಬ್ರಾಹ್ಮಣ, ಕ್ಷತ್ರಿಯ, ವೈಶ್ಯರಿಗೆಲ್ಲಾ ಬ್ರಹ್ಮಚಾರಿಯಾಗಿದ್ದಾಗ ಗುರುಶುಶ್ರೂಷೆ ಮಾಡುತ್ತಲೇ ವೇದಾಧ್ಯಯನ ಮಾಡಬೇಕು. ನಂತರ ಗೃಹಸ್ಥಾಶ್ರಮ ಸ್ವೀಕರಿಸಿ ಸತ್ಸಂತಾನ ಪಡೆಯಲು ಪ್ರಯತ್ನಿಸಬೇಕು. ನಿತ್ಯವೂ ದೇವ, ಋಷಿ, ಪಿತೃ, ಅತಿಥಿ ಪೂಜೆಗಳನ್ನು ಅಸೂಯಾರಹಿತನಾಗಿ ಮಾಡಬೇಕು. ಸರ್ವಭೂತದಯೆ ಕೂಡಾ ಅತ್ಯಂತ ಅವಶ್ಯ[೧].

ಮೊದಲು ಬ್ರಹ್ಮಚಾರಿಯಾಗಿದ್ದು, ನಂತರ ಗೃಹಸ್ಥನಾದಾಗ ಯಜ್ಞಶೀಲನಾಗಿಯೂ, ಸಂತಾನ ಪಡೆಯುವುದು, ಹೃದಯದಲ್ಲಿ ರಾಗದ್ವೇಷವಿಹೀನನಾಗಿ ಸ್ವರ್ಗಕ್ಕೋಸ್ಕರ (ಮೋಕ್ಷ) ಭಗವದಾರಾಧನೆ ಮಾಡಬೇಕು.

ಹೀಗೆ ಮಾಡಿ, ಧರ್ಮರತನಾಗಿ ಪ್ರಜಾಪಾಲಕನಾದರೆ, ಅವರ ಕೀರ್ತಿ ಎಲ್ಲ ಲೋಕಗಳಲ್ಲಿ ವ್ಯಾಪಿಸುತ್ತದೆ[೨].

ಹೀಗೆ ಅಶ್ಮಕರಿಂದ ಉಪದೇಶ ಪಡೆದ ಜನಕಮಹಾರಾಜನು ತನ್ನ ದುಃಖ ಪರಿಹರಿಸಿ-ಕೊಂಡು, ತನ್ನ ಅರಮನೆಗೆ ಮರಳಿದನು. ಮುಂದೆ ಅಶ್ಮಕರು ಹೇಳಿದಂತೆ ವರ್ತಿಸಿದನೆಂದು ಈ ಅಧ್ಯಾಯದ ಅಭಿಪ್ರಾಯವಾಗಿದೆ.

ಐಶ್ವರ್ಯ ಹಾಗೂ ಬಂಧುಗಳ ಗಮನಾಗಮನದ ವಿಷಯಕ್ಕೆ ಸಂಬಂಧಿಸಿದ್ದು ಪ್ರತಿಜೀವಿಯ ದೇಹದಲ್ಲಿ ಕಾಣುವ ಪರಿವರ್ತನೆಗಳು, ಮಾನಸಿಕ ಬದಲಾವಣೆಗಳು. ಹೀಗಾಗಿ ಇವನ್ನು ಒಂದು ಸಮಸ್ಥಿತಿಗೆ ತರಲು ಮೇಲಿನ ಪರಿಹಾರಗಳನ್ನು ಸೂಚಿಸಲಾಗಿದೆ. ಸಮಸ್ಥಿತಿ ಇಲ್ಲದ ವ್ಯಕ್ತಿಯು ಸಮಾಜದಲ್ಲಿ ಹೇಗಿರುತ್ತಾನೆ? ಅವನ (ಅವರ) ದೈಹಿಕ ಪರಿಸ್ಥಿತಿಗಳು ಜಗತ್ತಿನಲ್ಲಿ ಹೇಗೆ ಬದಲಾವಣೆ, ಸ್ಥಿತ್ಯಂತರಗಳನ್ನು ಕಾಣುತ್ತವೆ, ದೇಹವು ನಿತ್ಯವೇ ಹೇಗೆ ಎಂಬಿವೇ ಮೊದಲಾದ ಅನೇಕ ಜಿಜ್ಞಾಸೆಗಳಿಗೆ ಅಶ್ಮಕರು ಮೊದಲು ಹೇಳುತ್ತಾರೆ. ಇವು ಕೂಡಾ ವರ್ತನೆ ಹೇಗಿರಬೇಕೆಂಬುದನ್ನು ನಿರ್ಧರಿಸುವ ವಿಷಯಗಳು. ಅವುಗಳ ಸಾರ ಹೀಗಿದೆ.

೧. ಜೀವಿಯ ಕರ್ಮಗಳಿಗೆ ಅನುಗುಣವಾಗಿ ಅವನು ಹುಟ್ಟುವುದರೊಂದಿಗೆ ಸುಖ-ದುಃಖಗಳು ಆರಂಭವಾಗುತ್ತವೆ[೩].

---

೧ ಚರಿತಬ್ರಹ್ಮಚರ್ಯೋ ಹಿ ಪ್ರಜಾಯೇತ ಯಜೇತ ಚ।
ಪಿತೃದೇವಮಹರ್ಷೀಣಾಮಾನೃಣ್ಯಾದನಸೂಯಕಃ॥ – ೨೮/೫೪

೨ ಸಮ್ಯಗ್ ಹಿ ಧರ್ಮಂ ಚರತೋ ನೃಪಸ್ಯ ....
ಪ್ರವೃತ್ತಧರ್ಮಸ್ಯ ಯಶೋಽಭಿವರ್ಧತೇ।
ಸರ್ವೇಷು ಲೋಕೇಷು ಚರಾಚರೇಷು॥ – ೨೮/೫೬

೩. ಉತ್ಪನ್ನಮಿಮಮಾತ್ಮಾನಂ ನರಸ್ಯಾ ನಂತರಂ ತತಃ।
ತಾನಿ ತಾನ್ಯಭಿವರ್ತಂತೇ ದುಃಖಾನಿ ಚ ಸುಖಾನಿ ಚ॥ – ೨೮/೫

೨. ಈ ಸುಖದುಃಖಗಳನ್ನು ಮನಸ್ಸಿಗೆ ತುಂಬಾ ಬಳಿದುಕೊಂಡರೆ (ಹಚ್ಚಿಕೊಂಡರೆ) ನಮ್ಮ ವಿವೇಕವೇ ಹೋಗಿಬಿಡುತ್ತದೆ. ನಿರ್ಲಿಪ್ತವಾಗಿರಲು ಪ್ರಯತ್ನಿಸಬೇಕೆಂದು ಭಾವ.

೩. ಐಶ್ವರ್ಯ ಬಂದಾಗ ನಾನು ಸಂಪ್ರತಿಪನ್ನ ವಂಶದವನು (ಪ್ರಸಿದ್ಧ), ನಾನೊಬ್ಬ ಸಿದ್ಧಪುರುಷ, ನಾನು ಸಮಾಜದಲ್ಲಿ ತುಂಬಾ ವೈಶಿಷ್ಟ್ಯತೆಯುಳ್ಳವನು, ನಾನು ಸಾಮಾನ್ಯ ಮನುಷ್ಯನಲ್ಲ(ನಾನು ದೇವತೆಯಿರಬಹುದು) ಇವೇ ಮೊದಲಾದ ಭಾವನೆಗಳು ಮನುಷ್ಯನನ್ನು ಗರ್ವಿಷ್ಟನನ್ನಾಗಿ ಮಾಡುತ್ತವೆ[1].

೪. ಹೀಗೆ ದುರಹಂಕಾರಿಯಾಗಿ ಸದಾ ಸುಖಭೋಗಿಯಾಗುತ್ತಾನೆ. ಹಿರಿಯರ ಆಸ್ತಿಯೆಲ್ಲ ವ್ಯಯವಾಗಲು ಪರಸ್ವತ್ತನ್ನು ಅಪಹರಿಸುವುದನ್ನು ಸರಿಯೆಂದು ಭಾವಿಸುತ್ತಾನೆ[2].

೫. ಹೀಗೆ ಅಪರಾಧ ಮಾರ್ಗದಲ್ಲಿ ಸಾಗಿ ರಾಜದಂಡಕ್ಕೆ ಗುರಿಯಾಗಿ, ಅವನ ಆಯುಷ್ಯ ಪೂರ್ಣವಾಗಿರದೇ (ನೂರುವರ್ಷ) ೨೦, ೩೦ ವರ್ಷಗಳಲ್ಲೇ ಮರಣ ಹೊಂದುತ್ತಾನೆ.

ಇಂತಹವರನ್ನು ಸರಿಯಾದ ಮಾರ್ಗದಲ್ಲಿ ಹಾಕಲು ಸಲಹೆ ಮೊದಲಾದವುಗಳನ್ನು ಕೊಡಿಸಬೇಕು. ರಾಜನು ಪ್ರಜೆಗಳ (ಇಂತಹ) ನಡೆಗಳನ್ನು ಪರಿಶೀಲಿಸುತ್ತಿರಬೇಕು (ಪರಿಶೀಲಿಸುವ ವ್ಯವಸ್ಥೆ ಮಾಡಬೇಕು - ಮೊದಲು ಪ್ರಜೆಗಳು ಅಪರಾಧವೆಸಗದಂತೆ ಮಾಡಿದರೂ, ಅವರಿಗೆ ಮುಂದೆ ಮತ್ತೆ ಮಾಡದಂತೆ ಸಲಹಾ ಕೇಂದ್ರಗಳನ್ನು (Counselling) ತೆರೆಯಿಸಬೇಕು. ಇದು ಈಗ ನಡೆಯುತ್ತಿದೆ. ಬಹಳ ಹಿಂದೆ ಕೂಡಾ ಇತ್ತು ಎನ್ನಲು ಭಾರತವೇ ಸಾಕ್ಷಿಯಾಗಿದೆ)[3].

೬. ಇನ್ನು ಮನುಷ್ಯರ ದುಃಖಕ್ಕೆ 'ಬುದ್ಧಿಭ್ರಮೆ ಹಾಗೂ ಅನಿಷ್ಟಪ್ರಾಪ್ತಿಗಳೆಂಬ ಎರಡು ಕಾರಣಗಳಿವೆ. ಈ ದುಃಖಗಳೂ ಬರಲು ವಿಷಯಗಳ ಸಂಪರ್ಕವೇ[4] ಕಾರಣ.

---

೧ ಅಭಿಜಾತೋಽಸ್ಮಿ ಸಿದ್ಧೋಽಸ್ಮಿ ನಾಸ್ಮಿ ಕೇವಲಮಾನುಷಃ ।
ಇತ್ಯೇಭಿಃ ಹೇತುಭಿಸ್ತಸ್ಯ ತ್ರಿಭಿಶ್ಚಿತ್ತಂ ಪ್ರಸಿಚ್ಯತೇ ॥ - ೨೮/೭

೨ ಸಂಪ್ರಸಕ್ತಮನಾ ಭೋಗಾನ್ ವಿಸೃಜ್ಯ ಪಿತೃಸಂಚಯಾನ್ ।
ಪರಿಕ್ಷೀಣಃ ಪರಸ್ವಾನಾಮಾದಾನಂ ಸಾಧುಮನ್ಯತೇ ॥ - ೨೮/೮

೩ ತೇಷಾಂ ಪರಮದುಃಖಾನಾಂ ಬುದ್ಧ್ಯಾ ಭೈಷಜ್ಯಮಾಚರೇತ್ ।
ಸರ್ವಪ್ರಾಣಭೃತಾಂ ವೃತ್ತಂ ಪ್ರೇಕ್ಷಮಾಣಸ್ತತಸ್ತತಃ ॥ - ೨೮/೧೧

೪ ಏವಮೇತಾನಿ ದುಃಖಾನಿ ತಾನಿ ತಾನೀಹ ಮಾನವಮ್ ।
ವಿವಿಧಾನ್ಯುಪವರ್ತಂತೇ ತಥಾ ಸಾಂಸ್ಪರ್ಶಕಾನಿ ಚ ॥
ಜರಾಮೃತ್ಯೂ ಹಿ ಭೂತಾನಾಂ ಖಾದಿತಾರೌ ವೃಕಾವಿವ ।
ಬಲಿನಾಂ ದುರ್ಬಲಾನಾಂ ಚ ಹ್ರಸ್ವಾನಾಂ ಮಹತಾಮಪಿ ॥ - ೨೮/೧೩,೧೪

೭. ಪ್ರತಿ ಜೀವಿಗೆ ಮುಪ್ಪು ಮರಣಗಳು ಬರುತ್ತವೆ. ಅವು ದುರ್ಬಲರಿಗೆ ಮಾತ್ರವಲ್ಲ, ಎಲ್ಲರಿಗೂ ಬರುತ್ತವೆ. ಸಾಗರಾಂತವಾದ ಭೂಮಂಡಲವನ್ನೇ ಜಯಿಸಿದ ಚಕ್ರವರ್ತಿಗೂ ಇವು ಬಂದೇ ಬರುತ್ತವೆ. ಇವನ್ನು ಯಾಗೂ ಗೆಲ್ಲಲಾರರು[೧].

೮. ಇನ್ನು ಸುಖದುಃಖಗಳು ಕೂಡಾ ಮನುಷ್ಯನು ಚಿಕ್ಕವನಿರಲಿ, ಯೌವನದಲ್ಲಿರಲಿ, ವೃದ್ಧಾಪ್ಯದಲ್ಲಿರಲಿ ಬಂದೇ ಬರುತ್ತವೆ. ಅವುಗಳನ್ನು ಅನುಭವಿಸಲೇಬೇಕು, ಬೇರೆ ಮಾರ್ಗವಿಲ್ಲ[೨].

೯. ಬೇಕಾದವರ ಸಹವಾಸ ಸಿಗುವುದಿಲ್ಲ, ಬೇಡವಾದವರ ಸಹವಾಸವೂ ಸಿಗದಿರದು (ಬೇಡವೆಂದರೆ ಬಿಡದು). ಅರ್ಥ, ಅನರ್ಥ, ಸುಖ, ದುಃಖಗಳು ಅವರವರ ಪೂರ್ವಕರ್ಮ ಅನುಸರಿಸಿರುತ್ತವೆ. ಪ್ರಾಣಿಗಳ ಎಲ್ಲ ಚಟುವಟಿಕೆಗಳು ಪೂರ್ವನಿಯತವೇ ಆಗಿರುತ್ತವೆ[೩].

೧೦. ರೋಗಿಗಳಿಗೆ ಚಿಕಿತ್ಸೆ ಕೊಡುವ ವೈದ್ಯರೇ ರೋಗಿಗಳಾಗುತ್ತಾರೆ. ಬಲಿಷ್ಠರು ದುರ್ಬಲರಾಗುತ್ತಾರೆ. ಷಂಢರು ಪತ್ನಿಯರೊಂದಿಗೆ ಸೇರುತ್ತಾರೆ. ಹೀಗೆ ಕಾಲಗತಿ ವಿಚಿತ್ರವಾಗಿರುತ್ತದೆ. ಸತ್ಕುಲದಲ್ಲಿ ಜನ್ಮ, ವೀರ್ಯವಂತನಾಗುವುದು, ಒಳ್ಳೆಯ ಆರೋಗ್ಯ, ಜೀವನದಲ್ಲಿ ಧೈರ್ಯ, ಸೌಭಾಗ್ಯ, ಭೋಗಸಾಮರ್ಥ್ಯ(ಏನೆಲ್ಲ ತಿಂದರೂ ಅರಗಿಸಿಕೊಳ್ಳುವ ಸಾಮರ್ಥ್ಯ) ಇವೇ ಮೊದಲಾದುವೆಲ್ಲ ದೈವಾಧೀನವಾದವು.

ದರಿದ್ರರು ಬಹುಸಂತಾನವಂತರಾಗುವುದು, ಶ್ರೀಮಂತರಿಗೆ ಎಷ್ಟೇ ಪ್ರಯತ್ನಿಸಿದರೂ ಮಕ್ಕಳಾಗದಿರುವುದು, ಇದೂ ವಿಧಿಯ ವಿಚಿತ್ರ ಸಂಕಲ್ಪ[೪].

---

೧ ನ ಕಶ್ಚಿಜ್ಜಾತ್ವತಿಕ್ರಾಮೇತ್ ಜರಾಮೃತ್ಯೂ ಹ ಮಾನವಃ।
ಅಪಿ ಸಾಗರಪರ್ಯಂತಾಂ ವಿಜಿತ್ಯೇಮಾಂ ವಸುಂಧರಾಮ್ ॥ - ೨೯/೧೫

೨ ಸುಖಂ ವಾ ಯದಿ ವಾ ದುಃಖಂ ಭೂತಾನಾಂ ಪರ್ಯುಪಸ್ಥಿತಮ್ ।
ಪ್ರಾಪ್ತವ್ಯಮವಶೈಃ ಸರ್ವಂ ಪರಿಹಾರೋ ನ ವಿದ್ಯತೇ ॥
ಪೂರ್ವೇ ವಯಸಿ ಮಧ್ಯೇ ವಾಪ್ಯುತ್ತರೇ ವಾ ನರಾಧಿಪ।
ಅವರ್ಜನೀಯಾಸ್ತೇಽರ್ಥಾ ವೈ ಕಾಂಕ್ಷಿತಾಶ್ಚ ತತೋಽನ್ಯಥಾ ॥ - ೨೯/೧೬,೧೭

೩. ಸುಪ್ರಿಯೈರ್ವಿಪ್ರಯೋಗಾಶ್ಚ ಸಂಪ್ರಯೋಗಸ್ತಥಾಪ್ರಿಯೈಃ।
ಅರ್ಥಾನರ್ಥೌ ಸುಖಂ ದುಃಖಂ ವಿಧಾನಮನುವರ್ತತೇ ॥
ಆಸನಂ ಶಯನಂ ಯಾನಮುತ್ಥಾನಂ ಪಾನಭೋಜನಮ್ ।
ನಿಯತಂ ಸರ್ವಭೂತಾನಾಂ ಕಾಲೇನೈವ ಭವಂತ್ಯುತ ॥ - ೨೯/೧೮,೨೦

೪ ವೈದ್ಯಾಶ್ಚಾಪ್ಯಾತುರಾಃ ಸಂತಿ ಬಲವಂತಃ ಸುದುರ್ಬಲಾಃ।
ಸ್ತ್ರೀಮಂತಶ್ಚ ತಥಾ ಷಂಢಾ ವಿಚಿತ್ರಃ ಕಾಲಪರ್ಯಾಯಃ ॥
ಕುಲೇ ಜನ್ಮತಥಾ ವೀರ್ಯಮಾರೋಗ್ಯಂ ಧೈರ್ಯಮೇವ ಚ।
ಸೌಭಾಗ್ಯಮುಪಭೋಗಶ್ಚ ಭವಿತವ್ಯೇನ ಲಭ್ಯತೇ ॥
ಸಂತಿ ಪುತ್ರಾಃ ಸುಬಹವೋ ದರಿದ್ರಾಣಾಮನಿಚ್ಛತಾಮ್ ।

೧೧. ಜೀವಿಗಳಿಗೆ ಬರುವ ವ್ಯಾಧಿ(ರೋಗ), ಬೆಂಕಿ, ನೀರು, ಶಸ್ತ್ರ ಹಸಿವು, ಆಪತ್ತುಗಳು, ವಿಷ, ಜ್ವರ, ಕೆಳಗೆ ಬೀಳುವುದು ಇವೆಲ್ಲ ಮರಣದ ನಿಮಿತ್ತ ಕಾರಣಗಳು. ಇವು ಪರಲೋಕಕ್ಕೆ ಸೇತುವೆಗಳು. ಆಯಾ ವ್ಯಕ್ತಿಯು ಹುಟ್ಟುವಾಗಲೇ ಪರಲೋಕಕ್ಕೆ ಹೋಗುವ ನಿರ್ಣಯವಾಗಿರುತ್ತದೆ. ಹಾಗೆಯೇ ಇವೆಲ್ಲ ನಡೆಯುತ್ತವೆ[1].

ಕೆಲವರು ಐಶ್ವರ್ಯ ಹೊಂದಿದ್ದರೂ, ಯುವಕನಾಗಿರುವಾಗಲೇ ಸಾಯುತ್ತಾರೆ. ಕೆಲವರು ಬಹು ಬಡವರಿದ್ದರೂ ನೂರಾರು ವರ್ಷ ಬಾಳುತ್ತಾರೆ. ಅವನು ಚಿರಂಜೀವಿಯಾಗಿ ಬದುಕುತ್ತಾನೆ. ಆಗರ್ಭಶ್ರೀಮಂತನು ಪತಂಗದಂತೆ ಸಾಯುತ್ತಾನೆ[2].

೧೨. ಪ್ರಾಯಃ ಶ್ರೀಮಂತರಿಗೆ ಜೀರ್ಣಶಕ್ತಿ ಇರದು. ದರಿದ್ರರು ಕಟ್ಟಿಗೆಯನ್ನು ತಿಂದರೂ ಜೀರ್ಣಿಸಿಕೊಳ್ಳಬಲ್ಲರು[3].

೧೩. ಸ್ತ್ರೀಸಂಗ (ವೇಶ್ಯಾ), ಜೂಜು, ಬೇಟೆ, ಮದ್ಯಪಾನಗಳು ವಿದ್ವಾಂಸರಿಂದ ನಿಂದಿತವಾಗಿವೆ. ಆದರೂ ಬಹುಶ್ರುತರೂ ಕೂಡಾ (ವಿದ್ವಾಂಸರು) ಇಂತಹ ಕುಕೃತ್ಯಗಳಲ್ಲಿ ಆಸಕ್ತರಾಗಿ ಬಿಡುತ್ತಾರೆ. ಇವೆಲ್ಲ ವಿಧಿಯ ಅಧೀನ. ಇದಕ್ಕೆ ಬೇರಾವ ಕಾರಣವಿಲ್ಲ[4].

೧೪. ವಾಯು, ಆಕಾಶ, ಅಗ್ನಿ, ಚಂದ್ರ, ಸೂರ್ಯ, ಹಗಲು, ರಾತ್ರಿ, ನಕ್ಷತ್ರ, ನದಿಗಳು, ಪರ್ವತಗಳು, ಇವುಗಳನ್ನು ಭಗವಂತನನ್ನು ಬಿಟ್ಟರೆ ಯಾರು ತಾನೆ ಸೃಷ್ಟಿ ಮಾಡಲು ಮತ್ತು ಧರಿಸಲು ಸಮರ್ಥರು? ಚಳಿ, ಮಳೆ, ಬೇಸಿಗೆ ಕಾಲಗಳು ಕಾಲಾಧೀನವಾಗಿಯೇ ಸುತ್ತುತ್ತವೆ. ಹಾಗೆಯೇ ಸುಖದುಃಖಗಳೂ ಕೂಡಾ ಕಾಲಾಧೀನವಾಗಿಯೇ ಒಂದರ ನಂತರ ಮತ್ತೊಂದು

---

ಬಹೂನಾಮಿಚ್ಛತಾಂ ನಾಸ್ತಿ ಸಮೃದ್ಧಾನಾಂ ವಿಚೇಷ್ಟತಾಮ್ ॥ - ೨೯/೨೨-೨೪

೧ ವ್ಯಾಧಿರಗ್ನಿರ್ಜಲಂ ಶಸ್ತ್ರಂ ಬುಭುಕ್ಷಾಶ್ಚಾಪದೋ ವಿಷಮ್ ।
ಜ್ವರಶ್ಚ ಮರಣಂ ಜಂತೋರುಚ್ಚಾಚ್ಚ ಪತನಂ ತಥಾ ॥
ನಿರ್ಯಾಣಂ ಯಸ್ಯ ಯದ್ ದಿಷ್ಟಂ ತೇನ ಗಚ್ಛತಿ ಹೇತುನಾ ।
ದೃಶ್ಯತೇ ನಾಭ್ಯತಿಕ್ರಾಮನ್ನತಿಕ್ರಾಂತೋ ನ ವಾ ಪುನಃ ॥ - ೨೯/೨೫,೨೬

೨ ದೃಶ್ಯತೇ ಹಿ ಯುವೈವೇಹ ವಿನಶ್ಯನ್ ವಸುಮಾನ್ನರಃ ।
ದರಿದ್ರಶ್ಚ ಪರಿಕ್ಲಿಷ್ಟಃ ಶತವರ್ಷೋ ಜರಾನ್ವಿತಃ ॥
ಅಕಿಂಚನಾಶ್ಚ ದೃಶ್ಯಂತೇ ಪುರುಷಾಶ್ಚಿರಜೀವಿನಃ ।
ಸಮೃದ್ಧೇ ಚ ಕುಲೇ ಜಾತಾ ವಿನಶ್ಯಂತಿ ಪತಂಗವತ್ ॥ - ೨೯/೨೭,೨೮

೩ ಪ್ರಾಯೇಣ ಶ್ರೀಮತಾಂ ಲೋಕೇ ಭೋಕ್ತುಂ ಶಕ್ತಿರ್ನ ವಿದ್ಯತೇ ।
ಕಾಷ್ಠಾನ್ಯಪಿ ಹಿ ಜೀರ್ಯಂತೇ ದರಿದ್ರಾಣಾಂ ನರಾಧಿಪ ॥ - ೨೯/೨೯

೪ ಸ್ತ್ರಿಯೋಽಕ್ಷಾ ಮೃಗಯಾ ಪಾನಂ ಪ್ರಸಂಗಾನ್ನಿಂದಿತಾ ಬುಧೈಃ ।
ದೃಶ್ಯಂತೇ ಚಾಪಿ ಬಹವಃ ಸಂಪ್ರಸಕ್ತಾ ಬಹುಶ್ರುತಾಃ ॥ - ೨೯/೩೦

ಬರುತ್ತವೆ. ಔಷಧಿಗಳು, ಶಾಸ್ತ್ರಗಳು, ಹೋಮಗಳು, ಅನೇಕ ಪ್ರಕಾಂಡ ಜಪಗಳು, ಮರಣದಿಂದ ಮನುಷ್ಯನನ್ನು ರಕ್ಷಿಸಲಾರವು[೧].,

೧೫. ಸ್ತ್ರೀಯರ ಮಧ್ಯೆ ಇರುವ ಪುರುಷರಾಗಲೀ, ಅವರ ಗೀತೆ, ವಾದ್ಯ ಕೇಳುತ್ತಾ ಆನಂದ ತುಂದಿಲರಾಗಿರುತ್ತಾರೋ, ಅಂತಹ ಶ್ರೀಮಂತರ, ಪರಾನ್ನಾಸಕ್ತರಾದ ಬಡವರ, ಅನಾಥರ ವಿಷಯದಲ್ಲಿಯೂ, ಕಾಲವು ಸಮವಾಗಿಯೇ ಪ್ರತಿಕ್ರಿಯೆ ನೀಡುತ್ತದೆ. ಅದಕ್ಕೆ ಧನಿಕರು, ದರಿದ್ರರು, ಮೂರ್ಖರು, ವಿದ್ವಾಂಸರೆಂದು ಯಾವ ವ್ಯತ್ಯಾಸವಿಲ್ಲ.

**೧೬. ಅನೇಕ ಜನ್ಮಗಳಲ್ಲಿ ಅನೇಕ ತಂದೆ, ತಾಯಿ, ನೂರಾರು ಹೆಂಡತಿಯರು, ಸಾವಿರಾರು ಮಕ್ಕಳು ಪಡೆಯಲಾಗಿದೆ, ಅನುಭವಿಸಿದ್ದು ಆಗಿದೆ. ಹೀಗಿರುವಾಗ ಯಾರಿಗೆ ಯಾರು ಸಂಬಂಧ ಪಟ್ಟವರು?[೨]**

**ಈ ಜಗತ್ತಿನಲ್ಲಿ ಯಾರೂ ಯಾರಿಗೂ ಸಂಬಂಧಿಯಲ್ಲ. ಪ್ರಯಾಣದ ದಾರಿಯಲ್ಲಿ ಕಂಡ ದಾರಿಹೋಕರಂತೆ ಇವರೂ ಕೂಡುತ್ತಾರೆ, ಅಗಲುತ್ತಾರೆ. ಇದನ್ನೆಲ್ಲ ಯೋಚಿಸಿ ಮನಸ್ಸನ್ನು ಹರಿಯಲ್ಲಿ ಸ್ಥಿರಗೊಳಿಸಬೇಕು. ಏಕೆಂದರೆ ಅವನು ಮಾತ್ರ ಎಲ್ಲ ಕಾಲಕ್ಕೂ ಸಂಬಂಧಿ[೩].**

೧೭. ವಿವೇಕಿಯಾದವನು ಹೀಗೆ ಯೋಚಿಸಬೇಕು. ನಾನು ಎಲ್ಲಿದ್ದೇನೆ? ಎಲ್ಲಿಗೆ ಹೋಗುವೆ? ನಾನಾರು? ಇಲ್ಲಿಗೇಕೆ ಬಂದಿದ್ದೇನೆ? ಯಾರಿಗೋಸ್ಕರ ಬಂದಿದ್ದೇನೆ? ಏಕೆ? ಹೀಗೆ ಯೋಚಿಸಿ, ಆತ್ಮವಿಮರ್ಶೆ ಮಾಡಿ, ಮನಸ್ಸನ್ನು ಸ್ಥಿರಗೊಳಿಸಬೇಕು[೪].

೧೮. ಜ್ಞಾನಿಯಾದವನು ಪಿತೃ ಹಾಗೂ ದೇವತಾ ಸಂಬಂಧಿಯಾದ ಧರ್ಮಾಚರಣೆಗಳನ್ನು ತಪ್ಪದೇ ಮಾಡಬೇಕು (ಶ್ರಾದ್ಧ ದೇವತಾತರ್ಪಣ ಇತ್ಯಾದಿ). ಯಾಗಾದಿಗಳ ಮೂಲಕ ದೇವತಾಪೂಜೆ ಮಾಡಬೇಕು. ಹೀಗೆ ಧರ್ಮ, ಅರ್ಥ, ಕಾಮಗಳಲ್ಲಿ ಆಸಕ್ತಿ ವಹಿಸಬೇಕು.

---

೧ ವಾಯುಮಾಕಾಶಮಗ್ನಿಂ ಚ ಚಂದ್ರಾದಿತ್ಯಾವಹಃಕ್ಷಪೇ ।
ಜ್ಯೋತೀಂಷಿ ಸರಿತಃ ಶೈಲಾನ್ ಕಃ ಕರೋತಿ ಬಿಭರ್ತಿ ವಾ ॥
ಶೀತಮುಷ್ಣಂ ತಥಾ ವರ್ಷಂ ಕಾಲೇನ ಪರಿವರ್ತತೇ ।
ಏವಮೇವ ಮನುಷ್ಯಾಣಾಂ ಸುಖದುಃಖೇ ನರರ್ಷಭ ॥
ನೌಷಧಾನಿ ನ ಶಾಸ್ತ್ರಾಣಿ ನ ಹೋಮಾ ನ ಪುನರ್ಜಪಾಃ ।
ತ್ರಾಯಂತೇ ಮೃತ್ಯುನೋಪೇತಂ ಜರಯಾ ವಾಪಿ ಮಾನುಷಮ್ ॥ –೨೯/೩೩-೩೫

೨ ಮಾತೃಪಿತೃ ಸಹಸ್ರಾಣಿ ಪುತ್ರದಾರಶತಾನಿ ಚ ।
ಸಂಸಾರೇಷ್ವನುಭೂತಾನಿ ಕಸ್ಯ ತೇ ಕಸ್ಯ ವಾ ವಯಮ್ ॥ – ೨೯/೩೮

೩ ನೈವಾಸ್ಯ ಕಶ್ಚಿದ್ ಭವಿತಾ ನಾಯಂ ಭವತಿ ಕಸ್ಯಚಿತ್ ।
ಪಥಿ ಸಂಗತಮೇವೇದಂ ದಾರಬಂಧುಸುಹೃದ್ಗಣೈಃ ॥ – ೨೯/೩೯

೪ ಕ್ವಾಸಂ ಕ್ವಾಸ್ಮಿ ಗಮಿಷ್ಯಾಮಿ ಕೋ ನ್ವಹಂ ಕಿಮಿಹಾಸ್ಥಿತಃ ।
ಕಸ್ಮಾತ್ ಕಮನುಶೋಚೇಯಮಿತ್ಯೇವಂ ಸ್ಥಾಪಯೇನ್ಮನಃ ॥ – ೨೯/೪೦

**ಕುರ್ವೀತ ಪಿತೃದೈವತ್ಯಂ ಧರ್ಮಾಣಿ ಚ ಸಮಾಚರೇತ್ ।**
**ಯಜೇಚ್ಚ ವಿದ್ವಾನ್ ವಿಧಿವತ್ ತ್ರಿವರ್ಗಂ ಚಾಪ್ಯನುವ್ರಜೇತ್ ॥ - ೨೯/೪೨**

೧೯. ಕಾಲವೆಂಬ ಸಾಗರವು ಭಾರಿ ಆಳವಾದುದು. ಅದು ಮುಪ್ಪು ಹಾಗೂ ಮರಣಗಳೆಂಬ ಮೊಸಳೆಗಳಿಂದ ಕೂಡಿದ್ದು, ಈ ಕಾಲಸಾಗರದಲ್ಲಿ ಈ ಜಗವೆಲ್ಲ ಮುಳುಗುತ್ತಿದ್ದರೂ ಯಾರೂ ಇದನ್ನು ತಿಳಿಯುತ್ತಿಲ್ಲ[೧].

೨೦. ಆಯುರ್ವೇದವನ್ನು ಅಧ್ಯಯನ ಮಾಡಿದ ವೈದ್ಯರೂ ಕೂಡಾ ವ್ಯಾಧಿಗಳಿಂದ ಪೀಡಿತರಾಗುವುದನ್ನು ನೋಡುತ್ತೇವೆ. ಅವರು ಮಾತ್ರ ಏಕೆ ಅವರ ಪರಿವಾರದವರೂ (ರೋಗಗಳಿಂದ-ರೋಗಗಳಲ್ಲಿ) ಮುಳುಗುತ್ತಾರೆ (ಅವರೇನೂ ರೋಗ ಪರಿಹಾರಕ್ಕೆ ಪ್ರಯತ್ನಿಸುವುದಿಲ್ಲವೆಂದೇನೂ ಇಲ್ಲ). ಅವರೂ ಕೂಡಾ ಅನೇಕಾನೇಕ ಕಷಾಯಗಳನ್ನೂ (ಔಷಧಿ ಸಸ್ಯಗಳಿಂದ ಕೂಡಿದ) ತುಪ್ಪ ಬೆರೆತ ಚೂರ್ಣಾದಿಗಳನ್ನು ತಿನ್ನುತ್ತಾರೆ. ಆದರೂ ಸಮುದ್ರವು ತೀರವನ್ನು ದಾಟಿ ಹೊರಬರಲು ಆಗದಿರುವಂತೆ ಇವರೂ (ವೈದ್ಯರೂ) ಕೂಡಾ (ರೋಗಗಳಿಂದ ಹೊರಗಡೆ ಬರಲು ಸಾಧ್ಯವಾಗುವುದಿಲ್ಲ[೨].

೨೧. ಹಾಗೆಯೇ ತಪೋನಿರತರೂ, ಸ್ವಾಧ್ಯಾಯ(ವೇದಾಧ್ಯಯನ) ಸಂಪನ್ನರೂ, ಯಜ್ಞಶೀಲರೂ, ದಾನಿಗಳೂ, ವೈದ್ಯರಂತೆ ಮುಪ್ಪು ಸಾವುಗಳನ್ನು ದಾಟಲು ಅಶಕ್ಯರೇ ಆಗಿದ್ದಾರೆ[೩].

೨೨. ಈ ಪ್ರಪಂಚದಲ್ಲಿ ಜನಿಸಿದ ಎಲ್ಲ ಪ್ರಾಣಿಗಳಿಗೂ ಕಳೆದುಹೋದ ದಿನಗಳಾಗಲೀ, ರಾತ್ರಿಗಳಾಗಲೀ, ಪಕ್ಷಗಳಾಗಲೀ (ಶುಕ್ಲ-ಕೃಷ್ಣ), ಮಾಸಗಳಾಗಲೀ, ವರ್ಷಗಳಾಗಲೀ ಮತ್ತೆ ವಾಪಸು ಬರುವುದಿಲ್ಲ. ಆದ್ದರಿಂದಲೇ ಕಾಲ ಬಂದಾಗ ಅಸ್ಥಿರನಾದ, ಅಸ್ವತಂತ್ರನಾದ, ಮಾನವನು ಮೃತ್ಯುವಿನ ದಾರಿಯನ್ನು ಅನುಸರಿಸುತ್ತಾನೆ(ಸಾಯುತ್ತಾನೆ)[೪].

೨೩. ಜೀವಿಸಲ್ಪಟ್ಟ ದೇಹವು ಶಿರಶ್ಛೇದ ಮತ್ತು ದಹನಾದಿಗಳಿಂದ (ಸುಡುವಿಕೆ ಮೊದಲಾದವುಗಳಿಂದ) ದೇಹವೇ ಮೊದಲು ಹೋಗಬಹುದು (ರಾಜಶಾಸನ, ಯುದ್ಧ ಅಗ್ನಿ ಅಪಘಾತ.. ನಂತರ ಜೀವ ಹೋಗುತ್ತಾನೆ ದೇಹದಿಂದ). ಯೋಗಿಗಳು ಮರಣ ಹೊಂದುವಾಗ ಮೊದಲು ಜೀವನು ಹೋಗಿ ನಂತರ ದೇಹ ನಾಶವಾಗುತ್ತದೆ.

---

೧ ಸನ್ನಿಮಜ್ಜೇಜ್ಜಗದಿದಂ ಗಂಭೀರೇ ಕಾಲಸಾಗರೇ ।
ಜರಾಮೃತ್ಯುಮಹಾಗ್ರಾಹೇ ನ ಕಶ್ಚಿದವಬುಧ್ಯತೇ ॥ - ೨೯/೪೪

೨ ದೃಶ್ಯಂತೇ ಜರಯಾ ಭಗ್ನಾ ನಗಾ ನಾಗೈರಿವೋತ್ತಮೈಃ ॥ - ೨೯/೪೫,೪೬

೩ ತಥೈವ ತಪಸೋಪೇತಾಃ ಸ್ವಾಧ್ಯಾಯಾಭ್ಯಸನೇ ರತಾಃ ।
ದಾತಾರೋ ಯಜ್ಞಶೀಲಾಶ್ಚ ನ ತರಂತಿ ಜರಾಂತಕೌ ॥ - ೨೯/೪೭

೪ ಸೋಽಯಂ ವಿಪುಲಮಧ್ವಾನಂ ಕಾಲೇನ ಧ್ರುವಮಧ್ರುವಃ ।
ನರೋಽವಶಃ ಸಮಭ್ಯೇತಿ ಸರ್ವಭೂತನಿಷೇವಿತಮ್ ॥ - ೨೯/೪೯

ನಿನಗೆ ನಿನ್ನ ತಾಪಾದಿಗಳು ಈಗ ಹೇಗೆ ಕಾಣುವುದಿಲ್ಲವೋ, ನೀನೂ ನಿನ್ನ ಮೊಮ್ಮಕ್ಕಳಿಗೆ ಮುಂದೊಂದು ದಿನ ಕಾಣಲು ಆಗದು. ಆದ್ದರಿಂದ ಹೆಂಡತಿ, ಮಕ್ಕಳು, ತಾತ ಇವರ ಮೇಲೆ ಅಭಿಮಾನ ಪರಿತ್ಯಾಗ ಮಾಡು. ಇದರ ಮಧ್ಯೆ ಹೆಂಡತಿ, ಮಕ್ಕಳು, ಬಂಧುಗಳೊಡನೆ ಇರುವ ಸಂಬಂಧವು ಕೇವಲ ಪ್ರಯಾಣಿಕರು, ದಾರಿಹೋಕರು ಸೇರುವ ಅಲ್ಪಕಾಲ ಮಾತ್ರ[೧]. ಜೀವನು ಹೆಚ್ಚುಕಾಲ ಇರಲು ಸಾಧ್ಯವಿಲ್ಲ. ಹೀಗಿರುವಾಗ ಬೇರೆಯವರೊಡನೆ ಹೆಚ್ಚುಕಾಲ ಇರುವುದಿಲ್ಲವೆಂದು ಹೇಳಬೇಕಾ? (ಆದ್ದರಿಂದ ರಾಜನ್! ನೀನು ನಿನ್ನ ಬಂಧುಗಳೊಡನೆ ಹೆಚ್ಚುಕಾಲ ಇರಲು ಸಾಧ್ಯವಿಲ್ಲ. ಅವರು ಹತರಾಗಿದ್ದಾರೆ. ಅದಕ್ಕೇಕೆ ಶೋಕ?)

೨೪. ರಾಜನ್! ಈಗ ನಿನ್ನ ತಂದೆ, ತಾತ ಎಲ್ಲಿದ್ದಾರೆ? ತಿಳಿಸು? ಯಾರೂ ನಿನ್ನ ಕಣ್ಣಿಗೆ ಕಾಣಿಸುತ್ತಿಲ್ಲ. ನೀನೂ ಅವರ ಕಣ್ಣಿಗೆ ಕಾಣಿಸುತ್ತಿಲ್ಲ[೨].

## ಸಂದೇಶಗಳು

ಮೊದಲ ಎರಡು ಪುಟಗಳಲ್ಲಿವೆ. ಉಳಿದ ಪುಟಗಳಲ್ಲಿಯೂ ಅಲ್ಲಲ್ಲಿವೆ. ಸ್ಪಷ್ಟವಾಗಿರುವುದರಿಂದ ಪ್ರತ್ಯೇಕವಾಗಿ ಬರೆಯುವುದು ಅನಗತ್ಯ.

*****

---

೧ ದೇಹೋ ವಾ ಜೀವತೋಽಪ್ಯೇತಿ ಜೀವೋ ವಾಪ್ಯೇತಿ ದೇಹತಃ।
ಪಥಿ ಸಂಗತಮೇವೇದಂ ದಾರೈರನ್ಯೈಶ್ಚ ಬಂಧುಭಿಃ॥ – ೨೯/೫೦

೨ ಕ್ವನು ತೇಽದ್ಯ ಪಿತಾ ರಾಜನ್ ಕ್ವನು ತೇಽದ್ಯ ಪಿತಾಮಹಃ।
ನ ತ್ವಂ ಪಶ್ಯಸಿ ತಾನದ್ಯ ನ ತ್ವಾಂ ಪಶ್ಯಂತಿ ತೇಽಪಿ ಚ॥ –೨೯/೫೨

# ೧೬೪. ಬೃಹಸ್ಪತಿ-ವಸುಮನಸ್ ಸಂವಾದ

ಯುಧಿಷ್ಠಿರನ ಪ್ರಶ್ನೆ – ಬ್ರಾಹ್ಮಣರು ಮನುಷ್ಯರಿಗೆ ಅಧಿಪತಿಯಾದ ರಾಜನನ್ನು ದೇವತೆ ಎಂದು ಏಕೆ ಕರೆಯುತ್ತಾರೆ?

ಭೀಷ್ಮರು ಈ ಬಗ್ಗೆ ಮೇಧಾವಿಗಳಲ್ಲಿ ಶ್ರೇಷ್ಠನಾದ **ವಸುಮನಸ್** ಎಂಬ **ಕೋಸಲ** ದೇಶದ ರಾಜನು ಕೃತಪ್ರಜ್ಞರಾದ ಮಹರ್ಷಿಗಳಾದ **ಬೃಹಸ್ಪತಿ**ಯನ್ನು ಒಮ್ಮೆ ಪ್ರಶ್ನಿಸಿದ್ದನು. ಅವರು ರಾಜನಿಗೆ ಉತ್ತರವನ್ನು ನಿನಗೆ ಹೇಳುತ್ತೇನೆ.

ರಾಜ್ಯದಲ್ಲಿರುವ ಎಲ್ಲ ಪ್ರಜೆಗಳ (ಜೀವಿಗಳ) ಹಿತದಲ್ಲಿ ಆಸಕ್ತನಾದ ಅವರ ಹಿತವನ್ನು ಬಯಸುವವನಾಗಿ ವಿನಯದ ಕಟ್ಟುಪಾಡುಗಳನ್ನು ಬಲ್ಲವನಾದ, ವಿನಯಪೂರ್ವಕವಾಗಿ ದಕ್ಷಿಣೆಯನ್ನು ಕೊಟ್ಟು ಬೃಹಸ್ಪತ್ಯಾಚಾಯರನ್ನು ಭಕ್ತಿಯಿಂದ ನಮಿಸಿ ರಾಜ್ಯಪಾಲನೆಯ ಪ್ರಕಾರವನ್ನು ಕೇಳಿದನು (ಅದರ ವಿಧಿಯನ್ನು). ಆ ಪ್ರಶ್ನೆಗಳು ಯಾವುವೆಂದರೆ –

ಪ್ರಜೆಗಳು ಯಾವುದರಿಂದ ವೃದ್ಧಿಯನ್ನು ಹೊಂದುತ್ತಾರೆ? ಯಾವುದರಿಂದ ನಾಶವನ್ನು ಹೊಂದುತ್ತಾರೆ? ಯಾರನ್ನು ಪೂಜಿಸುತ್ತಾ (ಪೂಜಿಸಿ) ಅತ್ಯಂತಿಕ ಸುಖವನ್ನು ಹೊಂದುತ್ತಾರೆ? ಧರ್ಮಕಾಮಾರ್ಥಗಳಿಗೆ ಸಂಬಂಧಿಸಿದ ನನ್ನ ಈ ಸಂಶಯವನ್ನು ಪರಿಹಾರ ಮಾಡಿರಿ.

ಹೀಗೆ ಪ್ರಶ್ನಿಸಲ್ಪಟ್ಟ ಆಚಾರ್ಯರು ರಾಜನಿಗೆ ಸಮಾಧಾನದಿಂದ ರಾಜನನ್ನು ಪೂಜಿಸಲು ಕಾರಣಗಳನ್ನು ಹೇಳಿದರು.

೧. ರಾಜನ್! ಲೋಕದಲ್ಲಿ ಧರ್ಮವು ರಾಜನ ಮೂಲಕ ಲಕ್ಷಿತವಾಗಿದೆ (ಕಾಣುತ್ತದೆ). ಆತನು ಶಿಕ್ಷಿಸುವನೆಂಬ ಭಯದಿಂದಲೇ ಪ್ರಜೆಗಳು ಒಬ್ಬರನ್ನೊಬ್ಬರು ತಿನ್ನುವುದಿಲ್ಲ. ರಾಜನೇ ಸಮೃದ್ಧಿಯಿಂದ ಬೀಗುತ್ತಿರುವ ಸಕಲ ಪ್ರಜೆಗಳನ್ನು ಪ್ರಸನ್ನಗೊಳಿಸುತ್ತಾನೆ. ಮತ್ತು ತಾನೂ ಪ್ರಸನ್ನನಾಗಿ ವಿರಾಜಿಸುತ್ತಾನೆ[1].

೨. ಸೂರ್ಯಚಂದ್ರರು ಉದಯಿಸದಿದ್ದರೆ ಪ್ರಜೆಗಳು ಪರಸ್ಪರ ಕಾಣಿಸಿಕೊಳ್ಳದೆ ಯಾವ ರೀತಿಯಾಗಿ ಕತ್ತಲೆಯಲ್ಲಿ ಮುಳುಗಿ ಹೋಗುತ್ತಾರೋ, ನೀರಿಲ್ಲದ ಪ್ರದೇಶದಲ್ಲಿ ಮೀನುಗಳು ಹೇಗೆ ನಾಶ ಹೊಂದುತ್ತವೆಯೋ, ಗೋಪಾಲಕರಿಲ್ಲದಿರಲು ದನಕರುಗಳು ಕತ್ತಲೆಯಲ್ಲಿ ಕಾಣದಾಗುವಂತೆ ರಾಜನಿಲ್ಲದ ಪ್ರಜೆಗಳು ನಾಶ ಹೊಂದುತ್ತಾರೆ.

---

೧ ರಾಜಮೂಲೋ ಮಹಾರಾಜ ಧರ್ಮೋ ಲೋಕಸ್ಯ ಲಕ್ಷ್ಯತೇ।
ಪ್ರಜಾ ರಾಜಭಯಾದೇವ ನ ಖಾದಂತಿ ಪರಸ್ಪರಮ್ ॥ – ೬೮/೮

೩. ರಾಜನು ಪಾಲಿಸದಿದ್ದರೆ ಬಲಿಷ್ಠರು ದುರ್ಬಲ ಪ್ರಜೆಗಳ ಮನೆ, ಮಡದಿ, ಧನ ಮೊದಲಾದ ಸ್ವತ್ತನ್ನು ಅಪಹರಿಸಿ ಬಿಡುತ್ತಾರೆ. ಅವರನ್ನು ಕೊಂದೂ ಬಿಟ್ಟಾರು. ಇದು ನನ್ನದು ಎಂದು ಹೇಳಲಾಗುವ ಯಾವುದೂ ರಾಜನ ಪಾಲನೆ ಇರದಿದ್ದರೆ ಇರುವುದಿಲ್ಲ[೧].

ರಾಜನು ರಕ್ಷಿಸದಿದ್ದರೆ ತಂದೆ, ತಾಯಿ, ವೃದ್ಧ ಆಚಾರ್ಯ, ಅತಿಥಿ, ಗುರುಗಳನ್ನು ಕ್ಲೇಶಗೊಳಿಸಿ ಯಾರು ಬೇಕಾದರೂ ಕೊಲ್ಲಲೂಬಹುದು[೨].

ಧರ್ಮಾಚರಣೆ ಮಾಡುವವರು ಶಸ್ತ್ರಗಳಿಗೆ ತುತ್ತಾದಾರು. ಅಧರ್ಮವೇ ಎಲ್ಲೆಡೆ ವಿಜೃಂಭಿಸೀತು. ರಾಜನ ಪಾಲನೆ ಇರದಿದ್ದರೆ. ಇಂತಹ ಅಪಚಾರಗಳಿಗೆ ಆಕಾಶವೇ ಸೀಮಾ ಆದೀತು (ಕೊನೆಯಿಲ್ಲದಾದೀತು). ಲೋಕವೆಲ್ಲ ಕಳ್ಳರ ವಶವಾಗಿ, ಭೂಮಿಯೇ ನರಕಸದೃಶವಾದೀತು![೩]

ಅಷ್ಟೇ ಏಕೆ? ವ್ಯಭಿಚಾರವು ದೋಷವೆಂದು ಯಾರೂ ಪರಿಗಣಿಸುವುದಿಲ್ಲ. ಕೃಷಿ, ವಾಣಿಜ್ಯಮಾರ್ಗ ಇರವು. ಧರ್ಮನಾಶವಾದೀತು. ಯಜ್ಞಗಳು ನಿಂತು ಹೋದಾವು. ವಿವಾಹ, ಸಭೆಗಳೂ ನಡೆಯದೆ ನಿಂತು ಹೋದಾವು. ಹೋರಿಗಳು ಹಸುಗಳಿಗೆ ಗರ್ಭಾಧಾನ ಮಾಡುವುದಿಲ್ಲ. ಗೋಶಾಲೆಗಳೂ ವಿನಾಶ ಹೊಂದುತ್ತವೆ. ಜನರೆಲ್ಲ ಉದ್ವಿಗ್ನ ಮನಸ್ಕರಾಗಿ ಎಲ್ಲೆಡೆ ಹಾಹಾಕಾರವುಂಟಾಗಿ ಕ್ಷಣಮಾತ್ರದಲ್ಲಿ ವಿನಾಶವುಂಟಾಗುತ್ತದೆ. ವಿಧಿಪೂರ್ವಕವಾದ ದಕ್ಷಿಣಾಯುಕ್ತವಾದ ಸಂವತ್ಸರ ಸತ್ರಗಳು (ವರ್ಷಗಟ್ಟಲೆ ನಡೆಯುವ ಯಾಗಗಳು) ನಿರಾತಂಕವಾಗಿ ನಡೆಯಲಾರವು. ತಪಸ್ವೀ ಬ್ರಾಹ್ಮಣರು ನಾಲ್ಕು ವೇದಗಳನ್ನು ಅಧ್ಯಯನ ಮಾಡುವುದಿಲ್ಲ. ಎಲ್ಲೆಡೆ ಮುಷ್ಟಿಯುದ್ಧಗಳಾಗಿ ಎಲ್ಲ ಧರ್ಮದ ಕಟ್ಟುಪಾಡುಗಳು ಭಗ್ನವಾದಾವು. ಜನರು ದರ್ಮದ ಸಂಬಂಧವನ್ನೇ ಬಿಡಿಸಿಕೊಂಡಾರು! ಅನ್ಯಾಯ, ವರ್ಣಸಾಂಕರ್ಯ, ದುರ್ಭಿಕ್ಷಗಳು ಬಂದಾವು[೪].

---

೧ ಹರೇಯುರ್ಬಲವಂತೋ ಹಿ ದುರ್ಬಲಾನಾಂ ಪರಿಗ್ರಹಾನ್ ।
ಹನ್ಯುರ್ವ್ಯಾಯಚ್ಛಮಾನಾಶ್ಚ ಯದಿ ರಾಜಾ ನ ಪಾಲಯೇತ್ ॥
ಯಾನಂ ವಸ್ತ್ರಮಲಂಕಾರಾನ್ ರತ್ನಾನಿ ವಿವಿಧಾನಿ ಚ ।
ಹರೇಯುಃ ಸಹಸಾ ಪಾಪಾ ಯದಿ ರಾಜಾ ನ ಪಾಲಯೇತ್ ॥
ಮಮೇದಮಿತಿ ಲೋಕೇಽಸ್ಮಿನ್ ಭವೇತ್ ಸಂಪರಿಗ್ರಹಃ ।
ನ ದಾರಾ ನ ಚ ಪುತ್ರಃ ಸ್ಯಾನ್ನ ಧನಂ ನ ಪರಿಗ್ರಹಃ ॥ – ೬೮/೧೪-೧೬

೨ ಮಾತರಂ ಪಿತರಂ ವೃದ್ಧಮಾಚಾರ್ಯಮತಿಥಿಂ ಗುರುಮ್ ।
ಕ್ಲಿಶ್ನೀಯುರಪಿ ಹಿಂಸ್ಯುರ್ವಾ ಯದಿ ರಾಜಾ ನ ಪಾಲಯೇತ್ ॥ – ೬೮/೧೭

೩. ಅಂತಶ್ಚಾಕಾಶಮೇವ ಸ್ಯಾಲ್ಲೋಕೋಽಯಂ ದಸ್ಯುಸಾದ್ ಭವೇತ್ ।
ಪತೇಚ್ಚ ನರಕಂ ಘೋರಂ ಯದಿ ರಾಜಾ ನ ಪಾಲಯೇತ್ ॥ – ೬೮/೨೦

೪ ನ ಯೋನಿದೋಷೋ ವರ್ತೇತ ನ ಕೃಷಿರ್ನ ವಣಿಕ್ಪಥಃ ।
ಮಜ್ಜೇದ್ ಧರ್ಮಸ್ತ್ರಯೀ ನ ಸ್ಯಾದ್ ಯದಿ ರಾಜಾ ನ ಪಾಲಯೇತ್ ॥

**ರಾಜನು ರಾಜ್ಯವನ್ನು ರಕ್ಷಿಸಿದರೆ ಆಗುವ ಪರಿಣಾಮಗಳು ಯಾವುವೆಂದರೆ -**

೧. ಪ್ರಜೆಗಳು ಎಲ್ಲ ಕಡೆ ಮನೆ ಬಾಗಿಲುಗಳನ್ನು ತೆರೆದು ಭಯರಹಿತರಾಗಿ ಸ್ವೇಚ್ಛೆಯಾಗಿ ನಿದ್ರೆ ಮಾಡುತ್ತಾರೆ[1].

೨. ಸ್ತ್ರೀಯರು, ಪುರುಷರು ಸರ್ವಾಲಂಕಾರಭೂಷಿತರಾಗಿ ಭಯರಹಿತರಾಗಿ ಮಾರ್ಗಗಳಲ್ಲಿ ಸಂಚರಿಸುತ್ತಾರೆ[2].

೩. ಪ್ರಜೆಗಳೆಲ್ಲ ಧರ್ಮವನ್ನು ಆಶ್ರಯಿಸುವವರಾಗಿ ಪರಸ್ಪರ ಹಿಂಸಿಸದೆ ಉಪಕಾರವನ್ನು ಮಾಡುತ್ತಾರೆ.

೪. ಮೂರೂ ವರ್ಣದವರು ಶಾಸ್ತ್ರಾಧ್ಯಯನ ಮಾಡುತ್ತಾರೆ. ಯಜ್ಞ, ಯಾಗಗಳನ್ನು ಮಾಡುತ್ತಾರೆ.

೫. ರಾಜ್ಯಭಾರದಲ್ಲಿ ಸಹಕಾರಿಯಾಗಿರುವವನು ರಾಜನೊಂದಿಗೆ ತಾನೂ ಇಹಪರತ್ರ (ಉಭಯಲೋಕಗಳನ್ನು) ಹೊಂದುತ್ತಾನೆ (ಸದ್ಗತಿ).

---

ನ ಯಜ್ಞಾಃ ಸಂಪ್ರವರ್ತೇರನ್ ವಿಧಿವತ್ ಸ್ವಾಪ್ತದಕ್ಷಿಣಾಃ।
ನ ವಿವಾಹಾಃ ಸಮಾಜೋ ವಾ ಯದಿ ರಾಜಾ ನ ಪಾಲಯೇತ್ ॥
ನ ವೃಷಾಃ ಸಂಪ್ರವರ್ತೇರನ್ನ ಮಥ್ಯೇರಂಶ್ಚ ಗರ್ಗರಾಃ।
ಘೋಷಾಃ ಪ್ರಣಾಶಂ ಗಚ್ಛೇಯುರ್ಯದಿ ರಾಜಾ ನ ಪಾಲಯೇತ್ ॥
ತ್ರಸ್ತಮುದ್ವಿಗ್ನಹೃದಯಂ ಹಾಹಾಭೂತಮಚೇತನಮ್ ।
ಕ್ಷಣೇನ ವಿನಶೇತ್ ಸರ್ವಂ ಯದಿ ರಾಜಾ ನ ಪಾಲಯೇತ್ ॥
ನ ಸಂವತ್ಸರಸತ್ರಾಣಿ ತಿಷ್ಠೇಯುರಕುತೋಭಯಾಃ।
ವಿಧಿವದ್ ದಕ್ಷಿಣಾವಂತಿ ಯದಿ ರಾಜಾ ನ ಪಾಲಯೇತ್ ॥
ಬ್ರಾಹ್ಮಣಾಶ್ಚತುರೋ ವೇದಾನ್ ನಾಧೀಯೇರಂಸ್ತಪಸ್ವಿನಃ।
ವಿದ್ಯಾಸ್ನಾತಾಸ್ತಪಃ ಸ್ನಾತಾ ಯದಿ ರಾಜಾ ನ ಪಾಲಯೇತ್ ॥
ಹಸ್ತಾಹಸ್ತಂ ಸ ಪರಿಮೃಶೇತ್ ಭಿದ್ಯೇರನ್ ಸರ್ವಸೇತವಃ।
ಭಯಾರ್ತಂ ವಿದ್ರವೇತ್ ಸರ್ವಂ ಯದಿ ರಾಜಾ ನ ಪಾಲಯೇತ್ ॥
ನ ಲಭೇದ್ ಧರ್ಮಸಂಶ್ಲೇಷಂ ಹತವಿಗ್ರಹತೋ ಜನಃ।
ಹರ್ತಾ ಸ್ವಸ್ಥೇಂದ್ರಿಯೋ ಗಚ್ಛೇದ್ ಯದಿ ರಾಜಾ ನ ಪಾಲಯೇತ್ ॥
ಅನಯಾಃ ಸಂಪ್ರವರ್ತೇರನ್ ಭವೇದ್ ವೈ ವರ್ಣಸಂಕರಃ।
ದುರ್ಭಿಕ್ಷಮಾವಿಶೇದ್ ರಾಷ್ಟ್ರಂ ಯದಿ ರಾಜಾ ನ ಪಾಲಯೇತ್ ॥ - ೬೮/೨೧-೨೮

೧ ವಿವೃತ್ಯ ಹಿ ಯಥಾಕಾಮಂ ಗೃಹದ್ವಾರಾಣಿ ಶೇರತೇ।
ಮನುಷ್ಯಾ ರಕ್ಷಿತಾ ರಾಜ್ಞಾ ಸಮಂತಾದಕುತೋಭಯಾಃ॥ - ೬೮/೩೦

೨ ಸ್ತ್ರಿಯಶ್ಚ ಪುರುಷಾ ಮಾರ್ಗಂ ಸರ್ವಾಲಂಕಾರಭೂಷಿತಾಃ।
ನಿರ್ಭಯಾಃ ಪ್ರತಿಪದ್ಯಂತೇ ಯದಾ ರಕ್ಷತಿ ಭೂಮಿಪಃ॥ - ೬೮/೩೨

೬. ರಾಜನ ಬಗ್ಗೆ ಕೆಟ್ಟ ಚಿಂತನೆ ಮಾಡುವವನು ಇಲ್ಲಿ ಕ್ಲೇಶ ಹೊಂದಿ ಮರಣಾನಂತರ ನರಕದಲ್ಲಿ ಬೀಳುತ್ತಾನೆ[1].

೭. ರಾಜನನ್ನು ಮನುಷ್ಯನೆಂದು ಅವಮಾನ ಮಾಡಬಾರದು. ಅವನು ಮನುಷ್ಯರೂಪದ ದೊಡ್ಡ ದೇವತೆ[2].

೮. ರಾಜನು ಆಯಾ ಕಾಲಕ್ಕೆ ತಕ್ಕಂತೆ ಅಗ್ನಿ, ಆದಿತ್ಯ, ಮೃತ್ಯು, ಕುಬೇರ ಹಾಗೂ ಯಮನೆಂಬ ಐದು ರೂಪಗಳನ್ನು ಧರಿಸುತ್ತಾನೆ (ಅವನಲ್ಲಿ ಈ ಐದೂ ದೇವತೆಗಳೂ ಇದ್ದು ಧರ್ಮಕಾರ್ಯ ನಡೆಸುತ್ತಾರೆ[3]. ೧. ಸುಳ್ಳು ಹೇಳುವ ಪಾಪಿಗಳು ಅವನ ಸಮೀಪ ಬಂದರೆ ತನ್ನ ತೇಜಸ್ಸಿನಿಂದ ರಾಜನು ಅಗ್ನಿಯಾಗಿ ಅವರನ್ನು ಸುಡುತ್ತಾನೆ; ೨. ರಾಜನು ಗುಪ್ತಚಾರರ ಮೂಲಕ ಪ್ರಜೆಗಳನ್ನು ತಿಳಿದುಕೊಂಡು ಅವರಿಗೆ ಯೋಗಕ್ಷೇಮವನ್ನು ವಹಿಸುತ್ತಾ ಸಾಗುವಾಗ ಅವನು ಸೂರ್ಯನಾಗುತ್ತಾನೆ; ೩. ಬಾಹ್ಯಾಂತಃಶುಚಿಹೀನರಾದ (ದೈಹಿಕ ಹಾಗೂ ಮಾನಸಿಕ) ಜನರ ಬಗ್ಗೆ ಸಿಟ್ಟಾಗಿ ನೂರಾರು ಸಂಖ್ಯೆಯ ಮಕ್ಕಳು, ಮೊಮ್ಮಕ್ಕಳು ಹಾಗೂ ಅಮಾತ್ಯರಿಂದ ಕೂಡಿದ ಜನರನ್ನು ಕೊಲ್ಲುವಾಗ ರಾಜನು ಮೃತ್ಯುವಾಗುತ್ತಾನೆ; ೪. ಧರ್ಮದ್ರೋಹಿಗಳನ್ನು ತೀಕ್ಷ್ಣವಾದ ದಂಡಗಳಿಂದ (ಶಿಕ್ಷೆಯಿಂದ) ನಿಯಂತ್ರಿಸುವಾಗ ಧಾರ್ಮಿಕರನ್ನು ಅನುಗ್ರಹಿಸುವಾಗ ಅವನು ಯಮನಾಗುತ್ತಾನೆ; ೫. ಉಪಕಾರ ಮಾಡಿದವರಿಗೆ ಐಶ್ವರ್ಯದ ಮಳೆಗರೆಯುವ, ಅಪಕಾರ ಮಾಡಿದವರ ಸಂಪತ್ತನ್ನು ಸೆಳೆದು ಅಪಹರಿಸುವಾಗ ರಾಜನು ಕುಬೇರನಾಗುತ್ತಾನೆ.

೯. ದಕ್ಷನಾದವನು (ಎಲ್ಲ ಕೆಲಸವನ್ನು ನೈಪುಣ್ಯತೆಯಿಂದ ಮಾಡುವವನು), ಧರ್ಮ ಬಯಸುವವನು, ರಾಜಾನುಗ್ರಹ ಬಯಸುವವನು, ರಾಜನ ನಿಂದೆಯನ್ನು ಕೇಳಬಾರದು, ದೂರ ಹೋಗಬೇಕು.

೧೦. ರಾಜನಿಗೆ ವಿರೋಧ ಮಾಡುವವನು ಅವನ ಪುತ್ರನಾದರೂ, ಸಹೋದರನಾದರೂ, ಮಿತ್ರನಾದರೂ, ರಾಜನಿಗೆ ಸಮನಾದವನೇ ಆಗಲೀ, ಸುಖ ಹೊಂದುವುದಿಲ್ಲ[4].

೧೧. ರಾಜ ವಿರೋಧ ಮಾಡುವವನು ನಿರ್ವಿಶೇಷನಾಗಿ ನಾಶವಾಗುತ್ತಾನೆ.

---

೧ ಯಸ್ತಸ್ಯ ಪುರುಷಃ ಪಾಪಂ ಮನಸಾಪ್ಯನುಚಿಂತಯೇತ್ ।
ಅಸಂಶಯಮಿಹ ಕ್ಲಿಷ್ಟಃ ಪ್ರೇತ್ಯಾಪಿ ನರಕಂ ಪತೇತ್ ॥ – ೬೯/೩೯

೨ ನ ಹಿ ಜಾತ್ವವಮಂತವ್ಯೋ ಮನುಷ್ಯ ಇತಿ ಭೂಮಿಪಃ ।
ಮಹತೀ ದೇವತಾ ಹ್ಯೇಷಾ ನರರೂಪೇಣ ತಿಷ್ಠತಿ ॥ – ೬೯/೪೦

೩ ಕುರುತೇ ಪಂಚರೂಪಾಣಿ ಕಾಲಯುಕ್ತಾನಿ ಯಃ ಸದಾ ।
ಭವತ್ಯಗ್ನಿಸ್ತಥಾದಿತ್ಯೋ ಮೃತ್ಯುರ್ವೈಶ್ರವಣೋ ಯಮಃ ॥ – ೬೯/೪೧

೪ ನ ಹಿ ರಾಜ್ಞಃ ಪ್ರತೀಪಾನಿ ಕುರ್ವನ್ ಸುಖಮವಾಪ್ನುಯಾತ್ ।
ಪುತ್ರೋ ಭ್ರಾತಾ ವಯಸ್ಯೋ ವಾ ಯದ್ಯಪ್ಯಾತ್ಮಸಮೋ ಭವೇತ್ ॥ – ೬೯/೪೯

೧೨. ಮೃತ್ಯುವನ್ನು ನೋಡಿ ಹೆದರುವಂತೆ ರಾಜನ ಸ್ವತ್ತನ್ನು ದೂರದಿಂದಲೇ ತ್ಯಜಿಸಬೇಕು. ವಿವೇಕಿಯಾದವನು ಅದನ್ನು ತನ್ನ ಆಸ್ತಿಯಂತೆ ರಕ್ಷಿಸಬೇಕು. ರಾಜವಿತ್ತವನ್ನು ಅಪಹರಿಸುವವರು ಘೋರ ನರಕದಲ್ಲಿ ಬಹಳ ಕಾಲ ಬೀಳುತ್ತಾರೆ[೧].

ಆದ್ದರಿಂದ ತನ್ನ ಕಲ್ಯಾಣ ಬಯಸುವವನು ಮೇಧಾವಿಯಾಗಿ, ದಕ್ಷನಾಗಿ ರಾಜನನ್ನು ಆಶ್ರಯಿಸಬೇಕು.

೧೩. ರಾಜನು ಕೂಡಾ ಕೃತಜ್ಞನೂ, ಜಿತೇಂದ್ರಿಯನೂ, ರಾಜಭಕ್ತಿಯುಳ್ಳವನೂ, ಧರ್ಮರತನೂ ಆದ ಮಂತ್ರಿಯನ್ನು ಗೌರವಿಸಬೇಕು. ಇಂತಹುದೇ ಗುಣವುಳ್ಳ ಪ್ರಜೆಗಳನ್ನು ಅವಲಂಬಿಸಬೇಕು (ನಂಬಬೇಕು).

೧೪. ಪ್ರಜೆಗಳಿಗೆ ರಾಜನು ಶ್ರೇಷ್ಠ ಶರೀರವಿದ್ದಂತೆ. ರಾಜನಿಗೆ ಪ್ರಜೆಗಳು ಅಸದೃಶ ಶರೀರದಂತೆ. ರಾಜನಿಲ್ಲದೆ ದೇಶವಿಲ್ಲ, ದೇಶಗಳಿಲ್ಲದೆ ರಾಜನೂ ಇರುವುದಿಲ್ಲ[೨].

೧೫. ರಾಜರು ಭೂಮಿಯನ್ನು ಇಂದ್ರಿಯನಿಗ್ರಹದಿಂದಲೂ, ಸತ್ಯದಿಂದಲೂ ಮತ್ತು ಸೌಹಾರ್ದತೆಯಿಂದಲೂ ಆಳಿ, ಮಹಾಯಾಗಗಳಿಂದ ದೇವತೆಗಳನ್ನು ತೃಪ್ತಿಪಡಿಸಿ ಸ್ವರ್ಗದಲ್ಲಿ ಶಾಶ್ವತವಾದ (ಗೌರವಾರ್ಹವಾದ) ಸ್ಥಾನವನ್ನು ಹೊಂದುತ್ತಾರೆ.

ಹೀಗೆ ಬೃಹಸ್ಪತ್ಯಾಚಾರ್ಯರು ವಸುಮನಸ್ ರಾಜನಿಗೆ ಉಪದೇಶಿಸಿದುದನ್ನು ಕೇಳಿದ ರಾಜನು ಹಾಗೆಯೇ ಪಯತ್ನಪೂರ್ವಕವಾಗಿ ಪ್ರಜಾಪಾಲನೆ ಮಾಡಿದನು.

**ಸಂದೇಶಗಳು ಸ್ಪಷ್ಟವಾಗಿಯೇ ಇವೆ.**

*****

---

೧ ಆತ್ಮಸ್ವಮಿವ ಸಂರಕ್ಷೇದ್ ರಾಜಸ್ವಮಿಹ ಬುದ್ಧಿಮಾನ್ ।
ಮಹಾಂತಂ ನರಕಂ ಘೋರಮಪ್ರತಿಷ್ಠಮಚೇತಸಃ ॥ – ೬೮/೫೨,೫೩

೨ ರಾಜಾ ಪ್ರಜಾನಾಂ ಪ್ರಥಮಂ ಶರೀರಂ ಪ್ರಜಾಶ್ಚ ರಾಜ್ಞೋಽಪ್ರತಿಮಂ ಶರೀರಮ್ ।
ರಾಜ್ಞಾ ವಿಹೀನಾ ನ ಭವಂತಿ ದೇಶಾ ದೇಶೈರ್ವಿಹೀನಾ ನ ನೃಪಾ ಭವಂತಿ ॥ – ೬೮/೫೯

# ೧೬೫. ರಾಜಪುರೋಹಿತರ ಅರ್ಹತೆಗಳು

ಧರ್ಮರಾಜನ ಪ್ರಶ್ನೆ - ಯಾವುದು ಕಾರ್ಯ? ಯಾವುದು ಅಕಾರ್ಯ? ಎಂದು ವಿಚಾರಣೆ ಮಾಡಲು ಎಂತಹ ಬ್ರಾಹ್ಮಣನನ್ನು ರಾಜನು ಸಮರ್ಥನೆಂದು ಮಾಡಲು ಶಕ್ತನಾಗುತ್ತಾನೆ?

ಭೀಷ್ಮರು ಯಾರು ಸಜ್ಜನರನ್ನು ರಕ್ಷಿಸುತ್ತಾರೋ, ದುಷ್ಟರನ್ನು ನಾಶ ಮಾಡುತ್ತಾರೋ ಅಂತಹವನನ್ನೇ ರಾಜನು ರಾಜಪುರೋಹಿತನನ್ನಾಗಿ ನೇಮಿಸಬೇಕು.

ಈ ವಿಷಯದಲ್ಲಿ ಇಲಾಪುತ್ರನಾದ ಪುರೂರವ ಹಾಗೂ ವಾಯುದೇವನ ಸಂವಾದರೂಪ ಇತಿಹಾಸವನ್ನು ಭೀಷ್ಮರು ಧರ್ಮರಾಜನಿಗೆ ಹೇಳಿದರು.

ಐಲ ವಾಯುವನ್ನು ಪ್ರಶ್ನಿಸುತ್ತಾನೆ -

ಎಲೈ ವಾಯುವೇ! ಬ್ರಾಹ್ಮಣನು ಯಾರಿಂದ (ಯಾರ ದೇಶೆಯಿಂದ) ಹುಟ್ಟಿದನು? ಮೂರೂ ವರ್ಣಗಳೂ ಹೇಗೆ ಹುಟ್ಟಿದವು? ಬ್ರಾಹ್ಮಣನು ಹೇಗೆ ಶ್ರೇಷ್ಠನಾಗುತ್ತಾನೆ? ಎಂದು ತಿಳಿಸು.

ಇದಕ್ಕೆ ವಾಯು ಕೊಟ್ಟ ಉತ್ತರ-ವಿವರಗಳು ಹೀಗಿವೆ.

ಎಲೈ ರಾಜನೇ! ಬ್ರಹ್ಮನ ಮುಖದಿಂದ ಬ್ರಾಹ್ಮಣನು ಜನಿಸಿದನು. ಬಾಹುಗಳಿಂದ ಕ್ಷತ್ರಿಯರೂ, ತೊಡೆಗಳಿಂದ ವೈಶ್ಯ ಜನಿಸಿದನೆಂದು ಹೇಳಲಾಗಿದೆ. ಈ ತ್ರಿವರ್ಣಗಳ ಸೇವೆಗಾಗಿ ನಾಲ್ಕನೇ ಶೂದ್ರವರ್ಣವು ಬ್ರಹ್ಮನ ಪಾದಗಳಿಂದ ಹುಟ್ಟಿತು.

ಬ್ರಾಹ್ಮಣನು ಹುಟ್ಟುತ್ತಲೇ ಭೂಮಿಯಲ್ಲಿ ಶ್ರೇಷ್ಠನಾದನು. ಅವನು ಧರ್ಮರಕ್ಷಣೆಗಾಗಿ ಎಲ್ಲ ಜೀವರಿಗೂ ಪ್ರಭುವಾದನು. ಈ ಜಗತ್ತಿನಲ್ಲಿ ಧರ್ಮಯುಕ್ತನಾದ, ಪ್ರಶಸ್ತವಾದುದು ಏನೆಲ್ಲಾ ಇದೆಯೋ, ಅದೆಲ್ಲ ಬ್ರಾಹ್ಮಣನಿಗೆ ಸೇರಿದ್ದೇ[1].

---

೧ ಬ್ರಹ್ಮಣೋ ಜಾತಮಾತ್ರಸ್ತು ಪೃಥಿವೀಮಧ್ಯಜಾಯತ।
ಈಶ್ವರಃ ಸರ್ವಭೂತಾನಾಂ ಧರ್ಮಕೋಶಸ್ಯ ಗುಪ್ತಯೇ॥
ಸರ್ವಸ್ವಂ ಬ್ರಾಹ್ಮಣಸ್ಯೇದಂ ಯತ್ಕಿಂಚಿದಿಹ ದೃಶ್ಯತೇ।
ಧರ್ಮಯುಕ್ತಂ ಪ್ರಶಸ್ತಂ ಚ ಜಗತ್ಯಸ್ಮಿನ್ ನೃಪಾತ್ಮಜ॥ - ೭೪/೭,೮

ಅನಂತರ ಭೂಮಿಯ ರಕ್ಷಕನಾಗಿ, ದಂಡಧಾರಿಯಾಗಿ ಪ್ರಜೆಗಳ ರಕ್ಷಣೆಗಾಗಿ ದ್ವಿತೀಯ ಕ್ಷತ್ರಿಯವರ್ಣ ಸೃಷ್ಟಿಯಾಯಿತು. ವೈಶ್ಯನಾದರೋ ಧನಧಾನ್ಯಗಳಿಂದ ಈ ಮೂರುವರ್ಣಗಳನ್ನು ಪೋಷಿಸಬೇಕು. ಶೂದ್ರನು ಮೂರೂ ವರ್ಣಗಳ ಸೇವೆ ಮಾಡಬೇಕು ಎಂಬುದು ಬ್ರಹ್ಮದೇವರ ಆಜ್ಞೆಯಾಗಿದೆ.

ಐಲನ ಪ್ರಶ್ನೆ – ಎಲೈ ವಾಯುವೇ! ವಿತ್ತ (ದ್ರವ್ಯ) ಸಹಿತವಾದ ಈ ಭೂಮಿ (ಧರ್ಮ) ಶಾಸ್ತ್ರಪ್ರಕಾರ ಬ್ರಾಹ್ಮಣನಿಗೆ ಸೇರುತ್ತದೋ ಅಥವಾ ಕ್ಷತ್ರಿಯನಿಗೆ ಸೇರುತ್ತದೋ?

ವಾಯುದೇವ ಉತ್ತರಿಸಿದ – ಜಗತ್ತಿನಲ್ಲಿ ಏನೆಲ್ಲಾ ಇದೆಯಷ್ಟೇ ಅದೆಲ್ಲವೂ ಜ್ಯೇಷ್ಠ ಜನ್ಮ ಹೊಂದಿದ (ಎಲ್ಲರಿಗಿಂತ ಮೊದಲು ಜನಿಸಿದ) ಬ್ರಾಹ್ಮಣನಿಗೇ ಸೇರಿದ್ದು ಎಂದು ಧರ್ಮಶಾಸ್ತ್ರ ಬಲ್ಲವರು ಹೇಳುತ್ತಾರೆ. ಬ್ರಾಹ್ಮಣನು ಎಲ್ಲ ವರ್ಣದವರಿಗೂ ಗುರು ಹಾಗೂ ವಯಸ್ಸಿನಿಂದ ಶ್ರೇಷ್ಠ ಹಾಗೂ ಶ್ರೇಷ್ಠನಾದ್ದರಿಂದ ಅವನು ತನ್ನ ಸ್ವತ್ತನ್ನೇ (ಅಧೀನದಲ್ಲಿದುದನ್ನೇ) ಉಣ್ಣುತ್ತಾನೆ. ತನ್ನ ಭೂಮಿಯಲ್ಲಿ ವಾಸಿಸುತ್ತಾನೆ, ತನ್ನ ಧನವನ್ನೇ ದಾನ ಮಾಡುತ್ತಾನೆ. ಯಾವ ರೀತಿಯಾಗಿ ತನ್ನ ಪತಿ ಗತಿಸಲು ತನ್ನ ಮೈದುನನನ್ನು ಪತಿಯನ್ನಾಗಿ ಸ್ತ್ರೀಯು ಸ್ವಿಕರಿಸುತ್ತಾಳೋ, ಹಾಗೆ ಭೂಮಿಯೂ ಬ್ರಾಹ್ಮಣನ ನಂತರ ಕ್ಷತ್ರಿಯನನ್ನು ಪತಿಯನ್ನಾಗಿ ಮಾಡಿಕೊಳ್ಳುತ್ತದೆ[1].

ರಾಜನು ಭೂಮಿಯನ್ನು ಗೆದ್ದಾಗ ಅದನ್ನು ಧರ್ಮ ಬಲ್ಲಿದನಾದ ತನ್ನ ಧರ್ಮಾನುಷ್ಠಾನದಲ್ಲಿ ತೃಪ್ತನಾದವನಿಗೆ, ಹಣದ ಮೇಲಿನ ಆಶೆ ಇಲ್ಲದವನಿಗೆ ನಿವೇದಿಸಬೇಕು. ಯಾವ ಬ್ರಾಹ್ಮಣನು ತನ್ನ ಪೂರ್ಣಬುದ್ಧಿಯಿಂದ ರಾಜನನ್ನು ಸನ್ಮಾರ್ಗದಲ್ಲಿ ನಡೆಸುತ್ತಾನೋ, ಅಂತಹ ಬ್ರಾಹ್ಮಣನಿಗೆ ನಿವೇದಿಸಬೇಕು. ಅಂತಹ ಬ್ರಾಹ್ಮಣನು ಸತ್ಕುಲಪ್ರಸೂತನಾಗಿಯೂ, ಮಾಡಿದ ಉಪಕಾರವನ್ನು, ಸೇವೆಯನ್ನು ಗುರುತಿಸುವ ಜ್ಞಾನವುಳ್ಳವನೂ, ವಿನಯದಿಂದ ಕೂಡಿದ ಮಾತುಳ್ಳವನೂ, ಒಳ್ಳೆಯ ಕಥೆಗಳನ್ನು (ಉಪದೇಶಿತವಾದ) ಹೇಳುವವನೂ ಆಗಿ ರಾಜನನ್ನು ಶ್ರೇಯೋಮಾರ್ಗದಲ್ಲಿ ನಡೆಸುತ್ತಾನೆ. ರಾಜನು ಯಾವ ಧರ್ಮವನ್ನು ಆಚರಿಸುತ್ತಾನೋ, ಅಹಂಕಾರರಹಿತನೂ, ಸೇವಾಮನೋಭಾವನೂ, ಕ್ಷತ್ರಧರ್ಮರತನೂ, ಆಗಿ ಬೇಗನೇ ಕೀರ್ತಿವಂತನೂ ಆಗುತ್ತಾನೆ. ರಾಜನು ಆಚರಿಸುವ ಎಲ್ಲ ಧರ್ಮದ ಫಲದಲ್ಲಿ ರಾಜಪುರೋಹಿತನೂ ಫಲಕ್ಕೆ ಭಾಗಿಯಾಗುತ್ತಾನೆ.

ಎಲ್ಲ ಪ್ರಜೆಗಳೂ ರಾಜನನ್ನು ಆಶ್ರಯಿಸಿರುತ್ತಾರೆ. ಒಳ್ಳೆಯ ನಡತೆಯುಳ್ಳ, ಸ್ವಧರ್ಮನಿಷ್ಠರಾದ, ನಿರ್ಭಯರಾದ, ಒಳ್ಳೆಯ ವಿದ್ವಾಂಸರು ರಾಜ್ಯಶಾಸ್ತ್ರ ಬಲ್ಲ ಬ್ರಾಹ್ಮಣನನ್ನು

---

೧ ಸ್ವಯಮೇವ ಬ್ರಾಹ್ಮಣೋ ಭುಂಕ್ತೇ ಸ್ವಂ ವಸ್ತೇ ಸ್ವಂ ದದಾತಿ ಚ।
ಗುರುರ್ಹಿ ಸರ್ವಭೂತಾನಾಂ ಜ್ಯೇಷ್ಠಃ ಶ್ರೇಷ್ಠಶ್ಚ ವೈ ದ್ವಿಜಃ॥
ಪತ್ಯಭಾವೇ ಯಥಾ ಸ್ತ್ರೀ ಹಿ ದೇವರಂ ಕುರುತೇ ಪತಿಮ್।
ಆನಂತರ್ಯಾತ್ ತಥಾ ಕ್ಷತ್ರಂ ಪೃಥಿವೀ ಕುರುತೇ ಪತಿಮ್॥ – ೭೪/೧೩,೧೪

ಆಶ್ರಯಿಸುತ್ತಾರೆ. ರಾಜನಿಂದ ರಕ್ಷಿಸಲ್ಪಟ್ಟ ಪ್ರಜೆಗಳು ಆಚರಿಸುವ ಧರ್ಮದ ನಾಲ್ಕನೆ ಒಂದು ಭಾಗ ಫಲವನ್ನು ರಾಜನು ಹೊಂದುತ್ತಾನೆ.

ದೇವತೆಗಳು, ಮನುಷ್ಯರು, ಪಿತೃದೇವತೆಗಳು, ಗಂಧರ್ವೋರಗ ರಾಕ್ಷಸರು ಯಜ್ಞವನ್ನೇ ಉಪಜೀವಿಸಿಕೊಂಡಿರುತ್ತಾರೆ. ರಾಜನಿಲ್ಲದ ದೇಶದಲ್ಲಿ ಯಜ್ಞಾದಿಗಳು ನಡೆಯುವುದಿಲ್ಲ.

ಭೂಮಿಯಲ್ಲಿ ಕೊಡಲ್ಪಡುವ ಹವಿಸ್ಸು ಮೊದಲಾದವುಗಳಿಂದ ದೇವತೆಗಳು, ಪಿತೃಗಳು ಜೀವಿಸುತ್ತಾರೆ. ಆದಕಾರಣ ಈ ಧರ್ಮಾಚರಣೆಯ ಜವಾಬ್ದಾರಿ ರಾಜನ ಮೇಲೆ ಇದೆ.

ಅಭಯವನ್ನು ಕೊಡುವವನಿಗೆ ಮಹಾಫಲವಿದೆ. ಅದನ್ನು ಕೊಡುವವನು ರಾಜನೇ. ಎಲ್ಲ ದಾನಗಳಿಗಿಂತ ಪ್ರಾಣದಾನವು ಮೂರು ಲೋಕದಲ್ಲಿಯೇ ಅತ್ಯುತ್ತಮ. ಅದನ್ನು ಕೊಡುವವನು ರಾಜನೇ. ಅವನೇ ಇಂದ್ರ, ಯಮ, ಧರ್ಮ. ಹೀಗೆ ರಾಜನು ಅನೇಕ ರೂಪಗಳನ್ನು ಧರಿಸುತ್ತಾನೆ. ರಾಜನಿಂದಲೇ ರಾಷ್ಟ್ರವು ಧರಿಸಲ್ಪಟ್ಟಿದೆ (ಆದ್ದರಿಂದ ರಾಜಾ ರಾಷ್ಟ್ರಂ ಎನ್ನುತ್ತಾರೆ)[೧].

---

೧ ಯಃ ಕಶ್ಚಿತ್ ವಿಜಯೇದ್ ಭೂಮಿಂ ಬ್ರಾಹ್ಮಣಾಯ ನಿವೇದಯೇತ್ ।
ಶ್ರುತವೃತ್ತೋಪಪನ್ನಾಯ ಧರ್ಮಜ್ಞಾಯ ತಪಸ್ವಿನೇ ॥
ಸ್ವಧರ್ಮಪರಿತೃಪ್ತಾಯ ಯೋ ನ ವಿತ್ತಪರೋ ಭವೇತ್ ।
ಯೋ ರಾಜಾನಂ ನಯೇದ್ ಬುದ್ಧ್ಯಾ ಸರ್ವತಃ ಪರಿಪೂರ್ಣಯಾ ॥
ಬ್ರಾಹ್ಮಣೋ ಹಿ ಕುಲೇ ಜಾತಃ ಕೃತಪ್ರಜ್ಞೋ ವಿನೀತವಾಕ್ ।
ಶ್ರೇಯೋ ನಯತಿ ರಾಜಾನಂ ..........
ರಾಜಾ ಚರತಿ ಯಂ ಧರ್ಮಂ ಬ್ರಾಹ್ಮಣೇನ ನಿದರ್ಶಿತಮ್ ।
ತಸ್ಯ ಧರ್ಮಸ್ಯ ಸರ್ವಸ್ಯ ಭಾಗೀ ರಾಜಪುರೋಹಿತಃ ॥
ಏವಮೇವ ಪ್ರಜಾಃ ಸರ್ವಾ ರಾಜಾನಮಭಿಸಂಶ್ರಿತಾಃ ।
ಬ್ರಾಹ್ಮಣಂ ಚ ಸುವಿದ್ವಾಂಸಃ ರಾಜಶಾಸ್ತ್ರವಿಪಶ್ಚಿತಮ್ ।
ಸಮ್ಯಗ್ವೃತ್ತಾಃ ಸ್ವಧರ್ಮಸ್ಥಾ ನ ಕುತಶ್ಚಿತ್ ಭಯಾನ್ವಿತಾಃ ॥
ರಾಷ್ಟ್ರೇ ಚರತಿ ಯಂ ಧರ್ಮಂ ರಾಜ್ಞಾಸಾಧ್ವಭಿರಕ್ಷಿತಾಃ ।
ಚತುರ್ಥಂ ತಸ್ಯ ಧರ್ಮಸ್ಯ ರಾಜಾ ಭಾಗಂ ಸ ವಿಂದತಿ ॥
ದೇವಾ ಮನುಷ್ಯಾಃ ಪಿತರೋ ಗಂಧರ್ವೋರಗರಾಕ್ಷಸಃ ।
ಯಜ್ಞಮೇವೋಪಜೀವಂತಿ ನಾಸ್ತಿ ಚೇಷ್ಟಮರಾಜಕೇ ॥...
ಅಭಯಸ್ಯೈವ ಯೋ ದಾತಾ ತಸ್ಯೈವ ಸುಮಹತ್ ಫಲಮ್ ।
ನ ಹಿ ಪ್ರಾಣಸಮಂ ದಾನಂ ತ್ರಿಷು ಲೋಕೇಷು ವಿದ್ಯತೇ ॥
ಇಂದ್ರೋ ರಾಜಾ ಯಮೋ ರಾಜಾ ಧರ್ಮೋ ರಾಜಾ ತಥೈವ ಚ ।
ರಾಜಾ ಬಿಭರ್ತಿ ರೂಪಾಣಿ ರಾಜ್ಞಾಸರ್ವಮಿದಂ ಧೃತಮ್ ॥ – ೭೪/೧೬-೩೪

## ಸಂದೇಶಗಳು

ಸಂದೇಶಗಳು ಸ್ಪಷ್ಟವಾಗಿವೆ. ಸಕಲವರ್ಣಗಳ ಧಾರ್ಮಿಕ ನಡೆಯ ಜವಾಬ್ದಾರಿ ರಾಜನ ಮೇಲಿದ್ದರೆ ರಾಜನಿಗೂ ಮಾರ್ಗದರ್ಶನ ನೀಡಿ, ಅವನ ಶ್ರೇಯಸ್ಸನ್ನು ಬ್ರಾಹ್ಮಣವರ್ಣ ನಿರ್ವಹಿಸಬೇಕು. ಆದರೆ ಬ್ರಾಹ್ಮಣನಿಗೆ ಕ್ಷತ್ರಿಯನು ಆಳುವ ಭೂಮಿಯ ಸ್ವಾಮ್ಯ ಇದೆ. ಆದರೆ, ಅವನು ನಿಷ್ಕಿಂಚನನಾಗಿಯೇ ಬದುಕಬೇಕು. ತಪಸ್ಸೇ ಅವನ ವಿತ್ತ. ಎಲ್ಲವೂ ಅವನದೇ ಆದರೆ ಅವನ ವಾಸ ಆಶ್ರಮದಲ್ಲಿ. ಎಷ್ಟು ದ್ರವ್ಯವೂ ಇರದು. ಅಂತಹ ಅದ್ಭುತ ಐಶ್ವರ್ಯ ಬ್ರಾಹ್ಮಣನದು. ಚಕ್ರವರ್ತಿಯೂ ಅವನ ಸೇವಕ. ಆದ್ದರಿಂದ ಬ್ರಾಹ್ಮಣ ಸರ್ವವರ್ಣಗುರು, ಜ್ಯೇಷ್ಠ ಹಾಗೂ ಶ್ರೇಷ್ಠ ಸ್ವಧರ್ಮಾನುಷ್ಠಾನ ತೃಪ್ತಿಯೇ ಅವನ ವಿತ್ತ. ಆದರೆ ಭೌತಿಕ ವಿತ್ತಪರನಲ್ಲ ವಿಪ್ರ. ಸದಾ ಉಪವಾಸ, ವ್ರತಪರಜೀವನ ಬ್ರಾಹ್ಮಣನದು. ಹಾಗಿದ್ದಾಗಲೇ ಅವನನ್ನು ಎಲ್ಲರೂ ಆಶ್ರಯಿಸುತ್ತಾರೆ.

# ೧೬೬. ಐಲ-ಕಾಶ್ಯಪರ ಸಂವಾದ

(ವಿ.ಸೂ.: ಪಲಿಮಾರುಮಠದ ಪ್ರಕಾಶನದಲ್ಲಿ ಇದು ೭೫ನೇ ಅಧ್ಯಾಯ; ಗೀತಾಪ್ರೆಸ್ ಪ್ರಕಾಶನದಲ್ಲಿ ೭೩. ನೇ ಅಧ್ಯಾಯ; ೧ರಲ್ಲಿ ಶ್ಲೋಕಸಂಖ್ಯೆ ೭೦, ಮತ್ತೊಂದರಲ್ಲಿ ೩೨ ಮಾತ್ರ. ಐಲ ಕಶ್ಯಪರ ಸಂವಾದದ ಶ್ಲೋಕಗಳು ಎರಡರಲ್ಲೂ ೨೬ ಇವೆ. ಅಲ್ಲಲ್ಲಿ ಪಾಠಾಂತರ ಬಿಟ್ಟರೆ ಒಂದೇ ತೆರನಾಗಿವೆ ಶ್ಲೋಕಗಳು. ಉಳಿದ ಶ್ಲೋಕಗಳು ೨ರಲ್ಲಿ ಪ್ರಕ್ಷಿಪ್ತವೇ ಜಾಸ್ತಿ.)

ಧರ್ಮರಾಜನ ಪ್ರಶ್ನೆ 'ರಾಜನು ಎಂತಹ ಪರೋಹಿತನನ್ನು ಮಾಡಿಕೊಳ್ಳಬೇಕು? ಅವನ ಬಣ್ಣ ಹೇಗಿರಬೇಕು? ಅವನ ಕಾರ್ಯವೇನು? (ಎಂತಹುದು?). ಈ ಪ್ರಶ್ನೆಯು ಎರಡಲ್ಲೂ ಇಲ್ಲ. ಆದ್ದರಿಂದ ಅಲ್ಲಿ ಉತ್ತರವೂ ಇಲ್ಲ. ಆದರೆ ೧ರಲ್ಲಿ ಪುರೋಹಿತನ ಬಣ್ಣ ಬಿಳಿ, ಕೆಂಪು, ಕಂದು (ಶ್ಯಾಮ) ಇರಬಹುದು. ಅವನು ಕೋಪರಹಿತನೂ, ಮನಶ್ಚಾಂಚಲ್ಯವಿಲ್ಲದವನೂ, ಜಿತೇಂದ್ರಿಯನೂ ರೋಗರಹಿತನೂ, ಸುಖಿಯೂ ಆಗಿರಬೇಕು. ಅವನು ಬಹುಶ್ರುತನಾಗಿರಬೇಕು (ವಿವಿಧ ಶಾಸ್ತ್ರಗಳಲ್ಲಿ ಪಾರಂಗತನಾಗಿರಬೇಕು). ಧರ್ಮಾರ್ಥಗಳೆರಡನ್ನೂ ಚೆನ್ನಾಗಿ ತಿಳಿದವನನ್ನು ಪುರೋಹಿತನನ್ನಾಗಿ ಮಾಡಿಕೊಳ್ಳಬೇಕು.

ಪುರೋಹಿತನ ಗುಣಧರ್ಮಗಳನ್ನು ಹೇಳುವ ಶುಕ್ರಾಚಾರ್ಯರು ನಿರೂಪಿಸಿದವೆಂದು ಹೇಳಲಾದ ಶ್ಲೋಕಗಳು ಎರಡರಲ್ಲೂ ಇಲ್ಲ. ೧ರಲ್ಲಿರುವ ಶ್ಲೋಕಾಭಿಪ್ರಾಯಗಳು ಹೀಗಿವೆ.

೧. ಪುರೋಹಿತನಿರದ ರಾಜನು ಉಚ್ಛಿಷ್ಟನಾಗುತ್ತಾನೆ (ಎಂಜಲಾಗುತ್ತಾನೆ). ಅಂತಹವನು ರಾಕ್ಷಸ, ಅಸುರ, ಪಿಶಾಚಿ, ಉರಗ, ಪಕ್ಷಿ, ಶತ್ರುಗಳಿಂದ ವಧ್ಯನಾಗುತ್ತಾನೆ[1].

೨. ಎಲ್ಲ ಯಜ್ಞಗಳಲ್ಲಿ ಅಥರ್ವಣವೇದ ಬಲ್ಲವನಿಗೆ ಬ್ರಹ್ಮಸ್ಥಾನ ಕೊಡಬೇಕು. ರಾಜನ ಎಲ್ಲ ಕರ್ಮಗಳನ್ನು ಅಥರ್ವಣವೇದದಿಂದಲೇ ಮಾಡಿಸಬೇಕು[2].

---

೧ ಶ್ಲೋಕಾಶ್ಚೋಶನಸಾ ಗೀತಾಸ್ತಾನ್ ನಿಬೋಧ ಯುಧಿಷ್ಠಿರ।
ಉಚ್ಛಿಷ್ಟಃ ಸ ಭವೇದ್ ರಾಜಾ ಯಸ್ಯ ನಾಸ್ತಿ ಪುರೋಹಿತಃ॥
ರಕ್ಷಸಾಮಸುರಾಣಾಂ ಚ ಪಿಶಾಚೋರಗಪಕ್ಷಿಣಾಮ್।
ಶತ್ರೂಣಾಂ ಚ ಭವೇದ್ ವಧ್ಯೋ ಯಸ್ಯ ನಾಸ್ತಿ ಪುರೋಹಿತಃ॥ – ೭೫/೫,೬

೨ ಬ್ರಹ್ಮತ್ವಂ ಸರ್ವಯಜ್ಞೇಷು ಕುರ್ವೀಥಾಥರ್ವಣೋ ದ್ವಿಜಃ।
ರಾಜ್ಞಾಶ್ಚಾಥರ್ವವೇದೇನ ಸರ್ವಕರ್ಮಾಣಿ ಕಾರಯೇತ್॥ – ೭೫/೭

೩. ಅರಮನೆ, ರಾಜಧಾನಿ, ಗೀತನೃತ್ಯಾದಿ ಸ್ಥಳಗಳಲ್ಲಿ ಮತ್ತು ರಾಜನ ಸಾಮಂತರು ಮೊದಲಾದವರಿಗೆ ಸಂಭವಿಸುವ ಅಮಂಗಳಗಳನ್ನು ಪುರೋಹಿತನು ಪ್ರಾಯಶ್ಚಿತ್ತಾದಿಗಳಿಂದ ಶುಚಿಗೊಳಿಸಬೇಕು.

೪. ರಾಜನಿಗಿರುವ ಏಳುವಿಧ ಮಲಗಳನ್ನು ಪುರೋಹಿತನು ರುದ್ರದೇವತಾಕ ಹೋಮಗಳಿಂದ, ಶಾಂತಿಗಳಿಂದ, ಶುಕ್ರ, ಬೃಹಸ್ಪತಿಗಳ ವಿಧಾನಾನುಸಾರ ನಾಶ ಮಾಡಬೇಕು.

೫. ಹೀಗೆ ಪ್ರಜಾಪಾಲನೆಯಲ್ಲಿ ರತನಾದ ರಾಜನು ಈ ಮಲಗಳಿಂದ ಮುಕ್ತನಾಗಿ ಅಮಾತ್ಯ ಹಾಗೂ ಪುರೋಹಿತನೊಡನೆ ಸ್ವರ್ಗಕ್ಕೆ ಹೋಗುತ್ತಾನೆ[೧].

೬. ರಾಜಪುರೋಹಿತನ ಬಗ್ಗೆ ಬೃಹಸ್ಪತ್ಯಾಚಾರ್ಯರು ಹೇಳಿದ ಮಾತುಗಳು ಹೀಗಿವೆ.

i) ಋಗ್ವೇದ, ಸಾಮವೇದ, ಯಜುರ್ವೇದಗಳಲ್ಲಿ ವಾಜಸನೇಯ ಶಾಖೆಗಳಲ್ಲಿ ಹೇಳಲಾದ ರಾಜರ ಶಾಂತಿಕ, ಪೌಷ್ಟಿಕ, ಅರಿಷ್ಟನಿವಾರಕ ಅಭಿಚಾರಾದಿಗಳು ಹೇಳಿಲ್ಲ. ಆದರೆ ರಾಜಪುರೋಹಿತನು ವಾಜಸನೇಯಶಾಖೆಯವನೇ ಆಗಿರಬೇಕು. ಮಾಧ್ಯಂದಿನ ಶಾಖಾ ಪ್ರವರ್ತಕರಾದ ಯಾಜ್ಞವಲ್ಕ್ಯರು ಇವುಗಳನ್ನು ಬ್ರಹ್ಮದೇವರಿಗೆ ಸಮ್ಮತವಾಗಿ ಹೇಳಿದ್ದಾರೆ[೨].

ii) ಋಗ್ವೇದಿಯಾದ, ಯಜುರ್ವೇದಿಯಾದ ಅಥವಾ ಸಾಮವೇದಿಯಾದ ಪುರೋ-ಹಿತನನ್ನು ಬಿಡಬೇಕು. ಇವರು ಪುರೋಹಿತರಾದರೆ ಕ್ರಮವಾಗಿ ರಾಷ್ಟ್ರ, ಸೈನ್ಯ, ರಾಜನೇ ನಾಶವಾಗುತ್ತಾರೆ. ಆದ್ದರಿಂದ ಮಾಧ್ಯಂದಿನಶಾಖೆಯಾದ ವಾಜಸನೇಯ ಶಾಖೆಯವನೇ ಪುರೋಹಿತನಾಗಿಬೇಕು[೩].

iii) ರಾಜನು ರೋಗಿಯಾದ ಋತ್ವಿಜನನ್ನು ಪುರೋಹಿತನನ್ನಾಗಿ ಮಾಡಿ-ಕೊಳ್ಳಬಾರದು[೪].

---

೧ ರೌದ್ರೈರ್ಹೋಮೈರ್ಮಹಾಶಾಂತ್ಯಾ ಧೃತಕಂಬಲಕರ್ಮಣಾ ।
ಭೃಗ್ವಂಗಿರೋ ವಿಧಿಜ್ಞೋ ವೈ ಪುರೋಧಾ ನಿರ್ಣುದೇ ಮಲಾತ್ ॥ - ೭೫/೧೪

೨ ಋಗ್ವೇದೇ ಸಾಮವೇದೇ ಚ ಯಜುರ್ವೇದೇ ಚ ವಾಜಿನಾಮ್ ।
ನ ನಿರ್ದಿಷ್ಟಾನಿ ಕರ್ಮಾಣಿ ತ್ರಿಷು ಸ್ಥಾನೇಷು ಭೂಭೃತಾಮ್ ।
ಶಾಂತಿಕಂ ಪೌಷ್ಟಿಕಂ ಚೈವ ಅರಿಷ್ಟಾನಾಂ ಚ ಶಾತನಮ್ ॥
ಶಬ್ದಿತಾ ಯಾಜ್ಞವಲ್ಕ್ಯೇನ ಯಜ್ಞಾ ಆಹವಮೀಹತಾ ।
ಪ್ರಶಿಷ್ಟಾನಾಂ ವರಿಷ್ಠೇನ ಬ್ರಹ್ಮಣಃ ಸಮ್ಮತೇ ವಿಭೋಃ ॥ - ೭೫/೧೭-೧೯

೩ ಬಹ್ವೃಚಂ ಸಾಮಗಂ ಚೈವ ವಾಜಿನಂ ಚ ವಿವರ್ಜಯೇತ್ ।
ಬಹ್ವೃಚೋ ರಾಷ್ಟ್ರನಾಶಾಯ ರಾಜನಾಶಾಯ ಸಾಮಗಃ ॥
ಅಧ್ವರ್ಯುರ್ಬಲನಾಶಾಯ ಪ್ರೋಕ್ತಾ ವಾಜಸನೇಯಕಾಃ ॥ - ೭೫/೨೦

೪ ರೋಗಿಣಂ ಋತ್ವಿಜಂ ಚೈವ ವರ್ಜಯೇಚ್ಚ ಪುರೋಹಿತಮ್ ॥ - ೭೫/೩೩

iv) ಯಾರುಪುರೋಹಿತರಾಗಿದ್ದಾಗಒಳ್ಳೆಯನಕ್ಷತ್ರದಲ್ಲಿರಾಜಪದವಿಹೊಂದಿರುವನೋ, ಯಾರು ರಾಜಶಾಸ್ತ್ರದಲ್ಲಿ ನಿಪುಣರೋ ಅಂತಹವರು ರಾಜನಿಗೆ ಪುರೋಹಿತರಾಗಲು ಯೋಗ್ಯರು[೧].

v) ವಾಜಸನೇಯ ಶಾಖೆಯ ಬ್ರಾಹ್ಮಣ ಸಿಗದಿದ್ದಾಗ ರಾಜನೀತಿ ಬಲ್ಲ ನಾಲ್ಕು ವೇದಗಳಲ್ಲಿ ಯಾವುದಾದರೂ ವೇದಬಲ್ಲವನನ್ನು ಪುರೋಹಿತನನ್ನಾಗಿ ಮಾಡಿಕೊಳ್ಳಬಹುದು[೨].

೭. ರಾಜ ಹಾಗೂ ಪುರೋಹಿತರು ಪರಸ್ಪರ ಸಹೃದಯರಾಗಿಯೂ, ಪ್ರಜೆಗಳಿಗೆ ಸಮ್ಮತರಾಗಿಯೂ, ಸಮಾನದೃಷ್ಟಿಯುಳ್ಳವರಾಗಿಯೂ ಇದ್ದಾಗ ಪ್ರಜೆಗಳು ಸುಖವಾಗಿ-ರುತ್ತಾರೆ. ಬ್ರಾಹ್ಮಣ ಕ್ಷತ್ರಿಯರನ್ನು ಅವಮಾನಗೊಳಿಸಿದರೆ ಪ್ರಜಾನಾಶವಾಗುತ್ತದೆ. ಏಕೆಂದರೆ ಇವರೇ ಎಲ್ಲ ಧರ್ಮಗಳಿಗೆ ಮೂಲ ಎಂದು ಹೇಳಲಾಗಿದೆ[೩].

(ವಿ.ಸೂ.: ಶ್ಲೋಕ ೨೧ರಿಂದ ೪೪ರವರೆಗೆ ೧. ಪಲಿಮಾರುಮಠ ಪ್ರಕಾಶನದಲ್ಲಿ ಭೀಷ್ಮರ ಮಾತುಗಳು ೨ರಲ್ಲಿ ಭೀಷ್ಮರ ಮಾತುಗಳು ಕೇವಲ ೬)

ನಂತರ ಭೀಷ್ಮರು ಈ ವಿಷಯದಲ್ಲಿ ಕಶ್ಯಪ ಮತ್ತು ಐಲರ (ಪುರೂರವರಾಜ) ಸಂವಾದರೂಪ ಇತಿಹಾಸವನ್ನು ಧರ್ಮರಾಜನಿಗೆ ಹೇಳುತ್ತಾರೆ (ವಿಷಯದಲ್ಲಿ ಎರಡೂ ಪ್ರಕಾಶನಗಳಲ್ಲಿ ಪಾಠಾಂತರಗಳು ಸಾಕಷ್ಟಿವೆ).

ಪುರೂರವನು (ಐಲನು) ಪ್ರಶ್ನಿಸುತ್ತಾನೆ (ಕಶ್ಯಪರನ್ನು).

ಬ್ರಾಹ್ಮಣರು ಕ್ಷತ್ರಿಯರನ್ನು ತೊರೆದರೆ ಅಥವಾ ಕ್ಷತ್ರಿಯರು ಬ್ರಾಹ್ಮಣರನ್ನ ತೊರೆದರೆ ಉತ್ತಮನಾದ ಬಲವು ಇವೆರಡರಲ್ಲಿ ಯಾರನ್ನು ಸೇವಿಸುತ್ತದೆ? ಹಾಗೆಯೇ ಆಗ ದುರ್ಬಲತೆಯನ್ನು ಯಾರು ಧರಿಸುತ್ತಾರೆ?[೪] (ಉಳಿದ ವರ್ಣಗಳು ಇಬ್ಬರಲ್ಲಿ ಯಾರನ್ನು ಆಶ್ರಯಿಸುತ್ತಾರೆ? ಈ ಇಬ್ಬರಲ್ಲಿ ಯಾರು ಎಲ್ಲರಿಗೂ ಆಶ್ರಯವನ್ನು ನೀಡಬಲ್ಲರು?)

---

೧ ನಕ್ಷತ್ರಸ್ಯಾನುಕೂಲ್ಯೇನ ಯಸ್ಮಿನ್ ಜಾತೋ ಜನೇಶ್ವರಃ।
ರಾಜಶಾಸ್ತ್ರವಿನೀತಶ್ಚ ಶ್ರೇಯಾನ್ ರಾಜ್ಞಃ ಪುರೋಹಿತಃ॥ - ೭೫/೩೫

೨ ವಾಜಿನಂ ತದಭಾವೇ ಚ ಚಾರಕಾಧ್ವರ್ಯುಕಾ ಅಪಿ।
ಬಹ್ವೃಚಂ ಸಾಮಗಂ ಚೈವ ನೀತಿಶಾಸ್ತ್ರಕೃತಶ್ರಮಾನ್॥
ಕೃತಿನೋಽಥರ್ವಣೋ ವೇದೇ ಸ್ಥಾಪಯೇತ್ ತು ಪುರೋಹಿತಾನ್॥ - ೭೫/೩೭,೩೮

೩. ಪರಸ್ಪರಸ್ಯ ಸುಹೃದೌ ಸಮ್ಮತೌ ಸಮಚೇತಸೌ।
ಬ್ರಹ್ಮಕ್ಷತ್ರಸ್ಯ ಸಮ್ಮಾನಾತ್ ಪ್ರಜಾಃ ಸುಖಮವಾಪ್ನುಯುಃ॥ -೭೫/೪೨

೪ ಯದಾ ಹಿ ಬ್ರಹ್ಮ ಪ್ರಜಹಾತಿ ಕ್ಷತ್ರಂ ಕ್ಷತ್ರಂ ಯದಾ ವಾ ಪ್ರಜಹಾತಿ ಬ್ರಹ್ಮ।
*ಅನ್ವಗ್ಬಲಂ ದಸ್ಯವಸ್ತದ್ಬಲಂ ಭಜಂತೇ ಬಲ್ಯಂ ತಥಾ ತತ್ರ ವಿಯಂತಿ ಸಂತಃ॥
★ ಅನ್ಯದ್ಬಲಂ ಕತಮೇಽಸ್ಮಿನ್ ಭಜಂತೇ ತಥಾ ವರ್ಣಾಃ ಕತಮೇಽಸ್ಮಿನ್ ಧಿಯಂತೇ (ಪಾ.)
- ೭೫/೪೫

ಇದಕ್ಕೆ ಉತ್ತರವನ್ನು ಕಶ್ಯಪರು ಹತ್ತು ಶ್ಲೋಕಗಳಿಂದ ನೀಡಿದ್ದಾರೆ. ಅದರ ಸಾರ ಹೀಗಿದೆ.

೧. ಬ್ರಾಹ್ಮಣ ಕ್ಷತ್ರಿಯರಿಗೆ ವಿರೋಧವುಂಟಾದರೆ ರಾಷ್ಟ್ರಾಭಿವೃದ್ಧಿ ಕುಂಠಿತವಾಗುತ್ತದೆ. ಕಳ್ಳಕಾಕರು ಬಲಿಷ್ಠರಾಗುತ್ತಾರೆ[1].

೨. ಕ್ಷತ್ರಿಯರು ಬ್ರಾಹ್ಮಣರನ್ನು ತ್ಯಜಿಸಿದಾಗ ಪಶುಸಂಪತ್ತು ಕ್ಷೀಣವಾಗುತ್ತದೆ (ಹೋರಿಗಳು ಅಭಿವೃದ್ಧಿ ಹೊಂದುವುದಿಲ್ಲ). ಹಸುಗಳು ಹಾಲುಗರೆಯುವುದಿಲ್ಲ. ಯಜ್ಞಗಳು ನಿಲ್ಲುತ್ತವೆ. ಬ್ರಾಹ್ಮಣಪುತ್ರರು ವೇದಾಧ್ಯಯನ ಮಾಡುವುದಿಲ್ಲ[2].

೩. ಬ್ರಾಹ್ಮಣರು ಕ್ಷತ್ರಿಯರನ್ನು ತ್ಯಜಿಸಿದರೆ ಪ್ರಜೆಗಳು ಧರ್ಮಮಾರ್ಗ ಬಿಡುತ್ತಾರೆ[3].

೪. ಇವೆರಡು ವರ್ಣಗಳು ಪರಸ್ಪರರಿಗೆ ಮೂಲ. ಅವರಲ್ಲಿ ವಿರೋಧವಾದರೆ ಚಾತುರ್ವರ್ಣ್ಯದ ಎಲ್ಲ ಪ್ರಜೆಗಳೂ ಮೋಹವಶರಾಗುತ್ತಾರೆ[4].

೫. ಬ್ರಾಹ್ಮಣನೆಂಬ ವೃಕ್ಷವು ರಕ್ಷಿತವಾದರೆ ಅಲ್ಲಿ ಸುಖಸಂಪತ್ತುಗಳ ಮಳೆಗರೆಯಲ್ಪಡುತ್ತದೆ. ಇಲ್ಲದಿದ್ದರೆ ಯಾವಾಗಲೂ ಕಣ್ಣೀರ ಮಳೆ, ಪಾಪದ ಪ್ರವಾಹ[5].

೬. ಬ್ರಾಹ್ಮಣನು ಕ್ಷತ್ರಿಯ ಸಹಾಯ ಕೇಳದಿರಲು ಅಲ್ಲಿ ಉತ್ಪಾತಗಳಾಗುತ್ತವೆ[6].

೭. ಎಲ್ಲಿ ಪಾಪಿಯು ಬ್ರಾಹ್ಮಣರನ್ನು ಸ್ತ್ರೀಯರನ್ನು ಕೊಂದು ಸಭೆಯಲ್ಲಿ ರಾಜನ ಭಯವಿಲ್ಲದೆ ಪ್ರಶಂಸೆಗಳಿಸುತ್ತಾನೋ ಅಲ್ಲಿ ಕ್ಷತ್ರಿಯನಿಗೆ ಭಯ ನಿಶ್ಚಿತ[7].

೮. ಆಗ ಭಗವಂತನು ಕೋಪಗೊಂಡು ದುಷ್ಟರನ್ನೆಲ್ಲ ಸಂಹಾರ ಮಾಡುತ್ತಾನೆ[8].

---

೧ ವೃದ್ಧಂ ರಾಷ್ಟ್ರಂ ಭವತಿ ಕ್ಷತ್ರಿಯಸ್ಯ ಬ್ರಹ್ಮಕ್ಷತ್ರಂ ಯತ್ರ ವಿರುಧ್ಯತೇ ಹ।
ಅನ್ವಗ್ ಬಲಂ ದಸ್ಯವಸ್ತದ್ ಭಜಂತೇ ಅಬಲ್ಯಂ ತಥಾ ತತ್ರ ವಿಯಂತಿ ಸಂತಃ॥ - ೭೫/೪೬

೨ ನೈಷಾಮುಕ್ಷಾವರ್ಧತೇ ನೋತ ಉಸ್ರಾ ನ ಗರ್ಗರೀ ಮಥ್ಯತೇ ನೋ ಯಜಂತೇ।
ನೈಷಾಂ ಪುತ್ರಾ ವೇದಮಧೀಯತೇ ಚ ಯದಾ ಬ್ರಹ್ಮ ಕ್ಷತ್ರಿಯಾ ಸಂತ್ಯಜಂತಿ॥ - ೭೫/೪೭

೩ ಅಪಧ್ವಸ್ತಾ ದಸ್ಯುಭೂತಾ ಭವಂತಿ ಯೇ ಬ್ರಾಹ್ಮಣಾಃ ಕ್ಷತ್ರಿಯಾನ್ ಸಂತ್ಯಜಂತಿ॥ - ೭೫/೪೮

೪ ಏತೌ ಹಿ ನಿತ್ಯಸಂಯುಕ್ತಾವಿತರೇತರಧಾರಣೇ।
ಕ್ಷತ್ರಂ ಹಿ ಬ್ರಹ್ಮಣೋ ಯೋನಿರ್ಯೋನಿಃ ಕ್ಷತ್ರಸ್ಯ ಚ ದ್ವಿಜಾಃ॥ - ೭೫/೪೯

೫ ಬ್ರಹ್ಮವೃಕ್ಷೋ ರಕ್ಷ್ಯಮಾಣೋ ಮಧು ಹೇಮ ಚ ವರ್ಷತಿ।
ಅರಕ್ಷ್ಯಮಾಣಃ ಸತತಮಶ್ರು ಪಾಪಂ ಚ ವರ್ಷತಿ॥ - ೭೫/೫೨

೬ ಅಬ್ರಹ್ಮಚಾರೀ ಚರಣಾದಪೇತೋ ಯದಾ ಬ್ರಹ್ಮಾಬ್ರಹ್ಮಣಿ ತ್ರಾಣಮಿಚ್ಛೇತ್।
ಉತ್ಪಾದವತ್ ವರ್ಷತಿ ತತ್ರ ದೇವಃ ತತ್ರಾಭೀಕ್ಷ್ಣಂ ದುಷ್ಟಭಾಷ್ಯಾವಿಶಂತಿ॥ - ೭೫/೫೩

೭ ಸ್ತ್ರಿಯಂ ಹತ್ವಾ ಬ್ರಾಹ್ಮಣಂ ವಾಪಿ ಪಾಪಃ ಸಭಾಯಾಂ ಯತ್ರ ಲಭತೇऽನುವಾದಮ್।
ರಾಜ್ಞಃ ಸಕಾಶೇ ನ ಬಿಭೇತಿ ಚಾ ಪಿ ತತೋ ಭಯಂ ಜಾಯತೇ ಕ್ಷತ್ರಿಯಸ್ಯ॥ - ೭೫/೫೪

೮ ಪಾಪೈಃ ಪಾಪೇ ಕ್ರಿಯಮಾಣೇऽತಿವೇಲಂ ತತೋ ರುದ್ರೋ ಜಾಯತೇ ದೇವ ಏಷಃ।
ಪಾಪೈಃ ಪಾಪಾ ಸಂಜನಯಂತಿ ರುದ್ರಂ ತತಃ ಸರ್ವಾನ್ ಸಾಧ್ವಸಾಧೂನ್ ಹಿನಸ್ತಿ॥ - ೭೫/೫೫

ಐಲನ ಪ್ರಶ್ನೆ – ಈ ರುದ್ರನು ಎಲ್ಲಿಂದ ಬರುತ್ತಾನೆ? ಎಂತಹವನು? ಯಾರಿಂದ ಈ ರುದ್ರ ಜನಿಸುತ್ತಾನೆ? ಅವನ ಬಗ್ಗೆ ಹೇಳಿರಿ?[೧]

ಕಶ್ಯಪರ ಉತ್ತರ – ಈ ರುದ್ರ ಸರ್ವಜೀವಾಂತರ್ಯಾಮಿ. ಅವನು ತನಗೆ ಆಶ್ರಯವಾದ ಆ ದೇಹವನ್ನೂ ಮತ್ತು ಇನ್ನೊಂದು ದೇಹವನ್ನೂ ನಾಶಮಾಡುತ್ತಾನೆ. ಅವನು ಬಿರುಗಾಳಿಗೆ ಹಾಗೂ ಉತ್ಪಾತಗಳಂತೆ ಇದ್ದಾನೆ. ಅವನ ರೂಪವು ದಾವಾಗ್ನಿಯ ಹಾಗೂ ಮೋಡಗಳ ರೂಪ ಹೋಲುತ್ತದೆ[೨].

ಐಲರ ಪ್ರಶ್ನೆ – ಭೂಮಿಯು ಸಜ್ಜನರನ್ನೂ, ದುರ್ಜನರನ್ನೂ ಧರಿಸುತ್ತದೆ. ಸೂರ್ಯನೂ ಹಾಗೆಯೇ ಉಷ್ಣತೆಯನ್ನು ಇಬ್ಬರಿಗೂ ಕೊಡುತ್ತಾನೆ. ವಾಯು ಬೀಸುವುದೂ ಹಾಗೆಯೇ. ಹಾಗಿದ್ದರೂ ದುರ್ಜನರ ಸಹವಾಸದಿಂದ ಸಜ್ಜನರಿಗೆ ಹಾನಿ ಆಗುವುದಾದರೆ ದುರ್ಜನರನ್ನು ಭೂಮಿ ಏಕೆ ಧರಿಸುತ್ತದೆ?[೩]

ಕಶ್ಯಪರ ಉತ್ತರ – ಈ ಲೋಕದಲ್ಲಿ ಹೀಗಿದ್ದರೂ, ಪರಲೋಕದಲ್ಲಿ ಹಾಗೆ ಇಲ್ಲ. ಪರಲೋಕದಲ್ಲಿ ಇಬ್ಬರಿಗೂ ವ್ಯತ್ಯಾಸಗಳಿರುತ್ತವೆ.[೪]

ಇದೇ ಪ್ರಸಂಗದಲ್ಲಿ ಕಶ್ಯಪರು ಮೋಕ್ಷ ಹಾಗೂ ತಮಸ್ಸಿನ ವರ್ಣನೆಗಳನ್ನು ಮಾಡಿದ್ದಾರೆ[೫]. ಮೋಕ್ಷದಲ್ಲಿ ಬರಿ ಪುಣ್ಯಫಲ, ತಮಸ್ಸಿನಲ್ಲಿ ಪಾಪದಫಲ, ದುಃಖಮಾತ್ರವೆಂದು ಲಕ್ಷಾಲಂಕಾರದಲ್ಲಿ ವ್ಯಾಖ್ಯಾನಿಸಲಾಗಿದೆ.

ಆದ್ದರಿಂದ ಬ್ರಾಹ್ಮಣ ಕ್ಷತ್ರಿಯರಲ್ಲಿ ಪರಸ್ಪರ ವಿರೋಧ ತಡೆಯದಿದ್ದರೆ ಪ್ರಜೆಗಳಿಗೆ ದುಃಖ ಅದಕ್ಕೋಸ್ಕರ ಅನೇಕ ವಿದ್ಯೆ ಬಲ್ಲವನನ್ನು ಪುರೋಹಿತನನಾಗಿ ಮಾಡಬೇಕು. ಏಕೆಂದರೆ ಅವನೇ ಎಲ್ಲರಿಗಿಂತ ಶ್ರೇಷ್ಠ. ಸೃಷ್ಟಿಯಲ್ಲಿಯೂ ಮೊದಲೇ ಬ್ರಾಹ್ಮಣನು ಹುಟ್ಟಿದ್ದು, ನಂತರ

---

೧ ಕುತೋ ರುದ್ರಃ ಕೀದೃಶೋ ವಾಪಿ ರುದ್ರಃ ಸತ್ತ್ವೈಃ ಸತ್ತ್ವಂ ದೃಶ್ಯತೇ ವಧ್ಯಮಾನಮ್ ।
ಏತದ್ ವಿದ್ವನ್ ಕಶ್ಯಪ ಮೇ ಪ್ರಚಕ್ಷ್ವ ಯತೋ ರುದ್ರೋ ಜಾಯತೇ ದೇವ ಏಷಃ ॥ – ೭೫/೫೬

೨ ಆತ್ಮಾ ರುದ್ರೋ ಹೃದಯೇ ಮಾನವಾನಾಂ ಸ್ವಂ ಸ್ವಂ ದೇಹಂ ಪರದೇಹಂ ಚ ಹಂತಿ ।
ವಾತೋತ್ಪಾತೈಃ ಸದೃಶಂ ರುದ್ರಮಾಶುರ್ದಾವೈರ್ಜೀಮೂತೈಃ ಸದೃಶಂ ರೂಪಮಸ್ಯ ॥ – ೭೫/೫೭

೩ ಸಾಧ್ವಸಾಧೂನ್ ಧಾರಯತೀಹ ಭೂಮಿಃ ಸಾಧ್ವಸಾಧೂಂಸ್ತಾಪಯತೀಹ ಸೂರ್ಯಃ ।
ಸಾಧ್ವಸಾಧೂನ್ ವಾತಯತೀಹ ವಾಯುರಾಪಸ್ತಥಾ ಸಾಧ್ವಸಾಧೂನ್ ವಹಂತಿ ॥ – ೭೫/೬೨

೪ ಏವಮಸ್ಮಿನ್ ವರ್ತತೇ ಲೋಕ ಏವ ನಾಮುತ್ರೈವಂ ವರ್ತತೇ ರಾಜಪುತ್ರಃ ।
ಪ್ರೇತ್ಯೈತಯೋರಂತರವಾನ್ ವಿಶೇಷೋ ಯೋ ವೈ ಪುಣ್ಯಂ ಚರತೇ ಯಶ್ಚ ಪಾಪಮ್ ॥
– ೭೫/೬೩

೫ ಪುಣಸ್ಯ ಲೋಕೋ ಮಧುಮಾನ್ ಘೃತಾರ್ಚಿರ್ಹಿರಣ್ಯಜ್ಯೋತಿರಮೃತಸ್ಯ ನಾಭಿಃ ।
ತತ್ರ ಪ್ರೇತ್ಯ ಮೋದತೇ ಪುಣ್ಯಕಾರೀ ನ ತತ್ರ ಮೃತ್ಯುರ್ನ ಜರಾ ನೋತ ದುಃಖಮ್ ॥ – ೭೫/೬೪

೬ ಪಾಪಸ್ಯ ಲೋಕೋ ನಿರಯೋಽಪ್ರಕಾಶೋ ನಿತ್ಯದುಃಖಂ ಶೋಕಭೂಯಿಷ್ಠಮೇವ ।

ಇತರರು. ಆದ್ದರಿಂದ ಬ್ರಾಹ್ಮಣನೇ ಮಾನ್ಯನೂ, ಪೂಜ್ಯನೂ ಆಗಿದ್ದಾನೆ. ಹೀಗಾಗಿ ಎಲ್ಲ ಶ್ರೇಷ್ಠವಾದ ವಸ್ತುಗಳೆಲ್ಲವನ್ನು ಸಂಪಾದಿಸಿದ ಮೇಲೆ ಬ್ರಾಹ್ಮಣರಿಗೇ ನಿವೇದಿಸಬೇಕು. ಅವನೇ ಅದರ ಒಡೆಯ[೧].

ಆದ್ದರಿಂದ ಬಲಿಷ್ಠನಾದರೂ ಇದನ್ನು ಹೀಗೇ ಮಾಡಬೇಕು. ಬ್ರಹ್ಮಕುಲವು ಕ್ಷತ್ರಿಯನ ಕುಲವನ್ನೂ ಕ್ಷತ್ರಿಯಕುಲವು ಬ್ರಹ್ಮಕುಲವನ್ನೂ ಮುಂದೆ ತರುತ್ತದೆ (ಅಭಿವೃದ್ಧಿಗೊಳಿಸುತ್ತದೆ). ರಾಜನ ಉಳಿದ ಎಲ್ಲ ವಸ್ತುಗಳಿಗೂ ರಾಜಪುರೋಹಿತನೇ ಒಡೆಯ, ಸ್ವಾಮಿ ಎಂದು ಕಶ್ಯಪರು ಐಲನಿಗೆ ಹೇಳಿದುದನ್ನು ಭೀಷ್ಮರು ಧರ್ಮರಾಜನಿಗೆ ಹೇಳಿದರು.

**ಸಂದೇಶಗಳು ಸ್ಪಷ್ಟವಾಗಿಯೇ ಇವೆ.**

ಬ್ರಾಹ್ಮಣನ ಸದ್ಗುಣಗಳೆ ಅವನನ್ನು ಪುರೋಹಿತಪದವಿಗೆ ಅರ್ಹನನ್ನಾಗಿ ಮಾಡುತ್ತವೆ. ಸದ್ಗುಣರಹಿತನು ರಾಜನಿಗೂ, ರಾಜ್ಯಕ್ಕೂ ಕಂಟಕವೇ ಸರಿ.

*****

---

ತತ್ರಾತ್ಮಾನಂ ಶೋಚತೇ ಪಾಪಕರ್ಮಾ ಬಹ್ವೀಃ ಸಮಾಃ ಪ್ರಪತನ್ನಪ್ರತಿಷ್ಠಾಃ ॥ – ೭೫/೬೫

೧ ಪೂರ್ವಂ ಹಿ ಬ್ರಾಹ್ಮಣಾಃ ಸೃಷ್ಟಾ ಇತಿ ಧರ್ಮವಿದೋ ವಿದುಃ ।
ಜ್ಯೇಷ್ಠೇ ನಾಭಿಜನೇನಾಸ್ಯ ಪ್ರಾಪ್ತಂ ಸರ್ವಂ ಯದುತ್ತಮಮ್ ॥
ತಸ್ಮಾನ್ಮಾನ್ಯಶ್ಚ ಪೂಜ್ಯಶ್ಚ ಬ್ರಾಹ್ಮಣಃ ಪ್ರಸೃತಾಗ್ರಭುಕ್ ।
ಸರ್ವಂ ಶ್ರೇಷ್ಠಂ ವರಿಷ್ಠಂ ಚ ನಿವೇದ್ಯಂ ತಸ್ಯ ಧರ್ಮತಃ ॥ – ೭೫/೬೮,೬೯

# ೧೬೭. [1]ಜ್ಞಾತಿ ಸಂಬಂಧಿಗಳ ಸ್ವಭಾವ

ಧರ್ಮರಾಜನು ಭೀಷ್ಮರನ್ನು ಪ್ರಶ್ನಿಸುತ್ತಾನೆ.

ಜ್ಞಾತಿಗಳು, ಸಂಬಂಧಿಗಳ ಮಧ್ಯೆ (ಸ್ಪರ್ಧೆ, ಅಸೂಯೆಯಿಂದಾಗಿ) ವಿಶ್ವಾಸಾರ್ಹತೆ ಇಲ್ಲದಿದ್ದಾಗ, ಮಿತ್ರರನ್ನು ಹಾಗೂ ಶತ್ರುಗಳನ್ನು ಹೇಗೆ ಸುಧಾರಿಸುವುದು? (ಕಾರಣ ಒಬ್ಬರ ಪರವಾಗಿದ್ದರೆ ಮತ್ತೊಬ್ಬರು ಸಿಟ್ಟಾಗುತ್ತಾರೆ. ಮಿತ್ರರೂ ಶತ್ರುಗಳಾಗುತ್ತಾರೆ). ಎಲ್ಲರನ್ನು ಇಂತಹ ಸಂದರ್ಭದಲ್ಲಿ ವಶದಲ್ಲಿಟ್ಟುಕೊಳ್ಳುವುದು ಹೇಗೆ?

ಈ ಬಗ್ಗೆ ಭೀಷ್ಮನು ಕೃಷ್ಣನಾರದರ ಸಂವಾದರೂಪ ಇತಿಹಾಸವನ್ನು ಧರ್ಮರಾಜನಿಗೆ ಹೇಳುತ್ತಾನೆ.

ಶ್ರೀಕೃಷ್ಣನು ಹತ್ತು ಶ್ಲೋಕಗಳಿಂದ ತನ್ನ ಬಾಂಧವರ, ಜ್ಞಾತಿಗಳ ಮಧ್ಯೆ ಇರುವ ಸಂಬಂಧಸೂಕ್ಷ್ಮಗಳಿಂದಾಗಿ ಕ್ಲೇಶಗೊಂಡಿದ್ದೇನೆ. ಇದರಲ್ಲಿ ನನಗೂ ಹಾಗೂ ನನ್ನ ಜ್ಞಾತಿಗಳಿಗೂ ಯಾವುದು ಶ್ರೇಯಸ್ಕರ ಎಂದು ಕೇಳುತ್ತಾನೆ. ಶ್ರೀಕೃಷ್ಣನಿಗೆ ಕ್ಲೇಶವುಂಟು ಮಾಡುತ್ತಿರುವ ಸಮಸ್ಯೆಗಳನ್ನು ಹತ್ತು ಶ್ಲೋಕಗಳಿಂದ ಹೇಳುತ್ತಾನೆ. ಅದರ ಸಾರ ಹೀಗಿದೆ.

೧. ಸುಹೃತ್ ಅಲ್ಲದವನು ರಾಜನ ಸಮಾಲೋಚನೆಗೆ ಅರ್ಹನಲ್ಲ. ಸುಹೃತ್ ಆದರೂ ಪಂಡಿತನಲ್ಲದಿದ್ದರೂ, ಪಂಡಿತನಾದರೂ ಸುಹೃತ್ ಅಲ್ಲದವನೂ ಕೂಡಾ ರಾಜನ ಮಂತ್ರವನ್ನು (ನೀತಿ) ತಿಳಿಯಬಾರದು(ರಾಜನ ಮಂತ್ರಾಲೋಚನೆಗೆ ಯೋಗ್ಯನಾದವನು ಪಂಡಿತನೂ, ಸುಹೃತ್ತೂ ಆಗಿರಬೇಕು ಮತ್ತು ಜಿತೇಂದ್ರಿಯನಾಗಿರಬೇಕು).

೨. ನಾರದರೇ ನಾನು ಐಶ್ವರ್ಯವಂತನಾದರೂ ಜ್ಞಾತಿಗಳ ದಾಸ್ಯವನ್ನು ಮಾಡುತ್ತೇನೆ (ನಾನು ನನ್ನ ಐಶ್ವರ್ಯಪ್ರಭುತ್ವ ತೋರಿಸಿ, ಜ್ಞಾತಿಗಳು ದಾಸರಾಗಲಿ ಎಂದು ಇಚ್ಛೆ ಪಡುವುದಿಲ್ಲ). ನನ್ನಲ್ಲಿರುವ ಭೋಗಸಾಮಗ್ರಿಗಳಲ್ಲಿ ಅರ್ಧವನ್ನು ಬಂಧುಬಾಂಧವರಿಗೆ ಹಂಚಿ ಉಳಿದುದನ್ನು ನಾನು ಉಪಯೋಗಿಸುತ್ತೇನೆ. ನನ್ನ ಬಗ್ಗೆ ಬರುವ ಕೆಟ್ಟ ಮಾತುಗಳನ್ನು ನಾನು ಸಹಿಸುತ್ತೇನೆ. ಅವು ನನ್ನನ್ನು ಸದಾ ಸುಡುತ್ತವೆ[2].

---

೧ ಜ್ಞಾತಿ= ತಂದೆ ಹಾಗೂ ಅವರ ವಂಶದಲ್ಲಿ ಹುಟ್ಟಿದ ದಾಯಾದ(ದಿ)ಗಳು (ಚಿಕ್ಕಪ್ಪ, ದೊಡ್ಡಪ್ಪ ಅವರ ಮಕ್ಕಳು, ಮೊಮ್ಮಕ್ಕಳು ಮೊದಲಾದವರು). ಬಂಧುಗಳು, ನೆಂಟರು, ಸಂಬಂಧಿಗಳು.
ಸ್ಯುರ್ಜ್ಞಾತಯಃ ಸಗೋತ್ರಾಶ್ಚ ಸಪಿಂಡಾಸ್ತು ಸನಾಭಯಃ।
ಸ್ವಜನೋ ಬಾಂಧವೋ ಬಂಧುಃ। - ವೈಜಯಂತೀ ಕೋಶಃ।

೨ ದಾಸ್ಯಮೈಶ್ವರ್ಯವಾದೇನ ಜ್ಞಾತೀನಾಂ ವೈ(ನ) ಕರೋಮ್ಯಹಮ್।

೩. ನನ್ನ ಅಣ್ಣ ಸದಾ ಬಲವುಳ್ಳವನು ಮಗ ಗದಾ ಸುಕುಮಾರ. ಇನ್ನೊಬ್ಬ ಮಗ ಪ್ರದ್ಯುಮ್ನ ನನಗಿಂತ ರೂಪವಂತ (ರೂಪದಲ್ಲಿ ಅಧಿಕ, ಆದ್ದರಿಂದಲೇ ಗರ್ವಿ). ಇವರ ಮಧ್ಯ ನಾನು ಅಸಹಾಯಕ(ನಂತೆ ಇದ್ದೇನೆ. ಕೆಲವೊಮ್ಮೆ ಇವರು ಅತಿರೇಕಿಗಳಾದಾಗ ನಾನು ಅಸಹಾಯಕ).

೪. ಇತರೇ ಜ್ಞಾತಿಳು ಬಲಿಷ್ಠರೂ ಮತ್ತು ಅವರ ಸಮೀಪ ಹೋಗುವುದೂ ಅಸಾಧ್ಯ (ಅಷ್ಟು ಗರ್ವಿಷ್ಠರು). ಅಂಧಕ ವೃಷ್ಣಿಗಳು ನಿತ್ಯವೂ ಉದ್ಯಮಶೀಲರು.

ನಾರದರೇ ನೋಡಿ! ಆಹುಕ, ಅಕ್ರೂರರು ಯಾರಿಗೆ ಜ್ಞಾತಿಗಳಾಗಿದ್ದಾರೋ ಅವರಿಗೆ ಅದಕ್ಕಿಂತ ದುಃಖತರ ಯಾವುದಿದೆ? ಯಾರಿಗೆ ಅವರು ಜ್ಞಾತಿಗಳಲ್ಲವೋ ಅವರಿಗೆ ಅದಕ್ಕಿಂತ ದುಃಖಕರ ಯಾವುದಿದೆ? (ಅವರು ಜ್ಞಾತಿಗಳಾಗಿರುವುದು ಆಗಿಲ್ಲದಿರುವುದೂ ಬಿಸಿತುಪ್ಪದಂತೆ). ನಾನಂತೂ ಜೂಜಾಡುವ ಅಭ್ಯಾಸವಿರುವ ಎರಡು ಮಕ್ಕಳ ತಾಯಿಯಂತೆ ಒಬ್ಬನಿಗೆ ಜಯವನ್ನಾಗಲೀ, ಮತ್ತೊಬ್ಬನಿಗೆ ಪರಾಜಯವನ್ನಾಗಲೀ ಬಯಸುವುದಿಲ್ಲ. ಇಬ್ಬರೂ ಮಕ್ಕಳಿದ್ದಂತೆ. ಯಾರಿಗೂ ಒಳ್ಳೆಯದನ್ನೂ, ಕೆಟ್ಟದ್ದನ್ನೂ ಬಯಸದ ತಟಸ್ಥ ಸ್ಥಿತಿಯಲ್ಲಿದ್ದೇನೆ.

ಹೀಗೆ ಈ ವಿರುದ್ಧಸ್ವಭಾವ ಅನೇಕ ಜ್ಞಾನಿಗಳ ಮಧ್ಯ ಸಿಕ್ಕಿಹಾಕಿಕೊಂಡಿರುವ ನನಗೆ ಹಾಗೂ ನನ್ನ ಜ್ಞಾತಿಗಳಿಗೂ ಶ್ರೇಯಸ್ಕರವಾದುದನ್ನು ಹೇಳಿರಿ.

ಹೀಗೊಂದು ಸಾಂಸಾರಿಕ ಸಮಸ್ಯೆ. ದೊಡ್ಡ ಕುಟುಂಬದ ಸಮಸ್ಯೆಗಳಿವು. ಅದನ್ನು ಶ್ರೀಕೃಷ್ಣನೇ ನಾರದರನ್ನು ಹೇಗೆ ನಿರ್ವಹಿಸಬೇಕೆಂದು **ಅಜ್ಞಾನಿಯಂತೆ ಕೇಳುತ್ತಾನೆ.** ಅದಕ್ಕೆ ನಾರದರು ಕೊಟ್ಟ ಉತ್ತರವೂ ಅಷ್ಟೇ ತಾತ್ವಿಕವಾಗಿಯೂ ಲೌಕಿಕಪರಿಹಾರಾತ್ಮಕವಾಗಿಯೂ ಇದೆ. ಅದರ ಸಾರ ಹೀಗಿದೆ.

---

ಅರ್ಧಭೋಕ್ತಾऽಸ್ಮಿ ಭೋಗಾನಾಂ ವಾಗ್‌ದುರುಕ್ತಾನಿ ಚ ಕ್ಷಮೋ ॥ - ೮೩/೫
೧ ಬಲಂ ಸಂಕರ್ಷಣೇ ನಿತ್ಯಂ ಸೌಕುಮಾರ್ಯಂ ಪುನರ್ಗದೇ ।
ರೂಪೇಣ ಮತ್ತಃ ಪ್ರದ್ಯುಮ್ನಃ ಸೋऽಸಹಾಯೋऽಸ್ಮಿ ನಾರದ ॥ - ೮೩/೭
೨ ಅನ್ಯೇ ಹಿ ಸಮಹಾಭಾಗಾ ಬಲವಂತೋ ದುರಾಸದಾಃ ।
ನಿತ್ಯೋತ್ಥಾನೇನ ಸಂಪನ್ನಾ ನಾರದಾಂಧಕವೃಷ್ಣಯಃ ॥ - ೮೩/೮
ಸ್ಯಾತಾಂ ಯಸ್ಯಾಹುಕಾಕ್ರೂರೌ ಕಿನ್ನ ದುಃಖತರಂ ತತಃ ।
ಯಸ್ಯ ವಾಪಿ ನ ತೌ ಸ್ಯಾತಾಂ ಕಿನ್ನದುಃಖಕರಂ ತತಃ ॥ - ೮೩/೧೦
ಸೋऽಹಂ ಕಿತವಮಾತೇವ ದ್ವಯೋರಪಿ ಮಹಾಮುನೇ ।
ನೈಕಸ್ಯ ಜಯಮಾಶಾಸೇ ದ್ವಿತೀಯಸ್ಯ ಪರಾಜಯಮ್ ॥ - ೮೩/೧೧
ಮಮ್ಯೆವಂ ಕ್ಲಿಶ್ಯಮಾನಸ್ಯ ನಾರದೋಭಯತಃ ಸದಾ ।
ವಕ್ತುಮರ್ಹತಿ ಯಚ್ಛ್ರೇಯೋ ಜ್ಞಾತೀನಾಮಾತ್ಮನಸ್ತಥಾ ॥ - ೮೩/೧೨

# ೧೬೭. [1]ಜ್ಞಾತಿ ಸಂಬಂಧಿಗಳ ಸ್ವಭಾವ

ಧರ್ಮರಾಜನು ಭೀಷ್ಮರನ್ನು ಪ್ರಶ್ನಿಸುತ್ತಾನೆ.

ಜ್ಞಾತಿಗಳು, ಸಂಬಂಧಿಗಳ ಮಧ್ಯೆ (ಸ್ಪರ್ಧೆ, ಅಸೂಯೆಯಿಂದಾಗಿ) ವಿಶ್ವಾಸಾರ್ಹತೆ ಇಲ್ಲದಿದ್ದಾಗ, ಮಿತ್ರರನ್ನು ಹಾಗೂ ಶತ್ರುಗಳನ್ನು ಹೇಗೆ ಸುಧಾರಿಸುವುದು? (ಕಾರಣ ಒಬ್ಬರ ಪರವಾಗಿದ್ದರೆ ಮತ್ತೊಬ್ಬರು ಸಿಟ್ಟಾಗುತ್ತಾರೆ. ಮಿತ್ರರೂ ಶತ್ರುಗಳಾಗುತ್ತಾರೆ). ಎಲ್ಲರನ್ನು ಇಂತಹ ಸಂದರ್ಭದಲ್ಲಿ ವಶದಲ್ಲಿಟ್ಟುಕೊಳ್ಳುವುದು ಹೇಗೆ?

ಈ ಬಗ್ಗೆ ಭೀಷ್ಮನು ಕೃಷ್ಣನಾರದರ ಸಂವಾದರೂಪ ಇತಿಹಾಸವನ್ನು ಧರ್ಮರಾಜನಿಗೆ ಹೇಳುತ್ತಾನೆ.

ಶ್ರೀಕೃಷ್ಣನು ಹತ್ತು ಶ್ಲೋಕಗಳಿಂದ ತನ್ನ ಬಾಂಧವರ, ಜ್ಞಾತಿಗಳ ಮಧ್ಯೆ ಇರುವ ಸಂಬಂಧಸೂಕ್ಷ್ಮಗಳಿಂದಾಗಿ ಕ್ಲೇಶಗೊಂಡಿದ್ದೇನೆ. ಇದರಲ್ಲಿ ನನಗೂ ಹಾಗೂ ನನ್ನ ಜ್ಞಾತಿಗಳಿಗೂ ಯಾವುದು ಶ್ರೇಯಸ್ಕರ ಎಂದು ಕೇಳುತ್ತಾನೆ. ಶ್ರೀಕೃಷ್ಣನಿಗೆ ಕ್ಲೇಶವುಂಟು ಮಾಡುತ್ತಿರುವ ಸಮಸ್ಯೆಗಳನ್ನು ಹತ್ತು ಶ್ಲೋಕಗಳಿಂದ ಹೇಳುತ್ತಾನೆ. ಅದರ ಸಾರ ಹೀಗಿದೆ.

೧. ಸುಹೃತ್ ಅಲ್ಲದವನು ರಾಜನ ಸಮಾಲೋಚನೆಗೆ ಅರ್ಹನಲ್ಲ. ಸುಹೃತ್ ಆದರೂ ಪಂಡಿತನಲ್ಲದಿದ್ದರೂ, ಪಂಡಿತನಾದರೂ ಸುಹೃತ್ ಅಲ್ಲದವನೂ ಕೂಡಾ ರಾಜನ ಮಂತ್ರವನ್ನು (ನೀತಿ) ತಿಳಿಯಬಾರದು(ರಾಜನ ಮಂತ್ರಾಲೋಚನೆಗೆ ಯೋಗ್ಯನಾದವನು ಪಂಡಿತನೂ, ಸುಹೃತ್ತೂ ಆಗಿರಬೇಕು ಮತ್ತು ಜಿತೇಂದ್ರಿಯನಾಗಿರಬೇಕು).

೨. ನಾರದರೇ ನಾನು ಐಶ್ವರ್ಯವಂತನಾದರೂ ಜ್ಞಾತಿಗಳ ದಾಸ್ಯವನ್ನು ಮಾಡುತ್ತೇನೆ (ನಾನು ನನ್ನ ಐಶ್ವರ್ಯಪ್ರಭುತ್ವ ತೋರಿಸಿ, ಜ್ಞಾತಿಗಳು ದಾಸರಾಗಲಿ ಎಂದು ಇಚ್ಛೆ ಪಡುವುದಿಲ್ಲ). ನನ್ನಲ್ಲಿರುವ ಭೋಗಸಾಮಗ್ರಿಗಳಲ್ಲಿ ಅರ್ಧವನ್ನು ಬಂಧುಬಾಂಧವರಿಗೆ ಹಂಚಿ ಉಳಿದುದನ್ನು ನಾನು ಉಪಯೋಗಿಸುತ್ತೇನೆ. ನನ್ನ ಬಗ್ಗೆ ಬರುವ ಕೆಟ್ಟ ಮಾತುಗಳನ್ನು ನಾನು ಸಹಿಸುತ್ತೇನೆ. ಅವು ನನ್ನನ್ನು ಸದಾ ಸುಡುತ್ತವೆ[2].

---

೧ ಜ್ಞಾತಿ= ತಂದೆ ಹಾಗೂ ಅವರ ವಂಶದಲ್ಲಿ ಹುಟ್ಟಿದ ದಾಯಾದ(ದಿ)ಗಳು (ಚಿಕ್ಕಪ್ಪ, ದೊಡ್ಡಪ್ಪ ಅವರ ಮಕ್ಕಳು, ಮೊಮ್ಮಕ್ಕಳು ಮೊದಲಾದವರು). ಬಂಧುಗಳು, ನೆಂಟರು, ಸಂಬಂಧಿಗಳು.
ಸ್ಯುರ್ಜ್ಞಾತಯಃ ಸಗೋತ್ರಾಶ್ಚ ಸಪಿಂಡಾಸ್ತು ಸನಾಭಯಃ।
ಸ್ವಜನೋ ಬಾಂಧವೋ ಬಂಧುಃ। - ವೈಜಯಂತೀ ಕೋಶಃ।

೨ ದಾಸ್ಯಮೈಶ್ವರ್ಯವಾದೇನ ಜ್ಞಾತೀನಾಂ ವೈ(ನ) ಕರೋಮ್ಯಹಮ್।

೩. ನನ್ನ ಅಣ್ಣ ಸದಾ ಬಲವುಳ್ಳವನು ಮಗ ಗದಾ ಸುಕುಮಾರ. ಇನ್ನೊಬ್ಬ ಮಗ ಪ್ರದ್ಯುಮ್ನ ನನಗಿಂತ ರೂಪವಂತ (ರೂಪದಲ್ಲಿ ಅಧಿಕ, ಆದ್ದರಿಂದಲೇ ಗರ್ವಿ). ಇವರ ಮಧ್ಯ ನಾನು ಅಸಹಾಯಕನಂತೆ ಇದ್ದೇನೆ. ಕೆಲವೊಮ್ಮೆ ಇವರು ಅತಿರೇಕಿಗಳಾದಾಗ ನಾನು ಅಸಹಾಯಕ).

೪. ಇತರೇ ಜ್ಞಾತಿಳು ಬಲಿಷ್ಠರೂ ಮತ್ತು ಅವರ ಸಮೀಪ ಹೋಗುವುದೂ ಅಸಾಧ್ಯ (ಅಷ್ಟು ಗರ್ವಿಷ್ಠರು). ಅಂಧಕ ವೃಷ್ಣಿಗಳು ನಿತ್ಯವೂ ಉದ್ಯಮಶೀಲರು.

ನಾರದರೇ ನೋಡಿ! ಆಹುಕ, ಅಕ್ರೂರರು ಯಾರಿಗೆ ಜ್ಞಾತಿಗಳಾಗಿದ್ದಾರೋ ಅವರಿಗೆ ಅದಕ್ಕಿಂತ ದುಃಖತರ ಯಾವುದಿದೆ? ಯಾರಿಗೆ ಅವರು ಜ್ಞಾತಿಗಳಲ್ಲವೋ ಅವರಿಗೆ ಅದಕ್ಕಿಂತ ದುಃಖಕರ ಯಾವುದಿದೆ? (ಅವರು ಜ್ಞಾತಿಗಳಾಗಿರುವುದು ಆಗಿಲ್ಲದಿರುವುದೂ ಬಿಸಿತುಪ್ಪದಂತೆ). ನಾನಂತೂ ಜೂಜಾಡುವ ಅಭ್ಯಾಸವಿರುವ ಎರಡು ಮಕ್ಕಳ ತಾಯಿಯಂತೆ ಒಬ್ಬನಿಗೆ ಜಯವನ್ನಾಗಲೀ, ಮತ್ತೊಬ್ಬನಿಗೆ ಪರಾಜಯವನ್ನಾಗಲೀ ಬಯಸುವುದಿಲ್ಲ, ಇಬ್ಬರೂ ಮಕ್ಕಳಿದ್ದಂತೆ. ಯಾರಿಗೂ ಒಳ್ಳೆಯದನ್ನೂ, ಕೆಟ್ಟದ್ದನ್ನೂ ಬಯಸದ ತಟಸ್ಥ ಸ್ಥಿತಿಯಲ್ಲಿದ್ದೇನೆ.

ಹೀಗೆ ಈ ವಿರುದ್ಧ ಸ್ವಭಾವ ಅನೇಕ ಜ್ಞಾನಿಗಳ ಮಧ್ಯ ಸಿಕ್ಕಿಹಾಕಿಕೊಂಡಿರುವ ನನಗೆ ಹಾಗೂ ನನ್ನ ಜ್ಞಾತಿಗಳಿಗೂ ಶ್ರೇಯಸ್ಕರವಾದುದನ್ನು ಹೇಳಿರಿ.

ಹೀಗೊಂದು ಸಾಂಸಾರಿಕ ಸಮಸ್ಯೆ. ದೊಡ್ಡ ಕುಟುಂಬದ ಸಮಸ್ಯೆಗಳಿವು. ಅದನ್ನು ಶ್ರೀಕೃಷ್ಣನೇ ನಾರದರನ್ನು ಹೇಗೆ ನಿರ್ವಹಿಸಬೇಕೆಂದು **ಅಜ್ಞಾನಿಯಂತೆ ಕೇಳುತ್ತಾನೆ.** ಅದಕ್ಕೆ ನಾರದರು ಕೊಟ್ಟ ಉತ್ತರವೂ ಅಷ್ಟೇ ತಾತ್ವಿಕವಾಗಿಯೂ ಲೌಕಿಕಪರಿಹಾರಾತ್ಮಕವಾಗಿಯೂ ಇದೆ. ಅದರ ಸಾರ ಹೀಗಿದೆ.

---

ಅರ್ಧಭೋಕ್ತಾಽಸ್ಮಿ ಭೋಗಾನಾಂ ವಾಗ್‌ದುರುಕ್ತಾನಿ ಚ ಕ್ಷಮೇ॥ - ೮೩/೫
೧ ಬಲಂ ಸಂಕರ್ಷಣೇ ನಿತ್ಯಂ ಸೌಕುಮಾರ್ಯಂ ಪುನರ್ಗದೇ।
ರೂಪೇಣ ಮತ್ತಃ ಪ್ರದ್ಯುಮ್ನಃ ಸೋಽಸಹಾಯೋಽಸ್ಮಿ ನಾರದ॥ - ೮೩/೭
೨ ಅನ್ಯೇ ಹಿ ಸಮಹಾಭಾಗಾ ಬಲವಂತೋ ದುರಾಸದಾಃ।
ನಿತ್ಯೋತ್ಥಾನೇನ ಸಂಪನ್ನಾ ನಾರದಾಂಧಕವೃಷ್ಣಯಃ॥ - ೮೩/೮
ಸ್ಯಾತಾಂ ಯಸ್ಯಾಹುಕಾಕ್ರೂರೌ ಕಿನ್ನ ದುಃಖತರಂ ತತಃ।
ಯಸ್ಯ ವಾಪಿ ನ ತೌ ಸ್ಯಾತಾಂ ಕಿನ್ನದುಃಖಕರಂ ತತಃ॥ - ೮೩/೧೦
ಸೋಽಹಂ ಕಿತವಮಾತೇವ ದ್ವಯೋರಪಿ ಮಹಾಮುನೇ।
ನೈಕಸ್ಯ ಜಯಮಾಶಾಸೇ ದ್ವಿತೀಯಸ್ಯ ಪರಾಜಯಮ್॥ - ೮೩/೧೧
ಮಮೈವಂ ಕ್ಲಿಶ್ಯಮಾನಸ್ಯ ನಾರದೋಭಯತಃ ಸದಾ।
ವಕ್ತುಮರ್ಹತಿ ಯಚ್ಛ್ರೇಯೋ ಜ್ಞಾತೀನಾಮಾತ್ಮನಸ್ತಥಾ॥ - ೮೩/೧೨

# ೧೬೭. [1]ಜ್ಞಾತಿ ಸಂಬಂಧಿಗಳ ಸ್ವಭಾವ

ಧರ್ಮರಾಜನು ಭೀಷ್ಮರನ್ನು ಪ್ರಶ್ನಿಸುತ್ತಾನೆ.

ಜ್ಞಾತಿಗಳು, ಸಂಬಂಧಿಗಳ ಮಧ್ಯೆ (ಸ್ಪರ್ಧೆ, ಅಸೂಯೆಯಿಂದಾಗಿ) ವಿಶ್ವಾಸಾರ್ಹತೆ ಇಲ್ಲದಿದ್ದಾಗ, ಮಿತ್ರರನ್ನು ಹಾಗೂ ಶತ್ರುಗಳನ್ನು ಹೇಗೆ ಸುಧಾರಿಸುವುದು? (ಕಾರಣ ಒಬ್ಬರ ಪರವಾಗಿದ್ದರೆ ಮತ್ತೊಬ್ಬರು ಸಿಟ್ಟಾಗುತ್ತಾರೆ. ಮಿತ್ರರೂ ಶತ್ರುಗಳಾಗುತ್ತಾರೆ). ಎಲ್ಲರನ್ನು ಇಂತಹ ಸಂದರ್ಭದಲ್ಲಿ ವಶದಲ್ಲಿಟ್ಟುಕೊಳ್ಳುವುದು ಹೇಗೆ?

ಈ ಬಗ್ಗೆ ಭೀಷ್ಮನು ಕೃಷ್ಣನಾರದರ ಸಂವಾದರೂಪ ಇತಿಹಾಸವನ್ನು ಧರ್ಮರಾಜನಿಗೆ ಹೇಳುತ್ತಾನೆ.

ಶ್ರೀಕೃಷ್ಣನು ಹತ್ತು ಶ್ಲೋಕಗಳಿಂದ ತನ್ನ ಬಾಂಧವರ, ಜ್ಞಾತಿಗಳ ಮಧ್ಯೆ ಇರುವ ಸಂಬಂಧಸೂಕ್ಷ್ಮಗಳಿಂದಾಗಿ ಕ್ಲೇಶಗೊಂಡಿದ್ದೇನೆ. ಇದರಲ್ಲಿ ನನಗೂ ಹಾಗೂ ನನ್ನ ಜ್ಞಾತಿಗಳಿಗೂ ಯಾವುದು ಶ್ರೇಯಸ್ಕರ ಎಂದು ಕೇಳುತ್ತಾನೆ. ಶ್ರೀಕೃಷ್ಣನಿಗೆ ಕ್ಲೇಶವುಂಟು ಮಾಡುತ್ತಿರುವ ಸಮಸ್ಯೆಗಳನ್ನು ಹತ್ತು ಶ್ಲೋಕಗಳಿಂದ ಹೇಳುತ್ತಾನೆ. ಅದರ ಸಾರ ಹೀಗಿದೆ.

೧. ಸುಹೃತ್ ಅಲ್ಲದವನು ರಾಜನ ಸಮಾಲೋಚನೆಗೆ ಅರ್ಹನಲ್ಲ. ಸುಹೃತ್ ಆದರೂ ಪಂಡಿತನಲ್ಲದಿದ್ದರೂ, ಪಂಡಿತನಾದರೂ ಸುಹೃತ್ ಅಲ್ಲದವನೂ ಕೂಡಾ ರಾಜನ ಮಂತ್ರವನ್ನು (ನೀತಿ) ತಿಳಿಯಬಾರದು(ರಾಜನ ಮಂತ್ರಾಲೋಚನೆಗೆ ಯೋಗ್ಯನಾದವನು ಪಂಡಿತನೂ, ಸುಹೃತ್ತೂ ಆಗಿರಬೇಕು ಮತ್ತು ಜಿತೇಂದ್ರಿಯನಾಗಿರಬೇಕು).

೨. ನಾರದರೇ ನಾನು ಐಶ್ವರ್ಯವಂತನಾದರೂ ಜ್ಞಾತಿಗಳ ದಾಸ್ಯವನ್ನು ಮಾಡುತ್ತೇನೆ (ನಾನು ನನ್ನ ಐಶ್ವರ್ಯಪ್ರಭುತ್ವ ತೋರಿಸಿ, ಜ್ಞಾತಿಗಳು ದಾಸರಾಗಲಿ ಎಂದು ಇಚ್ಛೆ ಪಡುವುದಿಲ್ಲ). ನನ್ನಲ್ಲಿರುವ ಭೋಗಸಾಮಗ್ರಿಗಳಲ್ಲಿ ಅರ್ಧವನ್ನು ಬಂಧುಬಾಂಧವರಿಗೆ ಹಂಚಿ ಉಳಿದುದನ್ನು ನಾನು ಉಪಯೋಗಿಸುತ್ತೇನೆ. ನನ್ನ ಬಗ್ಗೆ ಬರುವ ಕೆಟ್ಟ ಮಾತುಗಳನ್ನು ನಾನು ಸಹಿಸುತ್ತೇನೆ. ಅವು ನನ್ನನ್ನು ಸದಾ ಸುಡುತ್ತವೆ[2].

---

೧ ಜ್ಞಾತಿ= ತಂದೆ ಹಾಗೂ ಅವರ ವಂಶದಲ್ಲಿ ಹುಟ್ಟಿದ ದಾಯಾದ(ದಿ)ಗಳು (ಚಿಕ್ಕಪ್ಪ ದೊಡ್ಡಪ್ಪ ಅವರ ಮಕ್ಕಳು, ಮೊಮ್ಮಕ್ಕಳು ಮೊದಲಾದವರು). ಬಂಧುಗಳು, ನೆಂಟರು, ಸಂಬಂಧಿಗಳು.
ಸ್ಯುರ್ಜ್ಞಾತಯಃ ಸಗೋತ್ರಾಶ್ಚ ಸಪಿಂಡಾಸ್ತು ಸನಾಭಯಃ।
ಸ್ವಜನೋ ಬಾಂಧವೋ ಬಂಧುಃ। - ವೈಜಯಂತೀ ಕೋಶಃ।

೨ ದಾಸ್ಯಮೈಶ್ವರ್ಯವಾದೇನ ಜ್ಞಾತೀನಾಂ ವೈ(ನ) ಕರೋಮ್ಯಹಮ್ ।

೩. ನನ್ನ ಅಣ್ಣ ಸದಾ ಬಲವುಳ್ಳವನು ಮಗ ಗದಾ ಸುಕುಮಾರ. ಇನ್ನೊಬ್ಬ ಮಗ ಪ್ರದ್ಯುಮ್ನ ನನಗಿಂತ ರೂಪವಂತ (ರೂಪದಲ್ಲಿ ಅಧಿಕ, ಆದ್ದರಿಂದಲೇ ಗರ್ವಿ). ಇವರ ಮಧ್ಯ ನಾನು ಅಸಹಾಯಕ[೧]ನಂತೆ ಇದ್ದೇನೆ. ಕೆಲವೊಮ್ಮೆ ಇವರು ಅತಿರೇಕಿಗಳಾದಾಗ ನಾನು ಅಸಹಾಯಕ).

೪. ಇತರೇ ಜ್ಞಾತಿಳು ಬಲಿಷ್ಠರೂ ಮತ್ತು ಅವರ ಸಮೀಪ ಹೋಗುವುದೂ ಅಸಾಧ್ಯ (ಅಷ್ಟು ಗರ್ವಿಷ್ಠರು). ಅಂಧಕ ವೃಷ್ಣಿಗಳು ನಿತ್ಯವೂ ಉದ್ಯಮಶೀಲರು.

ನಾರದರೇ ನೋಡಿ! ಆಹುಕ, ಅಕ್ರೂರರು ಯಾರಿಗೆ ಜ್ಞಾತಿಗಳಾಗಿದ್ದಾರೋ ಅವರಿಗೆ ಅದಕ್ಕಿಂತ ದುಃಖತರ ಯಾವುದಿದೆ? ಯಾರಿಗೆ ಅವರು ಜ್ಞಾತಿಗಳಲ್ಲವೋ ಅವರಿಗೆ ಅದಕ್ಕಿಂತ ದುಃಖಕರ ಯಾವುದಿದೆ? (ಅವರು ಜ್ಞಾತಿಗಳಾಗಿರುವುದು ಆಗಿಲ್ಲದಿರುವುದೂ ಬಿಸಿತುಪ್ಪದಂತೆ). ನಾನಂತೂ ಜೂಜಾಡುವ ಅಭ್ಯಾಸವಿರುವ ಎರಡು ಮಕ್ಕಳ ತಾಯಿಯಂತೆ ಒಬ್ಬನಿಗೆ ಜಯವನ್ನಾಗಲೀ, ಮತ್ತೊಬ್ಬನಿಗೆ ಪರಾಜಯವನ್ನಾಗಲೀ ಬಯಸುವುದಿಲ್ಲ, ಇಬ್ಬರೂ ಮಕ್ಕಳಿದ್ದಂತೆ. ಯಾರಿಗೂ ಒಳ್ಳೆಯದನ್ನೂ, ಕೆಟ್ಟದ್ದನ್ನೂ ಬಯಸದ ತಟಸ್ಥ ಸ್ಥಿತಿಯಲ್ಲಿದ್ದೇನೆ.

ಹೀಗೆ ಈ ವಿರುದ್ಧ ಸ್ವಭಾವ ಅನೇಕ ಜ್ಞಾನಿಗಳ ಮಧ್ಯ ಸಿಕ್ಕಿಹಾಕಿಕೊಂಡಿರುವ ನನಗೆ ಹಾಗೂ ನನ್ನ ಜ್ಞಾತಿಗಳಿಗೂ ಶ್ರೇಯಸ್ಕರವಾದುದನ್ನು ಹೇಳಿರಿ[೨].

ಹೀಗೊಂದು ಸಾಂಸಾರಿಕ ಸಮಸ್ಯೆ. ದೊಡ್ಡ ಕುಟುಂಬದ ಸಮಸ್ಯೆಗಳಿವು. ಅದನ್ನು ಶ್ರೀಕೃಷ್ಣನೇ ನಾರದರನ್ನು ಹೇಗೆ ನಿರ್ವಹಿಸಬೇಕೆಂದು **ಅಜ್ಞಾನಿಯಂತೆ ಕೇಳುತ್ತಾನೆ**. ಅದಕ್ಕೆ ನಾರದರು ಕೊಟ್ಟ ಉತ್ತರವೂ ಅಷ್ಟೇ ತಾತ್ವಿಕವಾಗಿಯೂ ಲೌಕಿಕಪರಿಹಾರಾತ್ಮಕವಾಗಿಯೂ ಇದೆ. ಅದರ ಸಾರ ಹೀಗಿದೆ.

---

ಅರ್ಧಭೋಕ್ತಾಽಸ್ಮಿ ಭೋಗಾನಾಂ ವಾಗ್‌ದುರುಕ್ತಾನಿ ಚ ಕ್ಷಮೇ ॥ - ೮೩/೫
೧ ಬಲಂ ಸಂಕರ್ಷಣೇ ನಿತ್ಯಂ ಸೌಕುಮಾರ್ಯಂ ಪುನರ್ಗದೇ ।
ರೂಪೇಣ ಮತ್ತಃ ಪ್ರದ್ಯುಮ್ನಃ ಸೋಽಸಹಾಯೋಽಸ್ಮಿ ನಾರದ ॥ - ೮೩/೭
೨ ಅನ್ಯೇ ಹಿ ಸಮಹಾಭಾಗಾ ಬಲವಂತೋ ದುರಾಸದಾಃ ।
ನಿತ್ಯೋತ್ಥಾನೇನ ಸಂಪನ್ನಾ ನಾರದಾಂಧಕವೃಷ್ಣಯಃ ॥ - ೮೩/೮
ಸ್ಯಾತಾಂ ಯಸ್ಯಾಹುಕಾಕ್ರೂರೌ ಕಿನ್ನ ದುಃಖತರಂ ತತಃ ।
ಯಸ್ಯ ವಾಪಿ ನ ತೌ ಸ್ಯಾತಾಂ ಕಿನ್ನದುಃಖಕರಂ ತತಃ ॥ - ೮೩/೧೦
ಸೋಽಹಂ ಕಿತವಮಾತೇವ ದ್ವಯೋರಪಿ ಮಹಾಮುನೇ ।
ನೈಕಸ್ಯ ಜಯಮಾಶಾಸೇ ದ್ವಿತೀಯಸ್ಯ ಪರಾಜಯಮ್ ॥ - ೮೩/೧೧
ಮಮೈವಂ ಕ್ಲಿಶ್ಯಮಾನಸ್ಯ ನಾರದೋಭಯತಃ ಸದಾ ।
ವಕ್ತುಮರ್ಹತಿ ಯಚ್ಛ್ರೇಯೋ ಜ್ಞಾತೀನಾಮಾತ್ಮನಸ್ತಥಾ ॥ - ೮೩/೧೨

ಕೃಷ್ಣನೇ! ಆಪತ್ತುಗಳು, ಸಂಕಟಗಳು ಬಾಹ್ಯ ಹಾಗೂ ಒಳಗಿನವೆಂದು ಎರಡು ವಿಧ. ಅವು ತನ್ನಿಂದಲೂ ಅಥವಾ ಬೇರೆಯವರಿಂದಲೂ ಸಂಭವಿಸುತ್ತವೆ. ನಿನಗೆ ಒಳಗಿನವರಿಂದ ಉಂಟಾಗಿರುವ ಆಪತ್ತು ನಿನ್ನ ಕಾರ್ಯಗಳಿಂದಲೇ. ಅಕ್ರೂರಾದಿಗಳು ನಿನ್ನ ಕಾರ್ಯಗಳಿಗನುಗುಣವಾಗಿ ಪ್ರತಿಕ್ರಿಯೆ ನೀಡುತ್ತಾರೆ. ಇದಕ್ಕೆ ಕಾರಣ ನೀನೆ ಹಂಚಿದ ಐಶ್ವರ್ಯ. ಅದು ನಿನ್ನ ಇಚ್ಛೆಯಿಂದ, ಭಯದಿಂದ, ನಿನಗೆ ಬಂದ ಐಶ್ವರ್ಯವಿರಬಹುದು. ಅದೇ ಅವರ ಬೆಳವಣಿಗೆಗೆ ಕಾರಣವಾಗಿ ಮುಂದೆ ನಿನಗೆ ತೊಂದರೆದಾಯಕವಾಗಿರಬಹುದು. ಅದನ್ನು ವಾಪಸು ಪಡೆಯಲು ಆಗದೇ ವಾಂತಿ ಮಾಡಿದ ಅನ್ನವನ್ನು ವಾಪಸು ತೆಗೆದುಕೊಳ್ಳಲು ಬರದಿರುವಂತೆ (ಹೇಗೆ ಬರುವುದಿಲ್ಲವೋ ಹಾಗೆ). ಸಾಲದ್ದಕ್ಕೆ ಇವರೆಲ್ಲ ನಿನ್ನ ಜ್ಞಾತಿಗಳೇ ಅಲ್ಲವೇ?

ಮತ್ತೆ ಜ್ಞಾತಿಗಳಲ್ಲಿ ಪರಸ್ಪರ ವಿರೋಧ ಭಯದಿಂದ ಅಕ್ರೂರ (ಬಭ್ರು) ಉಗ್ರಸೇನರ ರಾಜ್ಯವನ್ನು ವಾಪಸು ಪಡೆಯಲಾಗುವುದಿಲ್ಲ. ಭಾರೀ ಪ್ರಯತ್ನದಿಂದ ಹಾಗೇನಾದರೂ ಮಾಡಿದರೆ ಅದಕ್ಕಾಗಿ ಭಾರಿ ಧನ ವ್ಯಯ ಹಾಗೂ ವಿನಾಶಕಾರಿ (ಸೈನ್ಯನಾಶ ಇತ್ಯಾದಿ) ಯಾಗಿ ಸರ್ವನಾಶಕ್ಕೂ ಕಾರಣವಾಗಬಹುದು. ಆದ್ದರಿಂದ ಹೃದಯ(ಮನ) ಬದಲಾಯಿಸುವಂತಹ ಕಠಿಣವೂ ಅಲ್ಲದ (ಕಬ್ಬಿಣದಂತೆ) ಮೃದುವಾದ ಶಸ್ತ್ರದಿಂದ ನಾಲಿಗೆಯನ್ನು ಸವರಿ ಅದನ್ನು ಕತ್ತರಿಸಬೇಕು[೧].

ಇದನ್ನು ಕೇಳಿದ ಕೃಷ್ಣನು ಕಬ್ಬಿಣದಿಂದ ಮಾಡಿದ ಮೃದುವಾದ ಶಸ್ತ್ರವನ್ನು ತಿಳಿಯುವುದು ಹೇಗೆ? ಎಂದು ಅಜ್ಞಾನಿಯಂತೆ ಮತ್ತೆ ಪ್ರಶ್ನಿಸುತ್ತಾನೆ.

ಇದಕ್ಕೆ ನಾರದರು

೧. ಯಾವಾಗಲೂ ಯಥಾಶಕ್ತಿ ಅನ್ನದಾನ, ತಿತಿಕ್ಷಾ(ತಾಳ್ಮೆ, ಸಹನೆ), ಇಂದ್ರಿಯನಿಗ್ರಹ, ಆರ್ಜವ(ತ್ರಿಕರಣಶುದ್ಧಿ), ಅವರವರ ಯೋಗ್ಯತೆಗನುಗುಣವಾಗಿ ಗೌರವಗಳೇ 'ಕಬ್ಬಿಣದಿಂದ ಮಾಡಿದ ಅಸ್ತ್ರ[೨].

೨. ಜ್ಞಾತಿಗಳು ಕಟುವಾಗಿ (ನಿಷ್ಠುರವಾಗಿ, ತೀಕ್ಷ್ಣವಾಗಿ) ಅನಾದರದಿಂದ ಮತನಾಡಿದರೂ, ಅವರ ಮನಸ್ಸನ್ನು ಮತ್ತು ಮಾತನ್ನು ಒಳ್ಳೆಯ ಮಾತುಗಳಿಂದ ಸಮಾಧಾನ ಮಾಡುವುದು (ನೀನು ಅವರಂತೆ ಮಾತನಾಡದಿರುವುದು) ಇದುವೇ ಮಹಾಪುರುಷನಂತೆ ಇರುವುದು.

---

೧ ಅನಾಯಾಸೇನ ಶಸ್ತ್ರೇಣ ಮೃದುನಾ ಹೃದಯಚ್ಛಿದಂ।
ಜಿಹ್ವಾಮುದ್ಧರ ಸರ್ವೇಷಾಂ ಪರಿಮೃಜ್ಯಾನು ಮೃಜ್ಯ ಚ॥ - ೮೩/೧೯

೨ ಶಕ್ತ್ಯಾನ್ನದಾನಂ ಸತತಂ ತಿತಿಕ್ಷಾ ದಮ ಆರ್ಜವಮ್।
ಯಥಾರ್ಹಪ್ರತಿಪೂಜಾ ಚ ಶಸ್ತ್ರಮೇತದನಾಯಸಮ್॥ - ೮೩/೨೧

೩. ಸಮತಟ್ಟಾದ ಪ್ರದೇಶದಲ್ಲಿ ಎಲ್ಲ ಎತ್ತುಗಳು ಭಾರಿ ಭಾರವನ್ನು ಹೊರುತ್ತವೆ. ಆದರೆ ದುರ್ಗಮ ಪ್ರದೇಶಗಳಲ್ಲಿ ಒಳ್ಳೆಯ ಹಸುವಿನಿಂದ ಜನಿಸಿದ ಎತ್ತು ಮಾತ್ರ ಅಸಾಧ್ಯವಾದ ಭಾರವನ್ನು ಹೊರುತ್ತದೆ[1].

೩. ನೀನು ಭೋಜಾಂಧಕ ವೃಷ್ಣಿ ಕುಲಗಳಲ್ಲಿ ಪ್ರಧಾನ. ಇದರಲ್ಲಿ ವಿರೋಧವುಂಟಾದರೆ ವಿನಾಶ ಖಚಿತ. ಆದ್ದರಿಂದ ನೀನೇ ಪ್ರಧಾನವಾಗಿರುವ ಈ ಸಮೂಹನಾಶ ಹೊಂದದಂತೆ ವರ್ತಿಸು. ಅದು ಹೇಗೆ ಎಂದರೆ ಪ್ರಾಜ್ಞನಂತೆ. ಅದಕ್ಕಾಗಿ ಬುದ್ಧಿ(ಕಾರ್ಯಾಕಾರ್ಯವಿವೇಕ), ಇಂದ್ರಿಯ ನಿಗ್ರಹ, ಧನತ್ಯಾಗ ಗುಣಗಳೇ ನಿನ್ನನ್ನು ಪ್ರಾಜ್ಞನಾಗಿ ಮಾಡುತ್ತವೆ. ಜ್ಞಾತಿಗಳಿಗೆ ಧನ, ಕೀರ್ತಿ, ಆಯುಷ್ಯ, ಶುಭೋನ್ನತಿಗಳಾಗುವಂತೆ ಮಾಡು. ಆಗ ಅವರ ವಿನಾಶವಾಗದು[2].

೪. ಕಾಲತ್ರಯ ಜ್ಞಾನಿಯಾಗಿರುವ ನೀನು ತಿಳಿಯದಿರುವುದು ಏನೂ ಇಲ್ಲ. ನಿನ್ನ ಎಲ್ಲ ಕುಲಬಾಂಧವರು, ಎಲ್ಲ ಲೋಕಗಳು, ಲೋಕೇಶ್ವರರಾದ ದೇವತೆಗಳೂ ನಿನ್ನನ್ನು ಆಶ್ರಯಿಸಿದ್ದಾರೆ. ನಿನ್ನ ಬುದ್ಧಿಯನ್ನೇ ಆಶ್ರಯಿಸಿದ್ದಾರೆ. ನೀನೇ ಎಲ್ಲ ಜೀವಿಗಳ ಗುರು. ನಿನ್ನನ್ನು ಹೊಂದಿಯೇ ಜ್ಞಾತಿಗಳು ಸುಖ ಪಡೆಯುತ್ತಾರೆ. ಹೀಗಿರುವಾಗ ನಿನಗೆಲ್ಲಿ ಕ್ಲೇಶ. ಇದೆಲ್ಲ ಲೋಕವಿಡಂಬನೆ[3].

## ಸಂದೇಶಗಳು

೧. ನಾರದರ ಉತ್ತರದಲ್ಲಿ ಸಂದೇಶಗಳೇ ಇವೆ.

೨. ಕೃಷ್ಣನು ಲೋಕದೃಷ್ಟಿಯಿಂದ ಬಹುಕುಟುಂಬ ವ್ಯವಸ್ಥೆಯ ಸಮಸ್ಯೆಗಳನ್ನು ಅಜ್ಞಾನಿಯಂತೆ ಪ್ರಶ್ನಿಸಿ ಉತ್ತರ ಪಡೆದಿದ್ದಾನೆ.

---

೧ ಸರ್ವ ಏವ ಗುರುಂ ಭಾರಮನಡ್ವಾನ್ ವಹತೇ ಸಮೇ।
ದುರ್ಗೇ ಪ್ರತೀಕಃ ಸುಗಮೋ ಭಾರಂ ವಹತಿ ದುರ್ವಹಮ್ ॥ – ೮೩/೨೪

೨ ಭೇದಾದ್ವಿನಾಶಃ ಸಂಘಾನಾಂ ಸಂಘಮುಖ್ಯೋಽಸಿ ಕೇಶವ।
ಯಥಾ ತ್ವಾಂ ಪ್ರಾಪ್ಯ ನೋತ್ಸೀದೇದಯಂ ಸಂಘಸ್ತಥಾ ಕುರು ॥
ನಾನ್ಯತ್ರ ಬುದ್ಧಿಕ್ಷಾಂತಿಭ್ಯಾಂ ನಾನ್ಯತ್ರೇಂದ್ರಿಯನಿಗ್ರಹಾತ್।
ನಾನ್ಯತ್ರ ಧನಸಂತ್ಯಾಗಾದ್ ಗಣಃ ಪ್ರಾಜ್ಞೇಽವತಿಷ್ಠತೇ ॥
ಧನ್ಯಂ ಯಶಸ್ಯಮಾಯುಷ್ಯಂ ಸ್ವಪಕ್ಷೋದ್ಭಾವನಂ ಶುಭಮ್।
ಜ್ಞಾತೀನಾಮವಿನಾಶಃ ಸ್ಯಾದ್ ಯಥಾ ಕೃಷ್ಣ ತಥಾ ಕುರು ॥

೩ ಮಾಧವಾಃ ಕುಕುರಾ ಭೋಜಾ ಸರ್ವೇ ಚಾಂಧಕವೃಷ್ಣಯಃ।
ತ್ವಯ್ಯಾಸಕ್ತಾ ಮಹಾಬಾಹೋ ಲೋಕಾಲೋಕೇಶ್ವರಾಶ್ಚಯೇ ॥ –೮೩/೨೯
ಉಪಾಸತೇ ಹಿ ತ್ವದ್ಬುದ್ಧಿ ಮೃಷಯಶ್ಚಾಪಿ ಮಾಧವ।
ತ್ವಂ ಗುರುಃ ಸರ್ವಭೂತಾನಾಂ ಜಾನೀಷೇ ತ್ವಂ ಗತಾಗತಮ್ ॥
ತ್ವಮಾಸಾದ್ಯ ಯದುಶ್ರೇಷ್ಠಮೇಂಧಂತೇ ಜ್ಞಾತಿನಃ ಸುಖಮ್ ॥ – ೮೩/೩೦

ಕೃಷ್ಣನೇ! ಆಪತ್ತುಗಳು, ಸಂಕಟಗಳು ಬಾಹ್ಯ ಹಾಗೂ ಒಳಗಿನವೆಂದು ಎರಡು ವಿಧ. ಅವು ತನ್ನಿಂದಲೂ ಅಥವಾ ಬೇರೆಯವರಿಂದಲೂ ಸಂಭವಿಸುತ್ತವೆ. ನಿನಗೆ ಒಳಗಿನವರಿಂದ ಉಂಟಾಗಿರುವ ಆಪತ್ತು ನಿನ್ನ ಕಾರ್ಯಗಳಿಂದಲೇ. ಅಕ್ರೂರಾದಿಗಳು ನಿನ್ನ ಕಾರ್ಯಗಳಿಗನುಗುಣವಾಗಿ ಪ್ರತಿಕ್ರಿಯೆ ನೀಡುತ್ತಾರೆ. ಇದಕ್ಕೆ ಕಾರಣ ನೀನೆ ಹಂಚಿದ ಐಶ್ವರ್ಯ. ಅದು ನಿನ್ನ ಇಚ್ಛೆಯಿಂದ, ಭಯದಿಂದ, ನಿನಗೆ ಬಂದ ಐಶ್ವರ್ಯವಿರಬಹುದು. ಅದೇ ಅವರ ಬೆಳವಣಿಗೆಗೆ ಕಾರಣವಾಗಿ ಮುಂದೆ ನಿನಗೆ ತೊಂದರೆದಾಯಕವಾಗಿರಬಹುದು. ಅದನ್ನು ವಾಪಸು ಪಡೆಯಲು ಆಗದೇ ವಾಂತಿ ಮಾಡಿದ ಅನ್ನವನ್ನು ವಾಪಸು ತೆಗೆದುಕೊಳ್ಳಲು ಬರದಿರುವಂತೆ (ಹೇಗೆ ಬರುವುದಿಲ್ಲವೋ ಹಾಗೆ). ಸಾಲದ್ದಕ್ಕೆ ಇವರೆಲ್ಲ ನಿನ್ನ ಜ್ಞಾತಿಗಳೇ ಅಲ್ಲವೇ?

ಮತ್ತೆ ಜ್ಞಾತಿಗಳಲ್ಲಿ ಪರಸ್ಪರ ವಿರೋಧ ಭಯದಿಂದ ಅಕ್ರೂರ (ಬಭ್ರು) ಉಗ್ರಸೇನರ ರಾಜ್ಯವನ್ನು ವಾಪಸು ಪಡೆಯಲಾಗುವುದಿಲ್ಲ. ಭಾರೀ ಪ್ರಯತ್ನದಿಂದ ಹಾಗೇನಾದರೂ ಮಾಡಿದರೆ ಅದಕ್ಕಾಗಿ ಭಾರಿ ಧನ ವ್ಯಯ ಹಾಗೂ ವಿನಾಶಕಾರಿ (ಸೈನ್ಯನಾಶ ಇತ್ಯಾದಿ) ಯಾಗಿ ಸರ್ವನಾಶಕ್ಕೂ ಕಾರಣವಾಗಬಹುದು. ಆದ್ದರಿಂದ ಹೃದಯ(ಮನ) ಬದಲಾಯಿಸುವಂತಹ ಕಠಿಣವೂ ಅಲ್ಲದ (ಕಬ್ಬಿಣದಂತೆ) ಮೃದುವಾದ ಶಸ್ತ್ರದಿಂದ ನಾಲಿಗೆಯನ್ನು ಸವರಿ ಅದನ್ನು ಕತ್ತರಿಸಬೇಕು[೧].

ಇದನ್ನು ಕೇಳಿದ ಕೃಷ್ಣನು ಕಬ್ಬಿಣದಿಂದ ಮಾಡಿದ ಮೃದುವಾದ ಶಸ್ತ್ರವನ್ನು ತಿಳಿಯುವುದು ಹೇಗೆ? ಎಂದು ಅಜ್ಞಾನಿಯಂತೆ ಮತ್ತೆ ಪ್ರಶ್ನಿಸುತ್ತಾನೆ.

ಇದಕ್ಕೆ ನಾರದರು

೧. ಯಾವಾಗಲೂ ಯಥಾಶಕ್ತಿ ಅನ್ನದಾನ, ತಿತಿಕ್ಷಾ(ತಾಳ್ಮೆ, ಸಹನೆ), ಇಂದ್ರಿಯನಿಗ್ರಹ, ಆರ್ಜವ(ತ್ರಿಕರಣಶುದ್ಧಿ), ಅವರವರ ಯೋಗ್ಯತೆಗನುಗುಣವಾಗಿ ಗೌರವಗಳೇ 'ಕಬ್ಬಿಣದಿಂದ ಮಾಡಿದ ಅಸ್ತ್ರ[೨].

೨. ಜ್ಞಾತಿಗಳು ಕಟುವಾಗಿ (ನಿಷ್ಠುರವಾಗಿ, ತೀಕ್ಷ್ಣವಾಗಿ) ಅನಾದರದಿಂದ ಮತನಾಡಿದರೂ, ಅವರ ಮನಸ್ಸನ್ನು ಮತ್ತು ಮಾತನ್ನು ಒಳ್ಳೆಯ ಮಾತುಗಳಿಂದ ಸಮಾಧಾನ ಮಾಡುವುದು (ನೀನು ಅವರಂತೆ ಮಾತನಾಡದಿರುವುದು) ಇದುವೇ ಮಹಾಪುರುಷನಂತೆ ಇರುವುದು.

---

೧ ಅನಾಯಾಸೇನ ಶಸ್ತ್ರೇಣ ಮೃದುನಾ ಹೃದಯಚ್ಛಿದಂ ।
ಜಿಹ್ವಾಮುದ್ಧರ ಸರ್ವೇಷಾಂ ಪರಿಮೃಜ್ಯಾನು ಮೃಜ್ಯ ಚ ॥ - ೮೩/೧೯

೨ ಶಕ್ತ್ಯಾನ್ನದಾನಂ ಸತತಂ ತಿತಿಕ್ಷಾ ದಮ ಆರ್ಜವಮ್ ।
ಯಥಾರ್ಹಪ್ರತಿಪೂಜಾ ಚ ಶಸ್ತ್ರಮೇತದನಾಯಸಮ್ ॥ - ೮೩/೨೧

೩. ಸಮತಟ್ಟಾದ ಪ್ರದೇಶದಲ್ಲಿ ಎಲ್ಲ ಎತ್ತುಗಳು ಭಾರಿ ಭಾರವನ್ನು ಹೊರುತ್ತವೆ. ಆದರೆ ದುರ್ಗಮ ಪ್ರದೇಶಗಳಲ್ಲಿ ಒಳ್ಳೆಯ ಹಸುವಿನಿಂದ ಜನಿಸಿದ ಎತ್ತು ಮಾತ್ರ ಅಸಾಧ್ಯವಾದ ಭಾರವನ್ನು ಹೊರುತ್ತದೆ[1].

೩. ನೀನು ಭೋಜಾಂಧಕ ವೃಷ್ಣಿ ಕುಲಗಳಲ್ಲಿ ಪ್ರಧಾನ. ಇದರಲ್ಲಿ ವಿರೋಧವುಂಟಾದರೆ ವಿನಾಶ ಖಚಿತ. ಆದ್ದರಿಂದ ನೀನೇ ಪ್ರಧಾನವಾಗಿರುವ ಈ ಸಮೂಹನಾಶ ಹೊಂದದಂತೆ ವರ್ತಿಸು. ಅದು ಹೇಗೆ ಎಂದರೆ ಪ್ರಾಜ್ಞನಂತೆ. ಅದಕ್ಕಾಗಿ ಬುದ್ಧಿ(ಕಾರ್ಯಾಕಾರ್ಯವಿವೇಕ), ಇಂದ್ರಿಯ ನಿಗ್ರಹ, ಧನತ್ಯಾಗ ಗುಣಗಳೇ ನಿನ್ನನ್ನು ಪ್ರಾಜ್ಞನಾಗಿ ಮಾಡುತ್ತವೆ. ಜ್ಞಾತಿಗಳಿಗೆ ಧನ, ಕೀರ್ತಿ, ಆಯುಷ್ಯ, ಶುಭೋನ್ನತಿಗಳಾಗುವಂತೆ ಮಾಡು. ಆಗ ಅವರ ವಿನಾಶವಾಗದು[2].

೪. ಕಾಲತ್ರಯ ಜ್ಞಾನಿಯಾಗಿರುವ ನೀನು ತಿಳಿಯದಿರುವುದು ಏನೂ ಇಲ್ಲ. ನಿನ್ನ ಎಲ್ಲ ಕುಲಬಾಂಧವರು, ಎಲ್ಲ ಲೋಕಗಳು, ಲೋಕೇಶ್ವರರಾದ ದೇವತೆಗಳೂ ನಿನ್ನನ್ನು ಆಶ್ರಯಿಸಿದ್ದಾರೆ. ನಿನ್ನ ಬುದ್ಧಿಯನ್ನೇ ಆಶ್ರಯಿಸಿದ್ದಾರೆ. ನೀನೇ ಎಲ್ಲ ಜೀವಿಗಳ ಗುರು. ನಿನ್ನನ್ನು ಹೊಂದಿಯೇ ಜ್ಞಾತಿಗಳು ಸುಖ ಪಡೆಯುತ್ತಾರೆ. ಹೀಗಿರುವಾಗ ನಿನಗೆಲ್ಲಿ ಕ್ಲೇಶ. ಇದೆಲ್ಲ ಲೋಕವಿಡಂಬನೆ[3].

## ಸಂದೇಶಗಳು

೧. ನಾರದರ ಉತ್ತರದಲ್ಲಿ ಸಂದೇಶಗಳೇ ಇವೆ.

೨. ಕೃಷ್ಣನು ಲೋಕದೃಷ್ಟಿಯಿಂದ ಬಹುಕುಟುಂಬ ವ್ಯವಸ್ಥೆಯ ಸಮಸ್ಯೆಗಳನ್ನು ಅಜ್ಞಾನಿಯಂತೆ ಪ್ರಶ್ನಿಸಿ ಉತ್ತರ ಪಡೆದಿದ್ದಾನೆ.

---

೧ ಸರ್ವ ಏವ ಗುರುಂ ಭಾರಮನಡ್ವಾನ್ ವಹತೇ ಸಮೇ।
ದುರ್ಗೇ ಪ್ರತೀತಃ ಸುಗಮೋ ಭಾರಂ ವಹತಿ ದುರ್ವಹಮ್ ॥ - ೮೩/೨೪

೨ ಭೇದಾದ್ವಿನಾಶಃ ಸಂಘಾನಾಂ ಸಂಘಮುಖ್ಯೋಽಸಿ ಕೇಶವ।
ಯಥಾ ತ್ವಾಂ ಪ್ರಾಪ್ಯ ನೋತ್ಸೀದೇದಯಂ ಸಂಘಸ್ತಥಾ ಕುರು ॥
ನಾನ್ಯತ್ರ ಬುದ್ಧಿಕ್ಷಾಂತಿಭ್ಯಾಂ ನಾನ್ಯತ್ರೇಂದ್ರಿಯನಿಗ್ರಹಾತ್ ।
ನಾನ್ಯತ್ರ ಧನಸಂತ್ಯಾಗಾದ್ ಗಣಃ ಪ್ರಾಜ್ಞೇಽವತಿಷ್ಠತೇ ॥
ಧನ್ಯಂ ಯಶಸ್ಯಮಾಯುಷ್ಯಂ ಸ್ವಪಕ್ಷೋದ್ಭಾವನಂ ಶುಭಮ್ ।
ಜ್ಞಾತೀನಾಮವಿನಾಶಃ ಸ್ಯಾದ್ ಯಥಾ ಕೃಷ್ಣ ತಥಾ ಕುರು ॥

೩ ಮಾಧವಾಃ ಕುಕುರಾ ಭೋಜಾ ಸರ್ವೇ ಬಾಂಧಕವೃಷ್ಣಯಃ।
ತ್ವಯ್ಯಾಸಕ್ತಾ ಮಹಾಬಾಹೋ ಲೋಕಾಲೋಕೇಶ್ವರಾಶ್ಚಯೇ ॥ -೮೩/೨೯
ಉಪಾಸತೇ ಹಿ ತ್ವದ್ಬುದ್ಧಿ ಮೃಷಯಶ್ಚಾಪಿ ಮಾಧವ।
ತ್ವಂ ಗುರುಃ ಸರ್ವಭೂತಾನಾಂ ಜಾನೀಷೇ ತ್ವಂ ಗತಾಗತಮ್ ॥
ತ್ವಮಾಸಾದ್ಯ ಯದುಶ್ರೇಷ್ಠಮೇಂಧಂತೇ ಜ್ಞಾತಿನಃ ಸುಖಮ್ ॥ - ೮೩/೩೦

೩. ನಾರದರು ಕೃಷ್ಣ ಸರ್ವೋತ್ತಮತ್ವವನ್ನು ತಿಳಿದೇ ಹೇಳಿದ್ದಾರೆ.

೪. ಉಳಿದ ಸಾಮಾನ್ಯ ಜೀವಿಗಳು ಇಂತಹ ಜ್ಞಾತಿವಿರೋಧಿಗಳ ಮಧ್ಯೆ ಹೇಗೆ ವರ್ತಿಸಬೇಕೆಂದು ತಿಳಿಸುತ್ತಾರೆ, ನಾರದರು.

ಉತ್ತರದ ಸಾರಾಂಶ – ೧, ಬಹುಕುಟುಂಬದ ಮಧ್ಯೆ ಪ್ರಕಾಶಿಸಬೇಕಾದರೆ ಪ್ರಾಜ್ಞನಾಗಿರಬೇಕು, ಜ್ಞಾನಿಯಾಗಿರಬೇಕು.

೨. ಜಿತೇಂದ್ರಿಯನಾಗಿರಬೇಕು. ನಿರ್ಧಾರಗಳ ಪರಿಣಾಮ ತಿಳಿದಿರಬೇಕು.

೩. ತಾಳ್ಮೆ, ಸಹನೆ, ಕ್ಷಮಾಗುಣ, ತನ್ನಲ್ಲಿರುವ ಐಶ್ವರ್ಯವನ್ನು ಜ್ಞಾತಿಗಳಿಗೆ ಸೂಕ್ತವಾಗಿ ಹಂಚುವ ಗುಣವಿದ್ದವನು ಎಂತಹ ವಿಷಯಸನ್ನಿವೇಶದಲ್ಲೂ ಮಾನ್ಯನಾಗುತ್ತಾನೆ.

ಇತ್ಯಾದಿ...

# ೧೬೮. ಕಾಲವೃಕ್ಷೀಯ ಮುನಿ-ಕೋಸಲರಾಜನ ಸಂವಾದ

ಭೀಷ್ಮರು ಅವಿಭಕ್ತಕುಟುಂಬಗಳಲ್ಲಿನ ಭಿನ್ನಮತ, ಭಿನ್ನಾಭಿಪ್ರಾಯ, ಭಿನ್ನ ವ್ಯಕ್ತಿತ್ವಗಳ ಮಧ್ಯೆ ವಿಶ್ವಾಸಾರ್ಹತೆಯ ಬಗ್ಗೆ ಹೇಗೆ ಒಬ್ಬ ಧೀಮಂತ ವ್ಯಕ್ತಿಯು ವ್ಯವಹರಿಸಬೇಕು ಎಂಬ ವಿಚಾರವಾಗಿ ಸ್ವಯಂ ಭಗವಂತನಾದ ಕೃಷ್ಣನು ನಾರದರಿಂದ ಮಾರ್ಗದರ್ಶನ ಕೇಳಿದವನಂತೆ ಮಾಡಿದುದನ್ನು ಹಿಂದಿನ ಅಧ್ಯಾಯದಲ್ಲಿ (ಅ-೮೩) ನೋಡಲಾಗಿದೆ. ಅದರ ಸೂಕ್ಷ್ಮತೆಯನ್ನು ಹೇಗೆ ನಿಭಾಯಿಸಬೇಕು ಎಂದು ತಿಳಿಸಿದ ಭೀಷ್ಮರು ಅದನ್ನು ಪ್ರಾಥಮಿಕ ಕರ್ತವ್ಯವೆಂದು ಕರೆದರು. ಎರಡನೆಯದಾಗಿ ರಾಜ್ಯದ ಕೋಶಾಭಿವೃದ್ಧಿಗೆ ಸಹಾಯಕನಾದವನನ್ನು ರಕ್ಷಿಸು-ವುದೂ ರಾಜನ ಆದ್ಯ ಕರ್ತವ್ಯವೆಂಬುದಾಗಿ ಹೇಳುತ್ತಾರೆ. ರಾಜ್ಯದ ಕೋಶವನ್ನು (ಬೊಕ್ಕಸ-ಐಶ್ವರ್ಯ) ಕೆಲವೊಂದು ವೇಳೆ ಅಮಾತ್ಯರು ದುರುಪಯೋಗ ಪಡಿಸಿಕೊಳ್ಳುತ್ತಿದ್ದರೆ, ಅಪಹಾರ ಮಾಡುತ್ತಿದ್ದಲ್ಲಿ ಅಂತಹ ಮಾಹಿತಿದಾರನನ್ನು (Informer of Secrets) ಅಮಾತ್ಯರಿಂದ ರಕ್ಷಿಸಬೇಕು. ಈ ಬಗ್ಗೆ **ಕಾಲವೃಕ್ಷೀಯನೆಂಬ ಮುನಿಯು ಕೋಸಲದೇಶರಾದ ಕ್ಷೇಮದರ್ಶಿಗೆ ಹೇಗೆ ಮಾಹಿತಿ ನಿಡಿದ**, ಅದನ್ನರಿತ ರಾಜ ಆತನನ್ನು ರಕ್ಷಿಸಿದುದನ್ನು ಅವರ ಸಂವಾದ ರೂಪದ ಇತಿಹಾಸದ ಮೂಲಕ ಈ ಅಧ್ಯಾಯದಲ್ಲಿ ಹೇಳಲಾಗಿದೆ[೧].

ಕೋಸಲದೇಶದರಾಜ **ಕ್ಷೇಮದರ್ಶಿ**, ಅವನ ಬಳಿಗೆ ಕಾಲವೃಕ್ಷೀಯ ಎಂಬ ಮುನಿ ಬಂದು ರಾಜ್ಯದಲ್ಲಿ ಅಮಾತ್ಯಾದಿಗಳು (ಅಮಾತ್ಯ ಹಾಗೂ ಅವರ ಭೃತ್ಯರು, ನೌಕರರು) ಹೇಗೆ ರಾಜ್ಯದ ಕೋಶವನ್ನು ರಾಜನ ಅರಿವಿಗೆ ಬರದಂತೆ ಅಪಹರಿಸುತ್ತಿದ್ದಾರೆಂದು ವಿವರಿಸಿ, ತನಗೆ ರಕ್ಷಣೆ ಕೊಡಲು ಕೇಳಿಕೊಂಡ. ಅವನು ಹೇಗೆ ಈ ವಿಷಯಗಳನ್ನು (ಮಾಹಿತಿ) ಸಂಗ್ರಹಿಸಿದ ಎಂದೂ ರಾಜನಿಗೆ ಹೇಳುತ್ತಾನೆ.

---

೧ ಹ್ರಿಯಮಾಣಮಮಾತ್ಯೇನ ಭೃತೋ ವಾ ಯದಿ ವಾಽಭೃತಃ।
ಯೋ ರಾಜಕೋಶಂ ನಶ್ಯಂತಮಾಚಕ್ಷೀತ ಯುಧಿಷ್ಠಿರ॥
ಶ್ರೋತವ್ಯಂ ತಸ್ಯ ಚ ರಹೋ ರಕ್ಷ್ಯಶ್ಚಾಮಾತ್ಯತೋ ಭವೇತ್।
ಅಮಾತ್ಯಾಶ್ಚಾಪಹರ್ತಾರಃ ಭೂಯಿಷ್ಠಂ ಘ್ನಂತಿ ಭಾರತ॥
ರಾಜಕೋಶಸ್ಯ ಗೋಪ್ತಾರಃ ರಾಜಕೋಶವಿಲೋಪಕಾಃ।
ಸಮೇತ್ಯ ಸರ್ವೇ ಬಾಧಂತೇ ಸ ವಿನಶ್ಯತ್ಯರಕ್ಷಿತಃ॥ - ೮೪/೨-೪

ರಾಜನ್! ನಾನು ಒಂದು ಪಂಜರದಲ್ಲಿ ಕಾಗೆಯನ್ನು ಇಟ್ಟುಕೊಂಡು ನಿನ್ನ ರಾಜ್ಯದಲ್ಲಿ ಅಲ್ಲಲ್ಲಿ ಸುತ್ತಾಡಿ ರಾಜ್ಯದ ಅಮಾತ್ಯರು ಮೊದಲಾದವರು ನಿನ್ನ ಐಶ್ವರ್ಯವನ್ನು ಹೇಗೆ ಅಪಹರಿಸುತ್ತಿದ್ದಾರೆ ಎಂದು ಜನರಿಂದ ಕೇಳಿ ತಿಳಿದುಕೊಂಡೆ. ಜನರು ಹೇಳಿದುದನ್ನು ಈ ಕಾಗೆ ಎಲ್ಲವನ್ನೂ ಗ್ರಹಿಸುತ್ತದೆ. ನಾನೂ ವಾಯಸವಿದ್ಯೆ(ಕಾಗೆಯ ವಿದ್ಯೆ, ಅದರ ಮಾತುಗಳು, ಅವುಗಳ ಅರ್ಥ)ಯನ್ನು ಕಲಿಯುತ್ತಿದ್ದೇನೆ. ಕಾಗೆ ತಾನು ಕೇಳಿದುದನ್ನು ರಾಜಸಭೆಯಲ್ಲಿ ನಾನು ನಿಮ್ಮ ಸಭೆಯಲ್ಲಿ ಅಮಾತ್ಯರ ಮುಂದೆ ಹೇಳುತ್ತಿದ್ದೇನೆ. ಕಾಗೆಯು ವರ್ತಮಾನ, ಭೂತ, ಭವಿಷ್ಯತ್‌ಕಾಲದ ವಿಷಯಗಳನ್ನು ಹೇಳುತ್ತವೆ. ಅಮಾತ್ಯರು ಮಾಡಿದ ಅವ್ಯವಹಾರಗಳನ್ನು ಅವರಿಗೆ ಹೇಳಿದೆ. ಅದನ್ನು ಒಪ್ಪಲೂ ತಿಳಿಸಿದೆ. ಅಲ್ಲದೆ ಇತರ ನೌಕರರು ಮಾಡಿದ ಅಪಹರಣದ ವಿಷಯಗಳನ್ನು ಹೇಳಿದ್ದೇನೆ. ನಾನು ಸತ್ಯವ್ರತಧಾರಿಯಾಗಿದ್ದು ಈ ವಿಷಯದಲ್ಲಿ ಸರ್ವಜ್ಞನೂ ಆಗಿದ್ದೆನೆ (ಎಲ್ಲ ತಿಳಿದಿದ್ದೇನೆ).

ಇದೆಲ್ಲವನ್ನೂ ಕೇಳಿದ ರಾಜನು ವಿಚಾರಿಸಿದಾಗ, ಅವನಿಗೆ ಅದೆಲ್ಲ ಸುಳ್ಳೆನಿಸಲಿಲ್ಲ(ಸತ್ಯವಾಗಿ ಕಂಡಿತು). ಅಮಾತ್ಯರು ಹಾಗೂ ಇತರ ನೌಕರರು ರಾಜ್ಯಕೋಶವನ್ನು ಅಪಹರಿಸಿದ್ದಾರೆಂದು ರಾಜನಿಗೆ ಮನದಟ್ಟಾಯಿತು.

ರಾಜನ್! ಕಾಗೆಯಿಂದ ಅಪಹಾರ ವಿಷಯ ಬಯಲಾಗಲು ಆ ನೌಕರರು ರಾತ್ರಿ ಕಾಗೆ ನಿದ್ರೆ ಹೋದಾಗ ಬಾಣದಿಂದ ಕೊಂದಿದ್ದಾರೆ. ಬೆಳಗೆದ್ದು ನೋಡಿದ ಮುನಿ ರಾಜನಾದ ಕ್ಷೇಮದರ್ಶಿ ಬಳಿಗೆ ಬಂದು ತನಗೆ ಅಭಯವನ್ನು ಕೊಡಬೇಕೆಂದೂ, ಮತ್ತು ಅನುಮತಿ ಕೊಟ್ಟರೆ ರಾಜನಿಗೆ ಕೆಲ ಹಿತವಚನಗಳನ್ನು ಹೇಳುವುದಾಗಿ ನುಡಿದನು.

ರಾಜನೇ! ನಾನು ನಿನ್ನ ಮಿತ್ರ. ನಿನ್ನ ಮೇಲಿನ ಸ್ನೇಹದಿಂದ ಬಂದಿದ್ದೇನೆ. ನಿನ್ನ ಕೋಶದ ಅಪಹಾರದ ಬಗ್ಗೆ ನನಗೆ ಬಹಳ ದುಃಖವಾಗಿದೆ. ನಿನ್ನ ಕೋಶರಕ್ಷಣೆಗೆ ಸಹಾಯಕನಾದ ನನ್ನನ್ನು ನಿನ್ನ ಮಂತ್ರಿಗಳು ಅಪಹರಿಸಲು ಯತ್ನಿಸುತ್ತಿದ್ದಾರೆ. ನಿನ್ನ ಹಿತವನ್ನೇ ಹೇಳುವ ನನ್ನ ಮಾತುಗಳನ್ನು ಕ್ಷಮಿಸು.

ಆಗ ರಾಜನು ಅವಶ್ಯವಾಗಿ ನನ್ನನ್ನು ರಕ್ಷಿಸುವ ನಿನ್ನನ್ನು ಹೇಗೆ ತಾನೇ ಕ್ಷಮಿಸದಿರಲಿ. ನೀನು ಹೇಳಬೇಕೆನಿಸಿದುದನ್ನು ಹೇಳು. ನೀನು ಹೇಳಿದಂತೆ ನಡೆಯುತ್ತೇನೆ ಎಂದು ವಾಗ್ದಾನ ಮಾಡಿದನು[೧].

---

೧ ಸ ಬುಧ್ವಾ ತಸ್ಯ ರಾಷ್ಟ್ರಸ್ಯ ವ್ಯವಹಾರಂ ಹಿ ಸರ್ವಶಃ।
ರಾಜಯುಕ್ತಾಪರಾಂಶ್ಚ ಸರ್ವಾನ್ ಬುಧ್ವಾ ತತಸ್ತತಃ॥
ತಮೇವ ಕಾಕಮಾದಾಯ ರಾಜಾನಂ ದ್ರಷ್ಟುಮಾಗತಮ್।
ಸರ್ವಜ್ಞೋಽಸ್ಮೀತಿ ವಚನಂ ಬ್ರುವಾಣಃ ಸಂಶಿತವ್ರತಃ॥
ಪ್ರಾಹ ಕಾಕಸ್ಯ ವಚನಾದಮುತ್ರೇದಂ ತ್ವಯಾ ಕೃತಮ್।
ಅಸೌ ಚಾಸೌ ಚ ಜಾನೀತೇ ರಾಜಕೋಶಸ್ತ್ವಯಾ ಹೃತಃ॥

ರಾಜನಿಗೆ ಮುನಿಯ ಹಿತವಚನಗಳು –

೧. ರಾಜನ್ ನಿನ್ನ ರಾಜ್ಯದಲ್ಲಿಯೇ ನಿನ್ನ ಭೃತ್ಯರಿಂದ ಆಗುತ್ತಿರುವ ಅನ್ಯಾಯಗಳನ್ನು ತಿಳಿದು, ನಿನಗೆ ಆಗುತ್ತಿರುವ ಭಯವನ್ನು (ನಿನಗೆ ತಿಳಿಯದ) ತಿಳಿದು ನಿನ್ನ ಮೇಲಿನ ಸ್ನೇಹದಿಂದ ಅವೆಲ್ಲವನ್ನು ತಿಳಿಸಲು ಬಂದಿದ್ದೇನೆ. ದಯಮಾಡಿ ನಾನು ಹೇಳುವುದನ್ನು ಕೇಳು[1].

೨. ರಾಜರೊಡನೆ ಅತಿ ಸಂಪರ್ಕ ಸರ್ಪಗಳ ಸಹವಾಸವಿದ್ದಂತೆ. ಅವನಿಗೆ ಮಿತ್ರರೂ, ಶತ್ರುಗಳೂ ಇಬ್ಬರೂ ಬಹಳ. ರಾಜೋಪಜೀವಿಗಳಿಗೆ ಅವರಿಂದ ಹಾಗೂ ರಾಜನಿಂದಲೂ ಭಯವಿರುತ್ತದೆ. ಇವರಲ್ಲಿ ಯಾವ ಒಬ್ಬನಿಂದಲೂ ಉಳಿದವರಿಗೆ ಒಂದೇ ಮುಹೂರ್ತದಲ್ಲಿ ಭಯ ಬರಬಹುದು[2].

೩. ತನಗೆ ಒಳ್ಳೆಯದನ್ನು ಬಯಸುವವನು ಎಂದೂ ಪ್ರಮಾದವನ್ನು (ಯಾವುದೇ ತಪ್ಪನ್ನು) ಮಾಡಬಾರದು. ಮಾಡಿದರೆ ರಾಜನದೂ ತಪ್ಪಾಗಬಹುದು. ರಾಜನು ತಪ್ಪೆಸಗಿದರೆ ಸೇವಕನು ಉಳಿಯಲಾರನು. ವಿದ್ಯಾವಂತನು ಬೆಂಕಿಯ ನಿಕಟಸಂಪರ್ಕಕ್ಕೆ ಹೋದಂತೆ. ಆದ್ದರಿಂದ ಪ್ರಾಣ ಹಾಗೂ ಧನೇಶ್ವರನನ್ನು ಸೇವಕನು ಕೋಪಗೊಂಡು ಸರ್ಪದ ಬಳಿ ಹೋಗುವಂತೆ, ನಾನು ಉಳಿಯುವುದಿಲ್ಲವೆಂದು ತಿಳಿದೇ ಉಪಚರಿಸಬೇಕು[3] (Service at life risk).

---

ಏವಮಾಖ್ಯಾತಿ ಕಾಕೋಽಯಂ ತಚ್ಛೀಘ್ರಮನುಗಮ್ಯತಾಮ್ ।
ತಥಾನ್ಯಾನಪಿ ಸ ಪ್ರಾಹ ರಾಜಕೋಶ ಹರಾನ್ ಸದಾ ।
ನ ಚಾಸ್ಯ ವಚನಂ ಕಿಂಚಿದನೃತಂ ಶ್ರೂಯತೇ ಕ್ವಚಿತ್ ।
ತಮತಿಕ್ರಮ್ಯ ಸುಪ್ತಸ್ಯ ನಿಶಿ ಕಾಕಮಪೋಥಯನ್ ।
ಪೂರ್ವಾಹ್ಣೇ ಬ್ರಾಹ್ಮಣೋ ವಾಕ್ಯಂ ಕ್ಷೇಮದರ್ಶಿನಮಬ್ರವೀತ್ ।
ಬ್ರಾಹ್ಮಣ ಪ್ರತಿಜಾನಾಹಿ ಪ್ರಬ್ರೂಹಿ ಯದಿ ಚೇಚ್ಛಸಿ ।
ಕರಿಷ್ಯಾಮಿ ಹಿ ತೇ ವಾಕ್ಯಂ ಯದ್ಯನ್ಮಾಂ ವಿಪ್ರ ವಕ್ಷ್ಯಸಿ ॥ – ೮೪/೬-೨೨

೧ ಜ್ಞಾತ್ವಾ ನಯಾನಪಾಯಾಂಶ್ಚ ಭೃತ್ಯತಸ್ತೇ ಭಯಾನಿ ಚ ।
ಭಕ್ತ್ಯಾ ವೃತ್ತಿಂ ಸಮಾಖ್ಯಾತುಂ ಭವತೋಽತಿಕಮಾಗಮಮ್ ॥ – ೮೪/೨೩

೨ ಆಶೀವಿಷೈಶ್ಚ ತಸ್ಯಾಹುಃ ಸಂಗತಂ ಯಸ್ಯ ರಾಜಭಿಃ ।
ಬಹುಮಿತ್ರಾಶ್ಚ ರಾಜಾನೋ ಬಹ್ವಮಿತ್ರಾಸ್ತಥೈವ ಚ ॥
ತೇಭ್ಯಃ ಸರ್ವೇಭ್ಯ ಏವಾಹುರ್ಭಯಂ ರಾಜೋಪಸೇವಿತಮ್ ।
ಅಥೈಷಾಮೇಕತೋ ರಾಜನ್ ಮುಹೂರ್ತಾದೇವ ಭೀರ್ಭವೇತ್ ॥ – ೮೪/೨೪,೨೬

೩ ನೈಕಾಂತೇನಾಪ್ರಮಾದೋ ಹಿ ಕರ್ತುಂ ಶಕ್ಯೋ ಮಹೀಪತೌ ।
ನ ತು ಪ್ರಮಾದಃ ಕರ್ತವ್ಯಃ ಕಥಂಚಿದ್ ಗತಿಮಿಚ್ಛತಾ ॥
ಪ್ರಮಾದಾದ್ಧಿ ಸ್ಖಲೇದ್ ರಾಜಾ ಸ್ಖಲಿತೇ ನಾಸ್ತಿ ಜೀವಿತಮ್ ।
ಅಗ್ನಿಂ ದೀಪ್ತಮಿವಾಸೀದೇದ್ ರಾಜಾನಮುಪಶಿಕ್ಷಿತಃ ॥
ಆಶೀವಿಷಮಿವ ಕ್ರುದ್ಧಂ ಪ್ರಭುಂ ಪ್ರಾಣಧನೇಶ್ವರಮ್ ।
ಯತ್ನೇನೋಪಚರೇನ್ನಿತ್ಯಂ ನಾಹಮಸ್ಮೀತಿ ಮಾನವಃ ॥ – ೮೪/೨೭-೨೯

೪. ರಾಜನೆದುರಿಗೆ ಕೆಟ್ಟ ಮಾತುಗಳನ್ನು ಆಡಬಾರದು. ಕೆಟ್ಟ ಕೆಲಸ (ರಾಜನಿಗೆ ಅಪ್ರೀತಿಕರ) ಮಾಡಬಾರದು. ಮನಸ್ಸಿಗೆ ಬಂದಂತೆ ಕುಳಿತುಕೊಳ್ಳಬಾರದು, ನಿಲ್ಲಬಾರದು, ಓಡಾಡಬಾರದು. ಅಂಗಚೇಷ್ಟೆ(ಬೇರೆಯವರಿಗೆ ಸಂಕೇತ)ಗಳನ್ನು ಮಾಡಬಾರದು.

೫. ರಾಜನು ದೇವತೆಯಂತೆ. ಪ್ರಸನ್ನನಾದರೆ ಎಲ್ಲ ಅರ್ಥ (ಸೇವಕರಿಗೆ ಬೇಕಾದ ಸುಖ ಸಾಮಗ್ರಿ)ಗಳನ್ನು ಕೊಡುತ್ತಾನೆ. ಕೋಪಗೊಂಡರೆ ಅಗ್ನಿಯಂತೆ ನಿರ್ಮೂಲ ಮಾಡಬಲ್ಲ[೧].

ಹೀಗೆ ಮಯ ಹೇಳಿದ್ದಾನೆ[೨].

೬. ರಾಜನ್ ನನ್ನಂಥ ಅಮಾತ್ಯರು ನಿನ್ನ ಆಪತ್ಕಾಲದಲ್ಲಿ ಬುದ್ಧಿ ಸಹಾಯ ನೀಡುತ್ತಾರೆ. ನನ್ನ ಕಾಗೆಯನ್ನು (ನಿನ್ನವರು) ಕೊಂದಿದ್ದಾರೆ. ಅದಕ್ಕಾಗಿ ನಾನು ನಿನ್ನನ್ನಾಗಲೀ, ನೀನು ಯಾರಿಗೆ ಪ್ರೀತಿಯೋ ಅವರನ್ನಾಗಲೀ ನಿಂದೆ ಮಾಡೆನು. ಆದರೆ ನೀನು ಕಣ್ಣು ಮುಚ್ಚದೇ ಹಿತಾಹಿತಗಳನ್ನು ತಿಳಿ. ನನ್ನ ಕಾಗೆಯನ್ನು ಕೊಂದವರು ನಿನ್ನ ಮನೆಯಲ್ಲಿಯೇ ವಾಸಮಾಡಿ, ನಿನ್ನ ದಾರಿದ್ರ್ಯವನ್ನು ಬಯಸಿ, ನಿನ್ನ ಐಶ್ವರ್ಯವನ್ನು ಅಪಹರಿಸಿದವರು. ಅವರೆಲ್ಲ ನಿನ್ನ ಹತ್ತಿರದವರೇ. ಅಂತಃಶತ್ರುಗಳು. ಆದರೆ, ಅವರು ನಿನ್ನ ರಾಜ್ಯವನ್ನು ಕಿತ್ತುಕೊಳ್ಳಲಾರರು. ಆದರೆ, ನಾನು ಅವರ ಭಯದಿಂದ ಬೇರೊಂದು ಆಶ್ರಮಕ್ಕೆ ಹೋಗುವೆ. ವಾಸ್ತವವಾಗಿ ನನ್ನ ಮೇಲೆ ಅವರು ಬಿಟ್ಟ ಬಾಣ ನನ್ನ ಕಾಗೆಯನ್ನು ಕೊಂದಿತು (ದೈವವಶಾತ್). ಇದನ್ನು ನಾನು ದಿವ್ಯಜ್ಞಾನದಿಂದ ತಿಳಿದುಕೊಂಡಿದ್ದೇನೆ (ತಪಸ್ಸಿನಿಂದ).

೭. ನೀನು ಅನೇಕ ಮೊಸಳೆ, ತಿಮಿಂಗಲಗಳಿಂದ ಕೂಡಿರುವ ನದಿಯಂತೆ ಇದ್ದು ನಾನು ದುರ್ಬಲವಾದ ಕಾಗೆಯಿಂದ ದಾಟಿದ್ದೇನೆ[೩]. ಕತ್ತಲಿರುವ ದುರ್ಗವನ್ನು ಅಗ್ನಿಯಿಂದಲೂ, ಜಲದುರ್ಗವನ್ನು ನೌಕೆಯಿಂದಲೂ ದಾಟಬಹುದು. ಆದರೆ ರಾಜದುರ್ಗವನ್ನು ದಾಟುವುದು ಪಂಡಿತರಿಗೂ ತಿಳಿಯದು[೪]. ನಿನ್ನ ರಾಜ್ಯ ಕಾರ್ಗತ್ತಲಿನ ಕಾಡಾಗಿದೆ. ಇಲ್ಲಿ ನೀನೂ ವಿಶ್ವಾಸದಿಂದ

---

೧ ದೇವತೇವ ಹಿ ಸರ್ವಾರ್ಥಾನ್ ಕುರ್ಯಾದ್ ರಾಜಾ ಪ್ರಸಾದಿತಃ।
ವೈಶ್ವಾನರ ಇವ ಕ್ರುದ್ಧಃ ಸಮೂಲಮಪಿ ನಿರ್ದಹೇತ್।
ಇತಿ ರಾಜನ್ ಮಯಃ ಪ್ರಾಹ ವರ್ತತೇ ಚ ತಥೈವ ತತ್॥ - ೮೪/೩೧

೨ ದುರ್ವ್ಯಾಹತಾಚ್ಛಂಕಮಾನೋ ದುಷ್ಕೃತಾದ್ ದುರಧಿಷ್ಠಿತಾತ್।
ದುರಾಸಿತಾದ್ ದುರ್ವ್ರಜಿತಾದಿಂಗಿತಾದಂಗಚೇಷ್ಟಿತಾತ್॥
ದೇವತೇವ ಹಿ ಸರ್ವಾರ್ಥಾನ್ ಕುರ್ಯಾದ್ ರಾಜಾ ಪ್ರಸಾದಿತಃ।
ವೈಶ್ವಾನರ ಇವ ಕ್ರುದ್ಧಃ ಸಮೂಲಮಪಿ ನಿರ್ದಹೇತ್।
ಇತಿ ರಾಜನ್ ಮಯಃ ಪ್ರಾಹ ವರ್ತತೇ ಚ ತಥೈವ ತತ್॥ - ೮೪/೩೦,೩೧

೩ ಬಹುನಕ್ರಝಷಗ್ರಾಹಾಂ ತಿಮಿಂಗಿಲಗಣಾಯುತಾಮ್।
ಕಾಕೇನ ಬಾಲಿಶೇನೇಮಾಮತಾರ್ಷಂ ತ್ವಾಮಹಂ ನದೀಮ್॥ - ೮೪/೩೮

೪ ಅಗ್ನಿನಾ ತಾಮಸಂ ದುರ್ಗಂ ನೌಭಿರಾಪ್ಯಂ ಚ ಗಮ್ಯತೇ।

ಇರಲಾರೆ ಎಂದ ಮೇಲೆ ನಾನು ಹೇಗೆ ಇರಲಿ. ಇಲ್ಲಿ ಒಳ್ಳೆಯ, ಕೆಟ್ಟ ಕಾರ್ಯಗಳು ಸಮಾನವಾಗಿವೆ. ಒಳ್ಳೆಯ ಕಾರ್ಯಕ್ಕೂ ವಧೆಯೇ ಫಲ[೧].

೮. ನಿನ್ನ ಭೋಜನ ವಿಷಯುಕ್ತ ಭೋಜನದಂತಿದೆ. ನೀನೊಂದು ಮಧುಪ್ರಪಾತ. ನಿನ್ನ ಅಭಿಪ್ರಾಯ ದುರ್ಜನರನ್ನು ಹೋಲುತ್ತದೆ. ನೀನೊಂದು ಸರ್ಪಗಳಿಂದ ಆವೃತವಾದ ಕೂಪದಂತೆ ಇದ್ದೀಯಾ. ನೀನು ನಾಯಿ, ನರಿ, ಹದ್ದುಗಳಿಂದ ಸುತ್ತುವರಿದ ರಾಜಹಂಸದಂತೆ ಇದ್ದೀಯಾ[೨].

೯. ರಾಜನ್! ನೀನೇ ನೇಮಿಸಿದವರು, ನಿನ್ನಿಂದ ರಕ್ಷಿತರಾದವರೇ ನಿನ್ನನ್ನು ತಿರಸ್ಕಾರ ಮಾಡಿ ನಿನ್ನ ಪ್ರಿಯರಾದವರನ್ನು ಕೊಲ್ಲುತ್ತಾರೆ[೩].

೧೦. ನಿನ್ನ ಶೀಲ ತಿಳಿಯಲು ಯಾವ ಪ್ರಮಾದ ಮಾಡದೆ ನಿನ್ನೊಡನೆ ವೀರಪತ್ನಿಯ ಮನೆಯಲ್ಲಿ ಜೀವಿಸದಂತೆ ಇದ್ದೆ. ನೀನು ಜಿತೇಂದ್ರಿಯನೇ. ನಿನ್ನ ಅರಮನೆಯವರನ್ನು ನೀನು ಅರ್ಥಮಾಡಿಕೊಂಡಿದ್ದೀಯಾ(ಜಿತರಾಗಿದ್ದಾರಾ)? ಅವರು ಹಾಗೂ ಪ್ರಜೆಗಳು ರಾಜನಿಗೆ(ಪ್ರಿಯರಾಗಿದ್ದಾರಾ? ಇವುಗಳನ್ನು ತಿಳಿಯಲು ನಿನ್ನ ಹತ್ತಿರ ಇದ್ದ ಹಸಿದವನಿಗೆ ಭೋಜನ ಇಷ್ಟವಾದಂತೆ ನನಗೆ ನೀನು ಇಷ್ಟನಾದೆ[೪] (ನನ್ನ ವಾಸ ಸಫಲವಾಯಿತು).

೧೧. ಆದರೆ ನಿನ್ನ ಅಮಾತ್ಯರು ಮಾತ್ರ ಬಾಯಾರಿಕೆ ಇಲ್ಲದವನಿಗೆ ನೀರಿನಂತೆ (ಇಷ್ಟವಾಗುವಂತೆ) ನನಗೆ ಸರಿ ಬರಲಿಲ್ಲ. ನಿನ್ನ ಹಿತೈಷಿಯೆಂದು ತಿಳಿದ ಅವರು ನನಗೆ ಅಪಚಾರ ಬಗೆದರು. ಬೇರಾವ ಕಾರಣವಿಲ್ಲ. ನಾನು ಅವರಿಗೆ ಯಾವ ದ್ರೋಹವನ್ನೂ ಮಾಡಿಲ್ಲ. ಅದೇ ನನ್ನ ದೋಷವಾಯಿತು (minus point).

---

ರಾಜದುರ್ಗಾವತರಣೇ ನೋಪಾಯಂ ಪಂಡಿತಾ ವಿದುಃ ॥ - ೮೪/೪೦

೧ ಅತೋ ನಾಯಂ ಶುಭೋ ವಾಸಸ್ತುಲ್ಯೇ ಸದಸತೀ ಇಹ ।
ವಧೋ ಹ್ಯೇವಾತ್ರ ಸುಕೃತೋ ದುಷ್ಕೃತೇ ನ ಚ ಸಂಶಯಃ ॥ - ೮೪/೪೨

೨ ಮಧುಪ್ರಪಾತೋ ಹಿ ಭವಾನ್ ಭೋಜನಂ ವಿಷಸಂಯುತಮ್ ।
ಅಸತಾಮಿವ ತೇ ಭಾವೋ ವರ್ತತೇ ನ ಸತಾಮಿವ ॥
ಆಶೀವಿಷೈಃ ಪರಿವೃತಃ ಕೂಪಸ್ತ್ವಮಿವ ಪಾರ್ಥಿವ ॥
ದುರ್ಗತೀರ್ಥಾ ಬೃಹತ್ಕೂಲಾ ಕರೀರೀವೇತ್ರಸಂಯುತಾ ।
ನದೀ ಮಧುರಪಾನೀಯಾ ಯಥಾ ರಾಜಂಸ್ತಥಾ ಭವಾನ್ ।
ಶ್ವಗೃಧ್ರಗೋಮಾಯುಯುತೋ ರಾಜಹಂಸಸಮೋ ಹ್ಯಸಿ ॥ - ೮೪/೪೫,೪೬

೩ ಭವತ್ಯೆವ ಕೃತಾ ರಾಜನ್ ಭವತಾ ಪರಿಪಾಲಿತಾಃ ।
ಭವಂತಂ ಪರ್ಯವಜ್ಞಾಯ ಜಿಘಾಂಸಂತಿ ಭವತ್ಪ್ರಿಯಮ್ ॥ - ೮೪/೪೯

೪ ಉಷಿತಂ ಶಂಕಮಾನೇನ ಪ್ರಮಾದಂ ಪರಿರಕ್ಷತಾ ।
ಅಂತಃಸರ್ಪ ಇವಾಗಾರೇ ವೀರಪತ್ನ್ಯಾ ಇವಾಲಯೇ ।
ಶೀಲಂ ಜಿಜ್ಞಾಸಮಾನೇನ ರಾಜ್ಞಶ್ಚ ಸಹಜೀವಿನಾ ॥ - ೮೪/೫೦-೫೨

ಬ್ರಾಹ್ಮಣ ಮುನಿಯ ಮಾತುಗಳನ್ನು ಕೇಳಿದ ರಾಜನು ಇದುವರೆವಿಗೂ ನೀನು ಸ್ವೀಕರಿಸಿದ ಸತ್ಕಾರ, ಉಡುಗೊರೆಗಳಿಗಿಂತ ಇನ್ನೂ ಹೆಚ್ಚು ಸಂಭಾವನೆಯೊಂದಿಗೆ ನೀನು ನನ್ನ ಮನೆ-ಯಲ್ಲಿರು. ನೀನು ಬಯಸದವರು ನನ್ನ ಮನೆಯಲ್ಲಿ ಯಾರೂ ಇನ್ನು ಮೇಲೆ ಇರುವುದಿಲ್ಲ. ನಾನೇನು ಮುಂದೆ ಮಾಡಬೇಕೆಂದು ನೀನೇ ಸೂಚಿಸು. ನನ್ನನ್ನು ಶ್ರೇಯೋಮಾರ್ಗದಲ್ಲಿ ಸ್ಥಾಪಿಸು[೧].

ರಾಜನ ಅನುಕರಣೀಯ ಮಾತುಗಳಿಂದ ಆನಂದದಿಂದ ಮುನಿಯು **ಹೀಗೆ ಸಲಹೆಗಳನ್ನು** ಕೊಟ್ಟನು.

೧. ವ್ಯಕ್ತಿಗತವಾದ ದೋಷವನ್ನು ಹೇಳಿದ್ದೇನೆ. ಪ್ರತಿಯೊಬ್ಬನನ್ನು ದುರ್ಬಲನನ್ನಾಗಿ ಮಾಡಿ, ನಂತರ ಅದರ ಕಾರಣ ತಿಳಿದು ಒಬ್ಬೊಬ್ಬರನ್ನೂ ದೂರ ಮಾಡು (ನಿನ್ನ ಸೇವಕರಲ್ಲಿರುವ ದೋಷಗಳನ್ನು ತಿಳಿದು, ಅವರಿಗೆ ಅದನ್ನು ತಿಳಿಸದೆ ಅರಮನೆಯಿಂದ ಹೊರಗೆ ಹಾಕು). ಆಗ ಅವರು ದುರ್ಬಲರಾಗುತ್ತಾರೆ[೨].

೨. ಕಲಹಗಳಿಗೆಲ್ಲ ಅರ್ಥವೇ (ಹಣ) ವೇ ಮೂಲ. ಅದೇ ದರ್ಪದ ಮೂಲ. ಅಮಾತ್ಯರನ್ನು ಅರ್ಥಹೀನರನ್ನಾಗಿ ಮಾಡು[೩].

೩. ಒಂದೊಂದೇ ದೋಷವಿರುವ ಎಲ್ಲರೂ ಸೇರಿ ಮುಳ್ಳಿನ ರಾಶಿಯಾಗಿ, ಅದನ್ನೇ ಪುಡಿ ಪುಡಿ ಮಾಡಬಹುದು. ಎಲ್ಲರನ್ನೂ ಅಪರಾಧಿ ಎಂದು ಒಟ್ಟಿಗೆ ಘೋಷಿಸದೇ ಪ್ರತ್ಯೇಕವಾಗಿ ಒಬ್ಬೊಬ್ಬರನ್ನೇ ಅಪರಾಧಿಯನ್ನಾಗಿ ಘೋಷಿಸಿ, ಅವರನ್ನು ಶಿಕ್ಷಿಸು[೪].

---

೧ ಭೂಯಾಸೋ ಪರಿಬರ್ಹೇಣ ಸತ್ಕಾರೇಣ ಚ ಭೂಯಸಾ ।
ಪೂಜಿತೋ ಬ್ರಾಹ್ಮಣಶ್ರೇಷ್ಠ ಭೂಯೋ ವಸ ಗೃಹೇ ಮಮ ॥
ಯೇ ತ್ವಾ ಬ್ರಾಹ್ಮಣ ನೇಚ್ಛಂತಿ ನ ತೇ ವತ್ಸ್ಯಂತಿ ಮೇ ಗೃಹೇ ।
ಭವತ್ಯೈವ ಹಿ ತಜ್ಜ್ಞೇಯಂ ಯದಿದಾನೀಮನಂತರಮ್ ॥
ಯಥಾ ಸ್ಯಾದ್ ದುಷ್ಕೃತೋ ದಂಡೋ ಯಥಾ ಚ ಸುಕೃತಂ ಕೃತಮ್ ।
ತಥಾ ಸಮೀಕ್ಷ್ಯ ಭಗವನ್ ಶ್ರೇಯಸೇ ವಿನಿಯುಂಕ್ಷ್ವ ಮಾಮ್ ॥ - ೮೪/೫೫-೫೭

೨ ಆದರ್ಶಯನ್ನಿಮಂ ದೋಷಮೇಕೈಕಂ ದುರ್ಬಲಂ ಕುರು ।
ತತಃ ಕಾರಣಮಾಜ್ಞಾಯ ಪುರುಷಂ ಪುರುಷಂ ಜಹಿ ॥
ಏಕದೋಷಾ ಹಿ ಬಹವೋ ಮೃದ್ನೀಯುರಪಿ ಕಂಟಕಾನ್ ।
ಮಂತ್ರಭೇದಭಯಾದ್ ರಾಜಂಸ್ತಸ್ಮಾದೇತದ್ ಬ್ರವೀಮಿ ತೇ ॥ - ೮೪/೫೮,೫೯

೩ ಅರ್ಥೇ ಸರ್ವಂ ಜಗದ್ ದ್ವಂದ್ವಮರ್ಥೇನ ಚ ನಿಬದ್ಧ್ಯತೇ ।
ಅರ್ಥೇ ದರ್ಪೋ ಮನುಷ್ಯಾಣಾಂ ತಸ್ಮಾದರ್ಥಂ ವಿರೇಚಯ ॥ - ೮೪/೬೦

೪ ಏಕೇನೈಕಸ್ಯ ದೋಷೇಣ ತದ್ವಿರುದ್ಧಂ ಪ್ರಚೋದಯ ।
ಸ ತಸ್ಯ ದೋಷಾನುದ್ಭಾವ್ಯ ತಸ್ಯಾರ್ಥಂ ಗ್ರಾಹಯಿಷ್ಯತಿ ॥ - ೮೪/೬೧

೪. ಒಂದು ದೋಷವಿರುವ ಒಬ್ಬನನ್ನು ಇನ್ನೊಬ್ಬನಿಗೆ ವಿರುದ್ಧವಾಗಿ ಪ್ರಚೋದಿಸಲು ಅವನು ಇನ್ನೊಬ್ಬನ ಬೇರೆ ದೋಷಗಳನ್ನು ಹೊರಗೆಳೆದು ರಾಜನು ಅವನ ಸ್ಥಾನ, ಅರ್ಥಗಳನ್ನು ಕಳೆದುಕೊಳ್ಳುವಂತೆ ಮಾಡುತ್ತಾನೆ (divide and rule). ಭೇದೋಪಾಯ ರಚಿಸು. ಕೆಲವರನ್ನು ಸಾಮ, ಕೆಲವರನ್ನು ದಾನ, ಭೇದ ಉಪಾಯಗಳಿಂದ ವೈರ ಉತ್ಪಾದಿಸು (ಅವರಲ್ಲಿ ಹುಟ್ಟುಹಾಕು). ಕೊನೆಯ ಉಪಾಯ ದಂಡವಾಗಿರಲಿ[೧].

೫. ಬಿಲ್ವಫಲವನ್ನು ಬಿಲ್ವಫಲದಿಂದ ನಾಶ ಮಾಡುವಂತೆ ನಿನ್ನ ಅಭಿಪ್ರಾಯವನ್ನು ಮರೆಮಾಡಿ, ಅಯೋಗ್ಯ ಸಚಿವನನ್ನು ಅಯೋಗ್ಯ ಸಚಿವನಿಂದಲೇ ನಾಶ ಮಾಡು. ಮುಳ್ಳಿನಿಂದಲೇ ಮುಳ್ಳನ್ನು ತೆಗೆಯಬೇಕು[೨].

ಇಷ್ಟೆಲ್ಲ ಸಲಹೆ ನೀಡಿದ ಬ್ರಾಹ್ಮಣನು ತನ್ನ ಬಗ್ಗೆ ಹೇಳಿಕೊಳ್ಳುತ್ತಾನೆ.

೧. ರಾಜನ್! ನಾವು ಬ್ರಾಹ್ಮಣರು ಕೃಪಾಳುಗಳು, ಮೃದುದಂಡವುಳ್ಳವರು (ದಂಡ ಪ್ರಯೋಗ ಮಾಡಲು ನಮಗೆ ಬರದು. ಅದು ನಮ್ಮ ಸ್ವಭಾವವಲ್ಲ). ನಾವು ನಿನಗು, ನಿಮ್ಮ ಪರಿವಾರದವರಿಗೂ ಕ್ಷೇಮ ಬಯಸುವವರು.

೨. ನಾನು ಯಾರು ಗೊತ್ತೇ? ನಿನ್ನ ಸಂಬಂಧಿಯಾದ ಕಾಲಕವೃಕ್ಷೀಯನೆಂಬ ಮುನಿ. ನಿನ್ನ ತಂದೆಯ ಮಿತ್ರ. ಸತ್ಯಸಂಗರ ಎಂದು ಎಲ್ಲರಿಗೂ ಬೇಕಾದವನು. ನಿನ್ನ ತಂದೆ ಮೃತನಾದಾಗ, ನಿನ್ನ ರಾಜ ಆಪತ್ತಿಗೊಳಗಾದಾಗ ನಾನು ಎಲ್ಲ ಆಶೆಗಳನ್ನು ತ್ಯಜಿಸಿ ತಪಸ್ಸನ್ನು ಮಾಡಿದೆ. ಆದರೆ ಈಗ ನಿನ್ನ ಮೇಲಿನ ಸ್ನೇಹದಿಂದ ನೀನು ಪ್ರಮಾದವೆಸಗಬಾರದೆಂದು ನಿನಗೆ ಇವೆಲ್ಲ ಹೇಳುತ್ತಿದ್ದೇನೆ. ಸುಖದುಃಖಗಳೆರಡನ್ನೂ ನೋಡಿ ಅದೃಷ್ಟವಶಾತ್ ರಾಜ್ಯವನ್ನು ಹೊಂದಿರುವೆ. ರಾಜ್ಯವನ್ನು ಅಮಾತ್ಯರ ಕೈಯಲ್ಲಿ ಕೊಟ್ಟು (ಎಲ್ಲ ಅಧಿಕಾರಗಳನ್ನು ಅವರಿಗೆ ವಹಿಸಿ) ಇಂತಹ ತಪ್ಪುಗಳನ್ನು ಹೇಗೆ ಮಾಡುವೆ?[೩] (ಮಾಡಬೇಡ, ದೈವದತ್ತವಾದುದನ್ನು ಹಾಳು ಮಾಡಬೇಡ).

ನಂತರ ರಾಜನು ಕಾಲವೃಕ್ಷೀಯ ಮುನಿಯನ್ನು ಪುರೋಹಿತನನ್ನಾಗಿ ಮಾಡಿಕೊಂಡನು. ರಾಜಕುಲದಲ್ಲಿ, ಬ್ರಾಹ್ಮಣ ಕುಲದಲ್ಲಿ ಆನಂದವು ಆವಿರ್ಭವಿಸಿತು. ಯಶಸ್ವಿಯಾದ ಕೋಸಲರಾಜನಾದ ಕ್ಷೇಮದರ್ಶಿಗೆ ಭೂಮಿಯ ಏಕಚಕ್ರಾಧಿಪತ್ಯವನ್ನು ಸಂಪಾದಿಸಿ ಕೊಟ್ಟನು.

---

೧ ಸಾಮಪೂರ್ವಂ ಚ ಕೇಷಾಂಚಿದ್ ಭೇದೇನ ಚ ಪರಸ್ಪರಮ್ ।
ವೈರಂ ಕಾರಯ ಭೂಪಾಲ ಪಶ್ಚಾದ್ ದಂಡಂ ಪ್ರಯೋಜಯ ॥ – ೮೪/೬೨

೨ ಬಿಲ್ವೇನ ಚ ಯಥಾ ಬಿಲ್ವಮಾಕಾರಂ ಛಾದ್ಯ ಬುದ್ಧಿಮಾನ್ ।
ಅಶುದ್ಧಂ ಸಚಿವಂ ರಾಜನ್ನಶುದ್ಧೇನೈವ ನಾಶಯ ॥ – ೮೪/೬೩

೩ ಉಭೇ ದೃಷ್ಟ್ವಾ ದುಃಖಸುಖೇ ರಾಜ್ಯಂ ಪ್ರಾಪ್ಯ ಯದೃಚ್ಛಯಾ ।
ರಾಜ್ಯೇನಾಮಾತ್ಯಸಂಸ್ಥೇನ ಕಥಂ ರಾಜನ್ ಪ್ರಮಾದ್ಯಸಿ ॥ – ೮೪/೬೮

ಅಲ್ಲದೆ ಉತ್ತಮ ಯಜ್ಞಗಳನ್ನು ಮಾಡಿಸಿದನು. ಹೀಗೆ ಕೌಸಲ್ಯರಾಜನು ಪುರೋಹಿತನ ಮಾತುಗಳನ್ನು ಕೇಳಿ ಭೂಮಿಯನ್ನು ಆಳಿದನು[೧].

ಧರ್ಮರಾಜನೇ! ನೀನೂ ಕೂಡಾ ಅವನು ಹೇಳಿದಂತೆ ರಾಜ್ಯವನ್ನು ಆಳು, ಕ್ಷತ್ರಧರ್ಮ ಪರಿಪಾಲಿಸು.

## ಸಂದೇಶಗಳು

೧. ಮುನಿಯ ಮಾತುಗಳೆಲ್ಲ ಸಂದೇಶಗಳು.

೨. ರಾಜನು ಯೋಚಿಸಿ ಅಮಾತ್ಯ ಹಾಗೂ ಅನುಚರರನ್ನು ನೇಮಿಸಿಕೊಳ್ಳಬೇಕು. ಇಲ್ಲದಿದ್ದರೆ ರಾಜನಿಗೆ ಕಂಟಕರಾಗುತ್ತಾರೆ.

ಇತ್ಯಾದಿ ....

*****

---

೧ ಏಕಚ್ಛತ್ರಾಂ ಮಹೀಂ ಕೃತ್ವಾ ಕೌಸಲ್ಯಾಯ ಯಶಸ್ವಿನೇ।
ಮುನಿಃ ಕಾಲಕವೃಕ್ಷೀಯ ಈಜೇ ಕ್ರತುಭಿರುತ್ತಮೈಃ॥ - ೮೪/೭೦

# ೧೬೯. ಸಾಂತ್ವವಚನದ ಮಹತ್ತ್ವ

ಧರ್ಮರಾಜನನ್ನು ಕುರಿತು ಭೀಷ್ಮರು ರಾಜನಲ್ಲಿರಬೇಕಾದ ಗುಣಗಳಲ್ಲಿ ವಿವಿಧ ಪ್ರಜೆಗಳೊಡನೆ ಸಾಂತ್ವವಚನಗಳನ್ನಾಡುವ ಗುಣದಿಂದ ಆಗುವ ಲಾಭಗಳನ್ನು ಇಂದ್ರ ಹಾಗೂ ಬೃಹಸ್ಪತ್ಯಾಚಾರ್ಯರ ಸಂವಾದರೂಪ ಇತಿಹಾಸದ ಮೂಲಕ ತಿಳಿಸುತ್ತಾರೆ.

ಇಂದ್ರ ಗುರುಗಳನ್ನು ಕೇಳುತ್ತಾನೆ. **ಯಾವ ಒಂದು ಪದವನ್ನು ಪುರುಷನು ಅಭ್ಯಾಸ ಮಾಡಿದರೆ** (ತನ್ನ ಜೀವನದಲ್ಲಿ) ಎಲ್ಲ ಜೀವರಿಗೂ ಪ್ರಮಾಣಭೂತನಾಗಿ ಕೀರ್ತಿಯನ್ನು ಹೊಂದುವನು? ಅದಕ್ಕೆ ಗುರುಗಳಾದ ಬೃಹಸ್ಪತ್ಯಾಚಾರ್ಯರು ಹೀಗೆ ಉತ್ತರಿಸುತ್ತಾರೆ.

೧. [೧]**ಸಾಂತ್ವ** ಎಂಬ ಒಂದು ಪದದಿಂದ ಪುರುಷನು ಸಮಾಜದಲ್ಲಿ ಪ್ರಮಾಣನಾಗುತ್ತಾನೆ. ಹಾಗೂ ಕೀರ್ತಿಯನ್ನು ಹೊಂದುತ್ತಾನೆ[೨].

೨. ಸಾಂತ್ವವಚನ ಹೇಳುವ ಸ್ವಭಾವವಿರದವರು ಯಾವಾಗಲೂ ಹುಬ್ಬು ಗಂಟಿಕ್ಕಿಕೊಂಡು, ಯಾರೊಡನೆಯೂ ಮಾತನಾಡದವರು, ಜನರಿಂದ ದ್ವೇಷಿಸಲ್ಪಡುತ್ತಾರೆ[೩].

೩. ಆದರೆ ಯಾರು ತನ್ನನ್ನು ನೋಡಲು ಬಂದವರನ್ನು ಮೊದಲೇ ನೋಡಿ (ಗಮನಿಸಿ) ನಗುಮುಖದಿಂದ ಅವನಿಗಿಂತಲೂ ಮೊದಲೇ ಮಾತನಾಡಿಸುತ್ತಾರೋ(ಕುಶಲ ಪ್ರಶ್ನೆ, ಬಂದ ಉದ್ದೇಶಗಳನ್ನು ಕೇಳುತ್ತಾರೋ) ಅವರ ಬಗ್ಗೆ ಜನರು ಸಂತೋಷ ಪಡುತ್ತಾರೆ[೪].

**(ರಾಮಾಯಣದ ರಾಮಚಂದ್ರನು ಹೀಗೆಯೇ ಇದ್ದನೆಂದು ರಾಮಾಯಣ ಹೇಳುತ್ತದೆ.)**

೪. ಪ್ರಜೆಗಳಿಗೆ, ಸತ್ಪಾತ್ರರಿಗೆ, ಬ್ರಾಹ್ಮಣರಿಗೆ ದಾನ ಕೊಡುವುದು ರಾಜನ ಆದ್ಯ ಕರ್ತವ್ಯ. ಆಗಲೂ ಮಧುರ ಮಾತುಗಳನ್ನಾಡಿಯೇ ಕೊಡಬೇಕೇ ಹೊರತು, ತಾನು ಮಹಾ ಉಪಕಾರಿ ಎಂದು ಭಾವಿಸಿ ಕೊಡಬಾರದು. ಸಾಂತ್ವನವಿಲ್ಲದ ದಾನ ಭೋಜನದಲ್ಲಿ ವ್ಯಂಜನವಿಲ್ಲದಂತೆಯೇ ಸರಿ. ನಾನು ಕೊಡುವ ದಾನದಿಂದ ನೀನು ಉದ್ಧಾರವಾದೆ ಎಂಬ

---

೧ ಸಾಂತ್ವ - ಬಹಳ ಮಧುರವಾದ ಮಾತು (ಖಡಿಛಿಛಿಠ ಡಿಟ್ಬಿಛಿ) ಸಾಂತ್ವ (ಸಮಾಪ್ರಯೋಗೇ)+ ಣಿಚ್ ಲ್ಯುಟ್ (೩/೩/೧೫); ೨. ಸಾಮೋಪಾಯ; ೩. ಹಿತವಾದ, ಮಾತನ್ನಾಡುವುದು, ಕಾರ್ಯ ಮಾಡುವುದು, ಕಾನಿ ಸಾಂತ್ವಾನಿ ಗೋವಿಂದಃ ಸೂತಪುತ್ರೇ, ಪಯುಕ್ತವಾನ್ (ಮ.ಭಾ.ಉ.ಪ.-೧೪೦/೨); ಸಾಂತ್ವನ = ಸಮಾಧಾನಪಡಿಸುವುದು, ಶಾಂತಗೊಳಿಸುವುದು.

೨ ಸಾಂತ್ವಮೇಕಪದಂ ಶಕ್ರ ಪುರುಷಃ ಸಮ್ಯಗಾಚರನ್ ।
ಪ್ರಮಾಣಂ ಸರ್ವಭೂತಾನಾಂ ಯಶಶ್ಚೈವಾಪ್ನುಯಾನ್ಮಹತ್ ॥ - ೮೬/೩

೩ ಯೋ ಹಿ ನಾಭಾಷತೇ ಕಿಂಚಿತ್ ಸತತಂ ಭ್ರುಕುಟೀಮುಖಃ ।
ದ್ವೇಷ್ಯೋ ಭವತಿ ಭೂತಾನಾಂ ಸ ಸಾಂತ್ವಮಿಹ ನಾಚರನ್ ॥ - ೮೬/೫

೪ **ಯಸ್ತು ಪೂರ್ವಮಭಿಪ್ರೇಕ್ಷ್ಯ ಪೂರ್ವಮೇವಾಭಿಭಾಷತೇ ।**
**ಸ್ಮಿತಪೂರ್ವಾಭಿಭಾಷೀ ಚ ತಸ್ಯ ಲೋಕಃ ಪ್ರಸೀದತಿ ॥** - ೮೬/೬

ಭಾವನೆಯಿಂದ ಕೂಡಿದ ಮಾತಾಗಲೀ, ಮುಖಚರ್ಯೆಯಾಗಲೀ ಇರಬಾರದು. ಅಂತಹ ದಾನ ಪ್ರಜೆಗಳನ್ನು ಸಂತೋಷ ಪಡಿಸದು.

ದಾನ ಕೊಡದಿದ್ದರೂ ಚಿಂತೆಯಿಲ್ಲ, ಒಳ್ಳೆಯ ಸಮಾಧಾನದ ಮಾತುಗಳಿಂದ ಎಲ್ಲ ಲೋಕವನ್ನು ವಶಪಡಿಸಿಕೊಳ್ಳಬಹುದು. ರಾಜನು ಮಧುರ ಭಾಷಿಯಾದರೆ ಪ್ರಜೆಗಳು ಉದ್ವೇಗಕ್ಕೆ ಒಳಗಾಗುವುದಿಲ್ಲ[೧].

ಒಟ್ಟಾರೆ ಸಾಂತ್ವವಚನಗಳು ಹೇಗಿರಬೇಕು ಎಂಬುದನ್ನು ಬೃಹಸ್ಪತ್ಯಾಚಾರ್ಯರು ಹೇಳುತ್ತಾರೆ. ಸುಕೃತವಾದ, ಮಂಗಳಕರವಾಗಿಯೂ, ಪುಣ್ಯಕೊಡುವ, ನಯವಾಗಿಯೂ (ಕಠಿಣ ಶಬ್ದಗಳಿರದ, ಸೌಮ್ಯವಾದ), ಮಧುರ(ಕೇಳಲು ಸಂತೋಷವಾಗುವ), ತಾನು ಸೇವಿಸುವ (ಅಭ್ಯಾಸ ಮಾಡಿರುವ ಸ್ವಾಭಾವಿಕವಾದ) ಮಾತುಗಳನ್ನಾಡುವವನಿಗೆ ಸಮಾನರಾದವರೂ ಯಾರು ಇಲ್ಲವೇ ಇಲ್ಲ[೨] (This is all art in talking and getting work done).

ಹೀಗೆ ಗುರುಗಳು ಹೇಳಿದುದನ್ನು ಕೇಳಿದ ಇಂದ್ರನು ಹಾಗೆಯೇ ತನ್ನ ಜೀವನದಲ್ಲಿ ನಡೆದನು.

ರಾಜನ್! (ಯುಧಿಷ್ಠಿರನೇ!) ನೀನು ಕೂಡಾ ಇದನ್ನು ತಿಳಿದು ಹಾಗೇ ಆಚರಿಸು. ಆಗಲೇ ನೀನು ಜನಪ್ರಿಯ ರಾಜನಾಗುವೆ ಎಂದು ಭೀಷ್ಮರು ನುಡಿದರು.

## ಸಂದೇಶಗಳು

೧. ಸ್ಪಷ್ಟವಾಗಿಯೇ ಇವೆ. ಧರ್ಮರಾಜನು ಸ್ವಯಂ ಧರ್ಮಮೂರ್ತಿ. ಆತನು ಹಾಗೆಯೇ ಇದ್ದನು. ಲೋಕೋಪಕಾರದೃಷ್ಟಿಯಿಂದ ಈ ಪ್ರಶ್ನೆ ಕೇಳಿ ನಮಗೆಲ್ಲ ನೀತಿ ತಿಳಿಸಿದ್ದಾನೆ ಎಂಬುದು ಆಂತರಿಕ ಸಂದೇಶ.

೨. ನಾವು ಹೇಗೆ ಇದ್ದೇವೆ ಎಂಬುದನ್ನು ತಿಳಿದುಕೊಂಡು ನಮ್ಮನ್ನು ನಾವೇ ತಿದ್ದಿಕೊಳ್ಳಬೇಕು.

*****

---

೧ ದಾನಮೇವ ಹಿ ಸರ್ವತ್ರ ಸಾಂತ್ವೇನಾನಭಿಜಲ್ಪಿತಮ್ ।
ನ ಪ್ರೀಣಯತಿ ಭೂತಾನಿ ನಿರ್ವ್ಯಂಜನಮಿವಾಶನಮ್ ॥ - ೮೬/೭
ಅದಾತಾ ಹ್ಯಪಿ ಭೂತಾನಾಂ ಮಧುರಾಮೀರಯನ್ ಗಿರಮ್ ।
ಸರ್ವಲೋಕಮಿಮಂ ಶಕ್ರ ಸಾಂತ್ವೇನ ಕುರುತೇ ವಶೇ ॥ - ೮೬/೮

೨ ಸುಕೃತಸ್ಯ ಹಿ ಸಾಂತ್ವಸ್ಯ ಶ್ಲಕ್ಷ್ಣಸ್ಯ ಮಧುರಸ್ಯ ಚ ।
ಸಮ್ಯಗಾಸೇವ್ಯಮಾನಸ್ಯ ತುಲ್ಯಂ ಜಾತು ನ ವಿದ್ಯತೇ ॥ - ೮೬/೧೦

# ೧೭೦. ವಾಮದೇವ-ವಸುಮನಸ್ ಸಂವಾದ

ಧರ್ಮರಾಜನು ಪಿತಾಮಹರನ್ನು ಪ್ರಶ್ನಿಸಿದ.

ತಾತ! ಧರ್ಮದಲ್ಲೇ ಇರಲು ಬಯಸುವ ಧಾರ್ಮಿಕ ರಾಜನು ಹೇಗೆ ವರ್ತಿಸಬೇಕು. ಇದಕ್ಕೆ ಭೀಷ್ಮರು ವಾಮದೇವ ಋಷಿಗಳು ಕೋಸಲದೇಶದ ವಸುಮನಸ್ ಎಂಬ ರಾಜನಿಗೆ 'ಧರ್ಮಾರ್ಥಸಹಿತವಾದ ಮಾತುಗಳನ್ನು ಉಪದೇಶಿಸಿ, ಎಂತಹ ನಡತೆಗಳನ್ನು ಅಳವಡಿಸಿಕೊಂಡರೆ ಧರ್ಮದಿಂದ ಚ್ಯುತನಾಗುವುದಿಲ್ಲ ಎಂದು ಉಪದೇಶಿಸಿದರು.

೧. ಧರ್ಮಕ್ಕಿಂತ ಶ್ರೇಷ್ಠವಾದುದು ಯಾವುದೂ ಇಲ್ಲವಾದುದರಿಂದ ಧರ್ಮವನ್ನೇ ಆಚರಿಸು. ಧರ್ಮಾಚರಣೆ ಮಾಡುವ ರಾಜರು ಪೃಥಿವಿಯನ್ನು ಗೆಲ್ಲುತ್ತಾರೆ[೧].

೨. ಅರ್ಥಸಿದ್ಧಿ (ಐಶ್ವರ್ಯದ ಗರಿಷ್ಠ ಸಂಪಾದನೆ)ಗಿಂತ ಧರ್ಮಸಂಪಾದನೆಯೇ ಶ್ರೇಷ್ಠವೆಂದು ಯಾವ ರಾಜನು ಭಾವಿಸುತ್ತಾನೋ ಅಂತಹ ಸದ್ಬುದ್ಧಿಯ ರಾಜನು ಧರ್ಮದಿಂದ ಬೆಳಗುತ್ತಾನೆ[೨](ಪ್ರಸಿದ್ಧಿ ಹೊಂದುತ್ತಾನೆ).

೩. ಧರ್ಮದ ಕಡೆ ಮನಸ್ಸಿರದ ರಾಜನು ಬಲಾತ್ಕಾರದಿಂದ ಅದರಲ್ಲಿಯೇ ಪ್ರವೃತ್ತನಾದರೆ ಅವನು ಧಮಾರ್ಥಗಳಿಂದ ವಂಚಿತನಾಗುತ್ತಾನೆ[೩].'

೪. ಪಾಪಿಯೂ, ದುಷ್ಟನೂ ಆದ ಸಚಿವನನ್ನು ಹೊಂದಿದ ರಾಜನು ಪರಿವಾರ ಸಮೇತನಾಗಿ ಲೋಕದಲ್ಲಿ ನಾಶನಾಗುತ್ತಾನೆ.

೫. ಯಾವ ರಾಜನು ಅರ್ಥಸಿದ್ಧಿಗೆ ಪ್ರಯತ್ನ ಮಾಡುವುದಿಲ್ಲವೋ, ಸ್ವೇಚ್ಛಾಚಾರಿಯೂ, ತನ್ನನ್ನು ತಾನೇ ಹೊಗಳಿಕೊಳ್ಳುವವನೂ ಆಗಿರುವನೋ ಅಂತಹವನು ಸಮಗ್ರ ಭೂಮಿಯ ಒಡೆಯನಾದರೂ ಕ್ಷಿಪ್ರನಾಶ ಹೊಂದುತ್ತಾನೆ[೪].

೬. ರಾಜನು ಧರ್ಮ, ಅರ್ಥ, ಕಾಮ, ಬುದ್ಧಿಗಳಿಂದ ಹಾಗೂ ಮಿತ್ರರಿಂದ ನಾನು ಪರಿಪೂರ್ಣನೆಂದು ಎಂದೂ ಭಾವಿಸಬಾರದು[೫].

---

೧ ಧರ್ಮಮೇವಾನುವರ್ತಸ್ವ ನ ಧರ್ಮಾದ್ ವಿದ್ಯತೇ ಪರಮ್ ।
ಧರ್ಮೇ ಸ್ಥಿತಾ ಹಿ ರಾಜಾನೋ ಜಯಂತಿ ಪೃಥಿವೀಮಿಮಾಮ್ ॥ - ೯೪/೬

೨ ಅರ್ಥಸಿದ್ಧೇ ಪರಂ ಧರ್ಮಂ ಮನ್ಯತೇ ಯೋ ಮಹೀಪತಿಃ ।
ಋತಾಂ ಚ ಕುರುತೇ ಬುದ್ಧಿಂ ಸ ಧರ್ಮೇಣ ವಿರೋಚತೇ ॥ - ೯೪/೭

೩ ಅಧರ್ಮದರ್ಶೀ ಯೋ ರಾಜಾ ಬಲಾದೇವ ಪ್ರವರ್ತತೇ ।
ಕ್ಷಿಪ್ರಮೇವಾಪಯಾತೋಽಸ್ಮಾದುಭೌ ಪ್ರಥಮಮಧ್ಯಮೌ ॥ - ೯೪/೮

೪ ಅರ್ಥಾನಾಮನನುಷ್ಠಾತಾ ಕಾಮಚಾರೀ ವಿಕತ್ಥನಃ ।
ಅಪಿ ಸರ್ವಾಂ ಮಹೀಂ ಲಬ್ಧ್ವಾ ಕ್ಷಿಪ್ರಮೇವ ವಿನಶ್ಯತಿ ॥ - ೯೪/೧೦

೫ ನ ಪೂರ್ಣೋಽಸ್ಮೀತಿ ಮನ್ಯೇತ ಧರ್ಮತಃ ಕಾಮತೋಽರ್ಥತಃ ।
ಬುದ್ಧಿತೋ ಮಿತ್ರತಶ್ಚಾಪಿ ಸತತಂ ವಸುಧಾಧಿಪಃ ॥ - ೯೪/೧೨

೬. ಧರ್ಮಾರ್ಥಕಾಮಗಳಲ್ಲಿತಾನು ಪರಿಪೂರ್ಣ ಸಾಧನೆ ಮಾಡಿದ್ದೇನೆಂಬ ಭಾವನೆಯಿರದೆ ಧರ್ಮದಲ್ಲಿ ದಿಕ್ಷೆಯುಳ್ಳವನಾಗಿ, ಧರ್ಮಾರ್ಥಗಳನ್ನು ಚೆನ್ನಾಗಿ, ಚಿಂತಿಸಿ, ಅರ್ಥಗಳನ್ನು ವಿಮರ್ಶಿಸಿ (ಸಾಧಕ, ಬಾಧಕಗಳನ್ನು) ಸಾಧನೆಯನ್ನು ಆರಂಬಿಸುವವನು ನಿಶ್ಚಯವಾಗಿಯೂ ಮಹಾಸಾಧನೆ ಮಾಡುತ್ತಾನೆ[೧] (ಹೊಂದುತ್ತಾನೆ).

೮. ದಾನ ಮಾಡದ, ಪ್ರಜಾವಾತ್ಸಲ್ಯವಿರದ, ಪ್ರಜೆಗಳಿಗೆ ಬರೀ ದಂಡವಿಧಿಸುವ ಆತ್ಮಘಾತುಕ ಪ್ರವೃತ್ತಿಯ ರಾಜನು ಶೀಘ್ರವಾಗಿ ನಾಶ ಹೊಂದುತ್ತಾನೆ[೨].

೯. ಪಾಪ ಮಾಡಿಯೂ ಇದು ಪಾಪವಲ್ಲವೆಂದು ಭಾವಿಸುವ ಬುದ್ಧಿಗೇಡಿ ರಾಜನು ಇಹದಲ್ಲಿ ಅಪಕೀರ್ತಿ ಹೊಂದಿ ಪರದಲ್ಲಿ ನರಕದ ಪಾಲಾಗುತ್ತಾನೆ.[೩].

೧೦. ಯಾವ ರಾಜನಿಗೆ ಧರ್ಮೋಪದೇಶಕ ಗುರುವಿಲ್ಲವೋ, ಯಾರು ಬೇರೆಯವರ ಧರ್ಮೋಪದೇಶ ಕೇಳುವುದಿಲ್ಲವೋ, ಕ್ಷಣಿಕ ಸುಖದಿಂದ ಪ್ರೇರಿತನಾಗಿ ಅರ್ಥಸಿದ್ಧಿಗಾಗಿ (ಮಾತ್ರ) ಆಸಕ್ತನಾಗುತ್ತಾನೋ (ಅರ್ಥಪ್ರಾಪ್ತಿಯ ನಂತರ ಅದರಲ್ಲಿಯೇ ಮಗ್ನನಾಗುತ್ತಾನೋ) ಅವನು ದೀರ್ಘಕಾಲ ಸುಖಿಯಾಗುವುದಿಲ್ಲ[೪] (ಅಂತಹವನು ಬೇರಾವ ಮಹತ್ತ್ವ ಹೊಂದುವುದಿಲ್ಲ).

೧೧. ಧರ್ಮ ವಿಷಯಗಳಲ್ಲಿ ಗುರುಗಳ ಉಪದೇಶವನ್ನೇ ಪ್ರಧಾನವಾಗಿರುವ ತಾನೇ ಅರ್ಥ(ಸಾಧನೆಗಳನ್ನು) ಪರೀಕ್ಷಿಸುವವನು (ಅವು ಯೋಗ್ಯವೋ, ಅಲ್ಲವೋ ಎಂದು) ಧರ್ಮಪ್ರಧಾನನು (ಧರ್ಮಮಾರ್ಗ ಅನುಸರಿಸುವವ) ರಾಜನು ಇಹ ಪರಲೋಕಗಳಲ್ಲಿ ಮಹಾಪುಣ್ಯಗಳನ್ನು ಬಹುಕಾಲ ಹೊಂದುತ್ತಾನೆ[೫].

## ಸಂದೇಶಗಳು

ಸ್ಪಷ್ಟವಾಗಿವೆ. ಧರ್ಮಿಷ್ಠರಾಗಿದ್ದರೆ ಸುಖ, ಇಲ್ಲದಿದ್ದರೆ ಇಲ್ಲ,
ಇತ್ಯಾದಿ....

*****

---

೧ ಏವಂ ಯೋ ಧರ್ಮಸಂರಂಭೀ ಧರ್ಮಾರ್ಥಪರಿಚಿಂತಕಃ।
ಅರ್ಥಾನ್ ಸಮೀಕ್ಷ್ಯಾರಭತೇ ಸ ಧ್ರುವಂ ಮಹದಶ್ನುತೇ॥ - ೯೪/೧೪

೨ ಅದಾತಾ ಹ್ಯನತಿಸ್ನೇಹೋ ದಂಡೇನಾವರ್ತಯನ್ ಪ್ರಜಾಃ।
ಸಾಹಸಪ್ರಕೃತೀ ರಾಜಾ ಕ್ಷಿಪ್ರಮೇವ ವಿನಶ್ಯತಿ॥ - ೯೪/೧೫

೩ ಅಥ ಪಾಪಂ ಕೃತಂ ಬುದ್ಧ್ಯಾ ನ ಚ ಪಶ್ಯತ್ಯಬುದ್ಧಿಮಾನ್।
ಅಕೀರ್ತ್ಯಾಪಿ ಸಮಾಯುಕ್ತೋ ಮೃತೋ ನರಕಮಶ್ನುತೇ॥ - ೯೪/೧೬

೪ ಯಸ್ಯ ನಾಸ್ತಿ ಗುರುರ್ಧರ್ಮೇ ನ ಚಾನ್ಯಾನನುಪೃಚ್ಛತಿ।
ಸುಖತಂತ್ರೋಽರ್ಥಲಾಭೇಷು ನ ಚಿರಂ ಮಹದಶ್ನುತೇ॥ - ೯೪/೧೮

೫ ಗುರುಪ್ರಧಾನೋ ಧರ್ಮೇಷು ಸ್ವಯಮರ್ಥಾನ್ವವೇಕ್ಷಿತಾ।
ಧರ್ಮಪ್ರಧಾನೋ ಲೋಕೇಷು ಸುಚಿರಂ ಮಹದಶ್ನುತೇ॥ - ೯೪/೧೯

# ೧೭೧. ವಾಮದೇವ-ವಸುಮನಸ್ ಸಂವಾದ

ಕ್ಷತ್ರಿಯರಾಜನು ವಿವಿಧ ಸಂದರ್ಭಗಳಲ್ಲಿ ಹೇಗೆ ವರ್ತಿಸಬೇಕೆಂದು ವಾಮದೇವ ಋಷಿಗಳು ವಸುಮನಸ್‌ರಾಜನಿಗೆ ಹೇಳಿದುದನ್ನು ಭೀಷ್ಮರು ಧರ್ಮರಾಜನಿಗೆ ತಿಳಿಸಿ ಹೇಳುತ್ತಾರೆ.

೧. ಬಲಿಷ್ಠ ರಾಜನು ದುರ್ಬಲರಾದವರನ್ನು (ಪ್ರಜೆಗಳನ್ನು) ಅಧಾರ್ಮಿಕವಾಗಿ ನಡೆದುಕೊಂಡಾಗ (ವರ್ತಿಸಿದಾಗ), ಅವನ ನಡತೆಯನ್ನು, ಅವನ ವಂಶದವರೂ ಮುಂದೆ ಹಾಗೆಯೇ ಉಪಜೀವಿಸುತ್ತಾರೆ (ಮುಂದುವರೆಸುತ್ತಾರೆ). ಅಂತಹ ವಿನಯರಹಿತ ರಾಜ ಹಾಗೂ ಅವನನ್ನು ಅನುಸರಿಸುವ ಮನುಷ್ಯರಿಂದಲೇ ಆ ರಾಷ್ಟ್ರವು ಬಹುಬೇಗನೇ ನಾಶವಾಗುತ್ತದೆ.

೨. ವಿಚಾರ ಮಾಡದೆ ಅಲ್ಪ ಕ್ರೂರತನ ತೋರಿಸುವ ಶಾಸ್ತ್ರೀಯ ಲಕ್ಷಣರಹಿತನಾದ ರಾಜನು ಬೇಗನೇ ನಾಶವಾಗುತ್ತಾನೆ[1].

೩. ಯಾವ ರಾಜನು ಯುದ್ಧದಲ್ಲಿ ಗೆದ್ದ ಹಾಗೂ ಸೋತವರ ಜೊತೆಗೆ ಅಂಗೀಕೃತ ರಾಜನೀತಿಯಿಂದವ್ಯವಹರಿಸುವುದಿಲ್ಲವೋ, ಅವನೂ ಬೇಗನೇ[2]ನಾಶವಾಗುತ್ತಾನೆ(ಸೆರೆಹಿಡಿದ ರಾಜನನ್ನು, ಆತನ ದೂತನನ್ನು ಗೌರವದಿಂದ ಕಾಣಬೇಕು. ಆತನ ಜೀವಾಪಹಾರಾದಿಗಳನ್ನು ಮಾಡಬಾರದು. ಇತ್ಯಾದಿ).

೪. ಸಮರ್ಥ ರಾಜನು ಪ್ರಸನ್ನಮುಖನಾಗಿರಬೇಕು. ಆಪತ್ತಿನಲ್ಲಿರುವವನಿಗೆ (ಶತ್ರುವಿಗೂ) ಕಾರುಣ್ಯ ತೋರಿಸಬೇಕು. ಹಾಗಾದಾಗಲೇ ಪ್ರಜೆಗಳಿಗೆ ಪ್ರಿಯನಾಗುತ್ತಾನೆ. ಸಂಪತ್ತಿನಿಂದ ಚ್ಯುತನಾಗುವುದಿಲ್ಲ[3].

೫. ಅಪ್ರಿಯನಾದವನಿಗೂ ಪ್ರಿಯವನ್ನು ಮಾಡಬೇಕು. ಇದರಿಂದ ಅಲ್ಪ ಸಮಯದಲ್ಲೂ ಅಪ್ರಿಯನೂ ಪ್ರಿಯನಾಗುತ್ತಾನೆ[4].

---

೧ ಸಾಹಸಪ್ರಕೃತಿರ್ಯತ್ರ ಕುರುತೇ ಕಿಂಚಿದುಲ್ಬಣಮ್ ।
ಅಶಾಸ್ತ್ರಲಕ್ಷಣೋ ರಾಜಾ ಕ್ಷಿಪ್ರಮೇವ ವಿನಶ್ಯತಿ ॥ - ೯೫/೪

೨ ಯೋಽತ್ಯಂತಾಚರಿತಾಂ ವೃತ್ತಿಂ ಕ್ಷತ್ರಿಯೋ ನಾನುವರ್ತತೇ ।
ಜಿತಾನಾಮಜಿತಾನಾಂ ಚ ಕ್ಷತ್ರಧರ್ಮಾದಪೈತಿ ಸಃ ॥ - ೯೫/೫

೩ ಶಕ್ತಃ ಸ್ಯಾತ್ ಸುಮುಖೋ ರಾಜಾ ಕುರ್ಯಾತ್ ಕಾರುಣ್ಯಮಾಪದಿ ।
ಪ್ರಿಯೋ ಭವತಿ ಭೂತಾನಾಂ ನ ಚ ವಿಭ್ರಶ್ಯತೇ ಶ್ರಿಯಃ ॥ - ೯೫/೭

೪ ಅಪ್ರಿಯಂ ಯಸ್ಯ ಕುರ್ವೀತ ಭೂಯಸ್ತಸ್ಯ ಪ್ರಿಯಂ ಚರೇತ್ ।
ನಚಿರೇಣ ಪ್ರಿಯಃ ಸ ಸ್ಯಾದ್ ಯೋಽಪ್ರಿಯಃ ಪ್ರಿಯಮಾಚರೇತ್ ॥ - ೯೫/೮

೬. ರಾಜನು ಸುಳ್ಳು ಭರವಸೆಗಳನ್ನು ನೀಡದೆ ಬೇಡದಿದ್ದರೂ ಪ್ರಜೆಗಳಿಗೆ ಹಿತವನ್ನೇ ಮಾಡಬೇಕು. ಕಾಮ, ಕ್ರೋಧ, ದ್ವೇಷದಿಂದ ಧರ್ಮ ಬಿಡಬಾರದು[೧].

೭. ಪ್ರಶ್ನೆಗಳನ್ನು ಯಾರಾದರೂ ಕೇಳಿದರೆ ಹಿಂಜರಿಯದೆ ಉತ್ತರಿಸಬೇಕು. ಬೇರೆಯವರು ನಿರಾಕರಿಸುವ ಮಾತುಗಳನ್ನಾಡಬಾರದು. ಅವಸರ ಪಟ್ಟು ಏನನ್ನೂ ಮಾಡಬಾರದು. ಯಾರಲ್ಲೂ ಅಸೂಯೆಯನ್ನು ಮಾಡಬಾರದು. ಇದರಿಂದ ಶತ್ರುವನ್ನೂ ವಶಪಡಿಸಿ-ಕೊಳ್ಳಬಹುದು[೨].

೮. ತನಗೆ ಒಳ್ಳೆಯದಾದಾಗ ಬಹಳ ಸಂತೋಷ ಪಡಬಾರದು. ಪ್ರಿಯವಾದಾಗ ದುಃಖಿಸಬಾರದು. ಕಷ್ಟಪ್ರಸಂಗಗಳಲ್ಲೂ ಪ್ರಮಾದಕ್ಕೆ ಒಳಗಾಗದೇ ಪ್ರಜಾಹಿತವನ್ನು ಕಾಪಾಡಬೇಕು[೩].

೯. ಜಿತೇಂದ್ರಿಯನಾದ, ಜ್ಞಾನಿಯಾದ, ಸದಾಚಾರಿಯಾದ, ತನ್ನನ್ನೂ ಅನುಸರಿಸುವ ಸಮರ್ಥನಾದ, ಅನುರಾಗವುಳ್ಳವನನ್ನು ರಾಜ್ಯದ ಮಹಾಕಾರ್ಯಗಳಲ್ಲಿ (ದೊಡ್ಡ ದೊಡ್ಡ ಜವಾಬ್ದಾರಿಯುಳ್ಳ) ನಿಯಮಿಸಬೇಕು[೪].

ಮೇಲಿನ ಕೆಲಗುಣಗಳಿದ್ದರೂ, ರಾಜನಲ್ಲಿ ಭಕ್ತಿಯಿಲ್ಲದ, ರಾಜನ ಸಂಪತ್ತಿನ ಬಗ್ಗೆ ಅಸೂಯೆ ಪಡುವಂಥವನನ್ನು ಮಹತ್ಕಾರ್ಯದಲ್ಲಿ ನಿಯೋಜಿಸಬಾರದು[೫]. ಹೀಗಿರುವಾಗ ಬರಿ ದುರ್ಗುಣಗಳಿರುವವನನ್ನು ನಿಯೋಜಿಸಬಾರದೆಂದು ಹೇಳುವುದು ಅನಾವಶ್ಯಕ[೬].

೧೦. ತನ್ನ ಸುತ್ತಲೂ ಇರುವ ರಾಜರ ನಡಾವಳಿ ಬಗ್ಗೆ ತನ್ನ ಆತ್ಮೀಯರಿಂದ (ಗೂಢಚಾರಿಗಳಿಂದ) ತಿಳಿದುಕೊಂಡಾಗ ಅವನ ಅವನತಿಯಾಗದು.

---

೧ ಮೃಷಾವಾದಂ ಪರಿಹರೇತ್ ಕುರ್ಯಾತ್ ಪ್ರಿಯಮಯಾಚಿತಃ।
ನ ಚ ಕಾಮಾನ್ನ ಸಂರಂಭಾನ್ನ ದ್ವೇಷಾದ್ ಧರ್ಮಮುತ್ಸೃಜೇತ್ ॥ – ೯೫/೯

೨ ನಾಪತ್ರಪೇತ ಪ್ರಶ್ನೇಷು ನಾಭಿಭವ್ಯಾಂ ಗಿರಂ ಸೃಜೇತ್ ।
ನ ತ್ವರೇತ ನ ಚಾಸೂಯೇತ ತಥಾ ಸಂಗೃಹ್ಯತೇ ಪರಃ ॥ – ೯೫/೧೦

೩ ಪ್ರಿಯೇ ನಾತಿಭೃಶಂ ಹೃಷ್ಯೇದಪ್ರಿಯೇ ನ ಚ ಸಂಜ್ವರೇತ್ ।
ನ ಮುಹ್ಯೇದರ್ಥಕೃಚ್ಛ್ರೇಷು ಪ್ರಜಾಹಿತಮನುಸ್ಮರನ್ ॥ – ೯೫/೧೧

೪ ಅಪ್ರಕೀರ್ಣೇಂದ್ರಿಯಂ ಪ್ರಾಜ್ಞಮತ್ಯಂತಾನುಗತಂ ಶುಚಿಮ್ ।
ಶಕ್ತಂ ಚೈವಾನುರಕ್ತಂ ಚ ಯುಂಜ್ಯಾನ್ಮಹತಿ ಕರ್ಮಣಿ ॥ – ೯೫/೧೪

೫ ಏವಮೇವ ಗುಣೈರ್ಯುಕ್ತೋ ಯೋ ನ ರಜ್ಯತಿ ಭೂಮಿಪಮ್ ।
ಭರ್ತುರರ್ಥೇಷ್ವಸೂಯಂತಂ ನ ತಂ ಯುಂಜೀತ ಕರ್ಮಣಿ ॥ – ೯೫/೧೫

೬ ಮೂಢಮೈಂದ್ರಿಯಕಂ ಲುಬ್ಧಮನಾರ್ಯಚರಿತಂ ಶಠಮ್ ।
ಅನತೀತೋಪಧಂ ಹಿಂಸ್ರಂ ದುರ್ಬುದ್ಧಿಮಬಹುಶ್ರುತಮ್ ॥
ಕಾರ್ಯೇ ಮಹತಿ ಯೋ ಯುಂಜ್ಯಾದ್ ಹೀಯತೇ ಸ ನೃಪಃ ಶ್ರಿಯಃ ॥ – ೯೫/೧೬,೧೭

ಯೇ ಕೇಚಿದ್ ಭೂಮಿಪತಯಸ್ತಾನ್ ಸರ್ವಾನನ್ವವೇಕ್ಷಯೇತ್ ।
ಸುಹೃದ್ಭಿರನಭಿಖ್ಯಾತೈಸ್ತೇನ ರಾಜಾ ನ ರಿಷ್ಯತೇ ॥ - ೯೫/೧೯

೧೧. ಬಲಿಷ್ಠ ರಾಜನಿಗೆ ಅಪಕಾರ ಮಾಡಿ, ನಾನು ದೂರದಲ್ಲಿದ್ದೇನೆಂದು ಸಮಾಧಾನವಾಗಿರದೆ ಸದಾ ಎಚ್ಚರದಿಂದ ಇರದಿದ್ದರೆ ಶತ್ರುರಾಜನು (ಬಲಿಷ್ಠ) ಹದ್ದುಗಳಂತೆ ಎರಗುತ್ತಾನೆ[೧].

೧೨. ತನ ಸ್ಥಾನವನ್ನು ಭದ್ರಪಡಿಸಿಕೊಂಡು, ದುಷ್ಟನಾಗದೆ (ತಾನು), ತನ್ನ ಇತಿಮಿತಿ ತಿಳಿದು, ದುರ್ಬಲನಾದವನ ಮೇಲೆ ದಂಡೆತ್ತಿ ಹೋಗಬೇಕೇ ವಿನಃ ತನಗಿಂತ ಬಲಿಷ್ಠರ ಮೇಲೆ ಹೋಗಬಾರದು[೨].

೧೩. ಧರ್ಮಪರಾಯಣನಾದ ರಾಜನು ಪರಾಕ್ರಮದಿಂದ ಭೂಮಿಯನ್ನು ಗೆದ್ದು (ಹೊಂದಿ) ಪ್ರಜೆಗಳನ್ನು ಧರ್ಮದಿಂದ ಪಾಲಿಸಿ ಯುದ್ಧದಲ್ಲಿ ಶತ್ರುಗಳನ್ನು ಕೊಂದು ತಾನೂ ಯುದ್ಧ ಮಾಡುತ್ತಾ ಮರಣ ಹೊಂದಬೇಕು[೩].

೧೪. ರಾಜ್ಯಾಭಿವೃದ್ಧಿಯು ರಕ್ಷಣಾಸ್ಥಾನಗಳು, ಯುದ್ಧ, ಧರ್ಮದಿಂದ ರಾಜ್ಯ ಆಳುವುದು, ಮಂತ್ರಾಲೋಚನೆ (ಆಪ್ತರೊಡನೆ), ಯೋಗ್ಯವಾದ ಕಾಲದಲ್ಲಿ ಸಾಮರ್ಥ್ಯವಿರುವಷ್ಟು ಸುಖವನ್ನು ಪ್ರಜೆಗಳಿಗೆ ಕಲ್ಪಿಸುವುದು – ಈ ಐದು ಸಾಧನಗಳಿಂದ ಆಗುತ್ತದೆ[೪].

ಇವಕ್ಕಾಗಿ ಆಪ್ತರನ್ನು ನೇಮಿಸಿದರೆ ರಾಜ್ಯವನ್ನು ಬಹುಕಾಲ ಆಳಬಹುದು[೫].

೧೬. ಜನರು ಪ್ರೀತಿಸುವ ರಾಜನು ದಾನಿಯೂ, ರಾಜ್ಯಸಂಪತ್ತನ್ನು ಸೂಕ್ತವಾಗಿ ಹಂಚುವವನೂ, ಮೃದುಸ್ವಭಾವದವನೂ, ಕಾಯೇನ ವಾಚಾ ಮನಸಾ ಶುದ್ಧನೂ ಹಾಗೂ ಆಶ್ರಯಿಸಿದವರನ್ನು ತ್ಯಾಗ ಮಾಡದವನೂ ಆಗಿರಬೇಕು[೬].

---

೧ ಅಪಕೃತ್ಯ ಬಲಸ್ಥಸ್ಯ ದೂರಸ್ಥೋಽಸ್ಮೀತಿ ನಾಶ್ವಸೇತ್ ।
ಶ್ಯೇನಾನುಚರಿತೈರ್ಹ್ಯೇತೇ ನಿಪತಂತಿ ಪ್ರಮಾದ್ಯತಃ ॥ - ೯೫/೨೦

೨ ದೃಢಮೂಲಸ್ತ್ವದುಷ್ಟಾತ್ಮಾ ವಿದಿತ್ವಾ ಬಲಮಾತ್ಮನಃ ।
ಅಬಲಾನಭಿಯುಂಜೀತ ನ ತು ಯೇ ಬಲವತ್ತರಾಃ ॥ - ೯೫/೨೧

೩ ವಿಕ್ರಮೇಣ ಮಹೀಂ ಲಬ್ಧ್ವಾ ಪ್ರಜಾ ಧರ್ಮೇಣ ಪಾಲಯನ್ ।
ಆಹವೇ ನಿಧನಂ ಕುರ್ಯಾದ್ ರಾಜಾ ಧರ್ಮಪರಾಯಣಃ ॥ - ೯೫/೨೨

೪ ರಕ್ಷಣಾಧಿಕರಣಂ ಯುದ್ಧಂ ತಥಾ ಧರ್ಮಾನುಶಾಸನಮ್ ।
ಮಂತ್ರಚಿಂತಾ ಸುಖಂ ಕಾಲೇ ಪಂಚಭಿರ್ವರ್ಧತೇ ಮಹೀ ॥ - ೯೫/೨೪

೫ ನೈತಾನ್ಯೇಕೇನ ಶಕ್ಯಾನಿ ಸಾತತ್ಯೇನಾನ್ವವೇಕ್ಷಿತುಮ್ ।
ಏತೇಷ್ವಾಪ್ತಾನ್ ಪ್ರತಿಷ್ಠಾಪ್ಯ ರಾಜಾ ಭುಂಕ್ತೇ ಮಹೀಂ ಚಿರಮ್ ॥ - ೯೫/೨೬

೬ ದಾತಾರಂ ಸಂವಿಭಕ್ತಾರಂ ಮಾರ್ದವೋಪಗತಂ ಶುಚಿಮ್ ।
ಅಸಂತ್ಯಕ್ತಮನುಷ್ಯಂ ಚ ತಂ ಜನಾಃ ಕುರ್ವತೇ ಪ್ರಿಯಮ್ ॥ - ೯೫/೨೭

೧೭ ಮುಖ್ಯರಾದ ಅಮಾತ್ಯರನ್ನು ಬಿಟ್ಟು ಅಮುಖ್ಯ (ಅಯೋಗ್ಯ) ಅಮಾತ್ಯರನ್ನು ಪ್ರಿಯರನ್ನಾಗಿ ಮಾಡಿಕೊಳ್ಳುವ ರಾಜನು ವ್ಯಸನಗಳಿಗೆ (ಮದ್ಯ, ಮದನ, ಜೂಜು) ತುತ್ತಾಗಿ ನೆಲೆಯಿಲ್ಲದವನಾಗುತ್ತಾನೆ[೧] (ಸಂಪತ್ತನ್ನು ಕಳೆದುಕೊಳ್ಳುತ್ತಾನೆ).

೧೮. ಸದ್ಗುಣಶೀಲರಾದ ಜ್ಞಾತಿಗಳನ್ನು ಸತ್ಕರಿಸದಿದ್ದರೆ ಅವನು ಐಶ್ವರ್ಯ ಹೀನನಾಗುತ್ತದೆ[೨].

೧೯. ನನ್ನಲ್ಲಿ ಅನುರಕ್ತ (ಪ್ರೀತಿ) ಯುಳ್ಳ ರಾಜರಾರು? ಭಯದಿಂದ ಆಶ್ರಯಿಸಿದವರಾರು? ತಟಸ್ಥ ಯಾರು? ಅವರ ದೋಷಗಳೇನು? ಎಂದು ಸದಾ ಚಿಂತಿಸಬೇಕು[೩].

೨೦. ತಾನು ಬಲಿಷ್ಠನೆಂದು ದುರ್ಬಲರನ್ನು ಅಪಾಯಕಾರಿಗಳಲ್ಲವೆಂದು ಭಾವಿಸಿದರೆ (ಬಲಿಷ್ಠನಿಂದ) ದುರ್ಬಲರೂ ಎರಗುತ್ತಾರೆ[೪].

೨೧. ತನ್ನ ರಾಜನು ಎಲ್ಲ ಗುಣಗಳಿಂದ ಕೂಡಿದ್ದರೂ, ಪ್ರಿಯವಚನನಾಗಿದ್ದರೂ, ನಿಷ್ಕಾರಣವಾಗಿ ಅವನಿಗೆ ದ್ರೋಹ ಬಗೆಯುವ ಪಾಪಿಯನ್ನು ವಿಶ್ವಾಸ ಮಾಡಬಾರದು[೫].

೨೨. ನಹುಷ ಪುತ್ರನಾದ ಯಯಾತಿಯು ಈ ರಾಜರಹಸ್ಯವನ್ನು ಹೇಳಿದನು. ಇದನ್ನು ತಿಳಿದು ಅನುಷ್ಠಾನ ಮಾಡುವ ಮನುಷ್ಯರ ವಿಜಯದಲ್ಲಿ ಆಸಕ್ತನು ತನ್ನ ಬಲಿಷ್ಠ ಶತ್ರುಗಳನ್ನು ಸಂಹರಿಸುತ್ತಾನೆ[೬].

*****

೧ ಮುಖ್ಯಾನಮಾತ್ಯಾನ್ ಯೋ ಹಿತ್ವಾ ನಿಹೀನಾನ್ ಕುರುತೇ ಪ್ರಿಯಾನ್ ।
ಸ ವೈ ವ್ಯಸನಮಾಸಾದ್ಯ ಗಾಧಮಾರ್ತೋ ನ ವಿಂದತಿ ॥ – ೯೫/೩೧

೨ ಯಃ ಕಲ್ಯಾಣಗುಣಾನ್ ಜ್ಞಾತೀನ್ ದ್ವೇಷಾನ್ನೈವಾಭಿಮನ್ಯತೇ ।
ಅದೃಢಾತ್ಮಾ ದೃಢಕ್ರೋಧೋ ನಾಸ್ಯಾರ್ಥೋ ರಮತೇಽಂತಿಕೇ ॥ – ೯೫/೩೨

೩ ಕೇ ಚಾನುರಕ್ತಾ ರಾಜಾನಃ ಕೇ ಭಯಾತ್ ಸಮುಪಾಶ್ರಿತಾಃ ।
ಮಧ್ಯಸ್ಥದೋಷಾಃ ಕೇ ಚೈಷಾಮಿತಿ ನಿತ್ಯಂ ವಿಚಿಂತಯೇತ್ ॥ – ೯೫/೩೫

೪ ನ ಜಾತು ಬಲವಾನ್ ಭೂತ್ವಾ ದುರ್ಬಲೇ ವಿಶ್ವಸೇತ್ ಕ್ವಚಿತ್ ।
ಭಾರುಂಡಸದೃಶಾ ಹ್ಯೇತೇ ನಿಪತಂತಿ ಪ್ರಮಾದ್ಯತಃ ॥ – ೯೫/೩೬

೫ ಅಪಿ ಸರ್ವೈರ್ಗುಣೈರ್ಯುಕ್ತಂ ಭರ್ತಾರಂ ಪ್ರಿಯವಾದಿನಮ್ ।
ಅಭಿದ್ರುಹ್ಯತಿ ಪಾಪಾತ್ಮಾ ನ ತಸ್ಮಾದ್ ವಿಶ್ವಸೇಜ್ಜನಾನ್ ॥ – ೯೫/೩೭

೬ ಏತಾಂ ರಾಜೋಪನಿಷದಂ ಯಯಾತಿಃ ಸ್ಮಾಹ ನಾಹುಷಃ ।
ಮನುಷ್ಯವಿಜಯೇ ಯುಕ್ತೋ ಹಂತಿ ಶತ್ರೂನನುತ್ತಮಾನ್ ॥ – ೯೫/೩೮

# ೧೭೨. ಸುಮನಸನಿಗೆ ವಾಮದೇವನ ಉಪದೇಶ

ಸಾಮದಾನಭೇದೋಪಾಯಗಳಿಂದ ರಾಜ್ಯ ಸಂಪಾದನೆಯೇ ಶ್ರೇಷ್ಠ

೧. [೧]ಯುದ್ಧ ಮಾಡದೇನೇ ವಿಜಯ ಸಂಪಾದನೆ ಮಾಡಬೇಕು. ಅದು ಉತ್ತಮ ಯುದ್ಧದಿಂದ ಸಂಪಾದಿಸಿದ ವಿಜಯ ಜಘನ್ಯ (ಅಧಮ) ಎಂದು ರಾಜನೀತಿಜ್ಞರು ಹೇಳುತ್ತಾರೆ.

೨. ತನ್ನ ಮೂಲವು (ರಾಜ್ಯದ ಶಕ್ತಿಗಳ) ಅತಿದೃಢವಾಗಿರದಿದ್ದಲ್ಲಿ ಪಡೆಯದಿದ್ದದನ್ನು (ಶತ್ರುರಾಷ್ಟ್ರಾದಿ ಐಶ್ವರ್ಯವನ್ನು) ಪಡೆಯಲು ಆಸೆ ಪಡಬಾರದು. ದುರ್ಬಲಮೂಲದ ರಾಜನಿಗೆ ಯಾವ ಲಾಭವನ್ನೂ (ಪಡೆಯಬೇಕೆಂದು) ಹೇಳಿಲ್ಲ (ರಾಜನೀತಿಯಲ್ಲಿ)

೩. ಯಾವ ರಾಜನ ದೇಶವು ಅಭಿವೃದ್ಧಿ ಹೊಂದಿರುತ್ತದೋ, ಧನಧಾನ್ಯಸಂಪತ್ತಿನಿಂದ ಕೂಡಿರುತ್ತದೆಯೋ, ಸಂತುಷ್ಟರಾದ, ಸಚಿವರಿರುತ್ತಾರೋ ಅಂತಹ ರಾಜನ ಮೂಲವು ದೃಢವಾಗಿರುತ್ತದೆ[೨].

೪. ಯಾವ ರಾಜನ ಯೋಧರು ಸಂತುಷ್ಟರಾಗಿರುವರೋ, ರಾಜನಿಂದ ಸಾಂತ್ವನ (ಸಮಾಧಾನ) ಮಾತುಗಳನ್ನು ಹೊಂದಿದವರೋ, ಅಂತಹ ರಾಜನು ಅತ್ಯಲ್ಪ ಸೈನ್ಯದಿಂದಲೇ ಭೂಮಿಯನ್ನು ಗೆಲ್ಲುತ್ತಾನೆ[೩].

೫. ಹಾಗೆಯೇ ಪೌರರು, ದೇಶನಿವಾಸಿಗಳು ರಾಜನಲ್ಲಿ ಅನುರಾಗವುಳ್ಳವರಾಗಿ (ಪ್ರೀತಿ) ಅವನಿಂದ ಸತ್ಕೃತರಾಗಿ ಧನಧಾನ್ಯವುಳ್ಳವರಾಗಿರುವರೋ, ಆ ರಾಜನ ಮೂಲವು ದೃಢವಾಗಿರುತ್ತದೆ[೪].

೬. ಆದರೆ ವಿನಯರಹಿತರೂ, ರಾಷ್ಟ್ರವಿರೋಧಿಗಳೂ, ಚಂಡಾಲ, ಮ್ಲೇಚ್ಛ ಜಾತಿಯವರು, ಪಾಷಂಡಿಗಳು, ದುಷ್ಕರ್ಮಿಗಳು, ಬಲಿಷ್ಠರು, ಆಶ್ರಮವಾಸಿಗಳು, ಗಾಯಕರು, ನರ್ತಕರು

---

೧ ಅಯುದ್ಧೇನೈವ ವಿಜಯಂ ವರ್ಧಯೇದ್ ವಸುಧಾಧಿಪಃ।
ಜಘನ್ಯಮಾಹುರ್ವಿಜಯಂ ಯೋ ಯುದ್ಧೇನ ನರಾಧಿಪ॥ -೯೬/೧

೨ ಯಸ್ಯ ಸ್ಫೀತೋ ಜನಪದಃ ಸಂಪನ್ನಃ ಪ್ರಿಯರಾಜಕಃ।
ಸಂತುಷ್ಟಪುಷ್ಟಸಚಿವೋ ದೃಢಮೂಲಃ ಸ ಪಾರ್ಥಿವಃ॥ -೯೬/೩

೩ ಯಸ್ಯ ಯೋಧಾಃ ಸುಸಂತುಷ್ಟಾಃ ಸಾಂತ್ವಿತಾಃ ಸೂಪವಾಸಿತಾಃ।
ಅಲ್ಪೇನಾಪಿ ಸ ದಂಡೇನ ಮಹೀಂ ಜಯತಿ ಭೂಮಿಪಃ॥ -೯೬/೪

೪ ಪೌರಜಾನಪದಾ ಯಸ್ಯ ಸ್ವನುರಕ್ತಾಃ ಸುಪೂಜಿತಾಃ।
ಸಧನಾ ಧಾನ್ಯವಂತಶ್ಚ ದೃಢಮೂಲಃ ಸ ಪಾರ್ಥಿವಃ॥ -೯೬/೫

ಹೀಗೆ ವಿನೀತರನ್ನು ದುರ್ವಿನೀತರನ್ನು ಎಲ್ಲರನ್ನೂ ಪ್ರಯತ್ನಪೂರ್ವಕವಾಗಿ ತನಗೆ ಅನುಕೂಲರನ್ನಾಗಿ ಮಾಡಿಕೊಳ್ಳಬೇಕು.

೬. ಭೋಗಗಳಲ್ಲಿ ಆಸಕ್ತನಾಗದೆ, ಭೂತದಯಾಪರನಾಗಿ ತನ್ನನ್ನು ರಕ್ಷಿಸಿಕೊಂಡು, ಶೀಘ್ರವಾಗಿ ಕಾರ್ಯ ಮಾಡುವವನ ದೇಶ ಅಭಿವೃದ್ಧಿ ಹೊಂದುತ್ತದೆ[೧].

೭. ಯಾವುದು ಪೂಜ್ಯರಿಂದ ಜ್ಞಾನಿಗಳಿಂದ ನಿಂದಿತವಾಗಿರುತ್ತದೋ, ಅದನ್ನು ವಿದ್ವಾಂಸನಾದ ರಾಜನು ಮಾಡಬಾರದು. ಶುಭಕಾರ್ಯಗಳಲ್ಲಿ ತಪ್ಪದೇ ತನ್ನನ್ನು ತೊಡಗಿಸಿಕೊಳ್ಳಬೇಕು[೨].

೮. ಯಾವ ರಾಜನು ಚೆನ್ನಾಗಿ, ವಿಧೇಯನಾಗಿ ನಡೆದುಕೊಳ್ಳುವ ಪ್ರಜೆಗಳಲ್ಲಿ ಸುಳ್ಳಾಡಿ ವರ್ತಿಸುತ್ತಾನೋ, ಅವನು ಕೊಡಲಿಯಿಂದ ಕಾಡನ್ನು ಕಡಿದಂತೆ ತನ್ನನ್ನು ತಾನೇ ಕಡಿದುಕೊಳ್ಳುತ್ತಾನೆ.

೯. ಯಾವ ರಾಜನು ಎಲ್ಲ ಕಾರ್ಯಗಳನ್ನು ಮಾಡಿ ಸುಖವನ್ನು ಅನುಭವಿಸಲು ಇಚ್ಛಿಸುತ್ತಾನೋ, ಅಂತಹ ರಾಜನನ್ನು ಪ್ರಜೆಗಳು ಯಾರೂ ಅಗೌರವಿಸುವುದಿಲ್ಲ, ತಾನೂ ಕೂಡಾ ಪಶ್ಚಾತ್ತಾಪ ಪಡುವುದಿಲ್ಲ (ತಾನು ಮಾಡಿದ ಕಾರ್ಯಗಳಲ್ಲಿ ತೃಪ್ತಿ ಹೊಂದಿರುವುದರಿಂದ).

೧೦. ಯಾವ ರಾಜನು ಇಂತಹ ನಡತೆಯನ್ನು ಪ್ರಜೆಗಳಲ್ಲಿ ಪ್ರವರ್ತಿಸುತ್ತಾನೋ ಅಂತಹ ರಾಜನು ಇಹಪರಗಳಲ್ಲಿ ಲೋಕಗಳನ್ನು ಗೆದ್ದು ಈ ಲೋಕದಲ್ಲಿ ವಿಜಯದಲ್ಲಿ ಪ್ರತಿಷ್ಠಿತನಾಗುತ್ತಾನೆ.

ಹೀಗೆ ವಾಮದೇವರಿಂದ ಹೇಳಿಸಿಕೊಂಡು ಸಮನಸ್ ರಾಜನು ಹಾಗೆಯೇ ಮಾಡಿದನು. ನೀನು ಹಾಗೆಯೇ ಮಾಡಿದಲ್ಲಿ, ಇಹಪರಲೋಕಗಳನ್ನು ಗೆಲ್ಲುವುದರಲ್ಲಿ ಸಂಶಯವಿಲ್ಲವೆಂದು ಧರ್ಮರಾಜನಿಗೆ ಭೀಷ್ಮರು ಹೇಳಿದರು.

## ಸಂದೇಶಗಳು

ವಾಮದೇವ ಋಷಿಗಳ ಮಾತುಗಳೆಲ್ಲವೂ ಸಂದೇಶಗಳೇ ಆಗಿವೆ.

*****

---

೧ ಭೋಗೇಷ್ವದಯಮಾನಸ್ಯ ಭೂತೇಷು ಚ ದಯಾವತಃ।
ವರ್ಧತೇ ತ್ವರಮಾಣಸ್ಯ ವಿಷಯೋ ರಕ್ಷಿತಾತ್ಮನಃ॥ - ೯೬/೯

೨ ತಕ್ಷತ್ಯಾತ್ಮಾನಮೇವೈಷ ವನಂ ಪರಶುನಾ ಯಥಾ।
ಯಃ ಸಮ್ಯಗ್ ವರ್ತಮಾನೇಷು ಸ್ವೇಷು ಮಿಥ್ಯಾ ಪ್ರವರ್ತತೇ॥ - ೯೬/೧೨

# ೧೭೩. ಇಂದ್ರಾಂಬರೀಷ ಸಂವಾದ

ಯುಧಿಷ್ಠಿರನ ಪ್ರಶ್ನೆ – ತಾತ! ಶೂರರಾಗಿ ಯುದ್ಧ ಮಾಡುತ್ತಾ ಪಲಾಯನ ಮಾಡದೆ ಮರಣ ಹೊಂದುವವರಿಗೆ ಯಾವ ಲೋಕಗಳು ಸಿಗುತ್ತವೆ ಎಂಬುದನ್ನು ನನಗೆ ಹೇಳು.

ಅದಕ್ಕೆ ಭೀಷ್ಮರು – ಅಂಬರೀಷನಿಗೂ, ಇಂದ್ರನಿಗೂ ನಡೆದ ಸಂವಾದ ರೂಪ ಇತಿಹಾಸವನ್ನು ಹೇಳಿದರು.

ನಾಭಾಗಪುತ್ರ ಅಂಬರೀಷ ಮಹಾರಾಜ ದುರ್ಲಭವಾದ ಸ್ವರ್ಗಕ್ಕೆ ಹೋಗಿ ಸುರಲೋಕದಲ್ಲಿ ಇಂದ್ರನೊಡನೆ ಇದ್ದ. ಪ್ರಕಾಶಮಾನವಾದ, ದಿವ್ಯವಾದ ವಿಮಾನದಲ್ಲಿ ತನಗಿಂತಲೂ ಮೇಲೆ ಕುಳಿತು ಮೇಲೆ ಹೋಗುತ್ತಿದ್ದ ತನ್ನ ಸೇನಾಪತಿಯನ್ನು ನೋಡಿದನು. ತುಂಬಾ ಆಶ್ಚರ್ಯವಾಗಿ ಇಂದ್ರನಿಗೆ ಹೀಗೆ ಹೇಳಿದನು.

ಇಂದ್ರನೇ! ನಾನು ಸಾಗರದವರೆಗೆ ವ್ಯಾಪಿಸಿದ ಭೂಮಿಯನ್ನು ಶಾಸ್ತ್ರೋಕ್ತ ರೀತಿಯಲ್ಲಿ ಪಾಲಿಸಿ, ಚಾತುರ್ವರ್ಣ್ಯದಲ್ಲಿ ಹಾಗೆಯೇ ತೊಡಗಿಸಿ ಧರ್ಮದಲ್ಲಿ ಪ್ರವೃತ್ತನಾದೆ. ಅದಕ್ಕೂ ಮೊದಲು ಘೋರವಾದ ಬ್ರಹ್ಮಚರ್ಯೆಯಿಂದ ಗುರುಸೇವೆ ಮಾಡಿ ವೇದಾಧ್ಯಯನ, ರಾಜನೀತಿಶಾಸ್ತ್ರಗಳನ್ನು ಕಲಿತು ಸ್ವಾಧ್ಯಾಯ ದೀಕ್ಷೆಯಿಂದ ಋಷಿಗಳನ್ನು, ಯಜ್ಞಗಳಿಂದ ದೇವತೆಗಳನ್ನು, ಅನ್ನಪಾನಾದಿಗಳಿಂದ ಅತಿಥಿಗಳನ್ನು ಕ್ಷತ್ರಿಯಧರ್ಮದಲ್ಲಿಯೇ ಇದ್ದು ಯುದ್ಧದಲ್ಲಿ ಶಾಸ್ತ್ರೋಕ್ತರೀತಿಯಲ್ಲಿ ಜಯಶೀಲನಾಗಿದ್ದೇನೆ (ನಾದೆನು).

ಆಗ ನನ್ನ ಸೇನಾಪತಿಯಾಗಿದ್ದ ಸುದೇವನು ಪ್ರಶಾಂತನಾಗಿದ್ದನು. ಆತ ಈಗ ಹೇಗೆ ನನ್ನನ್ನೂ ಮೀರಿದ್ದಾನೆ? ಈತನು ಯಜ್ಞಗಳನ್ನು ಮಾಡಲಿಲ್ಲ, ಬ್ರಾಹ್ಮಣರನ್ನು ಸಂತೋಷಪಡಿಸಲಿಲ್ಲ, ಆದರೂ ಏಕೆ ನನ್ನನ್ನೂ ಮೀರಿದ್ದಾನೆ?

ಅಂಬರೀಷನ ಈ ಪ್ರಶ್ನೆಗಳಿಗೆ ಇಂದ್ರನು ನೀನು ಹಿಂದೆ ಭೂಮಿಯನ್ನು ಆಳುವಾಗ ಈ ಸುದೇವನು ಮಾಡಿದ ಮಹತ್ಕಾರ್ಯಗಳನ್ನು ತಿಳಿಸುವೆನು, ಎಂದನು.

ನೀನು ಶುಭಕಾಲದಲ್ಲಿ ದೇವತೆಗಳ ಸಂತೋಷೋದ್ದೇಶದಿಂದ ಅಶ್ವಮೇಧಯಾಗ ಮಾಡುತ್ತಿದ್ದೆ. ಆ ಯಜ್ಞಕ್ಕೆ ವಿಘ್ನ ಒಡ್ಡುವ ಸಲುವಾಗಿ ಶತಶೃಂಗನೆಂಬ ರಾಕ್ಷಸನು ಗೆಲ್ಲಲು ಅಸಾಧ್ಯರಾದ ಸಂಯಮ, ವಿಷಮ ಮತ್ತು ಸುಯಮ ಎಂಬ ಮೂವರು ಮಕ್ಕಳು ಶತಕೋಟಿ ರಾಕ್ಷಸ ಸೈನ್ಯದೊಡನೆ ಬಂದರು. ಅವರು ನಿನ್ನ ಪ್ರಜೆಗಳನ್ನು ಸೆರೆ ಹಿಡಿದರು. ಆಗ ನಿನ್ನ ಸೈನ್ಯ ವಿಹ್ವಲಗೊಂಡಿತು. ನಿನ್ನ ಸೇನಾಪತಿಯು ಆ ಮೂವರು ರಾಕ್ಷಸರನ್ನು ಕೊಂದರೂ, ಆ ರಾಕ್ಷಸಸೇನೆಗೆ ಸೋತನು. ಆಗ ನಿನ್ನ ಅಮಾತ್ಯರ ಮಾತನ್ನು ಕೇಳಿ ನೀನು ಸುದೇವನಿಗೆ ಬಹಿಷ್ಕಾರ

ಹಾಕಿದೆ. ಆದರೆ ಮತ್ತೆ ಅದೇ ಅಮಾತ್ಯರ ಮಾತಿನ ಮೇರೆಗೆ ನಿನ್ನ ಸಕಲ ಸೈನ್ಯದೊಡನೆ ಯುದ್ಧಕ್ಕೆ ಸಂದೇಶವನ್ನು ಕಳಿಸಿದೆ[1].

'ರಾಕ್ಷಸಸೇನೆಯನ್ನು ಗೆಲ್ಲದೆ, ಪ್ರಜೆಗಳನ್ನು ಬಿಡಿಸದೆ ವಾಪಸು ಬರಕೂಡದು' ಎಂದು ಆಜ್ಞೆ ಮಾಡಿದ್ದೆ.

ಸುದೇವನು ರಾಜಾದೇಶದ ಮೇರೆಗೆ ರಾಕ್ಷಸರ ಸೈನ್ಯದ ಬಳಿಗೆ ಬಂದು ನೋಡಲು, 'ಈ ಸೈನ್ಯವನ್ನು ಸುರಾಸುರರಾರೂ ಗೆಲ್ಲಲಾರರು. ಅಂಬರೀಷನೂ ಈ ಸೈನ್ಯದ ಒಂದು ಭಾಗವನ್ನೂ ನಾಶ ಮಾಡಲಾರ. ನಾನಿನ್ನೇನು ಈ ಸೈನ್ಯವನ್ನು ಹೇಗೆ ತಾನೇ ಗೆಲ್ಲಬಲ್ಲೆ! (ಈ ವಿಷಯ ತಿಳಿದ) ಅಂಬರೀಷ ರಾಜನು ಮತ್ತೆ ಎಲ್ಲ ಮಂತ್ರಿಗಳೊಡನೆ ಎಲ್ಲ ಸೈನ್ಯವನ್ನು ಕಳಿಸಿದೆ, ನೀನೂ ಬಂದೆ. ಆದರೆ ನೀನು ಆಗ ಸೋತೆ. ಸೇನೆಯೂ ಸೋತಿತು[2].

ಆ ಸಂದರ್ಭದಲ್ಲಿ ಸುದೇವನು ಜಗತ್ಪತಿಯಾದ ಸ್ಮಶಾನವಾಸಿಯಾದ ರುದ್ರದೇವರನ್ನು ಶರಣಾಗಿ ಸ್ತೋತ್ರಮಾಡಿ, ಶಸ್ತ್ರ ತೆಗೆದುಕೊಂಡು ತನ್ನ ಶಿರಚ್ಛೇದ ಮಾಡಿಕೊಳ್ಳಲು ಉದ್ಯುಕ್ತನಾದ[3].

ದೇವದೇವನಾದ ಶಂಕರನು ದಯೆಯಿಂದ ಸುದೇವನು ಶಸ್ತ್ರ ಹಿಡಿದುಕೊಂಡ ಬಲಗೈಯನ್ನು ಹಿಡಿದು– 'ಎಲೈ ಪುತ್ರನೇ! ಇದೇನು ಸಾಹಸ' ಎಂದಾಗ ಸುದೇವನು ನಾನು ಈ ಸೇನೆಯನ್ನು ಎದುರಿಸಲು ಅಶಕ್ತ. ಆದ್ದರಿಂದ ಪ್ರಾಣ ತ್ಯಾಗ ಮಾಡುತ್ತೇನೆ. ಜಗತ್ಪತಿಯೇ! ಆರ್ತನಾದ ನನಗೆ ನೀನೇ ಗತಿ. ರಾಕ್ಷಸಸೇನೆಯನ್ನು ಗೆಲ್ಲದೆ ವಾಪಸು ಬರಬಾರದೆಂದು ಸಚಿವರ ಮಾತುಗಳಿಂದ ಪ್ರಭಾವಿತನಾಗಿ ಅಂಬರೀಷ ಆದೇಶ ಮಾಡಿದ್ದಾನೆ ಎಂದು ಶಂಕರನಿಗೆ ಹೇಳಿದನು.

ಈ ಮಾತನ್ನು ಕೇಳಿದ ಮಹಾದೇವನು ಭೂಮಿಯ ಮೇಲೆ ಬಿದ್ದು ಅಧೋಮುಖವಾಗಿ ನಮಿಸುತ್ತಿದ್ದ ಸುದೇವನನ್ನು ಕುರಿತು ಪ್ರಜೆಗಳ ಹಿತಕ್ಕಾಗಿ ಹೀಗೆ ಹೇಳಿದನು.

ಈ ರಥ ಗಜಾಶ್ವಗಳಿಂದ ಕೂಡಿದೆ. ದಿವ್ಯಾಸ್ತ್ರಗಳಿವೆ. ತ್ರಿಪುರಾಸುರನನ್ನು ಸಂಹಾರ ಮಾಡಿದ ರಥ, ಪಿನಾಕ ಧನುಸ್ಸು ಖಡ್ಗಗಳನ್ನು ಕೊಡುತ್ತೇನೆ. ಶಂಕರನು ಅಂಗಸಹಿತವಾದ

---

೧ ನಾಜಿತ್ವಾ ರಾಕ್ಷಸೀಂ ಸೇನಾಂ ಪುನರಾಗಮನಂ ತವ।
ಬಂಧಾನ್ಮೋಕ್ಷಮಕೃತ್ವಾ ಚ ನ ಚಾಗಮನಮಿಷ್ಯತೇ॥ - ೧೦೦/೨೦

೨ ತತಃ ಸೇನಾಂ ಪುನಃ ಸರ್ವಾ ಪ್ರೇಷಯಾಮಾಸ ಪಾರ್ಥಿವ।
ಯಚ್ಚತ್ವಂ ವಿಜಿತಃ ಸರ್ವೈರ್ಮಂತ್ರಿಭಿಃ ಸೋಪದ್ಯೈಃ ಸಹ॥ -೧೦೦/೨೪

೩ ತತೋ ರುದ್ರಂ ಮಹಾದೇವಂ ಪ್ರಪನ್ನೋ ಜಗತಃ ಪತಿಮ್।
ಸ್ಮಶಾನನಿಲಯಂ ದೇವಂ ತುಷ್ಟಾವ ವೃಷಭಧ್ವಜಮ್॥
ಸ್ತುತ್ವಾ ಶಸ್ತ್ರಂ ಸಮಾದಾಯ ಸ್ವಶಿರಶ್ಛೇತ್ತುಮುದ್ಯತಃ॥ - ೧೦೦/೨೫,೨೬

ಧನುರ್ವೇದವನ್ನು ಕರೆದು ಪಿನಾಕಾದಿಬಿಲ್ಲು ಮೊದಲಾದವುಗಳನ್ನು ಕೊಟ್ಟನು. ಈ ಸಲಕರಣೆಗಳಿಂದ ಕೂಡಿದ ರಥದಿಂದ ಯುದ್ಧ ಮಾಡು. ಪ್ರಮಾದವಶಾತ್ ಕೆಳಗಿಳಿಯಬೇಡ. ರಥದಲ್ಲಿಯೇ ಕುಳಿತು ಯುದ್ಧ ಮಾಡಿದರೆ ದೇವದಾನವರನ್ನು ಗೆಲ್ಲುವೆ. ಇನ್ನು ರಾಕ್ಷಸ ಪಿಶಾಚಿಗಳು, ಸಾವಿರಾರು ಸೂರ್ಯಪ್ರಭೆಯುಳ್ಳ ಈ ರಥವನ್ನು ನೋಡಲೂ ಸಾಧ್ಯವಿಲ್ಲ. ನಿನ್ನೊಡನೆ ಯುದ್ಧ ಮಾಡುವುದಂತೂ ಅಸಾಧ್ಯವೇ ಸರಿ[೧] (ಎಂದು ಹೇಳಿದನು).

ಹೀಗೆ ರುದ್ರದೇವನು ಅನುಗ್ರಹದ ಮೇರೆಗೆ ರಥದಲ್ಲಿ ಕುಳಿತು ರಾಕ್ಷಸರೆಲ್ಲರನ್ನು ಗೆದ್ದು ಬಂಧಿಗಳಾಗಿದ್ದ ಪ್ರಜೆಗಳನ್ನು ವಿಮೋಚನಗೊಳಿಸಿ ತನ್ನ ಸೈನ್ಯದಿಂದ ರಾಕ್ಷಸರನ್ನು ಕೊಲ್ಲಿಸಿ ಬಾಹುಯುದ್ಧದಲ್ಲಿ ವಿಷಮನೆಂಬ ರಾಕ್ಷಸನನ್ನು ಭೂಮಿಯಲ್ಲಿ ಕೆಡವಿ ಅವನನ್ನು ಕೊಂದು ತಾನೂ ಹತನಾದನು[೨].

ಎಲೈ ಅಂಬರೀಷನೇ! ಇದುವೇ ಸುದೇವನ ಸಂಗ್ರಾಮಯಜ್ಞ, ಬಹು ದೊಡ್ಡದು. ವಿಸ್ತಾರವಾದುದು. ಯುದ್ಧ ಸನ್ನದ್ಧನಾಗಿ ದೀಕ್ಷಿತನಾಗಿ ಸೇನಾಮುಖವನ್ನು ತಲುಪಲು ಯುದ್ಧಯಜ್ಞಾಧಿಕಾರಿಯಾಗುತ್ತಾನೆ ಎಂಬುದು ನಿಶ್ಚಯ.

ಇಂದ್ರನ ಈ ಮಾತಿಗೆ ಅಂಬರೀಷ ಮಹಾರಾಜನು ಕೇಳುತ್ತಾನೆ –

ಈ ಯಜ್ಞದಲ್ಲಿ ಹವಿಸ್ಸು ಆಜ್ಯ, ದಕ್ಷಿಣೆ ಯಾವುವು? ಋತ್ವಿಜರು ಯಾರು? ಇದನ್ನು ಹೇಳು ಎನ್ನಲು ಇಂದ್ರದೇವರು ಹೇಳುತ್ತಾರೆ.

ಸಂಗ್ರಾಮ ಯಜ್ಞದಲ್ಲಿ

---

೧ ಧನುರ್ವೇದಂ ಸಮಾಹೂಯ ಸಗಣಂ ಸಹವಿಗ್ರಹಮ್ ।
ರಥನಾಗಾಶ್ವಕಲಿಲಂ ದಿವ್ಯಾಸ್ತ್ರಮಲಂಕೃತಮ್ ॥
ರಥಂ ಚ ಸುಮಹಾಭಾಗಂ ಯೇನ ತತ್ ತ್ರಿಪುರಂ ಹತಮ್ ।
ಧನುಃ ಪಿನಾಕಂ ಖಡ್ಗಂ ಚ ರೌದ್ರಮಸ್ತ್ರಂ ಚ ಶಂಕರಃ ॥
ನಿಜಘಾನಾಸುರಾನ್ ಸರ್ವಾನ್ ಯೇನ ದೇವಸ್ತ್ರಿಯಂಬಕಃ ।
ಉವಾಚ ಚ ಮಹಾದೇವಃ ಸುದೇವಂ ವಾಹಿನೀಪತಿಮ್ ।
ರಥಾದಸ್ಮಾತ್ ಸುದೇವ ತ್ವಂ ದುರ್ಜಯಃ ಸ ಸುರಾಸುರೈಃ ॥
ಮಾಯಯಾ ಮೋಹಿತೋ ಭೂಮೌ ನ ಪದಂ ಕರ್ತುಮರ್ಹಸಿ ।
ರಥಸ್ಥಸ್ತ್ರಿದಶಾನ್ ಸರ್ವಾನ್ ಜೇಷ್ಯಸಿ ತ್ವಂ ಸದಾನವಾನ್ ॥ – ೧೦೦/೩೨–೩೫

೨ ರಾಕ್ಷಸಾಶ್ಚ ಪಿಶಾಚಾಶ್ಚ ನ ಶಕ್ತಾ ದ್ರಷ್ಟುಮೀದೃಶಮ್ ।
ರಥಂ ಸೂರ್ಯಸಹಸ್ರಾಭಂ ಕಿಮು ಯೋದ್ಧುಂ ತ್ವಯಾ ಸಹ ॥
ಸ ಜಿತ್ವಾ ರಾಕ್ಷಸಾನ್ ಸರ್ವಾನ್ ಕೃತ್ವಾ ಬಂಧೀವಿಮೋಕ್ಷಣಮ್ ।
ಘಾತಯಿತ್ವಾ ಚ ತಾನ್ ಸರ್ವಾನ್ ಬಾಹುಯುದ್ಧೇ ತ್ವಯಂ ಹತಃ ॥
ವಿಷಮಂ ಪ್ರಾಪ್ಯ ಭೂಪಾಲ ವಿಷಮಶ್ಚ ನಿಪಾತಿತಃ ॥ – ೧೦೦/೩೬,೩೭

| | | |
|---|---|---|
| ೧ | ಋತ್ವಿಜರು | ಗಜಗಳು |
| ೨ | ಅಶ್ವಗಳು | ಅಧ್ವರ್ಯುಗಳು |
| ೩ | ಹವಿಸ್ಸುಗಳು | ಶತ್ರುಗಳ ಮಾಂಸ |
| ೪ | ಆಜ್ಯ | ರಕ್ತವೇ |
| ೫ | ಯಜ್ಞದ ಸದಸ್ಯರು | ನರಿ, ಹದ್ದು, ಕಾಗೆ, ಗೂಬೆಗಳು- ಆಜ್ಯಶೇಷ ಪಾನ ಮಾಡುವವರು - ಯಜ್ಞದ ಹವಿಸ್ಸನ್ನು ತಿನ್ನುವವರು |
| ೬ | ಯಜ್ಞದ ಸ್ರುಕ್ಕುಗಳು | ಹರಿತವಾದ ನೀರನ್ನು ಕುಡಿಸಿ ಹದಮಾಡಿದ ಪ್ರಾಸ ತೋಮರಗಳ ಸಮೂಹಗಳು - ಖಡ್ಗ, ಪರಶುಗಳು (ವೀರನ) |
| ೭ | ಸ್ರುವ | ಬಿಲ್ಲಿನ ವೇಗದಿಂದ ಹೊರಹೊಮ್ಮುವ ತೀಕ್ಷ್ಣವಾದ, ಹರಿತವಾದ ಬಾಣ |
| ೮ | ಯಜ್ಞದಲ್ಲಿ ಸ್ಪ್ಯ | ಆನೆಯ ದಂತದಿಂದ ಮಾಡಿದ ಹಿಡಿಯನ್ನು ಹೊಂದಿ, ವ್ಯಾಘ್ರ ಚರ್ಮದಿಂದ ಸುತ್ತಲ್ಪಟ್ಟ ಗಜಾರೋಹಿಯ ಕೈಯಲ್ಲಿರುವ ಖಡ್ಗ (ಖದಿರವೃಕ್ಷದ ಆಯುಧ ವಿಶೇಷ) |
| ೯ | ವಸು (ಧನ) | ಹರಿತವಾದ ನೀರನ್ನು ಕುಡಿಸಿ ಹದಮಾಡಿದ ಪೂರ್ತಿಯಾಗಿ ಕಬ್ಬಿಣದಿಂದ ಮಾಡಿದ ತಿಕ್ಷ್ಣವಾದ ಶಕ್ತಿ, ಪರಶುಗಳ ಪ್ರಹಾರ |
| ೧೦ | ಯಜ್ಞದ ಪೂರ್ಣಾಹುತಿ | ಯುದ್ಧಭೂಮಿಯಲ್ಲಿ ವೇಗದಿಂದ ಹರಿಯುವ ರಕ್ತದ ನದಿ |
| ೧೧ | ಸಾಮಗಳು | ಸೇನಾಮುಖದಲ್ಲಿ ಕೇಳಿಬರುವ ಹೊಡೆ, ಕತ್ತರಿಸು (ಛಿಂಧಿ, ಭಿಂಧಿ) ಮೊದಲಾದ ಶಬ್ದಗಳು |
| ೧೨ | ಸಾಮಗಾಯಕರು (ಲಕ್ಷಾಲಂಕಾರದಲ್ಲಿ) | ಛಿಂಧಿ ಭಿಂಧಿ ಎಂದು ಹೇಳುವ ಯೋದರು |
| ೧೩ | ಹವಿರ್ಧಾನ | ಶತ್ರುಸೈನ್ಯದ ಮುಂಭಾಗ |
| ೧೪ | ಶ್ಯೇನಜಿತ ಎಂಬ ಅಗ್ನಿ | ಗಜಗಳ, ಅಶ್ವಗಳ ಕವಚಧಾರಿ ಯೋಧರ ಸಮೂಹ |
| ೧೫ | ಖದಿರವೃಕ್ಷದ ಎಂಟು ಮೂಲೆಗಳಿರುವ ಯೂಪ | ಸಹಸ್ರಯೋಧರು ಹತರಾದಾಗ ಯಾವ ಯೋಧನ, ಶೂರನ ಮುಂಡ ಮೇಲೆ ಏಳುತ್ತದೋ ಅದು |
| ೧೬ | ದೇವತಾಹ್ವಾನ | ಅಂಕುಶದಿಂದ ಪ್ರೇರೇಪಿತ ಆನೆಗಳ ಗರ್ಜನೆ |
| ೧೭ | ವಷಟ್ಕಾರ | ಗಟ್ಟಿಯಾಗಿ ಹೊಡೆದ ಚಪ್ಪಾಳೆ |

| | | |
|---|---|---|
| ೧೮ | ಉದ್ಗಾತೃ | ಮೂರು ಸಾಮಗಳನ್ನು ಗಾನ ಮಾಡುವ ಉದ್ಗಾತೃವೇ ದುಂದುಭಿ |
| ೧೯ | ಅನಂತದಕ್ಷಿಣೆಯುಳ್ಳ ಯಜ್ಞ | ಬ್ರಾಹ್ಮಣನ ಸ್ವತ್ತು ಅಪಹಾರವಾದಾಗ ಯಾರು ಯುದ್ಧ- ಮಾಡಿ ತನ್ನನ್ನೇ ಯೂಪವನ್ನಾಗಿಸಿಕೊಂಡು ಎತ್ತಿ ತನಗೆ ಪ್ರಿಯವಾದ ಶರೀರವನ್ನು ತ್ಯಾಗ ಮಾಡುತ್ತಾನೋ ಅದು |
| ೨೦ | ಅವಭೃಥಸ್ನಾನ | ಯಾವ ಯೋಧನ ಯುದ್ಧರೂಪವಾದ ಮಹಾಯಜ್ಞದಲ್ಲಿ ತೋಮರಗಳೆಂಬ ದೊಡ್ಡ ಕಲ್ಲುಗಳಿಂದ ಕೂಡಿದ ಭೇರಿಗಳೆಂಬ ಮಂಡೂಕ ಮತ್ತು ಆಮೆಗಳಿಂದ ಕೂಡಿದ, ವೀರರ ಅಸ್ಥಿಗಳೆಂಬ ಮರಳುಗಳಿಂದ ಕೂಡಿದ, ದಾಟಲು ಅಸಾಧ್ಯವಾದ ರಕ್ತಮಾಂಸಗಳೆಂಬ ಕೆಸರಿನಿಂದ ಕೂಡಿದ, ಖಡ್ಗಚರ್ಮಗಳೆಂಬ ದೋಣಿಗಳನ್ನು ಹೊಂದಿದ, ಯೋಧರ ತಲೆಕೂದಲುಗಳೆಂಬ ಶೈವಲದಿಂದ ಮೃದುವಾದ, ಕತ್ತರಿಸಲ್ಪಟ್ಟ ಅಶ್ವಗಜರಥಗಳ ಭಾಗಗಳಿಂದ ಮಿಶ್ರಿತವಾದ, ಪತಾಕೆಗಳು ಮತ್ತು ಧ್ವಜಗಳು ಎಂಬ ಬೆತ್ತದ ಮರಗಳುಳ್ಳ, ಹತವಾದ ಅಶ್ವಾದಿವಾಹನಗಳನ್ನು ಸೆಳೆದೊಯ್ಯುವ, ರಕ್ತಜಲದಿಂದ ಸಂಪೂರ್ಣವಾಗಿ ಕೂಡಿದ, ದಡದಲ್ಲಿರುವ ನರರು ದಾಟಲು ಸಾಧ್ಯವಾಗದ, ಹತವಾದ ಆನೆಗಳೆಂಬ ದೊಡ್ಡ ಮೊಸಳೆಗಳಿಂದ ಕೂಡಿದ, ಪರಲೋಕದ ಎಡೆಗೆ ಹರಿಯುವ, ನೋಡಲು ಅಮಂಗಳವಾದ, ಋಷ್ಟಿಗಳು ಖಡ್ಗಗಳು ಧ್ವಜಗಳೆಂಬ ಶಿಲೆಗಳಿಂದ ಕೂಡಿದ, ಹದ್ದು, ಕಾಗೆ, ಕಂಕ ಮೊದಲಾದ ಸಣ್ಣದೋಣಿಗಳಿಂದ ಕೂಡಿದ, ರಾಕ್ಷಸರಿಂದ ಸಂಚರಿಸಲ್ಪಡುವ, ಭೀರುಗಳಿಗೆ ಹೆದರಿಕೆಯನ್ನುಂಟು ಮಾಡುವ ನದಿಯು ಹರಿಯುತ್ತದೆಯೋ ಅದು |
| ೨೧ | ಹವಿರ್ಧಾನ | ಯಾರಿಗೆ ಶತ್ರುಸೈನ್ಯದ ಮುಂಭಾಗವು ಪತ್ನೀಶಾಲೆಯೋ |

| | | |
|---|---|---|
| ೨೨ | ವೇದಿ | ಯಾವಾಗ ಎರಡೂ ಕಡೆಗಳಲ್ಲಿ ಸೈನ್ಯವು ಸೇರಿ ಅದರ ಮಧ್ಯದಲ್ಲಿ ಯೋದನ ಮುಂಭಾಗದಲ್ಲಿ ಅವಕಾಶವಿರುವುದೋ ಅದು |
| ೨೩ | ಮೂರು ಅಗ್ನಿಗಳು | ಧನುರ್ವೇದ |
| ೨೪ | ತಪಸ್ಸು ಪುಣ್ಯ, ಸನಾತನಧರ್ಮ ಮತ್ತು ನಾಲ್ಕು ಆಶ್ರಮಗಳ ಧರ್ಮಾಚರಣೆ | ಯುದ್ಧದಲ್ಲಿ ಪಲಾಯನ ಮಾಡದಿರುವುದು |

ಧರ್ಮರಾಜನು ಕೇಳಿದ ಪ್ರಶ್ನೆಗೆ ಇಂದ್ರನ ಉತ್ತರಗಳು ಹೀಗಿವೆ.

ತನ್ನ ಪ್ರಭುವಿನ ಸಲುವಾಗಿ ಯಾವ ಶೂರನು ರಣರಂಗದಲ್ಲಿ ವಿಕ್ರಮವನ್ನು ತೋರಿಸುವನೋ, ಭಯದಿಂದ ಹಿಂದಿರುವುದಿಲ್ಲವೋ ಅವನಿಗೆ ಲಭ್ಯವಾಗುವ ಲೋಕಗಳು ನನ್ನ ಲೋಕಗಳಂತೆಯೇ ಇರುತ್ತವೆ.

ಯಾವನು ವಿಷಯದಲ್ಲಿ ನಿರತನಾಗಿ ಯಾವ ಸಹಾಯವನ್ನು ನಿರೀಕ್ಷಿಸದೇ ಶತ್ರುಸೈನ್ಯ ಮಧ್ಯವನ್ನು ಪ್ರವೇಶಿಸುತ್ತಾನೆಯೋ ಅವನ ಲೋಕಗಳು ನನ್ನ ಲೋಕಗಳಂತೆಯೇ.

ಸದಸ್ಯರ ಉತ್ತರದಲ್ಲಿರುವ ಯೋಧರೆಂಬ ಅಗ್ನಿಯೇನಿದೆಯೋ ಅದು ಅಗ್ನೀಧ್ರನ ಉತ್ತರದಿಕ್ಕಿನಲ್ಲಿ ಶತ್ರುಸೇನೆಯನ್ನು ಭಾರ್ಯೆಯಾಗಿ ಹೊಂದಿದ ಯೋಧನಿಗೆ ಅವನು ಪಡೆಯುವ ಸರ್ವಲೋಕಗಳಿಗೆ ಸಮೀಪದಲ್ಲಿರುವಂತಹುದು.

ಯುದ್ಧದಲ್ಲಿ ಮೊದಲೇ ಹರಿಯುವ ಕೇಶ, ಮಾಂಸ, ಅಸ್ಥಿಗಳಿಂದ ಕೂಡಿದ ನದಿಯು ಯಾವ ರಕ್ತದಿಂದ ಬೆರೆತು ವೇಗವಾಗಿ ಹರಿಯುತ್ತದೆಯೋ ಅಂತಹವನು ಶ್ರೇಷ್ಠವಾದ ಗತಿಯನ್ನು ಹೊಂದುವನು.

ಯುದ್ಧದಲ್ಲಿ ಹತನಾದ ಶೂರನ ಬಳಿಗೆ ಶ್ರೇಷ್ಠರಾದ ಸಹಸ್ರ ಅಪ್ಸರೆಯರು ನನ್ನ ಪತಿಯಾಗು ಎಂದು ಹೇಳುತ್ತಾ ಓಡಿ ಬರುತ್ತಾರೆ.

ಹೀಗೆ ಅಂಬರೀಷರಾಜನಿಗೆ ಇಂದ್ರನು ಯುದ್ಧದ ಆಧ್ಯಾತ್ಮಿಕ ವಿವರಣೆ ಕೊಟ್ಟು ಸ್ವಯಂ ತಾನೂ ಕೂಡಾ ಇಂದ್ರಪದವಿಗೆ ಬರಲು ವೃತ್ರಾಸುರ, ಬಲ, ಪಾಕ, ವಿರೋಚನ, ನಮುಚಿ, ಶಂಬರಾಸುರ, ವಿಪ್ರಚಿತ್ತಿ – ಅನೇಕ ದಾವನರೂ ಅಲ್ಲದೇ ಪ್ರಹ್ಲಾದ (ಹಿರಣ್ಯಕಶಿಪು ಪುತ್ರ)ನನ್ನು ಜಯಿಸಿ ಸಾಧ್ಯವಾಯಿತು ಎಂದುನಹೇಳುತ್ತಾನೆ.

## ಸಂದೇಶಗಳು

ಎಲ್ಲ ಕಡೆ ಬಂದಿವೆ, ಸ್ಪಷ್ಟವಾಗಿವೆ.

# ೧೭೪. ಶತ್ರುಜಯೋಪಾಯ

ಧರ್ಮರಾಜ ಪ್ರಶ್ನಿಸಿದ – ಶತ್ರುವು ತುಂಬಾ ಮೃದುವಾಗಿ ತೀಕ್ಷ್ಣವಾಗಿರುವಾಗ ಆತನು ಮಹಾಸೈನ್ಯ ಹೊಂದಿದಾಗ ಅವನೊಂದಿಗೆ ಹೇಗೆ ವರ್ತಿಸಬೇಕು?

ಭೀಷ್ಮರು ಈ ಬಗ್ಗೆ ಇಂದ್ರ-ಬೃಹಸ್ಪತಿಯರ ಸಂವಾದರೂಪ ಇತಿಹಾಸವನ್ನು ಹೇಳಿದರು.

ಇಂದ್ರನು ಬೃಹಸ್ಪತ್ಯಾಚಾರ್ಯ ಗುರುಗಳ ಬಳಿಗೆ ಹೋಗಿ ಬ್ರಹ್ಮಜ್ಞಾನಿಯೇ! ಶತ್ರುಗಳ ಬಗ್ಗೆ ಹೇಗೆ ಎಚ್ಚರಿಕೆಯಿಂದ ಇರಬೇಕು? ಅವರನ್ನು ಪೂರ್ಣ ನಾಶಮಾಡದೆ ನಿಯಂತ್ರಿಸುವುದು ಹೇಗೆ? ಶತ್ರುಗಳಿಗೆ ತಾಪವುಂಟು ಮಾಡುವ ನನ್ನ ರಾಜ್ಯ ಲಕ್ಷ್ಮಿಯು ನನ್ನನ್ನು ಬಿಟ್ಟುಹೋಗದಿರಲು ನಾನು ಏನು ಮಾಡಬೇಕು?

ಇದಕ್ಕೆ ಧಮಾರ್ಥಕಾಮಕುಶಲರಾದ ಪ್ರಮ್ಮಾಣಜ್ಞಾನಿಗಳಾದ, ರಾಜಧರ್ಮವಿಧಿಗಳನ್ನು ಬಲ್ಲ ಗುರುಗಳು ಹೀಗೆ ಉತ್ತರಿಸಿದರು.

೧. ಅಪಕಾರ ಮಾಡುವ ಶತ್ರುಗಳನ್ನು ನಿಯಂತ್ರಿಸಲು ಕಲಹ ಮಾಡಬಾರದು. ಕ್ರೋಧ, ಅಸಹನೆ (ತಾಳ್ಮೆ ಇರದಿರುವುದು)ಗಳು ಬಾಲಿಶ ಮಾರ್ಗ (Childish behaviour). ಶತ್ರುವನ್ನು ಕೊಲ್ಲಲು ಇಚ್ಛೆ ಇದ್ದಲ್ಲಿ ಅದು ಅವನಿಗೆ ತಿಳಿಯದಂತೆ ನೋಡಿಕೊಳ್ಳಬೇಕು.

೨. ತನ್ನಲ್ಲಿ ಉಂಟಾಗುವ ಕ್ರೋಧ, ಅಸಹನೆಯನ್ನು ತನ್ನಲ್ಲಿಯೇ ಸಹಿಸಿಕೊಂಡು ಶತ್ರುವನ್ನು ವಿಶ್ವಾಸ ಮಾಡದೇನೇ ವಿಶ್ವಾಸ ಮಾಡುವವನಂತೆ ನಟಿಸಬೇಕು[೧].

೩. ಯಾವಾಗಲೂ ಅವನೊಡನೆ ಪ್ರಿಯವಾದುದನ್ನೇ ಮಾತನಾಡಬೇಕು. ಅಪ್ರಿಯವಾದುದನ್ನು ಮಾಡದೇ ವ್ಯರ್ಥಕಲಹ ಮತ್ತು ಕಂಠಶೋಷಣೆ ಮಾಡಬಾರದು. ಹಕ್ಕಿಗಳನ್ನು ಹಿಡಿಯುವವನು ಹಕ್ಕಿಗಳ ಧ್ವನಿಯಂತೆ ಕೂಗುತ್ತಾ ಅವನ್ನು ಹಿಡಿಯಬೇಕು.

೪. ಮೊದಲು ಶತ್ರುವನ್ನು ವಶಕ್ಕೆ ತೆಗೆದುಕೊಂಡು ನಂತರ ಕೊಲ್ಲಬೇಕು. ಶತ್ರುವನ್ನು ಸೋಲಿಸಿದವನು ಸುಖನಿದ್ರೆ ಮಾಡುವುದಿಲ್ಲ, ಕಾರಣ ಸೋತ ದುಷ್ಟ ಶತ್ರು ಸದಾ ಜಾಗ್ರತನಾಗಿಯೇ ಇರುತ್ತಾನೆ[೨].

---

೧ ಕ್ರೋಧಂ ಬಲಮಮರ್ಷಂ ಚ ನಿಯಮ್ಯಾತ್ಮಜಮಾತ್ಮನಿ।
ಅಮಿತ್ರಮುಪಸೇವೇತ ವಿಶ್ವಸ್ತದವಿಶ್ವಸನ್ ॥ – ೧೦೩/೮

೨ ವಶಂ ಚೋಪನಯೇಚ್ಛತ್ರೂನ್ ನಿಹನ್ಯಾಚ್ಚ ಪುರಂದರ।
ವಿಶ್ವಾಸ್ಯೈವೋಪಸನ್ನಾಸ್ಯೋ ವಶೇ ಕೃತ್ವಾರಿಪುಃ ಪ್ರಭೋ ॥ – ೧೦೩/೧೧,೧೨

೫. ಶತ್ರುಗಳಿಂದ ಅವಮಾನಕ್ಕೆ ಒಳಗಾದರೂ, ಉದಾಸೀನನಾದರೂ, ಧೈರ್ಯ ಕಳೆದುಕೊಳ್ಳದೆ ಅಮಾತ್ಯರು ಹಾಗೂ ಮಹಾತ್ಮರಾದ ಮಂತ್ರಾಲೋಚನೆ ಬಲ್ಲವರೊಡನೆ ಚರ್ಚಿಸಿ ಶತ್ರುವಿನೊಡನೆ ವ್ಯವಹರಿಸಬೇಕು.

೬. ತಾನು ಮಾಡಬೇಕಾದ ಕಾರ್ಯಗಳ ಆದಿ, ಮಧ್ಯ, ಅಂತ್ಯಗಳನ್ನು ಯಾರಿಗೂ ತಿಳಿಯದಂತೆ ಮಾಡಬೇಕು. ಶತ್ರುವಿನ ಸೈನ್ಯದ ಪ್ರಮಾಣ ತಿಳಿದಿರಬೇಕು. ಶತ್ರುವಿನ ಸೈನ್ಯವನ್ನು ದಾನ, ಭೇದೋಪಾಯಗಳಿಂದ, ಔಷಧ ಪ್ರಯೋಗಗಳಿಂದ ದುರ್ಬಲವನ್ನಾಗಿ ಮಾಡಬೇಕು. ಶತ್ರುವಿನೊಡನೆ ಎಂದೂ ಸಂಘರ್ಷ ಬಯಸಬಾರದು[೧].

೭. ಶತ್ರುವನ್ನು ಜಯಿಸುವ ಕಾಲ ಬರುವವರೆಗೆ ಕಾಯಬೇಕು. ಬಂದಾಗ ತಡ ಮಾಡದೆ ಪ್ರಹರಿಸಬೇಕು. ಅಂತಹ ಕಾಲ ಮತ್ತೊಮ್ಮೆ ಬಾರದು. ಶತ್ರುಗಳಲ್ಲಿ ಛಿದ್ರವನ್ನು (ದೋಷವನ್ನು) ತಿಳಿಯಬೇಕು. ಮೃದುತನ ದಂಡ, ಆಲಸ್ಯ, ಪ್ರಮಾದಗಳು ವಿವಿಧ ಕಪಟಗಳು ಅವಿವೇಕಿಯನ್ನು ನಾಶ ಮಾಡುತ್ತವೆ[೨].

ತನ್ನ ಮೃದುತನ, ದಂಡನೀತಿ, ಆಲಸ್ಯ ಹಾಗೂ ಪ್ರಮಾದಗಳನ್ನು ಬಿಟ್ಟು ಶತ್ರುವಿನ ಕುಂತತ್ರಕ್ಕೆ ಪ್ರತಿತಂತ್ರವನ್ನು ಮಾಡಿ, ರಾಜನು ಬೇರೇನನ್ನೂ ವಿಚಾರಿಸದೇ ಶತ್ರುಗಳ ಮೇಲೆ ಪ್ರಹಾರ ಮಾಡಬೇಕು. ಕಣ್ಣಿಗೆ ಕಾಣದ ಶತ್ರುಗಳ ವಿರೋಧಗಳನ್ನು ಬ್ರಾಹ್ಮಣರ ವಿವಿಧ (ಶಾಂತಿ, ಅಭಿಚಾರ, ಹೋಮಗಳ) ದಂಡಗಳಿಂದ ಕಾಣುವ ಶತ್ರುಗಳ ವಿರೋಧವನ್ನು ಚತುರಂಗ ಸೈನ್ಯವನ್ನು ಪ್ರಯೋಗಿಸಿ ದಮನ ಮಾಡಬೇಕು.

೮. ಶತ್ರು ಬಲಿಷ್ಠನಾಗಿದ್ದಲ್ಲಿ ಅವನನ್ನು ಆ ಕಾಲದಲ್ಲಿ ನಮಸ್ಕರಿಸಿ (ಅವನಿಗೆ ಬಗ್ಗಿ ವಿನಯದ ನಾಟಕ ಮಾಡಬೇಕು) ಅವನೊಡನೆ ಇದ್ದು ಅವನ ದೌರ್ಬಲ್ಯ ತಿಳಿದಾಗ ವಧೆ ಮಾಡಬೇಕು[೩].

---

೧ ಆದಿಮಧ್ಯಾವಸಾನಜ್ಞಃ ಪ್ರಚ್ಛನ್ನಂ ಚ ವಿಚಾರಯೇತ್ ।
ಬಲಾನಿ ದೂಷಯೇದಸ್ಯ ಜಾನಂಶ್ಚೈವ ಪ್ರಮಾಣತಃ ॥
ಭೇದೇನೋಪಪ್ರದಾನೇನ ಸಂಸೃಜನ್ನೌಷಧೈಸ್ತಥಾ ।
ನ ತ್ವೇವ ಖಲು ಸಂಸರ್ಗಂ ರೋಚಯೇದರಿಭಿಃ ಸಹ ॥ – ೧೦೫/೧೫,೧೬

೨ ಪ್ರಾಪ್ತೇ ಚ ಪ್ರಹರೇಯತ್ ಕಾಲೇ ನ ಸ ಸಂವರ್ತತೇ ಪುನಃ ।
ಹಂತುಕಾಮಸ್ಯ ದೇವೇಂದ್ರ ಪುರುಷಸ್ಯ ರಿಪುಂ ಪ್ರತಿ॥
ಯಃ ಕಾಲೋ ಹಿ ವ್ಯತಿಕ್ರಾಮೇತ್ ಪುರುಷಂ ಕಾಲಕಾಂಕ್ಷಿಣಮ್ ।
ದುರ್ಲಭಃ ಸ ಪುನಃ ಕಾಲಃ ಕಾಲಧರ್ಮಚಿಕೀರ್ಷುಣಾ ॥
ಮಾರ್ದವಂ ದಂಡ ಆಲಸ್ಯಂ ಪ್ರಮಾದಶ್ಚ ಸುರೋತ್ತಮ ।
ಮಾಯಾಶ್ಚ ವಿವಿಧಾಃ ಶಕ್ರ ಸಾದಯಂತ್ಯವಿಚಕ್ಷಣಮ್ ॥ –೧೦೫ ೧೯,೨೦,೨೩

೩. ಪ್ರಣಿಪಾತಂ ಚ ಗಚ್ಛೇತ ಕಾಲೇ ಶತ್ರೋರ್ಬಲೀಯಸಃ ।

ನಮಸ್ಕಾರ, ದಾನ ಮತ್ತು ಒಳ್ಳೆಯ ಮಾತುಗಳಿಂದ ಶತ್ರುವನ್ನು ಸೇವಿಸಬೇಕು. ಅವನು ಎಂದೂ ಸಂದೇಹ ಪಡದಂತೆ ಎಚ್ಚರಿಕೆಯಿಂದ ಇರಬೇಕು.

೯. ಶತ್ರುಗಳು ಹೀಗೆ ಇರುತ್ತಾರೆಂದು ಹೇಳಲಾಗದು. ಅವರ ಬೇರೆ ಬೇರೆ ಗುಣಗಳನ್ನು ನಿಯಂತ್ರಣ ಮಾಡುವುದು ತುಂಬಾ ಕಠಿಣಕಾರ್ಯ. ಅವರ ಗುಣಗಳಿಗೆ ತಕ್ಕಂತೆ ನಡೆದುಕೊಳ್ಳುವ ರೀತಿಯೂ ಬದಲಾಗಬೇಕಾಗುತ್ತದೆ. ಶತ್ರುಮಿತ್ರರನ್ನು ತ್ಯಜಿಸಿದೆ ಉಪಾಯದಿಂದ ನಡೆಯಬೇಕು.

೧೦. ಮೃದುಸ್ವಭಾವದವನನ್ನು ಅವಮಾನ ಮಾಡುತ್ತಾರೆ. ತೀಕ್ಷ್ಣನಿಗೆ ಹೆದರುತ್ತಾರೆ. ಆದ್ದರಿಂದ ನೀನು ತೀರಾ ತೀಕ್ಷ್ಣನೂ ಆಗಬೇಡ. ತುಂಬಾ ಮೃದುವಾಗಿಯೂ [೧]ವರ್ತಿಸಬೇಡ (Have a moderate approach).

೧೧. ಅನೇಕ ಶತ್ರುಗಳ ಜೊತೆ ಏಕಕಾಲದಲ್ಲಿ ಸಾಮದಾನಭೇದದಂಡೋಪಾಯಗಳಿಂದ ವ್ಯವಹರಿಸಬೇಡ. ಅವರಲ್ಲಿ ಒಬ್ಬೊಬ್ಬರನ್ನೇ ನಾಶಗೊಳಿಸುತ್ತಾ ಉಳಿದವರೊಡನೆ ಬುದ್ಧಿವಂತಿಕೆಯಿಂದ ವ್ಯವಹರಿಸಬೇಕು. ರಾಜನು ತಾನು ಎಷ್ಟೇ ಮೇಧಾವಿಯಾದರೂ ಎಲ್ಲರೊಡನೆ ಒಟ್ಟಿಗೆ ವ್ಯವಹರಿಸಬಾರದು[೨].

೧೨. ಶತ್ರುಗಳಿಂದ ತನ್ನ ಬಲ ಸಮೃದ್ಧವಾಗಿದ್ದರೆ, ಬೇರೇನೂ ವಿಚಾರ ಮಾಡದೆ ಸ್ಪಷ್ಟವಾಗಿ ಶತ್ರುಗಳ ಮೇಲೆ ಎರಗಬೇಕು[೩].

೧೩. ಶತ್ರುಗಳಸಸ್ಯ(ಸಂಪತ್ತನ್ನು) ನಾಶಮಾಡುವುದಾಗಲೀ, ಅವರಜಲಸಂಪನ್ಮೂಲಗಳನ್ನು ವಿಷದಿಂದ ದೂಷಿಸುವುದಾಗಲೀ(ಜಲಸಾಂಕರ್ಯ), ಶತ್ರುರಾಜನ ಸಪ್ತಪ್ರಕೃತಿ(ಅಮಾತ್ಯ ಮೊದಲಾದ)ಗಳನ್ನು ಮತ್ತೆ ವಿಚಾರ ಮಾಡುವುದೂ ಪ್ರಶಸ್ತವಲ್ಲ[೪].

೧೪. ತನ್ನ ಅಮಾತ್ಯರಿಗೆ ರಹಸ್ಯವಾಗಿ ಹೇರಳವಾಗಿ ಹಣ ನೀಡಿ, ಅವರಿಗೆ ಅಧಿಕೃತವಾಗಿ ಕೊಡುತ್ತಿದ್ದ ಭೋಗಸಾಮಗ್ರಿಗಳನ್ನು (Comforts & Luxuries) ನಿಲ್ಲಿಸಿ, ಅವರನ್ನು

---

ಯುಕ್ತೋಽಸ್ಯ ವಧಮನ್ವಿಚ್ಛೇದಪ್ರಮತ್ತಃ ಪ್ರಮಾದ್ಯತಃ ॥ - ೧೦೫/೨೮

೧ ಮೃದುಮಪ್ಯವಮನ್ಯಂತೇ ತೀಕ್ಷ್ಣಾದುದ್ವಿಜತೇ ಜನಃ।
ಮಾ ತೀಕ್ಷ್ಣೋ ಮಾ ಮೃದುರ್ಭೂಸ್ತ್ವಂ ತೀಕ್ಷ್ಣೋ ಭವ ಮೃದುರ್ಭವಃ ॥ - ೧೦೫/೩೩

೨ ನ ಬಹೂನಭಿಯುಂಜೀತ ಯೌಗಪದ್ಯೇನ ಶಾತ್ರವಾನ್।
ಸಾಮ್ನಾ ದಾನೇನ ಭೇದೇನ ದಂಡೇನ ಚ ಪುರಂದರ - ೧೦೫/೩೫

೩ ಯದಾ ಬಹುವಿಧಾಂ ವೃದ್ಧಿಂ ಮನ್ಯತೇ ಪ್ರತಿಲೋಮತಃ।
ತದಾ ವಿವೃತ್ಯ ಪ್ರಹರೇದ್ ಅರೀಣಾಮವಿಚಾರಯನ್ ॥ - ೧೦೫/೩೮

೪ ನ ಸಾಮ ದಂಡೋಪನಿಷತ್ ಪ್ರಶಸ್ಯತೇ ನ ಮಾರ್ದವಂ ಶತ್ರುಷು ಯಾತ್ರಿಕಂ ಸದಾ।
ನ ಸಸ್ಯಘಾತೋ ನ ಚ ಸಂಕರಕ್ರಿಯಾ ನ ಚಾಸ್ಯ ಭೂಯಃ ಪ್ರಕೃತೇರ್ವಿಚಾರಣಾ ॥ - ೧೦೫/೩೯

ದೋಷಿಗಳೆಂದು ಘೋಷಿಸುವುದು, ಇವರು ದುಷ್ಟರು ನನ್ನನ್ನು ಬಿಡುತ್ತಿದ್ದಾರೆ ಎಂದು ಘೋಷಿಸಿ ಶತ್ರುಗಳ ನಗರಗಳಲ್ಲಿ ಅವರನ್ನೇ ನಿಯೋಜಿಸುವುದು, ಅವರು ಶತ್ರುಗಳೊಡನೆ ಸ್ನೇಹದಿಂದ ಇದ್ದು, ಅವರ ರಹಸ್ಯಗಳನ್ನು ತಿಳಿಯಲು ಉತ್ತೇಜನ ನೀಡುವುದು - ಇವೆಲ್ಲ ಯಶಸ್ವೀ ರಾಜನ ಕರ್ತವ್ಯಗಳು.

ಹಾಗೆಯೇ ಮೇಧಾವಿಗಳೂ, ಸುಶಿಕ್ಷಿತರಾದ, ವಾಗ್ಮಿಗಳಾದ ಜನರನ್ನು ನಿಯೋಜಿಸಿ, ಶತ್ರುರಾಜರ ಕಾರ್ಯಗಳನ್ನು ತಿಳಿಯುವುದು (Positive approaches)

ಈ ರೀತಿಯಾಗಿ ಗುರುಗಳ ಉಪದೇಶ ಪಡೆದ ಇಂದ್ರನು ಮತ್ತೇ ಪ್ರಶ್ನಿಸಿದ- **ದುಷ್ಟರ ಚಿಹ್ನೆಗಳಾವುವು?** ಅವರನ್ನು ತಿಳಿಯುವುದು ಹೇಗೆ?[೧]

ದುಷ್ಟನು ಪರೋಕ್ಷದಲ್ಲಿ (Indirect) ಒಳ್ಳೆಯವರನ್ನು ನಿಂದಿಸುತ್ತಾನೆ. ಅವರ ಸದ್ಗುಣ-ಗಳನ್ನು ಹೇಳಿದರೆ ಅಸೂಯೆ ಪಡುತ್ತಾನೆ. ಬೇರೆಯವರು ಆ ವ್ಯಕ್ತಿಯ ಗುಣಗಳನ್ನು ಹೇಳಿದರೆ ಮುಖ ತಿರುಗಿಸಿ ಮೌನವಹಿಸುತ್ತಾನೆ[೨].

ಅವನು ಸುಮ್ಮನಿದ್ದರೂ, ತುಟಿಗಳನ್ನು ಬಿಡಿಸಿ ಮಾತನಾಡದಿದ್ದರೂ, ಅವನ ನಿಃಶ್ವಾಸ ದಿಂದ, ತುಟಿಗಳನ್ನು ಕಚ್ಚುವುದರಿಂದ ಮತ್ತು ತಲೆಯನ್ನು ಅಲ್ಲಾಡಿಸುವುದರಿಂದ ಅವನ ಮನದಿಂಗಿತ ತಿಳಿಯಬಹುದು[೩]. ಮತ್ತೆ ಮತ್ತೆ ನೋಡಲು ಬರುತ್ತಾನೆ. ಮಾತನಾಡಿಸದಿದ್ದರೂ ಮಾತನಾಡಿಸುತ್ತಾನೆ. ಎದುರಿಗೆ ಸಿಕ್ಕಿದಾಗ ದೃಷ್ಟಿಯನ್ನು ಬೇರೆಡೆಗೆ ತಿರುಗಿಸುತ್ತಾನೆ. ಅಥವಾ ನೋಡಿದರೂ ಮಾತನಾಡುವುದಿಲ್ಲ[೪].

## ಮಿತ್ರನ ಲಕ್ಷಣಗಳು

ಬೇರೆಯವರು ದುಃಖಿತರಾದಾಗ ತಾನು ದುಃಖಿಸುತ್ತಾನೆ. ಅವರ ಸಂತೋಷದಲ್ಲಿ ಭಾಗಿಯಾಗುತ್ತಾನೆ. ಇದು ಮಿತ್ರನ ಲಕ್ಷಣ. ಶತ್ರುಲಕ್ಷಣ ಇದಕ್ಕೆ ವಿರುದ್ಧವಾದುದು[೫].

---

೧ ಕಾನಿ ಲಿಂಗಾನಿ ದುಷ್ಟಸ್ಯ ಭವಂತಿ ದ್ವಿಜಸತ್ತಮ।
ಕಥಂ ದುಷ್ಟಂ ವಿಜಾನೀಯಾದೇತತ್ ಪೃಷ್ಟೋ ಬ್ರವೀಹಿ ಮೇ।. - ೧೦೫/೪೪

೨ ಪರೋಕ್ಷಮಗುಣಾನಾಹ ಸದ್ಗುಣಾನಭ್ಯಸೂಯತಿ।
ಪರೈರ್ವಾ ಕೀರ್ತ್ಯಮಾನೇಷು ತೂಷ್ಣೀಮಾಸ್ತೇ ಪರಾಙ್ಮುಖಃ॥ -೧೦೫/೪೫

೩. ತೂಷ್ಣೀಂ ಭಾವೇಽಪಿ ವಿಜ್ಞೇಯಂ ನ ಚೇದ್ ಭವತಿ ದಾರಣಮ್।
ನಿಃಶ್ವಾಸಮೋಷ್ಠಸಂದಂಶಂ ಶಿರಸಶ್ಚ ಪ್ರಕಂಪಯನ್॥ - ೧೦೫/೪೬

೪ ಕರೋತ್ಯಭೀಕ್ಷ್ಣಂ ಸಂಸೃಷ್ಟಮಸಂಸೃಷ್ಟಶ್ಚ ಭಾಷತೇ।
ಅದೃಷ್ಟಿತೋ ವಿಕುರುತೇ ದೃಷ್ಟ್ವಾ ವಾ ನಾಭಿಭಾಷತೇ॥ - ೧೧೫/೪೭

೫ ಆರ್ತಿರಾರ್ತೇ ಪ್ರಿಯೇ ಪ್ರೀತಿರೇತಾವನ್ಮಿತ್ರಲಕ್ಷಣಮ್।
ವಿಪರೀತಂ ತು ಬೋದ್ಧವ್ಯಮರಿಲಕ್ಷಣಮೇವ ತತ್॥ - ೧೦೫/೪೯

ಎಲೈ ಇಂದ್ರನೇ! ಈ ರೀತಿಯಾಗಿ ನಾನು ಹೇಳಿದ ಲಕ್ಷಣ ತಿಳಿಯಬೇಕು. ದುಷ್ಟರ ಸ್ವಭಾವವು ಬಹಳ ಬಲಿಷ್ಠವಾಗಿರುತ್ತದೆ[೧].

ಇವೇ ದುಷ್ಟರ ಲಕ್ಷಣಗಳು ಯಥಾರ್ಥವಾಗಿ ಹೇಳಿದ್ದೇನೆ.

ಹೀಗೆ ಗುರುಗಳ ಮಾತುಗಳನ್ನು ಇಂದ್ರನು ಕೇಳಿ ಶತ್ರುನಾಶದಲ್ಲಿ ಆಸಕ್ತನಾಗಿ ಹಾಗೆಯೇ ನಡೆದುಕೊಂಡನು. ಯೋಗ್ಯಕಾಲದಲ್ಲಿ ವಿಜಯಯಾತ್ರೆ ಮಾಡಿ ಶತ್ರುಗಳನ್ನು ವಶ ಮಾಡಿಕೊಂಡನು.

## ಸಂದೇಶಗಳು

ಸ್ಪಷ್ಟವಾಗಿವೆ.

*****

೧ ಏತಾನ್ಯೇವಂ ಯಥೋಕ್ತಾನಿ ಬುದ್ಧ್ಯೇಥಾಸ್ತ್ರಿದಶಾಧಿಪ।
ಪುರುಷಾಣಾಂ ಪ್ರದುಷ್ಟಾನಾಂ ಸ್ವಭಾವೋ ಬಲವತ್ತರಃ॥ - ೧೦೫/೫೦

# ೧೭೫. ಕೌಸಲ್ಯರಾಜ-ಕಾಲವೃಕ್ಷೀರ ಸಂವಾ

ಧರ್ಮರಾಜನ ಪ್ರಶ್ನೆ ತಾತನಿಗೆ –

ರಾಜ ಧಾರ್ಮಿಕ- ತನ್ನ ಅಮಾತ್ಯರಿಂದಲೇ ತುಂಬಾ ತೊಂದರೆಗೆ ಒಳಗಾಗಿದ್ದಾನೆ. ರಾಜ್ಯಕೋಶ ಹಾಗೂ ದಂಡಾಧಿಕಾರ (ಸೈನ್ಯ) ಕಳೆದುಕೊಂಡಿದ್ದಾನೆ. ಆದರೆ ಸುಖವನ್ನು ಇಚ್ಛಿಸುತ್ತಾನೆ. ಅವನು ಹೇಗೆ ನಡೆದುಕೊಳ್ಳಬೇಕು?

ಈ ವಿಷಯಕ್ಕೆ ಸಂಬಂಧಿಸಿದಂತೆ ಭಾರೀ ಆಪತ್ತಿಗೆ ಸಿಲುಕಿದ ಕೋಸಲರಾಜನಾದ ಕ್ಷೇಮದರ್ಶ ಮಹಾರಾಜನಿಗೆ ಕಾಲಕವೃಕ್ಷೀಯನೆಂಬ ಮುನಿಯು ಮಾಡಿದ ಉಪದೇಶಾತ್ಮಕ ಇತಿಹಾಸವನ್ನು ಭೀಷ್ಮರು ಧರ್ಮರಾಜನಿಗೆ ಹೇಳಿದರು.

ಕ್ಷೇಮದರ್ಶನು ಮುನಿಯನ್ನು ಕುರಿತು ತನ್ನ ಪರಿಸ್ಥಿತಿಯನ್ನು ವಿವರಿಸಿ ಅದಕ್ಕೆ ಪರಿಹಾರ ಕೇಳುತ್ತಾನೆ.

೧. ಸಂಪತ್ತನ್ನು ಬಯಸಿ, ಪ್ರಯತ್ನಿಸಿ ವಿಫಲನಾಗಿ ಸಂಪತ್ತನ್ನಾಗಲಿ, ರಾಜ್ಯವನ್ನಾಗಲೀ ಪಡೆಯಲು ಸಾಧ್ಯವಾಗದ ನನ್ನಂತಹವರು ಏನು ಮಾಡಬೇಕು?

೨. ಸಾಯುವುದನ್ನು, ಬೇರೆಯವರನ್ನು ಆಶ್ರಯಿಸುವುದನ್ನು, ಕಳ್ಳತನದಂತಹ ಹೇಯಕೃತ್ಯವನ್ನು, ಅಥವಾ ಬೇರೆ ಯಾವುದೇ ಕ್ಷುಲ್ಲಕ ನಿಂದ್ಯವಾದ ನಡಾವಳಿಗಳನ್ನು ಬಿಟ್ಟು ನಾನು ಏನು ಮಾಡಬೇಕು?

ಈ ಪ್ರಶ್ನೆಗಳ ಜೊತೆಗೆ ತಾನು ತಿಳಿದ ಕೆಲವು ತಾತ್ತ್ವಿಕ ವಿಚಾರಗಳನ್ನು ಪ್ರಾಂಜಲವಾಗಿ ರಾಜನು ಮುನಿಗಳಿಗೆ ಹೇಳಿಕೊಳ್ಳುತ್ತಾನೆ.

೧. ಮಾನಸಿಕವಾಗಿ ಅಥವಾ ದೈಹಿಕವಾಗಿ ವ್ಯಾಧಿಗ್ರಸ್ತನಾದ ನನಗೆ ಧರ್ಮಜ್ಞರೂ, ಶಾಸ್ತ್ರವನ್ನು ಬಹಳ ತಿಳಿದವರೂ ಆದ ತಮ್ಮಂತಹವರೇ ಶರಣು ಹೋಗಲು ಯೋಗ್ಯರು (ಅಂತಹವರೇ ಸಿಕ್ಕಿದ್ದೀರಿ).

೨. ಮನುಷ್ಯನು ವಿಷಯಗಳಲ್ಲಿ ವೈರಾಗ್ಯವನ್ನು ಹೊಂದಿ, ತನ್ನ ಎಲ್ಲ ಆಕಾಂಕ್ಷೆಗಳನ್ನು ಹತ್ತಿಕ್ಕಿ ಸುಖದುಃಖಗಳು ಬಂದಾಗ ಆಗುವ ಹರ್ಷ, ಶೋಕಗಳನ್ನು ಬಿಟ್ಟು( ಬಿಟ್ಟಾಗ) ಬುದ್ಧಿ, ರೂಪ, ಸಂಪತ್ತನ್ನು ಹೊಂದಿ ಸುಖ ಪಡುತ್ತಾನೆ.

೩.. ಹಣದಿಂದಲೇ ಸುಖಸಂಪತ್ತು ಎಂದು ತಿಳಿದವರ ಬಗ್ಗೆ ನಾನು ಕನಿಕರ ಪಡುತ್ತೇನೆ. ನನ್ನ ಬಹುತರ ಸಂಪತ್ತೂ ಕೂಡಾ ಸ್ವಪ್ನದಂತೆ ಹೊರಟು ಹೋಯಿತು.

೪. ಯಾರು ಭಾರೀ ಸಂಪತ್ತನ್ನು ತ್ಯಜಿಸುತ್ತಾರೋ, ಅವರು ಅಸಾಧ್ಯವಾದ ಕಾರ್ಯಗಳನ್ನು ಮಾಡುತ್ತಾರೆ. ನಾವು ಅರ್ಥವನ್ನು ಅನರ್ಥ, ದುಷ್ಟವೆಂದು ತಿಳಿದಿದ್ದರೂ ಅದನ್ನು ತ್ಯಾಗಮಾಡಲು ಸಮರ್ಥರಾಗಿಲ್ಲ.

೫. ಬ್ರಹ್ಮಜ್ಞಾನಿಗಳೇ! ನಾನಿಂತಹ ದುರವಸ್ಥೆಯನ್ನು ಹೊಂದಿ ದೀನನೂ, ಆರ್ತನೂ, ಸಂಪತ್ತಿನಿಂದ ವಂಚಿತನಾದ ನನಗೆ ಸುಖಸಾಧನವನ್ನು ಉಪದೇಶಿಸಿರಿ.

ಹೀಗೆ ರಾಜನ ಆರ್ತ ಮೊರೆಗೆ ಒಲಿದ ಮುನಿಗಳು ರಾಜನಿಗೆ ಸುಖದ ಕಲ್ಪನೆ ಅದರ ಇತಿಮಿತಿಗಳು ಮೊದಲಾದ ತಾತ್ತ್ವಿಕ ವಿಷಯಗಳನ್ನು ಬಹಳ ಸುಂದರವಾಗಿ ತಿಳಿಸಿಕೊಡುತ್ತಾರೆ.

೧. ನೀನು ಮೊದಲು ತಿಳಿಯಬೇಕಾದುದು ಏನೆಂದರೆ 'ನನ್ನದು ಎಂದು ಏನೆಲ್ಲಾ ಇರುವುದೋ, ಇದೆಲ್ಲ ಅನಿತ್ಯ, ಅಹಂ - ನಾನು ಎನ್ನುವುದೂ ಅನಿತ್ಯ' (ನಾನೇ ಎಲ್ಲ ಮಾಡುತ್ತೇನೆ ಎಂಬುದು ಅನಿತ್ಯ. ಯಾವುದೆಲ್ಲ ಇದೆ ಅದೆಲ್ಲವೂ ಇಲ್ಲವೆಂದು ತಿಳಿ (ಅದೆಲ್ಲ ಶಾಶ್ವತವಲ್ಲ). ಹೀಗೆ ಮಾಡಿದರೆ ಎಂತಹ ದುರವಸ್ಥೆ ಹೊಂದಿದರೂ ಜ್ಞಾನಿಯು ವ್ಯಥೆ ಪಡುವುದಿಲ್ಲ[1]. ವಾಸ್ತವವಾಗಿ ಇದೆಲ್ಲ ನನ್ನದು ಎಂದು ಹೇಳಿಕೊಳ್ಳುವ ಅಧಿಕಾರ ಇರುವುದು ಭಗವಂತನಿಗೆ ಮಾತ್ರ: **ತಸ್ಯೈಕಸ್ಯ ಹಿ ಸ ಚೈಕಃ ಪುರುಷೋ ವಿರಾಟ್** (ಮ.ಭಾ.ಶಾಂ.ಪ ೩೫೧/೯; ಮ.ತಾ.ನಿ. ೨/೧೧೨).

೨. ಕೆಲವು ವಸ್ತುಗಳು ಜೊತೆಯಲ್ಲಿದ್ದು ನಾಶವಾಗುತ್ತವೆ. ಇನ್ನು ಕೆಲವು ಮೊದಲು ಇಲ್ಲದೆ ಅನಂತರ ಹುಟ್ಟುತ್ತವೆ. ಹೀಗಾಗಿ ಯಾವುವು ಮತ್ತು ನಾವು ಯಾವಾಗಲೂ ಇರುವುದೇ ಇಲ್ಲ. ಆದ್ದರಿಂದ ಶೋಕವೇಕೆ? (ಈಗಿಲ್ಲದ್ದಕ್ಕಾಗಿ) ರಾಜನ್! ಈಗ ನಿನ್ನ ತಂದೆ ಎಲ್ಲಿ? ತಾತ ಎಲ್ಲಿ? ನೀನು ಅವರನ್ನು ನೋಡುತ್ತಿಲ್ಲ, ಅವರು ನಿನ್ನನ್ನು ನೋಡುತ್ತಿಲ್ಲ. ಅದಕ್ಕಾಗಿ ಶೋಕಿಸುತ್ತಿದ್ದೀಯಾ[2].

೩. ನಾನು, ನೀನು, ನಿನ್ನ ಶತ್ರುಗಳು, ಸ್ನೇಹಿತರು ಎಲ್ಲರೂ ಅವಶ್ಯವಾಗಿ ನಾಶ ಹೊಂದುತ್ತೇವೆ. ಯಾವುದೂ ಉಳಿಯುವುದಿಲ್ಲ. ನೂರುವರ್ಷ ಆಯುಷ್ಯವಿದ್ದ ಮನಷ್ಯರೂ ಅದಕ್ಕೂ ಮೊದಲೇ ಇಪ್ಪತ್ತು, ಮೂವತ್ತುವರ್ಷವಿದ್ದಾಗಲೇ ಮರಣ ಹೊಂದುತ್ತಾರೆ. ಅಲ್ಲದೆ

೧ ಪುರಸ್ತಾದೇವ ತೇ ಬುದ್ಧಿರಿಯಂ ಕಾರ್ಯಾ ವಿಜಾನತಃ।
ಅನಿತ್ಯಂ ಸರ್ವಮೇವೇದಮಹಂ ಚ ಮಮ ಚಾಸ್ತಿ ಯತ್ ॥
ಯತ್ಕಿಂಚಿನ್ಮನ್ಯಸೇಽಸ್ತೀತಿ ಸರ್ವಂ ನಾಸ್ತೀತಿ ವಿದ್ಧಿ ತತ್।
ಏವಂ ನ ವ್ಯಥತೇ ಪ್ರಾಜ್ಞಃ ಕೃಚ್ಛ್ರಾಮಪ್ಯಾಪದಂ ಗತಃ॥ - ೧೦೬/೧೨,೧೩

೨ ಭೂತ್ವಾ ಚ ನ ಭವತ್ಯೇತದಭೂತ್ವಾ ಚ ಭವತ್ಯಪಿ।
ಶೋಕೇ ನ ಹ್ಯಸ್ತಿ ಸಾಮರ್ಥ್ಯಂ ಶೋಕಂ ಕುರ್ಯಾತ್ ಕಥಂ ನರಃ॥
ಕ್ವನು ತೇಽದ್ಯ ಪಿತಾ ರಾಜನ್ ಕ್ವನು ತೇಽದ್ಯ ಪಿತಾಮಹಃ।
ನ ತ್ವಂ ಪಶ್ಯಸಿ ತಾನದ್ಯ ನ ತ್ವಾಂ ಪಶ್ಯಂತಿ ತೇಽಪಿ ಚ॥ - ೧೦೬/೧೬,೧೭

ಎಷ್ಟೇ ಸಂಪತ್ತು ಇದ್ದರೂ ಅದರಿಂದ ಬಿಡುಗಡೆಯಾಗುತ್ತಾನೆ. ಆದ್ದರಿಂದ ಇದು ನನ್ನದಲ್ಲವೆಂಬ ಬುದ್ಧಿಯಿಂದಲೇ ತನಗೆ ಒಳಿತನ್ನು ಮಾಡಿಕೊಳ್ಳಬೇಕು[೧].

೪. ಇನ್ನೂ ಬಂದಿಲ್ಲದಿರುವುದು (ಅನಾಗತಂ) ಕಳೆದುಹೋದುದು, ಯಾವುದೂ ನನ್ನದಲ್ಲವೆಂದು ಭಾವಿಸಿ, ಅದೃಷ್ಟವೇ ಬಲಿಷ್ಠವಾದುದು ಎಂದು ಯಾರು ತಿಳಿಯುವರೋ, ಅವರು ಪಂಡಿತರು. ಅದೇ ಸಜ್ಜನರ ನಡತೆ[೨].

ಮಧ್ಯದಲ್ಲಿ ರಾಜಪುತ್ರನು ತನ್ನ ಅನಿಸಿಕೆ ಹೇಳುತ್ತಾನೆ – 'ನನಗೆ ಆಕಸ್ಮಾತ್ (ದೈವವಶಾತ್) ರಾಜ್ಯ ಸಿಕ್ಕಿತು ಮತ್ತು ಕಾಲದಿಂದ ಅದು ಅಪಹೃತವಾಯಿತು. ಈಗಿನ ನನ್ನ ಸ್ಥಿತಿಯು ನದೀಪ್ರವಾಹದಂತೆ ಕಾಲದ ಫಲವೆಂದು ತಿಳಿಯುತ್ತೇನೆ. ಹಾಗೆಯೇ, ಇದ್ದುದರಲ್ಲಿಯೇ ಇರುತ್ತೇನೆ[೩] (ಜೀವನ ನಡೆಸುತ್ತೇನೆ).

೫. ನಂತರ ಮುನಿಗಳು ಉಪದೇಶ ಮುಂದುವರಿಸುತ್ತಾರೆ – 'ಕೌಸಲ್ಯನೇ ಇನ್ನೂ ಬಂದಿಲ್ಲದ (ಅನಾಗತ), ಕಳೆದ ವಸ್ತುಗಳ ಸರಿಯಾದ ಸ್ವರೂಪ ತಿಳಿದರೆ ನಿನಗೆ ಶೋಕವಾಗದು. ಆದ್ದರಿಂದ ಎಲ್ಲ ವಿಷಯಗಳಲ್ಲಿಯೂ ಹಾಗೆಯೇ ಇರು. ನಿನಗೆ ಯೋಗ್ಯವಾದ ಪಡೆಯಲು ಯೋಗ್ಯವಾದ ಪದಾರ್ಥಗಳನ್ನು ಆಶಿಸು(ಇಷ್ಟಪಡು). ಅಶಕ್ಯವಾದುದನ್ನು ಆಶಿಸಬೇಡ. ಸದ್ಯ ಇರುವ (ಭಗವಂತನು ಕೊಟ್ಟಿರುವ) ವಿಷಯಗಳನ್ನು ಅನುಭವಿಸುತ್ತಾ ಬಂದಿಲ್ಲದಿರುವ ವಿಷಯಗಳ ಬಗ್ಗೆ ಶುದ್ಧ ಮನಸ್ಸುಳ್ಳವನಾಗಿ ಶೋಕಿಸಬೇಡ[೪].

೬. ರಾಜನ್! ದಾರಿದ್ರ್ಯ ಬಂದಾಗ ವಿಧಿಯನ್ನು ನಿಂದಿಸುತ್ತಾನೆ. ಸಂಪತ್ತು ಬಂದಾಗ ಇದು ಸಾಲದೆಂದು ಅತೃಪ್ತನಾಗಿರುತ್ತಾನೆ. ಶ್ರೀಮಂತಿಕೆಗೆ ಅನರ್ಹರು ಸಿರಿವಂತರಾಗಿರುವರೆಂದು ತಿಳಿಯುವುದು. ತಾನೇ ಶ್ರೇಷ್ಠ ಪುರುಷನೆಂಬ ಭ್ರಮೆ ಪರರ ಬಗ್ಗೆ ಅಸೂಯೆ, ತಮ್ಮ ಸಂಪತ್ತಿನ ಬಗ್ಗೆ ಅಲಂಬುದ್ಧಿಯಿಲ್ಲದಿರುವುದು ಈ ಕಾರಣದಿಂದ ದುಃಖಿತರಾಗುತ್ತಾನೆ. ನೀನೂ ಇಂತಹವರಂತೆ ಆಗಬೇಡ.

---

೧ ಅಪಿ ಚೇನ್ಮಹತೋ ವಿತ್ತಾದ್ ವಿಪ್ರಮುಚ್ಯೇತ ಪೂರುಷಃ।
ನೈತನ್ಮಮೇತಿ ತನ್ಮತ್ವಾ ಕುರ್ವೀತ ಪ್ರಿಯಮಾತ್ಮನಃ॥ – ೧೦೬/೨೧

೨ ಅನಾಗತಂ ಯನ್ನ ಮಮೇತಿ ವಿದ್ಯಾದತಿಕ್ರಾಂತಂ ಯನ್ನ ಮಮೇತಿ ವಿದ್ಯಾತ್।
ದಿಷ್ಟಂ ಬಲೀಯ ಇತಿ ಮನ್ಯಮಾನಾಃ ತೇ ಪಂಡಿತಾಸ್ತತ್ ಸತಾಂ ವೃತ್ತಮಾಹುಃ॥ – ೧೦೬/೨೨

೩. ಯಾದೃಚ್ಛಿಕಂ ಮಮಾಸೀತ್ ತದ್ ರಾಜ್ಯಮಿತ್ಯೇವ ಚಿಂತಯೇ।
ಹ್ರಿಯತೇ ಸರ್ವಮೇವೇದಂ ಕಾಲೇನ ಮಹತಾ ದ್ವಿಜ॥
ತಸ್ಯೈವಂ ಹ್ರಿಯಮಾಣಸ್ಯ ಸ್ರೋತಸೇವ ತಪೋಧನಃ।
ಫಲಮೇತತ್ ಪ್ರಪಶ್ಯಾಮಿ ಯಥಾಲಬ್ಧೇನ ವರ್ತಯೇ॥ – ೧೦೬/೨೫,೨೬

೪ ಅವಾಪ್ಯಾನ್ ಕಾಮಯ ಸ್ವಾರ್ಥಾನ್ ನಾನವಾಪ್ಯಾನ್ ಕದಾಚನ।
ಪ್ರತ್ಯುತ್ಪನ್ನಾನನುಭವನ್ ಮಾ ಶುಚಸ್ತ್ವಮನಾಗತಾಮ್॥ –೧೦೬/೨೮

ಪುರಸ್ತಾದ್ ಭೂತಪೂರ್ವತ್ವಾದ್ ವೀತಭಾಗೋಽಪಿ ದುರ್ಮತಿಃ।
ಧಾತಾರಂ ಗರ್ಹತೇ ನಿತ್ಯಂ ಲಬ್ಧಾರ್ಥಶ್ಚ ನ ಮೃಷ್ಯತೇ ॥
ಅನರ್ಹಾನಪಿ ಚೈವಾನ್ಯಾನ್ ಮನ್ಯತೇ ಶ್ರೀಮತೋ ಜನಾನ್।
ಏತಸ್ಮಾತ್ ಕಾರಣಾದೇತತ್ ದುಃಖಂ ಭೂಯೋಽನುವರ್ತತೇ ॥
ಈರ್ಷ್ಯಾತಿಚ್ಛೇದಸಂಪನ್ನಾ ರಾಜನ್ ಪುರುಷಮಾನಿನಃ।
ಕಚ್ಚಿತ್ತ್ವಂ ನ ತಥಾ ಪ್ರಾಜ್ಞಮತ್ಸರೀ ಕೋಸಲಾಧಿಪ ॥ -೧೦೬/೩೦-೩೨

೭. ನಿನಗೆ ಐಶ್ವರ್ಯವಿಲ್ಲದಿದ್ದರೂ ಬೇರೆಯವರ ಸಂಪತ್ತನ್ನು ನೋಡಿ ಸಹಿಸಿಕೊ. ಜಾಣರು ಇನ್ನೊಬ್ಬರ ಸಂಪತ್ತನ್ನು ಅನುಭವಿಸುತ್ತಾರೆ.[1] ತನ್ನಲ್ಲಿ ಸಂಪತ್ತು ಇದ್ದರೂ ಕೂಡಾ ಬೇರೆಯವರನ್ನು ದ್ವೇಷಿಸುವ ಮನುಷ್ಯನು ಅದನ್ನು ಕಳೆದುಕೊಳ್ಳುತ್ತಾನೆ.

೮. ತ್ಯಾಗ ಧರ್ಮ ಬಲ್ಲವರು ತಾವೇ ಸಂಪತ್ತನ್ನೂ, ಪುತ್ರಪೌತ್ರರನ್ನೂ ತ್ಯಜಿಸುತ್ತಾರೆ (ಹಾಗೆ ಇರಬೇಕು). ನೀನು ಹಾಗೆಯೇ ನಡೆ, ವರ್ತಿಸು.[2]

೯. ಧನನಾಶದಿಂದ ಕೆಲವರು ಇನ್ನೂ ಮಹಾಪ್ರಯೋಜನ ಹೊಂದುತ್ತಾರೆ. ಧನದಿಂದ ಆಗುವ ಸುಖ ಅನಿತ್ಯವೆಂದು ಭಾವಿಸಿ, ಅದನ್ನು ಬಯಸುವುದೇ ಇಲ್ಲ[3] (ನಿತ್ಯಸುಖ ಬಯಸುತ್ತಾ).

೧೦. ತಮ್ಮ ಒಳಿತಿಗಾಗಿ ಆಶಿಸುವವರು ಧರ್ಮಮಾರ್ಗ ಆಶ್ರಯ ಮಾಡುತ್ತಾರೆ. ಪರಲೋಕ ಸುಖ ಬಯಸಿ ಈ ಲೋಕದ ಪರಿಶ್ರಮದಿಂದ ದೂರ ಸರಿಯುತ್ತಾರೆ.[4]

೧೧. ನಾಶದಲ್ಲಿ ಕೊನೆಯಾಗುವ ಧನಸಂಗ್ರಹ, ಮರಣದಲ್ಲಿ ಕೊನೆಗಾಣುವ ಜೀವನ, ವಿಯೋಗದಲ್ಲಿ ಮುಗಿಯುವ ಸಂಯೋಗವನ್ನು ಯಾವ ಜಾಣನು ತಾನೇ ಇಚ್ಛಿಸುವನು? ಧನವು ಪುರುಷನನ್ನು ಅಥವಾ ಪುರಷನು ಧನವನ್ನು ಬಿಡುತ್ತಾನೆ (ಎರಡೂ ಹೋಗುವುದಿಲ್ಲ). ಇದನ್ನು ತಿಳಿದ ಜ್ಞಾನಿಯು ಶೋಕ ಪಡುವನೇ?[5]

---

೧ ಸಹಸ್ವ ಶ್ರಿಯಮನ್ಯೇಷಾಂ ಯದ್ಯಪಿ ತ್ವಯಿ ನಾಸ್ತಿ ಸಾ।
ಅನ್ಯತ್ರಾಪಿ ಸತೀಂ ಲಕ್ಷ್ಮೀಂ ಕುಶಲಾ ಭುಂಜತೇ ಜನಾಃ॥
ಅಭಿವಿಷ್ಯಂದತೇ ಶ್ರೀರ್ಹಿ ಸತ್ಯಪಿ ದ್ವಿಷತೋ ಜನಾತ್ ॥ -೧೦೬/೩೩

೨ ಶ್ರಿಯಂ ಚ ಪುತ್ರಪೌತ್ರಂ ಚ ಮನುಷ್ಯಾ ಧರ್ಮಚಾರಿಣಃ।
ತ್ಯಾಗಧರ್ಮವಿದೋ ವೀರಾಃ ಸ್ವಯಮೇವ ತ್ಯಜಂತ್ಯುತ॥ -೧೦೬/೩೪

೩ ಅರ್ಥಾಯ್ಯೆವ ಹಿ ಕೇಷಾಂಚಿದ್ ಧನನಾಶೋ ಭವತ್ಯುತ।
ಅನಿತ್ಯಂ ತಂ ಸುಖಂ ಮತ್ವಾ ಶ್ರಿಯಮನ್ಯೇನ ಲಿಪ್ಸತೇ॥ -೧೦೬/೩೮

೪ ಧರ್ಮಮೇಕೇಽಭಿಪದ್ಯಂತೇ ಕಲ್ಯಾಣಾಭಿರತಾ ನರಾಃ।
ಪರತ್ರ ಸುಖಮಿಚ್ಛಂತೋ ನಿರ್ವಿದ್ಯೇಯುಶ್ಚ ಲೌಕಿಕಾತ್ ॥- ೧೦೬/೪೧

೫ ಸಂಚಯೇ ಚ ವಿನಾಶಾಂತೇ ಮರಣಾಂತೇ ಚ ಜೀವಿತೇ।
ಸಂಯೋಗೇ ವಿಪ್ರಯೋಗಾಂತೇ ಕೋ ನು ವಿಪ್ರಣಯೇನ್ಮನಃ॥

೧೨. ಬೇರೆಯವರಿಗೆ ಆಪತ್ತು ಬಂದಾಗ ಸಾಮಾನ್ಯ ಮನುಷ್ಯನು ಸಂತೋಷ ಪಡುತ್ತಾನೆ. ನಾನೊಬ್ಬನೇ ಆಪತ್ತಿಗೆ ಸಿಲುಕಿಲ್ಲ ಎಂಬ ಕಾರಣದಿಂದ ಸಮಾಧಾನ ಪಡುತ್ತಾನೆ. ಆದರೆ ಬೇರೆಯವರಿಗೂ ತನಗೂ ಧನ ನಾಶವಾಗುತ್ತದೆ. ಆಪತ್ತುಗಳೂ ಬರುತ್ತವೆ. ಅದನ್ನು ವಿವೇಕ ಬುದ್ಧಿಯಿಂದ ನೋಡು. ಇಂತಹ ದುಷ್ಟಬುದ್ಧಿ ಹೋಗಲು ಇಂದ್ರಿಗಳನ್ನು ನಿಗ್ರಹಿಸು ಮನಸ್ಸಂಯಮವಿರಲಿ, ಮಾತನ್ನು ಹಿಡಿತದಲ್ಲಿಡು[೧].

೧೩. ಅಚಂಚಲವಾದ, ಮೃದುವಾದ, ಇಂದ್ರಿಯನಿಗ್ರಹವಿರುವ, ಮನಸ್ಸನ್ನು ನಿಯಂತ್ರಿ-ಸುವ ಶಕ್ತಿ ಇರುವ ನಿನ್ನಂತಹವನು ಅಲ್ಪಸುಖಕ್ಕಾಗಿ ಆಶೆ ಪಡಬಾರದು. ಕಪಟವೃತ್ತಿ, ಭಿಕ್ಷಾವೃತ್ತಿ, ಕ್ರೂರವೃತ್ತಿ, ದುಷ್ಟಪುರುಷರಿಗೆ ಉಚಿತವಾದ ಪಾಪವೃತ್ತಿಯನ್ನು ಎಂದೂ ಬಯಸಬಾರದು. ಅದರ ಬದಲಾಗಿ ಪ್ರಲಾಪಕರವಾದ ಮಾತನ್ನು ನಿಯಂತ್ರಿಸಿ, ಮನೋಜಯ ಹೊಂದಿ, ಸರ್ವಭೂತದಯೆವುಳ್ಳವನಾಗಿ, ದೊಡ್ಡ ಅರಣ್ಯದಲ್ಲಿ ಮೂಲಫಲಾದಿಗಳನ್ನು ಸೇವಿಸಿ, ಒಬ್ಬನೇ[೨] (ತಪಸ್ಸನ್ನು ಮಾಡುತ್ತಾ ಸುಖವಾಗಿರಬಹುದಲ್ಲವೇ?). ಸಂಪತ್ತು ಪಡೆಯುವುದು ಅಶಕ್ಯವಾದಾಗ, ಒಳ್ಳೆಯ ಸಚಿವಾದಿಗಳಿಲ್ಲದಿರುವಾಗ, ದೈವವೇ ಪ್ರತಿಕೂಲವಾಗಿರುವಾಗ ಇದಕ್ಕಿಂತ ಉತ್ತಮವಾದ ಶ್ರೇಯೋಮಾರ್ಗ ಬೇರೆ ಏನನ್ನು ಬಯಸುವೆ? ಹೇಳು.

## ಶತ್ರುಜಯೋಪಾಯದ ಬಗ್ಗೆ ಮುನಿಯ ಉಪದೇಶ

ಎಲೈ ಕ್ಷತ್ರಿಯನೇ! ನಿನ್ನಲ್ಲಿ ಪೌರುಷವಿದ್ದಲ್ಲಿ, ಆದರಿಂದ ರಾಜ್ಯವನ್ನು ಸಂಪಾದಿಸಲು ನೀನು ಅನುಸರಿಸಬೇಕಾದ ನೀತಿಯನ್ನೂ ತಿಳಿ ಹೇಳುತ್ತೇನೆ, ಕೇಳು. ಆದರಿಂದ ಉತ್ತಮ ಸಂಪತ್ತನ್ನು ಹೊಂದುವೆ. ನಿನಗೆ ಇಷ್ಟವಿದ್ದಲ್ಲಿ ಹೇಳು.

---

ಧನಂ ವಾ ಪುರುಷಂ ರಾಜನ್ ಪುರುಷೋ ವಾ ಪುನರ್ಧನಮ್ ।
ಅವಶ್ಯಂ ಪ್ರಜಹಾತ್ಯೇತತ್ ತದ್ ವಿದ್ವಾನ್ ಕೋಽನುಸಂಜ್ವರೇತ್ ॥ - ೧೦೬/೪೪,೪೫

೧ ನಿಯಚ್ಛ ಯಚ್ಛ ಸಂಯಚ್ಛ ಇಂದ್ರಿಯಾಣಿ ಮನೋ ಗಿರಮ್ । - ೧೦೬/೪೭

೨ ಅಲ್ಪಮಿಚ್ಛನ್ನಚಪಲೋ ಮೃದುರ್ದಾಂತಃ ಸುಸಂಯತಃ ।
ಬ್ರಹ್ಮಚರ್ಯೋಪಪನ್ನಶ್ಚ ತ್ವದ್ವಿಧೋ ನೈವ ಮುಹ್ಯತೇ ॥
ನ ತ್ವೇವ ಜಾಲ್ಮೀಂ ಕಾಪಾಲೀಂ ವೃತ್ತಿಮೇಷಿತುಮರ್ಹತಿ ।
ನೃಶಂಸವೃತ್ತಿಂ ಪಾಪಿಷ್ಠಾಂ ದುಃಖಾಂ ಕಾಪುರಷೋಚಿತಾಮ್ ॥
ಅಪಿ ಮೂಲಫಲಾಜೀವೋ ರಮಸ್ವೈಕೋ ಮಹಾವನೇ ।
ವಾಗ್ಯತಃ ಸಂಗೃಹೀತಾತ್ಮಾ ಸರ್ವಭೂತದಯಾನ್ವಿತಃ ॥
ಸದೃಶಂ ಪಂಡಿತಸ್ಯೈತದೀಷಾದಂತೇನ ದಂತಿನಾ ।
ಯದೇಕೋ ರಮತೇಽರಣ್ಯೇ ಯಚ್ಚಾಪ್ಯಲ್ಪೇನ ತುಷ್ಯತಿ ॥
ಮಹಾಹ್ರದಃ ಸಂಕ್ಷುಭಿತ ಆತ್ಮನೈವ ಪ್ರಸೀದತಿ ।
ಏತದೇವಂಗತಸ್ಯಾಹಂ ಸುಖಂ ಪಶ್ಯಾಮಿ ಕೇವಲಮ್ ॥
ಅಸಂಭವೇ ಶ್ರಿಯೋ ರಾಜನ್ ಹೀನಸ್ಯ ಸಚಿವಾದಿಭಿಃ ।
ದೈವೇ ಪ್ರತಿನಿವಿಷ್ಟೇ ಚ ಕಿಂ ಶ್ರೇಯೋ ಮನ್ಯತೇ ಭವಾನ್ ॥ - ೧೦೬/೪೯-೫೪

ಮುನಿಗಳ ಮಾತಿಗೆ 'ನಿಮ್ಮನ್ನು ಶರಣಾಗಿದ್ದೇನೆ. ಹೇಳಿ ಎಂದನು ರಾಜನು. ಮುನಿಗಳು ರಾಜನಿಗೆ –

೧. ದರ್ಪ, ಅಹಂಕಾರ, ಕ್ರೋದ, ಹರ್ಷ, ಭಯಗಳನ್ನು ಬಿಟ್ಟು ಶತ್ರುವಿಗೆ ನಮಸ್ಕಾರ ಮಾಡಿ, ಕೈಮುಗಿದು, ಅವನನ್ನುಸೇವಿಸು. ಅವನನ್ನು ಉತ್ತಮವಾದ ಶೌಚದಿಂದ ಕರ್ಮದಿಂದ ಆರಾಧಿಸು. ಸತ್ಯಸಂಗರನಾದ, ಸತ್ಯಪ್ರತಿಜ್ಞನಾದ (ಪ್ರತಿಜ್ಞೆ ಪ್ರಕಾರ ನಡೆಯುವ ಕೊಟ್ಟ ಮಾತಿನಂತೆ ನಡೆಯುವ) ವಿದೇಹ ರಾಜನು ಜನಕರಾಜನು ನಿನಗೆ ಜೀವನೋಪಾಯವನ್ನು (ವೃತ್ತಿ), ಬೇಕಾದಷ್ಟು ಹಣವನ್ನು (ವಿತ್ತ) ಕೊಡಲು ಸಮರ್ಥನಾಗಿದ್ದಾನೆ. ಆಗ ನೀನು ಎಲ್ಲ ಪ್ರಜೆಗಳಿಗೂ ಪ್ರಮಾಣನಾಗುವೆ (ಮನ್ನಣೆಗೆ ಯೋಗ್ಯ). ಉತ್ಸಾಹಯುಕ್ತರಾದ, ದುಶ್ಚಟಗಳಿಲ್ಲದ, ಶುದ್ಧಮನಸ್ಕರಾದ ಸಹಾಯಕರು ಸಿಗುತ್ತಾರೆ. ಇದರಿಂದ ತನ್ನನ್ನು ಉದ್ಧರಿಸುತ್ತಾ ಪ್ರಜೆಗಳನ್ನೂ ಸಂತೋಷಪಡಿಸುತ್ತಾನೆ' (ತ್ರೀಯಾ).

೨. ನಂತರ ಧೈರ್ಯಶಾಲಿಯಾದ, ಶ್ರೀಮಂತನಾದ ಜನಕರಾಜನಿಂದ ಗೌರವ ಹೊಂದಿದವನಾಗಿ ಎಲ್ಲ ಪ್ರಜೆಗಳಿಂದ ಪೂಜಿತನಾಗುವೆ. ಆಮೇಲೆ ಸಜ್ಜನರ ಬಲ ಪಡೆದು, ಒಳ್ಳೆಯ ಮಂತ್ರಿಗಳಿಂದ ಮಂತ್ರಾಲೋಚನೆ ಮಾಡಿ, ಶತ್ರುಗಳ ಒಳಗೆ ಅವರಿಂದಲೇ ಬಿಲ್ವಫನ್ನು ಬಿಲ್ವಫಲದಿಂದ ಹೊಡೆಯುವಂತೆ ಅವರನ್ನು ನಾಶಮಾಡು. ಅಥವಾ ಶತ್ರುವಿನ ಶತ್ರುವಿನೊಡನೆ ರಹಸ್ಯವಾಗಿ ಸಮಾಲೋಚಿಸಿ, ಅವರ ಸಹಾಯದಿಂದ ಶತ್ರು ಸೈನ್ಯವನ್ನು ಧ್ವಂಸಗೊಳಿಸು' (ಶತ್ರುವಿನ ಶತ್ರುವಿನೊಡನೆ ಸ್ನೇಹಮಾಡಿ ನಿನ್ನ ಶತ್ರುನಾಶ ಮಾಡು).

೩. ಇನ್ನೊಂದು ಉಪಾಯವೆಂದರೆ ಶತ್ರುವು ಸಾಮಾನ್ಯ ಜನರಿಗೆ ಸಿಗದಿರುವ ಅಮೂಲ್ಯವಾದ ಶುಭವಸ್ತುಗಳು, ಸುಂದರಸ್ತ್ರೀಯರು, ಸುಂದರವಾದ ಶಯ್ಯಾಸನಗಳು, ಪಲ್ಲಕ್ಕಿಗಳು, ಕಸ್ತೂರಿ ಮೊದಲಾದ ಸುಗಂಧದ್ರವ್ಯಗಳು, ಮೊದಲಾದ ವೈಭವೋಪೇತವಾದ ವಸ್ತುಗಳ ಸುಖಗಳಲ್ಲಿ ಆಸಕ್ತನಾಗುವಂತೆ ಮಾಡು (ಇಂತಹ ಪದಾರ್ಥಗಳನ್ನು ಶತ್ರುವಿಗೆ ಗೊತ್ತಾಗದಂತೆ ಗೋಪ್ಯವಾಗಿ ಬೇರೆಯವರ ಮೂಲಕ ಕೊಡಿಸಿ ಆ ಸುಖದಲ್ಲಿಯೇ

---

೧ ಹಿತ್ವಾ ಸ್ತಂಭಂ ಚ ಮಾನಂ ಚ ಕ್ರೋಧಹರ್ಷೌ ಭಯಂ ತಥಾ।
ಪ್ರತ್ಯಮಿತ್ರಂ ನಿಷೇವಸ್ವ ಪ್ರಣಿಪತ್ಯ ಕೃತಾಂಜಲಿಃ॥
ತಮುತ್ತಮೇನ ಶೌಚೇನ ಕರ್ಮಣಾ ಚಾಭಿರಾಧಯ।
ದಾತುಮರ್ಹತಿ ತೇ ವೃತ್ತಿಂ ವೈದೇಹಃ ಸತ್ಯಸಂಗರಃ॥
ಪ್ರಮಾಣಂ ಸರ್ವಭೂತೇಷು ಪ್ರಗ್ರಹಂ ಚ ಗಮಿಷ್ಯಸಿ।
ತತಃ ಸಹಾಯಾನ್ ಸೋತ್ಸಾಹಾನ್ ಲಪ್ಸ್ಯಸೇಽವ್ಯಸನಾನ್ ಶುಚೀನ್॥ – ೧೦೭/೫,೬,೭

೨ ತತಃ ಸುಹೃದ್ಬಲಂ ಲಬ್ಧ್ವಾ ಮಂತ್ರಯಿತ್ವಾ ಸುಮಂತ್ರಿತಮ್।
ಅಂತರೈರ್ಭೇದಯಿತ್ವಾಽರೀನ್ ಬಿಲ್ವಂ ಬಿಲ್ವೇನ ಶಾತಯ।
ಪರೈರ್ವಾ ಸಂವಿದಂ ಕೃತ್ವಾ ಬಲಮಪ್ಯಸ್ಯ ಘಾತಯ। – ೧೦೭/೧೦

ತಲ್ಲೀನನಾಗಿ, ರಾಜ್ಯ ಆಡಳಿತ ಕುಸಿಯುವಂತೆ ಮಾಡುವ ಉಪಾಯವಿದು). ಶತ್ರು ದೊಡ್ಡ ವೈರಿಯಾಗಿದ್ದರೆ ಅವನಿಗೆ ಅನರ್ಥಕರವಾದ ಆದರೆ ಅನುಕೂಲವಾದ ಮಾತುಗಳನ್ನು ಆಡು. ಶತ್ರುವು ತನ್ನನ್ನು ಮೀರಿದ ದೊಡ್ಡ ಶತ್ರುವಿನೊಡನೆ ವಿರೋಧ ಯುದ್ಧಕ್ಕೆ ಹೋಗುವಂತೆ ಮಾಡಿದರೆ ಅವನ ಸಂಪತ್ತು ನಾಶವಾಗುತ್ತದೆ.

೪. ಅವನು ತನ್ನ ಸುಖಭೋಗಕ್ಕಾಗಿ ಭಾರಿ ವೆಚ್ಚದಾಯಕವಾದ ಉದ್ಯಾನವನಗಳು, ಶಯನಾಸನಾದಿಗಳನ್ನು ನಿರ್ಮಿಸುವಂತೆ ಮಾಡಿ ಅವನ ಕೋಶ ಖಾಲಿಯಾಗುವಂತೆ ಮಾಡು (ಸಲಹೆ ನೀಡು). ಬ್ರಾಹ್ಮಣರಲ್ಲಿ ಅವನ ಯಜ್ಞದಾನಗಳನ್ನು ಹೊಗಳು. ಅವರು ನಿನಗೆ ಪ್ರಿಯವುಂಟು ಮಾಡಿ ಅವನ ಸಂಪತ್ತನ್ನು ಹರಿದು ಹಂಚುತ್ತಾರೆ (Exploit his wealth). ಹೀಗೆ ಅವನು ಪುಣ್ಯಶೀಲನಾಗಿ ಉತ್ತಮಗತಿಯನ್ನು ಹೊಂದುತ್ತಾನೆ ಸ್ವರ್ಗದಲ್ಲಿ. ಆದರೆ ಕೋಶ ಖಾಲಿಯಾಗಿ ಶತ್ರುವಶನಾಗುತ್ತಾನೆ. ಹಾಗೆ ಮಾಡಲು ಅವನಿಂದ ಸರ್ವಸ್ವದಾನ ಮಾಡಬೇಕಾದ ವಿಶ್ವಜಿತ್ ಯಾಗಮಾಡಿಸಿ, ಸರ್ವಸ್ವ ದಕ್ಷಿಣೆಕೊಡಿಸು. ಎಲ್ಲಸಂಪತ್ತು ಹೀಗೆವಿನಿಯೋಗವಾದಾಗ, ಇಷ್ಟಾರ್ಥವೂ ಸಿಗದೆ ಪ್ರಜೆಗಳ ಮುಂದೆ ಭಿಕ್ಷಾಪಾತ್ರೆ ಹಿಡಿಯಬೇಕಾಗುತ್ತದೆ.

೫. ಅಥವಾ ತ್ಯಾಗಧರ್ಮವನ್ನು ತಿಳಿದ ಸನ್ಯಾಸಿಯನ್ನು ಶತ್ರುರಾಜನಿಗೆ ಪರಿಚಯ ಮಾಡಿಸು. ಆಗ ರಾಜನು ತ್ಯಾಗಧರ್ಮದಲ್ಲಿ ಆಸಕ್ತನಾಗಿ (ಸರ್ವಸ್ವಪರಿತ್ಯಾಗ ಮಾಡಿ) ಕೊನೆಗೆ ತಾನೇ ಆಶ್ರಯರಹಿತನಾಗುತ್ತಾನೆ.

೬. ಅಥವಾ ನಿನ್ನ ಆಪ್ತರ ಮೂಲಕ ಶತ್ರುವಿನಾಶಕವಾದ ಸಿದ್ಧೌಷಧ ಪ್ರಯೋಗದಿಂದ ರಾಜನ ಆನೆ, ಕುದುರೆ, ಮನುಷ್ಯರನ್ನು (ಚತುರಂಗ ಬಲವನ್ನು ಹಸ್ತಿ, ಅಶ್ವ, ಪದಾತಿ) ಕೊಲ್ಲಿಸು (ವಿಷಪ್ರಯೋಗದಿಂದ). ಇವೇ ಮೊದಲಾದ ಅನೇಕಾನೇಕ ನಿಶ್ಚಯವಾಗಿಯೂ ಮೋಸದ ಉಪಾಯಗಳು ಇವೆ. ಇವನ್ನು ಮಾಡಬಹುದು, ಆದರೆ ಹೇಡಿ ಇವನ್ನು ಮಾಡಲಾರೆ.

## ಮುನಿಯ ಸಲಹೆಯಂತೆ ಕೋಸಲರಾಜನಿಗೆ ರಾಜ್ಯಪ್ರಾಪ್ತಿ

ಮುನಿಯ ಉಪದೇಶ ಕೇಳಿದ ರಾಜಪುತ್ರನು 'ನಾನು ಮೋಸದಿಂದ, ದಂಭದಿಂದ (ಇತರರನ್ನು ಮೆಚ್ಚಿಸಲು ಕರ್ಮಾಚರಣೆ, ತಾನೇ ಮಹಾ ವ್ಯಕ್ತಿಯೆಂದು ತೋರಿಸಿಕೊಳ್ಳುವ

---

೧ ಅಲಭ್ಯಾ ಯೇ ಶುಭಾ ಭಾವಾಃ ಸ್ತ್ರಿಯಶ್ಚಾಚ್ಛಾದನಾನಿ ಚ।
ಶಯ್ಯಾಸನಾನಿ ಯಾನಾನಿ ಮಹಾರ್ಹಾಣಿ ಗೃಹಾಣಿ ಚ।
ತೇಷ್ವೇವ ಸಜ್ಜಯೇಥಾಸ್ತ್ವಂ ಯಥಾ ನಶ್ಯೇತ್ ಸ್ವಯಂ ಪರಃ॥ - ೧೦೭/೧೧,೧೨

೨ ಯಾಜಯ್ಯೆನಂ ವಿಶ್ವಜಿತಾ ಸರ್ವಸ್ವೇನ ವಿಯುಜ್ಯತಾಮ್।
ತತೋ ಗಚ್ಛತ್ವಸಿದ್ಧಾರ್ಥಃ ಭಿಕ್ಷಮಾಣೋ ಮಹಾಜನಮ್॥ - ೧೦೭/೨೦

೩ ತ್ಯಾಗಧರ್ಮವಿದಂ ಮುಂಡಂ ಕಂಚಿದಸ್ಯೋಪವರ್ಣಯ।
ಅಪಿ ತ್ಯಾಗಂ ಬುಭೂಷೇತ ಕಚ್ಚಿದ್ ಗಚ್ಛೇದನಾಶ್ರಯಮ್॥ - ೧೦೭/೨೨

೪ ಸಿದ್ಧೇನೌಷಧಯೋಗೇನ ಸರ್ವಶತ್ರುವಿನಾಶಿನಾ।
ನಾಗಾನಶ್ವಾನ್ ಮನುಷ್ಯಾಂಶ್ಚ ಕೃತಕೈರುಪಘಾತಯ॥ -೧೦೭/೨೩

ನಡೆ). ಬದುಕಲು ಇಚ್ಛಿಸುವುದಿಲ್ಲ. ಅಧರ್ಮಾಚರಣೆಯಿಂದ ದೊರಕುವ ಎಂತಹ ದೊಡ್ಡ ವಸ್ತುವನ್ನೂ, ಲಾಭವನ್ನೂ ನಾನು ಇಚ್ಛಿಸುವುದಿಲ್ಲ. ನಾನು ಅಂತಹ ನಡೆಯನ್ನು ಎಂದೋ ಬಿಟ್ಟಿದ್ದೇನೆ. ನಾನು ಸಂದೇಹಿಸಲ್ಪಡಬಾರದು. ಎಲ್ಲರಿಗೂ ಹಿತವಾಗುವುದನ್ನು ಮಾತ್ರ ಬಯಸುತ್ತೇನೆ. ಕ್ರೌರ್ಯ ನಡೆ ಇರದಂತಹ (ಮಾರ್ದವಯುಕ್ತ – ಮಾರ್ದವತೆಯಿರುವ) ನಡೆಗಳಿಂದ ಜೀವಿಸಲು ಬಯಸುವೆನು. ನೀವು ಹೇಳಿದುದನ್ನು ಮಾಡಲಾರೆ. ಅದು ನನಗೆ ಹೊಂದುವುದಿಲ್ಲ¹(ಅಧರ್ಮ ಮಾರ್ಗದ ಉಪದೇಶ ನಿಮಗೆ ಸರಿಯಾದುದಲ್ಲ).

ರಾಜಪುತ್ರನ ಮಾತಿಗೆ ಮುನಿಗಳು 'ಎಲೈ ಅದ್ಭುತದರ್ಶನನೇ! ನೀನು ಸ್ವಾಭಾವಿಕವಾಗಿಯೇ ಸುಬುದ್ಧಿ ಹೊಂದಿದ್ದೀಯಾ. ಇದು ನಿನಗೆ ಯೋಗ್ಯ. ನಿನ್ನ ಹಾಗೂ ವಿದೇಹರಾಜರ ಒಳಿತಿಗಾಗಿ ಶಾಶ್ವತವಾದ ಛಿನ್ನವಾಗದ ಸ್ನೇಹ, ಸಂಬಂಧಕ್ಕಾಗಿ ಪ್ರಯತ್ನಿಸುವೆ. ನಿನ್ನಂತಹ ಸತ್ಕುಲಪ್ರಸೂತನಾದ ಮೃದುಮನಸ್ಸಿನ ಬಹುಶ್ರುತನಾದ, ರಾಜ್ಯನೀತಿ ಬಲ್ಲವನನ್ನು ಯಾರು ತಾನೇ ಅಮಾತ್ಯನನ್ನಾಗಿ ಮಾಡಿಕೊಳ್ಳುವುದಿಲ್ಲ? ಕಾರಣ ರಾಜ್ಯವನ್ನು ಬಿಟ್ಟು ಹೋಗಿ ಭಾರಿ ವ್ಯಸನದಲ್ಲಿದ್ದರೂ ಮಾರ್ದವ ನಡತೆಯಿಂದ ಜೀವಿಸಲು ಬಯಸುತ್ತೀಯಲ್ಲ? ನನ್ನ ಆಶ್ರಮಕ್ಕೆ ಸತ್ಯಸಂಕಲ್ಪನಾದ ಆಡಿದುದನ್ನು ನಡೆಸಿಕೊಡುವ ಸ್ವಭಾವದ ಜನಕರಾಜನು ಬರುವವನಿದ್ದಾನೆ. ನನ್ನ ನಿರ್ದೇಶದಂತೆ ಆತನು ನಿಶ್ಚಯವಾಗಿಯೂ ನಡೆಯುತ್ತಾನೆ².

ನಂತರ ಮುನಿಗಳು ವಿದೇಹರಾಜನನ್ನು ಕರೆಯಿಸಿ, ಈ ರಾಜಪುತ್ರನ ಸ್ವಭಾವಗಳನ್ನು ರಾಜನಿಗೆ ಹೇಳುತ್ತಾನೆ, ಆತನ ಶ್ರೇಯಸ್ಸು ಮತ್ತು ಅದರಲ್ಲಿ ಜನಕರಾಜನ ಧರ್ಮಪರಿಪಾಲನೆಯೂ

---

೧ ನ ನಿಕೃತ್ಯಾ ನ ದಂಭೇನ ಬ್ರಹ್ಮನ್ನಿಚ್ಛಾಮಿ ಜೀವಿತುಮ್ ।
ನಾಧರ್ಮಯುಕ್ತಾನಿಚ್ಛೇಯಮರ್ಥಾನ್ ಸುಮಹತೋಽಪ್ಯಹಮ್ ॥
ಪುರಸ್ತಾದೇವ ಭಗವನ್ ಮಯ್ಯೈತದಪವರ್ಜಿತಮ್ ।
ಯೇನ ಮಾಂ ನಾಭಿಶಂಕೇತ ಯದ್ವಾ ಕೃತ್ಸ್ನಂ ಹಿತಂ ಭವೇತ್ ॥
ಆನೃಶಂಸ್ಯೇನ ಧರ್ಮೇಣ ಲೋಕೇ ಹ್ಯಸ್ಮಿನ್ ಜಿಜೀವಿಷುಃ ।
ನಾಹಮೇತದಲಂ ಕರ್ತುಂ ನೈತನ್ಮಯ್ಯುಪಪದ್ಯತೇ ॥ – ೧೦೮/೧-೩

೨ ಉಪಪನ್ನಸ್ತ್ವಮೇತೇನ ಯಥಾ ಕ್ಷತ್ರಿಯ ಭಾಷಸೇ ।
ಪ್ರಕೃತ್ಯಾ ಹ್ಯುಪಪನ್ನೋಽಸಿ ಬುದ್ಧ್ಯಾ ಚಾದ್ಭುತದರ್ಶನ ॥
ಉಭಯೋರೇವ ವಾಮರ್ಥೇ ಯತಿಷ್ಯೇ ತವ ತಸ್ಯ ಚ ।
ಸಂಶ್ಲೇಷಂ ವಾ ಕರಿಷ್ಯಾಮಿ ಶಾಶ್ವತಂ ಹ್ಯನಪಾಯಿನಮ್ ॥
ತ್ವಾದೃಶಂ ಹಿ ಕುಲೇ ಜಾತಮನೃಶಂಸಂ ಬಹುಶ್ರುತಮ್ ।
ಅಮಾತ್ಯಂ ಕೋ ನ ಕುರ್ವೀತ ರಾಜ್ಯಪ್ರಣಯಕೋವಿದಮ್ ॥
ಯಸ್ತ್ವಂ ಪ್ರವ್ರಾಜಿತೋ ರಾಜ್ಯಾದ್ ವ್ಯಸನಂ ಚೋತ್ತಮಂ ಗತಃ ।
ಆನೃಶಂಸ್ಯೇನ ವೃತ್ತೇನ ಕ್ಷತ್ರಿಯೇಚ್ಛಸಿ ಜೀವಿತುಮ್ ॥
ಆಗಂತಾ ಮದ್ಗೃಹಂ ತಾತ ವೈದೇಹಃ ಸತ್ಯಸಂಗರಃ ।
ಯಥಾಹಂ ತಂ ನಿಯೋಕ್ಷ್ಯಾಮಿ ತತ್ ಕರಿಷ್ಯತ್ಯಸಂಶಯಮ್ ॥ – ೧೦೮/೪-೮

ಇದೆ. ಇತ್ಯಾದಿ ವಿಷಯವನ್ನು ತಿಳಿಸುತ್ತಾನೆ. ಜನಕರಾಜನಿಗೆ ಹೇಳಿದ ಮುನಿಗಳ ಮಾತಿನ ಸಾರ ಹೀಗಿದೆ.

೧. ಈ ಕೋಸಲ ರಾಜಕುಮಾರನ ಆಂತರಿಕ ವಿಷಯಗಳು ನನಗೆ ಗೊತ್ತಿವೆ. ಆತನು ವಿಶ್ವಾಸಯೋಗ್ಯ, ಶರದೃತುವಿನ ಚಂದ್ರನಂತೆ ಶುದ್ಧನೂ ಆಗಿದ್ದು ದೋಷಗಳಿಲ್ಲದವನಾಗಿ-ದ್ದಾನೆ. ನಾನು ಅವನನ್ನು ಪರೀಕ್ಷಿಸಿದ್ದೇನೆ.

೨. ಅವನೊಡನೆ ಸಂಧಿ ಮಾಡಿಕೋ. ನನ್ನಲ್ಲಿ ವಿಶ್ವಾಸ ಮಾಡಿದಂತೆ ಅವನನ್ನು ನಂಬು. ಅಮಾತ್ಯನಿಲ್ಲದ ರಾಜ್ಯಪಾಲನೆ ಅಶಕ್ಯ. ಅಮಾತ್ಯನು ಶೂರನೂ ಪ್ರತಿಭಾವಂತನೂ ಆಗಿರಬೇಕು. ಅಂತಹವನಿಂದಲೇ ಶತ್ರುರಾಜನಿಗೆ ಭಯ.

೩. ಇವನು ಧರ್ಮಮಾರ್ಗದಲ್ಲಿದ್ದಾನೆ. ಇವನನ್ನು ನೀನು ಪಡೆದರೆ ನಿನ್ನ ಪುತ್ರನೂ ಸದ್ಗುಣಿಯಾದಾನು. ನೀನಾಗಲೀ, ಅವನಾಗಲೀ ಯುದ್ಧಮಾಡಿದರೆ ಇಬ್ಬರೂ ಕ್ಷತ್ರಿಯಧರ್ಮ ಅನುಸರಿಸಿ ಜಯ ಬಯಸಬಹುದು. ಆದರೆ ಯುದ್ಧವಿಲ್ಲದೆ ನನ್ನ ಮಾತಿಗೆ ಬೆಲೆಕೊಟ್ಟು ಅವನು ನಿನ್ನ ವಶನಾಗಿದ್ದಾನೆ.

ಆದ್ದರಿಂದ ನೀನು ಕಾಮದಿಂದಾಗಲಿ, ದ್ರೋಹದಿಂದಾಗಲಿ ನಿನ್ನ ಧರ್ಮವನ್ನು ಬಿಡುವುದು ಬೇಡ. ಜಯಾಪಜಯಗಳು ನಿತ್ಯವಲ್ಲ. ಆದ್ದರಿಂದ ಇನ್ನೊಬ್ಬ ಶತ್ರುವನ್ನು ಒಳ್ಳೆಯ ಸುಖಿಯನ್ನಾಗಿ ಮಾಡುತ್ತಾ ತಾನೂ ಸುಖಿಯಾಗಿರಬೇಕು.

೪. ಶತ್ರುವನ್ನು ನಿರ್ಮೂಲಗೊಳಿಸುವವನು ತನ್ನನ್ನು ಬೇರೆ ಶತ್ರು ನಿರ್ಮೂಲಗೊಳಿಸಬಹುದಲ್ಲವೇ. ಆ ಭಯ ಇರಬೇಕು.

ಈ ಮಾತುಗಳೆಲ್ಲವನ್ನು ಕೇಳಿ, ಜನಕರಾಜನು ಮುನಿಗಳನ್ನು ಸತ್ಕರಿಸಿ, ಅವರ ಮಾತನ್ನು ಒಪ್ಪಿ ಹೀಗೆ ನುಡಿದನು[೧].

---

೧ ................

ಅಯಂ ರಾಜಕುಲೇ ಜಾತೋ ವಿದಿತಾಭ್ಯಂತರೋ ಮಮ ॥
ಆದರ್ಶ ಇವ ಶುದ್ಧಾತ್ಮಾ ಶಾರದಶ್ಚಂದ್ರಮಾ ಇವ ।
ನಾಸ್ಮಿನ್ ಪಶ್ಯಾಮಿ ವೃಜಿನಂ ಸರ್ವತೋ ಮೇ ಪರೀಕ್ಷಿತಃ ॥
ತೇನ ತೇ ಸಂಧಿರೇವಾಸ್ತು ವಿಶ್ವಸಾಸ್ಮಿನ್ ಯಥಾ ಮಯಿ ।
...............
ಸಂಸೇವ್ಯಮಾನಃ ಪುತ್ರಸ್ತೇ ಗೃಹ್ಣೀಯಾದ್ ವದತೋ ಗುಣಾನ್ ॥
...............
ನ ಹಿ ಕಾಮಾನ್ನ ಚ ದ್ರೋಹಾತ್ ಸ್ವಧರ್ಮಂ ಹಾತುಮರ್ಹಸಿ ॥
ನೈವ ನಿತ್ಯಂ ಜಯಸ್ತಾತ ನೈವ ನಿತ್ಯಂ ಪರಾಜಯಃ ।
ತಸ್ಮಾದ್ ಭೋಜಯಿತವ್ಯಶ್ಚ ಭೋಕ್ತವ್ಯಶ್ಚ ಪರೋ ಜನಃ ॥

ಮಹಾಪ್ರಾಜ್ಞನಾದವನು ಬಹುಶ್ರುತನಾದವನು ತನ್ನನ್ನು ನಂಬಿದವರ ಶ್ರೇಯಸ್ಕಾಮನಾದವನು ಇಬ್ಬರಿಗೂ ಏನು ಹೇಳುಬಹುದೋ ಅದನ್ನು ತಾವು ಹೇಳಿದ್ದೀರಿ. ಇದರಲ್ಲಿ ನಾನು ವಿಚಾರ ಮಾಡುವುದೇನೂ ಇಲ್ಲ. ನಾನು ನೀವು ಹೇಳಿದಂತೆ ನಡೆಯುತ್ತೇನೆ. ಅದೇ ನನಗೆ ಮಹಾಶ್ರಯಸ್ಕರ[೧].

ನಂತರ ಜನಕನು ಕೌಸಲ್ಯನನ್ನು (ರಾಜಪುತ್ರನನ್ನು) ಕರೆದು 'ನೀನು ಧರ್ಮದಿಂದ ರಾಜನೀತಿಯಿಂದ, ಸೈನ್ಯದಿಂದಲೂ ನನ್ನಿಂದ ಪರಾಜಿತನಾಗಿದ್ದೀಯಾ. ನಾನು ನಿನ್ನ ಗುಣಗಳಿಂದ ಸೋತಿದ್ದೇನೆ. ನೀನು ನಿನ್ನನ್ನು ಅಧಮನೆಂದು ತಿಳಿಯದೆ, ಪರಾಜಿತನಂತೆ, ನನ್ನ ಜೊತೆ ಇರು. ನಿನ್ನ ಬುದ್ಧಿಯನ್ನು ಪರಾಕ್ರಮವನ್ನು ನಾನು ಅಗೌರವಿಸುವುದಿಲ್ಲ. ಜಯಿಸಿದ್ದೇನೆಂದು ನಿನ್ನನ್ನು ಅವಮಾನ ಮಾಡುವುದಿಲ್ಲ. ಪರಾಜಿತನಾದವನಂತೆ ಇರು. ವಿಧ್ಯುಕ್ತವಾಗಿ ನನ್ನಿಂದ ಪೂಜಿತನಾಗಿ ನಿನ್ನ ಮನೆಗೆ ಹೋಗು' ಎಂದು ಜನಕನು ಹೇಳಿದನು.

ಆಮೇಲೆ ಇಬ್ಬರು ಮುನಿಯನ್ನು ಪೂಜಿಸಿ, ತಮ್ಮ ಮನೆಗಳಿಗೆ ಹೋದರು.

ಜನಕನು ಕೋಸಲರಾಜನನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ ಪಾದ್ಯ, ಅರ್ಘ್ಯ, ಮಧುಪರ್ಕಗಳಿಂದ ಸತ್ಕರಿಸಿ, **ತನ್ನ ಮಗಳನ್ನು ಕೊಟ್ಟನು(ವಿವಾಹ ಮಾಡಿದನು). ಅನೇಕ ವಿಧವಾದ ರತ್ನಾದಿ ಐಶ್ವರ್ಯವನ್ನು ಕೊಟ್ಟನು.**

ಇದುವೇ ರಾಜರ ಶ್ರೇಷ್ಠ ಧರ್ಮ. ಜಯಪರಾಜಯಗಳನ್ನು ಸಹಿಸಿಕೊಳ್ಳಬೇಕು[೨].

---

...............
ಇತ್ಯುಕ್ತಃ ಪ್ರತ್ಯುವಾಚೇದಂ ವಚನಂ ಬ್ರಾಹ್ಮಣರ್ಷಭಮ್ ।
ಅಭಿಪೂಜ್ಯಾಭಿಸತ್ಕೃತ್ಯ ಪೂಜಾರ್ಹಮನುಮಾನ್ಯ ಚ ॥ -೧೦೮/೯-೧೯

೧ ಯಥಾ ಬ್ರೂಯಾನ್ಮಹಾಪ್ರಾಜ್ಞೋ ಯಥಾ ಬ್ರೂಯಾದ್ ಬಹುಶ್ರುತಃ ।
ಶ್ರೇಯಸ್ಕಾಮೋ ಯಥಾ ಬ್ರೂಯಾದುಭಯೋರ್ಯತ್ ಕ್ಷಮಂ ಭವೇತ್ ॥
ತಥಾ ವಚನಮುಕ್ತೋಽಸ್ಮಿ ಕರಿಷ್ಯಾಮಿ ಚ ತತ್ ತಥಾ ।
ಏತದ್ಧಿ ಪರಮಂ ಶ್ರೇಯೋ ನ ಮೇಽತ್ರಾಸ್ತಿ ವಿಚಾರಣಾ ॥ -೧೦೮/೨೦,೨೧

೨ .... ಧರ್ಮತೋ ನೀತಿತಶ್ಚೈವ ಬಲೇನ ಚ ಜಿತೋ ಮಯಾ ॥
ಸೋಽಹಂ ತ್ವಯಾ ತ್ವಾತ್ಮಗುಣೈರ್ಜಿತಃ ಪಾರ್ಥಿವಸತ್ತಮ ।
ಆತ್ಮಾನಮನವಜ್ಞಾಯ ಜಿತವದ್ ವರ್ತತಾಂ ಭವಾನ್ ॥
ನಾವಮನ್ಯೇ ಚ ತೇ ಬುದ್ಧಿಂ ನಾವಮನ್ಯೇ ಚ ಪೌರುಷಮ್ ।
ನಾವಮನ್ಯೇ ಜಯಾಮೀತಿ ಜಿತವದ್ ವರ್ತತಾಂ ಭವಾನ್ ॥....
ವೈದೇಹಸ್ತ್ವಥ ಕೌಸಲ್ಯಂ ಪ್ರವೇಶ್ಯ ಗೃಹಮಂಜಸಾ ।
ಪಾದ್ಯಾರ್ಘ್ಯಮಧುಪರ್ಕೈಸ್ತಂ ಪೂಜಾರ್ಹಂ ಪ್ರತ್ಯಪೂಜಯತ್ ॥
**ದದೌ ದುಹಿತರಂ ಚಾಸ್ಮೈ ರತ್ನಾನಿ ವಿವಿಧಾನಿ ಚ ।**
ಏಷ ರಾಜ್ಞಾಂ ಪರೋ ಧರ್ಮಃ ಸಹ್ಯೌ ಜಯಪರಾಜಯೌ ॥ -೧೦೮/೨೨-೨೭

## ಸಂದೇಶಗಳು

ಸಂದೇಶಗಳು ಸ್ಪಷ್ಟವಾಗಿಯೇ ಇವೆ. ಇಲ್ಲಿ ಕೋಸಲರಾಜಪುತ್ರ ತುಂಬಾ ಮೃದುಸ್ವಭಾವದ ಸಾತ್ವಿಕಪ್ರಕೃತಿಯ ಕ್ಷತ್ರಿಯ. ಅಂತೆಯೇ ರಾಜ್ಯವನ್ನು ಬಯಸಿದರೂ, ಕ್ಷತ್ರಧರ್ಮವನ್ನು ಲೋಕದ ಸ್ವಾಭಾವಿಕ ಹಿನ್ನೆಲೆಗೆ ತಕ್ಕಂತೆ ಅಳವಡಿಸಿಕೊಳ್ಳಲು ಇಚ್ಛಿಸಲಿಲ್ಲ. ಈತನೂ ಧರ್ಮರಾಜನಂತೆ ಅಯೋಗ್ಯಕ್ಷತ್ರಿಯರನ್ನು ಅಯೋಗ್ಯ ರೀತಿಯಲ್ಲಿ ಎದುರಿಸುವ ಛಾತಿ ಈ ರಾಜಪುತ್ರನಿಗೆ ಇಲ್ಲ. ಅಲ್ಲೂ ನ್ಯಾಯಾರ್ಜಿತ ರಾಜ್ಯ ಬಯಸುತ್ತಾನೆ. ಆದರೆ ಆ ರೀತಿ ಯಾವಾಗಲೂ ಆಗದು.

ಮುನಿಗಳು ಕ್ಷತ್ರಧರ್ಮವನ್ನು ಉಪದೇಶ ಮಾಡುತ್ತಾರೆ. ಅದು ಅಸಾಧ್ಯವೆಂದು ಭಾವಿಸುವ ರಾಜನಿಗೆ ವನದಲ್ಲಿ ಮುನಿಚರ್ಯವನ್ನು ಬೋಧಿಸುತ್ತಾರೆ. ಅಥವಾ ಕೊನೆಗೆ ಜನಕರಾಜನೊಂದಿಗೆ ಸಂಧಿಗೆ ಒಪ್ಪಿಸಿ ಆತನ ಅಮಾತ್ಯನಾಗುವ ಸಲಹೆಯನ್ನು ರಾಜನು ಒಪ್ಪುತ್ತಾನೆ. ಜನಕರಾಜನಿಗೂ ಮುನಿಗಳು ಒಳ್ಳೆಯ ಮೇಧಾವಿ, ಧಾರ್ಮಿಕ ಅಮಾತ್ಯನ ಅವಶ್ಯಕತೆಯನ್ನು ಹಾಗೂ ಜನಕರಾಜನ ಪುತ್ರನ ಅವಶ್ಯಕತೆ ಪೂರೈಸಲು ಈ ರಾಜನನ್ನು ಒಪ್ಪಿಸುತ್ತಾರೆ.

ಜನಕರಾಜನು ಕ್ಷಾತ್ರಧರ್ಮದ ನೇರವ್ಯಕ್ತಿ. ಆದ್ದರಿಂದ ರಾಜಪುತ್ರನ, ಸದ್ಗುಣಗಳನ್ನು ಮೆಚ್ಚಿ ಸಂಧಿ ಮಾಡಿಕೊಂಡರೂ ಅವನನ್ನು ತನ್ನಿಂದ ಪರಾಜಿತನೆಂದೇ ಘೋಷಿಸುತ್ತಾನೆ. ಆದರೂ ಅವನನ್ನು ಅವಮಾನಿಸದೇ ಸೂಕ್ತ ಮರ್ಯಾದೆಯನ್ನು ಕೊಡುವುದಲ್ಲದೆ ತನ್ನ ಅಳಿಯನ್ನಾಗಿ ಮಾಡಿಕೊಡುವ ಉದಾರ ಚಕ್ರವರ್ತಿಯಂತೆ ನಡೆಯುತ್ತಾನೆ. ದುರ್ಬಲ ರಾಜಪುತ್ರ ಪ್ರಬಲರಾಜ ಜನಕ, ಆದರೆ ಉದಾರಿ. ಇವೂ ಅವಶ್ಯ ರಾಜಕಿಯ ಹಾಗೂ ನಿತ್ಯ ಜೀವನದಲ್ಲಿ,

೧. ದುರ್ಬಲರಾಜನು ತನ್ನ ಶ್ರೇಯಸ್ಸಿಗಾಗಿ ಪ್ರಬಲರಿಗೆ ಶರಣಾಗಬೇಕು.

೨. ಪ್ರಬಲ ರಾಜನು ದುರ್ಬಲರ ದೌರ್ಬಲ್ಯ ಮಾತ್ರ ನೋಡದೇ ಇತರ ಸದ್ಗುಣಗಳನ್ನೂ ನೋಡಬೇಕು ಎನ್ನುವುದು ಇಲ್ಲಿಯ ನೀತಿ. ದುರ್ಬಲರಾಜಪುತ್ರನಿಗೆ ಒಂದು ನೆಲೆಯನ್ನು ಕಲ್ಪಿಸಿಕೊಟ್ಟ ಉದಾರಿ ರಾಜ ಜನಕ. ಆದರೆ ಯುದ್ಧ ಮಾಡದೆ ತಾನು ಗೆದ್ದಿರುವುದನ್ನೂ ಬಿಟ್ಟುಕೊಡದಂತೆಯೂ ಕ್ಷತ್ರಿಯಧರ್ಮಪಾಲಕನಾಗಿ ಕಾಣುತ್ತಾನೆ.

೩. ಇದರ ಸಂಯೋಜಕ ಗುರು ಶಾಲಕವೃಕ್ಷೀಯ. ಅವರ ಮಾತಿಗೆ ಮನ್ನಣೆ ಕೊಟ್ಟ ರಾಜ ಜನಕರಾಜ. ಬ್ರಾಹ್ಮಣರ ಮಾತುಗಳಿಗೆ ಬೆಲೆ ಕೊಡುವ ಕ್ಷತ್ರಿಯರಾಜರು ಆ ಕಾಲದಲ್ಲಿದ್ದರು. ಆ ಕಾಲದ ಬ್ರಾಹ್ಮಣರ ತಪಸ್ಸು ರಾಜರನ್ನು ಮುಗ್ಧರನ್ನಾಗಿಸುತ್ತಿತ್ತು. ಆದ್ದರಿಂದ ಬ್ರಾಹ್ಮಣರು ತಪಸ್ವಿಗಳಾಗಬೇಕು. ಅದು ಸರ್ವಗುಣಸಾಧಕ.

ಇತ್ಯಾದಿ....

# ೧೭೬. ರಾಜರ ದಂಡನೀತಿ

ದಂಡದ ಸ್ವರೂಪ ಹಾಗೂ ಅದನ್ನು ಬಳಸುವ ಬಗ್ಗೆ ದಂಡಕ್ಕೆ ಯಾರು ಯೋಗ್ಯರು? ಇತ್ಯಾದಿ ವಿಷಯವನ್ನು ಕೇಳಿದ ಯುಧಿಷ್ಠಿರನಿಗೆ ಭೀಷ್ಮರು ದಂಡದ ಉತ್ಪತ್ತಿ, ಅದರ ಪರಂಪರೆ, ಅದು ಹೇಗೆ ಪ್ರಪಂಚದಲ್ಲಿ ಪ್ರಚಾರಕ್ಕೆ ಬಂದಿತೆಂದು **ವಸು ಹೋಮರಾಜ** ಹಾಗೂ **ಮಾಂಧಾತರಾಜ**ನ ಮಧ್ಯ ಆದ ಸಂವಾದವನ್ನು ಹೇಳಿದರು.

ಅಂಗದೇಶದ ರಾಜ ವಸುಹೋಮ ಮಹಾತಪಸ್ವಿಯೂ, ಸದಾ ಧರ್ಮಾಚಾರನೂ ಆಗಿದ್ದನು. ಆತನು ದೇವರ್ಷಿಗಣಸೇವಿತನಾದ ಮುಂಜಪುಷ್ಪವೆಂಬ ತೀರ್ಥಕ್ಷೇತ್ರಕ್ಕೆ ಹೋದನು. ಅದು **ಸುವರ್ಣಪರ್ವತ ಮೇರು**ವಿನ ಸಮೀಪದಲ್ಲಿರುವ ಹಿಮಾಲಯದ ಶಿಖರದ ಮೇಲಿದೆ. ಆ ಮುಂಜ ವಟವೃಕ್ಷದ ಬಳಿ ಪರಶುರಾಮದೇವರು ತಮ್ಮ ಜಟೆಯನ್ನು ತೆಗೆಯಲು ಆದೇಶಿಸಿದ್ದರು[೧] (**ಸುವರ್ಣಪರ್ವತದ ಮೇರುವಿನಿಂದ ಒಂದು ಪರ್ವತವನ್ನು ತಂದು ಹಿಮಾಲಯದ ಮೇಲೆ ಇರಿಸಲಾಗಿತ್ತೆಂದು ಲಕ್ಷಾಲಂಕಾರದಲ್ಲಿದೆ**).

ಲಕ್ಷಾಲಂಕಾರ : 'ಹಿಮವತ್ಪರ್ವತೇऽಪಿ ಏಕಂ ಮೇರೋಃ ಶೃಂಗಮಾನೀತಮಸ್ತೀತಿ ಭಾವೇನಾಹ ತತ್ರ ಶೃಂಗೇ ಹಿಮವತೋ ಮೇರೌ ಕನಕಪರ್ವತೇತಿ'

ಅಂದಿನಿಂದ ರುದ್ರಸೇವಿತವಾದ ಆ ದೇಶವನ್ನು ವ್ರತನಿಷ್ಠರಾದ ಮುನಿಗಳು ಮುಂಜಪೃಷ್ಠ ಎಂದು ಕರೆಯುತ್ತಿದ್ದಾರೆ.

ಅಲ್ಲಿಗೆ ಹೋದ ವಸುಹೋಮನು ವೇದೋಕ್ತಗುರುಗಳಿಂದ ಕೂಡಿದವನಾಗಿ ಬ್ರಾಹ್ಮಣರಿಗೆ ಸಮ್ಮತವಾಗಿ ದೇವರ್ಷಿ ಸದೃಶನಾದನು.

ಒಮ್ಮೆ ಇಲ್ಲಿಗೆ ಶಕ್ರನ ಸ್ನೇಹಿತನಾದ ಮಾಂಧಾತರಾಜನು ಬಂದನು. ಬಂದ ಚಕ್ರವರ್ತಿಯನ್ನು ವಸುಹೋಮನು ಸತ್ಕರಿಸಿ 'ನಿನಗೇನು ಮಾಡಲಿ' ಎಂದನು. ಅದಕ್ಕೆ ಮಾಂಧಾತನು 'ರಾಜನ್! ನೀನು ಬೃಹಸ್ಪತಿಗಳ ಹಾಗೂ ಶುಕ್ರರ ಶಾಸ್ತ್ರ (ರಾಜನೀತಿ)ಗಳನ್ನು ಅಧ್ಯಯನ ಮಾಡಿದ್ದೀಯಾ.'

ದಂಡ ಹೇಗೆ ಜಗತ್ತಿನಲ್ಲಿ ಉತ್ಪನ್ನವಾಗುತ್ತದೆ. ಅದಕ್ಕೂ ಮೊದಲು ಪ್ರಜೆಗಳ ರಕ್ಷಣೆಗೆ ಯಾವುದಿತ್ತು? ಅದರಲ್ಲಿ ಯಾವುದು ಶ್ರೇಷ್ಠ?

ದಂಡವು ಕ್ಷತ್ರಿಯರ ಕೈಗೆ ಹೇಗೆ ಬಂದಿತು? ಇದೆಲ್ಲವನ್ನು ನನಗೆ ಹೇಳು. ನಾನು ನಿನಗೆ (ಉಪದೇಶ ಮಾಡಿದ್ದರಿಂದ) ಗುರುದಕ್ಷಿಣೆ ಕೊಡುವೆನೆಂದನು[೨].

೧ ತತ್ರ ಶೃಂಗೇ ಹಿಮವತೋ ಮೇರೌ ಕನಕಪರ್ವತೇ ।
ಯತ್ರ ಮುಂಜವಟೇ ರಾಮೋ ಜಟಾಹರಣಮಾದಿಶತ್ ॥ – ೧೨೨/೩

೨ ಬೃಹಸ್ಪತೇರ್ಮತಂ ರಾಜನ್ನಧೀತಂ ಸಕಲಂ ತ್ವಯಾ ।
ತಥೈವೌಶನಸಂ ಶಾಸ್ತ್ರಂ ವಿಜ್ಞಾತಂ ತೇ ನರಾಧಿಪ ॥

ಈ ಪ್ರಶ್ನೆಗಳಿಗೆ ವಸುಹೋಮನು ಉತ್ತರಿಸಿದನು.

೧. ಲೋಕಸಂಗ್ರಹ (ಜನರೆಲ್ಲ ಧರ್ಮಾಚರಣೆ ಮಾಡಲು)ಕ್ಕೆ ಪ್ರಜೆಗಳಲ್ಲಿ ವಿನಯಗುಣದ ರಕ್ಷಣೆಗೆ, ಧರ್ಮಸ್ವರೂಪವಾದ ದಂಡದ ಉತ್ಪತ್ತಿ ಹೇಗಾಯಿತೆಂದು ಕೇಳು[೧].

ಒಮ್ಮೆ ಯಜ್ಞ ಮಾಡಬಯಸಿದ ಬ್ರಹ್ಮನು ತನಗೆ ಸದೃಶ ಋತ್ವಿಜನನ್ನು ನೋಡದೆ, ಆದಕ್ಕಾಗಿ ಅವನು ಕೆಲವು ವರ್ಷಕಾಲ ಒಂದು ಗರ್ಭವನ್ನು ತನ್ನ ಶಿರಸ್ಸಿನಲ್ಲಿ ಧರಿಸಿದ. ಒಂದು ಸಾವಿರವರ್ಷದ ತರುವಾಯ ಅವನು ಸೀನಿದಾಗ ಆ ಗರ್ಭ ಕೆಳಗೆ ಬಿತ್ತು. ಅದೇ **'ಕ್ಷುಪ'** ಎಂಬ ಪ್ರಜಾಪತಿ. ಆತನೇ ಬ್ರಹ್ಮನ ಯಜ್ಞದ ಋತ್ವಿಜನಾದ ಯಜ್ಞಾರಂಭವಾಯಿತು. ಬ್ರಹ್ಮ ಸಂತೋಷಗೊಂಡ. ಅದೇ ವೇಳೆ ಆ ದಂಡ ಮಾಯವಾಯಿತು. ಅದರ ಪರಿಣಾಮವಾಗಿ ಜಗತ್ತಿನಲ್ಲಿ ಸಾಂಕರ್ಯ, ಕಾರ್ಯಾಕಾರ್ಯ ವಿವೇಚನೆ, ಯಾವುದನ್ನು ತಿನ್ನಬೇಕು, ಯಾವುದನ್ನು ತಿನ್ನಬಾರದು, ಕುಡಿಯಬಾರದು ಎಂಬ ನಿಯಮಗಳಿಲ್ಲದೇ ಹೋಯಿತು. ಪ್ರಜೆಗಳಲ್ಲಿ ಪರಸ್ಪರ ಹಿಂಸೆ, ಚಾರಿತ್ರ್ಯಹೀನತೆ (ಸ್ತ್ರೀ, ಪುರುಷರಲ್ಲಿ), ಪರಸ್ವತ್ತಿನ ಅಪಹರಣ, ಲೂಟಿ, ದುರ್ಬಲ ಶೋಷಣೆಗಳಾರಂಭವಾಗಿ ಎಲ್ಲೂ ನಿಯಮಗಳ ನಿರ್ಬಂಧವಿಲ್ಲವಾಯಿತು.

ನಂತರ ಬ್ರಹ್ಮನು ಭಗವಂತನಾದ ವರಪ್ರದನಾದ ವಿಷ್ಣುವನ್ನು ಪೂಜಿಸಿ ಸ್ತೋತ್ರಮಾಡಿ-ದನು. ಜಗತ್ತಿನಲ್ಲಿ ಈಗ ಆಗಿರುವ ಧರ್ಮಗ್ಲಾನಿಯನ್ನು ಸಾಂಕರ್ಯವನ್ನು ಪರಿಹರಿಸಿ ಗತಿಯಾಗು ಎಂದನು[೨].

ಆಗ ಶೂಲಜಟಾಧಾರಿಯಾದ, ಜಗತ್ತಿಗೆ ಕಾರಣನಾದ ಮಹಾದೇವನು (ಶಂಕರನ, ಆತನ ಅಂತರ್ಯಾಮಿಯಾದ ಶ್ರೀಹರಿಯು) ಬ್ರಹ್ಮ ವಿಷ್ಣು ಶಂಕರ, ಇಂದ್ರ ಸಹಿತನಾಗಿ ಲೋಕಸಾಂಕರ್ಯ ನಾಶಕ್ಕಾಗಿ ತನ್ನನ್ನೇ ದಂಡರೂಪದಿಂದ ಸೃಷ್ಟಿಸಿಕೊಂಡನು[೩].

---

ತದಹಂ ಶ್ರೋತುಮಿಚ್ಛಾಮಿ ದಂಡ ಉತ್ಪದ್ಯತೇ ಕಥಮ್ ।
ಕಿಂ ವಾಪಿ ಪೂರ್ವಂ ಜಾಗರ್ತಿ ಕಿಂವಾ ಪರಮಮುಚ್ಯತೇ ॥
ಕಥಂ ಕ್ಷತ್ರಿಯಸಂಸ್ಥಶ್ಚ ದಂಡಃ ಸಂಪ್ರತ್ಯವಸ್ಥಿತಃ ।
ಬ್ರೂಹಿ ಮೇ ಸುಮಹಾಪ್ರಾಜ್ಞ ದದಾಮ್ಯಾಚಾರ್ಯವೇತನಮ್ ॥ - ೧೨೩/೧೧-೧೩

೧ ಶೃಣು ರಾಜನ್ ಯಥಾ ದಂಡಃ ಸಂಭೂತೋ ಲೋಕಸಂಗ್ರಹಃ ।
ಪ್ರಜಾವಿನಯರಕ್ಷಾರ್ಥಂ ಧರ್ಮಸ್ಯಾತ್ಮಾ ಸನಾತನಃ ॥ - ೧೨೩/೧೪

೨ ತತಃ ಪಿತಾಮಹೋ ವಿಷ್ಣುಂ ಭಗವಂತಂ ಸನಾತನಮ್ ।
ಸಂಪೂಜ್ಯ ವರದಂ ದೇವಂ ಮಹಾದೇವಮಥಾಬ್ರವೀತ್ ॥
ಸ್ವಯಂ ವಿಷ್ಣುಃ ಸದಾ ಕ್ಲೃಪ್ತೋ ಧರ್ಮಸ್ಯ ಪರಿರಕ್ಷಣೇ ।
ತ್ವಂ ಹಿ ಸರ್ವವಿಧಾನಜ್ಞಃ ಸತ್ವಾನಾಂ ತ್ವಂ ಗತಿಃ ಪುರಾ ॥ - ೧೨೩/೨೨,೨೩

೩ ಅತ್ರ ಸಾಧ್ವನುಕಂಪಾಂ ವೈ ಕರ್ತುಮರ್ಹಸಿ ಕೇವಲಮ್ ।
ಸಂಕರೋ ನ ಭವೇದತ್ರ ಯಥಾ ವೈ ತದ್ ವಿಧೀಯತಾಮ್ ॥
ತತಃ ಸ ಭಗವಾನ್ ಧ್ಯಾತ್ವಾ ಚಿರಂ ಶೂಲಜಟಾಧರಃ ।

ಆ ದಂಡದಿಂದ ಧರ್ಮಾಚರಣೆಯ ನೀತಿಸ್ವರೂಪಭೂತಳಾದ **ದಂಡನೀತಿಯು (ಸರಸ್ವತೀ)** ಹುಟ್ಟಿತು (ದಳು). ಅದು ಮೂರೂ ಲೋಕದಲ್ಲಿ ಪ್ರಸಿದ್ಧವಾಯಿತು.

ಅಪರಾಧಗಳಲ್ಲಿ ದಂಡವನ್ನು ಕೊಡಿಸುವುದರಿಂದ ಅದು ದಂಡನೀತಿಯೆಂದು ಹೆಸರಾಯಿತು. ನಂತರ ಶೂಲಧರನೂ, ಮಹೇಶ್ವರನೂ, ಮಹಾದೇವನೂ ಬಹುಕಾಲ ಚಿಂತಿಸಿ ಸರ್ವಶಾಸ್ತ್ರಗಳನ್ನು (ದಂಡನೀತಿ ಬಗ್ಗೆ) ರಚಿಸಿದನು. ದಂಡನೀತಿಯ ಪ್ರಯೋಗಕ್ಕಾಗಿ ನಾಲ್ಕು ವೇದಗಳು, ಆರು ವೇದಾಂಗಗಳು, ಮೀಮಾಂಸಾ, ನ್ಯಾಯಶಾಸ್ತ್ರ ಪುರಾಣಗಳು, ಧರ್ಮಶಾಸ್ತ್ರ ೧೪ ವಿದ್ಯೆಗಳನ್ನು, ಆಯುರ್ವೇದ, ಧನುರ್ವೇದ, ಗಾಂಧರ್ವವೇದ, ನಾಲ್ಕನೆಯದಾದ ಅರ್ಥಶಾಸ್ತ್ರ ಹೀಗೆ ಒಟ್ಟಾರೆ ೧೮ ಶಾಸ್ತ್ರಗಳನ್ನು ರಚಿಸಿದನು[1].

ಇವೇ ಧರ್ಮಸಂಹಿತೆಗಳೆಂದು ಪ್ರಸಿದ್ಧವಾದ **೧೮ ವಿದ್ಯೆಗಳು**. ಈ ವಿದ್ಯೆಗಳ ವಿಸ್ತಾರವನ್ನೇ (ವ್ಯಾಸಂ) ಮಹೇಶ್ವರನಾದ ವಿಷ್ಣುವು ಹೇಳಿದನು.

ಇಲ್ಲಿ 'ವ್ಯಾಸಮಾಹ ಮಹೇಶ್ವರಃ ಇತ್ಯತ್ರ ವ್ಯಾಸಂ ವಿಸ್ತಾರಮ್ । ರುದ್ರಾಣಾಮಪಿ ಚೇಶಾನಂ ಗೋಪ್ತಾರಂ ವಿದಧೇ ಪ್ರಭುಃ । ಮಹಾತ್ಮಾನಂ ಮಹಾದೇವಂ ವಿಶಾಲಾಕ್ಷಂ ಸನಾತನಮ್ ॥ ಇತಿ ವಚನಾತ್ ಶಿವಸ್ಯ ಶಿವಸ್ರಷ್ಟೃತ್ವಾಯೋಗೇನ ಉಕ್ತವ್ಯುತ್ಪತ್ತ್ಯಾ ಶೂಲವರಾಯುಧಃ ಶಿವಾಂತರ್ಯಾಮಿ ವಿಷ್ಣುರೇವೇತಿ ಜ್ಞೇಯಮ್ ॥ **ಎಂದು ಲಕ್ಷಾಲಂಕಾರದಲ್ಲಿ ಮಹೇಶ್ವರ ಶಬ್ದವಾಚ್ಯತ್ವವನ್ನು ಮುಂದಿನ ವಾಕ್ಯಗಳ ವಿರೋಧ ತೋರಿಸಿ ವಿಷ್ಣುವಿಗೆ ಪ್ರತಿಪಾದಿಸಲಾಗಿದೆ.** ಆದ್ದರಿಂದ ಈ ಭಾಗವು **ಮಿಶ್ರಸ್ತುತಿ**ಯಂತಿದೆ. ಅಂತರ್ಯಾಮಿ ವಿವಕ್ಷೆಯಿಂದ ಅರ್ಥ ಮಾಡುವುದು ಶಾಸ್ತ್ರೀಯ ಚಿಂತನೆಯಾಗುತ್ತದೆ. ಈ ಬಗ್ಗೆ ವಿಶೇಷ ಅಧ್ಯಯನ ಮಾಡಿಯೇ ತಿಳಿಯಲು ಕೋರಿದೆ.

---

ದೇವದೇವೋ ಮಹಾದೇವಃ ಕಾರಣಂ ಜಗತಃ ಪರಮ್ ॥
ಬ್ರಹ್ಮವಿಷ್ಣ್ವಿಂದ್ರಸಹಿತಃ ಸರ್ವೈಶ್ಚ ಸ ಸುರಾಸುರೈಃ ।
ಲೋಕಸಂಧಾರಣಾರ್ಥಂ ಚ ಲೋಕಸಂಕರನಾಶನಮ್ ॥
ಆತ್ಮಾನಮಾತ್ಮನಾ ದಂಡಮಸೃಜತ್ ದೇವಸತ್ತಮಃ ॥ – ೧೨೩/೨೪-೨೬

೧ ದಂಡನೀತೇಃ ಪ್ರಯೋಗಾರ್ಥಂ ಪ್ರಮಾಣಾನಿ ಚ ಸರ್ವಶಃ ।
ವಿದ್ಯಾಶ್ಚತಸ್ರಃ...............
ಅಂಗಾನಿ ವೇದಾಶ್ಚತ್ವಾರೋ ಮೀಮಾಂಸಾ ನ್ಯಾಯವಿಸ್ತರಃ ।
ಪುರಾಣಂ ಧರ್ಮಶಾಸ್ತ್ರಂ ಚ ವಿದ್ಯಾ ಹ್ಯೇತಾಶ್ಚತುರ್ದಶ ॥
ಆಯುರ್ವೇದೋ ಧನುರ್ವೇದೋ ಗಾಂಧರ್ವಶ್ಚೇತಿ ತೇ ತ್ರಯಃ ।
ಅರ್ಥಶಾಸ್ತ್ರಂ ಚತುರ್ಥಂ ತು ವಿದ್ಯಾ ಹ್ಯಷ್ಟಾದಶೈವ ತು ॥
ದಶ ಚಾಷ್ಟೌ ಚ ವಿಖ್ಯಾತಾ ಏತಾ ಧರ್ಮಸ್ಯ ಸಂಹಿತಾಃ ।
ಏತಾಸಾಮೇವ ವಿದ್ಯಾನಾಂ ವ್ಯಾಸಮಾಹ ಮಹೇಶ್ವರಃ ॥ – ೧೨೩/೩೦-೩೩

ದಂಡನೀತಿಯ ಬಗ್ಗೆ ತಿಳಿಸುತ್ತಾ ಮಧ್ಯದಲ್ಲಿ ವೇದಗಳ ಬಗ್ಗೆ, ಅವುಗಳ ಶಾಖೋಪಶಾಖೆಗಳ ಬಗ್ಗೆ, ಅವುಗಳನ್ನು ತಿಳಿದವರು, ವೇದಪಾರಗರೆಂದೂ, ಅವರು ರುದ್ರ, ವಿಷ್ಣು, ಬ್ರಹ್ಮ ಮೊದಲಾದವರೆಂದು ಸ್ವಲ್ಪ ಬೇರೆ ವಿಷಯಗಳನ್ನೇ ಹೇಳುತ್ತಾರೆ ಎನಿಸುತ್ತದೆ. ಇದೂ ಕೂಡಾ ಮಹಾಭಾರತದಲ್ಲಿ ಕಾಣಬರುವ ವ್ಯತ್ಯಾಸಗಳಲ್ಲಿ ಒಂದೆಂದು ತೋರುತ್ತದೆ (ಗೋಮೂತ್ರೀ). ಭೀಷ್ಮರು ತಾವು ಕೂಡಾ ತಮ್ಮನ್ನು ಮಾಧವ, ಶಂಕರ ಹಾಗೂ ಬ್ರಹ್ಮದೇವರ ಅನುಗ್ರಹದಿಂದ 'ವೇದಪಾರಗ'ರೆಂದು ಹೇಳಿಕೊಳ್ಳುತ್ತಾರೆ.

ಹೀಗೆ ದಂಡನೀತಿಯ ಜೊತೆಗೆ ಶಾಸ್ತ್ರಗ್ರಂಥಗಳ ಬಗ್ಗೆ ಶ್ಲೋಕ ೨೯ರಿಂದ ೫೦ರವರೆಗೆ ಸುಮಾರು ೨೦ ಶ್ಲೋಕಗಳು ಶಾಸ್ತ್ರದ ಆಕರಗ್ರಂಥಗಳನ್ನು ನೋಡುವ ಒಂದು ವಿಭಿನ್ನ ದೃಷ್ಟಿಕೋಣ ಇಲ್ಲಿದೆ (ದಂಡನೀತಿಯನ್ನು ಆಧರಿಸಿ ಹಾಗೂ ಇತರ ದೃಷ್ಟಿಯಿಂದ). ನಂತರ ಶೂಲವರಾಯುಧನಾದ ವಿಷ್ಣುವು ದಂಡಾಧಿಪತಿಗಳನ್ನಾಗಿ ದೇವತೆಗಳ ವಿವಿಧ ಗುಂಪುಗಳಲ್ಲಿ ನಿಯೋಜಿಸಿದನು. ಇಲ್ಲೂ ಶೂಲವರಾಯುಧ ಶಬ್ದವು ವಿಷ್ಣುವಾಚಕವೆಂದೇ ಲಕ್ಷಾಲಂಕಾರ ಪ್ರತಿಪಾದಿಸುತ್ತದೆ(ತತ್ತ್ವಸಂಶೋಧನಪರಿಷತ್, ಭಾರತ, ಶಾಂತಿಪರ್ವ, ರಾಜಧರ್ಮಪರ್ವ- ಅ. ೧೨೩./೫೧, ಪು. ೬೩೮). ಅದನ್ನು ಹೀಗೆ ನೋಡಬಹುದು.

| ಕ್ರ.ಸಂ. | ಯಾರಿಗೆ | ಯಾರು ಒಡೆಯರು |
|---|---|---|
| ೧ | ದೇವತೆ | ಇಂದ್ರ |
| ೨ | ಪಿತೃ | ಯಮ |
| ೩ | ಕೋಶಗಳು, ರಾಕ್ಷಸರು | ಕುಬೇರ |
| ೪ | ಪರ್ವತಗಳು | ಮೇರು |
| ೫ | ಜಲಾಶಯ | ಸಮುದ್ರ |
| ೬ | ಜಲಸಾಮ್ರಾಜ್ಯ | ವರುಣ |
| ೭ | ಪ್ರಾಣಗಳು | ಮೃತ್ಯು |
| ೮ | ತೇಜಸ್ಸು | ಅಗ್ನಿ |
| ೯ | ರುದ್ರರು | ಮಹಾದೇವ |
| ೧೦ | ವಿಪ್ರರು | ವಸಿಷ್ಠ |
| ೧೧ | ವಸುಗಳು | ಅಗ್ನಿ |
| ೧೨ | ತೇಜಸ್ಸು | ಭಾಸ್ಕರ |
| ೧೩ | ನಕ್ಷತ್ರಗಳು | ಚಂದ್ರ |
| ೧೪ | ವೃಕ್ಷ, ಭೂತಗಳು | ಚಂದ್ರ |
| ೧೫ | ಸೇನಾಪತಿ | ಕುಮಾರ |
| ೧೬ | ಸರ್ವಪ್ರಭು ಸಂಹಾರನಿಯಾಮಕ ನಾಲ್ಕು ವಿಧ ಮೃತ್ಯು | ಕಾಲ |

| | | |
|---|---|---|
| ೧೭ | ರುದ್ರರು | ಶೂಲಪಾಣಿ |
| ೧೮ | ರಾಜರಾಜ- ದೇವದೇವ | ಕುಬೇರ |
| ೧೯ | ದಂಡನೀತಿ | ಕ್ಷುಪ(ಶಂಕರ) |
| ೨೦ | ದಂಡ | ವಿಷ್ಣು |

## ದಂಡದ ಪರಂಪರೆ

ದಂಡ (ವಿಷ್ಣು – ಶಿವ – ವಿಷ್ಣು – ಅಂಗಿರಸ – ಇಂದ್ರ, ಮರೀಚಿ – ಭೃಗುಋಷಿಗಳು – ಲೋಕಪಾಲರು – ಕ್ಷುಪ – ಶಾದ್ಧದೇವ – ಮನು ತನ್ನ ಪುತ್ರರಿಗೆ – ಪ್ರಯೋಗ)

## ದಂಡ ನಿಯಮಗಳು

೧. ವಿಭಾಗ ಮಾಡಿ ಧರ್ಮದಿಂದ ಪ್ರಯೋಗಿಸಬೇಕು. ಮನಸ್ಸಿಗೆ ಬಂದಂತೆ ಪ್ರಯೋಗಿಸಬಾರದು. ದುಷ್ಟರನ್ನು ಬಲಪ್ರಯೋಗ ಮಾಡಿಯೇ ಬಂಧಿಸಬೇಕು. ಮನಸ್ಸಿಗೆ ಬಂದಂತೆ ಪ್ರಯೋಗಿಸಬಾರದು.

**ದುಷ್ಟಾನಾಂ ನಿಗ್ರಹೋ ದಂಡೋ ಹಿರಣ್ಯಂ ಬಾಹ್ಯತಃ ಕ್ರಿಯಾ ॥ - ೧೨೩/೬೭**

೨. ಅಲ್ಪಾಪರಾಧಕ್ಕಾಗಿ ಅಂಗಹೀನತೆ ಅಥವಾ ವಧೆ ಮಾಡಬಾರದು. ಈ ದಂಡವು ಅನುಕ್ರಮವಾಗಿ ಪ್ರಜೆಗಳನ್ನು ಪಾಲಿಸುತ್ತಾ ಎಚ್ಚರದಿಂದಿದೆ. ದಂಡಾಧಿಕಾರಿ ದೇವತೆಗಳೆಲ್ಲ ಜಾಗರೂಕರಾಗಿದ್ದಾರೆ.

ಹೀಗೆ ದಂಡವು ಆದಿಮಧ್ಯಾಂತಗಳಲ್ಲಿ ವಿಖ್ಯಾತವಾಗಿದೆ. ಧರ್ಮಜ್ಞಾನಿಯಾದ ರಾಜನು ಈ ದಂಡವನ್ನು ನ್ಯಾಯಾನುಗುಣವಾಗಿ ಪ್ರಯೋಗಿಸಬೇಕು[೧].

ಹೀಗೆ ವಸುಹೋಮನ ಅಭಿಪ್ರಾಯವನ್ನು ಯಾವಮನುಷ್ಯನೇ ಆಗಲೀ ಕೇಳಿ ಅದರಂತೆ ನಡೆಯುತ್ತಾನೋ, ಅವನು ಎಲ್ಲ ಅಭೀಷ್ಟಗಳನ್ನು ಹೊಂದುತ್ತಾನೆ.

ಎಲೈ ಧರ್ಮರಾಜನೇ! ನಿನಗೆ ಧರ್ಮವ್ಯಾಪ್ತನಾದ ಸರ್ವಲೋಕವನ್ನು ನಿಯಂತ್ರಿಸುವ ದಂಡ(ನೀತಿ)ಯನ್ನು ಹೇಳಿದ್ದೇನೆ ಎಂದು ಭೀಷ್ಮರು ಉಪಸಂಹಾರ ಮಾಡಿದರು.

## ಸಂದೇಶಗಳು

ಸ್ಪಷ್ಟವಾಗಿಯೇ ಇವೆ.

*****

---

೧ ಇತ್ಯೇಷ ದಂಡೋ ವಿಖ್ಯಾತ ಆದೌ ಮಧ್ಯೇ ತಥಾವರೇ ।
ಭೂಮಿಪಾಲೋ ಯಥಾನ್ಯಾಯಂ ವರ್ತೇತಾನೇನ ಧರ್ಮವಿತ್ ॥ - ೧೨೩/೮೦

# ೧೭೭. ಕಾಮಂದಕೋಪಾಖ್ಯಾನ

ಧರ್ಮರಾಜನ ಪ್ರಶ್ನೆ – ಧರ್ಮ, ಅರ್ಥ, ಕಾಮಗಳ ನಿರ್ಣಯವೇನು? ಇವುಗಳಲ್ಲಿಯೇ (ಇವನ್ನೇ) ಲೋಕಯಾತ್ರೆಯು (ನಿತ್ಯಜೀವನ) ಅವಲಂಬಿಸಿದೆ. ಧರ್ಮಾರ್ಥಕಾಮಗಳಿಗೆ ಮೂಲ ನೆಲೆ ಯಾವುದು? ಈ ಮೂರೂ ಹೇಗೆ ಹುಟ್ಟುತ್ತವೆ? (ಈ ಮೂವರ ಜನಕ ಯಾರು?) ಅವುಗಳು ಅನ್ಯೋನ್ಯವಾಗಿಯೂ ಹಾಗೂ ಕೆಲವೇಳೆ ಬೇರೆಬೇರೆಯಾಗಿಯೂ ಇರುತ್ತವೆ ಏಕೆ? ಈ ಪ್ರಶ್ನೆಗಳಿಗೆ ಭೀಷ್ಮರು ಹೀಗೆ ಉತ್ತರಿಸಿ, ಅದನ್ನು **ಕಾಮಂದಕ ಋಷಿ** ಹಾಗೂ **ಅರಿಷ್ಟ**ನೆಂಬ ರಾಜರ ಸಂವಾದವನ್ನು ಉದಾಹರಿಸಿದರು.

ಜಗತ್ತಿನಲ್ಲಿ ಜನರು ಯಾವಾಗ ಶುದ್ಧಮನಸ್ಸಿನಿಂದ ಕೂಡಿದವರಾಗಿ ಧರ್ಮಾರ್ಥಗಳನ್ನು ಬಯಸಿದಾಗ ಈ ಮೂರೂ (ಧರ್ಮಾರ್ಥಕಾಮಗಳು) ಕಾಲದಿಂದ ಉತ್ಪತ್ತಿ, ನಾಶಗಳನ್ನು ಹೊಂದುವ ಪ್ರಜೆಗಳಲ್ಲಿ ಸೇರಿಕೊಂಡಿರುತ್ತವೆ. ಜೀವರ ಈ ದೇಹವು ಪೂರ್ವಜನ್ಮಕೃತ ಧರ್ಮಾನುಸಾರಿಯಾಗಿರುತ್ತದೆ. ಮುಂದೆ ಮಾಡುವ ಧರ್ಮಕ್ಕೆ ಕಾರಣವೂ ಆಗುತ್ತದೆ. ಅರ್ಥ ಎಂದು ಹೇಳಲ್ಪಡುವ ಫಲವು ಕಾಮಕ್ಕೆ ಮೂಲ ಧರ್ಮಾರ್ಥಕಾಮಗಳಾದರೋ, ಸಂಕಲ್ಪ ಮೂಲವಾಗಿದ್ದು ಸಂಕಲ್ಪವು ವಿಷಯಸ್ವರೂಪವೇ ಆಗಿವೆ. ವಿಷಯಗಳೆಲ್ಲ ಪೂರ್ತಿಯಾಗಿ ಭೋಗಕ್ಕೋಸ್ಕರ ಇವೆ. **ವಿಷಯಭೋಗವು ಧರ್ಮಾರ್ಥಕಾಮರೂಪ ತ್ರಿವರ್ಗಮೂಲವಾದುದು. ಇಂತಹ ಭೋಗಗಳ ನಿವೃತ್ತಿಯೇ ಮೋಕ್ಷವೆಂದು ಕರೆಯಲ್ಪಡುತ್ತದೆ.**

ಶರೀರರಕ್ಷಣೆಯು ಧರ್ಮ, ಧರ್ಮಕ್ಕಾಗಿ ಅರ್ಥ ಬೇಕು. ಕಾಮವು ಸುಖರೂಪ ಫಲಪ್ರದವಾಗಿದೆ. ಇವೆಲ್ಲ ರಜೋಗುಣವಿಕಾರಗಳೇ. ಇವು ಪರಸ್ಪರ ಸೇರಿದಾಗ ಆಚರಿಸಬೇಕು. ಮನಸ್ಸಿನಿಂದ ತ್ಯಜಿಸಬಾರದು[1].

ಮನುಷ್ಯನು ತ್ರಿವರ್ಗದಿಂದ ಯಾವ ಫಲಗಳನ್ನು ಪಡೆಯುತ್ತಾನೋ ಅವನ್ನು ಶ್ರೇಷ್ಠಬುದ್ಧಿಯುಳ್ಳವನು (ಸರ್ವೋತ್ತಮನಾದ ಭಗವಂತನಲ್ಲಿ ಬುದ್ಧಿಯುಳ್ಳವನು). ತಪಸ್ಸಿನಿಂದ ವಿಷಯವಿರಕ್ತನಾದಾಗ ಒಂದೇ ಕ್ಷಣದಲ್ಲಿ ಹೊಂದುತ್ತಾನೆ[2].

---

೧ ಧರ್ಮಮೂಲಸ್ತು ದೇಹೋಽರ್ಥಃ ಕಾಮೋಽರ್ಥಫಲಮುಚ್ಯತೇ ।
ಸಂಕಲ್ಪಮೂಲಾಸ್ತೇ ಸರ್ವೇ ಸಂಕಲ್ಪೋ ವಿಷಯಾತ್ಮಕಃ ॥
ವಿಷಯಾಶ್ಚೈವ ಕಾರ್ತ್ಸ್ನ್ಯೇನ ಸರ್ವ ಆಹಾರಸಿದ್ಧಯೇ ।
ಮೂಲಮೇತತ್ ತ್ರಿವರ್ಗಸ್ಯ ನಿವೃತ್ತಿರ್ಮೋಕ್ಷ ಉಚ್ಯತೇ ॥
ಧರ್ಮಃ ಶರೀರಸಂಗುಪ್ತಿರ್ಧರ್ಮಾರ್ಥಂ ಚಾರ್ಥ ಇಷ್ಯತೇ ।
ಕಾಮೋ ರತಿಫಲಶ್ಚಾತ್ರ ಸರ್ವ ಏತೇ ರಜಸ್ವಲಾಃ ।
ಸನ್ನಿಕೃಷ್ಟಾಂಶ್ಚರೇದೇನಾನ್ ನ ಚೈನಾನ್ ಮನಸಾ ತ್ಯಜೇತ್ ॥ – ೧೨೪/೪-೬

೨ ವಿಯುಕ್ತಸ್ತಪಸಾ ಸರ್ವಾನ್ ಧರ್ಮಾದೀನ್ ಕಾಮನೈಷ್ಠಿಕಾನ್ ।
ಶ್ರೇಷ್ಠಬುದ್ಧಿಸ್ತ್ರಿವರ್ಗಸ್ಯ ಯದಯಂ ಪ್ರಾಪ್ನುಯಾತ್ ಕ್ಷಣಾತ್ ॥ – ೧೨೪/೭

ಅರ್ಥಕ್ಕೋಸ್ಕರ ಬೇರೊಂದು (ಧರ್ಮ) ಇದೆ ಎಂದು ಕೆಲವರೂ, ಅದಕ್ಕೆ ವಿರುದ್ಧವಾಗಿ ಮತ್ತೊಂದು (ಪ್ರಯತ್ನ) ಎಂದು ಕೆಲವರೂ ಹೇಳುತ್ತಾರೆ. ಅರ್ಥಕ್ಕಾಗಿ ಧರ್ಮಾಚರಣೆ ಬೇಕಾಗಿಲ್ಲ, ಕೃಷಿ ಮೊದಲಾದ ವೃತ್ತಿಯಿಂದಲೂ, ದೈಹಿಕ ಅಥವಾ ಅದೃಷ್ಟವಶಾತ್ ಕೂಡಾ ಸಿಗಬಹುದು. ಅನರ್ಥಪ್ರಯೋಜನವುಳ್ಳ (ಕೆಟ್ಟ ಪ್ರಯೋಜನ) ಹಣಸಂಪಾದನೆ ಮಾಡಿದರೆ ಅದು ಪ್ರಥಮ ಪುರುಷಾರ್ಥವಾದ ಧರ್ಮವನ್ನೇ ಬಿಟ್ಟು ಲೌಕಿಕ ಅರ್ಥ, ಕಾಮಗಳಿಗಾಗಿ ಬಳಕೆಯಾಗುತ್ತದೆ (ವ ಅಪಾಯವಿರುತ್ತದೆ).

ಧರ್ಮದ ಮೂಲವು ಅನಾದರ(ಫಲಾಪೇಕ್ಷೆ). ಅರ್ಥದ ಮೂಲ ಅದನ್ನು ಕೂಡಿಡುವುದು (ದಾನಾದಿಗಳಿಗೆ ವೆಚ್ಚ ಮಾಡದೆ). ಕಾಮದ ಮೂಲ ಅತಿ ವಿಷಯಾಸಕ್ತಿ. ಇವೆಲ್ಲವನ್ನು ಬಿಟ್ಟು ಫಲಾಪೇಕ್ಷೆಯಿಲ್ಲದೆ ಇವನ್ನು ಮಾಡಿದರೆ ಇವೇ ಕಲ್ಯಾಣಕಾರಕವಾಗುತ್ತವೆ. ಇವೆಲ್ಲವೂ ಮನಸ್ಸಹಿತವಾದುದರಿಂದ ತಮ್ಮ ಗುಣಗಳಿಂದ ರಹಿತವಾದವುಗಳು (ಈ ಶ್ಲೋಕದ ಅನುವಾದಗಳು ಬೇರೆ ಬೇರೆ ಕಡೆ ಬೇರೆ ಇವೆ).

ಈ ವಿಷಯದಲ್ಲಿ ಅರಿಷ್ಟರಾಜ ಹಾಗೂ ಕಾಮಂದಕ ಋಷಿಗಳ ಮಧ್ಯೆ ನಡೆದ ಸಂವಾದರೂಪ ಇತಿಹಾಸ ಹೀಗಿದೆ (ಎಂದು ಭೀಷ್ಮರು ಹೇಳಿದರು – ಶ್ಲೋಕ ೩ ರಿಂದ ೧೦ರವರೆಗೆ ಭೀಷ್ಮರ ಅಭಿಪ್ರಾಯಗಳು ಎಂದು ತಿಳಿಯಬೇಕು).

ಅರಿಷ್ಟರಾಜನು ಕಾಮಂದ ಋಷಿಯನ್ನು ನಮಿಸಿ ಪ್ರಶ್ನಿಸುತ್ತಾನೆ.

೧. ಕಾಮ, ಮೋಹಗಳ ವಶನಾದ ರಾಜನು ಪಾಪ ಮಾಡಿ ಪಶ್ಚಾತ್ತಾಪ ಪಡುತ್ತಾನೋ, ಆ ಕ್ಷಣದಲ್ಲಿ ಮಾಡಿದ ಪಾಪಗಳಿಗೆ ಪರಿಹಾರವೇನು?

೨. ಯಾರು ಅಜ್ಞಾನದಿಂದ ಅಧರ್ಮವನ್ನೇ ಧರ್ಮವೆಂದು ಭಾವಿಸಿ (ಕರ್ಮಾಚರಣೆ) ಮಾಡುತ್ತಾನೋ ಅಂತಹ ಲೋಕದಲ್ಲಿ ಪ್ರಸಿದ್ಧನಾದ ಮನುಷ್ಯನನ್ನು ರಾಜನು ಹೇಗೆ ಅಧರ್ಮಾಚರಣೆಯಿಂದ ನಿವೃತ್ತಗೊಳಿಸಬೇಕು[೧].

ರಾಜನ ಪ್ರಶ್ನೆಗೆ ಕಾಮಂದ ಋಷಿಗಳು ಹೀಗೆ ಉತ್ತರಿಸುತ್ತಾರೆ.

ಯಾರು ಧರ್ಮಾರ್ಥಗಳನ್ನು ತ್ಯಾಗಮಾಡಿ ಕಾಮವನ್ನೇ (ದುಷ್ಚೇಷ್ಟೆ ಹೊಂದಲು) ಅನುಸರಿಸುತ್ತಾನೋ ಅವನ ಪ್ರಜ್ಞಾನಾಶವಾಗುತ್ತದೆ. ಈ ಮೋಹವು (ಮಿಥ್ಯಾಜ್ಞಾನವು) ಪ್ರಜ್ಞಾನಾಶಕವಾಗಿ ಧರ್ಮಾರ್ಥನಾಶ ಮಾಡುತ್ತದೆ. ಅದರಿಂದ ನಾಸ್ತಿಕ್ಯ ಹಾಗೂ ದುರಾಚಾರವುಂಟಾಗುತ್ತದೆ (ದೇವರು, ಧರ್ಮಾದಿ ಅತೀಂದ್ರಿಯ ಪದಾರ್ಥಗಳನ್ನು ಒಪ್ಪದ ಬುದ್ಧಿಯುಳ್ಳವನಾಗಿ ಧರ್ಮವಿರುದ್ಧ ಆಚಾರವುಳ್ಳವನಾಗುತ್ತಾನೆ). ದುರಾಚಾರಿಗಳನ್ನು ನಿಯಂತ್ರಿಸದ ರಾಜನಿಗೆ ಪ್ರಜೆಗಳು ಹೆದರುತ್ತಾರೆ (ತಮ್ಮ ಮನೆಯನ್ನು ಸರ್ಪ ಹೊಕ್ಕಾಗ

---

೧ ಅಧರ್ಮಂ ಧರ್ಮ ಇತಿ ಹ ಯೋಽಜ್ಞಾನಾದಾಚರೇದಿಹ।
ತಂ ಚಾಪಿ ಪ್ರಥಿತಂ ಲೋಕೇ ಕಥಂ ರಾಜಾ ನಿವರ್ತಯೇತ್ ॥
ಯಃ ಪಾಪಂ ಕುರುತೇ ರಾಜಾ ಕಾಮಮೋಹಬಲಾತ್ಕೃತಃ।
ಪ್ರತ್ಯಾಸನ್ನಸ್ಯ ತಸ್ಯರ್ಷೇ ಕಿಂ ಸ್ಯಾತ್ ಪಾಪಪ್ರಣಾಶನಮ್ ॥ – ೧೨೪/೧೪,೧೩

ಹೇಗೋ ಹಾಗೆ). ಅಂತಹ ರಾಜನನ್ನು ಪ್ರಜೆಗಳಾಗಲೀ, ಸಜ್ಜನರಾಗಲೀ, ಮೆಚ್ಚುವುದಿಲ್ಲ, ಅವನೊಬ್ಬ ಜೀವಂತ ಶವದಂತಾಗಿ ಬೇಗನೇ ಮರಣ ಹೊಂದುತ್ತಾನೆ[೧].

ಹೀಗೆ ಪಾಪ ಘಟಿಸಿದಾಗ ಅದರ ನಾಶಕ್ಕಾಗಿ ಸೂಚಿಸುವ ಪರಿಹಾರಗಳು ಹೀಗಿವೆ.

೧. ವೇದವಿದ್ಯೆಯನ್ನು ಆಶ್ರಯಿಸಬೇಕು. ಬ್ರಾಹ್ಮಣರ ಸತ್ಕಾರ ಮಾಡಬೇಕು.

೨. ಧರ್ಮದಲ್ಲಿ ಪೂರ್ಣಮನಸ್ಸುಳ್ಳವನಾಗಿ, ಉತ್ತಮವಂಶದ ಕನ್ಯೆಯನ್ನು ವಿವಾಹವಾಗಬೇಕು. ಕ್ಷಮಾಶೀಲರಾದ, ಜಿತೇಂದ್ರಿಯರಾದ ಬ್ರಾಹ್ಮಣರ ಸೇವೆ ಮಾಡಬೇಕು.

೩. ನೀರಿನಲ್ಲಿ ನಿಂತು ಜಪ (ಗಾಯತ್ರ್ಯಾದಿ) ಮಾಡಬೇಕು. ಪ್ರಸನ್ನಮುಖನಾಗಿದ್ದು ದುಷ್ಕಾರ್ಯ ಮಾಡದೆ, ದುಷ್ಟರನ್ನು ದೂರವಿಟ್ಟು ಧರ್ಮಿಷ್ಠರೊಡನೆ ಇರಬೇಕು.

೪. ಮಧುರವಚನಗಳಿಂದ (ಸಂತೋಷವಾಗುವ) ಕಾರ್ಯಗಳಿಂದ ಹಿರಿಯರನ್ನು ತೃಪ್ತಿಪಡಿಸುತ್ತಾ, ಬೇರೆಯವರ ಗುಣಗಳನ್ನು ಪ್ರಶಂಸೆ ಮಾಡುತ್ತಾ, ನಾನು ಹೀಗಿದ್ದೇನೆ (ನಾನು ಇಂತಹ ದೋಷಗಳನ್ನು, ಪಾಪಗಳನ್ನು ಮಾಡಿದ್ದೇನೆಂದು) ಹೇಳಿಕೊಳ್ಳಬೇಕು.

೫. ಮತ್ತೆ ಪಾಪ ಮಾಡದೆ (ಹಿಂದೆ ಮಾಡಿದಂತೆ ಅಥವಾ ಹೊಸ) ಹೀಗಿರುವ ಆಚಾರವಂತನು ಸಜ್ಜನರಿಗೆ ಬೇಕಾದವನಾಗುತ್ತಾನೆ. ಮಾಡಿದ ಎಲ್ಲ ಪಾಪಗಳೂ ನಾಶವಾಗುವುದರಲ್ಲಿ ಸಂಶಯವಿಲ್ಲ.

೬. ಎಲೈ ಅರಿಷ್ಟರಾಜನೇ! ಗುರುಗಳು ಯಾವ ಶ್ರೇಷ್ಠ ಧರ್ಮವನ್ನು ಹೇಳುತ್ತಾರೋ, ಹಾಗೆಯೇ ಮಾಡು. ಗುರುಗಳ ಅನುಗ್ರಹದಿಂದಲೇ ಉತ್ತಮವಾದ ಶ್ರೇಯಸ್ಸನ್ನು ಹೊಂದುವೆ (ಮೋಕ್ಷಸಾಧನವನ್ನು ಮಾಡುವೆ).

ಹೀಗೆ ಅರಿಷ್ಟರಾಜನಿಗೆ ಕಾಮಂದಕ ಮುನಿಗಳು ಉಪದೇಶಿಸಿದರೆಂದು ಭೀಷ್ಮರು ಧರ್ಮರಾಜನಿಗೆ ಹೇಳಿದರು.

## ಸಂದೇಶಗಳು

ಸ್ಪಷ್ಟವಾಗಿವೆ.

*****

---

೧ ಯೋ ಧರ್ಮಾರ್ಥೌ ಸಮುತ್ಸೃಜ್ಯ ಕಾಮಮೇವಾನುವರ್ತತೇ।
ಸ ಧರ್ಮಾರ್ಥಪರಿತ್ಯಾಗಾತ್ ಪ್ರಜ್ಞಾನಾಶಮಿಹಾರ್ಚ್ಛತಿ॥
ಪ್ರಜ್ಞಾಪ್ರಣಾಶಕೋ ಮೋಹಸ್ತಥಾ ಧರ್ಮಾರ್ಥನಾಶಕಃ।
ತಸ್ಮಾನ್ನಾಸ್ತಿಕತಾ ಚೈವ ದುರಾಚಾರಶ್ಚ ಜಾಯತೇ॥
ದುರಾಚಾರಾನ್ ಯದಾ ರಾಜಾ ಪ್ರದುಷ್ಟಾನ್ನ ನಿಯಚ್ಛತಿ।
ತಸ್ಮಾದುದ್ವಿಜತೇ ಲೋಕಃ ಸರ್ಪಾದ್ ವೇಶ್ಮಗತಾದಿವ॥
ತಂ ಪ್ರಜಾ ನಾನುವರ್ತಂತೇ ಬ್ರಾಹ್ಮಣಾ ನ ಚ ಸಾಧವಃ।
ತತಃ ಸಂಕ್ಷಯಮಾಪ್ನೋತಿ ತಥಾಽಪಧ್ವಸ್ತ ಏವ ಚ॥ – ೧೨೪/೧೫-೧೮

# ಶಾಂತಿಪರ್ವ

# ಆಪದ್ಧರ್ಮಪರ್ವ

## ೧೭೮. ಶತ್ರುಂತಪರಾಜ-ಭರದ್ವಾಜರ ಸಂವಾದ

ಧರ್ಮರಾಜನು ಭೀಷ್ಮರನ್ನು ಪ್ರಶ್ನಿಸುತ್ತಾನೆ.

ಯುಗ ಮುಗಿಯುತ್ತಿರಲು (ಕೃತ, ತ್ರೇತಾ, ದ್ವಾಪರ) ಅದಕ್ಕನುಸಾರವಾಗಿ ಧರ್ಮವೂ ಗ್ಲಾನಿ ಹೊಂದುತ್ತದೆ. ಆಗ ಲೋಕವೆಲ್ಲ ಕಳ್ಳಕಾಕರಿಂದ, ಪೀಡೆಗೆ ಒಳಗಾಗುತ್ತಾರೆ. ಅಂತಹ ಸಂದರ್ಭದಲ್ಲಿ(ರಾಜನು) ಅವರನ್ನು ಹೇಗೆ ಎದುರಿಸಬೇಕು?

ಅದಕ್ಕೆ ಭೀಷ್ಮರು ಇದೊಂದು ಆಪತ್ಕಾಲ. ಆಗ ಅನುಸರಿಸಬೇಕಾದ ನೀತಿಯನ್ನು ಹೇಳುತ್ತೇನೆ. ದಯೆಯನ್ನು ಬಿಟ್ಟು ಹೇಗೆ ಇರಬೇಕೆಂಬ ಬಗ್ಗೆ ಶತ್ರುಂತಪ ಹಾಗೂ ಭರದ್ವಾಜರ ನಡುವೆ ನಡೆದ ಸಂವಾದರೂಪ ಇತಿಹಾಸವನ್ನು ಹೇಳುತ್ತೇನೆ ಕೇಳು ಎನ್ನುತ್ತಾರೆ.

**ಶತ್ರುಂತಪ ಸೌವೀರದೇಶದ** ಮಹಾರಥ ರಾಜ. ಅವನು **ಕಲಿಂಗದೇಶದಲ್ಲಿದ್ದ ಭರದ್ವಾಜರನ್ನು** ಕಂಡು ಪ್ರಶ್ನಿಸಿದ.

'ತನ್ನಲ್ಲಿಲ್ಲದ ವಸ್ತುವನ್ನು ಹೇಗೆ ಪಡೆಯಬೇಕು? ಪಡೆದ ಮೇಲೆ ಅದನ್ನು ಹೇಗೆ ವೃದ್ಧಿ ಮಾಡಬೇಕು? ವೃದ್ಧಿಯಾದುದನ್ನು ರಕ್ಷಿಸುವುದು ಹೇಗೆ? ರಕ್ಷಿಸಿದುದನ್ನು ಉಪಯೋಗಿಸುವ ಮಾರ್ಗವೇನು?'[೧]

ಈ ಪ್ರಶ್ನೆಗಳಿಗೆ ೬೩ ಶ್ಲೋಕಗಳಿಂದ ಭರದ್ವಾಜರು ಉತ್ತರಿಸಿದ್ದಾರೆ. ಆದರೆ ಈ ಉತ್ತರಗಳಲ್ಲಿರುವ ಮಾರ್ಗೋಪಾಯಗಳು ಪಾಪದಿಂದ ಕೂಡಿವೆ. ಎಂದರೆ, ಧರ್ಮವಿರುದ್ಧವಾದುದು, ನ್ಯಾಯವಿರುದ್ಧ. ಇದನ್ನು ಅನುಸರಿಸಬಾರದೆಂದೂ, ಆದರೆ ಶತ್ರುವು ಈ ನೀತಿ ಅನುಸರಿಸಿದರೆ, ಅದಕ್ಕೆ ಪ್ರತಿಯಾಗಿ ನೀನೂ ಹಾಗೆಯೇ ಇರಬೇಕು (ಪ್ರತೀಕಾರದ ನೀತಿ ಇಲ್ಲಿದೆ). ಎಂದು ಭರದ್ವಾಜರು ಹೇಳಿದ್ದಾರೆ. ಇದನ್ನು ಸೌವೀರರಾಜನು ತಾನು ಅನುಸರಿಸಿ ತನ್ನ ಬಂಧುಬಾಂಧವರೊಡನೆ ಸಂಪತ್ತನ್ನು ಗಳಿಸಿದನೆಂದು ಉಪಸಂಹಾರ ಮಾಡಿದ್ದಾರೆ.

ಈಗ ಭರದ್ವಾಜರು ಉಪದೇಶಿಸಿದ ನೀತಿಗಳ ಸಾರವನ್ನು ನೋಡುವ.

---

೧ ಅಲಬ್ಧಸ್ಯ ಕಥಂ ಲಿಪ್ಸಾ ಲಬ್ಧಂ ಕೇನ ವಿವರ್ಧತೇ।
ವರ್ಧಿತಂ ಪಾಲಯೇತ್ಕೇನ ಪಾಲಿತಂ ಪ್ರಣಯೇತ್ ಕಥಮ್ ॥ - ೧೦/೫

೧. ಶತ್ರುವಿನ ವಿರುದ್ಧ ಯಾವಾಗಲೂ ದಂಡೋಪಾಯವನ್ನು ಹಿಡಿದೇ ಇರಬೇಕು. ತನ್ನಲ್ಲಿ ಯಾವುದೇ ನ್ಯೂನತೆಯಿಲ್ಲದಿರುವಂತೆ ನೋಡಿಕೊಳ್ಳುತ್ತಾ ಶತ್ರುವಿನಲ್ಲಿನ ಹುಳುಕುಗಳನ್ನು ತಿಳಿಯುತ್ತಾ ತನ್ನ ಅನುಕೂಲಕ್ಕೆ ತಕ್ಕಂತೆ ಅವನ್ನು ಬಳಸಬೇಕು[೧].

೨. ಶತ್ರುಪಕ್ಷದ ಮೂಲವನ್ನೇ ಕತ್ತರಿಸಬೇಕು. ನಂತರ ಅವನ ಸಹಾಯಕರ ಮೇಲೆ ಮತ್ತು ಶತ್ರುಪಕ್ಷವನ್ನೇ ಆಕ್ರಮಣ ಮಾಡಿಸಬೇಕು[೨].

೩. ಶತ್ರುವಿನೊಡನೆ ಕೇವಲ ಮಾತಿನಲ್ಲಿ ವಿನಯ ತೋರಿಸಬೇಕು. ಹೃದಯವು ಕತ್ತಿಯಂತೆ ತೀಕ್ಷ್ಣವಾಗಿರಬೇಕು. ಕಾಮಕ್ರೋಧಗಳನ್ನು ಬಿಟ್ಟಿರಬೇಕು[೩].

೪. ಶ್ರೇಯಸ್ಸು ಹಾಗೂ ಅಭಿವೃದ್ಧಿಗಳನ್ನು ಇಚ್ಛಿಸುವವನು ಪ್ರಸಂಗಕ್ಕೆ ಅನುಗುಣವಾಗಿ ಶತ್ರುವಿಗೆ ಕೈ ಮುಗಿಯಬೇಕು. ಪ್ರತಿಜ್ಞೆ ಮಾಡಬೇಕು. ಸಮಾಧಾನದ ನಡೆ ತೋರಬೇಕು. ಕಣ್ಣೀರನ್ನು ಹಾಕಬೇಕು[೪] (ಅಳಬೇಕು – ಅತ್ತಂತೆ ತೋರಬೇಕು).

೫. ಕೆಲಸವಾಗುವವರೆಗೂ (ನಮ್ಮ ಪ್ರಯೋಜನ ಸಿದ್ಧಿಸುವವರೆಗೂ) ಶತ್ರುವನ್ನು ಹೆಗಲಮೇಲೆ ಹೊರಬೇಕು. ಕಾಲಬಂದಾಗ ಮಡಕೆಯನ್ನು ಕಲ್ಲಿನ ಮೇಲೆ ಹಾಕಿ ಒಡೆಯು–ವಂತೆ ಒಡೆಯಬೇಕು[೫].

೬. ಆಲಸಿಗಳು, ಹೇಡಿಗಳು, ದುರಭಿಮಾನಿಗಳು, ನಪುಂಸಕರು, ಜನರ ಮಾತುಗಳಿಗೆ (ಅಪವಾದ) ಹೆದರುವವರು, ಒಳ್ಳೆಯ ಕಾಲ ನಿರೀಕ್ಷೆ ಮಾಡುವವರು ಐಶ್ವರ್ಯವನ್ನು ಸಂಪಾದಿಸುವುದಿಲ್ಲ[೬].

೭. ಬಕಪಕ್ಷಿಯಂತೆ ಏಕಾಗ್ರತೆಯಿಂದ ಸಾಧಿಸಬೇಕಾದುದನ್ನು ಆಲೋಚಿಸಬೇಕು. ಸಿಂಹದಂತೆ ಆಕ್ರಮಣ ಮಾಡಬೇಕು. ತೋಳದಂತೆ ಲೂಟಿ ಮಾಡಬೇಕು. ಮೊಲದಂತೆ ಹಾರಬೇಕು.

---

೧ ನಿತ್ಯಮುದ್ಯತದಂಡಃ ಸ್ಯಾತ್ ನಿತ್ಯಂ ವಿವೃತಪೌರುಷಃ।
ಅಚ್ಛಿದ್ರಶ್ಛಿದ್ರದರ್ಶೀ ಚ ಪರೇಷಾಂ ವಿವರಾನುಗಃ॥ – ೧೦/೭

೨ ಮೂಲಮೇವಾದಿತಶ್ಛಿಂದ್ಯಾತ್ ಪರಪಕ್ಷಸ್ಯ ಪಂಡಿತಃ।
ತತಃ ಸಹಾಯಾನ್ ಪಕ್ಷಂ ಚ ಸರ್ವಮೇವಾನುಸಾರಯೇತ್॥ – ೧೦/೧೧

೩ ವಾಙ್ಮಾತ್ರೇಣ ವಿನೀತಃ ಸ್ಯಾದ್ಧೃದಯೇನ ಯಥಾ ಕ್ಷುರಃ॥... – ೧೦/೧೩

೪ ಅಂಜಲಿಂ ಶಪಥಂ ಸಾಂತ್ವಂ ಪ್ರಣಮ್ಯ ಶಿರಸಾ ವದೇತ್।
ಅಶ್ರುಪ್ರಪಾತನಂ ಚೈವ ಕರ್ತವ್ಯಂ ಭೂಮಿಮಿಚ್ಛತಾ॥ – ೧೦/೧೭

೫ ವಹೇದಮಿತ್ರಂ ಸ್ಕಂಧೇನ ಯಾವದರ್ಥಸ್ಯ ಬಂಧನಮ್।
ಅಥೈನಮಾಗತೇ ಕಾಲೇ ಭಿಂದ್ಯಾದ್ಘಟಮಿವಾಶ್ಮನಿ॥ – ೧೦/೧೮

೬ ನಾಲಸಾಃ ಪ್ರಾಪ್ನುವಂತ್ಯರ್ಥಾನ್ ನ ಕ್ಲೀಬಾ ನ ಚ ಮಾನಿನಃ।
ನ ಚ ಲೋಕರವಾದ್ಭೀತಾ ನ ಚ ಶಶ್ವತ್ ಪ್ರತೀಕ್ಷಿಣಃ॥ – ೧೦/೨೩

ಬಕವಚ್ಚಿಂತಯೇದರ್ಥಾನ್ ಸಿಂಹವಚ್ಚ ಪರಾಕ್ರಮೇತ್ ।
ವೃಕವತ್ ಚಾವಲುಂಪೇತ ಶಶವಚ್ಚ ವಿನಿಷ್ಪತೇತ್ ॥ - ೧೦/೨೫

೮. ರಾಜನಾದವನು ತನ್ನ ಪ್ರಜೆಗಳ ಬೇಡಿಕೆಗಳ ಬಗ್ಗೆ ಸರಿಯಾದ ಕಾಲದಲ್ಲಿ ಈಡೇರುತ್ತದೆ ಎಂದು ಹೇಳಬೇಕು. ಬೇಡಿಕೆ ಈಡೇರುವುದು ತಡವಾದಾಗ ವಿಘ್ನಗಳು ಕಾರಣ ಎಂದು ಹೇಳಬೇಕು. ಆ ವಿಘ್ನಗಳಿಗೆ ಕಾರಣಗಳನ್ನು ಹೇಳಬೇಕು[1].

೯. ಸಂಶಯಗ್ರಸ್ತನಾದವನು ಉನ್ನತಿಯನ್ನು ಕಾಣುವುದಿಲ್ಲ. ಸಂಶಯಗ್ರಸ್ತನಾಗಿದ್ದರೂ ಪ್ರಯತ್ನಿಸುತ್ತಾ ಬದುಕಿದವನು ಉನ್ನತಿಯನ್ನು ನೋಡುತ್ತಾನೆ. ಸಂಶಯದ ಸ್ಥಿತಿಯಲ್ಲೇ ಪ್ರಯತ್ನಿಸುತ್ತಾ, ಹುಡುಕುತ್ತಾ (ಪರಿಹಾರಗಳನ್ನು) ಕೊನೆಗೆ ಮೇಲಿನ ಮಟ್ಟಕ್ಕೆ ಮುಟ್ಟುತ್ತಾನೆ[2].

೧೦. ರಾಜನು ತನ್ನ ಶತ್ರುಗಳ ಶತ್ರುಗಳನ್ನು ತನ್ನೆಡೆಗೆ ಸೆಳೆಯಬೇಕು. ಶತ್ರುಗಳು ತನ್ನ ಬಗ್ಗೆ ತಿಳಿಯಲು ಕಳಿಸಿದ ಗೂಢಚಾರರನ್ನು ಕಂಡುಹಿಡಿಯಬೇಕು. ತನ್ನ ರಾಜ್ಯದಲ್ಲೂ, ಶತ್ರುರಾಜ್ಯದಲ್ಲೂ ತನ್ನ ರಾಜ್ಯದ ಪರವಾಗಿ ಪಾಷಂಡರನ್ನೂ, ತಾಪಸ ಮೊದಲಾದವರನ್ನೂ ಗೂಢಚಾರರನ್ನಾಗಿ ನೇಮಿಸಬೇಕು. ಅವರು ಉದ್ಯಾನ, ವಿಹಾರಸ್ಥಳಗಳು, ಅರವಟ್ಟಿಗೆಗಳು, ಧರ್ಮಶಾಲೆಗಳಲ್ಲಿ, ಸುರಾಪಾನ, ವೇಶ್ಯಾಗೃಹಗಳಲ್ಲಿ, ತೀರ್ಥಕ್ಷೇತ್ರಗಳಲ್ಲಿ, ಸಭೆಗಳಲ್ಲಿ ತಿರುಗಾಡುತ್ತಾ ಶತ್ರುಗಳ ಮಾಹಿತಿಗಳನ್ನು ಸಂಗ್ರಹಿಸಬೇಕು. ಲೋಕಕಂಟಕರಾದವರನ್ನು ನಿಯಂತ್ರಿಸಬೇಕು[3].

೧೧. ವಿಶ್ವಾಸವಿಲ್ಲದವನ ಮೇಲೆ ವಿಶ್ವಾಸವಿಡಬಾರದು. ವಿಶ್ವಾಸವಿರುವವನ ಮೇಲೂ ವಿಶ್ವಾಸವಿಡಬಾರದು. ಪರೀಕ್ಷಿಸದೇ ಯಾರನ್ನೂ ನಂಬಬಾರದು[4].

೧೨. ಶತ್ರುವನ್ನು ಏಕಾಗ್ರತೆಯಿಂದ, ಮೌನದಿಂದ, ಕಾವಿವಸ್ತ್ರಧಾರಣೆಯಿಂದ, ಜಟೆ ಹಾಗೂ ಕೃಷ್ಣಾಜಿನಗಳಿಂದ ನಂಬಿಸಿ ನಂತರ ತೋಳದಂತೆ ಅವನ ಮೇಲೆ ಬಿದ್ದು ನಾಶ ಮಾಡಬೇಕು.

---

೧ ಆಶಾಂ ಕಾಲವತೀಂ ಕುರ್ಯಾತ್ ತಾಂ ಚ ವಿಘ್ನೇನ ಯೋಜಯೇತ್ ।
ವಿಘ್ನಂ ನಿಮಿತ್ತತೋ ಬ್ರೂಯಾತ್ ನಿಮಿತ್ತಂ ಚಾಪಿ ಹೇತುತಃ ॥ - ೧೦/೩೨

೨ ನ ಸಂಶಯಮಪಾರುಹ್ಯ ನರೋ ಭದ್ರಾಣಿ ಪಶ್ಯತಿ ।
ಸಂಶಯಂ ಪುನರಾರುಹ್ಯ ಯದಿ ಜೀವತಿ ಪಶ್ಯತಿ ॥ - ೧೦/೩೪

೩ ಯೇ ಸಪತ್ನಾಃ ಸಪತ್ನಾನಾಂ ಸರ್ವಾಸ್ತಾನಪವರ್ತಯೇತ್ ।
ಆತ್ಮನಶ್ಚಾಪಿ ಬೋದ್ಧವ್ಯಾಶ್ಚಾರಾಃ ಪ್ರಣಿಹಿತಾಃ ಪರೈಃ ॥
ಉದ್ಯಾನೇಷು ವಿಹಾರೇಷು ಪ್ರಪಾಸ್ವಾವಸಥೇಷು ಚ ।
ಪಾನಾಗಾರೇಷು ವೇಶ್ಯೇಷು ತೀರ್ಥೇಷು ಚ ಸಭಾಸು ಚ ॥... - ೧೦/೩೯-೪೨

೪ ನ ವಿಶ್ವಸೇದವಿಶ್ವಸ್ತೇ ವಿಶ್ವಸ್ತೇ ನಾಪಿ ವಿಶ್ವಸೇತ್ ।
ವಿಶ್ವಸ್ತಂ ಭಯಮನ್ವೇತಿ ನಾಪರೀಕ್ಷ್ಯ ಚ ವಿಶ್ವಸೇತ್ ॥ - ೧೦/೪೩

೧೩. ಸಂಪತ್ತನ್ನು ವೃದ್ಧಿ ಮಾಡಬಯಸುವವನು ಅದಕ್ಕೆ ವಿಘ್ನ ಮಾಡುವವರು ಮಗನಾಗಿರಲಿ, ಸೋದರರಾಗಲೀ, ತಂದೆಯಾಗಿರಲಿ ಅಥವಾ ಮಿತ್ರನಾಗಿರಲಿ ಕೊಲ್ಲಬೇಕು[೧].

೧೫. ಶತ್ರು ಬಂದಾಗ ಎದ್ದು ನಿಂತು, ಅಭಿವಾದನ ಮಾಡಿ (ನಮಸ್ಕರಿಸಿ) ಕಾಣಿಕೆಗಳನ್ನು ಕೊಟ್ಟು, ಪೂಜಿಸಿ ತೀಕ್ಷ್ಣ ಕೊಕ್ಕಿನ ಹಕ್ಕಿಯಂತೆ ಸಂಹರಿಸಬೇಕು[೨].

೧೬. ಹುಟ್ಟುತ್ತಲೇ ಯಾರು ಯಾರಿಗೂ ಶತ್ರುವೂ ಅಲ್ಲ, ಮಿತ್ರನೂ ಅಲ್ಲ, ಅವರವರ ಸಾಮರ್ಥ್ಯಕೆ ಅನುಗುಣವಾಗಿ ಮಿತ್ರರು, ಶತ್ರುಗಳೂ ಆಗುತ್ತಾರೆ[೩].

೧೭. ಶತ್ರುವು (ಸೆರೆ ಸಿಕ್ಕಾಗ ತನ್ನ ಬಗ್ಗೆ) ಸಹಾನುಭೂತಿಪರ ಮಾತುಗಳನ್ನು ಆಡಿದರೂ ಅವನನ್ನು ಬಿಡುಗಡೆ ಮಾಡದೆ ಹಿಂದೆ ಮಾಡಿದ ಅಪಕಾರ ಮಾಡಿದುದನ್ನು ಗಮನಿಸಿ ಕೊಲ್ಲಬೇಕು.

೧೮. ಐಶ್ವರ್ಯವನ್ನು ಬಯಸುವವನು ಪ್ರಜೆಗಳು ತನ್ನನ್ನು ಒಳ್ಳೆಯವನೆಂದು ಸ್ವೀಕರಿಸಲು ಅವರಿಗೆ ಅನೇಕ ತೆರನಾದ ಅನುಕೂಲತೆಗಳನ್ನು ಅಸೂಯಾರಹಿತನಾಗಿ ಮಾಡುತ್ತಾ (ಪ್ರಜೆಗಳಲ್ಲಿ) ನಿಗ್ರಹಕ್ಕೆ ಯೋಗ್ಯರಾದವರನ್ನೂ ಪ್ರಯತ್ನಪೂರ್ವಕವಾಗಿ ಶಿಕ್ಷೆಗೆ ಗುರಿ ಮಾಡಬೇಕು. ಅವರನ್ನು ಹೊಡಯುವಾಗ, ನಂತರವೂ, ಪ್ರಿಯವಾದ ಮಾತುಗಳನ್ನು ಆಡಬೇಕು. ಅವನ ಶಿರಶ್ಛೇದ ಮಾಡಿದ ಮೇಲೂ ಅವನಿಗಾಗಿ ಅಳಬೇಕು. ಶೋಕಿಸಬೇಕು[೪].

೧೯. ಸಮೃದ್ಧಿಯನ್ನು ಬಯಸುವವನು ಒಳ್ಳೆಯ ಮಾತುಗಳಿಂದ, ಸಮ್ಮಾನದಿಂದ, ತಾಳ್ಮೆಯಿಂದ ಜನರನ್ನು ತನ್ನ ಕಡೆ ಒಲಿಸಿಕೊಳ್ಳಬೇಕು. ಇದನ್ನು ಆಶಾಕಾರಣ (ಲೋಕಾರಾಧನ) ಎಂದು ಕರೆಯುತ್ತಾರೆ. ಇದನ್ನು ಮಾಡಲೇಬೇಕು. ಶತ್ರುವಿನೊಡನೆ ಒಣ ವೈರವನ್ನು ಮಾಡಬಾರದು[೫] (ಪ್ರಯೋಜನವಿಲ್ಲದೆ).

---

೧ ಪುತ್ರೋ ವಾ ಯದಿ ವಾ ಭ್ರಾತಾ ಪಿತಾ ವಾ ಯದಿ ವಾ ಸುಹೃತ್ ।
ಅರ್ಥಸ್ಯ ವಿಘ್ನಂ ಕುರ್ವಾಣಾ ಹಂತವ್ಯಾ ಭೂತಿವರ್ಧನಾಃ ॥ - ೧೦/೪೭

೨ ಪ್ರತ್ಯುತ್ಥಾನಾಭಿವಾದಾಭ್ಯಾಂ ಸಂಪ್ರದಾನೇನ ಕಸ್ಯಚಿತ್ ।
ಪ್ರಪೂಜಯನ್ನಿಘಾತೀ ಸ್ಯಾತ್ ತೀಕ್ಷ್ಣತುಂಡ ಇವ ದ್ವಿಜಃ ॥ - ೧೦/೪೯

೩ ನಾಸ್ತಿ ಜಾತ್ಯಾ ರಿಪುರ್ನಾಮ ಮಿತ್ರಂ ನಾಮ ನ ವಿದ್ಯತೇ ।
ಸಾಮರ್ಥ್ಯಯೋಗಾಜ್ಜಾಯಂತೇ ಮಿತ್ರಾಣಿ ರಿಪವಸ್ತಥಾ ॥ - ೧೦/೫೧

೪ ಪ್ರಹರಿಷ್ಯನ್ ಪ್ರಿಯಂ ಬ್ರೂಯಾತ್ ಪ್ರಹೃತ್ಯಾಪಿ ಪ್ರಿಯೋತ್ತರಮ್ ।
ಅಪಿ ಚಾಸ್ಯ ಶಿರಶ್ಛಿತ್ತ್ವಾ ರುದ್ಯಾತ್ ಶೋಚೇದಥಾಪಿ ವಾ ॥ - ೧೦/೫೩,೫೪

೫ ನಿಮಂತ್ರಯೇತ ಸಾಂತ್ವೇನ ಸಮ್ಮಾನೇನ ತಿತಿಕ್ಷಯಾ ।
ಆಶಾಕಾರಣಮಿತ್ಯೇತತ್ ಕರ್ತವ್ಯಂ ಭೂತಿಮಿಚ್ಛತಾ ॥
ನ ಶುಷ್ಕವೈರಂ ಕುರ್ವೀತ ನ ಬಾಹುಭ್ಯಾಂ ನದೀಂ ತರೇತ್ ॥ - ೧೦/೫೫,೫೬

೨೦. ಋಣಶೇಷ, ಅಗ್ನಿಶೇಷ, ಶತ್ರುಶೇಷ ಇವು ಸ್ವಲ್ಪವೂ ಉಳಿಸಬಾರದು. ಉಳಿಸಿದರೆ, ಅವು ಮತ್ತೆ ವೃದ್ಧಿಯಾಗುತ್ತವೆ.

೨೧. ಶತ್ರುದೇಶದ ಪ್ರಜೆಗಳನ್ನು ಕೊಂದು (ಆ ದೇಶದ) ಮಾರ್ಗಗಳನ್ನು (ಸಂಪರ್ಕ) ನಾಶಮಾಡಿ (ಆಹಾರ, ಔಷಧಿ, ಹಣಕಾಸು) ಮೊದಲಾದ ಸರಬರಾಜು ಮೂಲಗಳನ್ನು (ಆಕರ) ನಾಶಮಾಡಿ, ಶತ್ರುರಾಷ್ಟ್ರವನ್ನು ನಾಶ ಮಾಡಬೇಕು.

೨೨. ಸೌಮ್ಯವಾದ ವಿಧಾನಗಳಿಂದಲೇ ಮೃತ್ಯುಗಳನ್ನು ಕೊಲ್ಲುತ್ತಾರೆ. ಅಂತಹ ವಿಧಾನಗಳಿಂದ ಭಯಾನಕ ಶತ್ರುಗಳನ್ನೂ ಕೊಲ್ಲುತ್ತಾರೆ. ಈ ವಿಧಾನದಿಂದ ಅಸಾಧ್ಯವಾದುದು ಯಾವುದೂ ಇಲ್ಲ, ಆದ್ದರಿಂದ ಮೃದು ವಿಧಾನಗಳೇ ಅತಿತೀಕ್ಷ್ಣ. ಯಾರು ಸಮಯಕ್ಕೆ ತಕ್ಕಂತೆ ಮೃದುವಾಗುತ್ತಾರೋ, ಭಯಂಕರವೂ ಆಗುತ್ತಾರೋ ಅವರು ತನ್ನ ಸ್ವಾರ್ಥವನ್ನು ಸಾಧಿಸುತ್ತಾರೆ. ಶತ್ರುಗಳಿಗಿಂತ ಮುಂದೆ ಹೋಗುತ್ತಾರೆ[೧].

**ಇವೇ ಮೊದಲಾದ ಉಪದೇಶಗಳನ್ನು ಶತ್ರುಂತಪರಾಜನಿಗೆ ಭರದ್ವಾಜರು ಉಪದೇಶಿಸಿ ಈ ನೀತಿಯಲ್ಲಿ ಪಾಪವು ತುಂಬಿದುದರಿಂದ (ಸಾತ್ವಿಕ) ಪುರುಷನು ಇದನ್ನು ಅನುಸರಿಸಬಾರದು. ಆದರೆ ಶತ್ರುವಿನ ನೀತಿಗನುಗುಣವಾಗಿ ಪ್ರಯೋಗಿಸಬೇಕಾಗುತ್ತದೆ ಎಂಬ ಎಚ್ಚರಿಕೆಯನ್ನು ಕೊಟ್ಟಿದ್ದಾರೆ. ರಾಜನ ಹಿತವನ್ನು ಗಮನದಲ್ಲಿ ಇಟ್ಟುಕೊಂಡು ಭರದ್ವಾಜರು ಇದನ್ನು ಉಪದೇಶಿಸಿದ್ದಾರೆ[೨].**

## ಸಂದೇಶಗಳು

ಭರದ್ವಾಜರ ಉಪದೇಶವೆಲ್ಲ ಸಂದೇಶಗಳೇ ಆಗಿವೆ.

*****

೧ ಮೃದುನಾ ಸುಮೃದುಂ ಹಂತಿ ಮೃದುನಾ ಹಂತಿ ದಾರುಣಮ್ ।
ನಾಸಾಧ್ಯಂ ಮೃದುನಾ ಕಿಂಚಿತ್ ತಸ್ಮಾತ್ತೀಕ್ಷ್ಣತರಂ ಮೃದು ॥
ಕಾಲೇ ಮೃದುರ್ಯೋ ಭವತಿ ಕಾಲೇ ಭವತಿ ದಾರುಣಃ ।
ಸ ಸಾಧಯತಿ ಕೃತ್ಯಾನಿ ಶತ್ರೂಂಶ್ಚೈವಾಧಿತಿಷ್ಠತಿ ॥ - ೧೦/೬೫,೬೬

೨ ಇತೀದಮುಕ್ತಂ ವೃಜಿನಾಭಿಸಂಹಿತಂ ನ ಚೈತದೇವಂ ಪುರುಷಃ ಸಮಾಚರೇತ್ ।
ಪರಪ್ರಯುಕ್ತಂ ತು ಕಥಂ ನಿಶಾಮಯೇದತೋ ಮಯೋಕ್ತಂ ಭವತೋ ಹಿತಾರ್ಥಿನಾ ॥
- ೧೦/೬೯

# ೧೭೯. ಸೇನಜಿತ್ ರಾಜನಿಗೆ ಬ್ರಾಹ್ಮಣನ ಹಿತೋಕ್ತಿ

ಧರ್ಮರಾಜನು ಪಿತಾಮಹ ಭೀಷ್ಮರಿಗೆ ಪ್ರಶ್ನಿಸುತ್ತಾನೆ. 'ಇಲ್ಲಿಯವರೆಗೆ ರಾಜನಿಗೆ ಸಂಬಂಧಿಸಿದ ಅನೇಕ ಮಂಗಳಕರವಾದ ಧರ್ಮಗಳನ್ನು ಆಚರಿಸಲು ಹೇಳಿದಿರಿ. ಇನ್ನು ಮುಂದೆ ನಾಲ್ಕೂ ಆಶ್ರಮಗಳಿಗೆ (ಬ್ರಹ್ಮಚರ್ಯ, ಗೃಹಸ್ಥ ಸನ್ಯಾಸ, ವಾನಪ್ರಸ್ಥ ಆಶ್ರಮಗಳಿಗೆ) ಯೋಗ್ಯವಾದ ಶ್ರೇಷ್ಠ ಧರ್ಮಗಳನ್ನು ತಿಳಿಸಿರಿ.

ಭೀಷ್ಮರು ಈ ಬಗ್ಗೆ ನಾಲ್ಕು ಶ್ಲೋಕಗಳಿಂದ ತಮ್ಮ ಮಾತುಗಳಲ್ಲಿ ಹೀಗೆ ಉತ್ತರಿಸಿದ್ದಾರೆ. ಈ ಶ್ಲೋಕಗಳ ಅನುವಾದವನ್ನು ಅನ್ಯಮತೀಯರು ಸ್ವಲ್ಪ ಬೇರೆಯಾಗಿಯೇ ಮಾಡಿದಂತೆ ತೋರುತ್ತದೆ. ಆದರೆ ಒಟ್ಟಭಿಪ್ರಾಯ ಹೀಗಿದೆ.

೧. ವೇದದಲ್ಲಿ ಎಲ್ಲ ಕಡೆ ಸ್ವರ್ಗಫಲಸಾಧನವಾದ ಸತ್ಯಫಲವಾದ ಧರ್ಮವು ತಪಸ್ಸೆಂದು ಹೇಳಲಾಗಿದೆ. ಧರ್ಮಕ್ಕೆ ಅನೇಕ ದ್ವಾರಗಳಿದ್ದರೂ ಅದರ ಕಾರ್ಯ ಎಂದೂ ವಿಫಲವಾಗದು. 'ಬಹುದ್ವಾರಸ್ಯ ಧರ್ಮಸ್ಯ ನೇಹಾಸ್ತಿ ವಿಫಲಾ ಕ್ರಿಯಾ' ಎಂಬ ಎರಡನೇ ಶ್ಲೋಕಾರ್ಥವು ವಿರುದ್ಧವಾದ ಧರ್ಮಗಳೂ ಒಂದೇ ಫಲವನ್ನು ಕೊಡುತ್ತದೆ ಎಂಬ ಭ್ರಮೆ ಹುಟ್ಟುವಂತಿದೆ. ಅದನ್ನು ಹಾಗೆಯೇ ಕೆಲವರು ಅನುವಾದಿಸಿದ್ದಾರೆ.

೨. ಪ್ರತಿ ವ್ಯಕ್ತಿಯೂ ತನ್ನ ಉದ್ದೇಶಕ್ಕೆ ಅನುಗುಣವಾಗಿ ಮಾರ್ಗ ಹುಡುಕುತ್ತಾನೆ. ಅವನಿಗೆ ಬೇರೆ ಮಾರ್ಗವೂ ಕಾಣುವುದೇ ಇಲ್ಲ[೧] (ಇಲ್ಲಿ ಪೂರ್ತಿ ಶ್ಲೋಕದ ಅನುವಾದ ಇಲ್ಲ).

೩. ಈ ಲೋಕದಲ್ಲಿನ ಸುಖಸಾಧನಗಳೆಂದು ತಿಳಿಯಲ್ಪಟ್ಟ ವಸ್ತುಗಳು ಅಸಾರವೆಂದು ತಿಳಿಯಲ್ಪಟ್ಟಾಗ ಆ ಅವುಗಳಲ್ಲಿ ವೈರಾಗ್ಯ ಹುಟ್ಟುತ್ತದೆ.[೨]

೪. ಅನೇಕ ದೋಷಭೂಯಿಷ್ಠವಾದ ಈ ಲೋಕದಲ್ಲಿ ಸ್ಥಿತಿ ಹೀಗಿರಲು ಜ್ಞಾನಿಯಾದವನು ಲೋಕದ ಸುಖಸಾಧನಗಳನ್ನು ತ್ಯಜಿಸಿ ವಿರಾಗ ಹೊಂದಿ ಆತ್ಮ ಮೋಕ್ಷಕ್ಕಾಗಿ (ತಾನು ಸಂಸಾರದಿಂದ ಮೋಚನಗಳ್ಳಲು) ಪ್ರಯತ್ನಿಸಬೇಕು.[೩]

---

೧ ಯಸ್ಮಿನ್ ಯಸ್ಮಿಂಸ್ತು ವಿಷಯೇ ಯೋ ಯೋ ಯಾತಿ ವಿನಿಶ್ಚಯಮ್ ।
ತಂ ತಮೇವಾಭಜಾನಾತಿ ನಾನ್ಯಂ ಭರತಸತ್ತಮ ॥ – ೧/೩

೨ ಯಥಾ ಯಥಾ ಚ ಪರ್ಯೇತಿ ಲೋಕತಂತ್ರಮಸಾರವತ್ ।
ತಥಾ ತಥಾ ವಿರಾಗೋಽತ್ರ ಜಾಯತೇ ನಾತ್ರ ಸಂಶಯಃ ॥ – ೧/೪

೩. ಏವಂ ವ್ಯವಸಿತೇ ಲೋಕೇ ಬಹುದೋಷೇ ಯುಧಿಷ್ಠಿರ ।
ಆತ್ಮಮೋಕ್ಷನಿಮಿತ್ತಂ ವೈ ಯತೇತ ಮತಿಮಾನ್ನರಃ ॥ – ೧/೫

ಭೀಷ್ಮರ ಉತ್ತರದ ನಂತರ ಧರ್ಮರಾಜನು ನಿರ್ದಿಷ್ಟವಾದ ಒಂದು ಪ್ರಶ್ನೆಯನ್ನು ಕೇಳುತ್ತಾನೆ.

'ತಾತ! ಮನುಷ್ಯನು ತನ್ನ ಧನ ಕಳೆದುಕೊಂಡಾಗ, ಹೆಂಡತಿ, ಮಗ, ತಂದೆ ಇವರನ್ನು ಕಳೆದುಕೊಂಡರೆ, ಆಗ ಅವನಿಗೆ ದುಃಖ ವಿಯೋಗದ ಶೋಕವನ್ನು ಹೇಗೆ ಪರಿಹರಿಸಿಕೊಳ್ಳಬೇಕು. ದುಃಖಶಮನ ಹೇಗೆ? ಅದನ್ನು ತಿಳಿಸು'

ಈ ಪ್ರಶ್ನೆಗೆ ಭೀಷ್ಮರು 'ಇಂತಹ ದುಃಖ, ಬಂಧುಗಳ ವಿಯೋಗವಾದಾಗ ಅಯ್ಯೋ! ಇದೆಂತಹ ದುಃಖವು (ಬಂದೊದಗಿತಲ್ಲಾ) ಎಂದು ತಿಳಿದು (ವಿವೇಕಪೂರ್ವಕವಾಗಿ ವಿಚಾರ ಮಾಡಿ) ಅದರ (ಶೋಕದ) ಪರಿಹಾರವನ್ನು ವೈಚಾರಿಕವಾಗಿಯೇ ಪ್ರಯತ್ನಿಸಬೇಕೇ ಹೊರತು, ಬರೀ ಅಳುವುದೇ ಮೊದಲಾದ ಭಾವನಾತ್ಮಕವಾಗಿರಬಾರದು. ಕಾರಣ ಬಂಧುಗಳ ವಿಯೋಗವಾಗಲೀ, ಐಶ್ವರ್ಯನಾಶಗಳು ಜಗತ್ತಿನ ನಿಯಮ. ಜೀವರೆಲ್ಲರೂ ಸ್ವಾಭಾವಿಕವಾಗಿ ದುಃಖಿಗಳೇ. ಭಗವಂತನು ಮಾತ್ರ ದುಃಖರಹಿತ. 'ಅತೋಽನ್ಯದಾರ್ತಂ' ಎಂಬ ಉಪನಿಷತ್ತಿನ ಅರ್ಥಾನುಸಂಧಾನ ತಂದುಕೊಂಡು ತನಗೆ ಒದಗಿಬಂದ ನಷ್ಟ-ಲಾಭ ವಿಯೋಗಾದಿಗಳನ್ನು ಬೌದ್ಧಿಕವಾಗಿಯೇ ಅಭಿಮಾನತ್ಯಾಗ ಮಾಡಿಯೇ ಪರಿಹರಿಸಿಕೊಳ್ಳಬೇಕು.[೧]

ಈ ವಿಷಯದಲ್ಲಿ ಒಬ್ಬ **ಬ್ರಾಹ್ಮಣನ (ಬ್ರಹ್ಮವಾದಿಯ)** ಹಾಗೂ **ಸೇನಜಿತ್** ರಾಜನ ಸಂವಾದರೂಪ ಇತಿಹಾಸವನ್ನು ಧರ್ಮರಾಜನಿಗೆ ಭೀಷ್ಮರು ನೆನಪಿಸುತ್ತಾರೆ.

ಸೇನಜಿತ್ ರಾಜ ಪುತ್ರಶೋಕದಿಂದ ವಿಷಾದಗೊಂಡು ಕರ್ತವ್ಯಮೂಢನಾಗಿದ್ದು ಅವನ ಬಳಿಗೆ ಬಂದ ಒಬ್ಬ ಬ್ರಾಹ್ಮಣನು ಹೀಗೆ ನುಡಿದನು. ರಾಜನ್! ನೀನು ಏಕೆ ಅಜ್ಞಾನಿ (ಬುದ್ಧಿಶೂನ್ಯನಾಗಿ)ಯಾಗಿ ದುಃಖಿಸುತ್ತಿರುವೆ? ನಿನ್ನನ್ನೂ(ಕೂಡಾ) ಬೇರೊಬ್ಬರು (ಇಂದಲ್ಲ ನಾಳೆ) ಶೋಕಿಸುವ ಸ್ಥಿತಿ ನಿನ್ನದು. ನಿನಗಾಗಿ ಶೋಕಿಸುವವರನ್ನೂ ಕೂಡಾ ಮತ್ತೆ ಯಾರೋ ಮುಂದೆ ದುಃಖಿಸುತ್ತಾರೆ. ಹೀಗೆ ಎಲ್ಲರ ಸ್ಥಿತಿಯೂ ಹಾಗೆಯೇ.

ನೀನೂ ನಾನೂ ನಿನ್ನನ್ನು ಆಶ್ರಯಿಸಿರುವ ಇತರರೂ, ಎಲ್ಲರೂ ಶೋಕಾರ್ಹರೇ. ನಾವೆಲ್ಲರೂ ಎಲ್ಲಿಂದ ಬಂದೆವೋ, ಅಲ್ಲಿಗೇ ಖಂಡಿತವಾಗಿ ಹೋಗುತ್ತೇವೆ (ಹೀಗಿರುವಾಗ ನೀನು ನಿನ್ನ ಮಗನಿಗಾಗಿ ಏಕೆ ಶೋಕಿಸುತ್ತೀಯಾ?).[೨]

ಬ್ರಹ್ಮವಾದಿಯ ಮಾತಿಗೆ ರಾಜ ಹೀಗೆ ಪ್ರತಿಕ್ರಿಯಿಸಿದ – ಎಲೈ ತಪೋಧನನೇ! ಅತ್ಯಂತ ಸುಖದುಃಖಗಳು ಬಂದಾಗಲೂ ಸಂತೋಷ ಪಡದ ದುಃಖಪಡದ ಸ್ಥಿತಿ ಹೊಂದಲು ನೀನು

---

೧ ನಷ್ಟೇ ಧನೇ ವಾ ದಾರೇ ವಾ ಪುತ್ರೇ ಪಿತರಿ ವಾ ಮೃತೇ।
ಅಹೋ ದುಃಖಮಿತಿ ಧ್ಯಾಯನ್ ಶೋಕಸ್ಯಾಪಚಿತಿಂ ಚರೇತ್ ॥ – ೧/೭

೨ ತ್ವಂ ಚೈವಾಹಂ ಚ ಯೋ ಚಾನ್ಯೇ ತ್ವಾಂ ಚಾನ್ಯೇ ಪರ್ಯುಪಾಸತೇ।
ಸರ್ವೇ ತತ್ರ ಗಮಿಷ್ಯಾಮೋ ಯತ ಏವಾಗತಾ ವಯಮ್ ॥ – ೧/೧೦

ಎಂತಹ ಬುದ್ಧಿಯನ್ನು ಹೊಂದಿರುವೆ? ಎಂತಹ ತಪಸ್ಸನ್ನು ಮಾಡಿರುವೆ? ಸಮಾಧಿಸ್ಥಿತಿ ಹೇಗೆ ಹೊಂದುವೆ? ಅಂತಹ, ಯಾವ ಜ್ಞಾನಬುದ್ಧಿ ತಪಸ್ಸುಗಳನ್ನು ಹೊಂದಿ ನೀನು ವಿಷಾದಿಸುವುದಿಲ್ಲವೋ ಅದನ್ನು ತಿಳಿಸು.[೧]

ರಾಜನ ಮರುಪ್ರಶ್ನೆಗೆ ಸುಮಾರು ೫೦ ಶ್ಲೋಕಗಳಲ್ಲಿ ಅತ್ಯಂತ ವಿಸ್ತಾರವಾಗಿ ಉತ್ತರವನ್ನು ಬ್ರಾಹ್ಮಣನು ನೀಡುತ್ತಾನೆ. ಅದರ ಸಂಕ್ಷಿಪ್ತ ಅಭಿಪ್ರಾಯ ಹೀಗಿದೆ. ತನ್ನ ಅನಿಸಿಕೆ. ಅನುಸಂಧಾನಗಳನ್ನು ತಿಳಿಸುತ್ತಾ ರಾಜನಿಗೆ ಸಮಾಧಾನ ಮಾಡುತ್ತಾನೆ.

೧. ಪ್ರಪಂಚದಲ್ಲಿರುವ ಎಲ್ಲ ಜೀವರು (ಉತ್ತಮ, ಮಧ್ಯಮ, ಅಧಮ) ತಮ್ಮ ತಮ್ಮ ಪೂರ್ವಜನ್ಮದ ಕರ್ಮಗಳಿಗನುಗುಣವಾಗಿ ದುಃಖದಲ್ಲಿ ಸಂಕಟ ಪಡುತ್ತಿರುವುದನ್ನು ನೋಡು (ಕರ್ಮಗಳಲ್ಲಿ ಆಸಕ್ತರಾಗಿ ದುಃಖದಿಂದ ತುಂಬಿರುವುದನ್ನು). ಇದಕ್ಕೆಲ್ಲ ಕಾರಣ ನಾನು ನನ್ನದೆಂಬ ಮೋಹ, ಅಭಿಮಾನ. ಆದರೆ ನಾನು ಅಸ್ವತಂತ್ರನೆಂದು ತಿಳಿದು ಇದಾವುದು ನನ್ನ ಅಧೀನವಲ್ಲವೆಂದು ತಿಳಿದ ಬಳಿಕ ಈ ಭೂಮಿಯೂ ಸಹ ನನ್ನದಲ್ಲವಲ್ಲ. ಆದ್ದರಿಂದ ನಾನು ಸುಖ ಹಾಗೂ ದುಃಖಗಳಾವುದನ್ನೂ ಹೊಂದುವುದಿಲ್ಲ. ಕಾರಣ (ಮೋಹರೂಪ) ಅಭಿಮಾನ ತ್ಯಾಗ ಮಾಡಿದ್ದೇನೆ. ನನಗೆ ಹೇಗೆ ಸ್ವಾತಂತ್ರ್ಯವಿಲ್ಲವೋ ಬೇರೆ ಯಾರಿಗೂ ಅದಿಲ್ಲ. ಎಲ್ಲರೂ ಅಸ್ವತಂತ್ರರೇ.[೨]

ಇದೇ ರೀತಿ ಮಕ್ಕಳು, ಮೊಮ್ಮಕ್ಕಳು, ಜ್ಞಾನಿಗಳು, ಬಂಧುಗಳು, ಇವರೆಲ್ಲರ ಯೋಗ, ವಿಯೋಗದಲ್ಲೂ ಮೋಹಗೊಳ್ಳಬಾರದು. ಇವರೆಲ್ಲ ನಮಗೆಲ್ಲ ತಿಳಿಯದ ಎಲ್ಲಿಂದಲೋ ಬಂದು ನಮ್ಮೊಡನೆ ಸೇರಿ ಮತ್ತೇ ನಮಗೆ ಗೊತ್ತಿಲ್ಲದೆ ಎಲ್ಲೋ ಹೋಗಿ ಸೇರುತ್ತಾರೆ. ಅವರಿಗೆ ನೀನು ಕಾಣಿಸುವುದಿಲ್ಲ, ನಿನಗೆ ಅವರು ಕಾಣಿಸುವುದಿಲ್ಲ. ಹೀಗಿರುವಾಗ ಯೋಗ, ವಿಯೋಗಕ್ಕೆ ಏಕೆ ಸುಖ ಹಾಗೂ ದುಃಖ?[೩]

---

೧ ಕಾ ಬುದ್ಧಿಃ ಕಿಂ ತಪೋ ವಿಪ್ರ ಕಃ ಸಮಾಧಿಸ್ತಪೋಧನ ।
ಕಿಂ ಜ್ಞಾನಂ ಕಿಂ ಶ್ರುತಂ ವಾ ತೇ ಯತ್ ಪ್ರಾಪ್ಯ ನ ವಿಷೀದಸಿ ॥
ಹೃಷ್ಯಂತಮಸೀದಂತಂ ಸುಖದುಃಖವಿಪರ್ಯಯೇ ।
ಆತ್ಮಾನಮನುಶೋಚಾಮಿ ಯೋ ಮಮ್ಯೈಷ ಹೃದಿಸ್ಥಿತಃ ॥ – ೧/೧೨,೧೩

೨ ಪಶ್ಯ ಭೂತಾನಿ ದುಃಖೇನ ವ್ಯತಿಷಿಕ್ತಾನಿ ಸರ್ವಶಃ ।
(ಉತ್ತಮಾಧಮಮಧ್ಯಾನಿ ತೇಷು ತೇಷ್ವಪಿ ಕರ್ಮಸು)
ಆತ್ಮಾಪಿ ಚಾಯಂ ನ ಮಮ ಸರ್ವಾ ವಾ ಪೃಥಿವೀ ಮಮ ॥
ಯಥಾ ಮಮ ತಥಾನ್ಯೇಷಾಮಿತಿ ಬುದ್ಧ್ಯಾ ನ ಮೇ ವ್ಯಥಾ ॥
ಏತಾಂ ಬುದ್ಧಿಮಹಂ ಪ್ರಾಪ್ಯ ನ ಪ್ರಹೃಷ್ಯೇ ನ ಚ ವ್ಯಥೇ ॥ – ೧/೧೪,೧೫

೩. ಏವಂ ಪುತ್ರಾಶ್ಚ ಪೌತ್ರಾಶ್ಚ ಜ್ಞಾತಯೋ ಬಾಂಧವಾಸ್ತಥಾ ।
ತೇಷು ಸ್ನೇಹೋ ನ ಕರ್ತವ್ಯೋ ವಿಪ್ರಯೋಗೋ ಹಿ ತೈರ್ಧ್ರುವಮ್ ॥
... ನ ತ್ವಾಸೌ ವೇದ ನ ತ್ವಂ ತಂ ಕಃ ಸನ್ ಕಮನು ಶೋಚಸಿ । – ೧/೧೭,೧೮

೨. ಸುಖದುಃಖಗಳು ಪರಸ್ಪರ ಅನುಸರಿಸಿ ಬರುತ್ತವೆ, ಹೋಗುತ್ತವೆ. ಯಾವುವೂ ನಿತ್ಯವಲ್ಲ, ಆದ್ದರಿಂದಲೂ ಏಕೆ ಶೋಕಿಸುವೆ?[೧]

೩. ಸುಖದುಃಖಗಳಿಗೆ ಆಶ್ರಯವಾದುದು ಶರೀರ, ಆತ್ಮನಲ್ಲ, ಶರೀರವಿದ್ದಾಗ ಆಚರಿಸುವ ಕರ್ಮಗಳಿಗನುಸಾರವಾಗಿ ಸುಖದುಃಖಾನುಭವಗಳು.[೨]

೪. ಲೋಕದಲ್ಲಿ ಜೀವನ ಎಂಬುದು ಶರೀರದೊಡನೆ ಬರುತ್ತದೆ. ಅವರೆಡೂ ಒಟ್ಟಿಗೆ ಚಲಿಸುತ್ತಾ ಒಟ್ಟಿಗೆ ನಾಶವಾಗುತ್ತವೆ.

೫. ಎಲ್ಲ ಮಾನವರೂ ಹೆಂಡತಿ ಮಕ್ಕಳಿಂದ ಕೂಡಿದ ಕುಟುಂಬಗಳಲ್ಲಿ ತುಂಬಾ ಆಸಕ್ತರಾಗಿ ವಯಸ್ಸಾದ ಕಾಡಾನೆಗಳಂತೆ ದುಃಖವೆಂಬ ಕೆಸರಿನ ಸಮುದ್ರದಲ್ಲಿ ಸಿಕ್ಕು ಮುಳುಗುತ್ತಾರೆ. ಪುತ್ರ, ಧನ, ಜ್ಞಾತಿ, ಬಂಧುಜನರ ನಾಶವಾಗಲು, ಕಾಡ್ಗಿಚ್ಚಿನಲ್ಲಿ ಸಿಕ್ಕಿಹಾಕಿಕೊಂಡವರಂತೆ ಭಾರೀ ದುಃಖ ಹೊಂದುತ್ತಾರೆ. ಒಬ್ಬ ವ್ಯಕ್ತಿಯು ಅನೇಕ ಸ್ನೇಹಿತರಿಂದ ಕೂಡಿರಲಿ, ಒಟ್ಟಿರಲಿ, ಜಾಣನಾಗಿರಲಿ, ದಡ್ಡನಾಗಿರಲಿ, ದೈವಾಧೀನನಾಗಿಯೇ ಸುಖ ಹೊಂದುತ್ತಾನೆ. [೩]ಸ್ನೇಹಿತರು ಸುಖ ಕೊಡಲು, ಶತ್ರುಗಳು ದುಃಖ ತಂದೊಡ್ಡಲು, ಸಮರ್ಥರಲ್ಲ, ಬುದ್ಧಿವಂತಿಕೆಯಿಂದ ಧನ ಬಾರದು. ಬಡತನಕ್ಕೆ ಮೂರ್ಖತನವೂ ಕಾರಣವಲ್ಲ.

ಬುದ್ಧಿವಂತನೇ ಆಗಲಿ, ಮೂರ್ಖನೇ ಆಗಲಿ, ಶೂರನಾಗಲಿ, ಹೇಡಿಯಾಗಿರಲಿ, ಜಡನಾಗಿರಲಿ, ಕವಿಯಾಗಿರಲಿ, ಬಲಿಷ್ಠನಾಗಲಿ, ದುರ್ಬಲನಾಗಿರಲಿ, ಬರಲಿರುವ ಸುಖಕ್ಕೆ ದೈವವೇ ಕಾರಣ, ದೈವವಿದ್ದರೆ ಸುಖಬಾರದು. ಇವೆಲ್ಲವೂ ಭಗವದಧೀನವೇ. (ರಾಜನ್! ನಿನ್ನ ದುಃಖಕ್ಕೂ ದೈವಬಲವಿಲ್ಲದಿರುವುದೇ ಕಾರಣ).

೬. ಹೀಗೆ ಪ್ರಾಪಂಚಿಕ ಸುಖಕ್ಕೆ ದೈವಬಲಬೇಕು. ಆತ್ಯಂತಿಕ ಸುಖವಾದ ಮೋಕ್ಷ ಸುಖಕ್ಕೆ ಜ್ಞಾನಿಗಳು ಅನಿತ್ಯಗಳಾದ ಧರ್ಮಾರ್ಥಕಾಮಗಳನ್ನು ನಂಬದೇ ಮೋಕ್ಷವನ್ನೇ ನಂಬುತ್ತಾರೆ. ಅದಕ್ಕಾಗಿ ಧರ್ಮಸಾಧನೆ ಮಾಡುತ್ತಾರೆ. ಆದ್ದರಿಂದ ಸುಖಕ್ಕಾಗಿ ಮೊದಲ ಸಾಧನವಾದ ಧರ್ಮ ಹಾಗೂ ಅಂತಿಮ ಫಲವಾದ ಲೋಕಗಳಲ್ಲಿಯೇ ಜ್ಞಾನಿಗಳು ಸುಖ ಪಡುತ್ತಾರೆ. ಕಾರಣ ಅರ್ಥಕಾಮಗಳು ದುಃಖ(ಕಾರಣವೆಂದು) ಜ್ಞಾನಿಗಳು ಹೇಳುತ್ತಾರೆ[೪].

---

೧ ಸುಖಸ್ಯಾನಂತರಂ ದುಃಖಂ ದುಃಖಸ್ಯಾನಂತರಂ ಸುಖಮ್ ।
ಸುಖಾತ್ ತ್ವಂ ದುಃಖಮಾಪನ್ನಃ ಪುರಾಪತ್ಸ್ಯಸೇ ಸುಖಮ್ ॥
ನ ನಿತ್ಯಂ ಲಭತೇ ದುಃಖಂ ನ ನಿತ್ಯಂ ಲಭತೇ ಸುಖಮ್ ॥ - ೧/೧೯,೨೦

೨ ಶರೀರಮೇವಾಯತನಂ ಸುಖಸ್ಯ ದುಃಖಸ್ಯ ಚಾಪ್ಯಾಯತನಂ ಶರೀರಮ್ ॥ - ೧/೨೧

೩ ಲಕ್ಷಾಲಂಕಾರದಲ್ಲಿ - ನಾಲಂ ಸುಖಾಯ ಸುಹೃದಃ ..... । ಕಿಂತು ಹರಿರೇವ ಸುಖದುಃಖಪ್ರದ ಇತ್ಯರ್ಥಃ ॥

೪ ದೈವಾಯತ್ತಮಿದಂ ಸರ್ವಂ ಸುಖದುಃಖೇ ಭವಾಭವೌ ।...
ನ ಪ್ರಜ್ಞಃ ಪ್ರಜ್ಞಯಾ ಹೀನೋ ದೈವೇನ ಲಭತೇ ಸುಖಮ್ ॥

೭. ಪುತ್ರಶೋಕಪರಿಹಾರದ ಮಾರ್ಗವನ್ನು ಬ್ರಾಹ್ಮಣನು ಹೇಳುತ್ತಾನೆ. ಸುಖವಾಗಲೀ, ದುಃಖವಾಗಲೀ, ಪ್ರಿಯಾಪ್ರಿಯಗಳಾಗಲಿ, ಅವು ಬಂದಾಗ ಮನಃಪೂರ್ವಕವಾಗಿ, ಧೈರ್ಯದಿಂದ) ಎದುರಿಸಬೇಕು. ಪ್ರತಿನಿತ್ಯ ಸಾವಿರಾರು ದುಃಖಕಾರಣಗಳೂ, ನೂರಾರು ಸಂತೋಷದ ಕಾರಣ ಬರುತ್ತಿರುತ್ತವೆ. ಅವು ಅವಿವೇಕಿಗಳನ್ನು ದುರ್ಬಲಗೊಳಿಸುತ್ತವೆಯೇ ಹೊರತು ಬುದ್ಧಿವಂತರನ್ನಲ್ಲ. ಬುದ್ಧಿವಂತನನ್ನು, ವಿವೇಕಿಯನ್ನು (ಮಾಡುವ ಕೆಲಸವನ್ನು ತಿಳಿದವನನ್ನು), ಗುರುಹಿರಿಯರನ್ನು ಸೇವಿಸುವವರನ್ನು, ಅಸೂಯೆ ಇಲ್ಲದವನನ್ನು, ಜಿತೇಂದ್ರಿಯನನ್ನು ನಿತ್ಯ ಬರುವ ಶೋಕಗಳು ಮುಟ್ಟಲಾರವು[೧].

೮. ಯಾವ ಕಾರಣದಿಂದ ಶೋಕ, ತಾಪ, ದುಃಖಗಳು ಬಂದು ಆಯಾಸವುಂಟಾಗು-ವುದೋ ಆ ನಿಮಿತ್ತವನ್ನು ಅದು ಶರೀರದ ಭಾಗವಾಗಿದ್ದರೂ, ಕತ್ತರಿಸಬೇಕು, ತ್ಯಜಿಸಬೇಕು. ಹಾವು ಕಚ್ಚಿದ ಶರೀರದ ಭಾಗವನ್ನು ಕತ್ತರಿಸುವಂತೆ[೨].

೯. ದುಃಖಕ್ಕೆ ಕಾರಣವಾದ ಕಾಮವನ್ನು ತ್ಯಜಿಸಬೇಕು. ಅದೇ ಸುಖಕ್ಕೆ ಕಾರಣವಾಗುತ್ತದೆ.

೧೦. ಪೂರ್ವಜನ್ಮದಲ್ಲಿ ಮಾಡಿದ ಕರ್ಮವು ಒಳ್ಳೆಯದಿರಲಿ, ಕೆಟ್ಟದ್ದೇ ಇರಲಿ, ಅದು ಯಾರನ್ನೂ ಬಿಡದು. ಅವನು ಜ್ಞಾನಿಯಾಗಿರಲಿ, ಅಜ್ಞಾನಿಯಾಗಿರಲಿ, ಶೂರ, ಹೇಡಿಯಾಗಿರಲಿ, ಎಲ್ಲರನ್ನೂ ಪೂರ್ವಜನ್ಮದಲ್ಲಿ ಮಾಡಿದ ಕರ್ಮ ಮುಂದಿನ ಜನ್ಮಗಳಲ್ಲಿ ಅನುಸರಿಸುತ್ತದೆ[೩].

ಇದನ್ನು ತಿಳಿದವನು ಕಷ್ಟ ಬಂದಾಗ ಕುಗ್ಗದೆ, ಸುಖ ಬಂದಾಗ ಹಿಗ್ಗಲೂಬಾರದು.

೧೧. ಎಲ್ಲ ಕಾಮಗಳಲ್ಲಿ ಹೇಯಬುದ್ಧಿ ಇರಬೇಕು. ಎಲ್ಲ (ಕಾಮನೆ) ವಿಷಯಸುಖಗಳ ಬಗ್ಗೆ ವಿಮುಖನಾಗಬೇಕು.

ಕಾಮವೆಂಬುವುದು ಮನಸ್ಸಿನಲ್ಲಿಯೇ ಹುಟ್ಟುವ, ನಂತರ ವೃದ್ಧಿಯನ್ನು ಹೊಂದಿ ಕ್ರೋಧರೂಪತಾಳುವ ಜೀವರಿಗೆ ಶರೀರದಲ್ಲಿರುವ ಮೃತ್ಯುವೇ ಆಗಿದೆ (ಕಾಮ, ಕ್ರೋಧ).

---

ನಾಲಂ ಸುಖಾಯ ಸುಹೃದೋ ನಾಲಂ ದುಃಖಾಯ ಶತ್ರವಃ।
ಅಂತೇಷು ರೇಮಿರೇ ಧೀರಾ ನ ತೇ ಮಧ್ಯೇಷು ರೇಮಿರೇ ॥
ಅಂತಪ್ರಾಪ್ತಿಂ ಸುಖಂ ಪ್ರಾಹುಃ ದುಃಖಮಂತರಮಂತಯೋಃ ॥ - ೧/೨೬-೩೪

೧ ಬುದ್ಧಿಮಂತಂ ಕೃತಪ್ರಜ್ಞಂ ಶುಶ್ರೂಷುಮನಸೂಯಕಮ್ ।
ದಾಂತಂ ಜಿತೇಂದ್ರಿಯಂ ಚಾಪಿ ಶೋಕೋ ನ ಸ್ಪೃಶತೇ ನರಮ್ ॥ - ೧/೪೦-೪೩

೨ ಯನ್ನಿಮಿತ್ತೋ ಭವೇತ್ ಶೋಕಸ್ತಾಸೋ ವಾ ದುಃಖಮೇವ ವಾ ।
ಆಯಾಸೋ ವಾ ಯತೋಽಮಲಸ್ತದೇಕಾಂಗಮಪಿ ತ್ಯಜೇತ್ ॥ - ೧/೪೪

೩. ಪೂರ್ವದೇಹಕೃತಂ ಕರ್ಮ ಶುಭಂ ವಾ ಯದಿ ವಾ ಶುಭಮ್ ।
ಪ್ರಾಜ್ಞಂ ಮೂಢಂ ತಥಾ ಶೂರಂ ಭಜತೇ ಯಾದೃಶಂ ಕೃತಮ್ ॥ - ೧/೪೭,೪೮

ಆದ್ದರಿಂದ ಮನುಷ್ಯನು (ಜ್ಞಾನಿಯಾದವನು) ಈ ಕಾಮನೆಗಳನ್ನು, ಆಮೆಯು ತನ್ನ ಅಂಗಾಂಗಗಳನ್ನು ತನ್ನೊಳಗೆ ಸೇರಿಸಿಕೊಂಡು, ಬೇಕಾದಾಗ ಹೊರ ಹಾಕುವಂತೆ ಹತೋಟಿಯಲ್ಲಿರಿಸಿಕೊಂಡರೆ ಭಗವದ್ವಿಷಯಕ ಜ್ಞಾನ ಪ್ರಕಾಶ ಹೊಂದುತ್ತಾನೆ[೧].

೧೨. ಜ್ಞಾನಿಯಾದವನು ಯಾರಿಗೂ ಭಯ ಹುಟ್ಟಿಸಬಾರದು. ತಾನೂ ಇತರರಿಂದ ಭಯ ಪಡಬಾರದು. ಆಗಲೇ ಸ್ಥಿತಪ್ರಜ್ಞನಾಗುತ್ತಾನೆ. ಅಂತಹವನೇ ಇಚ್ಛಾದ್ವೇಷಗಳಿಗೆ ವಶನಾಗುವುದಿಲ್ಲ. ಪರಬ್ರಹ್ಮನನ್ನು ಹೊಂದುತ್ತಾನೆ.

ಇವೇ ಮೊದಲಾದ ವಿಷಯಗಳಲ್ಲಿ ವೇಶ್ಯಾ, ಪಿಂಗಲೆಯು ಹೇಳಿದ ಮಾತುಗಳನ್ನು ಕೇಳು ಎಂದು ಬ್ರಾಹ್ಮಣನು ರಾಜನಿಗೆ ಉದಾಹರಿಸುತ್ತಾನೆ[೨]. ಅವು ಪ್ರಿಯಕರನಿಂದ ವಿರಹಿತಳಾಗಿ ಅನೇಕ ದಿನಗಳು ಆಕೆಯು ತನ್ನ ಬುದ್ಧಿಯನ್ನು ಸ್ಥಿರವಾಗಿಟ್ಟುಕೊಂಡು ಹೇಳುತ್ತಾಳೆ.

೧. ನನ್ನ ಹತ್ತಿರದಲ್ಲೇ(ಹೃದಿಯಲ್ಲಿ)ರುವ ಮನೋಹರನಾದ ಭಗವಂತನನ್ನು ಉನ್ಮತ್ತಳಾದ ನಾನು ಇದುವರೆಗೆ ತಿಳಿಯಲಿಲ್ಲ. ಈ ದೇಹ ಬೆನ್ನೆಲುಬೆಂಬ ಅಸ್ಥಿಸ್ಥಂಭವನ್ನಾಧರಿಸಿದ್ದು ಒಂಭತ್ತು ದ್ವಾರವುಳ್ಳದ್ದಾಗಿದೆ. ಇಂತಹ ಶರೀರವನ್ನು ನಾನು ನನ್ನ ಹೃದಯದಲ್ಲಿರುವ ಭಗವಂತನಿಗೆ ಸಮ ತಿಳಿಸುತ್ತೇನೆ. ಬಾಹ್ಯಕಾಮನೆಗಳಿಗೆ ತೆರೆಯುವುದಿಲ್ಲ. ನನ್ನೊಳಗೇ ಇರುವವನ್ನು ಕಾಂತನೆಂದು ಭಾವಿಸದೆ ಬೇರೆಯವನನ್ನು ಯಾರು ತಾನೇ ಕಾಂತನೆಂದು ಭಾವಿಸುತ್ತಾರೆ?[೩]

ಈಗ ನಾನು ಸ್ಥಿತಪ್ರಜ್ಞಳು. ನನ್ನೀ ಶರೀರವನ್ನು ಧೂರ್ತರೂ, ನರಕರೂಪಿಗಳೂ (ನರಕಕ್ಕೆ ಹೋಗುವವರು) ಕಾಮಸ್ವರೂಪಿಗಳಾದ ವ್ಯಕ್ತಿಗಳು (ಜಾರರು) ವ್ಯಥೆ ಪಡಿಸಲಾರರು (ವಂಚಿಸಲಾರರು). ನಾನೀಗ ಎಚ್ಚರಗೊಂಡು ವೇಶ್ಯಾವೃತ್ತಿಯನ್ನು ತೊರೆದಿದ್ದೇನೆ. ಜಿತೇಂದ್ರಿಯಳಾಗಿದ್ದೇನೆ. ನಾನಿನ್ನು ಆಶೆಗಳನ್ನೆಲ್ಲ ಬಿಟ್ಟು ಸುಖವಾಗಿ ನಿದ್ರಿಸುತ್ತೇನೆ. ಇಂದ್ರಿಯಜನ್ಯ

---

೧ ಸರ್ವಾನ್ ಕಾಮಾನ್ ಜಗುಪ್ಸೇತ ಸಂಗಾನ್ ಕುರ್ವೀತ ಪೃಷ್ಠತಃ।
ವೃತ್ತ ಏಷ ಹೃದಿ ಪ್ರೌಢ ಇತ್ಯತ್ರ ಏಷಃ ಕಾಮಃ ಕ್ರೋಧಶ್ಚ ಶರೀರಾನ್ನಿವೃತ್ತಶ್ಚೇತ್ ಸ ಪುರುಷಃ ಹೃದಿಪ್ರೌಢಃ
। ಏಷಃ ಶರೀರಸ್ಥ ಮನೋಭವಃ ಕಾಮಃ ಕ್ರೋಧಃ ಮೃತ್ಯುರಿತ್ಯುಚ್ಯತೇ ॥
ವೃತ್ತ ಏಷ ಹೃದಿ ಪ್ರೌಢೋ ಮೃತ್ಯುರೇಷ ಮನೋಭವಃ।
ಕ್ರೋಧೊ ನಾಮ ಶರೀರಸ್ಥೋ ದೇಹಿನಾಂ ಪ್ರೋಚ್ಯತೇ ಬುಧೈಃ॥ - ೧/೫೦,೫೧

೨ ಈ ವೇಶ್ಯಾ ಪಿಂಗಲೆಯ ಕಥೆಯು ಭಾಗವತದಲ್ಲಿಯೂ ಬಂದಿದೆ (೧೧/೮/೨೧-೪೪)

೩ ಉನ್ಮತ್ತಾಹಮನುನ್ಮತ್ತಂ ಕಾಂತಮನ್ವವಸಂ ಚಿರಮ್।
ಅಂತಿಕೇ ರಮಣಂ ಸಂತಂ ನೈನಮಧ್ಯಗಮಂ ಪುರಾ ॥
ಕಾ ಹಿ ಕಾಂತಮಿಹಾಯಾಂತಮಯಂ ಕಾಂತೇತಿ ಮಂಸ್ಯತೇ ॥
ಏಕಸ್ಥೂಣಂ ನವದ್ವಾರಮಿತ್ಯತ್ರ - ಏಕಂ ಪೃಷ್ಠಾಸ್ಥಿ ಸ್ಥೂಣಾ ಸ್ಥಂಭೋ ಯಸ್ಯ ತತ್। ನವದ್ವಾರಂ ಶರೀರಾಖ್ಯಂ ಅಗಾರಕಂ ಅಗಾರಂ ಅಪಿಧಾಸ್ಯಾಮಿ ಆಚ್ಛಾದಯಾಮಿ ಕಸ್ಮೈಚಿನ್ನ ದಿಶಾಮಿ ಇತ್ಯರ್ಥಃ।
ಕಾಂತಂ ಜಾರಂ।

ಸುಖದ ಆಸೆಗಳು ಇಲ್ಲದಿರುವಿಕೆ ಎನ್ನುವುದು ಅಂತ್ಯಂತ ಸುಖ(ಸಾಧನ). ನಾನೀಗ ಲೌಕಿಕ ಆಶೆಯನ್ನೆಲ್ಲ ಆಶೆ ಇಲ್ಲದವನ್ನಾಗಿಸಿ(ತ್ಯಾಗ ಮಾಡಿ) ಭಗವಂತನ ಆಶೆಯಿಂದಲೇ (ಆತನ ಚಿಂತೆಯಲ್ಲಿಯೇ) ಸುಖವಾಗಿ ನಿದ್ರಿಸುತ್ತೇನೆ[1].

ಲಕ್ಷಾಲಂಕಾರದಲ್ಲಿ ಈ ಮೇಲಿನ ಶ್ಲೋಕಗಳ ಕೆಲವು ಶಬ್ದಗಳಿಗೆ ಹೀಗೆ ಅರ್ಥ ಬರೆಯಲಾಗಿದೆ[2].

ಬ್ರಾಹ್ಮಣನ ಈ ಸಮಾಧಾನಕರ ಯುಕ್ತಿಯುಕ್ತವಾದ ಮಾತುಗಳನ್ನು ಕೇಳಿದ ಸೇನಜಿತ್ ರಾಜನು ಸಮಾಧಾನ ಹೊಂದಿ ಭಗವಂತನಲ್ಲಿ ಮನಸ್ಸನ್ನು ಇರಿಸಿ ಸುಖವಾಗಿದ್ದನು.

## ಸಂದೇಶಗಳು

ಸ್ಪಷ್ಟವಾಗಿಯೇ ಇವೆ.

ಬ್ರಾಹ್ಮಣನ ಮಾತುಗಳು ಎಂದರೆ ಭಗವಂತನ ಮಾತುಗಳಂತೆಯೇ ಸರಿ. 'ವಿಪ್ರವಾಕ್ಯೋ ಜನಾರ್ದನಃ' ಎಂಬ ಮಾತು ಅದಕ್ಕೆ ಪ್ರಚಾರದಲ್ಲಿದೆ. ಆದ್ದರಿಂದ ಜ್ಞಾನಿಗಳಾದ ಬ್ರಾಹ್ಮಣರ ಮಾತಿಗೆ ಮನ್ನಣೆ ನೀಡಿದರೆ ಸುಖಪ್ರಾಪ್ತಿಯುಂಟು.

ಇತ್ಯಾದಿ...

*****

---

೧ ಅಕಾಮಂ ಕಾಮರೂಪೇಣ ಧೂರ್ತಾ ನರಕರೂಪಿಣಃ ।
ನ ಪುನರ್ಯಾಭಯಿಷ್ಯಂತಿ ಪ್ರತಿಬುದ್ಧಾಸ್ಮಿ ಜಾಗ್ರಮಿ ॥
ಸಂಬುದ್ಧಿಹಂ ನಿರಾಕಾರಾ ನಾಹಮದ್ಯಾ ಜಿತೇಂದ್ರಿಯಾ ॥
ಏಕಸ್ಥೂಣಂ ನಮವದ್ವಾರಮಪಿ ಧಾಸ್ಯಾಮ್ಯಗಾರಕಮ್ ।
ಕಾ ಹಿ ಕಾಂತಮಿಹಾಯಾಂತಮಯಂ ಕಾಂತೇತಿ ಮಂಸ್ಯತೇ ॥
ಆಶಾಮನಾಶಾಂ ಕೃತ್ವಾ ಹಿ ಸುಖಂ ಸ್ವಪಿತಿ ಪಿಂಗಲಾ ॥ – ೧/೬೧-೬೪

೨ ಆಶಾಂ ಅನಾಶಾಂ ಇತ್ಯತ್ರ ಅನಾಶಾಂ ಲೌಕಿಕೇಷು ಆಶಾರಹಿತಾಮ್ ।

# ೧೮೦. ಮಗನೊಡನೆ ತಂದೆಯ ಸಂವಾದ

ಎಲ್ಲ ಪ್ರಾಣಿಗಳ ಕ್ಷಯಕಾರಕವಾದ ಕಾಲ ಹೋಗುತ್ತಿರಲು (ಯಾರಿಗೂ ಕಾಯದೆ) ಶ್ರೇಯಸ್ಸಿನ ಮಾರ್ಗ ಯಾವುದು?

ಭೀಷ್ಮರು ಈ ಬಗ್ಗೆ ಪುತ್ರನೊಡನೆ ತಂದೆಯೊಬ್ಬನ ಸಂವಾದರೂಪ ಇತಿಹಾಸವನ್ನು ಹೇಳುತ್ತಾರೆ.

ಸ್ವಾಧ್ಯಾಯನಿರತ (ಸಾಂಗವೇದಾಧ್ಯಯನ)ನಾದ ಒಬ್ಬ **ಬ್ರಾಹ್ಮಣನಿಗೆ 'ಮೇಧಾವಿ'** ಎಂಬ ಮಗನಿದ್ದನು. ಆ ಮಗನು ಲೋಕತತ್ತ್ವಗಳಲ್ಲಿ ಬುದ್ಧಿವಂತನಾದ (ಲೌಕಿಕ ಜೀವನದ ಆಗುಹೋಗುಗಳ ವಿಷಯಗಳಲ್ಲಿ ನಿಪುಣನಾದ) ಹಾಗೂ ಮೋಕ್ಷಧರ್ಮ ವಿಚಾರಗಳಲ್ಲಿಯೂ ಬುದ್ಧಿವಂತನಾಗಿದ್ದು ತನ್ನ ತಂದೆಯನ್ನು ಕುರಿತು ಹೀಗೆ ಹೇಳಿದನು.

ಅಪ್ಪ! ಮಾನವರ ಆಯುಷ್ಯ ಅತ್ಯಂತ ವೇಗವಾಗಿ ಹೋಗುತ್ತದೆ. ಇದನ್ನು ತಿಳಿದ ಜ್ಞಾನಿಯು ಏನು ಮಾಡಬೇಕು? (ಶ್ರೇಯಸ್ಸಿಗಾಗಿ) ಯಾವ ರೀತಿಯಲ್ಲಿ ಧರ್ಮಾಚರಣೆ ನಾನು ಮಾಡಬೇಕು? ಅದರ ಸರಿಯಾದ ಉಪಾಯಗಳನ್ನು ಹೇಳು (ಅದರ ಫಲವನ್ನು ಹೇಳು)?[೧]

ಮಗನ ಪ್ರಶ್ನೆಗೆ ತಂದೆಯು –

ಮಗನೇ! ಬ್ರಹ್ಮಚರ್ಯದಿಂದ (ವೇದೋಕ್ತಕರ್ಮಾಚರಣೆಯಿಂದ) ಕೂಡಿದವನಾಗಿ (ಗುರುಶುಶ್ರೂಷಾದಿಗಳನ್ನು ಮಾಡುತ್ತಾ) ವೇದಗಳನ್ನು ಅಧ್ಯಯನ ಮಾಡಿ ಪಿತೃವಂಶಗಳ ಶುದ್ಧಿಗಾಗಿ ಮಕ್ಕಳನ್ನು ಇಚ್ಛಿಸಬೇಕು (ಗೃಹಸ್ಥಾಶ್ರಮ ಸ್ವೀಕರಿಸಬೇಕು, ಮಕ್ಕಳನ್ನು ಪಡೆಯಬೇಕು). ನಂತರ ಅಗ್ನಿಗಳನ್ನು (ಮೂರುವಿಧವಾದ) ಸ್ಥಾಪಿಸಿ ವಿಧ್ಯುಕ್ತವಾಗಿ ಯಜ್ಞಗಳನ್ನು ಮಾಡಬೇಕು. ನಂತರ ವಾನಪ್ರಸ್ಥಾಶ್ರಮ ಸ್ವೀಕರಿಸಿ ಮುನಿಯಾಗಿ ವನವನ್ನು (ಪ್ರವೇಶಿಸಬೇಕು)[೨].

---

೧ ಧೀರಃ ಕಿಂ ಸ್ವಿತ್ತಾತ ಕುರ್ಯಾತ್ ಪ್ರಜಾನನ್ ಕ್ಷಿಪ್ರಂ ಹ್ಯಾಯುರ್ಭ್ರಶತೇ ಮಾನವಾನಾಮ್ ।
ಪಿತಸ್ತದಾಚಕ್ಷ್ವ ಯಥಾರ್ಥಯೋಗಂ ಮಮಾನುಪೂರ್ವ್ಯಾ ಯೇನ ಧರ್ಮಂ ಚರೇಯಮ್ ॥
– ೨/೫

೨ ವೇದಾನಧೀತ್ಯ ಬ್ರಹ್ಮಚರ್ಯೇಣ ಪುತ್ರ ಪುತ್ರಾನಿಚ್ಛೇತ್ ಪಾವನಾರ್ಥಂ ಪಿತೃಣಾಮ್ ।
ಅಗ್ನೀನಾಧಾಯ ವಿಧಿವಚ್ಚೇಷ್ಟಯಜ್ಞೋ ವನಂ ಪ್ರವಿಶ್ಯಾಥ ಮುನಿರ್ಬುಭೂಷೇತ್ ॥ – ೨/೬

ತಂದೆಯ ಉತ್ತರಕ್ಕೆ ಮಗನು ಅಪ್ಪನೇ! ಲೋಕವೇ ನಾಶವಾಗುತ್ತಿರಲು, ದುಷ್ಟಶಕ್ತಿಗಳು ಆವರಿಸುತ್ತಿರಲು (ಜನರನ್ನು) ನೀನು ಜ್ಞಾನಿಯಂತೆ ಮಾತನಾಡುತ್ತಿರುವೆಯಲ್ಲ! (ಜಗತ್ತಿನ ಬದಲಾವಣೆಗಳಿಗೆ ನೀನು ಸರಿಯಾಗಿ ಸ್ಪಂದಿಸದೆ ಯಾಂತ್ರಿಕವಾಗಿ ಧರ್ಮೋಪದೇಶವನ್ನು ಮಾಡುತ್ತಿರುವೆಯಲ್ಲ! ಜಗತ್ತಿನಲ್ಲಿ ನೀನು ಹೇಳಿದ್ದೆಲ್ಲವನ್ನು ಮಾಡಲು ಬಿಡದಷ್ಟು ಅಧರ್ಮ ತುಂಬಿದೆ. ಕಾಲ ನಮ್ಮನ್ನು ಧಾರ್ಮಿಕರನ್ನಾಗಿಸಲು ಬಿಡದು).

ಮಗನ ಮಾತುಗಳಿಗೆ ತಂದೆಯು ಈ ಲೋಕವು ಹೇಗೆ ಕೊಲ್ಲಲ್ಪಡುತ್ತದೆ? ಯಾರಿಂದ ಆವರಿಸಲ್ಪಟ್ಟಿದೆ? ಅಮೋಘವಾದ ಯಾವ ಶಕ್ತಿಗಳು ಜನರ ಮೇಲೆ ಬೀಳುತ್ತಿವೆ? (ನನಗೆ ಇವ್ಯಾವುದೂ ತೋರುತ್ತಿಲ್ಲ) ನನ್ನನ್ನು ಏಕೆ ಹೆದರಿಸುತ್ತಿರುವೆ?

ತಂದೆಯ ಅಮಾಯಕ ಉತ್ತರಕ್ಕೆ ಪುತ್ರನು ತನ್ನ ವಿವರಣೆಯನ್ನು ಬಹುದೀರ್ಘವಾಗಿ ಮೂವತ್ತು ಶ್ಲೋಕಗಳಿಂದ ಉತ್ತರಿಸಿದನು. ಅದರ ಸಾರ ಹೀಗಿದೆ.

೧. ಅಪ್ಪಾ ಜಗತ್ತೆಲ್ಲ ಮೃತ್ಯುವಿನಿಂದ ಕೊಲ್ಲಲ್ಪಡುತ್ತಿದೆ. ಮುಪ್ಪಿನಿಂದ ಆವೃತವಾಗಿದೆ. ಹಗಲು ರಾತ್ರಿಗಳು (ಅಮೋಘವಾದ) ಮನುಷ್ಯರ ಮೇಲೆ (ಪ್ರಾಣಿಗಳ) ಬೀಳುತ್ತಿದೆ. ಇದು ನಿನಗೆ ಹೇಗೆ ತಿಳಿದಿಲ್ಲ?[೧] ಕಳೆಯಲ್ಪಡುವ ಪ್ರತಿರಾತ್ರಿಯೂ ಆಯುಷ್ಯವನ್ನು ಸ್ವಲ್ಪಸ್ವಲ್ಪ ಕ್ಷೀಣಿಸುತ್ತಾ ಹೋಗುತ್ತದೆ. ಆಯುಷ್ಯ ಯಾರದೂ ಇಷ್ಟೇ ಎಂದು ಗೊತ್ತಿಲ್ಲದಿರುವಾಗ ಪ್ರತಿದಿನವೂ ಮೃತ್ಯುವಿನ ಶಂಕೆ (ಬಂದೀತೆಂಬ) ಇರಬೇಕಲ್ಲವೇ?

೨. ಒಂದು ದಿನ ಗತಿಸಿತೆಂದರೆ ಅದು ವ್ಯರ್ಥವಾಗಿ ಹೋಯಿತೆಂದು ವಿದ್ವಾಂಸರು ಭಾವಿಸಬೇಕು. ಮನುಷ್ಯನ ಇಚ್ಛೆಗಳು (ಕಾಮನೆಗಳು) ಈಡೇರುವುದರೊಳಗೇನೇ ಮೃತ್ಯು ಅವನ ಸಮೀಪಕ್ಕೆ ಬರುತ್ತದೆ. ಅವನು ಎಲ್ಲೋ ಮನಸ್ಸಿಟ್ಟಾಗ ಕುರಿಮರಿಯನ್ನು ಎತ್ತಿಕೊಂಡು ಹೋಗುವ ತೋಳದಂತೆ ಮೃತ್ಯುವೂ ಮನುಷ್ಯನನ್ನು ಹಠಾತ್ತನೇ ಎತ್ತಿಕೊಂಡು ಹೋಗುತ್ತದೆ. ಆದ್ದರಿಂದ ಶ್ರೇಯಸ್ಸಾಧನವಾದುದನ್ನು ನಾಳೆ ಎನ್ನದೆ ಇಂದೇ ಮಾಡು. ಮಧ್ಯಾಹ್ನದ ಕಾರ್ಯಗಳನ್ನು ಬೆಳಿಗ್ಗೇ ಮಾಡು. ನೀನು ಅಂದುಕೊಂಡ ಕಾರ್ಯಗಳನ್ನು ಮಾಡಿದ್ದೀಯೋ ಇಲ್ಲವೋ ಎಂಬುದನ್ನು ಮೃತ್ಯು ನಿರೀಕ್ಷಿಸುವುದಿಲ್ಲ (ಕಾಯುವುದಿಲ್ಲ). ಯಾವನಿಗೆ ಮೃತ್ಯು ಯಾವಾಗ ಬರುತ್ತದೆಂದು ಯಾರಿಗೆ ಗೊತ್ತು?[೨]

---

೧ ಮೃತ್ಯುನಾಭ್ಯಾಹತೋ ಲೋಕೋ ಜರಯಾ ಪರಿವಾರಿತಃ।
ಅಹೋರಾತ್ರಾಃ ಪತಂತ್ಯೇತೇ ನನು ಕಸ್ಮಾನ್ನ ಬುಧ್ಯಸೇ ॥ – ೨/೯

೨ ತದೈವ ವಂಧ್ಯಂ ದಿವಸಮಿತಿ ವಿದ್ಯಾತ್ ವಿಚಕ್ಷಣಃ।
ಅನವಾಪ್ತೇಷು ಕಾಮೇಷು ಮೃತ್ಯುರಭ್ಯೇತಿ ಮಾನವಮ್ ॥
ಅದ್ಯೈವ ಕುರು ಯಚ್ಛ್ರೇಯೋ ಮಾ ತ್ವಾ ಕಾಲೋಽತ್ಯಗಾದಯಮ್ ।
ಶ್ವಃ ಕಾರ್ಯಮದ್ಯಕುರ್ವೀತ ಪೂರ್ವಾಹ್ಣೇ ಚಾಪರಾಹ್ಣಿಕಮ್ ।
ನ ಹಿ ಪ್ರತೀಕ್ಷತೇ ಮೃತ್ಯುಃ ಕೃತಂ ವಾಸ್ಯ ನ ವಾ ಕೃತಮ್ ।

೩. ಯುವಕನಾಗಿದ್ದಾಗಲೇ ಧಾರ್ಮಿಕನಾಗಿರಬೇಕು. ಏಕೆಂದರೆ ಬದುಕು ಸ್ಥಿರವಲ್ಲ (ಶಾಶ್ವತವಲ್ಲ). ಧರ್ಮಾಚರಣೆ ಮಾಡಿದರೆ ಇಲ್ಲಿ ಕೀರ್ತಿ, ಪರಲೋಕದಲ್ಲಿ ಸುಖ[೧].

೩. ಹೆಂಡತಿ ಮಕ್ಕಳಿಗಾಗಿ ಮನುಷ್ಯನು ಯೋಗ್ಯವಾದ ಕಾರ್ಯವನ್ನೋ, ಅಯೋಗ್ಯವಾದ ಕಾರ್ಯಗಳನ್ನೋ ಮಾಡುತ್ತಲೇ, ಅವರನ್ನು ಪೋಷಿಸುತ್ತಾನೆ. ಹೀಗೆ ಹೆಂಡತಿ, ಮಕ್ಕಳು, ಪಶು, ಸಂಪತ್ತುಗಳಿಂದ ಕೂಡಿದವನಾಗಿ ಅವುಗಳಲ್ಲಿಯೇ ಮೈಮರೆತು ನಿದ್ರಿಸುವ ಮನುಷ್ಯನನ್ನು ಮೃಗವನ್ನು ಎತ್ತಿಕೊಂಡು ಹೋಗುವ ಹುಲಿಯಂತೆ ಮೃತ್ಯುವೂ ಅಪಹರಿಸುತ್ತದೆ[೨].

೪. ವ್ಯಕ್ತಿಯು ದುರ್ಬಲನಿರಲಿ, ಬಲವಂತನೇ ಇರಲಿ, ಶೂರನಿರಲಿ, ಭಯಶೀಲನಿರಲಿ, ಜಡನಿರಲಿ (ಮಂದ), ಪಂಡಿತನಿರಲಿ, ಜೀವನದಲ್ಲಿ ಎಲ್ಲ ಆಶೆ ಈಡೇರಿದವನೇ ಇರಲಿ (ತನ್ನ ಆಶೆಗಳನ್ನೂ ಪೂರೈಸಿಕೊಂಡಿರಲಿ, ಬಿಟ್ಟಿರಲಿ) ಅವನನ್ನು ಮೃತ್ಯುವು ತೆಗೆದುಕೊಂಡು ಹೋಗುತ್ತದೆ[೩] (ವ್ಯಕ್ತಿಯ ಯಾವುದೇ ವೈಯಕ್ತಿಕ ಗುಣಾವಗುಣಗಳನ್ನು ನೋಡದೆ).

೫. ಮೃತ್ಯುವಿನ ಮುಖ - ಯಾವುದು ಎಂದರೆ, 'ಗ್ರಾಮ, ಪಟ್ಟಣಗಳಲ್ಲಿ ಬಂಧು, ಬಾಂಧವರೊಡನೆ ಕೂಡಿರಬೇಕು ಎಂಬ ಆಸಕ್ತಿ.'

ಜೀವರ ಈ ದೇಹ – ದೇವತೆಗಳ ಅರಣ್ಯ

ಈ ದೇಹವೆಂತಹುದು ಎಂದರೆ ಇಂದ್ರಿಯಗಳೆಂಬ ಹಸುಗಳನ್ನು ಕಟ್ಟಿಸುವ ದನದ ಕೊಟ್ಟಿಗೆಯಂತಿದೆ ಈ ದೇಹ.

ಪುಣ್ಯಾತ್ಮರು ಇಂತಹ ಬಲಿಷ್ಠವಾದ ಹಗ್ಗದ ಕಟ್ಟುಗಳನ್ನು ಕಿತ್ತುಕೊಂಡು ಸಾಗುತ್ತಾರೆ. ಪಾಪಿಗಳು ಇದೇ ಹಗ್ಗದ ಬಂಧನದಲ್ಲಿ ಸಿಕ್ಕು ಹಾಕಿಕೊಂಡು ಬೀಳುತ್ತಾರೆ.

ಮೃತ್ಯುವಿನ ಸೈನ್ಯ – ಮುಪ್ಪು, ವ್ಯಾಧಿಗಳು.

ಮೃತ್ಯುವನ್ನು ಎದುರಿಸುವ ಬಲ – ತತ್ತ್ವಜ್ಞಾನವೆಂಬ ಸತ್ಯ, ಸತ್ಯದಲ್ಲಿಯೇ ಅಮೃತವಿರುತ್ತದೆ.

---

ಕೋಹಿ ಜಾನಾತಿ ಕಸ್ಯಾದ್ಯ ಮೃತ್ಯುಸೇನಾ ನಿವೇಕ್ಷ್ಯತೇ ॥ - ೨/೧೦-೧೫

೧ ಯುವೈವ ಧರ್ಮಶೀಲಃ ಧರ್ಮಶೀಲಃ ಸ್ಯಾದನಿಮಿತ್ತಂ (ನಿತ್ಯಂ ಖಲು)ಹಿ ಜೀವಿತಂ ।
ಕೃತೇ ಧರ್ಮೇ ಭವೇತ್ಕೀರ್ತಿರಿಹ ಪ್ರೇತ್ಯ ಚ ವೈ ಸುಖಮ್ ॥ - ೨/೧೬

೨ ತಂ ಪುತ್ರಪಶುಸಮ್ಮತ್ತಂ ವ್ಯಾಸಕ್ತಮನಸಂ ನರಮ್ ।
ಸುಪ್ತಂ ವ್ಯಾಘ್ರಂ ಮಹೌಘೋ ವಾ ಮೃತ್ಯುರಾದಾರ್ಯ ಗಚ್ಛತಿ ॥ - ೨/೧೮

೩ ದುರ್ಬಲಂ ಬಲವಂತಂ ವಾ ಶೂರಂ ಭೀರುಂ ಜಡಂ ಕವಿಮ್ ।
ಅಪ್ರಾಪ್ತಸರ್ವಕಾಮಾರ್ಥಂ ಮೃತ್ಯುರಾದಾಯ ಗಚ್ಛತಿ ॥ - ೧/೨೨

ತಂದೆಯ ಉತ್ತರಕ್ಕೆ ಮಗನು ಅಪ್ಪನೇ! ಲೋಕವೇ ನಾಶವಾಗುತ್ತಿರಲು, ದುಷ್ಟಶಕ್ತಿಗಳು ಆವರಿಸುತ್ತಿರಲು (ಜನರನ್ನು) ನೀನು ಜ್ಞಾನಿಯಂತೆ ಮಾತನಾಡುತ್ತಿರುವೆಯಲ್ಲ! (ಜಗತ್ತಿನ ಬದಲಾವಣೆಗಳಿಗೆ ನೀನು ಸರಿಯಾಗಿ ಸ್ಪಂದಿಸದೆ ಯಾಂತ್ರಿಕವಾಗಿ ಧರ್ಮೋಪದೇಶವನ್ನು ಮಾಡುತ್ತಿರುವೆಯಲ್ಲ! ಜಗತ್ತಿನಲ್ಲಿ ನೀನು ಹೇಳಿದ್ದೆಲ್ಲವನ್ನು ಮಾಡಲು ಬಿಡದಷ್ಟು ಅಧರ್ಮ ತುಂಬಿದೆ. ಕಾಲ ನಮ್ಮನ್ನು ಧಾರ್ಮಿಕರನ್ನಾಗಿಸಲು ಬಿಡದು).

ಮಗನ ಮಾತುಗಳಿಗೆ ತಂದೆಯು ಈ ಲೋಕವು ಹೇಗೆ ಕೊಲ್ಲಲ್ಪಡುತ್ತದೆ? ಯಾರಿಂದ ಆವರಿಸಲ್ಪಟ್ಟಿದೆ? ಅಮೋಘವಾದ ಯಾವ ಶಕ್ತಿಗಳು ಜನರ ಮೇಲೆ ಬೀಳುತ್ತಿವೆ? (ನನಗೆ ಇವ್ಯಾವುದೂ ತೋರುತ್ತಿಲ್ಲ) ನನ್ನನ್ನು ಏಕೆ ಹೆದರಿಸುತ್ತಿರುವೆ?

ತಂದೆಯ ಅಮಾಯಕ ಉತ್ತರಕ್ಕೆ ಪುತ್ರನು ತನ್ನ ವಿವರಣೆಯನ್ನು ಬಹುದೀರ್ಘವಾಗಿ ಮೂವತ್ತು ಶ್ಲೋಕಗಳಿಂದ ಉತ್ತರಿಸಿದನು. ಅದರ ಸಾರ ಹೀಗಿದೆ.

೧. ಅಪ್ಪ! ಜಗತ್ತೆಲ್ಲ ಮೃತ್ಯುವಿನಿಂದ ಕೊಲ್ಲಲ್ಪಡುತ್ತಿದೆ. ಮುಪ್ಪಿನಿಂದ ಆವೃತವಾಗಿದೆ. ಹಗಲು ರಾತ್ರಿಗಳು (ಅಮೋಘವಾದ) ಮನುಷ್ಯರ ಮೇಲೆ (ಪ್ರಾಣಿಗಳ) ಬೀಳುತ್ತಿದೆ. ಇದು ನಿನಗೆ ಹೇಗೆ ತಿಳಿದಿಲ್ಲ?[೧] ಕಳೆಯಲ್ಪಡುವ ಪ್ರತಿರಾತ್ರಿಯೂ ಆಯುಷ್ಯವನ್ನು ಸ್ವಲ್ಪಸ್ವಲ್ಪ ಕ್ಷೀಣಿಸುತ್ತಾ ಹೋಗುತ್ತದೆ. ಆಯುಷ್ಯ ಯಾರದೂ ಇಷ್ಟೇ ಎಂದು ಗೊತ್ತಿಲ್ಲದಿರುವಾಗ ಪ್ರತಿದಿನವೂ ಮೃತ್ಯುವಿನ ಶಂಕೆ (ಬಂದೀತೆಂಬ) ಇರಬೇಕಲ್ಲವೇ?

೨. ಒಂದು ದಿನ ಗತಿಸಿತೆಂದರೆ ಅದು ವ್ಯರ್ಥವಾಗಿ ಹೋಯಿತೆಂದು ವಿದ್ವಾಂಸರು ಭಾವಿಸಬೇಕು. ಮನುಷ್ಯನ ಇಚ್ಛೆಗಳು (ಕಾಮನೆಗಳು) ಈಡೇರುವುದರೊಳಗೇನೇ ಮೃತ್ಯು ಅವನ ಸಮೀಪಕ್ಕೆ ಬರುತ್ತದೆ. ಅವನು ಎಲ್ಲೋ ಮನಸ್ಸಿಟ್ಟಾಗ ಕುರಿಮರಿಯನ್ನು ಎತ್ತಿಕೊಂಡು ಹೋಗುವ ತೋಳದಂತೆ ಮೃತ್ಯುವೂ ಮನುಷ್ಯನನ್ನು ಹಠಾತ್ತನೇ ಎತ್ತಿಕೊಂಡು ಹೋಗುತ್ತದೆ. ಆದ್ದರಿಂದ ಶ್ರೇಯಸ್ಸಾಧನವಾದುದನ್ನು ನಾಳೆ ಎನ್ನದೆ ಇಂದೇ ಮಾಡು. ಮಧ್ಯಾಹ್ನದ ಕಾರ್ಯಗಳನ್ನು ಬೆಳಿಗ್ಗೇ ಮಾಡು. ನೀನು ಅಂದುಕೊಂಡ ಕಾರ್ಯಗಳನ್ನು ಮಾಡಿದ್ದೀಯೋ ಇಲ್ಲವೋ ಎಂಬುದನ್ನು ಮೃತ್ಯು ನಿರೀಕ್ಷಿಸುವುದಿಲ್ಲ (ಕಾಯುವುದಿಲ್ಲ). ಯಾವನಿಗೆ ಮೃತ್ಯು ಯಾವಾಗ ಬರುತ್ತದೆಂದು ಯಾರಿಗೆ ಗೊತ್ತು?[೨]

---

೧ ಮೃತ್ಯುನಾಭ್ಯಾಹತೋ ಲೋಕೋ ಜರಯಾ ಪರಿವಾರಿತಃ।
ಅಹೋರಾತ್ರಾಃ ಪತಂತ್ಯೇತೇ ನನು ಕಸ್ಮಾನ್ನ ಬುಧ್ಯಸೇ॥ - ೨/೯

೨ ತದೈವ ವಂಧ್ಯಂ ದಿವಸಮಿತಿ ವಿದ್ಯಾತ್ ವಿಚಕ್ಷಣಃ।
ಅನವಾಪ್ತೇಷು ಕಾಮೇಷು ಮೃತ್ಯುರಭ್ಯೇತಿ ಮಾನವಮ್॥
ಅದ್ಯೈವ ಕುರು ಯಚ್ಛ್ರೇಯೋ ಮಾ ತ್ವಾ ಕಾಲೋಽತ್ಯಗಾದಯಮ್।
ಶ್ವಃ ಕಾರ್ಯಮದ್ಯಕುರ್ವೀತ ಪೂರ್ವಾಹ್ಣೇ ಚಾಪರಾಹ್ಣಿಕಮ್।
ನ ಹಿ ಪ್ರತೀಕ್ಷತೇ ಮೃತ್ಯುಃ ಕೃತಂ ವಾಸ್ಯ ನ ವಾ ಕೃತಮ್।

೩. ಯುವಕನಾಗಿದ್ದಾಗಲೇ ಧಾರ್ಮಿಕನಾಗಿರಬೇಕು. ಏಕೆಂದರೆ ಬದುಕು ಸ್ಥಿರವಲ್ಲ (ಶಾಶ್ವತವಲ್ಲ). ಧರ್ಮಾಚರಣೆ ಮಾಡಿದರೆ ಇಲ್ಲಿ ಕೀರ್ತಿ, ಪರಲೋಕದಲ್ಲಿ ಸುಖ[೧].

೩. ಹೆಂಡತಿ ಮಕ್ಕಳಿಗಾಗಿ ಮನುಷ್ಯನು ಯೋಗ್ಯವಾದ ಕಾರ್ಯವನ್ನೋ, ಅಯೋಗ್ಯವಾದ ಕಾರ್ಯಗಳನ್ನೋ ಮಾಡುತ್ತಲೇ, ಅವರನ್ನು ಪೋಷಿಸುತ್ತಾನೆ. ಹೀಗೆ ಹೆಂಡತಿ, ಮಕ್ಕಳು, ಪಶು, ಸಂಪತ್ತುಗಳಿಂದ ಕೂಡಿದವನಾಗಿ ಅವುಗಳಲ್ಲಿಯೇ ಮೈಮರೆತು ನಿದ್ರಿಸುವ ಮನುಷ್ಯನನ್ನು ಮೃಗವನ್ನು ಎತ್ತಿಕೊಂಡು ಹೋಗುವ ಹುಲಿಯಂತೆ ಮೃತ್ಯುವೂ ಅಪಹರಿಸುತ್ತದೆ[೨].

೪. ವ್ಯಕ್ತಿಯು ದುರ್ಬಲನಿರಲಿ, ಬಲವಂತನೇ ಇರಲಿ, ಶೂರನಿರಲಿ, ಭಯಶೀಲನಿರಲಿ, ಜಡನಿರಲಿ (ಮಂದ), ಪಂಡಿತನಿರಲಿ, ಜೀವನದಲ್ಲಿ ಎಲ್ಲ ಆಶೆ ಈಡೇರಿದವನೇ ಇರಲಿ (ತನ್ನ ಆಶೆಗಳನ್ನೂ ಪೂರೈಸಿಕೊಂಡಿರಲಿ, ಬಿಟ್ಟಿರಲಿ) ಅವನನ್ನು ಮೃತ್ಯುವು ತೆಗೆದುಕೊಂಡು ಹೋಗುತ್ತದೆ[೩] (ವ್ಯಕ್ತಿಯ ಯಾವುದೇ ವೈಯಕ್ತಿಕ ಗುಣಾವಗುಣಗಳನ್ನು ನೋಡದೆ).

೫. ಮೃತ್ಯುವಿನ ಮುಖ - ಯಾವುದು ಎಂದರೆ, 'ಗ್ರಾಮ, ಪಟ್ಟಣಗಳಲ್ಲಿ ಬಂಧು, ಬಾಂಧವರೊಡನೆ ಕೂಡಿರಬೇಕು ಎಂಬ ಆಸಕ್ತಿ.'

ಜೀವರ ಈ ದೇಹ - ದೇವತೆಗಳ ಅರಣ್ಯ

ಈ ದೇಹವೆಂತಹುದು ಎಂದರೆ ಇಂದ್ರಿಯಗಳೆಂಬ ಹಸುಗಳನ್ನು ಕಟ್ಟಿಸುವ ದನದ ಕೊಟ್ಟಿಗೆಯಂತಿದೆ ಈ ದೇಹ.

ಪುಣ್ಯಾತ್ಮರು ಇಂತಹ ಬಲಿಷ್ಠವಾದ ಹಗ್ಗದ ಕಟ್ಟುಗಳನ್ನು ಕಿತ್ತುಕೊಂಡು ಸಾಗುತ್ತಾರೆ. ಪಾಪಿಗಳು ಇದೇ ಹಗ್ಗದ ಬಂಧನದಲ್ಲಿ ಸಿಕ್ಕು ಹಾಕಿಕೊಂಡು ಬೀಳುತ್ತಾರೆ.

ಮೃತ್ಯುವಿನ ಸೈನ್ಯ - ಮುಪ್ಪು, ವ್ಯಾಧಿಗಳು.

ಮೃತ್ಯುವನ್ನು ಎದುರಿಸುವ ಬಲ - ತತ್ತ್ವಜ್ಞಾನವೆಂಬ ಸತ್ಯ, ಸತ್ಯದಲ್ಲಿಯೇ ಅಮೃತವಿರುತ್ತದೆ.

---

ಕೋಹಿ ಜಾನಾತಿ ಕಸ್ಯಾದ್ಯ ಮೃತ್ಯುಸೇನಾ ನಿವೇಕ್ಷ್ಯತೇ ॥ - ೨/೧೦-೧೫

೧ ಯುವೈವ ಧರ್ಮಶೀಲಃ ಧರ್ಮಶೀಲಃ ಸ್ಯಾದನಿಮಿತ್ತಂ (ನಿತ್ಯಂ ಖಲು)ಹಿ ಜೀವಿತಂ ।
ಕೃತೇ ಧರ್ಮೇ ಭವೇತ್ಕೀರ್ತಿರಿಹ ಪ್ರೇತ್ಯ ಚ ವೈ ಸುಖಮ್ ॥ - ೨/೧೬

೨ ತಂ ಪುತ್ರಪಶುಸಮ್ಮತ್ತಂ ವ್ಯಾಸಕ್ತಮನಸಂ ನರಮ್ ।
ಸುಪ್ತಂ ವ್ಯಾಘ್ರಂ ಮಹೌಘೋ ವಾ ಮೃತ್ಯುರಾದಾರ್ಯ ಗಚ್ಛತಿ ॥ - ೨/೧೮

೩ ದುರ್ಬಲಂ ಬಲವಂತಂ ವಾ ಶೂರಂ ಭೀರುಂ ಜಡಂ ಕವಿಮ್ ।
ಅಪ್ರಾಪ್ತಸರ್ವಕಾಮಾರ್ಥಂ ಮೃತ್ಯುರಾದಾಯ ಗಚ್ಛತಿ ॥ - ೧/೨೨

ಆದ್ದರಿಂದ ಸತ್ಯವೆಂಬ ವ್ರತವನ್ನೇ ಆಶ್ರಯಿಸಬೇಕು (ಸತ್ಯವೆಂದರೆ ಮೀಮಾಂಸಾ, ಬ್ರಹ್ಮಸೂತ್ರ ಮೊದಲಾದ ಶಾಸ್ತ್ರಾಧ್ಯಯನ ರೂಪ ಮತ್ತು ನಿತ್ಯ ಜೀವನದಲ್ಲಿ ಸತ್ಯ ಧರ್ಮಾಚರಣೆಗಳು). ಸತ್ಯವೇ ವೇದ. ಸತ್ಯವನ್ನೇ ಆಧಾರವಾಗಿ ತಿಳಿದು ಇಂದ್ರಿಯನಿಗ್ರಹವುಳ್ಳವನು. ಮೃತ್ಯುವನ್ನು ಗೆಲ್ಲುತ್ತಾನೆ[1].

ಮೃತ್ಯು, ಅಮೃತ ಎಂಬ ಎರಡು ವಿಷಯಗಳು ಈ ದೇಹದಲ್ಲಿವೆ. ಮೋಹದಿಂದ ಮೃತ್ಯು ಕಂಡರೆ, ಸತ್ಯದಿಂದ ಅಮೃತ ಸಿಗುತ್ತದೆ.

ಅಪ್ಪಾ ನಾನೂ ಮೃತ್ಯುವಿಗೆ ಗುರಿಯಾದರೂ, ಸತ್ಯವನ್ನೇ ಬಯಸುತ್ತಾ, ಕಾಮಕ್ರೋಧಗಳನ್ನು ದೂರವಿರಿಸಿದವನಾಗಿ, ಸುಖದುಃಖಗಳನ್ನು ಸಮವಾಗಿ ಅನುಸಂಧಾನ ಮಾಡುತ್ತಾ ನಿರ್ಭಯವಾಗಿ ಓಡಾಡಿಕೊಂಡಿದ್ದೇನೆ, ನಿವೃತ್ತಿ ಮಾರ್ಗ ಅವಲಂಬಿಸಿದ್ದೇನೆ. ಬ್ರಹ್ಮಯಜ್ಞದಲ್ಲಿ ಪರಿನಿಷ್ಠಿತನಾಗಿ, ಮನನಶೀಲನಾಗಿ, ಕಾಯೇನ, ವಾಚಾ, ಮನಸಾ ಮಾಡಬಹುದಾದ ಯಜ್ಞ (ಮಾಡುತ್ತಾ)ಗಳುಳ್ಳವನಾಗಿ, ಉತ್ತರಾಯಣವನ್ನು ನಿರೀಕ್ಷಿಸುತ್ತಿದ್ದೇನೆ. ನನ್ನಂತಹವನು ಪಶುಹಿಂಸೆ ಸ್ವರೂಪ ಯಜ್ಞಗಳನ್ನು ಹೇಗೆ ತಾನೇ ಮಾಡಿಯಾನು? ಪಿಶಾಚಿಗಳಿಗೆ ಯೋಗ್ಯವಾದ ಕ್ಷತ್ರಯಜ್ಞವನ್ನು ಮಾಡಲು ನನ್ನ ಮನಸ್ಸು ಬಾರದು.

ಯಾರ ಮಾತು, ಮನಸ್ಸುಗಳು ದೃಢವಾಗಿ ದೇವರಲ್ಲಿ ಏಕಾಗ್ರವಾಗಿ ಇವೆಯೋ ಅಂತಹವನ ತಪಸ್ಸು ತ್ಯಾಗ, ಯೋಗಗಳಿಂದ ಕೂಡಿರುವ ವ್ಯಕ್ತಿಯು ಎಲ್ಲ ಫಲವನ್ನು ಹೊಂದುತ್ತಾನೆ.

ವಿದ್ಯೆಗೆ ಸಮವಾದ ಕಣ್ಣಿಲ್ಲ, ಬಲವಿಲ್ಲ, ಆಸೆಗೆ ಸಮನಾದ ದುಃಖವಿಲ್ಲ, ತ್ಯಾಗಕ್ಕೆ ಸಮನಾದ ಸುಖವಿಲ್ಲ[2].

ನಾನು (ಜೀವನು) ಭಗವಂತನಿಂದಲೇ ಹುಟ್ಟಿದ್ದೇನೆ. ಹುಟ್ಟಿದ ನನಗೆ ಸಂತಾನ ಹೀನನಾದರೂ ಭಗವದನುಗ್ರಹಕ್ಕೆ ಯೋಗ್ಯನಾಗುತ್ತೇನೆ.

ಪ್ರಳಯದಲ್ಲಿ ಪರಮಾತ್ಮನನ್ನೇ ಹೊಂದುತ್ತೇನೆ. ಬಾಹ್ಯ ಪ್ರಜೆಗಳು (ಔರಸ ದೇಹದಿಂದ ಜನಿಸುವ) ಪರಮಾತ್ಮನಲ್ಲಿ ಆಸಕ್ತನಾದ ವ್ಯಕ್ತಿಯನ್ನು ಸಂಸಾರದಿಂದ ದಾಟಿಸಲಾರರು[3].

---

೧ ನ ಮೃತ್ಯುಸೇನಾಮಾಯಾಂತೀಂ ಜಾತು ಕಶ್ಚಿತ್ ಪ್ರಬಾಧತೇ ।
ಋತೇ ಸತ್ಯಮಸಂತ್ಯಾಜ್ಯಂ ಸತ್ಯೇ ಹ್ಯಮೃತಮಾಶ್ರಿತಮ್ ॥
ತಸ್ಮಾತ್ ಸತ್ಯವ್ರತಾಚಾರಃ ಸತ್ಯಯೋಗಪರಾಯಣಃ ।
ಸತ್ಯಾರಾಮಃ ಸಮೋ ದಾಂತಃ ಸತ್ಯೇನೈವಾಂತಕಂ ಜಯೇತ್ ॥ - ೨/೨೯-೩೦

೨ ನಾಸ್ತಿ ವಿದ್ಯಾಸಮಂ ಚಕ್ಷುರ್ನಾಸ್ತಿ ವಿದ್ಯಾ ಸಮಂ ಬಲಮ್ ।
ನಾಸ್ತಿ ರಾಗಸಮಂ ದುಃಖಂ ನಾಸ್ತಿ ತ್ಯಾಗಸಮಂ ಸುಖಮ್ ॥ - ೨/೩೬

೩. ಆತ್ಮನ್ಯೇವಾತ್ಮನಾ ಜಾತ ಆತ್ಮನಿಷ್ಠೋಽಪ್ರಜೋಽಪಿ ವಾ ।
ಆತ್ಮನ್ಯೇವ ಭವಿಷ್ಯಾಮಿ ನ ಮಾಂ ತಾರಯತಿ ಪ್ರಜಾಃ ॥ - ೨/೩೭

ಬ್ರಾಹ್ಮಣನಿಗೆ ಏಕಾಂತವಾಸ, ಎಲ್ಲರಲ್ಲೂ ಭಗವಂತನದೃಷ್ಟಿ, ಸತ್ಯ, ಶೀಲ, ಬ್ರಹ್ಮನಿಷ್ಠೆ (ಸ್ಥಿತಿ), ಅಹಿಂಸೆ, ಪ್ರಾಮಾಣಿಕತೆ (ಋಜುತ್ವ) ಕರ್ಮೋಪರಮತೆ (ಸಕಾಮಕರ್ಮಗಳಲ್ಲಿ ಅನಾಸಕ್ತಿಗಳೇ ಮುಖ್ಯ ಧನಗಳು) ಇವುಗಳಿಗೆ ಸಮಾನವಾದ ಮತ್ತೊಂದು ಧನವೇ ಇಲ್ಲ[೧].

ಎಲೈ ಜನಕನೇ! ಇಂದಲ್ಲ ನಾಳೆ ನಾಶಮಾಡುವ ಧನ, ಬಂಧು, ಪತ್ನಿಯರಿಂದ ಏನು ಪ್ರಯೋಜನ? ಆದ್ದರಿಂದ ಸರ್ವರ ಹೃದಯಗುಹೆಯಲ್ಲಿರುವ ಪರಮಾತ್ಮನನ್ನು ಧ್ಯಾನಿಸು. ನಿನ್ನ ತಂದೆ, ತಾತ, ಮುತ್ತಾತ ಎಲ್ಲಿದ್ದಾರೆಂದು ತಿಳಿದಿರುವೆಯಾ? ಎಂದು ಮಗನೆಂದನು.

ಮಗನ ಮಾತುಗಳನ್ನು ಕೇಳಿದ ತಂದೆಯೂ ಅವನ ದಾರಿಯನ್ನೇ ಹಿಡಿದು ಸುಖವಾಗಿದ್ದನು. ಧರ್ಮರಾಜನೇ ನೀನೂ ಅವನಂತೆ ಸತ್ಯಧರ್ಮರತನಾಗಿದ್ದುಕೊಂಡು ಆ ಮಾರ್ಗದಲ್ಲಿಯೇ ಇರು ಎಂದರು ಭೀಷ್ಮರು, ಧರ್ಮರಾಜನಿಗೆ.

## ಸಂದೇಶಗಳು

ಸಂದೇಶಗಳು ಸ್ಪಷ್ಟವಾಗಿಯೇ ಇವೆ. ವಿಶೇಷವೆಂದರೆ, ತಂದೆಗೆ ಮಗನು ಉಪದೇಶ ನೀಡಿರುವುದು. ಮಗನ ಉತ್ತರ ೯ನೇ ಶ್ಲೋಕದಿಂದ ಆರಂಭವಾಗಿ ೩೯ರವರೆಗೆ ಇದೆ. ಎಲ್ಲ ಶ್ಲೋಕಗಳ ಅಭಿಪ್ರಾಯಗಳೂ ಸಂದೇಶಗಳೇ ಆಗಿವೆ.

ಇತ್ಯಾದಿ....

*****

೧ ನೈತಾದೃಶಂ ಬ್ರಾಹ್ಮಣಸ್ಯಾಸ್ತಿ ವಿತ್ತಂ ಯಥೈಕತಾ ಸಮತಾ ಸತ್ಯತಾ ಚ।
ಶೀಲೇ ಸ್ಥಿತಿರ್ದಂಡನಿಧಾನಮಾರ್ಜವಂ ತತಸ್ತತಶ್ಚೋಪರಮಃ ಕ್ರಿಯಾಭ್ಯಃ॥ - ೨/೩೮

# ೧೮೧. ಶಮ್ಯಾಕಗೀತೆ

ಯುಧಿಷ್ಠಿರನಪ್ರಶ್ನೆ- ದರಿದ್ರರು, ಹಣವಂತರುಇಬ್ಬರೂತಮಗೆತಕ್ಕಂತೆಸ್ವತಂತ್ರವಾಗಿಯೇ ಜೀವನ ನಡೆಸುತ್ತಾರೆ (ವ್ಯವಹರಿಸುತ್ತಾರೆ). ಅವರಿಗೆ ಬರುವ ಸುಖದುಃಖಗಳು ಯಾವುದು? ಎಂತಹುದು? ತಾತ! ಇದನ್ನು ತಿಳಿಸು.

ಅದಕ್ಕೆ ಭೀಷ್ಮರು ಈ ವಿಷಯದಲ್ಲಿ **ಶಮ್ಯಾಕ**ನೆಂಬ ಬ್ರಾಹ್ಮಣನು ಹೇಳಿದ, ಶಾಂತಿಮಾರ್ಗದಿಂದ ಮೋಕ್ಷವನ್ನು ಪಡೆದ ಇತಿಹಾಸವನ್ನು ಹೇಳಿದರು (ಜೀವನ್ಮುಕ್ತರ, ಶಾಂತಸ್ವಭಾವದ ಶಮ್ಯಾಕನಿಂದ ಹೇಳಿದ ಇತಿಹಾಸ).

ಉಡಲು ಒಳ್ಳೆಯ ಬಟ್ಟೆ ಇರದ, ಉಣ್ಣಲು ಅನ್ನವಿಲ್ಲದ, ದುಷ್ಟಹೆಂಡತಿಯಿಂದ ಕೂಡಿದ, ಈ ರೀತಿಯಾಗಿ ಕ್ಲೇಶ ಪಡುತ್ತಿರುವ ಆತನು ತ್ಯಾಗ, ಧರ್ಮ ಆಶ್ರಯಿಸಿದನಾಗಿ ನನ್ನ ಬಳಿ ಬಂದು ಹೇಳಿದನು.

ಈ ಪ್ರಪಂಚದಲ್ಲಿ ಹುಟ್ಟುವ ಪ್ರತಿ ಮನುಷ್ಯನಿಗೆ ಹುಟ್ಟುತ್ತಲೇ ವಿವಿಧ ಸುಖದುಃಖಗಳು ಬರುತ್ತಲೇ ಇರುತ್ತವೆ. ಈ ಎರಡರಲ್ಲಿ ಒಂದು ಮಾರ್ಗದಲ್ಲಿ ನರನನ್ನು ಒಯ್ದಿದ್ದರೆ ಅವನಿಗೆ ಸುಖದಿಂದ ಹರ್ಷವಾಗಲೀ, ದುಃಖದಿಂದ ತಾಪ, ವ್ಯಸನಗಳಾಗಲೀ ಆಗುತ್ತಿದ್ದಿಲ್ಲ (ಸುಖದಲ್ಲಿಯೇ ಇರುವವರಿಗೆ ಸುಖದ ಪೂರ್ಣ ನಿಶ್ಚಿತ ಜ್ಞಾನವಾಗಲೀ, ದುಃಖದಲ್ಲಿಯೇ ಇರುವವರಿಗೆ ದುಃಖದ ಸರಿಯಾದ ಕಲ್ಪನೆ ಆಗದು).

ಹೀಗೆ ಹೇಳಿ ಶಮ್ಯಾಕನು ದರಿದ್ರನ ಹಾಗೂ ಧನಿಕನ ವೈಲಕ್ಷಣ್ಯಗಳನ್ನು ವಿವರಿಸುತ್ತಾನೆ.

**ದರಿದ್ರನ ವೈಶಿಷ್ಟ್ಯಗಳು** - ೧. ಯಾವುದೇ ಚಿಂತೆಯಿಲ್ಲದೆ ದರಿದ್ರನು ನಿದ್ರಿಸುತ್ತಾನೆ. ಸಿಕ್ಕಿದ್ದರಲ್ಲಿ ಸುಖ, ರುಚಿ ಕಾಣುತ್ತಾನೆ. ಸುಖವಾಗಿಯೇ ಎಚ್ಚರ ಹೊಂದುತ್ತಾನೆ (ಶ್ಲೋಕ. ೭). ಲೋಕದಲ್ಲಿ ಇದೇ ಉತ್ತಮ ಸುಖವಾಗಿದೆ. ಹಿತಕರ, ಮಂಗಳಕರ. ಇಲ್ಲಿ ಆಧಿವ್ಯಾಧಿಗಳಿಗೆ ಅವಕಾಶವಿರದು. ದರಿದ್ರರಿಗೆ ಶತ್ರುಗಳಿರುವುದಿಲ್ಲ. ಈ ಮಾರ್ಗ ಸುದುರ್ಲಭ. ಸಜ್ಜನರಿಗೆ ಸುಲಭಮಾರ್ಗ (ಶಮ್ಯಾಕನು ತಾನು ಇಂತಹವನಿಗೆ ಸಮಾನವಾದ ಸುಖಿಗಳೇ ಇಲ್ಲವೆನ್ನುತ್ತಾನೆ[1]).

---

೧ ಅಕಿಂಚನಸ್ಯ ಶುದ್ಧಸ್ಯ ಉಪಪನ್ನಸ್ಯ ಸರ್ವಶಃ।
ಅವೇಕ್ಷಮಾಣಸ್ತ್ರೀಂಲ್ಲೋಕಾನ್ನ ತುಲ್ಯಮುಪಲಕ್ಷಯೇ॥ - ೩/೯

೨. ರಾಜ್ಯ ಹಾಗೂ ದಾರಿದ್ರ್ಯಗಳನ್ನು ತೂಗಿ ನೋಡಿದರೆ ಬೌದ್ಧಿಕವಾಗಿ ದಾರಿದ್ರ್ಯವೇ ವಿಶಿಷ್ಟವಾದುದು[೧] (ಶ್ಲೋ. ೧೦).

೩. ಅಕಿಂಚನನಿಗೆ ಅಗ್ನಿಭಯ, ಶತ್ರುಭಯ, ಚೋರಭಯ, ಮರಣಭಯ ಇರದು[೨](ಶ್ಲೋ.೧೨).

೪. ಅವನು ಸ್ವೇಚ್ಛೆಯಾಗಿ ಸಂಚರಿಸಬಹುದು. ನೆಲದ ಮೇಲೆ ಮಲಗಬಹುದು. ನೆಲವೇ ಹಾಸಿಗೆ, ತೋಳೆ ದಿಂಬು, ನೆಮ್ಮದಿಯ ನಿದ್ರೆ, ಅವನನ್ನು ದೇವತೆಗಳು ಕೊಂಡಾಡುತ್ತಾರೆ[೩].

**ಧನಿಕರ ವೈಶಿಷ್ಟ್ಯಗಳು**

೧. ಧನವಂತನು ಯಾವಾಗಲೂ ಮೃತ್ಯುವಿನ ಬಾಯಿಯನ್ನು ಪ್ರವೇಶಿಸಿದವನಂತೆ ಭಯದಿಂದ ಉದ್ವಿಗ್ನನಾಗಿರುತ್ತಾನೆ[೪] (ಶ್ಲೋ. ೧೧).

೨. ಶ್ರೀಮಂತನು ಕ್ರೋಧ, ಲೋಭಗಳಿಂದ ಕೂಡಿದವನಾಗಿ ವಿವೇಕ ಕಳೆದುಕೊಂಡಿರುತ್ತಾನೆ. ಬುದ್ಧಿ ಹತೋಟಿಯಲ್ಲಿರುವುದಿಲ್ಲ. ವಕ್ರದೃಷ್ಟಿ (ಕೆಟ್ಟ), ಕುಂದಿದ ಮುಖ, ಪಾಪಬುದ್ಧಿಯಿಂದ ಕೂಡಿ, ಕೋಪದಿಂದ ಹುಬ್ಬುಗಂಟಿಕ್ಕಿರುತ್ತಾನೆ (೧೪).

೩. ತುಟಿಗಳನ್ನು ಕಚ್ಚುತ್ತಿರುತ್ತಾನೆ. ಮನನೋಯುವಂತೆ ಕಟುವಾಗಿ ಮಾತನಾಡುತ್ತಾನೆ. ಅವನು ಭೂಮಂಡಲವನ್ನೇ ದಾನಕೊಡಲು ಸಿದ್ಧವಾದರೂ, ಅವನನ್ನು ನೋಡಲು ಯಾರೂ ಇಚ್ಛಿಸುವುದಿಲ್ಲ[೫] (ಶ್ಲೋ. ೧೫).

೪. ಐಶ್ವರ್ಯವು ಅವಿವೇಕಿಗಳನ್ನು ಮೋಹದಲ್ಲಿ ಸಿಲುಕಿಸುತ್ತದೆ (ಶ್ಲೋಕ. ೧೬).

೫. ಧನಿಕನು 'ನನ್ನಂತಹ ಸುರೂಪಿ, ಶ್ರೀಮಂತ, ಸತ್ಕುಲಪ್ರಸೂತ ಬಯಸಿದ್ದಲ್ಲಿ ಸಿಗುವುದರಲ್ಲಿ ನನ್ನಂತಹವನು ಯಾರೂ ಇಲ್ಲ, ನಾನು ಸಾಮಾನ್ಯ ಮನುಷ್ಯನಲ್ಲ, ಸಿದ್ಧಪುರುಷ,' ಇತ್ಯಾದಿಯಾಗಿ ಭಾವಿಸುತ್ತಾನೆ. ರೂಪ, ಧನ, ಕುಲಮದಗಳೆಂಬ ಮೂರು ದೋಷಗಳಿಂದ ಆತನ ಮನಸ್ಸು ವ್ಯಗ್ರವಾಗಿರುತ್ತದೆ (ಶ್ಲೋ. ೧೭):

---

೧ ಅಕಿಂಚನ್ಯಂ ಚ ರಾಜ್ಯಂ ಚ ತುಲಯಾ ಸಮತೋಲಯಮ್ ।
ಅತ್ಯರಿಚ್ಯತ ದಾರಿದ್ರ್ಯಂ ರಾಜ್ಯಾದಪಿ ಗುಣಾಧಿಕಮ್ ॥ – ೩/೧೦

೨ ನೈವಾಸ್ಯಾಗ್ನಿರ್ನ ಚಾದಿತ್ಯೋ ನ ಮೃತ್ಯುರ್ನ ಚ ದಸ್ಯವಃ ।
ಪ್ರಭವಂತಿ ಧನಜ್ಯಾನಿನಿರ್ಮುಕ್ತಸ್ಯ ನಿರಾಶಿಷಃ ॥ – ೩/೧೨

೩ ತಂ ವೈ ಸದಾ ಕಾಮಚರಮನುಪಸ್ತೀರ್ಣಶಾಯಿನಮ್ ।
ಬಾಹೂಪಧಾನಂ ಶಾಮ್ಯಂತಂ ಪ್ರಶಂಸಂತಿ ದಿವೌಕಸಃ ॥ – ೩/೧೩

೪ ನಿತ್ಯೋದ್ವಿಗ್ನೋ ಹಿ ಧನವಾನ್ ಮೃತ್ಯೋರಾಸ್ಯಗತೋ ಯಥಾ ॥ – ೩/೧೧

೫ ನಿರ್ದಶಂಶ್ಚಾಧರೋಷ್ಠಂ ಚ ಕ್ರುದ್ಧೋ ದಾರುಣಭಾಷಿತಾ ।
ಕಸ್ತಮಿಚ್ಛೇತ್ ಪರಿದ್ರಷ್ಟುಂ ದಾತುಮಿಚ್ಛತಿ ಚೇನ್ಮಹೀಮ್ ॥ – ೩/೧೫

**ಅಥೈನಂ ರೂಪಮಾನಶ್ಚ ಧನಮಾನಶ್ಚ ವಿಂದತಿ।**
**ಅಭಿಜಾತೋಽಸ್ಮಿ ಸಿದ್ಧೋಽಸ್ಮಿ ನಾಸ್ಮಿ ಕೇವಲಮಾನುಷಃ।**
**ಇತ್ಯೇಭಿಃ ಕಾರಣೈಸ್ತಸ್ಯ ತ್ರಿಭಿಶ್ಚಿತ್ತಂ ಪ್ರಸಿಚ್ಯತೇ॥** - ೩/೧೭

೬. ಪಿತೃಸಂಪಾದಿತ ಧನವನ್ನು ಬರೀ ವಿಷಯಸುಖಾದಿ ಅಕಾರ್ಯಕ್ಕೆ ವಿನಿಯೋಗಿಸಿ ಹಾಳು ಮಾಡುತ್ತಾ, ನಂತರ ಬೇರೆಯವರ ಐಶ್ವರ್ಯವನ್ನೂ ಅಪಹರಿಸುತ್ತಾನೆ. ಅದನ್ನೇ ಸಾಧುಕಾರ್ಯ ಎಂದು ಭ್ರಮಿಸುತ್ತಾನೆ[1] (ಶ್ಲೋ. ೧೮).

ಇದರ ಪರಿಣಾಮವಾಗಿ ರಾಜದಂಡಕ್ಕೆ ಗುರಿಯಾಗುತ್ತಾನೆ. ಕೊನೆಗೆ ಮರಣಾಂತ ಶಿಕ್ಷೆ ಅನುಭವಿಸುತ್ತಾನೆ (ಶ್ಲೋ. ೧೯,೨೦)

ಆದ್ದರಿಂದ ಮನುಷ್ಯನು ಲೋಕಧರ್ಮಗಳನ್ನು (ಹೆಂಡತಿ, ಮಕ್ಕಳು, ಆಸ್ತಿ ಮೊದಲಾದವುಗಳ ಇತಿಮಿತಿಗಳನ್ನು ಅರಿತು) ಅಶಾಶ್ವತವೆಂದು ತಿಳಿದು ಅಸ್ಥಿರವಾದ ಧನಕ್ಕೆ ತುತ್ತಾಗಬಾರದು. ಅದನ್ನು ತ್ಯಾಗದಲ್ಲಿಯೇ ಸುಖವಿದೆ ಎಂದು ತಿಳಿಯಬೇಕು.

ತ್ಯಾಗವಿಲ್ಲದೆ ಸುಖ ಹೊಂದುವುದಿಲ್ಲ, ತ್ಯಾಗದಿಂದಲೇ ಪರಗತಿ, ತ್ಯಾಗವಿಲ್ಲದೆ ಸುಖ ನಿದ್ರೆ ಇಲ್ಲ, ಸರ್ವಸಂಗ ಪರಿತ್ಯಾಗ ಮಾಡಿ ನಿಜವಾದ ಸುಖಿಯಾಗು[2].

ಧರ್ಮರಾಜನೇ! ಶಮ್ಯಾಕ ಬ್ರಾಹ್ಮಣನು ಹೇಳಿದ ಈ ಗೀತೆಯನ್ನು ಹಸ್ತಿನಾವತಿಯಲ್ಲಿ ಬ್ರಾಹ್ಮಣನು ನನಗೆ ಹೇಳಿದನು.

*****

---

೧ ಸ ಪ್ರಸಿಕ್ತಮನಾ ಭೋಗಾನ್ ವಿಸೃಜ್ಯ ಪಿತೃಸಂಚಿತಾನ್।
ಪರಿಕ್ಷೀಣಃ ಪರಸ್ವಾನಾಮಾದಾನಂ ಸಾಧು ಮನ್ಯತೇ॥ - ೩/೧೮

೨ ನಾತ್ಯಕ್ತ್ವಾ ಸುಖಮಾಪ್ನೋತಿ ನಾತ್ಯಕ್ತ್ವಾ ವಿಂದತೇ ಪರಮ್।
ನಾತ್ಯಕ್ತ್ವಾ ಚಾಭಯಃ ಶೇತೇ ತ್ಯಕ್ತ್ವಾ ಸರ್ವಂ ಸುಖೀ ಭವ॥ - ೩/೨೨

# ೧೮೨. ಮಂಕಿಗೀತೆ - ಜನಕಗೀತೆ - ಬೋಧ್ಯಗೀತೆ

ಧರ್ಮರಾಜನು ಪ್ರಶ್ನಿಸುತ್ತಾನೆ - ತಾತ! ಮನುಷ್ಯನು ಅನೇಕ ಪ್ರಯತ್ನಗಳನ್ನು ಮಾಡಿದರೂ ತನ್ನ ಅಪೇಕ್ಷಿತ ಧನವು ಸಿಗದಿದ್ದಾಗ ಏನು ಮಾಡುವುದರಿಂದ ಸುಖ ಹೊಂದುತ್ತಾನೆ.[೧]

ಈ ಪ್ರಶ್ನೆಗೆ ಭೀಷ್ಮರು -

೧. ಜೀವನದಲ್ಲಿ ಬರುವ ಸುಖದುಃಖ, ಮಾನಾಪಮಾನ, ಮಣ್ಣು ಬಂಗಾರಗಳನ್ನು ಸಮವಾಗಿ ನೋಡುವುದು (ಸುಖ ಬಂದಾಗ ಹಿಗ್ಗದೆ, ದುಃಖ ಬಂದಾಗ ಕುಗ್ಗದ ಸಮಸ್ಥಿತಿಯೇ ಸರ್ವಸಾಮ್ಯ) ಅಥವಾ ಸರ್ವರಲ್ಲಿ (ಚೇತನಾಚೇತನಗಳಲ್ಲಿ) ಸಮನಾಮಕ (ಭಗವದ್ಭಾವವನ್ನು ಚಿಂತಿಸುವುದು).

೨. ಅನಾಯಾಸ - ವಿಷಯಸುಖಗಳಿಗೆ ಶ್ರಮಪಡದಿರುವುದು.

೩. ಸತ್ಯ ಮಾತಾಡುವುದು.

೪. ವೈರಾಗ್ಯ ಹಾಗೂ

೫. ಕಾಮ್ಯಕರ್ಮಗಳಲ್ಲಿ ನಿರಾಸಕ್ತಿ (ವಿವಿತ್ಸಾ - ಹೊಂದಲು ಅಪೇಕ್ಷೆ, ಪಡೆಯಲು ಆಸೆ, ಎಂದರೆ ಫಲ ಹೊಂದಲು, ಪಡೆಯಲು ಎಂದು ಅಧ್ಯಾಹಾರ ಮಾಡಿಕೊಳ್ಳಬೇಕು. ವಿದ್‌ಲೃ - ಲಾಭೇ+ಸನ್ ಅಃ (೩/೩/೧೦೨).

ಈ ಐದು ಗುಣಗಳಿರುವವನು ಸುಖೀ ಎನಿಸುತ್ತಾನೆ ಎಂದರು. ಇವನ್ನೇ ಜ್ಞಾನವೃದ್ಧರು, ಮನಃಶಾಂತಿಗೆ ಬೇಕು. ಇವನ್ನು ಹೊಂದುವುದೇ ಸ್ವರ್ಗ ಹೊಂದಿದಂತೆ ಮತ್ತು ಸಜ್ಜನರ ಅತ್ಯುತ್ತಮ ಸುಖದ ಸಾಧನಗಳು.

ಈ ವಿಷಯದಲ್ಲಿ '**ಮಂಕಿ**' ಎಂಬ ಬ್ರಾಹ್ಮಣನು ವೈರಾಗ್ಯದಿಂದ ಹಾಡಿದ ಗೀತೆಯನ್ನು ನಾನು ನಿನಗೆ ತಿಳಿಸುತ್ತೇನೆ ಎಂದರು.

ಹಿಂದೆ **ಮಂಕಿ** ಎಂಬ ಬ್ರಾಹ್ಮಣನು ಧನಸಂಪಾದನೆಗೆ ಹಲವಾರು ಪ್ರಯತ್ನಗಳನ್ನು ಮಾಡಿ ವಿಫಲನಾಗಿ, ಕೊನೆಗೆ ತನ್ನಲ್ಲಿದ್ದ ಅಲ್ಪಧನದಿಂದ ತನ್ನ ಹತೋಟಿಗೆ ಬರುವ ಎರಡು ಎತ್ತುಗಳನ್ನು ಕೊಂಡನು. ಅವುಗಳನ್ನು ಸೂಕ್ತ ಕಾರ್ಯಗಳಲ್ಲಿ ಪಳಗಿಸಲು ಅವುಗಳ ಕತ್ತಿನ ಮೇಲೆ ನೊಗವನ್ನು ಹೇರಿ, ಹಗ್ಗದಿಂದ ಕಟ್ಟಿ (ಗ್ರಾಮದಿಂದ ಹೊರಗೆ) ಓಡಿಸುತ್ತಿದ್ದಾಗ ದಾರಿಯಲ್ಲಿ ಒಂದು ಒಂಟೆ ಮಲಗಿತ್ತು. ಆ ಹೋರಿಗಳು ಮಲಗಿದ ಒಂಟೆಯ ಮಧ್ಯವೇ ಹೋದಾಗ ಆ ಒಂಟೆ ಮೇಲಿದ್ದ ಪರಿಣಾಮವಾಗಿ ನೊಗವು ಒಂಟೆಯ ಕುತ್ತಿಗೆಗೆ ತಾಗಿ ಆ ಎತ್ತುಗಳೊಡನೆ ಅದೂ ವೇಗವಾಗಿ

---

೧ ಈಹಮಾನಃ ಸಮಾರಂಭಾನ್ ಯದಿ ನಾಸಾದಯೇದ್ಧನಮ್ ।
ಧನತೃಷ್ಣಾಭಿಭೂತಶ್ಚ ಕಿಂ ಕುರ್ವನ್ ಸುಖಮಾಪ್ನುಯಾತ್ ॥ - ೪/೧

ಹಾಗೂ ಭಯದಿಂದ ಓಡಹತ್ತಿತು. ಎತ್ತುಗಳು ಒಂಟೆ ಬೆನ್ನ ಮೇಲೆ ನೇತಾಡುತ್ತಾ ಇದ್ದವು. ಎತ್ತುಗಳನ್ನು ಓಡಿಸಿಕೊಂಡು ಹೋಗುತ್ತಿದ್ದ ಮಂಕಿ ಬ್ರಾಹ್ಮಣ ನಿಯಂತ್ರಣ ಕಳೆದುಕೊಂಡು ಆ ಎತ್ತುಗಳು ಇನ್ನೇನು ಮರಣ ಹೊಂದುವುದೆಂದು ನಿಶ್ಚಯಿಸಿ ಹೀಗೆ ನುಡಿದನು. **ಆತನ ಮಾತುಗಳು ೪೫ ಶ್ಲೋಕಗಳಲ್ಲಿ** ಮೂಡಿಬಂದಿದ್ದು ಅವುಗಳಲ್ಲಿ ಬ್ರಾಹ್ಮಣನ ವೈರಾಗ್ಯದ ಪೂರ್ಣತೆಯನ್ನೇ ನೋಡಬಹುದಾಗಿದೆ. ಅವುಗಳಲ್ಲಿ ಕೆಲವನ್ನು ಮಾತ್ರ ನೋಡೋಣ.

೧. ನನ್ನ ಈ ಅತ್ಯಂತ ಮುದ್ದು ಎರಡು ಹೋರಿಗಳು ಒಂಟೆಯ ಕತ್ತಿಗೆ ಕಟ್ಟಲಾದ ಎರಡು ಮಣಿಗಳಂತೆ ಜೋತಾಡುತ್ತಿವೆ. ದೈವೇಚ್ಛೆಯ ಹೊರತು ಎಷ್ಟೇ ಪ್ರಯತ್ನಮಾಡಿದರೂ ಯಾರೂ ಐಶ್ವರ್ಯ ಪಡೆಯಲಾರರು. ಪ್ರಯತ್ನ ಫಲಸಾಧನರಾದಾಗಲೂ (ಫಲಕಾರಿಯಾದರೂ), ಅದೂ ದೈವಾಧೀನದಿಂದಲೇ ಆಗಿರುತ್ತದೆ.

ಆದ್ದರಿಂದ ನಮ್ಮಧೀನದಲ್ಲಿಲ್ಲದ ವಿಷಯಕ್ಕೆ ಜೋತುಬೀಳದೆ ವೈರಾಗ್ಯವೇ ಶ್ರೇಯಸ್ಸಾಧನವೆಂದು ತಿಳಿಯಬೇಕು. ಶುಕಮುನಿಯೂ ಹಾಗೇ ಸರ್ವಸಂಗ ಪರಿತ್ಯಾಗ ಮಾಡಿ ತಂದೆಯ ಮನೆಯಿಂದ ಮಹಾರಣ್ಯಕ್ಕೆ ತಪಸ್ಸಿಗೆ ಹೋದನು. ಸಮಸ್ತ ಕಾಮನೆಗಳನ್ನು ಅನುಭವಿಸ ಬಯಸುವವನು ಅವುಗಳನ್ನು ತ್ಯಜಿಸಬೇಕು. ಕಾಮನೆಗಳ ಅನುಭವಕ್ಕಿಂತ ಅವುಗಳ ತೊರೆದವನೇ ಶ್ರೇಷ್ಠ

೨. ಮಂಕಿ ಬ್ರಾಹ್ಮಣನು ತನ್ನನ್ನು ಕುರಿತು ತಾನೇ ಹೇಳುತ್ತಾನೆ (ಆತ್ಮನಿರೀಕ್ಷಣಾ ರೂಪ ಮಾತುಗಳಿವು).

೧. ಎಲೈ ಮನಸ್ಸೇ! ಇನ್ನು ನಿನ್ನ ಆಸೆಯನ್ನು ಸಾಕು ಮಾಡು. ವೈರಾಗ್ಯವನ್ನು ಆಶ್ರಯಿಸು.

೨. ನನ್ನ ಸುಖದ ಬಯಕೆ ನಿನಗೆ ಇರುವುದಾದರೆ, ಇನ್ನು ಮೇಲೆ ನನ್ನನ್ನು ಆಸೆಯ ಶಾಪಕ್ಕೆ ಎಳೆಯಬೇಡ. ವ್ಯರ್ಥವಾದ ಲೋಭದಿಂದ ನನ್ನನ್ನು ಸೆಳೆಯಬೇಡ[೧].

೩. ಇಲ್ಲಿಯವರೆಗೆ ಕೂಡಿಟ್ಟ ಹಣ ಎಷ್ಟೋ ಬಾರಿ ಕಳೆದುಹೋದರೂ ಆಸೆ ಇನ್ನೂ ಹೋಗಿಲ್ಲ. ಧನಕಾಮಿಯಾದ ನೀನು ಇದರಿಂದ ಯಾವಾಗ ಹೊರಬರುತ್ತೀಯಾ?

೪. ನಾನು ನಿನ್ನ ಆಟದ ಗೊಂಬೆಯಾಗಿರುವೆ. ಆಸೆ ತ್ಯಾಗಮಾಡಿದವನು ಯಾರಿಗೂ ದಾಸನಾಗುವುದಿಲ್ಲ.

೫. ಈವರೆಗೆ ಇದ್ದ ಯಾರೂ ತಮ್ಮ ಬಯಕೆಗಳ ಕೊನೆಯನ್ನು ಕಂಡಿಲ್ಲ. ಮುಂದೂ ಅಷ್ಟೇ. ಈಗ ನಾನು ಎಚ್ಚೆತ್ತಿದ್ದೇನೆ. ವಿವೇಕ ಹುಟ್ಟಿದೆ[೨].

---

೧ ಯದಿ ನಾಹಂ ವಿನಾಶ್ಯಸ್ತೇ ಯದ್ಯೇವಂ ರಮಸೇ ಮಯಾ ।
ಮಾ ಮಾಂ ಯೋಜಯ ಲೋಭೇನ ವೃಥಾ ತ್ವಂ ವಿತ್ತಕಾಮುಕ ॥ – ೪/೧೯

೨ ನ ಪೂರ್ವೇ ನಾಪರೇ ಜಾತು ಕಾಮಾನಾಮಂತಮಾಪ್ನುವನ್ ।

೬. ನಿಜಕ್ಕೂ ನಿನ್ನ ಹೃದಯವು ವಜ್ರಸಾರಕ್ಕಿಂತಲೂ ಕಠಿಣವಾಗಿದೆಯಲ್ಲ! ಇಲ್ಲಿಯವರೆಗೂ ನೂರಾರು ಅನರ್ಥಗಳನ್ನು ಅನುಭವಿಸಿಯೂ ನಿನ್ನ ಹೃದಯ ಒಡೆದಿಲ್ಲದಿರುವುದು ಆಶ್ಚರ್ಯವೇ ಸರಿ[೧].

೭. ಮೂಲ ನನಗೆ ಗೊತ್ತು. ನೀನು ಹುಟ್ಟುವುದು ನಿನ್ನ ಸಂಕಲ್ಪದಿಂದಲೇ. ಆದ್ದರಿಂದ ನಿನಗೆ ಕಾರಣವಾದ ಸಂಕಲ್ಪವನ್ನೇ ಬಿಡುತ್ತೇನೆ. ನೀನು ಸಮೂಲ ನಾಶ ಹೊಂದುತ್ತೀ.

೮. ಶರೀರತ್ಯಾಗ (ಒಪ್ಪಿಸಿದರೂ) ಆ ಧನ ದೊರೆಯಲಾರದು. ಇದಕ್ಕಿಂತಲೂ ದುಃಖದ ಸಂಗತಿ ಏನು? ಬಯಸಿದ ಹಣ ದೊರೆತರೂ ಅಷ್ಟರಿಂದ ತೃಪ್ತಿ ಸಿಗದು. ಇನ್ನೂ ಹೆಚ್ಚು ಪಡೆಯಲು ಮಾರ್ಗ ಹುಡುಕುವ ಆಶೆ ಇರುತ್ತದೆ.

೯. ಆಸೆಗಳನ್ನು ಬಿಟ್ಟು ನಂತರ ನಾನು ಎಲ್ಲ ಭೂತಗಳನ್ನು ನನ್ನ ದೇಹದಲ್ಲೂ ಮನಸ್ಸಿನಲ್ಲಿರುವಂತೆ ಭಾವಿಸಿ, ನನ್ನನ್ನು ಒಳಗಿಂದ ಪ್ರೀತಿಸುತ್ತಾ ಯೋಗದಲ್ಲಿ ಬುದ್ಧಿಯನ್ನು ಶ್ರವಣಾದಿಗಳಲ್ಲಿ ನನ್ನ ಚಿತ್ತವನ್ನು, ಗುಣಪೂರ್ಣವಾದ ಬ್ರಹ್ಮನಲ್ಲಿ ನನ್ನ ಮನಸ್ಸನ್ನು ನೆಲೆಗೊಳಿಸುತ್ತೇನೆ.

೧೦. ಧನನಾಶದಿಂದ ಜ್ಞಾತಿಗಳು ಅವಮಾನಿಸುತ್ತಾರೆ. ಮಿತ್ರರು ಹೀಗಳೆಯುತ್ತಾರೆ[೨]. ಧನವಿದ್ದರೂ, ಕಳ್ಳರು ಪೀಡಿಸುತ್ತಾರೆ, ಹೊಡೆಯುತ್ತಾರೆ, ಹಿಂಸಿಸುತ್ತಾರೆ. ನಿತ್ಯವೂ ಉದ್ವೇಗಕ್ಕೆ ಕಾರಣವಾಗುತ್ತದೆ.[೩]

೧೧. ಕಾಮನೇ! ನೀನು ಪಾತಾಳದಂತೆ ತುಂಬಲಾರದವನಾಗಿದ್ದು ನಿನ್ನ ಆಶೆಯನ್ನು ಪೂರೈಸುವುದು ಅಸಾಧ್ಯವೇ ಸರಿ.

೧೨. ದೈವೇಚ್ಛೆಯಂತೆ ನನ್ನ ದ್ರವ್ಯವೆಲ್ಲ ಇಂದು ನಾಶವಾಗಿ ವೈರಾಗ್ಯಕ್ಕೆ ಕಾರಣವಾಗಿದೆ. ಇನ್ನೆಂದೂ ಆಶೆಗಳನ್ನು ಚಿಂತಿಸುವುದಿಲ್ಲ.

೧೩. ಇನ್ನು ಮೇಲೆ ನಾನು ನನ್ನನ್ನು ಹಿಂಸಿಸಿದವರನ್ನು ಹಿಂಸಿಸುವುದಿಲ್ಲ. ನನ್ನನ್ನು ಅವರು ಕ್ಷಮಿಸದಿದ್ದರೂ, ನಾನೇ ಕ್ಷಮಿಸುವೆ. ನಿಂದಿಸುವವರನ್ನು ನಿಂದಿಸದೆ, ಪ್ರಿಯವಾದ ಮಾತುಗಳನ್ನಾಡುವೆ. ಅನ್ಯರ ಅಪ್ರಿಯಮಾತುಗಳನ್ನು ಮನಸ್ಸಿಗೆ ತಾರೆನು.

**ಕ್ಷಮಿಕ್ಷೇಽಕ್ಷಮಮಾಣಾನಾಂ ನ ಹಿಂಸಿಷ್ಯೇ ಚ ಹಿಂಸಿತಃ ।**
**ದ್ವೇಷ್ಯಮುಕ್ತಃ ಪ್ರಿಯಂ ವಕ್ಷ್ಯಾಮ್ಯನಾದೃತ್ಯ ತದಪ್ರಿಯಮ್ ॥ - ೪/೪೩**

---

ತ್ಯಕ್ತ್ವಾ ಸರ್ವಸಮಾರಂಭಾನ್ ಪ್ರತಿಬುದ್ಧೋಽಸ್ಮಿ ಜಾಗ್ರಮಿ ॥ - ೪/೨೨

೧ ನೂನಂ ತೇ ಹೃದಯಂ ಕಾಮ ವಜ್ರಸಾರಮಯಂ ದೃಢಮ್ ।
ಯದನರ್ಥಶತಾವಿಷ್ಟಂ ಶತಧಾಂ ನ ವಿದೀರ್ಯತೇ ॥ - ೪/೨೩

೨ ಧನನಾಶೋಽಧಿಕಂ ದುಃಖಂ ಮನ್ಯೇ ಸರ್ವಮಹತ್ತರಮ್ ।
ಜ್ಞಾತಯೋ ಹ್ಯವಮನ್ಯಂತೇ ಮಿತ್ರಾಣಿ ಚ ಧನಚ್ಯುತಮ್ ॥ - ೪/೩೪

೩ ಧನಮಸ್ಯೇತಿ ಪುರುಷಂ ಪುರಾ ನಿಘ್ನಂತಿ ದಸ್ಯವಃ ।
ಕ್ಲಿಶ್ಯಂತಿ ವಿವಿಧೈರ್ದಂಡೈರ್ನಿತ್ಯಮುದ್ವೇಜಯಂತಿ ಚ ॥ - ೪/೩೬

೧೪. ಎಲೈ ಕಾಮನೇ! ಇನ್ನು ನಾನು ವೈರಾಗ್ಯ, ತೃಪ್ತಿ, ಶಾಂತಿ, ಸತ್ಯ, ಇಂದ್ರಿಯನಿಗ್ರಹ, ಕ್ಷಮಾ, ಸರ್ವಭೂತತಾ ಗುಣಗಳಿಗೆ ಶರಣಾಗಿದ್ದೇನೆ[1] (ಆಶ್ರಯಿಸಿದ್ದೇನೆ).

೧೫. ನಾನು ಸತ್ವಗುಣವನ್ನು ಆಶ್ರಯಿಸಿದ್ದೇನೆ. ಆದ್ದರಿಂದ ನನ್ನನ್ನು ಕಾಮ, ಲೋಭ, ಆಸೆ, ಕಾರ್ಪಣ್ಯಗಳು ಬಿಡಲಿ, ಮುಟ್ಟದಿರಲಿ.

೧೬. ನಾನೀಗ ಕಾಮವನ್ನು ಬಿಟ್ಟು ತೀವ್ರವಾದ ಬಿಸಿಲಿನಲ್ಲಿ (ಗ್ರೀಷ್ಮದಲ್ಲಿ) ತಂಪಾದ ನೀರಿನ ಮಡುವನ್ನು ಆಶ್ರಯಿಸಿದಂತೆ ನಾನು ಪರಬ್ರಹ್ಮನೆಂಬ ತಂಪಾದ ಸರೋವರವನ್ನು ಆಶ್ರಯಿಸಿದ್ದೇನೆ. ಕರ್ಮಗಳನ್ನು ದಾಟಿದ್ದೇನೆ. ದುಃಖಗಳನ್ನು ನೀಗಿದ್ದೇನೆ. ಕೇವಲ ಸುಖದಲ್ಲಿದ್ದೇನೆ[2].

೧೭. ಜನ್ಮ, ಮರಣ, ವ್ಯಾಧಿ, ಮುಪ್ಪು, ಹಸಿವು, ನೀರಡಿಕೆಗಳ ಜೊತೆಗೆ ಏಳನೆಯದಾದ ಕಾಮನೆಂಬ ಶತ್ರುವನ್ನು ಕೊಂದು ನಾನೀಗ ಅವಧ್ಯವಾದ ಬ್ರಹ್ಮಪುರವನ್ನು ಸೇರಿ ಅಲ್ಲಿ ರಾಜನಂತೆ ಸುಖವಾಗಿ ವಾಸಿಸುತ್ತಿದ್ದೇನೆ[3].

ಧರ್ಮರಾಜನೇ! ಹೀಗೆ ಮಂಕಿ ಬ್ರಾಹ್ಮಣನು (ಶುಕ ಉಪದೇಶಿಸಿದ) ವೈರಾಗ್ಯ ಬುದ್ಧಿಯನ್ನು ಆಶ್ರಯಿಸಿ, ವಿರಕ್ತನಾಗಿ ಪರಮಸುಖನಿಧಿ ಪರಬ್ರಹ್ಮನನ್ನು ಹೊಂದಿದನು. ಎರಡು ಎತ್ತುಗಳನ್ನು ಕಳೆದುಕೊಂಡಿದ್ದು ವೈರಾಗ್ಯಕ್ಕೆ ಮೂಲವಾಗಿ ಅಮೃತತ್ತ್ವವನ್ನು ಹೊಂದಿದನು. **ಇದೇ ವಿಷಯದಲ್ಲಿ ವಿದೇಹರಾಜ ಜನಕನೂ ಹಾಡಿದ ಗೀತೆ ಹೀಗಿದೆ. ನನ್ನ ಐಶ್ವರ್ಯವೋ ಅನಂತವಾಗಿಯೇ ಇದೆ. ಅದರಲ್ಲಿ ಕಿಂಚಿತ್ತೂ ನನ್ನದಲ್ಲ. ಇಡೀ ಮಿಥಿಲಾಪಟ್ಟಣವೇ ಪೂರ್ಣವಾಗಿ ಸುಟ್ಟುಹೋದರೂ ನನಗೆ ಸಂಬಂಧಿಸಿದ ಯಾವುದೂ ಸುಟ್ಟುಹೋಗುವುದಿಲ್ಲ[4].**

ಮತ್ತೆ ಇದೇ ವಿಷಯದಲ್ಲಿ ನಹುಷನ ಮಗನಾದ ಯಯಾತಿಯೂ ಬೋಧನೆಂಬ ಜಿತೇಂದ್ರಿಯನಾದ ಋಷಿಯನ್ನು ಭಗವನ್ನಿಷ್ಠೆ(ಶಮ)ಯ ಬಗ್ಗೆ ಉಪದೇಶ ಮಾಡು. ಯಾವ ಬುದ್ಧಿ(ಜ್ಞಾನ)ಯಿಂದ ಪರಮಾತ್ಮನಲ್ಲಿಯೇ ಮನಸ್ಸಿಟ್ಟು ಆನಂದದಿಂದ ಇರುವೆ? ಎಂದು ಕೇಳಲು ಆತನು ನಾನು ಬೇರೆಯವರ ಉಪದೇಶದಂತೆ ನಡೆದುಕೊಳ್ಳುತ್ತೇನೆ ಹೊರತು,

---

೧ ನಿರ್ವೇದಂ ನಿರ್ವೃತಿಂ ತೃಪ್ತಿಂ ಶಾಂತಿಂ ಸತ್ಯಂ ದಮಂ ಕ್ಷಮಾಮ್ ।
ಸರ್ವಭೂತದಯಾಂ ಚೈವ ವಿದ್ಧಿ ಮಾಂ ಶರಣಾಗತಮ್ ॥ – ೪/೪೫

೨ ಏಷ ಬ್ರಹ್ಮಪ್ರವಿಷ್ಟೋಽಹಂ ಗ್ರೀಷ್ಮೇ ಶೀತಮಿವ ಹ್ರದಮ್ ।
ಶಾಮ್ಯಾಮಿ ಪರಿನಿರ್ವಾಮಿ ಸುಖಮಾಸೇ ಚ ಕೇವಲಮ್ ॥ – ೪/೫೦

೩. ಆತ್ಮನಾ ಸಪ್ತಮಂ ಕಾಮಂ ಹತ್ವಾ ಶತ್ರುಮಿವೋತ್ತಮಮ್ ।
ಪ್ರಾಪ್ಯಾವಧ್ಯಂ ಬ್ರಹ್ಮಪುರಂ ರಾಜೇವ ಸ್ಯಾಮಹಂ ಸುಖೀ ॥ – ೪/೫೨

೪ ಅನಂತ ಬತ ಮೇ ವಿತ್ತಂ ಯಸ್ಯ ಮೇ ನಾಸ್ತಿ ಕಿಂಚನ ।
**ಮಿಥಿಲಾಯಾಂ ಪ್ರದೀಪ್ತಾಯಾಂ ನ ಮೇ ಕಿಂಚನ ದಹ್ಯತಿ ॥** – ೪/೫೬

ನಾನು ಯಾರಿಗೂ ಉಪದೇಶ ಮಾಡುವುದಿಲ್ಲ ಎಂದನು. ನನಗೆ ಆರು ಗುರುಗಳಿದ್ದಾರೆ. ಅವರು 'ಪಿಂಗಲಾ (ವೇಶ್ಯೆ), ಕುರರ (ಪಕ್ಷಿ), ಸರ್ಪ, ಸಾರಂಗ, ಇಷುಕಾರ (ಬಾಣ ತಯಾರಿಸುವವನು) ಮತ್ತು ಕುಮಾರಿ[೧].

ಇವೇ ಗುರುಗಳ ಬಗ್ಗೆ ಭಾಗವತದಲ್ಲಿಯೂ ಬಂದಿದೆ (ಸ್ಕಂದ-೧೧).

**ಲಕ್ಷಾಲಂಕಾರದಲ್ಲಿ 'ಪಿಂಗಲಾ ಗ್ರಾಮ್ಯ ಭೋಗಾಶಾ ಪರಿತ್ಯಾಗೇ ಗುರುಃ, ಕುರರಃ, ಸ್ವಾಯಾಸಕಾರಿ ಪರಿತ್ಯಾಗೇ ಗುರುಃ, ಏವಂ ಷಣ್ಣಾಂ ಗುರುತ್ವಂ ಜ್ಞೇಯಮ್ । ಬೋಧ್ಯಸ್ತು ಅನುಶಾಸನೇ ಗುರ್ವಾಜ್ಞಾಭಾವಾತ್ ಸ್ವಗುರೂನೇವಾಹ ನ ತು ತೇಭ್ಯಃ ಶಿಕ್ಷಿತ ಬುದ್ಧಿಮಿತಿ** । ಎಂದಿದೆ.

ಬೋಧ್ಯನು ಯಯಾತಿಗೆ ತನ್ನ ಗುರುಗಳಾರು ಎಂದು ಹೇಳಿದ. ಅವರು ಉಪದೇಶಿಸಿದುದನ್ನು ಅವರ ಆಜ್ಞೆ ಇಲ್ಲದಿರುವುದರಿಂದ ಹೇಳಲಿಲ್ಲ. ಗುರುಗಳ ಆಜ್ಞೆ ಇರದಿದ್ದರೆ ಅವರು ಉಪದೇಶಿಸಿದುದನ್ನು ಮತ್ತೆ ಯಾರಿಗೂ ಹೇಳಲು ಅಧಿಕಾರವಿರುವುದಿಲ್ಲ ಎಂಬ ತತ್ತ್ವವಿಲ್ಲಿದೆ.

## ಸಂದೇಶಗಳು

ಸ್ಪಷ್ಟವಾಗಿಯೇ ಇವೆ.

ಯಯಾತಿಯೂ ಕಾಮದ ಬಗ್ಗೆ ಆಡಿರುವ ಮಾತಿನಂತಿದೆ ಇಲ್ಲಿನ ಮಾತುಗಳು. ಜ್ಞಾನಿಗಳ ಅಭಿಪ್ರಾಯಗಳು ಒಂದೇ ರೀತಿ ಇರುತ್ತವೆ.

**ನ ಜಾತು ಕಾಮಃ ಕಾಮಾನಾಂ ಉಪಭೋಗೇನ ಶಾಮ್ಯತಿ ।**
**ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ ॥ - ಭಾಗವತ**

ಆಸೆಯ ವಿವಿಧ ಸ್ತರಗಳನ್ನು ಅವುಗಳ ಇತಿಮಿತಿಗಳನ್ನು ಚೆನ್ನಾಗಿ ತಿಳಿದು ಅವನ್ನು ತ್ಯಾಗ ಮಾಡಿ, ಕಾಮರೂಪಿಯಾದ ಶ್ರೀಪರಮಾತ್ಮನ ಆರಾಧನಾರೂಪ ಕಾಮವೇ ಶ್ರೇಯಸ್ಸಿಗೆ ಕಾರಣ. ಇದನ್ನೇ ಭೀಮಸೇನನು ಕಾಮವೇ ಶ್ರೇಷ್ಠವೆಂದು ಹೇಳಿದ್ದು. ಲೌಕಿಕ ಕಾಮಗಳು ಅಧಃಪತನಕ್ಕೆ ಕಾರಣವಾದರೆ, ಪಾರಮಾರ್ಥಿಕ ಕಾಮಗಳು ಶ್ರೇಯಸ್ಸಿಗೆ, ಮೋಕ್ಷಕ್ಕೆ ಕಾರಣವಾಗುತ್ತವೆ. ಈ ಸಂದೇಶಗಳು ವಿಶೇಷವಾಗಿ ಕಲಿಯುಗದಲ್ಲಿರುವ ನಮಗೆ ಅನ್ವಯಿಸುತ್ತವೆ. ಎಚ್ಚರಿಸುತ್ತವೆ.

*****

---

೧ ಉಪದೇಶೇನ ವರ್ತಾಮಿ ನಾನುಶಾಸ್ಮೀಹ ಕಂಚನ ।
ಲಕ್ಷಣಂ ತಸ್ಯ ವಕ್ಷ್ಯೇಽಹಂ ತತ್ ಸ್ವಯಂ ಪ್ರವಿಮೃಶ್ಯತಾಮ್ ॥
ಪಿಂಗಲಾ ಕುರರಃ ಸರ್ಪಃ ಸಾರಂಗಾನ್ವೇಷಣಂ ವನೇ ।
ಇಷುಕಾರಃ ಕುಮಾರೀ ಚ ಷಡೇತೇ ಗುರವೋ ಮಮ ॥ - ೪/೬೦,೬೧

೧೪. ಎಲೈ ಕಾಮನೇ! ಇನ್ನು ನಾನು ವೈರಾಗ್ಯ, ತೃಪ್ತಿ, ಶಾಂತಿ, ಸತ್ಯ, ಇಂದ್ರಿಯನಿಗ್ರಹ, ಕ್ಷಮಾ, ಸರ್ವಭೂತತಾ ಗುಣಗಳಿಗೆ ಶರಣಾಗಿದ್ದೇನೆ[1] (ಆಶ್ರಯಿಸಿದ್ದೇನೆ).

೧೫. ನಾನು ಸತ್ವಗುಣವನ್ನು ಆಶ್ರಯಿಸಿದ್ದೇನೆ. ಆದ್ದರಿಂದ ನನ್ನನ್ನು ಕಾಮ, ಲೋಭ, ಆಸೆ, ಕಾರ್ಪಣ್ಯಗಳು ಬಿಡಲಿ, ಮುಟ್ಟದಿರಲಿ.

೧೬. ನಾನೀಗ ಕಾಮವನ್ನು ಬಿಟ್ಟು ತೀವ್ರವಾದ ಬಿಸಿಲಿನಲ್ಲಿ (ಗ್ರೀಷ್ಮದಲ್ಲಿ) ತಂಪಾದ ನೀರಿನ ಮಡುವನ್ನು ಆಶ್ರಯಿಸಿದಂತೆ ನಾನು ಪರಬ್ರಹ್ಮನೆಂಬ ತಂಪಾದ ಸರೋವರವನ್ನು ಆಶ್ರಯಿಸಿದ್ದೇನೆ. ಕರ್ಮಗಳನ್ನು ದಾಟಿದ್ದೇನೆ. ದುಃಖಗಳನ್ನು ನೀಗಿದ್ದೇನೆ. ಕೇವಲ ಸುಖದಲ್ಲಿದ್ದೇನೆ[2].

೧೭. ಜನ್ಮ, ಮರಣ, ವ್ಯಾಧಿ, ಮುಪ್ಪು ಹಸಿವು, ನೀರಡಿಕೆಗಳ ಜೊತೆಗೆ ಏಳನೆಯದಾದ ಕಾಮನೆಂಬ ಶತ್ರುವನ್ನು ಕೊಂದು ನಾನೀಗ ಅವಧ್ಯವಾದ ಬ್ರಹ್ಮಪುರವನ್ನು ಸೇರಿ ಅಲ್ಲಿ ರಾಜನಂತೆ ಸುಖವಾಗಿ ವಾಸಿಸುತ್ತಿದ್ದೇನೆ[3].

ಧರ್ಮರಾಜನೇ! ಹೀಗೆ ಮಂಕಿ ಬ್ರಾಹ್ಮಣನು (ಶುಕ ಉಪದೇಶಿಸಿದ) ವೈರಾಗ್ಯ ಬುದ್ಧಿಯನ್ನು ಆಶ್ರಯಿಸಿ, ವಿರಕ್ತನಾಗಿ ಪರಮಸುಖನಿಧಿ ಪರಬ್ರಹ್ಮನನ್ನು ಹೊಂದಿದನು. ಎರಡು ಎತ್ತುಗಳನ್ನು ಕಳೆದುಕೊಂಡಿದ್ದು ವೈರಾಗ್ಯಕ್ಕೆ ಮೂಲವಾಗಿ ಅಮೃತತ್ತ್ವವನ್ನು ಹೊಂದಿದನು. **ಇದೇ ವಿಷಯದಲ್ಲಿ ವಿದೇಹರಾಜ ಜನಕನೂ ಹಾಡಿದ ಗೀತೆ ಹೀಗಿದೆ. ನನ್ನ ಐಶ್ವರ್ಯವೋ ಅನಂತವಾಗಿಯೇ ಇದೆ. ಅದರಲ್ಲಿ ಕಿಂಚಿತ್ತೂ ನನ್ನದಲ್ಲ. ಇಡೀ ಮಿಥಿಲಾಪಟ್ಟಣವೇ ಪೂರ್ಣವಾಗಿ ಸುಟ್ಟುಹೋದರೂ ನನಗೆ ಸಂಬಂಧಿಸಿದ ಯಾವುದೂ ಸುಟ್ಟುಹೋಗುವುದಿಲ್ಲ[4].**

ಮತ್ತೆ ಇದೇ ವಿಷಯದಲ್ಲಿ ನಹುಷನ ಮಗನಾದ ಯಯಾತಿಯೂ ಬೋಧನೆಂಬ ಜಿತೇಂದ್ರಿಯನಾದ ಋಷಿಯನ್ನು ಭಗವನ್ನಿಷ್ಠೆ(ಶಮ)ಯ ಬಗ್ಗೆ ಉಪದೇಶ ಮಾಡು. ಯಾವ ಬುದ್ಧಿ(ಜ್ಞಾನ)ಯಿಂದ ಪರಮಾತ್ಮನಲ್ಲಿಯೇ ಮನಸ್ಸಿಟ್ಟು ಆನಂದದಿಂದ ಇರುವೆ? ಎಂದು ಕೇಳಲು ಆತನು ನಾನು ಬೇರೆಯವರ ಉಪದೇಶದಂತೆ ನಡೆದುಕೊಳ್ಳುತ್ತೇನೆ ಹೊರತು,

---

೧ ನಿರ್ವೇದಂ ನಿರ್ವೃತಿಂ ತೃಪ್ತಿಂ ಶಾಂತಿಂ ಸತ್ಯಂ ದಮಂ ಕ್ಷಮಾಮ್ ।
ಸರ್ವಭೂತದಯಾಂ ಚೈವ ವಿದ್ಧಿ ಮಾಂ ಶರಣಾಗತಮ್ ॥ – ೪/೪೫

೨ ಏಷ ಬ್ರಹ್ಮಪ್ರವಿಷ್ಟೋಽಹಂ ಗ್ರೀಷ್ಮೇ ಶೀತಮಿವ ಹ್ರದಮ್ ।
ಶಾಮ್ಯಾಮಿ ಪರಿನಿರ್ವಾಮಿ ಸುಖಮಾಸೇ ಚ ಕೇವಲಮ್ ॥ – ೪/೫೦

೩. ಆತ್ಮನಾ ಸಪ್ತಮಂ ಕಾಮಂ ಹತ್ವಾ ಶತ್ರುಮಿವೋತ್ತಮಮ್ ।
ಪ್ರಾಪ್ಯಾವಧ್ಯಂ ಬ್ರಹ್ಮಪುರಂ ರಾಜೇವ ಸ್ಯಾಮಹಂ ಸುಖೀ ॥ – ೪/೫೨

೪ ಅನಂತ ಬತ ಮೇ ವಿತ್ತಂ ಯಸ್ಯ ಮೇ ನಾಸ್ತಿ ಕಿಂಚನ ।
**ಮಿಥಿಲಾಯಾಂ ಪ್ರದೀಪ್ತಾಯಾಂ ನ ಮೇ ಕಿಂಚನ ದಹ್ಯತಿ ॥** – ೪/೫೬

ನಾನು ಯಾರಿಗೂ ಉಪದೇಶ ಮಾಡುವುದಿಲ್ಲ ಎಂದನು. ನನಗೆ ಆರು ಗುರುಗಳಿದ್ದಾರೆ. ಅವರು 'ಪಿಂಗಲಾ (ವೇಶ್ಯೆ), ಕುರರ (ಪಕ್ಷಿ), ಸರ್ಪ, ಸಾರಂಗ, ಇಷುಕಾರ (ಬಾಣ ತಯಾರಿಸುವವನು) ಮತ್ತು ಕುಮಾರಿ[೧].

ಇವೇ ಗುರುಗಳ ಬಗ್ಗೆ ಭಾಗವತದಲ್ಲಿಯೂ ಬಂದಿದೆ (ಸ್ಕಂದ-೧೧).

**ಲಕ್ಷಾಲಂಕಾರದಲ್ಲಿ 'ಪಿಂಗಲಾ ಗ್ರಾಮ್ಯ ಭೋಗಾಶಾ ಪರಿತ್ಯಾಗೇ ಗುರುಃ, ಕುರರಃ, ಸ್ವಾಯಾಸಕಾರಿ ಪರಿತ್ಯಾಗೇ ಗುರುಃ, ಏವಂ ಷಣ್ಣಾಂ ಗುರುತ್ವಂ ಜ್ಞೇಯಮ್ । ಬೋಧ್ಯಸ್ತು ಅನುಶಾಸನೇ ಗುರ್ವಾಜ್ಞಾಭಾವಾತ್ ಸ್ವಗುರೂನೇವಾಹ ನ ತು ತೇಭ್ಯಃ ಶಿಕ್ಷಿತ ಬುದ್ಧಿಮಿತಿ** । ಎಂದಿದೆ.

ಬೋಧ್ಯನು ಯಯಾತಿಗೆ ತನ್ನ ಗುರುಗಳಾರು ಎಂದು ಹೇಳಿದ. ಅವರು ಉಪದೇಶಿಸಿದುದನ್ನು ಅವರ ಆಜ್ಞೆ ಇಲ್ಲದಿರುವುದರಿಂದ ಹೇಳಲಿಲ್ಲ. ಗುರುಗಳ ಆಜ್ಞೆ ಇರದಿದ್ದರೆ ಅವರು ಉಪದೇಶಿಸಿದುದನ್ನು ಮತ್ತೆ ಯಾರಿಗೂ ಹೇಳಲು ಅಧಿಕಾರವಿರುವುದಿಲ್ಲ ಎಂಬ ತತ್ತ್ವವಿಲ್ಲಿದೆ.

## ಸಂದೇಶಗಳು

ಸ್ಪಷ್ಟವಾಗಿಯೇ ಇವೆ.

ಯಯಾತಿಯೂ ಕಾಮದ ಬಗ್ಗೆ ಆಡಿರುವ ಮಾತಿನಂತಿದೆ ಇಲ್ಲಿನ ಮಾತುಗಳು. ಜ್ಞಾನಿಗಳ ಅಭಿಪ್ರಾಯಗಳು ಒಂದೇ ರೀತಿ ಇರುತ್ತವೆ.

**ನ ಜಾತು ಕಾಮಃ ಕಾಮಾನಾಂ ಉಪಭೋಗೇನ ಶಾಮ್ಯತಿ ।**
**ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ ॥ - ಭಾಗವತ**

ಆಸೆಯ ವಿವಿಧ ಸ್ತರಗಳನ್ನು ಅವುಗಳ ಇತಿಮಿತಿಗಳನ್ನು ಚೆನ್ನಾಗಿ ತಿಳಿದು ಅವನ್ನು ತ್ಯಾಗ ಮಾಡಿ, ಕಾಮರೂಪಿಯಾದ ಶ್ರೀಪರಮಾತ್ಮನ ಆರಾಧನಾರೂಪ ಕಾಮವೇ ಶ್ರೇಯಸ್ಸಿಗೆ ಕಾರಣ. ಇದನ್ನೇ ಭೀಮಸೇನನು ಕಾಮವೇ ಶ್ರೇಷ್ಠವೆಂದು ಹೇಳಿದ್ದು. ಲೌಕಿಕ ಕಾಮಗಳು ಅಧಃಪತನಕ್ಕೆ ಕಾರಣವಾದರೆ, ಪಾರಮಾರ್ಥಿಕ ಕಾಮಗಳು ಶ್ರೇಯಸ್ಸಿಗೆ, ಮೋಕ್ಷಕ್ಕೆ ಕಾರಣವಾಗುತ್ತವೆ. ಈ ಸಂದೇಶಗಳು ವಿಶೇಷವಾಗಿ ಕಲಿಯುಗದಲ್ಲಿರುವ ನಮಗೆ ಅನ್ವಯಿಸುತ್ತವೆ. ಎಚ್ಚರಿಸುತ್ತವೆ.

*****

---

೧ ಉಪದೇಶೇನ ವರ್ತಾಮಿ ನಾನುಶಾಸ್ಮೀಹ ಕಂಚನ ।
ಲಕ್ಷಣಂ ತಸ್ಯ ವಕ್ಷ್ಯೇಽಹಂ ತತ್ ಸ್ವಯಂ ಪ್ರವಿಮೃಶ್ಯತಾಮ್ ॥
ಪಿಂಗಲಾ ಕುರರಃ ಸರ್ಪಃ ಸಾರಂಗಾನ್ವೇಷಣಂ ವನೇ ।
ಇಷುಕಾರಃ ಕುಮಾರೀ ಚ ಷಡೇತೇ ಗುರವೋ ಮಮ ॥ - ೪/೬೦,೬೧

# ೧೮೩. ಪ್ರಹ್ಲಾದ - ಅಜಗರಮುನಿಯ ಸಂವಾದ

ಭೀಷ್ಮ ಪಿತಾಮಹರನ್ನು ಕುರಿತು ಧರ್ಮರಾಜನ ಪ್ರಶ್ನೆ.

ತಾತ! ಮನುಷ್ಯನು ಎಂತಹ ನಡಾವಳಿಯಿಂದ ದುಃಖವನ್ನು ತೊರೆದು ಭೂಲೋಕದಲ್ಲಿ ಸುಖವಾಗಿ ಬದುಕಬಹುದು? ಏನನ್ನು ಮಾಡಿ ಉತ್ತಮ ಗತಿ ಹೊಂದುತ್ತಾನೆ? ದಯವಿಟ್ಟು ತಿಳಿಸು.

ಇದಕ್ಕೆ ಉತ್ತರವಾಗಿ ಭೀಷ್ಮರು **ಪ್ರಹ್ಲಾದ** ಹಾಗೂ **ಅಜಗರ** ವೃತ್ತಿಯ ಒಬ್ಬ ಮುನಿಯ ಸಂಭಾಷಣೆ ರೂಪ ಇತಿಹಾಸವನ್ನು ಹೇಳುತ್ತಾರೆ.

ಪ್ರಹ್ಲಾದರಾಜರು ಸ್ವಯಂ ಜ್ಞಾನಿಸಮ್ಮತರಾದವರಾಗಿದ್ದರೂ, ಕಾಮಕ್ರೋಧಾದಿ ರೋಗರಹಿತನಾದ ದೃಢಮನಸ್ಕನಾದ ಒಬ್ಬ ಬ್ರಾಹ್ಮಣನನ್ನು ಕಂಡು ಹೀಗೆ ನುಡಿದನು.

'ಎಲೈ ಬ್ರಾಹ್ಮಣನೇ! ನೀನು ಇಂದ್ರಿಯನಿಗ್ರಹವುಳ್ಳವನೂ, ಮೃದುಸ್ವಭಾವದವನೂ, ಅತ್ಯಾಶೆಯಿಲ್ಲದವನೂ, ಹೊಟ್ಟೆಕಿಚ್ಚು ಇಲ್ಲದವನೂ ಆಗಿ ಲೋಕದಲ್ಲಿ ಬಹುಮಾನ್ಯನಾಗಿರುವೆ. ಆದರೆ ಬಾಲಕನಂತೆ (ಏನೂ ಅರಿಯದವನಂತೆ) ಸಂಚರಿಸುತ್ತಿರುವೆ. ಲಾಭ-ನಷ್ಟಗಳ ಬಗ್ಗೆ ಚಿಂತಿಸುವುದಿಲ್ಲ. ನಿತ್ಯತೃಪ್ತನಾಗಿರುವೆ. ಯಾರನ್ನೂ ಕೀಳಾಗಿ ನೋಡುವುದಿಲ್ಲ. ಲೋಕವೆಲ್ಲ ಕಾಮಾದಿ ಕಾರ್ಯಗಳಲ್ಲಿ ಮುಳುಗಿದ್ದರೂ, ನೀನು ಮಾತ್ರ ಆಕಾಶದಂತೆ ನಿರ್ವಿಕಾರವಾಗಿ-ರುವೆ. ಅಸಂಗನಾಗಿರುವೆ. ಧರ್ಮಾರ್ಥಕಾಮಾದಿಗಳನ್ನು ಧಿಕ್ಕರಿಸಿ, ಮುಕ್ತನಂತೆ ಸಂಚರಿಸುತ್ತೀಯಾ? ಈ ಗುಣಗಳು ನಿನಗೆ ಹೇಗೆ ಬಂದವು? ನಿನ್ನ ಪ್ರಜ್ಞೆ ಎಂತಹುದು? ನಿನ್ನ ವಿದ್ಯೆ, ವೃತ್ತಿ ಏನು? ಇದಕ್ಕೆಲ್ಲ ತಡಮಾಡದೆ ನನಗೂ ಶ್ರೇಯಸ್ಸು ಆಗುವುದಾದಲ್ಲಿ ಹೇಳು?'[೧]

ಪ್ರಹ್ಲಾದರಾಜರ ಈ ಪ್ರಶ್ನೆಗಳಿಗೆ ಆ ಬ್ರಾಹ್ಮಣನು ಮೃದುಮಧುರ (ಮಾತುಗಳಿಂದ) ಸುಮಾರು ೩೦ ಶ್ಲೋಕಗಳಿಂದ ಉತ್ತರಿಸುತ್ತಾನೆ. ಅದರ ಸಾರ ಹೀಗಿದೆ.

---

೧ ಸ್ವಸ್ಥಃ ಶಕ್ತೋ ಮೃದುರ್ದಾಂತೋ ನಿರ್ವಿವಿತ್ಸೋಽನಸೂಯಕಃ।
ಸುವಾಕ್ ಬಹುಮತೋ ಲೋಕೇ ಪ್ರಾಜ್ಞಶ್ಚರಸಿ ಬಾಲವತ್ ॥
ನಿತ್ಯತೃಪ್ತ ಇವ ಬ್ರಹ್ಮನ್ ನ ಕಿಂಚಿದವಮನ್ಯಸೇ।
ಧರ್ಮಕಾಮಾರ್ಥಕಾರ್ಯೇಷು ಕೂಟಸ್ಥ ಇವ ಲಕ್ಷ್ಯಸೇ।
ಇಂದ್ರಿಯಾರ್ಥಾನನಾದೃತ್ಯ ಮುಕ್ತಶ್ಚರಸಿ ಸಾಕ್ಷಿವತ್ ॥
ಕಾ ನು ಪ್ರಾಜ್ಞ ಶ್ರುತಂ ವಾ ಕಿಂ ವೃತ್ತಿರ್ವಾ ಕಾ ನು ತೇ ಮುನೇ।
ಕ್ಷಿಪ್ರಮಾಚಕ್ಷ್ವ ಮೇ ಬ್ರಹ್ಮನ್ ಶ್ರೇಯೋ ಯದಿಹ ಮನ್ಯಸೇ ॥ - ೫/೪-೮

೧. ಪ್ರಹ್ಲಾದ (ರಾಜನೇ!) ಈ ಪ್ರಪಂಚದಲ್ಲಿರುವ ಪ್ರಾಣಿಗಳ ಜನ್ಮ ವೃದ್ಧಿ ಕ್ಷಯಗಳು ನಾವು ಅವುಗಳಿಗೆ ನಿಮಿತ್ತವಾಗದೆ (ಇದ್ದರೂ) ಸ್ವಾಭಾವಿಕವಾಗಿ ಅವರವರ ಸ್ವಭಾವಾನುಗುಣವಾಗಿ ನಡೆಯುತ್ತವೆ. ಈ ಸ್ವಭಾವಗಳಿಗೆ ಪ್ರತಿಯೊಂದು ವಸ್ತುಗಳ ಸ್ವಭಾವ ಕಾರಣವೇ ಹೊರತು ಬೇರಾವ ಕಾರಣಗಳಲ್ಲ. ನಿತ್ಯವೂ ಪೃಥಿವೀಯಲ್ಲಿರುವ, ಜಲಮೂಲಗಳಲ್ಲಿರುವ ಅಂತರಿಕ್ಷದಲ್ಲಿರುವ ಪ್ರಾಣಿಗಳು ಮೃತ್ಯುವಾಗಿರುವುದನ್ನು ನಾನು ನೋಡುತ್ತಿದ್ದೇನೆ. ಮೃತ್ಯು ಎಂತಹ ಬಲಾಢ್ಯರನ್ನೂ ದೇವದಾನವರನ್ನೂ ಬಿಡುವುದಿಲ್ಲ. ಆಕಾಶದಲ್ಲಿರುವ ಬೃಹದ್ಗಾತ್ರದ ಬೆಳಕು ಕೊಡುವ ಕಾಯಗಳೂ ಕಾಲ ಬಂದುವೆಂದರೆ ಬಿದ್ದು ಹೋಗುವುದನ್ನು ನೋಡುತ್ತೇನೆ. ಹೀಗೆ ಚರಾಚರ ಸಮಸ್ತ ಪದಾರ್ಥಗಳ (ಭೂತಗಳ) ಸಾಮಾನ್ಯ ಧರ್ಮ ಮೃತ್ಯುಶೀಲತೆ ಎಂದರೆ ಮರಣ ಧರ್ಮವಾಗಿದೆ. ಇದನ್ನು ತಿಳಿದ ನಾನು (ಬೆದರದೆ- ಹೆದರದೆ) ಕೃತಕೃತ್ಯನಾಗಿ ನಿದ್ರೆ ಹೋಗುತ್ತೇನೆ. ನಾನು ಒಂದಲ್ಲ ಒಂದು ದಿನ ಮರಣ ಹೊಂದುವುದು ಅನಿವಾರ್ಯವೆಂದು ಭಾವಿಸಿದ್ದೇನೆ.

ಭಗವತ್ಸಂಕಲ್ಪದಂತೆ ಉತ್ತಮ ಆಹಾರ ಸಿಕ್ಕಾಗ ಅದನ್ನು, ಏನೂ ಸಿಗದಿದ್ದರೆ ಸುಮ್ಮನೆ ಇದ್ದು ನಿದ್ರೆ ಹೋಗುತ್ತೇನೆ. ಒಮ್ಮೆ ಯಾರೋ ತಾವಾಗಿಯೇ ಬಂದು ನನಗೆ ಮೃಷ್ಟಾನ್ನ ತಂದು ಕೊಡುತ್ತಾರೆ. ಒಮ್ಮೆ ಅಲ್ಪಪ್ರಮಾಣ ಕೆಲವೊಮ್ಮೆ ಅನ್ನವೇ ಸಿಗುವುದಿಲ್ಲ. ಹೀಗೆ ದೈವಾಯತ್ತವಾಗಿ ಸಿಗುವ ಉತ್ತಮ, ಅಧಮ, ಆಹಾರ ಸ್ವೀಕರಿಸಿ ತೃಪ್ತನಾಗಿರುತ್ತೇನೆ. ಕೆಲವು ವೇಳೆ ಮಂಚದ ಮೇಲೆ, ಮತ್ತೆ ಕೆಲವು ವೇಳೆ ಭೂಮಿ ಮೇಲೆ, ಮತ್ತೊಮ್ಮೆ ಉಪ್ಪರಿಗೆ ಮನೆಗಳಲ್ಲಿಯೂ ಮಲಗುತ್ತೇನೆ. ನಾರುಮಡಿ, ಗೋಣಿವಸ್ತ್ರ ರೇಷ್ಮೆ ವಸ್ತ್ರ ಕೃಷ್ಣಾಜಿನ ತುಂಬಾ ಬೆಲೆಬಾಳುವ ವಸ್ತುಗಳನ್ನು ಸಿಕ್ಕಾಗಲೆಲ್ಲ ಧರಿಸುತ್ತೇನೆ. ಇವೆಲ್ಲ ದೈವಿಕವಾಗಿ ಸಿಕ್ಕುತ್ತವೆ. ಆದರೆ ಅದಕ್ಕೆ ನನ್ನ ಪ್ರಯತ್ನ ಇರದು. ಸಿಕ್ಕದ್ದನ್ನು ನಿರಾಕರಿಸುವುದಿಲ್ಲ. ಸಿಗದಿದ್ದುದಕ್ಕೆ ವಿಷಾದಿಸುವುದೂ ಇಲ್ಲ. ಇದುವೇ ಅಜಗರವ್ರತ. ಇದಕ್ಕೆ ನಾಶವಿಲ್ಲ. ಇದು ಸ್ಥಿರವಾದ, ಮಂಗಳಕರವಾದ ಮತ್ತು ವಿದ್ವಾಂಸರಿಂದ ಮಾನ್ಯತೆ ಹೊಂದಿದ ವ್ರತವಾಗಿದೆ.

ಆಜಗರವ್ರತವನ್ನು ವಿವರಿಸುವ ೧೩ ಶ್ಲೋಕಗಳಿವೆ. ತಾತ್ತ್ವಿಕವಾಗಿ ಮೇಲೆ ಹೇಳಿದ ವಿಚಾರಗಳೇ ಈ ಶ್ಲೋಕಗಳಿವೆ ಎನ್ನಬಹುದು. ಒಂದೆರಡು ಶ್ಲೋಕಗಳನ್ನು ನೋಡುವ.

---

೧ ಜಂಗಮಸ್ಥಾವರಾಣಾಂ ಚ ಭೂತಾನಾಮಸುರಾಧಿಪ।
ಪಾರ್ಥಿವಾನಾಮಪಿ ವ್ಯಕ್ತಂ ಮೃತ್ಯುಂ ಪಶ್ಯಾಮಿ ಸರ್ವಶಃ॥ - ೫/೧೫

೨ ಸುಮಹಾಂತಮಪಿ ಗ್ರಾಸಂ ಗ್ರಸೇ ಲಬ್ಧಂ ಯದೃಚ್ಛಯಾ।
ಶಯೇ ಪುರಭುಂಜಾನೋ ದಿವಸಾನಿ ಬಹೂನ್ಯಪಿ॥ - ೫/೧೯

೩ ಶಯೇ ಕದಾಚಿತ್ ಪರ್ಯಂಕೇ ಭೂಮಾವಪಿ ಪುನಃ ಶಯೇ।
ಪ್ರಾಸಾದೇಽಪಿ ಚ ಮೇ ಶಯ್ಯಾ ಕದಾಚಿದುಪಪದ್ಯತೇ॥ - ೫/೨೨

೪ ಧಾರಯಾಮಿ ಚ ಚೀರಾಣಿ ಶಾಣಕ್ಷೌಮಾಜಿನಾನಿ ಚ।
ಮಹಾರ್ಹಾಣಿ ಚ ವಾಸಾಂಸಿ ಧಾರಯಾಮ್ಯಹಮೇಕದಾ॥ - ೫/೨೩

**ಅಚಲಿತಮತಿರಚ್ಯುತಃ ಸ್ವಧರ್ಮಾತ್ ಪರಿಮಿತಸಂಸ್ಮರಣಃ ಪರಾವರಜ್ಞಃ।**
**ವಿಗತಭಯಕಷಾಯ ಲೋಭಮೋಹಃ ವ್ರತಮಿದ ಆಜಗರಂ ಶುಚಿಶ್ಚರಾಮಿ ॥**

ಮನಸ್ಸನ್ನು ಸ್ಥಿರವಾಗಿರಿಸಿಕೊಂಡು (ಸ್ಥಿರಮನಸ್ಕನಾಗಿ), ಸ್ವಧರ್ಮ (ವರ್ಣಾಶ್ರಮ)ಕ್ಕೆ ಚ್ಯುತಿ ಬರದಂತೆ, ಶೋಕ, ಮೋಹ, ಭಯಗಳನ್ನೆಲ್ಲಾ ದಾಟಿ, ಜೀವನಕ್ಕೆ ಬೇಕಾದ ಕನಿಷ್ಠ ವಸ್ತುಗಳಿಂದ ಜೀವನ ಸಾಗಿಸುತ್ತಾ ಅದೇ ಬೇಕು ಇದೇ ಬೇಕು ಎನ್ನದೆ ಸರ್ವೋತ್ತಮನಾದ ಭಗವಂತ, ತಾರತಮ್ಯೋಪೇತರಾದ ಜೀವರನ್ನೂ ತಿಳಿದುಕೊಂಡು ಶುದ್ಧನಾಗಿ ಈ ಆಜಗರವ್ರತವನ್ನು ಮಾಡುತ್ತಿದ್ದೇನೆ.

**ಉಪಗತ ಫಲಭೋಗಿನೋ ನಿಶಾಮ್ಯ ವ್ರತಮಿದಮಾಜಗರಂ ಶುಚಿಶ್ಚರಾಮಿ।**

ಹೆಬ್ಬಾವುಗಳು (ಅಜಗರಸರ್ಪಗಳು) ತಮ್ಮ ಬಳಿ ಬಂದ ಪ್ರಾಣಿಗಳನ್ನು ಮಾತ್ರ ಭೋಗಿಸುತ್ತವೆ, ತಿನ್ನುತ್ತವೆ, ತಾವಾಗಿಯೇ ಆಹಾರಕ್ಕಾಗಿ ಎಲ್ಲೂ ಹೋಗುವುದಿಲ್ಲ. ಇದನ್ನು ತಿಳಿದು ನಾನು ಆಜಗರವ್ರತವನ್ನು ಆಚರಿಸುತ್ತೇನೆ.

**ಅನಿಯತಶಯನಾಸನಃ ಪ್ರಕೃತ್ಯಾದಮನಿಯಮವ್ರತ ಶೌಚಯುಕ್ತಃ।**
**ಅಪಗತಫಲಸಂಚಯಃ ಪ್ರಹೃಷ್ಟೋ ವ್ರತಮಿದಮಾಜಗರಂ ಶುಚಿಶ್ಚರಾಮಿ ॥**

ನನಗೆ ಹಾಸಿಗೆ, ಆಸನಗಳು ಹೀಗೆಯೇ ಇರಬೇಕೆಂಬ ನಿಯಮಗಳಿಲ್ಲ. ಸ್ವಾಭಾವಿಕವಾಗಿ, ಇಂದ್ರಿಯನಿಗ್ರಹ, ನಿಯಮ(ಯಮ), ಸತ್ಯ, ಶೌಚಾದಿವ್ರತಗಳಿಂದ ಕೂಡಿ, ಕರ್ಮಫಲ-ಸಂಗ್ರಹ ಬುದ್ಧಿರಹಿತನಾಗಿ, ಬಂದುದರಲ್ಲಿ (ತಾನಾಗಿಯೇ) ಸಂತುಷ್ಟಚಿತ್ತನಾಗಿ ಈ ಆಜ ಗರವ್ರತ ಮಾಡುತ್ತಿದ್ದೇನೆ.

ಹೀಗೆ ಈ ಆಜಗರವ್ರತವನ್ನು ಆಚರಿಸುವವರು, ಆಜಗರಮುನಿಯಂತೆ ಭಯ, ಕ್ರೋಧ, ಲೋಭ, ಮೋಹಗಳಿಗೆ ತುತ್ತಾಗದೆ ಸುಖವಾಗಿ ವಿಹಾರ ಮಾಡುತ್ತಾರೆ ಎಂದು ಭೀಷ್ಮರು ಧರ್ಮರಾಜನಿಗೆ ತಿಳಿಸಿದರು.

## ಸಂದೇಶಗಳು

ಅಜಗರಮುನಿಯ ಮಾತುಗಳೆಲ್ಲ ಸಂದೇಶಗಳೆ ಆಗಿವೆ. ಆಜನ್ಮಜ್ಞಾನಿಯಾದ ಪ್ರಹ್ಲಾದರಾಜನು ಅಪರೋಕ್ಷಜ್ಞಾನಿ. ನರಸಿಂಹಾವತಾರಕ್ಕೆ ಕಾರಣೀಭೂತನಾದ ಮಹಾವೈಷ್ಣವ. ಆತನೂ ಕೂಡಾ ತನಗೆ ಏನೂ ಗೊತ್ತಿಲ್ಲದವನಂತೆ ಬ್ರಾಹ್ಮಣರಿಂದ ಜ್ಞಾನೋಪದೇಶ, ಶ್ರೇಯಸ್ಸಿಗೆ ಕೇಳುತ್ತಾನೆ. ಅದು ದೈವೀ ಧರ್ಮ, ಭಗವದ್ಭಕ್ತರು ಇರಬೇಕಾದ ರೀತಿ : **ಧರ್ಮೋಹಿ ಸರ್ವವಿದುಷಾಮಿತಿ** .... ಮಾತಿಗೆ ಉದಾಹರಣೆಯಾಗಿದೆ.

*****

## ೧೮೪. ಪ್ರಜ್ಞೆಯೇ ಸುಖಕ್ಕೆ ಸಾಧನ

ಧರ್ಮರಾಜನು ತಾತ ಭೀಷ್ಮರನ್ನು ಪ್ರಶ್ನಿಸಿದ. ಮನುಷ್ಯನು ಯಾರನ್ನು ಆಶ್ರಯಿಸಬೇಕು? ಬಂಧುಗಳೇ? ಧರ್ಮವೇ? (ಕರ್ಮವೇ? ಸದಾಚಾರವೇ?) ಹಣವೇ? ಪ್ರಜ್ಞೆಯೇ?

ಅದಕ್ಕೆ ಭೀಷ್ಮರು –

ಎಲ್ಲ ಪ್ರಾಣಿಗಳಿಗೂ ಪ್ರಧಾನ ಆಶ್ರಯವಾದುದು ಪ್ರಜ್ಞೆಯೇ (ಜ್ಞಾನವೇ). ಏಕೆಂದರೆ ಅದುವೇ ಪರಮಲಾಭ(ಅದರಿಂದಲೇ ಸಿಗಬೇಕಾದುದರಲ್ಲಿ ಶ್ರೇಷ್ಠವಾದುದು ಸಿಗುತ್ತದೆ. ಅದೇ ಮಹಾಶ್ರೇಯಸ್ಸು - ಶ್ರೇಯಸ್ಸಿಗೆ ಸಾಧನ). ಸಜ್ಜನರಿಗೆ ಸಮ್ಮತವಾದುದೂ, ಅದುವೇ ಸ್ವರ್ಗ (ಸ್ವರ್ಗಕ್ಕೆ ಸಾಧನ). ಇದಕ್ಕೆ ಉದಾಹರಣೆಯಾಗಿ ಬಲಿ, ಪ್ರಹ್ಲಾದ, ನಮುಚಿ, ಮಂಕಿ ಮೊದಲಾದ ಮಹಾತ್ಮರು ಇದ್ದಾರೆ. ಪ್ರಜ್ಞೆಯಿಂದಲೇ ಇವರೆಲ್ಲ ತಮ್ಮ ಇಷ್ಟಾರ್ಥ ಹೊಂದಿದ್ದಾರೆ. ಅದಕ್ಕಿಂತ ಶ್ರೇಷ್ಠವಾದುದು ಮತ್ತೊಂದಿಲ್ಲ. ಈ ವಿಷಯದಲ್ಲಿ ಇಂದ್ರ ಕಾಶ್ಯಪರ ಸಂವಾದರೂಪ ಇತಿಹಾಸವನ್ನು ಜ್ಞಾನಿಗಳು ಉದಾಹರಿಸುತ್ತಾರೆ. ಅದನ್ನು ಕೇಳು ಎಂದರು[೧].

ಹಿಂದೆ ಒಬ್ಬ ಐಶ್ವರ್ಯಮದಮತ್ತನಾದ ಒಬ್ಬ **ವೈಶ್ಯನು** ತಪಸ್ವಿಯಾದ ಋಷಿಕುಮಾರ-ನಾದ **ಕಾಶ್ಯಪನನ್ನು (ಕಶ್ಯಪಗೋತ್ರದ)** ರಥದಿಂದ ಕೆಳಗೆ ಬೀಳಿಸಿದನು (ಋಷಿಕುಮಾರನ ಮೇಲೆ ರಥವನ್ನು ಹಾಯಿಸಿ ಬೀಳಿಸಿದನು). ಇದರಿಂದ ತುಂಬಾ ನೊಂದ ಆ ಋಷಿಕುಮಾರನು ಸಿಟ್ಟಿನಿಂದ ಪ್ರಾಣತ್ಯಾಗ ಮಾಡಲು ಸಿದ್ಧನಾಗಿ ದರಿದ್ರನಿಗೆ ಬದುಕು ಎಂಬುದು ಇಲ್ಲ[೨]. ನಾನು ಸಾಯುವೆ ಎಂದನು. ಅವನು ಮಾತನಾಡುವ ಸ್ಥಿತಿಯಲ್ಲಿಯೂ ಆಗ ಇರಲಿಲ್ಲ. ಇಂತಹ ಆರ್ತ ಸ್ಥಿತಿಯಲ್ಲಿದ್ದ ಬ್ರಾಹ್ಮಣಕುಮಾರನನ್ನು ನೋಡಿ ಸಹಾನುಭೂತಿಯಿಂದ ಇಂದ್ರನು ನರಿವೇಷಧಾರಿಯಾಗಿ ಬಂದು ಹೀಗೆ ನುಡಿದನು[೩].

---

೧ ಪ್ರಜ್ಞಾ ಪ್ರತಿಷ್ಠಾ ಭೂತಾನಾಂ ಪ್ರಜ್ಞಾ ಲಾಭಃ ಪರೋ ಮತಃ ।
ಪ್ರಜ್ಞಾ ನೈಃಶ್ರೇಯಸೀ ಲೋಕೇ ಪ್ರಜ್ಞಾ ಸ್ವರ್ಗೋ ಮತಃ ಸತಾಮ್ ॥
ಪ್ರಜ್ಞಯಾ ಪ್ರಾಪಿತಾರ್ಥೋಹಿ ಬಲಿರೈಶ್ವರ್ಯ ಸಂಕ್ಷಯೇ ।
ಪ್ರಹ್ಲಾದೋ ನಮುಚಿರ್ಮಂಕಿಸ್ತಸ್ಯಾಃ ಕಿಂ ವಿದ್ಯತೇ ಪರಮ್ ॥ – ೬/೧,೨,೩

೨ ಆರ್ತಃ ಸ ಪತಿತಃ ಕ್ರುದ್ಧಸ್ತ್ಯಕ್ತ್ವಾತ್ಮಾನಮಥಾಬ್ರವೀತ್ ।
ಮರಿಷ್ಯಾಮ್ಯಧನಸ್ಯೇಹ ಜೀವಿತಾರ್ಥೋ ನ ವಿದ್ಯತೇ ॥ – ೬/೬

೩ ತಥಾ ಮುಮೂರ್ಷುಮಾಸೀನಮಕೂಜಂತಮಚೇತಸಮ್ ।
ಇಂದ್ರಃ ಸೃಗಾಲರೂಪೇಣ ಬಭಾಷೇ ಕ್ರುದ್ಧಮಾನಸಮ್ ॥ – ೬/೭

**ಅಚಲಿತಮತಿರಚ್ಯುತಃ ಸ್ವಧರ್ಮಾತ್ ಪರಿಮಿತಸಂಸ್ಮರಣಃ ಪರಾವರಜ್ಞಃ।**
**ವಿಗತಭಯಕಷಾಯ ಲೋಭಮೋಹಃ ವ್ರತಮಿದ ಆಜಗರಂ ಶುಚಿಶ್ಚರಾಮಿ ॥**

ಮನಸ್ಸನ್ನುಸ್ಥಿರವಾಗಿರಿಸಿಕೊಂಡು(ಸ್ಥಿರಮನಸ್ಕನಾಗಿ), ಸ್ವಧರ್ಮ(ವರ್ಣಾಶ್ರಮ)ಕ್ಕೆ ಚ್ಯುತಿ ಬರದಂತೆ, ಶೋಕ, ಮೋಹ, ಭಯಗಳನ್ನೆಲ್ಲಾ ದಾಟಿ, ಜೀವನಕ್ಕೆ ಬೇಕಾದ ಕನಿಷ್ಠ ವಸ್ತುಗಳಿಂದ ಜೀವನ ಸಾಗಿಸುತ್ತಾ ಅದೇ ಬೇಕು ಇದೇ ಬೇಕು ಎನ್ನದೆ ಸರ್ವೋತ್ತಮನಾದ ಭಗವಂತ, ತಾರತಮ್ಯೋಪೇತರಾದ ಜೀವರನ್ನೂ ತಿಳಿದುಕೊಂಡು ಶುದ್ಧನಾಗಿ ಈ ಆಜಗರವ್ರತವನ್ನು ಮಾಡುತ್ತಿದ್ದೇನೆ.

**ಉಪಗತ ಫಲಭೋಗಿನೋ ನಿಶಾಮ್ಯ ವ್ರತಮಿದಮಾಜಗರಂ ಶುಚಿಶ್ಚರಾಮಿ।**

ಹೆಬ್ಬಾವುಗಳು (ಅಜಗರಸರ್ಪಗಳು) ತಮ್ಮ ಬಳಿ ಬಂದ ಪ್ರಾಣಿಗಳನ್ನು ಮಾತ್ರ ಭೋಗಿಸುತ್ತವೆ, ತಿನ್ನುತ್ತವೆ, ತಾವಾಗಿಯೇ ಆಹಾರಕ್ಕಾಗಿ ಎಲ್ಲೂ ಹೋಗುವುದಿಲ್ಲ. ಇದನ್ನು ತಿಳಿದು ನಾನು ಆಜಗರವ್ರತವನ್ನು ಆಚರಿಸುತ್ತೇನೆ.

**ಅನಿಯತಶಯನಾಸನಃ ಪ್ರಕೃತ್ಯಾದಮನಿಯಮವ್ರತ ಶೌಚಯುಕ್ತಃ।**
**ಅಪಗತಫಲಸಂಚಯಃ ಪ್ರಹೃಷ್ಟೋ ವ್ರತಮಿದಮಾಜಗರಂ ಶುಚಿಶ್ಚರಾಮಿ ॥**

ನನಗೆ ಹಾಸಿಗೆ, ಆಸನಗಳು ಹೀಗೆಯೇ ಇರಬೇಕೆಂಬ ನಿಯಮಗಳಿಲ್ಲ. ಸ್ವಾಭಾವಿಕವಾಗಿ, ಇಂದ್ರಿಯನಿಗ್ರಹ, ನಿಯಮ(ಯಮ), ಸತ್ಯ, ಶೌಚಾದಿವ್ರತಗಳಿಂದ ಕೂಡಿ, ಕರ್ಮಫಲ-ಸಂಗ್ರಹ ಬುದ್ಧಿರಹಿತನಾಗಿ, ಬಂದುದರಲ್ಲಿ (ತಾನಾಗಿಯೇ) ಸಂತುಷ್ಟಚಿತ್ತನಾಗಿ ಈ ಆಜ ಗರವ್ರತ ಮಾಡುತ್ತಿದ್ದೇನೆ.

ಹೀಗೆ ಈ ಆಜಗರವ್ರತವನ್ನು ಆಚರಿಸುವವರು, ಆಜಗರಮುನಿಯಂತೆ ಭಯ, ಕ್ರೋಧ, ಲೋಭ, ಮೋಹಗಳಿಗೆ ತುತ್ತಾಗದೆ ಸುಖವಾಗಿ ವಿಹಾರ ಮಾಡುತ್ತಾರೆ ಎಂದು ಭೀಷ್ಮರು ಧರ್ಮರಾಜನಿಗೆ ತಿಳಿಸಿದರು.

## ಸಂದೇಶಗಳು

ಆಜಗರಮುನಿಯ ಮಾತುಗಳೆಲ್ಲ ಸಂದೇಶಗಳೆ ಆಗಿವೆ. ಆಜನ್ಮಜ್ಞಾನಿಯಾದ ಪ್ರಹ್ಲಾದರಾಜನು ಅಪರೋಕ್ಷಜ್ಞಾನಿ. ನರಸಿಂಹಾವತಾರಕ್ಕೆ ಕಾರಣೀಭೂತನಾದ ಮಹಾವೈಷ್ಣವ. ಆತನೂ ಕೂಡಾ ತನಗೆ ಏನೂ ಗೊತ್ತಿಲ್ಲದವನಂತೆ ಬ್ರಾಹ್ಮಣರಿಂದ ಜ್ಞಾನೋಪದೇಶ, ಶ್ರೇಯಸ್ಸಿಗೆ ಕೇಳುತ್ತಾನೆ. ಅದು ದೈವೀ ಧರ್ಮ, ಭಗವದ್ಭಕ್ತರು ಇರಬೇಕಾದ ರೀತಿ : **ಧರ್ಮೋಹಿ ಸರ್ವವಿದುಷಾಮಿತಿ** .... ಮಾತಿಗೆ ಉದಾಹರಣೆಯಾಗಿದೆ.

*****

# ೧೮೪. ಪ್ರಜ್ಞೆಯೇ ಸುಖಕ್ಕೆ ಸಾಧನ

ಧರ್ಮರಾಜನು ತಾತ ಭೀಷ್ಮರನ್ನು ಪ್ರಶ್ನಿಸಿದ. ಮನುಷ್ಯನು ಯಾರನ್ನು ಆಶ್ರಯಿಸಬೇಕು? ಬಂಧುಗಳೇ? ಧರ್ಮವೇ? (ಕರ್ಮವೇ? ಸದಾಚಾರವೇ?) ಹಣವೇ? ಪ್ರಜ್ಞೆಯೇ?

ಅದಕ್ಕೆ ಭೀಷ್ಮರು –

ಎಲ್ಲ ಪ್ರಾಣಿಗಳಿಗೂ ಪ್ರಧಾನ ಆಶ್ರಯವಾದುದು ಪ್ರಜ್ಞೆಯೇ (ಜ್ಞಾನವೇ). ಏಕೆಂದರೆ ಅದುವೇ ಪರಮಲಾಭ(ಅದರಿಂದಲೇ ಸಿಗಬೇಕಾದುದರಲ್ಲಿ ಶ್ರೇಷ್ಠವಾದುದು ಸಿಗುತ್ತದೆ. ಅದೇ ಮಹಾಶ್ರೇಯಸ್ಸು – ಶ್ರೇಯಸ್ಸಿಗೆ ಸಾಧನ). ಸಜ್ಜನರಿಗೆ ಸಮ್ಮತವಾದುದೂ, ಅದುವೇ ಸ್ವರ್ಗ (ಸ್ವರ್ಗಕ್ಕೆ ಸಾಧನ). ಇದಕ್ಕೆ ಉದಾಹರಣೆಯಾಗಿ ಬಲಿ, ಪ್ರಹ್ಲಾದ, ನಮುಚಿ, ಮಂಕಿ ಮೊದಲಾದ ಮಹಾತ್ಮರು ಇದ್ದಾರೆ. ಪ್ರಜ್ಞೆಯಿಂದಲೇ ಇವರೆಲ್ಲ ತಮ್ಮ ಇಷ್ಟಾರ್ಥ ಹೊಂದಿದ್ದಾರೆ. ಅದಕ್ಕಿಂತ ಶ್ರೇಷ್ಠವಾದುದು ಮತ್ತೊಂದಿಲ್ಲ. ಈ ವಿಷಯದಲ್ಲಿ ಇಂದ್ರ ಕಾಶ್ಯಪರ ಸಂವಾದರೂಪ ಇತಿಹಾಸವನ್ನು ಜ್ಞಾನಿಗಳು ಉದಾಹರಿಸುತ್ತಾರೆ. ಅದನ್ನು ಕೇಳು ಎಂದರು[೧].

ಹಿಂದೆ ಒಬ್ಬ ಐಶ್ವರ್ಯಮದಮತ್ತನಾದ ಒಬ್ಬ **ವೈಶ್ಯನು** ತಪಸ್ವಿಯಾದ ಋಷಿಕುಮಾರ–ನಾದ **ಕಾಶ್ಯಪನನ್ನು** (**ಕಶ್ಯಪಗೋತ್ರದ**) ರಥದಿಂದ ಕೆಳಗೆ ಬೀಳಿಸಿದನು (ಋಷಿಕುಮಾರನ ಮೇಲೆ ರಥವನ್ನು ಹಾಯಿಸಿ ಬೀಳಿಸಿದನು). ಇದರಿಂದ ತುಂಬಾ ನೊಂದ ಆ ಋಷಿಕುಮಾರನು ಸಿಟ್ಟಿನಿಂದ ಪ್ರಾಣತ್ಯಾಗ ಮಾಡಲು ಸಿದ್ಧನಾಗಿ ದರಿದ್ರನಿಗೆ ಬದುಕು ಎಂಬುದು ಇಲ್ಲ[೨]. ನಾನು ಸಾಯುವೆ ಎಂದನು. ಅವನು ಮಾತನಾಡುವ ಸ್ಥಿತಿಯಲ್ಲಿಯೂ ಆಗ ಇರಲಿಲ್ಲ. ಇಂತಹ ಆರ್ತ ಸ್ಥಿತಿಯಲ್ಲಿದ್ದ ಬ್ರಾಹ್ಮಣಕುಮಾರನನ್ನು ನೋಡಿ ಸಹಾನುಭೂತಿಯಿಂದ ಇಂದ್ರನು ನರಿವೇಷಧಾರಿಯಾಗಿ ಬಂದು ಹೀಗೆ ನುಡಿದನು[೩].

---

೧ ಪ್ರಜ್ಞಾ ಪ್ರತಿಷ್ಠಾ ಭೂತಾನಾಂ ಪ್ರಜ್ಞಾ ಲಾಭಃ ಪರೋ ಮತಃ ।
ಪ್ರಜ್ಞಾ ನೈಃಶ್ರೇಯಸೀ ಲೋಕೇ ಪ್ರಜ್ಞಾ ಸ್ವರ್ಗೋ ಮತಃ ಸತಾಮ್ ॥
ಪ್ರಜ್ಞಯಾ ಪ್ರಾಪಿತಾರ್ಥೋಽಹಿ ಬಲಿರೈಶ್ವರ್ಯ ಸಂಕ್ಷಯೇ ।
ಪ್ರಹ್ಲಾದೋ ನಮುಚಿರ್ಮಂಕಿಸ್ತಸ್ಯಾಃ ಕಿಂ ವಿದ್ಯತೇ ಪರಮ್ ॥ – ೬/೧,೨,೩

೨ ಆರ್ತಃ ಸ ಪತಿತಃ ಕ್ರುದ್ಧಸ್ತ್ಯಕ್ತ್ವಾತ್ಮಾನಮಥಾಬ್ರವೀತ್ ।
ಮರಿಷ್ಯಾಮ್ಯಧನಸ್ಯೇಹ ಜೀವಿತಾರ್ಥೋ ನ ವಿದ್ಯತೇ ॥ – ೬/೬

೩ ತಥಾ ಮುಮೂರ್ಷುಮಾಸೀನಮಕೂಜಂತಮಚೇತಸಮ್ ।
ಇಂದ್ರಃ ಸೃಗಾಲರೂಪೇಣ ಬಭಾಷೇ ಕ್ರುದ್ಧಮಾನಸಮ್ ॥ – ೬/೭

ಋಷಿಕುಮಾರನೇ! ಎಲ್ಲ ಪ್ರಾಣಿಗಳೂ ಮೊದಲು ಮನುಷ್ಯನಾಗಲು ನಂತರ, ಬ್ರಾಹ್ಮಣನಾಗಲು ಇಚ್ಛಿಸುತ್ತಾರೆ. ನೀನು ಬ್ರಾಹ್ಮಣನೆ ಆಗಿರುವೆ. ಶ್ರೋತ್ರಿಯನೂ ಆಗಿರುವೆ. ಹೀಗಿರುವಾಗ ದಾರಿದ್ರ್ಯದಿಂದಾಗಿ ಇಂತಹ ದುರ್ಲಭ ಬ್ರಾಹ್ಮಣ್ಯ ಬೇಡವೆಂದು ಸಾಯಲು ಇಚ್ಛಿಸುತ್ತೀಯಲ್ಲ?[೧]

ವಿಶ್ವದಲ್ಲಿಎಲ್ಲಪದಾರ್ಥಗಳಲಾಭಗಳುಅಭಿಮಾನಪೂರ್ವಕವಾಗಿರುತ್ತವೆ.ಎಲ್ಲರೂತಾವು ಪಡೆದುದನ್ನುತುಂಬಾ ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ. ನೀನು ಮಾತ್ರ ಬ್ರಾಹ್ಮಣಜನ್ಮದಂತಹ ಅಪೂರ್ವಲಾಭ ಹೊಂದಿದ್ದರೂ, ಆ ಬಗ್ಗೆ ಅಭಿಮಾನಶೂನ್ಯನಾಗಿರುವೆಯಲ್ಲ, ನೀನು ನಿಜವಾಗಿಯೂ ಅತ್ಯಂತ ಸಂತೋಷಪಡತಕ್ಕ ಸ್ಥಿತಿಯಲ್ಲಿದ್ದರೂ ಲೋಭದಿಂದಾಗಿ ಅದನ್ನೇ ಅವಹೇಳನ ಮಾಡುತ್ತಿರುವೆ.

ಉದಾಹರಣೆಯಾಗಿ ನನ್ನನ್ನೇ ನೋಡು. ನಾವು ನಾಲ್ಕು ಕಾಲುಗಳ ಪ್ರಾಣಿಗಳು ನಮಗೆ ಕೈಗಳಿಲ್ಲ, ಕೈಗಳಿದ್ದರೆ ಎಷ್ಟು ಚೆನ್ನಾಗಿತ್ತು ಎಂದು ನಾನು ಅನೇಕ ಬಾರಿ ಆಸೆ ಪಟ್ಟಿದ್ದೇನೆ[೨]. ನೀನು ಹಣಕ್ಕಾಗಿ ಆಸೆ ಪಡುವಂತೆ ಅದಕ್ಕಿಂತಲೂ ಹೆಚ್ಚು ಆಸೆ ನನಗೆ ಕೈಗಳಿದ್ದರೆ ಚೆನ್ನಾಗಿತ್ತು ಎಂದು. ಕೈಗಳು ಇದ್ದಿದ್ದರೆ ನಮಗೆ ನಾಟುತ್ತಿರುವ ಮುಳ್ಳುಗಳನ್ನು, ನಮ್ಮನ್ನು ಅಂಟಿರುವ, ಕಡಿಯುತ್ತಿರುವ ಹುಳಗಳನ್ನು ತೆಗೆದುಹಾಕಬಹುದು. ಕೈಗಳಿಂದ ಎಲ್ಲರಂತೆ ನಾವೂ ಚಳಿ, ಮಳೆಗಳಿಂದ ಬಟ್ಟೆಯುಟ್ಟು ರಕ್ಷಿಸಿಕೊಳ್ಳಬಹುದಿತ್ತು. ಉತ್ತಮಮೃಷ್ಟಾನ್ನ ನಿರ್ಮಿಸಿ (ಮಾಡಿ) ಉಣಬಹುದಿತ್ತು. ಉತ್ತಮ ನಿವಾಸ ಹೊಂದಬಹುದಿತ್ತು. ಹಾಲು ಕುಡಿದು, ಇತರರಂತೆ ಸುಖವಾಗಿರಬಹುದಿತ್ತು. ಭಾರ ಹೊರಬಹುದಿತ್ತು. ಕೈಗಳಿಲ್ಲದುದರಿಂದ ಇದಾವ ಸುಖವೂ ನನಗಿಲ್ಲ, ಆದರೆ ನಿನಗೆ ಎಲ್ಲವೂ ಇದೆ. ನೀನೇನು ನರಿಯಾಗಿ, ಕ್ರಿಮಿ, ಹಾವು, ಜಂತಾಗಿ ಹುಟ್ಟಿಲ್ಲ ಮನುಷ್ಯನಾಗಿ, ಬ್ರಾಹ್ಮಣನಾಗಿ ಜನಿಸಿರುವೆ. ಹೀಗಿರುವಾಗ ಕೇವಲ ಹಣವಿಲ್ಲದ್ದಕ್ಕಾಗಿ ಸಾಯಬೇಕೆಂದು ಬಯಸುವುದು ಸರ್ವಥಾ ಸರಿಯಲ್ಲ[೩].

ಒಂದು ವೇಳೆ ಸತ್ತರೆ ಮುಂದೆ ಎಂತಹ ಜನ್ಮ ಬರುವುದೋ ತಿಳಿಯದು[೪]. ನಾನು ಸಾಯಲು ಇಚ್ಛಿಸುವುದಿಲ್ಲ, ಅದು ಅಕಾರ್ಯ, ಮಾಡಬಾರದ ಕೆಲಸ. ಕೆಲವರು ಜನ್ಮತಃ

---

೧ ಮನುಷ್ಯೋ ಬ್ರಾಹ್ಮಣಶಾಸಿ ಶ್ರೋತ್ರಿಯಶ್ಚಾಸಿ ಕಾಶ್ಯಪ।
ಸುದುರ್ಲಭಮವಾಪ್ಯೈತದದೋಷಾನ್ ಮರ್ತುಮಿಚ್ಛಸಿ॥ – ೬/೯

೨ ಅಥ ಯೇಷಾಂ ಪುನಃ ಪಾಣೀ ದೇವದತ್ತೌ ದಶಾಂಗುಲೀ।
ಉದ್ಧರಂತಿ ಕೃಮೀನಂಗಾದ್ದಶಮಾನಾನ್ ಕಷಂತಿ ಚ॥ – ೬/೧೩

೩. ದಿಷ್ಟ್ಯಾ ತ್ವಂ ನ ಸೃಗಾಲೋ ವೈ ನ ಕೃಮಿರ್ನ ಚ ಮೂಷಕಃ।
ನ ಸರ್ಪೋ ನ ಚ ಮಂಡೂಕೋ ನ ಚಾನ್ಯಃ ಪಾಪಯೋನಿಜಃ॥ – ೬/೧೭

೪ ಅಕಾರ್ಯಮಿತಿ ಚೈವೇಮಂ ನಾತ್ಮಾನಂ ಸಂತ್ಯಜಾಮ್ಯಹಮ್।
ನೇತಃ ಪಾಪೀಯಸೀಂ ಯೋನಿಂ ಪತೇಯಮಪರಾಮಿತಿ॥ – ೬/೨೦

ಸುಖ ಹೊಂದಿಯೇ ಹುಟ್ಟುತ್ತಾರೆ. ಕೆಲವರು ದುಃಖಿಗಳಾಗಿ ಜನಿಸುತ್ತಾರೆ. ಯಾರಿಗೂ ಆತ್ಯಂತಿಕ ಸುಖ ಎನ್ನುವುದು ಕಂಡಿಲ್ಲ. ಮನುಷ್ಯ ಅಲ್ಪ ಧನಿಯಾದಾಗ ಮಹೈಶ್ವರ್ಯವನ್ನೂ, ರಾಜ್ಯವನ್ನೂ, ರಾಜನಾದವನು ದೇವತ್ವವನ್ನೂ, ದೇವತ್ವ ಹೊಂದಿದವನು ಇಂದ್ರನಾಗಲು ಬಯಸುತ್ತಾನೆ. ಅದು ಸಿಕ್ಕರೂ ತೃಪ್ತಿ ಸಿಗದು[೧]. ಒಟ್ಟಾರೆ ಎಷ್ಟೇ ಐಶ್ವರ್ಯ ಹೊಂದಿದರೂ ಆಸೆ ಪೂರ್ಣತೆಯನ್ನು ಹೊಂದದು. ದಾಹವನ್ನು ಕಳೆಯಲು ನೀರನ್ನು ಕುಡಿದಂತೆ, ಸೌದೆಯು ಉರಿದಷ್ಟು ಮತ್ತೂ ಉರಿಯುವಂತೆ ಜಾಸ್ತಿಯಾಗುತ್ತಿರುತ್ತದೆ.

ಕಶ್ಯಪನೇ! ನಿನ್ನಲ್ಲಾದರೂ ದುಃಖ ಸಂತೋಷಗಳು ಇವೆ. ಅದಕ್ಕೇಕೆ ಶೋಕ? ಕಾಮಗಳನ್ನು ಅಡಗಿಸಿಟ್ಟುಕೊಂಡರೆ ಭಯವಿರದು[೨]. ಪಕ್ಷಿಗಳು ತಮ್ಮ ಮರಿಗಳನ್ನು ಗೂಡಿನಲ್ಲಿ ಅಡಗಿಸಿಡುವಂತಿರಬೇಕು. ರಸವನ್ನು ತಿಳಿಯದವನಿಗೆ ಅದರ ಆಸೆ ಹುಟ್ಟುವುದಿಲ್ಲ. ಮದ್ಯದ ರುಚಿ, ಲಟ್ವಾಂಗವೆಂಬ ಪಕ್ಷಿಯಮಾಂಸದ ರುಚಿ ತಿಳಿಯದ ನಿನಗೆ, ಅದನ್ನು ಊಹಿಸಲಾರೆ. ಆದ್ದರಿಂದ ವಿಷಯಗಳ ಸಂಗವಿರದೆ ಇದ್ದರೆ ಅದರಿಂದಾಗುವ ಸುಖದುಃಖಗಳೂ ಆಗುವುದಿಲ್ಲ. ಅದೇ ಮನುಷ್ಯನಿಗೆ ಮಹಾವ್ರತವಾಗಿರಬೇಕು. ಮನುಷ್ಯರು ಮನುಷ್ಯರ ದಾಸ್ಯದಲ್ಲಿಯೇ ಇರುವುದನ್ನು ನೋಡುತ್ತೇವೆ. ಕೆಲವರು ಕೊಲೆ ಮೊದಲಾದ ಹಿಂಸಾಚಾರಗಳಲ್ಲಿ ಆನಂದಪಡುತ್ತಾರೆ. ಕೆಲವರು ವಿದ್ಯಾವಂತರಾಗಿಯೂ, ಬಾಹುಬಲ ಉಳ್ಳವರಾಗಿದ್ದರೂ ಅಸಹ್ಯಕರವಾದ ಪಾಪ ಕೆಲಸಗಳಲ್ಲಿ ಮಗ್ನನಾಗಿರುತ್ತಾರೆ. ಇನ್ನೂ ಕೆಲವರಿಗೆ ಅತ್ಯಂತ ದುಷ್ಟಕೆಲಸಗಳಲ್ಲಿಯೇ ಆಸಕ್ತಿ ಇರುತ್ತದೆ. ಇದೆಲ್ಲ ದೈವದ ಲೀಲೆ.

ಅತ್ಯಂತ ಕೆಟ್ಟ ಜನ್ಮದಲ್ಲಿ ಹುಟ್ಟಿದರೂ, ಉದಾಹರಣೆಗಾಗಿ ಚಾಂಡಾಲನಾದರೂ ಆ ದೇಹ ಬಿಡಲು ಇಷ್ಟಪಡುವುದಿಲ್ಲ[೩]. ಇದೆಲ್ಲ ದೇವರ ಮಾಯೆ. ನೀನು ಇದನ್ನು ತಿಳಿದುಕೊ. ಕೈಯಿಲ್ಲದ ಮನುಷ್ಯರು ತಮ್ಮ ಮೈಮೇಲಿನ ಗಾಯದಲ್ಲಿರುವ ಕ್ರಿಮಿಗಳನ್ನು ತೆಗೆದುಕೊಳ್ಳಲಾರರು. ನಿನಗೆಲ್ಲ ಇದೆ, ಹಾಗಿದ್ದರೂ ಸಾಯಲು ಬಯಸುವುದು ತಪ್ಪಲ್ಲವೇ? ನಿನ್ನನ್ನು ಯಾರೂ ಧಿಕ್ಕರಿಸಿಲ್ಲ[೪]. ನಿನ್ನ ದೇಹ ಸೌಷ್ಠವತೆಯಿಂದ ಕೂಡಿದೆ. ನಿನಗಾವ ಅಪವಾದಗಳೂ ಲೋಕದಲ್ಲಿಲ್ಲ.

---

೧ ಭವೇಸ್ತ್ವಂ ಯದ್ಯಪಿ ತ್ವಾಢ್ಯೋ ನ ರಾಜ್ಯಂ ನ ಚ ದೈವತಮ್ ।
ದೇವತ್ವಂ ಪ್ರಾಪ್ಯ ಚೇಂದ್ರತ್ವಂ ನೈವ ತುಷ್ಯೇಸ್ತಥಾ ಇತಿ ॥ – ೬/೨೪

೨ ಅಪ್ರಾಶನಮಸಂಸ್ಪರ್ಶಮಸಂದರ್ಶನಮೇವ ಚ ।
ಪುರುಷಸ್ಯೈಷ ನಿಯಮೋ ಮನ್ಯೇ ಶ್ರೇಯೋ ನ ಸಂಶಯಃ ॥ – ೬/೩೧

೩ ನ ಪುಲ್ಕಸೋ ನ ಚಂಡಾಲ ಆತ್ಮಾನಂ ತ್ಯಕ್ತುಮಿಚ್ಛತಿ ।
ಅಸಂತುಷ್ಟಃ ಸ್ವಯಾ ಯೋನ್ಯಾ ಮಾಯಾಂ ಪಶ್ಯಸ್ವ ಯಾದೃಶೀಮ್ ॥ – ೬/೩೬

೪ ಯದಿ ಬ್ರಾಹ್ಮಣ ದೇಹಸ್ತೇ ನಿರಾತಂಕೋ ನಿರಾಮಯಃ ।
ಅಂಗಾನಿ ಚ ಸಮಗ್ರಾಣಿ ನ ಚ ಲೋಕೇಷು ಧಿಕ್ಕೃತಃ ॥ – ೬/೩೮

ಶರೀರದ ಬಗ್ಗೆ ಜಿಗುಪ್ಸೆ ಪಡಬೇಡ. ಎಲೈ ಬ್ರಹ್ಮರ್ಷಿಯೇ ಏಳು ಎದ್ದೇಳು. ದೇಹತ್ಯಾಗದ ಮನಸ್ಸನ್ನು ಮಾಡಬೇಡ.

ಎಲೈ ಬ್ರಹ್ಮರ್ಷಿಯೇ! ನನ್ನ ಮಾತನ್ನು ಕೇಳುವೆಯಾದರೆ, ನನ್ನನ್ನು ನಂಬುವೆಯಾದರೆ, ನೀನು ವೇದೋಕ್ತ ಮುಖ್ಯ ಧರ್ಮಫಲವನ್ನು ಹೊಂದುವೆ. ಸ್ವಾಧ್ಯಾಯ, ಅಗ್ನಿಹೋತ್ರ, ಸತ್ಯ, ಇಂದ್ರಿಯನಿಗ್ರಹ, ದಾನಗಳನ್ನು ಬಿಡಬೇಡ. ನಿನ್ನಂತೆ ಸ್ವಾಧ್ಯಾಯ ಸಂಪನ್ನರು, ಯಜನ-ಯಾಜನ ಮಾಡುವವರು (ಯಜ್ಞ ಮಾಡುವವರು - ಮಾಡಿಸುವವರು) ಹೇಗೆ ತಾನೇ ತಮಗೆ ತಾವೇ ಕೇಡನ್ನು ಬಯಸುತ್ತಾರೆ? ಬಯಸುವುದಿಲ್ಲ.[೧]

ಒಳ್ಳೆಯ ನಕ್ಷತ್ರದಲ್ಲಿ ಹುಟ್ಟಿದ ನಿನ್ನಂತಹವರು ಸತ್ಸಂತಾನ ಬಯಸುವವರಾಗಿ ಮುಂದೆ ಉತ್ತಮ ಸುಖ ಹೊಂದುತ್ತಾರೆ. ಕೆಟ್ಟ ನಕ್ಷತ್ರ, ತಿಥಿಗಳಲ್ಲಿ ಜನಿಸಿದವರು ಅಸುರರಾಗಿ ಹುಟ್ಟುತ್ತಾರೆ. ನಾನು ಹಿಂದಿನ ಜನ್ಮದಲ್ಲಿ ವೇದನಿಂದೆ ಮಾಡುತ್ತಾ, ಬರೀ ಶುಷ್ಕತರ್ಕದಲ್ಲಿ ಪಾಂಡಿತ್ಯ ಹೊಂದಿ, ವೇದಗಳು ಪ್ರಮಾಣವಲ್ಲವೆನ್ನುವ ಮಟ್ಟಿಗೆ ನಿಂದಿಸುತ್ತಿದ್ದೆ. ಆನ್ವೀಕ್ಷಕೀ ಎನಿಸಿದ ತರ್ಕ ವಿದ್ಯೆಯಲ್ಲಿ ಆದರ ಉಳ್ಳವನಾಗಿದ್ದೆ. ವಿದ್ವತ್ಸಭೆಗಳಲ್ಲಿ ಶಾಸ್ತ್ರಪ್ರಮಾಣವನ್ನೇ ನಿರಾಕರಿಸುತ್ತಾ ಬರೀ ತರ್ಕಮೂಲವಾಗಿ (ವೇದ-ಪ್ರತ್ಯಕ್ಷಪ್ರಮಾಣಗಳಿಗೆ ಅನುಗುಣವಾಗಿ ಮಾತನಾಡದೆ) ಬಹಳವಾಗಿ ವಾದಿಸುತ್ತಾ ಬ್ರಾಹ್ಮಣರೊಡನೆ ಮಾತನಾಡುತ್ತಿದ್ದೆ. ನಾನು ನಾಸ್ತಿಕನೂ, ಎಲ್ಲರನ್ನು ಸಂಶಯದೃಷ್ಟಿಯಿಂದ ನೋಡುವವನೂ, ಮೂರ್ಖನೂ, ನಾನೇ ಪಂಡಿತನೆಂದು ದುರಭಿಮಾನಿಯಾಗಿಯೂ ಆದುದರಿಂದ ನರಿಯಾಗಿ ಹುಟ್ಟಿದ್ದೇನೆ.[೨] (ಹೀಗೆ ನರಿ ಜನ್ಮ ಹೊಂದಿದ ನಾನು ಇನ್ನೂ ನೂರಾರು ಜನ್ಮ ಕಳೆದ ಮೇಲಾದರೂ ಮನುಷ್ಯನಾಗಿ ಜನಿಸುವೆನೋ ಎಂದು ಕಾದು ಕುಳಿತಿದ್ದೇನೆ.

ಎಲೈ ಋಷಿಕುಮಾರನೇ ! ನನ್ನ ಅಪೇಕ್ಷೆಯಂತೆ ನನಗೇನಾದರೂ ಮನುಷ್ಯನಾಗಿ, ಬ್ರಾಹ್ಮಣನಾಗಿ ಜನಿಸಿದಲ್ಲಿ ನಾನು ಸಂತೋಷ ಹೊಂದುವೆ. ಮೈಮರೆಯುವುದಿಲ್ಲ, ಉನ್ಮತ್ತನಾಗದೆ, ಯಜ್ಞ, ದಾನ ತಪಸ್ಸುಗಳಲ್ಲಿ ಭಕ್ತಿ, ಆಸಕ್ತಿ ಹೊಂದುತ್ತೇನೆ. ತಿಳಿಯ ಬೇಕಾದುದನ್ನು ತಿಳಿದು, ಬಿಡಬೇಕಾದುದನ್ನು ಬಿಟ್ಟು ಬಿಡುತ್ತೇನೆ.

---

೧ ಸ್ವಾಧ್ಯಾಯಮಗ್ನಿಸಂಸ್ಕಾರಮಪ್ರಮತ್ತೋಽನುಪಾಲಯ।
ಸತ್ಯಂ ದಮಂ ಚ ದಾನಂ ಚ ಸ್ಪರ್ಧಿಷ್ಠಾ ಮಾ ಚ ಕೇನಚಿತ್ ॥ - ೬/೪೧

೨ ಅಹಮಾಸಂ ಪಂಡಿತಕೋ ಹೈತುಕೋ ವೇದನಿಂದಕಃ।
ಅನ್ವೀಕ್ಷಿಕೀಂ ತರ್ಕವಿದ್ಯಾಮನುರಕ್ತೋ ನಿರರ್ಥಿಕಾಮ್ ॥
ನಾಸ್ತಿಕಃ ಸರ್ವಶಂಕೀ ಚ ಮೂರ್ಖಃ ಪಂಡಿತಮಾನಿಕಃ।
ಯಸ್ಯೇಯಂ ಫಲನಿರ್ವೃತ್ತಿಃ ಸೃಗಾಲತ್ವಂ ಮಮ ದ್ವಿಜ॥ - ೬/೪೫,೪೭

೩ ಸಂತುಷ್ಟಶ್ಚಾಪ್ರಮತ್ತಶ್ಚ ಯಜ್ಞದಾನತಪೋರತಿಃ।
ಜ್ಞೇಯಜ್ಞಾತಾ ಭವೇಯಂ ವೈ ವರ್ಜ್ಯವರ್ಜಯಿತಾ ತಥಾ॥ - ೬/೪೯

ಈ ಮಾತುಗಳನ್ನು ಕೇಳಿದ ಕಾಶ್ಯಪನು ಎದ್ದವನೇ ನರಿಯನ್ನು ನೋಡುತ್ತಾ, ನೀನೆಂತಹ ಬುದ್ಧಿವಂತನಲ್ಲ!(ನಿದ್ದೀಯಾ)! ನನಗೆ ಆಶ್ಚರ್ಯವಾಗುತ್ತಿದೆ. ಕಾಶ್ಯಪನು ತನ್ನ ದೀರ್ಘವಾದ ಜ್ಞಾನದೃಷ್ಟಿಯಿಂದ ನೋಡುತ್ತಾ ನರಿಯು ದೇವರಾಜ ಇಂದ್ರನೆಂದು ತಿಳಿದನು, ನೋಡಿದನು[೧]. ನಂತರ ಕಾಶ್ಯಪನು ಕುದುರೆಯೇ ವಾಹನವಾಗಿರುವ ಇಂದ್ರನನ್ನು ಭಕ್ತಿಯಿಂದ ಪೂಜಿಸಿದನು. ಇಂದ್ರನ ಅನುಮತಿ ಪಡೆದು ತನ್ನ ಆಶ್ರಮಕ್ಕೆ ಹೊರಟನು. ಹೀಗೆ ಪ್ರಜ್ಞೆಯನ್ನು ಆಶ್ರಯಿಸಿದ ಬ್ರಾಹ್ಮಣನು ಮುಂದೆ ಸುಖವನ್ನು ಸಾಧಿಸಿದನು.

## ಸಂದೇಶಗಳು

ನರಿರೂಪದಲ್ಲಿ ಬಂದ ಇಂದ್ರನ ಮಾತುಗಳೆಲ್ಲ ಸಂದೇಶಗಳಾಗಿವೆ. ಜೀವನದಲ್ಲಿ ಆಗುವ ತಾತ್ಕಾಲಿಕ ಹಿನ್ನಡೆಗಳನ್ನು ಹಿಮ್ಮೆಟ್ಟಿ ನಮ್ಮ ಕರ್ತವ್ಯಗಳನ್ನು ನಿರ್ವಹಿಸುವುದೇ ಸುಖದ ಸಾಧನ. ಅದಕ್ಕೆ ಇಂದ್ರದೇವರಂತಹ ಗುರುಗಳ ಪ್ರಜ್ಞೋಪದೇಶ.

*****

೧ ಸಮವೈಕ್ಷತ ತಂ ವಿಪ್ರೋ ಜ್ಞಾನದೀರ್ಘೇಣ ಚಕ್ಷುಷಾ।
ದದರ್ಶ ಚೈನಂ ದೇವಾನಾಮಿಂದ್ರಂ ದೇವಂ ಶಚೀಪತಿಮ್ ॥ - ೬/೫೧

# ೧೮೫. ಭೂತಾತ್ಮನನ್ನು ತಿಳಿಯುವ ಉಪಾಯ

ಧರ್ಮರಾಜನ ಪ್ರಶ್ನೆ - ತಾತ! ಜ್ಞಾನಯೋಗದ ಫಲವೇನು? ವೇದಗಳ ನಿಯಮದ ಎಂದರೆ ಅಗ್ನಿಹೋತ್ರಾದಿಗಳಿಗೆ ಬರುವ ಫಲವೇನು? [೧]ಭೂತಾತ್ಮನನ್ನು ತಿಳಿಯುವುದು ಹೇಗೆ? (ತಿಳಿಯುವ ಉಪಾಯವೇನು) ಇವುಗಳನ್ನು ನನಗೆ ತಿಳಿಸು[೨].

ಈ ಬಗ್ಗೆ ಭೀಷ್ಮರು ಪ್ರಜಾಪತಿಯಾದ **ಮನುವಿಗೂ ಹಾಗೂ ಬೃಹಸ್ಪತಿ** ಆಚಾರ್ಯರಿಗೂ ಮಧ್ಯೆ ನಡೆದ ಸಂವಾದರೂಪ ಇತಿಹಾಸವನ್ನು ಹೇಳಿದರು[೩].

ಹಿಂದೆ ದೇವಗುರುವಾದ ಬೃಹಸ್ಪತಿಯು ತನಗೆ ಗುರುವಾದ ಶ್ರೇಷ್ಠತಮನಾದ [೪]ಮನುಪ್ರಜಾಪತಿ ಬಳಿಗೆ ಹೋಗಿ ನಮಿಸಿ ಪ್ರಶ್ನೆ ಮಾಡಿದನು? ಆ ಪ್ರಶ್ನೆಗಳು ಹೀಗಿವೆ.

೧. ವೇದೋಕ್ತ ಮಂತ್ರವಿಧಿಗಳ ಪ್ರವೃತ್ತಿಗೆ ಕಾರಣವೇನು?

೨. ಜ್ಞಾನಕ್ಕೆ ದೊರೆಯುವ ಫಲವೇನು?

೩. ಮಂತ್ರವರ್ಣಗಳೆನಿಸಿದ ವೇದಗಳಿಂದ ಯಾವುದನ್ನು ಪ್ರಸಿದ್ಧಿಪಡಿಸಿದ್ದಾರೆ? (ವೇದಗಳಿಂದ ತಿಳಿಯಲ್ಪಡುವ ವಸ್ತು ಯಾವುದು?) ಇವೆಲ್ಲವನ್ನು ನನಗೆ ತಿಳಿಸಿರಿ.

೪. ಯಜ್ಞ-ದಾನಾದಿಗಳನ್ನು ಮಾಡಿ ಪಡೆಯುವ ಫಲ ಯಾವುದು? ಆ ಫಲವು ಎಲ್ಲಿಂದ ಮತ್ತು ಹೇಗೆ ಸಿಗುತ್ತದೆ.

---

೧ ಭೂತಾತ್ಮ ಎಂದರೆ ವಿಷ್ಣು - ಹಾಗೆ ವಿಷ್ಣುಸಹಸ್ರನಾಮವಿದೆ.

೨ ಕಿಂ ಫಲಂ ಜ್ಞಾನಯೋಗಸ್ಯ ವೇದಾನಾಂ ನಿಯಮಸ್ಯ ಚ।
ಭೂತಾತ್ಮಾ ವಾ ಕಥಂ ಜ್ಞೇಯಸ್ತನ್ಮೇ ಬ್ರೂಹಿ ಪಿತಾಮಹ॥ - ೨೭/೧

೩ ಪ್ರಜಾಪತಿಂ ಶ್ರೇಷ್ಠತಮಂ ಪೃಥಿವ್ಯಾಂ....
ಯತ್ಕಾರಣಂ ಮಂತ್ರವಿಧಿಃ ಪ್ರವೃತ್ತೋ ಜ್ಞಾನೇ ಫಲಂ ಯತ್ಪ್ರವದಂತಿ ವಿಪ್ರಾಃ॥
ಮಹೀ ಮಹೀಜಾಃ..... ಯತಃ ಪ್ರಸೂತಾಸ್ತದುಚ್ಯತಾಂ....... ॥ - ೨೭/೩,೪,೬

೪ ಬೃಹಸ್ಪತ್ಯಾಚಾರ್ಯರು ಮನು ಪ್ರಜಾಪತಿಯನ್ನು ಕೇಳಿದರೆಂದು ಇದೆ. ಆತನು ಯಾರು ಎಂದು ಸ್ಪಷ್ಟವಾಗುವುದಿಲ್ಲ. ಬೃಹಸ್ಪತ್ಯಾಚಾರ್ಯರು ಪ್ರಜಾಪತಿಯನ್ನು ತನ್ನ ಗುರುವೆಂದು ಹೇಳಿಕೊಳ್ಳುತ್ತಾರೆ. ಅವರು ಸ್ವಾಯಂಭುಮನು ಆಗಲಾರರು. ಇವರು ಇಬ್ಬರೂ ಒಂದೇ ಕಕ್ಷ್ಯಾ(೧೦)ದಲ್ಲಿ ಬರುತ್ತಾರೆ. ಆದ್ದರಿಂದ ಬೃಹಸ್ಪತಿಗಳ ಗುರು ಪ್ರಜಾಪತಿ ಎಂದರೆ ಚತುರ್ಮುಖಬ್ರಹ್ಮದೇವರೇ ಇರಬೇಕು ಎನಿಸುತ್ತದೆ. ಅವರೂ ಪ್ರಜಾಪತಿಶಬ್ದ ಪ್ರತಿಪಾದ್ಯರು. ಇಲ್ಲಿ ಶ್ರೇಷ್ಠತಮ ಪ್ರಜಾಪತಿ ಎಂದು ಇರುವುದರಿಂದ ಅವರು ಚತುರ್ಮುಖನೇ ಇರಬೇಕು.

೫. ಭೂಮಿ, ಭೂಮಿಯಲ್ಲಿ ಹುಟ್ಟುವ ಪದಾರ್ಥಗಳು, ಗಾಳಿ, ಅಂತರಿಕ್ಷ, ನೀರು, ನೀರಿನಲ್ಲಿರುವ ಪ್ರಾಣಿಗಳು, ದೇವಲೋಕ, ಅಲ್ಲಿ ದೇವತೆಗಳು, ಇವರೆಲ್ಲರೂ ಯಾರ ದೆಸೆಯಿಂದ ಜನ್ಮ ತಾಳುತ್ತಾರೆ?

ನಾನು ವೇದತ್ರಯಗಳು, ಛಂದಸ್ಸು, ಜ್ಯೋತಿಷ್ಯ, ವ್ಯಾಕರಣ, ನಿರುಕ್ತ, ಕಲ್ಪ ಶೀಕ್ಷಾರೂಪವೇದಾಂಗಗಳನ್ನು ಅಧ್ಯಯನ ಮಾಡಿದ್ದೇನೆ. ಭೂತಾತ್ಮ ಪ್ರಕೃತಿಯ ಬಗ್ಗೆ ತಿಳಿದಿಲ್ಲ. ಈ ಜ್ಞಾನಗಳ ಫಲವೇನೆಂದು ಸರಿಯಾಗಿ ತಿಳಿದಿಲ್ಲ. ಕರ್ಮದ ಫಲವನ್ನೂ ತಿಳಿದಿಲ್ಲ.

೬. ಜೀವನು ಒಂದು ದೇಹವನ್ನು ತ್ಯಜಿಸಿ ಇನ್ನೊಂದು ದೇಹವನ್ನು ಹೇಗೆ ಹೊಂದುತ್ತಾನೆ ಎಂಬ ವಿಷಯವನ್ನೂ ತಿಳಿಸಿರಿ.

ಮನು ಪ್ರಜಾಪತಿಗಳ ಈ ಎಲ್ಲ ಪ್ರಶ್ನೆಗಳಿಗೆ ೬ ಅಧ್ಯಾಯಗಳಲ್ಲಿ ಸುಮಾರು ೧೫೦ ಶ್ಲೋಕಗಳಿಂದ ವಿಸ್ತಾರವಾಗಿ ಉತ್ತರಿಸಿದ್ದಾರೆ. ಆ ಉತ್ತರಗಳ ಕೆಲಭಾಗಗಳನ್ನು ಮಾತ್ರ ಇಲ್ಲಿ ಸಂಗ್ರಹಿಸಲಾಗಿದೆ.

೧. ಸಾಂಸಾರಿಕ ಸುಖದುಃಖಗಳನ್ನು ಉದ್ದೇಶಿಸಿ ಕರ್ಮಗಳು (ವೇದೋಕ್ತ) ಪ್ರವೃತ್ತವಾಗಿವೆ. ಸಾಂಸಾರಿಕ ಇಷ್ಟಾನಿಷ್ಟಗಳು ನನಗೆ ಬೇಡ ಎಂದು ತಿಳಿಸಲು ಜ್ಞಾನವಿಧಿಗಳು [೧]ಪ್ರವೃತ್ತವಾಗಿವೆ (ಮೇಲ್ನೋಟಕ್ಕೆ).

ಕೇವಲ ಲೌಕಿಕಫಲ, ಸುಖದಭಿಲಾಷೆಯಿಂದ ಕರ್ಮಮಾರ್ಗ ಅನುಸರಿಸುವವನು ನರಕಕ್ಕೆ ಹೋಗುತ್ತಾನೆ. ಆದರೆ ಸಮಸ್ತ ಲೌಕಿಕ ಆಸೆಗಳನ್ನು ತೊರೆದ ಪುರುಷನು ಪರಬ್ರಹ್ಮನನ್ನು ಹೊಂದುತ್ತಾನೆ (ಕರ್ಮಫಲಗಳನ್ನು ತ್ಯಜಿಸುತ್ತಾನೆ).

ವಿಧ್ಯುಕ್ತವಾಗಿ ಜಪಿಸುವ ಮಂತ್ರಗಳು, ಯಜ್ಞಗಳು, ದಕ್ಷಿಣೆಗಳು, ಅನ್ನದಾನಗಳು, ಮನಸ್ಸಿನ ಸಮಾಧಿ ಎಂಬ ಐದು ಫಲಪ್ರದಗಳಾದ ಸತ್ಕರ್ಮಗಳೇ ಆಗಿವೆ.[೨]

ಶರೀರವನ್ನು ಆಶ್ರಯಿಸಿ ಯಾವ ಕರ್ಮಗಳನ್ನು ಮಾಡುತ್ತಾನೋ ಆ ಕರ್ಮದಫಲಗಳನ್ನು ದಿವ್ಯಶರೀರವನ್ನು ಹೊಂದಿಯೇ ಅನುಭವಿಸುತ್ತಾನೆ. ಏಕೆಂದರೆ ಸುಖದುಃಖಗಳಿಗೆ ಆಶ್ರಯವಾದುದು ಶರೀರವೇ ಆಗಿದೆ.[೩]

ಮನುಷ್ಯನು ವಾಕ್ಯದಿಂದ, ಮನಸ್ಸಿನಿಂದ ಮಾಡಿದ ಕರ್ಮವನ್ನು ಕ್ರಮವಾಗಿ ವಾಕ್ ಹಾಗೂ ಮನಸ್ಸಿನಿಂದಲೇ ಅನುಭವಿಸುತ್ತಾನೆ.

---

೧ ಇಷ್ಟಂ ತ್ವನಿಷ್ಟಂ ಚ ನ ಮಾಂ ಭಜೇತೇತ್ಯೇತತ್ಕೃತೇ ಜ್ಞಾನವಿಧಿಃ ಪ್ರವೃತ್ತಃ॥ - ೨೭/೧೦

೨ ಕೃತ್ಸ್ನಸ್ತು ಮಂತ್ರೋ ವಿಧಿವತ್ ಪ್ರಯುಕ್ತೋ ಯಜ್ಞಾ ಯಥೋಕ್ತಾಸ್ತ್ವಥ ದಕ್ಷಿಣಾಶ್ಚ।
ಅನ್ನಪ್ರದಾನಂ ಮನಸಃ ಸಮಾಧಿಃ ಪಂಚಾತ್ಮಕಂ ಕರ್ಮಫಲಂ ವದಂತಿ॥ - ೨೭/೧೫

೩ ಶರೀರಮೇವಾಯತನಂ ಸುಖಸ್ಯ ದುಃಖಸ್ಯ ಚಾಪ್ಯಾಯತನಂ ಶರೀರಮ್। - ೨೭/೧೮

**ವಾಚಾ ತು ಯತ್ ಕರ್ಮ ಕರೋತಿ ಕಿಂಚಿದ್ವಾಚೈವ ಸರ್ವಂ ಸಮುಪಾಶ್ನುತೇ ತತ್ ।**
**ಮನಸ್ತು ಯತ್ ಕರ್ಮ ಕರೋತಿ ಕಿಂಚಿನ್ಮನಃಸ್ಥ ಏವಾಯಮುಪಾಶ್ನುತೇ ತತ್ ॥**
**- ೨೭/೧೯**

ಪರಬ್ರಹ್ಮವಸ್ತುವನ್ನು ಪ್ರಾಕೃತರಸಗಳಿದ ತಿಳಿಯಲಾಗದು. ಲೌಕಿಕಶಬ್ದಗಳಿಂದ ಅತ್ಯಂತ ದೂರವಾದುದು, ಹಸ್ತಪಾದಾದಿಗಳಿಂದ ಮುಟ್ಟಲು ಬರುವುದಿಲ್ಲ, ಅವ್ಯಕ್ತವಾದುದು, ಪ್ರಾಕೃತವರ್ಣ, ರೂಪಗಳಿಂದ ರಹಿತವಾದುದು. ಇಂತಹ ಪರಬ್ರಹ್ಮವಸ್ತು ರೂಪರಸಗಂಧ-ಸ್ಪರ್ಶ, ಶಬ್ದಗಳನ್ನು ಪ್ರಜೆಗಳ ಸಲುವಾಗಿ ಸೃಷ್ಟಿಸಿದೆ.[೧]

ಬ್ರಹ್ಮನು ಲೋಕದ ಸ್ತ್ರೀಯರಂತಹ ಸ್ತ್ರೀಯಲ್ಲ, ಲೋಕದ ನಪುಂಸಕನಂತೆಯೂ ನಪುಂಸಕನಲ್ಲ, ಕಾರಣರೂಪವಾದ ಮಹದಾದಿಗಳಂತಲ್ಲ, ಅಸತ್ ಎಂದರೆ ಕಾರ್ಯರೂಪಬ್ರಹ್ಮಾಂಡಾದಿಗಳಂತೆಯೂ ಅಲ್ಲ. ಅವನು ಸದಸತ್ ಎನಿಸುವುದಿಲ್ಲ ಎಂದರೆ ಕಾರಣಕಾರ್ಯರೂಪ ಪ್ರಕೃತಿಯಂತಲ್ಲ, ಸಮಸ್ತ ಜಗತ್ತಿಗಿಂತ ವಿಲಕ್ಷಣನಾಗಿರುತ್ತಾನೆ. ಇವನು ಅಕ್ಷರ ಪುರುಷನೆಂದು ಭಾವಿಸು, ಇವನಿಗೆ ನಾಶವೇ ಇಲ್ಲವೆಂದು ತಿಳಿ.[೨]

ಇಂತಹ ಅಕ್ಷರಪುರುಷನಿಂದ, ಪರಬ್ರಹ್ಮನಿಂದ ಆಕಾಶ, ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿ, ಅಗ್ನಿಯಿಂದ ಜಲವು, ಜಲದಿಂದ ಭೂಮಿ, ಭೂಮಿಯಿಂದ ಸ್ಥಾವರ-ಜಂಗಮಾತ್ಮಕ ಪ್ರಪಂಚ ಜನಿಸಿತು.[೩]

ಸೃಷ್ಟಿಕರ್ತನಾದ ಪರಬ್ರಹ್ಮನು ತಾನು ಸೃಷ್ಟಿಸಿದ ಪ್ರಾಕೃತ ವಸ್ತುಗಳ ದೋಷಗಳಿಂದ ದೂರನಾಗಿದ್ದಾನೆ. ಅವನು ಶಬ್ದಸ್ಪರ್ಶರೂಪ ರಸಗಂಧಗಳಿಂದ ಬಾಹ್ಯನು, ದೂರನು, ಅಧ್ಯಾತ್ಮವನ್ನು ತಿಳಿಯದ ಮನುಷ್ಯರು ಈ ಇಂದ್ರಿಯಗಳಿಂದ ಅವನನ್ನು ಗ್ರಹಿಸಲಾರರು. ಅವನು ಇಂದ್ರಿಯಗಳಿಗೆ ಅಗೋಚರನಾಗಿ ಅಧ್ಯಾತ್ಮವಸ್ತುವಿನಿಂದಲೇ ಗೋಚರ.[೪]

**ಹಾಗಾದರೆ ಪರಬ್ರಹ್ಮನನ್ನು ನೋಡುವುದು ಯಾವಾಗ?**

ಮನುಷ್ಯನು ನಾಲಿಗೆಯನ್ನು ಬಾಹ್ಯರಸಗಳ ಆಸಕ್ತಿಯಿಂದ ದೂರಿಕರಿಸಿದ ಮೇಲೆ ಘ್ರಾಣೇಂದ್ರಿಯವನ್ನು ಬಾಹ್ಯ ಗಂಧದಿಂದ ದೂರ ಮಾಡಿದ ಮೇಲೆ, ಕಿವಿಗಳನ್ನು

---

೧ ರಸ್ಯೈರ್ವಿಯುಕ್ತಂ ವಿವಿಧೈಶ್ಚ ಗಂಧೈರಶಬ್ದಮಸ್ಪರ್ಶಮರೂಪವಚ್ಚ ।
ಅಗ್ರಾಹ್ಯಮವ್ಯಕ್ತಮವರ್ಣಮೇಕಂ ಪಂಚಪ್ರಕಾರಂ ಸಸೃಜೇ ಪ್ರಜಾನಾಮ್ ॥ - ೨೭/೨೩

೨ ನ ಸ್ತ್ರೀ ಪುಮಾನ್ ವಾಪಿ ನಪುಂಸಕಂ ಚ ನ ಸನ್ನ ಚಾಸತ್ಸದಸಚ್ಚ ತನ್ನ ।
ಪಶ್ಯಂತಿ ಯದ್ ಬ್ರಹ್ಮವಿದೋ ಮನುಷ್ಯಾಸ್ತದಕ್ಷರಂ ನ ಕ್ಷರತೀತಿ ವಿದ್ಧಿ ॥ - ೨೭/೨೪

೩ ಅಕ್ಷರಾತ್ಖಂ ತತೋ ವಾಯುರ್ವಾಯೋರ್ಜ್ಯೋತಿಸ್ತತೋ ಜಲಮ್ ।
ಜಲಾತ್ ಪ್ರಸೂತಾ ಜಗತೀ ಜಗತ್ಯಾಂ ಜಾಯತೇ ಜಗತ್ ॥ - ೨೮/೧

೪ ನೋಷ್ಣಂ ನ ಶೀತಂ ಮೃದು ನಾಪಿ ತೀಕ್ಷ್ಣಂ ನಾಮ್ಲಂ ಕಷಾಯಂ ಮಧುರಂ ನ ತಿಕ್ತಮ್ ।
ನ ಶಬ್ದವನ್ನಾಪಿ ಚ ಗಂಧವತ್ತನ್ನ ರೂಪವತ್ತತ್ ಪರಮಸ್ವಭಾವಮ್ ॥
... ರೂಪಾಣಿ ಚಕ್ಷುರ್ನ ಚ ತತ್ಪರಂ ಯದ್ಗೃಹ್ಣಂತ್ಯನಧ್ಯಾತ್ಮ ವಿದೋ ಮನುಷ್ಯಾಃ । - ೨೮/೩

ಲೌಕಿಕ ಶಬ್ದಗಳಿಂದ ನಿವೃತ್ತಿಗೊಳಿಸಿದ ನಂತರ, ತ್ವಗಿಂದ್ರಿಯವನ್ನು ಸ್ಪರ್ಶ ಸುಖದಿಂದ, ಚಕ್ಷುರಿಂದ್ರಿಯವನ್ನು ಬಾಹ್ಯರೂಪಗುಣಗಳ ಆಸಕ್ತಿಯಿಂದ ದೂರ ಮಾಡಿದ ನಂತರವೇ ದಿವ್ಯ, ಅಪ್ರಾಕೃತವಾದ ಗಂಧರಸಾದಿರೂಪಗಳ ಸ್ವಭಾವವುಳ್ಳ ಪರಮಾತ್ಮನನ್ನು ನೋಡುತ್ತಾನೆ.[೧]

ಶ್ರೋತ್ರಾದಿ ಇಂದ್ರಿಯಗಳು ತಮ್ಮ ತಮ್ಮ ರೂಪಗಳನ್ನು ತಾವು ತಿಳಿಯಲಾರವು. ಕ್ಷೇತ್ರಜ್ಞನೆನಿಸಿದ ಪರಮಾತ್ಮನು ಅವೆಲ್ಲವನ್ನೂ ತಿಳಿದವನಾದ್ದರಿಂದ ಅವನು ಸರ್ವದರ್ಶೀ, ಸರ್ವಜ್ಞನೆನಿಸುತ್ತಾನೆ.[೨]

ಉದಾ: ಕಣ್ಣು ತನ್ನ ರೆಪ್ಪೆಯನ್ನು ತಾನು ನೋಡಲಾರದು.

ಜ್ಞಾನರೂಪಿಯಾದ, ಸೂಕ್ಷ್ಮನಾದ ಸಮಸ್ತ ಭೂತಾಂತರ್ಯಾಮಿಯಾದ ಪರಮಾತ್ಮನು ಇಂದ್ರಿಯಗಳಿಗೆ ಗೋಚರನಲ್ಲ ಎಂದ ಮಾತ್ರಕ್ಕೆ ಇಲ್ಲವೆಂದು ಅರ್ಥವಲ್ಲ.[೩]

ಭಗವಂತನು ಜ್ಞಾನರೂಪಿ. ಆದ್ದರಿಂದ ಅವನನ್ನು ಜ್ಞಾನದ ಮೂಲಕವೇ ಕಂಡುಕೊಳ್ಳಬೇಕು.[೪]

ಹಾವಿನ ಹೆಜ್ಜೆಯನ್ನು ಹಾವೇ ಬಲ್ಲದು ಎಂಬ ಉದಾಹರಣೆ ಇದೆ (ನಾಣ್ಣುಡಿ ಇದೆ). ಹಾಗೆಯೇ ಸ್ಥೂಲದೇಹದಲ್ಲಿರುವ ಸೂಕ್ಷ್ಮರೂಪಿಯಾದ ಪರಮಾತ್ಮನನ್ನು ಜ್ಞಾನಿಯು ಜ್ಞಾನದ ಸಹಾಯದಿಂದಲೇ ನೋಡುತ್ತಾನೆ[೫] (ತಿಳಿಯುತ್ತಾನೆ).

**ಭಗವಂತನ ಸಾಕ್ಷಾತ್ಕಾರ – ಅದರ ಉಪಾಯ**

ನಿಶ್ಚಲವಾದ ನೀರಿನಲ್ಲಿ ಮನುಷ್ಯನು ಹೇಗೆ ತನ್ನ ರೂಪವನ್ನು ತನ್ನ ಕಣ್ಣಿನಿಂದಲೇ ನೋಡಬಲ್ಲನೋ, ಹಾಗೆ ಜ್ಞಾನಿಯ ಇಂದ್ರಿಯಗಳು ಪರಬ್ರಹ್ಮನನ್ನು ಜ್ಞಾನದಮೂಲಕ ನೋಡುತ್ತಾನೆ.[೬]

ಮನುಷ್ಯನು, ಸಾಧಕನು ವಿಷಯಗಳಲ್ಲಿ (ಶಬ್ದಾದಿಗಳಲ್ಲಿ) ಆಸಕ್ತಿ ಹೊಂದಿರುವುದರಿಂದ, ನಿರಂತರ ಅವನ್ನೇ ಆಶ್ರಯಿಸುವುದರಿಂದ, ಶಾಶ್ವತ (ತತ್ತ್ವದ ಬಗ್ಗೆ) ವಸ್ತುವಾದ ಪರಮಾತ್ಮನ ಬಗ್ಗೆ

---

೧ ನಿವರ್ತಯಿತ್ವಾ ರಸನಂ ರಸೇಭ್ಯೋ ಘ್ರಾಣಂ ಚ ಗಂಧಾಚ್ಛ್ರವಣೇ ಚ ಶಬ್ದಾತ್ ।
ಸ್ಪರ್ಶಾತ್ತನುಂ ರೂಪಗುಣಾತ್ತು ಚಕ್ಷುಸ್ತತಃ ಪರಂ ಪಶ್ಯತಿ ಸ್ವಂ ಸ್ವಭಾವಮ್ ॥ – ೨೮/೫

೨ ಶ್ರೋತ್ರಾದೀನಿ ನ ಪಶ್ಯಂತಿ ಸ್ವಂ ಸ್ವಮಾತ್ಮಾನಮಾತ್ಮನಾ ।
ಸರ್ವಜ್ಞಃ ಸರ್ವದರ್ಶೀ ಚ ಕ್ಷೇತ್ರಜ್ಞಸ್ತಾನಿ ಪಶ್ಯತಿ ॥ – ೨೯/೫

೩ ತದ್ವದ್ ಭೂತೇಷು ಭೂತಾತ್ಮಾ ಸೂಕ್ಷ್ಮೋ ಜ್ಞಾನಾತ್ಮವಾನಸೌ ।
ಅದೃಷ್ಟಪೂರ್ವಶ್ಚಕ್ಷುರ್ಭ್ಯಾಂ ನ ಚಾಸೌ ನಾಸ್ತಿ ತಾವತಾ ॥ – ೨೯/೭

೪ ಗಜಾನಾಂ ಚ ಗಜೈರೇವಂ ಜ್ಞೇಯಂ ಜ್ಞಾನೇನ ಗೃಹ್ಯತೇ । – ೨೯/೧೨

೫ ಅಹಿರೇವ ಹ್ಯಹೇಃ ಪಾದಾನ್ ಪಶ್ಯತೀತಿ ನಿದರ್ಶನಮ್ ।
ತದ್ವನ್ಮೂರ್ತಿಷು ಮೂರ್ತಿಷ್ಠಂ ಜ್ಞೇಯಂ ಜ್ಞಾನೇನ ಪಶ್ಯತಿ ॥ – ೨೯/೧೩

೬

ಸಂಶಯವಿರುವುದರಿಂದ ಆತ್ಮಸಾಧನೆಗೆ ವಿರುದ್ಧವಾದುದನ್ನೇ ಮನಸ್ಸಿನಲ್ಲಿ ಆಲೋಚಿಸುತ್ತಾ ಪರಮಾತ್ಮನನ್ನು ಹೊಂದುವುದಿಲ್ಲ.[೧]

ಹೀಗಾಗಿ ಮನುಷ್ಯನು ಪಾಪಕರ್ಮಗಳನ್ನು ಮಾಡುತ್ತಾನೆ. ಪಾಪಕರ್ಮಗಳು ಜ್ಞಾನಸಂಪಾದನೆ ಮಾಡಿದಾಗಲೇ ಪಾಪನಾಶವಾಗುತ್ತದೆ.

ಸ್ವಚ್ಛವಾದ ಕನ್ನಡಿಯಲ್ಲಿ ಪುರುಷನ ಪ್ರತಿಬಿಂಬವು ಚೆನ್ನಾಗಿ ಕಾಣುವಂತೆ ಪಾಪರಹಿತನಾದ ಪುರುಷನ ಅಂತಃಕರಣದಲ್ಲಿ ಜ್ಞಾನೋದಯವಾಗುತ್ತದೆ. ಅಂತಹ ಅಂತಃಕರಣದ ಮೂಲಕ ಜ್ಞಾನಸ್ವರೂಪಿ ಪರಮಾತ್ಮನನ್ನು ಕಾಣುತ್ತಾನೆ.

ಅದಕ್ಕಾಗಿ ಇಂದ್ರಿಯಾಭಿಮಾನಿ ದೇವತೆಗಳ ಆರಾಧನೆ ಅವಶ್ಯ. ಅವರನ್ನು ಸರಿಯಾಗಿ ತಿಳಿಯಬೇಕು. ಇಂದ್ರಿಯಾಭಿಮಾನಿದೇವತೆಗಳಿಗಿಂತ ಮನೋಭಿಮಾನಿ ರುದ್ರದೇವರು ಉತ್ತಮರು. ಅವರಿಗಿಂತ ಬುದ್ಧ್ಯಭಿಮಾನಿ ಸರಸ್ವತೀ ಉತ್ತಮಳು. ಅವರಿಗಿಂತ ವಿಜ್ಞಾನತತ್ತ್ವಾಭಿಮಾನಿ ಬ್ರಹ್ಮನೂ, ಅವನಿಗಿಂತ ಪರಬ್ರಹ್ಮ ಉತ್ತಮೋತ್ತಮ ಎಂದು ಅನುಸಂಧಾನ ಮಾಡಿಕೊಂಡು ಆರಾಧಿಸಬೇಕು.[೨]

**ಇಂದ್ರಿಯಗಳ ನಿಯಂತ್ರಣಕ್ಕಾಗಿ ನಿರಾಹಾರವ್ರತ ಅವಶ್ಯ.**[೩]

**ವಿ.ಸೂ.**: ಭಗವದ್ಗೀತೆಯ ೨ನೇ ಅಧ್ಯಾಯದಲ್ಲಿ ಇದೇ ಶ್ಲೋಕವಿದೆ – ೨/೫೯.

ಇಂದ್ರಿಯಾಭಿಮಾನಿದೇವತೆಗಳಿಗಿಂತ ಮನಸ್ಸು ಅದಕ್ಕಿಂತ ಬುದ್ಧಿತತ್ತ್ವವೂ, ಅದಕ್ಕಿಂತ ಜ್ಞಾನ(ತತ್ತ್ವ)ವು, ಅದಕ್ಕಿಂತ ಉತ್ತಮನೂ ವ್ಯಾಪ್ತವಾದುದು ಅವ್ಯಕ್ತ, ಅದಕ್ಕಿಂತ ಅತಿಶ್ರೇಷ್ಠ ಪರಮಾತ್ಮ ತತ್ತ್ವ. ಪರಮಾತ್ಮನಿಗಿಂತ ಪರತತ್ತ್ವ ಬೇರೆ ಯಾವುದೂ ಇಲ್ಲ.[೪]

**ಇಂದ್ರಿಯಾದಿಗಳಿಗೆ ತಮ್ಮದೇ ಆದ ಮಿತಿಗಳೂ ಇವೆ.**[೫]

---

೧ ವಿಷಯೇಷು ಚ ಸಂಸರ್ಗಾಚ್ಛಾಶ್ವತಸ್ಯ ಚ ಸಂಶಯಾತ್ ।
ಮನಸಾ ಚಾನ್ಯದಾಕಾಂಕ್ಷಾತ್ ಪರಂ ನ ಪ್ರತಿಪದ್ಯತೇ ॥ – ೩೦/೮

೨ ಇಂದ್ರಿಯೇಭ್ಯೋ ಮನಃ ಪೂರ್ವಂ ಬುದ್ಧಿಃ ಪರತರಾ ತತಃ ।
ಬುದ್ಧೇಃ ಪರತರಂ ಜ್ಞಾನಂ ಜ್ಞಾನಾತ್ ಪರತರಂ ಪರಮ್ ॥ – ೩೦/೧೧

೩. ವಿಷಯಾ ವಿನಿವರ್ತಂತೇ ನಿರಾಹಾರಸ್ಯ ದೇಹಿನಃ ।
ರಸವರ್ಜಂ ರಸೋಽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ ॥ – ೩೦/೧೮

೪ ಅವ್ಯಕ್ತಾತ್ ಪ್ರಸೃತಂ ಜ್ಞಾನಂ ತತೋ ಬುದ್ಧಿಸ್ತತೋ ಮನಃ ।
ಆತ್ಮನಃ ಪ್ರಸೃತೌ ಬುದ್ಧಿರವ್ಯಕ್ತಂ ಜ್ಞಾನಮುಚ್ಯತೇ ॥
...ತಸ್ಮಾದಾಕೃತಯಃ ಪಂಚ ಮನಃ ಪರಮಮುಚ್ಯತೇ ॥
... ತತಃ ಸೂಕ್ಷ್ಮಸ್ತತೋ ಹ್ಯಾತ್ಮಾ ತಸ್ಮಾತ್ಪರತರಂ ನ ಚ ॥ – ೩೦/

೫ ಇಂದ್ರಿಯೈರ್ಮನಸಃ ಸಿದ್ಧಿರ್ನ ಬುದ್ಧಿಂ ಬುಧ್ಯತೇ ಮನಃ ।
ನ ಬುದ್ಧಿರ್ಬುಧ್ಯತೇಽವ್ಯಕ್ತಂ ಸೂಕ್ಷ್ಮಸ್ತ್ವೇತಾನಿ ಪಶ್ಯತಿ ॥ – ೩೦/೨೫

ಕಣ್ಣಿಗೆ ಕಾಣುವ ಜೀವರ ಇಂದ್ರಿಯಗಳಿಗೆ ಮನಸ್ಸು ಗೋಚರವಾಗುವುದಿಲ್ಲ, ಮನಸ್ಸು ಬುದ್ಧಿಯನ್ನು ತಿಳಿಯದ, ಬುದ್ಧಿಯು ವಿಜ್ಞಾನತತ್ತ್ವವನ್ನು ವಿಜ್ಞಾನತತ್ತ್ವವು ಅವ್ಯಕ್ತತತ್ತ್ವವನ್ನು ಅವ್ಯಕ್ತತತ್ತ್ವವು ಸೂಕ್ಷ್ಮತತ್ತ್ವವಾದ ಪರಮಾತ್ಮನನ್ನು ಪೂರ್ಣವಾಗಿ ತಿಳಿದಿರುವುದಿಲ್ಲ. ಆದರೆ ಸೂಕ್ಷ್ಮನಾದ ಪರಮಾತ್ಮನು ಇವರೆಲ್ಲರನ್ನೂ ತಿಳಿದಿರುತ್ತಾನೆ. ಆದ್ದರಿಂದ ಅವನೇ ಸರ್ವೋತ್ತಮ.

**ಪರಮಾತ್ಮನ ಜ್ಞಾನ ಹೇಗೆ?**

ಇಂದ್ರಿಯಗಳನ್ನು ವಿಷಯಗಳಿಂದ ದೂರಮಾಡಿ, ಇಂದ್ರಿಯದ್ವಾರಗಳನ್ನು ವಿಷಯಗಳ ಕಡೆ ಹೋಗದಂತೆ ನಿಲ್ಲಿಸಿ, ಮನಸ್ಸನ್ನು ಏಕಾಗ್ರತೆಯಿಂದ ಹೃದಯಸ್ಥ ಪರಮಾತ್ಮನನ್ನು ಧ್ಯಾನ ಮಾಡಿದಾಗ ಪರಮಾತ್ಮನನ್ನು ಹೊಂದುತ್ತಾನೆ, ನೋಡುತ್ತಾನೆ, ತಿಳಿಯುತ್ತಾನೆ.[೧]

ಮನಸ್ಸಿನಲ್ಲಿ ಭಗವಂತನ ಬಗ್ಗೆ ನಿಶ್ಚಯಾತ್ಮಕಬುದ್ಧಿ (ಸಂದೇಹವಿಲ್ಲದ) ಇರಲು, ಧ್ಯಾನಸ್ಥಿರವಾಗಿ, ನಿರಂತರ ವಿಮರ್ಶೆ ಮಾಡಿದಾಗ ಆ ಜ್ಞಾನವು ದೃಢವಾಗುತ್ತದೆ.

ತಪಸ್ಸಿನಿಂದಲೂ, ತರ್ಕದಿಂದಲೂ, ಭಗವನ್ನಿಷ್ಠೆ ಸರ್ವಜ್ಞತ್ವಾದಿ ಅಸಾಧಾರಣ ಗುಣದಿಂದಲೂ, ಸರ್ವೇಶ್ವರತ್ವಾದಿ ಜಾತಿಯಿಂದಲೂ (ಭಗವಂತನನ್ನು) ಶಾಸ್ತ್ರಾಧ್ಯಯನದಿಂದಲೂ ಅಂತಃಕರಣವನ್ನು ಶುದ್ಧಿ ಮಾಡಿಕೊಂಡು ಭಗವಂತನನ್ನು ಹೊಂದಲು ಇಚ್ಛಿಸಬೇಕು.[೨]

ಅಗ್ನಿಯು ಹೇಗೆ ಒಣಗಿದ ಇಂಧನವನ್ನು (ಕಟ್ಟಿಗೆಯನ್ನು) ಚೆನ್ನಾಗಿ ಸುಡುತ್ತದೋ, ಹಾಗೆಯೇ ಬಾಹ್ಯರೂಪಾದಿಗುಣಗಳಲ್ಲಿ ಆಸಕ್ತಿ ಶೂನ್ಯವಾದ ಬುದ್ಧಿಯು ಪರಮಾತ್ಮನ ಗುಣಗಳಲ್ಲಿಯೇ ಆಸಕ್ತವಾಗಿ ಪಕ್ವವಾಗಿ ಅವನಲ್ಲಿಯೇ ಸಂಚರಿಸುವ ಸಾಮರ್ಥ್ಯ ಹೊಂದುತ್ತದೆ.

**ನೈರ್ಗುಣ್ಯಾತ್ ಬ್ರಹ್ಮಚಾಪ್ನೋತಿ ಸಗುಣತ್ವಾನ್ನಿವರ್ತತೇ ।**
**ಗುಣಪ್ರಸಾರಿಣೀ ಬುದ್ಧಿರ್ಹುತಾಶನ ಇವೇಂಧನೇ ॥** - ೩೧/೧೩

ಯಾವ ರೀತಿಯಾಗಿ ಪಂಚೇಂದ್ರಿಯಗಳು ಯಾವಾಗ ತಮ್ಮ ವಿಷಯಗಳೆನಿಸಿದ ರೂಪರಸಾದಿಗಳಿಂದ ಬಿಡುಬಡೆಯಾಗುತ್ತವೆಯೋ, ಶಬ್ದಾದಿಗುಣಗಳಿಂದ ಭಿನ್ನವಾಗುತ್ತ-ವೆಯೋ, ಹಾಗೆಯೇ ಪರಬ್ರಹ್ಮವಸ್ತು, ಪ್ರಕೃತಿತತ್ತ್ವಕ್ಕಿಂತ ಭಿನ್ನವೂ, ಉತ್ತಮವೂ ಆಗಿರುತ್ತದೆ.

ಹೀಗೆ ಎಲ್ಲ ಪ್ರಾಣಿಗಳು ಪ್ರಕೃತಿದೆಸೆಯಿಂದ ಹುಟ್ಟುಸಾವುಗಳಿಂದ ಸಂಸಾರ ಚಕ್ರದಲ್ಲಿ ತೊಡಗುತ್ತವೆ. ಪ್ರಕೃತಿಯ ಸಹಾಯದಿಂದಲೇ ಸಂಸಾರ ನಿವೃತ್ತಿಯನ್ನು ಹೊಂದುತ್ತವೆ. ನಂತರ ಮತ್ತೆ ಸೃಷ್ಟಿಗೆ ಬರುವುದಿಲ್ಲ.

---

೧ ಸರ್ವಾಣ್ಯೇತಾನಿ ಸಂವಾರ್ಯ ದ್ವಾರಾಣಿ ಮನಸಿ ಸ್ಥಿತಃ ।
ಮನಸ್ಯೇಕಾಗ್ರತಾಂ ಕೃತ್ವಾ ತತ್ಪರಂ ಪ್ರತಿಪದ್ಯತೇ ॥ - ೩೧/೬

೨ ತಪಸಾ ಚಾನುಮಾನೇನ ಗುಣೈರ್ಜಾತ್ಯಾ ಶ್ರುತೇನ ಚ ।
ನಿನೀಷೇತ್ತತ್ಪರಂ ಬ್ರಹ್ಮ ವಿಶುದ್ಧೇನಾಂತರಾತ್ಮನಮ್ ॥ - ೩೧/೧೧

**ಯದಾ ಪಂಚವಿಮುಕ್ತಾನಿ ಇಂದ್ರಿಯಾಣಿ ಸ್ವಕರ್ಮಭಿಃ।**
**ತದಾ ತತ್ ಪರಮಂ ಬ್ರಹ್ಮ ವಿಮುಕ್ತಂ ಪ್ರಕೃತೇಃ ಪರಮ್ ॥**
**ಏವಂ ಪ್ರಕೃತಿತಃ ಸರ್ವೇ ಪ್ರಭವಂತಿ ಶರೀರಿಣಃ।**
**ನಿವರ್ತಂತೇ ನಿವೃತ್ತೌ ಚ ಸರ್ಗಂ ನೈವೋಪಯಾಂತಿ ಚ ॥ - ೩೧/೧೪,೧೫**

ಇವೆಲ್ಲ ವಿಚಾರಿಸಲು ಮನುಷ್ಯನ ಶ್ರೇಯಸ್ಸಿಗೆ ಸಾಧನ ಧರ್ಮಮಾರ್ಗದಲ್ಲಿ ಪ್ರವೃತ್ತಿಯನ್ನು ಬಯಸುವುದು, ಹಾಗೆ ನಡೆಯುವುದು. ಅಧರ್ಮಮಾರ್ಗದ್ದಲ್ಲಿದ್ದರೆ ಶ್ರೇಯಸ್ಸು ಸಿಗದು. ವಿಷಯಾಸಕ್ತ ಪುರುಷನು ನಿರಂತರವಾಗಿ ಪ್ರಕೃತಿ ಬಂಧನದಲ್ಲಿಯೇ ತಿರುಗುತ್ತಾನೆ. ವಿರಕ್ತನಾದವನು ಪರಮಾತ್ಮನ ಜ್ಞಾನ ಹೊಂದಿ ಮುಕ್ತನಾಗುತ್ತಾನೆ.[೧]

ಮನು ಪ್ರಜಾಪತಿಗಳು ಮತ್ತೆ ಭಗವಂತನ ಮಹಿಮೆಯನ್ನು ವರ್ಣಿಸುತ್ತಾರೆ. ಅವನನ್ನು ಪ್ರಜಾಪತಿಗಳು ನಿರಂತರ ಚಿಂತಿಸುತ್ತಿದ್ದರೂ(ಗುಣಗಳನ್ನು) ಅವನನ್ನು ಸಮಗ್ರವಾಗಿ, ಪೂರ್ಣವಾಗಿ ವರ್ಣಿಸಲು ಆಗುತ್ತಿಲ್ಲವೆಂದು. ಅಲ್ಲದೆ ಬ್ರಹ್ಮನಿಗೆ ಹೋಲಿಕೆಯುಳ್ಳ ಬೇರೊಂದು ವಸ್ತುವೇ ಇಲ್ಲವಾದ್ದರಿಂದ ಅದನ್ನು ತಿಳಿದು ವರ್ಣಿಸಲು ಸಾಧ್ಯವಿಲ್ಲ.[೨]

ಇದಕ್ಕೆ ಒಂದು ಉದಾಹರಣೆ ಕೊಡುತ್ತಾರೆ(ಪೂರ್ಣವರ್ಣಿಸುವಲ್ಲಿ). ಶರೀರವನ್ನು ಬಿಟ್ಟು ನೆರಳು ಇರಲು ಸಾಧ್ಯವಿಲ್ಲ, ಈ ಶರೀರದಲ್ಲಿ ಆತ್ಮನಿದ್ದಾನೆ. ಆದರೆ, ನೆರಳನ್ನು ಬಿಟ್ಟು ಶರೀರವಿರಬಹುದು. ಹಾಗೆಯೇ ಮೂಲಕಾರಣವಾದ ಆತ್ಮವಿಲ್ಲದೆ ಶರೀರವಿಲ್ಲ, ಶರೀರ ಬಿಟ್ಟು ಆತ್ಮ ಇರಬಹುದು.[೩]

**ಜೀವಬ್ರಹ್ಮಭೇದವನ್ನು ಹೇಳುತ್ತಾರೆ -**

ಈ ಭೂಲೋಕದಲ್ಲಿ ಜೀವರಿಂದ ಮಾಡಲ್ಪಟ್ಟ ಪುಣ್ಯ ಬಿಟ್ಟು ಪರಲೋಕ ಪ್ರಾಪ್ತಿಯಿಲ್ಲ. ಆದರೆ ಪರಲೋಕದ ದೇವತೆಗಳ ಅನುಗ್ರಹವಿಲ್ಲದೆ ಈ ಪುಣ್ಯವೂ ಇರದು. ಜೀವಾತ್ಮನಿಂದ ಬ್ರಹ್ಮ ಭಿನ್ನ ಇದು ಶ್ರುತಿಸಿದ್ಧ.[೪]

ಜೀವರಲ್ಲಿ ನಾನಾ ಭೇದವುಂಟು. ಸಾಧನಭೇದದಿಂದ ಗತಿಭೇದವನ್ನೂ ತಿಳಿಯಬೇಕು.

---

೧ ಧರ್ಮಾದುತ್ಕೃಷ್ಯತೇ ಶ್ರೇಯಸ್ತಥಾಶ್ರೇಯೋಽಪ್ಯಧರ್ಮತಃ।
ರಾಗವಾನ್ ಪ್ರಕೃತಿಂ ಹ್ಯೇತಿ ವಿರಕ್ತೋ ಜ್ಞಾನವಾನ್ ಭವೇತ್ ॥ - ೩೧/೧೮

೨ ತದೇವ ಸತತಂ ಮನ್ಯೇ ನ ಶಕ್ಯಮನುವರ್ಣಿತುಮ್।
ಯಥಾ ನಿದರ್ಶನಂ ವಸ್ತು ನ ಶಕ್ಯಮನುಬೋಧಿತುಮ್ ॥ - ೩೨/೧

೩. ವಿನಾ ಕಾಯಂ ನ ಸಾ ಛಾಯಾ ತಾಂ ವಿನಾ ಕಾಯಮಸ್ತ್ಯುತ।
ತದ್ವದ್ದೇವಂ ವಿನಾ ನಾಸ್ತಿ ಪ್ರಕೃತೇರಿಹ ವರ್ತನಮ್ ॥ - ೩೨/೩

೪ ಇದಂ ವಿನಾ ಪರಂ ನಾಸ್ತಿ ನೇದಮಸ್ತಿ ಪರಂ ವಿನಾ।
ಜೀವಾತ್ಮನಾ ತ್ವಸೌ ಭಿನ್ನಸ್ತ್ವೇಷ ಚೈವ ಪರಾತ್ಮನಾ ॥ - ೩೨/೪

ಪರಮಾತ್ಮನು ಸತ್ಯವಿರುವಂತೆ ಜೀವೇಶ್ವರಭೇದವೂ ಅಷ್ಟೇ ಸತ್ಯ.[೧]

ಭಗವಂತನ ಮಹತ್ತ್ವ ಈ ರೀತಿಯಲ್ಲದೆ ಅವನು ಗುಣವಿಶಿಷ್ಟನೂ ಹೌದು.[೨]

ಅವನನ್ನು ಅವ್ಯಯ, ಕರ್ತಾ, ಹರ್ತಾ, ಪಾತಾ, ನಿಯಂತಾ, ಪಿತಾ ಮೊದಲಾದ ಸಂಜ್ಞೆಗಳಿಂದ (ಹೆಸರು) ವ್ಯವಹಾರ ಮಾಡುತ್ತಾರೆ. ಹೀಗಾಗಿ ಅವನು ನಿರ್ಗುಣನಲ್ಲ ಬೇರೆಯವರು ಭಾವಿಸಿದಂತೆ.[೩] ಹಾಗಾದರೆ ನಿರ್ಗುಣ ಎಂದರೆ ಹಿಂದೆ ಪ್ರಜಾಪತಿಗಳು ತಿಳಿಸಿದಂತೆ ಪ್ರಾಕೃತಗುಣರಹಿತನೆಂದೇ ತಿಳಿಯಬೇಕು (ಪ್ರಾಕೃತದೇಹಕ್ಕೆ ಗೋಚರನಲ್ಲ ಗ್ರಾಹ್ಯನಲ್ಲ). ಅವನು ಎಲ್ಲ ಮಹಾತ್ಮರಿಂದ ಉಪಾಸ್ಯನಾಗಿದ್ದಾನೆ. ವಾಸುದೇವನೆಂದು ಪ್ರಸಿದ್ಧನೂ ಆಗಿದ್ದಾನೆ. ಅವನನ್ನು ತಿಳಿದವನು ಮೋಕ್ಷ ಹೊಂದುತ್ತಾನೆ.[೪]

**ಈ ಪರಮಾತ್ಮನೆಂಬ ಸೂತ್ರದಲ್ಲಿ ಸಮಗ್ರ ಜಗತ್ತೆಲ್ಲವೂ ಆಶ್ರಯಿಸಿದೆ.[೫]**

ಜ್ಞಾನಿಗಳು ಪರಮಾತ್ಮನನ್ನು ಮಹತ್ತ್ವವುಳ್ಳ ಶ್ರೇಷ್ಠನಾದ ಭೂತನೆಂದು ತಿಳಿಯುತ್ತಾರೆ. ಆದರೆ ವಿಷಯಾಸಕ್ತರು, ಅಜ್ಞಾನಿಗಳು ತಮ್ಮ ಹೃದಯದಲ್ಲಿಯೇ ಇದ್ದರೂ ಪರಮಾತ್ಮನನ್ನು ನೋಡುವುದಿಲ್ಲ[೬](ಅಸಮರ್ಥರು).

ಈ ಅಧ್ಯಾಯದಲ್ಲಿ ದೇವತಾತಾರತಮ್ಯಪೂರ್ವಕವಾಗಿ ವಿಷ್ಣುಸರ್ವೋತ್ತಮತ್ವವನ್ನು ನಿರೂಪಿಸುತ್ತಾರೆ.

| | |
|---|---|
| ೧. ಪೃಥಿವೀ ಅಭಿಮಾನಿದೇವತೆಗಿಂತ | ಜಲಾಭಿಮಾನಿದೇವತೆ ಮಹತ್ತರ |
| ೨. ಜಲಾಭಿಮಾನಿದೇವತೆಗಿಂತ | ತೇಜೋಭಿಮಾನಿದೇವತೆ ಮಹತ್ತರ |
| ೩. ತೇಜೋಭಿಮಾನಿದೇವತೆಗಿಂತ | ವಾಯುಅಭಿಮಾನಿದೇವತೆ ಮಹತ್ತರ |
| ೪. ವಾಯುಅಭಿಮಾನಿದೇವತೆಗಿಂತ | ಆಕಾಶಾಭಿಮಾನಿದೇವತೆ ಮಹತ್ತರ |
| ೫. ಆಕಾಶಾಭಿಮಾನಿದೇವತೆಗಿಂತ | ಮನಸ್ತತ್ತ್ವಾಭಿಮಾನಿದೇವತೆ ಮಹತ್ತರ |
| ೬. ಮನಸ್ತತ್ತ್ವಾಭಿಮಾನಿದೇವತೆಗಿಂತ | ಮಹತತ್ತ್ವ(ಬುದ್ಧಿ)ದೇವತೆ ಮಹತ್ತರ |

೧ ನಾನಾಸಂಸ್ಥೇನ ಭೇದೇನ ಸದಾ ಗತಿವಿಭೇದವಿತ್ ।
ತಸ್ಯ ಭೇದಃ ಸಮಾಖ್ಯಾತೋ ಭೇದೋಽಪ್ಯಸ್ತಿ ತಥಾವಿಧಃ ॥ - ೩೨/೯

೨ ಏವಂ ವಿದ್ವನ್ ವಿಜಾನೀಹಿ ಪರಮಾತ್ಮಾನಮವ್ಯಯಮ್ ।
ತತ್ತದ್ಗುಣವಿಶೇಷೇಣ ಸಂಜ್ಞಾನಾಮಾನು ಸಂಯುತಮ್ ॥ - ೩೨/೧೦

೩ ಸರ್ವೇಶ್ವರಃ ಸರ್ವಮಯಃ ಸ ಚ ಸರ್ವಪ್ರವರ್ತಕಃ ।
ಸರ್ವಾತ್ಮಕಃ ಸರ್ವಶಕ್ತಿಃ ಸರ್ವಕಾರಣಕಾರಣಮ್ ॥ - ೩೨/೧೧

೪ ಸರ್ವಸಾಧಾರಣಃ ಸರ್ವೈರುಪಾಸ್ಯಶ್ಚ ಮಹಾತ್ಮಭಿಃ ।
ವಾಸುದೇವೇತಿ ವಿಖ್ಯಾತಸ್ತಂ ವಿದಿತ್ವಾಽಶ್ನುತೇಽಮೃತಮ್ ॥ - ೩೨/೧೨

೫ ಅಥ ತದ್ ದ್ರಕ್ಷ್ಯಸೇ ಬ್ರಹ್ಮ ಮಣೌ ಸೂತ್ರಮಿವಾರ್ಪಿತಮ್ ॥ - ೩೨/೧೩

೬ ಮಹದ್ಭಿಃ ಪರಮಂ ಭೂತಂ ಯುಕ್ತಾಃ ಪಶ್ಯಂತಿ ಯೋಗಿನಃ ।
ಅಬುಧಾಸ್ತಂ ನ ಪಶ್ಯಂತಿ ಹ್ಯಾತ್ಮಸ್ಥಂ ಗುಣಬುದ್ಧಯಃ ॥ - ೩೨/೨೧

೭. ಬುದ್ಧಿಅಭಿಮಾನಿದೇವತೆಗಿಂತ ಕಾಲಾಭಿಮಾನಿ(ಬ್ರಹ್ಮ)ದೇವತೆ ಮಹತ್ತರ
೮. ಕಾಲಾಭಿಮಾನಿದೇವತೆಗಿಂತ ವಿಷ್ಣು ಸರ್ವೋತ್ತಮ

ವಿಷ್ಣುವು ಸರ್ವಜಗದ್ವ್ಯಾಪಿಯಾಗಿದ್ದಾನೆ. ಅವನಿಗೆ ಆದಿ, ಮಧ್ಯ, ಅಂತ್ಯಗಳಿಲ್ಲ.[೧]

ವಿಷ್ಣುವು ಅನಾದಿ, ಮಧ್ಯರಹಿತ ಹಾಗೂ ಅನಂತನಾದ್ದರಿಂದ ಅವ್ಯಯನೆನಿಸಿದ್ದಾನೆ. ಅವನು ಜೀವರನ್ನು ಮೀರಿದ್ದಾನೆ. ಅವರು ದುಃಖವುಳ್ಳವರು. ಜೀವಿಗಳೆಲ್ಲ ಎಲ್ಲ ವಿಷಯಗಳಲ್ಲಿ ಕೊನೆಯುಳ್ಳವರು[೨] (ಗುಣ, ದೇಶ, ಕಾಲಗಳಿಂದ).

ಆ ಗುಣಪೂರ್ಣನಾದವನು ಸರ್ವೋತ್ತಮನಾಗಿದ್ದಾನೆ. ಅವನ ಮನೆ ಪರಮ ಎನಿಸಿದೆ. ಇಲ್ಲಿಗೆ ಹೋಗುವ ಜೀವರು ಜ್ಞಾನದಿಂದ ಪ್ರಕಾಶಿಸುತ್ತಾರೆ. ಗುಣಸಂಬಂಧವಿರದ ಪರಮಾತ್ಮನು ಜೀವರಿಗಿಂತ ವಿಲಕ್ಷಣನಾಗಿ ಪ್ರಕಾಶಿಸುತ್ತಾನೆ.

ನಿಷ್ಕಾಮದಿಂದ ಜ್ಞಾನಪೂರ್ವಕವಾಗಿ ಆಚರಿಸಿದ ಜೀವರ ಧರ್ಮವು ಪರಬ್ರಹ್ಮನನ್ನು ಹೊಂದಲು ಯೋಗ್ಯವಾಗುತ್ತದೆ (ಮೋಕ್ಷ ಹೊಂದಲು). ಅವನ ಮನೆಗೆ ಹೋದವರ ನಾಲಿಗೆ ತುದಿಯಲ್ಲಿ ವೇದತ್ರಯಗಳು, ಬ್ರಹ್ಮಸೂತ್ರಗಳು (ಶರೀರಾಣಿ) ನಲಿದಾಡುತ್ತಿರುತ್ತವೆ. ಯಜ್ಞನಾಮಕ ಹರಿಯ ಅನುಗ್ರಹದಿಂದ ಅವಿನಾಶಿ, ಮೋಕ್ಷ ಹೊಂದಿರುತ್ತಾರೆ.[೩] ಆ ಹರಿಯು ಯತ್ನಸಾಧ್ಯನಲ್ಲ. ಅವನು ಒಲಿದರೇನೇ ಅವನ ಮಹಿಮೆ ಗೊತ್ತಾಗುತ್ತದೆ. ವೇದತ್ರಯಗಳಿಗೆ ಆದಿ ಇದೆ. ಪರಮಾತ್ಮನಿಗೆ ಮಾತ್ರ ಆದಿ ಇಲ್ಲ.

**...ನ ಯತ್ನಸಾಧ್ಯಂ ತದ್ ಬ್ರಹ್ಮ ನಾದಿಮಧ್ಯಂ ನ ಚಾಂತರಮ್ ।**
**ಋಚಾಮಾದಿಸ್ತಥಾ ಸಾಮ್ನಾಂ ಯಜುಷಾಮಾದಿರುಚ್ಯತೇ ।**
**ಅಂತಶ್ಚಾದಿಮತಾಂ ದೃಷ್ಟೋ ನ ಚಾದಿರ್ಬ್ರಹ್ಮಣಃ ಸ್ಮೃತಃ ।** **-೩೨/೨೯,೩೦**

ಶ್ರೀಹರಿಯು ಅನಾದಿ, ಅನಂತನಾದ್ದರಿಂದ ಅನಂತನೆಂದೂ, ಅವ್ಯಯನೆಂದೂ, ಅವ್ಯಯನಾದ್ದರಿಂದ ದ್ವಂದ್ವಾತೀತನೆಂದೂ, ದ್ವಂದ್ವಾತೀತನಾದ್ದರಿಂದ ಅದನ್ನೂ (ಎಲ್ಲಕ್ಕೂ) ಮೀರಿದವನೆಂದೂ ಕರೆಯುತ್ತಾರೆ.

---

೧ ಪೃಥಿವ್ಯಾರೂಪತೋ ರೂಪಮಪಾಮಿಹ ಮಹತ್ತರಮ್ ।
ಅದ್ಭ್ಯೋ ಮಹತ್ತರಂ ತೇಜಸ್ತೇಜಸಃ ಪವನೋ ಮಹಾನ್ ॥
ಪವನಾಚ್ಚ ಮಹದ್ವ್ಯೋಮ ತಸ್ಮಾತ್ ಪರತರಂ ಮನಃ ।
ಮನಸೋ ಮಹತೀ ಬುದ್ಧಿರ್ಬುದ್ಧೇಃ ಕಾಲೋ ಮಹಾನ್ ಸ್ಮೃತಃ ॥
ಕಾಲಾತ್ಸ ಭಗವಾನ್ ವಿಷ್ಣುರ್ಯಸ್ಯ ಸರ್ವಮಿದಂ ಜಗತ್ ।
ನಾದಿರ್ನ ಮಧ್ಯಂ ನೈವಾಂತಸ್ತಸ್ಯ ದೇವಸ್ಯ ವಿದ್ಯತೇ ॥ - ೩೨/೨೨-೨೪

೨ ಅನಾದಿತ್ವಾದಮಧ್ಯತ್ವಾದನಂತತ್ವಾಚ್ಚ ಸೋಽವ್ಯಯಃ ।
ಅತ್ಯೇತಿ ಜೀವಜಾತಂ ಹಿ ದುಃಖಂ ಹ್ಯಂತವದುಚ್ಯತೇ ॥ - ೩೨/೨೫

೩. ಋಚೋ ಯಜೂಂಷಿ ಸಾಮಾನಿ ಶರೀರಾಣಿ ವ್ಯಪಾಶ್ರಿತಾಃ ।
ಜಿಹ್ವಾಗ್ರೇಷು ಪ್ರವರ್ತಂತೇ ಯಜ್ಞಸಾಧ್ಯಾವಿನಾಶಿನಃ ॥ - ೩೨/೨೮

**ಅನಾದಿತ್ವಾದನಂತತ್ವಾತ್ ತದನಂತಮಥಾವ್ಯಮ್ ।**
**ಅವ್ಯಯತ್ವಾಚ್ಚ ನಿರ್ದ್ವಂದ್ವಂ ದ್ವಂದ್ವಾಭಾವಾತ್ತತಃ ಪರಮ್ ॥** - ೩೨/೩೧

**ಬ್ರಹ್ಮನನ್ನು ಹೊಂದಲು ಏಕೆ ಆಗದು ಎಂಬುದಕ್ಕೆ ಕಾರಣಗಳನ್ನು ಕೊಡುತ್ತಾರೆ.**

೧. ವಿಷಯಾಸಕ್ತಿ; ೨. ವಿಷಯಸುಖಗಳು ಶಾಶ್ವತವೆಂದ ನಂಬಿಕೆ; ೩., ಮನಸ್ಸಿನಿಂದ ಬ್ರಹ್ಮೇತರ ವಸ್ತುವನ್ನು ಬಯಸುವುದು.[೧]

ಪರಬ್ರಹ್ಮವಸ್ತುವನ್ನು ೧. ಸೂಕ್ಷ್ಮ ಮನಸ್ಸಿನಿಂದ ತಿಳಿಯಬೇಕು. ಕಾರಣ ಮಾತಿನಿಂದ ಪೂರ್ಣವಾಗಿ ಹೇಳಲು ಸಾಧ್ಯವಿಲ್ಲ. ಮನಸ್ಸು ಬಾಹ್ಯವಿಷಯದ ಕಡೆಗೆ ಹೋಗದಂತೆ ನಿಗ್ರಹಿಸಬೇಕು. ಅದಕ್ಕಾಗಿ ವಿಷಯಗಳಲ್ಲಿ ದೋಷದರ್ಶನ ಮಾಡಬೇಕು (ಅರಿವು ಬರಬೇಕು).[೨]

ಅಷ್ಟೇ ಅಲ್ಲ, ಸಂದೇಹರಹಿತವಾದ ನಿಶ್ಚಯಬುದ್ಧಿಯಿಂದ ಬುದ್ಧಿಯನ್ನು ಭಗವತ್ ಜ್ಞಾನದಿಂದ ಸ್ವಚ್ಛಮಾಡಿಕೊಂಡು, ಅದರಂತೆ ಮನಸ್ಸನ್ನು ಬುದ್ಧಿಪೂರ್ವಕವಾಗಿ ಸ್ವಚ್ಛಮಾಡಿಕೊಂಡು ಇಂದ್ರಿಯನಿಗ್ರಹ ಮಾಡಿ (ವಿಷಯಗಳ ಕಡೆ ಹರಿದಾಡದಂತೆ) ಕೊಂಡರೆ ಅನಂತನಾದ ಬ್ರಹ್ಮನನ್ನು ಹೊಂದುತ್ತಾನೆ.[೩]

ಒಟ್ಟಾರೆ ಬಾಹ್ಯಗುಣಗಳ ಆಸೆಯನ್ನು ತ್ಯಜಿಸಿದಾಗ ಮಾತ್ರ ಅವ್ಯಯನಾದ ಬ್ರಹ್ಮನನ್ನು ಹೊಂದಬಹುದು. ಅಂತಹವನೇ ಅಮೃತತ್ವವನ್ನು ಮೋಕ್ಷವನ್ನು ಹೊಂದುತ್ತಾನೆ.

## ಸಂದೇಶಗಳು

ಮನುಪ್ರಜಾಪತಿಗಳು ಉಪದೇಶಿಸುದೆಲ್ಲವೂ ಸಂದೇಶಗಳೇ ಆಗಿವೆ.

ವಿ.ಸೂ.: ಈ ಉಪಾಖ್ಯಾನಕ್ಕೆ ಸಂಬಂಧಿಸಿದಂತೆ ಔತ್ತರೇಯ ಹಾಗೂ ದಾಕ್ಷಿಣಾತ್ಯ ಪಾಠಗಳಲ್ಲಿ ವಿಶೇಷವಾಗಿ (ಉಡುಪಿ) ಪಾಠಾಂತರಗಳು ಇವೆ. ಅದರಲ್ಲೂ ದ್ವೈತಾದ್ವೈತ ವಿಚಾರ ಬಂದಾಗ ಬಹಳ ಪಾಠಾಂತರಗಳು ಕಾಣುತ್ತವೆ.

*****

---

೧ ವಿಷಯೇಷು ಚ ಸಂಸರ್ಗಾದ್ ಶಾಶ್ವತಸ್ಯ ಚ ದರ್ಶನಾತ್ ।(ಸಂಶಯಾತ್)
ಮನಸಾ ಚಾನ್ಯದಾಕಾಂಕ್ಷಾತ್ ಪರಂ ನ ಪ್ರತಿಪದ್ಯತೇ ॥ - ೩೨/೩೩

೨ **ಸೂಕ್ಷ್ಮೇಣ ಮನಸಾ ವಿದ್ಮೋ ವಾಚಾ ವಕ್ತುಂ ನ ಶಕ್ನುಮಃ ।**
**ಮನೋ ಹಿ ಮನಸಾ ಗ್ರಾಹ್ಯಂ ದರ್ಶನೇನ ಚ ದರ್ಶನಮ್ ॥** - ೩೨/೩೬

೩ ಜ್ಞಾನೇನ ನಿರ್ಮಲೀಕೃತ್ಯ ಬುದ್ಧಿಂ ಬುದ್ಧ್ಯಾ ತಥಾ ಮನಃ ।
ಮನಸಾ ಚೇಂದ್ರಿಯಗ್ರಾಮಮನಂತಂ ಪ್ರತಿಪದ್ಯತೇ ॥ - ೩೨/೩೭

# ೧೮೬. ಜ್ಞಾನವೇ ಮೋಕ್ಷಸಾಧನ

ಧರ್ಮರಾಜನು ಪ್ರಶ್ನಿಸುತ್ತಾನೆ -

ತಾತ! ಪ್ರಪಂಚದಲ್ಲಿ ಜೀವನನ್ನು ಸದಸತ್ಕರ್ಮಗಳು (ಶುಭಾಶುಭ) ಸುಖದುಃಖಗಳಲ್ಲಿ ಬಂಧನ ಮಾಡುತ್ತವೆ. ಆದರೆ ಈ ಕರ್ಮಗಳಿಗೆ ಪುರುಷನು ಕರ್ತೃವಾಗಿದ್ದಾನೋ, ಇಲ್ಲವೋ ಎಂಬುದನ್ನು ತಿಳಿಸು.

ಈ ಬಗ್ಗೆ ಭೀಷ್ಮರು **ಇಂದ್ರ-ಪ್ರಹ್ಲಾದರ** ನಡುವೆ ನಡೆದ ಒಂದು ಸಂವಾದರೂಪ ಇತಿಹಾಸವನ್ನು ತಿಳಿಸಿದರು.

ಇಂದ್ರದೇವನು ಪ್ರಹ್ಲಾದನನ್ನು ಕಂಡು ಹೀಗೆ ಹೇಳಿದನಂತೆ. ಇಂದ್ರ ಕಂಡ ಪ್ರಹ್ಲಾದನ ಗುಣಗಳನ್ನು ವ್ಯಾಸರು ಏಳು ಶ್ಲೋಕಗಳಲ್ಲಿ ವರ್ಣಿಸಿದ್ದಾರೆ. ಭಾಗವತದಲ್ಲಿಯೂ ಪ್ರಹ್ಲಾದನ ಬಗ್ಗೆ ಹೀಗೆ ನೋಡುತ್ತೇವೆ (೭/೪/೩೧-೪೪). ಇಲ್ಲಿ ಕಾಣುವ ವಿಶೇಷಗಳು ಹೀಗಿವೆ?

೧ ಅಸಕ್ತಂ – ವಿಷಯಸಂಗರಹಿತನು

೨. ಧೂತಪಾಪ್ಮಾನಂ – ಪಾಪಗಳನ್ನು ಕಳೆದುಕೊಂಡವನು.

೩. ಬಹುಶ್ರುತನು; ೪. ಅಸ್ತಂಭಂ – ಚಟುವಟಿಕೆಯುಳ್ಳ (Active); ೫. ಅನಹಂಕಾರಂ – ಅಹಂಕಾರ, ಮಮಕಾರ ರಹಿತನು; ೬. ಸತ್ತ್ವಸ್ಥಂ – ಸತ್ತ್ವಗುಣದಲ್ಲಿಯೇ ಆಸಕ್ತನು; ೭. ತುಲ್ಯನಿಂದಾಸ್ತುತಿಂ – ಪ್ರಶಂಸೆ, ನಿಂದೆಗಳನ್ನು ಸಮಾನವಾಗಿ ತೆಗೆದುಕೊಳ್ಳುವವನು; ೮. ದಾಂತಂ – ಇಂದ್ರಿಯನಿಗ್ರಹವುಳ್ಳವನು ; ೯. ಶೂನ್ಯಾಗಾರನಿವೇಶನಂ – ಏಕಾಂತದಲ್ಲಿ ವಾಸಿಸುವವನು; ೧೦. ಚರಾಚರಾಣಾಂ ಭೂತಾನಾಂ ವಿದಿತ ಪ್ರಭವಾಪ್ಯಯಮ್ – ಎಲ್ಲ ಜೀವರ ಜನ್ಮಲಯಗಳನ್ನು ತಿಳಿದವನು; ೧೧. ಅಕ್ರುಧ್ಯಂತಂ – ಅಪ್ರಿಯವಾದಾಗ ಕೋಪಗೊಳ್ಳದವನು; ೧೨. ಅಹೃಷ್ಯಂತಂ – ಪ್ರಿಯವಾದಾಗ ಸಂತೋಷಗೊಳ್ಳದವನು; ೧೩. ಕಾಂಚನೇ ಲೋಷ್ಠೇ ವಾ ಉಭಯೋಃ ಸಮದರ್ಶನಂ – ಬಂಗಾರ ಮಣ್ಣಿನಹೆಂಟೆ ಎರಡನ್ನೂ ಸಮಾನವಾಗಿ ಕಾಣುವವನು; ೧೪. ಆತ್ಮನಿಃಶ್ರೇಯಸಜ್ಞಾನೇ ಧೀರಂ – ತನಗೆ ಒಳ್ಳೆಯದನ್ನು ಮಾಡುವ ಭಗವಂತನ ಜ್ಞಾನದ ವಿಷಯದಲ್ಲಿ ದೃಢ ಬುದ್ಧಿಯುಳ್ಳವನು; ೧೫. ಭೂತಾನಾಂ ಪರಾವರಜ್ಞಂ – ಜೀವರಲ್ಲಿ ಉತ್ತಮಾಧಮ ಜ್ಞಾನವುಳ್ಳವನು; ೧೬. ಸರ್ವಜ್ಞನು; ೧೭. ಸಮದರ್ಶನ – ಎಲ್ಲರಲ್ಲಿ ಸಮಬ್ರಹ್ಮನನ್ನು ನೋಡುವ; ೧೮. ಅವ್ಯಕ್ತ ಸ್ವಭಾವದ ಗೋವಿಂದನಲ್ಲಿ ಮಹಾತ್ಮನಾದ ವಾಸುದೇವನಲ್ಲಿ ಮನಸ್ಸನ್ನು ಇಟ್ಟವನು; ೧೯. ಎಲ್ಲ ಜೀವರಿಗೂ ಪ್ರಿಯವನ್ನು ಮಾಡುವ; ೨೦. ಭಾಗವತಧರ್ಮದಲ್ಲಿ ನಿತ್ಯ ಆಸಕ್ತನು; ೨೧. ನಾರಾಯಣನೇ ಆಶ್ರಯನೆಂದು ನಂಬಿದ; ೨೨. ಪರಮಾತ್ಮನನ್ನು ಧ್ಯಾನಮಾಡುವ ಪ್ರಹ್ಲಾದನನ್ನು (ಇಂದ್ರ ಕಂಡನು).

ಪ್ರಹ್ಲಾದನನ್ನು ಕುರಿತು ಇಂದ್ರನು –

ಲೋಕದಲ್ಲಿ ಒಬ್ಬ ವ್ಯಕ್ತಿಯು ಯಾವ ಗುಣಧರ್ಮಗಳಿಂದ ಕೂಡಿದವನಾದಾಗ ಜನರಿಂದ ಮಾನ್ಯನಾಗುತ್ತಾನೆ? ಅಂತಹ ಎಲ್ಲ ಗುಣಗಳನ್ನು ನಿನ್ನಲ್ಲಿ ಇರುವುದನ್ನು ನಾನು ನೋಡುತ್ತಿದ್ದೇನೆ. ನಿನ್ನ ಅಭಿಪ್ರಾಯದಲ್ಲಿ ಭಗವತ್‌ಜ್ಞಾನಕ್ಕೆ ಶ್ರೇಯಸ್ಕರವಾದ ಸಾಧನವು ಯಾವುದು? ನೀನೀಗ ಪಾಶಗಳಿಂದ ಬಂಧಿತನಾಗಿದ್ದೀಯಾ. ಚಕ್ರವರ್ತಿ ಸ್ಥಾನದಿಂದಲೂ ಚ್ಯುತನಾಗಿದ್ದೀಯಾ. ನಿನ್ನ ದ್ವೇಷಿಗಳ ವಶನಾಗಿರುವೆ. ಐಶ್ವರ್ಯದಿಂದ ವಂಚಿತನಾಗಿದ್ದೀ. ಆದರೂ ಶೋಕಪಡುವಾಗಲು ಶೋಕಪಡುತ್ತಿಲ್ಲ ಏಕೆ? (ಇದು ಹೇಗೆ ಸಾಧ್ಯ?) ಇದಕ್ಕೆ ಕಾರಣವು (ನಿನ್ನ ವ್ಯಸನಸಮಸ್ಥಿತಿಗೆ) ಭಗವಂತನ ಜ್ಞಾನವೇ? ಅಥವಾ ಧೈರ್ಯವೇ?[೧]

ಹೀಗೆ ಇಂದ್ರನಿಂದ ಪ್ರಶ್ನಿತನಾದ ಪ್ರಹ್ಲಾದನು (ನಿಶ್ಚಯ ಬ್ರಹ್ಮಜ್ಞಾನವುಳ್ಳ) ತನ್ನಲ್ಲಿರುವ ಭಗವತ್‌ಪ್ರಜ್ಞೆಯನ್ನು ಮೃದು ಮನೋಹರ ಮಾತುಗಳಿಂದ ಹೇಳಿದನು.

೧. ಸಕಲಪ್ರಾಣಿಗಳ ಪ್ರವೃತ್ತಿ, ನಿವೃತ್ತಿಗಳನ್ನು ತಿಳಿಯದವನು ಗರ್ವಿಷ್ಠನಾಗುತ್ತಾನೆ. ಎಲ್ಲ ದೇವರಿಂದ ಆಗುತ್ತದೆ ಎಂದು ತಿಳಿದವನು ಮತ್ತನಾಗುವುದಿಲ್ಲ.

೨. ಏಕೆಂದರೆ ಭಗವಂತನು ಎಲ್ಲ ಭೂತಗಳಲ್ಲಿ ಅಡಗಿದವನು. ಅವನೇ ತ್ರಿಕಾಲಾತೀತ ಸನಾತನ, ನಿರ್ವಿಕಾರಿ, ಅವನೇ ಧ್ಯಾನಯೋಗ್ಯ. ಅವನನ್ನು ಯಾರೂ ನಿಗ್ರಹಿಸರು. ಅವನು ಹೋಲಿಕೆ ಇಲ್ಲದವನು. ಎಲ್ಲ ವಸ್ತುಗಳಲ್ಲಿದ್ದು ವಸ್ತುಗಳಾಕಾರದಲ್ಲಿಯೂ ಇರುವವನು – ಉತ್ತಮೋತ್ತಮ.

೩. ಅವನಿಂದಲೇ ಸಕಲ ಜಗತ್‌ಪ್ರವೃತ್ತಿ. ಅವನೇ ಜಗತ್ ಸೃಷ್ಟಿ ಪಾಲನೆ ಮಾಡುವವನಾಗಿ ವಿಷ್ಣು ಎನ್ನಿಸಿದ್ದಾನೆ. ಅವನಿಂದಲೇ ಜಗತ್ತಿನ ಪ್ರಲಯಕಾಲ ಬಂದಾಗ ಲಯವಾಗುತ್ತದೆ. ಹೀಗೆ ಎಲ್ಲ ಜೀವರ ಜನನ, ಮರಣಗಳು ದೇವರಿಂದಲೇ ಆಗುತ್ತವೆ ಹೊರತು, ಕಣ್ಣಿಗೆ ಕಾಣುವ ಪುರುಷ(ಜೀವ)ನಿಂದಲ್ಲ.[೨]

೪. ಯಾರು ಶುಭಾಶುಭಕರ್ಮಗಳಿಗೆ ಸ್ವತಂತ್ರವಾಗಿ ತಾನೇ ಕರ್ತೃವೆಂದು ಭಾವಿಸುತ್ತಾನೋ ಅವನ ಪ್ರಜ್ಞೆ, ಬುದ್ಧಿ, ದೋಷ, ದುಷ್ಟ ಲಿಪ್ತವಾಗಿ ತತ್ತ್ವಜ್ಞಾನ ರಹಿತವಾಗಿರುತ್ತವೆ[೩].

---

೧ ಯೈಃ ಕೈಶ್ಚಿತ್ ಸಮ್ಮತೋ ಲೋಕೇ ಗುಣೈಃ ಸ್ಯಾತ್ ಪುರುಷೋ ನೃಷು।
ಭವತ್ಯನಪಗಾನ್ ಸರ್ವಾಂಸ್ತಾನ್ ಗುಣಾಲ್ಲಕ್ಷಯಾಮಹೇ॥
ಆತ್ಮಾನಂ ಮನ್ಯಮಾನಃ ಸಂಶ್ರೇಯಃ ಕಿಮಿಹ ಮನ್ಯಸೇ॥ – ೫೮/೧೧,೧೨

೨ ಸ್ವಭಾವಾತ್ ಸಂಪ್ರವರ್ತಂತೇ ನಿವರ್ತಂತೇ ತಥೈವ ಚ।
ಸರ್ವೇ ಭಾವಾಸ್ತಥಾಭಾವಾಃ ಪುರುಷಾರ್ಥೋ ನ ವಿದ್ಯತೇ॥ – ೫೮/೨೦

೩ ಯಸ್ತು ಕರ್ತಾರಮಾತ್ಮಾನಂ ಮನ್ಯತೇ ಸಾಧ್ವಸಾಧುನೋಃ।
ತಸ್ಯ ದೋಷವತೀ ಪ್ರಜ್ಞಾ ಸ್ವಮೂರ್ತ್ಯಜ್ಞೇತಿ ಮೇ ಮತಿಃ॥ – ೫೮/೨೨

೭. ಒಂದು ವೇಳೆ ಜೀವನೇ ಸ್ವತಂತ್ರಕರ್ತೃವಾಗಿದ್ದಲ್ಲಿ, ಅವನು ತನ್ನ ಶ್ರೇಯಸ್ಸಿಗಾಗಿ ಪ್ರಯತ್ನ ಮಾಡುತ್ತಿದ್ದನಷ್ಟೇ. ಅವನ ಪ್ರಯತ್ನಗಳು ಕೈಗೂಡಿ ಎಂದೂ ಪರಾಭವವಾಗುತ್ತಿದ್ದಿಲ್ಲ. ಆದರೆ ಜೀವನು ಅನಿಷ್ಟ ನಿವೃತ್ತಿಯನ್ನು ಹೊಂದದೆ ಅದರಲ್ಲಿ ಪ್ರವೃತ್ತನಾಗಿರುತ್ತಾನೆ. ಇಷ್ಟ ಪ್ರವೃತ್ತಿ ಕಾಣುವುದಿಲ್ಲ. ಹೀಗಾಗಿ ಪ್ರಯತ್ನಶೀಲನಾದ ಈ ಜೀವನಿಗೆ ತನ್ನ ಇಚ್ಛೆಯಿಂದಲೇ ಪುರುಷಾರ್ಥ ಹೇಗೆ ಹೊಂದಿಯಾನು?[೧]

೮. ಕೆಲವರಿಗೆ ದೇವರ ಸ್ವಾತಂತ್ರ್ಯ ಸ್ವಭಾವದಿಂದ ಪ್ರಯತ್ನವಿಲ್ಲದೇನೇ ಅನಿಷ್ಟ ನಿವಾರಣೆಯಾಗುತ್ತದೆ. ಇಷ್ಟವೂ ಪ್ರಯತ್ನದಿಂದಲೇ ಪ್ರಾಪ್ತವಾಗುತ್ತದೆ. ಇದನ್ನು ನೋಡುತ್ತೇವಲ್ಲ. ಇವೆರಡೂ ಭಗವಂತನ ಸ್ವಾತಂತ್ರ್ಯ ಗುಣದಿಂದಲೇ ನಡೆಯುತ್ತದೆ.

೯. ಹೀಗೆ ಎಲ್ಲ ಕರ್ಮಗಳೂ ಸ್ವಭಾವದಿಂದಲೇ ಭಗವಂತನಿಂದಲೇ ಪ್ರೇರಿತವಾಗಿ ಆಚರಿಸಲ್ಪಡುತ್ತವೆ ಎನ್ನುವುದಾದರೆ ನಾನೇ ಮಾಡಿದೆನೆಂಬುದಕ್ಕೆ ಯಾವ ಕಾರಣವಿದೆ? (ವಿಚಾರ ಮಾಡು). ಆದ್ದರಿಂದ ಇಂದ್ರ! (ದೇವರಾಜನೇ!) ಭಗವಂತನ ಅನುಗ್ರಹದಿಂದ ಜೀವನಿಷ್ಠವಾದ ಕರ್ಮಗಳೇ ಪ್ರವೃತ್ತಿ ಹೊಂದುತ್ತವೆ ಎಂದು ನನ್ನ ನಿಶ್ಚಿತ ಅಭಿಪ್ರಾಯ. ಅದಕ್ಕಿಂತ ಮತ್ತೊಂದು ಪ್ರೇರಕಶಕ್ತಿ ಇಲ್ಲ.[೨]

೧೦. ಯಾರು ಕಾರ್ಯಗಳ ಕಾರಣ ತಿಳಿಯದೆ ಕಾರ್ಯಮಾತ್ರ ತಿಳಿಯುತ್ತಾರೋ, ಮೂಲ ಪ್ರಕೃತಿಯಾದ ಸರ್ವೋತ್ತಮವಾದ ನಾರಾಯಣನನ್ನು ತಿಳಿಯುವುದಿಲ್ಲವೋ, ಅವರಿಗೆ ಬಾಲ್ಯದಿಂದಲೇ ಗರ್ವವುಂಟಾಗುತ್ತದೆ. ಕಾರಣವು ಭಗವಂತನೆಂದು ತಿಳಿದವರಿಗೆ ಗರ್ವವುಂಟಾಗುವುದಿಲ್ಲ.

ಎಲ್ಲ ಕ್ರಿಯೆಗಳು, ಸ್ವಭಾವ. ಎಂದರೆ ಪರಮಾತ್ಮನಿಂದಲೇ ಉಂಟಾಗುತ್ತವೆ ಎಂದು ದೃಢವಾಗಿ ತಿಳಿಯುತ್ತಾರೋ, ಅವರಿಗೆ ದರ್ಪ, ಗರ್ವಗಳು ಏನೂ ಮಾಡುವುದಿಲ್ಲ.[೩]

೧೧. ನೋಡು ಶಕ್ರ! ನಾನು ಸಮಸ್ತ ಧರ್ಮದವಿಧಿ(ನಿಷೇಧ)ಗಳನ್ನು ಬಲ್ಲೆ. ಎಲ್ಲ ವಸ್ತುಗಳು ಅನಿತ್ಯವೆಂದೂ ಬಲ್ಲೆ. ಆದ್ದರಿಂದ ಈ ಪ್ರಪಂಚವೆಲ್ಲ ನಾಶ ಸ್ವಭಾವದ್ದು ಎಂದೂ ಬಲ್ಲೆ. ಆದ್ದರಿಂದ ನಾನು (ಕಳೆದುಹೋದ ರಾಜ್ಯೈಶ್ವರ್ಯಗಳಿಗಾಗಿ) ಹಲುಬುವುದಿಲ್ಲ.

೧ ಯದಿ ಸ್ಯಾತ್ ಪುರುಷಃ ಕರ್ತಾ ಶಕ್ರಾತ್ಮಶ್ರೇಯಸೇ ಧ್ರುವಮ್ ।
ಆರಂಭಾಸ್ತಸ್ಯ ಸಿಧ್ಯೇರನ್ನ ಚ ಜಾತು ಪರಾಭವೇತ್ ॥
ಅನಿಷ್ಟಸ್ಯ ಹಿ ನಿರ್ವೃತ್ತಿರನಿವೃತ್ತಿಃ ಪ್ರಿಯಸ್ಯ ಚ ।
ಲಕ್ಷ್ಯತೇ ಯತಮಾನಾನಾಂ ಪುರುಷಾರ್ಥಸ್ತತಃ ಕುತಃ ॥ – ೫೮/೨೩,೨೪

೨ ಸ್ವಭಾವಾದೇವ ತತ್ ಸರ್ವಮಿತಿ ಮೇ ನಿಶ್ಚಿತಾ ಮತಿಃ ।
ಆತ್ಮಪ್ರತಿಷ್ಠಿತಾ ಪ್ರಜ್ಞಾಮಮ ನಾಸ್ತಿ ತತೋಽನ್ಯಥಾ ॥ – ೫೮/೨೮

೩. ಸ್ವಭಾವಭಾವಿನೋ ಭಾವಾನ್ ಸರ್ವಾನೇವೇಹ ನಿಶ್ಚಯೇ ।
ಬುಧ್ಯಮಾನಸ್ಯ ದರ್ಪೋ ವಾ ಮಾನೋ ವಾ ಕಿಂ ಕರಿಷ್ಯತಿ ॥ – ೫೮/೩೨

**ವೇದ ಧರ್ಮವಿದಂ ಕೃತ್ಸ್ನಂ ಭೂತಾನಾಂ ಚಾಪ್ಯನಿತ್ಯತಾಮ್ ।**
**ತಸ್ಮಾಚ್ಛಕ್ರ ನ ಶೋಚಾಮಿ ಸರ್ವಂ ಹ್ಯೇವೇದಮಂತವತ್ ॥** - ೫೮/೩೩

೧೨. ನಾನು ಅಹಂಕಾರ, ಮಮಕಾರಗಳನ್ನು ಬಿಟ್ಟು ಎಲ್ಲ ವಿಧಗಳ ಬಂಧನದಿಂದ ಮುಕ್ತನಾಗಿ ಯಾವ ಫಲಾಶಾರಹಿತನಾಗಿ ಭಗವಂತನಲ್ಲಿಯೇ ಬುದ್ಧಿಯುಳ್ಳವನಾಗಿ, ಪ್ರಾಣಿಗಳ ಸೃಷ್ಟಿ ಸ್ಥಿತಿಗಳನ್ನು ನೋಡುತ್ತಿದ್ದೇನೆ, ತಿಳಿದಿದ್ದೇನೆ. ಪ್ರಕೃತಿ ಹಾಗೂ ಅದರ ಕಾರ್ಯಗಳ ಬಗ್ಗೆ ನನಗೆ ಪ್ರೀತಿಯೂ ಇಲ್ಲ, ದ್ವೇಷವೂ ಇಲ್ಲ. ನಾನು ಯಾರನ್ನೂ ನನ್ನ ದ್ವೇಷಿ ಎಂದಾಗಲೀ, ನನ್ನದೆಂಬ ವ್ಯಾಮೋಹದಿಂದಾಗಲೀ ನೋಡುವುದಿಲ್ಲ. ಹೀಗಾಗಿ ನಾನು ಎಲ್ಲೂ ಏನೂ ಬಯಸುವುದಿಲ್ಲ. ನಾನು ಯಾರ/ಯಾವುದರ ಪ್ರಲೋಭನೆಗೂ ಸಿಗುವುದಿಲ್ಲ.[೧]

೧೩. ಇದನ್ನೆಲ್ಲ ಕೇಳಿದ ಶಕ್ರನು ಯಾವ ಉಪಾಯದಿಂದ ಈ ಪ್ರಜ್ಞೆ ಬರುತ್ತದೆ? ಯಾವ ಉಪಾಯದಿಂದ ಮನಃಶಾಂತಿ (ಮೋಕ್ಷ) ಲಭಿಸುತ್ತದೆ. ನನಗೆ ತಿಳಿಸು ಎಂದು ಕೇಳಿದನು[೨]. ಇದಕ್ಕೆ ಉತ್ತರವಾಗಿ [೩]ಪ್ರಹ್ಲಾದನು –

'ಎಲೈ ಶಕ್ರನೇ! ಪ್ರಾಮಾಣಿಕತೆ (ಆರ್ಜವ – ಋಜುಭಾವ, ಕಾಯೇನ ವಾಚಾ ಒಂದೇ ರೀತಿಯಾಗಿರುವಿಕೆ), ಅಪ್ರಮಾದ (ಅಪರಾಧ ಮಾಡದಿರುವುದು) ಬುದ್ಧಿಸ್ಥಿರತೆ (ನೈರ್ಮಲ್ಯ), ಭಗವತ್ಪ್ರಜ್ಞೆ ಗುರುಹಿರಿಯರ ಸೇವೆ ಇವುಗಳಿಂದ ಪುರುಷನು ಮಹತ್ತ್ವವನ್ನು ಹೊಂದುತ್ತಾನೆ. ಸ್ವತಂತ್ರನಾದ ನಾರಾಯಣನಿಂದ (ಸ್ವಭಾವ) ಭಗವತ್ಪ್ರಜ್ಞೆಯನ್ನು, ಶಾಂತಿಯನ್ನು, ಅಷ್ಟೇಕೆ ಎಲ್ಲವೂ ಬಯಸುವುದೆಲ್ಲ ಅವನಿಂದಲೇ ಲಭಿಸುತ್ತದ[೪](ಸಿಗುತ್ತದೆ). (೩೯,೪೦)

ಸರ್ವದುಃಖಗಳಿಂದ ಸಂರಕ್ಷಿಸುವ ಭಗವಂತನಿಂದಲೇ ಸುಖವನ್ನು ಅನ್ವೇಷಣ ಮಾಡುತ್ತಾ, ಅನಂತಸುಖಕ್ಕಾಗಿ ಸಜ್ಜನರ ಸಂಗವನ್ನು ಮಾಡುತ್ತಾನೆ[೫]. ಸಜ್ಜನರ ಸಹವಾಸದಿಂದ ಭಗವಂತನ

---

೧ ನೋರ್ಧ್ವಂ ನಾವಾ ನ ತಿರ್ಯಕ್ಚ ನ ಕ್ವಚಿಚ್ಛಕ್ರ ಕಾಮಯೇ ।
ನ ವಿಜ್ಞಾನೇ ನ ಹಿ ಜ್ಞೇಯೇ ನಾಜ್ಞಾನೇ ಶರ್ಮ ವಿದ್ಯತೇ ॥ - ೫೮/೩೭

೨ ಯೇನೈಷಾಂ ಲಭ್ಯತೇ ಪ್ರಜ್ಞಾ ಯೇನ ಶಾಂತಿರವಾಪ್ಯತೇ ।
ಪ್ರಬ್ರೂಹಿ ತಮುಪಾಯಂ ಮೇ ಸಮ್ಯಕ್ ಪ್ರಹ್ಲಾದ ಪೃಚ್ಛತೇ ॥ - ೫೮/೩೮

೩ ವಿ.ಸೂ.: ಪ್ರಹ್ಲಾದರು ಇಂದ್ರನಿಗೆ ನಿರೂಪಿಸಿದ ವಿಷಯಗಳು ತಾತ್ತ್ವಿಕವಾಗಿ ತುಂಬಾ ಕ್ಲಿಷ್ಟವಿಷಯಗಳು ಇವನ್ನು ವಿಶೇಷ ಅಧ್ಯಯನ ಮಾಡಿಯೇ ತಿಳಿಯಬೇಕು.

೪ ಆರ್ಜವೇನಾಪ್ರಮಾದೇನ ಪ್ರಸಾದೇನಾತ್ಮವತ್ತಯಾ ।
ವೃದ್ಧಶುಶ್ರೂಷಯಾ ಶಕ್ರ ಪುರುಷೋ ಲಭತೇ ಮಹತ್ ॥
ಸ್ವಭಾವಾಲ್ಲಭತೇ ಪ್ರಜ್ಞಾಂ ಶಾಂತಿಮೇತಿ ಸ್ವಭಾವತಃ ।
ಸ್ವಭಾವಾದೇವ ತತ್ ಸರ್ವಂ ಯತ್ಕಿಂಚಿದನುಪಶ್ಯಸಿ ॥ - ೫೮/೩೯,೪೦

೫ ತ್ರಾತಾರಂ ಸರ್ವದುಃಖಾನಾಂ ತತ್ಸುಖಾನ್ವೇಷಣಂ ತತಃ ।
ಕರೋತಿ ಸದ್ಭಿಃ ಸಂಸರ್ಗಮಲಂ ಸಂತಃ ಸುಖಾಯ ವೈ ॥ - ೫೮/೪೩

ಲಕ್ಷಣಗಳನ್ನು ಅವನ ಮಾರ್ಗಗಳನ್ನು ತಿಳಿದು ಸರ್ವಸಂಗಮುಕ್ತನಾಗಿ (ಭಗವಂತನನ್ನು ಬಿಟ್ಟು ಉಳಿದ) ಮುಕ್ತನಾಗಿ ಪರಮಾತ್ಮನನ್ನು ಹೊಂದುತ್ತಾನೆ[೧].

೧೪. ಯಾರು ಇಂದ್ರಿಯವಿಷಯಗಳಲ್ಲಿ ಆಸಕ್ತನಾಗಿ, ಭಯಮೂಲವಾದ ರಜೋಗುಣದಿಂದ ಕೂಡಿದವನಾಗಿರುತ್ತಾನೋ, ಅವನು ಭಗವಂತನಲ್ಲಿ ಭಕ್ತಿಹೀನನಾಗುತ್ತಾನೆ[೨]. ಇಂದ್ರಿಯವಿಷಯಗಳಲ್ಲಿ ಪ್ರೀತಿ ಹೆಚ್ಚಾಗಿ ಭಗವಂತನ ಜ್ಞಾನಸಿದ್ಧಿಯಾಗುವುದಿಲ್ಲ, ಉನ್ಮತ್ತ ಸ್ವಭಾವದವನಾಗುತ್ತಾನೆ, ಹುಚ್ಚನಂತೆ ವರ್ತಿಸುತ್ತಾನೆ. ಅವನಿಗೆ ಮನಶ್ಶುದ್ಧಿಯಾಗದು. ಶಾಂತಿ, ನೆಮ್ಮದಿಗಳೂ ಸಿಗವು. ವಿಷಯಾಭಿಲಾಷೆಗಳೂ ಕಡಿಮೆಯಾಗುವುದಿಲ್ಲ, ಹೀಗಾಗಿ ಮೋಕ್ಷಾಶಾ ಹುಟ್ಟುವುದೇ ಇಲ್ಲ. ನಿಜವಾದ ಕಾರಣಗಳಲ್ಲಿ, ವಿಷಯಗಳಲ್ಲಿ (ಯಾವ ವಿಷಯಗಳು ಮೋಕ್ಷಕಾರಣಗಳು ಅಲ್ಲವೋ, ಅವನ್ನೇ ಸುಖಕಾರಣವೆಂದು ಭಾವಿಸಿ) ಅಲ್ಲಿಯೇ ಕಾರಣತ್ವವನ್ನು ಚಿಂತಿಸುತ್ತಾ, ವಿಷಯಗಳನ್ನೇ ಸ್ತುತಿಸುತ್ತಾ ಮುಳುಗಿಹೋಗುತ್ತಾನೆ. ಅಷ್ಟೇ ಅಲ್ಲ, ದುರಭಿಮಾನ, ದರ್ಪ(ಗರ್ವ)ಗಳಿಂದ ಕೂಡಿ ಶಾಸ್ತ್ರಗಳನ್ನು ಕೇಳುವುದಿಲ್ಲ[೩]. ಮುಂದೆ ತನ್ನ ದುಷ್ಕರ್ಮಗಳಿಂದ ಅನೇಕ ಕುಯೋನಿಗಳಲ್ಲಿ ತಿರುಗುತ್ತಾ ಮಹಾ ಅಜ್ಞಾನ, ಮಿಥ್ಯಾಜ್ಞಾನಗಳಲ್ಲಿ ಸಿಲುಕಿ ಸಂಸಾರ ದಾಟಿಸುವ ಗುರುವನ್ನು ತಿಳಿಯುವುದಿಲ್ಲ[೪]

**ಆದ್ದರಿಂದ ಸದ್ವಿದ್ಯಾ ಬೋಧಿಸುವ ಆಚಾರ್ಯರನ್ನು ಆಶ್ರಯಿಸಿಯೇ ಬ್ರಹ್ಮವಿದ್ಯೆಯನ್ನು ಸಂಪಾದಿಸಬೇಕು (ಸಂಸಾರ ದಾಟಲು).**

ಅಂತಹ ಆಚಾರ್ಯಪುರುಷನೇ ಸಾಧಕ ಪುರುಷನನ್ನು ಅನುಕೂಲವಾದ ಧರ್ಮಗಳಲ್ಲಿ ಪ್ರವೃತ್ತಿಯನ್ನು ಹೊಂದುವಂತೆ ಮಾಡುತ್ತಾನೆ. ಇಂತಹ ಆಚಾರ್ಯನಿಂದಲೇ ಬಂದ ಭಗವಂತನ ಜ್ಞಾನವೆಂಬ ವಾಯುವು ಜನ್ಮಾಂತರಕ್ಕೆ ಕಾರಣವಾದ ಪ್ರಾರಬ್ಧಕರ್ಮವೆಂಬ ಹತ್ತಿಯ ರಾಶಿಯನ್ನು ದೂರ ತೂರಿ ಬಿಡುತ್ತದೆ. ಆದ್ದರಿಂದ ಸದಾಚಾರಪರನಾದ, ಸಂಸಾರನಿವರ್ತಕನಾದ ಆಚಾರ್ಯನು ಭೃಗುಋಷಿಯು ಹೇಗೆ ಅಗ್ನಿಯನ್ನು ಶಾಪದಿಂದ ನಾಶಮಾಡಿದನೋ ಹಾಗೆಯೇ ಸಂಸಾರಾಗ್ನಿಯನ್ನು ನಾಶ ಮಾಡುತ್ತಾನೆ.

---

೧ ಸತಾಂ ಸಕಾಶಾದಾಜ್ಞಾಯ ಮಾರ್ಗಂ ಲಕ್ಷಣವತ್ತಯಾ ।
ಸರ್ವಸಂಗವಿನಿರ್ಮುಕ್ತಃ ಪರಮಾತ್ಮಾನಮೃಚ್ಛತಿ ॥ – ೫೮/೪೪

೨ ವಿಷಯೇ ಚಾನ್ವಿತಸ್ಯಾಸ್ಯ ಮೋಕ್ಷವಾಂಛಾ ನ ಜಾಯತೇ ।
ಹೇತ್ವಾಭಾಸೇಷು ಸಂಲೀನಃ ಸ್ತೌತಿ ವೈಷಯಿಕಾನ್ ಗುಣಾನ್ ॥ – ೫೮/೪೯

೩. ಸ ಶಾಸ್ತ್ರಾಣಿ ಶೃಣೋತ್ಯೇವ ಮಾನದರ್ಪಸಮನ್ವಿತಃ ।
ಸ್ವತಃ ಸಿದ್ಧಂ ನ ಭೋಗಸ್ತಂ ಸ್ವತಃಸಿದ್ಧಂ ನ ವೇತ್ತಿ ಚ ।
ಚಿದ್ರೂಪಧಾರಣಂ ಚೈವ ಪರಸ್ಪಷ್ಟಮಥಾವ್ಯಯಮ್ ॥ – ೫೮/೫೦

೪ ಆಚಾರ್ಯಸಂಶ್ರಯಾದ್ ವಿದ್ಯಾದ್ ವಿನಯಂ ಸಮುಪಾಗತಃ ॥ – ೫೮/೫೧

೧೫. ಭಗವಂತನೇ ಜಾಗ್ರತ್, ಸ್ವಪ್ನ ಸುಷುಪ್ತಿ ಅವಸ್ಥೆಗಳಿಗೂ ಪ್ರೇರಕನೆಂದು ಪತ್ಯಕ್ಷಾದಿ ಪ್ರಮಾಣಗಳಿಂದ ತಿಳಿಯುತ್ತಾನೆ.

೧೬. ಸಾಧಕನು ಯಾವವಸ್ತುಗಳು ತನ್ನದ್ದಲ್ಲ, ತನ್ನಿಂದ ಪಡೆಯಲು ಸಾಧ್ಯವೇ ಇಲ್ಲ. ಈ ನಿಶ್ಚಯಜ್ಞಾನ ಹುಟ್ಟಿದ ಬಳಿಕ (ಜಾಗ್ರತಾದಿ ಅವಸ್ಥೆಯ ಪರಿಜ್ಞಾನದಿಂದ) ಇವನು ಮಿತ್ರ, ಇವನು ಶತ್ರು - ಇತ್ಯಾದಿ ಭಾವನೆಗಳೇಕೆ? (ಅವ್ಯಾವೂ ನನ್ನ ಕೈಯಲ್ಲಿಲ್ಲದಿರುವುದರಿಂದ) ಅವನ್ನು ತೊರೆದವನಿಗೆ ಹರ್ಷಶೋಕಾದಿಗಳು ಇರುವುದಿಲ್ಲ.

ಆದ್ದರಿಂದ ದೇವೇಂದ್ರನೇ! ಎಲ್ಲರಿಗೂ ಬ್ರಹ್ಮ ಅಸ್ತಿತ್ವರೂಪ ಸಮಬುದ್ಧಿಯೇ ಮನಶ್ಶಾಂತಿಗೆ ಸಾಧನವೆಂದು ತಿಳಿ. ತಿಳಿದು ಅಡ್ಡದಾರಿ ಹಿಡಿಯಬಾರದು. ನಿನ್ನ ವಿವೇಕಜ್ಞಾನದಿಂದ ಇದನ್ನು ತಿಳಿಯಬಹುದು.

೧೭. ವೇದಾಂತವಿಜ್ಞಾನಿಗಳು ವಿಷ್ಣುವನ್ನು ಹೀಗೆ ಹೇಳುತ್ತಾರೆ. ಅವನು -

೧. ಸಮಸ್ತಸಂಕಲ್ಪವಿಶೇಷಯುಕ್ತನಾಗಿದ್ದಾನೆ(ಚರಾಚರಜಗತ್ತಿನಮನೋವ್ಯಾಪಾರಗಳನ್ನು ಸಾಮಾನ್ಯ, ವಿಶೇಷ, ಬಲ್ಲವನು, ಪ್ರೇರಕನು, ನಿಯಾಮಕನು)

೨. ಪರಾಣಾಂ ಪರಂ ಪರಮಂ - ಪರಾತ್ಪರ ಪುರುಷ ಸರ್ವೋತ್ತಮ

೩. ವಿಭುಃ - ವ್ಯಾಪ್ತನು.

೪. ನ ನಿತ್ಯಂ ಗುಣಃ - ತ್ರಿಗುಣಸಂಬಂಧರಹಿತನು.[೧]

೫. ವರ್ಣೇಷು ಲೋಕೇಷು ವಿಶೇಷಣೇಷು - ವಸನಾತ್ ಮಹಾತ್ಮಾ ಸಃ ವಾಸುದೇವಃ -ಅವನು ಲೋಕಗಳಲ್ಲಿರುವ ಎಲ್ಲ ವರ್ಣಗಳಲ್ಲಿ (ಜಾತಿ), ಅವುಗಳನ್ನು ಅನುಸರಿಸಿದ ವಸ್ತುಗಳಲ್ಲಿ ಅಂತರ್ಯಾಮಿಯಾಗಿ ವಾಸವಾಗಿದ್ದಾನೆ. ಆದ್ದರಿಂದ ಅವನು ವಾಸುದೇವ.[೨]

ಇಂತಹ ಭಗವಂತನಲ್ಲಿಯೇ ನೆಲೆಗೊಂಡ ಧೃತಿಯಿಂದ (ಧಾರಣಶಕ್ತಿಯಿಂದ), ಭಕ್ತಿಯಿಂದ ಜ್ಞಾನಸ್ವರೂಪಿಯಾದ ಭಗವಂತನನ್ನು ಜ್ಞಾನಿಯು ಕಾಣುತ್ತಾನೆ ಎಂದು ನನಗೆ ಗುರುಗಳು ಹೇಳಿದ್ದಾರೆ(ಉಪದೇಶಿಸಿದ್ದಾರೆ)[೩].

---

೧ ಸಮಸ್ತಸಂಕಲ್ಪವಿಶೇಷಯುಕ್ತಂ ಪರಂ ಪರಾಣಾಂ ಪರಮಂ ಮಹಾತ್ಮಾ।
ತ್ರಯ್ಯಂತವಿದ್ಭಿಃ ಪರಗೀಯತೇऽಸೌ ವಿಷ್ಣುರ್ವಿಭುರ್ನಾಸ್ತಿ ಗುಣೋ ನ ನಿತ್ಯಮ್ ॥ - ೫೮/೧೭

೨ ವರ್ಣೇಷು ಲೋಕೇಷು ವಿಶೇಷಣೇಷು ಸ ವಾಸುದೇವೋ ವಸನಾನ್ಮಹಾತ್ಮಾ।
ಗುಣಾನುರೂಪಂ ಸ ಚ ಕರ್ಮರೂಪಂ ದದಾತಿ ಸರ್ವಸ್ಯ ಸಮಸ್ತರೂಪಮ್ ॥ - ೫೮/೧೮

೩ ಭಕ್ತ್ಯಾ ಚ ಧೃತ್ಯಾ ಚ ಸಮಾಹಿತಾತ್ಮಾ ಜ್ಞಾನಸ್ವರೂಪಂ ಪರಿಪಶ್ಯತೀಹ।
ವದಂತಿ ತನ್ಮೇ ಭಗವಾನ್ ದದೌ ಸ ಸ ಏವ ಶೇಷಂ ಮಘವಾನ್ ಮಹಾತ್ಮಾ॥
ಏವಂ ಮಮೋಪಾಯಮವೇಹಿ ಶಕ್ರ ತಸ್ಮಾಲ್ಲೋಕೋ ನಾಸ್ತಿ ಮಹ್ಯಂ ಸದೈವ॥ - ೫೮/೧೯,೨೦

ಎಲೈ ಇಂದ್ರನೇ! ಆ ಮಹಾತ್ಮನಾದ ವಾಸುದೇವನೇ ಕೊನೆಗೆ ಉಳಿಯುವವನು (ನಾರಾಯಣೋ ವಾ ಇದಮಗ್ರ ಆಸೀತ್ (ಭವಿಷ್ಯತಿ).

ನಾನು ಹೇಳುವ ಈ ಉಪಾಯವನ್ನು ತಿಳಿದುಕೋ. ಅವನಿಗಿಂತ ಉತ್ತಮವಸ್ತು ಮತ್ತೊಂದು ಈ ಲೋಕದಲ್ಲಿಲ್ಲ, ಎಂದಿಗೂ ಇಲ್ಲ.

ಹೀಗೆ ದೈತ್ಯಪತಿಯಾದ ಪ್ರಹ್ಲಾದನಿಂದ ಹೇಳಲ್ಪಟ್ಟ ಶಕ್ರನು ಆಶ್ಚರ್ಯಚಕಿತನಾದನು. ಪ್ರಹ್ಲಾದನ ಬಗ್ಗೆ ಪ್ರೀತಿಯುಳ್ಳವನಾದ(ವೈಷ್ಣವರಿಗೆ ವೈಷ್ಣವರ ಮೇಲೆ ಸಹಜ ಪ್ರೀತಿ ಬಂದಿತು). ಆತನ ವಿಚಾರಗಳನ್ನು ಗೌರವಿಸಿದ, ಅಭಿನಂದಿಸಿದ. ಪ್ರಹ್ಲಾದನನ್ನು ತನ್ನ ಲೋಕಕ್ಕೆ ಆಹ್ವಾನಿಸಿ, ಹೋಗಿ ಬರುವೆ ಎಂದು ಹೇಳಿ ತನ್ನ ಮನೆಗೆ (ಸ್ವರ್ಗಕ್ಕೆ)ತೆರಳಿದ.

## ಸಂದೇಶಗಳು

ಪ್ರಹ್ಲಾದನ ಮಾತುಗಳೆಲ್ಲ ಸಂದೇಶಗಳು.

*****

# ೧೮೭. ಇಂದ್ರ-ಬಲಿ ಸಂವಾದ

ಧರ್ಮರಾಜನು ಪ್ರಶ್ನಿಸುತ್ತಾನೆ - ತಾತ! ಎಂತಹ ಬುದ್ಧಿಯುಳ್ಳ ರಾಜನು ತಾನು ಕಾಲದಂಡದಿಂದ ಶಿಕ್ಷಿಸಲ್ಪಟ್ಟಿದ್ದರೂ (ಕಾಲವು ರಾಜನ ಸೊಕ್ಕನ್ನು ಇಳಿಸಿದ್ದರೂ) ರಾಜ್ಯಲಕ್ಷ್ಮಿಯಿಂದ ವಂಚಿತನಾಗಿದ್ದರೂ, ಭೂಮಿಯಲ್ಲಿ ವ್ಯವಹರಿಸಿಕೊಂಡಿರುತ್ತಾನೆ? (ಓಡಾಡಿಕೊಂಡಿರುತ್ತಾನೆ? - ಅಧಿಕಾರ ಭ್ರಷ್ಟನಾದ ರಾಜನು ಹೇಗೆ ಜೀವಿಸುತ್ತಾನೆ?)?

ಇದಕ್ಕೆ ಉತ್ತರವಾಗಿ **ಇಂದ್ರ-ಬಲಿ ಸಂವಾದ** ರೂಪದ ಇತಿಹಾಸವನ್ನು ಭೀಷ್ಮರು ಧರ್ಮರಾಜನಿಗೆ ಹೇಳುತ್ತಾರೆ.

ಹಿಂದೊಮ್ಮೆ ಇಂದ್ರನು ಅಸುರರೆಲ್ಲರನ್ನು ಜಯಿಸಿ, ಬ್ರಹ್ಮದೇವರ ಬಳಿಗೆ ಬಂದು ನಮಿಸಿ ಹೀಗೆ ಹೇಳಿದನು.

'ಬಲಿ ಚಕ್ರವರ್ತಿ ರಾಜ್ಯವಾಳುವಾಗ ಆತ ಎಷ್ಟೇ ದಾನ ಮಾಡುತ್ತಿದ್ದರೂ, ಆತನ ಕೋಶ ಖಾಲಿಯಾಗುತ್ತಿದ್ದಿಲ್ಲ. ಬಲಿ ತಾನೇ ಸೂರ್ಯನಾಗಿ ದಿಕ್ಕುಗಳನ್ನು ಬೆಳಗಿಸುತ್ತಾ ಸಕಾಲಕ್ಕೆ ವಿಶ್ವಕ್ಕೆಲ್ಲ ಮಳೆಯನ್ನೂ ಸುರಿಸುತ್ತಿದ್ದ. ಅವನೇ ವಾಯು, ವರುಣ, ಸೂರ್ಯ, ಚಂದ್ರ, ಅಗ್ನಿಯಾಗಿ ದಿಕ್ಪಾಲಕರ ಕಾರ್ಯವನ್ನು ನಿರ್ವಹಿಸುತ್ತಿದ್ದ.[೧]

ಆದರೆ ಈಗ (ಸೋತಿರುವ) ಬಲಿ ಎಲ್ಲೂ ಕಾಣುತ್ತಿಲ್ಲ ಅವನೆಲ್ಲಿದ್ದಾನೆ.[೨] ಇಂದ್ರನ ಈ ಮಾತಿನಲ್ಲಿ ಗರ್ವದ ಧ್ವನಿಯಿತ್ತು.

ಅದನ್ನು ಗುರುತಿಸಿದ ಬ್ರಹ್ಮದೇವ ಇಂದ್ರನನ್ನು ಉದ್ದೇಶಿಸಿ ನುಡಿದ. 'ಹೀಗೆ ಗರ್ವದಿಂದ ಮಾತನಾಡುವುದು ಸರಿಕಾಣದು. ಕೇಳಿದುದರಿಂದ ಸುಳ್ಳು ಹೇಳಬಾರದು. ಆದ್ದರಿಂದ ನಿನಗೆ ಸತ್ಯವನ್ನೇ ಹೇಳುತ್ತೇನೆ, ಕೇಳು. ಈಗ ಬಲಿಯು ಯಾವುದೋ ಒಂದು ಶೂನ್ಯಾಗಾರದಲ್ಲಿ (ಯಾರೂ ಇಲ್ಲದ ಮನೆಯಲ್ಲಿ), ಒಂಟೆ, ಹಸು, ಕತ್ತೆ ಅಥವಾ ಕುದುರೆ ಈ ಪ್ರಾಣಿಗಳಲ್ಲಿ ಒಂದು ಪ್ರಾಣಿಯಾಗಿ, ಆ ಜಾತಿಯಲ್ಲಿ ಮುಖ್ಯನೆನಿಸಿ ಇರುತ್ತಾನೆ'

---

೧ ಸ ಏವ ಹ್ಯಸ್ತಮಯತೇ ಸ ಸ್ಮ ವಿದ್ಯೋತತೇ ದಿಶಃ।
ಸ ವರ್ಷತಿ ಸ್ಮ ವರ್ಷಾಣಿ ಯಥಾಕಾಲಮತಂದ್ರಿತಃ।
ತಂ ಬಲಿಂ ನಾಧಿಗಚ್ಛಾಮಿ ಬ್ರಹ್ಮನ್ನಾಚಕ್ಷ್ವ ಮೇ ಬಲಿಮ್ ॥ - ೫೯/೫

೨ ಯಸ್ಯ ಸ್ಮ ದದತೋ ವಿತ್ತಂ ನ ಕದಾಚನ ಹೀಯತೇ।
ತಂ ಬಲಿಂ ನಾಧಿಗಚ್ಛಾಮಿ ಬ್ರಹ್ಮನ್ನಾಚಕ್ಷ್ವ ಮೇ ಬಲಿಮ್ ॥ - ೫೯/೪

– ಎಂದು ಬ್ರಹ್ಮನು ತನಗೆ ಪೂರ್ಣವಾಗಿ ಗೊತ್ತಿಲ್ಲವೇನೋ ಎಂಬಂತೆ ಮೂರು ನಾಲ್ಕು ಪ್ರಾಣಿಗಳಲ್ಲಿ ಒಂದರವೇಷದಲ್ಲಿ ಬಲಿ ಇದ್ದಾನೆಂದು ಹೇಳಿದ.[೧] ಜಗತ್ಸೃಷ್ಟಿಕರ್ತನೂ, ಋಜೂತ್ತಮನಾದ ಬ್ರಹ್ಮನಿಗೆ ಖಚಿತವಾಗಿ ಗೊತ್ತಿಲ್ಲದಿರುವುದು ಸಾಧ್ಯವೇ?

ಬ್ರಹ್ಮದೇವನ ಮಾತನ್ನು ಕೇಳಿದ ಶಕ್ರನು ಶೂನ್ಯಾಗಾರದಲ್ಲಿರುವ ಬಲಿಯನ್ನು ಸಂಹರಿಸಲೇ ಅಥವಾ ಬೇಡವೇ? ನನಗೆ ಆದೇಶಿಸಿ ಎಂದು ಕೇಳಿದ. ಶಕ್ರನ ಮಾತಿಗೆ ಬ್ರಹ್ಮನು 'ಬಲಿಯನ್ನು ಸಂಹರಿಸಬೇಡ. ಆತನು ವಧಾರ್ಹನಲ್ಲ. ಆದರ ಬದಲಾಗಿ ಆತನನ್ನು ನೀನು ಕಂಡಲ್ಲಿ ಆತನಿಂದ ತತ್ತ್ವಗಳ (ನ್ಯಾಯಗಳನ್ನು, ಧಾರ್ಮಿಕ) ಬಗ್ಗೆ ಪ್ರಶ್ನೆ ಮಾಡು (ಎಂದು ನನಗನಿಸುತ್ತದೆ) ಎಂದನು.[೨]

ಹೀಗೆ ಬ್ರಹ್ಮನಿಂದ ವಿಷಯ ತಿಳಿದ ಇಂದ್ರನು ವೈಭವದಿಂದ ಐರಾವತವನ್ನೇರಿ ಭೂಮಿಯನ್ನು ಸುತ್ತಿ ಒಂದು ಶೂನ್ಯಾಗಾರದಲ್ಲಿ ಕತ್ತೆಯ ವೇಷ(ಆವೃತನಾದ)ದ ಬಲಿಯನ್ನು ಕಂಡು ಹೀಗೆ ಹೇಳಿದನು.

ಎಲೈ ದಾನವನೇ! ನೀನು ಅತ್ಯಂತ ಕೆಟ್ಟ ಕತ್ತೆಯ ಜನ್ಮವನ್ನು ಹೊಂದಿ ಧಾನ್ಯದ ಹೊಟ್ಟನ್ನು ತಿನ್ನುತ್ತಿರುವೆ. ದೈವೀ ವ್ಯಾಪಾರ ನೋಡುತ್ತಿದ್ದೇನೆ. ನೀನು ಎಲ್ಲ ಐಶ್ವರ್ಯ ಕಳೆದುಕೊಂಡು, ಮಿತ್ರರಿಲ್ಲದೆ, ಶತ್ರುವಶನಾಗಿ, ವೀರ್ಯಪರಾಕ್ರಮಗಳನ್ನು ಕಳೆದುಕೊಂಡು ಇರುವೆ.[೩]

ಹಿಂದೆಲ್ಲ ನೀನು ಹೊರಗೆ ಹೊರಟರೆ ನಿನ್ನ ಹಿಂದೆ ಜ್ಞಾತಿಗಳಿಂದ ಸಾವಿರಾರು ವಾಹನಗಳೊಂದಿಗೆ ಕೂಡಿಕೊಂಡು, ಲೋಕಗಳನ್ನು ತಾಪಗೊಳಿಸುತ್ತಾ, ನಮ್ಮನ್ನೆಲ್ಲ ನಿರ್ಲಕ್ಷಿಸುತ್ತಿದ್ದೆ.[೪]

ದೈತ್ಯರೆಲ್ಲ ನಿನ್ನ ಶಾಸನದಲ್ಲಿ ವಿಧೇಯರಾಗಿದ್ದರು. ನಿನ್ನ ಐಶ್ವರ್ಯದಿಂದ (ಯೋಗ ಸಾಮರ್ಥ್ಯದಿಂದ) ಭೂಮಿ ಉಳದೆ ಫಲ ಕೊಡುತ್ತಿತ್ತು.[೫]

---

೧ ಉಷ್ಟ್ರೇಷು ಯದಿ ವಾ ಗೋಷು ಖರೇಷ್ವಶ್ವೇಷು ವಾ ಪುನಃ।
ವರಿಷ್ಠೋ ಭವಿತಾ ಜಂತುಃ ಶೂನ್ಯಾಗಾರೇ ಶಚೀಪತೇ॥ – ೫೯/೮

೨ ಮಾ ಸ್ಮ ಶಕ್ರ ಬಲಿಂ ಹಿಂಸೀರ್ನ ಬಲಿರ್ವಧಮರ್ಹತಿ।
ನ್ಯಾಯಾಂಸ್ತು ಶಕ್ರ ಪ್ರಷ್ಟವ್ಯಸ್ತ್ವಯಾ ವಾಸವ ಕಾಮ್ಯಯಾ॥ – ೫೯/೧೦

೩. ಖರಯೋನಿಮನುಪ್ರಾಪ್ತಸ್ತುಷಭಕ್ಷೋಽಸಿ ದಾನವ।
ಇಯಂ ತೇ ಯೋನಿರಧಮಾ ಶೋಚಸ್ಯಾಹೋ ನ ಶೋಚಸಿ॥
ಅದೃಷ್ಟಂ ಬತ ಪಶ್ಯಾಮಿ ದ್ವಿಷತಾಂ ವಶಮಾಗತಮ್।
ಶ್ರಿಯಾ ವಿಹೀನಂ ಮಿತ್ರೈಶ್ಚ ಭ್ರಷ್ಟವೀರ್ಯಪರಾಕ್ರಮಮ್॥ – ೫೯/೧೩,೧೪

೪ ಯತ್ತದ್ ಯಾನಸಹಸ್ರೇಣ ಜ್ಞಾತಿಭಿಃ ಪರಿವಾರಿತಃ।
ಲೋಕಾನ್ ಪ್ರತಾಪಯನ್ ಸರ್ವಾನ್ ಯಾಸ್ಯಸ್ಮಾನವಿತರ್ಕಯನ್॥ – ೫೯/೧೫

೫ ತ್ವನ್ಮುಖಾಶ್ಚೈವ ದೈತೇಯಾ ವ್ಯತಿಷ್ಠಂಸ್ತವ ಶಾಸನೇ।

ನೀನು ಸಮುದ್ರದ ಪೂರ್ವತೀರದಲ್ಲಿದ್ದಾಗ ನಿನ್ನವರಿಗೆಲ್ಲ ಯಥೇಚ್ಛ ಧನ ಹಂಚುತ್ತಿದ್ದೆ. ನಿನ್ನ ಆಳ್ವಿಕೆಯಲ್ಲಿ ಸಾವಿರಾರು ಅಪ್ಸರೆಯರು ನರ್ತನ ಮಾಡುತ್ತಿದ್ದರು. ನಿನಗಾಗ ಸುವರ್ಣಛತ್ರವಿತ್ತು. ಆರು ಸಾವಿರ ಗಂಧರ್ವರು ಸಪ್ತಸ್ವರಗಳಲ್ಲಿ (ಏಳು ರೀತಿಯಾಗಿ) ಗಾನ ನರ್ತನ ಮಾಡುತ್ತಿದ್ದರು.[೧]

ನೀನು ಯಜ್ಞ ಮಾಡಿದಾಗ ಚಿನ್ನದ ಯಜ್ಞಸ್ತೂಪಗಳಿದ್ದವು. ಆಗ ನೀನು ಲಕ್ಷಾವಧಿ ಗೋದಾನ ಮಾಡಿದೆ. ಶಮ್ಯಾಕ್ಷೇಪಣ ವಿಧಿಯಿಂದ ಯಜ್ಞ ಮಾಡುತ್ತಿದ್ದೆ. ಆಗ ನಿನ್ನಲ್ಲಿದ್ದ ಬಂಗಾರದ ಗಿಂಡಿ ಶ್ವೇತಛತ್ರಚಾಮರವಾಗಲಿ, ಬ್ರಹ್ಮದೇವರು ಕೊಟ್ಟ ಜಯಮಾಲಾ ಯಾವುದೂ ಈಗ ಕಾಣಿಸುತ್ತಿಲ್ಲ.[೨]

ಆಗಿನ ನಿನ್ನ ಸ್ಥಿತಿಗೂ, ಈಗಿನ ನಿನ್ನ ಸ್ಥಿತಿಯನ್ನೂ ನೋಡಿದಾಗ ಶೋಚನೀಯವೆನಿಸುತ್ತದೆ. ಇದಕ್ಕಾಗಿ ನೀನು ಈಗ ದುಃಖಿಸುತ್ತಿದ್ದೀಯಾ? ಆಗಿನ ಹಾಗೂ ಈಗಿನ ನಿನ್ನ ಮನಸ್ಸು ಹೇಗಿತ್ತು, ಹೇಗಿದೆ? ನೀನೀಗ ವೈಭವಗಳಿಂದ ವಂಚಿತನಾಗಿರುವೆಯಲ್ಲ? ಎಂದು ಮುಂತಾಗಿ ಇಂದ್ರದೇವನು ಬಲಿಯನ್ನು ಕುರಿತು ನುಡಿದನು (ಇವೆಲ್ಲ ಒಂದು ತರಹ ಚುಚ್ಚುಮಾತುಗಳಾಗಿದ್ದವು, ದೈತ್ಯೇಂದ್ರನಿಗೆ).

ಇಂದ್ರನು ಮಾತುಗಳನ್ನು ಕೇಳಿ ನಗುತ್ತ ಬಲಿಯು 'ನಿನ್ನ ಮೂರ್ಖತನವು ದೇವತೆಗಳಿಗೆಲ್ಲ ರಾಜನಾದ ನಿನಗೆ ಯೋಗ್ಯವಲ್ಲ.ಇಂತಹ ಮಾತುಗಳು ನಿನ್ನ ಸ್ಥಾನಕ್ಕೆ ಸೂಕ್ತವಲ್ಲ' ಎಂದು ಗಂಭೀರವಾಗಿ ನುಡಿದನು.

---

ಅಕೃಷ್ಟಪಚ್ಯಾ ಪೃಥಿವೀ ತವೈಶ್ವರ್ಯೇ ಬಭೂವ ಹ।
ಇದಂ ಚ ತೇಽದ್ಯ ವ್ಯಸನಂ ಶೋಚಸ್ಯಾಹೋ ನ ಶೋಚಸಿ॥ - ೫೯/೧೬

೧ ಯದಾತಿಷ್ಠಃ ಸಮುದ್ರಸ್ಯ ಪೂರ್ವಕಾಲೇ ವಿಲೇಲಿಹನ್।
ಜ್ಞಾತಿಭ್ಯೋ ವಿಭಜನ್ ವಿತ್ತಂ ತದಾಸೀತ್ತೇ ಮನಃ ಕಥಮ್॥
ಯತ್ತೇ ಸಹಸ್ರಸಮಿತಾ ನನೃತುರ್ದೇವಯೋಷಿತಃ।
ಬಹೂನಿ ವರ್ಷಪೂಗಾನಿ ವಿಹಾರೇ ದೀಪ್ಯತಃ ಶ್ರಿಯಾ॥
ಸರ್ವಾಃ ಪುಷ್ಕರಮಾಲಿನ್ಯಃ ಸರ್ವಾಃ ಕಾಂಚನಸಪ್ರಭಾಃ।
ಕಥಮದ್ಯ ತದಾ ಚೈವ ಮನಸ್ತೇ ದಾನವೇಶ್ವರ॥
ಛತ್ರಂ ತವಾಸೀತ್ ಸುಮಹತ್ ಸೌವರ್ಣಂ ಮಣಿಭೂಷಿತಮ್।
ನನೃತುರ್ಯತ್ರ ಗಂಧರ್ವಾಃ ಷಟ್‌ಸಹಸ್ರಾಣಿ ಸಪ್ತಧಾ॥ - ೫೯/೧೭-೨೦

೨ ಯೂಪಸ್ತವಾಸೀತ್ ಸುಮಹಾನ್ಯಜತಃ ಸರ್ವಕಾಂಚನಃ।
ಯತ್ರಾದದಃ ಸಹಸ್ರಾಣಮಯುತಾನಿ ಗವಾಂ ದಶ॥
ಯದಾ ತು ಪೃಥಿವೀಂ ಸರ್ವಾಂ ಯಜಮಾನೋಽನುಪರ್ಯಯಾಃ।
ಶಮ್ಯಾಕ್ಷೇಪೇಣ ವಿಧಿನಾ ತದಾಸೀತ್ ಕಿಂ ನು ತೇ ಹೃದಿ॥
ನ ತೇ ಪಶ್ಯಾಮಿ ಭೃಂಗಾರಂ ನ ಛತ್ರಂ ವ್ಯಜನಂ ನ ಚ।
ಬ್ರಹ್ಮದತ್ತಾಂ ಚ ತೇ ಮಾಲಾಂ ನ ಪಶ್ಯಾಮ್ಯಸುರಾಧಿಪ॥ - ೫೯/೨೦-೨೩

ಇಂದ್ರನೇ! ನಿಜ, ನೀನು ನನ್ನಲ್ಲಿ ಬಂಗಾರದ ಗಿಂಡಿ, ಛತ್ರ, ಚಾಮರ, ಬ್ರಹ್ಮದೇವ ಕೊಟ್ಟ ದಿವ್ಯಮಾಲೆ, ಯಾವುದನ್ನೂ ನೋಡುವುದಿಲ್ಲ, ನೋಡಲಾರೆ. ಅವೆಲ್ಲವೂ ಗುಹೆಯೊಂದರಲ್ಲಿ ಬಚ್ಚಿಡಲಾಗಿದೆ. ಕಾಲ ಬಂದಾಗ ಮತ್ತೆ ನೀನೇ ನೋಡುವೆ. ಆದರೆ ನೀನು ಈಗ ಮಾತನಾಡಿದ್ದು (ಅದರ ಧಾಟಿ) ನಿನ್ನ ಕುಲ, ಯಶಸ್ಸಿಗೆ ತಕ್ಕುದಲ್ಲ. ಐಶ್ವರ್ಯದಿಂದ ಮೆರೆಯುತ್ತಿರುವವ ನೀನು. ಐಶ್ವರ್ಯಭ್ರಷ್ಟನಾದ ನನ್ನನ್ನು ಅಪಹಾಸ್ಯ ಮಾಡಲು ಇಚ್ಛಿಸುತ್ತಿದ್ದೀಯಾ!

ಪ್ರಜ್ಞಾವಂತರು, ಜ್ಞಾನತೃಪ್ತರಾದ ಕ್ಷಮಾಶೀಲರಾದ ಸಜ್ಜನರು, ಜ್ಞಾನಿಗಳು ಎಂದಿಗೂ ದುಃಖಪ್ರಸಂಗಗಳಲ್ಲಿ ಶೋಕಿಸುವುದಿಲ್ಲ. ಸುಖ ಬಂದಾಗ ಹಿಗ್ಗುವುದಿಲ್ಲ. ನೀನೋ ಪ್ರಕೃತಿಯ ವಿಕಾರಕ್ಕೆ ಒಳಗಾದ ಬುದ್ಧಿಯಿಂದ (ರಾಗದ್ವೇಷಗಳಿಂದ) ಹೀಗೆ ಗರ್ವದಿಂದ (ಆತ್ಮಪ್ರಶಂಸೆ) ಮಾತನಾಡುತ್ತಿರುವೆ. ನನ್ನ ಸ್ಥಿತಿ ನಿನಗೆ ಬಂದಾಗ ನೀನು ಹೀಗೆ ಮಾತನಾಡುವುದಿಲ್ಲ.[೧]

ಬಲಿಯಿಂದ ಕಾಲಮಹಿಮೆ ಪ್ರತಿಪಾದನೆ

ಹೀಗೆ ಹೇಳಿ ಹಾವಿನಂತೆ ಬುಸುಗುಟ್ಟುತ್ತಿದ್ದ ಬಲಿಯನ್ನು ಇಂದ್ರನು ಮತ್ತೆ ಗಹಗಹಿಸಿ ನಗುತ್ತಾ ಆತನ ಹಿಂದಿನ ಚರ್ಯಗಳನ್ನು ನೆನಪಿಸುತ್ತಾ ಮಾತನಾಡಿದನು.

ಎಲೈ ಬಲಿಯೇ! ಹಿಂದೆ ನೀನು ಸಾವಿರಾರು ವಾಹನಗಳಿಂದ ಹಾಗೂ ಬಂಧುಗಳಿಂದ ಕೂಡಿಕೊಂಡು ಲೋಕಗಳಿಗೆ ತಾಪ ಕೊಡುತ್ತಾ ದೇವತೆಗಳನ್ನು ನಿರ್ಲಕ್ಷಿಸುತ್ತಾ ಇದ್ದೆಯಲ್ಲವೇ? ಆದರೆ ಈಗ ಜ್ಞಾನಿಗಳಿಂದ, ಮಿತ್ರರಿಂದ ತ್ಯಜಿಸಲ್ಪಟ್ಟವನಾಗಿ ಇಂತಹ ದೈನ್ಯಾವಸ್ಥೆಯನ್ನು ಹೊಂದಿರುವುದಕ್ಕೆ ಶೋಕಿಸುತ್ತೀಯೋ ಇಲ್ಲವೋ ಹೇಳು.

ಇದಕ್ಕೆ ಬಲಿಯು ಬಹುದೀರ್ಘವಾದ ಉತ್ತರವನ್ನು **೫೫ ಶ್ಲೋಕಗಳಿಂದ** ಉತ್ತರಿಸುತ್ತಾನೆ. ಶಕ್ರನನ್ನು ಗರ್ವಿಷ್ಠನಾಗಿ ಮತ್ತೆ ವರ್ತಿಸದಂತೆ ಎಚ್ಚರಿಸುತ್ತಾನೆ. ಅದರ ಕೆಲಭಾಗಗಳು ಹೀಗಿವೆ.

೧. ಕಾಲಚಕ್ರ ಒಂದೇತರಹ ಇರದು. ಬದಲಾವಣೆ ಅದರ ಸ್ವಭಾವ. ಎಲ್ಲವೂ ಅನಿತ್ಯ. ಇದೆಲ್ಲ ವಿನಾಶಿ, ದೇಹಗಳೆಲ್ಲ ಅನಿತ್ಯ. ಎಲ್ಲರಿಗೂ ಮರಣ ಇಂದಲ್ಲ ನಾಳೆ ಬರುವಂತಹುದೇ. ನನ್ನ ಅಪರಾಧದಿಂದ ಈ ದೇಹ ಬಂದಿಲ್ಲ. ಆದ್ದರಿಂದ ನಾನು ಶೋಕಿಸುವುದಿಲ್ಲ.[೨]

ನನ್ನ ಬದುಕು ಮತ್ತು ಈ ಶರೀರ ಜೊತೆಯಲ್ಲಿಯೇ ಹುಟ್ಟುತ್ತವೆ. ಜೊತೆಯಲ್ಲಿಯೇ ಬೆಳೆದು ಜೊತೆಯಲ್ಲಿಯೇ ನಾಶವಾಗುತ್ತವೆ. ಆತ್ಮದ ನಿತ್ಯತ್ವ ಜ್ಞಾನವುಳ್ಳ ನಾನು ಏಕೆ ಶೋಕಿಸಲಿ.

---

೧ ನ ಹಿ ದುಃಖೇಷು ಶೋಚಂತಿ ನ ಪ್ರಹೃಷ್ಯಂತಿ ಚರ್ದ್ಧಿಷು।
ಕೃತಪ್ರಜ್ಞಾ ಜ್ಞಾನತೃಪ್ತಾಃ ಕ್ಷಾಂತಾಃ ಸಂತೋ ಮನೀಷಿಣಃ॥
ತ್ವಂ ತು ಪ್ರಾಕೃತಯಾ ಬುದ್ಧ್ಯಾ ಪುರಂದರ ವಿಕತ್ಥಸೇ।
ಯದಾಹಮಿವ ಭಾವೀ ತ್ವಂ ತದಾ ನೈವಂ ವದಿಷ್ಯಸಿ॥ – ೫೯/೨೯,೩೦

೨ ಅನಿತ್ಯಮುಪಲಕ್ಷ್ಯೇದಂ ಕಾಲಪರ್ಯಾಯಮಾತ್ಮನಃ।...
ಅಂತವಂತ ಇಮೇ ದೇಹಾ ಭೂತಾನಾಮಮರಾಧಿಪ।
ತೇನ ಶಕ್ರ ನ ಶೋಚಾಮಿ ನಾಪರಾಧಾದಿದಂ ಮಮ॥ – ೬೦/೫,೬

ನದಿಗಳಿಗೆಲ್ಲ ಸಾಗರವು ಕೊನೆಯ ಆಶ್ರಯವೋ ಹಾಗೆ, ಪ್ರಾಣಿಗಳಿಗೆ ಮರಣವೇ ಕೊನೆಯ ಆಶ್ರಯ. ಇದನ್ನು ಅರಿಯದವರು ಮೋಹಗೊಳ್ಳುವರು.

ಜೀವನದಲ್ಲಿ ಇಷ್ಟಾರ್ಥವು ಸಿಗಲಿ, ಸಿಗದಿರಲಿ, ಜೀವನವು ದೊರೆಯಲಿ, ಮರಣವೇ ಬರಲಿ. ಸುಖದುಃಖ ಫಲಗಳು ಬರಲಿ, ಬಿಡಲಿ ನಾನು ಬಯಸುವುದಿಲ್ಲ, ಬೇಡವೆಂದು ದ್ವೇಷಿಸುವುದೂ ಇಲ್ಲ.[೧]

ಪ್ರಪಂಚದಲ್ಲಿ ಸಾವು ನಿತ್ಯ. ಒಬ್ಬನು ಮತ್ತೊಬ್ಬನನ್ನು ಕೊಂದರೆ ಕೊಂದವನನ್ನೇ ಕೊಂದಂತೆ. ಏಕೆಂದರೆ ನಿಜವಾಗಿಯೂ ಕೊಲ್ಲುವವನು ಕಾಲಪುರುಷನೇ ಹೊರತು ನಾವ್ಯಾರು ಅಲ್ಲ. ಕೊಲ್ಲುತ್ತೇನೆ, ಕೊಂದ, ಎಂಬ ಮಾತುಗಳನ್ನು ಆಡಿದವರು ಇಬ್ಬರೂ ಸತ್ಯ ತಿಳಿಯದವರೇ. ಕಾಲನೇ ವಾಸ್ತವವಾಗಿ ಇವರಿಬ್ಬರಿಗೂ ಕರ್ತಾ. ಆದ್ದರಿಂದ ಕೊಂದು ಅಥವಾ ಗೆದ್ದು ಅದನ್ನು ನಾನೇ ಮಾಡಿದ್ದೇನೆಂಬುವವನು ಕರ್ತನೆನಿಸುವುದಿಲ್ಲ, ಅವನಿಗೂ ಕರ್ತಾ, ಕಾಲನಾಮಕ ಭಗವಂತನೇ.

ಮಹಾವಿದ್ಯಸಂಪನ್ನನಾಗಿಲಿ, ಅಲ್ಪವಿದ್ಯೆಯಾಗಿರಲಿ, ಬಲಿಷ್ಠನಾಗಿರಲಿ, ದುರ್ಬಲನಾಗಿರಲಿ, ಸುಂದರನಾಗಿರಲಿ, ಕುರೂಪಿಯಾಗಿರಲಿ, ಎಲ್ಲರನ್ನೂ ಆಳವಿಲ್ಲದ (ಯಾರಿಗೂ ಯಾರ ಆಳ ಗೊತ್ತಿಲ್ಲವೋ) ಆ ಕಾಲಪುರುಷನು ತನ್ನ ಪ್ರಭಾವದಿಂದ, ತೇಜಸ್ಸಿನಿಂದ ಎಳೆಯುತ್ತಾನೆ, ಸ್ವೀಕರಿಸುತ್ತಾನೆ. ಜಗತ್ತೆಲ್ಲ ಹೀಗೆ ಕಾಲನಾಮಕ ಭಗವಂತನ ವಶವಾಗಿರುವಾಗ, ಇದನ್ನು ತಿಳಿದ ನನಗೇಕೆ ವ್ಯಥೆ?[೨]

ಕಾಲನಿಂದ ಸುಟ್ಟದ್ದನ್ನು ನಂತರ ಜನರು ಸುಡುತ್ತಾರೆ. ಕೊಂದುದನ್ನೇ ನಂತರ ಕೊಲ್ಲುತ್ತಾರೆ. ಮೊದಲೇ ನಷ್ಟವಾದುದನ್ನು ನಾಶ ಮಾಡುತ್ತಾರೆ. ಜನರು ಮೊದಲೇ ನಿಶ್ಚಿತವಾದುದೇ (ಕಾಲನಿಂದ) ಜನರು ಪಡೆದುಕೊಳ್ಳುತ್ತಾರೆ. ಹೀಗಾಗಿ ಎಲ್ಲವೂ ಕಾಲನಾಮಕ ಪರಮಾತ್ಮನ ಆಶಾನುಗುಣವಾಗಿಯೇ ನಡೆಯುತ್ತದೆ. ಮನುಷ್ಯನ ಕರ್ತೃತ್ವವಿಲ್ಲದೆ (ಅವನು ನಿಮಿತ್ತ ಮಾತ್ರ). ಸಂಸಾರದ ಕೊನೆ ನನಗೆ ಕಾಣುತ್ತಿಲ್ಲ, ವಿಧಿಯ ಅಂತ್ಯ ಎಲ್ಲಿದೆ? ಯಾವುದು? ಕಾಣುವುದೇ ಇಲ್ಲ, ಎಷ್ಟೇ ಯೋಚಿಸಿದರೂ.

ಒಂದು ವೇಳೆ ನಾನು ಕಾಣುವಾಗ ಪ್ರಾಣಿಗಳನ್ನು ಕೊಂದಿದಲ್ಲಿ ನನಗೆ ಹರ್ಷ,

---

೧ ಅರ್ಥಸಿದ್ಧಿಮನರ್ಥಂ ಚ ಜೀವಿತಂ ಮರಣಂ ತಥಾ ।
ಸುಖದುಃಖಫಲಂ ಚೈವ ನ ದ್ವೇಷ್ಮಿ ನ ಚ ಕಾಮಯೇ ॥ - ೬೦/೧೩

೨ ಮಹಾವಿದ್ಯೋಽಲ್ಪವಿದ್ಯಶ್ಚ ಬಲವಾನ್ ದುರ್ಬಲಶ್ಚ ಯಃ ।
ದರ್ಶನೀಯೋ ವಿರೂಪಶ್ಚ ಸುಭಗೋ ದುರ್ಭಗಶ್ಚ ಯಃ ॥
ಸರ್ವಂ ಕಾಲಃ ಸಮಾದತ್ತೇ ಗಂಭೀರಃ ಸ್ವೇನ ತೇಜಸಾ ।
ತಸ್ಮಿನ್ ಕಾಲವಶಂ ಪ್ರಾಪ್ತೇ ಕಾ ವ್ಯಥಾ ಮೇ ವಿಜಾನತಃ ॥ - ೬೦/೧೮,೧೯

ದರ್ಪವಾಗುತ್ತಿತ್ತು. ಆತನ ಮೇಲೆ ಕ್ರೋಧ ಬರುತ್ತಿತ್ತು. ಆದರೆ ನನಗೆ ಕಾಣದೇನೇ ವ್ಯಾಪಾರ ನಡೆಯುವಾಗ ಕ್ರೋಧ ಹೇಗೆ ತೋರಲಿ?

ನನ್ನ ಕತ್ತೆ ರೂಪಧಾರಣ, ನನ್ನ ಧಾನ್ಯದ ಹೊಟ್ಟಿನ ಆಹಾರದ ಬಗ್ಗೆ ನನ್ನ ಬಳಿ ಬಂದು ಹಂಗಿಸುತ್ತಿದ್ದೀಯಾ(ಇದು ಸರಿಯಾ?). ನನ್ನನ್ನು ಲಘುವಾಗಿ ಭಾವಿಸಬೇಡ. ನಾನು ಬಯಸಿದರೆ ಅನೇಕ ರೂಪಗಳನ್ನು ಸ್ವೀಕರಿಸಿ ನೀನೇ ಪಲಾಯನ ಮಾಡುವಂತಹ ಕ್ರೂರರೂಪ ತೆಗೆದುಕೊಳ್ಳಬಲ್ಲೆ. ಕಾಲವೇ ವಿಶ್ವದ ಎಲ್ಲ ಆಗುಹೋಗುಗಳನ್ನು ನಿರ್ವಹಿಸುತ್ತದೆ. ಆದ್ದರಿಂದ ವ್ಯರ್ಥಪೌರುಷ ತೋರಿಸಬೇಡ.

ನನ್ನ ಹಿಂದಿನ ವೈಭವವನ್ನು ಈಗಿನ ಶೋಚನೀಯ ವ್ಯವಸ್ಥೆಯನ್ನು ಹೋಲಿಸುತ್ತಿದ್ದೀಯಾ. ನಿಜ, ಅದ್ಯಾವುದೂ ನಮ್ಮ ಅಧೀನದಲ್ಲಿಲ್ಲ. ನೀನೂ ಹಾಗೇ ಭಾವಿಸು. ನೀನು ಬಾಲಕನಂತೆ ಹಿಂದೆ ಹಾಗೂ ಈಗಲೂ ಇದ್ದೀಯಾ. ಮತ್ತೆ ಚೆನ್ನಾಗಿ ಯೋಚಿಸಿ ಬುದ್ಧಿಯನ್ನು ಸರಿಪಡಿಸಿಕೋ. ಹಿಂದೆ ದೇವಮನುಷ್ಯಗಂಧರ್ವಯಕ್ಷರಾಕ್ಷಸರೆಲ್ಲ ನನ್ನ ಅಧೀನರಿದ್ದರು. ನಾನಿರುವ ದಿಕ್ಕಿಗೆ ಅವರೆಲ್ಲ ನಮಸ್ಕರಿಸುತ್ತಿದ್ದರು. ಅದೆಲ್ಲ ಕಳೆದುಕೊಂಡುದುದಕ್ಕೆ ಶೋಕಿಸುವುದಿಲ್ಲ. ಎಲ್ಲರಿಗೂ ನಿಯಾಮಕನಾದ ಕಾಲಪುರುಷನ ಅಧೀನವಾಗಿಯೇ ನಾನಿರುತ್ತೇನೆ. ಇದು ನನ್ನ ನಿಶ್ಚಿತ ಬುದ್ಧಿಯೂ ಹೌದು.[೧]

---

೧ ದಗ್ಧಮೇವಾನುದಹತಿ ಹತಮೇವಾನುಹಂತಿ ಚ।
ನಶ್ಯತೇ ನಷ್ಟಮೇವಾಗ್ರೇ ಲಬ್ಧವ್ಯಂ ಲಭತೇ ನರಃ॥
ನಾಸ್ಯ ದ್ವೀಪಃ ಕುತಃ ಪಾರಂ ನಾವಾರಃ ಸಂಪ್ರದೃಶ್ಯತೇ।
ನಾಂತಮಸ್ಯ ಪ್ರಪಶ್ಯಾಮಿ ವಿಧೇರ್ದಿವ್ಯಸ್ಯ ಚಿಂತಯನ್ ॥
ಯದಿ ಮೇ ಪಶ್ಯತಃ ಕಾಲೋ ಭೂತಾನಿ ನ ವಿನಾಶಯೇತ್ ।
ಸ್ಯಾನ್ಮೇ ಹರ್ಷಶ್ಚ ದರ್ಪಶ್ಚ ಕ್ರೋಧಶ್ಚೈವ ಶಚೀಪತೇ॥
ತುಷಭಕ್ಷಂ ತು ಮಾಂ ಜ್ಞಾತ್ವಾ ಪ್ರವಿವಿಕ್ತಜನೇ ಗೃಹೇ।
ಭಿಭ್ರತಂ ಗಾರ್ದಭಂ ರೂಪಮಾದಿಶ್ಯ ಪರಿಗರ್ಹಸೇ॥
ಇಚ್ಛನ್ನಹಂ ವಿಕುರ್ಯಾಂ ಹಿ ರೂಪಾಣಿ ಬಹುಧಾತ್ಮನಃ।
ವಿಭೀಷಣಾನಿ ಯಾನೀಕ್ಷ್ಯ ಪಲಾಯೇಥಾಸ್ತ್ವಮೇವ ಮೇ॥
ಕಾಲಃ ಸರ್ವಂ ಸಮಾದತ್ತೇ ಕಾಲಃ ಸರ್ವಂ ಪ್ರಯಚ್ಛತಿ।
ಕಾಲೇನ ವಿಧೃತಂ ಸರ್ವಂ ಮಾ ಕೃಥಾಃ ಶಕ್ರ ಪೌರುಷಮ್ ॥
ಪುರಾ ಸರ್ವಂ ಪ್ರವ್ಯಥತೇ ಮಯಿ ಕ್ರುದ್ಧೇ ಪುರಂದರ।
ಅವೈಮಿ ತ್ವಸ್ಯ ಲೋಕಸ್ಯ ಧರ್ಮಂ ಶಕ್ರ ಸನಾತನಮ್ ॥
ತ್ವಮಪ್ಯೇವಮವೇಕ್ಷಸ್ವ ಮಾತ್ಮನಾ ವಿಸ್ಮಯಂ ಗಮಃ।
ಪ್ರಭವಶ್ಚ ಪ್ರಭಾವಶ್ಚ ನಾತ್ಮಸಂಸ್ಥಃ ಕದಾಚನ॥
ಕೌಮಾರಮೇವ ತೇ ಚಿತ್ತಂ ತಥೈವಾದ್ಯ ಯಥಾ ಪುರಾ।
ಸಮವೇಕ್ಷಸ್ವ ಮಘವನ್ ಬುದ್ಧಿಂ ವಿಂದಸ್ವ ನೈಷ್ಠಿಕೀಮ್ ॥

**ಸತ್ಕುಲಪ್ರಸೂತನಾದ ಸುಂದರ, ಪ್ರತಾಪಶಾಲಿಯೂ ಆಗಿಯೂ ದುಃಖದಲ್ಲಿಯೇ ಇರುವುದು ಕಾಲದ ಪ್ರಭಾವ. ದುಷ್ಕುಲದಲ್ಲಿ ಜನಿಸಿದರೂ, ಮೂರ್ಖನಾದರೂ ಹೀನಜಾತಿಯಲ್ಲಿ ಜನಿಸಿದರೂ, ಅಮಾತ್ಯರೊಡನೆ ಸುಖವಾಗಿರುವುದೂ ಕಾಲದ ಸಂಕಲ್ಪವೇ. ಮಹಾಸುಂದರಿಯಾಗಿದ್ದರೂ, ಒಬ್ಬಳು ದೌರ್ಭಾಗ್ಯದಿಂದಾಗಿ ದುಃಖಿಸುತ್ತಾಳೆ. ಕುರೂಪಿಯಾಗಿದ್ದರೂ ಸುಂದರಿಯಂತೆ ಮೆರೆಯುತ್ತಾಳೆ.**[೧]

ನಮ್ಮ ಇಬ್ಬರ ಪರಿಸ್ಥಿತಿಯಲ್ಲೂ ಕಾಲದ ಆಟವೇ. ನಂದು, ನಿಂದೂ ಯಾವ ಅಪರಾಧವಾಗಲಿ, ಪೌರುಷವಾಗಲಿ ಇಲ್ಲ. ನಮ್ಮ ಐಶ್ವರ್ಯಾದಿಗಳಾವು ಶಾಶ್ವತವಲ್ಲ. ನಾನು ಮಾಡಿದ ಕರ್ಮದಿಂದಲೂ ಈ ದುಃಸ್ಥಿತಿ ಬಂದಿಲ್ಲ.

ದಾನವೇಶ್ವರರಿಂದ ಗೌರವಿಸಲ್ಪಟ್ಟ, ಗರ್ಜಿಸುತ್ತಿದ್ದ, ಶತ್ರುಗಳನ್ನು ತಾಪಗೊಳಿಸುತ್ತಿದ್ದ ನನ್ನ ಮೇಲೆ ಕಾಲ ಆಕ್ರಮಿಸಿರುವಾಗ ಯಾರನ್ನು ಕಾಲ ಬಿಡುತ್ತದೆ? ಹಿಂದೆಲ್ಲ ದ್ವಾದಶಆದಿತ್ಯರ ತೇಜಸ್ಸನ್ನೆಲ್ಲವನ್ನು ನಾನೊಬ್ಬನೇ ನುಂಗಿ ಹಾಕುತ್ತಿದ್ದೆ. ಭೂಮಿಯಲ್ಲಿನ ನೀರನ್ನು ನನ್ನ ಕಿರಣಗಳ ಮೂಲಕ ಆದಿತ್ಯರೂಪನಾಗಿ ಮೇಲೆತ್ತುತ್ತಿದೆ. ಮಳೆಯನ್ನೂ ಸುರಿಸುತ್ತಿದ್ದೆ. ತ್ರಿಲೋಕಗಳಿಗೆ ಶಾಖವನ್ನು ಕೊಡುತ್ತಿದ್ದೆ ಬೆಳಕನ್ನು ನೀಡುತ್ತಿದ್ದೆ. ಪ್ರಜೆಗಳನ್ನು ಕಾಪಾಡುತ್ತಿದ್ದೆ. ಸತ್ಪಾತ್ರರಿಗೆ ದಾನ ಮಾಡುತ್ತಿದ್ದೆ. ಆದರೆ ಈಗ ಆ ಪ್ರಭುತ್ವ ಇಲ್ಲವಾಗಿದೆ. ನಾನು ಈಗ ಕಾಲನ ಸೈನ್ಯಕ್ಕೆ ವಶವಾಗಿದ್ದೇನೆ. ನನ್ನ ಐಶ್ವರ್ಯವೆಲ್ಲ ನಶಿಸಿದೆ, ನಾನು ಕಳೆಗುಂದಿದ್ದೇನೆ. ನನ್ನ ಈಗಿನ ಪರಿಸ್ಥಿತಿಗೆ ನಾನಾಗಲೀ, ನಿನ್ನ ವೃದ್ಧಿಗೆ ನೀನಾಗಲೀ ಕರ್ತಾ(ಕಾರಣ)ಅಲ್ಲ. ಬೇರಾರೂ ಅಲ್ಲ. ಲೋಕಗಳೆಲ್ಲ ಕಾಲನಾಮಕಪರಮಾತ್ಮನ ಸಂಕಲ್ಪದಂತೆ ಭೋಗಿಸಲ್ಪಡುತ್ತದೆ, ನಡೆಯುತ್ತದೆ. ಭೋಕ್ತಾ ಕಾಲನೇ ಹೊರತು ಯಾರೂ ಅಲ್ಲ.[೨]

---

ದೇವಾ ಮನುಷ್ಯಾಃ ಪಿತರೋ ಗಂಧರ್ವೋರಗರಾಕ್ಷಸಾಃ।
ಆಸನ್ ಸರ್ವೇ ಮಮ ವಶೇ ತತ್ ಸರ್ವಂ ವೇತ್ಥ ವಾಸವ॥
ನಮಸ್ತಸ್ಯೈ ದಿಶೇಽಪ್ಯಸ್ತು ಯಸ್ಯಾಂ ವೈರೋಚನೋ ಬಲಿಃ।
ಇತಿ ಮಾಮಭ್ಯಪದ್ಯಂತ ಬುದ್ಧಿಮಾತ್ಸರ್ಯಮೋಹಿತಾಃ॥
ನಾಹಂ ತದನುಶೋಚಾಮಿ ನಾತ್ಮಭ್ರಂಶಂ ಶಚೀಪತೇ।
ಏವಂ ಮೇ ನಿಶ್ಚಿತಾ ಬುದ್ಧಿಃ ಶಾಸ್ತುಸ್ತಿಷ್ಠಾಮ್ಯಹಂ ವಶೇ॥ -೬೦/೨೦-೩೧
೧ ನೈದಸ್ಮತ್ಕೃತಂ ಶಕ್ರ ನೈತಚ್ಛಕ್ರ ತ್ವಯಾ ಕೃತಮ್।
ಯತ್ತ್ವಮೇವಂಗತೋ ವಜ್ರಿನ್ಯದ್ವಾಪ್ಯೇವಂ ಗತಾ ವಯಮ್॥
ನ ಕರ್ಮ ತವ ನಾನ್ಯೇಷಾಂ ಕುತೋ ಮಮ ಶತಕ್ರತೋ।
ಋದ್ಧಿರ್ವಾಪ್ಯಥ ವಾ ನರ್ದ್ಧಿಃ ಪರ್ಯಾಯಕೃತಮೇವ ತತ್॥ - ೬೦/೩೫,೩೬
೨ ಏತಚ್ಚೈವಂ ನ ಚೇತ್ ಕಾಲೋ ಮಾಮಕ್ರಮ್ಯ ಸ್ಥಿತೋ ಭವೇತ್।
ಪಾತಯೇಯಮಹಂ ತ್ವಾದ್ಯ ಸವಜ್ರಮಪಿ ಮುಷ್ಟಿನಾ॥
ನ ತು ವಿಕ್ರಮಕಾಲೋಽಯಂ ಕ್ಷಮಾಕಾಲೋಽಯಮಾಗತಃ।

ಕಾಲದ ಒಳಪರಿಮಾಣಗಳೂ, ಅವುಗಳಲ್ಲಿ ನಡೆಯುವ ಮಾನುಷಪ್ರವೃತ್ತಿಗಳೂ (ಶೈಶವ, ಯೌವನ, ವೃದ್ಧಾಪ್ಯ) ಎಲ್ಲ ಕಾಲಾಧೀನವೇ. ಕಾಲನಾಮಕ ಬ್ರಹ್ಮವಸ್ತು ಮಹಾಗಂಭೀರವೂ, ಆದ್ಯಂತಶೂನ್ಯವೂ, ನಾಶರಹಿತವೂ, ಉತ್ತಮವೂ ಎಂದು ಜ್ಞಾನಿಗಳು ಹೇಳುತ್ತಾರೆ. ಅದು ಅನಂತಜಲರಾಶಿ, ಮಹಾಸಾಗರದಂತೆ ಗಹನವಾಗಿದೆ.[೧]

ಕಾಲನನ್ನು ಅಗ್ನಿ, ಪ್ರಜಾಪತಿ, ಋತು, ಮಾಸ, ಪಕ್ಷ, ದಿನ, ಪೂರ್ವಾಹ್ನ, ಅಪರಾಹ್ನ, ಮಧ್ಯಾಹ್ನ, ಮುಹೂರ್ತ ಎಂದು ಅನೇಕರು ಅನೇಕ ರೀತಿಯಾಗಿ ಕರೆಯುತ್ತಾರೆ. ಆದರೆ ಜಗತ್ತೆಲ್ಲ ಯಾರ ಅಧೀನದಲ್ಲಿದೆಯೋ, ಅದೇ ಕಾಲ ಎಂದೂ ಅನ್ನುತ್ತಾರೆ.[೨]

ಎಲೈ ಇಂದ್ರನೇ! ನಿನ್ನಂತಹ ಸಾವಿರಾರು ಬಲವೀರ್ಯಸಂಪನ್ನರಾದ ಇಂದ್ರರು ಆಗಿ ಹೋಗಿದ್ದಾರೆ. ನಿನ್ನನ್ನು ನೀನು ಅತಿಬಲನೆಂದು ಭಾವಿಸಿದ್ದೀಯಾ. ಕಾಲ ಬಂದಾಗ ನಿನ್ನನ್ನೂ ಅದು ಶಮನ ಮಾಡುತ್ತದೆ. ಆದ್ದರಿಂದ ನಾನಾಗಲೀ, ನೀನಾಗಲೀ ಕಾಲವನ್ನು ಮೀರಲು ಸಾಧ್ಯವಿಲ್ಲ. ಹಿಂದಿನವರು ಯಾರೂ ಮೀರಿಲ್ಲ. ಯಾವ ಈ ರಾಜ್ಯಸಂಪತ್ತನ್ನು ಪಡೆದಿರುವ ನೀನು ನಿನ್ನಲ್ಲೇ ಸ್ಥಿರವಾಗಿ ಉಳಿಯುವದೆಂದು ಭಾವಿಸಿದ್ದೀಯಾ, ಅದು ಸುಳ್ಳು. ಆಕೆ ಚಂಚಲೆ. ಎಲ್ಲೂ ಸ್ಥಿರವಾಗಿರುವುದಿಲ್ಲ. ಇಂತಹ ಸಂಪತ್ತು ಹಿಂದೆ ಸಾವಿರಾರು ಇಂದ್ರರ ಬಳಿ ಇತ್ತು. ಚಂಚಲಳಾದ ಆ ರಾಜ್ಯಲಕ್ಷ್ಮೀ ನನ್ನ ಬಳಿಯೂ ಇದ್ದಳು. ಈಗ ನನ್ನನ್ನು ಬಿಟ್ಟು ನಿನ್ನನ್ನು ಸೇರಿದ್ದಾಳೆ.

---

ಕಾಲಃ ಸ್ಥಾಪಯತೇ ಸರ್ವಂ ಕಾಲಃ ಪಚತಿ ವೈ ತಥಾ ॥
ಮಾಂ ಚೇದಭ್ಯಾಗತಃ ಕಾಲೋ ದಾನವೇಶ್ವರಮೂರ್ಜಿತಮ್ ।
ಗರ್ಜಂತಂ ಪ್ರತಪಂತಂ ಚ ಕಮನ್ಯಂ ನಾಗಮಿಷ್ಯತಿ ॥
ದ್ವಾದಶಾನಾಂ ಹಿ ಭವತಾಮಾದಿತ್ಯಾನಾಂ ಮಹಾತ್ಮನಾಮ್ ।
ತೇಜಾಂಸ್ಯೇಕೇನ ಸರ್ವೇಷಾಂ ದೇವರಾಜ ಹೃತಾನಿ ಮೇ ॥
ಅಹಮೇವೋದ್ವಹಾಮ್ಯಾಪೋ ವಿಸೃಜಾಮಿ ಚ ವಾಸವ ।
ತಪಾಮಿ ಚೈವ ತ್ರೈಲೋಕ್ಯಂ ವಿದ್ಯೋತಾಮ್ಯಹಮೇವ ಚ ॥
ಸಂರಕ್ಷಾಮಿ ವಿಲುಂಪಾಮಿ ದದಾಮ್ಯಹಮಥಾದದೇ ।
ಸಂಯಚ್ಛಾಮಿ ನಿಯಚ್ಛಾಮಿ ಲೋಕೇಷು ಪ್ರಭುರೀಶ್ವರಃ ॥
ತದದ್ಯ ವಿನಿವೃತ್ತಂ ಮೇ ಪ್ರಭುತ್ವಮಮರಾಧಿಪ ।
ಕಾಲಸೈನ್ಯಾವಗಾಢಸ್ಯ ಸರ್ವಂ ನ ಪ್ರತಿಭಾತಿ ಮೇ ॥
ನಾಹಂ ಕರ್ತಾ ನ ಚೈವ ತ್ವಂ ನಾನ್ಯಃ ಕರ್ತಾ ಶಚೀಪತೇ ।
ಪರ್ಯಾಯೇಣ ಹಿ ಭುಜ್ಯಂತೇ ಲೋಕಾಃ ಶಕ್ರ ಯದೃಚ್ಛಯಾ ॥ - ೬೦/೩೮-೪೫

೧ ಗಂಭೀರಂ ಗಹನಂ ಬ್ರಹ್ಮ ಮಹತ್ತೋಯಾರ್ಣವಂ ಯಥಾ ।
ಅನಾದಿನಿಧನಂ ಚಾಹುರಕ್ಷರಂ ಪರಮೇವ ಚ ॥ -೬೦/೪೮

೨ ಆಹುಶ್ಚೈನಂ ಕೇಚಿದಗ್ನಿಂ ಕೇಚಿದಾಹುಃ ಪ್ರಜಾಪತಿಮ್ ।
ಋತುಮಾಸಾರ್ಧಮಾಸಾಂಶ್ಚ ದಿವಸಾಂಸ್ತು ಕ್ಷಣಾಂಸ್ತಥಾ ॥ - ೬೦/೫೩

ತ್ವಾಮಪ್ಯತಿಬಲಂ ಶಕ್ರಂ ದೇವರಾಜಂ ಬಲೋತ್ಕಟಮ್ ।
ಪ್ರಾಪ್ತೇ ಕಾಲೇ ಮಹಾವೀರ್ಯಃ ಕಾಲಃ ಸಂಶಯಮಿಷ್ಯತಿ ॥
ಸ್ಥಿತಾ ಹೀಂದ್ರಸಹಸ್ರೇಷು ತ್ವದ್ವಿಶಿಷ್ಟತಮೇಷ್ವಿಯಮ್ ।
ಮಾಂ ಚ ಲೋಲಾ ಪರಿತ್ಯಜ್ಯ ತ್ವಾಮಗಾದ್ ವಿಬುಧಾಧಿಪ ॥
ಮೈವಂ ಶಕ್ರ ಪುನಃ ಕಾರ್ಷೀಃ ಶಾಂತೋ ಭವಿತುಮರ್ಹಸಿ ।
ತ್ವಾಮಪ್ಯೇವಂಗತಂ ತ್ಯಕ್ತ್ವಾ ಕ್ಷಿಪ್ರಮನ್ಯಂ ಗಮಿಷ್ಯತಿ ॥ - ೬೦/೫೫,೫೮,೫೯

ಆದ್ದರಿಂದ ಇನ್ನು ಮೇಲಾದರೂ ಗರ್ವದಿಂದ ವರ್ತಿಸದೆ ಶಾಂತಿಯಿಂದ ಇರುವುದು ನಿನಗೆ ಯೋಗ್ಯ. ಇಲ್ಲದಿದ್ದರೆ, ಆಕೆ ನಿನ್ನನ್ನು ಬಿಟ್ಟು ಬೇಗನೇ ಬೇರೆಡೆಗೆ ಹೋಗುತ್ತಾಳೆ (ಎಚ್ಚರವಿರಲಿ).

## ಇಂದ್ರನ ಮೇಲೆ ಶ್ರಿಲಕ್ಷ್ಮಿಯ ಅನುಗ್ರಹ

ಮಹಾತ್ಮನಾದ ಬಲಿಯ ಪ್ರತಿಕ್ರಿಯೆ ಮುಗಿಯುತ್ತಿರಲು ಬಲಿಯ ದೇಹದಿಂದ ಹೊರಬರುತ್ತಿದ್ದ ದಿವ್ಯಕಾಂತಿಯ ಶ್ರೀದೇವಿಯನ್ನು ನೋಡಿ ಆಶ್ಚರ್ಯಚಕಿತ ದೃಷ್ಟಿಯಿಂದ ಬಲಿಯನ್ನು ಕೇಳಿದನು.

ಎಲೈ ಬಲಿಯೇ! ನಿನ್ನ ಶರೀರದಿಂದ ಹೊರಹೋಗುತ್ತಿರುವ ದಿವ್ಯಕಾಂತಿಯಿಂದ ಬೆಳಗುತ್ತಿರುವ ತೋಳ್ಬಳೆಯುಳ್ಳ ಈ ಸ್ತ್ರೀ ಯಾರು?[೧]

ಅದಕ್ಕೆ ಬಲಿಯು 'ಈಕೆ ಯಾರೆಂದು ನಾನರಿಯೆ. ಅವಳು ಅಸುರಸ್ತ್ರೀಯೋ, ದೇವತಾಸ್ತ್ರೀಯೋ, ಮನುಷ್ಯಳೋ, ನನಗೆ ಗೊತ್ತಿಲ್ಲ. ಬೇಕಾದರೆ ನೀನೇ ಕೇಳು. ನಿನ್ನ ಇಚ್ಛೆಯಂತೆ ಮಾಡು.[೨]

ಬಲಿಯ ಮಾತಿನಂತೆ ಇಂದ್ರನು 'ಬಲಿಯ ಶರೀರದಿಂದ ಹೊರಹೋಗುತ್ತಿರುವ ನೀನು ಯಾರೆಂದು ತಿಳಿಯುತ್ತಿಲ್ಲ. ನಿನ್ನ ಹೆಸರನ್ನು ಹೇಳು. ಮಹಾತೇಜಸ್ವಿನಿಯಾದ ನೀನು ದೈತ್ಯೇಶ್ವರನಾದ ಬಲಿಯನ್ನು ಬಿಟ್ಟು ನನ್ನ ಬಳಿಯಲ್ಲಿ(ನಿಲ್ಲಲು) ಕಾರಣವೇನು? ನೀನಾರು?

ಇಂದ್ರನ ಮಾತಿಗೆ ಉತ್ತರಿಸುತ್ತಾಳೆ, ಶ್ರೀದೇವಿ–

'ನನ್ನನ್ನು ಈ ವಿರೋಚನನಾಗಲೀ, ಬಲಿಯಾಗಲೀ ತಿಳಿದಿಲ್ಲ. ನನ್ನನ್ನು ದುಸಹಾ(ದುಸ್ಸಹಾ), ವಿಧಿತ್ಸಾ ಎಂದೂ ಕರೆಯುತ್ತಾರೆ.[೩] ನನ್ನನ್ನು ಭೂತಿ, ಲಕ್ಷ್ಮೀ, ಶ್ರೀ ಎಂದು ಹೇಳುತ್ತಾರೆ

---

೧ ಬಲೇ ಕೇಯಮಪಕ್ರಾಂತಾ ರೋಚಮಾನಾ ಶಿಖಂಡಿನೀ ।
ತ್ವತ್ತಃ ಸ್ಥಿತಾ ಸಕೇಯೂರಾ ದೀಪ್ಯಮಾನಾ ಸ್ವತೇಜಸಾ ॥ - ೬೧/೩

೨ ನ ಹೀಮಾಮಾಸುರೀಂ ವೇದ್ಮಿ ನ ದೈವೀಂ ನ ಚ ಮಾನುಷೀಮ್ ।
ತ್ವಮೇವೈನಾಂ ಪೃಚ್ಛ ವಾ ಯಥೇಷ್ಟಂ ಕುರು ವಾಸವ ॥ - ೬೧/೪

೩ ನ ಮಾ ವಿರೋಚನೋ ವೇದ ನ ಮಾ ವೈರೋಚನೋ ಬಲಿಃ ।
ಆಹುರ್ಮಾಂ ದುಃಸಹೇತ್ಯೇವಂ ವಿಧಿತ್ಸೇತಿ ಚ ಮಾಂ ವಿದುಃ ॥ - ೬೧/೭

(ಜ್ಞಾನಿಗಳು). ಇಂದ್ರನೇ ನೀನೂ ನನ್ನನ್ನು ತಿಳಿದಿಲ್ಲ, ಎಲ್ಲ ದೇವತೆಗಳೂ ಕೂಡಾ ತಿಳಿದಿಲ್ಲ[೧](ಪೂರ್ಣವಾಗಿ).

ಆದಕ್ಕೆ ಇಂದ್ರನು – 'ಬಹಳ ಕಾಲದಿಂದ ಬಲಿಯ ಶರೀರದಲ್ಲಿದ್ದ ನೀನು ಈಗ ನನ್ನ ಸಲುವಾಗಿ ಇವನನ್ನು (ಬಲಿಯನ್ನು) ಬಿಟ್ಟು ಬಂದಿರುವೆಯಾ? ಅಥವಾ ಬಲಿಯ ಹಿತಕ್ಕಾಗಿ ಅವನನ್ನು ತ್ಯಜಿಸಿ ಬಂದಿರುವೆಯಾ? (ನನ್ನಲ್ಲಿಗೆ ಬರಲು ಕಾರಣವೇನು)

ಇಂದ್ರನ ಮಾತಿಗೆ ಉತ್ತರಿಸುತ್ತಾ ಲಕ್ಷ್ಮಿಯು ಧಾತನಾಗಲೀ, ವಿಧಾತನಾಗಲೀ ನನ್ನನ್ನು ನಿಯಮಿಸುವುದಿಲ್ಲ, ಕಾಲವೇ ನನ್ನನ್ನು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಸುತ್ತಿಸುತ್ತದೆ. ಆದ್ದರಿಂದ ಇಂದ್ರನೇ ಬಲಿಯನ್ನು ಅವಮಾನಿಸಬೇಡ.[೨]

ಶಕ್ರ – 'ತಾಯೇ! ಬಲಿಯನ್ನು ನೀನು ಈಗ ಬಿಡಲು ಕಾರಣವೇನು? ಮುಂದೆ ನನ್ನನ್ನು ಬಿಡುವುದಿಲ್ಲವೇ? ನೀನು ನನ್ನನ್ನು ಬಿಡದೆ ಇರಲು ಎಂದರೆ ನನ್ನನ್ನಲ್ಲಿ ಸ್ಥಿರವಾಗಿರಲು ಉಪಾಯವನ್ನು ತಿಳಿಸು.

ಶ್ರೀದೇವಿ – ಇಂದ್ರನೇ! ನಾನು ಸತ್ಯ, ದಾನ, ವ್ರತ, ತಪಸ್ಸು ಪರಾಕ್ರಮ, ಧರ್ಮಗಳಿರುವಲ್ಲಿ ಸ್ಥಿರವಾಗಿರುವೆನು. ಈಗ ಬಲಿರಾಜನು ಇವುಗಳಿಂದ ವಿಮುಖನಾಗಿದ್ದಾನೆ.[೩] ಹಿಂದೆ ಇವನು ಬ್ರಾಹ್ಮಣಪ್ರಿಯನೂ (ಬ್ರಾಹ್ಮಣರಲ್ಲಿ ಭಕ್ತಿಯುಳ್ಳವ), ಸತ್ಯವಾದಿಯೂ, ಜಿತೇಂದ್ರಿಯನೂ ಆಗಿದ್ದ. ನಂತರ ಅವನಿಗೆ ಅವರ ಬಗ್ಗೆ ಅಸೂಯೆ ಉಂಟಾಯಿತು. ಎಂಜಲು ಕೈಯಿಂದ ತುಪ್ಪವನ್ನು (ಹೋಮದ್ರವ್ಯ) ಮುಟ್ಟಿದನು. ಹಿಂದೆ ಯಜ್ಞಶೀಲನಾಗಿದ್ದ ಬಲಿ ಕ್ರಮೇಣ ಅಜ್ಞಾನಿಯಾಗಿ, ಮಿಥ್ಯಾಜ್ಞಾನಿಯಾಗಿ (ಕಾಲಪೀಡಿತನಾಗಿ) ನನ್ನನ್ನು ಕುರಿತು ಯಜ್ಞ ಮಾಡಿರೆಂದು ಜನರಿಗೆ ಆದೇಶ ನೀಡಿದನು (ತಾನೇ ಯಜ್ಞಫಲಭೋಕ್ತೃ ಎಂದು ಭ್ರಮಿಸಿ). ಆದ್ದರಿಂದ ನಾನು ಅವನನ್ನು ಬಿಟ್ಟು ನಿನ್ನಲ್ಲಿ ಇನ್ನು ಮುಂದೆ ವಾಸಿಸುವೆನು. ಎಚ್ಚರ ತಪ್ಪದೆ ತಪಸ್ಸಿನಿಂದ, ಪರಾಕ್ರಮದಿಂದ ನನ್ನನ್ನು ದೃಢವಾಗಿ ನಿನ್ನಲ್ಲಿ ನಿಲ್ಲಿಸಿಕೊಳ್ಳಬಹುದು (ನೀನು ಪ್ರಮತ್ತನಾದಲ್ಲಿ ಬಲಿಯಂತೆ ನಿನ್ನನ್ನು ಬಿಟ್ಟು ಹೋಗುವೆ).

---

೧ ಭೂತಿರ್ಲಕ್ಷ್ಮೀತಿ ಮಾಮಾಹುಃ ಶ್ರೀರಿತ್ಯೇವಂ ಚ ವಾಸವ ।
ತ್ವಂ ಮಾಂ ಶಕ್ರ ನ ಜಾನೀಷೇ ಸರ್ವೇ ದೇವಾ ನ ಮಾಂ ವಿದುಃ ॥ – ೬೧/೮

೨ ನ ಧಾತಾ ನ ವಿಧಾತಾ ಮಾಂ ವಿದಧಾತಿ ಕಥಂಚನ ।
ಕಾಲಸ್ತು ಶಕ್ರ ಪರ್ಯಾಯಾನ್ಮೈನಂ ಶಕ್ರಾವಮನ್ಯಥಾ ॥ – ೬೧/೧೦

೩. ಸತ್ಯೇ ಸ್ಥಿತಾಸ್ಮಿ ದಾನೇ ಚ ವ್ರತೇ ತಪಸಿ ಚೈವ ಹಿ ।
ಪರಾಕ್ರಮೇ ಚ ಧರ್ಮೇ ಚ ಪರಾಚೀನಸ್ತತೋ ಬಲಿಃ ॥
ಬ್ರಹ್ಮಣ್ಯೋಽಯಂ ಸದಾ ಭೂತ್ವಾ ಸತ್ಯವಾದೀ ಜಿತೇಂದ್ರಿಯಃ ।
ಅಭ್ಯಸೂಯದ್ ಬ್ರಾಹ್ಮಣಾನ್ ವೈ ಉಚ್ಛಿಷ್ಟಶ್ಚಾಸ್ಪೃಶದ್ ಘೃತಮ್ ॥
ಯಜ್ಞಶೀಲಃ ಪುರಾ ಭೂತ್ವಾ ಮಾಮೇವ ಯಜತೇತ್ಯಯಮ್ ।
ಪ್ರೋವಾಚ ಲೋಕಾನ್ ಮೂಢಾತ್ಮಾ ಕಾಲೇನೋಪನಿಪೀಡಿತಃ ॥ – ೬೧/೧೨-೧೪

ಇಂದ್ರ – ಕಮಲಾಲಯೇ! ಸರ್ವಭೂತ(ಪ್ರಾಣಿಗಳಲ್ಲಿ) ದೇವಮನುಷ್ಯರಲ್ಲಿ ನಿನ್ನನ್ನು ಒಬ್ಬನು ಕೂಡಾ ಸ್ಥಿರವಾಗಿ ನಿಲ್ಲಿಸಿಕೊಂಡಿಲ್ಲವೆಂದು ಭಾವಿಸುತ್ತೇನೆ.

ಶ್ರೀ – ಇಂದ್ರನೇ! ನಿಜ, ನನ್ನನ್ನು ಸ್ಥಿರವಾಗಿ ದೇವ, ಗಂಧರ್ವ, ಅಸುರ, ರಾಕ್ಷಸ ಯಾರೊಬ್ಬರೂ ಸ್ಥಿರವಾಗಿ ನಿಲ್ಲಿಸಿಕೊಂಡಿಲ್ಲ(ನನ್ನ ನಿಬಂಧನೆಯನ್ನು ಯಾರೂ ಪಾಲಿಸಿಲ್ಲ).

ಇಂದ್ರ – ನನ್ನಲ್ಲಿ ನೀನು ಸ್ಥಿರವಾಗಿ ನಿಲ್ಲಲು ನಾನು ಹೇಗೆ ಇರಬೇಕು? ತಿಳಿಸು. ನಾನು ನಿನ್ನ ಮಾತನ್ನು ಸತ್ಯ ಮಾಡುವೆ. ನೀನು ಸತ್ಯ ಹೇಳು.

ಶ್ರೀ – ನಾನು ನಿನ್ನಲ್ಲಿ ನಿತ್ಯವಾಗಿರಲು ವೇದೋಕ್ತವಿಧಿಯಿಂದ ನನ್ನನ್ನು ನಾಲ್ಕು ಕಡೆ ವಿಭಾಗಿಸಿಡಬೇಕು.[೧]

ಇಂದ್ರ – ಭೂಮಿಯಲ್ಲಿ ಒಂದು ಭಾಗ, ಜಲದಲ್ಲಿ ಎರಡನೆ ಭಾಗ, ಅಗ್ನಿಯಲ್ಲಿ ಮೂರನೇ ಭಾಗ, ನಾಲ್ಕನೇ ಭಾಗವನ್ನು ಬ್ರಾಹ್ಮಣಭಕ್ತಿಯುಳ್ಳವರು, ಸತ್ಯವಾದಿಗಳು, ಸಾಧುಗಳು ಹೀಗೆ ಇವರಲ್ಲಿ ಇಡಬೇಕು[೨] (ಸಜ್ಜನರಲ್ಲಿ).

ಶ್ರೀ – ಹಾಗೆಯೇ ಆಗಲಿ. ನನ್ನ ನಾಲ್ಕು ಪಾದಗಳನ್ನು ಭೂಲೋಕದಲ್ಲಿ ನೀನು ಹೇಳಿದಂತೆ ಇಟ್ಟಿದ್ದೇನೆ. ನೀನು ಅವರನ್ನು ಪಾಲಿಸು.

ಇಂದ್ರ – ಅಮ್ಮ! ಯಾರು ಭೂಮಿಯನ್ನು ಶುದ್ಧಿ ಮಾಡಿ ಜಲದಿಂದ ಪ್ರಾಣಿಗಳಿಗೆ ತೃಪ್ತಿ ಉಂಟುಮಾಡುತ್ತಾ, ಅಗ್ನಿಯಲ್ಲಿ ಸಂತೋಷದಿಂದ ಹೋಮ ಮಾಡುತ್ತಾರೋ ಅವರಿಗೆ ನೀನು ಯಾವಾಗಲೂ ಪ್ರಸನ್ನಳಾಗಿ ನೆಲೆಗೊಂಡಿರಬೇಕು.[೩]

ಇಂದ್ರ – ಹೀಗೆ ನಾನು ಭೂತಗಳಲ್ಲಿ ನಿನಗೆ ಭಾಗಗಳನ್ನು ಕೊಟ್ಟಿರುವೆನು. ನೀನಿರುವ ಸ್ಥಳವನ್ನು ಯಾರಾದರೂ ವಿರೋಧಿಸಿದರೆ ಅವರನ್ನು ನಾನು ದಂಡಿಸುತ್ತೇನೆ. ಅದಕ್ಕೆ ಶ್ರೀದೇವಿಯು ಆಗಲೆಂದು ಹೇಳಿ ಬಲಿಯನ್ನು ಬಿಟ್ಟು ಇಂದ್ರನನ್ನು ಅನುಗ್ರಹಿಸಿದಳು.

ಹೀಗೆ ಲಕ್ಷ್ಮಿಯಿಂದ ತ್ಯಜಿಸಲ್ಪಟ್ಟ ಬಲಿಯು ಇಂದ್ರನನ್ನು ಮುಂದೊಮ್ಮೆ ನಿಮಗೆ ವಿಪರೀತಕಾಲವು ಬರಲಿದೆ. ಆಗ ಅಸುರಜಯ ಕಾಲ. ಆಗ ನಿಮ್ಮನ್ನು ಸೋಲಿಸುತ್ತೇನೆ.

---

೧ ಸ್ಥಾಸ್ಯಾಮಿ ನಿತ್ಯಂ ದೇವೇಂದ್ರ ಯಥಾ ತ್ವಯಿ ನಿಬೋಧ ತತ್ ।
ವಿಧಿನಾ ವೇದದೃಷ್ಟೇನ ಚತುರ್ಧಾ ವಿಭಜಸ್ವ ಮಾಮ್ ॥ – ೬೧/೧೯

೨ ಯೇ ವೈ ಸಂತೋ ಮನುಷ್ಯೇಷು ಬ್ರಹ್ಮಣ್ಯಾಃ ಸತ್ಯವಾದಿನಃ ।
ತೇ ತೇ ಪಾದಂ ತಿತಿಕ್ಷಂತಾಮಲಂ ಸಂತಸ್ತಿತಿಕ್ಷಿತುಮ್ ॥ – ೬೧/೨೭

೩ ಭೂಮಿಶುದ್ಧಿಂ ತತಃ ಕೃತ್ವಾ ಅದ್ಭಿಃ ಸಂತರ್ಪಯಂತಿ ಯೇ ।
ಭೂತಾನಿ ಚ ಯಜಂತ್ಯಗ್ನೌ ತೇಷಾಂ ತ್ವಮನಪಾಯಿನೀ ॥ – ೬೧/೨೯

ಈ ಮಾತನ್ನು ಕೇಳಿದ ಇಂದ್ರನು ಬಲಿಗೆ 'ನನಗೆ ಬ್ರಹ್ಮದೇವರು ನಿನ್ನನ್ನು ಕೊಲ್ಲಬೇಡವೆಂದು ಆದೇಶಿಸಿದ್ದಾರೆ. ಆದ್ದರಿಂದ ನಿನ್ನ ತಲೆಯ ಮೇಲೆ ವಜ್ರಾಯುಧ ಪ್ರಯೋಗಿಸುತ್ತಿಲ್ಲ.[೧] ನೀನು ಎಲ್ಲಿಗಾದರೂ ಹೋಗು, ನಿನಗೆ ಮಂಗಳವಾಗಲಿ. ಸೂರ್ಯನು ಎಲ್ಲ ದಿಕ್ಕುಗಳನ್ನು ಬಿಟ್ಟು ಮೇರು ಮಧ್ಯದಲ್ಲಿ ಮಾತ್ರ ಪ್ರಕಾಶಿಸುವ ಸಂಭವವೇ ಇಲ್ಲ[೨] (ಆಗ ನೀನು ನಮ್ಮನ್ನು ಜಯಿಸುವೆ ಎಂದು ಹೇಳಿದಂತೇ). ಸೂರ್ಯನ ಗತಿಯು ಭಗವಂತನು ಹೀಗೆಯೇ ಇರಬೇಕೆಂದು ಆದಶಿಸಿದ್ದಾನೆ. ಆರು ತಿಂಗಳು ಉತ್ತರ ಮಾರ್ಗದಲ್ಲಿ, ಆರು ತಿಂಗಳು ದಕ್ಷಿಣಮಾರ್ಗದಲ್ಲಿ ಸೂರ್ಯ ಸುತ್ತುತ್ತಾನೆ. ಆಗ ಭೂಮಿಗೆ ಶೀತೋಷ್ಣ ಋತುಭೇದಗಳು ಆಗುವಂತೆ ಮಾಡುವವನು ಭಗವಂತನೇ.

ಹೀಗೆ ಕೇಳಿದ (ಇಂದ್ರ ಹೇಳಿದುದನ್ನು) ಬಲಿಯು ದಕ್ಷಿಣ ದಿಕ್ಕಿಗೆ ಹೋದನು. ಇಂದ್ರನು ಉತ್ತರ ದಿಕ್ಕಿಗೆ ಹೋದನು.[೩]

ಬಲಿಯು ಹೇಳಿದ ಈ ನಿರಹಂಕಾರಗೀತೆಯ ವಾಕ್ಯಗಳನ್ನು ಕೇಳಿ ಇಂದ್ರನು ವಿಸ್ಮಿತನಾಗಿ ಅಂತರಿಕ್ಷಕ್ಕೆ ಹಾರಿದನು.

## ಸಂದೇಶಗಳು ವಿವರಣೆಗಳು

೧. ಬಲಿಚಕ್ರವರ್ತಿ ದೈತ್ಯರಾಜ, ಅವನು ದೇವತೆಗಳೊಡನೆ ಯುದ್ಧ ಮಾಡಿ ಸೋತಿದ್ದ, ಆತನನ್ನು ಮತ್ತೆ ಕಂಡರೆ ಕೊಲ್ಲಲೇ ಎಂಬ ಇಂದ್ರ ಪ್ರಶ್ನೆಗೆ ಬ್ರಹ್ಮ ಒಪ್ಪದೆ, ಆತನು ವಧಾರ್ಹನಲ್ಲವೆಂದೂ, ಆತನಿಂದ ನಿನಗೆ ಬೇಕಾದ ಧರ್ಮಗಳನ್ನು ತಿಳಿದುಕೋ ಎಂದು ಬ್ರಹ್ಮದೇವರು ಇಂದ್ರನಿಗೆ ಉಪದೇಶಿಸುವುದು ಬಲಿಯನ್ನು ಗೌರವಾರ್ಹ ಹಾಗೂ ತಾತ್ವಿಕವಾಗಿ ಪೂಜ್ಯನೆಂಬ ಭಾವ ತಿಳಿಸುತ್ತದೆ.

೨. ಬ್ರಹ್ಮದೇವರ ಆದೇಶವಿದ್ದರೂ ಇಂದ್ರನು ಬಲಿಯೊಂದಿಗೆ ವ್ಯವಹರಿಸಿದ ರೀತಿ ಮೇಲ್ನೋಟಕ್ಕೆ ತುಂಬಾ ಆಕ್ಷೇಪಾರ್ಹವೆನಿಸುತ್ತದೆ. ರಾಜ್ಯೈಶ್ವರ್ಯ ಹಾಗೂ ವೈಭವ ಕಳೆದುಕೊಂಡವನನ್ನು ಹಾಗೆ ಪ್ರಶ್ನಿಸಿದ್ದು ಎಷ್ಟರಮಟ್ಟಿಗೆ ಸರಿ ಎನ್ನಿಸುತ್ತದೆ (ಇಂದ್ರನು ಬಲಿಯನ್ನು ಕೇಳಿದ ಪ್ರಶ್ನೆ ರೀತಿಗಳನ್ನು ನೋಡಿದಾಗ). ಒಂದು ರೀತಿಯಲ್ಲಿ ಹಂಗಿಸಿದಂತೆ ಅನಿಸುತ್ತದೆ. ಅದು ಇಂದ್ರನ ಸ್ಥಾನಕ್ಕೆ ಸರಿಯೇ ಎಂದೂ ಅನಿಸುತ್ತದೆ.

---

೧ ಬ್ರಹ್ಮಣಾಸ್ಮಿ ಸಮಾದಿಷ್ಟೋ ನ ಹಂತವ್ಯೋ ಭವಾನಿತಿ।
ತೇನ ತೇಹಂ ಬಲೇ ವಜ್ರಂ ನ ವಿಮುಂಚಾಮಿ ಮೂರ್ಧನಿ॥ – ೬೧/೩೬

೨ ಯಥೇಷ್ಟಂ ಗಚ್ಛ ದೈತ್ಯೇಂದ್ರ ಸ್ವಸ್ತಿ ತೇಽಸ್ತು ಮಹಾಸುರ।
ಆದಿತ್ಯೋ ನಾವತಪಿತಾ ಕದಾಚಿನ್ಮಧ್ಯತಃ ಸ್ಥಿತಃ॥ – ೬೧/೩೭

೩. ಏವಮುಕ್ತಸ್ತು ದೈತ್ಯೇಂದ್ರೋ ಬಲಿರಿಂದ್ರೇಣ ಭಾರತ।
ಜಗಾಮ ದಕ್ಷಿಣಾಮಾಶಾಮುದೀಚಿಂ ತು ಪುರಂದರಃ॥ – ೬೧/೪೦

೩. ಬಲಿಯು ಮಾತ್ರ ಆಕ್ಷೇಪಗಳನ್ನು ಸಮಾಧಾನಕರವಾಗಿ ಉತ್ತರಿಸುತ್ತಾನೆ. ಬಹುಶಃ ಆತನ ಆಗಿನ ಪರಿಸ್ಥಿತಿಗೆ ಅನಿವಾರ್ಯವಾಗಿರುತ್ತದೆ. ತಾನು ಅಧಿಕಾರದಲ್ಲಿದ್ದಾಗ ಉನ್ಮತ್ತನಂತೆ ಇದ್ದುದು ಅಷ್ಟೇ ನಿಜವಾಗಿದ್ದರೂ, ಅದನ್ನು ಕಳೆದುಕೊಂಡಾಗ ತನ್ನ ತಪ್ಪಿನ ಅರಿವಾಗಿ ಮೃದುವಾಗಿ ಉತ್ತರಿಸಿದರೂ, ಇಂದ್ರನಿಗೆ ಅಧಿಕಾರಮದದಿಂದ ದರ್ಪ ತೋರಿಸಬೇಡ ಎಂಬ ಎಚ್ಚರಿಕೆಯೂ ಅಲ್ಲಿದೆ. ಆದ್ದರಿಂದ ಅಧಿಕಾರ ಇರಲಿ, ಬಿಡಲಿ, ಯಾರು ಉನ್ಮತ್ತರಾಗದೆ ವಿನಯಾದಿಗಳಿಂದ ಸಭ್ಯತೆಯನ್ನು ಮೀರದಂತೆ ವರ್ತಿಸಬೇಕು. ಕಾರಣ ದರ್ಪ ಆತ್ಮಹತ್ಯೆಗೆ ಕಾರಣವಾಗುತ್ತದೆ.

೪. ಬಲಿಯ ಉತ್ತರಗಳೆಲ್ಲ ತತ್ತ್ವಜ್ಞಾನಿ ಒಪ್ಪುವ ರೀತಿಯಲ್ಲಿದೆ. ಪ್ರತಿಯೊಬ್ಬ ಸಾಧಕನು ತತ್ತ್ವಜ್ಞಾನಿಯಾಗಿ ವರ್ತಿಸಬೇಕೇ ಹೊರತು, ತಾನು ಸ್ವತಂತ್ರನೆಂಬ ಭಾವ ಅಲ್ಲಿರಬಾರದು. ಕಾರಣ ದೇಹ, ಗೇಹ, ಐಶ್ವರ್ಯ, ರೂಪ, ಸೌಂದರ್ಯ, ಕುಲ, ಅಧಿಕಾರಾದಿಗಳು ಯಾವುದು ಶಾಶ್ವತವಲ್ಲ. ಎಲ್ಲವೂ ಕಾಲರೂಪಿ ಭಗವದಧೀನ.

೫. ಇಂದ್ರನ ಪ್ರಶ್ನೆಗಳು ಬಲಿಯ ಬಗ್ಗೆ ಅನುಕಂಪ ಹುಟ್ಟಿಸಿದರೂ, ಅದೆಲ್ಲವನ್ನೂ ಮುಂದಿನ ಘಟನೆಯು ಅನುಮೋದಿಸಿದಂತೆ ಸಿದ್ಧವಾಗುತ್ತದೆ. ಬಲಿಯು ಅಧಿಕಾರ ಸಿಕ್ಕಾಗ ಬ್ರಾಹ್ಮಣರಲ್ಲಿ ಭಕ್ತಿಯುಳ್ಳವನೂ, ಸತ್ಯವಾದಿಯೂ, ಜಿತೇಂದ್ರಿಯನೂ, ಶೌಚಾಚಾರವುಳ್ಳವನೂ ಆಗಿದ್ದನು. ನಂತರ ಅಧಿಕಾರದ ಮುಂದೆ ಈ ಎಲ್ಲ ಗುಣಗಳು ಅವನಿಂದ ದೂರವಾಗಿ (ಕಾಲಪೀಡಿತನಾಗಿ) ಬ್ರಾಹ್ಮಣದ್ರೋಹ, ಮಿಥ್ಯಾವಾದಿ, ಇಂದ್ರಿಯನಿಗ್ರಹ ಕಳೆದುಕೊಂಡು, ಹೋಮದ್ರವ್ಯವನ್ನು ಅಶುಚಿ ಮಾಡುವ ತನಕ ಶೌಚಾಚಾರ ಕಳೆದುಕೊಂಡುಬಿಟ್ಟ. ಎಲ್ಲಕ್ಕಿಂತ ಮಿಗಿಲಾಗಿ ಯಜ್ಞಪುರುಷನಾದ ಭಗವಂತನನ್ನು ಉದ್ದೇಶಿಸಿ ಮಾಡಬೇಕಾದ ಹೋಮಹವನಗಳನ್ನು ತನ್ನನ್ನು ಉದ್ದೇಶಿಸಿ ಮಾಡಲು ಪ್ರಜೆಗಳಿಗೆ ಆದೇಶಿಸುವ ಮಟ್ಟಕ್ಕೆ ಹೋಗಿಬಿಟ್ಟನು. ಇದು ದುರಹಂಕಾರ, ದರ್ಪದ ಅಂತಿಮ ಸೀಮಾಗಡಿ. ಎಂದರೆ ಈಶ್ವರೋऽಹಂ ಅಹಂ ಭೋಗೀ... ಎಂಬ ಗೀತೋಕ್ತಿಗಳನ್ನು ಆತನ ವರ್ತನೆಗಳು ತೋರಿಸಿದವು. ಹಿರಣ್ಯಕಶಿಪು ಹೇಗೆ ಋಷಿ, ಮುನಿಗಳಿಗೆ ಆದೇಶಿದನೋ ಹಾಗೆ ಆದೇಶಿಸಿದ. ತನಗೇನೇ ಆಹುತಿ ನೀಡಿರೆಂದು. ತಾನೇ ಬ್ರಹ್ಮನೆಂದೂ ಬಗೆದ. ಆತನ ವರ್ತನೆ ಆತನು ಐಶ್ವರ್ಯಭ್ರಷ್ಟನಾಗಲು ಕಾರಣವಾಯಿತು. ಲಕ್ಷ್ಮೀ ಆತನಿಂದ ಹೊರಟುಹೋದಳು. ಇದನ್ನು ಹೇಳಿದವರು ಮತ್ತಾರೂ ಅಲ್ಲ, ಸಾಕ್ಷಾತ್ ಲಕ್ಷ್ಮಿಯೇ ಹೇಳುತ್ತಾಳೆ. ಆದ್ದರಿಂದ ಆತನ ಅಧಃಪತನ ಆತನ ಕೆಲವು ಸದ್ಗುಣಗಳೆಲ್ಲವನ್ನು ಮರೆ ಮಾಡಿದವು. ಆದ್ದರಿಂದ ಇಂದ್ರನು ಆತನನ್ನು ಕೊಲ್ಲಲೇ ಎಂದು ಕೇಳಿದ್ದು ಎನಿಸುತ್ತದೆ. ಇಷ್ಟಾದರೂ ಆತನು ವಧಾರ್ಹನಲ್ಲನೆಂದು ಹೇಳಿದುದು (ಬ್ರಹ್ಮದೇವರು) ಅವರ ಕಾರುಣ್ಯ. ಆತನ ಈ ನಡೆ ತಾತ್ಕಾಲಿಕವಾಗಿತ್ತು. ಆತನ ಈ ಮಾತುಗಳೇ ಆತನಲ್ಲಿದ್ದ ಬಲಿ ಎಂಬ ಅಸುರನ ಆವೇಶನಿಮಿತ್ತ.

ಆದ್ದರಿಂದ ಪ್ರತಿಯೊಬ್ಬ ಸಾಧಕನು ಐಶ್ವರ್ಯ ಬಂದಾಗ ಅದನ್ನು ಅನುಗ್ರಹಿಸಿದ ದೇವರನ್ನು ಮರೆಯದೆ, ತಾನೇ ದೇವರೆಂಬ ಭ್ರಾಂತಿಗೆ ಒಳಗಾಗದೆ ತನ್ನ ಇತಿಮಿತಿಗಳನ್ನು ತಿಳಿದು ವಿನಯದಿಂದ ವರ್ತಿಸಬೇಕು. ದರ್ಪಾದಿಗಳು ಸಾಧಕನ ನಾಶಕ್ಕೆ ಕಾರಣವಾಗುತ್ತವೆ. ನಹುಷನೂ ಕೂಡಾ ಇಂದ್ರಪದವಿ ಸಿಕ್ಕಾಗ ಶಚಿಯನ್ನು ಬಯಸಿ ಅಜಗರ ಸರ್ಪನಾಗಿ ೧೦೦೦೦ ವರ್ಷ ಆರಣ್ಯದಲ್ಲಿ ಬಿದ್ದ. ಆದರೆ ಆತನು ತಾನೇ ಬ್ರಹ್ಮನೆನ್ನಲಿಲ್ಲ. ಆದ್ದರಿಂದ ನಂತರ ಭೀಮಾನುಗ್ರಹದಿಂದ ಅಜಗರ ಯೋನಿಯಿಂದ ಪಾರಾದನು.

೬. ಬಲಿಯು ವಾಮನಾನುಗ್ರಹಕ್ಕೆ ಪಾತ್ರ. ಆದ್ದರಿಂದ ಕೊಲ್ಲಲ್ಪಡಲಿಲ್ಲ ಇಂದ್ರನಿಂದ. ಭಗವದನುಗ್ರಹವಿದ್ದರೆ ಸಾವಿಲ್ಲ, ನಾಶವಿಲ್ಲ.

೭. ಲಕ್ಷ್ಮೀ ವಾಸವಾಗುವ ಸ್ಥಳಗಳು ಭೂಮಿ, ಜಲ, ಅಗ್ನಿ, ಸತ್ಯವಾದಿಗಳಾದ ಬ್ರಾಹ್ಮಣರು, ಸಜ್ಜನರು.

ನಾವ್ಯಾರೂ ಭೂಮಿ, ಜಲ, ಅಗ್ನಿಯಲ್ಲ, ಬ್ರಾಹ್ಮಣರಾಗಿ ಜನಿಸಿದವರು. ಅವರು ಹೇಗಿರಬೇಕೋ ಹಾಗಿದ್ದರೆ ನಮ್ಮಲ್ಲಿ ಲಕ್ಷ್ಮೀ ಶಾಶ್ವತವಾಗಿರುತ್ತಾಳೆ.

೮. ಲಕ್ಷ್ಮೀದೇವಿಯ ಮಹಿಮೆ ಆಕೆಯ ಮಾತಿನಲ್ಲಿದೆ. ಆದರೆ ಅವು ಸ್ವಲ್ಪ ಜಟಿಲ. ಗುರುಮುಖೇನ ಅರ್ಥ ತಿಳಿಯಬೇಕು.

೯. ಬಲಿಯನ್ನು ಅವಮಾನ ಮಾಡುವಂತಹ ರೀತಿಯಲ್ಲಿ ಮಾತನಾಡಿಸಬೇಡವೆಂಬ ಶ್ರೀದೇವಿಯ ಮಾತೂ ಗಮನಾರ್ಹ. ಬ್ರಹ್ಮದೇವ, ಲಕ್ಷ್ಮೀದೇವಿಯರ ಮಾತುಗಳು ಒಂದೇ ರೀತಿಯಾಗಿವೆ. ಬಲಿಯಲ್ಲಿನ ಸಾತ್ತ್ವಿಕಗುಣಗಳನ್ನು ಬ್ರಹ್ಮ ಹಾಗೂ ಶ್ರೀದೇವಿ ತಿಳಿದಿದ್ದಾರೆ. ಇಂದ್ರ ತಿಳಿದೂ ತಿಳಿಯದಂತೆ ವರ್ತಿಸಿದನೆಂದು ತೋರುತ್ತದೆ. ಆದ್ದರಿಂದ ಹಾಗೆ ಸಜ್ಜನರ ಬಗ್ಗೆ ವರ್ತಿಸಬಾರದು. ಈ ಬಗ್ಗೆ ಎಚ್ಚರಿಕೆ ಅಗತ್ಯ.

ಇತ್ಯಾದಿ..

# ೧೮೮. ಇಂದ್ರ-ನಮುಚಿಯರ ಸಂವಾದ

ಅರವತ್ತೊಂದನೇ ಅಧ್ಯಾಯದ ಕೊನೆ ಶ್ಲೋಕ ಹೀಗಿದೆ:

**ಇತ್ಯೇತದ್ ಬಲಿನಾ ಗೀತಮನಹಂಕಾರಸಂಜ್ಞಿತಮ್ ।**
**ವಾಕ್ಯಂ ಶ್ರುತ್ವಾ ಸಹಸ್ರಾಕ್ಷಃ ಖಮೇವಾರುರುಹೇ ತದಾ ॥** - ೬೧/೪೧

ಇಂದ್ರದೇವ ತಾನು ಬಲಿಯನ್ನು ಸಂಹರಿಸದಿರಲು ಬ್ರಹ್ಮಾಜ್ಞೆಯೇ ಕಾರಣವೆಂದ ನಂತರ ನಿನ್ನ ಇಚ್ಛೆಯಂತೆ ಹೋಗು ಎಂದ, ಬಲಿಗೆ. ಆದಿತ್ಯನ ಗತಿಗಳಿಗನುಗುಣವಾಗಿ ಭೂಮಿಗೆ ಶೀತೋಷ್ಣಪರಿಸ್ಥಿತಿ ಇತ್ಯಾದಿ ಇಂದ್ರ ಹೇಳಿದ. ನಂತರ ಬಲಿಯು ಇಂದ್ರನನ್ನು ಬಿಟ್ಟು ದಕ್ಷಿಣದಿಕ್ಕಿಗೆ ಹೋದ. ಇಂದ್ರ ಉತ್ತರದಿಕ್ಕಿಗೆ ಹೋದನು. ಬಲಿಯು ಹೇಳಿದ ಅನಹಂಕಾರ ಎಂಬ ಗೀತೆ ಯಾವುದು ಎಂಬುದು ಅಷ್ಟು ಸ್ಪಷ್ಟವಾಗುವುದಿಲ್ಲ. ಬಹುಶಃ ಬಲಿಯು ಇಂದ್ರನ ಪ್ರಶ್ನೆಗಳು, ಆಕ್ಷೇಪಗಳಿಗೆ ಉತ್ತರರೂಪವಾಗಿ ಹೇಳಿದ ಮಾತುಗಳೆಂದು ಹೇಳಬೇಕಾಗತ್ತದೆ. ಅವು ೬೨ನೇ ಅಧ್ಯಾಯದಲ್ಲಿಲ್ಲ, ಅವೆಲ್ಲ ಅರವತ್ತೊಂದನೇ ಅಧ್ಯಾಯದಲ್ಲಿವೆ.

ಪ್ರಸ್ತುತ ಅರವತ್ತೆರಡನೇ ಅಧ್ಯಾಯದಲ್ಲಿ ಅನಹಂಕಾರ ಎಂಬ ಹೆಸರಿಗೆ ಸಂಬಂಧಿಸಿದಂತೆ ನಮುಚಿ ಹಾಗೂ ಇಂದ್ರದೇವನ ಸಂವಾದರೂಪ ಇತಿಹಾಸವನ್ನು ಭೀಷ್ಮರು ಧರ್ಮರಾಜನಿಗೆ ಹೇಳುತ್ತಾರೆ.

ನಮುಚಿ ಕಶ್ಯಪ-ದನು ದಂಪತಿಗಳ ಮಗ, ದಾನವ. ಐಶ್ವರ್ಯಭ್ರಷ್ಟನಾಗಿದ್ದ. ಆದರೂ ಪ್ರಶಾಂತ ಮಹಾಸಮುದ್ರದಂತೆ ಯಾವುದೇ ಕ್ಷೋಭೆಗೆ ಒಳಗಾಗದೆ ಕುಳಿತಿರುವಾಗ ಇಂದ್ರನು ಬಂದು 'ನೀನು ಶತ್ರುಗಳ ವಶನಾಗಿದ್ದೀಯಾ. ರಾಜ್ಯಭ್ರಷ್ಟನಾಗಿದ್ದೀ, ಪಾಶಗಳಿಂದ ಬಂಧಿತನಾಗಿದ್ದೀ, ಧನಸಂಪತ್ತುಗಳಿಲ್ಲ, ಈ ನಿನ್ನ ಪರಿಸ್ಥಿತಿಯ ಬಗ್ಗೆ ಶೋಕಿಸುವೆಯಾ? ಅಥವಾ ಇಲ್ಲವಾ? ಹೇಳು'[೧] ಎಂದ. ಆದಕ್ಕೆ ನಮುಚಿಯು 'ಈ ಶೋಕವನ್ನು ಸಹಿಸದಿದ್ದರೆ ಅದೇ ಶರೀರಕ್ಕೆ ತಾಪ ಕೊಡುತ್ತದೆ. ಆಗ ಶತ್ರುಗಳು ಹರ್ಷ ಮಾಡುತ್ತಾರೆ. ಶೋಕ ಪಡುವುದರಿಂದ ಯಾವ ಪ್ರಯೋಜನವಿದೆ? ಆದ್ದರಿಂದ ನಾನು ಶೋಕಿಸುವುದಿಲ್ಲ. ಇದೆಲ್ಲ ಶೋಕ, ಸಂತೋಷಗಳೆಲ್ಲ ನಾಶಸ್ವಭಾವದವುಗಳು. ಯಾವುದೂ ಶಾಶ್ವತವಲ್ಲ. ಶೋಕದಿಂದ ನನ್ನ ರೂಪ ನಾಶವಾಗುತ್ತದೆ

---

೧ ಬದ್ಧಃ ಪಾಶೈಶ್ಚ್ಯುತಃ ಸ್ಥಾನಾದ್ದ್ವಿಷತಾಂ ವಶಮಾಗತಃ ।
ಶ್ರಿಯಾ ವಿಹೀನೋ ನಮುಚೇ ಶೋಚಸ್ಯಾಹೋ ನ ಶೋಚಸಿ ॥ - ೬೨/೩

(ದುಃಖಿಸಿ ಮುಖದ ಕಾಂತಿ ಹೋಗುತ್ತದೆ). ಧರ್ಮವೂ(ಆಯುಷ್ಯವೂ) ನಾಶವಾಗುತ್ತದೆ. ಆದ್ದರಿಂದ ಇದನ್ನು ತಿಳಿದು ಮನಸ್ಸಿನ ವಿಕಾರ ಭೂತವಾದ ಬಂದ ದುಃಖವನ್ನು ದೂರ ಮಾಡಿಕೊಂಡು ಹೃದಯದಲ್ಲಿರುವ ಕಲ್ಯಾಣಗುಣಮಯನಾದ ಪರಮಾತ್ಮನನ್ನು ಮನಸ್ಸಿನಿಂದ ಧ್ಯಾನ ಮಾಡಬೇಕು. ಭಗವಂತನ ಧ್ಯಾನ ಮಾಡಿದಂತೆ ಪುರುಷಾರ್ಥಗಳು ಅವನಿಗೆ ತಾನೇ ಸಿದ್ಧಿಸುತ್ತವೆ. ಈ ವಿಷಯದಲ್ಲಿ ಸಂಶಯವೇ ಇಲ್ಲ.[೧]

ಎಲೈ ಇಂದ್ರನೇ! ಜಗತ್ತನ್ನು ಶಾಸನ ಮಾಡುವವನು ಒಬ್ಬನೇ (ಪರಮಾತ್ಮ) ಮತ್ತೊಬ್ಬರಿಲ್ಲ. ಅವನು ಗರ್ಭದಲ್ಲಿರುವ ಜೀವರಿಗೂ ಶಾಸಕನೇ. ಅವನಿಂದ ಪ್ರೇರಿತನಾದ ಜೀವನು ಅವನ ಸಂಕಲ್ಪಾನುಸಾರ ನಡೆಯುತ್ತಾನೆ. ನಾನೂ ಕೂಡಾ ಭಗವಂತನಿಂದ ಆದಿಷ್ಟನಾಗಿ, ನಿಯುಕ್ತನಾಗಿ ಎಲ್ಲ ಭಾರವನ್ನು ಹೊರುತ್ತೇನೆ.[೨]

ಯದ್ಯಪಿ ನನಗೆ ಶ್ರೇಷ್ಠ ತತ್ತ್ವವು ಯಾವುದೆಂದು ಗೊತ್ತು. ಶ್ರೇಯಸ್ಸು ಯಾವುದರಿಂದ ಎಂದೂ ಗೊತ್ತು. ಆದರೂ ನಾನು ಹಾಗೆ ನಡೆಯುತ್ತಿಲ್ಲ ಕೇವಲ ಕಾಮ್ಯಕರ್ಮಗಳಲ್ಲಿ ಮನಸ್ಸು ತೊಡಗಿದೆ. ಅಂತರ್ಯಾಮಿಯ ಪ್ರೇರಣೆಯಂತೆ ಕಾರ್ಯ ಮಾಡುತ್ತಿದ್ದೇನೆ. ಯಾವ್ಯಾವುದು ಹೇಗೆ ನಡೆಯಬೇಕೋ ಹಾಗೆ ನಡೆಯುತ್ತದೆ. ನಮ್ಮ ಸಂಕಲ್ಪಾನುಸಾರ ಏನೂ ನಡೆಯದು. ಜೀವನ ಗರ್ಭವಾಸವು ಕೂಡಾ ಬ್ರಹ್ಮನ ಪ್ರೇರಣೆಗನುಗುಣವಾಗಿಯೇ ಹೊರತು, ಜೀವನು ಇಚ್ಛಿಸಿದಂತೆ ಆಗದು.[೩]

ಋಷಿಗಳನ್ನು ದೇವತೆಗಳನ್ನು ಮಹಾಸುರರನ್ನು ಮೂರು ವೇದಗಳಲ್ಲಿ ಜ್ಞಾನಿಗಳಾದವರನ್ನು (ಕಾಮ್ಯ ಕರ್ಮಿಗಳನ್ನು), ವನದಲ್ಲಿರುವ ಮುನಿಗಳನ್ನು ಹೀಗೆ ಯಾರನ್ನು ತಾನೇ ಲೋಕದಲ್ಲಿ ಆಪತ್ತುಗಳು ಮಣಿಸುವುದಿಲ್ಲ (ಮುಟ್ಟುವುದಿಲ್ಲ). ಈ ವಿಷಯದಲ್ಲಿ

---

೧ ಅನವಾಪ್ಯಂ ಚ ಶೋಕೇನ ಶರೀರಂ ಚೋಪತಪ್ಯತೇ।
ಅಮಿತ್ರಾಶ್ಚ ಪ್ರಹೃಷ್ಯಂತಿ ನಾಸ್ತಿ ಶೋಕೇ ಸಹಾಯತಾ॥
ತಸ್ಮಾಚ್ಛಕ್ರ ನ ಶೋಚಾಮಿ ಸರ್ವಂ ಹ್ಯೇವೇದಮಂತವತ್।
ಸಂತಾಪಾದ್ ಭ್ರಶ್ಯತೇ ರೂಪಂ ಧರ್ಮಶ್ಚೈವ ಸುರೇಶ್ವರ॥
ವಿನೀಯ ಖಲು ತದ್ ದುಃಖಮಾಗತಂ ವೈಮನಸ್ಯಜಮ್।
ಧ್ಯಾತವ್ಯಂ ಮನಸಾ ಹೃದ್ಯಂ ಕಲ್ಯಾಣಂ ಸಂವಿಜಾನತಾ॥
ಯಥಾ ಯಥಾ ಹಿ ಪುರುಷಃ ಕಲ್ಯಾಣೇ ಕುರುತೇ ಮನಃ।
ತದೈವಾಸ್ಯ ಪ್ರಸೀದಂತಿ ಸರ್ವಾರ್ಥಾ ನಾತ್ರ ಸಂಶಯಃ॥ - ೬೨/೪-೭

೨ ಏಕಃ ಶಾಸ್ತಾ ನ ದ್ವಿತೀಯೋಽಸ್ತಿ ಶಾಸ್ತಾ ಗರ್ಭೇ ಶಯಾನಂ ಪುರುಷಂ ಶಾಸ್ತಿ ಶಾಸ್ತಾ।
ತೇನಾನುಶಿಷ್ಟಃ ಪ್ರವಣಾದಿವೋದಕಂ ಯಥಾ ನಿಯುಕ್ತೋಽಸ್ಮಿ ತಥಾ ವಹಾಮಿ॥ - ೬೨/೮

೩. ಯತ್ರ ಯತ್ರೈವ ಸಂಯುಂಕ್ತೇ ಧಾತಾ ಗರ್ಭಂ ಪುನಃ ಪುನಃ।
ತತ್ರ ತತ್ರೈವ ವಸತಿ ನ ಯತ್ರ ಸ್ವಯಮಿಚ್ಛತಿ॥ - ೬೨/೧೧

ಪರಾವರಜ್ಞರು ಮಾತ್ರ (ಯಾವುದು ಉತ್ತಮ, ಯಾವುದು ಉತ್ತಮವಲ್ಲವೆಂದು ಬಲ್ಲವರು) ಆಪತ್ತುಗಳಿಂದ ಭ್ರಾಂತರಾಗುವುದಿಲ್ಲ.[೧]

ಪಂಡಿತನು ಸಿಟ್ಟಾಗುವುದಿಲ್ಲ. ಯಾವುದರಲ್ಲೂ ಅತ್ಯಾಸಕ್ತಿ ಇಟ್ಟುಕೊಳ್ಳುವುದಿಲ್ಲ. ಸುಖದಿಂದ ಹಿಗ್ಗನು, ಆಪತ್ತಿನಿಂದ ಕುಗ್ಗನು. ನಿರ್ಧನಿಯಾದರೂ, ವ್ಯಸನಿಯಾದಾಗಲೂ ಶೋಕಿಸುವುದಿಲ್ಲ. ಹಿಮಾಲಯಪರ್ವತದಂತೆ ಅಚಲನಾಗಿರುತ್ತಾನೆ.

ನಮುಚಿಯು ಮುಂದುವರೆದು ಯಾವ ಸಭೆಗೆ ಹೋಗಿಯೂ ಅದರ ತೀರ್ಮಾನ, ಧರ್ಮಮರ್ಯಾದೆಯ ಬಗ್ಗೆ ಭಯ ಹೊಂದುವುದಿಲ್ಲವೋ, ಅದು ಸತ್ಸಭೆಯಲ್ಲ. ಧರ್ಮಮರ್ಯಾದೆಗೆ ಭಯಪಟ್ಟು ನಡೆದರೆ ಅದು ಸತ್ಸಭೆ. ಬುದ್ಧಿವಂತನಾದ ಪುರುಷನು ಧರ್ಮತತ್ತ್ವದಲ್ಲಿ ತಲ್ಲೀನನಾಗಿ ಅದರಂತೆ ಅನುಷ್ಠಾನ ಮಾಡುತ್ತಾನೆಯೇ, ಅವನೇ ಮಹಾಭಾರವನ್ನು ಹೊರಲು ಸಮರ್ಥನಾದವನು[೨] (ದ್ರೌಪದಿದೇವಿಯು ತನ್ನ ಸೆರಗಿಗೆ ಕೈ ಹಾಕಿದಾಗ (ದುಃಶಾಸನನು) ಆ ಕೌರವರ ಸಭೆಯನ್ನು ಅಸತ್ಸಭೆಯೆಂದ ಕರೆದಂತಿದೆ. ಇಲ್ಲಿಯ ಭಾವನಗಳು).

ನೋಡು ಇಂದ್ರ! ಜ್ಞಾನಿಯ ಕಾರ್ಯಗಳು ಅಜ್ಞಾನಿಗಳಿಗೆ ಅರ್ಥವಾಗುವುದಿಲ್ಲ. ಮೋಹದ ಕಾಲದಲ್ಲೂ ಪ್ರಾಜ್ಞನು ಮೋಹಗೊಳ್ಳುವುದಿಲ್ಲ. ವೃದ್ಧನಾದ ಗೌತಮನು ಸ್ಥಾನದಿಂದ ಚ್ಯುತನಾದರೂ ಮೋಹವಶನಾಗಲಿಲ್ಲ. ಎಷ್ಟೇ ಆಪತ್ತುಗಳು ಬಂದರೂ, ಅವುಗಳನ್ನು ಮೋಹಗಳ್ಳದೆ ಎದುರಿಸಿದ.

ಮನುಷ್ಯನು ಅಲಭ್ಯವಾದ ವಸ್ತುಗಳನ್ನು ಮಂತ್ರದಿಂದಾಗಲೀ, ಬಲದಿಂದಾಗಲೀ, ಪರಾಕ್ರಮದಿಂದಾಗಲೀ, ಬುದ್ಧಿಯಿಂದಾಗಲೀ, ಪ್ರಯತ್ನದಿಂದಾಗಲೀ ಹೊಂದಲು ಸಾಧ್ಯವಿಲ್ಲ. ಆದ್ದರಿಂದ (ಇದರಲ್ಲಿ ನಾನು ಕಳೆದುಕೊಂಡ ಐಶ್ವರ್ಯ, ರಾಜ್ಯ ಇತ್ಯಾದಿ) ಶೋಕ ಪಡಬೇಕಾದ ಕಾರಣವಿಲ್ಲ[೩] (ಭಗವದನುಗ್ರಹವಿಲ್ಲದೆ ಸಾಧ್ಯವಿಲ್ಲ).

---

೧ ಋಷೀಂಶ್ಚ ದೇವಾಂಶ್ಚ ಮಹಾಸುರಾಂಶ್ಚ ತ್ರೈವಿದ್ಯವೃದ್ಧಾಂಶ್ಚ ವನೇ ಮುನೀಂಶ್ಚ।
ಕಾನ್ನಾಪದೋ ನೋಪನಮಂತಿ ಲೋಕೇ ಪರಾವರಜ್ಞಾಸ್ತು ನ ಸಂಭ್ರಮಂತಿ॥ - ೬೨/೧೪

೨ ತತ್ ಸದಃ ಸ ಪರಿಷತ್ಸಭಾಸದಃ ಪ್ರಾಪ್ಯ ಯೋ ನ ಕುರುತೇ ಸಭಾಭಯಮ್।
ಧರ್ಮತತ್ತ್ವಮವಗಾಹ್ಯ ಬುದ್ಧಿಮಾನ್ ಯೋಽಭ್ಯುಪೈತಿ ಸ ಪುಮಾನ್ ಧುರಂಧರಃ॥ - ೬೨/೧೮

೩ ಪ್ರಾಜ್ಞಸ್ಯ ಕರ್ಮಾಣಿ ದುರನ್ವಯಾನಿ ನ ವೈ ಪ್ರಾಜ್ಞೋ ಮುಹ್ಯತಿ ಮೋಹಕಾಲೇ।
ಸ್ಥಾನಾಚ್ಚ್ಯುತಶ್ಚೇನ್ನ ಮುಮೋಹ ಗೌತಮಸ್ತಾವತ್ಕೃಚ್ಛ್ರಾಮಾಪದಂ ಪ್ರಾಪ್ಯ ವೃದ್ಧಃ॥
ನ ಮಂತ್ರಬಲವೀರ್ಯೇಣ ಪ್ರಜ್ಞಯಾ ಪೌರುಷೇಣ ವಾ।
ಅಲಭ್ಯಂ ಲಭತೇ ಮರ್ತ್ಯಸ್ತತ್ರ ಕಾ ಪರಿದೇವನಾ॥ - ೬೨/೧೯, ೨೦

ಈ ರೀತಿಯಾಗಿ ಪೂರ್ವಕರ್ಮಾನುಸಾರವಾಗಿ ಸೃಷ್ಟಿಕರ್ತನು ನಾನು ಏನು ಹೊಂದಬೇಕೆಂದು ನಿಯಮಿಸಿದ್ದಾನೋ ಅದನ್ನನುಸರಿಸಿ ನಾನು ನಡೆಯುತ್ತಿದ್ದೇನೆ (ಈ ಮಧ್ಯೆ ನನಗೆ ಮೃತ್ಯು ಬಂದರೂ) ಅವನು ಏನು ಮಾಡಿಯಾನು (ಅದನ್ನು ತಪ್ಪಿಸಲು ಯಾರಿಗೂ ಸಾಧ್ಯವಿಲ್ಲ)?

**ದುಷ್ಕೃತೇ ಸುಕೃತೇ ವಾಪಿ ನ ಜಂತುರಯತೋ ಭವೇತ್ ।**
**ನಿತ್ಯಂ ಮನಃಸಮಾಧಾನೇ ಪ್ರಯತೇತ ವಿಚಕ್ಷಣಃ ॥** - ೧೨೩/೨೦

ಭಗವಂತನ (ವಿಧಾತೃವಿನ) ಶಾಸನಾನುಸಾರವೇ ಯಾರು ಏನನ್ನು ಹೊಂದಬೇಕೋ, ಎಲ್ಲಿಗೆ ಹೋಗಬೇಕೋ, ಅದನ್ನು ಹೊಂದುತ್ತಾನೆ, ಅಲ್ಲಿಗೆ ಹೋಗುತ್ತಾನೆ. ಅದು ದುಃಖದ ಪ್ರಾಪ್ತಿಯಿದ್ದರೆ ದುಃಖವನ್ನು, ಸುಖದ ಪ್ರಾಪ್ತಿಯಿದ್ದರೆ ಸುಖವನ್ನು ಅನುಭವಿಸುತ್ತಾನೆ.[೧]

ಜೀವನದ ಈ ರಹಸ್ಯವನ್ನು ಪೂರ್ಣವಾಗಿ ತಿಳಿದು ಯಾರು ಪರ್ಯಾಯವಾಗಿ ಬರುವ ಸುಖದುಃಖಗಳ ವಿಷಯದಲ್ಲಿ ಮೋಹಗೊಳ್ಳುವುದಿಲ್ಲವೋ, ಅವನು ಎಲ್ಲ ಸುಖದುಃಖಗಳಲ್ಲಿ ಸುಖ ಬಂದಾಗ ಹಿಗ್ಗದೆ, ದುಃಖ ಬಂದಾಗ ಕುಗ್ಗದೇ ಕುಶಲಿಯಾಗಿರುತ್ತಾನೆ (ಕೌಶಲವುಳ್ಳವನಾಗಿರುತ್ತಾನೆ). ಅವನು ಎಲ್ಲ ಸಂಪತ್ತನ್ನು (ಐಹಿಕ, ಪಾರತ್ರಿಕ) ಹೊಂದುತ್ತಾನೆ.[೨]

## ಸಂದೇಶಗಳು

೧. ಅಹಂಕಾರರಹಿತನಾದವನು ತನಗೆ ಬರುವ ಸುಖದುಃಖಗಳನ್ನು ಹೇಗೆ ನಿರ್ವಹಿಸುತ್ತಾನೆ, ನಿರ್ವಹಿಸಬೇಕು ಎಂಬ ಬಗ್ಗೆ ಹಲವಾರು ಸಂದೇಶಗಳು ಇಲ್ಲಿವೆ.

೨. ಅಹಂಕಾರವಿಲ್ಲದವನು ಭಾವಿಸಬೇಕಾದುದು ಶಾಸನ ಮಾಡುವವನು ನಾನಲ್ಲ, ನನ್ನಿಂದ ಭಿನ್ನವಾಗಿ, ಉತ್ತಮನಾಗಿ ಇರುವ ಒಂದು ಸರ್ವೋತ್ತಮಶಕ್ತಿ, ಪರಮಾತ್ಮ. ಅವನ ಪ್ರೇರಣೆಯಿಂದಲೇ ಎಲ್ಲರ ಜಗದ್ವ್ಯಾಪಾರ ಕೂಡಾ.

೩. ನಮಗೆ ಸಿಗಬೇಕಾದುದೆಲ್ಲ ಅವನು ಕೊಟ್ಟಾಗಲೇ ಹೊರತು, ನಾವು ಎಷ್ಟೇ ವಿಧವಾಗಿ ಪ್ರಯತ್ನಿಸಿದರೂ ಸಿಗದು (ಶ್ಲೋ. ೨೦,೨೨,೨೩).

೪. ಅಜ್ಞಾನಿಯು ಸಿಗಲಿಲ್ಲ (ಬೇಕಾದುದು) ಎಂದು ದುಃಖಿಸುತ್ತಾನೆ. ಆದರೆ ಆಗ

---

೧ ಲಬ್ಧವ್ಯಾನ್ಯೇವ ಲಭತೇ ಗಂತವ್ಯಾನ್ಯೇವ ಗಚ್ಛತಿ ।
ಪ್ರಾಪ್ತವ್ಯಾನ್ಯೇನ ಪ್ರಾಪ್ನೋತಿ ದುಃಖಾನಿ ಚ ಸುಖಾನಿ ಚ ॥ - ೬೨/೨೨

೨ ಏತದ್ ವಿದಿತ್ವಾ ಕಾರ್ತ್ಸ್ನ್ಯೇನ ಯೋ ನ ಮುಹ್ಯತಿ ಮಾನವಃ ।
ಕುಶಲಃ ಸುಖದುಃಖೇಷು ಸ ವೈ ಸರ್ವಧನೇಶ್ವರಃ ॥ - ೬೨/೨೩

ಜ್ಞಾನಿಯು ಹಿಗ್ಗುವುದಿಲ್ಲ, ಕುಗ್ಗುವುದಿಲ್ಲ. ಅವನ ಚರ್ಯೆ ಸಾಮಾನ್ಯರಿಗೆ ಅರ್ಥ-ವಾಗುವುದಿಲ್ಲ.

೫. ಇಲ್ಲಿ ನಮುಚಿಯಿಂದ ಉತ್ತಮಾಧಿಕಾರಿಯಾದ ಇಂದ್ರ ಇವೆಲ್ಲ ಕೇಳಿದನೇ ಹೊರತು ತಿಳಿಸಿಕೊಳ್ಳಲಿಲ್ಲ. ಆದರೆ ನಮುಚಿಯಿಂದ ದಾನವನಿಗೂ ಇಂತಹ ಉತ್ಕೃಷ್ಟ ಬುದ್ಧಿಯ ಹಿನ್ನೆಲೆ ಏನೆಂಬುದು ಈ ಉಪಾಖ್ಯಾನದಿಂದ ತಿಳಿಯುವುದಿಲ್ಲ. ಅದಕ್ಕೆ ಇನ್ನೂ ವಿಶೇಷ ಶಾಸ್ತ್ರರಹಸ್ಯಗಳ ಜ್ಞಾನ ಬೇಕು.

ಇತ್ಯಾದಿ...

## ೧೮೯. ರಾಜ್ಯ ನಾಶವಾದಾಗ ಶ್ರೇಯಸ್ಸು ಹೇಗೆ?

ಧರ್ಮರಾಜನ ಪ್ರಶ್ನೆ - ಬಂಧು ಹಾಗೂ ರಾಜ್ಯಗಳ ನಾಶವಾದಾಗ (ಕೈ ತಪ್ಪಿದಾಗ), ವ್ಯಸನದಲ್ಲಿ ಮುಳುಗಿದ ಮನುಷ್ಯನಿಗೆ ಮತ್ತೆ ಶ್ರೇಯಃಪ್ರಾಪ್ತಿ ಹೇಗೆ?[೧]

ಇದಕ್ಕೆ ಭೀಷ್ಮರು 'ಮಡದಿ, ಮಕ್ಕಳು, ಧನ, (ರಾಜ್ಯ ಸಂಪತ್ತು)ಗಳನ್ನು ಕಳೆದುಕೊಂಡ, ಸುಖಗಳಿಂದ ವಂಚಿತನಾದ, ಅಗಾಧವಾದ ದುಃಖದಲ್ಲಿ ಮುಳುಗಿದ ವ್ಯಕ್ತಿಯು ಧೈರ್ಯತಾಳಿ ಅದನ್ನೇ ಅವಲಂಬಿಸಿದಲ್ಲಿ ಶ್ರೇಯಸ್ಸನ್ನು ಹೊಂದಬಹುದು.[೨] ಧೈರ್ಯವಿದ್ದಲ್ಲಿ ಶರೀರ ಕ್ಷೀಣಿಸದು. ಆರೋಗ್ಯವಿದ್ದಲ್ಲಿ ಮತ್ತೆ ಸಂಪತ್ತನ್ನು ಪಡೆಯಬಹುದು.[೩] ಯಾವ ರಾಜನಿಗೆ ಸಾತ್ವಿಕವೃತ್ತಿ (ನಡತೆ) ಇರುತ್ತದೋ, ಅವಂತಹವನಿಗೆ ಧೈರ್ಯ, ಸ್ಥೈರ್ಯ, ಕಾರ್ಯಗಳಲ್ಲಿ ನಿಶ್ಚಯಬುದ್ಧಿ( ವ್ಯವಸಾಯಶ್ಚ ಕರ್ಮಸು)ಗಳಿರುವುದರಿಂದಾಗಿ ಶ್ರೇಯಸ್ಸು ಉಂಟಾಗುತ್ತದೆ. ಸಂಪತ್ತು ಲಭಿಸುತ್ತದೆ. ಈ ಬಗ್ಗೆ ಇಂದ್ರ, ಬಲಿಯ ಸಂವಾದರೂಪ ಇತಿಹಾಸವನ್ನು ಭೀಷ್ಮರು ಹೇಳಿದರು.

ಹಿಂದೆ ದೇವಾಸುರರ ಯುದ್ಧವಾಗಿ ದೈತ್ಯದಾನವರು ಸೋತರು. ಬಲಿಯಿಂದ ವಾಮನನು ಮೂರು ಹೆಜ್ಜೆ ನಿಮಿತ್ತ ಮಾಡಿ ತ್ರಿವಿಕ್ರಮನಾಗಿ ಬೆಳೆದು ಮೊದಲು ಲೋಕಗಳನ್ನು ಅಳೆದು ವ್ಯಾಪಿಸಿದ. ಇಂದ್ರ ದೇವಪತಿಯಾದ. ಆಗ ಮೂರು ಲೋಕದಲ್ಲಿ ಯಜ್ಞಗಳು ಆರಂಭವಾಗಿ ಚಾತುರ್ವರ್ಣ್ಯ ವ್ಯವಸ್ಥೆಯು ವೃದ್ಧಿ ಹೊಂದಿತು. ಬ್ರಹ್ಮದೇವ ಆನಂದ ಹೊಂದಿದ. ಇಂದ್ರದೇವರು ತಮ್ಮ ದಿಕ್ಪಾಲಕರೊಂದಿಗೆ ನಾಲ್ಕು ದಂತಗಳುಳ್ಳ ಐರಾವತದ ಮೇಲೆ ಕುಳಿತು ಸಕಲ ವೈಭವದೊಂದಿಗೆ ಲೋಕಯಾತ್ರೆಗೆ ಹೊರಟನು. ಒಮ್ಮೆ ಸಮುದ್ರದ ತೀರದ ಒಂದು ಗುಹೆಯಲ್ಲಿ ವಿರೋಚನಪುತ್ರ ಬಲಿಯನ್ನು ನೋಡಿ, ಆತನ ಬಳಿಗೆ ಬಂದ. ಐರಾವತದ ಮೇಲೆ ಕುಳಿತ ಇಂದ್ರನನ್ನು ನೋಡಿದ ಬಲಿ ವ್ಯಥೆ ಪಡಲಿಲ್ಲ, ಶೋಕ ಪಡಲಿಲ್ಲ.[೫]

---

೧ ಮಗ್ನಸ್ಯ ವ್ಯಸನೇ ಕೃಚ್ಛ್ರೇ ಕಿಂ ಶ್ರೇಯಃ ಪುರುಷಸ್ಯ ಹಿ ।
ಬಂಧುನಾಶೇ ಮಹೀಪಾಲ ರಾಜ್ಯನಾಶೇಽಪಿ ವಾ ಪುನಃ ॥ - ೬೩/೧

೨ ಪುತ್ರದಾರೈಃ ಸುಖೈಶ್ಚೈವ ವಿಯುಕ್ತಸ್ಯ ಧನೇನ ಚ ।
ಮಗ್ನಸ್ಯ ವ್ಯಸನೇ ಕೃಚ್ಛ್ರೇ ಧೃತಿಃ ಶ್ರೇಯಸ್ಕರೀ ನೃಪ ॥ - ೬೩/೩

೩. ಧೈರ್ಯೇಣ ಯುಕ್ತಸ್ಯ ಸತಃ ಶರೀರಂ ನ ವಿಶೀರ್ಯತೇ ।
ಆರೋಗ್ಯಾಚ್ಚ ಶರೀರಸ್ಯ ಸ ಪುನರ್ವಿಂದತೇ ಶ್ರಿಯಮ್ ॥ - ೬೩/೪

೪ ಯಸ್ಯ ರಾಜ್ಞೋ ನರಾಸ್ತಾತ ಸಾತ್ತ್ವಿಕೀಂ ವೃತ್ತಿಮಾಸ್ಥಿತಾಃ ।
ತಸ್ಯ ಸ್ಥೈರ್ಯಂ ಚ ಧೈರ್ಯಂ ಚ ವ್ಯವಸಾಯಶ್ಚ ಕರ್ಮಸು ॥ - ೬೩/೫

೫ ತಮೈರಾವತಮೂರ್ಧಸ್ಥಂ ಪ್ರೇಕ್ಷ್ಯ ದೇವಗಣೈರ್ವೃತಮ್ ।
ಸುರೇಂದ್ರಮಿಂದ್ರಂ ದೈತ್ಯೇಂದ್ರೋ ನ ಶುಶೋಚ ನ ವಿವ್ಯಥೇ ॥ - ೬೩/೧೨

ಬಲಿಯು ನಿರ್ವಿಕಾರನಾಗಿಯೂ, ನಿರ್ಭೀತನಾಗಿಯೂ ಇದ್ದನು. ಆಗ ಶಕ್ರನು ಬಲಿಯನ್ನು ಹೀಗೆ ಪ್ರಶ್ನಿಸಿದನು.

(ವಿ.ಸೂ.: ಇದೇ ಮೋಕ್ಷಧರ್ಮಪರ್ವದ ೫೯ ಹಾಗೂ ೬೦ನೇ ಅಧ್ಯಾಯದಲ್ಲಿ ಇಂದ್ರ-ಬಲಿ ಸಂವಾದದಲ್ಲಿ ಇಂದ್ರನು ಬಲಿಯನ್ನು ಆತನ ಹಿಂದಿನ ವೈಭವ ನಾಶವಾದುದು, ಈಗ ನಿರ್ಗತಿಕನಾಗಿ ಕತ್ತೆಯ ಜನ್ಮ ಹೊಂದಿದ್ದ ಬಗ್ಗೆ ಛೇಡಿಸಿ ಅವಮಾನಕರವಾಗಿ ಮಾಡನಾಡುವ, ಆಕ್ಷೇಪಿಸುವ ವಿಷಯವಿದೆ. ಅಲ್ಲಿ ಹಿನ್ನೆಲೆಯೂ ದೇವಾಸುರ ಯುದ್ಧದಲ್ಲಿ ದೇವತೆಗಳ ಗೆಲುವಿನ ನಂತರ ಎಂದಿದೆ. ಇಲ್ಲಿ ಬಲಿಚಕ್ರವರ್ತಿಯನ್ನು ಸುತಲಲೋಕಕ್ಕೆ ಕಳಿಸಿದ ವಾಮನಾವತಾರ-ತ್ರಿವಿಕ್ರಮಾವತಾರದ ನಂತರದ ಘಟನೆಯು ಇಲ್ಲಿ ಬಂದಿದೆ. ಈ ಹಿನ್ನೆಲೆಯಲ್ಲಿ ಅಲ್ಪ ಬದಲಾವಣೆಯಿದೆ. ಮುಂದೆ ವಿಷಯವೆಲ್ಲ ಪ್ರಾಯಃ ಒಂದೇ ಆಗಿದೆ ಎಂದು ತೋರುತ್ತದೆ. ಎರಡೂ ಕಡೆ ಇಂದ್ರನ ವರ್ತನೆ ಸ್ವಲ್ಪ ಆಕ್ಷೇಪಾರ್ಹ. ಇಲ್ಲಿ ಅಷ್ಟಾಗಿ ಇಲ್ಲ, ಅಲ್ಲಿ ಬ್ರಹ್ಮದೇವರ ಅನುಮತಿ ಇದ್ದಿಲ್ಲ. ಬಲಿಸಂಹಾರಕ್ಕೂ ಅನುಮತಿಯನ್ನು ಕೊಟ್ಟಿರಲಿಲ್ಲ. ಆದ್ದರಿಂದ ಈ ಅಧ್ಯಾಯದ ಸಾರವನ್ನು ಅತಿ ಸಂಕ್ಷಿಪ್ತಗೊಳಿಸಲಾಗಿದೆ.)

ಇಲ್ಲಿ ಇಂದ್ರದೇವ ಐರಾವತದಿಂದ ಇಳಿಯದೇನೇ ಬಲಿಯನ್ನು 'ಎಲೈ ಬಲಿಯೇ! ನಿನ್ನ ಶತ್ರುವಿನ ಸಮೃದ್ಧಿಯನ್ನು ಕಂಡೂ ದುಃಖಪಡುತ್ತಿಲ್ಲ. ಇದು ಸಾಮಾನ್ಯರಿಗೆ ಅಸಾಧ್ಯ. ಈ ಗುಣ ನೀನು ಶೌರ್ಯದಿಂದ, ವೃದ್ಧರ ಸೇವೆಯಿಂದ ಅಥವಾ ತಪಸ್ಸಿನಿಂದ ಪಡೆದೆಯಾ?[೧]

ಮೂರು ಲೋಕದ ರಾಜ್ಯಸಂಪತ್ತು ಕಳೆದುಕೊಂಡ ಯಾರು ತಾನೇ ಜೀವಿಸಲು ಉತ್ಸಾಹ ಹೊಂದಿಯಾರು?[೨]

ಹೀಗಲ್ಲದೆ ಇನ್ನೂ ಅನೇಕ ಕ್ರೂರವಾದ, ತಿರಸ್ಕರಿಸುವ ಮಾತನ್ನು ಕೇಳಿ ಬಲಿಯು ಇಂದ್ರನಿಗೆ ಕಳವಳಕ್ಕೆ ತುತ್ತಾಗದೇ (ಬೇಸರಿಸದೆ) ಉತ್ತರಿಸಿದನು.[೩] ೬೦ನೇ ಅಧ್ಯಾಯಕ್ಕಿಂತ ಅನೇಕ ಹೊಸರೀತಿಯ ವಿಷಯ ಪ್ರತಿಪಾದನೆಯಿದೆ ಬಲಿಯ ಮಾತುಗಳಲ್ಲಿ. ಅಲ್ಲಲ್ಲಿ ಕೆಲವನ್ನು ನೋಡೋಣ.

೧. ನಾನು ಶತ್ರುಗಳಿಂದ ಕಾಲನಾಮಕ ಭಗವಂತನಿಂದ ಸೋಲಿಸಲ್ಪಟ್ಟಿದ್ದೇನೆ. ಆದರೂ ಮತ್ತೆ ನನ್ನನ್ನು ಹೀಗಳೆಯುವುದರಿಂದ ನಿನಗಾಗುವ ಲಾಭವೇನು? ವಜ್ರಾಯುಧ ಪಾಣಿಯಾಗಿ ನಿನ್ನನ್ನು ಕಾಣುತ್ತಿದ್ದೇನೆ (ನನ್ನನ್ನು ವಜ್ರದಿಂದ ಕೊಲ್ಲಲು ಬಂದಿಯಾ?).

---

೧ ದೈತ್ಯ ನ ವ್ಯಥಸೇ ಶೌರ್ಯಾದಥ ವಾ ವೃದ್ಧಸೇವಯಾ ।
ತಪಸಾ ಭಾವತತ್ವಾದ್ವಾ ಸರ್ವಥೈತತ್ ಸುದುಷ್ಕರಮ್ ॥ - ೬೩/೧೪

೨ ತ್ರೈಲೋಕ್ಯರಾಜ್ಯನಾಶೇ ಹಿ ಕೋಽನ್ಯೋ ಜೀವಿತುಮುತ್ಸಹೇತ್ ॥ - ೬೩/೧೯

೩ ಏತಚ್ಚಾನ್ಯಚ್ಚ ಪರುಷಂ ಬ್ರುವಂತಂ ಪರಿಭೂಯ ತಮ್ ।
ಶ್ರುತ್ವಾ ಸುಖಮಸಂಭ್ರಾಂತೋ ಬಲಿರ್ವೈರೋಚನೋಽಬ್ರವೀತ್ ॥ - ೬೩/೨೦

೨. ಮಹಾಶಕ್ತಿಶಾಲಿಯಾಗಿದ್ದರೂ ವಶನಾದ ಶತ್ರುವನ್ನು ದಯೆಯಿಂದ ನೋಡುವವರು ಉತ್ತಮಪುರುಷರೆಂದು ವಿದ್ವಾಂಸರು ಹೇಳುತ್ತಾರೆ[೧] (ಆದರೆ ನೀನು ಹಾಗೆ ವರ್ತಿಸುತ್ತಿಲ್ಲ).

೩. ಯುದ್ಧದಲ್ಲಿ ಜಯಾಪಜಯಗಳು ಅನಿಶ್ಚಿತ. ನಾನು ಈಗ ಸೋತಿರುತ್ತೇನೆ. ನೀನು ಗೆದ್ದಿರುವುದು ಅಷ್ಟೇ ಸಹಜ.

೪. ದೇವತಾಶ್ರೇಷ್ಠನೇ! ಎಲ್ಲ ಪ್ರಾಣಿಗಳಿಗೂ ನಾನೇ ಒಡೆಯ. ನನ್ನ ಪರಾಕ್ರಮದಿಂದ ಬಲಿಯನ್ನು ಗೆದ್ದಿದ್ದೇನೆ ಎಂಬ ಅಹಂಕಾರ ನಿನಗೆ ಬರದಿರಲಿ.[೨]

೫. ನನ್ನ ಪರಿಸ್ಥಿತಿಯು ನಿನಗೆ ಮುಂದೆ ಬರಬಹುದು. ಇದು ಪರ್ಯಾಯ ವ್ಯವಸ್ಥೆಯಷ್ಟೇ. ಇದರಲ್ಲಿ ನನ್ನದು, ನಿನ್ನದು ಯಾರ ಕೈವಾಡ ಇಲ್ಲ. ಇದೆಲ್ಲ ಕಾಲರೂಪಿ ಭಗವಂತನ ಸಂಕಲ್ಪ ಇಚ್ಛೆ.[೩]

೬. ವಿದ್ಯಾ, ತಪಸ್ಸು ಮಿತ್ರಬಾಂಧವರು ಯಾರೂ ಕಾಲಪೀಡಿತನಾದವನನ್ನು ರಕ್ಷಿಸಲು ಸಮರ್ಥರಲ್ಲ.[೪]

೭. ಒಂದು ವೇಳೆ ಕಾರ್ಯ ಮಾಡುವವನು ನಿಜವಾಗಿಯೂ ಜೀವನಾಗಿದ್ದರೆ, ಅಂತಹ ಜೀವನನ್ನು ಸೃಷ್ಟಿಸುವವನು ಬೇರೆ ಯಾರೂ ಇರುತ್ತಿರಲಿಲ್ಲ. ಇಂತಹ ಜೀವನಿಗೂ ಕಾರಣನಾದವನು ಭಗವಂತ ಇರುವುದರಿಂದ ಜೀವನು ಎಂದಿಗೂ ಈಶ್ವರನಾಗಲಾರ.[೫]

೮. ಕಾಲಬಲದಿಂದ ನಾನು ನಿನ್ನನ್ನು ಜಯಿಸಿದ್ದು. ಅದೇ ಯೋಗದಿಂದ ನಾನು ನಿನ್ನಿಂದ ಪರಾಜಿತನಾದೆ. ಮುನ್ನಡೆಯುತ್ತಿರುವ ಪ್ರಾಣಿಗಳೊಡನೆ ಕಾಲವು ಸಾಗುತ್ತದೆ. ನಡೆಯುವ ಶಕ್ತಿಯನ್ನು ಕಾಲವೇ ಕೊಡುತ್ತದೆ. ಪ್ರಜೆಗಳ ಸಂಹಾರವೂ ಕಾಲನಿಂದಲೇ.[೬]

---

೧ ಯಸ್ತು ಶತ್ರೋರ್ವಶಸ್ಥಸ್ಯ ಶಕ್ತೋಽಪಿ ಕುರುತೇ ದಯಾಮ್ ।
ಹಸ್ತಪ್ರಾಪ್ತಸ್ಯ ವೀರಸ್ಯ ತಂ ಚೈವ ಪುರುಷಂ ವಿದುಃ ॥ – ೬೩/೨೨

೨ ಮಾ ಚ ತೇ ಭೂತ್ಸ್ವಭಾವೋಽಯಂ ಮಯಾ ದೈವತಪುಂಗವ ।
ಈಶ್ವರಃ ಸರ್ವಭೂತಾನಾಂ ವಿಕ್ರಮೇಣ ಜಿತೋ ಬಲಾತ್ ॥ – ೬೩/೨೫

೩. ಕಾಲಃ ಕಾಲೇ ನಯತಿ ಮಾಂ ತ್ವಾಂ ಚ ಕಾಲೋ ನಯತ್ಯಯಮ್ ।
ತೇನಾಹಂ ತ್ವಂ ಯಥಾ ನಾದ್ಯ ತ್ವಂ ಚಾಪಿ ನ ಯಥಾ ವಯಮ್ ॥ – ೬೩/೨೯

೪ ನ ವಿದ್ಯಾ ನ ತಪೋದಾನಂ ನ ಮಿತ್ರಾಣಿ ನ ಬಾಂಧವಾಃ ।
ಶಕ್ನುವಂತಿ ಪರಿತ್ರಾತುಂ ನರಂ ಕಾಲೇನ ಪೀಡಿತಮ್ ॥ – ೬೩/೩೧

೫ ಯದಿ ಕರ್ತಾ ಭವೇತ್ ಕರ್ತಾ ನ ಕ್ರಿಯೇತ ಕದಾಚನ ।
ಯಸ್ಮಾತ್ ವಿಕ್ರಿಯತೇ ಕರ್ತಾ ತಸ್ಮಾತ್ ಕರ್ತಾಽಪ್ಯನೀಶ್ವರಃ ॥ – ೬೩/೩೪

೬ ಕಾಲೇನ ತ್ವಾಮಹಮಜಯಂ ಕಾಲೇನಾಹಂ ಜಿತಸ್ತ್ವಯಾ ।
ಗಂತಾ ಗತಿಮತಾಂ ಕಾಲಃ ಕಾಲಃ ಕಲಯತಿ ಪ್ರಜಾಃ ॥ – ೬೩/೩೫

೯. ನೋಡು ಇಂದ್ರ! ವಿಶ್ವಾಸ ಮಾಡಬಾರದ ಕಡೆ ವಿಶ್ವಾಸ ಮಾಡುತ್ತಿರುವೆ. ಅಶಾಶ್ವತವಾದ ಇಂದ್ರಪದವಿಯನ್ನು ಶಾಶ್ವತವೆಂದು ಭಾವಿಸಿರುವೆ. ಕಾಲಪುರುಷನಿಂದ ಆಕ್ರಾಂತವಾದ ವ್ಯಕ್ತಿಯು ಹೀಗೆ ವಿಪರೀತ ಭ್ರಮೆಗೆ ತುತ್ತಾಗುತ್ತಾನೆ.[೧]

ರಾಜ್ಯಲಕ್ಷ್ಮಿಯು ಇಲ್ಲಿಯವರೆಗೆ ಎಷ್ಟು ರಾಜರನ್ನು ಬಿಟ್ಟು ಹೋಗಿದ್ದಾಳೆ ಎಂಬುದು ಎಣಿಕೆ ಮಾಡಲಾಗುವುದಿಲ್ಲ. ನಿನ್ನ ನಂತರವೂ ಅನೇಕ ಇಂದ್ರರು ಸಾಲಾಗಿ ನಿಂತಿದ್ದಾರೆ. ವೃಕ್ಷ ಔಷಧಿ, ಲತೆ, ವಜ್ರ, ವೈಢೂರ್ಯಾದಿಗಳಿಂದ, ಪ್ರಾಣಿಗಳಿಂದ, ವನಗಳಿಂದ ಸಮೃದ್ಧವಾದ ಈ ಭೂಮಿಯನ್ನು ಉಪಭೋಗಿಸಿದ ಸಾವಿರಾರು ರಾಜರು ಈಗ ಕಾಣುತ್ತಿಲ್ಲ. ರಾಜರ ಹೆಸರುಗಳನ್ನು ಬಲಿ ಹೇಳುತ್ತಾನೆ. ಅವರಲ್ಲಿ ದೈವೀಸ್ವಭಾವದ ಪೃಥು, ಐಲ, ಪ್ರಹ್ಲಾದ, ಋಷಭ ಮೊದಲಾದವರೂ, ದೈತ್ಯಸ್ವಭಾವದ ನರಕಾಸುರ, ಶಂಬರಾಸುರ ಮೊದಲಾದವರೂ ಸೇರಿ **೪೪ ರಾಜರ** ಹೆಸರನ್ನು ಹೇಳಲಾಗಿದೆ. ಇವರೇ ಮೊದಲಾದ ದೈತ್ಯೇಂದ್ರರು, ದಾನವೇಂದ್ರರು, ಸಾತ್ತ್ವಿಕರ ರಾಜಚಕ್ರವರ್ತಿಗಳೆಲ್ಲ ಪೃಥಿವಿಯನ್ನಾಳಿ ಬಿಟ್ಟು ಹೋದವರೇ. ಹಾಗೆಯೇ ನೀನು ಬಿಟ್ಟು ಹೋಗುತ್ತೀಯಾ ಎಂದು ಬಲಿಯು ಇಂದ್ರನನ್ನೂ ಛೇಡಿಸುತ್ತಾನೆ.

ನೂರು ಅಶ್ವಮೇಧ ಯಾಗವನ್ನು ಮಾಡಿದವನು ನೀನೊಬ್ಬನೇ ಅಲ್ಲ. ನಾನು ಹೇಳಿದವರೆಲ್ಲ ನೂರು ಅಶ್ವಮೇಧಯಾಗ ಮಾಡಿದವರೇ. ಎಲ್ಲರೂ ಧರ್ಮಪಾರಾಯಣರೇ. ನಿರಂತರ ಸತ್ರಯಾಗ ಮಾಡಿದವರೇ ಆಗಿದ್ದಾರೆ. ಎಲ್ಲರೂ ಅಂತರಿಕ್ಷಗಾಮಿಗಳು. ನೂರಾರು ಮಾಯ ಬಲ್ಲವರು. ಇಚ್ಛಾರೂಪಿಗಳು, ಸತ್ಯವ್ರತನಿಷ್ಠರು, ವೇದವ್ರತರು, ಅನೇಕ ಶಾಸ್ತ್ರ ಬಲ್ಲವರು, ಬಯಸಿದ ಐಶ್ವರ್ಯ ಹೊಂದಿದವರೇ. ಯಥಾಶಕ್ತಿ ದಾನಶೀಲರು, ಮತ್ಸರಹೀನರು, ಎಲ್ಲ ಪ್ರಾಣಿಗಳ ವಿಷಯದಲ್ಲಿ ಯೋಗ್ಯವಾಗಿ ವ್ಯವಹರಿಸುತ್ತಿದ್ದವರೇ. ಇವರೆಲ್ಲ ದಾಕ್ಷಾಯಣೀಪುತ್ರರಾಗಿದ್ದವರು. ಮೇಲಿನ ರಾಜನರೂ ಶತ್ರುರಾಜರನ್ನು ದುಃಖಪಡಿಸಿದವರು. ಮುಂದೆ ಕಾಲಪ್ರಭಾವಕ್ಕೆ ಒಳಗಾಗಿ ಸಂಹೃತರಾದವರು.

ನೀನು ಕೂಡಾ ವಿಸ್ತಾರವಾದ ರಾಜ್ಯವನ್ನು ಅನುಭವಿಸುತ್ತಿರುವೆ. ಕಾಲನ ಅತಿಕ್ರಮಣಕ್ಕೆ ಒಳಗಾದಾಗ ನೀನು ಪ್ರಾಣ ಬಿಡಲೇಬೇಕಾಗುತ್ತದೆ. ಇದನ್ನು ತಿಳಿದು ಐಶ್ವರ್ಯಮದ ತ್ಯಾಗ ಮಾಡು. ಇದು ಅರ್ಥವಾಗದೇ ಇದ್ದಲ್ಲಿ ದುಃಖ ನಿಯಂತ್ರಿಸಲು ಆಗುವುದಿಲ್ಲ. ನಿನ್ನ ರಾಜ್ಯ ನಾಶವಾದಾಗ ನೀನೂ ಶೋಕದಲ್ಲಿ ಬೆಂದು ಹೋಗುವೆ.[೨]

---

೧ ಅವಿಶ್ವಾಸೇ ವಿಶ್ವಸಿಷಿ ಮನ್ಯಸೇ ಚಾಧ್ರುವಂ ಧ್ರುವಮ್ ।
ಮಮೇಯಮಿತಿ ಮೋಹಾತ್ತ್ವಂ ರಾಜಶ್ರಿಯಮಭೀಪ್ಸಸಿ ॥ – ೬೩/೪೪

೨ ಮುಂಚೇಚ್ಛಾಂ ಕಾಮಭೋಗೇಷು ಮುಂಚೇಮಂ ಶ್ರೀಭವಂ ಮದಮ್ ।
ಏವಂ ಸ್ವರಾಜ್ಯನಾಶೇ ತ್ವಂ ಶೋಕಂ ಸಂಪ್ರಸಹಿಷ್ಯಸಿ ॥
ಶೋಕಕಾಲೇ ಶುಚೋ ಮಾ ತ್ವಂ ಹರ್ಷಕಾಲೇ ಚ ಮಾ ಹೃಷಃ ।
ಅತೀತಾನಾಗತೇ ಹಿತ್ವಾ ಪ್ರತ್ಯುತ್ಪನ್ನೇನ ವರ್ತಯ ॥ – ೬೩/೬೪,೬೫

ಸಂತಾಪ ಉಂಟುಮಾಡುವ ಮಾತುಗಳಿಂದ ನೀನು ನನ್ನನ್ನು ಚುಚ್ಚುತ್ತಿರುವೆ. ನಾನು ಮನೋನಿಗ್ರಹ ಮಾಡಿ ಶಾಂತನಾಗಿದ್ದೇನೆ. ಇದರಿಂದಲೇ ನೀನು ನಿನ್ನನ್ನು ಮಹಾಮಹಿಮನೆಂದು ಭಾವಿಸಿಕೊಂಡಿರುವೆ. ಕಾಲ ಮೊದಲು ನನ್ನನ್ನು ಆಕ್ರಮಿಸಿದ್ದಾನೆ. ಅವನೇ ನಿನ್ನನ್ನೂ ಪೀಡಿಸುತ್ತಾನೆ. ಕಾಲಪೀಡಿತನಾಗಿಯೇ ನಿಂತ ನನ್ನ ಬಳಿ ನೀನು ಗರ್ಜನೆ ಮಾಡುತ್ತಿರುವೆ. ದೇವತೆಗಳ ೧೦೦೦೦ವರ್ಷಗಳವರೆಗೆ ನೀನು ಇಂದ್ರಪದವಿಯಲ್ಲೇ ಇರುವೆ. ಇಂದ್ರಪದವಿಯಿಂದ ನಾನು ಹೇಗೆ ಚ್ಯುತನಾಗಿದ್ದೇನೋ ಹಾಗೆ ನೀನೂ ಕೂಡಾ ಅಂತಹ ಅವಸ್ಥೆ ಹೊಂದುವೆ.

ನೀನು ಇಂದ್ರಪದವಿಯನ್ನು ಯಾವ ಶುಭಕಾರ್ಯವನ್ನು ಮಾಡಿ ಪಡೆದೆ? ನಾವು ಯಾವ ಅಕೃತ್ಯ ಮಾಡಿ ಅದೇ ಪದವಿಯನ್ನು ಕಳೆದುಕೊಂಡೆವು ಬಲ್ಲೆಯಾ? ಇವೆಲ್ಲಕ್ಕೂ ಕಾಲವೇ ಕಾರಣಕರ್ತ. ಉಳಿದುದೆಲ್ಲ ನಿಮಿತ್ತ ಮಾತ್ರ. ಕರ್ತಾ-ವಿಕರ್ತಾ ಎಲ್ಲಕ್ಕೂ ಕಾರಣ ಕಾರಣ. ವಿದ್ವಾಂಸರು ತಮಗಾಗುವ ನಾಶ, ವಿನಾಶ, ಐಶ್ವರ್ಯ, ಸುಖದುಃಖ, ಹುಟ್ಟುಸಾವುಗಳಿಂದ ತುಂಬಾ ಸಂತೋಷಪಡಬಾರದು. ಶೋಕಿಸಲೂಬಾರದು. ನನ್ನಪೌರುಷವೆಷ್ಟುಇತ್ತು ಎಂಬುದು ನಿನಗೆ ಗೊತ್ತು. ವನ, ವನವಾಸಿಗಳಿಂದ ಕೂಡಿದ ನೂರಾರು ಪರ್ವತಗಳನ್ನು ನಿನ್ನ ತಲೆಯ ಮೇಲೆ ಎಸೆಯುತ್ತಿದ್ದೆ. ಅವುಗಳಲ್ಲಿ ಎಷ್ಟೋ ಶಿಖರಗಳು ಭಿನ್ನವಾಗಿ ಹೋಗುತ್ತಿದ್ದವು. ಆದರೆ ಈಗ ಏನು ತಾನೇ ಮಾಡಲು ಸಾಧ್ಯ? ಕಾಲವೆಂಬುದು ದಾಟಲು ಅಸಾಧ್ಯ. ವಜ್ರಾಯುಧ ಸಹಿತನಾಗಿ ಬಂದ ನಿನ್ನನ್ನು ಮುಷ್ಟಿಯಿಂದಲೇ ಹೊಡೆದು ಸಂಹರಿಸಬಹುದು.[೧] ಆದರೂ ಈಗ ಆ ಕಾಲವಲ್ಲ. ಇದು ಕ್ಷಮಾಕಾಲ. ಪರಾಕ್ರಮ ಕಾಲವಲ್ಲ. ಆದ್ದರಿಂದ ನಿನ್ನ ಅಪರಾಧಗಳನ್ನು ಕ್ಷಮಿಸಿ, ಸಹಿಸಿಕೊಂಡಿದ್ದೇನೆ. ನಾನೀಗ ಕಾಲಾಗ್ನಿಯಿಂದ ಸುತ್ತುವರಿಯಲ್ಪಟ್ಟಿದ್ದೇನೆ. ಕಾಲಪಾಶದಿಂದ ಬದ್ಧನಾದ ನನ್ನ ಬಳಿ ಬಂದು ಆತ್ಮಪ್ರಶಂಸೆ ಮಾಡಿಕೊಳ್ಳುತ್ತಿರುವೆ.[೨]

ಪುರುಷನು ಯಜ್ಞಪಶುವನ್ನು ಪಾಶದಿಂದ ಬಂಧಿಸಿದಂತೆ ನನ್ನನ್ನು ಪಾಶಗಳಿಂದ ಬಂಧಿಸಿಟ್ಟಿದ್ದಾನೆ ಈ ಕಾಲಪುರುಷ.

ಈ ನನ್ನ ದುಸ್ಥಿತಿಗೆ ನಾನು ಕರ್ತನಲ್ಲ, ನೀನೂ ಅಲ್ಲ, ಸದಾ ಎಲ್ಲರಿಗೂ ಪ್ರಭುವಾದ ಆ ಕಾಲಪುರುಷನೇ ವೃಕ್ಷದಲ್ಲಿರುವ ಹಣ್ಣನ್ನು ಪಕ್ವ ಮಾಡುವಂತೆ ನಮ್ಮನ್ನು ಪಕ್ವ ಮಾಡುತ್ತಾನೆ.[೩]

---

೧ ಕಿಂ ನು ಶಕ್ಯಂ ಮಯಾ ಕರ್ತುಂ ಯತ್ಕಾಲೋ ದುರತಿಕ್ರಮಃ।
ನ ಹಿ ತ್ವಾಂ ನೋತ್ಸಹೇ ಹಂತುಂ ಸವಜ್ರಮಪಿ ಮುಷ್ಟಿನಾ॥ - ೬೩/೭೯

೨ ತ್ವಂ ಮಾ ಪರಿಣತೇ ಕಾಲೇ ಪರೀತಂ ಕಾಲವಹ್ನಿನಾ।
ನಿಯತಂ ಕಾಲಪಾಶೇನ ಬದ್ಧಂ ಶಕ್ರ ವಿಕತ್ಥಸೇ॥ - ೬೩/೮೧

೩. ನಾಹಂ ಕರ್ತಾ ನ ಕರ್ತಾ ತ್ವಂ ಕರ್ತಾ ಯಸ್ತು ಸದಾ ಪ್ರಭುಃ।
ಸೋಽಯಂ ಪಚತಿ ಕಾಲೋ ಮಾಂ ವೃಕ್ಷೇ ಫಲಮಿವಾಗತಮ್॥ - ೬೩/೮೪
ಈ ಶ್ಲೋಕವನ್ನು ಶ್ರೀಮನ್ಮಧ್ವಾಚಾರ್ಯರ ಸರ್ವಮೂಲಗ್ರಂಥಗಳಲ್ಲಿ ಉದಾಹರಿಸಿದ್ದನ್ನು

ಕಾಲನ ಪ್ರಭಾವವನ್ನರಿತ ವ್ಯಕ್ತಿಯು ಕಾಲಾಕ್ರಾಂತನಾಗಿದ್ದರೂ, ಶೋಕಿಸುವುದಿಲ್ಲ. ಏಕೆಂದರೆ ಶೋಕದಿಂದ ಯಾವ ಲಾಭವೂ ಇಲ್ಲ. ಆದ್ದರಿಂದ ನನ್ನ ಈ ಸ್ಥಿತಿಗೆ ದುಃಖಿಸುವುದಿಲ್ಲ.[೧]

ಬಲಿಯ ಈ ಮಾತುಗಳನ್ನು ಕೇಳಿ ಬಲಿಯ ಮೇಲಿನ ಸಿಟ್ಟನ್ನು ಉಪಸಂಹರಿಸಿಕೊಂಡು (ನಿಯಂತ್ರಿಸಿ) ಶಾಂತನಾಗಿ ಇಂದ್ರನು ಹೀಗೆ ಉತ್ತರಿಸಿದನು.

ದೈತ್ಯರಾಜನೇ! ವಜ್ರಾಯುಧಸಹಿತನಾಗಿ ಮೇಲಕ್ಕೆತ್ತಿದ್ದ ನನ್ನ ಬಾಹುಗಳನ್ನು, ವರುಣಪಾಶಗಳನ್ನು ನೋಡಿದ ವ್ಯಕ್ತಿಯು ಪ್ರಾಣಾಪಹಾರಿಯಾದ ಮೃತ್ಯುವೇ ಆಗಿದ್ದರೂ ಅವನಿಗೂ ಭಯವುಂಟಾಗಿ ಬುದ್ಧಿಯು ವ್ಯಸನಕ್ಕೆ ತುತ್ತಾಗುತ್ತದೆ. ಆದರೆ ಇಂತಹ ನನ್ನನ್ನು ನೋಡಿಯೂ, ನಿನ್ನ ಬುದ್ಧಿಯು ಅಚಲವಾಗಿಯೇ ಇದೆ. ಕಾರಣ ನಿನ್ನ ಬುದ್ಧಿಯು ಭಗವತ್ತತ್ತ್ವ (ವಿಷ್ಣು) ತಿಳಿದುದಾಗಿದೆ, ನಿಶ್ಚಲವಾಗಿದೆ. ಆದ್ದರಿಂದಲೇ ಸತ್ಯಪರಾಕ್ರಮಿಯೇ ನೀನು ನಿನ್ನ ಸ್ಥಿತಿಗೆ ದುಃಖಿಸುತ್ತಿಲ್ಲ.[೨]

ಸರ್ವವ್ಯಾಪಿಯಾದ, ಅವಿನಾಶಿಯಾದ, ಘೋರವಾದ, ನಿಗೂಢವಾದ ಕಾಲಾಗ್ನಿಯಿಂದಲೇ ದಹಿಸಲ್ಪಡುವ ಈ ಲೋಕವು ಅಶಾಶ್ವತವೆಂದು ನಾನೂ ತಿಳಿದಿದ್ದೇನೆ. ಕಾಲನಿಂದ ಬಿಡಿಸಿಕೊಳ್ಳುವುದು ಯಾರಿಗೂ ಆಗದು. ಕಾಲಪುರುಷನು ಸನಾತನನೂ, ಶಾಶ್ವತನೂ, ಧರ್ಮಸ್ವರೂಪಯೂ, ಸಮಸ್ತಪ್ರಾಣಿಗಳನ್ನು ಸಮಾನವಾಗಿ ಕಾಣುವವನು ಆಗಿದ್ದಾನೆ. ಅವನನ್ನು ದೂರಿಡುವುದು ಸಾಧ್ಯವಿಲ್ಲ. ಮೀರುವುದೆಂಬುದೂ ಇಲ್ಲ.[೩]

ನಾನು ಈಗತಾನೇ ಇವನನ್ನು ನೋಡಿದ್ದೆ. ಇಷ್ಟು ಬೇಗ ಸತ್ತುಹೋದನಲ್ಲ. ಅಯ್ಯೋ! ಆಶ್ಚರ್ಯವು! ಹೀಗೆ ಕಾಲನಿಂದ ಅಪಹೃತರಾದವರ ಬಗ್ಗೆ ಬೇರೆ ಜನರು ಮಾತನಾಡುವುದನ್ನು ಕೇಳುತ್ತಿರುತ್ತೇವೆ. ನಾವು ಗಳಿಸಿದ ಧನ, ಕನಕಾದಿಗಳು ಎಲ್ಲ ಭೋಗಗಳು, ಸ್ಥಾನ, ಐಶ್ವರ್ಯ (ಮಾನಗಳು)ಗಳೆಲ್ಲ ಅನಿತ್ಯ, ಅನಿಶ್ಚಿತ. ಎಲ್ಲವೂ ಉನ್ನತಸ್ಥಿತಿಗೆ ಹೋಗಿ ಅಧೋಗತಿಗಳಲ್ಲಿ ಮುಕ್ತಾಯವಾಗುವಂತಹುವುದಳೇ. ರಾಜನೇ! ನಿನ್ನ ಬುದ್ಧಿಯು ಈ ತತ್ತ್ವವನ್ನು ತಿಳಿದುಕೊಂಡಿದೆ. ಅಂತೆಯೇ ಸ್ಥಿರವಾಗಿದೆ. ನಾನು ಹಿಂದೆ ಐಶ್ವರ್ಯವಂತನಾಗಿದ್ದೆ

---

ಕಾಣಬಹುದು.

೧ ನ ಚ ಕಾಲೇನ ಕಾಲಜ್ಞಃ ಸ್ಪೃಷ್ಟಃ ಶೋಚಿತುಮರ್ಹತಿ।
ತೇನ ಶಕ್ರ ನ ಶೋಚಾಮಿ ನಾಸ್ತಿ ಶೋಕೇ ಸಹಾಯತಾ॥ – ೬೩/೧೬

೨ ಸವಜ್ರಮುದ್ಯತಂ ಬಾಹುಂ ದೃಷ್ಟ್ವಾ ಪಾಶಾಂಶ್ಚ ವಾರುಣಾನ್।
ಕಸ್ಯೇಹ ನ ವ್ಯಥೇದ್ ಬುದ್ಧಿರ್ಮೃತ್ಯೋರಪಿ ಜಿಘಾಂಸತಃ॥
ಸಾ ತೇ ನ ವ್ಯಥತೇ ಬುದ್ಧಿರಚಲಾ ತತ್ತ್ವದರ್ಶಿನೀ॥ – ೬೩/೧೯,೬೦

೩. ಪುರಾಣಃ ಶಾಶ್ವತೋ ಧರ್ಮಃ ಸರ್ವಪ್ರಾಣಭೃತಾಂ ಸಮಃ।
ಕಾಲೋ ನ ಪರಿಹಾರ್ಯಶ್ಚ ನ ಚಾಸ್ಯಾಸ್ತಿ ವ್ಯತಿಕ್ರಮಃ॥ – ೬೩/೬೬

ಎನ್ನುವುದನ್ನು ಮನಸ್ಸಿನಲ್ಲಿಯೂ ನೀನು ಸ್ಮರಿಸುತ್ತಿಲ್ಲ. ಇಂತಹ ಕಾಲಪ್ರಭಾವವನ್ನು ಅವನ ನಡೆಯನ್ನು ಯಾರಿಗೂ ಅರ್ಥವಾಗುತ್ತಿಲ್ಲ.

ಜನರೆಲ್ಲ ಹೊಟ್ಟೆಕಿಚ್ಚು, ದುರಭಿಮಾನ, ಲೋಭ, ಕಾಮ, ಕ್ರೋಧ, ಭಯ, ಆಸೆ, ಮೋಹಗಳಲ್ಲಿ ಆಸಕ್ತರಾಗಿ ವಿವೇಕರಹಿತರಾಗಿದ್ದಾರೆ. ನೀನು ಮಾತ್ರ ಭಗವದಭಿಪ್ರಾಯವನ್ನು ಚೆನ್ನಾಗಿ ತಿಳಿದವನಾಗಿದ್ದೀ. ವಿದ್ವಾಂಸನಾಗಿರುವೆ. ಜ್ಞಾನ, ತಪಸ್ಸಿನಿಂದ ಕೂಡಿರುವೆ. ಕಾಲಸ್ವರೂಪವನ್ನು ಅಂಗೈಯಲ್ಲಿರುವ ನೆಲ್ಲಿಕಾಯಿಯಂತೆ ಸ್ಪಷ್ಟವಾಗಿ ತಿಳಿದಿರುವೆ. ಜ್ಞಾನಿಗಳಿಗೆ ಇಷ್ಟನಾಗಿರುವೆ.[೧]

ನೀನು ಜಿತೇಂದ್ರಿಯ. ನಿನ್ನ ಬಳಿ ರಜಸ್ಸು, ತಮಸ್ಸು ಸುಳಿಯವು. ಪರಮಾತ್ಮನನ್ನು ಉಪಾಸನೆ ಮಾಡುತ್ತಿರುವೆ. ಇಂತಹ ನಿನ್ನನ್ನು ನೋಡಿದೊಡನೆ ನನಗೆ ಸಿಟ್ಟು ದೂರವಾಗಿ ದಯಾಬುದ್ಧಿಯು ಉಂಟಾಗಿದೆ. ನಿನ್ನನ್ನು ಬಂಧಿಸಲು ಅಥವಾ ಕೊಲ್ಲಲು ಇಚ್ಛಿಸುವುದಿಲ್ಲ. ಯಾರೊಡನೆಯೂ ಕಠಿಣವಾಗಿ ವರ್ತಿಸದಿರುವುದೇ ಮಹಾಧರ್ಮ. ನಿನ್ನ ಮೇಲೆ ಪೂರ್ಣ ಕರುಣೆ ಹುಟ್ಟಿದೆ. ನಾನು ನಿನ್ನನ್ನು ವರುಣಪಾಶಗಳಿಂದ ಬಂಧಿಸಿದ್ದೇನಷ್ಟೇ. ಅವು ಕ್ರಮೇಣ ತಾವೇ ಕಳಚಿ ಬೀಳುತ್ತವೆ.

ಪ್ರಜೆಗಳು ಧರ್ಮವಿರುದ್ಧವಾಗಿ ಯಾವಾಗ ವ್ಯವಹರಿಸುತ್ತಾರೋ, ಆಗ ನಿನಗೆ ಕಲ್ಯಾಣ ಉಂಟಾಗುತ್ತದೆ. ಇದರ ವಿವರಣೆಯನ್ನು ನಾಲ್ಕು ಶ್ಲೋಕಗಳಿಂದ ಕೊಡುತ್ತಾರೆ, ವ್ಯಾಸರು.

೧. ಯಾವಾಗ ಸೊಸೆ ಅತ್ತೆಯನ್ನು ತನ್ನ ಸೇವೆ ಮಾಡಲು ಹೇಳುತ್ತಾಳೋ, ಮಗನು ಅಜ್ಞಾನದಿಂದ ತಂದೆಯಿಂದ ಮನೆ ಕೆಲಸ ಮಾಡಿಸುತ್ತಾನೋ, ಬ್ರಾಹ್ಮಣರಿಂದ ಶೂದ್ರರು ಯಾವಾಗ ಪಾದ ತೊಳೆಸಿಕೊಳ್ಳುತ್ತಾರೋ, ಶೂದ್ರರು ಭಯರಹಿತರಾಗಿ ಯಾವಾಗ ಬ್ರಾಹ್ಮಣ ಕನ್ಯೆಯರನ್ನು ವಿವಾಹವಾಗುತ್ತಾರೋ, ಮನುಷ್ಯರು ನಾಚಿಕೆ ಬಿಟ್ಟು ವಿರುದ್ಧ ಯೋನಿಗಳಲ್ಲಿ ಸಂತಾನೋತ್ಪಾದನೆ ಮಾಡುತ್ತಾರೋ, ಉಚ್ಚ ನೀಚ, ಜಾತಿಭೇದವಿಲ್ಲದೆ ಒಂದೇ ಕಡೆ ಕುಳಿತು

---

೧ ಸಾ ತೇ ನ ವ್ಯಥತೇ ಬುದ್ಧಿರಚಲಾ ತತ್ತ್ವದರ್ಶಿನೀ।
ಅಹಮಾಸಂ ಪುರಾ ಚೇತಿ ಮನಸಾಪಿ ನ ಬುಧ್ಯಸೇ॥
ಕಾಲೇನಾಕ್ರಮ್ಯ ಲೋಕೇಽಸ್ಮಿನ್ ಪಚ್ಯಮಾನೇ ಬಲೀಯಸಾ।
ಅಜ್ಯೇಷ್ಠಮಕನಿಷ್ಠಂ ಚ ಕ್ಷಿಪ್ಯಮಾಣೋ ನ ಬುಧ್ಯಸೇ॥
ಈರ್ಷ್ಯಾಭಿಮಾನಲೋಭೇಷು ಕಾಮಕ್ರೋಧಭಯೇಷು ಚ।
ಸ್ಪೃಹಾಮೋಹಾಭಿಮಾನೇಷು ಲೋಕಃ ಸಕ್ತೋ ವಿಮುಹ್ಯತೇ॥
ಭವಾಂಸ್ತು ಭಾವತತ್ತ್ವಜ್ಞೋ ವಿದ್ವಾನ್ ಜ್ಞಾನತಪೋನ್ವಿತಃ।
ಕಾಲಂ ಪಶ್ಯತಿ ಸುವ್ಯಕ್ತಂ ಪಾಣಾವಾಮಲಕಂ ಯಥಾ॥
ಕಾಲಚಾರಿತ್ರತತ್ತ್ವಜ್ಞಃ ಸರ್ವಶಾಸ್ತ್ರವಿಶಾರದಃ।
ವೈರೋಚನೇ ಕೃತಾತ್ಮಾಸಿ ಸ್ಪೃಹಣೀಯೋ ವಿಜಾನತಾಮ್॥ – ೬೩-೧೧೧-೧೧೫

ಕಂಚಿನ ಪಾತ್ರೆಗಳಲ್ಲಿ ಊಟ ಮಾಡುತ್ತಾರೋ, ನಾನಾವರ್ಣದವರಿಗೂ ಒಂದೇ ಪಂಕ್ತಿಯಲ್ಲಿ ಕೂಡಿಸಿ ಅನ್ನದಾನ ಮಾಡುತ್ತಾರೋ, ಊಟ ಮಾಡುವ ಪಾತ್ರೆಗಳಲ್ಲಿಯೇ ದೇವತೆಗಳಿಗೆ ನೈವೇದ್ಯವನ್ನು ಅರ್ಪಿಸುತ್ತಾರೋ – ಹೀಗೆ ವರ್ಣಾಶ್ರಮಧರ್ಮಗಳ ಮೇರೆ, ಮರ್ಯಾದೆಗಳು ಮೀರಿದಾಗ ನಿನ್ನನ್ನು ಬಂಧಿಸಿರುವ ವರುಣಪಾಶಗಳು ಕಳಚಿ ಬೀಳುತ್ತವೆ.

ಬಲಿಯೇ! ನಮ್ಮಿಂದ ನಿನಗೆ ಭಯವಿಲ್ಲ. ಸಮಯವನ್ನು ನಿರೀಕ್ಷಿಸು. ನಿನಗೆ ಯಾವುದೇ ಬಾಧೆಗಳು ಇಲ್ಲದೆ ಸ್ವಸ್ಥಚಿತ್ತನಾಗಿ ಸುಖವಾಗಿರು.[೧]

ನಂತರ ಐರಾವತವಾಹನನಾದ ಇಂದ್ರನು ತನ್ನ ಸ್ಥಾನಕ್ಕೆ ಹೋದನು. ಎಲ್ಲ ಅಸುರರನ್ನು ಗೆದ್ದು ಏಕಚಕ್ರಾಧಿಪತಿಯಾಗಿ ಆನಂದದಿಂದ ಇದ್ದನು.

## ಸಂದೇಶಗಳು - ವಿವರಣೆಗಳು

೧. ಧರ್ಮರಾಜನ ಪ್ರಶ್ನೆಗೆ ಉತ್ತರರೂಪದಲ್ಲಿ ತನ್ನ ಸಕಲ ಐಶ್ವರ್ಯ ಕಳೆದುಕೊಂಡ ಬಲಿಚಕ್ರವರ್ತಿಗೆ ಶ್ರೇಯಃಸಾಧನವಾದುದು ಧೈರ್ಯ. ಇದು ಸಾಮಾನ್ಯ ಅರ್ಥದಲ್ಲಿ ಮಾತ್ರವಲ್ಲದೆ, ಆಧ್ಯಾತ್ಮಿಕ ಅರ್ಥದಲ್ಲಿ ತಿಳಿಯಬೇಕು. 'ಧಿಯಾ ರಮತೇ ಇತಿ ಧೀರಃ, ತದ್ಭಾವಃ ಧೈರ್ಯಮ್ ।' ಎಂಬ ವ್ಯುತ್ಪತ್ತಿ ಪ್ರಸಂಗೋಚಿತವೆಂದು ತೋರುತ್ತದೆ. ಹಾಗೆ ಬಲಿ ವರ್ತಿಸಿದ ತನ್ನ ಪರಿಸ್ಥಿತಿಗೆ ಕಾರಣ ಕಾಲವೆಂದು ಆತ್ಯಂತಿಕವಾಗಿ ಬಗೆದ. ಅದನ್ನು ಇಂದ್ರನಿಗೆ ಪರಿಣಾಮಕಾರಿಯಾಗಿ ವಿವರಿಸಿದ. ಧೃತಿಗೆಡಲಿಲ್ಲ, ತನ್ನ ತಪ್ಪಿರಲಿ, ಇರದಿರಲಿ ಜಗತ್ತಿನ ಆಗುಹೋಗುಗಳೆಲ್ಲ ಕಾಲರೂಪಿ ಪರಮಾತ್ಮನ ಅಧೀನವೆಂದು ಬಗೆಬಗೆಯಾಗಿ ಹೇಳುತ್ತಾನೆ. ಕಾಲದ ಮಹತ್ತ್ವವನ್ನು ತಿಳಿಸುವ ಭಾಗವು ಇದಾಗಿದೆ. ಹೀಗೆ ಎಲ್ಲರಿಗೂ ತಿಳಿಯಬೇಕು.

೨. ಹೀಗೆ ಉತ್ತರಿಸುವಾಗಲೂ ಬಲಿ ತನ್ನ ಅಪರಾಧವೇನೂ ಇಲ್ಲ, ಎಲ್ಲಕ್ಕೂ ಕಾಲನೇ ಕಾರಣವೆಂಬ ಭಾವನೆ ವ್ಯಕ್ತ ಮಾಡುತ್ತಾನೆ. ಜೀವನ ಪೂರ್ವ ಕರ್ಮಗಳ ಪಾತ್ರ, ಅದರಲ್ಲಿ ತಪ್ಪು ಒಪ್ಪುಗಳನ್ನು ಅಷ್ಟಾಗಿ ಆತನು ಒಪ್ಪಿದಂತೆ ಕಾಣದು. ಆದರೂ ಆತ್ಯಂತಿಕವಾಗಿ ಬಲಿಯ ಅಭಿಪ್ರಾಯವನ್ನು ಇಂದ್ರನು ಒಪ್ಪಿ ಅಭಿನಂದಿಸುತ್ತಾನೆ ಎನ್ನುವುದು ವಿಶೇಷ.

೩. ತಾನು ಮಾಡಿದ ದರ್ಪಿಷ್ಠ ನಡತೆ ತನಗೆ ಮುಳುವಾಯಿತೆನ್ನುವುದು, ಹಾಗೆ ನಡೆಯಬಾರದು ಎಂಬ ಸಂದೇಶ ಇಲ್ಲಿದೆ.

೪. ಬಲಿಯ ಎಲ್ಲ ಮಾತುಗಳು ಆಧ್ಯಾತ್ಮಿಕ ತತ್ತ್ವಗಳಿಂದ ತುಂಬಿವೆ. ಇಂದ್ರನಿಗೂ ಕಣ್ಣು ತೆರೆಯುವಂತೆ ಮಾಡುತ್ತವೆ, ಆತನ ಮಾತುಗಳು. ಇನ್ನು ಉಳಿದ ಸಾಮಾನ್ಯರಿಗೆ ಆದರ್ಶವೆಂದು ಹೇಳಬೇಕಾಗಿಲ್ಲ.

---

೧ ಅಸ್ಮತ್ತಸ್ತೇ ಭಯಂ ನಾಸ್ತಿ ಸಮಯಂ ಪ್ರತಿಪಾಲಯ ।
ಸುಖೀ ಭವ ನಿರಾಬಾಧಃ ಸ್ವಸ್ಥಚೇತಾ ನಿರಾಮಯಃ ॥ – ೬೩/೧೧೫

೫. ಸೋತ ಬಲಿಯನ್ನು ನೋಡಲು ಬಂದ ಇಂದ್ರನು ತನ್ನ ಸ್ಥಾನದ ಪ್ರದರ್ಶನ ಮಾಡಿಯೇ, ಬಂದ ಬಲಿಯನ್ನು ಅದು ಹಂಗಿಸುವಂತಿತ್ತು. ಅದನ್ನು ಬಲಿ ಆಕ್ಷೇಪಿಸುತ್ತಾನೆ ಕೂಡಾ. ಆದ್ದರಿಂದ ಗೆದ್ದ ಹಮ್ಮಿನಲ್ಲಿ ಯಾರು ಸೋತವರನ್ನು ಕೆಣಕುವುದು, ಅವಮಾನಿಸುವುದು ಸೂಕ್ತವಲ್ಲ.

೬. ಹಾಗಿದ್ದರೂ ಬಲಿಯ ಸಮಸ್ಥಿತಿ, ಸ್ಥಿತಪ್ರಜ್ಞತ್ವವನ್ನು ತಿಳಿದಿದ್ದು ಇಂದ್ರನ ದೊಡ್ಡಸ್ತಿಕೆ. ಹಾಗೆ ಇರಬೇಕು.

೭. ಬಲಿಯು ಇಂದ್ರನನ್ನು ಮಾತಿನಲ್ಲಿ ಚುಚ್ಚುತ್ತಾನೆ, ಎಚ್ಚರಿಸುತ್ತಾನೆ. ಸೋತ, ರಾಜ್ಯಭ್ರಷ್ಟನಾದ ಮಟ್ಟಿಗೆ ತನ್ನ ಅಸ್ತಿತ್ವವನ್ನು ತಾನೇ ಮರೆಯದೆ ಇಂದ್ರನಿಗೆ ಚೆನ್ನಾಗಿ ತಿಳಿ ಹೇಳುತ್ತಾನೆ.

೮. ಜೀವನದ ಐಶ್ವರ್ಯದ ಅನಿತ್ಯತ್ವ, ಆಯುಷ್ಯದ ಅನಿಶ್ಚಿತತೆ, ಇವೇ ಮೊದಲಾದವುಗಳು ಇಲ್ಲಿನ ಅತಿಮುಖ್ಯ ಸಂದೇಶಗಳು. ಹೇಗೆ ಅನಿತ್ಯವೆಂದು ತಿಳಿಯಲು ಸೋದಾಹರಣಪೂರ್ವಕವಾಗಿ ಬಲಿ ವರ್ಣಿಸಿದ್ದಾನೆ. ಇಂದ್ರನೂ ಒಪ್ಪುತ್ತಾನೆ.

೯. ಆದ್ದರಿಂದ ಜೀವನದಲ್ಲಿ ಬರಬಹುದಾದ, ಬರುವ ಸುಖದುಃಖಾದಿಗಳನ್ನು ಸಮಾನವಾಗಿ ನೋಡಿಕೊಳ್ಳಬೇಕು. ಅದುವೇ ಸಾಧಕನ ಲಕ್ಷಣ. ಹಾಗಿದ್ದುದೇ ಬಲಿಯ ವೈಶಿಷ್ಟ್ಯ.

೧೦. ಬಲಿಚಕ್ರವರ್ತಿಯು ವರುಣಪಾಶಗಳಿಂದ ಪಾರಾಗಲು ಆತನ ಪ್ರಜೆಗಳೇ ಧರ್ಮಮರ್ಯಾದೆ ಮೀರಿದಾಗ ಎಂಬ ಮಾತು ಒಂದು ಒಗಟಾಗಿದೆ. ಅದೇನೇ ಇದ್ದರೂ ಧರ್ಮಮರ್ಯಾದೆಯ ಹತ್ತಾರು ಉದಾಹರಣೆಗಳನ್ನು ಕೊಡಲಾಗಿದೆ. ಹಾಗೆ ಇರಬಾರದೆಂಬ ಸಂದೇಶ ನಮಗೆಲ್ಲ ಇದೆ.

೧೧. ಒಟ್ಟಾರೆ ಬಲಿಚಕ್ರವರ್ತಿಯು ಒಬ್ಬ ಸ್ಥಿತಪ್ರಜ್ಞನಾಗಿ ಕಾಣುತ್ತಾನೆ. ಮೋಕ್ಷ ಬಯಸುವವರು ಹಾಗೆ ಇರಬೇಕು.

ಇತ್ಯಾದಿ...

# ೧೯೦. ಬ್ರಹ್ಮಜ್ಞಾನಿಗಳ ಲಕ್ಷಣಗಳು

ಧರ್ಮರಾಜ ಪ್ರಶ್ನಿಸುತ್ತಾನೆ - ಎಂತಹ ಮನುಷ್ಯನು (ಜ್ಞಾನಿಯು) ಶೀಲದಿಂದ, ಸದಾಚಾರದಿಂದ, ವಿದ್ಯೆಯಿಂದ ಪ್ರಕೃತಿ ತತ್ತ್ವಕ್ಕಿಂತ ಮಿಗಿಲಾದ ಪರಬ್ರಹ್ಮನ ಸ್ಥಾನವನ್ನು (ಲೋಕವನ್ನು೧) ಹೊಂದುತ್ತಾನೆ? ಅದಕ್ಕೆ ಭೀಷ್ಮರು ಮೋಕ್ಷಪ್ರಾಪಕ ಧರ್ಮಾಚಾರಗಳಲ್ಲಿ ನಿರತನಾದ ನಿವೃತ್ತಿಮಾರ್ಗ ಆಶ್ರಯಿಸಿ, ಜಿತಂದ್ರಿಯನಾದ, ಯಮನಿಯಮ ಪ್ರಾಣಾಯಾಮಾದಿಗಳಿಂದ ಕೂಡಿದ, ಅಲ್ಪಾಹಾರ ಸ್ವೀಕರಿಸುವ ಸಾಧಕನು ಪ್ರಕೃತಿತತ್ತ್ವವನ್ನೂ ಮೀರಿದ ಭಗವಂತನ ಸ್ಥಾನವನ್ನು (ಲೋಕವನ್ನು) ಹೊಂದುತ್ತಾನೆ ಎಂದು ಹೇಳುತ್ತಾ, ಈ ವಿಷಯದಲ್ಲಿ **ಜೈಗೀಷವ್ಯ** ಹಾಗೂ **ಅಸಿತ** ಮುನಿಗಳ ಸಂವಾದರೂಪದ ಇತಿಹಾಸವನ್ನು ನಿರೂಪಿಸಿದರು. ಹಾಗೆಯೇ **ಉಮಾಮಹೇಶ್ವರರು** ತಾವು ಪರಸ್ಪರ ಸಂಭಾಷಣೆ ಮಾಡಿದ, ಜ್ಞಾನಪ್ರದವಾದ, ಪಾಪನಾಶಕವಾದ ಇತಿಹಾಸವನ್ನು ಕೂಡಾ ಕೇಳು ಎಂದರು (ಭೀಷ್ಮರು).

ಹಿಂದೊಮ್ಮೆ ಅಸಿತನೆಂಬ ಹೆಸರುಳ್ಳ **ದೇವಲಮುನಿಗಳು** ಮಹಾಪ್ರಾಜ್ಞರಾದ, ಧರ್ಮ-ಗಳನ್ನು (ವಿವಿಧ) ಬಲ್ಲಂತಹ, ಸಿಟ್ಟೇ ಇಲ್ಲದ, ಸಂತೋಷವೂ ಇಲ್ಲದ **ಜೈಗೀಷವ್ಯಮುನಿಯನ್ನು** ಹೀಗೆ ಪ್ರಶ್ನಿಸಿದರು.

ಪೂಜ್ಯರೇ! ನೀವು ವಂದಿತರಾದರೂ (ನಮಸ್ಕರಿಸಲ್ಪಟ್ಟರೂ) ಸಂತೋಷಪಡುವುದಿಲ್ಲ. ನಿಂದಿಸಿದರೂ ಕೋಪಗೊಳ್ಳುವುದಿಲ್ಲ. ಇಂತಹ ನಿಮ್ಮ ವರ್ತನೆಗೆ ಕಾರಣವಾದ ಜ್ಞಾನ ಯಾವುದು? ಇದು ಎಲ್ಲಿಂದ ಬಂತು? ಈ ಜ್ಞಾನದ ಉತ್ತಮವಾದ ಆಸರೆ ಯಾವುದು೨ (ಪರಾಯಣ)?

ಈ ಪ್ರಶ್ನೆಗೆ ಜೈಗೀಷವ್ಯರು ಸಂದೇಹರಹಿತವಾದ, ಅನೇಕಾರ್ಥಗಳಿಂದ ಕೂಡಿದ ಶ್ರೇಷ್ಠವಾಕ್ಯವನ್ನು (ಪ್ರಶ್ನೆ ಕೇಳಿದ ಅಸಿತರಿಗೆ) ಹೇಳಿದರು.

ಎಲೈ ದೇವಲರೇ! ಸತ್ಕರ್ಮಾನುಷ್ಠಾನ ಮಾಡುವರಿಗೆ ಯಾವ ಗತಿಯಾಗುವುದೋ, ಅಂತಹವರು ಯಾವುದರಲ್ಲಿ ನಿಷ್ಠೆ (ಶ್ರದ್ಧೆ ಆಸಕ್ತಿ, ಆಚರಣೆ) ಇಟ್ಟುಕೊಂಡಿರುತ್ತಾರೋ,

---

೧ ಕಿಂ ಶೀಲಃ ಕಿಂ ಸಮಾಚಾರಃ ಕಿಂ ವಿದ್ಯಃ ಕಿಂ ಪರಾಯಣಃ।
ಪ್ರಾಪ್ನೋತಿ ಬ್ರಹ್ಮಣಃ ಸ್ಥಾನಂ ಯತ್ಪರಂ ಪ್ರಕೃತೇಃ ಧ್ರುವಮ್ ॥ - ೬೫/೧

೨ ನ ಪ್ರೀಯಸೇ ವಂದ್ಯಮಾನೋ ನಿಂದ್ಯಮಾನೋ ನ ಕುಪ್ಯಸಿ।
ಕಾ ತೇ ಪ್ರಜ್ಞಾ ಕುತಶ್ಚೈಷಾ ಕಿಂ ಚೈತಸ್ಯಾಃ ಪರಾಯಣಮ್ ॥ - ೬೫/೬

ಅಂತಹವರಿಗೆ ಸಿಗುವ ಆ ಶಾಂತಿ (ಮೋಕ್ಷವೆಂಬ ಮಹಾಫಲ ಲೌಕಿಕ ನೆಮ್ಮದಿ ಮೊದಲಾದ ಫಲ)ಗಳನ್ನು ನಿನಗೆ ಹೇಳುತ್ತೇನೆ.

೧. ತನ್ನನ್ನು ನಿಂದಿಸುವವರನ್ನು, ಹೊಗಳುವವರನ್ನು ಸಮನಾಗಿ ನೋಡಬೇಕು. ನಿಂದಿಸುವವರ ಮಧ್ಯದಲ್ಲಿ ಅಪಲಾಪ ಮಾಡುವವರ ಬಗ್ಗೆ ಮೌನವಹಿಸಬೇಕು. ಅಲ್ಲದೆ ತಾವು ಮಾಡಿದ ಸತ್ಕಾರ್ಯಗಳನ್ನು ತಮ್ಮ ಸಮರ್ಥನೆಗೆ ಹೊರಹಾಕಬಾರದು. (೯)

೨. ತನ್ನ ವಿರುದ್ಧವಾಗಿ ಹೇಳುತ್ತಿದ್ದರೂ (ಅಹಿತವನ್ನು) ಎದುರುತ್ತರ ಕೊಡಬಾರದು. ತನ್ನನ್ನು ಹೊಡೆದರೂ ಪ್ರತಿಯಾಗಿ ಹೊಡೆಯಲು ಪ್ರಯತ್ನಿಸಬಾರದು. ಅವರೇ ಜ್ಞಾನಿಗಳು. (೧೦)

೩. ಲಭಿಸದಿರುವುದರ ಬಗ್ಗೆ ಶೋಕಿಸದೆ, ಬಂದುದನ್ನು ಹೊಂದಿ (ಸಿಕ್ಕಿದ್ದರಲ್ಲಿ ಸಂತೋಷ ಪಡುತ್ತಾ) ಹಿಂದೆ ಕಳೆದುಹೋದುದನ್ನೂ ಚಿಂತಿಸದೆ, ಇವೆಲ್ಲವನ್ನೂ ಮತ್ತೆ ಮತ್ತೆ ಯೋಚಿಸದಿರುವುದೇ ಜ್ಞಾನಿಯ ಲಕ್ಷಣ. (೧೧)

೪. ಯಾರು ತಮ್ಮ ಬಳಿಗೆ ಬರುವ ಗೌರವಾನ್ವಿತರಾದವರ ಬಯಕೆಗಳನ್ನು ಇಟ್ಟು ಬರುವ) ಸಾಧ್ಯವಾದಷ್ಟು ಉಪಕಾರ ಮಾಡುವರೋ. (೧೨)

ಇಂತಹವರೇ ವಿದ್ಯೆ ಪರಿಪಕ್ವತೆಯನ್ನು ಹೊಂದಿದವರು, ಕೋಪ ಗೆದ್ದವರು, ತ್ರಿಕರಣಗಳಿಂದ (ಕಾಯೇನ ವಾಚಾ ಮನಸಾ) ಯಾರಿಗೂ ಅಪರಾಧ ಮಾಡದವರು. (೧೩)

ಇವರು ಅಸೂಯಾರಹಿತರು, ಬೇರೆಯವರಿಗೆ ಹಿಂಸೆ ಕೊಡುವುದಿಲ್ಲ, ಬೇರೆಯವರಿಂದ ಹಿಂಸೆಗೆ ಒಳಗಾಗುವುದಿಲ್ಲ, ಬೇರೆಯವರ ಸಮೃದ್ಧಿಯ ಬಗ್ಗೆ ಅಸೂಯೆಯನ್ನೂ ಹೊಂದುವುದಿಲ್ಲ, ಇಂತಹವರೇ ಧೀರ ಪುರುಷರು. ಬುದ್ಧಿಯಲ್ಲಿ (ಬುದ್ಧಿಯಿಂದ) ರಮಿಸುವವರು, ಕ್ರೀಡಿಸುವವರು. (೧೪)

ಎಲ್ಲ ದೃಷ್ಟಿಯಿಂದ ಪ್ರಶಾಂತ ಸ್ವಭಾವದವರು(ತಮ್ಮ ಎಲ್ಲ ಇಂದ್ರಿಯಗಳನ್ನು ಭಗವದ್ ವ್ಯಾಪಾರದಲ್ಲಿ ತೊಡಗಿಸಿಕೊಳ್ಳುವವರು), ಎಲ್ಲ ಪ್ರಾಣಿಗಳಿಗೆ ಹಿತವನ್ನೇ ಮಾಡುವವರು, (ವಿರೋಧಿಗಳ ಬಗ್ಗೆ ಕೂಡಾ), ಸಿಟ್ಟಾಗರು, ಎಲ್ಲರ ಬಗ್ಗೆ ಸಂತೋಷ ಹೊಂದಿರುವವರೂ, ಯಾರಿಗೂ ಅಪರಾಧವೆಸಗದವರು, ಸಂಶಯರಹಿತರೂ, ಹೀಗಾಗಿ ಸುಖವಾಗಿ ಸಂಚರಿಸುತ್ತಾರೆ. (೧೬) ಬಂಧುಬಾಂಧವರಲ್ಲಿ ಅತಿಯಾದ ಸ್ನೇಹರಹಿತರೂ, ಇವರ ಬಗ್ಗೆ ಬಂಧುಗಳಿಗೂ ಅತಿಯಾದ ಸ್ನೇಹವಿಲ್ಲ, ಇವರಿಗೆ ಶತ್ರುಗಳಿಲ್ಲ, ಇವರು ಯಾರಿಗೂ ಶತ್ರುಗಳೂ ಅಲ್ಲ. (೧೭) ಹೀಗಿರುವವರೇ ಸುಖವಾಗಿ ಜೀವಿಸುತ್ತಾರೆ. ಧರ್ಮವನ್ನು ಅನುರೋಧಿಸುವ ಧರ್ಮಜ್ಞರಾದ ಬ್ರಾಹ್ಮಣಶ್ರೇಷ್ಠರು, ಧರ್ಮಮಾರ್ಗದಿಂದ ದೂರರಾದ (ಚ್ಯುತರಾದ) ಬ್ರಾಹ್ಮಣಶ್ರೇಷ್ಠರೂ ಕ್ರಮವಾಗಿ ಸಂತೋಷಪಡುತ್ತಾರೆ, ಪಡಿಸುತ್ತಾರೆ ಮತ್ತು ಪರರನ್ನು ಉದ್ವೇಗಕ್ಕೆ ತಳ್ಳುತ್ತಾರೆ. (೧೮)

ಜ್ಞಾನಿಯಾದವನು ತನಗಾಗುವ ಅವಮಾನವನ್ನು ಅಮೃತದಂತೆ ಸ್ವೀಕರಿಸಬೇಕು. ಸಮ್ಮಾನವನ್ನು ವಿಷದಂತೆ ತಿಳಿದು ಉದ್ವೇಗಿಯಾಗಬೇಕು. ಉದಾಸಿನ ಮಾಡಬೇಕು (೨೧). ಯಾರು ಈ ಮಾನಾಪಮಾನಗಳನ್ನು ಸಮವಾಗಿ ನೋಡುವವನು, ಅವಮಾನಿತನಾದರೂ ಸುಖವಾಗಿ ನಿದ್ರೆ ಹೋಗುತ್ತಾನೆ. ಆದರೆ ಅವಮಾನ ಮಾಡಿದವನು ಕಷ್ಟಕಾರ್ಪಣ್ಯಕ್ಕೆ ಒಳಗಾಗುತ್ತಾನೆ (ಬಂಧಿತನಾಗುತ್ತಾನೆ) ಮತ್ತು ಇಹಪರಗಳಲ್ಲಿ ಎಲ್ಲ ಪಾಪಗಲಿಂದ ಮುಕ್ತನಾಗಿ ಸುಖವನ್ನೇ ಹೊಂದುತ್ತಾನೆ. (೨೩) ಪರಗತಿಯನ್ನು ಬಯಸುವವರು ಇಂತಹ ವ್ರತವನ್ನೇ ಬೇಡುತ್ತಾರೆ. ಈ ವ್ರತದಿಂದಲೇ ಸುಖಸಮೃದ್ಧಿ ಹೊಂದುತ್ತಾರೆ. ಇಂದ್ರಿಯಗಳನ್ನು ಗೆದ್ದವನೇ ಎಲ್ಲ ಕ್ರತು (ಯಜ್ಞ)ಗಳನ್ನು ನಡೆಸಿದಂತೆ. ಅವನೇ ಪ್ರಕೃತಿಗಿಂತಲೂ ಉತ್ತಮವಾದ ಭಗವಂತನನ್ನು ಹೊಂದುತ್ತಾನೆ. (೨೪)

ಇಂತಹ ಉತ್ತಮಪದವಿಯು ದೇವತೆಗಳಾಗಲೀ, ಗಂಧರ್ವರಾಗಲೀ, ಪಿಶಾಚಿ, ರಾಕ್ಷಸರಾಗಲೀ ಹೊಂದುವುದಿಲ್ಲ(ಇದೊಂದು ಅರ್ಥವಾದ). ೨೫

ಈ ಮಾತುಗಳನ್ನು ಕೇಳಿದ ದೇವಲನು ಜೈಗೀಷವ್ಯರ ಶಿಷ್ಯನಾದನು.

ಜೈಗೀಷವ್ಯರ ವಿಷಯದಲ್ಲಿ ಇನ್ನೊಂದು ಇತಿಹಾಸವನ್ನು ಹೇಳುತ್ತೇನೆ ಕೇಳು ಎಂದು ಭೀಷ್ಮರು ಧರ್ಮರಾಜನಿಗೆ ನುಡಿದರು.

ಸರ್ವಲೋಕನಮಸ್ಕೃತನೂ, ಸರ್ವಲೋಕೇಶನೂ, ಅಷ್ಟಮೂರ್ತಿ(ಎಂಟುರೂಪಗಳುಳ್ಳ), ಜಗದಾಕಾರನೂ, ಆದವನನ್ನು ಹೊಂದಿದವರು ಶೋಕೋದ್ವೇಗಗಳಿಗೆ ಒಳಗಾಗುವುದಿಲ್ಲ, ಕರ್ತವ್ಯಗಳಿಂದ ದೂರವಾಗುವುದಿಲ್ಲ, ಯಾವ ಈಶ್ವರನ ಸ್ವಾಭಾವಿಕ ಶಕ್ತಿಯು ಈ ಚರಾಚರ ವಿಶ್ವವನ್ನು ನಡೆಸುತ್ತದೆಯೋ ಅಂತಹ ಸರ್ವಸ್ವಾಮಿಯಾದ ಪರಮೇಶ್ವರನು ಮೇರುಪರ್ವತದ ಉತ್ತರಪೂರ್ವದಲ್ಲಿ (ಈಶಾನ್ಯದಿಕ್ಕಿನಲ್ಲಿ) ಸರ್ವರತ್ನಗಳಿಂದ ಕೂಡಿದ, ಸರ್ವಋತುಗಳಿಂದ ಕೂಡಿದ, ಅಚಿಂತ್ಯವಾದ ಪವಿತ್ರವಾದ ಸ್ಥಾನದಲ್ಲಿ ದಿವ್ಯವಾಯುವಿನಿಂದ ಕೂಡಿದ, ನಾನಾಭೂತಗಣಗಳಿಂದ ಕೂಡಿದ, ಎಲ್ಲ ದೇವತೆಗಳಿಂದ ಆವೃತನಾಗಿ ವಿಹರಿಸುತ್ತಾನೆ (ತಿದ್ದನು).

ಅಲ್ಲಿ ವಿದ್ಯಾಧರಗಣವು, ಗಂಧರ್ವಾಪ್ಸರೆಗಳ ಗಣಗಳೂ, ಲೋಕಪಾಲಕರೂ, ಸಮುದ್ರಗಳೂ, ನದಿಗಳೂ, ಪರ್ವತಗಳೂ, ಸರೋವರಗಳು, ವಾಲಖಿಲ್ಯಾದಿ ಋಷಿಗಳು, ಯಜ್ಞಗಳು, ಹಾಹುವಾ ಮೊದಲಾದ ಸ್ತೋಭಾಕ್ಷರ ಮಂತ್ರಗಳು ಅನೇಕ ಪ್ರಜಾಪತಿಗಳು ಪರಮೇಶ್ವರನನ್ನು ಉಪಾಸಿಸುತ್ತಿದ್ದರು.

ಅಲ್ಲಿ ನಂದೀಶ್ವರನೇ ಧ್ವಜವಾಗಿರುವ, ಸೂರ್ಯಚಂದ್ರಾದಿಗಳೇ ನೇತ್ರವಾಗಿರುವ, ಉಮಾದೇವಿಯೊಡನೆ ಹರನು (ಮಹಾದೇವ) ಶೋಭಾಯಮಾನವಾಗಿದ್ದಾನೆ. ಹೀಗಿರುವಾಗ ಉಮಾದೇವಿಯು ವಿನಯದಿಂದ ಪರಶಿವನನ್ನು ಹೀಗೆ ಕೇಳಿದಳು.

'ಸ್ವಾಮಿಯೇ! ಅರ್ಥ ಯಾವುದು? ಅದರ ಶಕ್ತಿ ಏನು? ಈ ಪ್ರಶ್ನೆಗೆ ರುದ್ರದೇವರು

ದೇವಿ! ನಾನು ಅರ್ಥ, ನೀನು ಅರ್ಥಶಕ್ತಿ. ನಾನು ಭೋಕ್ತೃ, ನೀನು ಭೋಜ್ಯವಸ್ತು, ನೀನು ಪ್ರಕೃತಿ, ನಾನು ಪ್ರಕೃತಿಗಿಂತ ಮಿಗಿಲಾದವನು' ಎಂದು ಉತ್ತರಿಸಿದರು[೧].

ನಾನು ವಿಷ್ಣು ನಾನು ಬ್ರಹ್ಮ ಹಾಗೆ ಯಜ್ಞವೂ ನಾನಾಗಿದ್ದೇನೆ. ನಮ್ಮೀರ್ವರಲ್ಲಿ ಯಾವ ಭೇದವೂ ಇಲ್ಲ, ಅಗಲಿಕೆಯೂ ಇಲ್ಲ, ಇದೇ ಪರಮಾರ್ಥವು (Absolute Truth). ಹೀಗಿದ್ದರೂ ನನಗೂ, ನಿನಗೂ ಭೇದವಿರುವಂತೆ ತೋರುತ್ತದೆ' ಇದು ನನ್ನ ನಿನ್ನ ಪ್ರಶ್ನೆಗೆ ಉತ್ತರ. ಮತ್ತೇನು ಕೇಳುವೆ[೨].

ಹೀಗೆ ರುದ್ರದೇವರು ಹೇಳಲು, ಪಾರ್ವತಿಯು ಅರ್ಥಶಕ್ತಿಗಳಲ್ಲಿ ಯಾವುದು ಶ್ರೇಷ್ಠ? ಎಂದಳು. ಆಗ ಪಾರ್ವತೀಪರಮೇಶ್ವರರ ಮಧ್ಯ ಇದ್ದ ವಸುರೂಪನಾದ ಜೈಗೀಷವ್ಯರು ಅಸುರಜನಮೋಹಕ್ಕೋಸ್ಕರ ತನ್ನನ್ನೇ ವಿಷ್ಣುವೆಂದು ಹೇಳಿದ ರುದ್ರನನ್ನು ನೋಡಿ ಜೋರಾಗಿ ನಕ್ಕು ವೇದಾಂತಭೂತನಾದ ಭಗವಂತನೇ ಶ್ರೇಷ್ಠ ಎಂದರು[೩].

ಅಲ್ಲದೆ ಜೈಗೀಷವ್ಯರು –

**ಶ್ರೇಷ್ಠೋಽನ್ಯೋಽಸ್ಮಾನ್ಮಹೀ ಪಿಂಡಾ ತಲ್ಲೀನಾ ಶಕ್ತಿರಾಪರಾ ।**
**ಮುದ್ರಿಕಾದಿ ವಿಶೇಷೇಣ ವಿಸೃತಂ ಸಂಭೃತೇತಿ ಚ ॥ – ೬೫/೪೦**

ಅರ್ಥಶಕ್ತಿ ಯಾರೆಂದರೆ ಲಕ್ಷ್ಮೀದೇವಿ; ಅರ್ಥ ಎಂದರೆ ವೇದಾರ್ಥ, ನಾರಾಯಣ. ಶಿವಪಾರ್ವತಿಯರು ಪ್ರಲಯದಲ್ಲಿ ನಿದ್ರಿಸುವುದರಿಂದ ಅರ್ಥರಲ್ಲ, ಅರ್ಥಶಕ್ತಿಗಳೂ ಅಲ್ಲ. ಶಿವನ ಉತ್ತರ ಮೋಹಕವಾದುದು ನಂಬಬೇಡಿ ಎಂದು ಜೈಗೀಷವ್ಯರು ಎಲ್ಲರಿಗೂ ಕೇಳಿಸುವಂತೆ ಜೋರಾಗಿ ಹೇಳಿದರು. ಆಗ ಉಮೆಯು ಇವರು ಯಾರು ಎಂದು ಕೇಳಿದಳು.

---

೧ 'ಅರ್ಥೋಽಯಂ ಅರ್ಥಶಕ್ತಿಸ್ತ್ವಂ ಭೋಕ್ತಾಽಹಂ ಭೋಜ್ಯಮೇವ ಚ ।
ರೂಪಂ ವಿದ್ಧಿ ಮಹಾಭಾಗೇ ಪ್ರಕೃತಿಸ್ತ್ವಂ ಪರೋ ಹ್ಯಹಮ್ ॥ – ೬೫/೩೬
ಶ್ಲೋಕ ೩೬ ಮತ್ತು ೪೦ ಗಳಿಗೆ ಲಕ್ಷ್ಯಾಲಂಕಾರವಿದೆ. ಅದನ್ನು ಪರಿಶಿಷ್ಟದಲ್ಲಿ ಕೊಡಲಾಗಿದೆ.

೨ ಅಹಂ ವಿಷ್ಣುರಹಂ ಬ್ರಹ್ಮಾ ಹ್ಯಹಂ ಯಜ್ಞಸ್ತಥೈವ ಚ ।
ಆವಯೋರ್ನ ಚ ಭೇದೋಽಸ್ತಿ ಪರಮಾರ್ಥಸ್ತತೋಽಬಲೇ ॥
ತಥಾಪಿ ವಿದ್ಮಸ್ತೇ ಭೇದಂ ಕಿಂ ಮಾಂ ತ್ವಂ ಪರಿಪೃಚ್ಛಸಿ ॥ – ೬೫/
**ವಿ.ಸೂ.: ರುದ್ರದೇವರ ಉತ್ತರವು ದರ್ಶನಭಾಷೆಯೆಂದು ತಿಳಿಯುವುದು.**

೩. ತದಂತರೋ ಸ್ಥಿತೋ ವಿದ್ವಾನ್ ವಸುರೂಪೋ ಮಹಾಮುನಿಃ ।
ಜೈಗೀಷವ್ಯಃ ಸ್ಮಯನ್ ಪ್ರಾಹ ಹ್ಯರ್ಥ ಇತ್ಯೇವ ನಾದಯನ್ ॥ –೬೫/೩೯

ವಿ.ಸೂ.: ಮೇಲಿನ ಎರಡೂ ಶ್ಲೋಕಗಳಿಗೆ ಲಕ್ಷ್ಯಾಲಂಕಾರವಿದೆ. ಅದನ್ನು ಇಲ್ಲಿ ಅನುಸಂಧಾನ ಮಾಡಬೇಕು (ಮಹಾಭಾರತ ಶಾಂತಿಪರ್ವ - ಸಂಸ್ಕೃತ ಸಂಪಾದನೆ ಸಂಪುಟ ೧೯; ಪು. ೪೨೪,೪೨೫)

ನಂತರ ಹರನು ನಸುನಕ್ಕು ಆ ಮುನಿ ಜೈಗೀಷವ್ಯ ಎಂದು ನುಡಿದನು. ಇವನು ನನ್ನ ಭಕ್ತ, ಸ್ನೇಹಿತ, ಶಿಷ್ಯ. ಆದ್ದರಿಂದ ವಸ್ತು ಸ್ಥಿತಿಯನ್ನು ಹೇಳಿದ್ದಾನೆ. ಆದರೆ ಪಾರ್ವತಿಯು ಕೋಪದಿಂದ ನನ್ನ ಮಾತನ್ನು ನೀವಿಬ್ಬರೂ ಸೇರಿ ವ್ಯರ್ಥ ಮಾಡಿದಿರಿ. ಆಗಲಿ ಆತನ ಮಾತು ನನಗೆ ಮನವರಿಕೆಯಾಗಲಿಲ್ಲ, ಅವನ ಅಭಿಪ್ರಾಯ ತಿಳಿಸು ಎಂದಳು.

ಆಗ ಮಹಾದೇವನು 'ಆತನು ಆಸೆಗಳನ್ನು ಗೆದ್ದವನು. ನನ್ನನ್ನೇ ಮೊರೆ ಹೊಕ್ಕವನು. ಸುಖದುಃಖ, ಮಾನಾಪಮಾನ ದ್ವಂದ್ವಗಳನ್ನೂ ಗೆದ್ದವನು. ಯಾವಾಗಲೂ ನಿಶ್ಚಲವಾದ ಒಂದೇ ಸ್ವಭಾವದವನು. ಆದ್ದರಿಂದ ಆತನನ್ನು ಕ್ಷಮಿಸು ಮತ್ತು ಆತನು ನಿನ್ನಿಂದ ರಕ್ಷಿತನಾಗಬೇಕೆಂದನು. ಅದಕ್ಕೆ ದೇವಿಯು ಆತನು ಆಸೆಗಳನ್ನು ಗೆದ್ದವನೆಂದು ಪರೀಕ್ಷಿಸಿ ತಿಳಿಯಬೇಕೆಂದಿದ್ದೇನೆ ಎಂದಳು.

ನಂತರ ಶಂಕರನು ನಂದಿಯನ್ನೇರಿ ದೇವಗಂಧರ್ವಾದಿಗಳಿಂದ ಸ್ತುತನಾಗಿ ಜೈಗೀಷವ್ಯರ ಬಳಿಗೆ ಬಂದನು. ಅವರು ನಾರಾಯಣನಲ್ಲಿಯೇ ಮನಸ್ಸಿಟ್ಟು ಶುದ್ಧರಾದ, ಜ್ಞಾನಿಗಳ ಸಮೂಹದಲ್ಲಿ ವಾಸಿಸುವವರಾಗಿ ಆಚೆ ಈಚೆ ಓಡಾಡುತ್ತಿದ್ದರು.

ರುದ್ರದೇವರನ್ನು ಕಂಡಕೂಡಲೇ ಎದ್ದು ನಿಂತು ಸತ್ಕರಿಸಿ, ಹಿಂದಿನಂತೆ (ಮೊದಲು ತಾವು ಹೇಳಿದ ಅಭಿಪ್ರಾಯದಂತೆ) ಒಂದು ಸೂಜಿ, ಒಂದು ದಾರವನ್ನು ತಂದು ಚಿಂದಿ ಬಟ್ಟೆಗಳನ್ನು ಹೊಲೆಯುತ್ತಾ ಕುಳಿತರು. ರುದ್ರದೇವರು ಅವರಿಗೆ 'ನಿನಗೇನು ಕೊಡಲಿ ಬೇಕಾದುದನ್ನು - ಎಲ್ಲವನ್ನೂ ನನ್ನಿಂದ ಕೇಳು. ಒಂದು ವೇಳೆ ನೀನು ಇಚ್ಛಿಸಿದರೆ' ಎಂದು ಕೇಳಿದರು. ಆದರೆ ಆ ಮುನಿಯು ದೇವದೇವನಾದ ರುದ್ರನನ್ನು ನೋಡದೆ 'ನನ್ನಿಂದ ಪಡೆಯಲಾರದ್ದು) ಏನೂ ಇಲ್ಲ ಎಂದು ನಾನು ಬಲ್ಲೆ, ನಾನು ಕೃತಾರ್ಥನಾಗಿದ್ದೇನೆ. ನಾನು ಹೊಂದುವುದು ಏನೂ ಇಲ್ಲ, ನಾನು ಪರಿಪೂರ್ಣ. ನೀನು ಹೋಗಬಹುದು.' ಎಂದನು. ಮತ್ತೆ ನಗುತ್ತಾ ರುದ್ರದೇವನು ನೀನು ಅವಶ್ಯವಾಗಿ ವರವನ್ನು ಕೇಳಬೇಕು. ನನ್ನಿಂದ ನಿನಗೆ ಅತ್ಯುತ್ತಮ ವರ ಕೊಡಬೇಕು ಎಂದ. ಅದಕ್ಕೆ ಜೈಗೀಷವ್ಯರು ನಾನು ಈ ಸೂಜಿಯೊಳಗಿನ ನೂಲನ್ನೆಲ್ಲ ಹಿಂಬಾಲಿಸುತ್ತಿದ್ದೇನೆ. ನನ್ನ ಮಾತನ್ನು ಕೇಳು ಎಂದನು. ಆಗ ರುದ್ರದೇವರು ಉಮಾದೇವಿಯನ್ನು ನೋಡಿ ನಸುನಕ್ಕು ತನ್ನ ಸ್ಥಾನಕ್ಕೆ ಹೊರಟನು.

ರಾಜನ್! ದ್ವಂದ್ವಾತೀತರಾದ ಯೋಗಿಗಳು ತಮ್ಮ ಸಂಕಲ್ಪಾನುಸಾರ ಹೋಗುತ್ತಾರೆ. ಅವರು ಪರಸಂತೋಷಕ್ಕಾಗಿ ಎಂದೂ ದುರ್ಮಾರ್ಗದಲ್ಲಿ ಹೋಗರು ಎನ್ನಲು ಇದೇ ದೊಡ್ಡ ದೃಷ್ಟಾಂತ.

## ಸಂದೇಶಗಳು

ಜೈಗೀಷವ್ಯರು ದ್ವಂದ್ವಾತೀತರೂ, ಜಿತೇಂದ್ರಿಯರೂ, ಆಸೆಗಳನ್ನು ಗೆದ್ದವರು ಎಂದು ತಿಳಿಯುತ್ತದೆ. ಎಲ್ಲರೂ ಯಥಾಶಕ್ತಿ ಸದ್ಗುಣಿಗಳಾಗಲು ಯತ್ನಿಸಬೇಕು. ತಾವಿದ್ದಲ್ಲಿಗೆ ಬಂದು ವರ ಕೇಳೆಂದರೂ ಏನೂ ಕೇಳದ ಭಾಗವತರು ಜೈಗೀಷವ್ಯರು ಭಾಗವತೋತ್ತಮರಾದ ರುದ್ರದೇವರ ಶಿಷ್ಯರು, ಸ್ನೇಹಿತರು ಹೇಗಿರಬೇಕೋ ಹಾಗೆ ಇದ್ದಾರೆ ಎಂಬ ಸಂದೇಶ ಇಲ್ಲಿದೆ.

ವಿ. ಸೂ.: ಕಂಸದಲ್ಲಿ ಕೊಟ್ಟಿರುವ ಅಂಕಿಗಳು ಸಂಬಂಧಪಟ್ಟ ಅಧ್ಯಾಯದ ಶ್ಲೋಕಸಂಖ್ಯೆಗಳು.

# ೧೯೧. ಕಪಿಲಮುನಿ-ಸ್ಯೂಮರಶ್ಮಿ ಗಳ ಸಂವಾದ

ಧರ್ಮರಾಜನು ತಾತನನ್ನು ಪ್ರಶ್ನಿಸಿದ –

'ಪ್ರಾಣಿಗಳಿಗೆ ವಿರೋಧ (ಹಿಂಸೆ-ಅಹಿತ)ವಾಗದಂತೆ ರಾಜನಿಗೆ ಇರಬೇಕಾದ ಜ್ಞಾನ, ವೈರಾಗ್ಯ, ಐಶ್ವರ್ಯ, ಧರ್ಮ, ಕೀರ್ತಿ, ಶಾಂತಿ ಎಂಬ ಆರು ಗುಣಗಳನ್ನು ಬರುವಂತಹ ಐಹಿಕ, ಪಾರಲೌಕಿಕ, ಫಲಗಳಿಗೆ ಸಾಧನೀಭೂತವಾದ ಧರ್ಮವು ಯಾವುದು? ಎಂಬುದನ್ನು ನನಗೆ ಹೇಳು.

ಗೃಹಸ್ಥ ಹಾಗೂ ಸನ್ಯಾಸ ಧರ್ಮಗಳಿಗೆ ಪರಸ್ಪರ ವಿರೋಧ ವ್ಯತ್ಯಾಸವಿಲ್ಲ, ಕಾರಣ ಎರಡರ ಉದ್ದೇಶ ಒಂದೇ (ಮೋಕ್ಷ, ಭಗವತ್ಪ್ರೀತಿ). ಹಾಗಾದರೆ ಇವೆರಡರಲ್ಲಿ ಯಾವುದು ಉತ್ತಮ?

ಈ ಪ್ರಶ್ನೆಗಳಿಗೆ ಭೀಷ್ಮರು ಈ ಎರಡೂ ಧರ್ಮಗಳು ಆಚರಿಸಲು ಕಠಿಣವಾದುವು. ಆದರೆ ಶ್ರೇಯಸ್ಕರಗಳೇ ಉತ್ತಮ ಫಲಗಳನ್ನು ಕೊಡುವುವೇ. ಇದನ್ನು ಸಜ್ಜನರು ಆಚರಿಸಿದ್ದಾರೆ. ಈ ಬಗ್ಗೆ **ಕಪಿಲ ಮುನಿಗೂ ಗೋವಿಗೂ** ನಡೆದ ಸಂವಾದರೂಪ ಇತಿಹಾಸವನ್ನು ಹೇಳುತ್ತೇನೆ ಕೇಳು ಎಂದರು.

ಹಿಂದೊಮ್ಮೆ ನಹುಷರಾಜನು ವೇದಗಳ ಪ್ರಾಚೀನತೆ, ಅವುಗಳು ಶಾಸನಸ್ವರೂಪಗಳೆಂದು ತಿಳಿದರೂ, ಅವುಗಳ ನಿಜವಾದ ಅರ್ಥ, ತಾತ್ಪರ್ಯ ತಿಳಿಯದೆ ತ್ವಷ್ಟ್ರ ದೇವತೆಯನ್ನು ಒಲಿಸಿಕೊಳ್ಳಲು '**ಗವಾಲಂಭನ**'ದಲ್ಲಿ ಉದ್ಯುಕ್ತನಾದನು (ಗೋವುಗಳನ್ನು ಯಜ್ಞದಲ್ಲಿ ಪಶುವನ್ನಾಗಿ ವಧೆ ಮಾಡಲು). (ತ್ವಾಷ್ಟ್ರಂ ಬಹುರೂಪಂ ಆಲಭೇತ ಎಂಬ ಶ್ರುತಿಯಂತೆ). ಅದೇ ಸಮಯಕ್ಕೆ ಸಾತ್ವಿಕ, ಶುದ್ಧಮನಸ್ಕನಾದ ಕಪಿಲಮುನಿಯು ಬಂದು ಗವಾಲಂಭನವನ್ನು ಅಧರ್ಮವೆಂದು ಹೇಳಲು ಭಯಪಟ್ಟು ಮೆಲ್ಲಗೆ ವೇದಗಳು ಅಸತ್ಯ ಎಂದು ಒಮ್ಮೆ ಆ ಸಭೆಯಲ್ಲಿ ಹೇಳಿದನು.

**ನಹುಷಃ ಪೂರ್ವಮೂಲೇಭೇ ತ್ವಷ್ಟುರ್ಗಾಮಿತಿ ನಃ ಶ್ರುತಮ್ ।**
**... ಕಪಿಲಸ್ತದಾ । ಸ್ವರೇಣ ಶಿಥಿಲೋಽಸತ್ಯಾ ವೇದಾ ಇತ್ಯಬ್ರವೀತ್ ಸ ಕೃತ್ ।**
**- ೧೦೩/೬-೮**

ಅದೇ ಸಮಯಕ್ಕೆ ಸ್ಯೂಮರಶ್ಮಿ ಮಹರ್ಷಿಯು ಪಶು (ಗೋ)ವನ್ನು ಪ್ರವೇಶಿಸಿ ಕಪಿಲನನ್ನು ಕುರಿತು ವೇದಗಳು ಪಾಪಹೇತುಗಳಾದಲ್ಲಿ (ಅಸತ್ಯವಾದುದರಿಂದ, ಅಪ್ರಮಾಣ ಆದ್ದರಿಂದ ಅಂತಹ ವೇದೋಕ್ತಾಚರಣೆ ಪಾಪಹೇತುವಾಗಬೇಕಾದೀತು). ಆ ಧರ್ಮಗಳು ಹೇಗೆ

ಉಪಾದೇಯ(ಆದರಾರ್ಹ)ವಾಗುತ್ತವೆ? ವೇದಗಳೆಲ್ಲ ಭಗವದ್ವಚನಗಳಲ್ಲವೇ (ಪರಮಾತ್ಮನ ನಿಃಶ್ವಾಸರೂಪವಲ್ಲವೇ?) ನೀನಂತೂ ಯತಿ, ಯಜ್ಞಾದಿ ಕರ್ಮಗಳಿಂದ ದೂರವಿರುವವನು. ಆದರೂ ವೇದವಿರುದ್ಧವಾಗಿ ವೇದಗಳನ್ನು ನಿಂದಿಸುತ್ತಿರುವೆಯಲ್ಲವೇ ಎಂದನು[೧].

ಆಗ ಕಪಿಲಮುನಿಯು ತನ್ನ ಅಭಿಪ್ರಾಯವನ್ನು ಸ್ಯೂಮರಶ್ಮಿಗೆ (ಗೋ ಪ್ರವೇಶ ಮಾಡಿದ) ಉತ್ತರಿಸಿದನು.

ನಾನು ವೇದಗಳನ್ನು ನಿಂದಿಸುತ್ತಿಲ್ಲ. ಅವುಗಳಿಗೆ ವಿರುದ್ಧವಾಗಿಯೂ ಹೇಳುತ್ತಿಲ್ಲ. ಆದರೆ ಬ್ರಹ್ಮಚರ್ಯಾದಿ ಆಶ್ರಮಿಗಳಿಗೆ ಇರುವ ಕರ್ಮವಿಧಿಗಳನ್ನು ಮತ್ತು ಅವುಗಳ ಪ್ರಯೋಜನಗಳ ಉದ್ದೇಶ್ಯ ಒಂದೇ ಎಂದು ತಿಳಿದಿದ್ದೇನೆ. ಸರ್ವಸಂಗ ಪರಿತ್ಯಾಗ ಮಾಡಿದ ಸನ್ಯಾಸಿಯೂ ಹಾಗೂ ಉಳಿದ ಎಲ್ಲ ಮೂರೂ ಆಶ್ರಮಿಗಳೂ ಕೂಡಾ ದೇವಮಾನ ಮಾರ್ಗದಲ್ಲಿ ಪರಮಪದವನ್ನು ಹೊಂದುತ್ತವೆಯಾದರೂ, ಅವುಗಳಲ್ಲಿ ಫಲನಿಮಿತ್ತಕವಾದ ತಾರತಮ್ಯವಿರುತ್ತದೆ. ಇವುಗಳನ್ನು ತಿಳಿಸಿಕೊಡು. ಸ್ವರ್ಗದ ಫಲಕೊಡುವ ಯಜ್ಞವನ್ನು ಮಾಡಬೇಕು ಎಂದು ಕೆಲವು ವೇದಗಳೂ, ಕೆಲವೆಡೆ ಕರ್ಮಗಳನ್ನೇ ಆರಂಭಿಸಬಾರದು ಎಂದೂ ಶ್ರುತಿ ಇದೆ (ಮೋಕ್ಷಫಲಕ್ಕಾಗಿ). ಕರ್ಮಾರಂಭದಿಂದ ಮಾಡದಿದ್ದರೂ ದೋಷವಿಲ್ಲ. ಮಾಡಿದರೆ ದೋಷ ಇಲ್ಲಿ ಪುಣ್ಯಾಪುಣ್ಯಗಳ ಬಲಾಬಲಗಳನ್ನು ತಿಳಿಯುವುದು ಕಷ್ಟವೇ ಸರಿ. (೧೦೩/೧೬)

ಈ ಹಿನ್ನೆಲೆಯಲ್ಲಿ ಅಹಿಂಸೆಯೇ ಶ್ರೇಷ್ಠಧರ್ಮ. ಅದಕ್ಕಿಂತ ಉತ್ತಮ ಧರ್ಮಪ್ರತಿಪಾದಕ ಶ್ರುತಿಗಳಿದ್ದಲ್ಲಿ ಅದನ್ನು ತಿಳಿಸು. ಅಂತಹ ಶ್ರುತಿಗಳು ಇದ್ದರೆ ನೀನು ಆರಂಬ ಮಾಡಿದ ಕರ್ಮ ತ್ಯಜಿಸಬೇಕಾದ ಅವಶ್ಯಕತೆ ಇಲ್ಲ[೨]

ಕಪಿಲಮುನಿಯ ಅಭಿಪ್ರಾಯಗಳಿಗೆ ಸ್ಯೂಮರಶ್ಮಿಯು ಹೀಗೆ ಉತ್ತರಿಸಿದನು.

೧. ವೇದಗಳು ಪ್ರಮಾಣವಷ್ಟೇ ಹೌದು. ಅವುಗಳು ನಾಲ್ಕು – ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ. ವೇದದ ಬ್ರಾಹ್ಮಣ ಭಾಗಗಳಿಂದ ಯಜ್ಞವು ಪ್ರಕಟಗೊಂಡಿದೆ.

---

೧ ಅಂ ಹೋ ವೇದಾ ಯದಿ ಮತಾ ಧರ್ಮಾಃ ಕೇನಾಪರೇ ಮತಾಃ ||....
ಕಾ ವಿವಕ್ಷಾಸ್ತಿ ವೇದೇಷು ನಿರಾರಂಭಸ್ಯ ಸರ್ವಶಃ ||

೨ ಗಚ್ಛತ್ಯೇವ ಪರಿತ್ಯಾಗೀ ವಾನಪ್ರಸ್ಥಶ್ಚ ಗಚ್ಛತಿ |
ಗೃಹಸ್ಥೋ ಬ್ರಹ್ಮಚಾರೀ ಚ ಉಭೌ ತಾವಪಿ ಗಚ್ಛತಃ ||
ದೇವಮಾನಾ ಹಿ ಪಂಥಾನಶ್ಚತ್ವಾರಃ ಶಾಶ್ವತಾ ಮತಾಃ |
ತೇಷಾಂ ಜ್ಯಾಯಃ ಕನೀಯಸ್ತ್ವಂ ಫಲೇಷೂಕ್ತಂ ಬಲಾಬಲಮ್ ||
ಏವಂ ವಿದಿತ್ವಾ ಸರ್ವಾರ್ಥಾನಾರಭೇದಿತಿ ವೈದಿಕಮ್ |
ನಾರಭೇದಿತಿ ಚಾನ್ಯತ್ರ ನೈಷ್ಠಿಕೀ ಶ್ರೂಯತೇ ಶ್ರುತಿಃ ||
ಯದ್ಯತ್ರ ಕಿಂಚಿತ್ ಪ್ರತ್ಯಕ್ಷಮಹಿಂಸಾಯಾಃ ಪರಂ ಮತಮ್ |
ಋತೇ ತ್ವಾಗಮಶಾಸ್ತ್ರೇಭ್ಯೋ ಬ್ರೂಹಿ ತದ್ ಯದಿ ಪಶ್ಯಸಿ || – ೧೦೩/೧೩-೧೭

ಇದು ಬ್ರಹ್ಮನಿಗೇನೇ ಸಮರ್ಪಿಸಲ್ಪಡುತ್ತದೆ. ಜಗತ್ತು ಮತ್ತು ಯಜ್ಞಗಳು ಪರಸ್ಪರ ಅವಲಂಬಿಸಿವೆ. ಓಂ ಎಂಬುದು ವೇದಮೂಲ. ನಮಃ ಸ್ವಾಹಾ, ಸ್ವಧಾ, ವಷಟ್ ಎಂಬ ನಾಲ್ಕು ಷಡ್ಜಗಳು ಯಜ್ಞದಲ್ಲಿ ಹೇಳಿದಾಗಲೇ ಯಜ್ಞ ಪೂರ್ತಿಯಾಗುತ್ತದೆ.

೨. ಯಜ್ಞವಿರದೆ ಇಹಪರವಿಲ್ಲ. ವೇದೋಕ್ತವನ್ನು ತಿಳಿದಿರುವವನು ಪ್ರವೃತ್ತಿ, ನಿವೃತ್ತಿ ಮಾರ್ಗ ತಿಳಿದವನು. ಯಜ್ಞವನ್ನು ವಿಧ್ಯುಕ್ತವಾಗಿ ಮಾಡಲೇಬೇಕು. ಜ್ಯೋತಿಷ್ಟೋಮಾದಿಗಳಿಂದ ಮರಣದ ನಂತರ ಸ್ವರ್ಗ ಸಿಗುತ್ತದೆ.

೩. ಋಗ್ವೇದಾದಿ ನಾಲ್ಕು ವೇದಗಳು, ಹಾಹೂ ಎಂಬ ಸ್ತೋಭಾಕ್ಷರ ಯಾರಲ್ಲಿ ಉಂಟೋ ಅವನೇ ಬ್ರಾಹ್ಮಣ.

೪. ಯಜ್ಞ ಆಚರಿಸಲು ಸಾಮಗ್ರಿಗಳು ಬೇಕು. ಅವನ್ನು ವಿಧ್ಯುಕ್ತವಾಗಿ ವಿನಿಯೋಗ ಮಾಡಿದಾಗ ಯಜ್ಞ ಮತ್ತು ಯಜ್ಞಾಂಗ ಎರಡೂ ಒಂದನ್ನೊಂದು ಧಾರಣ ಮಾಡುತ್ತವೆ.

೫. [೧]ಓಷಧಿಗಳು, ಪಶುಗಳು, ವೃಕ್ಷಗಳು, ಬಳ್ಳಿಗಳು, ತುಪ್ಪ, ಹಾಲು, ಮೊಸರು ಇತರೇ ಹವಿಸ್ಸುಗಳು, ಭೂಮಿ, ದಿಕ್ಕುಗಳು, ಶ್ರದ್ಧಾ ಕಾಲ – ಇವು ಹನ್ನೆರಡು ಯಜ್ಞಾಂಗಗಳು ಮತ್ತು ನಾಲ್ಕು ವೇದಗಳು, ಗಾರ್ಹಪತ್ಯಾಗ್ನಿ ೧೭ ನೇ ಅಂಗ. ಹೀಗೆ ಒಟ್ಟಾರೆ ೧೭ ವಸ್ತುಗಳು ಯಜ್ಞಾಂಗಗಳು ಎಂದು ವೇದವೇ ಹೇಳುತ್ತದೆ. ಮತ್ತು ತುಪ್ಪ ಹಾಲು, ಮೊಸರು, ಸಗಣಿ, ಚರ್ಮ, ಬಾಲ, ಕೊಂಬು, ಕಾಲು ಇವು ಯಜ್ಞಸಾಧನಗಳೆ. ಯಜ್ಞಮಾಡುವ ಯಜಮಾನ ಇವೆಲ್ಲವನ್ನೂ ಸಂಗ್ರಹಿಸಬೇಕು (ಆಯಾ ಯಜ್ಞಗಳ ಅವಶ್ಯಕತೆ ಮೇರೆಗೆ).

---

೧ ಓಷಧ್ಯಃ ಪಶವೋ ವೃಕ್ಷಾ ವೀರುದಾಜ್ಯಂ ಪಯೋ ದಧಿ।
ಹವಿರ್ಭೂಮಿರ್ದಿಶಃ ಶ್ರದ್ಧಾ ಕಾಲಶ್ಚೈತಾನಿ ದ್ವಾದಶಃ॥
ಋಚೋ ಯಜೂಂಷಿ ಸಾಮಾನಿ ಯಜಮಾನಶ್ಚ ಷೋಡಶಃ।
ಅಗ್ನಿರ್ಜ್ಞೇಯೋ ಗೃಹಪತಿಃ ಸ ಸಪ್ತದಶ ಉಚ್ಯತೇ।
ಅಂಗಾನ್ಯೇತಾನಿ ಯಜ್ಞಸ್ಯ ಯಜ್ಞೋ ಮೂಲಮಿತಿ ಶ್ರುತಿಃ॥
ಆಜ್ಯೇನ ಪಯಸಾ ದಧ್ನಾ ಶಕೃತಾಮಿಕ್ಷಯಾ ತ್ವಚಾ।
ವಾಲೈಃ ಶೃಂಗೇಣ ಪಾದೇನ ಸಂಭವತ್ಯೇವ ಗೌರ್ಮುಖಮ್।
ಏವಂ ಪ್ರತ್ಯೇಕಶಃ ಸರ್ವಂ ಯದ್ಯದಸ್ಯ ವಿಧೀಯತೇ॥
ನ ಹಿನಸ್ತಿ ಹ್ಯಾರಭತೇ ನಾಭಿದ್ರುಹ್ಯತಿ ಕಿಂಚನ।
ಯಜ್ಞೋ ಯಷ್ಟವ್ಯ ಇತ್ಯೇವ ಯೋ ಯಜತ್ಯಫಲೇಪ್ಸಯಾ॥
ಬ್ರಾಹ್ಮಣಪ್ರಭವೋ ಯಜ್ಞೋ ಬ್ರಾಹ್ಮಣಾರ್ಪಣ ಏವ ಚ।
ಅನು ಯಜ್ಞಂ ಜಗತ್ ಸರ್ವಂ ಯಜ್ಞಶ್ಚಾನು ಜಗತ್ ಸದಾ॥
ನಾಯಂ ಲೋಕೋಽಸ್ತ್ಯಯಜ್ಞಾನಾಂ ಪರಶ್ಚೇತಿ ವಿನಿಶ್ಚಯಃ।
ವೇದವಾದವಿದಶ್ಚೈವ ಪ್ರಮಾಣಮುಭಯಂ ತದಾ॥ -೧೦೩/೧೯-೩೯

೬. ಹಸು, ಕುರಿ, ಮನುಷ್ಯ, ಆಡು, ಹೇಸರಗತ್ತೆ, ಕತ್ತೆ, ಕುದುರೆ ಇವು ಗ್ರಾಮೀಣ ಸಾಧು ಜಂತುಗಳು, ಹುಲಿ, ಸಿಂಹ, ಹಂದಿ, ಕಾಡೆಮ್ಮೆ ಆನೆ, ಜಿಂಕೆ, ಮುಳ್ಳುಹಂದಿ ಇವು ಏಳು ಆರಣ್ಯ ಪಶುಗಳು. ದೇವತೆಗಳನ್ನು ಉದ್ದೇಶಿಸಿ ಈ ಪಶುಗಳನ್ನು ಆಲಂಭನ ಮಾಡುವುದು ಅಪರಾಧವಲ್ಲ. ಇವುಗಳಿಗೂ ಯಜ್ಞದ ಹೊರತಾಗಿ ಸ್ವರ್ಗ ಪ್ರಾಪ್ತಿಯಿಲ್ಲ. ವೇದಗಳಲ್ಲಿ ಪಶುವಧೆ ಮಾಡಬಾರದು, ಮಾಡಬೇಕು ಎಂದು ಎರಡೂ ವಿಧವಾದ ಮಾತುಗಳಿವೆ. ಅವು ಅಧಿಕಾರಿಭೇದೇನ ಉಕ್ತವಾಗಿವೆ.

ಫಲಕಾಮನೆ ಮಾಡುವವನು ವಧೆ ಮಾಡಬಾರದು. ಫಲಕಾಮನೆ ಮಾಡದವನು ಮಾಡಬಹುದು ಎಂದು ವೇದಗಳ ಅಭಿಪ್ರಾಯವಾಗಿದೆ. ನಿಷ್ಕಾಮನೆಯಿಂದ ಮಾಡುವವನು ಪಶುಹಿಂಸಕನೆನಿಸುವುದಿಲ್ಲ. ದ್ರೋಹಿಯೂ ಆಗುವುದಿಲ್ಲ. ಪಶುಗಳು ಸ್ವಯಂ ಬಲಿಯಾಗಲು ಬಯಸುತ್ತವೆ ಎಂಬ ಮಾತುಗಳು ಇವೆ. ಹೀಗಾಗಿ ವೇದೋಕ್ತ ಹಿಂಸೆ ಅಪ್ರಾಮಾಣಿಕವಲ್ಲ.[೧]

ಈ ರೀತಿಯಾಗಿ ಸ್ಯೂಮರಶ್ಮಿಯು ಕಪಿಲಮುನಿಗೆ ನಹುಷರಾಜ ಮಾಡುತ್ತಿದ್ದ ತ್ವಷ್ಟೃ ದೇವತಾ ಯಜ್ಞದ ಹಿನ್ನೆಲೆಯನ್ನು ವಿವರಿಸಿದನು.

(ವಿ.ಸೂ.: ಇದೆಲ್ಲ ವೈದಿಕ ಯಜ್ಞದ ಬಗೆಗಿನ ಪೂರ್ವಮೀಮಾಂಸಾ ಶಾಸ್ತ್ರದ ಜಿಜ್ಞಾಸೆಗೆ ಸಂಬಂಧಿಸಿದ್ದು ಹೆಚ್ಚಿನ ವಿವರಗಳನ್ನು ಮೂಲಗ್ರಂಥಗಳನ್ನು ನೋಡಿ ತಿಳಿಯುವುದು).

ಕಪಿಲಮುನಿಗಳ ಅಭಿಪ್ರಾಯಗಳ ಅನುವಾದವು ಅಧ್ಯಾಯ ೧೦೩/೧೮-೩೯ ಶ್ಲೋಕಗಳಿಗೆ ಸಂಬಂಧಿಸಿದೆ).

ವಿ.ಸೂ. : ಯಜ್ಞ ಮಾಡದವರಿಗೆ ಇಹಪರ ಫಲಗಳಿಲ್ಲವೆಂದು ಹೇಳಲಾಗಿದೆ. ಆದರೆ ದ್ರವ್ಯಯಜ್ಞಕ್ಕೆ ಇದು ಸಂಬಂಧಿಸಿದ್ದು. ಆದರೆ ಯಜ್ಞವು ಅನೇಕ ವಿಧವೆಂದು ಗೀತೆಯ ೪ನೇ ಅಧ್ಯಾಯದಲ್ಲಿದೆ. ಆ ದೃಷ್ಟಿಯಿಂದ ಎಲ್ಲ ಯಜ್ಞಗಳಲ್ಲಿ ಆಲಂಭನ ಪ್ರಕ್ರಿಯೆ ಇಲ್ಲ. ಆದ್ದರಿಂದ ಈ ಬಗ್ಗೆ ತುಂಬಾ ಚರ್ಚಾಸ್ಪದ ವಿಷಯಗಳಿವೆ ಎಂದು ಗಮನಿಸಬೇಕು.

---

೧ ಅಧ್ಯಾಯ ೧೦೩, ಶ್ಲೋಕ ೮ಕ್ಕೆ ಲಕ್ಷಾಲಂಕಾರ ಹೀಗಿದೆ:
ಸ್ವರೇಣ ಶಿಥಿಲೋಽಸತ್ಯಾ ಇತ್ಯತ್ರ ಸ್ವರೇಣ ಶಿಥಿಲಃ ಉಚ್ಚೈರ್ವಕ್ತುಂ ಭೀತ್ಯಾ ಅಲ್ಪಸ್ವರೋ ಭೂತ್ವೇತ್ಯರ್ಥಃ। ಗೋಮೇಧಸ್ಯಾಪಿ ವಿಧಾನಾತ್ ವೇದಾ ಅಸತ್ಯಾ ಇತಿ ಸಕೃದಬ್ರವೀತ್ ।
ಶ್ಲೋಕ ೧೦೩/೨೨

ತೇ ಸ್ಮಾನ್ಯೋನ್ಯಂಚರಾಃ ಸರ್ವೇಪ್ರಾಣಿನಃ ಸಪ್ತ ಸಪ್ತ ಚ ।
ಯಜ್ಞೇಷೂಪಾಕೃತಂ ವಿಶ್ವಂ ಪ್ರಾಹುರುತ್ತಮ ಸಂಜ್ಞಿತಮ್ ॥
ಉಪಾಕೃತಂ ದೇವಾನುದ್ದಿಶ್ಯ ಮಂತ್ರಿತಪಶುಮ್ । ಯೋ ಯಜತಿ ಅಫಲೇಪ್ಸಯಾ ಇತ್ಯನೇನ
ಯಜ್ಞಃ ಕರ್ತವ್ಯಃ ಯಜ್ಞೋ ನ ಕರ್ತವ್ಯಃ ಇತಿ ದ್ವಿವಿಧವಾಕ್ಯಸ್ಯಾಪಿ ಫಲೇಚ್ಛುನಾ ನ ಕರ್ತವ್ಯಃ
ಅಫಲೇಚ್ಛುನಾ ಕರ್ತವ್ಯಃ ಇತಿ ಗತಿಃ ಸೂಚಿತಾ । ಅತೋ ನ ವೇದಾ ಪ್ರಮಾಣ್ಯಮ್ ಇತಿ ಭಾವಃ ॥
– ತ.ಸಂ.ಸಂ. ಮ.ಭಾ.ಶಾಂ.ಪ. ಭಾಗ-೧೯; ಪು. ೫೯೭

ಮುಂದಿನ ಅಧ್ಯಾಯದಲ್ಲಿ (ಅ. ೧೦೪) ಪ್ರವೃತ್ತ ಮತ್ತು ನಿವೃತ್ತ ಮಾರ್ಗಗಳ ಬಗ್ಗೆ ಸ್ಯೂಮರಶ್ಮಿ ಹಾಗೂ ಕಪಿಲಮುನಿಯ ಮಧ್ಯ ನಡೆಯುತ್ತದೆ.

ಯಜ್ಞ ಮಾಡದ ಸನ್ಯಾಸಿಗಳು ದ್ವಂದ್ವಾತೀತರು. ಮತ್ತೊಬ್ಬರ ನಮಸ್ಕಾರಕ್ಕೆ ಆಸೆ ಪಡದವರು. ವೈಷಯಿಕ ಸುಖ ಬಯಸದವರೂ, ಬಂಧನರಹಿತರೂ, ಬಾಹ್ಯಾಂತ ಶುಚಿರ್ಭೂತರೂ, ನಿರ್ಮಲ ಮನಸ್ಕರಾಗಿ ಪರಬ್ರಹ್ಮನನ್ನು ಹೊಂದುತ್ತಾರೆ. ಸದಾ ಬ್ರಹ್ಮೋಪಾಸಕರಾಗಿ ಶಾಶ್ವತ ಲೋಕಗಳನ್ನು ಹೊಂದುತ್ತಾರೆ. ಇವರಿಗೆ ಗೃಹಸ್ಥಾಶ್ರಮ ಹಾಗೂ ತತ್ಸಂಬಂಧಿಯಜ್ಞಗಳಿಂದ ಆಗುವ ಪ್ರಯೋಜನವೇನು? ಎಂದು ಕಪಿಲಮುನಿ ಕೇಳಿದರು. ಅದಕ್ಕೆ ಸ್ಯೂಮರಶ್ಮಿಯು ಗೃಹಸ್ಥಾಶ್ರಮವು ಎಲ್ಲ ಆಶ್ರಮಗಳಿಗೆ ಮಾತೃಸ್ಥಾನದಂತಿದೆ. ಇತರೆ ಆಶ್ರಮಗಳು ಗೃಹಸ್ಥಾಶ್ರಮವನ್ನೇ ಅವಲಂಬಿಸಿವೆ. ಯತ್ಯಾಶ್ರಮ ತ್ಯಾಗಾಭ್ಯಾಸಿಗಳ ದೃಷ್ಟಿಯಿಂದ ಶ್ರೇಷ್ಠವೇ ಆದರೂ, ಆಶ್ರಮಿಗಳಿಗೂ ಗೃಹಸ್ಥನೇ ಆಶ್ರಯ. ಅವನು ಕೃಚ್ಛ್ರಾದಿ ವ್ರತ, ತಪಸ್ಸನ್ನು ಮಾಡುತ್ತಾನೆ. ಮಾಡುವವರಿಗೆ ಆಶ್ರಯವನ್ನೂ ನೀಡುತ್ತಾನೆ. ಭೂಮಿಯಲ್ಲಿ ಬೆಳೆಯುವ ತೃಣಾದಿ ಮರಗಿಡಬಳ್ಳಿಗಳಿಗೂ ಗೃಹಸ್ಥನೇ ಮೂಲಾಧಾರ (ಕೃಷಿ ಮಾಡುವ ಮೂಲಕ). ಅಜ್ಞಾನಿಗಳು ಮಾತ್ರ ಸನ್ಯಾಸಾಶ್ರಮ ವಹಿಸಿ ಗೃಹಸ್ಥಾಶ್ರಮವನ್ನು ಹೀಗಳೆಯಬಹುದು. ಪ್ರಪಂಚದಲ್ಲಿ ಸೃಷ್ಟಿಪ್ರಕ್ರಿಯೆಗೆ ಗೃಹಸ್ಥನೇ ಮೂಲ. ಇತರೆ ಆಶ್ರಮಕ್ಕೆ ಸೃಷ್ಟಿಗೆ ಅವಕಾಶವಿಲ್ಲ. ದೇವ ಋಷಿ, ಪಿತೃ, ಮನುಷ್ಯ ಋಣ ತೀರುವುದೂ ಗೃಹಸ್ಥನಿಂದಲೇ. ಯಜ್ಞ ಮಾಡುವ ಗೃಹಸ್ಥನೊಡನೆ ಅವನು ವಧಿಸಿದ ಜಂತುಗಳೂ ಪುಣ್ಯಲೋಕ ಹೊಂದುತ್ತವೆ.

ವೇದಗಳ ಅನಾದರದಿಂದ ಉದ್ಧಟತನದಿಂದ, ಮೋಸದಿಂದ ಬ್ರಾಹ್ಮಣನಿಗೆ ಪರಬ್ರಹ್ಮಪ್ರಾಪ್ತಿ ಆಗದು. ವೇದಗಳನ್ನು ಸರಿಯಾಗಿ ಅರಿತು ಆಚರಿಸುವವನೇ ಪರಬ್ರಹ್ಮನನ್ನು ಹೊಂದುತ್ತಾನೆ.[೧]

ನಂತರ ಕಪಿಲಮುನಿಗಳು ಬ್ರಾಹ್ಮಣನ ಕರ್ತವ್ಯಗಳನ್ನು ಸಂಗ್ರಹಿಸಿ ಕೊಟ್ಟಿದ್ದಾರೆ. ಅವು ಯಾವುದೆಂದರೆ –

೧. ದರ್ಶ, ಪೌರ್ಣಮಾಸ, ಅಗ್ನಿಹೋತ್ರ, ಚಾತುರ್ಮಾಸ್ಯ ಕರ್ಮಾನುಷ್ಠಾನ ಮಾಡಬೇಕು. ಏಕೆಂದರೆ ಎಲ್ಲ ಸನಾತನ ಧರ್ಮಗಳು ಇವುಗಳಲ್ಲಿ ಅಡಕವಾಗಿವೆ.

೨. ಮೋಕ್ಷ ಬಯಸುವವರು ಭಗವನ್ನಿಷ್ಠ ಬುದ್ಧಿಯಿಂದ ದೇವತೆಗಳಿಗೆ ತರ್ಪಣ ನೀಡಬೇಕು (ದೇವತೃಪ್ತಿಕರ್ಮಗಳ ಆಚರಣೆ ಮಾಡಬೇಕು, ಬ್ರಹ್ಮಯಜ್ಞವಲ್ಲದೆ).

---

೧ ಕಪಿಲ :

...ತೇಷಾಂ ಗತಿಂ ಪರಾಂ ಪ್ರಾಪ್ಯ ಗಾರ್ಹಸ್ಥ್ಯೇ ಕಿಂ ಪ್ರಯೋಜನಮ್ ।

ಸ್ಯೂಮರಶ್ಮಿ:

... ಗೃಹಸ್ಥಾನವ್ಯಪಾಶ್ರಿತ್ಯ ವರ್ತಂತೇ ಇತಿರೇಽಽಶ್ರಯಾಃ ।

ನ ವೇದಾನಾಂ ಪರಿಭೂತ್ ನ ಶಾಠ್ಯೇನ ನ ಮಾಯಯಾ ॥

ಮಹತ್ಪ್ರಾಪ್ನೋತಿ ಪುರುಷೋ ಬ್ರಾಹ್ಮಣೋ ಬ್ರಹ್ಮವಿಂದತಿ ॥

೩. ತನ್ನ ಕೈ ಕಾಲು, ಮಾತು, ಹೊಟ್ಟೆ ಹಾಗೂ ಉಪಸ್ಥಗಳ ಹತೋಟಿ. ಋಗಾದಿ ನಾಲ್ಕು ವೇದಗಳ ಅಧ್ಯಯನ ಮಾಡಿದವನನ್ನು ನಾಲ್ಕು ದ್ವಾರಗಳ ನಿಗ್ರಹದಿಂದ ಭಕ್ತಿಯೋಗ, ಜ್ಞಾನಯೋಗ, ಕರ್ಮಯೋಗ, ಅಷ್ಟಾಂಗಯೋಗಗಳಿಂದ ಹೊಂದಬೇಕು.

೪. ಇವುಗಳನ್ನು ಬಿಡಬೇಕು ಅವು – ದ್ಯೂತ, ಕಳ್ಳತನ, ಅಯೋಗ್ಯರ ಅನ್ನ ಸ್ವೀಕಾರ, ಪರಹಿಂಸೆ, ಪರರನ್ನು ಹೊಡೆಯುವುದು, ಪರನಿಂದೆ, ಬೇರೆಯವರ ಮೇಲೆ ವ್ಯರ್ಥಾಪಾದನೆ, ಅತಿ ಅಹಾರಸೇವನೆ, ಆಹಾರ ತಿನ್ನದೇ ಇರುವುದು, ಭಕ್ಷ್ಯ ಭೋಜ್ಯಗಳ ಅತಿಯಾಸೆ, ವೀರನ ಪತ್ನಿಯೊಡನೆ ವಿಹಾರ, ಸಜ್ಜನರ ಆತಿಥ್ಯ ಮಾಡಬೇಕು, ಸ್ವಪತ್ನಿಯೊಡನೆ ಋತುಕಾಲದಲ್ಲಿ ಮಾತ್ರ ಸಂಗಮ ಮಾಡಬೇಕು.

ಹೀಗೆ ಉಪಸ್ಥ, ಉದರ, ಬಾಹು ಕೈಕಾಲುಗಳನ್ನು ನಿಯಂತ್ರಣದಲ್ಲಿಟ್ಟುಕೊಂಡವನೇ ಬ್ರಾಹ್ಮಣ (ದ್ವಿಜ). ಇವು ಹತೋಟಿಯಲ್ಲಿಲ್ಲದಿದ್ದರೆ ಅವನು ಮಾಡುವ ತಪಸ್ಸು, ಯಜ್ಞ, ಆತ್ಮಚಿಂತನೆ (ಬ್ರಹ್ಮಜಿಜ್ಞಾಸೆ)ಗಳೆಲ್ಲ ವ್ಯರ್ಥವೇ ಸರಿ.

ಹೊದ್ದುಕೊಳ್ಳಲು ಉತ್ತರೀಯವನ್ನೂ ಇಚ್ಛಿಸದೆ ನೆಲದ ಮೇಲೆ ತನ್ನ ಭುಜವನ್ನು ಇಂಬಾಗಿ ಮಾಡಿಕೊಂಡು, ಶಾಂತಚಿತ್ತನಾಗಿ ಜೀವನವನ್ನು ಯಾರು ನಿರ್ವಹಿಸುತ್ತಾನೋ ಅವನೇ ಬ್ರಾಹ್ಮಣ.

ಜೀವನದಲ್ಲಿ ಸುಖದುಃಖಾದಿ ದ್ವಂದ್ವಗಳಲ್ಲಿ ಸಮಸ್ಥಿತಿ ಕಾಯ್ದುಕೊಳ್ಳುವವನೇ ಬ್ರಾಹ್ಮಣ.

ಯಾರು ಪ್ರಕೃತಿ, ಅದರ ವಿಕಾರಗಳನ್ನು ಸರ್ವಭೂತಗಳ ಗತಿ, ಸ್ವರೂಪ ತಿಳಿದಿದ್ದಾನೋ ಅವನೇ ಬ್ರಾಹ್ಮಣ.

ಎಲ್ಲ ಪ್ರಾಣಿಗಳಿಗೂ ಅಭಯ ನೀಡುವವನೇ ಬ್ರಾಹ್ಮಣ. ಯಾರಿಗೂ ಭಯ ಕೊಡದವನು ಬ್ರಾಹ್ಮಣನು.

ಆದರೆ ಮೂರ್ಖರಿಗೆ ಸ್ವರ್ಗಾದಿ ಫಲಗಳು ಬಿಟ್ಟರೆ ಬೇರಾವುದೂ ಗೊತ್ತಿರುವುದಿಲ್ಲ. ಅದಕ್ಕಾಗಿಯೇ ಯಜ್ಞ ದಾನಾದಿ ಕ್ರಿಯೆಗಳನ್ನು ಮಾಡುತ್ತಾರೆ. ಮುಂದೆ ಸ್ಯೂಮರಶ್ಮಿಯು ವೇದಗಳಲ್ಲಿನ ಕರ್ಮ ಮಾಡು, ಬಿಡು. ನಿಷ್ಕಾಮಕರ್ಮದ ಫಲದ ಬಗ್ಗೆ ಪ್ರಶ್ನಿಸಿದಾಗ ಕಪಿಲಮುನಿಯು ಸ್ಯೂಮರಶ್ಮಿಯೇ ನೀವು ಯೋಗಮಾರ್ಗದ ಫಲವನ್ನು ಪ್ರತ್ಯಕ್ಷವಾಗಿಯೇ ಅನುಭವಿಸಬಹುದು. ಕರ್ಮಮಾರ್ಗದಲ್ಲಿ ಯಜ್ಞಾನುಷ್ಠಾನವನ್ನು ಮಾಡುವವರಿಗೆ ಪ್ರತ್ಯಕ್ಷ ಫಲ ಕಾಣುವುದಿಲ್ಲ ಎಂದು ಉತ್ತರಿಸುತ್ತಾರೆ.

ಮತ್ತೆ ಸ್ಯೂಮರಶ್ಮಿಯು ತಾನು ಯಾರೆಂದು, ಯಜ್ಞ ಪಶುವಾದ ಗೋವಿನಲ್ಲಿ ಸೇರಿಕೊಂಡು ಕೇವಲ ಜಿಜ್ಞಾಸೆಗಾಗಿ ಅನೇಕ ಪ್ರಶ್ನೆಗಳನ್ನು ಸಂಶಯ ಪರಿಹಾರಕ್ಕಾಗಿ ಮಾಡುತ್ತಿರುವುದಾಗಿಯೂ ತನಗೆ ಬೇರಾವ ದುರುದ್ದೇಶವಿಲ್ಲವೇಂದೂ ಹೇಳುತ್ತಾ ನೀವು

ಅನುಸರಿಸುವ ಯೋಗ ಯಾವುದು? ನಿಮಗೆ ಪ್ರತ್ಯಕ್ಷವಾಗಿ ಕಾಣುವ ಫಲವೆಂತಹುದು? ನಾನಾದರೋ ತರ್ಕಶಾಸ್ತ್ರಗಳನ್ನು, ಅವುಗಳ ಆಗಮವನ್ನೂ ಅರ್ಥಸಮೇತ ಅಧ್ಯಯನ ಮಾಡಿದ್ದೇನೆ. ದುರ್ಬುದ್ಧಿಯುಳ್ಳವರನ್ನು ದಾಟಿಸಲು ದಡ ಸೇರಿಸಲು ಉಪಾಯವೇನು? ನಾಲ್ಕು ವರ್ಣಗಳಲ್ಲಿಯಾಗಲೀ, ನಾಲ್ಕು ಆಶ್ರಮಗಳಲ್ಲಿಯಾಗಲೀ, ಉತ್ತಮ ಸ್ಥಾನ ಹೊಂದತಕ್ಕವರಿಗೆ ಕೊನೆಯಲ್ಲಿ ಎಂದೂ ನಾಶವಿಲ್ಲದ ಸುಖರೂಪದ ಸ್ಥಾನ ಯಾವುದು? ಅದನ್ನು ತಿಳಿಸಿರಿ ಎಂದನು.

ಈ ಪ್ರಶ್ನೆಗಳಿಗೆ ಕಪಿಲಮುನಿ ಉತ್ತರಿಸಿದ್ದು ಹೀಗೆ –

೧. ಶಾಸ್ತ್ರ ಯಾವುದನ್ನು ವಿಧಾನ ಮಾಡುವುದೋ ಯೋಗವೆಂದು ಹೇಳುತ್ತದೋ, ಅದನ್ನು ಅನುಷ್ಠಾನ ಮಾಡಿದಾಗ ಅದು ನಿರುಪದ್ರವವೂ, ಅಕ್ಷಯಸುಖದಾಯಕವೂ ಆಗುತ್ತದೆ.

೨. ಜ್ಞಾನವು ಎಲ್ಲವನ್ನು ಪವಿತ್ರಗೊಳಿಸುತ್ತದೆ. ಆ ಜ್ಞಾನದಿಂದ ಎಲ್ಲವನ್ನೂ ಹೊಂದುತ್ತಾನೆ. ಬರೀ ಜಡವಾದ ಕರ್ಮವನ್ನು ಹಿಡಿದವನು ಜನನಮರಣರೂಪ ಸಂಸಾರ ಪ್ರವಾಹದಲ್ಲಿ ಸಿಕ್ಕು ನಾಶ ಹೊಂದುತ್ತಾನೆ.

೩. ನೀವು ಜ್ಞಾನಿಗಳೇ ಆಗಿದ್ದೀರಿ. ಎಲ್ಲ ತರಹದ ಉಪದ್ರವಗಳಿಂದ ದೂರವಿದ್ದೀರಾ. ಆದರೆ ನಿಮಗೆ ಜೀವ ಬ್ರಹ್ಮೈಕ್ಯ ಭಾವ ಎಂಬ ಭಾವನೆ ಉಂಟಾಗಿರುವುದೇ? ಅದನ್ನು ಹೇಳುವವರು ಜಾಣರಲ್ಲ. ಏಕೆಂದರೆ ಜೀವಬ್ರಹ್ಮರು ಸ್ವರೂಪತಃ ಭಿನ್ನರಾಗಿದ್ದಾರೆ. ಜಾತಿಯಿಂದಲೂ, ಶ್ರುತಿಯಿಂದಲೂ ಜೀವಬ್ರಹ್ಮ ಎಂಬ ಶಬ್ದಗಳೇ ಭೇದವನ್ನು ಹೇಳುತ್ತವೆ. ಹೀಗಿರುವಾಗ ಪರಮಾತ್ಮನೇ ನಾನು ಎಂಬ ಭಾವನೆಯು ಎಷ್ಟು ಪ್ರಾಮಾಣಿಕ? ಅದು ಯುಕ್ತಿ ಶ್ರುತಿಗಳಿಗೆ ವಿರುದ್ಧವೂ ಆಗಿವೆ.

ಈಶ್ವರ ಮಹಾಪರಿಮಾಣವುಳ್ಳವನಾದರೆ, ಜೀವನು ಅಣುಪರಿಮಾಣನು. ಆದ್ದರಿಂದ ಇವರಲ್ಲಿ ಭೇದವೇ ಉಚಿತ. ಜೀವಜಾತಿ, ಈಶ್ವರಜಾತಿಗಳೂ ಪರಸ್ಪರ ವಿರುದ್ಧ (ಒಂದು ಪರಾವಲಂಬಿ, ಇನ್ನೊಂದು ಸ್ವತಂತ್ರ ಜಾತಿ ಆದ್ದರಿಂದ). ದ್ವಾಸುಪರ್ಣಾಶ್ರುತಿ ಭೇದ ಹೇಳುತ್ತದೆ. ಅರ್ಥತಃ ಎಂದರೆ ಪರಮಾತ್ಮನು ಸಕಲಪುರುಷಾರ್ಥಪೂರ್ಣ. ಜೀವ ಎಲ್ಲ ದೃಷ್ಟಿಯಿಂದ ಅಪೂರ್ಣ. ಇವರಿಬ್ಬರ ಮಧ್ಯ ಹೇಗೆ ತಾನೆ ಐಕ್ಯ ಇರಲು ಸಾಧ್ಯ.

ಆದರೆ ಈ ವಾದವನ್ನು ಕೆಲವರು ವಿತಂಡವಾದದಿಂದಲೂ, ರಾಗದ್ವೇಷ, ಅಹಂಕಾರಕ್ಕೆ ವಶರಾಗಿ ಹೇಳುತ್ತಾರೆ. ಶಾಸ್ತ್ರಜ್ಞಾನವಿಲ್ಲ ಅವರಿಗೆ ಅವರು ವಸ್ತುನಿಷ್ಠವಾದುದು. ಏನೆಂದೂ ತಿಳಿಯದವರು ತಾವು ಅಪೂರ್ಣರಾದರು. ಗುಣಪೂರ್ಣನಾದ ಬ್ರಹ್ಮನೆಂದು ತಾವೇ ಭಾವಿಸುವ ಬ್ರಹ್ಮನ ಸ್ವತ್ತನ್ನು ಗುಣಗಳನ್ನು ಕಳವು ಮಾಡುವ ಸ್ವಭಾವದವರು, ಪಕ್ವವಾದ, ಪರಿಪೂರ್ಣ ಮನಸ್ಸುಳ್ಳವರೂ ಅಲ್ಲ. ಅಮಂಗಳ ಸ್ವರೂಪಿಗಳೂ, ಶಾಸ್ತ್ರದ ನಿಜವಾದ ಅಭಿಪ್ರಾಯ ತಿಳಿಯದ ಆದರ ವಿಪರೀತಾರ್ಥ ಪ್ರತಿಪಾದಕರಾದ ಶಾಸ್ತ್ರದ ಚೋರರೂ ಆಗಿದ್ದಾರೆ. ಭಗವಂತನಲ್ಲಿ

ನಿರ್ಗುಣತ್ವವನ್ನೇ ತಿಳಿದವರಿವರು. ಗುಣಗಳನ್ನು ಚಿಂತಿಸುವುದಿಲ್ಲ. ಹೀಗಾಗಿ ಇವರೆಲ್ಲ ಅಜ್ಞಾನ, ಮಿಥ್ಯಾಜ್ಞಾನ ಸ್ವರೂಪಿಗಳೇ ಆಗಿ ಅದೇ ಅವರ ಆಶ್ರಯತಾಣವಾಗಿದೆ. ಯಾವ ಜೀವಿಯು ಎಂತಹ ಸ್ವಭಾವದವನೋ, ಅದಕ್ಕನುಗುಣವಾಗಿ ವರ್ತಿಸುತ್ತಾನೆ. ತಾಮಸ ಸ್ವಭಾವದವರಿಗೆ ಕಾಮಕ್ರೋಧದ್ವೇಷ ದಂಭ ಸುಳ್ಳು ದರ್ಪವುಳ್ಳವರು ಅದೇ ಸ್ವರೂಪದವರಾಗಿರುತ್ತಾರೆ. ಈ ಗುಣಗಳು ಪ್ರಕೃತಿಯಿಂದಲೇ (ತಮೋಗುಣ) ಹುಟ್ಟಿದಂತಹವು. ಬುದ್ಧಿಯಿಂದ ಇದನ್ನೆಲ್ಲ ತಿಳಿದ ಜ್ಞಾನಿಗಳು ಶುಭಾಶುಭಫಲಗಳನ್ನು ಬಿಟ್ಟವರಾಗಿ ಭಗವನ್ನಿಷ್ಠರಾಗಿದ್ದೂ ಪರಗತಿಯನ್ನು ಬಯಸುವವರಾಗುತ್ತಾರೆ.

**ವಿ.ಸೂ.:** ಅದ್ವೈತದ ಜೀವಬ್ರಹ್ಮೈಕ್ಯವನ್ನು ನಿರಾಕರಿಸುವಂತೆ ಈ ಶ್ಲೋಕಗಳಿವೆ. ಈ ವಾಕ್ಯಗಳನ್ನು ಶ್ರೀಮದಾಚಾರ್ಯರು ಐತರೇಯಭಾಷ್ಯ, ವಿಷ್ಣುತತ್ತ್ವನಿರ್ಣಯವೇ ಮೊದಲಾದ ಗ್ರಂಥಗಳಲ್ಲಿ ಜೀವಬ್ರಹ್ಮಭೇದ ಪ್ರತಿಪಾದನೆ ಉದಾಹರಿಸಿದ್ದಾರೆ.

ಮತ್ತೆ ಸ್ಯೂಮರಶ್ಮಿ ಮಹರ್ಷಿಯು ಕಪಿಲಮುನಿಗಳನ್ನು ಕುರಿತು ಇಲ್ಲಿವರೆಗೂ ಹೇಳಿದ್ದನ್ನು ಪರಾಮರ್ಶಿಸಿ ವೇದಗಳಿಂದ ಹೊಂದಬಹುದಾದ ಅನಂತ ಫಲವೇನೆಂದು ತಿಳಿಯಬಯಸಿದನು. ನಾನು ನಿಮಗೆ ಶಿಷ್ಯನಾಗಿದ್ದೇನೆ. ಮೋಕ್ಷದ ವಿಷಯ ತಿಳಿಸಿರಿ ಎಂದನು[1].

---

೧ ಕಪಿಲ :

ಯದ್ಯದಾಚರತೇ ಶಾಸ್ತ್ರಮಥ ಸರ್ವಪ್ರವೃತ್ತಿಷು।
ಯಸ್ಯ ಯತ್ರ ಹ್ಯನುಷ್ಠಾನಂ ತತ್ರ ತತ್ರ ನಿರಾಮಯಮ್ ॥
ಸರ್ವಂ ಪಾವಯತೇ ಜ್ಞಾನಂ ಯೋ ಜ್ಞಾನಂ ಹ್ಯನುವರ್ತತೇ।
ಜ್ಞಾನಾದಪೇತ್ಯ ಯಾ ವೃತ್ತಿಃ ಸಾ ವಿನಾಶಯತಿ ಪ್ರಜಾಃ ॥
ಭವಂತೋ ಜ್ಞಾನಿನೋ ನಿತ್ಯಂ ಸರ್ವತಶ್ಚ ನಿರಾಗಮಾಃ।
ಐಕಾತ್ಮ್ಯಂ ನಾಮ ಯದಿದಂ ಕೇಚಿದ್ ಬ್ರೂಯುರನೈಪುಣಾಃ ॥
ಯತಃ ಸ್ವರೂಪತಶ್ಚಾನ್ಯೋ ಜಾತಿತಃ ಶ್ರುತಿತೋಽರ್ಥತಃ।
ಕಥಮಸ್ಮಿ ಸ ಇತ್ಯೇವ ಸಂಬಂಧಃ ಸ್ಯಾದಸಂಹಿತಃ ॥
ಶಾಸ್ತ್ರಂ ಹ್ಯಬುಧ್ಯ ತತ್ತ್ವೇನ ಕೇಚಿದ್ವಾದಬಲಾಜ್ಜನಾಃ।
ಕಾಮದ್ವೇಷಾಭಿಭೂತತ್ವಾತ್ ಅಹಂಕಾರವಶಂ ಗತಾಃ ॥
ಯಾಥಾ ತಥ್ಯಮವಿಜ್ಞಾಯ ಶಾಸ್ತ್ರಾಣಾಂ ಶಾಸ್ತ್ರದಸ್ಯವಃ।
ಬ್ರಹ್ಮಸ್ತೇನಾ ನಿರಾರಂಭಾ ಅಪಕ್ವಮನಸೋಽಶಿವಾಃ ॥
ತ್ರೈಗುಣ್ಯಮೇವ ಪಶ್ಯಂತಿ ನ ಗುಣಾ ನನು ಯುಂಜತೇ।
ತೇಷಾಂ ತಮಃ ಶರೀರಾಣಾಂ ತಮ ಏವ ಪರಾಯಣಮ್ ॥ - ೧೦೪/೪೬-೫೪

ಮೇಲಿನ ಶ್ಲೋಕಗಳು ಔತ್ತರೇಯ ಪಾಠದಲ್ಲೂ ಇವೆ (ಅತ್ಯಲ್ಪ ವ್ಯತಾಸದೊಂದಿಗೆ) - ಅಧ್ಯಾಯ ೨೬೯. ದಾಕ್ಷಿಣ್ಯಪಾಠದಲ್ಲೂ ಔತ್ತರೇಯ ಪಾಠದಲ್ಲಿದ್ದಂತೆಯೇ ಇವೆ (ಅತ್ಯಲ್ಪ ವ್ಯತ್ಯಾಸದೊಂದಿಗೆ) ಅಧ್ಯಾಯ - ೨೭೫.

ಮತ್ತೆ ಕಪಿಲಮುನಿಗಳು ವೇದ ಹಾಗೂ ವೇದ ಜ್ಞಾನಿಗಳಾದ ಬ್ರಾಹ್ಮಣರ ಮಹತ್ತ್ವ, ಅವರ ಆಚರಣೆಗಳು, ಸಂಸಾರದಲ್ಲಿ ಅವರ ಸ್ಥಿತಿಗತಿ, ಗೃಹಸ್ಥರ ಕರ್ತವ್ಯಾದಿಗಳೇ ಮೊದಲಾದ ವಿಷಯಗಳನ್ನು ತಿಳಿಸುತ್ತಾರೆ. ಸ್ಯೂಮರಶ್ಮಿ ಮಹರ್ಷಿಯೂ ಸಹ ಬದುಕಿನಲ್ಲಿ (ಜೀವಿತವಿದ್ದಾಗ) ಮತ್ತು ಮರಣಾನಂತರದಲ್ಲಿ ಶ್ರೇಷ್ಠರ ಆಚರಣಾದಿಗಳ ಬಗ್ಗೆ ಪ್ರಶ್ನಿಸಿ, ಉತ್ತರಗಳನ್ನು ಕಪಿಲಮುನಿಗಳಿಂದ ಪಡೆಯುತ್ತಾರೆ. ಅದರ ಸಾರ ನೋಡುವ –

**ಕಪಿಲ ಮುನಿಗಳು ಹೇಳುತ್ತಾರೆ –**

೧. ಎಲ್ಲ ಲೋಕಗಳಿಗೆ ವೇದಗಳೇ ಪ್ರಮಾಣ. ಅದನ್ನು ಯಾರೂ ನಿರಾಕರಿಸಿಲ್ಲ. ವಾಸ್ತವವಾಗಿ ಬ್ರಹ್ಮ ಎಂದು ಕರೆಸಿಕೊಳ್ಳುವ ವಸ್ತುಗಳು ಎರಡು. ಒಂದು ವೇದಗಳು – ಶಬ್ದಬ್ರಹ್ಮ ಮತ್ತೊಂದು ಸಾಕ್ಷಾತ್ ಪರಬ್ರಹ್ಮನೆನಿಸಿದ ಪರಮಾತ್ಮ. ಶಬ್ದಬ್ರಹ್ಮನಲ್ಲಿ ನುರಿತನಾದವನು ಪರಬ್ರಹ್ಮನನ್ನು ಹೊಂದುತ್ತಾನೆ[1].

೨. ತಂದೆಯಿಂದ ಗರ್ಭಾಧಾನ ಹೊಂದಿದ ಮೇಲೆ ಪ್ರತಿಯೊಬ್ಬರಿಗೆ ಜನ್ಮ ಬರುತ್ತದೆ. ಆ ಶರೀರವು ಎಲ್ಲ ವೈದಿಕ ಸಂಸ್ಕಾರಗಳಿಂದಲೇ ಆಗಿರುತ್ತದೆ. ಹೀಗೆ ಸಂಸ್ಕಾರಸಂಪನ್ನ ಶರೀರವು ಬ್ರಹ್ಮಜ್ಞಾನಕ್ಕೆ ಅಧಿಕಾರ ಹೊಂದುತ್ತದೆ[2].

೩. ಪ್ರವೃತ್ತಕರ್ಮಬೋಧಕ ವೇದಗಳಲ್ಲಿ ಆಸಕ್ತನಾಗದೆ, ನಿಷ್ಕಾಮಕರ್ಮಬೋಧಕ (ನಿವೃತ್ತ) ವೇದಗಳಿಂದ ಅಂತಹ ಕರ್ಮಗಳಿಂದ ಮೋಕ್ಷಫಲ ಹೊಂದುತ್ತಾನೆ. ಅದಕ್ಕಾಗಿ ಸ್ವಭಾವತಃ ಫಲತ್ಯಾಗಿಯಾಗುವುದಲ್ಲದೆ, ಲೋಭ, ಕೃಪಣತೆ, ಅಸೂಯೆಗಳನ್ನು ತ್ಯಜಿಸಿ, ದೈವಾಯತ್ತ ಧನದಿಂದ ತೀರ್ಥಕ್ಷೇತ್ರ ಸೇವಿಸಿ, ದಾನಾದಿಗಳಲ್ಲಿ ಆಸಕ್ತನಾಗಬೇಕು[3].

ಇವಲ್ಲದೆ ಪಾಪಕರ್ಮಗಳನ್ನು ಮಾಡದವರಾಗಿಯೂ, ವಿರುದ್ಧವಾದ ಭಗವದ್ ಜ್ಞಾನದಲ್ಲಿ ನಿಶ್ಚಯವುಳ್ಳವರಾಗಿರಬೇಕು. ಮೂರೂ ವೇದಾಧ್ಯಯನದಲ್ಲಿ ಆಸಕ್ತರಾಗಿರಬೇಕು. ಸಮಸ್ತ ಪ್ರಾಣಿಗಳ ಹಿತ ಬಯಸುವರಾಗಬೇಕು[4].

---

೧ ವೇದಾಃ ಪ್ರಮಾಣಂ ಲೋಕಾನಾಂ ನ ವೇದಾಃ ಪೃಷ್ಠತಃ ಕೃತಾಃ ।
ದ್ವೇ ಬ್ರಹ್ಮಣೀ ವೇದಿತವ್ಯೇ ಶಬ್ದಬ್ರಹ್ಮ ಪರಂ ಚ ಯತ್ ॥
ಶಬ್ದಬ್ರಹ್ಮಣಿ ನಿಷ್ಣಾತಃ ಪರಂ ಬ್ರಹ್ಮಾಧಿಗಚ್ಛತಿ ॥ – ೧೦೫/೧

೨ ಕೃತಶುದ್ಧಶರೀರೋ ಹಿ ಪಾತ್ರಂ ಭವತಿ ಬ್ರಾಹ್ಮಣಃ । – ೧೦೫/೨

೩ ಧರ್ಮ ಇತ್ಯೇವ ಯೇ ಯಜ್ಞಾನ್ ವಿತನ್ವಂತಿ ನಿರಾಶಿಷಃ ।
ಉತ್ಪನ್ನ ತ್ಯಾಗಿನೋಽಲುಬ್ಧಾಃ ಕೃಪಾಸೂಯಾವಿವರ್ಜಿತಾಃ ॥
ಧನಾನಾಮೇಷ ವೈ ಪಂಥಾಸ್ತೀರ್ಥೇಷು ಪ್ರತಿಪಾದನಮ್ ॥ –೧೦೫/೪

೪ ....... ವಿಶುದ್ಧ ಜ್ಞಾನ ನಿಶ್ಚಯಾಃ ।
ಜ್ಞಾನನಿಷ್ಠಾ ಸ್ತ್ರಿಯುಕ್ತಾಶ್ಚ ಸರ್ವಭೂತಹಿತೇ ರತಾಃ ॥ – ೧೦೫/೬

ಕಪಿಲಮುನಿಗಳು ಹೇಳುತ್ತಾರೆ – ಹಿಂದಿನ ಕಾಲದಲ್ಲಿ ಗೃಹಸ್ಥರಾದ ಬ್ರಾಹ್ಮಣರು, ರಾಜರು ವೈದಿಕ ಧರ್ಮ ತ್ಯಾಗ ಮಾಡದೆ ಆ ಧರ್ಮಗಳಲ್ಲಿ ನಿಷ್ಕಾಮರೀತಿಯಲ್ಲಿ ಮಾಡುತ್ತಿದ್ದರಂತೆ. ಎಂತಹ ದುರ್ಗಮಸ್ಥಾನ(ಸ್ಥಳ)ದಲ್ಲಿದ್ದರೂ ಧರ್ಮ ಬಿಡುತ್ತಿರಲಿಲ್ಲ. ಸಮುದಾಯದಲ್ಲಿದ್ದು ಧರ್ಮಾಚರಣೆ ಮಾಡುತ್ತಿದ್ದುದರಿಂದ ಅವರ ಆಚಾರಗಳಲ್ಲಿ ಲೋಪದೋಷಗಳು ಇರುತ್ತಿರಲಿಲ್ಲ. ಪ್ರಾಯಶ್ಚಿತ್ತ ಪ್ರಸಂಗವೂ ಬರುತ್ತಿದ್ದಿಲ್ಲ. ಏಕೆಂದರೆ ಪ್ರಾಯಶ್ಚಿತ್ತವೆಂಬುದು ದುರ್ಬಲಮನಃಸ್ಥಿತಿಯವರಿಗೆ ಮಾತ್ರ ಇರುತ್ತಿತ್ತು. ಹೀಗೆ ಹಿಂದೆಲ್ಲ ಬ್ರಾಹ್ಮಣರು ಯಜ್ಞಗಳನ್ನು ಮೂರು ವೇದಗಳಲ್ಲಿ ನಿಷ್ಣಾತರಾದವರು ನಿಷ್ಕಾಮನೆಯಿಂದ ಮಾಡುತ್ತಿದ್ದರು. ಹೀಗಾಗಿ ಋಜುಸ್ವಭಾವದ ಭಗವನ್ನಿಷ್ಠೆ ಬುದ್ಧಿಯುಳ್ಳ, ವಿಹಿತಕರ್ಮಗಳನ್ನು ನಿಷ್ಕಾಮವಾಗಿ ಮಾಡುತ್ತಿದ್ದರಿಂದ ಆ ಕರ್ಮಗಳು ಮೋಕ್ಷಕ್ಕೆ ಕಾರಣವಾಗುತ್ತಿದ್ದವು[೧].

ಆ ಕಾಲದ ಜನರು ನಾಲ್ಕು ಪಾದ ಧರ್ಮವನ್ನೇ ಆಚರಿಸುತ್ತಿದ್ದರು. ಅಂತೆಯೇ ಅವರಿಗೆ ಪರಮಗತಿ ಲಭಿಸುತ್ತಿತ್ತು.

ಈ ಸಾಧಕರಲ್ಲಿ ಕೆಲವರು ಮನೆಗಳನ್ನು ಬಿಟ್ಟು ಸನ್ಯಾಸಿಗಳಾಗಿ, ಕೆಲವರು ವಾನಪ್ರಸ್ಥರಾಗಿ, ಕೆಲವರು ಗೃಹಸ್ಥಾಶ್ರಮದಲ್ಲಿಯೇ ಇರುತ್ತಾ, ಮತ್ತೆ ಕೆಲವರು ಬ್ರಹ್ಮಚಾರಿಗಳಾಗಿಯೇ ಇದ್ದು ಧರ್ಮ ಪಾಲಿಸುತ್ತಾರೆ[೨](ತ್ತಿದ್ದರು).

ಸದ್ಧರ್ಮಶೀಲನಾದ ಯೋಗಮುಕ್ತ ಬ್ರಹ್ಮಚಾರಿಯು ಬ್ರಾಹ್ಮಣನಾಗುತ್ತಾನೆ. ಅದರಂತೆ ಇರದವರು ಬ್ರಾಹ್ಮಣಾಭಾಸರೇ ಸರಿ. ಬ್ರಾಹ್ಮಣಕ ಎನಿಸುತ್ತಾನೆ.[೩]

ಹೀಗೆ ಶುಭಾಶುಭ ಕರ್ಮಗಳಿಂದಲೂ ಬ್ರಾಹ್ಮಣ್ಯದ ಮೌಲ್ಯ ತಿಳಿಯುತ್ತದೆ. ನಿಜವಾದ ತತ್ತ್ವಜ್ಞಾನಿಯೇ ಭಗವಂತನ ಅನುಗ್ರಹದಿಂದ ಅನಂತ ಸುಖವನ್ನು ಹೊಂದುತ್ತಾನೆ(ಮೋಕ್ಷ).

ಇದಲ್ಲದೆ ನಾಲ್ಕನೇ ಸನ್ಯಾಸಾಶ್ರಮಕ್ಕೆ ಸಂಬಂಧಿಸಿದಂತೆ ಇರುವ ಉಪನಿಷತ್ ಧರ್ಮವು ನಾಲ್ಕು ಆಶ್ರಮಗಳಿಗೆ ಸಾಧಾರಣವಾದುದು. ಸನಾತನ ಯತಿಧರ್ಮವು ಸಂತೋಷಮೂಲವಾದುದು (ಯದೃಚ್ಛಾ ಸಂತುಷ್ಟವಾದುದು). ತ್ಯಾಗವೇ ಅದರ ಸ್ವಭಾವ.

---

೧ ಅಪೇತಕಾಮಕ್ರೋಧಾನಾಂ ಪ್ರಕೃತ್ಯಾ ಸಂಶಿತಾತ್ಮನಾಮ್ ।
ಋಜೂನಾಂ ಸಮನಿತ್ಯಾನಾಂ ಸ್ಥಿತಾನಾಂ ಸ್ವೇಷು ಕರ್ಮಸು ॥
ಸರ್ವಮಾನಂತ್ಯಮಾಸೀದಿತಿ ನಃ ಶಾಶ್ವತೀ ಶ್ರುತಿಃ । – ೧೦೫/೧೫

೨ ಗೃಹೇಭ್ಯ ಏವ ನಿಷ್ಕ್ರಮ್ಯ ವನಮನ್ಯೇ ಸಮಾಶ್ರಿತಾಃ ।
ಗೃಹ ಏವಾಭಿ ಸಂಶ್ರಿತ್ಯ ತತೋಽನ್ಯೇ ಬ್ರಹ್ಮಚಾರಿಣಃ ॥ – ೧೦೫/೨೦

೩. ಏವಂ ಯುಕ್ತೋ ಬ್ರಾಹ್ಮಣಃ ಸ್ಯಾದನ್ಯೋ ಬ್ರಾಹ್ಮಣಕೋ ಭವೇತ್ ।
ಕರ್ಮೈವ ಪುರುಷಸ್ಯೇಹ ಶುಭಂ ವಾ ಯದಿ ವಾ ಶುಭಮ್ ॥

ಜ್ಞಾನವು ಅದರ ಅನುಷ್ಠಾನ. ನಿತ್ಯವೂ ಅಪವರ್ಗ ಗತಿವುಳ್ಳದ್ದು (ನಿತ್ಯವೂ ಮಾಡುವ ಕರ್ಮ ಅಪವರ್ಗಕ್ಕೆ ಕಾರಣವಾದುದು).

ಸರ್ವಸಾಧಾರಣವಾದ ಇತರ ಆಶ್ರಮಗಳಲ್ಲಿಯೇ ಇರಲಿ, ಸನ್ಯಾಸಾಶ್ರಮದಲ್ಲಿಯೇ ಇರಲಿ, ಇದೆಲ್ಲ ವೈರಾಗ್ಯಪ್ರಮಾಣಕ್ಕೆ ಅನುಗುಣವಾಗಿ ಧರ್ಮಾನುಷ್ಠಾನವನ್ನು ಉಪಾ-ಸನೆಯನ್ನು ಸಾಧಕನು ಮಾಡಬಲ್ಲವನಾಗಿರುತ್ತಾನೆ[೧].

ಮತ್ತೆ ಸ್ಯೂಮರಶ್ಮಿ ಮಹರ್ಷಿ ಪ್ರಶ್ನಿಸುತ್ತಾರೆ, ಕಪಿಲಮುನಿಗಳನ್ನು. ಮೇಲೆ ಹೇಳಿದ ತ್ಯಾಗಾದಿಗಳನ್ನು ಆರಾಧಿಸುವವರು, ಆಚರಿಸುವವರು ಮರಣಾನಂತರ ಯಾರು ಸ್ವರ್ಗ ಜಯಿಸಿದವರಲ್ಲಿ ಶ್ರೇಷ್ಠರು?

ಇದಕ್ಕೆ ಉತ್ತರರೂಪವಾಗಿ ಕಪಿಲಮುನಿಗಳು 'ಸನ್ಯಾಸದಿಂದ ದೊರೆಯುವ ಸುಖವನ್ನು ಗೃಹಸ್ಥನು ಹೊಂದುವುದಿಲ್ಲ' ಎಂದು ಹೇಳಿದರು. ಈ ಉತ್ತರದ ನಂತರ ಸ್ಯೂಮರಶ್ಮಿ ಮಹರ್ಷಿಯು –

'ಕಪಿಲರೇ! ನೀವು ಮೋಕ್ಷಕ್ಕಾಗಿ ಜ್ಞಾನೋಪಾಯವಂತರು. ಗೃಹಸ್ಥರೂ ಆಗಿರುವಿರಿ. ಕರ್ಮಗಳಲ್ಲಿ ನಿಮಗೆ ವಿಶ್ವಾಸವಿದೆ. ಆದರೆ ಯಾವುದೇ ಆಶ್ರಮವನ್ನು ನಿಷ್ಕಾಮರೀತಿಯಿಂದ ಆಚರಿಸಿದರೂ ಮೋಕ್ಷ ನಿಯತವಷ್ಟೇ. ಹೀಗೆ ಎಲ್ಲರಿಗೂ ಫಲೈಕ್ಯವಿದೆ. ಆಚರಣೆಗಳಲ್ಲಿ ಭೇದವಿದೆ. ಇದರ ಪರಸ್ಪರ ಭೇದವೇನು? ಎಂದು ನನಗೆ ತಿಳಿಯದಾಗಿದೆ. ಅದರ ಆಂತರ್ಯ ತಿಳಿಸಿರಿ' ಎಂದರು. ಅದಕ್ಕೆ ಕಪಿಲರು ಉತ್ತರಿಸುತ್ತಾ 'ಸ್ಯೂಮರಶ್ಮಿಗಳೇ! ನೋಡಿರಿ! ಕರ್ಮಗಳು ಶರೀರದ ಶುದ್ಧಿಕಾರಕಗಳು. ಜ್ಞಾನವು ಮೋಕ್ಷಸಾಧಕ. ಮನಸ್ಸಿನಲ್ಲಿನ ರಾಗಾದಿಗಳು ನಾಶವಾದಾಗ, ಪಕ್ವವಾದಾಗ ಜ್ಞಾನ ಉಂಟಾಗುತ್ತದೆ (ಮನಸ್ಸಿನಲ್ಲಿ)[೨].

೧. ಪರಬ್ರಹ್ಮನ ಪ್ರಾಪ್ತಿಗೆ ಸಾಧಕನಲ್ಲಿರಬೇಕಾದ ಗುಣಗಳು ದಯಾ, ಕ್ಷಮಾ, ಶಾಂತಿ, ಅಹಿಂಸೆ, ಸತ್ಯನಿಷ್ಠೆ ಸರಳತೆ (ಆರ್ಜವ), ಅದ್ರೋಹ, ದುರಭಿಮಾನವಿರದೆ ಇರುವುದು, ಸಹನೆ, ಶಮ – ಇವು ನಮ್ಮಲ್ಲಿರುವ ಬಗ್ಗೆ ಮನಸಾ ನಿಶ್ಚಯ ಮಾಡಿಕೊಳ್ಳಬೇಕು (ಆತ್ಮನಿರೀಕ್ಷಣೆ ಮಾಡಿ)

೨. ವೇದವೆಲ್ಲವನ್ನು ಬಲ್ಲವನು ಎಲ್ಲವನ್ನು ತಿಳಿದವನು. ಏಕೆಂದರೆ ವೇದದಲ್ಲಿ ಎಲ್ಲ ಅಂತರ್ಗತವಾಗಿದೆ (ಎಲ್ಲ ಜ್ಞಾನಗಳು ವೇದದಲ್ಲಿ ಸಿಗುತ್ತವೆ).

---

೧ ಚತುರ್ಥ ಔಪನಿಷದೋ ಧರ್ಮಃ ಸಾಧಾರಣಃ ಸ್ಮೃತ(ತಿ)ಃ।
ಸಂತೋಷಮೂಲಸ್ತ್ಯಾಗಾತ್ಮಾ ಜ್ಞಾನಾಧಿಷ್ಠಾನಮುಚ್ಯತೇ॥
ಅಪವರ್ಗಗತಿರ್ನಿತ್ಯೋ ಯತಿಧರ್ಮಃ ಸನಾತನಃ।
ಸಾಧಾರಣಃ ಕೇವಲೋ ವಾ ಯಥಾಬಲಮುಪಾಸ್ಯತೇ॥ – ೧೦೫/೨೭-೨೯

೨ ಶರೀರ ಶಕ್ತಿಃ ಕರ್ಮಾಣಿ ಜ್ಞಾನಂ ತು ಪರಮಾಗತಿಃ।
ಪಕ್ವೇ ಕಷಾಯೇ ವಮನೈರಸಜ್ಞಾನೇನ ತಿಷ್ಠತಿ॥ – ೧೦೫/೩೭

೩. ಜ್ಞಾನಿಗಳು ಭಗವಂತನನ್ನು ಜಗತ್ತಿನ ಆದಿ, ಮಧ್ಯ, ಅಂತ್ಯವೆಂದು ಭಾವಿಸಿದ್ದಾರೆ.

೪. ಭಗವದಿತರವೆಲ್ಲವನ್ನು ತ್ಯಜಿಸಿ ಭಗವಂತನಲ್ಲಿ ಬುದ್ಧಿಯನ್ನು ಹೊಂದುವುದೇ ಶಮ ಎನಿಸುತ್ತದೆ.

೫. ಮೋಕ್ಷದಲ್ಲಿ ಸಂತೋಷ, ಶುಭವೆಂಬುವುದು ಪ್ರತಿಷ್ಠಿತವಾಗಿರುತ್ತದೆ.

೬. ಪರಬ್ರಹ್ಮವಸ್ತು ಋತ, ಸತ್ಯ ಎನಿಸಿದೆ. ತಿಳಿಯಲು ಯೋಗ್ಯವೂ ಆಗಿದೆ. ತಿಳಿಯಲ್ಪಟ್ಟದ್ದೂ ಆಗಿದೆ. ಅದು ಎಲ್ಲ ಪ್ರಾಣಿಗಳ ಅಂತರ್ಯಾಮಿಯಾಗಿದೆ. ಸ್ಥಾವರ ಜಂಗಮಗಳ ನಿಯಾಮಕವೂ ಆಗಿದೆ. ಅಲ್ಲದೆ ಸಂಪೂರ್ಣ ಸುಖಸ್ವರೂಪವೂ, ಎಲ್ಲರ ಉತ್ಪತ್ತಿಗೂ ಕಾರಣವಾಗಿದೆ. ಅವಿನಾಶಿ ಕೂಡಾ ಆಗಿದೆ.

ಇಂತಹ ಆಕಾಶದಂತೆ ನಿಸ್ಸಂಗವಾಗಿರುವ, ನಿರ್ವಿಕಾರವಾಗಿರುವ, ಸನಾತನವಾದ, ಶಾಶ್ವತವಾದ ಪರಬ್ರಹ್ಮವಸ್ತುವನ್ನು ತೇಜಸ್ಸು ಕ್ಷಮಾ, ಶಾಂತಿ, ಆರೋಗ್ಯ, ಶುಭಕಾಮನೆ ಇವುಗಳ ಮೂಲಕ ಜ್ಞಾನಿಗಳು ಹೊಂದುತ್ತಾರೆ. ಅಂತಹ ಪರಬ್ರಹ್ಮವಸ್ತುವಿಗೆ ಮತ್ತು ಅವನನ್ನು ಕಂಡ ಬ್ರಾಹ್ಮಣನಿಗೂ ನಮಸ್ಕಾರವು[೧].

ಕಪಿಲಮುನಿ ಹಾಗೂ ಸ್ಯೂಮರಶ್ಮಿಗಳ ಸಂವಾದಗಳು ಗೀತೆಯ ಕರ್ಮ, ಜ್ಞಾನಯೋಗಗಳನ್ನು ತಿಳಿಸುವಂತಿದೆ. ಕರ್ಮಯೋಗ ಜ್ಞಾನಯೋಗಗಳೆರಡೂ ಮೋಕ್ಷಸಾಧಕಗಳಾದರೂ ಜ್ಞಾನಯೋಗ ಕರ್ಮಯೋಗಕ್ಕಿಂತ ಶ್ರೇಷ್ಠ ಎಂಬ ಭಾವ ಇಲ್ಲಿದೆ. ಕಪಿಲಮುನಿಗಳ ಮಾತುಗಳೆಲ್ಲ ಉಪದೇಶಗಳೇ, ಸಂದೇಶಗಳೇ ಆಗಿವೆ.

*****

---

೧ ಋತಂ ಸತ್ಯಂ ವಿದಿತಂ ವೇದಿತವ್ಯಂ ಸರ್ವಸ್ಯಾತ್ಮಾ ಜಂಗಮಂ ಸ್ಥಾವರಂ ಚ ।
ಸರ್ವಸುಖಂ ಯಚ್ಛಿವಮುತ್ತಮಮಂ ಚ ಬ್ರಹ್ಮಾವ್ಯಕ್ತಂ ಪ್ರಭವಿಶ್ಚಾವ್ಯಯಶ್ಚ ॥
ತೇಜಃ ಕ್ಷಮಾ ಶಾಂತಿರನಾಮಯಂ ಶುಭಂ ತಥಾವಿಧಂ ವ್ಯೋಮ ಸನಾತನಂ ಧ್ರುವಮ್ ।
ಏತೈಃ ಶಬ್ದೈರ್ಗಮ್ಯತೇ ಬುದ್ಧಿ ನೇತ್ರೈಸ್ತಸ್ಮೈ ನಮೋ ಬ್ರಹ್ಮಣೇ ಬ್ರಾಹ್ಮಣಾಯ ॥ - ೧೦೫/೪೪,೪೫

# ೧೯೨. ಯಜ್ಞದಲ್ಲಿ ಪಶುಬಲಿ ವಿಹಿತವೇ?

ಧರ್ಮರಾಜನು ಪ್ರಶ್ನಿಸುತ್ತಾನೆ –

ತಾತ! ಲೋಕದಲ್ಲಿ ಯಜ್ಞ ತಪಸ್ಸುಗಳು ವಿವಿಧವಾಗಿ ಇದ್ದರೂ, ಅವುಗಳ ಉದ್ದೇಶ ಭಗವತ್ಸಂತೋಷ ಸಾಧನೆ. ಅಂತಹ ಬೇರೆ ಬೇರೆ ಯಜ್ಞಗಳಲ್ಲಿ ಸ್ವರ್ಗಕ್ಕೂ, ಧನಕ್ಕೂ ಕಾರಣವಾಗದಂತಹ ಕೇವಲ ಧರ್ಮಕ್ಕಾಗಿ ಎಂದು ನಿಶ್ಚಯಿಸಲ್ಪಡುವ ಯಜ್ಞ ಯಾವುದು?[೧]

ಈ ವಿಷಯವನ್ನು ಕುರಿತು ಭೀಷ್ಮರು ತಮಗೆ ನಾರದರು ಹೇಳಿದ **ಉಂಛವೃತ್ತಿಯ ಬ್ರಾಹ್ಮಣನು** ಮಾಡಿದ ಯಜ್ಞದ ಬಗ್ಗೆ ಒಂದು ಪ್ರಾಚೀನ ಇತಿಹಾಸವನ್ನು ಹೇಳಿದರು.

ವಿದರ್ಭದೇಶದಲ್ಲಿ ಉಂಛವೃತ್ತಿಯಿಂದ ಜೀವನವನ್ನು ನಡೆಸುತ್ತಿದ್ದ ಒಬ್ಬ **ಬ್ರಹ್ಮರ್ಷಿಯು** ಯಜ್ಞವೊಂದನ್ನು ಮಾಡಲು ಉದ್ದೇಶಿಸಿದನು. ಆತನಿದ್ದ ಪ್ರದೇಶದಲ್ಲಿ ಸಾಮಲಕ್ಕಿ(ಶ್ಯಾಮಾಕ)ಯನ್ನೇ ಉಣ್ಣಬೇಕಾಗಿತ್ತು. ಅರ್ಕ ಪತ್ರಿ ಅಥವಾ ಸುವರ್ಚಲಾ ಎಂಬ ಹೆಸರಿನ ಕಾಡು ಶಾಕಲತೆಯನ್ನು ಉಪಯೋಗಿಸುತ್ತಿದ್ದನು. ಅಲ್ಲದೆ ಅಲ್ಲಿ ಕಹಿಯಾದ, ರಸರಹಿತ ಶಾಕ (ತರಕಾರಿ) ಸಿಕ್ಕುತ್ತಿದ್ದವು. ಆದರೆ ಆ ಬ್ರಾಹ್ಮಣನ ತಪಃಪ್ರಭಾವದಿಂದಾಗಿ ಆ ಎಲ್ಲ ಪದಾರ್ಥಗಳು ರುಚಿಯಾಗಿರುತ್ತಿದ್ದವು.

ಶತ್ರುಗಳಿಗೆ ತಾಪದಾಯಕನಾದ ಧರ್ಮರಾಜನೇ! ಕಾಡಿನಲ್ಲಿದ್ದು ಯಾವ ಜೀವಿಗಳಿಗೂ ಹಿಂಸೆ ಇಲ್ಲದಂತೆ ವಾನಪ್ರಸ್ಥಧರ್ಮದಿಂದ ಫಲಮೂಲಗಳಿಂದ ಯಜ್ಞ ನಡೆಸಿದರೂ ಆ ಯಜ್ಞವು ಸ್ವರ್ಗ ಫಲ ನೀಡುತ್ತದೆ.[೨] ಈ ಬ್ರಾಹ್ಮಣ ಹೆಂಡತಿ **ಪುಷ್ಕರಚಾರಿಣಿ.** ಈಕೆಯೊಡನೆ ಬ್ರಾಹ್ಮಣನು ಶಾಕಯಜ್ಞವನ್ನೇ ಮಾಡುತ್ತಿದ್ದನು. ಇದು ವಿಧ್ಯುಕ್ತವೆಂದು ತಿಳಿದೂ ಆಕೆಯು ಗಂಡನ ಶಾಪಕ್ಕೆ ಹೆದರಿ ಆತನನ್ನು ಅನುಸರಿಸಿದ್ದಳು. ಪತ್ನಿಯು ನವಿಲಿನ ಜೀರ್ಣಗರಿಗಳನ್ನು ಬಟ್ಟೆಯನ್ನಾಗಿ ಧರಿಸುತ್ತಿದ್ದಳು. ಗಂಡನ ಯಜ್ಞದ ವಿಧಾನದ ಬಗ್ಗೆ ಸಮಾಧಾನವಿಲ್ಲದ ಆಕೆ ಹೋಮ ನಡೆಯುವಾಗ ಒಂದು ಪಕ್ಷಿಯನ್ನು ಯಜ್ಞಕ್ಕಾಗಿ ವಧಿಸಿದ್ದಳು (ಪಶುವಾಗಿ). ಇದನ್ನು ಕಂಡ ಆ ಪಕ್ಷಿಯೊಡನೆ ವಾಸ ಮಾಡುತ್ತಿದ್ದ ಜಿಂಕೆ ಯಜ್ಞಮಂಟಪಕ್ಕೆ ಬಂದು

---

೧ ಬಹೂನಾಂ ಯಜ್ಞತಪಸಾಮೇಕಾರ್ಥಾನಾಂ ಪಿತಾಮಹ ।
ಧರ್ಮಾರ್ಥಂ ನ ಸುಖಾರ್ಥಾರ್ಥಂ ಕಥಂ ಯಜ್ಞಃ ಸಮಾಹಿತಃ ॥ – ೧೦೭/೧

೨ ಉಪಗಮ್ಯ ವನೇ ಪೃಥ್ವೀಂ ಸರ್ವಭೂತವಿಹಿಂಸಯಾ ।
ಅಪಿ ಮೂಲಫಲೈರಿಜ್ಯೋ ಯಜ್ಞಃ ಸ್ವರ್ಗ್ಯಃ ಪರಂತಪ ॥ – ೧೦೭/೫

೩. ಜ್ಞಾನಿಗಳು ಭಗವಂತನನ್ನು ಜಗತ್ತಿನ ಆದಿ, ಮಧ್ಯ, ಅಂತ್ಯವೆಂದು ಭಾವಿಸಿದ್ದಾರೆ.

೪. ಭಗವದಿತರವೆಲ್ಲವನ್ನು ತ್ಯಜಿಸಿ ಭಗವಂತನಲ್ಲಿ ಬುದ್ಧಿಯನ್ನು ಹೊಂದುವುದೇ ಶಮ ಎನಿಸುತ್ತದೆ.

೫. ಮೋಕ್ಷದಲ್ಲಿ ಸಂತೋಷ, ಶುಭವೆಂಬುವುದು ಪ್ರತಿಷ್ಠಿತವಾಗಿರುತ್ತದೆ.

೬. ಪರಬ್ರಹ್ಮವಸ್ತು ಋತ, ಸತ್ಯ ಎನಿಸಿದೆ. ತಿಳಿಯಲು ಯೋಗ್ಯವೂ ಆಗಿದೆ. ತಿಳಿಯಲ್ಪಟ್ಟದ್ದೂ ಆಗಿದೆ. ಅದು ಎಲ್ಲ ಪ್ರಾಣಿಗಳ ಅಂತರ್ಯಾಮಿಯಾಗಿದೆ. ಸ್ಥಾವರ ಜಂಗಮಗಳ ನಿಯಾಮಕವೂ ಆಗಿದೆ. ಅಲ್ಲದೆ ಸಂಪೂರ್ಣ ಸುಖಸ್ವರೂಪವೂ, ಎಲ್ಲರ ಉತ್ಪತ್ತಿಗೂ ಕಾರಣವಾಗಿದೆ. ಅವಿನಾಶಿ ಕೂಡಾ ಆಗಿದೆ.

ಇಂತಹ ಆಕಾಶದಂತೆ ನಿಸ್ಸಂಗವಾಗಿರುವ, ನಿರ್ವಿಕಾರವಾಗಿರುವ, ಸನಾತನವಾದ, ಶಾಶ್ವತವಾದ ಪರಬ್ರಹ್ಮವಸ್ತುವನ್ನು ತೇಜಸ್ಸು ಕ್ಷಮಾ, ಶಾಂತಿ, ಆರೋಗ್ಯ, ಶುಭಕಾಮನೆ ಇವುಗಳ ಮೂಲಕ ಜ್ಞಾನಿಗಳು ಹೊಂದುತ್ತಾರೆ. ಅಂತಹ ಪರಬ್ರಹ್ಮವಸ್ತುವಿಗೆ ಮತ್ತು ಅವನನ್ನು ಕಂಡ ಬ್ರಾಹ್ಮಣನಿಗೂ ನಮಸ್ಕಾರವು[೧].

ಕಪಿಲಮುನಿ ಹಾಗೂ ಸ್ಯೂಮರಶ್ಮಿಗಳ ಸಂವಾದಗಳು ಗೀತೆಯ ಕರ್ಮ, ಜ್ಞಾನಯೋಗಗಳನ್ನು ತಿಳಿಸುವಂತಿದೆ. ಕರ್ಮಯೋಗ ಜ್ಞಾನಯೋಗಗಳೆರಡೂ ಮೋಕ್ಷಸಾಧಕಗಳಾದರೂ ಜ್ಞಾನಯೋಗ ಕರ್ಮಯೋಗಕ್ಕಿಂತ ಶ್ರೇಷ್ಠ ಎಂಬ ಭಾವ ಇಲ್ಲಿದೆ. ಕಪಿಲಮುನಿಗಳ ಮಾತುಗಳೆಲ್ಲ ಉಪದೇಶಗಳೇ, ಸಂದೇಶಗಳೇ ಆಗಿವೆ.

*****

---

೧ ಋತಂ ಸತ್ಯಂ ವಿದಿತಂ ವೇದಿತವ್ಯಂ ಸರ್ವಸ್ಯಾತ್ಮಾ ಜಂಗಮಂ ಸ್ಥಾವರಂ ಚ ।
ಸರ್ವಸುಖಂ ಯಚ್ಛಿವಮುತ್ತಮಮಂ ಚ ಬ್ರಹ್ಮಾವ್ಯಕ್ತಂ ಪ್ರಭವಿಶ್ಚಾವ್ಯಯಶ್ಚ ॥
ತೇಜಃ ಕ್ಷಮಾ ಶಾಂತಿರನಾಮಯಂ ಶುಭಂ ತಥಾವಿಧಂ ವ್ಯೋಮ ಸನಾತನಂ ಧ್ರುವಮ್ ।
ಏತೈಃ ಶಬ್ದೈರ್ಗಮ್ಯತೇ ಬುದ್ಧಿ ನೇತ್ರೈಸ್ತಸ್ಮೈ ನಮೋ ಬ್ರಹ್ಮಣೇ ಬ್ರಾಹ್ಮಣಾಯ ॥ - ೧೦೫/೪೪,೪೫

# ೧೯೨. ಯಜ್ಞದಲ್ಲಿ ಪಶುಬಲಿ ವಿಹಿತವೇ?

ಧರ್ಮರಾಜನು ಪ್ರಶ್ನಿಸುತ್ತಾನೆ –

ತಾತ! ಲೋಕದಲ್ಲಿ ಯಜ್ಞ ತಪಸ್ಸುಗಳು ವಿವಿಧವಾಗಿ ಇದ್ದರೂ, ಅವುಗಳ ಉದ್ದೇಶ ಭಗವತ್ಸಂತೋಷ ಸಾಧನೆ. ಅಂತಹ ಬೇರೆ ಬೇರೆ ಯಜ್ಞಗಳಲ್ಲಿ ಸ್ವರ್ಗಕ್ಕೂ, ಧನಕ್ಕೂ ಕಾರಣವಾಗದಂತಹ ಕೇವಲ ಧರ್ಮಕ್ಕಾಗಿ ಎಂದು ನಿಶ್ಚಯಿಸಲ್ಪಡುವ ಯಜ್ಞ ಯಾವುದು?[೧]

ಈ ವಿಷಯವನ್ನು ಕುರಿತು ಭೀಷ್ಮರು ತಮಗೆ ನಾರದರು ಹೇಳಿದ **ಉಂಛವೃತ್ತಿಯ ಬ್ರಾಹ್ಮಣನು** ಮಾಡಿದ ಯಜ್ಞದ ಬಗ್ಗೆ ಒಂದು ಪ್ರಾಚೀನ ಇತಿಹಾಸವನ್ನು ಹೇಳಿದರು.

ವಿದರ್ಭದೇಶದಲ್ಲಿ ಉಂಛವೃತ್ತಿಯಿಂದ ಜೀವನವನ್ನು ನಡೆಸುತ್ತಿದ್ದ ಒಬ್ಬ **ಬ್ರಹ್ಮರ್ಷಿಯು** ಯಜ್ಞವೊಂದನ್ನು ಮಾಡಲು ಉದ್ದೇಶಿಸಿದನು. ಆತನಿದ್ದ ಪ್ರದೇಶದಲ್ಲಿ ಸಾಮಅಕ್ಕಿ(ಶ್ಯಾಮಾಕ)ಯನ್ನೇ ಉಣ್ಣಬೇಕಾಗಿತ್ತು. ಅರ್ಕ ಪತ್ರಿ ಅಥವಾ ಸುವರ್ಚಲಾ ಎಂಬ ಹೆಸರಿನ ಕಾಡು ಶಾಕಲತೆಯನ್ನು ಉಪಯೋಗಿಸುತ್ತಿದ್ದನು. ಅಲ್ಲದೆ ಅಲ್ಲಿ ಕಹಿಯಾದ, ರಸರಹಿತ ಶಾಕ (ತರಕಾರಿ) ಸಿಕ್ಕುತ್ತಿದ್ದವು. ಆದರೆ ಆ ಬ್ರಾಹ್ಮಣನ ತಪಃಪ್ರಭಾವದಿಂದಾಗಿ ಆ ಎಲ್ಲ ಪದಾರ್ಥಗಳು ರುಚಿಯಾಗಿರುತ್ತಿದ್ದವು.

ಶತ್ರುಗಳಿಗೆ ತಾಪದಾಯಕನಾದ ಧರ್ಮರಾಜನೇ! ಕಾಡಿನಲ್ಲಿದ್ದು ಯಾವ ಜೀವಿಗಳಿಗೂ ಹಿಂಸೆ ಇಲ್ಲದಂತೆ ವಾನಪ್ರಸ್ಥಧರ್ಮದಿಂದ ಫಲಮೂಲಗಳಿಂದ ಯಜ್ಞ ನಡೆಸಿದರೂ ಆ ಯಜ್ಞವು ಸ್ವರ್ಗ ಫಲ ನೀಡುತ್ತದೆ.[೨] ಈ ಬ್ರಾಹ್ಮಣ ಹೆಂಡತಿ **ಪುಷ್ಕರಚಾರಿಣಿ.** ಈಕೆಯೊಡನೆ ಬ್ರಾಹ್ಮಣನು ಶಾಕಯಜ್ಞವನ್ನೇ ಮಾಡುತ್ತಿದ್ದನು. ಇದು ವಿಧ್ಯುಕ್ತವೆಂದು ತಿಳಿದೂ ಆಕೆಯು ಗಂಡನ ಶಾಪಕ್ಕೆ ಹೆದರಿ ಆತನನ್ನು ಅನುಸರಿಸಿದ್ದಳು. ಪತ್ನಿಯು ನವಿಲಿನ ಜೀರ್ಣಗರಿಗಳನ್ನು ಬಟ್ಟೆಯನ್ನಾಗಿ ಧರಿಸುತ್ತಿದ್ದಳು. ಗಂಡನ ಯಜ್ಞದ ವಿಧಾನದ ಬಗ್ಗೆ ಸಮಾಧಾನವಿಲ್ಲದ ಆಕೆ ಹೋಮ ನಡೆಯುವಾಗ ಒಂದು ಪಕ್ಷಿಯನ್ನು ಯಜ್ಞಕ್ಕಾಗಿ ವಧಿಸಿದ್ದಳು (ಪಶುವಾಗಿ). ಇದನ್ನು ಕಂಡ ಆ ಪಕ್ಷಿಯೊಡನೆ ವಾಸ ಮಾಡುತ್ತಿದ್ದ ಜಿಂಕೆ ಯಜ್ಞಮಂಟಪಕ್ಕೆ ಬಂದು

---

೧ ಬಹೂನಾಂ ಯಜ್ಞತಪಸಾಮೇಕಾರ್ಥಾನಾಂ ಪಿತಾಮಹ।
ಧರ್ಮಾರ್ಥಂ ನ ಸುಖಾರ್ಥಾರ್ಥಂ ಕಥಂ ಯಜ್ಞಃ ಸಮಾಹಿತಃ॥ – ೧೦೭/೧

೨ ಉಪಗಮ್ಯ ವನೇ ಪೃಥ್ವೀಂ ಸರ್ವಭೂತವಿಹಿಂಸಯಾ।
ಅಪಿ ಮೂಲಫಲೈರಿಜ್ಯೋ ಯಜ್ಞಃ ಸ್ವರ್ಗ್ಯಃ ಪರಂತಪ॥ – ೧೦೭/೫

**ಸತ್ಯನೆಂಬ** ಆ ಬ್ರಾಹ್ಮಣನನ್ನು ಕುರಿತು ನೀನು ಅಸತ್ಕರ್ಮ ಮಾಡುತ್ತಿರುವೆ ಎಂದು ಹೇಳಿತು[೧]. ನೀನು ಮಾಡುವ ಯಜ್ಞವು ಅಂಗಹೀನ, ಮಂತ್ರಹೀನವಾದರೆ ಅದು ದುಷ್ಕರ್ಮವಾಗಿ ಪರಿಣಮಿಸುತ್ತದೆ. ಆದ್ದರಿಂದ ಆ ನ್ಯೂನತೆ ಹೋಲಾಡಿಸಲು ನನ್ನನ್ನು ಯಜ್ಞದಲ್ಲಿ ಪಶುವಾಗಿ ಸಮರ್ಪಿಸಿ ನಿಷ್ಕಳಂಕನಾಗಿ ಸ್ವರ್ಗಕ್ಕೆ ಹೋಗು ಎಂದಿತು[೨].

ಜಿಂಕೆಯು ಹೇಳಿದ ನಂತರ ಯಜ್ಞವೇದಿಕೆಯಲ್ಲಿ ಸಾವಿತ್ರೀದೇವಿ ಆಗಮಿಸಿ ಜಿಂಕೆಯ ಮಾತಿನಂತೆ ನಡೆಯಲು ಸಲಹೆ ನೀಡಿದರೂ, ಆ ಬ್ರಾಹ್ಮಣನು ನಮ್ಮೊಡನೆ ವಾಸ ಮಾಡುತ್ತಿರುವ ಈ ಜಿಂಕೆಯನ್ನು ನಾನು ಕೊಲ್ಲಲಾರೆ ಎಂದನು[೩]. ನಂತರ ಸಾವಿತ್ರೀ ಯಜ್ಞವೇದಿಕೆ ಪ್ರವೇಶಿಸಿ ರಸಾತಳಕ್ಕೆ ಹೊರಟುಹೋದಳು. ನಂತರ ಆ ಜಿಂಕೆಯು ಮತ್ತೆ ಸತ್ಯವನ್ನು ಅಂಜಲೀಬದ್ಧವಾಗಿ ತನ್ನನ್ನು ಯಜ್ಞದ ಪಶುವನ್ನಾಗಿಸಲು ಪ್ರಾರ್ಥಿಸಿತು. ಸತ್ಯನು ಆ ಜಿಂಕೆಯನ್ನು ತಬ್ಬಿಕೊಂಡು ಇಲ್ಲಿಂದ ಹೋಗು ಎಂದನು (ಅದರ ಮಾತನ್ನು ನಡೆಸಲು ಒಪ್ಪದೆ). ಆ ಜಿಂಕೆ ಎಂಟು ಹೆಜ್ಜೆ ಮುಂದೆ ಹೋಗಿ ಮತ್ತೇ ವಾಪಸು ಬಂದು ಇನ್ನೊಮ್ಮೆ ತನ್ನನ್ನು ವಿಧಿಪೂರ್ವಕವಾಗಿ ಆಲಂಭನ ಮಾಡೆಂದು ಹೇಳಿತು. ಅದರಿಂದ ನನಗೆ ಸದ್ಗತಿಯಾಗುತ್ತದೆ.[೪] ನಾನು ನಿನಗೆ ದಿವ್ಯ ದೃಷ್ಟಿ ಕೊಡುತ್ತೇನೆ. ಆಕಾಶದಲ್ಲಿ ವಿಮಾನಗಳು, ದಿವ್ಯ ಅಪ್ಸರೆಯರು, ಗಂಧರ್ವರು ಇದ್ದಾರೆ. ಅದನ್ನು ನೋಡಿದ ಸತ್ಯನು ಮೃಗಾಲಂಭನದಿಂದ ಸ್ವರ್ಗವಾಸವಿರುವುದನ್ನು ವಿಶ್ವಾಸ ಮಾಡಿದನು.

ಆ ಮೃಗ ಬೇರೆ ಯಾರೂ ಆಗದೆ ಸಾಕ್ಷಾತ್ ಯಮಧರ್ಮನೇ ಆಗಿದ್ದನು. ಅನೇಕ ವರ್ಷಗಳಿಂದ ಆ ಕಾಡಿನಲ್ಲಿ ವಾಸವಾಗಿದ್ದನು. ಸತ್ಯನು ಮಾಡಿದ ಯಜ್ಞ ವಿಧ್ಯುಕ್ತವಾಗಿಲ್ಲವೆಂದು ಧರ್ಮನು ಭಾವಿಸಿದ್ದ.[೫] ಸತ್ಯನ ಯಜ್ಞವು ಪುಣ್ಯಹ್ರಾಸಕ್ಕೆ ಕಾರಣವಾಗಿದೆ ಎಂದು ಭಾವಿಸಿದನು. ಆತನ ತಪಸ್ಸೂ ಯಜ್ಞದ ತಪ್ಪು ತಿಳುವಳಿಕೆಯಿಂದ (ಪಶ್ವಾಲಂಭ ಮಾಡಬಾರದೆಂದು) ಕಳೆದಿತ್ತು. ಆದ್ದರಿಂದ ಯಾಜ್ಞೀಯ ಹಿಂಸೆ ಧರ್ಮಸಾಧನೆಯೇ ಆಗಿದೆ.[೬]

---

೧ ತಸ್ಮಿನ್ ವನೇ ಸಮೀಪಸ್ಥೋ ಮೃಗೋಽಭೂತ್ ಸಹಚಾರಿಕಃ।
ವಚೋಭಿರಬ್ರವೀತ್ ಸತ್ಯಂ ತ್ವಯಾ ದುಷ್ಕೃತಕಂ ಕೃತಮ್ ॥ - ೧೦೭/೮

೨ ಯದಿ ಮಂತ್ರಾಂಗಹೀನೋಽಯಂ ಯಜ್ಞೋ ಭವತಿ ವೈಕೃತಃ।
ಮಾಂ ಭೋಃ ಪ್ರಕ್ಷಿಪ ಹೋತ್ರೇ ತ್ವಂ ಗಚ್ಛ ಸ್ವರ್ಗಮತಂದ್ರಿತಃ ॥ - ೧೦೭/೯

೩. ತತಸ್ತು ಯಜ್ಞೇ ಸಾವಿತ್ರೀ ಸಾಕ್ಷಾತ್ತಂ ಸನ್ನ್ಯಮಂತ್ರಯತ್।
ನಿಮಂತ್ರಯಂತೀ ಪ್ರತ್ಯುಕ್ತಾ ನ ಹನ್ಯಾಂ ಸಹವಾಸಿನಮ್ ॥ - ೧೦೭/೧೦

೪ .. ತತಃ ಸ ಹರಿಣೋ ಗತ್ವಾ ಪದಾನ್ಯಷ್ಟೌ ನ್ಯವರ್ತತ।
ಸಾಧು ಹಿಂಸಯ ಮಾಂ ಸತ್ಯ ಹತೋ ಯಾಸ್ಯಾಮಿ ಸದ್ಗತಿಮ್ ॥ - ೧೦೭/೧೩

೫ ಸ ತು ಧರ್ಮೋ ಮೃಗೋ ಭೂತ್ವಾ ಬಹುವರ್ಷೋಷಿತೋ ವನೇ।
ತಸ್ಯ ನಿಷ್ಕೃತಿಮಾಧತ್ತ ನ ಹ್ಯಸೌ ಯಜ್ಞಸಂವಿಧಿಃ ॥ - ೧೦೭/೧೬

೬ ತಸ್ಯ ತೇನ ತು ಭಾವೇನ ಮೃಗಹಿಂಸಾತ್ಮನಸ್ತದಾ।
ತಪೋ ಮಹತ್ ಸಮುಚ್ಛಿನ್ನಂ ತಸ್ಮಾದ್ಧಿಂಸಾ ನ ಯಜ್ಞಿಯಾ ॥ - ೧೦೭/೧೭

ನಂತರ ಮೃಗರೂಪಿ ಯಮನು ಪ್ರತ್ಯಕ್ಷನಾಗಿ ತಾನೇ ಸತ್ಯನಿಂದ ಯಜ್ಞ ಮಾಡಿಸಿದ ಪಶುಬಲಿ ಸಮೇತವಾಗಿ ಬಂದನು. ಇದರಿಂದ ಸತ್ಯನು ಬಹಳ ಸಮಾಧಾನ ಹೊಂದಿದ. ಆತನ ಪತ್ನಿಗೂ ಸಮಾಧಾನವಾಯಿತು[೧]. ಯದ್ಯಪಿ ಅಹಿಂಸೆಯು ಎಲ್ಲರಿಗೂ ಧರ್ಮವಾದರೂ ಯಜ್ಞದಲ್ಲಿ ಹಿಂಸೆ ಧರ್ಮವೇ ಆಗಿದೆ. ಸತ್ಯವಾದಿಗಳ ಧರ್ಮವನ್ನೇ ನಿನಗೆ ಹೇಳಿದ್ದೇನೆಂದು ಭೀಷ್ಮರು ಧರ್ಮರಾಜನಿಗೆ ಹೇಳಿದರು[೨].

## ಸಂದೇಶಗಳು

ಜಗತ್ತಿನಲ್ಲಿ ಹಿಂಸೆಯನ್ನು ಯಾರೂ ಒಪ್ಪುವುದಿಲ್ಲ. ಕಾರಣ ಅದೊಂದು ಕ್ರೌರ್ಯದ ವ್ಯಾಪಾರ. ಆದರೆ ಜೀವನದ ಅನೇಕ ಪ್ರಸಂಗಗಳಲ್ಲಿ ಹಿಂಸೆ ಅನಿವಾರ್ಯವಾಗುತ್ತದೆ. ಇಂತಹ ಉಪಾಖ್ಯಾನಗಳು ಈಗಾಗಲೇ ಬಂದಿವೆ. ಯಜ್ಞದಲ್ಲಿ ಹಿಂಸೆ ಅಧರ್ಮವಲ್ಲವೆಂಬ ಪ್ರಮೇಯ ಇಲ್ಲಿದೆ. ಯಜ್ಞದಲ್ಲಿ ಪಶುಬಲಿ (ಮೊದಲಾದ ವಿಹಿತ ಪ್ರಾಣ್ಯಾದಿಗಳ) ಶಾಸ್ತ್ರೋಕ್ತವಾಗಿಯೇ ಇವೆ. ಏಳು ತರಹದ ಪ್ರಾಣಿಗಳೂ ಬಲಿಗೆ ಯೋಗ್ಯವೆಂದು ಹೇಳಲಾಗಿದೆ. ಅಲ್ಲಿ ಪಶುವಾಗಿ ವಿಧಿಸಲ್ಪಟ್ಟ ಪ್ರಾಣಿಗಳ ಒಪ್ಪಿಗೆಯನ್ನು ತೆಗೆದುಕೊಳ್ಳಲಾಗುತ್ತದೆ. ಯಜ್ಞಕ್ಕಾಗಿಯೇ ತಮ್ಮ ಜೀವನವನ್ನು ಮೀಸಲಿಟ್ಟ ಪ್ರಾಣಿಗಳು ಅವು. ಯುದ್ಧದಲ್ಲಿ ದೇಶಕ್ಕೋಸ್ಕರ ಮರಣ ಹೊಂದಲು ಸಿದ್ಧರಾಗುವ ಯೋಧರಂತೆ ಅವರಿಗೆ ಹಿಂಸೆಯಾದರೂ ಅವರು ಅದನ್ನು ಸಹಿಸಿಕೊಳ್ಳುತ್ತಾರೆ. ಇಲ್ಲಿ ಸದ್ಗತಿಯ ಸಲುವಾಗಿ ಪ್ರಾಣಿಗಳು ತಮ್ಮ ಪ್ರಾಣ ತೆತ್ತುತ್ತವೆ. ಇಲ್ಲಿ ಅದರ ಪ್ರಾತ್ಯಕ್ಷಿಕೆ ಇದೆ. ಸ್ವಯಂ ಜಿಂಕೆ ತಾನು ಪ್ರಾಣ ಕೊಡಲು ಸಿದ್ಧ ಮತ್ತು ಧರ್ಮಮೂರ್ತಿ ಧರ್ಮದೇವತೆಯೇ ಬಂದು ಯಜ್ಞ ಮಾಡಿಸಿದ್ದಾನೆ. ಹೀಗಾಗಿ ಆ ಬಗ್ಗೆ ಶಂಕೆಗೆ ಅವಕಾಶವಿಲ್ಲ. ಉಳಿದಂತೆ ಹಿಂಸೆ ನಿತ್ಯಜೀವನದಲ್ಲಿ ಸರ್ವಥಾ ಅಧರ್ಮವೇ ಆಗಿದೆ.

*****

---

೧ ತತಸ್ತಂ ಭಗವಾನ್ ಧರ್ಮೋ ಯಜ್ಞಂ ಯಾಜಯತ ಸ್ವಯಮ್ ।
ಸಮಾಧಾನಂ ಚ ಭಾರ್ಯಾಯಾ ಲೇಭೇ ಸ ತಪಸಾ ಪರಮ್ ॥ - ೧೦೭/೧೮

೨ ಅಹಿಂಸಾ ಸಕಲೋ ಧರ್ಮೋ ಹಿಂಸಾ ಯಜ್ಞೇ ಸಮಾಹಿತಾ ।
ಸತ್ಯಂ ತೇಽಹಂ ಪ್ರವಕ್ಷ್ಯಾಮಿ ಯೋ ಧರ್ಮಃ ಸತ್ಯವಾದಿನಾಮ್ ॥ - ೧೦೭/೧೯

# ೧೯೩. ಆಶಾತ್ಯಾಗವೇ ಸುಖಸಾಧನ

ಧರ್ಮರಾಜನ ಪ್ರಶ್ನೆ –

ತಾತ! ನಾವು ಪಾಪಿಗಳು, ರಾಜ್ಯ, ಐಶ್ವರ್ಯದ ಆಸೆಯಿಂದ ಸೋದರರು, ಪಿತೃಗಳು, ಮಕ್ಕಳು, ಜ್ಞಾತಿಗಳು, ಸ್ನೇಹಿತರು, ಇವರೆಲ್ಲರನ್ನು ಕೊಂದೆವು (ಯುದ್ಧದಲ್ಲಿ) ಈ ಆಶೆ ಅರ್ಥದಿಂದ ಹುಟ್ಟುವಂತಹುದು. ಇದನ್ನು ಬಿಡುವುದು ಹೇಗೆ. ಈ ಆಸೆಯಿಂದಲೇ ನಾವು ಅನೇಕ ಪಾಪಗಳನ್ನು ಮಾಡಿದೆವಲ್ಲಾ![೧]

ಇದಕ್ಕೆ ಭೀಷ್ಮರು **ವಿದೇಹರಾಜನಿಗೂ ಮಾಂಡವ್ಯಮುನಿಗೂ** ನಡೆದ ಸಂವಾದ ರೂಪದ ಇತಿಹಾಸದ ಮೂಲಕ ಉತ್ತರಿಸಿದರು.

ಮಾಂಡವ್ಯರಿಗೆ ಜನಕನು ಹೇಳುತ್ತಾನೆ 'ನಾನು ಸುಖವಾಗಿ ಜೀವಿಸುತ್ತಿದ್ದೇನೆ. ನನಗೆ ನನ್ನದೆಂಬುದು ಏನೂ ಇಲ್ಲ. ಆದ್ದರಿಂದ ಮಿಥಿಲಾಪಟ್ಟಣವೆಲ್ಲ ಸುಟ್ಟರೂ ನನ್ನದೇನೂ ಸುಡದು[೨]. ಐಶ್ವರ್ಯ ಜಾಸ್ತಿ ಇದ್ದಷ್ಟೂ ಅದರಿಂದ ದುಃಖವೇ ಅಧಿಕ. ಅಷ್ಟೇಕೆ? ಅಲ್ಪ ಐಶ್ವರ್ಯವಿದ್ದರೂ ಅಜ್ಞಾನಿಗಳನ್ನು ಮೋಹಕ್ಕೆ ಗುರಿ ಮಾಡುತ್ತದೆ. ಈ ಲೋಕದ ಎಲ್ಲ ಕಾಮಗಳಿಂದ ಬರುವ ಸುಖವಾಗಲೀ, ಅದಕ್ಕಿಂತಲೂ ಮಿಗಿಲಾದ ದೇವಲೋಕದ ಮಹಾಸುಖವಾಗಲೀ, ಆಶಾತ್ಯಾಗದಿಂದ ಸಿಗುವ ಅಪಾರ ಸುಖದ ಮುಂದೆ ಒಂದು ಕಲಾಕೂಡಾ ಸಮವಾಗದು[೩]. ಯಾವ ರೀತಿಯಾಗಿ ಗೋವಿನ ಕೋಡು ಕರು ಬೆಳೆದಂತೆ ಬೆಳೆಯುತ್ತದೋ, ಹಾಗೆಯೇ ನರನಿಗೂ ಧನ ಹೆಚ್ಚಿದಂತೆಲ್ಲ ಅದರ ಆಸೆಯೂ ಹೆಚ್ಚುತ್ತಾ ಹೋಗುತ್ತದೆ.

ನನ್ನದೆಂಬ ಅಲ್ಪ ಸ್ವತ್ತೂ ನಮ್ಮನ್ನು ಬಿಟ್ಟುಹೋದಾಗ ಅದರ ಅಭಿಮಾನದಿಂದಾಗಿ ಮಹಾ ದುಖಕ್ಕೆ ಕಾರಣವಾಗುತ್ತದೆ.[೪] ಆದ್ದರಿಂದ ಇದು ನನ್ನದೆಂಬ ಮೋಹವನ್ನೇ ಇಟ್ಟುಕೊಳ್ಳದೇ ಬಿಡಬೇಕು. ವಿಷಯಾಸಕ್ತಿಯಿಂದಲೇ ದುಃಖ. ಆದ್ದರಿಂದ ಧನಾದಿಗಳು ದೊರೆತಾಗ ಧರ್ಮಕ್ಕೋಸ್ಕರ ಅದನ್ನು ಉಪಯೋಗಿಸಬೇಕು[೫]. ವಿದ್ವಾಂಸನಾದವನು ಎಲ್ಲ ಪ್ರಾಣಿಗಳನ್ನೂ

---

೧ ಭ್ರಾತರಃ ಪಿತರಃ ಪುತ್ರಾ ಜ್ಞಾತಯಃ ಸುಹೃದಸ್ತಥಾ ।
ಅರ್ಥಹೇತೋರ್ಹತಾಃ ಕ್ರೂರೈರಸ್ಮಾಭಿಃ ಪಾಪಬುದ್ಧಿಭಿಃ ॥
ಯೇ ಯಮರ್ಥೋದ್ಭವಾ ತೃಷ್ಣಾ ಕಥಮೇತಾಂ ಪಿತಾಮಹ ।
ನಿವರ್ತಯೇಮ ಪಾಪಂ ಹಿ ತೃಷ್ಣಯಾ ಕಾರಿತಾ ವಯಮ್ ॥ – ೧೧೧/೧,೨

೨ ಮಿಥಿಲಾಯಾಂ ಪ್ರದಿಪ್ತಾಯಾಂ ನ ಮೇ ದಹ್ಯಂತಿ ಕಿಂಚನ ॥ – ೧೧೧/೪

೩. ಯಚ್ಚ ಕಾಮಸುಖಂ ಲೋಕೇ ಯಚ್ಚ ದಿವ್ಯಂ ಮಹತ್ ಸುಖಮ್ ।
ತೃಷ್ಣಾಕ್ಷಯಸುಖಸ್ಯೈತೇ ನಾರ್ಹತಃ ಷೋಡಶೀಂ ಕಲಾಮ್ ॥ – ೧೧೧/೬

೪ ಕಿಂಚಿದೇವ ಮಮತ್ವೇನ ಯದಾ ಭವತಿ ಕಲ್ಪಿತಮ್ ।
ತದೇವ ಪರಿತಾಪಾಯ ನಾಶೇ ಸಂಪದ್ಯತೇ ಪುನಃ ॥ – ೧೧೧/೮

೫ ಪ್ರಾಪ್ಯಾರ್ಥಮುಪಯುಂಜೀತ ಧರ್ಮೇ ಕಾಮಂ ವಿವರ್ಜಯೇತ್ ॥ – ೧೧೧/೯

ತನ್ನಂತೆಯೇ ಭಾವಿಸಬೇಕು. ಅದರಿಂದ ಕೃತಕೃತ್ಯನಾಗಿ, ಶುದ್ಧಮನಸ್ಕನಾಗಿ ಎಲ್ಲ ಆಶೆಗಳನ್ನು ಬಿಡಬಲ್ಲ, ಬಿಡುತ್ತಾನೆ.[೧] ಅವನು ಸತ್ಯ, ಅನೃತ, ಸುಖದುಃಖ, ಪ್ರಿಯಾಪ್ರಿಯ, ಭಯ, ಅಭಯ, ದ್ವಂದ್ವಗಳನ್ನು ಸಮಚಿತ್ತನಾಗಿ ನಿರ್ವಹಿಸುತ್ತಾ ಪ್ರಶಾಂತನಾದಾಗ (ಸಮಚಿತ್ತನಾಗಿ) ನಿರ್ವಿಕಾರನಾಗುತ್ತಾನೆ.

ದುಷ್ಟಬುದ್ಧಿಯ ಜನರಿಂದ ಯಾವುದನ್ನು ಬಿಡಲು ಆಗದೋ, ಶರೀರವು ದುರ್ಬಲವಾದರೂ (ಶಕ್ತಿ ಕುಗ್ಗಿದ್ದರಿಂದ) ಉಂಡದ್ದು ಜೀರ್ಣವಾಗದೋ, ಯಾವುದು ಪ್ರಾಣಾಂತಿಕ ರೋಗವೋ, ಅದೇ ಆಶೆ. ಅದನ್ನು ಬಿಟ್ಟವನಿಗೆ ಸುಖ ಸಿಗುತ್ತದೆ.

ಯಾರು ತಮ್ಮ ಚಾರಿತ್ರ್ಯವನ್ನು ನಿಷ್ಕಳಂಕ ಚಂದ್ರನಂಥೆ ಪರಿಶುದ್ಧರಾಗಿ ಕಾಯ್ದುಕೊಳ್ಳುತ್ತಾರೋ ಅವರು ಈ ಲೋಕದಲ್ಲಿ ಕೀರ್ತಿಯನ್ನೂ, ಪರಲೋಕದಲ್ಲಿ ಉತ್ತಮಸುಖವನ್ನೂ ಹೊಂದುತ್ತಾರೆ.[೨]

ಧರ್ಮರಾಜನೇ ಜನಕರಾಜನ ಈ ಮಾತನ್ನು ಕೇಳಿ ಮಾಂಡವ್ಯನು ಸಂತೋಷಗೊಂಡ. ರಾಜನ ಮಾತನ್ನು ಶ್ಲಾಘಿಸಿ, ಮೋಕ್ಷಮಾರ್ಗವನ್ನು ಆಶ್ರಯಿಸಿದನು (ತೃಷ್ಣಾ, ಆಶಾತ್ಯಾಗ ಮಾಡಿದನು).

## ಸಂದೇಶಗಳು

ವಿದೇಹರಾಜನ ಮಾತುಗಳೆಲ್ಲ ಸಂದೇಶಗಳೇ.

ಧರ್ಮರಾಜನಿಗೆ ತಾನು ಯಾವ ಪಾಪ ಮಾಡದೇ ಇದ್ದರೂ, ಪಾಪಿ ಎಂಬ ಪಾಪಪ್ರಜ್ಞೆ ಕಾಡುತ್ತಿದ್ದಿತು. ಅದಕ್ಕಾಗಿ ಏನು ಮಾಡಬೇಕೆಂದು ಲೋಕದ ಇತರ ಜನರ ದೃಷ್ಟಿಯಿಂದ, ಪಾಪಿಗಳ, ಕೇಳಿದ ಪ್ರಶ್ನೆಯೇ ದೊಡ್ಡ ಸಂದೇಶ. ನಾವು ನಮ್ಮನ್ನು ಹೇಗೆ ಭಾವಿಸಬೇಕು. ಯಾವುದು ಕ್ಷೇಮದ ಚಿಂತನೆ ಎಂದು. ತಪ್ಪು ಮಾಡದಿದ್ದರೂ ಮಾಡಿದೆವೆಂಬ ಭಾವ ಕ್ಷೇಮಕರ. ತಪ್ಪು ಮಾಡಿದಾಗಲಂತೂ ಇನ್ನೂ ಕ್ಷೇಮಕರ.

ಇತ್ಯಾದಿ...

*****

---

೧ ವಿದ್ವಾನ್ ಸರ್ವೇಷು ಭೂತೇಷು ಆತ್ಮನಾ ಸೋಪಮೋ ಭವೇತ್ ।
ಕೃತಕೃತ್ಯೋ ವಿಶುದ್ಧಾತ್ಮಾ ಸರ್ವಂ ತ್ಯಜತಿ ವೈ ಸಹ ॥ - ೧೧೧/೧೦

೨ ಚಾರಿತ್ರಮಾತ್ಮನಃ ಪಶ್ಯಂಶ್ಚಂದ್ರಶುದ್ಧಮನಾಮಯಮ್ ।
ಧರ್ಮಾತ್ಮಾ ಲಭತೇ ಕೀರ್ತಿಂ ಪ್ರೇತ್ಯ ಚೇಹ ಯಥಾಸುಖಮ್ ॥ - ೧೧೧/೧೩

# ೧೯೪. ಶ್ರೇಯಸ್ಸು ಹೇಗೆ

ಧರ್ಮರಾಜನ ಪ್ರಶ್ನೆ –

ಶಾಸ್ತ್ರತತ್ತ್ವಗಳನ್ನು ಅರಿಯದವನಿಗೆ, ಎಲ್ಲ ವಿಷಯಗಳ ಬಗ್ಗೆ ಸಂಶಯಬುದ್ಧಿಯುಳ್ಳವನಿಗೆ (ಸಂಶಯಪಿಶಾಚಿಯಂತಿರುವ), ಪಾರತ್ರಿಕ ಸಾಧನೆ ಮಾಡದವನಿಗೆ ಶ್ರೇಯಸ್ಸು ಹೇಗೆ ಆದೀತು?[೧]

ಭೀಷ್ಮರು, ಸತತ ಗುರು ಹಿರಿಯರ ಪೂಜೆ, ಗೌರವ, ಅವರ ಆದೇಶ ಪಾಲನೆ, ಶಾಸ್ತ್ರಶ್ರವಣ, (ವಿವಿಧ ವಿದ್ಯೆಗಳ) – ಇವು ಮೂರು ಶ್ರೇಯಸ್ಸಿಗೆ ಸಾಧನಗಳಾಗಿವೆ[೨]. ಈ ಬಗ್ಗೆ ದೇವರ್ಷಿ ನಾರದರಿಗೂ ಗಾಲವರಿಗೂ ನಡೆದ ಸಂವಾದರೂಪ ಇತಿಹಾಸವನ್ನು ಹೇಳಿದರು.

ಜ್ಞಾನದಿಂದ ತೃಪ್ತರಾದ, ಜಿತೇಂದ್ರಿಯರಾದ, ತಪ್ಪು ತಿಳುವಳಿಕೆ (ಮೋಹ)ಯ ಬುದ್ಧಿಯ ಆಯಾಸವನ್ನು ಗೆದ್ದಿರುವ (ಯಥಾರ್ಥಜ್ಞಾನಿಯಾದ), ಶ್ರೇಯಸ್ಕಾಮರಾದ ನಾರದರನ್ನು ಕಂಡ ಗಾಲವರು ಹೀಗೆ ಹೇಳಿದರು (ಪ್ರಶ್ನೆ ಕೇಳಿದರು).

ನಾರದರೇ ನಿಮ್ಮಲ್ಲಿ ಸಮ್ಮಾನಾರ್ಹ (ಗೌರವಕ್ಕೆ ಅರ್ಹವಾದ) ಗುಣಗಳು ಬೇರೂರಿವೆ ಎಂದು ನಾನು ಭಾವಿಸಿದ್ದೇನೆ. ನೀವು ಮೂಢರಲ್ಲ (ಅಜ್ಞಾನಿಗಳಲ್ಲ). ಆದರೆ ತತ್ತ್ವಾರ್ಥಗಳನ್ನರಿಯದ, ಮೂರ್ಖರಾದ (ಬಹುಕಾಲದಿಂದ), ಲೋಕತತ್ತ್ವಗಳನ್ನೂ ಅರಿಯದ ನಮ್ಮಂತಹವರ ಸಂಶಯಗಳಿಗೆ ಪರಿಹಾರ ನೀಡಲು ಸಮರ್ಥರಿದ್ದೀರಿ.

ಶಾಸ್ತ್ರೋಕ್ತ ಕರ್ಮಗಳಲ್ಲಿ ಯಾವುದನ್ನು ಮಾಡಿದರೆ ಜ್ಞಾನಮಾರ್ಗದಲ್ಲಿ ಪ್ರವೃತ್ತಿವುಂಟಾಗುತ್ತದೆ?

ಪೂಜ್ಯರೇ ನಾಲ್ಕೂ ಆಶ್ರಮಗಳು (ಬ್ರಹ್ಮಚರ್ಯಾದಿಗಳು) ಬೇರೆ ಬೇರೆ ಸದಾಚಾರಗಳನ್ನು ಸೂಚಿಸುತ್ತವೆ. ಶ್ರೇಯೋಮಾರ್ಗಗಳಾದ ಇವುಗಳಲ್ಲೂ ಬೇರೆ ಬೇರೆ ಕವಲುಗಳಿವೆ. ಶಾಸ್ತ್ರವೇತ್ತರು ತಮಗೆ ಹಿಡಿಸಿದುದನ್ನೇ ಶ್ರೇಯೋಮಾರ್ಗವೆಂದು ಕೇಳಿದವರಿಗೆ ಹೇಳುತ್ತಾರೆ. ಶಾಸ್ತ್ರ ಒಂದೇ ಇದ್ದರೂ ಶ್ರೇಯೋಮಾರ್ಗ ಒಂದೇ ಆಗಿರಬೇಕಲ್ಲವೇ? ಅದು ರಹಸ್ಯವಾಗಿ

---

೧ ಅತತ್ತ್ವಜ್ಞಸ್ಯ ಶಾಸ್ತ್ರಾಣಾಂ ಸತತಂ ಸಂಶಯಾತ್ಮನಃ ।
ಅಕೃತವ್ಯವಸಾಯಸ್ಯ ಶ್ರೇಯೋ ಬ್ರೂಹಿ ಪಿತಾಮಹ ॥ – ೧೨೦/೧

೨ ಗುರುಪೂಜಾ ಚ ಸತತಂ ವೃದ್ಧಾನಾಂ ಪರ್ಯುಪಾಸನಮ್ ।
ಶ್ರವಣಂ ಚೈವ ವಿದ್ಯಾನಾಂ ಕೂಟಸ್ಥಂ ಶ್ರೇಯ ಉಚ್ಯತೇ ॥ – ೧೨೦/೨

ಮುಚ್ಚಲ್ಪಟ್ಟಿದೆ ಎಂದೆನಿಸುತ್ತದೆ.[೧] ನಾನು ತಮ್ಮ ಶಿಷ್ಯನಾಗಿದ್ದೇನೆ. ತಾವು ಶ್ರೇಯೋಮಾರ್ಗ ಯಾವುದೆಂದು ಹೇಳಿರಿ.

ನಾರದರು ಗಾವಲರಿಗೆ ಹೀಗೆ ಉತ್ತರಿಸುತ್ತಾರೆ.

೧. ಗಾವಲರೇ! ಒಟ್ಟಾರೆ ನಾಲ್ಕು ಆಶ್ರಮಗಳಿಗೆ. ಅವುಗಳಿಗೆಲ್ಲ ಪ್ರತ್ಯೇಕ ಧಾರ್ಮಿಕ ಕಟ್ಟುಪಾಡುಗಳಿವೆ. ಆಶ್ರಮಗಳಿಗೆ ಶ್ರೇಷ್ಠವಾದ ಗತಿಯನ್ನು ಚೆನ್ನಾಗಿ ತಿಳಿದವನಿಗೆ ಶ್ರೇಯಸ್ಸಿನ ಸಾಧನಮಾರ್ಗ ನಿಸ್ಸಂಶಯವಾಗಿ ಲಭಿಸುತ್ತದೆ, ತಿಳಿಯುತ್ತದೆ.[೨]

೨. ಮಿತ್ರರಿಗೆ ಉಪಕಾರ, ಶತ್ರುಗಳ ನಿಗ್ರಹ, ಧರ್ಮ ಅರ್ಥ ಕಾಮಗಳ ಯೋಗ್ಯ ಸಂಗ್ರಹಗಳು ಶ್ರೇಯೋಮಾರ್ಗಗಳಾಗಿವೆ.[೩]

೩. ಪಾಪಕರ್ಮ(ಕಾರ್ಯ)ಗಳನ್ನು(ಗಳಿಂದ) ಮಾಡಬಾರದು(ದೂರವಿರಬೇಕು). ಯಾವಾಗಲೂ ಪುಣ್ಯಕರ್ಮಗಳನ್ನು ಆಚರಿಸುತ್ತಿರಬೇಕು ಮತ್ತು ಸಜ್ಜನರೊಡನೆ ಸಹವಾಸ-ಗಳು ಶ್ರೇಯೋಮಾರ್ಗಗಳು.

೪. ಎಲ್ಲ ಪ್ರಾಣಿಗಳ ಬಗ್ಗೆ ಕಠಿಣವಾಗಿ ವರ್ತಿಸದಿರುವುದು, ನಿತ್ಯ ವ್ಯವಹಾರಗಳಲ್ಲಿ ಸರಳತೆ, ಋಜುತ್ವ(ಪಾರದರ್ಶಕತೆ), ಮಾತಿನಲ್ಲಿ ಮಾಧುರ್ಯ, ಇವು ಶ್ರೇಯಸ್ಸಾಧನೆ ಎಂಬ ಬಗ್ಗೆ ಅನುಮಾನವೇ ಇಲ್ಲ.

೫. ದೇವಪಿತೃಅತಿಥಿಗಳಿಗೆ ತರ್ಪಣಾದಿಗಳನ್ನು ನಿತ್ಯವೂ ಕೊಡುವುದು (ವಿಧ್ಯುಕ್ತವಾಗಿ), ತನ್ನನ್ನು ನಂಬಿದ ಭೃತ್ಯರಪೋಷಣೆ (ಅವರ ಕೈ ಬಿಡದಿರುವುದು).[೪]

೬. ಸತ್ಯಮಾತನಾಡುವುದು ಸುಲಭ. ಆದರೆ ಸತ್ಯ ಯಾವುದು? ಸತ್ಯದ ಜ್ಞಾನವಾಗುವುದು ತುಂಬಾ ಕಷ್ಟ. ಎಲ್ಲ ಭೂತಗಳಿಗೆ ಅತ್ಯಂತ ಹಿತವಾದುದು ಸತ್ಯ. ಉಳಿದದ್ದು ಅಸತ್ಯ.[೫]

---

೧ ಶಾಸ್ತ್ರಂ ಯದಿ ಭವೇದೇಕಂ ವ್ಯಕ್ತಂ ಶ್ರೇಯೋ ಭವೇತ್ ತದಾ ।
ಶಾಸ್ತ್ರೈಶ್ಚ ಬಹುಭಿರ್ಭೂಯಃ ಶ್ರೇಯೋ ಗುಹ್ಯಂ ಪ್ರವೇಶಿತಮ್ ॥
ಏತಸ್ಮಾತ್ ಕಾರಣಾಚ್ಛ್ರೇಯಃ ಕಲಿಲಂ ಪ್ರತಿಭಾತಿ ಮಾಮ್ ।
ಬ್ರವೀತು ಭಗವಾಂಸ್ತನ್ಮೇ ಉಪಸನ್ನೋಽಸ್ಮ್ಯಧೀಹಿ ಭೋಃ ॥ - ೧೨೦/೧೦,೧೧

೨ ಆಶ್ರಮಾಸ್ತಾತ ಚತ್ವಾರೋ ಯಥಾಸಂಕಲ್ಪಿತಾಃ ಪೃಥಕ್ ।
ತಾನ್ ಸರ್ವಾನನುಪಶ್ಯ ತ್ವಂ ಸಮಾಶ್ರಿತ್ಯೈವ ಗಾಲವ ॥ - ೧೨೦/೧೨

೩ ಅನುಗ್ರಹಂ ಚ ಮಿತ್ರಾಣಾಮಮಿತ್ರಾಣಾಂ ಚ ನಿಗ್ರಹಮ್ ।
ಸಂಗ್ರಹಂ ಚ ತ್ರಿವರ್ಗಸ್ಯ ಶ್ರೇಯ ಆಹುರ್ಮನೀಷಿಣಃ ॥ - ೧೨೦/೧೫

೪ ದೇವತಾಭ್ಯಃ ಪಿತೃಭ್ಯಶ್ಚ ಸಂವಿಭಾಗೋಽತಿಥಿಷ್ವಪಿ ।
ಅಸಂತ್ಯಾಗಶ್ಚ ಭೃತ್ಯಾನಾಂ ಶ್ರೇಯ ಏತದಸಂಶಯಮ್ ॥ - ೧೨೦/೧೮

೫ ಸತ್ಯಸ್ಯ ವಚನಂ ಶ್ರೇಯಃ ಸತ್ಯಜ್ಞಾನಂ ತು ದುಷ್ಕರಮ್ ।
ಯದ್ಭೂತಹಿತಮತ್ಯಂತಮೇತತ್ ಸತ್ಯಂ ಬ್ರವೀಮ್ಯಹಮ್ ॥ - ೧೨೦/೧೯

೭. ಅಹಂಕಾರ(ನಾನೇ ಎಲ್ಲ ಮಾಡುವುದು)ತ್ಯಾಗ, ತಪ್ಪು ಮಾಡದಂತೆ ಮನಸ್ಸಿನ ನಿಗ್ರಹ, ಸಮೂಹದಲ್ಲಿ ಸಂತೋಷದಿಂದ ವರ್ತಿಸುವುದು, ಏಕಾಂತ ಪ್ರದೇಶದಲ್ಲಿ ಹರಿಧ್ಯಾನ, ಇವೆಲ್ಲ ಶ್ರೇಯೋಮಾರ್ಗಗಳು.[೧]

೮. ಧರ್ಮದಿಂದ ವೇದವೇದಾಂಗಗಳ ಅಧ್ಯಯನ (ವಿಧ್ಯುಕ್ತವಾಗಿ); ವಿದ್ಯಾರ್ಥಿಗಳ (ಭಗವತ್‌ಜ್ಞಾನವಿಷಯದಲ್ಲಿ ಜಿಜ್ಞಾಸೆ). ಇವೆಲ್ಲ ಶ್ರೇಯೋಮಾರ್ಗಗಳು[೨].

೯. ಲೋಕದ ವಿಷಯಗಳನ್ನು ಎಂದರೆ, ಶಬ್ದರೂಪರಸಗಂಧಸ್ಪರ್ಶಗಳನ್ನು ಅತಿಯಾಗಿ ಸೇವಿಸಬಾರದು.

೧೦. ರಾತ್ರಿ ಓಡಾಟ, ಹಗಲು ನಿದ್ರೆ, ಸೋಮಾರಿತನ, ಚಾಡಿಕೋರತನ, ಆಲಸ್ಯ, ದರ್ಪ (ಐಶ್ವರ್ಯ, ವಿದ್ಯಾಮದ, ಇತ್ಯಾದಿ) ನಿರಾಹಾರ, ಅತಿ ಆಹಾರ ಸೇವನೆ, ನಿರಾಹಾರತ್ವ ಅತಿಯಾದ ಉಪವಾಸವ್ರತ), ಇವುಗಳನ್ನು ಶ್ರೇಯೋಭಿಲಾಷಿಯು ತ್ಯಜಿಸಬೇಕು.[೩]

೧೧. ಪರನಿಂದೆಯಿಂದ ತನ್ನ ಉತ್ಕರ್ಷದ ಸಿದ್ಧಿಯೆಂದು ಭಾವಿಸದೆ ತಾನು ಗುಣವಂತನಾಗಲು ಪ್ರಯತ್ನಿಸಬೇಕು. ಅದೇ ಶ್ರೇಯೋಮಾರ್ಗ.[೪]

೧೨. ಗುಣಗಳಿಲ್ಲದವರು ತಮ್ಮನ್ನೇ ಪ್ರಶಂಸಿಸುತ್ತಾರೆ. ಗುಣವಂತರನ್ನು ದೋಷಾರೋಪಣೆ ಮಾಡಿ ದೂರವಿಟ್ಟು ತಿರಸ್ಕರಿಸುತ್ತಾರೆ. ಇದಕ್ಕೆ ಕಾರಣ ತನ್ನ ಗುಣಗಳಲ್ಲಿನ ಕೊರತೆ.[೫]

೧೩. ಮೂರ್ಖನು ತನ್ನನ್ನು ಎಷ್ಟೇ ಹೊಗಳಿಕೊಂಡರೂ ಲೋಕದಲ್ಲಿ ಬೆಳಕಿಗೆ ಬಾರನು. ವಿದ್ವಾಂಸರು ಗುಹೆಯಲ್ಲಿದ್ದರೂ ವಿಖ್ಯಾತರಾಗುತ್ತಾರೆ. ಅವರು ತಮ್ಮ ಸದ್ಗುಣಗಳನ್ನು ಎಂದೂ ಹೇಳಿಕೊಳ್ಳುವುದಿಲ್ಲ.

೧೪. ಸ್ವಯಂ ದೋಷಿಗಳಾದವರು, ಅವರು ಆಡುವ ಅಸಾರವಾದ ಮಾತುಗಳು ಅವರ ಮನೋಧರ್ಮವನ್ನು ಪ್ರಕಟಪಡಿಸುತ್ತಾರೆ. ಸೂರ್ಯನು ತನ್ನ ಮಣಿಯ ಮೂಲಕ ಧಾತುಶಕ್ತಿಯನ್ನು ಹೊರಹಾಕುವಂತೆ.

---

೧ ಅಹಂಕಾರಸ್ಯ ಚ ತ್ಯಾಗಃ ಪ್ರಣಯಸ್ಯ ಚ ನಿಗ್ರಹಃ।
ಸಂತೋಷಶ್ಚೈಕಚರ್ಯಾ ಚ ಕೂಟಸ್ಥಂ ಶ್ರೇಯ ಉಚ್ಯತೇ॥ - ೧೨೦/೨೦

೨ ಧರ್ಮೇಣ ವೇದಾಧ್ಯಯನಂ ವೇದಾಂಗಾನಾಂ ತಥೈವ ಚ।
ವಿದ್ಯಾರ್ಥೀನಾಂ ಚ ಜಿಜ್ಞಾಸಾ ಶ್ರೇಯ ಏತದಸಂಶಯಮ್॥ - ೧೨೦/೨೧

೩. ನಕ್ತಂಚರ್ಯಾ ದಿವಾಸ್ವಪ್ನಮಾಲಸ್ಯಂ ಪೈಶುನಂ ಮದಮ್।
ಅತಿಯೋಗಮಯೋಗಂ ಚ ಶ್ರೇಯಸೋಽರ್ಥೀ ಪರಿತ್ಯಜೇತ್॥ - ೧೨೦/೨೩

೪ ಕರ್ಮೋತ್ಕರ್ಷಂ ನ ಮಾರ್ಗೇತ ಪರೇಷಾಂ ಪರಿನಿಂದಯಾ।
ಸ್ವಗುಣೈರೇವ ಮಾರ್ಗೇತ ವಿಪ್ರಕರ್ಷಂ ಪೃಥಗ್ಜನಾತ್॥ - ೧೨೦/೨೪

೫ ನಿರ್ಗುಣಾಸ್ತ್ವೇವ ಭೂಯಿಷ್ಠಮಾತ್ಮಸಂಭಾವಿನೋ ನರಾಃ।
ದೋಷೈರನ್ಯಾನ್ ಗುಣವತಃ ಕ್ಷಿಪಂತ್ಯಾತ್ಮಗುಣಕ್ಷಯಾತ್॥ - ೧೨೦/೨೫

೧೫. ಇದೇ ಕಾರಣದಿಂದಾಗಿ ಶ್ರೇಯಸ್ಸನ್ನು ಬಯಸುವ ಸಜ್ಜನರು ಅನೇಕ ಶಾಸ್ತ್ರಗಳನ್ನು ಅಧ್ಯಯನ ಮಾಡಿ ಅದರಿಂದ ದೊರೆಯುವ ಜ್ಞಾನಮಾರ್ಗಗಳನ್ನು ಹುಡುಕುತ್ತಾರೆ. ಪ್ರಾಣಿಗಳಿಗೆ ಪ್ರಜ್ಞಾಲಾಭವು ಅತ್ಯಂತ ಶ್ರೇಷ್ಠವಾದ ಲಾಭವೆನಿಸುತ್ತದೆ.

೧೬. ಪ್ರಾಜ್ಞನಾದವನು ಪ್ರಶ್ನೆ ಮಾಡದವರಿಗೆ ಯಾರಿಗೂ ಉಪದೇಶ ಮಾಡಬಾರದು. ಅಧರ್ಮದ ರೀತಿಯಲ್ಲಿ ಅಪಹಾಸ್ಯಕ್ಕೆ ಪ್ರಶ್ನಿಸಿದರೂ ಉತ್ತರ ಕೊಡಬಾರದು. ಜ್ಞಾನಿಯಂತೆ ಸುಮ್ಮನೆ ಕುಳಿತುಕೊಳ್ಳಬೇಕು.[೧]

೧೭. ಮನುಷ್ಯನು ಯಾವಾಗಲೂ ಧರ್ಮನಿಷ್ಠರಾದ ಸಜ್ಜನರಲ್ಲಿ ಸ್ವಧರ್ಮ ನಿರತರಾದ ಸಹವಾಸ ಹೊಂದುವ ಇಚ್ಛೆಯುಳ್ಳವನಾಗಿರಬೇಕು.

೧೮. ಶ್ರೇಯಸ್ಸನ್ನು ಬಯಸುವವನು ನಾಲ್ಕು ವರ್ಣಗಳಲ್ಲಿ ಧರ್ಮಸಾಂಕರ್ಯವಾಗುವ ಸ್ಥಳದಲ್ಲಿ ಯಾವುದೇ ಕಾರಣದಿಂದ ವಾಸ ಮಾಡಬಾರದು.[೨]

೧೯. ಕಾಮ್ಯಕರ್ಮಗಳನ್ನು ತ್ಯಜಿಸಬೇಕು. ಸಿಕ್ಕಿದ್ದರಲ್ಲಿ ತೃಪ್ತಿ ಇರಬೇಕು. ಪುಣ್ಯಪುರುಷರೊಡನೆ ಸಂಗ ಮಾಡಿದರೆ ಪುಣ್ಯ, ಪಾಪಿಗಳೊಡನೆ ಬೆರೆತರೆ ಪಾಪ ಬಂದೇ ಬರುತ್ತದೆ.

೨೦. ಎಲ್ಲಿ ಜ್ಞಾನಿಗೆ ಮಹತ್ತ್ವ ಕೊಡುವುದಿಲ್ಲವೋ, ಸತ್ಕರಿಸದೆ ಕೇವಲ ಪ್ರಶ್ನೆಗಳನ್ನು ಮಾತ್ರ ಮಾಡುತ್ತಾರೋ, ಅಂತಹ ದೇಶವನ್ನು ಬುದ್ಧಿವಂತನಾದ ಬ್ರಾಹ್ಮಣನು ತ್ಯಜಿಸಬೇಕು.[೩]

೨೧. ಗುರುಶಿಷ್ಯರ ವೃತ್ತಿಯು ಎಲ್ಲಿ ವ್ಯವಸ್ಥಿತವಾಗಿ ನಡೆಯುತ್ತದೋ ಶಾಸ್ತ್ರಸಮ್ಮತ ಸ್ಥಳ ಎಲ್ಲಿರುತ್ತದೋ ಅಂತಹ ಸ್ಥಳವನ್ನು ಯಾರು ತಾನೇ ಬಿಡುತ್ತಾರೆ?

೨೨. ಎಲ್ಲಿ ಜಿಪುಣರು ಪ್ರಾಯಃ ಧರ್ಮದ ಸೇತುಗಳನ್ನು (ಕಟ್ಟುಪಾಡುಗಳನ್ನು ನಾಶ ಮಾಡಿರುತ್ತಾರೋ) ಅಂತಹ ದೇಶವನ್ನು ಉಟ್ಟಿರುವ ವಸ್ತ್ರಕ್ಕೆ ಬೆಂಕಿ ಬಿದ್ದಾಗ ಕಿತ್ತು ಬಿಸುಡುವಂತೆ ಪರಿತ್ಯಜಿಸದೆ ಇರಬಾರದು. ಬಿಟ್ಟು ಹೋಗಬೇಕು.

೨೩. ಎಲ್ಲಿ ಜನರು ಅಸೂಯಾರಹಿತರಾಗಿ ಸಂಶಯರಹಿತರಾಗಿ, ಧರ್ಮಾಚರಣೆ ಮಾಡುತ್ತಾರೋ, ಅಂತಹ ಪುಣ್ಯಶೀಲ, ಸಜ್ಜನರು ಇರುವ ಸ್ಥಳದಲ್ಲಿ ಅವಶ್ಯವಾಗಿ ವಾಸ ಮಾಡಬೇಕು.

---

೧ ನಾಪೃಷ್ಟಃ ಕಸ್ಯಚಿದ್ಬ್ರೂಯಾನ್ನ ಚಾನ್ಯಾಯೇನ ಪೃಚ್ಛತಃ।
ಜ್ಞಾನವಾನಪಿ ಮೇಧಾವೀ ಜಡವಲ್ಲೋಕಮಾಚರೇತ್ ॥ - ೧೨೦/೩೪

೨ ಚತುರ್ಣಾಂ ಯತ್ರ ವರ್ಣಾನಾಂ ಧರ್ಮವ್ಯತಿಕರೋ ಭವೇತ್ ।
ನ ತತ್ರ ವಾಸಂ ಕುರ್ವೀತ ಶ್ರೇಯೋರ್ಥೀ ವೈ ಕಥಂಚನ ॥ - ೧೨೦/೩೬

೩ ಯತ್ರಾಗಮಯಮಾನಾನಾಮಸತ್ಕಾರೇಣ ಪೃಚ್ಛತಾಮ್ ।
ಪ್ರಬ್ರೂಯಾದ್ ಬ್ರಹ್ಮಣೋ ಧರ್ಮಂ ತ್ಯಜೇತ್ತಂ ದೇಶಮಾತ್ಮವಾನ್ ॥ - ೧೨೦/೪೦

**ಯತ್ರ ಧರ್ಮಮನಾಶಂಕಾಶ್ಚರೇಯುರ್ವೀತಮತ್ಸರಾಃ।**
**ಚರೇತ್ತತ್ರ ವಸೇಚ್ಚೈವ ಪುಣ್ಯಶೀಲೇಷು ಸಾಧುಷು ॥ - ೧೨೦/೪೪**

೨೪. ಎಲ್ಲಿ ಜನರು ಹಣಕ್ಕಾಗಿ ಧರ್ಮಾಚರಣೆ ಮಾಡುತ್ತಾರೋ, ಅಂತಹ ಜನರ ಸಮೀಪ ಯಾವುದೇ ಕಾರಣಕ್ಕೂ ಇರಬಾರದು. ಕಾರಣ ಹಣಕ್ಕಾಗಿ ಧರ್ಮಾಚರಣೆ ಮಾಡುವವರು ಪಾಪ ಕರ್ಮಿಗಳೇ ಸರಿ.[೧]

೨೫. ಯಾವ ದೇಶದಲ್ಲಿ ರಾಜ, ರಾಜಪುರುಷರು, ಕುಟುಂಬದ ಜನರು ಹೀಗೆ ವ್ಯತ್ಯಾಸ ನೋಡುವುದಿಲ್ಲವೋ, ಕಷ್ಟದಿಂದ ಜೀವನ ನಿರ್ವಹಿಸುವ ಸಂಸಾರಿಗಳು ಊಟ ಮಾಡುವುದಕ್ಕಿಂತ ಮೊದಲೇ ರಾಜನು ಸ್ವಾರ್ಥಿಯಾಗಿ ಊಟ ಮಾಡುತ್ತಾನೋ, ಅಂತಹ ರಾಷ್ಟ್ರವನ್ನು ಧರ್ಮಬಲ್ಲವನು ತ್ಯಾಗ ಮಾಡಬೇಕು.[೨]

೨೬.ಯಾವ ದೇಶದಲ್ಲಿ ಸ್ವಾಹಾ, ಸ್ವಧಾ, ವಷಟ್ ಎಂಬ ಯಜ್ಞಕರ್ಮಗಳು ಚೆನ್ನಾಗಿ ನಡೆಯುತ್ತಿರುತ್ತದೋ ಅಲ್ಲಿ ವಿಚಾರ ಮಾಡದೇ ವಾಸ ಮಾಡಬೇಕು.

೨೭. ಯಾವ ದೇಶದಲ್ಲಿ ಬ್ರಾಹ್ಮಣರು ಬದುಕಿಗಾಗಿ ಕಷ್ಟಪಡುತ್ತಾ ಅವ್ಯವಸ್ಥೆಯ ಜೀವನದಲ್ಲಿ ಇರುವುದನ್ನು ನೋಡುತ್ತಾರೋ, ಆ ದೇಶವನ್ನು ವಿಷಯುಕ್ತವಾದ ಪದಾರ್ಥವನ್ನು ಬಿಡುವಂತೆ ಬಿಟ್ಟು ಹೋಗಬೇಕು.

೨೮. ಯಾವ ದೇಶದಲ್ಲಿ ಶುದ್ಧಮನಸ್ಕರಾದ ಮನುಷ್ಯರು ಬೇಡದಿದ್ದರೂ ಸಜ್ಜನರಿಗೆ ಆದರದಿಂದ ಅನ್ನಾದಿ ದಾನಾದಿಗಳನ್ನು ನೀಡುತ್ತಾರೋ, ಅಲ್ಲಿ ಸಾಧಕನು ಕೃತಕೃತ್ಯನೆಂದು ಭಾವಿಸಿ, ಸ್ವಸ್ಥ ಚಿತ್ತನಾಗಿ ವಾಸಿಸಬೇಕು.[೩]

೨೯. ಎಲ್ಲಿ ಉದ್ಧಟರು ಶಿಕ್ಷಿಸಲ್ಪಡುತ್ತಾರೋ, ಸಜ್ಜನರು ಸತ್ಕಾರ ಹೊಂದುತ್ತಾರೋ, ಅಂತಹ ದೇಶದಲ್ಲಿ ಸಜ್ಜನರ ಮಧ್ಯೆ ಸಂಚರಿಸುತ್ತಾ ವಾಸಿಸಬೇಕು.

೩೦. ಎಲ್ಲಿ ರಾಜನು ಧರ್ಮನಿತ್ಯನಾಗಿದ್ದಾನೋ (ನಿತ್ಯವೂ ಧರ್ಮಶೀಲನಾಗಿದ್ದಾನೋ) ರಾಜ್ಯವನ್ನು ಧರ್ಮಾನುಸಾರ ಪಾಲಿಸುತ್ತಾನೋ, ಎಲ್ಲ ಬಯಕೆಗಳನ್ನು ಹೊಂದಿದ್ದರೂ (ಭೋಗತ್ಯಾಗ ಮಾಡಿ) ವಿರಕ್ತನಾಗಿದ್ದಾನೋ ಅಂತಹ ದೇಶದಲ್ಲಿ ವಿಚಾರ ಮಾಡದೆ ವಾಸಿಸಬೇಕು.

---

೧ ಧರ್ಮಮರ್ಥನಿಮಿತ್ತಂ ತು ಚರೇಯುರ್ಯತ್ರ ಮಾನವಾಃ।
ನ ತಾನನುವಸೇಜ್ಜಾತು ತೇ ಹಿ ಪಾಪಕೃತೋ ಜನಾಃ ॥ - ೧೨೦/೪೫

೨ ಯತ್ರ ರಾಜಾ ಚ ರಾಜ್ಞಶ್ಚ ಪುರುಷಾಃ ಪ್ರತ್ಯನಂತರಾಃ।
ಕುಟುಂಬಿನಾಮಗ್ರಭುಜಸ್ತ್ಯಜೇತ್ತದ್ರಾಷ್ಟ್ರಮಾತ್ಮವಾನ್ ॥ - ೧೨೦/೪೮

೩ ಪ್ರೀಯಮಾಣಾ ನರಾ ಯತ್ರ ಪ್ರಯಚ್ಛೇಯುರಯಾಚಿತಾಃ।
ಸ್ವಸ್ಥಚಿತ್ತೋ ವಸೇತ್ತತ್ರ ಕೃತಕೃತ್ಯ ಇವಾತ್ಮವಾನ್ ॥ - ೧೨೦/೫೨

**ಯತ್ರ ರಾಜಾ ಧರ್ಮನಿತ್ಯೋ ರಾಜ್ಯಂ ವೈ ಪರ್ಯುಪಾಸಿತಾ ।**
**ಅಪಾಸ್ಯ ಕಾಮಾನ್ಕಾಮೇಶೋ ವಸೇತ್ತತ್ರಾವಿಚಾರಯನ್ ॥ - ೧೨೦/೫೫**

೩೧. ರಾಜನ ಶೀಲಸ್ವಭಾವಗಳಂತೆಯೇ ಪ್ರಜೆಗಳ ಶೀಲಸ್ವಭಾವಗಳಿರುತ್ತವೆ. ರಾಜನು ಧರ್ಮದಿಂದ ರಾಜ್ಯವನ್ನು ಪರಿಪಾಲನೆ ಮಾಡುತ್ತಾ ತಾನು ಶ್ರೇಯೋಭಾಗಿಯಾಗುವ ಜೊತೆಗೆ ಪ್ರಜೆಗಳನ್ನೂ ಶ್ರೇಯೋಭಾಗಿಯನ್ನಾಗಿ ಮಾಡುತ್ತಾನೆ.

ಗಾವಲನೇ! ನಿನ್ನ ಪ್ರಶ್ನೆಗಳಿಗೆ ಅನುಗುಣವಾಗಿ ಶ್ರೇಯೋಮಾರ್ಗ ಹೇಳಿದ್ದೇನೆ. ತನ್ನ ಶ್ರೇಯಸ್ಸನ್ನೇ ಮುಖ್ಯವಾಗಿಟ್ಟುಕೊಂಡು ಎಲ್ಲವನ್ನೂ ವರ್ಣಿಸಲು ಸಾಧ್ಯವಿಲ್ಲ. ಏಕೆಂದರೆ ಶ್ರೆಯೋಮಾರ್ಗಗಳು ಅಸಂಖ್ಯವಾಗಿವೆ.

## ಸಂದೇಶಗಳು

ನಾರದರ ಉಪದೇಶದ ಮಾತುಗಳೆಲ್ಲ ಸಂದೇಶಗಳೇ.

*****

# ೧೯೫. ಪರಾಶರಗೀತೆ

ಧರ್ಮರಾಜನು ತಾತ ಭೀಷ್ಮರನ್ನು ಶ್ರೇಯಸ್ಸು ಯಾವುದರಿಂದ ಆಗುತ್ತದೆ? ಎಂಬ ಪ್ರಶ್ನೆ ಕೇಳಿದಾಗ,[೧] ಅವರು ಜನಕಮಹಾರಾಜನು ಇದೇ ಪ್ರಶ್ನೆಯನ್ನು ಪರಾಶರರನ್ನು ಕೇಳಿ ಪಡೆದ ಉತ್ತರಗಳ ಅಮೃತೋಪದೇಶವೇ ಪರಾಶರಗೀತೆ ಎಂದು ಪ್ರಸಿದ್ಧವಾಗಿದೆ. ಇದರಲ್ಲಿ ಒಂಭತ್ತು ಅಧ್ಯಾಯಗಳಿದ್ದು ೨೮೬ ಶ್ಲೋಕಗಳಿವೆ (ಪ್ರಶ್ನೋತ್ತರಗಳನ್ನು ಸೇರಿ). ಇದೊಂದು ಗೀತಾ ಹೆಸರಿನಿಂದ ಪ್ರಸಿದ್ಧವಾದ ಉಪದೇಶಾತ್ಮಕ ಇತಿಹಾಸ. ಭಗವದ್ಗೀತೆ, ಹಂಸಗೀತೆ ಮೊದಲಾದವು ಭಾರತದಲ್ಲಿವೆ. ಗೋಪೀಗೀತಾ, ವೇಣುಗೀತಾ, ಭಿಕ್ಷುಗೀತೆ, ಉದ್ಧವಗೀತೆ, ಶ್ರುತಿಗೀತೆ ಮೊದಲಾದವು ಭಾಗವತದಲ್ಲಿವೆ.

ಭೀಷ್ಮೋಪದೇಶಗಳು ಧರ್ಮರಾಜನ ಪಾಲಿಗೆ ಅಮೃತಪಾನವಾಗಿತ್ತು. ಆತನು ಅದನ್ನು ಕುಡಿದಷ್ಟೂ ಮತ್ತೇ ಮತ್ತೇ ಕುಡಿಯಲು ಇಚ್ಛಿಸುತ್ತಿದ್ದ. ಇದು ಅಂತಹುದೊಂದು ಗೀತೋಪದೇಶ. ಉತ್ತಮ ಶ್ರವಣಾಧಿಕಾರಿ, ಉತ್ತಮ ಗುರು, ಒಳ್ಳೆಯ ಜೋಡಿ, ನಾವು ತತ್ತ್ವೋಪದೇಶ ಪಡೆಯಲು ಯಾವ ಮಾನಸಿಕಸಿದ್ಧತೆಯುಳ್ಳವರಾಗಿರಬೇಕೆನ್ನಲು ಇದೂ ಕೂಡ ಉತ್ತಮ ದೃಷ್ಟಾಂತ.

ಧರ್ಮರಾಜನು ಕೇಳುತ್ತಾನೆ – ಯಾವ ಶುಭಕರ್ಮ (ವಿಧ್ಯುಕ್ತ) ಮಾಡಿ ಇಹಪರಗಳಲ್ಲಿ ಶ್ರೇಯಸ್ಸನ್ನು ಹೊಂದುತ್ತಾನೋ, ಅದನ್ನು ಹೇಳು.

ಮಹಾತ್ಮರಾದ ಭೀಷ್ಮರು ಈ ಬಗ್ಗೆ ಹಿಂದೆ ಜನಕಮಹಾರಾಜನು/ಪರಾಶರರನ್ನು ಪ್ರಶ್ನಿಸಿ ಪಡೆದ ಉತ್ತರವನ್ನು ಹೇಳುವೆ ಎಂದರು.

'ಇಹಪರಲೋಕಗಳಲ್ಲಿ ಸಕಲ ಜೀವರಿಗೆ ಶ್ರೇಯೋಮಾರ್ಗ ಯಾವುದು? ಯಾವುದು ಹೊಂದಲು ಯೋಗ್ಯ? ಇದನ್ನು ದಯಮಾಡಿ ತಿಳಿಸಿರಿ'[೨] ಎಂದು ಪರಾಶರರಿಗೆ ಕೇಳಿದನು.

---

೧ ಅತಃ ಪರಂ ಮಹಾಭಾಗೋ ಯಚ್ಛ್ರೇಯಸ್ತದ್ವದಸ್ವ ಮೇ।
ನ ತೃಪ್ಯಾಮ್ಯಮೃತಸ್ಯೇವ ವಚಸಸ್ತೇ ಪಿತಾಮಹ॥ – ೧೨೩/೧

೨ ಕಿಂ ಶ್ರೇಯಃ ಸರ್ವಭೂತಾನಾಮಸ್ಮಿನ್ ಲೋಕೇ ಪರತ್ರ ಚ।
ಯದ್ಭವೇತ್ ಪ್ರತಿಪತ್ತವ್ಯಂ ತದ್ಭವಾನ್ ಪ್ರಬ್ರವೀತು ಮೇ॥ – ೧೨೩/೪

ನಂತರ ತಪಸ್ಸಿನಿಂದ ಕೂಡಿದ (ತಪಸ್ವಿಗಳಾದ) ಸಮಸ್ತಧರ್ಮಗಳನ್ನು ತಿಳಿದ ಪರಾಶರರು ಜನಕರಾಜನಿಗೆ ಅನುಗ್ರಹ ಮಾಡುವ ಮನಸ್ಸಿನಿಂದ ಹೀಗೆ ಹೇಳಿದರು.

"[೧]ಇಹಪರಲೋಕಗಳಲ್ಲಿ ಶ್ರೇಯಸ್ಸಂಪಾದನೆಗೆ ಕಾರಣವಾದುದು ಧರ್ಮಾಚರಣೆ. ಅದಕ್ಕಿಂತ ಉತ್ತಮ ಉಪಾಯವಿಲ್ಲ. [೨]ಈ ಧರ್ಮ ನಾಲ್ಕೂ ವರ್ಣದವರಿಗೆ ಬದುಕಿನ ರೀತಿಗಳಾಗಿ ಬೇರೆ ಬೇರೆಯಾಗಿ ವೇದಗಳಲ್ಲಿ ಹೇಳಲ್ಪಟ್ಟಿವೆ. ದೈವೇಚ್ಛೆಯಿಂದ ಎಲ್ಲ ಆಶ್ರಮಗಳೂ ವೇದೋಕ್ತ ಕ್ರಮಗಳನ್ನೇ ಆಚರಿಸಬೇಕು.

ಪುಣ್ಯಪಾಪಕರ್ಮಗಳನ್ನು ಅನುಷ್ಠಾನ ಮಾಡಿದ[೩] ಐದು ವಿಧವಾದ ಅಧಿಕಾರಿಗಳು ಎಂದರೆ ದೇವ, ಋಷಿ, ಪಿತೃ, ಚಕ್ರವರ್ತಿ ಹಾಗೂ ನರರು ಅನೇಕ ವಿಧವಾದ ಗತಿಗಳನ್ನು ಹೊಂದುತ್ತಾರೆ. [೪]ಬಂಗಾರ, ಬೆಳ್ಳಿ ಪಾತ್ರೆಗಳನ್ನು ಬೆಂಕಿಯಲ್ಲಿ ಕರಗಿಸಿ ಶುದ್ಧೀಕರಿಸಿ ನೀರಿನಲ್ಲಿ ಮುಳುಗಿಸುತ್ತಾರೆ. ಹಾಗೆಯೇ ಜೀವನು ತನ್ನ ಕರ್ಮವಶದಿಂದಾಗಿ ಈ ಸಂಸಾರದಲ್ಲಿ ಮುಳುಗುತ್ತಾನೆ.

ಬೀಜವಿಲ್ಲದ ಅಂಕುರ ಮೊಳಕೆಯೊಡೆಯದು. ಹಾಗೆಯೇ ಪುಣ್ಯಕರ್ಮವಿಲ್ಲದೆ ಸುಖವಿಲ್ಲ. ದೇಹ ನಾಶದ ನಂತರ ಸತ್ಕರ್ಮದಿಂದಲೇ ಪುಣ್ಯಲೋಕದ ಸುಖ ಸಿಗುತ್ತದೆ. [೫]ಸ್ವಭಾವ ಹೊರತಾಗಿ ದೈವವು ಪಲ ಕೊಡುವುದಿಲ್ಲ. **ಸ್ವಭಾವವನ್ನು ಅವಲಂಬಿಸಿಯೇ ದೈವಾನುಗ್ರಹ. ದೇವದಾನವ ಗಂಧರ್ವರ ಸಿದ್ಧಿಗೆ ಸ್ವಭಾವವೇ ಕಾರಣ.**

ಜನರು ಸತ್ತ ಮೇಲೆ ಹಿಂದಿನ ಕರ್ಮವನ್ನು ಸ್ಮರಿಸಲಾರರು. ಪಾಪಪುಣ್ಯಪಲಪ್ರಾಪ್ತಿಗೆ ಕರ್ಮವೇ ಕಾರಣ. ಜೀವಿಯು ಕಣ್ಣು ಮನಸ್ಸು ಮಾತು ಹಾಗೂ ಕ್ರಿಯಾಗಳಿಂದ ಹೇಗೆ ಕರ್ಮಾಚರಿಸುತ್ತಾನೋ ಆದಕ್ಕೆ ತಕ್ಕಂತೆ ಫಲ ಹೊಂದುತ್ತಾನೆ. ಮನುಷ್ಯನು ಪುಣ್ಯವಾಗಲಿ, ಪಾಪವಾಗಲೀ, ಅನುಭವಿಸದೆ ಕರ್ಮನಾಶವಾಗುವುದಿಲ್ಲ. ಕೆಲವೊಮ್ಮೆ ಪುಣ್ಯಕರ್ಮ ಅನುಭವಿಸಿದ ನಂತರ (ಸುಖಾನುಭವಿಸಿದ ಮೇಲೆ) ಪಾಪಕರ್ಮಾನುಭವ ದುಃಖಾನುಭವವಿರುತ್ತದೆ.

---

೧ ಧರ್ಮ ಏವ ಕೃತಃ ಶ್ರೇಯಾನಿಹ ಲೋಕೇ ಪರತ್ರ ಚ।
ತಸ್ಮಾದ್ಧಿ ಪರಮಂ ನಾಸ್ತಿ ಯಥಾ ಪ್ರಾಹುರ್ಮನೀಷಿಣಃ॥ - ೧೨೩/೬

೨ ಚತುರ್ವಿಧಾ ಹಿ ಲೋಕಸ್ಯ ಯಾತ್ರಾ ತಾತ ವಿಧೀಯತೇ।
ಮರ್ತ್ಯಾ ಯತ್ರಾವತಿಷ್ಠಂತೇ ಸಾ ಚ ಕಾಮಾತ್ ಪ್ರವರ್ತತೇ॥ - ೧೨೩/೮

೩ ಸುಕೃತಾಸುಕೃತಂ ಕರ್ಮ ನಿಷೇವ್ಯ ವಿವಿಧೈಃ ಕ್ರಮೈಃ।
ದಶಾರ್ಧಪ್ರವಿಭಕ್ತಾನಾಂ ಭೂತಾನಾಂ ಬಹುಧಾ ಗತಿಃ॥ - ೧೨೩/೯

೪ ಸೌವರ್ಣಂ ರಾಜತಂ ವಾಪಿ ಯಥಾ ಭಾಂಡಂ ನಿಷಿಚ್ಯತೇ।
ತಥಾ ನಿಷಿಚ್ಯತೇ ಜಂತುಃ ಪೂರ್ವಕರ್ಮವಶಾನುಗಃ॥ - ೧೨೩/೧೦

೫ ದೈವಂ ತಾತ ನ ಪಶ್ಯಾಮಿ ನಾಸ್ತಿ ದೈವಸ್ಯ ಸಾಧನಮ್।
ಸ್ವಭಾವತೋ ಹಿ ಸಂಸಿದ್ಧಾ ದೇವಗಂಧರ್ವದಾನವಾಃ॥ - ೧೨೩/೧೨

ಸುಖವನ್ನು ತಂದುಕೊಡಲು ಇಂದ್ರಿಯನಿಗ್ರಹ, ಕ್ಷಮಾ, ಧೃತಿ, ತೇಜಸ್ಸು, ಸಂತೋಷ, ಸತ್ಯನುಡಿ, ಗುಣಗಳು ಬೇಕು.[೧] ಜೀವನಪರ್ಯಂತ ಪುಣ್ಯಪಾಪಕರ್ಮಗಳಲ್ಲಿ ಆಸಕ್ತನಾಗಿರುವ ಬದಲು ಯಾವಾಗಲೂ ಮನಸ್ಸನ್ನು ಭಗವಂತನ ಧ್ಯಾನದಲ್ಲಿ ತೊಡಗಿಸಬೇಕು. ಮಾನವನು [೨]ಬೇರೆಯವರ ಸತ್ಕರ್ಮ ದುಷ್ಕರ್ಮಫಲಗಳನ್ನು ಅನುಭವಿಸುವುದಿಲ್ಲ, ತಾನು ಮಾಡಿದ ಕರ್ಮಗಳಿಗನುಸಾರ ಫಲ ಹೊಂದುತ್ತಾನೆ. [೩]ಬೇರೆಯವರು ಪಾಪಕರ್ಮ ಮಾಡುವುದನ್ನು ನಿಂದಿಸಬಾರದು. ತಾನೇ ಅಂತಹ ದುಷ್ಕರ್ಮ ಮಾಡಿದರೆ ಅಪಹಾಸ್ಯಕ್ಕೆ ಕಾರಣವಾಗುತ್ತಾನೆ.

[೪]ಹೇಡಿಯಾದ ಕ್ಷತ್ರಿಯ, ಕಂಡದ್ದೆಲ್ಲವನ್ನು ತಿನ್ನುವ ಬ್ರಾಹ್ಮಣ, ವ್ಯಾಪಾರದಲ್ಲಿ ಪರದ್ರವ್ಯ ಅಪಹರಿಸುವ ವೈಶ್ಯ, ಸೇವೆಯಲ್ಲಿ ಆಲಸಿಯಾದ ಶೂದ್ರ, ಸಚ್ಚಾರಿತ್ರ್ಯವಿಲ್ಲದ ಪಂಡಿತ, ಚಾರಿತ್ರ್ಯವಿಲ್ಲದ ಸತ್ಕುಲಪ್ರಸೂತ, ಸತ್ಯಭ್ರಷ್ಟನಾದ ಬ್ರಾಹ್ಮಣ, [೫]ವಿಷಯಾಸಕ್ತಳಾದ ದುಷ್ಟಸ್ತ್ರೀ (ವೇಶ್ಯೆ), ವಿಷಯಾಸಕ್ತ ಯೋಗಿ, ತನ್ನ ಸಲುವಾಗಿ ಮಾತ್ರ ಪಾಕ ಮಾಡುವ ಗೃಹಸ್ಥ ಮೂರ್ಖನಾದ ವಾಗ್ಮಿ ರಾಜರಹಿತರಾಷ್ಟ್ರ, ಪ್ರಜೆಗಳನ್ನು ಪ್ರೀತಿಸದ ಜಿತೇಂದ್ರಿಯನಲ್ಲದ ರಾಜ – ಇವರೆಲ್ಲ ಕೊನೆಗೆ ಶೋಚನೀಯರಾಗುತ್ತಾರೆ. ದುಃಖಭಾಗಿಗಳಾಗುತ್ತಾರೆ.

ಪರಾಶರರು ಜನಕರಾಜನಿಗೆ ಉಪದೇಶ ಮುಂದುವರೆಸುತ್ತಾರೆ.

೧. ರಾಜನ್ ! ಮನೋರಥವೆಂಬ ರಥವನ್ನು ಹೊಂದಿ (ಸದಾಶೆ ಎಂಬ ರಥ) ಆ ರಥಕ್ಕೆ ಇಂದ್ರಿಯಗಳೆಂಬ ಕುದುರೆಗಳನ್ನು ಕಟ್ಟಿ ಅವುಗಳಿಗೆ ಜ್ಞಾನವೆಂಬ ಹಗ್ಗಗಳನ್ನು ಕಟ್ಟಿ ಆ ರಥವನ್ನು ನಡೆಸುವವನೇ ಬುದ್ಧಿವಂತ[೬].

---

೧ ದಮಃ ಕ್ಷಮಾ ಧೃತಿಸ್ತೇಜಃ ಸಂತೋಷಃ ಸತ್ಯವಾದಿತಾ ।
ಹ್ರೀರಹಿಂಸಾವ್ಯಸನಿತಾ ದಾಕ್ಷ್ಯಂ ಚೇತಿ ಸುಖಾವಹಾಃ ॥ – ೧೨೩/೧೯

೨ ನಾಯಂ ಪರಸ್ಯ ಸುಕೃತಂ ದುಷ್ಕೃತಂ ವಾಪಿ ಸೇವತೇ ।
ಕರೋತಿ ಯಾದೃಶಂ ಕರ್ಮ ತಾದೃಶಂ ಪ್ರತಿಪದ್ಯತೇ ॥ – ೧೨೩/೨೧

೩. ಪರೇಷಾಂ ಯದಸೂಯೇತ ನ ತತ್ಕುರ್ಯಾತ್ಸ್ವಯಂ ನರಃ ।
ಯೋ ಹ್ಯಸೂಯುಸ್ತಥಾಯುಕ್ತಃ ಸೋಪಹಾಸಂ ನಿಯಚ್ಛತಿ ॥ – ೧೨೩/೨೩

೪ ಭೀರೂ ರಾಜನ್ಯೋ ಬ್ರಾಹ್ಮಣಃ ಸರ್ವಭಕ್ಷೋ ವೈಶ್ಯೋಽನೀಹಾರಾನ್ಹೀನವರ್ಣೋಽಲಸಶ್ಚ ।
ವಿದ್ವಾಂಶ್ಚಾಶೀಲೋ ವೃತ್ತಹೀನಃ ಕುಲೀನಃ ಸತ್ಯಾದ್ ಭ್ರಷ್ಟೋ ಬ್ರಾಹ್ಮಣಃ ಸ್ತ್ರೀ ಚ ದುಷ್ಟಾ ॥
– ೧೨೩/೨೪

೫ ರಾಗೀ ಯುಕ್ತಃ ಪಚಮಾನೋಽಽತ್ಮಹೇತೋರ್ಮೂರ್ಖೋ ವಕ್ತಾ ನೃಪಹೀನಂ ಚ ರಾಷ್ಟ್ರಮ್ ।
ಏತೇ ಸರ್ವೇ ಶೋಚ್ಯತಾಂ ಯಾಂತಿ ರಾಜನ್ ಯಶ್ಚಾಯುಕ್ತಃ ಸ್ನೇಹಹೀನಃ ಪ್ರಜಾಸು ॥
–೧೨೩/೨೫

೬ ಮನೋರಥರಥಂ ಪ್ರಾಪ್ಯ ಇಂದ್ರಿಯಾರ್ಥಹಯಂ ನರಃ ।
ರಶ್ಮಿಭಿರ್ಜ್ಞಾನಸಂಭೂತೈರ್ಯೋ ಗಚ್ಛತಿ ಸ ಬುದ್ಧಿಮಾನ್ ॥ – ೧೨೪/೧

೨. (ಶೂದ್ರನು ತನ್ನ ವೃತ್ತಿಗಾಗಿ ಬದುಕಿಗಾಗಿ) ಉತ್ತಮ ಜಾತಿಯ ಬ್ರಾಹ್ಮಣನನ್ನು ಸೇವಿಸಿ ಬದುಕನ್ನು ಕಟ್ಟಿಕೊಳ್ಳಬೇಕು[೧] (ಅಥವಾ ಇದು ಎಲ್ಲ ವರ್ಣದವರಿಗೂ ಅನ್ವಯಿಸುತ್ತದೆ).

೩. ದುರ್ಬಲವಾದ ಆಯುಷ್ಯವನ್ನು ಹೊಂದಿ ಅದನ್ನು ವ್ಯರ್ಥಗೊಳಿಸಬಾರದು (ಇಂದ್ರಿಯಲೋಲುಪನಾಗಿ). ಅದರ ಬದಲು ಪುಣ್ಯಕರ್ಮಗಳಿಂದ (ವರ್ಣಾಶ್ರಮೋಚಿತ) ಉತ್ಕರ್ಷ ಹೊಂದಲು ಪ್ರಯತ್ನಿಸಬೇಕು[೨]. ಉತ್ತಮವರ್ಣದಲ್ಲಿ ಹುಟ್ಟಿಯೂ, ತನ್ನ ವರ್ಣಕ್ಕೆ ವಿರುದ್ಧವಾದ ಕರ್ಮಗಳನ್ನು ಮಾಡಿದರೆ ಗೌರವಾರ್ಹನಾಗುವುದಿಲ್ಲ. ಆದ್ದರಿಂದ ರಾಜಸಕರ್ಮಗಳನ್ನು ಮಾಡಬಾರದು[೩]. ಮಾಡಿದರೆ ಮಾಡಿದ ಕರ್ಮದಿಂದಲೇ ತನ್ನ ಪಾಪಕರ್ಮದಿಂದಲೇ ತಾನು ಕೊಲ್ಲಲ್ಪಡುತ್ತಾನೆ.

೪. ಅಜ್ಞಾನದಿಂದ ಪಾಪಕರ್ಮ ಮಾಡಿದರೆ ತಪಸ್ಸಿನಿಂದ ಪರಿಹರಿಸಿಕೊಳ್ಳಬೇಕು. ತಿಳಿದೂ, ತಿಳಿದೂ ಮಾಡಿದರೆ ಪಾಪಕ್ಕೆ ಬಲಿಯಾಗಿ ದುಃಖಿತನಾಗುತ್ತಾನೆ.[೪]

೫. ಪಾಪದ ಸಂಬಂಧ ಕಾರ್ಯ ಎಷ್ಟೇ ಮಹಾಫಲವನ್ನು ಕೊಟ್ಟರೂ ಮೇಧಾವಿ ಯಾದವನು ಮಾಡಬಾರದು. ಹಾಗೆ ಮಾಡುವುದು ಶುಚಿಯಾದ ಬ್ರಾಹ್ಮಣನು ಚಂಡಾಲನನ್ನು ಸೇವಿಸಿದಂತಾಗುತ್ತದೆ.[೫]

೬. ಮನಃಪೂರ್ವಕವಾಗಿ ಮಾಡಿದ ಸ್ಥೂಲ ಅಥವಾ ಸೂಕ್ಷ್ಮ ಕರ್ಮಗಳಿಗೆ ಯೋಗ್ಯ ಫಲ ಸಿಕ್ಕೇ ಸಿಗುತ್ತದೆ.[೬]

**೭. ದೇವತೆಗಳಾಗಲೀ, ಮುನಿಗಳಾಗಲೀ ನಿಷಿದ್ಧ ಕರ್ಮಗಳನ್ನು ಮಾಡಿದರೂ ಅವರು ಮಾಡಿದ ಆ ಧರ್ಮವನ್ನು ತಿಳಿದ ಪುರುಷನು ಅವರನ್ನು ಅನುಸರಿಸಬಾರದು. ಅವರನ್ನು ನಿಂದಿಸಲೂಬಾರದು.**

---

೧ ಸೇವಾಶ್ರಿತೇನ ಮನಸಾ ವೃತ್ತಿಹೀನಸ್ಯ ಶಸ್ಯತೇ।
ದ್ವಿಜಾತಿಹಸ್ತಾನ್ನಿರ್ವೃತ್ತಾ ನ ತು ತುಲ್ಯಾತ್ ಪರಸ್ಪರಮ್ ॥ - ೧೨೪/೨

೨ ಆಯುರ್ನಸುಲಭಂ ಲಬ್ಧ್ವಾ ನಾವಕರ್ಷೇದ್ ವಿಶಾಂ ಪತೇ।
ಉತ್ಕರ್ಷಾರ್ಥಂ ಪ್ರಯತತೇ ನರಃ ಪುಣ್ಯೇನ ಕರ್ಮಣಾ ॥ - ೧೨೪/೩

೩ ವರ್ಣೇಭ್ಯೋಽಪಿ ಪರಿಭ್ರಷ್ಟಃ ಸ ವೈ ಸಮ್ಮಾನಮರ್ಹತಿ।
ನ ತು ಯಃ ಸತ್ಕ್ರಿಯಾಂ ಪ್ರಾಪ್ಯ ರಾಜಸಂ ಕರ್ಮ ಸೇವತೇ॥ - ೧೨೪/೪

೪ ಅಜ್ಞಾನಾದ್ಧಿ ಕೃತಂ ಪಾಪಂ ತಪಸೈವಾಭಿನಿರ್ಣುದೇತ್।
ಪಾಪಂ ಹಿ ಕರ್ಮ ಫಲತಿ ಪಾಪಮೇವ ಸ್ವಯಂ ಕೃತಮ್ ॥
ತಸ್ಮಾತ್ ಪಾಪಂ ನ ಸೇವೇತ ಕರ್ಮ ದುಃಖಫಲೋದಯಮ್ ॥ - ೧೨೪/೬

೫ ಪಾಪಾನುಬಂಧಂ ಯತ್ ಕರ್ಮ ಯದ್ಯಪಿ ಸ್ಯಾನ್ಮಹಾಫಲಮ್।
ನ ತತ್ ಸೇವೇತ ಮೇಧಾವೀ ಶುಚಿಃ ಕುಸಲಿಲಂ ಯಥಾ ॥ - ೧೨೪/೭

೬ ಯಥಾ ಸೂಕ್ಷ್ಮಾಣಿ ಕರ್ಮಾಣಿ ಫಲಂತೀಹ ಯಥಾತಥಮ್।
ಬುದ್ಧಿಯುಕ್ತಾನಿ ತಾನೀಹ ಕೃತಾನಿ ಮನಸಾ ಸಹ॥ - ೧೨೪/೧೫

**ಕೃತಾನಿ ಯಾನಿ ಕರ್ಮಾಣಿ ದೈವತೈರ್ಮುನಿಭಿಸ್ತಥಾ ।**
**ನಾಚರೇತ್ತಾನಿ ಧರ್ಮಾತ್ಮಾ ಶ್ರುತ್ವಾ ಚಾಪಿ ನ ಕುತ್ಸಯೇತ್ ॥** - ೧೨೪/೧೭

೮. ಒಟ್ಟಾರೆ ಮನುಷ್ಯನು ಮನಸ್ಸಿನಿಂದ ಚೆನ್ನಾಗಿ ವಿಮರ್ಶೆ ಮಾಡಿ, ತನಗೆ ಈ ಕರ್ಮ ಸಾಧ್ಯವಿದೆ ಎಂದು ತಿಳಿದು ಶುಭಕರ್ಮ ಮಾಡಿದಲ್ಲಿ ಅವನು ಸತ್ಫಲ ಹೊಂದುತ್ತಾನೆ.[೧]

ಬೆಂಕಿಯಲ್ಲಿ ಸುಡದಿರುವ ಮಡಕೆಯಲ್ಲಿಟ್ಟ (ಸಂಸ್ಕರಿಸಿದ) ನೀರು ಹೇಗೆ ಸೋರಿ ಹೋಗುತ್ತದೋ ಹಾಗೆ ಬೆಂಕಿಯಿಂದ ಸಂಸ್ಕರಿಸಲ್ಪಟ್ಟ ಮಡಕೆಯಲ್ಲಿಟ್ಟ ನೀರು ಸ್ಥಿರವಾಗಿರುವಂತೆ ರಾಗದ್ವೇಷಗಳಿಂದ ಕೂಡಿದ ಮನಸ್ಸಿನಿಂದ ಮಾಡಿದ ಕರ್ಮವು ಕಷ್ಟಕ್ಕೂ (ದುಃಖಕ್ಕೂ), ಶುದ್ಧಮನಸ್ಸಿನಿಂದ ಮಾಡಿದ ಕರ್ಮವು ಸುಖಕ್ಕೂ ಕಾರಣವಾಗುತ್ತದೆ.[೨]

ಸಂಸ್ಕೃತ ಮಡಕೆಯಲ್ಲಿ ನೀರು ಮತ್ತೆ ಹಾಕಿದಾಗ, ನೀರೆ ನೀರು ಬೆರೆತಾಗ ಹೇಗೆ ಪೂರ್ಣತೆಯನ್ನು ಹೊಂದುವುದೋ ಹಾಗೆಯೇ ಪುಣ್ಯಕರ್ಮಗಳನ್ನು ಮತ್ತೆ ಮತ್ತೆ ಮಾಡಿದಾಗ ಜೀವನ ಪುಣ್ಯವೃದ್ಧಿಯಾಗುತ್ತಾ ಹೋಗುತ್ತದೆ.[೩] ಹೀಗೆ ಪುಣ್ಯಕರ್ಮಗಳನ್ನು ಮತ್ತೆ ಮತ್ತೆ ಮಾಡುತ್ತಾ ಹೋದಂತೆ ಅಧಿಕ ಪುಣ್ಯವಾಗಿ ಅಭಿವೃದ್ಧಿ ಹೊಂದುತ್ತದೆ[೪] (ನಿಷ್ಕಾಮಕರ್ಮವೆಂದು ಅಭಿಪ್ರಾಯ).

೯. ರಾಜನಾದವನು ತನಗಿಂತಲೂ ಉನ್ನತ ಸ್ಥಿತಿಯಲ್ಲಿರುವ ಆಯುಧಪಾಣಿಗಳಾದ ಶತ್ರುಗಳನ್ನು ಗೆಲ್ಲಬೇಕು (ಸಾಮಾದಿ ಉಪಾಯಗಳಿಂದ). ಪ್ರಜಾಪಾಲನೆಯನ್ನು ಚೆನ್ನಾಗಿ ಮಾಡಬೇಕು. ಅನೇಕ ಯಜ್ಞಗಳಿಂದ ಅಗ್ನಿಯನ್ನು ಸೇವಿಸಬೇಕು. ವೈರಾಗ್ಯ ಬಂದಮೇಲೆ ಮಧ್ಯ ವಯಸ್ಸಿನಲ್ಲಿ ಅಥವಾ ಕೊನೆಯಲ್ಲೋ ವಾನಪ್ರಸ್ಥನಾಗಬೇಕು.[೫]

೧೦. ಇಂದ್ರಿಯನಿಗ್ರಹವುಳ್ಳ ಪುರುಷನು ಧರ್ಮಶೀಲನಾಗಿರಬೇಕು. ಎಲ್ಲ ಪ್ರಾಣಿಗಳನ್ನು ತನ್ನಂತೆ ಭಾವಿಸಬೇಕು. ಗುರುಹಿರಿಯರನ್ನು ಶಕ್ತಿಯಿದ್ದಷ್ಟು ಸತ್ಕರಿಸಬೇಕು. ಸೇವೆ ಮಾಡಬೇಕು. ಸತ್ಯ, ಶೀಲ(ಸನ್ನಡತೆ)ಗಳಿಂದ ಸುಖವುಂಟಾಗುತ್ತದೆ.

---

೧ ಸಂಚಿಂತ್ಯ ಮನಸಾ ರಾಜನ್ ವಿದಿತ್ವಾ ಶಕ್ತಿಮಾತ್ಮನಃ ।
ಕರೋತಿ ಯಃ ಶುಭಂ ಕರ್ಮ ಸ ವೈ ಭದ್ರಾಣಿ ಪಶ್ಯತಿ ॥ - ೧೨೪/೧೮

೨ ನವೇ ಕಪಾಲೇ ಸಲಿಲಂ ಸಂನ್ಯಸ್ತಂ ಹೀಯತೇ ಯಥಾ ।
ನವೇತರೇ ತಥಾಭಾವಂ ಪ್ರಾಪ್ನೋತಿ ಸುಖಭಾವಿತಮ್ ॥ - ೧೨೪/೧೯

೩. ಸತೋಯೇಽನ್ಯತ್ತು ಯತ್ತೋಯಂ ತಸ್ಮಿನ್ನೇವ ಪ್ರಸಿಚ್ಯತೇ ।
ವೃದ್ಧೇ ವೃದ್ಧಿಮವಾಪ್ನೋತಿ ಸಲಿಲೇ ಸಲಿಲಂ ಯಥಾ ॥ - ೧೨೪/೨೦

೪ ಏವಂ ಕರ್ಮಾಣಿ ಯಾನೀಹ ಬುದ್ಧಿಯುಕ್ತಾನಿ ಭೂಪತೇ ।
ನಸಮಾನೀಹ ಹೀನಾನಿ ತಾನಿ ಪುಣ್ಯತಮಾನ್ಯಪಿ ॥ - ೧೨೪/೨೧

೫ ರಾಜ್ಞಾ ಜೇತವ್ಯಾಃ ಸಾಯುಧಾಶ್ಚೋನ್ನತಾಶ್ಚ ಸಮ್ಯಕ್ಕರ್ತವ್ಯಂ ಪಾಲನಂ ಚ ಪ್ರಜಾನಾಮ್ ।
ಅಗ್ನಿಶ್ಚೇಯೋ ಬಹುಭಿಶ್ಚಾಪಿ ಯಜ್ಞೈರಂತೇ ಮಧ್ಯೇ ವಾ ವನಮಾಶ್ರಿತ್ಯ ಸ್ಥೇಯಮ್ ॥ - ೧೨೪/೨೨

**ದಮಾನ್ವಿತಃ ಪುರುಷೋ ಧರ್ಮಶೀಲೋ ಭೂತಾನಿ ಚಾತ್ಮಾನಮಿವಾನುಪಶ್ಯೇತ್ ।**
**ಗರೀಯಸಃ ಪೂಜಯೇದಾತ್ಮಶಕ್ತ್ಯಾ ಸತ್ಯೇನ ಶೀಲೇನ ಸುಖಂ ನರೇಂದ್ರ ॥**

**- ೧೨೪/೨೩**

ಪರಾಶರರು ಉಪದೇಶವನ್ನು ಮುಂದುವರೆಸುತ್ತಾ ಹೇಳುತ್ತಾರೆ.(೧೨೫)

೧. ಪ್ರಪಂಚದಲ್ಲಿ ಯಾರು ಯಾರಿಗೆ ಉಪಕರಿಸುತ್ತಾರೆ? ಯಾರು ಯಾರಿಗೆ ಕೊಡುತ್ತಾರೆ? ಪ್ರತಿಯೊಬ್ಬ ಮನುಷ್ಯನೂ ಕೂಡಾ ಸ್ವಾರ್ಥಕ್ಕಾಗಿಯೇ ಎಲ್ಲ ಮಾಡುತ್ತಾನೆ. ದಾನಧರ್ಮಗಳಲ್ಲಿ ಪರೋಪಕಾರಕ್ಕಿಂತ ಸ್ವಾರ್ಥ(ತನ್ನ ಪ್ರಯೋಜನವನ್ನೇ ಮನಸ್ಸಿನಲ್ಲಿಟ್ಟುಕೊಂಡೇ)ಕ್ಕೆ ಸ್ಥಾನ.[೧]

೨. ಉತ್ತಮರಿಗೆ ದಾನ ಮಾಡುವುದು. ಅವರಿಂದ ದಾನ ಸ್ವೀಕರಿಸುವುದು ಸಮಾನವೇ. ಆದರೂ ದಾನಪ್ರತಿಗ್ರಹಗಳಲ್ಲಿ ದಾನವೇ ಶ್ರೇಷ್ಠ (ಕೊಡುವುದರಿಂದ ಪುಣ್ಯಪ್ರಾಪ್ತಿ, ಪಡೆಯುವುದರಲ್ಲಿ ಪಾಪಪ್ರಾಪ್ತಿ, ಮೇಲಾಗಿ ಕೊಡುವುದರಲ್ಲಿರುವ ಸಂತೋಷ ಇಸಿದುಕೊಳ್ಳುವುದರಲ್ಲಿ ನಿಷ್ಕಾಮಕರ್ಮಿಗೆ ಇರುವುದಿಲ್ಲ).[೨]

೩. ವರ್ಣಾಶ್ರಮಧರ್ಮ ಪಾಲಿಸುವವರಿಂದ ನ್ಯಾಯದಿಂದ ಸಂಪಾದಿತವಾದ ಧನವನ್ನು ನ್ಯಾಯದಿಂದ ವೃದ್ಧಿಗೊಳಿಸಿ ರಕ್ಷಿಸಬೇಕು. ನಂತರ ಧರ್ಮಕಾರ್ಯಕ್ಕೆ ವಿನಿಯೋಗಿಸಬೇಕು.

೪. ಧರ್ಮವನ್ನು ಬಯಸುವವನು ನಿಂದ್ಯ ವೃತ್ತಿಯನ್ನು (ಕ್ರೂರಕರ್ಮ, ನಿಷಿದ್ಧಕರ್ಮ) ಆಶ್ರಯಿಸಿ ಧನಸಂಪಾದನೆ ಮಾಡಬಾರದು. ಅದೇ ಗುರಿಯಾಗಿರಬಾರದು. ಎಲ್ಲ ಸತ್ಕರ್ಮಗಳಿಗೆ ಯಥಾಶಕ್ತಿ ವಿನಿಯೋಗಿಸಬೇಕು. ಧನಸಂಪಾದನೆಯ ಗೀಳಿರಬಾರದು.[೩]

೫. ಹಸಿವು ಬಾಯಾರಿಕೆಗಳಿಂದ ಬಳಲಿದವನಿಗೆ ತಂಪು ನೀರನ್ನು ಬಿಸಿ ನೀರನ್ನು ತನ್ನ ಶಕ್ತಿಗನುಗುಣವಾಗಿ ಶುದ್ಧಮನಸ್ಸಿನಿಂದ ಕೊಟ್ಟಾಗ ಉತ್ತಮ ಫಲ (ಪುಣ್ಯ) ಸಿಗುತ್ತದೆ.

ಹೀಗೆ ವರ್ಣಾಶ್ರಮಧರ್ಮಪಾಲನೆ ಮಾಡಿದವರ ಪಟ್ಟಿಯನ್ನು ಪರಾಶರರು ಕೊಡುತ್ತಾರೆ.

ಅ. ರಂತಿದೇವ - ಗಡ್ಡೆ-ಗೆಣಸು, ಹಣ್ಣು-ಹಂಪಲುಗಳಿಂದ ಮುನಿಸತ್ಕಾರ, ಅದರಿಂದ ಆತನ ಅಭೀಷ್ಟಸಿದ್ಧಿಯಾದವು.

---

೧ ಕಃ ಕಸ್ಯ ಚೋಪಕುರುತೇ ಕಶ್ಚ ಕಸ್ಮೈ ಪ್ರಯಚ್ಛತಿ ।
ಪ್ರಾಣೀ ಕರೋತ್ಯಯಂ ಕರ್ಮ ಸರ್ವಮಾತ್ಮಾರ್ಥಮಾತ್ಮನಾ ॥ - ೧೨೫/೧

೨ ವಿಶಿಷ್ಟಸ್ಯ ವಿಶಿಷ್ಟಾಚ್ಚ ತುಲ್ಯೌ ದಾನಪ್ರತಿಗ್ರಹೌ ।
ತಯೋಃ ಪುಣ್ಯತರಂ ದಾನಂ ತದ್ದ್ವಿಜಸ್ಯ ಪ್ರಯಚ್ಛತಃ ॥ - ೧೨೫/೩

೩ ನ ಧರ್ಮಾರ್ಥೀ ನೃಶಂಸೇನ ಕರ್ಮಣಾ ಧನಮರ್ಜಯೇತ್ ।
ಶಕ್ತಿತಃ ಸರ್ವಕಾರ್ಯಾಣಿ ಕುರ್ಯಾನ್ನರ್ದ್ಧಿಮನುಸ್ಮರೇತ್ ॥ - ೧೨೫/೫

ಆ. ಶೈಬ್ಯರಾಜ– ಮಾತರವೆಂಬ ಋಷಿಯನ್ನು ಫಲಮೂಲಪತ್ರಗಳಿಂದ ಸಂತೋಷಗೊಳಿಸಿ ಉತ್ತಮಫಲ ಪಡೆದ.

ಇ. ಎಲ್ಲ ಮನುಷ್ಯರು ಹುಟ್ಟುತ್ತಲೇ ದೇವ, ಅತಿಥಿ, ಭೃತ್ಯ, ಪಿತೃಗಳ ಋಣಗಳನ್ನು ಹೊತ್ತೇ ಹುಟ್ಟುತ್ತಾರೆ. ಬದುಕಿರುವಾಗಲೇ ಎಲ್ಲ ಋಣಗಳಿಂದ ಮುಕ್ತನಾಗಬೇಕು. ಹೇಗೆ?

೧. ಋಷಿಋಣ – ಸ್ವಾಧ್ಯಾಯದಿಂದ

೨. ದೇವಋಣ – ಯಜ್ಞದಿಂದ

೩. ಪಿತೃಋಣ – ಶ್ರಾದ್ಧದಿಂದ

೪. ಮನುಷ್ಯ ಋಣ – ಅತಿಥಿಸತ್ಕಾರದಿಂದ

೫. ಭೃತ್ಯಋಣ – ಹೆಂಡತಿ, ಮಕ್ಕಳ ರಕ್ಷಣಾದಿಗಳಿಂದ

ಈ. ತಪಸ್ವಿಗಳು – ಐಶ್ವರ್ಯರಹಿತರಾದರೂ, ವಿಧ್ಯುಕ್ತವಾದ ಅಗ್ನಿಹೋತ್ರಾದಿಗಳನ್ನು ಶ್ರದ್ಧೆಯಿಂದ ಮಾಡಿ ಸಿದ್ಧಿಯನ್ನು ಹೊಂದಿದ್ದಾರೆ.

ಉ. ಶುನಃಶೇಪ – ಯಜ್ಞದಲ್ಲಿ ದೇವತೆಗಳನ್ನು ಮಂತ್ರಗಳಿಂದ ಸ್ತೋತ್ರಮಾಡಿ ವಿಶ್ವಾಮಿತ್ರನ ಮಗನೇ ಆದನು.

ಊ. ಉಶನಸ್ ಋಷಿ – ರುದ್ರದೇವರ ಅನುಗ್ರಹ ಇಚ್ಛಿಸಿ ಶುಕ್ರತ್ವವನ್ನು ಪಡೆದು ಶುಕ್ರನೆಂಬ ಹೆಸರಿನಿಂದ ಪ್ರಸಿದ್ಧನಾದನು. ಪಾರ್ವತಿಯ ಅನುಗ್ರಹದಿಂದ ಮಹಾತೇಜಸ್ಸಿನಿಂದ ಕೂಡಿ ಆಕಾಶದಲ್ಲಿ ಗ್ರಹದ ಸ್ಥಾನವನ್ನು ಹೊಂದಿದ್ದಾನೆ.

ಋ. ಅಸಿತ, ದೇವಲ, ನಾರದ, ಪರ್ವತ, ಕಕ್ಷೀವಾನ್, ಜಮದಗ್ನಿ, ತಾಂಡ್ಯ, ಅಂಶುಮಾನ್, ವಸಿಷ್ಠ ಪರಶುರಾಮ, ವಿಶ್ವಾಮಿತ್ರ, ಅತ್ರಿ, ಭರದ್ವಾಜ, ಹರಿಶ್ಮಶ್ರು, ಕುಂಡಧಾರ, ಶ್ರುತಶ್ರವಸ್ – ಈ ಮಹರ್ಷಿಗಳು ಏಕಾಗ್ರತೆಯಿಂದ ಶ್ರೀಹರಿಯನ್ನು ಸ್ತೋತ್ರಮಾಡಿ ಹರಿಯ ಕರುಣಾಪಾತ್ರರಾಗಿ ಸಿದ್ಧಿಯನ್ನು ಹೊಂದಿದ್ದಾರೆ.[೧]

ೠ. ಜಗುಪ್ಸಿತಕರ್ಮವನ್ನು ಮಾಡಿ ಯಾರು ಉತ್ತಮಫಲವನ್ನು ಬಯಸಬಾರದು.[೨]

---

೧ ಅಸಿತೋ ದೇವಲಶ್ಚೈವ ತಥಾ ನಾರದಪರ್ವತೌ ।
ಕಕ್ಷೀವಾಂಜಾಮದಗ್ನ್ಯಶ್ಚ ರಾಮಸ್ತಾಂಡ್ಯಸ್ತಥಾಂಶುಮಾನ್ ॥
ವಸಿಷ್ಠೋ ಜಮದಗ್ನಿಶ್ಚ ವಿಶ್ವಾಮಿತ್ರೋಽತ್ರಿರೇವ ಚ ।
ಭರದ್ವಾಜೋ ಹರಿಶ್ಮಶ್ರುಃ ಕುಂಡಧಾರಃ ಶ್ರುತಶ್ರವಾಃ ।
ಏತೇ ಮಹರ್ಷಯಃ ಸ್ತುತ್ವಾ ವಿಷ್ಣುಮೃಗ್ಭಿಃ ಸಮಾಹಿತಾಃ ।
ಲೇಭಿರೇ ತಪಸಾ ಸಿದ್ಧಿಂ ಪ್ರಸಾದಾತ್ತಸ್ಯ ಧೀಮತಃ ॥ – ೧೨೫/೧೫-೧೭

೨ ಅನರ್ಹಾಶ್ಚಾರ್ಹತಾಂ ಪ್ರಾಪ್ತಾಃ ಸಂತಃ ಸ್ತುತ್ವಾ ತಮೇವ ಹ ।
ನ ತು ವೃದ್ಧಿಮಿಹಾನ್ವಿಚ್ಛೇತ್ ಕರ್ಮ ಕೃತ್ವಾ ಜುಗುಪ್ಸಿತಮ್ ॥ – ೧೨೫/೧೮

೭. ನಿತ್ಯ ಅಗ್ನಿಹೋತ್ರವನ್ನು ಮಾಡುವವರೇ ಧರ್ಮಾತ್ಮರು. ಪುಣ್ಯಕರ್ಮಶಾಲಿಗಳು, ಎಲ್ಲ ವೇದಗಳು ಆಹಿತಾಗ್ನಿಯನ್ನು ಆರಾಧನೆ ಮಾಡುವ ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯ ಎಂಬ ಮೂರು ಅಗ್ನಿಗಳಲ್ಲಿ ಪ್ರತಿಷ್ಠಿತವಾಗಿವೆ (ಸನ್ನಿಹಿತವಾಗಿವೆ).[೧]

ಜನಕರಾಜನೇ! ಅಗ್ನಿ ಪರಮಾತ್ಮ ತಾಯಿ, ತಂದೆ, ಗುರು ಇವರೆಲ್ಲರನ್ನು ಯಥಾಯೋಗ್ಯವಾಗಿ ಸತ್ಕರಿಸಬೇಕು.[೨]

ಪರಾಶರರು ಮುಂದುವರೆಯುತ್ತಾ ಜನಕರಾಜನಿಗೆ ಹೇಳಿದರು.

ಶೂದ್ರನು ಮೂರುವರ್ಣದವರ ಸೇವೆಯನ್ನು ಮಾಡಬೇಕಾದರೂ ಅದರಲ್ಲೂ ಬ್ರಾಹ್ಮಣಸೇವೆ ಶ್ರೇಷ್ಠ. ಅದುವೇ ಆ ಸೇವೆಯ ಧರ್ಮವೇ ಅವರನ್ನು (ಕ್ಷತ್ರಿಯ-ವೈಶ್ಯರನ್ನು) ಧರ್ಮಿಷ್ಠರನ್ನಾಗಿ ಮಾಡುತ್ತದೆ. ಇದರಿಂದಲೇ ಅವನ ಜೀವನಸಾರ್ಥಕ.[೩]

ಸಜ್ಜನರ ಸಹವಾಸವೇ ಶುಭದಾಯಕವು. ದುರ್ಜನರ ಸಹವಾಸವನ್ನು ಎಂದೂ ಮಾಡಬಾರದು. ಉದಯಾದ್ರಿಯಲ್ಲಿರುವ ಸ್ಫಟಿಕಾದಿ ದ್ರವ್ಯವು ಸೂರ್ಯಾದಿ ಸನ್ನಿಕರ್ಷದಿಂದ ವಿಶೇಷವಾಗಿ ಶೋಭಿಸುವಂತೆ, ಸತ್ಪುರುಷರ ಸಹವಾಸವು ಶೂದ್ರನನ್ನು ಸದ್ಗುಣಗಳಿಂದ ಶೋಭಿಸುತ್ತದೆ.[೪]

೨. ವಿದ್ವಾಂಸನು ಸುಖದಲ್ಲಿರಲಿ, ದುಃಖದಲ್ಲಿರಲಿ, ಶುಭಕರ್ಮಗಳನ್ನೇ ಮಾಡುತ್ತಿದ್ದರೆ ಅವನು ನಿಜವಾಗಿ ಶಾಸ್ತ್ರಜ್ಞನಾಗುತ್ತಾನೆ.[೫]

---

೧ ಆಹಿತಾಗ್ನಿರ್ಹಿ ಧರ್ಮಾತ್ಮಾ ಯಃ ಸ ಪುಣ್ಯಕೃದುತ್ತಮಃ।
ವೇದಾ ಹಿ ಸರ್ವೇ ರಾಜೇಂದ್ರ ಸ್ಥಿತಾಸ್ತ್ರಿಷ್ವಗ್ನಿಷು ಪ್ರಭೋ॥ - ೧೨೫/೨೧

೨ ಅಗ್ನಿರಾತ್ಮಾ ಚ ಮಾತಾ ಚ ಪಿತಾ ಜನಯಿತಾ ತಥಾ।
ಗುರುಶ್ಚ ನರಶಾರ್ದೂಲ ಪರಿಚರ್ಯಾ ಯಥಾತಥಮ್॥ - ೧೨೫/೨೨

೩ ವೃತ್ತಿಃ ಸಕಾಶಾದ್ ವರ್ಣೇಭ್ಯೋ ನಿತ್ಯಂ ಹೀನಸ್ಯ ಶೋಭನಾ।
ಪ್ರೀತ್ಯೋಪನೀತಾ ನಿರ್ದಿಷ್ಟಾ ಧರ್ಮಿಷ್ಠಾನ್ ಕುರುತೇ ಸದಾ॥
ವೃತ್ತಿಶ್ಚೇನ್ನಾಸ್ತಿ ಶೂದ್ರಸ್ಯ ಪಿತೃಪೈತಾಮಹೀ ಧ್ರುವಾ।
ನ ವೃತ್ತಿಂ ಪರತೋ ಮಾರ್ಗೇಚ್ಛುಶ್ರೂಷಾಂ ತು ಪ್ರಯೋಜಯೇತ್॥ - ೧೨೬/೧,೨

೪ ಸದ್ಭಿಸ್ತು ಸಹ ಸಂಸರ್ಗಃ ಶೋಭತೇ ಧರ್ಮದರ್ಶಿಭಿಃ।
ನಿತ್ಯಂ ಸರ್ವಾಸ್ವವಸ್ಥಾಸು ನಾಸದ್ಭಿರಿತಿ ಮೇ ಮತಿಃ॥
ಯಥೋದಯಗಿರೌ ದ್ರವ್ಯಂ ಸನ್ನಿಕರ್ಷೇಣ ದೀಪ್ಯತೇ।
ತಥಾ ಸತ್ಸನ್ನಿಕರ್ಷೇಣ ಹೀನವರ್ಣೋಽಪಿ ದೀಪ್ಯತೇ॥
ಯಾದೃಶೇನ ಹಿ ವರ್ಣೇನ ಭಾವ್ಯತೇ ಶುಕ್ಲಮಂಬರಮ್।
ತಾದೃಶಂ ಕುರುತೇ ರೂಪಮೇತದೇವಮವೈಹಿ ಮೇ॥ - ೧೨೬/೩-೫

೫ ಸುಖೇ ವಾ ಯದಿ ವಾ ದುಃಖೇ ವರ್ತಮಾನೋ ವಿಚಕ್ಷಣಃ।
ಯಶ್ಚಿನೋತಿ ಶುಭಾನ್ಯೇವ ಸ ಭದ್ರಾಣೀಹ ಪಶ್ಯತಿ॥ - ೧೨೬/೭

೩. ಯಾರು (ರಾಜನು) ಪ್ರಜಾಪೀಡೆ ಮಾಡುತ್ತಾ ಸಾವಿರ ಗೋದಾನ ಮಾಡುತ್ತಾನೋ ಅಂತಹ ದಾನವು ಯಾವ ಫಲವನ್ನು ಕೊಡುವುದಿಲ್ಲ. ಆ ರಾಜ ಕಳ್ಳನೇ ಸರಿ.[೧]

೪. ನಾರಾಯಣನು ಮೊದಲು ಲೋಕಪೂಜಿತನಾದ(ಧಾತೃವನ್ನು) ಹುಟ್ಟಿಸಿದನು. ಅವನು ಸಕಲಲೋಕಗಳನ್ನು ಧರಿಸುವುದರಲ್ಲಿ ನಿರತನಾದ. ಪರ್ಜನ್ಯನನ್ನು ಹುಟ್ಟಿಸಿದನು. ವೈಶ್ಯರು ಪರ್ಜನ್ಯನನ್ನು ಆರಾಧಿಸಿ ಕೃಷಿ, ಪಶುಪಾಲನೆ ಎಂಬ ಧರ್ಮಗಳಿಂದ ಐಶ್ವರ್ಯ ಸಮೃದ್ಧಿಯನ್ನು ಹೊಂದಬೇಕು. ರಾಜರು ವೈಶ್ಯರಲ್ಲಿರುವ ಐಶ್ವರ್ಯವನ್ನು ರಕ್ಷಿಸಬೇಕು.[೨]

೫. ಪ್ರಾಮಾಣಿಕರಾದ, ಶಾಠ್ಯವಿಲ್ಲದ, ಕ್ರೋಧತ್ಯಾಗ ಮಾಡಿರುವ ಹವ್ಯಕವ್ಯಗಳನ್ನು ಮಾಡಿಸುವ ಬ್ರಾಹ್ಮಣರು ವೈಶ್ಯರ ಐಶ್ವರ್ಯಗಳನ್ನು ಯಜ್ಞಗಳಿಗೆ ಲೋಕಹಿತಕ್ಕಾಗಿ ವಿನಿಯೋಗಿಸಬೇಕು. ಆ ಯಜ್ಞದ ಯಜ್ಞಮಂಟಪ ಮೊದಲಾದ ವೇದಿಕೆಗಳನ್ನು ಶೂದ್ರರು ಶುದ್ಧಗೊಳಿಸಬೇಕು. ಇದರಿಂದ ಧರ್ಮನಾಶವಾಗುವುದಿಲ್ಲ.[೩]

೬. ಯಾರಾದರೂ ಪ್ರಾಣಸಂಕಟದಲ್ಲಿದ್ದಾಗ ಅತ್ಯಲ್ಪ ಬೆಲೆಯ ಕ್ಷುದ್ರ ಧಾನ್ಯಕಣಗಳು ಮಹಾಫಲವಾಗುತ್ತವೆ. ಹೀಗಿರುವಾಗ ನ್ಯಾಯಾರ್ಜಿತ ಸಂಪತ್ತನ್ನು ಸಾವಿರಾರು ಸಂಖ್ಯೆಯಲ್ಲಿ ದಾನ ಮಾಡಿದರೆ ಅನಂತಫಲಪ್ರದ ಎಂದು ಹೇಳಬೇಕಾ?[೪]

ಬ್ರಾಹ್ಮಣರನ್ನು ಆದರಿಸಿ ಎಷ್ಟೆಷ್ಟು ದಾನ ಕೊಡುತ್ತಾನೋ ಅದಕ್ಕೆ ತಕ್ಕಂತೆ ಉತ್ತಮ ಫಲಗಳು ಬಂದೇ ಬರುತ್ತವೆ.[೫]

೮. ದಾನಗಳು ಮೂರುವಿಧ; ೧. ಸತ್ಪಾತ್ರನಾದ ಬ್ರಾಹ್ಮಣನ ಬಳಿ ತಾನೇ ಹೋಗಿ ಅವನನ್ನು ಸತ್ಕರಿಸಿ, ಮಾಡುವ ದಾನವು ಪ್ರಶಂಸಾರ್ಹ ದಾನ; ೨. ಬ್ರಾಹ್ಮಣನು ಯಾಚನೆ ಮಾಡಿದ ಮೇಲೆ ಕೊಡುವ ದಾನ ಮಧ್ಯಮದಾನ; ೩. ಅನಾದರದಿಂದ, ಶ್ರದ್ಧೆಯಿಲ್ಲದೆ ಮಾಡುದ ದಾನ ಅಧಮದಾನ.

---

೧ ಯೋ ಹತ್ವಾ ಗೋಸಹಸ್ರಾಣಿ ನೃಪೋ ದದ್ಯಾದರಕ್ಷಿತಾ।
ಸ ಶಬ್ದಮಾತ್ರಫಲಭಾಗ್ರಾಜಾ ಭವತಿ ತಸ್ಕರಃ॥ - ೧೨೬/೯

೨ ಸ್ವಯಂಭೂರಸೃಜಚ್ಚಾಗ್ರೇ ಧಾತಾರಂ ಲೋಕಪೂಜಿತಮ್।
ಧಾತಾಸೃಜತ್ ಪುತ್ರಮೇಕಂ ಪ್ರಜಾನಾಂ ಧಾರಣೇ ತರಮ್॥
ತಮರ್ಚಯಿತ್ವಾ ವೈಶ್ಯಸ್ತು ಕುರ್ಯಾದತ್ಯರ್ಥಮೃದ್ಧಿಮತ್।
ರಕ್ಷಿತವ್ಯಂ ತು ರಾಜನ್ಯೈರುಪಯೋಜ್ಯಂ ದ್ವಿಜಾತಿಭಿಃ॥ - ೧೨೬/೧೦,೧೧

೩ ಅಜಿಹ್ಮೈರಶಠಕ್ರೋಧೈರ್ಹವ್ಯಕವ್ಯಪ್ರಯೋಕ್ತೃಭಿಃ।
ಶೂದ್ರೈರ್ನಿರ್ಮಾರ್ಜನಂ ಕಾರ್ಯಮೇವಂ ಧರ್ಮೋ ನ ನಶ್ಯತಿ॥ - ೧೨೬/೧೨

೪ ಪ್ರಾಣಸಂತಾಪನಿರ್ದಿಷ್ಟಾಃ ಕಾಕಿಣ್ಯೋಽಪಿ ಮಹಾಫಲಾಃ।
ನ್ಯಾಯೇನೋಪಾರ್ಜಿತಾ ದತ್ತಾಃ ಕಿಮುತಾನ್ಯಾಃ ಸಹಸ್ರಶಃ॥ - ೧೨೬/೧೬

೫ ಸತ್ಕೃತ್ಯ ತು ದ್ವಿಜಾತಿಭ್ಯೋ ಯೋ ದದಾತಿ ನರಾಧಿಪ।
ಯಾದೃಶಂ ತಾದೃಶಂ ನಿತ್ಯಮಶ್ನಾತಿ ಫಲಮೂರ್ಜಿತಮ್॥ - ೧೨೬/೧೭

ಅಭಿಗಮ್ಯ ದತ್ತಂ ತುಷ್ಟ್ಯಾ ಯದ್ಧನ್ಯಮಾಹುರಭಿಷ್ಟುತಮ್ ।
ಯಾಚಿತೇನ ತು ಯದ್ದತ್ತಂ ತದಾಹುರ್ಮಧ್ಯಮಂ ಬುಧಾಃ ॥
ಅವಜ್ಞಯಾ ದೀಯತೇ ಯತ್ತಥೈವಾಶ್ರದ್ಧಯಾಪಿ ಚ ।
ತದಾಹುರಧಮಂ ದಾನಂ ಮುನಯಃ ಸತ್ಯವಾದಿನಃ ॥ - ೧೨೬/೧೮,೧೯

೯. ಮನುಷ್ಯನು ಅನಾದಿಕಾಲದಿಂದ ಸಂಸಾರದಲ್ಲಿ ಮುಳುಗಿದ್ದಾನೆ. ದುಃಖದಿಂದ ಮೇಲೆದ್ದು ಬರಲು ನಿರಂತರ ಪ್ರಯತ್ನ ಮಾಡಬೇಕು.

೧೦. ಬ್ರಾಹ್ಮಣನು ಇಂದ್ರಿಯನಿಗ್ರಹದಿಂದ, ಕ್ಷತ್ರಿಯನು, ಶತ್ರುಗಳನ್ನು ಗೆಲ್ಲುವುದರಿಂದ, ವೈಶ್ಯನು ಐಶ್ವರ್ಯ(ಸಂಪಾದನೆ)ದಿಂದ, ಶೂದ್ರನು ನಿತ್ಯ ತ್ರೈವರ್ಣಿಕರ ಸೇವಾದಕ್ಷತೆಯಿಂದ ಶೋಭಿಸುತ್ತಾನೆ.[೧]

ಪರಾಶರರು ಜನಕರಾಜನಿಗೆ ಉಪದೇಶ ಮುಂದುವರೆಸುತ್ತಾ –

೧. ರಾಜನ್ ಬ್ರಾಹ್ಮಣನು ದಾನ ಪಡೆದು (ಪ್ರತಿಗ್ರಹದಿಂದ) ಸಂಗ್ರಹಿಸಿದ ಐಶ್ವರ್ಯವು, ರಾಜನು ಶಸ್ತ್ರದಿಂದ ಶತ್ರುಗಳಗಳನ್ನು ಗೆದ್ದು ಸಂಗ್ರಹಿಸಿದ ಐಶ್ವರ್ಯವು, ವೈಶ್ಯನು ವ್ಯಾಪಾರಾದಿಗಳನ್ನು ಮಾಡಿ ನ್ಯಾಯವಾಗಿ ಸಂಪಾದಿಸಿದ ಐಶ್ವರ್ಯವು ಕೊನೆಯದಾಗಿ ಶೂದ್ರನು ತ್ರೈವರ್ಣಿಕರ ಸೇವೆಯಿಂದ ಸಂಪಾದಿಸಿದ ಐಶ್ವರ್ಯವು – ಇವು ಅಲ್ಪವಾಗಿದ್ದರೂ ಶ್ಲಾಘನೀಯವೇ. ಇನ್ನು ಧಾರ್ಮಿಕ ಕಾರ್ಯಗಳಲ್ಲಿ ವಿನಿಯೋಗಿಸಿದರಂತೂ ಮಹಾಫಲದಾಯಕಗಳೇ ಸರಿ.[೨]

೨. ನಿತ್ಯವೂ ತ್ರೈವರ್ಣಿಕರ ಸೇವೆಯನ್ನು ಮಾಡುವುದರಿಂದ ಶೂದ್ರನನ್ನು **ಶುಶ್ರೂಷು** ಎನ್ನುತ್ತಾರೆ. ಒಂದು ವೇಳೆ ಬ್ರಾಹ್ಮಣನು ಆಪತ್ಕಾಲದಲ್ಲಿ ಕ್ಷತ್ರಿಯ ಅಥವಾ ವೈಶ್ಯಧರ್ಮ ಪಾಲಿಸಿದರೂ ಪತಿತನೆನಿಸುವುದಿಲ್ಲ ಶೂದ್ರಕರ್ಮ ಮಾಡಿದಲ್ಲಿ ದ್ವಿಜನು ಪತಿತನಾಗುತ್ತಾನೆ.

೩. ಶೂದ್ರನು ಆಪತ್ಕಾಲದಲ್ಲಿ ವ್ಯಾಪಾರ, ಪಶುಪಾಲನೆ, ಶಿಲ್ಪಕಲೆಗಳಿಂದ ಉಪಜೀವನ ಮಾಡಬಹುದು.[೩]

---

೧ ದಮೇನ ಶೋಭತೇ ವಿಪ್ರಾಃ ಕ್ಷತ್ರಿಯೋ ವಿಜಯೇನ ತು ।
ಧನೇನ ವೈಶ್ಯಃ ಶೂದ್ರಸ್ತು ನಿತ್ಯಂ ದಾಕ್ಷ್ಯೇಣ ಶೋಭತೇ ॥ - ೧೨೬/೨೧

೨ ಪ್ರತಿಗ್ರಹಾಗತಾ ವಿಪ್ರೇ ಕ್ಷತ್ರಿಯೇ ಶಸ್ತ್ರನಿರ್ಜಿತಾಃ ।
ವೈಶ್ಯೇ ನ್ಯಾಯಾರ್ಜಿತಾಶ್ಚೈವ ಶೂದ್ರೇ ಶುಶ್ರೂಷಯಾರ್ಜಿತಾಃ ।
ಸ್ವಲ್ಪಾಪ್ಯರ್ಥಾಃ ಪ್ರಶಂಸ್ಯಂತೇ ಧರ್ಮಸ್ಯಾರ್ಥೇ ಮಹಾಫಲಾಃ ॥ -೧೨೭/೧

೩ ವಾಣಿಜ್ಯಂ ಪಾಶುಪಾಲ್ಯಂ ಚ ತಥಾ ಶಿಲ್ಪೋಪಜೀವನಮ್ ।
ಶೂದ್ರಸ್ಯಾಪಿ ವಿಧೀಯಂತೇ ಯದಾ ವೃತ್ತಿರ್ನ ಜಾಯತೇ ॥ - ೧೨೭/೩

ವೇಷಧರಿಸಿ ರಂಗಮಂಟಪದಲ್ಲಿ ನರ್ತಿಸುವುದು, ರಂಗವೇದಿಕೆ ಸಿದ್ಧತೆ, ಮದ್ಯಮಾಂಸ ಮಾರಾಟದಿಂದ ಉಪಜೀವನ, ಲೋಹ-ಚರ್ಮಗಳನ್ನು ಕ್ರಯವಿಕ್ರಯ ಮಾಡುವುದು, ಈ ಕರ್ಮಗಳನ್ನು ಹಿಂದಿನವರು (Fore-fathers, Previous generations) ಮಾಡಿರದಿದ್ದರೆ, ಈ ಜನ್ಮದಲ್ಲಿ ಅವನೂ ಈ ಕೆಲಸಗಳನ್ನು ಮಾಡಿರದಿದ್ದಲ್ಲಿ ಹೊಸದಾಗಿ ಈ ಕರ್ಮಗಳಲ್ಲಿ ಆಸಕ್ತನಾಗಬಾರದು. ಕಾರಣ ಇವು ನಿಂದ್ಯ ಕರ್ಮಗಳು. ಒಂದು ವೇಳೆ, ಹಿಂದಿನ ಪೀಳಿಗೆ ಮಾಡಿದ್ದರೂ, ಇವನು ಬಿಟ್ಟರೆ ಮಹಾಧರ್ಮವೇ ಆಗುತ್ತದೆ ಎಂದು ಶ್ರುತಿಗಳು ಹೇಳುತ್ತವೆ.

೪. ಲೋಕಪ್ರಸಿದ್ಧನಾದ ಪುರುಷನು ಸೊಕ್ಕಿನಿಂದ, ಲೋಭದಿಂದ, ಪಾಪಕರ್ಮ ಮಾಡಿ-ದಲ್ಲಿ ಅದನ್ನು ಇತರರೂ ಅನುಷ್ಠಾನ ಮಾಡಬಾರದೆಂದು ಶಾಸ್ತ್ರ ಹೇಳುತ್ತದೆ[೧] (ಲೋಕದಲ್ಲಿ ಅವನ ಸ್ಥಾನಮಾನ ನೋಡಿ ಯಾರೂ ಅವನನ್ನು ಅನುಸರಿಸಬಾರದು).

೫. ಪ್ರಾಚೀನಕಾಲದಲ್ಲಿ ಧಿಕ್ಕಾರ ಹಾಗೂ ದಂಡದಿಂದ ಶಾಸನವನ್ನು ಪ್ರಜೆಗಳಲ್ಲಿ ಮಾಡುತ್ತಿದ್ದರು. ಆದರೆ ಜಿತೇಂದ್ರಿಯರೂ, ಧರ್ಮಪ್ರಧಾನರೂ, ನ್ಯಾಯೋಚಿತವಾಗಿ ಆಚರಣೆಗಳನ್ನು ಮಾಡುತ್ತಿದ್ದರು. ಲೋಕದಲ್ಲಿ ಮನುಷ್ಯರಿಗೆ ಎಲ್ಲ ಕಾಲದಲ್ಲೂ ಧರ್ಮ ಮಾರ್ಗವೇ ಪ್ರಶಸ್ತವಾದುದು. ಧರ್ಮವೃದ್ಧರಾದ ಮಾನವರು ಯಾವಾಗಲೂ ಈ ಲೋಕದಲ್ಲಿ ಸದ್ಗುಣಗಳನ್ನು ಆಶ್ರಯಿಸಿರುತ್ತಾರೆ.

೬. ಇಂತಹ ಧರ್ಮವನ್ನು ಸಹಿಸದ ಅಸುರರು ಪ್ರಜೆಗಳಲ್ಲಿ ಸೇರಿಕೊಂಡರು (ಅವರ ದೇಹ, ಮನಸ್ಸುಗಳನ್ನು ಕಲುಷಿತಗೊಳಿಸಿದರು).

೭. ಆಗ ಸಹಜವಾಗಿ ಪ್ರಜೆಗಳೂ ದರ್ಪಿಷ್ಠರಾದರು. ನಂತರ ಪ್ರಜೆಗಳೂ ಕ್ರೋಧವಶರಾದರು. ಅವರಲ್ಲಿ ಕ್ರೋಧ ಉಂಟಾಯಿತು. ನಂತರ ಅವರಿಂದ ಸದಾಚಾರ ಲುಪ್ತವಾಯಿತು. ಧರ್ಮಾಚರಣೆ ವಿಷಯದಲ್ಲಿ ಅವರಿಗೆ ಸಂಕೋಚವೂ ಇಲ್ಲದಾಯಿತು (ಧರ್ಮಾಚರಣೆ ಬಿಟ್ಟರು, ಬಿಡಲಿಕ್ಕೆ ಅವರಿಗೆ ಸಂಕೋಚ, ನಾಚಿಕೆಯಾಗಲಿಲ್ಲ). ಪ್ರಜೆಗಳು ಮೋಹಗೊಂಡರು. ಪರಿಣಾಮವಾಗಿ ಒಬ್ಬರನ್ನೊಬ್ಬರು ದ್ವೇಷಿಸುತ್ತಾ, ಸ್ವಾರ್ಥಸುಖಕ್ಕಾಗಿ ಕೊಲ್ಲಲೂ ತಯಾರಾದರು. ಇಂತಹವರ ವಿರುದ್ಧ ಧಿಕ್ಕಾರ ದಂಡ ಪ್ರಯೋಜನವಾಗಲಿಲ್ಲ. ಹೀಗಾಗಿ ವಿನಾಕಾರಣ ದೇವಬ್ರಾಹ್ಮಣರನ್ನು ಅಪಮಾನ ಮಾಡುತ್ತಾ ಸ್ವಚ್ಛಂದವರ್ತನೆ ಆರಂಭವಾಯಿತು (ಪ್ರಜೆಗಳಲ್ಲಿ).

೮. ಇದೇ ಕಾಲದಲ್ಲಿ ದೇವತೆಗಳು ಶಿವನನ್ನು ಶರಣು ಹೊಕ್ಕರು. ದೇವತೆಗಳ ಮೂಲಕ ವೃದ್ಧಿ ಹೊಂದಿದ ಶಿವನು ತೇಜಸ್ಸಿನಿಂದ ಕೂಡಿದ ಒಂದೇ ಬಾಣದಿಂದ ತ್ರಿಪುರಾಸುರರನ್ನು ಸಂಹರಿಸಿ, ಅಸುರರನ್ನು ಭೂಮಿಯ ಮೇಲೆ ಬೀಳಿಸಿದನು. ಈ ಅಸುರಾಧಿಪತಿ ದೇವತೆಗಳಿಗೆಲ್ಲ ಭಯವನ್ನು

---

೧ ಸಂಸಿದ್ಧಃ ಪುರಷೋ ಲೋಕೇ ಯದಾಚರತಿ ಪಾಪಕಮ್ ।
ಮದೇನಾಭಿಪ್ಲುತಮನಾಸ್ತಚ್ಚ ನಗ್ರಾಹ್ಯಮುಚ್ಯತೇ ॥ - ೧೨೭/೬

ಹುಟ್ಟಿಸುತ್ತಿದ್ದನು. ಭಯ ಜನಕನಾಗಿದ್ದನು. ಇವನು ಶೂಲಪಾಣಿಯಿಂದ ಹತನಾದನು. ಅವನು ಹತನಾಗಲು ಪ್ರಜೆಗಳು ಮೊದಲಿನಂತೆ ವೇದಶಾಸ್ತ್ರಗಳಲ್ಲಿ ಪ್ರವೃತ್ತರಾದರು. ಆಮೇಲೆ ಸಪ್ತರ್ಷಿಗಳು ಸ್ವರ್ಗದಲ್ಲಿ ಇಂದ್ರನನ್ನು ದೇವತಾರಾಜನನ್ನಾಗಿ ಅಭಿಷೇಕ ಮಾಡಿದರು. ಭೂಲೋಕದಲ್ಲಿ ಪ್ರಜಾಶಾಸನವನ್ನು ಅವರೇ ನಡೆಸಿದರು.

ಸಪ್ತರ್ಷಿಗಳು ಭೂಲೋಕವಾಳುವಾಗ **ವಿಪೃಥು**ವೆಂಬ ರಾಜನು ಭೂಮಿಯಿಂದ ಊರ್ಧ್ವಲೋಕದವರೆಗೆ ರಾಜನಾದನು. ಬೇರೆ ಬೇರೆ ಭೂಭಾಗಗಳಿಗೆ ಬೇರೆ ಬೇರೆ ರಾಜರೂ ಆದರು. ಆ ಕಾಲದಲ್ಲಿ ಒಳ್ಳೆಯ ರಾಜರೂ ಇದ್ದರು. ಹಿಂದಿನ ಕಾಲದ ಸಂಪ್ರದಾಯ ಬಲ್ಲ ವೃದ್ಧ ಪುರುಷರೂ ಇದ್ದರು. ಹೀಗಿದ್ದರೂ ಅವರ ಹೃದಯದಿಂದ ಅಸುರೀಭಾವ ಪೂರ್ಣ ಹೋಗಿರಲಿಲ್ಲ. ಆದ್ದರಿಂದ ಅದೇ ಭಾವದಿಂದ ರಾಜರೂ ಕೂಡಾ ಅನೇಕ ಅಸುರೀ ಕರ್ಮಗಳನ್ನು ಆಚರಿಸಿದರು. ಈಗಲೂ ಅಂತಹ ಮೂರ್ಖರಾಜರು ಇದ್ದಾರೆ. ತಮ್ಮ ವಿಚಾರಗಳನ್ನು ಬೇರೆಯವರ ಮೇಲೆ ಹೇರುತ್ತಾರೆ. ಜನರೂ ಇಂತಹ ಬಾಲಿಶ ಮತಿಯ ಅಸುರರನ್ನು ಅನುಸರಿಸುತ್ತಾರೆ.

೧೦. ಆದ್ದರಿಂದ ಜನಕನೇ! ನಾನು ಶಾಸ್ತ್ರಮರ್ಯಾದಾ ಚಿಂತನೆ ಮಾಡಿ ಮನುಷ್ಯನು ಸಿದ್ಧಿ ಹೊಂದಲು ಹಿಂಸಾತ್ಮಕ ಕರ್ಮಗಳನ್ನು ತ್ಯಜಿಸಿ ವಿಹಿತಕರ್ಮಗಳನ್ನೇ ಮಾಡಬೇಕು ಎಂದು ಹೇಳುತ್ತೇನೆ.

೧೧. ಧರ್ಮನಿರತನಾದ ಮನುಷ್ಯನು ನ್ಯಾಯಮಾರ್ಗವನ್ನು ಬಿಟ್ಟು ಪಾಪಮಾರ್ಗದಿಂದ ಧನಸಂಗ್ರಹ ಮಾಡಬಾರದು. ಅಂತಹ ಧನವು ಕಲ್ಯಾಣಕರವಲ್ಲ.

ಜನಕನೇ! ನೀನು ನ್ಯಾಯಮಾರ್ಗದಲ್ಲಿ ಐಶ್ವರ್ಯ ಸಂಗ್ರಹಿಸುತ್ತಾ ಜಿತೇಂದ್ರಿಯನಾಗಿ ಕ್ಷತ್ರಿಯನಾಗಿ ಬಾಂಧವಪ್ರಿಯನಾಗಿ ಪ್ರಜೆಗಳನ್ನು, ಭೃತ್ಯರನ್ನು ನಿನ್ನ ಮಕ್ಕಳನ್ನು ಧರ್ಮದಿಂದ ಸಂರಕ್ಷಿಸು.

೧೨. ನಿನಗೆ ಸದ್ಗುಣಗಳಲ್ಲಿ ಆಸಕ್ತಿ ಇರಲಿ. ದುರ್ಗುಣದಿಂದ ದೂರನಾಗು. ದುರ್ಬುದ್ಧಿಯ ಮನುಷ್ಯನು ಪರಮಾತ್ಮನಿಗಿಂತ ದೊಡ್ಡವನೆಂದು ಮೂರ್ಖತನದಿಂದ ಮಾತನಾಡುತ್ತಾನೆ.

೧೩. ಮನುಷ್ಯರಲ್ಲಿ ಮಾತ್ರ ಧರ್ಮಾಧರ್ಮ ಪರಿಜ್ಞಾನ ಸಾಧ್ಯ. ಪ್ರಾಣಿಗಳಲ್ಲಿ ಅವು ಸಾಧ್ಯವಿಲ್ಲ.

೧೪. ಧರ್ಮಶೀಲನಾದ ವಿದ್ವಾಂಸನು ಪ್ರಾಪಂಚಿಕ ಸುಖದ ಅಪೇಕ್ಷೆಯುಳ್ಳವನಾಗಿರಲಿ, ತೊರೆದಿರಲಿ, ಆದರೆ ಪ್ರಪಂಚದ ಎಲ್ಲ ಪ್ರಾಣಿಗಳಲ್ಲಿ ಪರಮಾತ್ಮನಿದ್ದಾನೆಂದು ನೋಡುತ್ತಾ ಯಾರನ್ನೂ ಹಿಂಸಿಸದೆ ಜೀವನ ನಡೆಸಲಿ.

**ಧರ್ಮಶೀಲೋ ನರೋ ವಿದ್ವಾನೀಹಕೋಽನೀಹಕೋಽಪಿ ವಾ।**
**ಆತ್ಮಭೂತಃ ಸದಾ ಲೋಕೇ ಚರೇದ್ ಭೂತಾನ್ಯಹಿಂಸಯನ್ ॥ - ೧೨೭/೨೯**

೧೫. ಯಾವಾಗ ಮನುಷ್ಯನ ಮನಸ್ಸು ದುಷ್ಟಕಾಮನೆಗಳಿಂದ ಪೂರ್ವಜನ್ಮದ ಸಂಸ್ಕಾರಗಳಿಂದ ರಹಿತವಾಗುತ್ತದೊ, ಮಿಥ್ಯಾಜ್ಞಾನದಿಂದ ಅಹಂಕಾರದಿಂದ ದೂರವಾಗುತ್ತದೋ, ಅನಾದಿ ಕಾಮಕರ್ಮದಿಂದ ಮುಕ್ತನಾದ ಅವನು ಪರಮಕಲ್ಯಾಣ ಹೊಂದುತ್ತಾನೆ.[೧]

ಪರಾಶರರು ಜನಕನಿಗೆ ಉಪದೇಶ ಮುಂದುವರೆಸಿದರು. (ಅ. ೧೨೮)

ಜನಕರಾಜನೇ! ಗೃಹಸ್ಥನ ಧರ್ಮದ ವಿಧಿ ಹೇಳಲಾಗಿದೆ. ಈಗ ತಪಸ್ಸಿನ ವಿಧಿ ವಿಧಾನ-ಗಳನ್ನು ಹೇಳುವೆನು ಕೇಳು.

೧. ಪ್ರಾಯಃ ಗೃಹಸ್ಥನಿಗೆ ರಾಜಸ, ತಾಮಸ, ಭಾವಗಳ ಸಂಸರ್ಗದಿಂದಾಗಿ ವಸ್ತುಗಳಲ್ಲಿ ಹಾಗೂ ಕ್ರಿಯೆಗಳಲ್ಲಿ ಮಮತೆಯುಂಟಾಗುತ್ತದೆ. ಗೃಹಸ್ಥ ಪುರುಷನನ್ನು ಹಸುಗಳು, ಕೃಷಿಕ್ಷೇತ್ರ, ಧನ, ಕನಕ, ಪತ್ನಿಪುತ್ರರು, ಭೃತ್ಯರು ಆಶ್ರಯಿಸಿರುತ್ತಾರೆ. ಇವುಗಳಲ್ಲಿ ಆಸಕ್ತನಾದ ಗೃಹಸ್ಥನಿಗೆ ಅವುಗಳ ಯೋಗಕ್ಷೇಮವನ್ನು ವಹಿಸುವುದರಿಂದಾಗಿ, ಅವುಗಳು ಅನಿತ್ಯ ಪದಾರ್ಥಗಳಾಗಿದ್ದರೂ, ಅವನ ಮನಸ್ಸಿನಲ್ಲಿ ರಾಗದ್ವೇಷಗಳು (ಬೇಕಾದ ಪದಾರ್ಥಗಳ ಬಗ್ಗೆ ರಾಗ, ಬೇಡವಾದ ಪದಾರ್ಥಗಳ ಬಗ್ಗೆ ದ್ವೇಷ) ಹೆಚ್ಚಾಗುತ್ತಾ ಹೋಗುತ್ತವೆ. ರಾಗದ್ವೇಷಕ್ಕೆ ವಶನಾಗಿ, ಧನದಲ್ಲಿಯೇ ಹೆಚ್ಚು ಆಸಕ್ತನಾದಾಗ, ಅವುಗಳಲ್ಲಿ ಮೇಲಿನ ಮೋಹದಿಂದಾಗಿ ಹುಟ್ಟುವ ಅನುರಾಗವೆಂಬ ಕನ್ಯೆ ಅವನ ಬಳಿ ಬರುತ್ತಾಳೆ (ವಸ್ತುಗಳೇ ತನಗೆ ತಾರಕವೆಂಬ ಮಿಥ್ಯಾಜ್ಞಾನ, ತಪ್ಪು ತಿಳುವಳಿಕೆ, ಮೋಹ). ಪರಿಣಾಮವಾಗಿ ತಾನು ಕೃತಾರ್ಥನೆಂದು ಭಾವಿಸಿ(ಭ್ರಮಿಸಿ) ಗ್ರಾಮ್ಯ ಸುಖಗಳು, ವೈಷಯಿಕ ಸುಖಗಳು ತ್ಯಾಜ್ಯವಾದರೂ, ಅವುಗಳಲ್ಲಿಯೇ ಪೂರ್ಣಾಸಕ್ತನಾಗಿ ಅದಕ್ಕಿಂತ ಮತ್ತೊಂದು ಉತ್ತಮ ಸುಖವನ್ನು ನೋಡದಾಗುತ್ತಾನೆ. ಅನಂತರ ತನ್ನ ಕುಟುಂಬ, ಬಂಧುಜನಗಳ ಪೋಷಣೆಗಾಗಿ ಧನಸಂಪಾದನೆಗೆ ಇಚ್ಛಿಸುತ್ತಾನೆ. ತಾನು ಮಾಡುವುದೆಲ್ಲ ಅಕಾರ್ಯವೆಂದು ತಿಳಿದಿದ್ದರೂ, ಅದರಲ್ಲಿಯೇ ಆಸಕ್ತನಾಗುತ್ತಾನೆ (ಮಕ್ಕಳ ಪೋಷಣೆಯಲ್ಲಿ). ಕೊನೆಗೆ ಆ ಪ್ರೀತಿಯು ನಾಶವಾದಾಗ ದುಃಖಿಯಾಗುತ್ತಾನೆ. ಇಷ್ಟಕ್ಕೆ ಮುಗಿಯದ ಭಾರೀ ಅಭಿಮಾನದಿಂದ ಕೂಡಿದ ಜೀವನು ತನಗಾದ ಪರಾಜಯವನ್ನು ರಕ್ಷಿಸಿಕೊಳ್ಳಲು ಯಾವಾಗಲೂ ಪ್ರಯತ್ನಿಸುತ್ತಿರುತ್ತಾನೆ. ನಾನು ಎಲ್ಲ ಭೋಗಗಳನ್ನು ಹೊಂದಬೇಕೆಂದು ಎಲ್ಲ ಕಾರ್ಯ ಮಾಡುತ್ತಲೇ ಆಸೆಗಳು ಪೂರ್ಣವಾಗದೆ ಒಂದು ದಿನ ಸಾಯುತ್ತಾನೆ.

---

೧ ಯದಾ ವ್ಯಪತೇ ಹೃಲ್ಲೇಖಂ ಮನೋ ಭವತಿ ತಸ್ಯ ವೈ।
ನಾನೃತಂ ಚೈವ ಭವತಿ ತದಾ ಕಲ್ಯಾಣಮೃಚ್ಛತಿ ॥ - ೧೨೭/೩೦

೨. ಆದರೆ ವಿವೇಕಿಗಳಿಗೆ ಎಲ್ಲೆಲ್ಲೂ ಬ್ರಹ್ಮನಿದ್ದಾನೆಂದು ತಿಳಿದವರಿಗೆ ಬ್ರಹ್ಮದರ್ಶನವೆಂಬ ತಪಸ್ಸೇ ಶಾಶ್ವತವಾದುದು. ಯಾರು ಗ್ರಾಮ್ಯ ಸುಖವನ್ನು ತ್ಯಾಗ ಮಾಡುವರೋ, ಶುಭಕರ್ಮಗಳನ್ನು ಬಯಸುತ್ತಾರೋ, ಅವರು ಶಾಶ್ವತ ಸುಖ ಹೊಂದುತ್ತಾರೆ.[೧]

ಸಂಸಾರದಲ್ಲಿರುವವನು ತಮ್ಮ ಸ್ನೇಹ ಪ್ರೀತಿಗಳಿಗೆ ಆಧಾರ ಭೂತರಾದ ಹೆಂಡತಿ, ಮಕ್ಕಳ ಹಾಗೂ ಸಂಪತ್ತಿನ ನಾಶದಿಂದ, ಆಧಿವ್ಯಾಧಿಗಳ ಪೀಡೆಯಿಂದ ವೈರಾಗ್ಯ ಹೊಂದುತ್ತಾನೆ. ವೈರಾಗ್ಯದಿಂದ ಆತ್ಮತತ್ತ್ವದಲ್ಲಿ ಜಿಜ್ಞಾಸೆ, ಶಾಸ್ತ್ರಾಧ್ಯಯನದಲ್ಲಿ ಆಸಕ್ತಿ, ಶಾಸ್ತ್ರಾಧ್ಯಯನದಿಂದ ಶ್ರೇಯಸ್ಸಾಧ್ಯವಾದ ತಪಸ್ಸನ್ನು ಮನಗಾಣುತ್ತಾನೆ.

ಪ್ರಿಯರಾದ ಹೆಂಡತಿ, ಮಕ್ಕಳು ಮೊದಲಾದವರ ಸಂಗದಿಂದ ಸಿಗುವ ಸುಖವು ಕ್ಷೀಣಿಸದ ನಂತರವಾದರೂ, ಭಗವತ್ಪ್ರಜ್ಞೆ ಬೆಳಗಿಸಿಕೊಂಡು ಜಗತ್ತೆಲ್ಲ ಅಸಾರವೆಂದು ತಿಳಿಯುವ ನರನು ದುರ್ಲಭನೇ. ಮನೋನಿಗ್ರಹವುಳ್ಳವನು ಯಾರೇ ಆಗಲೀ ತಪಸ್ಸನ್ನು ಮಾಡಿ ಸ್ವರ್ಗಕ್ಕೆ ಹೋಗಬಹುದು.

ಹಿಂದೆ ಬ್ರಹ್ಮನು ಕುಡಾ ಭಗವಂತನನ್ನು ಕುರಿತು ತಪಸ್ಸು ಮಾಡಿದ ಮೇಲೆ ಪ್ರಜೆಗಳನ್ನು ಸೃಷ್ಟಿ ಮಾಡಿದನು. ಆದಿತ್ಯರು ರುದ್ರರು, ವಸುಗಳು, ಪಿತೃಗಳು, ಮರುದ್ಗಣಗಳು, ಯಕ್ಷರಾಕ್ಷಸಗಂಧರ್ವರು ಮೊದಲಾದವರೆಲ್ಲ ತಪಸ್ಸಿನಿಂದಲೇ ಸಿದ್ಧಿಯನ್ನು ಗಳಿಸಿದರು.

ಹಿಂದೆ ಬ್ರಹ್ಮನಿಂದ ಸೃಷ್ಟರಾದ ಮರೀಚ್ಯಾದಿ ಬ್ರಾಹ್ಮಣರು ತಪಸ್ಸಿನಿಂದಲೇ ಪೃಥಿವೀ, ಸ್ವರ್ಗಗಳನ್ನು ಪವಿತ್ರಿಕರಿಸುತ್ತಾ ಸಂಚರಿಸಿದರು.

ಮನುಷ್ಯಲೋಕದಲ್ಲೂ ಜನಿಸಿದ ರಾಜರು, ಗೃಹಸ್ಥರು,ಅವರು ಮಹಾಕುಲಗಳಲ್ಲಿ ಹುಟ್ಟಲು ತಪಸ್ಸೇ ಕಾರಣ. ರೇಷ್ಮೆ ವಸ್ತ್ರಗಳು, ಸುಂದರವಾದ ಆಭರಣಗಳು, ವಾಹನಗಳು, ಆಸನಗಳು, ಪಾನೀಯಗಳು, ಅವರವರ ಮನಸ್ಸಿಗೆ ಅನುಕೂಲರಾಗಿ ಹೊಂದಿಕೊಂಡು ನಡೆಯುವ ಸುಂದರವಾದ ಯುವತಿಯರನ್ನು ಹೊಂದುವುದು, ವಿಸ್ತಾರವಾದ ಮಹಡಿ ಗಳುಳ್ಳ ಮನೆಗಳಲ್ಲಿ ವಾಸಿಸುವುದು, ಉತ್ತಮ ಹಾಸಿಗೆ, ವಿವಿಧ ಭಕ್ಷ್ಯಭೋಜ್ಯಗಳು, ಇಚ್ಛಿಸುವ ಪದಾರ್ಥಗಳನ್ನು ಹೊಂದುವುದು, ಮೊದಲಾದವುಗಳನ್ನು ಮೂರು ಲೋಕದಲ್ಲಿ ಹೊಂದುವುದೇನಿವೆಯೋ ಅದೆಲ್ಲ ತಪಸ್ಸಿನ ಫಲವೇ. ತಪಸ್ಸಿನಿಂದ ಸಿಗದಿರುವ ಪದಾರ್ಥಗಳೇ ಇಲ್ಲ, ತಪಸ್ಸಿಲ್ಲದವರಿಗೆ ಯಾವ ಸುಖಭೋಗಗಳು ಸಿಗುವುದಿಲ್ಲ.

ಅದಕ್ಕಾಗಿ ಮನಸ್ಸು ಬುದ್ಧಿಗಳಿಂದ ಶಾಸ್ತ್ರವನ್ನು ಚೆನ್ನಾಗಿ ಪರಿಶೀಲಿಸಿ, ಸುಖದುಃಖ ಗಳಲ್ಲಿದ್ದಾಗಲೂ ಲೋಭ ಬಿಡಬೇಕು.

---

೧ ತಪೋ ಹಿ ಬುದ್ಧಿಯುಕ್ತಾನಾಂ ಶಾಶ್ವತಂ ಬ್ರಹ್ಮದರ್ಶನಮ್ ।
ಅನ್ವಿಚ್ಛತಾಂ ಶುಭಂ ಕರ್ಮ ನರಾಣಾಂ ತ್ಯಜತಾಂ ಸುಖಮ್ ॥ - ೧೨೮/೧೦

ಅತೃಪ್ತಿ (ಅಸಂತೋಷ), ದುಃಖಕ್ಕೆ ಕಾರಣ. ಲೋಭದಿಂದಲೇ ಇಂದ್ರಿಯಚಾಂಚಲ್ಯ. ಇದರಿಂದ ಏಕಾಗ್ರತೆಯಿಲ್ಲ 'ಆದರ ಪರಿಣಾಮವಾಗಿ ಏಕಾಗ್ರತೆಯಿಂದ ಶಾಸ್ತ್ರಗಳ ಅಭ್ಯಾಸ ಮಾಡದಿರುವ ವಿದ್ಯೆ ನಾಶವಾಗುವಂತೆ ಮನುಷ್ಯನ ಪ್ರಜ್ಞೆ ಸಾಗುತ್ತದೆ. ಆಗಲೇ ಕಾರ್ಯಾಕಾರ್ಯಜ್ಞಾನ ತಿಳಿಯುವುದಿಲ್ಲ. ಅದರಿಂದ ಸುಖನಾಶ, ದುಃಖಪ್ರವೇಶ. ಅದರ ಪರಿಹಾರ ಉಗ್ರ ತಪಸ್ಸೇ, ಬೇರೇನಿಲ್ಲ. ಮನಸ್ಸಿಗೆ ಅನುಕೂಲಕರವಾದುದು ಸುಖ. ಪ್ರತಿಕುಲವಾದುದು ದುಃಖ. ತಪಗೈಯಲು ಸುಖ, ಮಾಡದಿದ್ದರೆ ದುಃಖ. ಆದ್ದರಿಂದ ಏನು ಮಾಡಬೇಕೆಂದು ನೀನೇ ನಿರ್ಧರಿಸು. ದೋಷರಹಿತವಾದ ತಪಸ್ಸನ್ನು ಮಾಡುವುದರಿಂದ ನಿತ್ಯವೂ ಮಂಗಳಕರವಾದ ಬದುಕನ್ನು ಹೊಂದುತ್ತಾನೆ. ವಿಹಿತ ಭೋಗಗಳನ್ನು ಅನುಭವಿಸುತ್ತಾನೆ. ಲೋಕದಲ್ಲಿ ಪ್ರಕಾಶಕನಾಗುತ್ತಾನೆ. ಖ್ಯಾತಿ ಗಳಿಸುತ್ತಾನೆ. ತಪಸ್ಸನ್ನು ಮಾಡದಿದ್ದರೆ ಅಪ್ರಿಯಸುಖ, ಅವಮಾನ, ದುಃಖಗಳನ್ನು ಅನುಭವಿಸುತ್ತಾನೆ. ಕೇವಲ ಲೌಕಿಕ ಸುಖಗಳನ್ನು ಬಯಸಿ ಸನ್ಮಾರ್ಗ ಬಿಟ್ಟವನು ಲೌಕಿಕ ಸುಖಮಾತ್ರ ಹೊಂದಿ ಕೊನೆಗೆ ದುಃಖಿಯಾಗುತ್ತಾನೆ.[೧]

ಕೇವಲ ಲೋಕಪ್ರಜ್ಞೆಯುಳ್ಳವನಿಗೆ ಧರ್ಮ, ತಪಸ್ಸು, ದಾನಗಳಲ್ಲಿ ಸಂಶಯವಿರುತ್ತದೆ. ಪರಿಣಾಮವಾಗಿ ಧರ್ಮವಿಮುಖನಾಗಿ ಅನೇಕ ಪಾಪಗಳನ್ನು ಹೊಂದಿ ನರಕಕ್ಕೆ ಹೋಗುತ್ತಾನೆ.[೨]

ಎಲೈ ನರೋತ್ತಮನೇ! ಸುಖದಲ್ಲಿಯೇ ಇರಲಿ, ದುಃಖದಲ್ಲಿಯೇ ಇರಲಿ, ತನಗೆ ವಿಹಿತವೃತ್ತಿಯಿಂದ ಯಾರು ವಿಚಲಿತನಾಗುವುದಿಲ್ಲವೋ, ಅವನೇ ಶಾಸ್ತ್ರವೆಂಬ ಕಣ್ಣುಳ್ಳ ಮಾನವನು.[೩]

ಬಿಲ್ಲಿನಿಂದ ಹೊರಟ ಬಾಣವು ಎಲ್ಲಿಯವರೆಗೆ ಆಕಾಶದಲ್ಲಿ ಸಾಗುವುದೋ, ಅಷ್ಟು ಕಾಲ ಮಾತ್ರ ವಿಷಯ ಸುಖವನ್ನು ಹೊಂದುವ ಜೀವನು ಸ್ಪರ್ಶೇಂದ್ರಿಯ, ನಾಲಿಗೆ, ಕಣ್ಣು, ಮೂರು, ಕಿವಿಗಳ ಮೂಲಕ ಸುಖವನ್ನು ಹೊಂದುತ್ತಾನೆ. ಆದರೆ ಬಾಣವು ಯಾವಾಗ ಕೆಳಗೆ

---

೧ ನಿತ್ಯಂ ಭದ್ರಾಣಿ ಪಶ್ಯಂತಿ ವಿಷಯಾಂಶ್ಚೋಪಭುಂಜತೇ।
ಪ್ರಾಕಾಶ್ಯಂ ಚೈವ ಗಚ್ಛಂತಿ ಕೃತ್ವಾ ನಿಷ್ಕಲ್ಮಷಂ ತಪಃ॥
ಅಪ್ರಿಯಾಣ್ಯವಮಾನಾಂಶ್ಚ ದುಃಖಂ ಬಹುವಿಧಾತ್ಮಕಮ್।
ಫಲಾರ್ಥೀ ಸತ್ಪಥತ್ಯಕ್ತಃ ಪ್ರಾಪ್ನೋತಿ ವಿಷಯಾತ್ಮಕಮ್॥ – ೧೨೮/೨೮,೨೯

೨ ಧರ್ಮೇ ತಪಸಿ ದಾನೇ ಚ ವಿಚಿಕಿತ್ಸಾಸ್ಯ ಜಾಯತೇ।
ಸ ಕೃತ್ವಾ ಪಾಪಕಾನ್ಯೇವ ನಿರಯಂ ಪ್ರತಿಪದ್ಯತೇ॥ – ೧೨೮/೩೦

೩ ಸುಖೇ ತು ವರ್ತಮಾನೋ ವೈ ದುಃಖೇ ವಾಪಿ ನರೋತ್ತಮ।
ಸ್ವವೃತ್ತಾದ್ಯೋ ನ ಚಲತಿ ಶಾಸ್ತ್ರಚಕ್ಷುಃ ಸ ಮಾನವಃ॥ – ೧೨೮/೩೧

ಬೀಳುತ್ತದೋ, ವಿಷಯಸುಖಗಳೂ ಅಷ್ಟೇ ಬೇಗ ಹೋಗಿ ಬಿಡುತ್ತವೆ. ಹೀಗೆ ವಿಷಯಸುಖಗಳು ಕ್ಷಣಿಕವೆಂದು ಭಾವ.[೧]

ಆದ್ದರಿಂದ ಜ್ಞಾನಿಗಳು ತಪಸ್ಸಿನ ಫಲಕ್ಕಾಗಿ ಆಸಕ್ತಿಯುಳ್ಳವನಿಗೆ ವೈರಾಗ್ಯಾದಿ ಗುಣಗಳು ಬರುತ್ತವೆ. ಅವನು ಧರ್ಮಮಾರ್ಗದಲ್ಲಿಯೇ ಇರುವುದರಿಂದ ಅವನಿಗೆ ಧರ್ಮಾರ್ಥಗಳಿಂದ ವಂಚಿತನಾಗುವುದಿಲ್ಲ.

ಗೃಹಸ್ಥನು ತಾನಾಗಿ ಬರುವ ವಿಷಯಸುಖಗಳನ್ನು ಮಾತ್ರ ಅನುಭವಿಸಬೇಕು. ಅದಕ್ಕಾಗಿ ವಿಶೇಷ ಪ್ರಯತ್ನ ಮಾಡಬಾರದು. ಪ್ರಯತ್ನಪೂರ್ವಕವಾಗಿ ಸ್ವಧರ್ಮಾಚರಣೆ ಮಾಡಬೇಕು. ಇದೇ ಸ್ವಧರ್ಮವೆಂದು ನನ್ನ ಅಭಿಮತ.[೨]

ಹೇಗೆ ನದೀನದಗಳು ಸಾಗರವನ್ನೇ ಆಶ್ರಯಿಸುತ್ತವೋ ಅದರಂತೆ ಎಲ್ಲ ಆಶ್ರಮಗಳು ಗೃಹಸ್ಥಾಶ್ರಮವನ್ನೇ ಆಶ್ರಯಿಸಿವೆ. ಆದ್ದರಿಂದ ಗೃಹಸ್ಥಧರ್ಮವನ್ನು ಅತ್ಯಂತಶ್ರದ್ಧೆಯಿಂದ ಆಚರಿಸಿ ಸದ್ಗತಿ ಹೊಂದಲು ಪ್ರಯತ್ನಿಸಬೇಕು.

ಜನಕರಾಜನಿಗೆ ಪರಾಶರಮುನಿಗಳು ಮುಂದುವರಿಸುತ್ತಾರೆ – ಉಪದೇಶವನ್ನು –

ಜನಕರಾಜನ ಪ್ರಶ್ನೆ 'ವಿಶೇಷ ವರ್ಣ ಎನ್ನಿಸಿದ ಬ್ರಾಹ್ಮಣ ವರ್ಣದಿಂದ ಬೇರೊಂದು ವರ್ಣವು ಹೇಗೆ ಹುಟ್ಟುತ್ತದೆ'.

ವರ್ಣೋ ವಿಶೇಷವರ್ಣಾನಾಂ ಮಹರ್ಷೇ ಕೇನ ಜಾಯತೇ ।

ಮನುಷ್ಯನಿಂದ ಯಾವ ಸಂತತಿಯು ಹುಟ್ಟುತ್ತದೋ ಆ ಸಂತಾನವು ಮಗನೇ. ಮಗನ ಸ್ವರೂಪ ಎಂದು ಶ್ರುತಿ ಹೇಳುತ್ತದೆ. ಬ್ರಾಹ್ಮಣನಿಂದ ಹುಟ್ಟಿದ ಮಗನು ಬ್ರಾಹ್ಮಣನೇ ಆಗಬೇಕು. ಹೀಗಿರುವಾಗ ಬ್ರಾಹ್ಮಣನಿಂದ ಹುಟ್ಟಿದವನು ವಿಶೇಷ ಜಾತಿ ಹೇಗೆ ಹೊಂದಿದನು?[೩]

ಪರಾಶರರು ಉತ್ತರಿಸುತ್ತಾರೆ.

ಯಾರು ಯಾರಿಂದ ಹುಟ್ಟುತ್ತಾರೋ, ಅವನು ಅವನೇ ಆಗುತ್ತಾನೆ. ಆದರೆ ತಪಸ್ಸಿನ ನ್ಯೂನತೆಯ ಕಾರಣದಿಂದ ಬ್ರಾಹ್ಮಣನಿಂದ ಕ್ಷತ್ರಿಯ ಜಾತಿಯ ವ್ಯಕ್ತಿ ಹುಟ್ಟುತ್ತಾನೆ.

---

೧ ಇಷುಪ್ರಪಾತಮಾತ್ರಂ ಹಿ ಸ್ಪರ್ಶಯೋಗೇ ರತಿಃ ಸ್ಮೃತಾ ।
ರಸನೇ ದರ್ಶನೇ ಘ್ರಾಣೇ ಶ್ರವಣೇ ಚ ವಿಶಾಂ ಪತೇ ॥ – ೧೨೮/೩೨

೨ ಅಪ್ರಯತ್ನಾಗತಾಃ ಸೇವ್ಯಾ ಗೃಹಸ್ಥೈರ್ವಿಷಯಾಃ ಸದಾ ।
ಪ್ರಯತ್ನೇನೋಪಗಮ್ಯಶ್ಚ ಸ್ವಧರ್ಮ ಇತಿ ಮೇ ಮತಿಃ ॥ – ೧೨೮/೩೫

೩ ಯದೇತತ್ ಜಾಯತೇಽಪತ್ಯಂ ಸ ಏವಾಯಮಿತಿ ಶ್ರುತಿಃ ।
ಕಥಂ ಬ್ರಾಹ್ಮಣತೋ ಜಾತೋ ವಿಶೇಷಗ್ರಹಣಂ ಗತಃ ॥ – ೧೨೯/೨

ಕ್ಷೇತ್ರವು (ಪತ್ನಿ) ಉತ್ತಮವಾಗಿದ್ದು ಉತ್ತಮ ಬೀಜವಿದ್ದಲ್ಲಿ (ಪತಿ) ಹುಟ್ಟುವ ಚೇತನ ಪುಣ್ಯಪುರುಷನಾಗಿರುತ್ತಾನೆ. ಕ್ಷೇತ್ರ, ಬೀಜಗಳೆರಡರಲ್ಲಿಯೂ ಒಂದರಲ್ಲಿ ನ್ಯೂನತೆಯಿದ್ದಲ್ಲಿ ಅಧಮ ಸಂತಾನ ಹುಟ್ಟುತ್ತದೆ.[೧]

ಚತುರ್ಮುಖನ ನಾಲ್ಕು ಅಂಗಗಳಿಂದ ನಾಲ್ಕು ವರ್ಣಗಳು ಹುಟ್ಟಿದ್ದಾರೆ. ಇವರಿಗಿಂತ ಬೇರೆಯಾದವರು ಅವರೆಲ್ಲ ಸಂಕರ ಜಾತಿಯವರೇ.

ರಾಜನ್! ಕ್ಷತ್ರಿಯ, ಅತಿರಥ, ಅಂಬಷ್ಠ ಉಗ್ರ, ವೈದೇಹ, ಶ್ವಪಾಕ, ಪುಲ್ಕಸ, ಸ್ತೇನ, ನಿಷಾದ, ಸೂತ, ಮಾಗಧ, ಆಯೋಗ, ಕರಣ, ವ್ರಾತ್ಯ, ಚಂಡಾಲ ಇವರೆಲ್ಲ ಬ್ರಾಹ್ಮಣಾದಿ ನಾಲ್ಕು ವರ್ಣಗಳಲ್ಲಿ ಅನುಲೋಮ, ವಿಲೋಮವರ್ಣಗಳ ಸ್ತ್ರೀಪುರುಷರ ಸಂಗದಿಂದ ಹುಟ್ಟಿದವರು.

ಜನಕರಾಜನು ಪ್ರಶ್ನಿಸುತ್ತಾನೆ.

ಚತುರ್ಮುಖಬ್ರಹ್ಮನಿಂದ ಹುಟ್ಟಿದ ಇವರು ಗೋತ್ರಗಳಿಂದ ಬೇರೆ ಹೇಗಾದರು? ಅನೇಕ ಗೋತ್ರಗಳಿಗೆ ಕಾರಣವೇನು. ಮುನಿಗಳು ಎಲ್ಲೆಲ್ಲಿ ಜನಿಸಿದ್ದಾರೆ?

ಶೂದ್ರಯೋನಿಯಲ್ಲಿ ಉತ್ಪನ್ನರಾದವರು ಯಾರು? ವಿಪರೀತಯೋನಿಗಳಲ್ಲಿ ಉತ್ಪತ್ತಿ ಪಡೆದವರು ಯಾರು?

ಪರಾಶರರು ಉತ್ತರಿಸುತ್ತಾರೆ.

ತಪಸ್ಸಿನಿಂದ ಪವಿತ್ರರಾದ ಮಹಾತ್ಮರ ಜನ್ಮವು ನಿಕೃಷ್ಟ ಕ್ಷೇತ್ರದಲ್ಲಿ ಆಗಿದ್ದರೂ, ಆ ಜನ್ಮ ಗ್ರಾಹ್ಯವೇ ಆಗಿದೆ. ಯೋಗ್ಯತಾಸಂಪಾದನೆ ಮಾಡಿ ಜನಿಸಿದ ಮುನಿಗಳು ಎಲ್ಲೆಲ್ಲಿ ಸಂತಾನ ಪಡೆದಿದ್ದಾರೋ, ಅಲ್ಲಿ ತಮ್ಮ ತಪಸ್ಸಿನ ಪ್ರಭಾವದಿಂದ ತಮ್ಮ ಮಕ್ಕಳಿಗೆ ಋಷಿತ್ವವನ್ನೂ ಸಾಧಿಸಿಕೊಟ್ಟಿದ್ದಾರೆ.[೨]

ಉದಾಹರಣೆಗೆ – ಪರಾಶರರ ಪಿತಾಮಹ ವಸಿಷ್ಠ ಕಶ್ಯಪಗೋತ್ರದ ಋಷ್ಯಶೃಂಗ, ವಟ, ತಾಂಡ್ಯ, ಕೃಪ, ಕಕ್ಷೀವಾನ್, ಕಮಠ ಮೊದಲಾದವರು. ಮತ್ತು ಯವಕ್ರೀತ, ವಾಗ್ಮೀ, ದ್ರೋಣ, ಮತಂಗ, ದ್ರುಪದ, ಮತ್ಸ್ಯ ಮೊದಲಾದವರು ತಪಸ್ಸನ್ನು ಆಶ್ರಯಿಸಿ ವೇದವಿದ್ವಾಂಸರಾಗಿ ಉತ್ತಮ ಸ್ಥಾನ ಗಳಿಸಿದ್ದಾರೆ.

---

೧ ಸುಕ್ಷೇತ್ರಾಚ್ಚ ಸುಬೀಜಾಚ್ಚ ಪುಣ್ಯೋ ಭವತಿ ಸಂಭವಃ।
ಅತೋಽನ್ಯತರತೋ ಹೀನಾದವರೋ ನಾಮ ಜಾಯತೇ ॥ – ೧೨೯/೪

೨ ರಾಜನ್ ಏತತ್ ಭವೇದ್ ಗ್ರಾಹ್ಯಮಪಕೃಷ್ಟೇನ ಜನ್ಮನಾ।
ಮಹಾತ್ಮನಾಂ ಸಮುತ್ಪತ್ತಿಸ್ತಪಸಾ ಭಾವಿತಾತ್ಮನಾಮ್ ॥
ಉತ್ಪಾದ್ಯ ಪುತ್ರಾನ್ ಮುನಯೋ ನೃಪತೇ ಯತ್ರ ತತ್ರ ಹ।
ಸ್ವೇನೈವ ತಪಸಾ ತೇಷಾಮೃಷಿತ್ವಂ ವಿದಧುಃ ಪುನಃ ॥ – ೧೨೯/೧೨,೧೩

ರಾಜನ್! ಮೂಲಗೋತ್ರಗಳು ನಾಲ್ಕು - ಆಂಗೀರಸ, ಕಶ್ಯಪ, ವಸಿಷ್ಠ ಭೃಗು, ಉಳಿದವುಗಳಲ್ಲಿ ಕರ್ಮಾನುಸಾರವಾಗಿ ಉತ್ಪತ್ತಿಯನ್ನು ಪಡೆದಿವೆ. ಆ ಗೋತ್ರದ ಹೆಸರುಗಳು ಗೋತ್ರದ ಪ್ರವರ್ತಕರಾದ ಋಷಿಗಳ ಹೆಸರಿನಿಂದಾಗಿ ಬಂದಿದೆ.[೧]

ಜನಕರಾಜನು ಮುಂದೆ ಪ್ರತಿಯೊಂದು ವರ್ಣಗಳ ವಿಶೇಷ ಧರ್ಮಗಳನ್ನು, ಸಾಮಾನ್ಯ ಧರ್ಮಗಳನ್ನು ತಿಳಿಸಲು ಪ್ರಾರ್ಥಿಸಿದನು.

ಪರಾಶರರು ಅದಕ್ಕೆ ಉತ್ತರಿಸುತ್ತಾ

೧. ಬ್ರಾಹ್ಮಣರ ವಿಶೇಷ ಧರ್ಮಗಳು ಪ್ರತಿಗ್ರಹ (ದಾನಸ್ವೀಕಾರ), ಯಾಜನ (ಯಜ್ಞ ಮಾಡಿಸುವುದು), ಅಧ್ಯಾಪನ (ವೇದಶಾಸ್ತ್ರ ಪಾಠ ಹೇಳುವುದು). ೨. ಕ್ಷತ್ರಿಯರ ವಿಶೇಷ ಧರ್ಮ ಪ್ರಜಾರಕ್ಷಣೆ, ೩. ವೈಶ್ಯರ ವಿಶೇಷ ಧರ್ಮ ಕೃಷಿ, ಪಶುಪಾಲನೆ, ವ್ಯಾಪಾರ. ೪. ಶೂದ್ರರ ವಿಶೇಷಧರ್ಮ ತ್ರಿವರ್ಣಸ್ಥರವನ್ನು ಸೇವಿಸುವುದು.

**ಎಲ್ಲ ವರ್ಣಗಳ ಸಾಧಾರಣ ಧರ್ಮಗಳು** – ದಯಾಬುದ್ಧಿ, ಅಹಿಂಸೆ, ಪ್ರಮಾದರಾಹಿತ್ಯ (ಅಪರಾಧ ಮಾಡದಿರುವುದು), ಐಶ್ವರ್ಯ ವಿಭಾಗ, ಶ್ರಾದ್ಧ ಅತಿಥಿ ಸತ್ಕಾರ, ಸತ್ಯ ಅಕ್ರೋಧ, ತಮ್ಮ ಪತ್ನಿಯರಲ್ಲಿ ಮಾತ್ರ ಸಂತೋಷಪಡುವುದು, ಪಾವಿತ್ರ್ಯ, ಇತರರನ್ನು ದ್ವೇಷ ಮಾಡದಿರುವುದು, ಭಗವಂತನ ಜ್ಞಾನ, ಸಹನೆ.[೨]

ಬ್ರಾಹ್ಮಣ, ಕ್ಷತ್ರಿಯ, ವೈಶ್ಯವರ್ಣದವರನ್ನು ದ್ವಿಜಾತಿಗಳೆನ್ನುವರು. ಈ ಹಿಂದೆ ಹೇಳಲಾದ ಗುಣಗಳು ಅವರಲ್ಲಿರಬೇಕು. ತದ್ವಿರುದ್ಧವಾಗಿ ನಡೆದರೆ ಪತಿತರಾಗುತ್ತಾರೆ. ಶಾಸ್ತ್ರೋಕ್ತ ವಿಧಿಯಲ್ಲಿದ್ದರೆ ಉನ್ನತಿ ಹೊಂದುತ್ತಾರೆ.

ಶೂದ್ರನಾದವನು ಗರ್ಭಾಧಾನದಿಂದ ಹಿಡಿದು ಯಾವ ಸಂಸ್ಕಾರಗಳನ್ನು ಹೊಂದದಿದ್ದರೂ ಪತಿತನಾಗುವುದಿಲ್ಲ. ಶ್ರುತ್ಯುಕ್ತವಾದ ಯಾವುದೇ ಅಗ್ನಿಹೋತ್ರಾದಿ ಕರ್ಮಗಳು ಅವನಿಗಿಲ್ಲ.[೩]

ಆತ್ಮೋದ್ಧಾರ ಬಯಸುವ ಶೂದ್ರರು ಸಜ್ಜನರು, ಅನುಷ್ಠಾನ ಮಾಡುವ ಸದಾಚಾರಗಳನ್ನು ಮಾಡುತ್ತಾ ವೇದಮಂತ್ರಗಳಿಲ್ಲದ ಕರ್ಮಗಳನ್ನು ಆಚರಿಸಬೇಕು. ಆಗ ಶೂದ್ರರೂ ಮಹತ್ತ್ವ ಹೊಂದುತ್ತಾರೆ.

---

೧ ಮೂಲಗೋತ್ರಾಣಿ ಚತ್ವಾರಿ ಸಮುತ್ಪನ್ನಾನಿ ಪಾರ್ಥಿವ।
ಅಂಗಿರಾಃ ಕಶ್ಯಪಶ್ಚೈವ ವಸಿಷ್ಠೋ ಭೃಗುರೇವ ಚ॥ - ೧೨೯/೧೭

೨ ಆನೃಶಂಸ್ಯಮಹಿಂಸಾ ಚಾಪ್ರಮಾದಃ ಸಂವಿಭಾಗಿತಾ।
ಶ್ರಾದ್ಧಕರ್ಮಾತಿಥೇಯಂ ಚ ಸತ್ಯಮಕ್ರೋಧ ಏವ ಚ॥
ಸ್ವೇಷು ದಾರೇಷು ಸಂತೋಷಃ ಶೌಚಂ ನಿತ್ಯಾನಸೂಯತಾ।
ಆತ್ಮಜ್ಞಾನಂ ತಿತಿಕ್ಷಾ ಚ ಧರ್ಮಾಃ ಸಾಧಾರಣಾ ನೃಪ॥ - ೧೨೯/೨೩,೨೪

೩ ನ ಚಾಪಿ ಶೂದ್ರಃ ಪತತೀತಿ ನಿಶ್ಚಯೋ ನ ಚಾಪಿ ಸಂಸ್ಕಾರಮಿಹಾರ್ಹತೀತಿ ವಾ।
ಶ್ರುತಿಪ್ರವೃತ್ತಂ ನ ಚ ಧರ್ಮಮಾಪ್ನುತೇ ನ ಚಾಸ್ಯ ಧರ್ಮೇ ಪ್ರತಿಷೇಧನಂ ಕೃತಮ್॥ - ೧೨೯/೨೭

**ಸತಾಂ ವೃತ್ತಮನುಷ್ಠಾಯ ನಿಹೀನಾ ಉಜ್ಜಿಹೀರ್ಷವಃ।**
**ಮಂತ್ರವರ್ಜಂ ನ ದುಷ್ಯಂತಿ ಕುರ್ವಾಣಾಃ ಪೌಷ್ಟಿಕೀಃ ಕ್ರಿಯಾಃ॥ - ೧೨೯/೨೯**

ಜನಕರಾಜನು ಮತ್ತೆ ಪ್ರಶ್ನಿಸುತ್ತಾನೆ -

ಒಬ್ಬ ಮನುಷ್ಯನು ದೂಷಿತ ಎಂದು ಹೇಳುವುದು ಕರ್ಮಪ್ರಯುಕ್ತವೋ, ಅಥವಾ ಜಾತಿಯಿಂದಲೋ? ಇದಕ್ಕೆ ಪರಾಶರರು ಕರ್ಮ ಹಾಗೂ ಜಾತಿ ಎರಡೂ ಕಾರಣಗಳಿವೆ. ಇವುಗಳಲ್ಲಿ ಸ್ವಲ್ಪ ವಿಶೇಷಾಂಶಗಳಿವೆ ಎಂದರು.

ಜಾತಿಯಿಂದಲೂ, ಕರ್ಮದಿಂದಲೂ ಉತ್ತಮತ್ವವನ್ನು ಸಂಪಾದಿಸಿಕೊಂಡಿರುವ, ದುಷ್ಟಕರ್ಮ ಮಾಡದಿರುವ ವ್ಯಕ್ತಿ ಉತ್ತಮ ಪುರುಷನೆನಿಸುತ್ತಾರೆ. ಹಾಗೆ ಜಾತಿಯಿಂದ ದುಷ್ಟನಾಗಿದ್ದರೂ, ಪಾಪಕರ್ಮವನ್ನು ಮಾಡದಿದ್ದಲ್ಲಿ ಅವನನ್ನೂ ಉತ್ತಮಪುರುಷ ಎಂದು ಕರೆಯುತ್ತಾರೆ.[೧]

ಜಾತಿಯಿಂದ ಶ್ರೇಷ್ಠತ್ವವನ್ನು ಪಡೆದಿದ್ದರೂ, ನಿಷಿದ್ಧ ಕರ್ಮದಲ್ಲಿ ಆಸಕ್ತನಾಗಿದ್ದರೆ ಆ ವ್ಯಕ್ತಿಯನ್ನು ದುಷ್ಕರ್ಮಗಳು ಪತಿತನನ್ನಾಗಿ ಮಾಡುತ್ತವೆ. ಆದ್ದರಿಂದ ದುಷ್ಕರ್ಮಗಳನ್ನು ಮಾಡುವುದು ಮಂಗಳಕರವಲ್ಲ.[೨]

ಜನಕರಾಜನು ಪ್ರಶ್ನೆ ಕೇಳುತ್ತಾನೆ -

ಈ ಲೋಕದಲ್ಲಿ ಎಲ್ಲ ಕಾಲದಲ್ಲಿ ಮಾಡಬಹುದಾದ ಧರ್ಮ ಸಿದ್ಧವಾದ (ವಿಹಿತ) ಕರ್ಮಗಳಾವುವು? ಯಾವಪ್ರಾಣಿಗಳಿಗೂ ಹಿಂಸೆಯಾಗದಂತೆಯಾವಧರ್ಮಕಾರ್ಯಗಳನ್ನು ಯಾವಾಗಲೂ ಆಚರಿಸಬೇಕು?

ಇದಕ್ಕೆ ಪರಾಶರರು - ಮನುಷ್ಯರನ್ನು ರಕ್ಷಿಸುವ ಅಂತಹ ಕರ್ಮಗಳು ಯಾವುವೆಂದರೆ, ಅಗ್ನಿಯನ್ನು ಆತ್ಮನಲ್ಲಿ (ತನ್ನಲ್ಲಿ) ಆರೋಪಿಸಿಕೊಂಡು ಸನ್ಯಾಸದೀಕ್ಷೆ ಸ್ವಿಕರಿಸಿ, ಸ್ಥಿತಪ್ರಜ್ಞರ ಕರ್ಮಗಳನ್ನು ಮಾಡುವುದು, ಇಂದ್ರಿಯನಿಗ್ರಹವುಳ್ಳವರು, ಮುಕ್ತಿಯೋಗ್ಯಕರ್ಮಗಳು, ವಿನಯಾದಿ ಗುಣವುಳ್ಳವರು, ಫಲಾಶಾರಹಿತರಾಗಿರುವವರು ನಿಷ್ಕಾಮಕರ್ಮಿಗಳು (ಸರ್ವಕರ್ಮವಿವರ್ಜಿತಾಃ). ಇವರು ನಾಶರಹಿತ ನಿತ್ಯಸ್ಥಾನಕ್ಕೆ ಹೋಗುತ್ತಾರೆ.

ಎಲ್ಲ ವರ್ಣದವರೂ ಶಾಸ್ತ್ರೋಕ್ತವರ್ಣಾಶ್ರಮಧರ್ಮೋಕ್ತಕರ್ಮಗಳನ್ನು ಮಾಡುತ್ತಾ, ಸತ್ಯನಿಷ್ಠರಾಗಿದ್ದರೆ, ಸತ್ಯವಾಕ್ಯ ಸಂಪನ್ನರಾಗಿದ್ದರೆ (ಸತ್ಯನಿಷ್ಠರಾಗಿದ್ದರೆ) ಭಯಾನಕ

---

೧ ಜಾತ್ಯಾ ಚ ಕರ್ಮಣಾ ಚೈವ ದುಷ್ಟಂ ಕರ್ಮ ನಿಷೇವತೇ।
ಜಾತ್ಯಾ ದುಷ್ಟಶ್ಚ ಯಃ ಪಾಪಂ ನ ಕರೋತಿ ಸ ಪೂರುಷಃ॥ - ೧೨೯/೩೩

೨ ಜಾತ್ಯಾ ಪ್ರಧಾನಂ ಪುರುಷಂ ಕುರ್ವಾಣಂ ಕರ್ಮ ಧಿಕ್ಕೃತಮ್।
ಕರ್ಮ ತದ್ ದೂಷಯತ್ಯೇನಂ ತಸ್ಮಾತ್ ಕರ್ಮ ನ ಶೋಭನಮ್॥ - ೧೨೯/೩೪

ಪಾಪಕರ್ಮಗಳನ್ನು ತ್ಯಾಗ ಮಾಡಿಬಿಡುವವರು. ಆ ದೇಹದ ತರುವಾಯ ಸ್ವರ್ಗಕ್ಕೆ ಹೋಗುತ್ತಾರೆ.[೧]

ಪರಾಶರರು ಮುಂದುವರಿಸುತ್ತಾರೆ ತಮ್ಮ ಉಪದೇಶವನ್ನು

ಕ್ಷತ್ರಿಯರ ಕೆಲವು ಧರ್ಮಗಳನ್ನು ಇಲ್ಲಿ ವರ್ಣಿಸುತ್ತಾರೆ.

ವ್ಯಕ್ತಿಗೆ ಸದ್ಗುಣಗಳಿಲ್ಲದಿದ್ದಲ್ಲಿ ಅವನ ಪಾಲಿಗೆ ತಂದೆ, ತಾಯಿ, ಗುರು, ಸ್ತ್ರೀಯರು ಯಾರೂ ಹಿತಚಿಂತಕರಾಗಿರುವುದಿಲ್ಲ. ಒಂದುವೇಳೆ ಅವನು ಭಗವಂತನಲ್ಲಿ ಶ್ರೇಷ್ಠ ಭಕ್ತಿಯುಳ್ಳವನಾಗಿದ್ದರೆ, ಅವನಿಗೆ ತಂದೆ, ತಾಯಿ, ಗುರು, ಸ್ತ್ರೀಯರು ಎಲ್ಲರೂ ಹಿತಚಿಂತಕರಾಗಿತ್ತಾರೆ.[೨]

ಮಾನವರಿಗೆಲ್ಲ ತಂದೆ ಪರದೈವತೆ. ತಾಯಿಗಿಂತಲೂ ತಂದೆ ತತ್ತ್ವಜ್ಞಾನ ಕೊಡುವವನಾದ್ದರಿಂದ ಶ್ರೇಷ್ಠ ಕಾರಣ ಜ್ಞಾನಲಾಭವೇ ನಿಜವಾದಲಾಭ. ಈ ಜ್ಞಾನವನ್ನು ಹೊಂದಿ ಪುತ್ರನು ಜಿತೇದ್ರಿಯನೂ ಆಗಿ, ಸರ್ವೋತ್ತಮನೂ ಆದ ಭಗವಂತನನ್ನು ಹೊಂದುತ್ತಾನೆ.[೩]

ಕ್ಷತ್ರಿಯಪುತ್ರನೊಬ್ಬನು ಬಾಣರೂಪವಾದ ಚಿತಾಗ್ನಿಯಲ್ಲಿ ದಗ್ಧನಾದರೆ, ಅವನು ದೇವತೆಗಳಿಂದಲೂ ಆರಾಧ್ಯವಾದ ಪುಣ್ಯಲೋಕಗಳಿಗೆ ಹೋಗಿ ಸುಖ ಹೊಂದುತ್ತಾನೆ. ರಾಜನಾದವನು ತುಂಬಾ ಬಳಲಿದ, ಹೆದರಿದ, ಶಸ್ತ್ರಾಸ್ತ್ರವನ್ನು ಕಳೆದುಕೊಂಡ, ಅಳುವ, ಪಲಾಯನ ಮಾಡುವ ಯುದ್ಧಸಾಮಗ್ರಿ ಹಾಗೂ ಸೇವಕರಿಲ್ಲದ, ರೋಗಿಯಾದ, ಪ್ರಾಣಭಿಕ್ಷೆ ಬೇಡುವ ಅಥವಾ ಬಾಲಕನಾದ, ವೃದ್ಧನಾದ (ಯೋಧನನ್ನು) ಹಿಂಸಿಸಬಾರದು.[೪]

ಆದರೆ ಮೇಲಿನದಕ್ಕೆ ವಿರುದ್ಧವಾದ ಎಲ್ಲ ಯುದ್ಧ ಮಾಡಲು ಸಿದ್ಧನಾದ ತನಗೆ ಸಮಾನನಾದ ಕ್ಷತ್ರಿಯಪುತ್ರನೊಡನೆ ಯುದ್ಧ ಮಾಡಬೇಕು.[೫]

---

೧ ಸರ್ವೇ ವರ್ಣಾ ಧರ್ಮಕಾರ್ಯಾಣಿ ಸಮ್ಯಕ್ ಕೃತ್ವಾ ರಾಜನ್ ಸತ್ಯವಾಕ್ಯಾನಿ ಚೋಕ್ತ್ವಾ।
ತ್ಯಕ್ತ್ವಾ ಧರ್ಮಂ ದಾರುಣಂ ಜೀವಲೋಕೇ ಯಾಂತಿ ಸ್ವರ್ಗಂ ನಾತ್ರ ಕಾರ್ಯೋ ವಿಚಾರಃ॥
- ೧೨೯/೩೯

೨ ಪಿತಾ ಸಖಾಯೋ ಗುರವಃ ಸ್ತ್ರಿಯಶ್ಚ ನ ನಿರ್ಗುಣಾ ನಾಮ ಭವಂತಿ ಲೋಕೇ।
ಅನನ್ಯಭಕ್ತಾಃ ಪ್ರಿಯವಾದಿನಶ್ಚ ಹಿತಾಶ್ಚ ವಶ್ಯಾಶ್ಚ ತಥೈವ ರಾಜನ್॥ - ೧೩೦/೧

೩ ಪಿತಾ ಪರಂ ದೈವತಂ ಮಾನವಾನಾಂ ಮಾತುರ್ವಿಶಿಷ್ಟಂ ಪಿತರಂ ವದಂತಿ।
ಜ್ಞಾನಸ್ಯ ಲಾಭಂ ಪರಮಂ ವದಂತಿ ಜಿತೇಂದ್ರಿಯಾರ್ಥಾಃ ಪರಮಾಪ್ನುವಂತಿ॥ - ೧೩೦/೨

೪ ಶ್ರಾಂತಂ ಭೀತಂ ಭ್ರಷ್ಟಶಸ್ತ್ರಂ ರುದಂತಂ ಪರಾಙ್ಮುಖಂ ಪರಿಬರ್ಹೈಶ್ಚ ಹೀನಮ್।
ಅನುದ್ಯತಂ ರೋಗಿಣಂ ಯಾಚಮಾನಂ ನ ವೈ ಹಿಂಸ್ಯಾದ್ ಬಾಲವೃದ್ಧೌ ಚ ರಾಜನ್॥ - ೧೩೦/೪

೫ ಪರಿಬರ್ಹೈಃ ಸುಸಂಪನ್ನಮುದ್ಯತಂ ತುಲ್ಯತಾಂ ಗತಮ್।
ಅತಿಕ್ರಮೇತ ನೃಪತಿಃ ಸಂಗ್ರಾಮೇ ಕ್ಷತ್ರಿಯಾತ್ಮಜಮ್॥ - ೧೩೦/೫

ಯುದ್ಧದಲ್ಲಿ ತನಗೆ ಸಮಾನನಾದ ಅಥವಾ ತನಗಿಂತಲೂ ಬಲಿಷ್ಠನಾದ ಎದುರಾಳಿಯಿಂದ ಮರಣ ಹೊಂದಿದರೆ ಶ್ರೇಯಸ್ಸು ದೊರೆಯುತ್ತದೆ. ತನಗಿಂತ ಅಧಮನಿಂದ, ಹೇಡಿಯಿಂದ, ಕೃಪಣನಿಂದ ಸತ್ತರೆ ನಿಂದ್ಯನಾಗುತ್ತಾನೆ.[೧]

ಪಾಪಿಯಿಂದ, ಪಾಪಾಚಾರದಿಂದ ಕೂಡಿದವನಿಂದ, ನೀಚವ್ಯಕ್ತಿಯಿಂದ ಹತನಾದರೆ ನರಕಕ್ಕೆ ಹೋಗುತ್ತಾನೆ. ಮೃತ್ಯುವಿಗೆ ವಶರಾದವರನ್ನಾಗಿ ಯಾರು ಉದ್ಧರಿಸಲಾರರು, ಆಯುಷ್ಯಶೇಷವೂ ಉಳಿದವರನ್ನೂ ಯಾರೂ ಕೊಲ್ಲಲಾರರು. ಬೇರೆಯವರ ಆಯುಷ್ಯವನ್ನು ನಾಶಮಾಡಿ ಬದುಕಲು ಇಚ್ಛಿಸಬಾರದು.[೨]

ಆಯುಷ್ಯ ಮುಗಿದ ಕೂಡಲೇ ಮನುಷ್ಯನು ಮರಣ ಹೊಂದುತ್ತಾನೆ. ಕೆಲವೊಮ್ಮೆ ಕಾರಣವಿಲ್ಲದೆಯೂ ಮರಣವನ್ನಪ್ಪಬಹುದು. ಅಥವಾ ರೋಗಾದಿಗಳಿಂದಲೂ ಸಾಯಬಹುದು. ಕೆಲವರು ಪ್ರಯತ್ನಪೂರ್ವಕವಾಗಿ ಶರೀರತ್ಯಾಗ ಮಾಡಿಕೊಂಡಾಗ ಅವರು ತಮ್ಮ ಕರ್ಮಕ್ಕನುಗುಣವಾಗಿ ಗತಿ ಹೊಂದದೆ, ಇನ್ನೊಂದು ದೇಹವನ್ನು ಮಧ್ಯದಲ್ಲಿಯೇ ಹೊಂದುತ್ತಾರೆ. ದೇಹದಿಂದ ದೇಹಕ್ಕೆ ಪ್ರವೇಶ ಮಾಡುತ್ತಾರೆ.

ಬೇರೆ ದೇಹ ಹೊಂದಲು ಕಾರಣ ದೇಹತ್ಯಾಗ ದೋಷ (ಆತ್ಮಹತ್ಯಾದೋಷ) ಆಯಸ್ಸಿನ ಉಳಿದಶೇಷವನ್ನು ಹೊಂದುವ ಹೊಸದೇಹವು ಭೂತಪ್ರೇತಪಿಶಾಚಿಗಳಿಗೆ ಸಂಬಂಧಿಯಾ-ಗಿರುತ್ತದೆ.

ಸತ್ತಮೇಲೆ ಮುಂದೆ ಹಿಂದಿನ ದೇಹದಲ್ಲಿ ಮಾಡಿದ ಕರ್ಮಗಳಿಗೆ ತಕ್ಕಂತೆ ಮುಂದಿನ ಜನ್ಮದೇಹ ಸಿಗುತ್ತದೆ. ಅದಕ್ಕೂ ಮೊದಲು ಸ್ವಲ್ಪಕಾಲ ಆಕಾಶದಲ್ಲಿ ಮೇಘದ ಜಲದಂತೆ ಸುತ್ತುತ್ತಾನೆ. ಮತ್ತೆ ಬಂದು ಸ್ಥಾನವನ್ನು ಆಶ್ರಯಿಸಿ ಜೀವನು ಜನ್ಮ ಹೊಂದುತ್ತಾನೆ. ಆತ್ಮವು ಮನಸ್ಸಿಗಿಂತ ಮಿಗಿಲಾದುದು. ಮನಸ್ಸು ಇಂದ್ರಿಯಗಳಿಗಿಂತಲೂ ಮಿಗಿಲಾದುದು.

ಜಗತ್ತಿನಲ್ಲಿ ಪ್ರಾಣಿಗಳಲ್ಲಿ ತಾರತಮ್ಯವಿದೆ. ಸ್ಥಾವರ ಪ್ರಾಣಿಗಳಿಗಿಂತ (ವೃಕ್ಷ ಮೊದಲಾದ) ಜಂಗಮ ಪ್ರಾಣಿಗಳು (ಚಲಿಸುವ ಪ್ರಾಣಿಗಳು)ಶ್ರೇಷ್ಠ ಚಲಿಸುವ ಪ್ರಾಣಿಗಳಲ್ಲಿ ಎರಡು ಕಾಲು ಪ್ರಾಣಿಗಳು ಉತ್ತಮ. ಇವರಲ್ಲಿ(ಮನುಷ್ಯರಲ್ಲಿ) ದ್ವಿಜರು ಶ್ರೇಷ್ಠ ದ್ವಿಜರಲ್ಲಿ ಪ್ರಜ್ಞಾವಂತರೂ, ಅವರಲ್ಲಿ ಆತ್ಮಜ್ಞಾನಿಗಳೂ, ಆತ್ಮಜ್ಞಾನಿಗಳಲ್ಲಿ ನಿರಹಂಕಾರಿಗಳೂ ಶ್ರೇಷ್ಠ.[೩]

---

೧ ತುಲ್ಯಾದಿಹ ವಧಃ ಶ್ರೇಯಾನ್ ವಿಶಿಷ್ಟಾಚ್ಚೇತಿ ನಿಶ್ಚಯಃ।
ನಿಹೀನಾತ್ ಕಾತರಾಚ್ಚೈವ ನೃಪಾಣಾಂ ಗರ್ಹಿತೋ ವಧಃ॥ – ೧೩೦/೬

೨ ಗೃಹಸ್ಥಾನಾಂ ತು ಸರ್ವೇಷಾಂ ವಿನಾಶಮಭಿಕಾಂಕ್ಷತಾಮ್।
ನಿಧನಂ ಶೋಭನಂ ತಾತ ಪುಳಿನೇಷು ಕ್ರಿಯಾವತಾಮ್॥ – ೧೩೦/೧೧

೩. ದ್ವಿಜಾನಾಮಪಿ ರಾಜೇಂದ್ರ ಪ್ರಜ್ಞಾವಂತಃ ಪರಾ ಮತಾಃ।
ಪ್ರಾಜ್ಞಾನಾಮಾತ್ಮಸಂಬುದ್ಧಾಃ ಸಂಬುದ್ಧಾನಾಮಮಾನಿನಃ॥ – ೧೩೦/೨೧

ಜೀವಿಯ ಹುಟ್ಟಿನೊಡನೆ ಮರಣವೂ ಜೊತೆಯಲ್ಲಿಯೇ ಇರುತ್ತದೆ. ಎಲ್ಲ ಪ್ರಜೆಗಳು ಸತ್ವಾದಿ ಗುಣಗಳಿಂದ ಪ್ರೇರಿತರಾಗಿ ಅಶಾಶ್ವತ ಫಲ ನೀಡುವ ಕರ್ಮಗಳನ್ನು ಮಾಡುತ್ತಾರೆ.

ಉತ್ತರಾಯಣದ ಉತ್ತಮನಕ್ಷತ್ರದಲ್ಲಿ ಮರಣವಾಗುವವನು ಪುಣ್ಯಾತ್ಮನು. ಅವನು ಯಾರಿಗೂ ಕಷ್ಟ ಕೊಡುವುದಿಲ್ಲ. ಅವನು ಪ್ರಾಯಶ್ಚಿತ್ತಗಳಿಂದ ಪಾಪಕರ್ಮಗಳಿಗೆ ಪರಿಹಾರ ಕಂಡುಕೊಂಡಿರುತ್ತಾನೆ. ಆ ಜನ್ಮದಲ್ಲಿ ಉತ್ತಮ ಪುಣ್ಯಕರ್ಮಗಳನ್ನು ಮಾಡಿ ಪೂರ್ವಕರ್ಮಾನುಸಾರ ಮರಣ ಹೊಂದಿರುತ್ತಾನೆ ಪುಣ್ಯಪುರುಷನು.

ವಿಷವನ್ನು ತಿಂದು, ನೇಣುಹಾಕಿಕೊಂಡು, ಬೆಂಕಿಯಲ್ಲಿ ಬಿದ್ದು, ದರೋಡೆಕೋರರಿಂದ ಸಾಯಿಸಿಕೊಂಡು, ದುಷ್ಟಹುಲಿ, ಸಿಂಹಗಳ ಬಾಯಿಗೆ ಸಿಕ್ಕು ಪ್ರಾಣ ಬಿಡುವುದೆಲ್ಲ ಅಧಮ ಮರಣ. ಪುಣ್ಯಕರ್ಮಿಗಳು ಹೀಗೆ ಸಾಯಲು ಇಚ್ಛಿಸುವುದಿಲ್ಲ.[೧]

ಪುಣ್ಯಾತ್ಮರ ಪ್ರಾಣವು ಬ್ರಹ್ಮರಂಧ್ರದಿಂದಲೂ, ಪುಣ್ಯಪಾಪಕರ್ಮಗಳನ್ನು ಮಾಡಿದವರ ಪ್ರಾಣವು ಕಣ್ಣು, ಮೂಗು, ಮುಖ, ಕಿವಿಗಳ ಮೂಲಕವೂ, ದುಷ್ಕರ್ಮಿಗಳಿಗೆ ಪ್ರಾಣವು ಗುದ, ಉಪಸ್ಥದ ಮೂಲಕವು ಹೋಗುತ್ತದೆ.[೨]

ಮನುಷ್ಯನ ಪ್ರಬಲಶತ್ರು ಅಜ್ಞಾನ. ಅಜ್ಞಾನಾವೃತನಾದ, ಅಜ್ಞಾನದ ಪ್ರೇರಣೆಗೆ ತುತ್ತಾದ ಮನುಷ್ಯನು ಅತ್ಯಂತ ಭಯಂಕರ ಕರ್ಮಗಳನ್ನು ಮಾಡುತ್ತಾನೆ.[೩]

ಈ ಅಜ್ಞಾನವನ್ನು ಕಳೆದುಕೊಳ್ಳಲು ಶ್ರುತಿಧರ್ಮಗಳನ್ನು ಪಾಲಿಸುವ, ಆಚರಿಸುವ ಜ್ಞಾನವೃದ್ಧರನ್ನು ಸೇವಿಸಬೇಕು. ಪ್ರಜ್ಞಾ ಎಂಬ ಬಾಣದಿಂದ ಪೀಡಿತವಾಗಿರುವ ಅಜ್ಞಾನವು ವೃದ್ಧರ ಸೇವೆಯಿಂದ ದೂರ ಹೋಗುತ್ತದೆ.[೪]

ಅದಕ್ಕಾಗಿ ಬ್ರಹ್ಮಚಾರಿಯಾಗಿದ್ದಾಗಲೇ ವೇದಗಳನ್ನು ಅಧ್ಯಯನ ಮಾಡಿ, ಯಥಾಶಕ್ತಿ ಯಜ್ಞಕರ್ಮಗಳನ್ನು, ಗೃಹಸ್ಥಾಶ್ರಮಿಯಾಗಿ ಆಚರಿಸಬೇಕು. ವಂಶಾಭಿವೃದ್ಧಿಯನ್ನು ಮಾಡಿ ಜಿತೇಂದ್ರಿಯನಾಗಿ ಮೋಕ್ಷಕ್ಕಾಗಿ ವಾನಪ್ರಸ್ಥನಾಗಿ ತಪಸ್ಸನ್ನು ಮಾಡಬೇಕು.

---

೧ ವಿಷಮುದ್ಬಂಧನಂ ದಾಹೋ ದಸ್ಯುಹಸ್ತಾತ್ ತಥಾ ವಧಃ ।
ದಂಷ್ಟ್ರಿಭ್ಯಶ್ಚ ಪಶುಭ್ಯಶ್ಚ ಪ್ರಾಕೃತೋ ವಧ ಉಚ್ಯತೇ ॥ - ೧೩೦/೨೫

೨ ಊರ್ಧ್ವಂ ಹಿತ್ವಾ ಪ್ರತಿಷ್ಠಂತೇ ಪ್ರಾಣಾಃ ಪುಣ್ಯಕೃತಾಂ ನೃಪ ।
ಮಧ್ಯತೋ ಮಧ್ಯಪುಣ್ಯಾನಾಮಧೋ ದುಷ್ಕೃತಕರ್ಮಣಾಮ್ ॥ - ೧೩೦/೨೭

೩ ಏಕಃ ಶತ್ರುರ್ನ ದ್ವಿತೀಯೋऽಸ್ತಿ ಶತ್ರುರಜ್ಞಾನತುಲ್ಯಃ ಪುರುಷಸ್ಯ ರಾಜನ್ ।
ಯೇನಾವೃತಃ ಕುರುತೇ ಸಂಪ್ರಯುಕ್ತೋ ಘೋರಾಣಿ ಕರ್ಮಾಣಿ ಸುದಾರುಣಾನಿ ॥ - ೧೩೦/೨೮

೪ ಪ್ರಬೋಧನಾರ್ಥಂ ಶ್ರುತಿಧರ್ಮಯುಕ್ತಂ ವೃದ್ಧಾನುಪಾಸ್ಯಂ ಚ ಭವೇತ ಯಸ್ಯ ।
ಪ್ರಯತ್ನಸಾಧ್ಯೋ ಹಿ ಸ ರಾಜಪುತ್ರ ಪ್ರಜ್ಞಾಶರೇಣೋನ್ಮಥಿತಃ ಪರೈತಿ ॥ - ೧೩೦/೨೯

ಮನುಷ್ಯನು ಎಲ್ಲ ಭೋಗಗಳನ್ನು ತ್ಯಜಿಸಿದರೂ, ತನ್ನ ದೇಹವನ್ನು ಬಹಳ ಬಳಲಿಸ-ಬಾರದು. ಎಲ್ಲ ಜನ್ಮಗಳಲ್ಲಿ ಮನುಷ್ಯಜನ್ಮವು ಚಂಡಾಲ ಜನ್ಮವಾಗಿದ್ದರೂ, ಅದು ಶ್ರೇಷ್ಠವೇ (ಧರ್ಮಸಾಧನವಾದ್ದರಿಂದ).[೧]

ಇದರಿಂದಲೇ ಆತ್ಮೋದ್ಧಾರ ಮಾಡಿಕೊಳ್ಳಲು ಸಾಧ್ಯ. ಆದ್ದರಿಂದ ಇಂತಹ ಜನ್ಮದಿಂದ ಭ್ರಷ್ಟನಾಗಿ ಅಧಮಯೋನಿಗಳನ್ನು ಪಡೆಯದಿರಲು ಹೇಗೆ ಸಾಧ್ಯ? ಆದ್ದರಿಂದ ಶ್ರುತಿ ಪ್ರಮಾಣವಾದ್ದರಿಂದ ಇಂತಹ ಯೋನಿಯಲ್ಲಿದ್ದು ಮನುಷ್ಯರು ಧರ್ಮಕಾರ್ಯಗಳನ್ನು ಮಾಡುತ್ತಿರುತ್ತಾರೆ. ಇಂತಹ ಜನ್ಮಹೊಂದಿ ಇತರರನ್ನು ದ್ವೇಷಿಸುತ್ತಾ, ಧರ್ಮನಿಂದನೆ ಮಾಡುತ್ತಾ, ಲೌಕಿಕ ವಿಷಯಾಸಕ್ತಕಾಮಿಯಾದರೆ ಮುಂದಿನ ಜನ್ಮದಲ್ಲಿ ಮನುಷ್ಯ ಜನ್ಮ ವಂಚಿತನಾಗುತ್ತಾನೆ. ಈ ಜನ್ಮ ಬಂದ ವ್ಯಕ್ತಿಯು ಕಷ್ಟದಲ್ಲಿರುವವರನ್ನು ಸಂತೈಸಿ, ಅತಿಥಿಪೂಜೆ ಮಾಡಿ, ಎಲ್ಲರೊಡನೆ ಒಳ್ಳೆಯ ಮಾತುಗಳನ್ನು ಆಡುತ್ತಾ, ಸುಖದುಃಖಗಳನ್ನು ಸಮನಾಗಿ ನೋಡುತ್ತಿದ್ದರೆ ಮರಣದ ನಂತರ ಪರಲೋಕದಲ್ಲಿ ಸಮ್ಮಾನಿತನಾಗುತ್ತಾನೆ.

ದಾನ, ವಿಷಯಭೋಗತ್ಯಾಗ, ಪುಣ್ಯತೀರ್ಥಸ್ನಾನಗಳಿಂದ ಶರೀರ ಪಾವಿತ್ರ್ಯ ಸಂಪಾದನೆ, ತಪಸ್ಸಿನಿಂದ ಶರೀರದ ದಂಡನೆ, ಸರಸ್ವತೀ, ನೈಮಿಷಾರಣ್ಯ, ಪುಷ್ಕರ ಮೊದಲಾದ ಪುಣ್ಯಕ್ಷೇತ್ರಗಳಲ್ಲಿ ಸ್ನಾನ ಮಾಡುವುದು ಕೆಲವು ಮೋಕ್ಷದ ಸಾಧನಗಳಾಗಿವೆ.

ಮನೆಯಲ್ಲಿ ಯಾರು ಮಡಿಯುತ್ತಾರೋ, ಅವರನ್ನು ಮನೆಯಿಂದ ಹೊರಗೆ ಹಾಕುವುದು ಶ್ರೇಷ್ಠ. ವಾಹನದಲ್ಲಿ ಸತ್ತವರನ್ನು ಸ್ಮಶಾನಕ್ಕೆ ಸಾಗಿಸಬೇಕು. ಶುದ್ಧಮನಸ್ಕರಾಗಿ ಶಾಸ್ತ್ರವಿಧಿಗ-ನುಗುಣವಾಗಿ ಸತ್ತವರಿಗೆ ವಿಧ್ಯುಕ್ತವಾಗಿ ದಹನ ಸಂಸ್ಕಾರ ಮಾಡಬೇಕು.[೨]

ಧರ್ಮಶಾಸ್ತ್ರಗಳು, ಷಡಂಗಯುಕ್ತ ವೇದಾಂಗಗಳು, ಇವೆಲ್ಲ ಕ್ಲೇಶವಿಲ್ಲದೆ, ವಿಹಿತಕರ್ಮಗಳನ್ನು ಮಾಡುವವನಿಗೆ, ಶ್ರೇಯಸ್ಸಿಗೆ ವಿಹಿತವಾಗಿವೆ.

ಭೀಷ್ಮರು ಧರ್ಮರಾಜನಿಗೆ ಪರಾಶರರು ಜನಕರಾಜನಿಗೆ ಈ ವಿಷಯಗಳನ್ನು ಹೇಳಿದರು.

**ಪರಾಶರರ ಉಪದೇಶದ ಉಪಸಂಹಾರ.**

ಜನಕರಾಜನು ಧರ್ಮನಿಶ್ಚಯಜ್ಞಾನ ಹೊಂದಿದ್ದ ಪರಾಶರ ಮುನಿಗಳನ್ನು ಪುನಃ ಹೀಗೆ ಪ್ರಶ್ನಿಸಿದನು.

ಮಹಾಮುನಿಗಳೇ! ಶ್ರೇಯಸ್ಸಾಧನ ಯಾವುದು? ಉತ್ತಮಗತಿ ಯಾವುದು? ಎಂತಹ ಕರ್ಮ ನಾಶವಾಗುವುದಿಲ್ಲ, ಎಲ್ಲಿಗೆ ಹೋದ ಜೀವರು ಮತ್ತೆ ಸಂಸಾರಕ್ಕೆ ಮರಳುವುದಿಲ್ಲ?

---

೧ ಉಪಭೋಗೈರಪಿ ತ್ಯಕ್ತಂ ನಾತ್ಮಾನಮವಸಾದಯೇತ್ ।
ಚಂಡಾಲತ್ವೇಽಪಿ ಮಾನುಷ್ಯಂ ಸರ್ವಥಾ ತಾತ ದುರ್ಲಭಮ್ ॥ - ೧೩೦/೩೧

೨ ಗೃಹೇಷು ಯೇಷಾಮಸವಃ ಪತಂತಿ ತೇಷಾಮಥೋ ನಿರ್ಹರಣಂ ಪ್ರಶಸ್ತಮ್ ।
ಯಾನೇನ ವೈ ಪ್ರಾಪಣಂ ಚ ಶ್ಮಶಾನೇ ಶೌಚೇನ ನೂನಂ ವಿಧಿನಾ ಚೈವ ದಾಹಃ ॥ - ೧೩೦/೩೮

ಕಿಂ ಶ್ರೇಯಃ ಕಾ ಗತಿರ್ಬ್ರಹ್ಮನ್ ಕಿಂ ಕೃತಂ ನ ವಿನಶ್ಯತಿ।
ಕ್ವ ಗತೋ ನ ನಿವರ್ತೇತ ತನ್ಮೇ ಬ್ರೂಹಿ ಮಹಾಮುನೇ॥ - ೧೩೧/೨

ಈ ಪ್ರಶ್ನೆಗಳಿಗೆ ಪರಾಶರರು ಹೀಗೆ ಉತ್ತರಿಸಿದರು.

ರಾಜನ್! [೧]ವಿಷಯಪದಾರ್ಥಗಳ ಅಸಂಗವೇ ಶ್ರೇಯಸ್ಸಿಗೆ ಮೂಲಸಾಧನ. ಭಗವದ್ವಿಷಯಕಜ್ಞಾನದ ಪ್ರವೃತ್ತಿಯೇ ನಿಜವಾದ ಜ್ಞಾನ. ಶ್ರದ್ಧೆಯಿಂದ ಮಾಡುವ ತಪಸ್ಸು ಎಂದೂ ನಾಶ ಹೊಂದುವುದಿಲ್ಲ. ಉತ್ತಮಕ್ಷೇತ್ರದಲ್ಲಿ ಬಿತ್ತಿದ ಬೀಜವು ವ್ಯರ್ಥವಾಗುವುದಿಲ್ಲ.

೧. ಯಾವ ಜೀವನು ಅಧರ್ಮವೆಂಬ ಪಾಶವನ್ನು ಕತ್ತರಿಸಿ, ಧರ್ಮದಲ್ಲಿಯೇ ಅನುರಕ್ತನಾಗಿರುತ್ತಾನೋ, ಸಮಸ್ತ ಪ್ರಾಣಿಗಳಿಗೂ ಅಭಯದಾನ ಮಾಡಿರುತ್ತಾನೋ, ಅವನು ಸಿದ್ಧಿಯನ್ನು ಹೊಂದುತ್ತಾನೆ.

೨. ಸಾವಿರಾರು ಗೋದಾನ, ನೂರಾರು ಅಶ್ವದಾನಕ್ಕಿಂತ ಎಲ್ಲ ಭೂತಗಳಿಗೆ (ಜೀವರಿಗೆ) ಅಭಯದಾನ ನೀಡುವುದು ಅತಿಶ್ರೇಷ್ಠವಾದುದು.[೨]

೩. ವಿಷಯಸುಖಗಳ ಮಧ್ಯ ಇದ್ದರೂ, ಜ್ಞಾನಿಯು ಅವುಗಳೊಡನೆ ಸಂಬಂಧವಿರದಂತೆ ವರ್ತಿಸುತ್ತಾನೆ. ವಿಷಯಗಳ ಮಧ್ಯ ಇರದಿದ್ದರೂ, ದುರ್ಬುದ್ಧಿಯು ಅಜ್ಞಾನಿ, ಅವುಗಳನ್ನೇ ಸ್ಮರಿಸುತ್ತಾ ಅವುಗಳ ಮಧ್ಯ ಬದುಕುತ್ತಾನೆ.[೩]

ಹೇಗೆ ಕಮಲದ ಎಲೆಗಳಿಗೆ ನೀರು ಅಂಟುವುದಿಲ್ಲ, ಹಾಗೆ ಪಾಪವು ಜ್ಞಾನಿಯನ್ನು ಅಂಟುವುದಿಲ್ಲ, ಲೇಪವಾಗದು. ಮುಳ್ಳಿನ ಅಗಸೆ ಗಿಡವು ಬಟ್ಟೆಯನ್ನು ಬಿಗಿಯಾಗಿ ಹಿಡಿದು ಹರಿಯುವಂತೆ, ಮೂರ್ಖರನ್ನು ಅಧರ್ಮವು ಹಿಡಿದು ಅನರ್ಥಕ್ಕೆ ತಳ್ಳುತ್ತದೆ.[೪]

ಯಾರು ವಿಷಯಗಳಿಂದ ದೂರವಾಗಿ, ಸಿಟ್ಟನ್ನು ಗೆದ್ದು ಸದಾಚಾರ ಸಂಪನ್ನನಾಗಿ-ರುತ್ತಾನೋ, ಅವನು ವಿಷಯಸುಖಗಳ ಮಧ್ಯ ಇದ್ದರೂ ಪಾಪದಿಂದ ಲೇಪವಾಗುವುದಿಲ್ಲ.[೫]

---

೧ ಅಸಂಗಃ ಶ್ರೇಯಸೇ ಮೂಲಂ ಜ್ಞಾನಂ ಜ್ಞಾನಗತಿಃ ಪರಾ।
ಚೀರ್ಣಂ ತಪೋ ನ ಪ್ರಣಶ್ಯೇತ್ ವಾಪಃ ಕ್ಷೇತ್ರೇ ನ ನಶ್ಯತಿ॥ - ೧೩೧/೩

೨ ಯೋ ದದಾತಿ ಸಹಸ್ರಾಣಿ ಗವಾಮಶ್ವಶತಾನಿ ಚ।
ಅಭಯಂ ಸರ್ವಭೂತೇಭ್ಯಸ್ತದ್ದಾನಮತಿವರ್ತತೇ॥ - ೧೩೧/೫

೩ ವಸನ್ ವಿಷಯಮಧ್ಯೇಽಪಿ ನ ವಸತ್ಯೇವ ಬುದ್ಧಿಮಾನ್।
ಸಂವಸತ್ಯೇವ ದುರ್ಬುದ್ಧಿರಸತ್ಸು ವಿಷಯೇಷ್ವಪಿ॥ - ೧೩೧/೬

೪ ನಾಧರ್ಮಃ ಶ್ಲಿಷ್ಯತೇ ಪ್ರಾಜ್ಞಮಾಪಃ ಪುಷ್ಕರಪರ್ಣವತ್।
ಅಪ್ರಾಜ್ಞಮಧಿಕಂ ಪಾಪಂ ಶ್ಲಿಷ್ಯತೇ ಜತುಕಾಷ್ಠವತ್॥ - ೧೩೧/೭

೫ ವೀತರಾಗೋ ಜಿತಕ್ರೋಧಃ ಸಮ್ಯಗ್ಭವತಿ ಯಃ ಸದಾ।
ವಿಷಯೇ ವರ್ತಮಾನೋಽಪಿ ನ ಸ ಪಾಪೇನ ಯುಜ್ಯತೇ॥ - ೧೩೧/೧೦

ನದಿಗೆ ಕಟ್ಟಲಾದ ಸೇತು ನೀರನ್ನು ಹಿಡಿದು ನಿಲ್ಲಿಸುತ್ತದೆ. ಶಿಷ್ಟಾಚಾರವೆಂಬ ಧರ್ಮಸೇತುವನ್ನು ಕಟ್ಟಿಕೊಂಡ ಪುರುಷನು ಎಂದೂ ನಾಶ ಹೊಂದುವುದಿಲ್ಲ.[೧]

ಯಾವರೀತಿಯಾಗಿ ಶುದ್ಧವಾದ, ಸೂರ್ಯಕಾಂತಮಣಿಯು ಸೂರ್ಯನ ತೇಜಸ್ಸನ್ನು ಗ್ರಹಿಸುತ್ತದೆಯೋ, ಹಾಗೆ ಸಾಧಕನು ಯೋಗಶಕ್ತಿಯಿಂದ ಧ್ಯಾನದ ಮೂಲಕ ಪರಬ್ರಹ್ಮನನ್ನು ಹೃದಯದಲ್ಲಿ ಗ್ರಹಿಸುತ್ತಾನೆ.

ಸದ್ಗತಿ ಬಯಸುವವನು ಲೌಕಿಕದ ಮನೆ, ಮಡದಿ, ಮಕ್ಕಳನ್ನು ಹಲವು ಬಗೆಯ ಕಾಮ್ಯಕರ್ಮಗಳನ್ನು ದೂರವಿಡುತ್ತಾನೆ.[೨]

ವಿಷಯಾಸಕ್ತ ಮನುಷ್ಯನು ನೀರಿನಲ್ಲಿ ಸಂಚರಿಸುವ ಮೀನಿನಂತೆ ಗಾಳಕ್ಕೆ ಹಾಕಿರುವ ಮಾಂಸಪ್ರಲೋಭಕ್ಕೆ ತುತ್ತಾಗಿ ದುಃಖಕ್ಕೆ ಈಡಾಗುವಂತೆ ಅಪಾರ ದುಃಖಕ್ಕೆ ಭಾಗಿಯಾಗುತ್ತಾನೆ.

ಧರ್ಮಕಾರ್ಯಕ್ಕೆ ನಿಶ್ಚಿತಕಾಲವೇನೂ ಇಲ್ಲ (ಯಾವಾಗಲೂ ಮಾಡಬಹುದು). ಮನುಷ್ಯನು ಧರ್ಮಾಚರಣೆ ಮಾಡಲೆಂದು ಮೃತ್ಯುವೂ ಕಾಯುತ್ತಾ ಕುಳಿತಿರುವುದಿಲ್ಲ, ಮನುಷ್ಯನು ಯಾವಾಗಲೀ ಮೃತ್ಯುಮುಖಿಯಾಗಿರುತ್ತಾನೆ. ಆದ್ದರಿಂದ ಯಾವಾಗಲೂ ಧರ್ಮಕಾರ್ಯ ಮಾಡುತ್ತಿರುವುದೇ ಶ್ರೇಯೋಮಾರ್ಗ.[೩]

ಕುರುಡನಾದವನು ಅಭ್ಯಾಸಬಲದಿಂದ ತನ್ನ ಮನೆಯಲ್ಲಿ ನಿರಾತಂಕವಾಗಿ ತಿರುಗಾಡುವಂತೆ ಪ್ರಾಜ್ಞನು ಯೋಗಯುಕ್ತಮನಸ್ಸಿನಿಂದ ಈ ಲೋಕದಲ್ಲಿ ಸಂಚರಿಸುತ್ತಾ ಪರಮಗತಿಗೆ ಹೋಗುತ್ತಾನೆ.[೪]

ಹುಟ್ಟಿನೊಡನೆ ಮರಣ ಇರುತ್ತದೆ. ಹುಟ್ಟು ಮರಣವನ್ನು ಆಶ್ರಯಿಸಿದೆ. ಮೋಕ್ಷಧರ್ಮಗಳನ್ನು ತಿಳಿಯದ ಅಜ್ಞಾನಿಯು ಜನನಮರಣಗಳ ಚಕ್ರದಲ್ಲಿ ಸಿಕ್ಕಿಕೊಂಡು ಸುತ್ತುತ್ತಿರುತ್ತಾನೆ. ತಿಳಿದವನು ಜ್ಞಾನಮಾರ್ಗವನ್ನು ಆಶ್ರಯಿಸಿ ಇಹಪರಗಳಲ್ಲಿ ಸುಖ ಹೊಂದುತ್ತಾನೆ.

---

೧ ಮರ್ಯಾದಾಯಾಂ ಧರ್ಮಸೇತುರ್ನಿಬದ್ಧೋ ನೈವ ಸೀದತಿ।
ಪುಷ್ಪಸ್ರೋತ್ರ ಇವಾಯತ್ತಃ ಸ್ಫೀತೋ ಭವತಿ ಸಂಚಯಃ॥ – ೧೩೧/೧೧

೨ ಜಹಾತಿ ದಾರಾನಿಹತೇ ನ ಸಂಪದಃ ಸದಶ್ವಯಾನಂ ವಿವಿಧಾಶ್ಚಯಾಃ ಕ್ರಿಯಾಃ।
ತ್ರಿವಿಷ್ಟಪೇ ಜಾತಮತಿರ್ಯದಾ ನರಸ್ತದಾಸ್ಯ ಬುದ್ಧಿರ್ವಿಷಯೇಷು ಭಿದ್ಯತೇ॥ – ೧೩೧/೧೪

೩. ನ ಧರ್ಮಕಾಲಃ ಪುರುಷಸ್ಯ ನಿಶ್ಚಿತೋ ನ ಚಾಪಿ ಮೃತ್ಯುಃ ಪುರುಷಂ ಪ್ರತೀಕ್ಷತೇ।
ಕ್ರಿಯಾ ಹಿ ಧರ್ಮಸ್ಯ ಸದೈವ ಶೋಭನಾ ಯದಾ ನರೋ ಮೃತ್ಯುಮುಖೇಽಭಿವರ್ತತೇ॥
– ೧೩೧/೧೭

೪ ಯಥಾಂಧಃ ಸ್ವಗೃಹೇ ಯುಕ್ತೋ ಹ್ಯಭ್ಯಾಸಾದೇವ ಗಚ್ಛತಿ।
ತಥಾ ಯುಕ್ತೇನ ಮನಸಾ ಪ್ರಾಜ್ಞೋ ಗಚ್ಛತಿ ತಾಂ ಗತಿಮ್॥ – ೧೩೧/೧೮

ಪ್ರಾಜ್ಞನಾದ ಜೀವನು ತಾನು ಮಾಡಿದ ಪುಣ್ಯಕರ್ಮಗಳಿಂದ ಶ್ರೇಷ್ಠವಾದ ಗತಿ ಹೊಂದುತ್ತಾನೆ. ದಡ್ಡ ಚೇತನನು ತಾನು ಮಾಡಿದ ಪಾಪಕರ್ಮಗಳಿಂದ ಅಧಃಪತನ ಹೊಂದಿ ತಿರ್ಯಗ್ಯೋನಿಗಳನ್ನು ಹೊಂದುತ್ತಾನೆ.[೧]

ಮಂಜಿನಂತಿರುವ ಮಾಯೆಯಿಂದ ಆವೃತನಾದ ಜೀವನು ಉಪಸ್ಥ ಉದರಗಳಲ್ಲಿಯೇ ಮಗ್ನನಾಗಿ ಹುಟ್ಟು ಕುರುಡನಂತೆ ಸನ್ಮಾರ್ಗದಿಂದ ದೂರವಾಗುತ್ತಾನೆ. ಹೀಗೆ ವಿಷಯಾಸಕ್ತ ಚೇತನನು ಶ್ರೇಯೋಮಾರ್ಗವನ್ನು ಎಂದೂ ತಿಳಿಯುವುದಿಲ್ಲ.[೨]

ಯಾವ ರೀತಿಯಾಗಿ ಸಮುದ್ರಯಾನ ಮಾಡಿ ಬೇರೆ ದೇಶಕ್ಕೆ ಹೋಗಿ ವ್ಯಾಪಾರದಲ್ಲಿ ತಾನು ಹಾಕಿದ ಮೂಲ ಧನಕ್ಕಿಂತಲೂ ಅಧಿಕಲಾಭವನ್ನು ಸಂಪಾದಿಸಿಕೊಂಡು ವಾಪಸು ಬರುತ್ತಾನೋ, ಹಾಗೆಯೇ ಸಂಸಾರಸಾಗರದಲ್ಲಿ ಬಂದಿರುವ ಜೀವನು ತಾನು ವಿನಿಯೋಗಿಸಿದ ಉತ್ತಮ ಕರ್ಮಗಳಿಂದ ಉತ್ತಮಫಲ, ಅಧಮಕರ್ಮಗಳಿಂದ ಅಧಮಫಲ ಹೊಂದುತ್ತಾನೆ.[೩]

ಸಂಸಾರದಲ್ಲಿ ಮೃತ್ಯುವು ಸರ್ಪವು ಗಾಳಿಯನ್ನು ನುಂಗುವಂತೆ ಎಲ್ಲ ಪ್ರಾಣಿಗಳನ್ನು ನುಂಗುತ್ತದೆ. ಎಲ್ಲ ಪ್ರಾಣಿಗಳು ತಾವು ಮಾಡಿದ ಪುಣ್ಯಪಾಪಕರ್ಮಗಳನ್ನೇ ಈ ಲೋಕದಲ್ಲಿ ಜೀವರಾಗಿ ಜನ್ಮ ಹೊಂದಿ ಕರ್ಮಫಲ ಹೊಂದುತ್ತಾರೆ. ತಾವು ಮಾಡದ ಕರ್ಮಫಲಗಳನ್ನಲ್ಲ. ಸಂಸಾರ ದಾಟಿದವನು ಮತ್ತೆ ಸಂಸಾರಕ್ಕೆ ಬರಲು ಇಷ್ಟಪಡುವುದಿಲ್ಲ.[೪]

ಶೌಚತೀರ್ಥಕ್ಷೇತ್ರದಂತೆ ಇರುವ ಶರೀರವೆಂಬ ಮನೆ ಹೊಂದಿರುವ ಜ್ಞಾನಮಾರ್ಗ-ದಲ್ಲಿಯೇ ಸಾಗುವ ಪುರುಷನಿಗೆ ಇಹಪರಗಳಲ್ಲಿ ಸುಖವಿದೆ.[೫]

ಯಾವುದೋ ಮನೋಭಿಲಾಷೆಯ ಪೂರೈಕೆಗಾಗಿ ಮಿತ್ರವರ್ಗ ಸೃಷ್ಟಿಯಾಗಿರುತ್ತದೆ. ಜ್ಞಾನಿಗಳು ಯಾವುದೋ ಕಾರಣದಿಂದ ಬಂಧುತ್ವವನ್ನು ಅವಲಂಬಿಸಿರುತ್ತಾರೆ. ಪತ್ನಿ ಪುತ್ರ, ಸೇವಕರು ಸ್ವಾರ್ಥಕ್ಕಾಗಿಯೇ ದೃಷ್ಟಿ ಇಟ್ಟಿರುತ್ತಾರೆ.[೬] ತಂದೆ, ತಾಯಿ ಯಾರು ಯಾರು

---

೧ ಅಧಸ್ತಿರ್ಯಗ್ಗತಿಂ ಚೈವ ಸ್ವರ್ಗೇ ಚೈವ ಪರಾಂ ಗತಿಮ್ ।
ಪ್ರಾಪ್ನೋತಿ ಸ್ವಕೃತೈರಾತ್ಮಾ ಪ್ರಾಜ್ಞಸ್ಯೇಹೇತರಸ್ಯ ಚ ॥ - ೧೩೧/೨೨

೨ ನೀಹಾರೇಣ ಹಿ ಸಂವೀತಃ ಶಿಶ್ನೋದರಪರಾಯಣಃ ।
ಜಾತ್ಯಂಧ ಇವ ಪಂಥಾನಮಾವೃತಾತ್ಮಾ ನ ಬುಧ್ಯತೇ ॥ - ೧೩೧/೨೫

೩ ವಣಿಗ್ ಯಥಾ ಸಮುದ್ರಾದ್ ವೈ ಯಥಾರ್ಥಂ ಲಭತೇ ಧನಮ್ ।
ತಥಾ ಮರ್ತ್ಯಾರ್ಣವೇ ಜಂತೋಃ ಕರ್ಮವಿಜ್ಞಾನತೋ ಗತಿಃ ॥ - ೧೩೧/೨೬

೪ ನ ಹ್ಯನ್ಯತೀರಮಾಸಾದ್ಯ ಪುನಸ್ತರ್ತುಂ ವ್ಯವಸ್ಯತಿ ।
ದುರ್ಲಭೋ ದೃಶ್ಯತೇ ಹ್ಯಸ್ಯ ವಿನಿಪಾತೋ ಮಹಾರ್ಣವೇ ॥ - ೧೩೧/೩೦

೫ ಶರೀರಗೃಹಸಂಸ್ಥಸ್ಯ ಶೌಚತೀರ್ಥಸ್ಯ ದೇಹಿನಃ ।
ಬುದ್ಧಿಮಾರ್ಗಪ್ರಯಾತಸ್ಯ ಸುಖಂ ತ್ವಿಹ ಪರತ್ರ ಚ ॥ - ೧೩೧/೩೪

೬ ಸಂಕಲ್ಪಜೋ ಮಿತ್ರವರ್ಗೋ ಜ್ಞಾತಯಃ ಕಾರಣಾತ್ಮಕಾಃ ।

ಪರಲೋಕದ ಸಾಧನೆಗೆ ಸಹಾಯವಾಗುವುದಿಲ್ಲ. ಆದ್ದರಿಂದ ಮನುಷ್ಯನು ಯಾವಾಗಲೂ ಪರಲೋಕಕ್ಕೆ ಬುತ್ತಿಯನ್ನು ಕಟ್ಟಿಕೊಂಡಿರಬೇಕು.[೧] ತಾನು ಮಾಡಿದ ಕರ್ಮವನ್ನು ತಾನೇ ಅನುಭವಿಸುತ್ತಾನೆಯೇ ಹೊರತು ಬೇರೆಯವರಲ್ಲ.

ಸೂರ್ಯನನ್ನು ಹೇಗೆ ರಶ್ಮಿಗಳು ಬಿಡುವುದಿಲ್ಲವೋ ಹಾಗೆಯೇ ಸಂಶಯವಿಲ್ಲದ ಶೂರನನ್ನೂ, ಧೀರನನ್ನೂ, ಜ್ಞಾನಿಯನ್ನೂ ಎಂದಿಗೂ ಸಂಪತ್ತು ತ್ಯಜಿಸುವುದಿಲ್ಲ.[೨]

ಹೀಗೆ ಜ್ಞಾನಿಗಳಾದ ಪರಾಶರರಿಂದ ಹೇಳಲ್ಪಟ್ಟ ಧರ್ಮಾತ್ಮರಲ್ಲಿ ಶ್ರೇಷ್ಠನಾದ ಜನಕಮಹಾರಾಜನು ಅತ್ಯಂತ ಸಂತೋಷ ಹೊಂದಿದನು.

*****

---

ಭಾರ್ಯಾ ದಾಸಾಶ್ಚ ಪುತ್ರಾಶ್ಚ ಸ್ವಮರ್ಥಮನುಯುಂಜತೇ ॥ - ೧೩೧/೩೬

೧ ಮಾತಾ ಪುತ್ರಃ ಪಿತಾ ಭ್ರಾತಾ ಭಾರ್ಯಾ ಮಿತ್ರಜನಸ್ತಥಾ ।
ಅಷ್ಟಾಪದಪದಸ್ಥಾನೇ ತ್ವಕ್ಷಮುದ್ರೇವ ನ್ಯಸ್ಯತೇ ॥ - ೧೩೧/೩೮

೨ ಅದ್ವೈಧಮನಸಂ ಯುಕ್ತಂ ಶೂರಂ ಧೀರಂ ವಿಪಶ್ಚಿತಮ್ ।
ನ ಶ್ರೀಃ ಸಂತ್ಯಜತೇ ನಿತ್ಯಮಾದಿತ್ಯಮಿವ ರಶ್ಮಯಃ ॥ - ೧೩೧/೪೧

# ೧೯೬. ಹಂಸಗೀತೆ

ಧರ್ಮರಾಜನ ಪ್ರಶ್ನೆ – ತಾತ! ಲೋಕದಲ್ಲಿ ಜ್ಞಾನಿಗಳು ಸತ್ಯ, ಕ್ಷಮೆ, ದಮ ಮತ್ತು ಪ್ರಜ್ಞೆಯನ್ನು ಪ್ರಶಂಸೆ ಮಾಡುತ್ತಾರೆ. ಈ ಬಗ್ಗೆ ನಿನ್ನ ಅಭಿಮತವೇನು?

ಇದಕ್ಕೆ ಭೀಷ್ಮರು **ಸಾಧ್ಯರಿಗೂ ಬ್ರಹ್ಮದೇವನಿಗೂ** ನಡೆದ ಸಂವಾದರೂಪ ಇತಿಹಾಸವನ್ನು ನಿರೂಪಿಸಿದರು.

ಹಿಂದೆ ಪ್ರಜಾಪತಿಯು (ಬ್ರಹ್ಮದೇವನು) ಪ್ರತಿದಿನವೂ, ಸುವರ್ಣಹಂಸರೂಪವನ್ನು ತೆಗೆದುಕೊಂಡು ಮೂರು ಲೋಕಗಳನ್ನು ಸಂಚರಿಸುವ ಪದ್ಧತಿ ಹಾಕಿಕೊಂಡಿದ್ದನು. ಹೀಗಿರುವಾಗ ಒಮ್ಮೆ ಸಾಧ್ಯರ ಬಳಿ ಹೋದಾಗ ಅವರು ಹಂಸನನ್ನು ಪ್ರಶ್ನಿಸಿದರು.

ಸಾಧ್ಯರು – ಎಲೈ ಪತಿಯೇ! ನಾವು ಸಾಧ್ಯರೆಂಬ ದೇವತೆಗಳು. ಮೋಕ್ಷವನ್ನು ಚೆನ್ನಾಗಿ ತಿಳಿದ ನಿನ್ನನ್ನು ಮೋಕ್ಷಧರ್ಮದ ಬಗ್ಗೆ ಕೇಳುತ್ತೇವೆ.

ಎಲೈ ಹಂಸವೇ! ನೀನು ಜ್ಞಾನಪೂರ್ವಕವಾಗಿ ಮಾತನಾಡುವ ಪಂಡಿತನಿರುವೆ. ನೀನು ಹಾರುವಾಗ ಒಳ್ಳೆಯ ಶಬ್ದಗಳು (ವೈದಿಕ, ಸದಾಗಮ) ನಿನ್ನಿಂದ ಹೊರಬರುತ್ತದೆ (ಕೇಳಿ ಬರುತ್ತವೆ). ನಿನ್ನ ಅಭಿಪ್ರಾಯದಲ್ಲಿ ಯಾವ ಕಾರ್ಯ (ಕರ್ಮ) ಎಲ್ಲ ಕಾರ್ಯಗಳಿಗಿಂತ ಶ್ರೇಷ್ಠ? ಯಾವ ಕಾರ್ಯ ಮಾಡುವುದರಿಂದ ಎಲ್ಲ ಬಂಧನಗಳಿಂದ ಜೀವನು ಮುಕ್ತನಾಗುತ್ತಾನೆ?[೧]

ಈ ಪ್ರಶ್ನೆಗೆ ಹಂಸ ಹೀಗೆ ಉತ್ತರಿಸಿತು.

೧. ಮನುಷ್ಯರು ತಮ್ಮ ಹೃದಯದಲ್ಲಿರುವ (ಮನಸ್ಸಿನಲ್ಲಿ) ಆಧ್ಯಾತ್ಮಪ್ರಗತಿಗೆ ಪ್ರತಿಬಂಧಕಗಳಾದ ರಾಗದ್ವೇಷಗಳನ್ನು ನಿಯಂತ್ರಿಸಿ, ಬೇಕಾದುದನ್ನು ಬೇಡವಾದುದನ್ನು (ಪ್ರಿಯಾಪ್ರಿಯಗಳನ್ನು) ತನ್ನ ವಶದಲ್ಲಿಟ್ಟುಕೊಳ್ಳಬೇಕು. ಪ್ರಿಯರಿಂದ ಸಂತೋಷ, ಅಪ್ರಿಯರಿಂದ ದುಃಖಗಳಿಗೆ ತುತ್ತಾಗಬಾರದು. ಯಾರ ಬಗ್ಗೆಯೂ ಕೂಡ ಮಾತು, ಕೃತಿಗಳಿಂದ ದುಃಖವಾಗುವಂತೆ ವರ್ತಿಸಬಾರದು. ತನಗಿಂತ ಯೋಗ್ಯತೆಯಲ್ಲಿ ಅಧಮ ಯೋಗ್ಯತೆ ಇರುವ

---

೧ ತನ್ನಃ ಕಾರ್ಯಂ ಪಕ್ಷಿವರ ಪ್ರಶಾಧಿ ಯತ್ ಕಾರ್ಯಾಣಾಂ ಮನ್ಯಸೇ ಶ್ರೇಷ್ಠಮೇಕಮ್ ।
ಯತ್ಕೃತ್ವಾ ವೈ ಪುರುಷಃ ಸರ್ವಬಂಧೈರ್ವಿಮುಚ್ಯತೇ ವಿಹಗೇಂದ್ರೇಹ ಶೀಘ್ರಮ್ ॥ –೧೩೨/೬

ವ್ಯಕ್ತಿಯಿಂದ ಶಾಸ್ತ್ರೋಪದೇಶ ಪಡೆಯಬಾರದು. ಅಮಂಗಳ ಮಾತುಗಳನ್ನಾಡಬಾರದು. ನಮ್ಮ ಮಾತುಗಳೆಂಬ ಬಾಣಗಳು ಕೇಳುವವರಿಗೆ ಮಾನಸಿಕ ಆಘಾತಕ್ಕೆ ಕಾರಣವಾಗಬಾರದು.[೧]

ತನ್ನ ಮೇಲೆ ಬೇರೆ ಯಾರಾದರೂ ಕೋಪಗೊಂಡರೂ ತಾನು ಅವರ ಬಗ್ಗೆ ಪ್ರಸನ್ನನಾಗಿದ್ದಲ್ಲಿ ಅವರ ಕೋಪದಲ್ಲಿನ ಪುಣ್ಯವು ವಿದ್ವಾಂಸನಿಗೆ ಬರುತ್ತದೆ.[೨]

೩. ಸಾಧ್ಯರೇ ನಾನೂ ಸಹ ಬೇರೆ ಯಾರಾದರೂ ನನ್ನನ್ನು ನಿಂದಿಸಿದರೂ ನಾನು ಅವರಿಗೆ ಪ್ರತಿ ಆಡುವುದಿಲ್ಲ, ನನ್ನನ್ನು ಹೊಡೆದರೂ ಸಹಿಸುತ್ತೇನೆ. ಈ ಕ್ಷಮಾಗುಣ ಬಹಳ ಶ್ರೇಷ್ಠಗುಣವೆಂದು ಆರ್ಯರು ಹೇಳುತ್ತಾರೆ. ಕ್ಷಮಾ, ಸತ್ಯ, ಋಜುತ್ವ, ಅಕ್ರೌರ್ಯ ಗುಣಗಳನ್ನು ಶ್ರೇಷ್ಠ ಗುಣಗಳೆಂದು ಹೇಳುತ್ತಾರೆ.[೩]

**೪. ನೋಡಿ ಸಾಧ್ಯರೇ ! ವೇದರಹಸ್ಯ ಸತ್ಯನಿಷ್ಠೆ, ಸತ್ಯನಿಷ್ಠೆಯ ರಹಸ್ಯ ಇಂದ್ರಿಯನಿಗ್ರಹ. ದಮದ ರಹಸ್ಯವೇ ಮೋಕ್ಷ, ಇದುವೇ ಸರ್ವಶಾಸ್ತ್ರಸಾರ.[೪]**

೫. ಯಾರು ಮಾತಿನ ವೇಗವನ್ನು (ಬಾಯಿಗೆ ಬಂದಂತೆ ಮಾತನಾಡದಿರುವಿಕೆ), ಕೋಪದ ವೇಗವನ್ನು (ಸಿಟ್ಟಿನ ಕೈಯಲ್ಲಿ ಬುದ್ಧಿ ಕೊಡುವಿಕೆ), ನಿಷಿದ್ಧ ಬಯಕೆಯನ್ನು, ಹಸಿವು, ಬಾಯಾರಿಕೆಗಳನ್ನು ತನ್ನ ಶಕ್ತಿಯಿಂದ ಅಡಗಿಸಲು ಸಮರ್ಥನಾಗಿದ್ದಾನೋ, ಅವನೇ ನಿಜವಾಗಿಯೂ **ಬ್ರಾಹ್ಮಣಮುನಿ** ಎಂದು ನಾನು ಭಾವಿಸುತ್ತೇನೆ.[೫]

ಆದ್ದರಿಂದ ಕೋಪಿಷ್ಠರಿಗಿಂತ ಕೋಪವಿಲ್ಲದವನು, ವೈರಾಗ್ಯವಿಲ್ಲದವನಿಗಿಂತ ವೈರಾಗ್ಯ ಉಳ್ಳವನು ಶ್ರೇಷ್ಠ ಮನುಷ್ಯೇತರ ಪ್ರಾಣಿಗಿಂತ ಮನುಷ್ಯ ಶ್ರೇಷ್ಠ ಅಜ್ಞಾನಿಗಿಂತ ಜ್ಞಾನಿ ಶ್ರೇಷ್ಠ ತನ್ನ ಬಗ್ಗೆ ಅಪರಾಧವೆಸಗುವವನು ಅವಮಾನ ಮಾಡಲಿ, ಹೊಡೆಯಲಿ, ತನಗಿಂತ ಉತ್ತಮನಿರಲಿ, ಸಮನಿರಲಿ, ಅಧಮನಿರಲಿ ಅವನನ್ನು ಕ್ಷಮಿಸಬೇಕು. ಪ್ರತೀಕಾರ ಮಾಡಬಾರದು, ಸೇಡು ತೀರಿಸಿಕೊಳ್ಳಬಾರದು. ಇಂತಹ ಕ್ಷಮಾಗುಣವಂತನೇ ಸಿದ್ಧಿಯನ್ನು ಹೊಂದುತ್ತಾನೆ. ಇಲ್ಲೂ

---

೧ ಇದಂ ಕಾರ್ಯಮಮೃತಾಶಾಃ ಶೃಣೋಮಿ ತಪೋ ದಮಃ ಸತ್ಯಮಾತ್ಮಾಭಿಗುಪ್ತಿಃ।
ಗ್ರಂಥೀನ್ ವಿಮುಚ್ಯ ಹೃದಯಸ್ಯ ಸರ್ವಾನ್ ಪ್ರಿಯಾಪ್ರಿಯೇ ಸ್ವಂ ವಶಮಾನಯೀತ॥ -೧೩೨/೭

೨ ಸಂರೋಷ್ಯಮಾಣಃ ಪ್ರತಿಮೃಷ್ಯತೇ ಯಃ ಸ ಆದತ್ತೇ ಸುಕೃತಂ ವೈ ಪರಸ್ಯ॥ - ೧೩೨/೧೦

೩. ಆಕ್ರುಶ್ಯಮಾನೋ ನ ವದಾಮಿ ಕಿಂಚಿತ್ ಕ್ಷಮಾಮ್ಯಹಂ ತಾಡ್ಯಮಾನಶ್ಚ ನಿತ್ಯಮ್।
ಶ್ರೇಷ್ಠಂ ಹ್ಯೇತತ್ ಕ್ಷಮಾಮಪ್ಯಾಹುರಾರ್ಯಾಃ ಸತ್ಯಂ ತಥೈವಾರ್ಜವಮಾನೃಶಂಸ್ಯಮ್॥
-೧೩೨/೧೨

೪ ವೇದಸ್ಯೋಪನಿಷತ್ ಸತ್ಯಂ ಸತ್ಯಸ್ಯೋಪನಿಷದ್ ದಮಃ।
ದಮಸ್ಯೋಪನಿಷನ್ಮೋಕ್ಷ ಏತತ್ ಸರ್ವಾನುಶಾಸನಮ್॥ - ೧೩೨/೧೩

೫ ವಾಚೋ ವೇಗಂ ಮನಸಃ ಕ್ರೋಧ ವೇಗಂ ಕಕಿವಿತ್ಸಾವೇಗಮುದರೋಪಸ್ಥವೇಗಮ್।
ಏತಾನ್ ವೇಗಾನ್ ಯೋ ವಿಷಯಜತ್ಯುದೀರ್ಣಾಂಸ್ತಂ ಮನ್ಯೇऽಹಂ ವೈ ಮುನಿಂ ಚ॥
- ೧೩೨/೧೪

ಸೂಕ್ಷ್ಮ ವಿಷಯವೆಂದರೆ ಭಗವದ್ವೇಷ ಮಾಡುವವನನ್ನು ಕ್ಷಮಿಸಬಾರದು: **ಕ್ಷಮಾಸರ್ವತ್ರ ಧರ್ಮೋ ನ ಪಾಪ ಹೇತುಶ್ಚ ದುರ್ಜನೇ ॥** (ಮ.ಭಾ.ತಾ.ನಿ. ೨೨/೬೪).

ನಿಂದಿಸುವ ವ್ಯಕ್ತಿಯನ್ನು ಅವನ ಕ್ರೋಧವೇ ತೃಣವನ್ನು ಅಗ್ನಿ ಸುಡುವಂತೆ ಸುಡುತ್ತದೆ. ಆದ್ದರಿಂದ ನಿಂದಿಸಲ್ಪಡುವ ವ್ಯಕ್ತಿಯು ವಿನಾಕಾರಣ ತನ್ನ ಪುಣ್ಯವನ್ನು ಕಳೆದುಕೊಳ್ಳಬಾರದು. ಪ್ರತ್ಯುತ ನಿಂದಿಸುವ ವ್ಯಕ್ತಿಯ ಪುಣ್ಯವೇ ನಿಂದೆಗೆ ಗುರಿಯಾದವನಿಗೆ ಹೋಗುವವ್ಯವಸ್ಥೆ ಅಧ್ಯಾತ್ಮ ಪ್ರಪಂಚದಲ್ಲಿದೆ.

ಹಂಸರೂಪಿ ಬ್ರಹ್ಮ ಹೇಳುತ್ತಾನೆ – 'ನಾನೆಲ್ಲವನ್ನೂ ಪಡೆದು ಕೃತಾರ್ಥನಾಗಿದ್ದರೂ, ಪೂಜ್ಯರನ್ನು ಸೇವಿಸಲು ಇಚ್ಛಿಸುತ್ತೇನೆ. ನನಗೆ ವಿಷಯಾಭಿಲಾಷೆಗಳಿಲ್ಲ, ರೋಷವು ನನ್ನನ್ನು ಉತ್ಸಾಹದ ಕಾರ್ಯ ಮಾಡಿಸುವುದಿಲ್ಲ, ಯಾವುದೇ ಲೋಭದಿಂದ ನಾನು ಅಧರ್ಮಮಾರ್ಗ ಅನುಸರಿಸುವುದಿಲ್ಲ, ಏಕೆಂದರೆ ಅವು ತಾನಾಗಿ ಸಿಗುತ್ತವೆ. ನಾನು ಶಾಪ ಕೊಡುವವರಿಗೆ ಶಾಪ ಕೊಡುವುದಿಲ್ಲ, ಕಾರಣ ದಮ ಮೋಕ್ಷದ ಮಾರ್ಗವೆಂದು ಭಾವಿಸಿದ್ದೇನೆ. ಈ ವಿಷಯದಲ್ಲಿ ಒಂದು ಮುಖ್ಯ ರಹಸ್ಯವೆಂದರೆ ಮನುಷ್ಯ ಜನ್ಮಕ್ಕಿಂತ ಉತ್ತಮ ಮತ್ತೊಂದಿಲ್ಲ, ಅದನ್ನು ಸಾರ್ಥಕ ಮಾಡಿಕೊಳ್ಳಬೇಕು. ಇಂದ್ರಿಯನಿಗ್ರಹದಿಂದ.[೧]

೬. ಯಾರು ತನ್ನಲ್ಲಿ ಹೆಮ್ಮೆ ಪಡಬಹುದಾದ ಗುಣಗಳಿದ್ದರೂ ಕಂಬದಂತೆ (ಸ್ಥಾಣುವಿನಂತೆ) ಎಲ್ಲರಿಂದಲೂ ಪೂಜ್ಯನಾಗುತ್ತಾನೋ, ಯಾರನ್ನು ಕುರಿತು ಎಲ್ಲರೂ ಒಳ್ಳೆಯ ಮಾತುಗಳನ್ನಾಡುತ್ತಾರೋ, ಅವನು ದೇವತೆಗಳಿಗೆ ಸಮೀಪ ಹೋಗುತ್ತಾನೆ.

೭. ಕೆಲವು ಜನರು ಇತರರ ದೋಷಗಳನ್ನು ಹೇಳಲು ಉತ್ಸುಕರಾಗಿರುತ್ತಾರೆಯೇ ಹೊರತು, ಅವರ ಒಳ್ಳೆಯ ಗುಣಗಳನ್ನಲ್ಲ[೨] (ಆಗ ಅವರದು ಗಾಢಮೌನ. ಕಾರಣ ಇವರದು ಕೇವಲ ದೋಷೈಕ ದೃಷ್ಟಿಯಾದ್ದರಿಂದ).

೮. ಯಾವ ವ್ಯಕ್ತಿಯ ಮಾತು, ಮನಸ್ಸು ಯಾವಾಗಲೂ ಭಗವಂತನಲ್ಲಿರುತ್ತದೋ, ಅಂತಹವನು ವೇದಾಧ್ಯಯನ, ತಪಸ್ಸು, ತ್ಯಾಗ ಇವುಗಳ ಫಲವನ್ನು ಪಡೆಯುತ್ತಾನೆ.[೩]

೯. ವಿದ್ವಾಂಸರು ಅಜ್ಞಾನಿಗಳಿಗೆ ಉಪದೇಶ ಮಾಡುವಾಗ, ಅವನನ್ನು ನಿಂದಿಸದೆ ಅವಮಾನಿಸದೆ ಬೋಧಿಸಬೇಕು. ಅವನ ಎದುರಿನಲ್ಲಿ ಬೇರೆಯವರನ್ನು ಹೊಗಳಬಾರದು.

---

೧ ನಾಹಂ ಶಪ್ತಃ ಪ್ರತಿಶಮಾಪಿ ಕಿಂಚಿದ್ ದಮಂ ದ್ವಾರಂ ಹ್ಯಮೃತಸ್ಯೇಹ ವೇದ್ಮಿ ।
ಗುಹ್ಯಂ ಬ್ರಹ್ಮ ತದಿದಂ ವೋ ಬ್ರವೀಮಿ ನ ಮಾನುಷಾಚ್ಛ್ರೇಷ್ಠತರಂ ಹಿ ಕಿಂಚಿತ್ ॥ – ೧೩೨/೨೦

೨ ನ ತಥಾ ವಕ್ತುಮಿಚ್ಛಂತಿ ಕಲ್ಯಾಣಾನ್ ಪುರುಷೇ ಗುಣಾನ್ ।
ಯಥೈಷಾಂ ವಕ್ತುಮಿಚ್ಛಂತಿ ನೈರ್ಗುಣ್ಯಮನುಯುಂಜಕಾಃ ॥ – ೧೩೨/೨೩

೩ ಯಸ್ಯ ವಾಙ್ಮನಸೀ ಗುಪ್ತೇ ಸಮ್ಯಕ್‌ಪ್ರಣಿಹಿತೇ ಸದಾ ।
ವೇದಾಸ್ತಪಶ್ಚ ತ್ಯಾಗಶ್ಚ ಸ ಇದಂ ಸರ್ವಮಾಪ್ನುಯಾತ್ ॥ – ೧೩೨/೨೪

ಯಾವ ಮನುಷ್ಯನು ಸತ್ಯ, ಇಂದ್ರಿಯನಿಗ್ರಹ, ಪ್ರಾಮಾಣಿಕತೆ (ಕಾಯೇನ ವಾಚಾ ಮನಸಾ), ದಯಾ, ಧೈರ್ಯ, ಕ್ಷಮಾ ಎಂಬ ಉತ್ತಮಗುಣಗಳನ್ನು ಹೆಚ್ಚು ಹೆಚ್ಚು ಹೊಂದುತ್ತಾನೋ, ವೇದಾಧ್ಯಯನನಿರತನೋ, ಮತ್ತೊಬ್ಬರ ದ್ರವ್ಯಾದಿಗಳಿಗೆ ಆಸೆ ಪಡುವುದಿಲ್ಲವೋ, ಏಕಾಂತಪ್ರಿಯನೋ, ಅಂತಹವನು ಮೋಕ್ಷ ಹೊಂದುತ್ತಾನೆ.[೧]

ಸಾಧ್ಯರೇ! ನಾನು ಸಂಚರಿಸಿದಲ್ಲೆಲ್ಲಾ ದೇವತೆಗಳಿಗೆ, ಮನುಷ್ಯರಿಗೆ ಸತ್ಯವು ಸ್ವರ್ಗದ ಸೋಪಾನವೆಂದೂ, ಸಮುದ್ರದಾಟುವ ನೌಕೆಯಂತೆ ಸಾಧನವೆಂದು ಹೇಳುತ್ತಿದ್ದೇನೆ.

೧೧. ಮನುಷ್ಯನು ಎಂತಹವರೊಡನೆ ವಾಸ ಮಾಡುತ್ತಾನೋ ಹಾಗೆಯೇ ಆಗುತ್ತಾನೆ.[೨]

೧೨. ದೇವತೆಗಳು ಯಾವಾಗಲೂ ಸತ್ಪುರುಷರ ಸಂಗವನ್ನು ಮಾಡುತ್ತಾ ಅವರೊಡನೆ ವಾಸ ಮಾಡುತ್ತಾರೆ. ಹೀಗಾಗಿ ಮನುಷ್ಯ ಸಂಬಂಧಿ ಕ್ಷಣಿಕಸುಖಗಳನ್ನು ನೋಡಿಯೂ ಕುರುಡರಂತೆ ಇರುತ್ತಾರೆ. ಕೇಳಿಯೂ ಕಿವುಡರಂತೆ ಇರುತ್ತಾರೆ.[೩]

೧೩. ಉಪಸ್ಥ ಉದರಗಳ ತೃಪ್ತಿಗಾಗಿಯೇ ಯಾರು ಇರುತ್ತಾರೆಯೋ, ಕಠೋರ ಮಾತುಗಳನ್ನು ಯಾರು ಆಡುತ್ತಾರೋ, ಅಂತಹವರನ್ನು ದೇವತೆಗಳು ದೂರದಿಂದಲೇ ತ್ಯಜಿಸುತ್ತಾರೆ.

೧೪. ಸಾತ್ತ್ವಿಕಗುಣವಿಲ್ಲದೇ ಮಾಡುವ ಸತ್ಕರ್ಮಗಳಾಗಲೀ, ಭಕ್ಷ್ಯಾಭಕ್ಷ್ಯ ವಿವೇಚನೆಯಿಲ್ಲದೆ ತಿನ್ನುವ ವ್ಯಕ್ತಿಗಳ ಕರ್ಮಗಳಿಂದಾಗಲೀ, ಪಾಪಿಗಳು ಮಾಡುವ ಕರ್ಮಗಳಿಂದಾಗಲೀ, ದೇವತೆಗಳು ಪ್ರಸನ್ನರಾಗುವುದಿಲ್ಲ. ಸತ್ಯನಿಷ್ಠರಾದ, ಕೃತಜ್ಞರಾದ, ಧರ್ಮನಿಷ್ಠರಾದವರೊಡನೆ ಮಾತ್ರ ದೇವತೆಗಳು ಸಂಬಂಧವಿಟ್ಟುಕೊಳ್ಳುತ್ತಾರೆ.[೪]

೧೫. ಮಾತಿನ ನಾಲ್ಕು ನಿಯಗಳಿವು - ವ್ಯರ್ಥ ಮಾತಿಗಿಂತ ಮಾತನಾಡದಿರುವುದು, ಸತ್ಯ ಮಾತನಾಡುವುದು, ಪ್ರಿಯವಾದುದನ್ನು ಮಾತನಾಡಬೇಕು, ಸತ್ಯವೂ, ಪ್ರಿಯವೂ, ಧರ್ಮಸಮ್ಮತವೂ ಆದ ಮಾತನ್ನೇ ಆಡುವುದು.[೫]

---

೧ ಸತ್ಯಂ ದಮಂ ಹ್ಯಾರ್ಜವಮಾನೃಶಂಸ್ಯಂ ಧೃತಿಂ ತಿತಿಕ್ಷಾಮಭಿಸೇವಮಾನಃ।
ಸ್ವಾಧ್ಯಾಯನಿತ್ಯೋಽಸ್ಪೃಹಯನ್ ಪರೇಷಾಮೇಕಾಂತಶೀಲೋರ್ಧ್ವಗತಿರ್ಭವೇತ್ ಸಃ॥
-೧೩೨/೨೯

೨ ಯಾದೃಶೈಃ ಸನ್ನಿವಸತಿ ಯಾದೃಶಾಂಶ್ಚೋಪಸೇವತೇ।
ಯಾದೃಗಿಚ್ಛೇಚ್ಚ ಭವಿತುಂ ತಾದೃಗ್ ಭವತಿ ಪೂರುಷಃ॥ - ೧೩೨/೩೨

೩. ಸದಾ ದೇವಾಃ ಸಾಧುಭಿಃ ಸಂವದಂತೇ ನ ಮಾನುಷಂ ವಿಷಯಂ ಯಾಂತಿ ದ್ರಷ್ಟುಮ್।
ನೇಂದುಃ ಸಮಃ ಸ್ಯಾದಸಮೋ ಹಿ ವಾಯುರುಚ್ಚಾವಚಂ ವಿಷಯಂ ಯಃ ಸ ವೇದ॥ - ೧೩೨/೩೪

೪ ನ ವೈ ದೇವಾ ಹೀನಸತ್ತ್ವೇನ ತೋಷ್ಯಾಃ ಸರ್ವಾಶಿನಾ ದುಷ್ಕೃತಕರ್ಮಣಾ ವಾ।
ಸತ್ಯವ್ರತಾ ಯೇ ತು ನರಾಃ ಕೃತಜ್ಞಾ ಧರ್ಮೇ ರತಾಸ್ತೈಃ ಸಹ ಸಂಭಂಜತೇ॥ - ೧೩೨/೩೭

೫ ಅವ್ಯಾಹೃತಂ ವ್ಯಾಹೃತಾಚ್ಛ್ರೇಯ ಆಹುಃ ಸತ್ಯಂ ವದೇತ್ ವ್ಯಾಹೃತಂ ತದ್ ದ್ವಿತೀಯಮ್।

ಹಂಸರೂಪಿ ಬ್ರಹ್ಮದೇವರ ಉಪದೇಶವನ್ನು ಕೇಳಿದ ಮೇಲೆ ಸಾಧ್ಯರು ಮತ್ತೆ ಪ್ರಶ್ನಿಸುತ್ತಾರೆ.

ಈ ಲೋಕವು ಯಾವುದರಿಂದ ಆವೃತವಾಗಿದೆ? ಈ ಲೋಕವು ಏಕೆ ಪ್ರಕಾಶಮಾನವಾಗಿ ಕಾಣುತ್ತಿಲ್ಲ? ಮನುಷ್ಯನು ಮಿತ್ರರನ್ನು ಏಕೆ ತ್ಯಜಿಸುತ್ತಾನೆ? ಯಾವ ದೋಷದಿಂದ ಮನುಷ್ಯನು ಸ್ವರ್ಗಕ್ಕೆ ಹೋಗುವುದಿಲ್ಲ?

ಈ ಪ್ರಶ್ನೆಗಳಿಗೆ ಹಂಸನು ಉತ್ತರಿಸುತ್ತಾನೆ.

ಈ ಪ್ರಪಂಚವು ಅಜ್ಞಾನದಿಂದ ಆವೃತವಾಗಿದೆ. ಅಸೂಯೆಯಿಂದ ಜನರು ಪ್ರಕಾಶಮಾನವಾಗಿ ಕಾಣುತ್ತಿಲ್ಲ. ಲೋಭದಿಂದಾಗಿ ಮಿತ್ರರನ್ನು ತ್ಯಜಿಸುತ್ತಾರೆ. ಪುತ್ರಮಿತ್ರಾದಿಗಳಲ್ಲಿರುವ ಅತೀವ ರಾಗದಿಂದ ಸ್ವರ್ಗಕ್ಕೆ ಹೋಗಲು ಪ್ರತಿಬಂಧಕವಾಗಿದೆ.[೧]

೧೬. ಮತ್ತೇ ಸಾಧ್ಯರು ಪ್ರಶ್ನಿಸಿದರು.

ಬ್ರಾಹ್ಮಣರಲ್ಲಿ ಸುಖಿಯಾದ ಒಬ್ಬ ಪುರುಷನು ಯಾರು? ಅನೇಕರೊಡನೆ ಇದ್ದರೂ ಮೌನಿಯಾಗಿರುವ ಒಬ್ಬ ಮನುಷ್ಯನು ಯಾರು? ದುರ್ಬಲನಾಗಿದ್ದರೂ ಬಲಿಷ್ಠನಾಗಿ ಯಾರೊಡನೆ ಜಗಳವಾಡದೆ ಇರುವ ಆ ವ್ಯಕ್ತಿ ಯಾರು? ಇದಕ್ಕೆ ಹಂಸ ಪಕ್ಷಿ ಉತ್ತರಿಸಿತು.

ಬ್ರಹ್ಮಜ್ಞಾನಿಯಾದವನು ಬ್ರಾಹ್ಮಣರಲ್ಲಿ ಒಬ್ಬನೇ ಸುಖಪುರುಷ. ಅನೇಕರ ಜೊತೆಯಿದ್ದರೂ ಪ್ರಾಜ್ಞನಾದವ್ಯಕ್ತಿಯು ಮೌನಿ ಎನಿಸುತ್ತಾನೆ. ಪ್ರಾಜ್ಞನು ದೈಹಿಕವಾಗಿ ದುರ್ಬಲನಾಗಿದ್ದರೂ, ಬಲಿಷ್ಠನು. ಪ್ರಾಜ್ಞನಾದವನು ಯಾರ ಬಳಿಯೂ ಕದನಕ್ಕೆ, ಕಲಹಕ್ಕೆ ನಿಲ್ಲುವುದಿಲ್ಲ.[೨]

೧೭. ಸಾಧ್ಯರು ಕೇಳಿದ ಕೊನೆಯ ಪ್ರಶ್ನೆ ಹೀಗಿದೆ –

ಬ್ರಾಹ್ಮಣರಲ್ಲಿರುವ ದೈವತ್ವವು ಯಾವುದು? ಸಾಧುತ್ವವು ಯಾವುದು? ಅಸಾಧುತ್ವವು ಯಾವುದು? ಮನುಷ್ಯತ್ವವು ಯಾವುದು?

ಹಂಸರೂಪಿ ಬ್ರಹ್ಮನ ಉತ್ತರ ಹೀಗಿದೆ–

ಸ್ವಾಧ್ಯಾಯ, ಅಧ್ಯಯನಗಳೇ ಬ್ರಾಹ್ಮಣರ ದೈವತ್ವ; ವ್ರತಪರಿಪಾಲನೆಯೇ ಸಾಧುತ್ವ, ಚಾಡಿ ಮಾತುಗಳನ್ನಾಡುವುದೇ ಅಸಾಧುತ್ವ, ಮರಣಧರ್ಮವೇ ಮನುಷ್ಯತ್ವ.[೩]

---

ಧರ್ಮಂ ವದೇತ್ ವ್ಯಾಹೃತಂ ತತ್ತೃತೀಯಂ ಪ್ರಿಯಂ ವದೇದ್ ವ್ಯಾಹೃತಂ ತಚ್ಚತುರ್ಥಮ್ ॥
– ೧೩೨/೩೮

೧ ಅಜ್ಞಾನೇನಾವೃತೋ ಲೋಕೋ ಮಾತ್ಸರ್ಯಾನ್ನ ಪ್ರಕಾಶತೇ ।
ಲೋಭಾತ್ತ್ಯಜತಿ ಮಿತ್ರಾಣಿ ಸಂಗಾತ್ ಸ್ವರ್ಗಂ ನ ಗಚ್ಛತಿ ॥ – ೧೩೨/೪೦

೨ ಪ್ರಾಜ್ಞ ಏಕೋ ರಮತೇ ಬ್ರಾಹ್ಮಣಾನಾಂ ಪ್ರಾಜ್ಞ ಏಕೋ ಬಹುಭಿರ್ಜೋಷಮಾಸ್ತೇ ।
ಪ್ರಾಜ್ಞ ಏಕೋ ಬಲವಾನ್ ದುರ್ಬಲೋಽಪಿ ಪ್ರಾಜ್ಞ ಏಷಾಂ ಕಲಹಂ ನಾನ್ವವೈತಿ ॥ – ೧೩೨/೪೨

೩ ಸ್ವಾಧ್ಯಾಯ ಏಷಾಂ ದೈವತ್ವಂ ವ್ರತಂ ಸಾಧುತ್ವಮುಚ್ಯತೇ ।

ಭೀಷ್ಮರು ಈ ಸಂವಾದವನ್ನು ಹೇಳುತ್ತಾ 'ಎಲ್ಲ ಕರ್ಮಗಳಿಗೂ ಈ ಶರೀರವೇ ಮೂಲಕಾರಣ. ಸದ್ಭಾವವನ್ನೇ ಸತ್ಯವೇಂದು ಸಜ್ಜನರು ಭಾವಿಸಿದ್ದಾರೆ' ಎಂದು ಧರ್ಮರಾಜನಿಗೆ ನಿರೂಪಿಸಿದರು.

## ಸಂದೇಶಗಳು

ಹಂಸರೂಪಿ ಬ್ರಹ್ಮನ ಉಪದೇಶಗಳೆಲ್ಲ ಸಂದೇಶಗಳು. ಸಾಧ್ಯರಿಗೆ ಮಾತ್ರ ಸಾಧಕಗಳಲ್ಲ, ಅವರನ್ನು ನಿಮಿತ್ತ ಮಾಡಿಕೊಂಡು ಎಲ್ಲ ಸಾಧಕರಿಗೆ ಇವು ಸಂದೇಶಗಳಾಗಿವೆ. ವನಪರ್ವದಲ್ಲಿ ಯಕ್ಷಪ್ರಶ್ನೆ, ಧರ್ಮರಾಜನ ಉತ್ತರಗಳಂತೆ ಇವೆ. ಅದಕ್ಕಿಂತಲೂ ಇವು ಉತ್ತಮ. ಏಕೆಂದರೆ ಇಲ್ಲಿ ಉತ್ತರಿಸಿದವರು ಜೀವೋತ್ತಮರಾದ ಬ್ರಹ್ಮದೇವರು.

*****

---

ಅಸಾಧುತ್ವಂ ಪರೀವಾದೋ ಮೃತ್ಯುರ್ಮಾನುಷಮುಚ್ಯತೇ ॥ – ೧೩೨/೪೪

# ೧೯೭. ವಸಿಷ್ಠ-ಕರಾಲಜನಕರ ಸಂವಾದ

ಯುಧಿಷ್ಠಿರನ ಪ್ರಶ್ನೆ - ಯಾವುದನ್ನು ಹೊಂದಿದ ಮೇಲೆ ಮತ್ತೆ ಮರಳಿ ಸಂಸಾರಕ್ಕೆ ಬರುವುದಿಲ್ಲವೋ, ಆ ಅಕ್ಷರಪುರುಷನ ಲಕ್ಷಣವೇನು? ತದ್ವಿರುದ್ಧವಾಗಿ ಮರಳಿ ಸಂಸಾರಕ್ಕೆ ಬರುವ ಕ್ಷರವಸ್ತುವಿನ ಲಕ್ಷಣವೇನು?[೧] ಇದಕ್ಕೆ ಭೀಷ್ಮರು **ಕರಾಲಜನಕ** ಹಾಗೂ **ವಸಿಷ್ಠರ** ಸಂವಾದರೂಪ ಇತಿಹಾಸವನ್ನು ಹೇಳಿದರು.

ಹಿಂದೆ ಜನಕರಾಜನು (ಕರಾಲ) ಸೂರ್ಯಸಮಾನ ತೇಜಸ್ಸುಳ್ಳ ಶ್ರೇಷ್ಠ ಋಷಿಗಳಾದ, ಸುಖವಾಗಿ ಕುಳಿತಿದ್ದ ವಸಿಷ್ಠರ ಬಳಿಗೆ ಬಂದು ನಮಿಸಿ, ಆತ್ಯಂತಿಕ ಸುಖಕ್ಕೆ (ಮೋಕ್ಷಸುಖ) ಕಾರಣವಾದ ಜ್ಞಾನ ಯಾವುದೆಂದು ಪ್ರಶ್ನಿಸಿದನು.[೨] ಪೂಜ್ಯರೇ! ಯಾವಸ್ಥಾನಕ್ಕೆ ಹೋಗಿ ಜ್ಞಾನಿಗಳು ಮತ್ತೆ ಸಂಸಾರಕ್ಕೆ ವಾಪಸು ಬರುವುದಿಲ್ಲವೋ ಆ ಪರಬ್ರಹ್ಮನ ಬಗ್ಗೆ ಈ ಕೆಳಗಿನ ಪ್ರಶ್ನೆಗಳಿಗೆ ಉತ್ತರ ಬಯಸುತ್ತೇನೆ[೩] ಎಂದನು.

೧. ಜಗತ್ತೆಲ್ಲ ಎಲ್ಲಿ (ಯಾವ ವಸ್ತುವಿನಲ್ಲಿ) ನಾಶ ಹೊಂದುತ್ತದೆ? ಆ ಅಕ್ಷರವಸ್ತು ಯಾವುದು? ಯಾವುದು ಮಂಗಳಕರವಾಗಿಯೂ, ಕ್ಷೇಮಕರವಾಗಿಯೂ ದೋಷಗಳಿಲ್ಲದೆ ಇರುವ ಅಕ್ಷರವೆಂದು ಹೇಳಲ್ಪಟ್ಟಿದೆ?[೪]

ಈ ಪ್ರಶ್ನೆಗಳಿಗೆ ವಸಿಷ್ಠರ ಉತ್ತರ ಹೀಗಿದೆ -

ದೇವತಾಮಾನ ರೀತಿಯಿಂದ ಹನ್ನೆರಡು ಸಾವಿರ ವರ್ಷಗಳಿಗೆ ಒಂದು **ಚತುರ್ಯುಗವೆನ್ನುತ್ತಾರೆ.** ಇದನ್ನು **ಮಹಾಯುಗವೆನ್ನುತ್ತಾರೆ.** ಇಂತಹ ಕಲ್ಪ ಅಥವಾ ಮಹಾಯುಗ ಒಂದು ಸಾವಿರ ಬಾರಿ ತಿರುಗಿದಾಗ **ಬ್ರಹ್ಮನ ಒಂದು ದಿವಸ** ಆಗುತ್ತದೆ. ಇಷ್ಟೇ ಪರಿಮಾಣವುಳ್ಳದ್ದು ಬ್ರಹ್ಮನ ಒಂದು ರಾತ್ರಿ. ಇಂತಹ ಒಂದು ಹಗಲು-ರಾತ್ರಿ ಕಳೆದ ಬಳಿಕ ಬ್ರಹ್ಮನು ಸೃಷ್ಟಿಗಾಗಿ ಎಚ್ಚರ ಹೊಂದುತ್ತಾನೆ.[೫]

---

೧ ಕಿಂ ತದಕ್ಷರಮಿತ್ಯುಕ್ತಂ ಯಸ್ಮಾನ್ನಾವರ್ತತೇ ಪುನಃ ।
ಕಿಂ ಚ ತತ್ಕ್ಷರಮಿತ್ಯುಕ್ತಂ ಯಸ್ಮಾದಾವರ್ತತೇ ಪುನಃ ॥ - ೧೩೫/೧

೨ ವಸಿಷ್ಠಂ ಶ್ರೇಷ್ಠಮಾಸೀನಮೃಷೀಣಾಂ ಭಾಸ್ಕರದ್ಯುತಿಮ್ ।
ಪಪ್ರಚ್ಛ ಜನಕೋ ರಾಜಾ ಜ್ಞಾನಂ ನೈಶ್ರೇಯಸಂ ಪರಮ್ ॥ - ೧೩೫/೮

೩ ಭಗವನ್ ಶ್ರೋತುಮಿಚ್ಛಾಮಿ ಪರಂ ಬ್ರಹ್ಮ ಸನಾತನಮ್ ।
ಯಸ್ಮಾನ್ನ ಪುನರಾವೃತ್ತಿಮಾಪ್ನುವಂತಿ ಮನೀಷಿಣಃ ॥ - ೧೩೫/೧೧

೪ ಯಚ್ಚ ತತ್ಕ್ಷರಮಿತ್ಯುಕ್ತಂ ಯತ್ರೇದಂ ಕ್ಷರತೇ ಜಗತ್ ।
ಯಚ್ಚಾಕ್ಷರಮಿತಿ ಪ್ರೋಕ್ತಂ ಶಿವಂ ಕ್ಷೇಮ್ಯಮನಾಮಯಮ್ ॥ - ೧೩೫/೧೨

೫ ಯುಗಂ ದ್ವಾದಶಸಾಹಸ್ರಂ ಕಲ್ಪಂ ವಿದ್ಧಿ ಚತುರ್ಯುಗಮ್ ।
ದಶಕಲ್ಪಶತಾವೃತ್ತಂ ತದಹರ್ಬ್ರಹ್ಮಮುಚ್ಯತೇ ।
ರಾತ್ರಿಶ್ಚೈತಾವತೀ ರಾಜನ್ ಯಸ್ಯಾಂತೇ ಪ್ರತಿಬುದ್ಧ್ಯತೇ ॥ -೧೩೫/೧೪

**ಶಂಭು** ಎನಿಸಿದ **ನಾರಾಯಣನು** ಅನಂತ ಕರ್ಮಗಳುಳ್ಳ ಚತುರ್ಮುಖ ಬ್ರಹ್ಮನನ್ನು ಸೃಷ್ಟಿಸುತ್ತಾನೆ. ಈ ಬ್ರಹ್ಮನು **ಅಣಿಮಾ, ಗರಿಮಾ** ಯೋಗಸಿದ್ಧಿಗಳನ್ನು ಹೊಂದಿರುತ್ತಾನೆ. ಇವನನ್ನು ಸೃಷ್ಟಿ ಮಾಡಿದ ನಾರಾಯಣನು ಎಲ್ಲ ಕಡೆ ಪಾದ, ಪಾಣಿ, ಕಣ್ಣು ಶಿರಸ್ಸು ಕಿವಿ ಮೊದಲಾದವುಗಳನ್ನು ಹೊಂದಿರುವ ಪರಮಾತ್ಮನೇ.

ಭಗವಂತನಿಂದ ಸೃಷ್ಟನಾದ **ಬ್ರಹ್ಮನನ್ನು** ಬುದ್ಧಿ ಎಂದು ಕರೆಯುತ್ತಾರೆ. ಯೋಗಶಾಸ್ತ್ರದಲ್ಲಿ ಆತನನ್ನು **ವಿರಿಂಚಿ, ಮಹತ್, ಅಜ** ಎಂದೂ ಕರೆಯಲಾಗಿದೆ.[೧] ಸಾಂಖ್ಯಶಾಸ್ತ್ರದಲ್ಲಿ ಅನೇಕ ನಾಮಗಳಿಂದ ಕರೆಯಲಾಗಿದೆ. ಅವನನ್ನು **ವಿಚಿತ್ರರೂಪ, ವಿಶ್ವಾತ್ಮ, ಏಕಾಕ್ಷರ** ಎಂದು ಕರೆಯುತ್ತಾರೆ.[೨] ಈ ಹಿರಣ್ಯಗರ್ಭನು ನಾನಾರೂಪದ ಜಗತ್ತನ್ನು ಸೃಷ್ಟಿಮಾಡಿ ಜಗತ್ತನ್ನೆಲ್ಲ ವ್ಯಾಪಿಸಿರುವುದರಿಂದ **ವಿಶ್ವರೂಪ** ಎಂದು ಹೆಸರುವಾಸಿಯಾಗಿದ್ದಾನೆ.

ಈ ಹಿರಣ್ಯಗರ್ಭನು ಅವ್ಯಕ್ತತತ್ತ್ವವನ್ನು ಮಹತ್ತತ್ತ್ವವನ್ನಾಗಿ, ಅದನ್ನು ಅಹಂಕಾರತತ್ತ್ವವನ್ನಾಗಿ ತನ್ನ ಮೂಲಕ ಸೃಷ್ಟಿಗೆ ತರುತ್ತಾನೆ (ವಿಕಾರಗೊಳಿಸಿ). ಅವ್ಯಕ್ತತತ್ತ್ವವನ್ನು **ವಿದ್ಯಾಸ್ವರ್ಗ**ವೆಂದೂ, ಮಹತ್ತತ್ತ್ವ, ಅಹಂಕಾರತತ್ತ್ವಗಳಿಗೆ **ಅವಿದ್ಯಾಸ್ವರ್ಗ**ವೆಂದೂ ಕರೆಯುವರು.[೩] **ಅಪರ**ನೆನಿಸಿದ ಅಹಂಕಾರತತ್ತ್ವಾಭಿಮಾನಿಯಾದ ರುದ್ರನು, **ಪರ**ನೆನಿಸಿದ ಚತುರ್ಮುಖಬ್ರಹ್ಮನು ನಾರಾಯಣನಿಂದ ಸೃಜಿಸಲ್ಪಟ್ಟಿದ್ದಾರೆ.[೪] ಅಹಂಕಾರದಿಂದ ಯಾವ ಯಾವ ಭೂತಗಳ ಸೃಷ್ಟಿಯಾಗುತ್ತದೋ, ಅದನ್ನು ಮೂರನೇ ಸೃಷ್ಟಿ ಎನ್ನುತ್ತಾರೆ. ವೈಕಾರಿಕ, ತೈಜಸ, ತಾಮಸ ಅಹಂಕಾರಗಳಲ್ಲಿ ವೈಕಾರಿಕ ಅಹಂಕಾರದಿಂದ ಸೃಷ್ಟಿಯಿಂದ ಪಡೆದಿರುವ ವಸ್ತುವೇ ನಾಲ್ಕನೇ **ವೈಕೃತಸೃಷ್ಟಿ**.[೫] ಆಕಾಶ, ವಾಯು, ತೇಜಸ್ಸು, ಜಲ ಹಾಗೂ ಪೃಥಿವೀಗಳು ಐದು ಭೂತಗಳು. ಶಬ್ದ, ಸ್ಪರ್ಶ, ರೂಪ, ರಸ, ಗಂಧ ಇವು ೫ ಭೂತಗಳಿಂದ ಹುಟ್ಟಿದ ವಿಷಯಗಳು[೬] (ಭೂತ). ಈ ಹತ್ತೂ ಒಮ್ಮೆಲೇ ಹುಟ್ಟಿವೆ. ಔಷಧಿ, ವನಸ್ಪತ್ಯಾದಿಗಳೆಲ್ಲ **೫ನೇ ಸೃಷ್ಟಿ**ಎನ್ನುತ್ತಾರೆ. ಇದು ಪ್ರಾಣಿಗಳಿಗೆ ಅನೇಕ ಪ್ರಯೋಜನ ಕೊಡುತ್ತದೆ.

---

೧ ಹಿರಣ್ಯಗರ್ಭೋ ಭಗವಾನೇಷ ಬುದ್ಧಿರಿತಿ ಸ್ಮೃತಃ।
ಮಹಾನಿತಿ ಚ ಯೋಗೇಷು ವಿರಿಂಚ ಇತಿ ಚಾಪ್ಯಜಃ॥ – ೧೩೫/೧೭

೨ ಸಾಂಖ್ಯೇ ಚ ಪಠ್ಯತೇ ಶಾಸ್ತ್ರೇ ನಾಮಭಿರ್ಬಹುಧಾತ್ಮಕಃ।
ವಿಚಿತ್ರರೂಪೋ ವಿಶ್ವಾತ್ಮಾ ಏಕಾಕ್ಷರ ಇತಿ ಸ್ಮೃತಃ॥ – ೧೩೫/೧೮

೩ ಅವ್ಯಕ್ತಾದ್ ವ್ಯಕ್ತಮುತ್ಪನ್ನಂ ವಿದ್ಯಾಸರ್ಗಂ ವದಂತಿ ತಮ್।
ಮಹಾಂತಂ ಚಾಪ್ಯಹಂಕಾರಮವಿದ್ಯಾಸರ್ಗಮೇವ ಚ॥ – ೧೩೫/೨೧

೪ ಅಪರಶ್ಚ ಪರಶ್ಚೈವ ಸಮುತ್ಪನ್ನೌ ತಥೈಕತಃ।
ವಿದ್ಯಾವಿದ್ಯೇತಿ ವಿಖ್ಯಾತೇ ಶ್ರುತಿಶಾಸ್ತ್ರಾರ್ಥಚಿಂತಕೈಃ॥ – ೧೩೫/೨೨

೫ ಭೂತಸರ್ಗಮಹಂಕಾರಾತ್ತೃತೀಯಂ ವಿದ್ಧಿ ಪಾರ್ಥಿವ।
ಅಹಂಕಾರೇಷು ಸರ್ವೇಷು ಚತುರ್ಥಂ ವಿದ್ಧಿ ವೈಕೃತಮ್॥ – ೧೩೫/೨೩

೬ ವಾಯುರ್ಜ್ಯೋತಿರಥಾಕಾಶಮಾಪೋಽಥ ಪೃಥಿವೀ ತಥಾ।
ಶಬ್ದಃ ಸ್ಪರ್ಶಶ್ಚ ರೂಪಂ ಚ ರಸೋ ಗಂಧಸ್ತಥೈವ ಚ॥ – ೧೩೫/೨೪

**ಏವಂ ಯುಗಪದುತ್ಪನ್ನಂ ದಶವರ್ಗಮಸಂಶಯಮ್ ।**
**ಪಂಚಮಂ ವಿದ್ಧಿ ರಾಜೇಂದ್ರ ಭೌತಿಕಂ ಸರ್ಗಮರ್ಥವತ್ ॥ -೧೩೫/೨೫**

ಎರಡು ಕಿವಿಗಳು, ಚರ್ಮ, ಕಣ್ಣುಗಳು, ನಾಲಿಗೆ, ಮೂಗು, ಇವು ಜ್ಞಾನೇಂದ್ರಿಯಗಳು. ವಾಕ್, ಪಾಣಿ, ಪಾದ, ಗುದ, ಉಪಸ್ಥ ಇವು ಕರ್ಮೇಂದ್ರಿಯಗಳು. ಮನಸ್ಸಿನಿಂದ ಕೂಡಿದ ಈ ಹತ್ತೂ ಇಂದ್ರಿಯಗಳು ಏಕಕಾಲದಲ್ಲಿಯೇ ಸೃಷ್ಟಿಯಾಗಿವೆ. ಹಿಗೆ ೨೪ ತತ್ತ್ವಗಳನ್ನು ಎಲ್ಲ ಪ್ರಾಣಿಗಳ ಶರೀರ ಹಾಗೂ ನಮ್ಮಲ್ಲಿ ಯಾರು ತಿಳಿಯುತ್ತಾರೋ ಅವರಿಗೆ ದುಃಖವಿಲ್ಲ.[೧]

ವಿಶ್ವದಲ್ಲಿನ ಎಲ್ಲ ಪಾಂಚಭೌತಿಕ ಶರೀರಗಳೆಲ್ಲ ೨೪ ತತ್ತ್ವಗಳಿಂದ ಕೂಡಿದುವೇ ಆಗಿದೆ. ಅವು ದೇವತೆಗಳಿಂದ ಹಿಡಿದು ಕ್ರಿಮಿಕೀಟಗಳವರೆಗೆ. ದೇಹ ಧರಿಸಿದ ಪ್ರಾಣಿಗಳಿರುವುದು ಪೃಥಿವೀ, ಜಲ ಹಾಗೂ ಆಕಾಶಗಳಲ್ಲಿ ಮಾತ್ರ. ನಾನು ಇದನ್ನು ವಿದ್ವಾಂಸರಿಂದ ತಿಳಿದಿದ್ದೇನೆ.[೨]

ಸಂಪೂರ್ಣ ಜಗತ್ತೆಲ್ಲ ವ್ಯಕ್ತವಾಗಿದ್ದು ವಿಕಾರ ಹೊಂದುತ್ತಲೇ ಇರುತ್ತದೆ. ಆದ್ದರಿಂದ ಈ ಜಗತ್ತು ಕ್ಷರ ಎಂದು ಕರೆಯಲ್ಪಟ್ಟಿದೆ.[೩]

ಕ್ಷರ ಜಗತ್ತಿನಿಂದ ವಿಲಕ್ಷಣವಾದುದು ಅಕ್ಷರ. ಇದು ಅವ್ಯಕ್ತ. ಅಕ್ಷರ ತತ್ತ್ವದಿಂದಲೇ ಈ ಮೋಹಾತ್ಮಕವಾದ ವ್ಯಕ್ತ ಎಂಬ ಜಗತ್ತು ಹುಟ್ಟುತ್ತದೆ.[೪]

೨೪ ತತ್ತ್ವಗಳ ಈ ಕ್ಷರ ಎನಿಸಿದ ಜಗತ್ತಿನಲ್ಲಿ ಮೊದಲು ಮಹತ್ತತ್ತ್ವ ಹುಟ್ಟಿತು. ಇದುವೇ ಕ್ಷರ ಎನ್ನುವುದರ ಪರಿಚಯ.[೫]

೨೫ನೇ ತತ್ತ್ವವೇ ಮಹಾವಿಷ್ಣು. ಈತನು ಎಲ್ಲ ೨೪ ತತ್ತ್ವಗಳಿಗಿಂತ ವಿಲಕ್ಷಣ. ಈ ಎಲ್ಲ ತತ್ತ್ವಗಳಿಗೆ ಆಶ್ರಯ ನೀಡಿದ ವಿಷ್ಣುತತ್ತ್ವ ಎನಿಸಿದ್ದಾನೆ.[೬] ೨೪ನೇ ತತ್ತ್ವವು ಪ್ರಕೃತಿ ತತ್ತ್ವ.

---

೧ ಶ್ರೋತ್ರಂ ತ್ವಕ್ಚಕ್ಷುಷೀ ಜಿಹ್ವಾ ಘ್ರಾಣಮೇವ ಚ ಪಂಚಮಮ್ ।
ವಾಕ್ಚ ಹಸ್ತೌ ಚ ಪಾದೌ ಚ ಪಾಯುರ್ಮೇಢ್ರಂ ತಥೈವ ಚ ॥
ಬುದ್ಧೀಂದ್ರಿಯಾಣಿ ಚೈತಾನಿ ತಥಾ ಕರ್ಮೇಂದ್ರಿಯಾಣಿ ಚ ।
ಸಂಭೂತಾನೀಹ ಯುಗಪನ್ಮನಸಾ ಸಹ ಪಾರ್ಥಿವ ॥ - ೧೩೫/೨೭

೨ ಜಲೇ ಭುವಿ ತಥಾಕಾಶೇ ನಾನ್ಯತ್ರೇತಿ ವಿನಿಶ್ಚಯಃ ।
ಸ್ಥಾನಂ ದೇಹವತಾಮಸ್ತಿ ಇತ್ಯೇವಮನುಶುಶ್ರುಮ ॥ - ೧೩೫/೩೩

೩ ಕೃತ್ಸ್ನಮೇತಾವತಸ್ತಾತ ಕ್ಷರತೇ ವ್ಯಕ್ತಸಂಜ್ಞಕಮ್ ।
ಅಹನ್ಯಹನಿ ಭೂತಾತ್ಮಾ ತತಃ ಕ್ಷರ ಇತಿ ಸ್ಮೃತಃ ॥ - ೧೩೫/೩೪

೪ ಏತದಕ್ಷರಮಿತ್ಯುಕ್ತಂ ಕ್ಷರತೀದಂ ಯಥಾ ಜಗತ್ ।
ಜಗನ್ಮೋಹಾತ್ಮಕಂ ಪ್ರಾಹುರವ್ಯಕ್ತಂ ವ್ಯಕ್ತಸಂಜ್ಞಕಮ್ ॥ - ೧೩೫/೩೫

೫ ಮಹಾಂಶ್ಚೈವಾಗ್ರಜೋ ನಿತ್ಯಮೇತತ್ ಕ್ಷರನಿದರ್ಶನಮ್ ।
ಕಥಿತಂ ತೇ ಮಹಾರಾಜ ಯಸ್ಮಾನ್ನಾವರ್ತತೇ ಪುನಃ ॥ - ೧೩೫/೩೬

೬ ಪಂಚವಿಂಶತಿಮೋ ವಿಷ್ಣುರ್ನಿಸ್ತತ್ತ್ವಸ್ತತ್ತ್ವಸಂಜ್ಞಕಃ ।

೨೫ನೇಯದೇ ಅಮೂರ್ತನಾದ ಪರಮಾತ್ಮ. ಅವನು ಎಲ್ಲರ ಶರೀರಾಂತರ್ಯಾಮಿ.[೧] ಇವನಿಗೆ ಪ್ರಾಕೃತಮೂರ್ತ ಶರೀರವಿಲ್ಲ, ಪ್ರಾಕೃತ ಗುಣಹೀನನಾದ್ದರಿಂದ ನಿರ್ಗುಣನೆಂದೂ, ಅಪ್ರಾಕೃತಗುಣಗಳಿರುವುದರಿಂದ ಗುಣ ಎಂದೂ ಪ್ರಸಿದ್ಧಿಯಾಗಿದ್ದಾನೆ.[೨]

ಜೀವನು ಅಜ್ಞಾನಿಗಳ ಸಂಗದಿಂದಾಗಿ ಭಗವತ್ ಸ್ವರೂಪ ಸರಿಯಾಗಿ ತಿಳಿಯದೆ, ಅನೇಕ ಯೋನಿಗಳಲ್ಲಿ ಬೆಂದು ಬಳಲುತ್ತಾನೆ. ವಸ್ತುಸ್ಥಿತಿಗೆ ವಿರುದ್ಧವಾಗಿ ಮಾತನಾಡುತ್ತಾನೆ. ಪ್ರಕೃತಿಯ ಸಂಪರ್ಕದಿಂದಾಗಿ ಸತ್ವ, ರಜೋ, ತಮೋಗುಣಗಳನ್ನು ಹೊಂದುತ್ತಾನೆ.[೩] ದುಷ್ಟರ ಸಹವಾಸದಿಂದ ತನ್ನ ಅಸ್ತಿತ್ವವನ್ನು ಕಳೆದುಕೊಂಡು, ನಾನು ಬೇರೆಯಲ್ಲ, ಪರಮಾತ್ಮನು ಬೇರೆಯಲ್ಲ, ನಾನೇ ಪರಮಾತ್ಮ ಎಂದು ಹೇಳುತ್ತಾ ಗುಣಗಳ ಬಂಧದಲ್ಲಿಯೇ ಇರುತ್ತಾನೆ. ಸತ್ವಾದಿ ಗುಣಗಳ ಸಹವಾಸದಿಂದ ಸತ್ವಾದಿ ಗುಣಗಳನ್ನು ಹೊಂದುವನು. ಫಲವಾಗಿ ತಾಮಸರು ನರಕ (ನಿತ್ಯ)ವನ್ನೂ, ರಾಜಸರು ಮನುಷ್ಯಲೋಕವನ್ನೂ, ಸತ್ವಗುಣಗದವರು ದೇವಲೋಕವನ್ನೂ ಹೊಂದುತ್ತಾರೆ. ಪೂರ್ಣವಾಗಿ ಪಾಪಕರ್ಮಾಚರಣೆಯಿಂದ ದುಷ್ಟಯೋನಿಗಳನ್ನು ಹೊಂದುತ್ತಾನೆ. ಪುಣ್ಯ-ಪಾಪ ಎರಡನ್ನೂ ಮಾಡಿದವನು ಮನುಷ್ಯನಾಗಿಯೂ, ಕೇವಲ ಪುಣ್ಯ ಮಾಡಿದವನು ದೇವಯೋನಿಯಲ್ಲಿ ಹುಟ್ಟುತ್ತಾನೆ.

ಹೀಗೆ ವಿದ್ವಾಂಸರು ಪ್ರಕೃತಿಯಿಂದ ಹುಟ್ಟುವ ವಸ್ತುಗಳನ್ನು ಕ್ಷರವೆಂದು ಕರೆಯುತ್ತಾರೆ. ೨೫ನೇ ತತ್ತ್ವವೇ ಅಕ್ಷರತತ್ತ್ವ. ಅವನ ಜ್ಞಾನವು ಶಾಸ್ತ್ರದಿಂದ ಹುಟ್ಟುತ್ತದೆ.[೪]

ವಸಿಷ್ಠರು ಮುಂದುವರೆದು ಜನಕರಾಜನಿಗೆ ಉಪದೇಶಿಸುತ್ತಾರೆ.

ಸಾಮಾನ್ಯವಾಗಿ ಚೇತನನಿಗೆ ತನ್ನ ಸ್ವರೂಪ ತಿಳಿಯದಿರುವುದರಿಂದ ಅಜ್ಞಾನವನ್ನು ಆಶ್ರಯಿಸಿರುತ್ತಾನೆ. ಹೀಗಾಗಿ ಒಂದು ದೇಹದಲ್ಲಿ ಮಾಡಿದ ಕರ್ಮಗಳು ಮುಂದೆ ಸಹಸ್ರಾರು ದೇಹಗಳಿಗೆ ಕಾರಣವಾಗುತ್ತದೆ.[೫] ಪರಿಣಾಮವಾಗಿ ಅವನಿಗೆ ತ್ರಿಗುಣ ಸಂಬಂಧಿಯಾದ ಸಾವಿರಾರು ನೀಚಯೋನಿಗಳನ್ನು (ದುಷ್ಟಪ್ರಾಣಿಗಳ), ಕೆಲವೊಮ್ಮೆ ಸತ್ಕರ್ಮ ಮಾಡಿದ್ದರೆ

ತತ್ತ್ವಸಂಶ್ರಯಣಾದೇತತ್ ತತ್ತ್ವಮಾಹುರ್ಮನೀಷಿಣಃ ॥ – ೧೩೫/೩೭

೧ ಯದಮೂರ್ತ್ಯಸೃಜದ್ವ್ಯಕ್ತಂ ತತ್ತನ್ಮೂರ್ತ್ಯಧಿತಿಷ್ಠತಿ ।
ಚತುರ್ವಿಂಶತಿಮೋ ವ್ಯಕ್ತೋ ಹ್ಯಮೂರ್ತಃ ಪಂಚವಿಂಶಕಃ ॥ – ೧೩೫/೩೮

೨ ಸರ್ಗಪ್ರಲಯಧರ್ಮಿಣ್ಯಾ ಅಸರ್ಗಪ್ರಳಯಾತ್ಮಕಃ ।
ಗೋಚರೇ ವರ್ತತೇ ನಿತ್ಯಂ ನಿರ್ಗುಣೋ ಗುಣಸಂಜ್ಞಕಃ ॥ – ೧೩೫/೪೦

೩ ತಮಃಸತ್ತ್ವರಜೋಯುಕ್ತಸ್ತಾಸು ತಾಸ್ವಿಹ ಯೋನಿಷು ।
ಲೀಯತೇಽಪ್ರತಿಬುದ್ಧತ್ವಾದಬುದ್ಧಜನಸೇವನಾತ್ ॥ – ೧೩೫/೪೨

೪ ಏವಮವ್ಯಕ್ತವಿಷಯಂ ಕ್ಷರಮಾಹುರ್ಮನೀಷಿಣಃ ।
ಪಂಚವಿಂಶತಿಗೋ ಯೋಽಯಂ ಜ್ಞಾನಾದೇವ ಪ್ರವರ್ತತೇ ॥ – ೧೩೫/೪೮

೫ ಏವಮಪ್ರತಿಬುದ್ಧತ್ವಾದಬುದ್ಧಮನುವರ್ತತೇ ।
ದೇಹಾದ್ದೇಹಸಹಸ್ರಾಣಿ ತಥಾ ಸಮಭಿಪದ್ಯತೇ ॥ – ೧೩೬/೧

ದೈವೀಯೋನಿಗಳಲ್ಲೂ ಹುಟ್ಟುತ್ತಾನೆ. ಇವುಗಳಿಂದ ಅವನು ಮನುಷ್ಯ ಜನ್ಮದಿಂದ ದೇವಲೋಕಕ್ಕೂ, ಅಲ್ಲಿಂದ ಮತ್ತೇ ಮನುಷ್ಯ ಲೋಕಕ್ಕೂ, ಅಲ್ಲಿಂದ ಮತ್ತೆ ಕೊನೆಯಿರದ ನರಕಲೋಕಕ್ಕೂ ಹೊಂದುತ್ತಾನೆ. ರೇಷ್ಮೆ ಹುಳುವೇ ಇದಕ್ಕೆ ಉದಾಹರಣೆ. ತಾನೇ ಸುತ್ತಿದ ನೂಲಿನಿಂದ ಸಿಕ್ಕಿಹಾಕಿಕೊಂಡು ತ್ರಿಗುಣಗಳಿಗೆ ಬದ್ಧನಾಗಿ ಚೇತನನು ಬಂಧಿತನಾಗುತ್ತಾನೆ. ಸ್ವರೂಪದೃಷ್ಟಿಯಿಂದ ಜೀವನು ಸುಖದುಃಖಾದಿ ದ್ವಂದ್ವ ಗುಣಗಳಿಲ್ಲದಿದ್ದರೂ ತ್ರಿಗುಣಬಂಧನಕ್ಕೆ ಒಳಗಾಗಿ ದ್ವಂದ್ವಗಳಿಗೆ ತುತ್ತಾಗುತ್ತಾನೆ (ಸುಖದುಃಖ). ರೋಗಗಳಿಗೂ ತುತ್ತಾಗುತ್ತಾನೆ. ಜಲೋದರ, ದಾಹಜ್ವರ, ಕುಷ್ಠ ಅಪಸ್ಮಾರಾದಿ ರೋಗಗಳಿಗೆ ತುತ್ತಾಗುತ್ತಾನೆ[1]. ಅಜ್ಞಾನದಿಂದ ತಾನು ಪಡೆಯುವ ಜನ್ಮಗಳಿಗೆ ಅನುಗುಣವಾಗಿ ತಾನು ತಿರ್ಯಕ್ ಎಂದು, ದೇವತೆ ಎಂದೂ, ಇತರ ಜಂತೂ ಎಂದೂ ಪಾಪಪುಣ್ಯಗಳ ಫಲವಾಗಿ ದುಃಖಸುಖಗಳನ್ನು ಅನುಭವಿಸುತ್ತಾನೆ. ತಾನೇ ಪಶುವೆಂದು ಅಜ್ಞಾನವನ್ನು ಕಟ್ಟಿಕೊಂಡು, ದೇಹಾಭಿಮಾನಗಳಿಗೆ ತುತ್ತಾಗಿ ತನ್ನ ವಿವಿಧ ದೈಹಿಕವ್ಯಾಪಾರಗಳನ್ನು ಅನುಭವಿಸುತ್ತಾನೆ. ಉದಾ: ನಾನೀಗ ಬಿಳಿವಸ್ತ್ರ ಉಟ್ಟಿದ್ದೇನೆ, ಮಲಿನ ವಸ್ತ್ರ ಉಟ್ಟಿದ್ದೇನೆ, ನೆಲದ ಮೇಲೆ ಮಲಗಿದ್ದೇನೆ, ಇತ್ಯಾದಿ ನೂರಾರು ವ್ಯಾಪಾರಗಳು. ತಾನು ಪಡೆದ ಜನ್ಮಗಳಿಗೆ ಅನುಗುಣವಾಗಿ ಚಿತ್ರವಿಚಿತ್ರ ಭೋಜನಗಳನ್ನು ಸ್ವೀಕರಿಸುತ್ತಾನೆ. ಆ ಭೋಜನಗಳು ಒಂದೇ ತೆರನಾಗಿರದೆ, ವಿವಿಧ ಕಾಲಗಳಲ್ಲಿ, ಅವಧಿಗಳಲ್ಲಿ ಭೋಜನ ಮಾಡುತ್ತಾನೆ (ಎಲ್ಲ ಶರೀರಗಳಲ್ಲಿಯೂ ಭೋಜನ ಒಂದೇ ತೆರನಾಗಿರುವುದಿಲ್ಲ. ಒಂದು ಶರೀರದಲ್ಲಿ ವ್ಯವಸ್ಥೆಯು ದಿನಕ್ಕೆ ೨-೩ ಊಟಗಳಿದ್ದರೆ, ಇನ್ನೊಂದು ಶರೀರದಲ್ಲಿ ದಿನಕ್ಕೊಮ್ಮೆಯಾದರೂ ಭೋಜನ ಸಿಗಲಿಕ್ಕಿಲ್ಲ ಇತ್ಯಾದಿ). ಸರ್ಪ ಶರೀರದಲ್ಲಿ ವಾಯುಭಕ್ಷವಾಗಿರುತ್ತಾನೆ. ಹೀಗೆ ಸಾವಿರಾರು ಕೋಟಿಕೋಟಿ ಜನ್ಮಗಳಲ್ಲಿ ಆಹಾರದ ಕ್ರಮ ಬೇರೆ ಬೇರೆ ಇರುತ್ತದೆ. ಅದನ್ನಿಲ್ಲಿ ಉದ್ದೇಶಿಸಿ ಹೇಳಲಾಗಿದೆ.

ಅತ್ಯಂತ ಧಾರ್ಮಿಕ ಜನ್ಮ ಸಿಕ್ಕಾಗ ಕೃಚ್ಛ್ರ, ಚಾಂದ್ರಾಯಣಾದಿ ವ್ರತ ಮಾಡಬಹುದು[2]. ಚತುರ್ವಿಧ ಆಶ್ರಮಗಳನ್ನು ಚೆನ್ನಾಗಿ ಪಾಲಿಸುವ ಜನ್ಮಗಳೂ ಸಿಗಬಹುದು. ಮತ್ತೆ ಕೆಲವು ಜನ್ಮಗಳಲ್ಲಿ ದುಷ್ಟಶಾಸ್ತ್ರಗಳನ್ನು ಓದಿ ಅಧರ್ಮ ಪರಿಪಾಲಿಸಬಹುದು[3]. ಮತ್ತೆ ಕೆಲವೊಮ್ಮೆ ಸುಂದರ, ಪವಿತ್ರ ಪರಿಸರದಲ್ಲಿ ವ್ರತ, ನಿಯಮ, ತಪಸ್ಸುಗಳನ್ನು ಆಚರಿಸಬಹುದು[4].

---

೧ ಜಲೋದರೇಽರ್ಶಸಾಂ ರೋಗೇ ಜ್ವರಗಂಡವಿಷೂಚಿಕೇ।
ಶ್ವಿತ್ರೇ ಕುಷ್ಠೇಽಗ್ನಿದಾಹೇ ಚ ಸಿಧ್ಮಾಪಸ್ಮಾರಯೋರಪಿ॥ - ೧೩೬/೬

೨ ವಿವಿಧಾನಿ ಚ ಕೃಚ್ಛ್ರಾಣಿ ಸೇವತೇ ಸುಖಕಾಂಕ್ಷಯಾ।
ಚಾಂದ್ರಾಯಣಾನಿ ವಿಧಿವಲ್ಲಿಂಗಾನಿ ವಿವಿಧಾನಿ ಚ॥ - ೧೩೬/೧೯

೩ ಚಾತುರಾಶ್ರಮ್ಯಪಂಥಾನಮಾಶ್ರಯತ್ಯಾಶ್ರಮಾನಪಿ।
ಉಪಾಸೀನಶ್ಚ ಪಾಷಂಡಾನ್ ಗುಹಾಃ ಶೈಲಾಂಸ್ತಥೈವ ಚ॥ - ೧೩೬/೨೦

೪ ನಿಯಮಾನ್ ಸುವಿಚಿತ್ರಾಂಶ್ಚ ವಿವಿಧಾನಿ ತಪಾಂಸಿ ಚ।
ಯಜ್ಞಾಂಶ್ಚ ವಿವಿಧಾಕಾರಾನ್ ವಿಧೀಂಶ್ಚ ವಿವಿಧಾಂಸ್ತಥಾ॥ - ೧೩೬/೨೨

ಚಾತುರ್ವರ್ಣ್ಯಗಳನ್ನು ಅನುಸರಿಸುವ ಭಾಗ್ಯ ಸಿಗಬಹುದು. ದೀನ, ದಲಿತರ ಕೃಪಣಾಂಧರಿಗೆ ದಾನ ಮಾಡುವ ಜನ್ಮಗಳೂ ಸಿಗಬಹುದು. ಹೀಗೆ ಮಾಡಿಯೂ ಅಜ್ಞಾನದಿಂದ ತಾನೇ ದಾನ ಮಾಡಿರುವುದಾಗಿ ಅಭಿಮಾನ ಹೊಂದುತ್ತಾನೆ.

ಸಂಪಾದಿಸಿದ ಧರ್ಮಾರ್ಥಕಾಮಗಳನ್ನು ತನ್ನದೆಂದು ಭಾವಿಸುತ್ತಾನೆ. ಇದಕ್ಕೆಲ್ಲ ಪ್ರಕೃತಿ ಮೂಲಕವಾಗಿ ತನ್ನನ್ನೇ ಅನೇಕ ಪ್ರಕಾರವಾಗಿ ವಿಭಾಗಿಸಿಕೊಳ್ಳುತ್ತಾನೆ.[೧] ಸಜ್ಜನ್ಮ ಬಂದಾಗ ಸತ್ಕರ್ಮ ಪ್ರವೃತ್ತಿ (ಸ್ವಧಾ, ವಷಟ್, ಸ್ವಾಹಾ ನಮಸ್ಕಾರ) ಮಾಡುತ್ತಾನೆ, ಮಾಡಿಸುತ್ತಾನೆ. ಸ್ವಾಧ್ಯಾಯ ನಿರತನಾಗುತ್ತಾನೆ, ಇತರರನ್ನು ನಿರತರನ್ನಾಗಿಸುತ್ತಾನೆ. ಹೀಗೆಯೇ ಅನೇಕ ಕ್ರಮಗಳನ್ನು ಜೀವನು ಮಾಡುತ್ತಿರುತ್ತಾನೆ.[೨]

ಹೀಗೆ ಪ್ರಕೃತಿಯಿಂದ (ಸತ್ತ್ವ, ರಜಸ್ತಮೋಗುಣ) ಮಾಡಲ್ಪಟ್ಟ ರೂಪರಸಾದಿ ಗುಣಗಳನ್ನು ಕ್ರೀಡೆಗಾಗಿ, ಅಭಿಮಾನದಿಂದ ಅನುಭವಿಸುತ್ತಿರುತ್ತಾನೆ. ಪ್ರಕೃತಿಯ ಸಂಸರ್ಗದಿಂದ ಸುಖದುಃಖಾದಿ ದ್ವಂದ್ವಗಳು ಅನುದಿನವೂ ನನ್ನನ್ನೇ ಬಾಧಿಸುತ್ತವೆ. ನಾನೇ ಇವುಗಳನ್ನು ಪರಿಹರಿಸಿಕೊಳ್ಳಬೇಕು ಎಂದು ಚಿಂತಿಸುತ್ತಾ ದುಃಖಿಯಾಗುತ್ತಾನೆ. ಸುಖದ ವಿಷಯಗಳನ್ನೂ (ಲೌಕಿಕ) ಹೀಗೆಯೇ ಭಾವಿಸುತ್ತಾ ದುಃಖಿಯಾಗುತ್ತಾನೆ.[೩]

ನಾನು ಸುಖಕ್ಕೆ ಸಾಧನವಾದ ಕರ್ಮವನ್ನೇ ಮಾಡಬೇಕು. ಪುಣ್ಯಕರ್ಮವನ್ನು ಒಮ್ಮೆ ಮಾಡಿದರೂ ನಿತ್ಯಸುಖವುಂಟಾಗುತ್ತದೆ ಎಂದು ಭ್ರಮಿಸುತ್ತಾನೆ. ಹಾಗೆಯೇ ಪಾಪಕರ್ಮವನ್ನು ಮಾಡಬಾರದು ಎಂದೂ ಭಾವಿಸುತ್ತಾನೆ[೪].

ಹೀಗೆ ಪ್ರಕೃತಿಗುಣಗಳಿಂದ ಬದ್ಧನಾಗಿ ತನಗೊಬ್ಬ ನಿಯಾಮಕನಿಲ್ಲವೆಂದು ತಿಳಿದು ದೇವಮನುಷ್ಯ ಜನ್ಮಗಳನ್ನು ಭಗವಂತನಿಂದಲೇ ಹೊಂದುತ್ತಾನೆ. ನನ್ನದು ಮಮತ್ವ ಎಂಬ

---

೧ ಅಭಿಮನ್ಯತ್ಯಸಂಬೋಧಾತ್ತಥೈವ ತ್ರಿವಿಧಾನ್ ಗುಣಾನ್ ।
ಸತ್ತ್ವಂ ರಜಸ್ತಮಶ್ಚೈವ ಧರ್ಮಾರ್ಥೌ ಕಾಮ ಏವ ಚ ।
ಪ್ರಕೃತ್ಯಾತ್ಮಾನಮೇವಾತ್ಮಾ ಏವಂ ಪ್ರವಿಭಜತ್ಯುತ ॥ - ೧೩೬/೨೪

೨ ಸ್ವಧಾಕಾರವಷಟ್‌ಕಾರೌ ಸ್ವಾಹಾಕಾರನಮಸ್ಕ್ರಿಯಾಃ ।
ಯಾಜನಾಧ್ಯಾಪನಂ ದಾನಂ ತಥೈವಾಹುಃ ಪ್ರತಿಗ್ರಹಮ್ ॥
ಯಜನಾಧ್ಯಯನೇ ಚೈವ ಯಚ್ಚಾನ್ಯದಪಿ ಕಿಂಚನ ॥ - ೧೩೬/೨೫

೩ ಏವಂ ದ್ವಂದ್ವಾನ್ಯಥೈತಾನಿ ವರ್ತಂತೇ ಮಮ ನಿತ್ಯಶಃ ।
ಮಮೈವೈತಾನಿ ಜಾಯಂತೇ ಬಾಧಂತೇ ತಾನಿ ಮಾಮಿತಿ ॥
ನಿಸ್ತರ್ತವ್ಯಾನ್ಯಥೈತಾನಿ ಸರ್ವಾಣೀತಿ ನರಾಧಿಪ ।
ಮನ್ಯತೇಽಯಂ ಹ್ಯಬುದ್ಧಿತ್ವಾತ್ತಥೈವ ಸುಕೃತಾನ್ಯಪಿ ॥
ಭೋಕ್ತವ್ಯಾನಿ ಮಯೈತಾನಿ ದೇವಲೋಕಗತೇನ ವೈ ।
ಇಹೈವ ಚೈನಂ ಭೋಕ್ಷ್ಯಾಮಿ ಶುಭಾಶುಭಫಲೋದಯಮ್ ॥ - ೧೩೬/೩೧-೩೩

೪ ಸುಖಮೇವ ಚ ಕರ್ತವ್ಯಂ ಸಕೃತ್ ಕೃತ್ವಾ ಸುಖಂ ಮಮ ।
ಯಾವದಂತಂ ಚ ಮೇ ಸೌಖ್ಯಂ ಜಾತ್ಯಾಂ ಜಾತ್ಯಾಂ ಭವಿಷ್ಯತಿ ॥ - ೧೩೬/೩೪

ಅಜ್ಞಾನ ಮೂಲನಾದ ಚೇತನನು ಸಾವಿರಕೋಟಿ ಸೃಷ್ಟಿಕಾಲಪರ್ಯಂತ ಮರಣಧರ್ಮವುಳ್ಳ ಶರೀರಗಳಲ್ಲಿಯೇ ಸುತ್ತುತ್ತಾನೆ.[೧]

ತಿರ್ಯಗ್ಯೋನಿ, ಮನುಷ್ಯಯೋನಿ, ದೇವಲೋಕದ ದೇವಯೋನಿಗಳಲ್ಲಿ ಕರ್ಮಫಲ-ಗಳನ್ನು ಅನುಭವಿಸುವ ಮೂರು ಸ್ಥಾನಗಳು ಪ್ರಕೃತಿಗೆ ಸಂಬಂಧಿಸಿದವುಗಳು.[೨]

ತನ್ನಲ್ಲಿ ಸಾಮಥ್ಯವಿಲ್ಲದಿದ್ದರೂ, ಸಾಮರ್ಥ್ಯವುಳ್ಳವನೆಂದೂ, ಸತ್ತ್ವಗುಣವುಳ್ಳವನೆಂದೂ ಭಾವಿಸುತ್ತಾನೆ. ಯಥಾರ್ಥ ಜ್ಞಾನವಿಲ್ಲದಿದ್ದರೂ ತತ್ತ್ವಜ್ಞಾನಿ ಎಂದು ತಿಳಿಯುತ್ತಾನೆ. ಮೃತ್ಯುರಹಿತನಾಗಿದ್ದರೂ, ಮೃತ್ಯುಗ್ರಸ್ತನೆಂದೂ, ಅಚಲನಾಗಿದ್ದರೂ, ಸಂಚರಣಶೀಲನೆಂದೂ ಭಾವಿಸುತ್ತಾನೆ.[೩] ಪಾಂಚಭೌತಿಕ ಶರೀರದಿಂದ ಭಿನ್ನನಾಗಿದ್ದರೂ,ತಾನೇ ಶರೀರನೆಂದೂ, ಜನ್ಮಸ್ಥಿತಿದೂರನಾಗಿದ್ದರೂ ಉತ್ಪತ್ತಿವುಳ್ಳವನೆಂದೂ, ತನ್ನಲ್ಲಿ ಯಾವುದೇ ಕೇಡುಗಳಿಲ್ಲದಿದ್ದರೂ, ಕೇಡುವುಳ್ಳವನೆಂದೂ ಗಮನಶೀಲನಲ್ಲದಿದ್ದರೂ, ಗಮನಶೀಲನೆಂದೂ ಭಾವಿಸುತ್ತಾನೆ. ಇದಕ್ಕೆಲ್ಲ ಕಾರಣ ಅಭಿಮಾನ, ಅಜ್ಞಾನ. ಇತ್ಯಾದಿ...

ಹೀಗೆ ಜೀವನು ಅಜ್ಞಾನದಿಂದ ಅಜ್ಞಾನಿಗಳ ಸಹವಾಸದಿಂದ ಪತನ ಹೊಂದುತ್ತಿರುತ್ತಾನೆ. ಸಹಸ್ರಕೋಟಿ ಜನ್ಮಗಳನ್ನು ತಾಳುತ್ತಿರುತ್ತಾನೆ. ಚಂದ್ರಮಂಡಲವು ಹದಿನೈದು ಕಲಾಗಳಿಂದ ಕೂಡಿದೆ ಎಂದು ಶಾಸ್ತ್ರ ಹೇಳುತ್ತದೆ. ಚಂದ್ರನಿಂದ ಸಹಿತವಾದಾಗ ಹದಿನಾರು ಕಲೆಗಳಿಂದ ಯುಕ್ತವಾದುದು ಚಂದ್ರಮಂಡಲ ಎಂದು ತಿಳಿದುಕೊ[೪].

ಚಂದ್ರನಲ್ಲಿ ಕಾಣುವ ಹದಿನಾರು ಕಲೆಗಳನ್ನು ದೇವತೆಗಳು ಕೃಷ್ಣಪಕ್ಷದಲ್ಲಿ ಸ್ವೀಕರಿಸಿದಾಗ ಚಂದ್ರನು ಒಂದೇ ಕಲೆಯಿಂದ ಕೂಡಿಕೊಳ್ಳುತ್ತಾನೆ. ಮತ್ತೆ ದೇವತೆಗಳು ಶುಕ್ಲಪಕ್ಷದಲ್ಲಿ ಆ ಚಂದ್ರನೊಡನೆ ತಮ್ಮ ಕಲಾಗಳಿಂದ ಸೇರಿಕೊಂಡಾಗ ಚಂದ್ರನು ನಾನು ಪೂರ್ಣನೆಂದು ಭಾವಿಸುತ್ತಾನೆ. ವಸ್ತುತಃ ಹದಿನಾರನೆಯ ಕಲೆ ಎನಿಸಿದ ಸೂಕ್ಷ್ಮ ಕಲೆ ಏನಿದೆಯೋ ಅದು ಮಾತ್ರ ಚಂದ್ರ ಎಂದು ತಿಳಿದುಕೊ.

---

೧ ಯಂ ಏವಂ ವೇತ್ತಿ ವೈ ನಿತ್ಯಂ ನಿರಾತ್ಮಾತ್ಮಗುಣೈರ್ವೃತಃ।
ತೇನ ದೇವಮನುಷ್ಯೇಷು ನಿರಯೇ ಚೋಪಪದ್ಯತೇ॥
ಮಮತ್ವೇನಾವೃತೋ ನಿತ್ಯಂ ತತ್ರೈವ ಪರಿವರ್ತತೇ।
ಸರ್ಗಕೋಟಿಸಹಸ್ರಾಣಿ ಮರಣಾಂತಾಸು ಮೂರ್ತಿಷು॥ - ೧೩೬/೩೭,೩೮

೨ ತಿರ್ಯಗ್ಯೋನೌ ಮನುಷ್ಯತ್ವೇ ದೇವಲೋಕೇ ತಥೈವ ಚ।
ತ್ರೀಣಿ ಸ್ಥಾನಾನಿ ಚೈತಾನಿ ಜಾನೀಯಾತ್ ಪ್ರಾಕೃತಾನಿ ಹ॥ - ೧೩೬/೪೧

೩ ಅಸತ್ತ್ವಂ ಸತ್ತ್ವಮಾತ್ಮಾನಾಮತತ್ತ್ವಂ ತತ್ತ್ವಮಾತ್ಮನಃ।
ಅಮೃತ್ಯುರ್ಮೃತ್ಯುಮಾತ್ಮಾನಮಚರಶ್ಚರಮಾತ್ಮನಃ॥ - ೧೩೬/೪೬

೪ ಕಲಾಯಾಂ ಜಾಯತೇಽಜಸ್ರಂ ಪುನಃ ಪುನರಬುದ್ಧಿಮಾನ್।
ಧಾಮ ತಸ್ಯೋಪಯುಂಜಂತಿ ಭೂಯ ಏವ ತು ಜಾಯತೇ॥ - ೧೩೭/೫

**ಷೋಡಶೀ ತು ಕಲಾ ಸೂಕ್ಷ್ಮಾ ಸ ಸೋಮ ಉಪಧಾರ್ಯತಾಮ್ ।**
**ನ ತೂಪಯುಜ್ಯತೇ ಹೇವ್ವೈರ್ದೇವಾನುಪಯುನಕ್ತಿ ಸಾ ॥** - ೧೩೭/೬

ಹೀಗೆಯೇ ಷೋಡಶಕಲಾಗಳಿಂದ ಕೂಡಿದ ಜೀವನು ಅವ್ಯಕ್ತ ಎಂಬ ಹೆಸರಿನ ದೇಹವನ್ನು (ಪ್ರಾಕೃತ) ಹೊಂದಿರುತ್ತಾನೆ. ಐದು ಜ್ಞಾನ, ಐದುಕರ್ಮ, ಮನಸ್ಸು ಪಂಚಭೂತಗಳು ಇವನ್ನು ತನ್ನದೆಂದು (ತನ್ನ ಅಧೀನ) ಎಂದು ಭಾವಿಸಿರುತ್ತಾನೆ. ಆದ್ದರಿಂದಲೇ ಸಂಸಾರದಲ್ಲಿ ಸುತ್ತುತ್ತಾನೆ.

ಇಪ್ಪತ್ತೈದನೆಯ ತತ್ತ್ವವೇ ಪರಮಾತ್ಮತತ್ತ್ವ. ಅವನು ಶರೀರದಲ್ಲಿಯೇ ಇದ್ದಾನೆ (ಜೀವರ). ಆದರೂ, ಅದನ್ನು ತಿಳಿಯದ ಕಾರಣ ಪ್ರಕೃತಿ ಬಂಧನದಲ್ಲಿ ಸಿಲುಕಿದ್ದಾನೆ. ಆದರೆ ಈ ಜೀವ ವಿಮಲನೂ (ಪವಿತ್ರನೂ), ಶುದ್ಧನೂ ಆಗಿದ್ದು ಶುದ್ಧವಾದ(ಸತ್ತ್ವಗುಣದ) ಆಹಾರ ಸ್ವೀಕರಿಸಲು ಅಶುದ್ಧನಾಗಿದ್ದರೂ, ಪರಮಾತ್ಮನ ಅನುಗ್ರಹದಿಂದ ಶುದ್ಧಾತ್ಮನಾಗಿ, ಅಜ್ಞಾನಿಗಳ ಸಂಗದಿಂದ ಅಜ್ಞಾನಿಯಾಗಿದ್ದರೂ ಜ್ಞಾನಿಯಾಗುತ್ತಾನೆ. ಅವಿವೇಕಿಯಾಗಿದ್ದರೂ ವಿವೇಕಿಗಳ ಸಹವಾಸದಿಂದ ವಿವೇಕಿಯಾಗುತ್ತಾನೆ. ಹೀಗೆ ತ್ರಿಗುಣಾತ್ಮಕವಾದ ಪ್ರಕೃತಿಯ ಸಂಬಂಧದಿಂದ ಜೀವನು ಪ್ರಾಕೃತನಂತೆ ಆಗಿರುತ್ತಾನೆ.[೧]

**ಈ ಹಂತದಲ್ಲಿ ಕರಾಲಜನಕನು ಪ್ರಶ್ನಿಸುತ್ತಾನೆ. ತನ್ನ ಅನುಭವ, ಜ್ಞಾನವನ್ನು ಹೇಳುತ್ತಾನೆ.**

ಪ್ರಕೃತಿಪುರುಷರು ಪರಸ್ಪರ ಸೇರಿ ಸೃಷ್ಟಿ ಮಾಡುತ್ತಾರೆ(ಸೃಷ್ಟಿಗೆ ಕಾರಣರಾಗುತ್ತಾರೆ). ಅವರಿಗೆ ನಿತ್ಯಸಂಬಂಧವಿದ್ದೇ ಇದೆ. ಹೀಗಿರಲು ಮೋಕ್ಷ ಹೇಗೆ ಸಾಧ್ಯ? ಆದ್ದರಿಂದ ಮೋಕ್ಷವೇ ಇಲ್ಲ ಎಂದಾಗುತ್ತಲ್ಲಾ? ಅಥವಾ ನಿತ್ಯಸಂಬಂಧವಿದ್ದರೂ, ನಿಮ್ಮ ಬಳಿ ದೃಷ್ಟಾಂತವಿದ್ದರೆ ನನಗೆ ತಿಳಿಸಿ. ಕಾರಣ ಎಲ್ಲ ವಿಷಯಗಳು ತಮಗೆ ಪ್ರತ್ಯಕ್ಷವಾಗಿ ತೋರುತ್ತವೆ.[೨]

**ಇದಕ್ಕೆ ವಸಿಷ್ಠರು ಉತ್ತರಿಸುತ್ತಾರೆ.** ಪ್ರಕೃತಿ ಪುರುಷರ ಸಂಬಂಧದ ಪ್ರಮೇಯ ಯಥಾರ್ಥವಾಗಿದೆಯಾದರೆ ನೀನು ತಿಳಿದಂತೆ ಅಲ್ಲ (ಯಥಾರ್ಥವಾಗಿಲ್ಲ). ವೇದಶಾಸ್ತ್ರಗಳ ಗ್ರಂಥವು ನಿನ್ನ ಬುದ್ಧಿಯಲ್ಲಿದೆಯಾದರೂ ಅದರ ತತ್ತ್ವ ನೀನು ಸರಿಯಾಗಿ ತಿಳಿದಿಲ್ಲ. ಬರೀ ಗ್ರಂಥವನ್ನು ಬುದ್ಧಿಯಲ್ಲಿಟ್ಟುಕೊಂಡರೆ ಪ್ರಯೋಜನವಿಲ್ಲ. ಅದು ವ್ಯರ್ಥ. ಅದರರ್ಥ ತಿಳಿಯದಿದ್ದಾಗ. ಸ್ಥೂಲಬುದ್ಧಿಯುಳ್ಳವನು ಗ್ರಂಥಾರ್ಥ ಬಲ್ಲವನಾಗುವುದಿಲ್ಲ. ಅದರ

---

೧ ಪಂಚವಿಂಶಸ್ತಥೈವಾತ್ಮಾ ತಸ್ಯೈವಾ ಪ್ರತಿಬೋಧನಾತ್ ।
ವಿಮಲಸ್ಯ ವಿಶುದ್ಧಸ್ಯ ಶುದ್ಧಾನಿಲನಿಷೇವಣಾತ್ ॥
ಅಶುದ್ಧ ಏವ ಶುದ್ಧಾತ್ಮಾ ತಾದೃಗ್ಭವತಿ ಪಾರ್ಥಿವ ।
ಅಬುದ್ಧಸೇವನಾಚ್ಚಾಪಿ ಬುದ್ಧೋಽಪ್ಯಬುಧತಾಂ ವ್ರಜೇತ್ ॥ - ೧೩೭/೯,೧೦

೨ ಪ್ರಮಾಣಂ ಯಚ್ಚ ವೇದೋಕ್ತಂ ಶಾಸ್ತ್ರೋಕ್ತಂ ಯಚ್ಚ ಪಠ್ಯತೇ ।
ವೇದಶಾಸ್ತ್ರಪ್ರಮಾಣಂ ಚ ಪ್ರಮಾಣಂ ತತ್ ಸನಾತನಮ್ ॥ - ೧೩೭/೧೮

ನಿರ್ಣಯವನ್ನೂ ಮಾಡಲಾರ. ಆದ್ದರಿಂದ ಸಾಂಖ್ಯಯೋಗಗಳನ್ನು ತಿಳಿದ ಜ್ಞಾನಿಗಳು ಮೋಕ್ಷದ ಬಗ್ಗೆ ಏನು ಹೇಳುತ್ತಾರೆ ಎಂಬುದನ್ನು ಕೇಳು.

ಯೋಗಮಾರ್ಗಾವಲಂಬಿಯು ಯಾವ ಪರಬ್ರಹ್ಮನನ್ನು ಕಾಣುತ್ತಾನೋ ಅದನ್ನೇ ಸಾಂಖ್ಯಯೋಗಿ ಕಾಣುತ್ತಾನೆ. ಫಲದದೃಷ್ಟಿಯಿಂದ ಎರಡೂ ಮಾರ್ಗಗಳೂ ಏಕಾಭಿಪ್ರಾಯ ಉಳ್ಳವುಗಳೇ.[೧]

ಶರೀರದಲ್ಲಿರುವ ಚರ್ಮ, ಮಾಂಸ, ರಕ್ತ, ಮೇದಸ್ಸು ಪಿತ್ತ, ಮಜ್ಜೆ ಸ್ನಾಯು ಇವುಗಳಲ್ಲಿ ಶುಕ್ಲಶೋಣಿತಗಳು ಬಿಳಿ ರಕ್ತ ಎನಿಸಿರುವುದರಿಂದ ಇಂದ್ರಿಯಸಂಬಂಧಿಯಾದ ಪ್ರಮೇಯವೆನಿಸಿವೆ. ಪ್ರತಿಯೊಬ್ಬರೂ ಕಣ್ಣಿನಿಂದ ಇಂತಹ ದೇಹವನ್ನು ನೋಡಬಹುದು. ಇದರಲ್ಲಿ ಯಾವ ಅಪೂರ್ವತೆ ಇಲ್ಲ, ಯಾವ ರೀತಿಯಿಂದ ಬೀಜದಿಂದ ಬೀಜವು ಉತ್ಪತ್ತಿಯಾಗುತ್ತದೋ, ದ್ರವ್ಯದಿಂದ ದ್ರವ್ಯೋತ್ಪತ್ತಿಯಾಗುತ್ತದೋ ಹಾಗೆಯೇ ದೇಹದಿಂದ ದೇಹೋತ್ಪತ್ತಿಯಾಗುತ್ತದೆ.

ಭೌತಿಕ ಇಂದ್ರಿಯಗಳಿಲ್ಲದ ಎಲ್ಲ ಜಗತ್ತಿಗೆ ನಿಮಿತ್ತಕಾರಣನಾದ, ಪ್ರಕೃತಿ ಎಂಬ ದ್ರವ್ಯ ಸಂಬಂಧವೇ ಇಲ್ಲದ, ಜ್ಞಾನಾನಂದಾತ್ಮಕ ಶರೀರವುಳ್ಳ ಸತ್ವಾದಿಗುಣರಹಿತನಾದ್ದರಿಂದ ಶ್ವೇತಶುಕ್ಲತ್ವ, ವಿಕಾರಿತ್ವ ಮೊದಲಾದ ಗುಣಗಳು ಬ್ರಹ್ಮನಿಗೆ ಬರಲು ಹೇಗೆ ಸಾಧ್ಯ? ಆದ್ದರಿಂದ ಪ್ರಾಕೃತ ಇಂದ್ರಿಯಗಳು ಪ್ರಕೃತಿಯಿಂದ ಹುಟ್ಟುತ್ತವೆಯೇ ವಿನಾ ಅಕ್ಷರಪುರಷನದ ಪರಮಾತ್ಮನಲ್ಲಿ ಈ ಗುಣಗಳಿರುವುದಿಲ್ಲ.

ಮಾಂಸ, ರಕ್ತಾದಿ ಎಂಟು ಪದಾರ್ಥಗಳು ಪ್ರಕೃತಿಗೇನೇ ಸಂಬಂಧಿಸಿದುವೆಂದು ತಿಳಿ. ಗುಣತ್ರಯ ಸಂಬಂಧಿ ಜೀವ ಹಾಗೂ ದೇಹವನ್ನು ಪ್ರಾಕೃತವೆಂದು ಕರೆಯಬಹುದು. ಆದರೆ ಜೀವವ್ಯತಿರಿಕ್ತವಾದ ಗುಣತ್ರಯರಹಿತನಾದ ಪರಮಪುರುಷ (ನಾರಾಯಣ)ನನ್ನು ಗುಣತ್ರಯ ಸಂಬಂಧಿಲಿಂಗೀ (ಲಿಂಗಶರೀರವುಳ್ಳ) ಎಂದು ಹೇಳಲಾಗದು.

ಇದೇ ರೀತಿಯಾಗಿ ಅನುಮಾನದಿಂದ ಕಣ್ಣಿಗೆ ಕಾಣದಿರುವ ಚಿಹ್ನೆಗಳು ಇಲ್ಲದಿದ್ದರೂ ಪ್ರಕೃತಿಯಂತೆ ಪರಮಾತ್ಮನನ್ನು ಅನುಮಾನದಿಂದ ತಿಳಿಯಬಹುದು. ಭಗವಂತನು ಸ್ವಾತಂತ್ರ್ಯಾದಿ ಚಿಹ್ನೆಯುಳ್ಳವನು. ನಿಯತಸ್ವರೂಪವುಳ್ಳವನು. ಆದ್ದರಿಂದ ಇಂದ್ರಿಯಾ-ಗಮ್ಯನಲ್ಲ, ಅತೀಂದ್ರಿಯ. ಇವನೇ ೨೫ನೇ ತತ್ತ್ವಸ್ವರೂಪಿ. ಸರ್ವಶರೀರಗಳಲ್ಲಿ ನಿಯತವಾಗಿರುವವನು. ಅನಾದಿಕಾಲದಿಂದ ಜನನಮರಣರಹಿತ, ಅನಂತನು, ಸರ್ವಜ್ಞ, ನಿರಾಮಯ (ದೋಷಾತೀತ), ಮಾಯಾದಿ ಉಪಾಧಿಗಳಿಲ್ಲದ ಸಕಲ ಜೀವರಿಗೆ ಅಭಿಮಾನಿಯಾಗಿರುವುದರಿಂದ ಅಗುಣ ಎನ್ನಲಾಗಿದೆ.

---

೧ ಭಗವದ್ಗೀತೆಯ ೫ನೇ ಅಧ್ಯಾಯದ ೪ ಮತ್ತು ೫ನೇ ಶ್ಲೋಕಗಳ ಅಭಿಪ್ರಾಯ ಇಲ್ಲಿದೆ: ಸಾಂಖ್ಯಯೋಗೌ ಪೃಥಗ್ಬಾಲಾಃ ಪ್ರವದಂತಿ ನ ಪಂಡಿತಾ....।

ಗುಣಗಳಿಗೆ ಆಶ್ರಯನಾದವನು ಗುಣಿಯಾಗಿರಬೇಕು. ವಿಶೇಷಶಕ್ತಿಯಿಂದ ಗುಣಿಯೂ ಹೌದು. ಗುಣನೂ ಹೌದು( ಆನಂದಮಯಾಧಿಕರಣ ನ್ಯಾಯದಿಂದ) ನಿರ್ಗುಣ (ಸರ್ವಥಾ ಗುಣರಹಿತ)ನೆಂದಾದರೆ, ಜ್ಞಾನಾನಂದಾದಿ ಗುಣಗಳು ಹೇಗೆ ಕೂಡುತ್ತವೆ. ಆದ್ದರಿಂದ ಪ್ರಾಕೃತಗುಣರಾಹಿತ್ಯವೇ ನಿರ್ಗುಣಶಬ್ದಾರ್ಥವೆಂದು ಗುಣಜ್ಞಾನಿಗಳು, ಜ್ಞಾನಿ ಜನರು ಹೇಳುತ್ತಾರೆ.

ಸಾಂಖ್ಯರು ಮತ್ತು ಯೋಗಜ್ಞಾನಿಗಳು ಪರಬ್ರಹ್ಮವಸ್ತುವನ್ನು ಬುದ್ಧಿತತ್ತ್ವವನ್ನು ಮೀರಿದ, ಜ್ಞಾನದಿಂದ ತಿಳಿಯಲ್ಪಡುವ ಅಜ್ಞಾನಪರಿತ್ಯಾಗದಿಂದ ಪೂರ್ಣವಾಗಿ ತಿಳಿಯಲು ಅಶಕ್ಯವಾದ, ಅವ್ಯಕ್ತಸ್ವಭಾವದ, ಸತ್ವಾದಿಗುಣರಹಿತನನ್ನು ಈಶ್ವರನೆಂದು ಕರೆಯುತ್ತಾರೆ ಮತ್ತು ಸಮಸ್ತ ಜೀವರ ಅಂತರ್ಯಾಮಿಯಾಗಿ ಯಾವಾಗಲೂ ಜೀವರಿಗೆ ಅಧಿಷ್ಠಾತೃ (ನೆಲೆಯಾಗಿ ನಿಂತವನು) ಎಂದು ಹೇಳುತ್ತಾರೆ.

ಅವ್ಯಕ್ತ (ಪ್ರಕೃತಿಯು) ೨೪ನೇ ತತ್ತ್ವ, ೨೫ನೇ ತತ್ತ್ವವೇ ಪರಮಾತ್ಮತತ್ತ್ವವೆಂದು ಭಗವಂತನನ್ನು ಹೇಳುತ್ತಾರೆ.

ಕ್ಷರಾಕ್ಷರ ಪುರುಷರು ಪರಸ್ಪರ ಸಂಬಂಧದಿಂದ ಕೂಡಿದ್ದಾರೆ ಎಂದು ಶಾಸ್ತ್ರದ ಹೇಳಿಕೆ. ಯಾವಾಗಲೂ ಒಂದೇ ತರಹ ನಿರ್ವಿಕಾರವಾಗಿ ಇರುವುದೇ ಅಕ್ಷರತತ್ತ್ವವಾದರೆ, ನಾನಾ ಯೋನಿಗಳಲ್ಲಿ ಉತ್ಪತ್ಯಾದಿಗಳನ್ನು ಪಡೆಯುವುದೇ ಕ್ಷರತತ್ತ್ವ (ಬ್ರಹ್ಮಾದಿ ಜೀವರು). ಹೀಗೆ ಅಕ್ಷರವು ಏಕತ್ವನಿಷ್ಠ ತತ್ತ್ವವಾದರೆ, ಕ್ಷರತತ್ತ್ವವು ನಾನಾತ್ವನಿಷ್ಠವಾದುದು.

ಯಥಾರ್ಥಜ್ಞಾನ, ಇತರಜ್ಞಾನಗಳಿಗೆ ಬೇರೆ ನಿದರ್ಶನವನ್ನು ಹೀಗೆ ಕೊಡಲಾಗಿದೆ. ಇಪ್ಪತ್ತೈದು ತತ್ತ್ವಗಳ ಸೃಷ್ಟಿಯನ್ನೇ ತತ್ತ್ವವೆಂದೂ ತತ್ತ್ವಾಭಿಮಾನಿಗಳಿಂದ ಕೂಡಿದ ತತ್ತ್ವವೇ ತತ್ತ್ವವೆಂದು ಜ್ಞಾನಿಗಳು ಹೇಳುತ್ತಾರೆ. ಇದನ್ನು ಸೃಷ್ಟಿ ಮಾಡಿದವನೇ ನಾರಾಯಣ (೪೮,೪೯).

# ಉಪದೇಶಪರ ಉಪಾಖ್ಯಾನಗಳು

# ಅನುಶಾಸನಪರ್ವ

## ದಾನಧರ್ಮಪರ್ವ

## ೧೯೮. ಯಾರು ನಮಸ್ಕಾರಾರ್ಹರು?

ಧರ್ಮರಾಜನು ಪ್ರಶ್ನಿಸುತ್ತಾನೆ. ಮಹಾಭಾಗ್ಯವಂತರಾದ ದೇವತೆಗಳು ಈ ಲೋಕದಲ್ಲಿ ಯಾವ ಮಹಾತ್ಮರಿಗೆ (ರನ್ನು) ನಮಸ್ಕರಿಸುತ್ತಾರೆ?

ಭೀಷ್ಮರು ಈ ಬಗ್ಗೆ ಪುರಾಣಗಳನ್ನು ತಿಳಿದ ಮಹಾಪ್ರಾಜ್ಞರಾದ ಬ್ರಾಹ್ಮಣರು, ಈ ವಿಷಯದಲ್ಲಿ ವೃತ್ರಾಸುರನನ್ನು ಕೊಂದು ವಾಪಸು ಬಂದ ದೇವತೆಗಳಿಂದ ಪೂಜಿತನಾದ, ಋಷಿಗಳಿಂದ ಸ್ತುತನಾದ, ಮಹಾವೈಭವದಿಂದ ಕೂಡಿದ ರಥದಲ್ಲಿ ಕುಳಿತ ದೇವೇಂದ್ರನನ್ನು ಆತನ ಸಾರಥಿಯಾದ ಮಾತಲಿಯು ಕೈಮುಗಿದು ಕೇಳುತ್ತಾನೆ.

'ಪೂಜ್ಯನೇ ಯಾರನ್ನು ಈ ಲೋಕದಲ್ಲಿ ನಮಸ್ಕರಿಸಬೇಕು? ಅವರನ್ನು ತಿಳಿಸು'[೧] ಎಂದನು.

ಇಂದ್ರನು ಮಾತಲಿಗೆ ಉತ್ತರಿಸಿದ ರೀತಿ ಹೀಗಿದೆ:

೧. ಯಾರ ಬುದ್ಧಿಯು, ಧರ್ಮಾರ್ಥಕಾಮಗಳನ್ನು ಚಿಂತಿಸುತ್ತದೆಯೋ, ಅಧರ್ಮದ ಕಡೆ ಹೋಗದೋ ಅವರನ್ನು.

೨. ಯಾರು ಸ್ವಯಂ ರೂಪಗುಣಸಂಪನ್ನರಾಗಿದ್ದರೂ ಸ್ತ್ರೀಯರ ಮನಸ್ಸನ್ನು ಸೂರೆ ಮಾಡುವಂತಿದ್ದರೂ ಕಾಮಭೋಗಗಳಿಂದ (ಸ್ತ್ರೀಭೋಗಾದಿ) ನಿವೃತ್ತರಾಗಿರುತ್ತಾರೋ (ದೂರವಾಗಿರುತ್ತಾರೋ) ಅವರನ್ನು.[೨]

---

೧ ಕೇಷಾಂ ದೇವಾ ಮಹಾಭಾಗಾಃ ಸನ್ನಮಂತೇ ಮಹಾತ್ಮನಾಮ್ ।
ಲೋಕೇಽಸ್ಮಿನ್ ತಾನೃಷೀನ್ ಸರ್ವಾನ್ ಶ್ರೋತುಮಿಚ್ಛಾಮಿ ಸತ್ತಮ ॥ – ೧೪೮/೧

೨ ಯೇ ರೂಪಗುಣಸಂಪನ್ನಾಃ ಪ್ರಮದಾಹೃದಯಂಗಮಾಃ ।
ನಿವೃತ್ತಾಃ ಕಾಮಭೋಗೇಷು ತಾನ್ ನಮಸ್ಯಾಮಿ ಮಾತಲೇ ॥ – ೧೪೮/೮

೩. ತಮಗೆ ವಿಹಿತವಾದ ಸುಖಗಳಲ್ಲಿಯೇ ತೃಪ್ತರಾದ ಮಧುರವಾಗಿ ಮಾತನಾಡುವ ಸಮ್ಮಾನವನ್ನು ಅಪೇಕ್ಷಿಸದೇ ಇರುವ ಪೂಜಾರ್ಹರಾದವರನ್ನು ನಾನು ನಮಸ್ಕರಿಸುತ್ತೇನೆ.[೧]

೪. ಐಶ್ವರ್ಯ, ವಿದ್ಯಾ(ಪಾಂಡಿತ್ಯ) ಮತ್ತು ಧನಗಳು ಯಾರನ್ನು (ಬುದ್ಧಿಯನ್ನು) ಅಲುಗಾಡಿಸುವುದಿಲ್ಲವೋ ಅಥವಾ ಅಲುಗಾಡಿದರೂ ಯಾರು ನಿಗ್ರಹಿಸುತ್ತಾರೋ (ಬುದ್ಧಿಯನ್ನು) ಅಂತಹವರನ್ನು ನಿತ್ಯವೂ ಪೂಜಿಸುತ್ತೇನೆ.[೨]

೫. ಇಷ್ಟರೂ (ಬೇಕಾದವರು), ಪತ್ನಿಯರು, ಇವರಿಂದ ಕೂಡಿದ, ಬಾಹ್ಯಾಂತಶ್ಶುಚಿಯುಳ್ಳ ಅಗ್ನಿಹೋತ್ರವನ್ನು ಇಟ್ಟುಕೊಂಡು ನಿತ್ಯ ಅಗ್ನಿಯಲ್ಲಿ ವಿವಿಧ ಉಪಾಸನೆ ಮಾಡುವ ಗೋವು ಮೊದಲಾದ ಪ್ರಾಣಿಗಳನ್ನು (ಚತುಷ್ಪಾದ) ತಮ್ಮ ಕುಟುಂಬವೆಂದು ತಿಳಿದವರನ್ನು.[೩]

೬. ಮಹಾತಪಸ್ಸಿನಿಂದ ಭಾರಿ ಧನಬಂದರೂ ಭಗವಂತನನ್ನು ತಿಳಿದವನು ಆ ತಪಸ್ಸನ್ನು ತ್ಯಾಗ ಮಾಡಬಾರದು.[೪]

೭. ಯಾರ ಅರ್ಥಕಾಮಗಳು ಧರ್ಮದಿಂದ ಅಭಿವೃದ್ಧಿ ಹೊಂದುತ್ತವೋ, ಯಾರ ಧರ್ಮಾರ್ಥಗಳು ಸದಾ ಇರುತ್ತವೆಯೋ (ನಿಯಮಿತವಾಗಿ) ಅಂತಹವರನ್ನು ನಮಸ್ಕರಿಸುವೆನು.[೫]

೮. ಧರ್ಮ ಮೂಲವಾದ ಅರ್ಥಕಾಮಗಳನ್ನು ಹೊಂದಿರುವ ಬ್ರಾಹ್ಮಣರನ್ನು ಗೋವುಗಳನ್ನು ಪತಿವ್ರತಾಸ್ತ್ರೀಯರನ್ನು ನಾನು ನಮಸ್ಕರಿಸುತ್ತೇನೆ.[೬]

೯. ಯಾರು ಯುವಕರಾಗಿದ್ದಾಗ ಮಾನವ ಸಹಜ ಭೋಗಗಳನ್ನು ಭೋಗಿಸಿ ಅನಂತರ

---

೧ ಸ್ವೇಷು ಭೋಗೇಷು ಸಂತುಷ್ಟಾಃ ಸುವಾಚೋ ವಚನಕ್ಷಮಾಃ।
ಅಮಾನಕಾಮಾಶ್ಚಾರ್ಘಾರ್ಹಾಃ ತಾನ್ ನಮಸ್ಯಾಮಿ ಮಾತಲೇ॥ - ೧೪೮/೯

೨ ಧನಂ ವಿದ್ಯಾಸ್ತಥೈಶ್ವರ್ಯಂ ಯೇಷಾಂ ನ ಚಲಯೇನ್ಮತಿಮ್।
ಚಲಿತಾಂ ಯೇ ನಿಗೃಹ್ಣಂತಿ ತಾನ್ನಿತ್ಯಂ ಪೂಜಯಾಮ್ಯಹಮ್॥ - ೧೪೮/೧೦

೩ ಇಷ್ಟೈರ್ದಾರೈರುಪೇತಾನಾಂ ಶುಚೀನಾಮಗ್ನಿಹೋತ್ರಿಣಾಮ್।
ಚತುಷ್ಪಾದಕುಟುಂಬಾನಾಂ ಮಾತಲೇ ಪ್ರಣಮಾಮ್ಯಹಮ್॥ - ೧೪೮/೧೧

೪ ಮಹತಸ್ತಪಸಾ ಪ್ರಾಪ್ತೌ ಧನಸ್ಯ ವಿಪುಲಸ್ಯ ಚ।
ತ್ಯಾಗಸ್ತಸ್ಯ ನ ವೈ ಕಾರ್ಯೋ ಯೋಽಽತ್ಮಾನಂ ನಾಽವಬುಧ್ಯತೇ॥ - ೧೪೮/೧೨

೫ ಯೇಷಾಮರ್ಥಸ್ತಥಾ ಕಾಮೋ ಧರ್ಮಮೂಲವಿವರ್ಧಿತಃ।
ಧರ್ಮಾರ್ಥೌ ತಸ್ಯ ನಿಯತೌ ತಾನ್ ನಮಸ್ಯಾಮಿ ಮಾತಲೇ॥ - ೧೪೮/೧೩

೬ ಧರ್ಮಮೂಲಾರ್ಥಕಾಮಾನಾಂ ಬ್ರಾಹ್ಮಣಾನಾಂ ಗವಾಮಪಿ।
ಪತಿವ್ರತಾನಾಂ ನಾರೀಣಾಂ ಪ್ರಣಾಮಂ ಪ್ರಕರೋಮ್ಯಹಮ್॥ - ೧೪೮/೧೪

ವಯಸ್ಸಾದ ಮೇಲೆ (ವಾನಪ್ರಸ್ಥದಲ್ಲಿ) ತಪಸ್ಸನ್ನು ಮಾಡಿ ಸ್ವರ್ಗಕ್ಕೆ ಹೋಗುತ್ತಾರೋ, ಅವರನ್ನು ಯಾವಾಗಲೂ ನಮಸ್ಕರಿಸುವೆನು.[೧]

೧೦. ಯಾರು ಸಂಭೋಗಗಳನ್ನು ತ್ಯಜಿಸಿ ವಿಷಯಾಸಕ್ತಿಯನ್ನು ತ್ಯಜಿಸಿದ್ದಾರೋ, ನಿತ್ಯವೂ ಧರ್ಮಾನುಷ್ಠಾನ ಮಾಡುವವರೋ, ಜಿತೇಂದ್ರಿಯರಾಗಿ ಸನ್ನ್ಯಾಸ ಸ್ವೀಕರಿಸಿ ಪರ್ವತದಂತೆ ಸ್ಥಿರವಾಗಿರುವವರೋ ಅಂತಹವರನ್ನು ಮನಸ್ಸಿನಿಂದ ಪೂಜಿಸುತ್ತೇನೆ.[೨]

೧೧. ಭಗವಂತನ ಜ್ಞಾನ (ಅಪರೋಕ್ಷ)ದಿಂದ ಪ್ರಸನ್ನಚಿತ್ತರೂ, ವಿದ್ಯಾಭೂಷಿತರೂ ಆದ (ಜ್ಞಾನವಿದ್ಯೆಗಳಿಂದ ಪ್ರಸನ್ನರಾದ), ಶಾಶ್ವತವಾದ ಧರ್ಮವನ್ನು ಬಯಸುವ, ಬೇರೆಯವರಿಂದ ಹೊಗಳಲ್ಪಟ್ಟ ಶೌಚವುಳ್ಳ (ಅಂತಃಬಹಿಃಶೌಚ) ಪುರುಷರನ್ನು ನಮಿಸುತ್ತೇನೆ.[೩]

## ಸಂದೇಶಗಳು

ಇಂದ್ರದೇವರ ಮಾತುಗಳೆಲ್ಲ ಸಂದೇಶಗಳೇ ಆಗಿವೆ. ನಾವು ಹೇಗೆ ಬದುಕಬೇಕೆಂಬುದರ ಧರ್ಮದ ಪುಟ್ಟ ಕೈಪಿಡಿ ಕೃತಿಯಾಗಿದೆ ಈ ಅಧ್ಯಾಯ.

*****

೧ ಯೇ ಭುಕ್ತ್ವಾ ಮಾನುಷಾನ್ ಭೋಗಾನ್ ಪೂರ್ವೇ ವಯಸಿ ಮಾತಲೇ ।
ತಪಸಾ ಸ್ವರ್ಗಮಾಯಾಂತಿ ಶಶ್ವತ್ ತಾನ್ ಪೂಜಯಾಮ್ಯಹಮ್ ॥ - ೧೪೮/೧೫

೨ ಅಸಂಭೋಗಾನ್ನ ಚಾಸಕ್ತಾನ್ ಧರ್ಮನಿತ್ಯಾನ್ ಜಿತೇಂದ್ರಿಯಾನ್ ।
ಸನ್ನ್ಯಸ್ತಾಚಲಪ್ರಖ್ಯಾನ್ ಮನಸಾ ಪೂಜಯಾಮಿ ತಾನ್ ॥ - ೧೪೮/೧೬

೩ ಜ್ಞಾನಪ್ರಸನ್ನವಿದ್ಯಾನಾಂ ನಿರೂಢಂ ಧರ್ಮಮೀಪ್ಸಿತಮ್ ।
ಪರೈಃ ಕೀರ್ತಿತಶೌಚಾನಾಂ ಮಾತಲೇ ತಾನ್ ನಮಾಮ್ಯಹಮ್ ॥ - ೧೪೮/೧೭

# ೧೯೯. ನಹುಷಾಖ್ಯಾನ

ಧರ್ಮರಾಜನ ಪ್ರಶ್ನೆ ತಾತನಿಗೆ –

ಪುಷ್ಪ, ಧೂಪ, ದಾನಗಳ ಫಲ ಕೇಳಿದೆ. ಧೂಪದಾನ, ದೀಪದಾನ ಫಲವನ್ನು ಮತ್ತೆ ಹೇಳಬೇಕು. ಗೃಹಸ್ಥರು ದೇವತೆಗಳಿಗೆ ಏಕೆ ಪೂಜೆ ಹಾಗೂ ನೈವೇದ್ಯವನ್ನು ಅರ್ಪಿಸುತ್ತಾರೆ?

ಈ ವಿಷಯದಲ್ಲಿ ಭೀಷ್ಮರು **ಅಗಸ್ತ್ಯರು** ಹಾಗೂ **ಭೃಗುಋಷಿಗಳು** ನಹುಷನನ್ನು ಕುರಿತು ಮಾಡಿದ ಸಂವಾದರೂಪ ಇತಿಹಾಸವನ್ನು ಹೇಳುತ್ತಾರೆ.

ಮಹಾರಾಜನೇ! ರಾಜರ್ಷಿಯೂ, ಮಹಾತಪಸ್ವಿಯೂ ಆದ ನಹುಷನು ತನ್ನ ಸತ್ಕರ್ಮಗಳ ಫಲವಾಗಿ ದೇವರಾಜ್ಯಾಧಿಪತ್ಯವನ್ನು ಪಡೆದು ಅಲ್ಲೂ ಕೂಡಾ ಜಿತೇಂದ್ರಿಯನಾಗಿ ಮಾನವ ಹಾಗೂ ಸ್ವರ್ಗಲೋಕದ ವಿವಿಧ ವೈದಿಕ ಆಚಾರಗಳನ್ನು (ಕರ್ಮಗಳನ್ನು) ಮಾಡಿದನು[೧]. ಅಗ್ನಿಕಾರ್ಯಗಳು, ಸಮಿತ್ತುಗಳು, ಕುಶಗಳು, ಪುಷ್ಪಗಳು, ಅನ್ನ, ಅರಳು, ಮೊದಲಾದವುಗಳ ನೈವೇದ್ಯ, ಧೂಪ, ದೀಪಗಳೆಲ್ಲ ನಹುಷನ ಸ್ವರ್ಗದ ಅರಮನೆಯಲ್ಲಿ ನಡೆದವು. ಅಲ್ಲೂ ಕೂಡಾ ಜಪಯಜ್ಞ, ಮನೋಯಜ್ಞಗಳನ್ನೂ ಶಾಸ್ತ್ರ ಮನನರೂಪ ಮಾಡಿದನು[೨]. ಅಲ್ಲದೆ ದೈವತ ಪೂಜೆಗಳನ್ನೂ ವಿಧ್ಯುಕ್ತವಾಗಿ ಮಾಡಿದನು[೩] ಈಗಲೇ ಕಾರಣಾಂತರದಿಂದ ಇಂದ್ರಪದವಿಯಲ್ಲಿ ಬಂದು ದರ್ಪಿಷ್ಟನಾದ. ಅವನಿಗೆ ಅಹಂಕಾರ ಬಂತು. ಮಾಡಿದ ಎಲ್ಲ ಕರ್ಮಗಳು ವಿಫಲವಾದವು .

ಅದರ ಫಲವಾಗಿ ಬುದ್ಧಿ ವಿಪರ್ಯಯವಾಗಿ (ಸಪ್ತ) ಋಷಿಗಳನ್ನು ತನ್ನ ವಾಹನವನ್ನು ಹೊರಲು (ಹೊತ್ತುಕೊಂಡು ಹೋಗಲು) ಹೇಳಿದ ಫಲವಾಗಿ ಮಾಡಿದ ಸತ್ಕರ್ಮಗಳ ಫಲ ನಾಶವಾಗಿ ದುರ್ಬಲನಾದ.[೪] ಇದು ಬಹಳ ಕಾಲ ನಡೆಯಿತು (ಋಷಿಗಳಿಂದ ಮೇನೆಯನ್ನು ಹೊರಿಸುವ). ಆ ಕಾರ್ಯ ಸಪ್ತರ್ಷಿಗಳ ಪರ್ಯಾಯವನ್ನೂ ಮಾಡಿದನು. ಒಮ್ಮೆ ಅಗಸ್ತ್ಯರ ಪರ್ಯಾಯ ಬಂದಿತು.

---

೧ ಮಾನುಷ್ಯಸ್ತತ್ರ ಸರ್ವಾಃ ಸ್ಮ ಕ್ರಿಯಾಸ್ತಸ್ಯ ಮಹಾತ್ಮನಃ।
ಪ್ರವೃತ್ತಾಸ್ತ್ರಿದಿವೇ ರಾಜನ್ ದಿವ್ಯಾಶ್ಚೈವ ಸನಾತನಾಃ॥ – ೧೫೨/೬

೨ ಅಗ್ನಿಕಾರ್ಯಾಣಿ ಸಮಿಧಃ ಕುಶಾಃ ಸುಮನಸಸ್ತಥಾ।
ಬಲಯಶ್ಚಾನ್ನಲಾಜಾಭಿರ್ಧೂಪನಂ ದೀಪಕರ್ಮ ಚ॥
ಸರ್ವಂ ತಸ್ಯ ಗೃಹೇ ರಾಜ್ಞಃ ಪ್ರಾವರ್ತತ ಮಹಾತ್ಮನಃ।
ಜಪಯಜ್ಞಾನ್ ಮನೋಯಜ್ಞಾನ್ ತ್ರಿದಿವೇಽಪಿ ಚಕಾರ ಸಃ॥ – ೧೫೨/೭,೮

೩ ದೈವತಾನ್ಯರ್ಚಯಂಶ್ಚಾಪಿ ವಿಧಿವತ್ ಸ ಸುರೇಶ್ವರಃ।
ಸರ್ವಾಣ್ಯೇವ ಯಥಾನ್ಯಾಯಂ ಯಥಾಪೂರ್ವಮರಿಂದಮ॥ – ೧೫೨/೯

೪ ಸ ಋಷೀನ್ ವಾಹಯಾಮಾಸ ವರದಾನಮದಾನ್ವಿತಃ।
ಪರಿಹೀನಕ್ರಿಯಶ್ಚಾಪಿ ದುರ್ಬಲತ್ವಮುಪೇಯಿವಾನ್ ॥ – ೧೫೨/೧೧

ಆಗ ಮಹಾತೇಜಸ್ವಿಗಳಾದ ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠರಾದ ಭೃಗುಗಳು ಅಗಸ್ತ್ಯರ ಆಶ್ರಮಕ್ಕೆ ಬಂದು 'ಎಲೈ ಮಹಾಮುನಿಯೇ! ನಾವೇಕೆ ನಹುಷನ ಈ ಅವಮಾನವನ್ನು ಸಹಿಸುತ್ತಿದ್ದೇವೆ? (ನಾವೇಕೆಪ್ರತಿಭಟಿಸಬಾರದು?) ಎಂದರು. ಅದಕ್ಕೆ ಅಗಸ್ತ್ಯರು ನಾನು ಹೇಗೆ ತಾನೇ ನಹುಷನನ್ನು ಶಪಿಸಲಿ? ವರಪ್ರದನಾದ ಬ್ರಹ್ಮನಿಂದ ನಹುಷನು ವರ ಪಡೆದಿರುವನಲ್ಲ? ಇದು ನಿಮಗೂ ಗೊತ್ತಿದೆ. ನಹುಷನು ಸ್ವರ್ಗಕ್ಕೆ ಹೋಗುವಾಗ (ಇಂದ್ರಪದವಿಯನ್ನು ಸ್ವೀಕರಿಸಲು)ನನ್ನ ಕಣ್ಣಿಗೆ ಬೀಳುವ (ದೇವಜ್ಞಾನಿಗಳೆಲ್ಲ)ವನು ನನ್ನ ವಶನಾಗಬೇಕು ಎಂದು ದೇವತೆಗಳನ್ನು ವರ ಯಾಚಿಸಿದ್ದಾನೆ. ಆದ್ದರಿಂದ ನಾನಾಗಲೀ, ನೀವಾಗಲೀ, ಬೇರೆಯವರಾಗಲೀ ಅವನನ್ನು ಶಾಪ ಕೊಡಲು ಆಗುವುದಿಲ್ಲ. ಅವನನ್ನು ಇಂದ್ರಸ್ಥಾನದಿಂದ ಬೀಳಿಸಲು (ಕೆಳಗಿಳಿಸಲು) ಸಾಧ್ಯವಿಲ್ಲ. ಈ ವಿಷಯದಲ್ಲಿ ಸಂಶಯವಿಲ್ಲ. ಅಲ್ಲದೆ ಈ ಮಹಾತ್ಮನಿಗೆ (ನಹುಷನಿಗೆ) ಕುಡಿಯಲು ಅಮೃತವೂ ಕೊಡಲಾಗಿದೆ. ಆದ್ದರಿಂದಲೂ ಅವನನ್ನು ಬೀಳಿಸುವುದು ಅಸಾಧ್ಯ. ಪ್ರಜಾಪತಿ (ಬ್ರಹ್ಮನು) ಪ್ರಜೆಗಳಿಗೆ ದುಃಖಕರವಾದ ವರವನ್ನೇ ಕೊಟ್ಟಿದ್ದಾನೆ. ಆದ್ದರಿಂದ ನರಾಧಮನಾದ ನಹುಷನು ಬ್ರಾಹ್ಮಣರನ್ನು ಅಧಾರ್ಮಿಕವಾಗಿ ನಡೆಸಿಕೊಳ್ಳುತ್ತಿದ್ದಾನೆ. ಆದ ಕಾರಣ ಈಗ ಏನು ಮಾಡಬೇಕೆಂದು ಹೇಳಿ. ನೀವು ಹೇಳಿದಂತೆ ನಾನು ಮಾಡುವೆನು ಎಂದನು ಅಗಸ್ತ್ಯಋಷಿ.

ಅದಕ್ಕೆ ಭೃಗುಗಳು ಬ್ರಹ್ಮದೇವರ ಆದೇಶದ ಮೇರೆಗೆ ನಾನು ನಹುಷನ ದರ್ಪವನ್ನು ಅಡಗಿಸಲು, ಸೇಡು ತೀರಿಸಲು (ಪ್ರತೀಕಾರ ಕೈಗೊಳ್ಳಲು) ನಿನ್ನ ಬಳಿಗೆ ಚರ್ಚಿಸಲು ಬಂದಿದ್ದೇನೆ.[೧] ಇಂದೂ ಅವನು ನಿನ್ನನ್ನು ರಥವನ್ನು ಹೊರಲು ನಿಯೋಜಿಸುತ್ತಾನೆ. ನಾನು ನನ್ನ ಸಾಮರ್ಥ್ಯದಿಂದ ಅವನನ್ನು ಉದ್ಧತನನ್ನಾಗಿ (ನಡತೆಗೆಟ್ಟವನನ್ನಾಗಿ) ಮಾಡುವೆನು. ನೀನು ನೋಡುತ್ತಿರುವಂತೆಯೇ ನಾನು ಅವನನ್ನು ಪಾಪಕರ್ಮ ಮಾಡುವವನನ್ನಾಗಿ ಮಾಡಿ, ಇಂದ್ರನ ಪದದಿಂದ ಕೆಳಗಿಳಿಸಿ, ಶತಕ್ರತುವಾದ ಪುರಂದರ, ಇಂದ್ರನನ್ನು (ಸದ್ಯ ಯಾರಿಗೂ ತಿಳಿದಯ ಸ್ಥಳದಲ್ಲಿ ವಾಸಿಸುತ್ತಿರುವ) ಇಂದ್ರಸ್ಥಾನದಲ್ಲಿ ಸ್ಥಾಪಿಸುತ್ತೇನೆ. ಇಂದು ಈ ಕು-ದೇವೇಂದ್ರನು (ದೇವೇಂದ್ರ ಪದಕ್ಕೆ ಅನರ್ಹ) ನಿನ್ನನ್ನು ತನ್ನ ಪಾದದಿಂದ ದೈವಚೋದಿತನಾಗಿ ಮಂದಬುದ್ಧಿಯಾದವನಾಗಿ, ತನ್ನ ನಾಶವನ್ನು ಮಾಡಿಕೊಳ್ಳಲು ಒದೆಯುವನು. ದರ್ಮಮೀರಿದ ಅವನ ಮೇಲೆ ನಾನು ಭಾರೀ ಕೋಪಗೊಂಡು ಬ್ರಹ್ಮದ್ರೋಹಿಯಾದ ಅವನನ್ನು ಸರ್ಪನಾಗೆಂದು ಶಪಿಸುತ್ತೇನೆ. ನಂತರ ಈ ದುರ್ಬುದ್ಧಿಯು ಧಿಕ್ ಶಬ್ದದಿಂದ ತನ್ನ ದೈವೀ ಕಾಂತಿಯನ್ನು ಕಳೆದುಕೊಂಡು ಐಶ್ವರ್ಯಬಲದಿಂದ ಮೋಹಗೊಂಡು (ವಿವೇಕ ಕಳೆದುಕೊಂಡವನಾಗಿ) ಭೂಮಿಯ ಮೇಲೆ ಎಲ್ಲರೂ ನೋಡುತ್ತಿರುವಂತೆಯೇ ಬೀಳುತ್ತಾನೆ. ಈ ವಿಷಯದಲ್ಲಿ ಎಲೈ ಮುನಿಯೇ! ನೀನು ಸರಿ ಕಂಡಂತೆ ಮಾಡು. ಹೀಗೆ ಭೃಗುಋಷಿ ಹೇಳಿದಾಗ, ಅವ್ಯಯರೂ, ಮೈತ್ರಾವರುಣಿಯೂ ಆದ ಅಗಸ್ತ್ಯರು ಆತಂಕ ಕಳೆದುಕೊಂಡು ಸಂತೋಷಗೊಂಡರು. ಅಗಸ್ತ್ಯರು ನಹುಷನು ಕೆಳಗೆ ಬೀಳುವಂತೆ ಎಲ್ಲವನ್ನೂ ಮಾಡಿದನು.

೧ ಪಿತಾಮಹನಿಯೋಗೇನ ಭವಂತಮಹಮಾಗತಃ।
ಪ್ರತಿಕರ್ತುಂ ಬಲವತಿ ನಹುಷೇ ದರ್ಪಮಾಸ್ಥಿತೇ॥ - ೧೫೨/೨೨

ಧರ್ಮರಾಜ ಮತ್ತೆ ಪ್ರಶ್ನಿಸುತ್ತಾನೆ –

ತಾತ! ನಹುಷನು ಪುಣ್ಯಹೀನನಾಗಿ ಹೇಗೆ ಭೂಮಿಯ ಮೇಲೆ ಬೀಳಿಸಲ್ಪಟ್ಟ, ಇಂದ್ರ-ಪದವಿಯನ್ನು ಹೇಗೆ ಕಳೆದುಕೊಂಡ? ಅದನ್ನು ಹೇಳಿ ಎಂದನು[೧]. ಭೀಷ್ಮರು ಈ ಪ್ರಶ್ನೆಗೆ –

'ರಾಜನ್! ಭೃಗು-ಅಗಸ್ತ್ಯರು ಹೀಗೆ ಮಾತನಾಡುತ್ತಿರುವಾಗ ನಹುಷನು ಮಾನುಷ ಹಾಗೂ ದೇವಲೋಕದ ಕ್ರಿಯೆಗಳನ್ನು (ಕರ್ಮಗಳನ್ನು) ಮುಂದುವರೆಸಿದ. ಮತ್ತೆ ದೀಪದಾನಗಳು, ಸರ್ವೋಪಕರಣದಾನಗಳು, ಪೂಜಾಕರ್ಮ(ನೈವೇದ್ಯ) ಮತ್ತು ಬೇರೆ ಬೇರೆ ಉತ್ಸವಗಳನ್ನು ಮಹಾತ್ಮರಾದ ದೇವರಾಜನು ಮಾಡಿದನು. ಆದ್ದರಿಂದ ದೇವ ಹಾಗೂ ಭೂಲೋಕದಲ್ಲಿ ಜ್ಞಾನಿಗಳು ಹೇಳುವ ಸದಾಚಾರಗಳನ್ನು ಗೃಹಸ್ಥರು ಮಾಡಲು ಗೃಹಸ್ಥಾಶ್ರಮಿಗಳು ಅಭಿವೃದ್ಧಿ ಹೊಂದುತ್ತಾರೆ. ಹಾಗೆಯೇ ಧೂಪದೀಪಾದಿದಾನಗಳಿಂದಲೂ, ನಮಸ್ಕಾರಾದಿಗಳಿಂದಲೂ ಅಭಿವೃದ್ಧಿಯನ್ನು ಹೊಂದುತ್ತಾರೆ.[೨]

ಹೇಗೆ ಸಿದ್ಧವಾದ ಅಗ್ರವಾದ ಅನ್ನವನ್ನು ಬ್ರಾಹ್ಮಣರಿಗೆ ಕೊಟ್ಟರೆ ಗೃಹಪ್ರವೇಶದಲ್ಲಿ ದೇವತೆಗಳು ಪ್ರಸನ್ನರಾಗುತ್ತಾರೆ. ಗೃಹಸ್ಥನು ಸಂತೋಷಗೊಂಡರೆ ಅದರ ನೂರು ಪಟ್ಟು ದೇವತೆಗಳು ಸಂತೋಷಪಡುತ್ತಾರೆ. ಅದರಂತೆ ತನಗೆ ಸದ್ಗುಣಗಳನ್ನು ಸಂಪಾದಿಸಿಕೊಡುವ ನಮಸ್ಕಾರಸಹಿತವಾದ ಧೂಪದೀಪದಾನಗಳನ್ನು ಪ್ರಶಂಸೆ ಮಾಡುತ್ತಾರೆ.[೩]

ಜ್ಞಾನಿಯು ಮಾಡುವ ಕರ್ಮದಿಂದಲೂ, ಜಲದಿಂದ ಮಾಡುವ ನಮಸ್ಕಾರಾದಿಯುಕ್ತವಾದ ತರ್ಪಣಾದಿಕ್ರಿಯೆಗಳಿಂದಲೂ ದೇವತೆಗಳು ಪ್ರಸನ್ನರಾಗುತ್ತಾರೆ. ಈ ಅನುಸಂಧಾನದಿಂದ ನಹುಷನು ಶ್ರೇಷ್ಠವಾದ ಸುರೇಂದ್ರ ಪದವಿಹೊಂದಲು ಅದೆಲ್ಲವನ್ನು ಅದ್ಭುತವಾಗಿ (ಪರಿಪೂರ್ಣವಾಗಿ) ಮಾಡಿದನು.[೪]

ಹೀಗಿರಲು ಅವನ ಪುಣ್ಯಕ್ಷಯಕಾಲ ಬಂದಾಗ ಇಂತಹ ಕಾರ್ಯಗಳನ್ನು ಮಾಡಲಿಲ್ಲ. ತಾನೇ ಬಲಿಕರ್ಮಗಳನ್ನು ಬಿಟ್ಟನು. ಧೂಪದೀಪಉದಕವಿಧಿಗಳನ್ನೂ ಸರಿಯಾಗಿ ಮಾಡಲಿಲ್ಲ. ಅವನ ಯಜ್ಞವೆಲ್ಲ ರಾಕ್ಷಸರಿಂದ ಬಾಧಿತವಾಯಿತು (ಕೆಟ್ಟಿತು). ಹೀಗೆ ಬುದ್ಧಿ ಕೆಟ್ಟಾಗಲೇ

---

೧ ತಥೈವ ದೀಪದಾನಾನಿ ಸರ್ವೋಪಕರಣಾನಿ ಚ।
ಬಲಿಕರ್ಮ ಚ ಯಥಾನ್ಯಾಯಮುತ್ಸವಾಶ್ಚ ಪೃಥಕ್ ಪೃಥಕ್।
ಸರ್ವಾಸ್ತಸ್ಯ ಸಮುತ್ಪನ್ನಾ ದೇವರಾಜ್ಞೋ ಮಹಾತ್ಮನಃ॥ – ೧೫೩/೩

೨ ದೇವಲೋಕೇ ನೃಲೋಕೇ ಚ ಸದಾಚಾರಾ ಬುಧೈಃ ಸ್ಮೃತಾಃ।
ತೇ ಚೇದ್ ಭವಂತಿ ರಾಜೇಂದ್ರ ಋಧ್ಯಂತೇ ಗೃಹಮೇಧಿನಃ।
ಧೂಪಪ್ರದಾನೈರ್ದೀಪೈಶ್ಚ ನಮಸ್ಕಾರೈಸ್ತಥೈವ ಚ॥ – ೧೫೩/೪

೩ ಏವಂ ಧೂಪಪ್ರದಾನಂ ಚ ದೀಪದಾನಂ ಚ ಸಾಧವಃ।
ಪ್ರಶಂಸಂತಿ ನಮಸ್ಕಾರೈರ್ಯುಕ್ತಮಾತ್ಮಗುಣಾವಹಮ್॥ – ೧೫೩/೭

೪ ಇತ್ಯೇತಾಂ ಬುದ್ಧಿಮಾಸ್ಥಾಯ ನಹುಷಃ ಸ ನರೇಶ್ವರಃ।
ಸುರೇಂದ್ರತ್ವಂ ಮಹತ್‌ಪ್ರಾಪ್ಯ ಕೃತವಾನೇತದದ್ಭುತಮ್॥ – ೧೫೩/೯

ಋಷಿಶ್ರೇಷ್ಠರಾದ ಅಗಸ್ತ್ಯರನ್ನು ವಾಹನ ಹೊರಲು ಕರೆದನು ಮಹಾಬಲಿಯಾದ ಅವನು. ಇಂದ್ರನು ನಗುತ್ತಾ ಸರಸ್ವತೀತೀರದಿಂದ ರಥವನ್ನು ಕೂಡಲೇ ಎಳೆದುಕೊಂಡು ಹೋಗಲು ಆಹ್ವಾನಿಸಿದನು.

ನಂತರ ಭೃಗುಋಷಿಗಳು ಮೈತ್ರಾವರುಣಿ – ಅಗಸ್ತ್ಯರನ್ನು ಕಣ್ಣುಮುಚ್ಚಿಕೊಳ್ಳಿರಿ, ನಾನು ನಿಮ್ಮ ಜಟೆಯನ್ನು ಪ್ರವೇಶಿಸುತ್ತೇನೆ ಎಂದು ಹೇಳಿದರು. ಅಗಸ್ತ್ಯರು ಮರದಂತೆ ಅಚಲವಾಗಿ ನಿಲ್ಲಲು ಭೃಗುಗಳು, ನಹುಷನನ್ನು ಸ್ವರ್ಗಚ್ಯುತನನ್ನಾಗಿ ಮಾಡಲು ಅಗಸ್ತ್ಯರ ಜಟೆಯನ್ನು ಪ್ರವೇಶ ಮಾಡಿದರು. ನಂತರ ದೇವರಾಜ ನಹುಷನು ವಾಹನವನ್ನು ಹೊತ್ತುಕೊಂಡು ಹೋಗಲು ಅಗಸ್ತ್ಯರನ್ನು ಪ್ರವೇಶಿಸಿದ ಭೃಗುಗಳು ನಹುಷನ ವರಬಲಸಾಮರ್ಥ್ಯ ತಿಳಿದಿದ್ದರಿಂದ ಅವನಿಗೆ ಗೋಚರವಾಗಲಿಲ್ಲ.[೧] ನಹುಷನು ಅಗಸ್ತ್ಯರನ್ನು ರಥಕ್ಕೆ ಹೂಡಿದರೂ, ಅಗಸ್ತ್ಯರು ಕೋಪಿಸಿಕೊಳ್ಳಲಿಲ್ಲ. ಆದರೆ ನಹುಷನು ಅಗಸ್ತ್ಯರನ್ನು ಬಾರುಕೋಲಿನಿಂದ (ಚಾವಟಿ) ಪ್ರಚೋದಿಸಿದನು (ಹೊಡೆದರು). ಧರ್ಮಾತ್ಮರಾದ ಅಗಸ್ತ್ಯರು ಕೋಪಿಸಿಕೊಳ್ಳಲಿಲ್ಲ.

ಬಾರುಕೋಲಿನಿಂದ ಹೊಡೆದುದಲ್ಲದೆ, ನಹುಷನು ಅಗಸ್ತ್ಯರ ತಲೆಗೆ ತನ್ನ ಎಡಗಾಲಿನಿಂದ ಒದ್ದನು. ಹೀಗೆ ಒದೆಯುತ್ತಿರಲು ಜಟೆಯಲ್ಲಿ ಲೀನರಾಗಿದ್ದ (ಕಾಣದಂತೆ ಇದ್ದ) ಭೃಗುಗಳು ಪಾಪಿಯಾದ ನಹುಷನನ್ನು 'ದುಷ್ಟಬುದ್ಧಿಯ ನಹುಷನೇ! ನೀನು ಕೋಪದಿಂದ ಈ ಮಹರ್ಷಿಯನ್ನು (ಅಗಸ್ತ್ಯ) ಕಾಲಿನಿಂದ ತಲೆಗೆ ಒದ್ದೆಯಾದ್ದರಿಂದ ಶೀಘ್ರವಾಗಿ ಸರ್ಪವಾಗಿ ಭೂಮಿಗೆ ಹೋಗು' ಎಂದು ಶಪಿಸಿದರು. ಹೀಗೆ ಶಾಪಗ್ರಸ್ತನಾದ ನಹುಷನು ಭೂಮಿಯ ಮೇಲೆ ಸರ್ಪನಾಗಿ ಬಿದ್ದನು.[೨]

ರಾಜನ್! ನಹುಷನು ಒಂದು ವೇಳೆ ಭೃಗುಗಳನ್ನು ನೋಡಿದ್ದರೆ ಅವರಿಗೂ ನಹುಷನನ್ನು ಭೂಮಿಗೆ ಬೀಳಿಸಲು ಆಗುತ್ತಿರಲಿಲ್ಲ. ವರದ ಬಲದಿಂದಾಗಿ ಹೀಗೆ ಅವನು ಭೂಮಿಗೆ ಬಿದ್ದಿದ್ದರೂ, ಹಿಂದೆ ತಾನು ಮಾಡಿದ ದಾನ, ತಪಸ್ಸುಗಳಿಂದಾಗಿ ಸ್ಮರಣಶಕ್ತಿ ನಾಶವಾಗಿದ್ದಿಲ್ಲ. ನಂತರ ನಹುಷನು ಭೃಗುಗಳನ್ನು ಶಾಪಮೋಕ್ಷಕ್ಕಾಗಿ ಮೊರೆಹೋದನು.[೩] ಅಗಸ್ತ್ಯರೂ ಕೂಡಾ

---

೧ ನ ಚಾಪಿ ದರ್ಶನಂ ತಸ್ಯ ಚಕಾರ ಸ ಭೃಗುಸ್ತದಾ।
ವರದಾನಪ್ರಭಾವಜ್ಞೋ ನಹುಷಸ್ಯ ಮಹಾತ್ಮನಃ॥ – ೧೫೩/೧೮

೨ ತಸ್ಮಿನ್ ಶಿರಸ್ಯಭಿಹತೇ ಸ ಜಟಾಂತರ್ಗತೋ ಭೃಗುಃ।
ಶಶಾಪ ಚಾತಿಕೋಪೇನ ನಹುಷಂ ಪಾಪಚೇತಸಮ್॥
ಯಸ್ಮಾತ್ ಪದಾಽಹನಃ ಕ್ರೋಧಾಚ್ಛಿರಸೀಮಂ ಮಹಾಮುನಿಮ್।
ತಸ್ಮಾದಾಶು ಮಹೀಂ ಗಚ್ಛ ಸರ್ಪೋ ಭೂತ್ವಾ ಸುದುರ್ಮತೇ॥
ಇತ್ಯುಕ್ತಃ ಸ ತದಾ ತೇನ ಸರ್ಪೋ ಭೂತ್ವಾ ಪಪಾತ ಹ।
ಅದೃಷ್ಟೇನಾಥ ಭೃಗುಣಾ ಭೂತಲೇ ಭರತರ್ಷಭ॥ – ೧೫೩/೨೧-೨೩

೩ ಸ ತು ತೈಸ್ತೈಃ ಪ್ರದಾನೈಶ್ಚ ತಪೋಭಿರ್ನಿಯಮೈಸ್ತಥಾ।
ಪತಿತೋಽಪಿ ಮಹಾರಾಜ ಭೂತಲೇ ಸ್ಮೃತಿಮಾನಭೂತ್।
ಪ್ರಸಾದಯಾಮಾಸ ಭೃಗುಂ ಶಾಪಾಂತೋ ಮೇ ಭವೇದಿತಿ॥ – ೧೫೩/೨೫

ಭೃಗುಗಳನ್ನು ನಹುಷನ ಶಾಪವಿಮೋಚನೆ ಮಾಡಲು ಭೃಗುಗಳನ್ನು ಬೇಡಿದರು.[೧] ಆದರಿಂದ ಭೃಗುಗಳು ನಹುಷನಿಗೆ 'ಮುಂದೆ ಹುಟ್ಟಲಿರುವ ಚಂದ್ರವಂಶದ ಧರ್ಮರಾಜನಿಂದ ನಿನ್ನ ಶಾಪವಿಮೋಚನೆಯಾಗುವುದು' ಎಂದು ಹೇಳಿ ಅಂತರ್ಧಾನರಾದರು.

ಹೀಗೆ ಅಗಸ್ತ್ಯರೂ ಇಂದ್ರದೇವನ ಕಾರ್ಯವನ್ನು ಮಾಡಿ ಬ್ರಾಹ್ಮಣರಿಂದ ಪೂಜಿತರಾಗಿ ತಮ್ಮ ಆಶ್ರಮಕ್ಕೆ ತೆರಳಿದರು. ನಹುಷನೂ ಕೂಡಾ ಭೃಗುಶಾಪದಿಂದ ಮೋಚಿತನಾಗಿ ಮೊದಲು ಮಾಡಿದ ಪುಣ್ಯದಿಂದ ಬ್ರಹ್ಮಲೋಕಕ್ಕೆ ಹೋದನು.[೨]

ಭೃಗುಮಹರ್ಷಿಗಳು ನಹುಷನನ್ನು ಭೂಮಿಗೆ ಬೀಳಿಸಿ ಸತ್ಯಲೋಕ್ಕೆ ಯೋಗಿ ಬ್ರಹ್ಮದೇವರಿಗೆ ಎಲ್ಲವನ್ನೂ ನಿವೇದಿಸಿದರು.

ನಂತರ ಬ್ರಹ್ಮದೇವರು ಇಂದ್ರನನ್ನು ಕರೆಸಿ 'ದೇವತೆಗಳಿಗೆ ದೇವಲೋಕದಲ್ಲಿ ರಾಜನಿಲ್ಲದೇ ಬದುಕಲು ಸಾಧ್ಯವಿಲ್ಲ. ಕಾರಣ ಮತ್ತೆ ಶಕ್ರನನ್ನು ದೇವರಾಜನನ್ನಾಗಿ ಅಭಿಷೇಕ ಮಾಡಿ' ಎಂದು ಹೇಳಿದರು.[೩] ಆ ಪ್ರಕಾರ ಇಂದ್ರದೇವರು ಬ್ರಹ್ಮನಿಂದ ಮತ್ತೆ ದೇವರಾಜನಾಗಿ ಅಭಿಷಿಕ್ತರಾಗಿ ಮೊದಲಿನಂತೆ ಶೋಭಿಸಿದರು. ಇದುವೇ ನಹುಷನು ಧರ್ಮಾತಿಕ್ರಮಣ ಮಾಡಿದ್ದರಿಂದ ಹೀಗೆ ನಡೆಯಿತಾದರೂ ಹಿಂದೆ ಆತನು ಮಾಡಿದ ಸತ್ಕರ್ಮಗಳಿಂದಲೇ ಸಿದ್ಧಿಯನ್ನೂ ಪಡೆದನು.

ಆದ್ದರಿಂದ ರಾಜನೇ! ಗೃಹಸ್ಥರು ಸಾಯಂಕಾಲ ದೀಪದಾನ ಮಾಡಬೇಕು. ಅದರಿಂದ ಮರಣಾನಂತರದಲ್ಲಿ ದಿವ್ಯಚಕ್ಷುಷಸ್ಸನ್ನು ಹೊಂದುತ್ತಾನೆ. ಮತ್ತೆ ಭೂಮಿಯಲ್ಲಿ ಜನಿಸಿರುವಾಗ ಪೂರ್ಣಚಂದ್ರನ ಕಾಂತಿಯನ್ನು ಹೊಂದುತ್ತಾನೆ.[೪]

ದಾನಮಾಡಿದ ದೀಪವು ಎಷ್ಟು ಸಲ ಕಣ್ಣು ಮುಚ್ಚಿ ತೆರೆಯುವಷ್ಟು ಕಾಲ ಉರಿಯುತ್ತದೆಯೋ ಅಷ್ಟು ವರ್ಷಗಳ ಕಾಲ ದಾನ ಮಾಡಿದ ಮನುಷ್ಯನು ರೂಪವಂತನೂ, ಧನವಂತೂ ಆಗುತ್ತಾನೆ.

*****

---

೧ ತತೋಽಗಸ್ತ್ಯಃ ಕೃಪಾವಿಷ್ಟಃ ಪ್ರಾಸಾದಯತ ತಂ ಭೃಗುಮ್ ।
ಶಾಪಾಂತಾರ್ಥಂ ಮಹಾರಾಜ ಸ ಚ ಪ್ರಾದಾತ್ ಕೃಪಾನ್ವಿತಃ ॥ - ೧೫೩/೨೬

೨ ನಹುಷೋಽಪಿ ತ್ವಯಾ ರಾಜನ್ ತಸ್ಮಾಚ್ಛಾಪಾತ್ ಸಮುದ್ಧೃತಃ ।
ಜಗಾಮ ಬ್ರಹ್ಮಸದನಂ ತೇನ ಪುಣ್ಯೇನ ಕರ್ಮಣಾ ॥ - ೧೫೩/೨೯

೩ ನ ಚ ಶಕ್ಯಂ ವಿನಾ ರಾಜ್ಞಾ ಸುರಾ ವರ್ತಯಿತುಂ ಕ್ವಚಿತ್ ।
ತಸ್ಮಾದಯಂ ಪುನಃ ಶಕ್ರೋ ದೇವರಾಜೋಽಭಿಷಿಚ್ಯತಾಮ್ ॥ - ೧೫೩/೩೨

೪ ಯಾವದಕ್ಷಿನಿಮೇಷಾಣಿ ಜ್ವಲತೇ ತಾವತೀಃ ಸಮಾಃ ।
ರೂಪವಾನ್ ಧನವಾಂಶ್ಚಾಪಿ ನರೋ ಭವತಿ ದೀಪದಃ ॥ - ೧೫೩/೩೬

# ೨೦೦. ಪುಣ್ಯಫಲ

ಧರ್ಮರಾಜನು ಪ್ರಶ್ನಿಸುತ್ತಾನೆ – 'ಪುಣ್ಯ ಮಾಡಿದವರಿಗೆಲ್ಲ ಒಂದೇ ಲೋಕವೇ ಅಥವಾ ಅಲ್ಲೂ ನಾನಾಬಗೆ ಉಂಟೇ? ಈ ಬಗ್ಗೆ ನನಗೆ ಹೇಳು' ಎಂದು ಭೀಷ್ಮರನ್ನು ಕೇಳುತ್ತಾನೆ. (ಪುಣ್ಯಕರ್ಮ ಮಾಡಿದವರಿಗೆಲ್ಲ ಒಂದೇ ಲೋಕಪ್ರಾಪ್ತಿಯೋ ಅಥವಾ ಬೇರೆ ಬೇರೆ ಲೋಕಗಳೋ?)

ಇದಕ್ಕೆ ಭೀಷ್ಮರು ಉತ್ತರಿಸುತ್ತಾರೆ.

'ಮಾನವರು ತಾವು ಮಾಡುವ ಕರ್ಮಗಳಿಂದ ಬೇರೆ ಬೇರೆ ಲೋಕಗಳಿಗೆ ಹೋಗುತ್ತಾರೆ' ಪುಣ್ಯ ಮಾಡಿದವರು ಪುಣ್ಯಲೋಕಗಳಿಗೂ ಪಾಪ ಮಾಡಿದವರು ಪಾಪಲೋಕಗಳಿಗೂ ಹೋಗುತ್ತಾರೆ. ಈ ವಿಷಯದಲ್ಲಿ **ಗೌತಮಮುನಿಗೂ-ಇಂದ್ರನಿಗೂ** ನಡೆದ ಸಂವಾದರೂಪ ಇತಿಹಾಸವನ್ನು ಜ್ಞಾನಿಗಳು ಉದಾಹರಿಸುತ್ತಾರೆ.

ಮೃದುಸ್ವಭಾವದ ಜಿತೇಂದ್ರಿಯನಾದ ಗೌತಮಗೋತ್ರದ ಒಬ್ಬ ಬ್ರಾಹ್ಮಣ ದೊಡ್ಡ ಕಾಡಿನಲ್ಲಿ ತಾಯಿಯನ್ನು ಕಳೆದುಕೊಂಡ ಒಂದು ಅನಾಥವಾದ ಮರಿಯಾನೆಯನ್ನು ನೋಡಿ, ಅದರ ಬಗ್ಗೆ ಅನುಕಂಪ ಹೊಂದಿ ಅದನ್ನು ಪೋಷಿಸಿ ಬದುಕಿಸಿದನು. ಅದು ಒಂದು ವ್ರತವಾಗಿ ಭಾವಿಸಿದ್ದನು (ಅನಾಥ ಪೋಷಣೆ). ಹಲವು ವರ್ಷಗಳ ನಂತರ ಆ ಮರಿಯಾನೆ ದೊಡ್ಡದಾಗಿ ಬಲಿಷ್ಠವಾಯಿತು. ಇಂದ್ರನು ಧೃತರಾಷ್ಟ್ರನ (ಒಬ್ಬ ರಾಜನ) ರೂಪದಿಂದ ಬಂದು ಎಳೆದುಕೊಂಡು ಹೋಗುತ್ತಿರಲು, ಗೌತಮನು ಆ ರಾಜನನ್ನು ಕುರಿತು ಹೀಗೆ ನುಡಿದನು.

ಕೃತಘ್ನ ರಾಜನೇ! ತುಂಬಾ ಕಷ್ಟಪಟ್ಟು ಬೆಳೆಸಿದ ಈ ನನ್ನ ಪುತ್ರನಾದ ಆನೆಯನ್ನು ಎಳೆದೊಯ್ಯಬೇಡ. ಏಳು ಹೆಜ್ಜೆಗಳು ಜೊತೆಯಲ್ಲಿ ಹೋದ ಸಜ್ಜನರು ಮಿತ್ರರಾಗುತ್ತಾರೆ. ನಿನಗೆ ಮಿತ್ರದ್ರೋಹ ತಟ್ಟದಿರಲಿ. ನನಗೆ ಇಂಧನ (ಸೌದೆ, ಕಟ್ಟಿಗೆ), ನೀರು ತಂದುಕೊಡುವ, ಆಶ್ರಮದಲ್ಲಿ ಯಾರು ಇಲ್ಲದಿರುವಾಗ ರಕ್ಷಿಸುವ, ಆಚಾರ್ಯಕುಲದಲ್ಲಿ ಶಿಕ್ಷಿತವಾದ, ದೊಡ್ಡಕಾರ್ಯಗಳನ್ನು ಮಾಡಲು ಚೆನ್ನಾಗಿ ಕಲಿತಿರುವ, ಒಳ್ಳೆಯ ನಡತೆಯುಳ್ಳ, ನಿಯತ-ವಾದ, ನನಗೆ ಯಾವಾಗಲೂ, ಪ್ರಿಯವಾದ, ಈ ಆನೆಯನ್ನು ನಾನು ಕೂಗುತ್ತಿದ್ದರೂ ಎಳೆದುಕೊಂಡು ಹೋಗುವುದು ಸರಿಯಲ್ಲ,

ಈ ಮಾತನ್ನು ಕೇಳಿದ ಧೃತರಾಷ್ಟ್ರರಾಜನು –

'ನಿನಗೆ ಸಾವಿರ ಗೋವುಗಳನ್ನು, ನೂರು ದಾಸಿಯರನ್ನು, ಐದುನೂರು ನಿಷ್ಕಗಳನ್ನು (೧೬ ಮಾಷಗಳ ತೂಕ, ೧ ಸುವರ್ಣ, ೧೦೮ ಸುವರ್ಣಗಳ ತೂಕ ೧ ನಿಷ್ಕ) ಕೊಡುತ್ತೇನೆ. ನಿನಗೆ ಬೇಕಾದ ಇನ್ನೂ ಬೇರೆ ಧನವನ್ನೂ ಕೊಡುತ್ತೇನೆ. ಈ ಆನೆಯಿಂದ ನಿನಗೇನು ಪ್ರಯೋಜನ? ಹೇಳು' ಎಂದನು. ಅದಕ್ಕೆ ಗೌತಮನು ಬ್ರಾಹ್ಮಣನಿಗೆ ವಿತ್ತದಿಂದ ಏನು ಪ್ರಯೋಜನ ಎಂದನು.

ತ್ವಾಮೇವ ಗಾವೋ ವಿವಿಧಾ ಭಜಂತು ದಾಸ್ಯಃ ಸನಿಷ್ಕಾ ವಿವಿಧಂ ಚ ರತ್ನಮ್ ।
ಅನ್ಯಚ್ಚ ವಿತ್ತಂ ವಿವಿಧಂ ನರೇಂದ್ರ ಕಿಂ ಬ್ರಾಹ್ಮಣಸ್ಯೇಹ ಧನೇನ ಕೃತ್ಯಮ್ ॥
- ೧೫೫/೧೨

ಗೌತಮನಿಗೆ ರಾಜನು ಉತ್ತರಿಸುತ್ತಾನೆ.

'ಬ್ರಾಹ್ಮಣನೇ! ಬ್ರಾಹ್ಮಣರಿಗೆ ಆನೆಗಳಿಂದ ಆಗಬೇಕಾದ ಕಾರ್ಯವೇನು? ರಾಜರಿಗೆ ಆನೆಗಳ ಹಿಂಡೇ ಬೇಕು. ನನ್ನ ವಾಹನವನ್ನು (ಆನೆ) ತೆಗೆದುಕೊಂಡು ಹೋಗುವುದರಲ್ಲಿ ಅಧರ್ಮವೇನೂ ಇಲ್ಲ. ಕಾರಣ ಈ ಶ್ರೇಷ್ಠವಾದ ಆನೆಯ ಆಶೆಯಿಂದ ನೀನು ಹಿಂದಿರುಗು.' ಎಂದು ರಾಜನ ಮಾತಿಗೆ ಕೋಪದಿಂದ ಗೌತಮ ಉತ್ತರಿಸುತ್ತಾನೆ.

ಪುಣ್ಯಕರ್ಮವನ್ನು ಮಾಡುವವನು ಎಲ್ಲಿಗೆ ಹೋಗಿ ಸಂತೋಷಪಡುವನೋ, ಎಲ್ಲಿಗೆ ಹೋಗಿ ಪಾಪಕರ್ಮ ಮಾಡಿದವನು ದುಃಖಿಸುವನೋ ಅಂತಹ ಮಹಾತ್ಮನಾದ ಯಮನ ಮನೆಗೆ ಆನೆಯನ್ನು ಅಪಹರಿಸುತ್ತಿರುವ ನಿನ್ನನ್ನು ಕಳಿಸುವೆನು.

ಗೌತಮರ ಮಾತಿಗೆ ರಾಜನು ಉತ್ತರಿಸುತ್ತಾನೆ.

ಯಾರು ಸತ್ಕರ್ಮಗಳನ್ನು ಮಾಡುವುದಿಲ್ಲವೋ, ನಾಸ್ತಿಕರೋ, ಶ್ರದ್ಧಾರಹಿತರೋ, ಪಾಪಿಗಳೋ, ಇಂದ್ರಿಯಸುಖಗಳಲ್ಲಿ ರತರೋ ಅಂತಹವರು ಯಮಯಾತನೆಯನ್ನು ಹೊಂದುತ್ತಾರೆ. ಆದರೆ ಧೃತರಾಷ್ಟ್ರನು ಎಂದೂ ಅಲ್ಲಿಗೆ ಹೋಗುವುದಿಲ್ಲ.

**ಗೌತಮ** – ಯಮನ ಪುರದಲ್ಲಿ ಸುಳ್ಳಿಗೆ ಸ್ಥಾನವಿಲ್ಲ. ಸತ್ಯವೇ ಅಲ್ಲಿ ನಡೆಯುವುದು. ಅಲ್ಲಿ ದುರ್ಬಲರಾದವರು ಬಲಿಷ್ಠರಾದವರನ್ನೂ ಯಾತನೆಗೆ ಒಳಗಾಗಿಸುತ್ತಾರೆ. ನಾನು ಗಜಾಪಹಾರ ಮಾಡುವ ನಿನ್ನನ್ನು ಅಲ್ಲಿಗೆ ಕಳಿಸಿ ಯಾತನೆ ಹೊಂದುವಂತೆ ಮಾಡುತ್ತೇನೆ.

**ಧೃತರಾಷ್ಟ್ರ** – ಯಾರು ಅಕ್ಕನನ್ನು ತಂದೆ, ತಾಯಿಯರನ್ನು ಗುರುವನ್ನು ಗೌರವಿಸುವುದಿಲ್ಲವೋ, ಅವಂತಹವರಿಗೆ ಯಮಲೋಕವಾಗುತ್ತದೆ. ಆದರೆ ಧೃತರಾಷ್ಟ್ರ ಅಲ್ಲಿಗೆ ಹೋಗುವುದಿಲ್ಲ.

**ಗೌತಮ** – ಕುಬೇರನ ರಾಜಧಾನಿ ಮಂದಾಕಿನಿ, ಗಂಧರ್ವ, ಯಕ್ಷ, ಅಪ್ಸರೆಯರು ಸೇವಿಸುವ ಪುಣ್ಯಲೋಕಕ್ಕೆ ಹೋದರೂ, ಗಜಾಪಹಾರ ಮಾಡಿದ ನಿನಗೆ ಯಾತನೆ ಉಂಟು ಮಾಡುವೆ.

**ಧೃತರಾಷ್ಟ್ರ** – ಸದ್ವ್ರತಧಾರಿಗಳೂ, ಅತಿಥಿ ಪೂಜಾವ್ರತರೂ, ಬ್ರಾಹ್ಮಣರಿಗೆ ಆಶ್ರಯ ನೀಡುವವರೂ, ಅವರು ಮಾಡಿದ ಮೇಲೆ ಶೇಷಾನ್ನವನ್ನು ಆಶ್ರಿತರಿಗೂ, ಭೃತ್ಯರಿಗೂ ಕೊಟ್ಟು ಸೇವಿಸುವವರು ಮಂದಾಕಿನಿಯನ್ನು ಅಲಂಕರಿಸುತ್ತಾರೆ.

**ಗೌತಮ** – ಮೇರುಪರ್ವತಶಿಖರದ ಪರಿಸರದಲ್ಲಿ ವನ, ಅಲ್ಲಿರುವ ಜಂಬೂವೃಕ್ಷದಲ್ಲಿ ನಾನು ನಿನ್ನನ್ನು ಬೇಡುವಂತೆ ಮಾಡುವೆನು.

**ಧೃತರಾಷ್ಟ್ರ** – ಮೃದುಸ್ವಭಾವದವರೂ, ಸತ್ಯಶೀಲರೂ, ಅನೇಕ ಶಾಸ್ತ್ರಪಾರಂಗತರೂ, ಸರ್ವಭೂತಹಿತರೂ (ಹಿತೈಷಿಗಳು) ಆದ ಬ್ರಾಹ್ಮಣರು ಯಾರು ಇದ್ದಾರೋ, ಇತಿಹಾಸ ಪುರಾಣಗಳನ್ನು ಅಧ್ಯಯನ ಮಾಡಿದ್ದಾರೋ, ಅಗ್ನಿಯಲ್ಲಿ ಹೋಮಗಳನ್ನು ಮಾಡುತ್ತಾರೋ, ಅಂತಹವರಿಗೆ ಮಾತ್ರ ನೀನು ಹೇಳುವ ಲೋಕಪ್ರಾಪ್ತಿ ಇದೆ. ಆದರೆ ಧೃತರಾಷ್ಟ್ರನು ಅಲ್ಲಿಗೆ ಹೋಗುವುದಿಲ್ಲ, ನನಗೆ ಕ್ಲೃಪ್ತವಾದ ಯಾವಸ್ಥಾನವಿದೆಯೋ, ಅದನ್ನೇ ಹೇಳು. ಅಲ್ಲಿಗೆ ನಾನು ಬೇಗ ಹೋಗುತ್ತೇನೆ.

**ಗೌತಮ** – ಶ್ರೇಷ್ಠರಾದ ಕಿನ್ನರರಿಂದ ಸೇವಿತವಾದ, ನಾರದರಿಗೆ ಪ್ರಿಯವಾದ ಗಂಧರ್ವಾಪ್ಸರೆಯರ ಭವನಗಳಿರುವ ನಂದನವನವಿದೆ. ಅಲ್ಲಿ ಆನೆಯ ಅಪಹಾರಿಯಾದ ನಿನ್ನನ್ನು ಯಾತನೆಗೆ ಗುರಿ ಮಾಡುತ್ತೇನೆ.

**ಧೃತರಾಷ್ಟ್ರ** – ನೃತ್ಯಗೀತೆಗಳಲ್ಲಿ ಕುಶಲರೂ, ಸದಾ ಯಾಚನೆ ಮಾಡದೆ ಸಂಚರಿಸುವವರಿಗೆ ಆ ಲೋಕಗಳು. ಆದರೆ ಧೃತರಾಷ್ಟ್ರ ರಾಜನು ಅಲ್ಲಿಗೆ ಹೋಗುವುದಿಲ್ಲ.

**ಗೌತಮ** – ಉತ್ತರ ಕುರುದೇಶದಲ್ಲಿ ಜನರು ದೇವತೆಗಳೊಡನೆ ಸಂತೋಷದಿಂದಿರುತ್ತಾರೆ. ಅಲ್ಲಿ ಅಗ್ನಿಯೋನಿಗಳೂ, ಅಯೋನಿಜರೂ, ಪರ್ವತಯೋನಿಗಳೂ ಪುರುಷರಿದ್ದಾರೆ. ಅಲ್ಲಿ ಇಂದ್ರನು ಎಲ್ಲ ಕಾಮನೆಗಳನ್ನು ಬಯಸುವವರಿಗೆ ಮಳೆಗರೆಯುತ್ತಾನೆ. ಅಂತಹ ಸ್ಥಾನದಲ್ಲಿ ಗಜಾಪಹಾರಿಯಾದ ನಿನ್ನನ್ನು ಯಾತನೆಗೆ ಗುರಿ ಮಾಡುತ್ತೇನೆ.

**ಧೃತರಾಷ್ಟ್ರ** – ಮಾಂಸಭಕ್ಷಕರಲ್ಲದ, ಯಾವ ಪ್ರಾಣಿಗಳನ್ನು ಹಿಂಸಿಸದ, ಸರ್ವಭೂತಾಂತರ್ಯಾಮಿಯಾದ, ಪರಮಾತ್ಮನನ್ನು ಮನಸಾ ಚಿಂತಿಸುವ, ಆಸೆ, ಅಹಂಕಾರ, ರಾಗಗಳನ್ನು ತೊರೆದ, ಸತ್ಯಸಂಧರಾದವರು ಹೋಗುವ ಮೇಲಿನ ಲೋಕಗಳಿಗೆ ಧೃತರಾಷ್ಟ್ರ ಹೋಗುವವನಲ್ಲ.

**ಗೌತಮ** – ಓಷಧಿಗಳ ರಾಜನ ಮೇಲಿನ ಲೋಕಕ್ಕಿಂತ ಶ್ರೇಷ್ಠವಾದ ಚಂದ್ರಲೋಕದಲ್ಲಿ ನಿನ್ನನ್ನು ಯಾತನೆಗೆ ಗುರಿ ಪಡಿಸುತ್ತೇನೆ.

**ಧೃತರಾಷ್ಟ್ರ** – ದಾನಶೀಲರೂ, ಪ್ರತಿಗ್ರಹ ಬಯಸದವರು, ಕ್ಷಮಾಶೀಲರೂ, ಎಲ್ಲ ಸರ್ವಾತಿಥಿಯಾಗಿ ಪ್ರಸನ್ನಮನಸ್ಸಿನಿಂದ ಕೂಡಿದವರೂ, ಬೇರೆಯವರನ್ನು ನಿಂದಿಸುವುದಿಲ್ಲವೋ ಸದಾಪುಣ್ಯಶೀಲರೋ ಅಂತಹವರಿಗೆ ಆ ಲೋಕಗಳು ಈ ಧೃತರಾಷ್ಟ್ರ ಅಲ್ಲಿಗೆ ಹೋಗುವವನಲ್ಲ.

**ಗೌತಮ** – ಚಂದ್ರಲೋಕದ ಮೇಲೆ ತಮೋರಹಿತವಾದ, ಶೋಕರಹಿತವಾದ ಸೂರ್ಯನ ಮನೋಹರಲೋಕಗಳಿವೆ. ಅಲ್ಲಿ ನಾನು ನಿನ್ನನ್ನು ಯಾತನೆಗೆ ಗುರಿ ಮಾಡುವೆನು.

**ಧೃತರಾಷ್ಟ್ರ** – ಸ್ವಾಧ್ಯಾಯಶೀಲರೂ, ಗುರುಸೇವಾ ಧುರಂಧರರೂ, ತಪಸ್ವಿಗಳೂ, ಸದ್ವ್ರತಶಾಲಿಗಳೂ, ಸತ್ಯಸಂಧರೂ, ಗುರುಗಳಿಗೆ ವಿರೋಧವಾಗದಂತೆ ಮಾತನಾಡುವವರೂ,

ಗುರುಗಳ ಕಾರ್ಯಗಳಲ್ಲಿ ಹೇಳದೇ ತಾವೇ ಯಾವಾಗಲೂ ಗುರುಸೇವಾರತರೂ, ಶುದ್ಧರೂ, ವಾಕ್, ಬುದ್ಧಿಗಳನ್ನು ಶುದ್ಧವಾಗಿರಿಸಿಕೊಂಡವರೂ, ಸತ್ಯದಲ್ಲಿಯೇ ಮಗ್ನರೂ, ಮಹಾತ್ಮರಾದ ವೇದಗಳನ್ನು ಬಲ್ಲವರಿಗೆ ಮಾತ್ರ ಆ ಲೋಕಗಳು. ಅಲ್ಲಿಗೆ ಧೃತರಾಷ್ಟ್ರ ಹೋಗುವುದಿಲ್ಲ.

**ಗೌತಮ** – ಸೂರ್ಯಲೋಕದ ಆಚೆ ಸನಾತನವಾದ, ಶೋಕರಹಿತವಾದ, ದೋಷರಹಿತವಾದ, ಪುಣ್ಯಗಂಧಯುಕ್ತವಾದ ವರುಣನ ಲೋಕಗಳಿವೆ. ಪ್ರಕಾಶಿಸುತ್ತಲೇ ಅಲ್ಲಿ ನಿನ್ನನ್ನು ಯಾಚನೆ ಮಾಡುವಂತೆ ಮಾಡುವೆನು.

**ಧೃತರಾಷ್ಟ್ರ** – ಯಾರು ಯಾವಾಗಲೂ ಚಾತುರ್ಮಾಸ್ಯ ಯಾಗಗಳನ್ನು ಮಾಡುವರೋ, ಸಾವಿರ ಇಷ್ಟಿಗಳನ್ನು ಮಾಡುತ್ತಾರೋ, ಶಾಸ್ತ್ರೋಕ್ತವಾಗಿ ಮೂರುವರ್ಷಕಾಲ ಶ್ರದ್ಧೆಯಿಂದ ಅಗ್ನಿಯಲ್ಲಿ ಹೋಮವನ್ನು ಮಾಡುತ್ತಾರೋ, ತಮ್ಮ ಪತ್ನಿಯರಲ್ಲಿ ಮಾತ್ರ ರತರಾದವರೋ, ಧರ್ಮಾತ್ಮರಾಗಿ ಶ್ರೇಷ್ಠಗತಿಯನ್ನು ಹೊಂದುತ್ತಾರೋ, ಅಂತಹ ಸ್ಥಾನವನ್ನು ಧೃತರಾಷ್ಟ್ರನು ಹೊಂದುವುದಿಲ್ಲ.

**ಗೌತಮ** – ಇಂದ್ರಲೋಕವು ದೋಷರಹಿತವೂ, ಶೋಕರಹಿತವೂ, ಹೋಗಲು ಅಸಾಧ್ಯವೂ ಆದರೂ, ಮನುಷ್ಯರಿಂದ ಬಯಸಿದ್ದಾಗಿದೆ. ಇಂದ್ರನ ಭವನದಲ್ಲಿ ಗಜಚೋರನಾದ ನಿನ್ನನ್ನು ಯಾತನೆಗೆ ಗುರಿ ಪಡಿಸುತ್ತೇನೆ.

**ಧೃತರಾಷ್ಟ್ರ** – ನೂರುವರ್ಷದ ಆಯುಷ್ಯವುಳ್ಳವನೂ, ಶೂರನೂ, ವೇದಾಧ್ಯಯನ ಮಾಡಿದವನೂ, ಯಾಗಶೀಲನೂ, ತಪ್ಪು ಮಾಡದವನೂ, ಇಂತಹವರು ಇಂದ್ರಲೋಕಕ್ಕೆ ಹೋಗುತ್ತಾರೆ. ಧೃತರಾಷ್ಟ್ರ ಅಲ್ಲಿಗೆ ಹೋಗುವುದಿಲ್ಲ.

**ಗೌತಮ** – ಪ್ರಜಾಪತಿಯ ಪುಷ್ಕಳವಾದ ಮಹಾಲೋಕಗಳಿವೆ. ಸ್ವರ್ಗದ ಮೇಲಿವೆ ಆ ಲೋಕಗಳು ಅವು ಶೋಕರಹಿತಗಳೇ. ಸರ್ವಲೋಕಗಳ ಉತ್ಪತ್ತಿಗೆ ಕಾರಣರಾದ ದೇವತೆಗಳು ಅವುಗಳನ್ನು ಇಚ್ಛಿಸುತ್ತಾರೆ. ಅಲ್ಲಿ ನಿನ್ನನ್ನು ಯಾಚಿಸುವಂತೆ ಮಾಡುತ್ತೇನೆ.

**ಧೃತರಾಷ್ಟ್ರ** – ನೀನು ಹೇಳಿದ ಲೋಕಗಳು ರಾಜಸೂಯ ಮಾಡಿ ಅವಭೃಥಸ್ನಾನ ಮಾಡಿದ ರಾಜರು, ಪ್ರಜೆಗಳನ್ನು ಧರ್ಮದಿಂದ ರಕ್ಷಿಸುವ ರಾಜರು ಅಶ್ವಮೇಧಯಾಗ ಮಾಡಿ, ಅವಭೃಥಸ್ನಾನ ಮಾಡಿದವರೂ ಆದವರ ಲೋಕಗಳೇ ಆದರೆ ಧೃತರಾಷ್ಟ್ರನು ಆ ಲೋಕಗಳಿಗೆ ಹೋಗುವುದಿಲ್ಲ.

**ಗೌತಮರು** – ಮೇಲಿನ ಪ್ರಾಜಾಪತ್ಯ ಲೋಕಗಳ ಆಚೆ ಪುಣ್ಯಗಂಧಗಳಾದ, ಸನಾತನವಾದ, ದೋಷಗಳಿರದ, ಶೋಕವಿರದ, ಅತ್ಯಂತ ದುರ್ಲಭವಾದ ನಾಶ ಮಾಡಲು ಅಸಾಧ್ಯವಾದ ಗೋಲೋಕದಲ್ಲಿ ನಿನ್ನನ್ನು ಯಾಚಿಸುವಂತೆ ಮಾಡುವೆ.

**ಧೃತರಾಷ್ಟ್ರ** – ಯಾರು ಸಾವಿರ ಗೋವುಗಳ ಒಡೆಯನು ಪ್ರತಿವರ್ಷ ನೂರು ಗೋದಾನ ಮಾಡುತ್ತಾನೋ, ಅದಕ್ಕಿಂತ ಕಡಿಮೆ, ನೂರು , ಹತ್ತು, ಐದು, ಇದ್ದರೂ ಅದರಲ್ಲಿಯೇ ದಾನಶೀಲನಾಗಿ ಗೋದಾನ ಮಾಡುತ್ತಾನೋ, ಜೀವನದುದ್ದಕ್ಕೂ ಬ್ರಹ್ಮಚರ್ಯ ಪಾಲನೆ ಮಾಡುತ್ತಾನೋ, ವೇದವಾಣಿ ರಕ್ಷಿಸುತ್ತಾನೋ(ನಿತ್ಯ ವೇದ ಪಾರಾಯಣ, ಪಠಣ, ಪಾಠನ ಮಾಡುತ್ತಾನೋ), ತೀರ್ಥಯಾತ್ರಾಪರನಾಗಿದ್ದಾನೋ, ಅಂತಹವನು ಗೋಲೋಕದಲ್ಲಿ ವಿಮಾನದಲ್ಲಿ ಹೋಗಿ ಸುಖವಾಗಿರುತ್ತಾನೆ (ಮುಂದಿನ ನಾಲ್ಕು ಶ್ಲೋಕಗಳಲ್ಲಿ ಪ್ರಭಾಸ ಮೊದಲಾದ ಸುಮಾರು ೩೦ ನದೀ, ತೀರ್ಥಕ್ಷೇತ್ರಗಳಿಗೆ ಹೋಗುವವರು ಎಂದು ವರ್ಣಿಸಲಾಗಿದೆ. ಆದರೆ ಧೃತರಾಷ್ಟ್ರ ಅಲ್ಲಿಗೆ ಹೋಗುವವನಲ್ಲ).

**ಗೌತಮ** – ಎಲ್ಲಿ ಶೀತ, ಉಷ್ಣ ಭಯಗಳಿಲ್ಲ, ಎಲ್ಲಿ ಹಸಿವು, ನೀರಡಿಕೆಗಳಿಲ್ಲ, ದಣಿವಿಲ್ಲ ಶತ್ರುವಿಲ್ಲ, ಬಂಧುವಿಲ್ಲ, ಪ್ರಿಯನೂ ಇಲ್ಲ, ದ್ವೇಷ್ಯನೂ ಇಲ್ಲ, ಜರಾಮರಣಗಳಿಲ್ಲ, ಪುಣ್ಯಪಾಪಗಳಿಲ್ಲ, ಅಂತರ ರಜೋರಹಿತ (ದೋಷರಹಿತ) ಪರಿಶುದ್ಧವಾದ ಪ್ರಜ್ಞೆ, ಸತ್ವಗಳಿಂದ ಹೊಂದಲು ಸಾಧ್ಯವಾದ ಬ್ರಹ್ಮಸದನದಲ್ಲಿ ನಿನ್ನನ್ನು ಯಾತನೆಗೆ ಗುರಿ ಮಾಡುತ್ತೇನೆ.

**ಧೃತರಾಷ್ಟ್ರ** – ಸರ್ವಸಂಗ ನಿರ್ಮುಕ್ತನಾಗಿ, ಇಂದ್ರಿಯಜಯವುಳ್ಳವರಾಗಿ, ಯಾವಾಗಲೂ ವ್ರತಾನುಷ್ಠಾನ ಮಾಡುವ, ಅಧ್ಯಾತ್ಮಯೋಗನಿರತನಾದ, ಸ್ವರ್ಗಗತಿಯನ್ನು ಹೊಂದಿದವರ, ಅಂತಹ ಪುಣ್ಯಕರವಾದ ಬ್ರಹ್ಮಭವನವನ್ನು ಸಾತ್ವಿಕರು ಮಾತ್ರ ಹೊಂದುತ್ತಾರೆ. ಅಂತಹ ಲೋಕಕ್ಕೆ ಧೃತರಾಷ್ಟ್ರ ಹೋಗುವುದಿಲ್ಲ

**ಗೌತಮ** – ಎಲ್ಲಿ ರಥಂತರಸಾಮವೇದವೂ, ಬೃಹತ್ಸಾಮವೂ ಗಾನ ಮಾಡಲ್ಪಡುತ್ತದೋ, ಎಲ್ಲಿ ಯಜ್ಞವೇದಿಕೆಯು ಕಮಲಪುಷ್ಪಗಳಿಂದ ಅಲಂಕೃತವಾಗಿದೆಯೋ, ಎಲ್ಲಿ ಕುದುರೆಗಳಿಂದ ಸೋಮಪಾನ ಮಾಡುವ ಇಂದ್ರನು ಬರುತ್ತಾನೋ, ಅಲ್ಲಿ ಗಜಚೋರನಾದ ನಿನ್ನನ್ನು ಯಾತನೆಗೆ ಗುರಿಪಡಿಸುವೆ.

ಇಷ್ಟೆಲ್ಲ ಪ್ರತಿಮಾತನಾಡಿದ ಗೌತಮನು ನಂತರ –

ನಾನು ನಿನ್ನನ್ನು ವೃತ್ರಸಂಹಾರಿಯಾದ ಇಂದ್ರನೆಂದೂ, ಎಲ್ಲ ಲೋಕಗಳನ್ನು ರಕ್ಷಿಸಲು ಸಂಚರಿಸುತ್ತಿರುವೆ ಎಂದೂ ತಿಳಿದಿದ್ದೇನೆ (ನಿನ್ನ ಉತ್ತರಗಳನ್ನು ಕೇಳಿ) ನಾನು ನಿನಗೆ ಮಾತಿನಿಂದಾಗಲೀ, ಮನಸ್ಸಿನಿಂದಾಗಲೀ ಯಾವ ಅಪರಾಧವನ್ನು ಮಾಡಿಲ್ಲವಷ್ಟೇ![೧]

ಗೌತಮರ ಮಾತಿಗೆ ಶಕ್ರನು ಉತ್ತರಿಸುತ್ತಾನೆ

ನಾನು ಗಜಾಪಹಾರ ದೋಷಕ್ಕೆ (ಲೋಕಾಪವಾದಕ್ಕೆ) ಗುರಿಯಾಗಿದ್ದೇನೆ. ನಿನಗೆ ನನ್ನ ಪ್ರಣಾಮಗಳು. ನನ್ನನ್ನು ಶಾಸನ ಮಾಡು(ಶಿಕ್ಷೆ ಕೊಡು) ಅದರಂತೆ ಮಾಡುವೆ.

---

೧ ಬುಧ್ಯಾಮಿ ತ್ವಾಂ ವೃತ್ರಹಣಂ ಶತಕ್ರತುಂ ವ್ಯತಿಕ್ರಮಂತಂ ಭುವನಾನಿ ವಿಶ್ವಾ।
ಕಚ್ಚಿನ್ನ ವಾಚಾ ವೃಜಿನಂ ಕದಾಚಿತ್ ನ ಚಾಪ್ಯಕಾರ್ಷಂ ಮನಸೋಭಿಷಂಗಾತ್ ॥ – ೧೫೫/೫೫

**ಗೌತಮ** – ನನ್ನ ಈ ಬಿಳಿವರ್ಣದ ಇನ್ನೂ ಹತ್ತುವರ್ಷದ ಶಿಶು ಗಜವನ್ನು ಪುತ್ರನಂತೆ ಪಾಲಿಸಿದ್ದೇನೆ. ಯಾವ ಆನೆಯನ್ನು ನೀನು ಕರೆದುಕೊಂಡು ಹೋಗುತ್ತಿದ್ದೀಯೋ, ಯಾವ ಆನೆಯನ್ನು ವನವಾಸವನ್ನು ಮಾಡುವ ನಿನಗೆ ಮಿತ್ರನಾಗಿದ್ದಾನೋ, ಆ ಆನೆಯನ್ನೇ ನನಗೆ ಕೊಡು.[೧]

**ಶಕ್ರ** – ಎಲೈ ದ್ವಿಜಶ್ರೇಷ್ಠನೇ! ಇದೋ ನಿನ್ನ ಆನೆ. ನಿನ್ನನ್ನು ನೋಡುತ್ತಾ ನಿನ್ನ ಪಾದಗಳನ್ನು ಸೊಂಡಿಲಿನಿಂದ ಮೂಸಿ ನೋಡುತ್ತಿದೆ. ನನಗೆ ಶ್ರೇಯಸ್ಸನ್ನು ಆಶಂಸಿಸು, ಹೇಳು, ಬಯಸು. ನಿನಗೆ ನಮಸ್ಕಾರವಿರಲಿ.[೨]

ಇಂದ್ರದೇವರ ಸೌಜನ್ಯಪೂರ್ಣ ಮಾತುಗಳಿಗೆ

**ಗೌತಮರು** – ಎಲೈ ಸುರೇಂದ್ರನೇ! ನಿನಗೆ ಯಾವಾಗಲೂ ಮಂಗಳವಾಗಲಿ. ನಿನ್ನನ್ನು ಯಾವಾಗಲೂ ಧ್ಯಾನ ಮಾಡುತ್ತೇನೆ, ಪೂಜಿಸುತ್ತೇನೆ. ನನಗೂ ಮಂಗಳವನ್ನು ಕೊಡು (ಶುಭಾಶಂಸನೆ ಮಾಡು). ನೀನು ಹಿಂದಿರುಗಿಸುವ ಗಜವನ್ನು ನಾನು ಸ್ವೀಕರಿಸುತ್ತೇನೆ.[೩]

ಗೌತಮರ ಮಾತುಗಳಿಗೆ ಇಂದ್ರನು

**ಇಂದ್ರ** – ಯಾರಹೃದಯದಲ್ಲಿವೇದಗಳು ಧರಿಸಲ್ಪಟ್ಟಿವೆಯೋ, ಅಂತಹಸತ್ವಶಾಲಿಗಳಾದ, ಮಹಾತ್ಮರಾದ, ಜ್ಞಾನಿಗಳಾದವರಲ್ಲಿ ಒಬ್ಬನಾದ ಮಹಾತ್ಮನಾದ ನಿನ್ನಿಂದ ಮಾತ್ರ ನಾನು ತಿಳಿಯಲ್ಪಟ್ಟಿದ್ದೇನೆ(ಶಕ್ರನೆಂದ). ಆದ್ದರಿಂದ ನಿನ್ನ ಮೇಲೆ ನನಗೆ ತುಂಬಾ ಸಂತೋಷವಾಗಿದೆ.[೪]

ಇಂದ್ರ ಹೀಗೆ ನುಡಿದುದಲ್ಲದೆ ಮತ್ತೆ 'ನನಗೆ ಬಹಳ ಸಂತೋಷವಾಗಿದೆ'. ನೀನು ನಿನ್ನ ಪುತ್ರನಾದ ಆನೆಯೊಡನೆ ಕೂಡಲೇ ಬಾ. ಮತ್ತು ಬಹುಕಾಲದವರೆಗೆ ಶುಭಲೋಕಗಳನ್ನು ಹೊಂದು ಎಂದು ಪರಮಾನುಗ್ರಹ ಮಾಡಿದನು.[೫]

---

೧ ಶ್ವೇತಂ ಕರೇಣುಂ ಮಮಪುತ್ರನಾಗಂ ಯಂ ಮೇಽಹಾರ್ಷೀರ್ದಶವರ್ಷಾಣಿ ಬಾಲಮ್ ।
ಯೋ ಮೇ ವನೇ ವಸತೋಽಭೂದ್ ದ್ವಿತೀಯಃ ತಮೇವ ಮೇ ದೇಹಿ ಸುರೇಂದ್ರ ನಾಗಮ್ ॥
– ೧೫೫/೫೭

೨ ಅಯಂ ಸುತಸ್ತೇ ದ್ವಿಜಮುಖ್ಯನಾಗಶ್ಚಾಘ್ರಾಯತೇ ತ್ವಾಮಭಿವೀಕ್ಷಮಾಣಃ ।
ಪಾದೌ ಚ ತೇ ನಾಸಿಕ ಯೋಪಜಿಘ್ರತೇ ಶ್ರೇಯೋ ಮಮ ಧ್ಯಾಹಿ ನಮಶ್ಚ ತೇಽಸ್ತು ॥ – ೧೫೫/೫೮

೩ ಶಿವಂ ಸದೈವೆಹ ಸುರೇಂದ್ರ ತುಭ್ಯಂ ಧ್ಯಾಯಾಮಿ ಪೂಜಾಂ ಚ ಸದಾ ಪ್ರಯುಂಜೇ ।
ಮಮಾಪಿ ತ್ವಂ ಶಕ್ರ ಶಿವಂ ದದಸ್ವ ತ್ವಯಾ ದತ್ತಂ ಪ್ರತಿಗೃಹ್ಣಾಮಿ ನಾಗಮ್ ॥ – ೧೫೫/೫೯

೪ ಯೇಷಾಂ ವೇದಾ ನಿಹಿತಾ ವೈ ಗುಹಾಯಾಂ ಮನೀಷಿಣಾಂ ಸತ್ತ್ವವತಾಂ ಮಹಾತ್ಮನಾಮ್ ।
ತೇಷಾಂ ತ್ವಯೈಕೇನ ಮಹಾತ್ಮನಾಸ್ಮಿ ಬುದ್ಧಸ್ತಸ್ಮಾತ್ ಪ್ರೀತಿಮಾಂಸ್ತೇಽಹಮದ್ಯ ॥ – ೧೫೫/೬೦

೫ ಹಂತ್ಯೆಹಿ ಬ್ರಾಹ್ಮಣ ಕ್ಷಿಪ್ರಂ ಸಹ ಪುತ್ರೇಣ ಹಸ್ತಿನಾ ।
ಪ್ರಾಪ್ನುಹಿ ತ್ವಂ ಶುಭಾನ್ ಲೋಕಾನ್ ಅಹ್ನಾಯ ಚ ಚಿರಾಯ ಚ ॥ – ೧೫೫/೬೧

ಈ ಉಪಾಖ್ಯಾನವನ್ನು ಧರ್ಮರಾಜನಿಗೆ ಹೇಳಿದ ಭೀಷ್ಮರು ಉಪಸಂಹರಿಸುತ್ತಾರೆ.

ಆಗ ವಜ್ರಧಾರಿಯಾದ ಇಂದ್ರನು ಗಜರೂಪಪುತ್ರನೊಡನೆ ಬಂದ ಗೌತಮನನ್ನು ಮುಂದೆ ಮಾಡಿಕೊಂಡು ಸಜ್ಜನರಿಂದಲೂ ಹೊಂದಲೂ ಅಸಾಧ್ಯವಾದ ಸ್ವರ್ಗಕ್ಕೆ ನಡೆದನು.

## ಸಂದೇಶಗಳು-ವಿವರಣೆಗಳು

೧. ಇಂದ್ರದೇವ ಹಾಗೂ ಗೌತಮನೆಂಬ ಒಬ್ಬ ಬ್ರಾಹ್ಮಣನೊಡನೆ ಆದ ಸಂವಾದವು ಸಾಧಕನಲ್ಲಿರಬೇಕಾದ ಒಂದು ಪ್ರಮುಖಗುಣದ ಮೇಲೆ ಬೆಳಕು ಚೆಲ್ಲುತ್ತದೆ. ಅದೇ ತಾನು ಸಾಕಿದ ಪ್ರಾಣಿಯೊಂದರ ಬಗ್ಗೆ ಇರಬೇಕಾದ ಸಾತ್ವಿಕ ಅಭಿಮಾನ ಹಾಗೂ ಅದರ ರಕ್ಷಣೆ. ಭಾಗವತದಲ್ಲಿ ಭರತರಾಜ ಜಿಂಕೆಯನ್ನು ಅದರ ಮಗುವನ್ನು ರಕ್ಷಿಸಿದ್ದು ಕೇಳುತ್ತೇವೆ. ಇಲ್ಲಿ ಒಂದು ಆನೆಮರಿಯ ರಕ್ಷಣೆ ಅದೂ ಇಂದ್ರನಿಂದ.

೨. ಇಂದ್ರ ಒಬ್ಬ ರಾಜನಾಗಿ ಬಂದು ದೌರ್ಜನ್ಯದಿಂದಲೋ ಎಂಬಂತೆ ಮರಿಯಾನೆಯನ್ನು ಅಪಹರಿಸಲು ಪ್ರಯತ್ನಿಸುತ್ತಾನೆ. ಗೌತಮ ಅವಕಾಶ ನೀಡಲಿಲ್ಲ, ಪ್ರತಿಭಟಿಸುತ್ತಾನೆ. ಗೌತಮನನ್ನು ಸೌಜನ್ಯಕ್ಕಾಗಿಯಾದರೂ ಇಂದ್ರ ವಿನಂತಿಸದೆ ಆನೆಯ ಅಪಹರಣ ಮಾಡಲು ಯತ್ನಿಸಿದ್ದ. ಆದ್ದರಿಂದ ಮುನಿ ಪ್ರತಿಭಟಿಸಿದ.

೩. ಗೌತಮನಿಗೆ ಆನೆಯನ್ನು ಒಯ್ಯುತ್ತಿರುವವರು ಯಾರು ಎಂದು ಗೊತ್ತಿದ್ದಿಲ್ಲ, ಆದರೂ ಅಪಹರಿಸುವವರು ಎಷ್ಟೇ ದೊಡ್ಡವರಾದರೂ, ಅವರಿಗೆ ಅಂತಹ ಅವಕಾಶ ಕೊಡಬಾರದಷ್ಟೇ. ಆದ್ದರಿಂದ ಗೌತಮ ಪ್ರತಿಭಟಿಸಿದ.

೪. ಚೋರರು ಮಾಲೀಕರಿಗೆ ಪ್ರಲೋಭನೆಗೊಳಿಸುವುದು ಕಂಡಿದೆ. ಇಲ್ಲಿ ರಾಜ ಧೃತರಾಷ್ಟ್ರ ರಾಜ (ಇಂದ್ರರೂಪ) ಗೌತಮನಿಗೆ ಸಾವಿರಾರು ಗೋವು, ಧನ, ಕನಕ ಎಲ್ಲ ಕೊಡುವೆನೆಂದರೂ ಬ್ರಾಹ್ಮಣ ಒಪ್ಪಲಿಲ್ಲ, ಅವೆಲ್ಲಾ ನಿನಗಿರಲಿ. ನನಗೆ ನನ್ನ ಮಗನಂತಿರುವ ಆನೆಯೇ ಇರಲಿ ಎಂದ. ಪ್ರಾಣಿ ಎಂದು ಅದನ್ನು ಉದಾಸೀನಮಾಡಬಾರದು (ಪ್ರಾಣಿದಯಾಸಂಘ ಈಗಿನದಲ್ಲ, ಬಹು ಪ್ರಾಚೀನವಾದುದು).

೫. ಬ್ರಾಹ್ಮಣನಿಗೇಕೆ ಆನೆ? ರಾಜನಿಗೆ ಅದು ಅವಶ್ಯವೆಂದು ಹೇಳಿದರೂ, ಬ್ರಾಹ್ಮಣ ಒಪ್ಪಲಿಲ್ಲ, ನೀನು ಚೋರ ನಿನ್ನನ್ನು ಯಮಸದನಕ್ಕೆ ಅಟ್ಟುತ್ತೇನೆ ಎಂದ. ಅದು ಆತನ ತಪಸ್ಸಿನ ಮಹಿಮೆ. ತಪಸ್ಸು ಒಂದು ಇದ್ದರೆ ರಾಜನನ್ನೂ ಯಮಸದನಕ್ಕೆ ಅಟ್ಟುವ ಸಾಮರ್ಥ್ಯ ಬ್ರಾಹ್ಮಣರಿಗೆ ಬರುತ್ತದೆ.

೬. ನಂತರ (ಇಂದ್ರನು) ನಾನು ರಾಜ! ಯಮಸದನಕ್ಕೆ ಹೋಗುವಷ್ಟು ದುಷ್ಟನಲ್ಲವೆಂದಾಗ ಬ್ರಾಹ್ಮಣನು ನಿನ್ನನ್ನು ಕುಬೇರ, ಮೇರುಪರ್ವತದ ಸನಿಹದ ವನ, ನಂದನವನ, ಉತ್ತರಕುರುದೇಶ, ಚಂದ್ರ, ಸೂರ್ಯ, ಇಂದ್ರ, ಬ್ರಹ್ಮಸದನ, ಗೋಲೋಕಗಳಿಗೆ ಹೋದರೂ,

ಅಲ್ಲಿ ನಿನ್ನನ್ನು ಶಿಕ್ಷಿಸುವ, ಯಾಚನೆ ಮಾಡಿಸುವೆ ಎಂದು ಬೆದರಿಸುತ್ತಾನೆ. ಧೃತರಾಷ್ಟ್ರ ತಾನು ಈ ಯಾವ ಲೋಕಗಳಿಗೆ ಹೋಗುವುದಿಲ್ಲವೆಂದು ಜಾರುತ್ತಾನೆ. ಹಾರಿಕೆಯ ಉತ್ತರ ನೀಡುತ್ತಾನೆ. ತಾನು ಯಾರೆಂದು ತಿಳಿಸದೆ ಬ್ರಾಹ್ಮಣನ ಸರ್ವಭೂತದಯಾದೀಕ್ಷೆಯನ್ನು ಇಂದ್ರನು ಪರೀಕ್ಷೆ ಮಾಡಿ ತುಂಬಾ ತೃಪ್ತನಾಗುತ್ತಾನೆ.

೭. ಗೌತಮನು ಕೊನೆಗೆ ಇಷ್ಟು ಪರಿಪರಿಯಾಗಿ ಹೇಳಿದರೂ ಒಪ್ಪಿಕೊಳ್ಳದ ಈ ರಾಜನು ಇಂದ್ರನಿರಬೇಕೆಂದು ತನ್ನ ತಪೋದೃಷ್ಟಿಯಿಂದ ತಿಳಿದುಕೊಂಡು ಇಂದ್ರನನ್ನು ಅಭಿನಂದಿಸಿ ಗಜವನ್ನು ವಾಪಸು ಕೊಡಲು ಬೇಡುತ್ತಾನೆ. ಬ್ರಾಹ್ಮಣನ ದೀಕ್ಷೆ ನೋಡಿ ಇಂದ್ರ ಪೂರ್ಣಾನುಗ್ರಹ ಮಾಡುತ್ತಾನೆ.

೮. ಬ್ರಾಹ್ಮಣನು ಇಂದ್ರನನ್ನು ಇಲ್ಲಿಯವರೆಗೆ ಕೇಳಿದ ಪ್ರಶ್ನೆಗಳಿಂದ ತಪ್ಪಾಗಿದ್ದರೆ ಕ್ಷಮಿಸೆಂದು ಕೇಳುತ್ತಾನೆ. ಬ್ರಾಹ್ಮಣನು ತನ್ನ ಮಿತಿಮೀರಿದೆ ಎಂದು ತಪ್ಪಿನ ಅರಿವಾಗಿದೆ ಎಂದು ವಿನಮ್ರವಾಗಿ ಬೇಡುತ್ತಾನೆ. ತನಗೆ ಮಾಂಗಲ್ಯ ಆಶಂಸನ ಮಾಡೆಂದು ಕೇಳುತ್ತಾನೆ.

೯. ಇಂದ್ರನು ತ್ರಿಲೋಕಾಧಿಪತಿಯಾಗಿ ಬ್ರಾಹ್ಮಣನನ್ನು ಕ್ಷಮೆಕೋರಿ ತಾನು ಚೋರನೆಂಬ ಅಪವಾದ ಬರದಿರಲೆಂದು ಹೇಳುತ್ತಾ, ಅದಕ್ಕಾಗಿ ಏನೇ ಮಾಡೆಂದರೂ ಮಾಡುವೆ ಎಂದು ಬ್ರಾಹ್ಮಣನನ್ನು ಬೇಡುವ ಮಾತುಗಳು ಉಪಾಖ್ಯಾನದ ಗರಿಷ್ಠ ಭಾವನಾತ್ಮಕ ಪ್ರಸಂಗವಾಗಿದೆ (Climax Situation of the Story).

೧೦. ಬ್ರಾಹ್ಮಣ ಹಾಗೂ ಇಂದ್ರ ಇಬ್ಬರ ಭಾವನೆಗಳ ಆಳ, ಬ್ರಾಹ್ಮಣನ ಸತ್ಯನಿಷ್ಠೆ ಇಂದ್ರದೇವರ ಕಾರುಣ್ಯ ಎಲ್ಲವೂ ಅದ್ಭುತ, ಅದ್ಭುತ!

೧೧. ಕೇವಲ ೬೦ ಶ್ಲೋಕಗಳಲ್ಲಿ ಒಂದು ಪುಟ್ಟಖಂಡಕಾವ್ಯದಲ್ಲಿ ಹಲವಾರು ಭಾವನೆಗಳು, ಪಾತ್ರ ವರ್ಣನೆಗಳು, ವ್ಯಾಸರು ಕವಿಗಳಿಗೆಲ್ಲ ಕವಿಗಳೆಂಬುದಕ್ಕೆ ಅನಂತಭಾರತದ ಪ್ರಸಂಗಗಳಲ್ಲಿ ಇದೊಂದು ಆಗಿದೆ. ಹುಲುಮಾನವರಾದ ನಾನು ಇದನ್ನು ಹೇಳಲು ಅನುಭವಿಸಲು ತುಂಬಾ ಸಣ್ಣವನು.

ಇತ್ಯಾದಿ...

# ೨೦೧. ವಿದ್ಯಾ-ತಪಸ್ಸು-ಮತ್ತು ದಾನಗಳು

ಧರ್ಮರಾಜನು ಪಿತಾಮಹ ಭೀಷ್ಮರನ್ನು 'ವಿದ್ಯೆ, ತಪಸ್ಸು ಮತ್ತು ದಾನಗಳ ಮಧ್ಯೆ ಯಾವುದು ಶ್ರೇಷ್ಠ?' ತಿಳಿಸಿರಿ ಎಂದನು. ಭೀಷ್ಮರು ಈ ಬಗ್ಗೆ **ಮೈತ್ರೇಯ ವ್ಯಾಸರ (ವೇದ)** ಸಂವಾದರೂಪವಾದ ಇತಿಹಾಸವನ್ನು ಮೂರು ಅಧ್ಯಾಯಗಳಲ್ಲಿ ನಿರೂಪಿಸುತ್ತಾರೆ. ವ್ಯಾಸರು ಮೈತ್ರೇಯರಿಗೆ ಉಪದೇಶ ಮಾಡುತ್ತಾರೆ.

ಕೃಷ್ಣದ್ವೈಪಾಯನರು ಯಾರಿಗೂ ಗೊತ್ತಾಗದಂತೆ ಸಂಚರಿಸುತ್ತಾ ಒಮ್ಮೆ ವಾರಾಣಸಿಯಲ್ಲಿ ಗಂಗಾತೀರದಲ್ಲಿ ಇದ್ದ ಮೈತ್ರೇಯರ ಬಳಿಗೆ ಬಂದರು. ತನ್ನ ಬಳಿಗೆ ಬಂದು ಕುಳಿತ ವ್ಯಾಸರನ್ನು ತಿಳಿದು(ಗಮನಿಸಿ) ಮೈತ್ರೇಯರು ಸತ್ಕರಿಸಿ (ಪೂಜಿಸಿ) ಭೋಜನ ಮಾಡಿಸಿದರು. ಆ ಉತ್ತಮ ಅನ್ನವನ್ನು ಉಂಡು ಹೊರಡುತ್ತಾ ಉದಾರ ಮನಸ್ಸಿನ ವ್ಯಾಸರು ನಕ್ಕರು. ಇದನ್ನು ಗಮನಿಸಿದ ಮೈತ್ರೇಯರು ತಪಸ್ವಿಗಳೂ ಧೈರ್ಯಶಾಲಿಗಳೂ ಆದ ತಮಗೆ ನಗು ಬರಲು ಕಾರಣವಾದ ಸಂತೋಷ ಎಲ್ಲಿಂದ ಉಂಟಾಯಿತು? ಎಂದು ಕೇಳಿದರು. ಎಲೈ ವಿದ್ವಾಂಸರೇ! ನಿಮ್ಮನ್ನು ಭಕ್ತಿಯಿಂದ ನಮಿಸಿ ಈ ಪ್ರಶ್ನೆ ಕೇಳುತ್ತಿದ್ದೇನೆ.

'ನಾವು ಬೇರೆ ಬೇರೆ ತಪಸ್ಸನ್ನು ಆಚರಿಸಿದರೂ, ನಮ್ಮಿಬ್ಬರ ಮಧ್ಯೆ ಇರುವ ತಪೋಭಾಗದ ಅಂತರವು ಅತ್ಯಲ್ಪ. ಆದರೆ ಜ್ಞಾನದಿಂದ ನೀವು ಅಧಿಕವೆಂದು ತಿಳಿದಿದ್ದೇನೆ.'[೧]

ವಿ.ಸೂ.: ಇಲ್ಲಿನಮ್ಮಿಬ್ಬರಮಧ್ಯೆ ಅಂತರ, ವ್ಯತ್ಯಾಸಅಲ್ಪವೆಂದುಮೈತ್ರೇಯರುಹೇಳಿದಂತಿದೆ. ಶ್ಲೋಕಾಭಿಪ್ರಾಯವನ್ನು ಶ್ರೀಗುರುರಾಜರು ಲಕ್ಷಾಲಂಕಾರದಲ್ಲಿ 'ಅಲ್ಪಾಂತರಮಹಂ ಮನ್ಯೇ ಇತ್ಯತ್ರ ಆವಯೋಃ ಅಹಂ ಅಲ್ಪಾಂತರಂ ಮನ್ಯೇ ಅನ್ವಯಾತ್ ಶಾಸ್ತ್ರಸಮನ್ವಯಾತ್ ತ್ವಾಂ ವಿಶಿಷ್ಟಂ ಚ ಮನ್ಯೇ ಋಷಿಕುಲತ್ವಾತ್ ಕುಲಮುಭಯೋಃ ಸಮಾನಮ್ । ಜ್ಞಾನೇನ ತು ತ್ವಮೇವ ವಿಶಿಷ್ಟ ಇತಿ ಭಾವಃ ॥ ಎಂದಿದ್ದಾರೆ.

ಮೈತ್ರೇಯರು, ವ್ಯಾಸರು ಋಷಿಗಳಾದ್ದರಿಂದ ಸಮಾನರು. ಆದ್ದರಿಂದ ಜ್ಞಾನದಲ್ಲಿ ವ್ಯಾಸರ ಮುಂದೆ ಮೈತ್ರೇಯರ ಜ್ಞಾನ ಅತ್ಯಲ್ಪ.

---

೧ ಕಾರಣಂ ಬ್ರೂಹಿ ಧರ್ಮಾತ್ಮನ್ ಯೋಽಸ್ಮಯಿಷ್ಠಾಃ ಕುತಶ್ಚ ತೇ।
ತಪಸ್ವಿನೋ ಧೃತಿಮತೋ ಪ್ರಮೋದಃ ಸಮುಪಾಗತಃ ॥
ಆತ್ಮನಶ್ಚ ತಪೋಭಾಗ್ಯಂ ಮಹಾಭಾಗ್ಯಂ ತಥೈವ ಚ।
ಪೃಥಗಾಚರತಸ್ತಾತ ಪೃಥಗಾತ್ಮನಿ ಚಾವಯೋಃ ॥
ಅಲ್ಪಾಂತರಮಹಂ ಮನ್ಯೇ ವಿಶಿಷ್ಟಮಪಿ ಚಾನ್ವಯಾತ್ ॥ – ೧೭೧/೬-೮

ವ್ಯಾಸರು ಮೈತ್ರೇಯರಿಗೆ ಹೀಗೆ ಉತ್ತರಿಸಿದರು.

ಅತಿಚ್ಛೇದ ಹಾಗೂ ಅತಿವಾದಗಳಿಂದ ನನಗೆ ನಗು ಬಂತು. ವೇದವಚನವು ಏಕೆ ಅಸತ್ಯವಾಗುತ್ತದೆ. ವೇದ ಏಕೆ ಸುಳ್ಳನ್ನು ಹೇಳೀತು?

**ವಿ.ಸೂ.:** ಅತಿಶಯವಾದ ಕರ್ಮ **ಅತಿವಾದ**. ಆದರ ಫಲವಾದ ಪಾಪನಾಶ **ಅತಿಚ್ಛೇದ**. ಅವುಗಳನ್ನು ಹೀಗೆ ತಿಳಿದ ನನಗೆ ವಿಸ್ಮಯವುಂಟಾಯಿತು.

ವ್ಯಾಸರು – ಮೈತ್ರೇಯರೇ! ಮನುಷ್ಯನು ಮೂರು ವ್ರತಗಳನ್ನು ಆಚರಿಸಬೇಕು. ದ್ರೋಹವನ್ನು ಮಾಡಬಾರದು, ನಿಂದಿಸಬಾರದು (ಪರರನ್ನು), ಸತ್ಯವನ್ನು ನುಡಿಯಬೇಕು – ಇವು ಈಗ ಹಾಗೂ ಮುಂದೆಯೂ ಮಾಡಬೇಕಾದ ಕಾರ್ಯಗಳು. ಬಾಯಾರಿದವನಿಗೆ ಹೊಟ್ಟೆಕಿಚ್ಚಿಲ್ಲದೆ ಪ್ರೀತಿಯಿಂದ ಕೊಟ್ಟ ಅಲ್ಪ ಜಲವೂ ಮಹಾಫಲ ಕೊಡುತ್ತದೆ. ಮೈತ್ರೇಯರೇ! ನೀನೇ ಬಾಯಾರಿದ್ದರೂ, ನನಗೆ ಇಂತಹ ಭೋಜನವನ್ನು ಕೊಟ್ಟು ಮಹಾಯಜ್ಞಗಳಿಂದ ಜಯಿಸುವಂತೆ ಮಹಾಲೋಕಗಳನ್ನು ಜಯಿಸಿರುವೆ. ಆದ್ದರಿಂದ ನಿನ್ನ ಪವಿತ್ರವಾದ ದಾನದಿಂದ ಮತ್ತು ತಪಸಿನಿಂದ ನನಗೆ ಸಂತೋಷವುಂಟಾಗಿದೆ.[೧]

ಇದಕ್ಕೆ ಗುರುತಾಗಿ ನಿನ್ನ ಶರೀರದಿಂದ ಪುಣ್ಯಗಂಧ ಹೊರಬರುತಿದೆ. ನಿನ್ನ ದರ್ಶನವೂ ಪುಣ್ಯಕರ. ಇದು ನೀನು ಮಾಡಿದ ತಪೋರೂಪದಿಂದ ಮತ್ತು ತಪಸ್ಸಿನಿಂದ ನನಗೆ ಸಂತೋಷವುಂಟಾಯಿತು.[೨]

ದಾನವೇ ಸ್ನಾನ, ಅನುಲೇಪಗಳಿಗಿಂತ ಹಾಗೂ ಪವಿತ್ರವಾದ ಎಲ್ಲವುಗಳಿಗಿಂತ [೩]ಶ್ರೇಷ್ಠ

ಹಿಂದಿನವರು ದಾನವನ್ನು ಪುಣ್ಯಸಂಪಾದನೆಯ ಮಾರ್ಗವಾಗಿ ಮಾಡಿದ್ದಾರೆ. ವಿವೇಕಿಗಳು ಇದೇ ಮಾರ್ಗದಲ್ಲಿ ಹೋಗುತ್ತಾರೆ. ಅಂತಹವರು ಪ್ರಾಣವನ್ನೇ ದಾನ ಮಾಡುತ್ತಾರೆ. ಅವರಲ್ಲಿಯೇ ಧರ್ಮ ನೆಲೆಯಾಗಿರುತ್ತದೆ.

ಅಧೀತವಾದ ವೇದದಂತೆ, ಇಂದ್ರಿಯನಿಗ್ರಹದಂತೆ, ಸನ್ನ್ಯಾಸದಂತೆ, ದಾನವು ಲೋಕದಲ್ಲಿ ಶ್ರೇಷ್ಠವಾದುದು. ಇದು ನಮಗೆ ಪ್ರತ್ಯಕ್ಷಸಿದ್ಧ. ಶ್ರೀಮಂತನನ್ನೇ ಅರ್ಥವೂ, ದಾನವೂ, ಯಜ್ಞವೂ ಮತ್ತು ಸುಖವೂ ಸಮೀಪಿಸುತ್ತವೆ.

---

೧ ತೃಷತಸ್ತೃಷಿತಾಯ ತ್ವಂ ದತ್ತ್ವೈ ತದಶನಂ ಮಮ।
ಅಜೈಷೀರ್ಮಹತೋ ಲೋಕಾನ್ ಮಹಾಯಜ್ಞೈರಿವಾಭಿಭೋ॥
ಅತೋ ದಾನ ಪವಿತ್ರೇಣ ಪ್ರೀತೋಽಸ್ಮಿ ತಪಸೈವ॥ – ೧೭೧/೧೨

೨ ಪುಣ್ಯಸ್ಯೈವ ಹಿ ತೇ ಗಂಧಃ ಪುಣ್ಯಸ್ಯೈವ ಚ ದರ್ಶನಮ್।
ಪುಣ್ಯಶ್ಚ ವಾತಿ ಗಂಧಸ್ತೇ ಮನ್ಯೇ ಕರ್ಮವಿಧಾನತಃ॥ – ೧೭೧/೧೩

೩ ಅಧಿಕಂ ಮಾರ್ಜನಾತ್ ತಾತ ತಥೈವಾಪ್ಯನುಲೇಪನಾತ್।
ಶುಭಂ ಸರ್ವಪವಿತ್ರೇಭ್ಯೋ ದಾನಮೇವ ಪರಂ ಭವೇತ್॥ – ೧೭೧/೧೪

**ತನ್ನಃ ಪ್ರತ್ಯಕ್ಷಮೇವೇದಮುಪಲಬ್ಧಮಸಂಶಯಮ್ ।**
**ಶ್ರೀಮಂತಮಾಪ್ನುವಂತ್ಯರ್ಥಾ ದಾನಂ ಯಜ್ಞಸ್ತಥಾ ಸುಖಮ್ ॥ - ೧೭೧/೧೯**

ಮಹಾಪ್ರಾಜ್ಞನಾದ ಮೈತ್ರೇಯನೇ! ಸಾಮಾನ್ಯವಾಗಿ, ಸ್ವಾಭಾವಿಕವಾಗಿ, ಸುಖಾನಂತರ ದುಃಖ, ದುಃಖಾನಂತರ ಸುಖ ಎನ್ನುವುದು ನಿಯತವಾದುದು ಎಂದು ಜಗತ್ತಿನಲ್ಲಿ ಕಂಡು ಬಂದಿದೆ.

ಮನುಷ್ಯನ ಕರ್ಮಗಳು ಮೂರುವಿಧ. ಪುಣ್ಯ, ಪಾಪ ಮತ್ತು ಎರಡೂ ಅಲ್ಲದುದು ಎಂದು ಜ್ಞಾನಿಗಳು ಹೇಳುತ್ತಾರೆ.[೧]

ಬ್ರಹ್ಮಜ್ಞಾನಿಯಾದವನು ಮಾತ್ರ ಇನ್ನೊಬ್ಬನ ನಡತೆಯನ್ನಾಗಲೀ, ಪಾಪವನ್ನಾಗಲೀ, ತನ್ನ ಧರ್ಮದಿಂದ ಉಂಟಾದ ಪುಣ್ಯಪಾಪಗಳನ್ನಾಗಲೀ ಗಮನಿಸುವುದಿಲ್ಲ.[೨]

ಈ ರೀತಿ ಹೇಳಿದ ವ್ಯಾಸರು ಕೊನೆಗೆ ಸಂತೋಷದಿಂದ ಇರು. ಅಭಿವೃದ್ಧಿ ಹೊಂದು, ದಾನ ಮಾಡು, ಯಾಗ ಮಾಡು, ಹೀಗಿರಲು ನಿನ್ನನ್ನು ಯಾವ ವಿದ್ವಾಂಸನಾಗಲೀ, ತಪಸ್ವಿಯಾಗಲೀ, ವೈದ್ಯನಾಗಲೀ, ಪರಾಭವಗೊಳಿಸುವುದಿಲ್ಲ ಎಂದು ಹೇಳಿದರು.

ವ್ಯಾಸರ ಮಾತುಗಳನ್ನು ಕೇಳಿದ ಕರ್ಮಪ್ರಶಂಸೆ ಮಾಡುವ ಮೈತ್ರೇಯರು 'ಮಹಾಪ್ರಾಜ್ಞರೇ! ನೀವು ಹೇಳಿದಂತೆ ಪ್ರಾಜ್ಞನೂ, ಬಹುಶ್ರುತನೂ, ಆದವನು ತುಂಬಾ ಶ್ರೀಮಂತರ ಕುಲದಲ್ಲಿ ಜನಿಸುತ್ತಾನೆ. ನಿಮ್ಮ ಅನುಮತಿ ಪಡೆದು ಒಂದು ಚಿಕ್ಕ ವಿಷಯವನ್ನು ಹೇಳುತ್ತೇನೆ' ಎಂದರು. ವ್ಯಾಸರು 'ನಿನ್ನ ಮಾತುಗಳನ್ನು ಕೇಳುತ್ತೇನೆ' ಹೇಳು ಎಂದರು.

ಮೈತ್ರೇಯರು 'ವಿದ್ಯಾ, ತಪಸ್ಸುಗಳಿಂದ ಪವಿತ್ರರಾದ ನೀವು ದಾನದ ವಿಷಯದಲ್ಲಿ ಹೇಳಿದುದು ನಿರ್ದುಷ್ಟವೂ, ನಿರ್ಮಲವೂ ಆಗಿದೆ. ನನ್ನ ಬುದ್ಧಿಯಿಂದ ಮತ್ತೆ ಸಮೃದ್ಧವಾದ ತಪಸ್ಸು ಮಾಡಿದವನಂತೆ ನಿಮ್ಮನ್ನು ನೋಡುತ್ತೇನೆ. ನಿಮ್ಮ ದರ್ಶನದಿಂದ ನನಗೆ ಅಭ್ಯುದಯ ಉಂಟಾದೀತು.

ತಪಸ್ಸು ವಿದ್ಯೆ ಮತ್ತು ಕುಲ – ಈ ಮೂರು ಬ್ರಾಹ್ಮಣ್ಯಕ್ಕೆ ಕಾರಣವಾದವುಗಳು. ಇವು ಮೂರೂ ಹೊಂದಿದವನು ಬ್ರಾಹ್ಮಣನಾಗುತ್ತಾನೆ.[೩]

---

೧ ತ್ರಿವಿಧಾನೀಹ ವೃತ್ತಾನಿ ನರಸ್ಯಾಹುರ್ಮನೀಷಿಣಃ ।
ಪುಣ್ಯಮನ್ಯತ್ ಪಾಪಮನ್ಯನ್ನ ಪುಣ್ಯಂ ನ ಚ ಪಾಪಕಮ್ ॥ - ೧೭೧/೨೧

೨ ನ ವೃತ್ತಂ ಮನ್ಯತೇಽನ್ಯಸ್ಯ ಮನ್ಯತೇಽನ್ಯಸ್ಯ ಪಾಪಕಮ್ ।
ಯಥಾ ಸ್ವಧರ್ಮನಿರ್ವೃತ್ತಂ ನ ಪುಣ್ಯಂ ನ ಚ ಪಾಪಕಮ್ ॥ - ೧೭೧/೨೨

೩ ತಪಃ ಶ್ರುತಂ ಚ ಯೋನಿಶ್ಚಾಪ್ಯೇತತ್ ಬ್ರಾಹ್ಮಣ್ಯಕಾರಣಮ್ ।
ತ್ರಿಭಿರ್ಗುಣೈಃ ಸಮುದಿತಸ್ತತೋ ಭವತಿ ವೈ ದ್ವಿಜಃ ॥ - ೧೭೨/೭

ಬ್ರಾಹ್ಮಣನು ತೃಪ್ತನಾದರೆ ಪಿತೃಗಳು, ದೇವತೆಗಳು ತೃಪ್ತರಾಗುತ್ತಾರೆ. ವಿದ್ಯಾವಂತರಲ್ಲಿ ಬ್ರಾಹ್ಮಣರೇ ಶ್ರೇಷ್ಠ ಉಳಿದವರಲ್ಲ.

ವಿದ್ಯೆ ಹಾಗೂ ಆಚಾರಗಳಿಂದ ಸಂಪನ್ನನಾದ ದಾನಸ್ವೀಕಾರ ಮಾಡುವ ಬ್ರಾಹ್ಮಣನೇ ಇಲ್ಲದಿದ್ದರೆ ಧನಿಕರ ಧನವು ವ್ಯರ್ಥವಾದೀತು.[೧]

ಜ್ಞಾನಶೂನ್ಯನಾದವನು ತಾನು ತಿನ್ನುವ ಅನ್ನವನ್ನು ಕೊಲ್ಲುತ್ತಾನೆ. ಆ ಅನ್ನವೂ ಅವನನ್ನು ಕೊಲ್ಲುತ್ತದೆ. ಆ ಅನ್ನವು ಆ ಅವಿವೇಕಿಯು ಯಾವ ಅನ್ನವನ್ನು ತಿನ್ನುತ್ತಾನೋ ಅವನನ್ನೂ ಕೊಲ್ಲುತ್ತದೆ.[೨]

ಸತ್ಪಾತ್ರನಿಗೆ ಅನ್ನವನ್ನು ಕೊಡುವವನಿಗೆ ಯಾವ ಪುಣ್ಯ ಬರುತ್ತದೋ, ಅನ್ನವನ್ನು ಸ್ವೀಕಾರ ಮಾಡುವವನಿಗೂ ಅದೇ ಪುಣ್ಯ ಬರುತ್ತದೆ. ಗಾಡಿಯು ಒಂದೇ ಚಕ್ರದಿಂದ ಚಲಿಸುತ್ತಿಲ್ಲವಷ್ಟೇ. ಎಂದು ಋಷಿಗಳು ತಿಳಿಯುತ್ತಾರೆ.[೩]

ವಿದ್ಯೆ ಮತ್ತು ಆಚಾರಸಮಂಪನ್ನನಾದ ಬ್ರಾಹ್ಮಣರು ಎಲ್ಲಿರುತ್ತಾರೋ, ಅಲ್ಲಿ ಅವರಿಗೆ ಮಾಡಿದ ದಾನಫಲವಾದ ಶುಭವನ್ನು ದಾತೃವು ಈ ಲೋಕದಲ್ಲೂ ಪರಲೋಕದಲ್ಲೂ ಅನುಭವಿಸುತ್ತಾನೆ.[೪]

ಯಾರು ಶುದ್ಧವಾದ ಕುಲದಲ್ಲಿ ಜನಿಸಿದ್ದಾರೆಯೋ, ಸತತವಾಗಿ ತೀವ್ರವಾದ ತಪಸ್ಸಿನಲ್ಲಿ ನಿರತರಾಗಿರುತ್ತಾರೋ, ದಾನಾಧ್ಯಯನಾದಿಗಳಲ್ಲಿ ನಿರತರಾಗಿರುತ್ತಾರೋ ಅವರು ಯಾವಾಗಲೂ ಅತ್ಯಂತ ಪೂಜ್ಯರಾಗಿರುತ್ತಾರೆ. ಅವರೇ ಸ್ವರ್ಗಕ್ಕೆ ಕರೆದುಕೊಂಡು ಹೋಗುವರು. ಯಜ್ಞಗಳನ್ನು ನಿರ್ವಹಿಸುವವರು ಮತ್ತು ವೇದಪ್ರತಿಪಾದ್ಯರಾದವರು.[೫]

ಹೀಗೆ ಹೇಳಲ್ಪಟ್ಟ ವ್ಯಾಸರು ಮೈತ್ರೇಯರನ್ನು ಕುರಿತು ಮಾತನಾಡಿದರು.

ನೀನು ಭಗವಂತನ ಅನುಗ್ರಹದಿಂದ ಇಂತಹ ಜ್ಞಾನವನ್ನು ಹೊಂದಿರುವ ನಿನ್ನ ಬುದ್ಧಿಯೂ ದೇವರ ದಯೆಯಿಂದ ಕೂಡಿದೆ. ಜನರು ಪೂಜ್ಯರಾದವರ ಗುಣಗಳನ್ನು ತಮ್ಮ

---

೧ ಬ್ರಾಹ್ಮಣಶ್ಚೇನ್ನವಿದ್ಯೇತ ಶ್ರುತವೃತ್ತೋಪಸಂಹಿತಃ।
ಪ್ರತಿಗ್ರಹೀತಾ ದಾನಸ್ಯ ಮೋಘಂ ಸ್ಯಾದ್ ಧನಿನಾಂ ದನಮ್ ॥ - ೧೭೨/೧೦

೨ ಆದನ್ ಹ್ಯವಿದ್ವಾನ್ ಹಂತ್ಯನ್ನಮದ್ಯಮಾನಂ ಚ ಹಂತಿ ತಮ್ ।
ತಂ ಚ ಹನ್ಯತಿ ಯಸ್ಯಾನ್ನಂ ಸ ಹತ್ವಾ ಹನ್ಯತೇಽಽಶುಭಃ ॥ - ೧೭೨/೧೧

೩. ಯದೇವ ದದತಃ ಪುಣ್ಯಂ ತದೇವ ಪ್ರತಿಗೃಹ್ಣತಃ।
ನ ಹ್ಯೇಕಚಕ್ರಂ ವರ್ತೇತ ಇತ್ಯೇವಮೃಷಯೋ ವಿದುಃ ॥ - ೧೭೨/೧೩

೪ ಯತ್ರ ವೈ ಬ್ರಾಹ್ಮಣೋ ಸಂತಿ ಶ್ರುತವೃತ್ತೋಪ ಸಂಹಿತಾಃ।
ತತ್ರ ದಾನಫಲಂ ಪುಣ್ಯಮಿಹ ಚಾಮುತ್ರ ಚಾಶ್ನುತೇ ॥ - ೧೭೨/೧೪

೫ ಯೇ ಯೋನಿಶುದ್ಧಾಃ ಸತತಂ ತಪಸ್ಯಭಿರತಾ ಭೃಶಮ್ ।
ದಾನಾಧ್ಯನಸಂಪನ್ನಾಸ್ತೇ ವೈ ಪೂಜ್ಯತಮಾಃ ಸದಾ ॥ - ೧೭೨/೧೫

ಗುಣಗಳಿಗಿಂತಲೂ ಹೆಚ್ಚಾಗಿ ಶ್ಲಾಘಿಸುತ್ತಾರೆ. ನಿನ್ನನು ರೂಪಮದ, ವಯೋಮದ (ವಯಸ್ಸಿನ ಮದ), ಸಂಪತ್ತಿನಮದ (ದುರಭಿಮಾನಗಳು) ನಿನ್ನನ್ನು ಯಾವರೀತಿಯಿಂದಲೂ ದುಷ್ಪ್ರಭಾವ ಬೀರಿಲ್ಲ. ಇದೆಲ್ಲವೂ ದೇವತಾನುಗ್ರಹವೇ ಸರಿ. ನಾನು ನಿನಗೆ ದಾನಕ್ಕಿಂತಲೂ ಉತ್ತಮವಾದ ಧರ್ಮವನ್ನು ಹೇಳುವೆನು ಕೇಳು.

ಜಗತ್ತಿನಲ್ಲಿ ಎಷ್ಟು ಶಾಸ್ತ್ರಗಳಿವೆಯೋ, ಎಷ್ಟೆಲ್ಲ ಪ್ರವೃತ್ತಿಗಳಿವೆಯೋ, ಅವೆಲ್ಲವೂ ವೇದವನ್ನು ಆಧರಿಸಿಕೊಂಡಿವೆ.[೧] ನಾನು ದಾನವನ್ನೇ ಪ್ರಶಂಸಿಸುತ್ತೇನೆ. ನೀನು ತಪಸ್ಸನ್ನು ಹಾಗೂ ಯಜ್ಞ (ಶಾಸ್ತ್ರಜ್ಞಾನ)ಗಳನ್ನು ಪ್ರಶಸ್ತಗಳೆಂದು ಹೇಳುತ್ತೀಯಾ. ತಪಸ್ಸು ಅಧ್ಯಯನ ಮಾಡಿದ ವೇದಕ್ಕೆ ಪಾವಿತ್ರ್ಯವನ್ನು ತಂದು ಕೊಡುತ್ತದೆ. ತಪಸ್ಸು ಸ್ವರ್ಗಕ್ಕೆ ಸಾಧನವಾಗಿದೆ. ತಪಸ್ಸು ಮತ್ತು ವಿದ್ಯೆಯಿಂದ ಮನುಷ್ಯನು ಮಹತ್ತ್ವವನ್ನು ಪಡೆಯುತ್ತಾನೆ ಎಂದು ನಾವು ಕೇಳುತ್ತೇವೆ. ಬೇರೆ ಯಾವುದೇ ಪಾಪವೂ ಕೂಡಾ ತಪಸ್ಸಿನಿಂದ ಪರಿಹಾರವಾಗುತ್ತದೆ. ಮನುಷ್ಯನು ಏನೆಲ್ಲಾ ಉದ್ದೇಶಿಸಿ ತಪಸ್ಸನ್ನೂ ಮಾಡುತ್ತಾನೋ, ಅವೆಲ್ಲವನ್ನೂ ವಿದ್ಯೆಯಿಂದಲೂ ಪಡೆಯುತ್ತಾನೆ ಎಂದು ಕೇಳುತ್ತೇವೆ.[೨] ಸಂಬಂಧವನ್ನು ಪಡೆಯಲು ಸಾಧ್ಯವಿಲ್ಲದ, ಆಕ್ರಮಣ ಮಾಡಲು ಅಸಾಧ್ಯವಾದ, ಪಡೆಯಲು ಅಸಾಧ್ಯವಾದುದನ್ನು ಎದುರಿಸಲು ಅಸಾಧ್ಯವಾದ ಶತ್ರುವನ್ನು ಎಲ್ಲವನ್ನು ಕೂಡಾ ತಪಸ್ಸಿನಿಂದ ಪಡೆಯಬಹುದು.[೩]

ಮದ್ಯಪಾನ ಮಾಡಿದವನು, ಸುವರ್ಣದ ಚೋರನು, ಭ್ರೂಣಹತ್ಯೆ ಮಾಡಿದವನು, ಗುರುಪತ್ನಿಗಮನ ಮಾಡಿದವನು - ಹೀಗೆಲ್ಲ ತರಹದ ಪಾಪಗಳನ್ನು ತಪಸ್ಸಿನಿಂದ ಕಳೆದುಕೊಳ್ಳಬಹುದು.[೪] ಸರ್ವವಿದ್ಯಾಸಂಪನ್ನನು ಹೇಗಿದ್ದರೂ, ಕಣ್ಣುಳ್ಳವನು ಎನ್ನುವರು. ತಪಸ್ವಿಯಾದವನು ಸರ್ವವಿದ್ಯಾಸಂಪನ್ನನು ಇಬ್ಬರನ್ನೂ ತಪಸ್ವಿಗಳೆಂದೇ ಕರೆಯುತ್ತಾರೆ. ಅವರಿಗೆ ನಮಸ್ಕಾರವಿರಲಿ[೫] (ಮಾಡಬೇಕು).

---

೧ ಯಾನೀಹಾಗಮಶಾಸ್ತ್ರಾಣಿ ಯಾಶ್ಚ ಕಾಶ್ಚಿತ್ಪ್ರವೃತ್ತಯಃ।
ತಾನಿ ವೇದಂ ಪುರಸ್ಕೃತ್ಯ ಪ್ರವೃತ್ತಾನಿ ಯಥಾಕ್ರಮಮ್ ॥ - ೧೭೩/೩

೨ ಯದ್ಯದ್ ಹಿ ಕಿಂಚಿತ್ ಸಂಧಾಯ ಪುರುಷಸ್ತಪ್ಯತೇ ತಪಃ।
ಸರ್ವಮೇತದವಾಪ್ನೋತಿ ವಿದ್ಯಯಾ ಚೇತಿ ನಃ ಶ್ರುತಮ್ ॥ - ೧೭೩/೬

೩ ದುರನ್ವಯಂ ದುಷ್ಪ್ರಧೃಷ್ಯಂ ದುರಾಪಂ ದುರತಿಕ್ರಮಮ್।
ಸರ್ವಂ ವೈ ತಪಸಾಽಭ್ಯೇತಿ ತಪೋ ಹಿ ಬಲವತ್ತರಮ್ ॥ - ೧೭೩/೭

೪ ಸುರಾಪಃ ಸ್ವರ್ಣಹಾರೀ ಚ ಭ್ರೂಣಹಾ ಗುರುತಲ್ಪಗಃ।
ತಪಸಾ ತರತೇ ಸರ್ವಮೇನಸಶ್ಚ ಪ್ರಮುಚ್ಯತೇ ॥ - ೧೭೩/೮

೫ ಸರ್ವವಿದ್ಯಸ್ತು ಚಕ್ಷುಷ್ಮಾನಪಿ ಯಾದೃಶತಾದೃಶಃ।
ತಪಸ್ವಿನೌ ಚ ತಾವಾಹುಸ್ತಾಭ್ಯಾಂ ಕಾರ್ಯಂ ಸದಾ ನಮಃ ॥ - ೧೭೩/೯

ವಿದ್ಯೆಯನ್ನೇ ಧನವಾಗಿ ಉಳ್ಳವರು, ತಪಸ್ವಿಗಳು ಪೂಜ್ಯರೇ ಸರಿ. ಅವರಿಗೆ ದಾನಪ್ರದಾನ ಮಾಡುವವರು ಈ ಲೋಕದಲ್ಲಿ ಸಂಪತ್ತನ್ನು ಹೊಂದಿ ಪರಲೋಕದಲ್ಲಿ ಸುಖವನ್ನೂ ಹೊಂದುತ್ತಾರೆ.[೧]

ಪುಣ್ಯವಂತರು ಅನ್ನದಾನಗಳಿಂದ ಇಲ್ಲಿ ಸಂಪತ್ತನ್ನು ಮತ್ತು ಮರಣಾನಂತರ ಬ್ರಹ್ಮಲೋಕವನ್ನು ಹಾಗೂ ಉತ್ತಮವಾದ ಲೋಕವನ್ನೂ ಹೊಂದುತ್ತಾನೆ. ಪೂಜಿಸಲ್ಪಟ್ಟವರು ತಮ್ಮನ್ನು ಪೂಜೆ ಮಾಡಿದವರನ್ನು ಪೂಜಿಸುತ್ತಾರೆ. ಗೌರವಿಸಲ್ಪಟ್ಟವರು, ಗೌರವಿಸಿದವನಿಗೆ ಗೌರವವನ್ನು ಕೊಡುತ್ತಾರೆ. ದಾನ ಮಾಡದವನು ಎಲ್ಲೇ ಹೋದರೂ, ಅವನು ದೂರ ಕಳಿಸಲ್ಪಡುತ್ತಾನೆ[೨] (ದಾನಿಯು ಎಲ್ಲೇ ಹೋಗಲಿ. ಅವನನ್ನು ಸ್ತೋತ್ರ ಮಾಡುತ್ತಾರೆ, ಪಾಠಾಂತರಾನುವಾದ).

ಮೈತ್ರೇಯನೇ! ನೀನು ಸತ್ಕುಲದಲ್ಲಿ ಜನಿಸಿದವನು, ವಿದ್ಯಾವಂತನು, ದಯಾಪರನು, ಮೃದುಸ್ವಭಾವದವನೂ, ಮೇಧಾವಿಯೂ ಆಗಿದ್ದೀಯಾ.[೩] ನೀನು ಯಾವ ಯಾವ ಅನ್ನಪಾನಗಳನ್ನು ದಾನ ಮಾಡುತ್ತೀಯೋ, ಅಂತಹ ಅನ್ನಪಾನಗಳನ್ನು ಹೊಂದುವೆ.[೪] ನೀನು ಕುಮಾರನಾದಂದಿನಿಂದಲೂ ಪತ್ನಿವ್ರತಧಾರಿಯಾಗಿರುವೆ (ಮೊದಲಿನಿಂದಲೂ ನಿನ್ನ ಪತ್ನಿಯಲ್ಲಿ ಮಾತ್ರ ನಿರತನಾಗಿರುವೆ). ಇದು ಗೃಹಸ್ಥರಿಗೆ ಅತಿಪ್ರಶಸ್ತವ್ರತ. ಯಾವ ಕುಲದಲ್ಲಿ ಪತಿಯು ಪತ್ನಿಯಿಂದಲೂ, ಪತ್ನಿಯು ಪತಿಯಿಂದಲೂ ಸಂತುಷ್ಟರಾಗಿರುತ್ತಾರೋ, ಅಲ್ಲಿ ಎಲ್ಲರ ಕಲ್ಯಾಣಗಳು ಮಂಗಳಗಳು ಆಗುತ್ತವೆ.[೫] ನೀರಿನಿಂದ ದೇಹದ ಕಶ್ಮಲ ಹೋಗುವಂತೆ, ಅಗ್ನಿತೇಜಸ್ಸಿನಿಂದ ಅಂಧಕಾರ ನಾಶವಾಗುವಂತೆ, ದಾನ, ತಪಸ್ಸುಗಳಿಂದ ಎಲ್ಲ ಪಾಪಗಳು ನಾಶವಾಗುತ್ತವೆ.[೬]

---

೧ ಸರ್ವೇ ಪೂಜ್ಯಾಃ ಶ್ರುತಧನಾಸ್ತಥೈವ ಚ ತಪಸ್ವಿನಃ।
ದಾನಪ್ರದಾಃ ಸುಖಂ ಪ್ರೇತ್ಯ ಪ್ರಾಪ್ನುವಂತೀಹ ಚ ಶ್ರಿಯಮ್ ॥ - ೧೭೩/೧೦

೨ ಇಮಂ ಚ ಬ್ರಹ್ಮಲೋಕಂ ಚ ಲೋಕಂ ಚ ಬಲವತ್ತರಮ್ ।
ಅನ್ನದಾನ್ಯೈಃ ಸುಕೃತಿನಃ ಪ್ರಾಪ್ನುವಂತೀಹ ಲೌಕಿಕಮ್ ॥ - ೧೭೩/೧೧

೩. ಪ್ರಾಪ್ಸ್ಯಸೇ ತ್ವನ್ನಪಾನಾನಿ ಯಾನಿ ದಾಸ್ಯಸಿ ಕಾನಿಚಿತ್ ।
ಮೇಧಾವ್ಯಸಿ ಕುಲೇ ಜಾತಃ ಶ್ರುತವಾನನೃಶಂಸವಾನ್ ॥ -೧೭೩/೧೪

೪ ಕೌಮಾರದಾರವ್ರತವಾನ್ ಮೈತ್ರೇಯ ನಿರತೋ ಭವ।
ಏತದ್ ಗೃಹಾಣ ಪ್ರಥಮಂ ಪ್ರಶಸ್ತಂ ಗೃಹಮೇಧಿನಾಮ್ ॥ - ೧೭೩/೧೫

೫ ಯೋ ಭರ್ತಾ ವಾಸಿತಾತುಷ್ಟೋ ಭರ್ತುಸ್ತುಷ್ಟಾ ಚ ವಾಸಿತಾ।
ಯಸ್ಮಿನ್ನೇವಂ ಕುಲೇ ಸರ್ವಂ ಕಲ್ಯಾಣಂ ತತ್ರ ವರ್ತತೇ ॥ - ೧೭೩/೧೬

೬ ಅದ್ಭಿರ್ಗಾತ್ರಾನ್ಮಲಮಿವ ತಮೋಽಗ್ನಿಪ್ರಭಯಾ ಯಥಾ।
ದಾನೇನ ತಪಸಾ ಚೈವ ಸರ್ವಪಾಪಮಪೋಹ್ಯತೇ ॥ - ೧೭೩/೧೭

ಎಲೈ ಮೈತ್ರೇಯನೇ! ನಿನಗೆ ಕ್ಷೇಮವಾಗಲಿ. ನಾನು ಮನೆಗೆ ಹೊಗುತ್ತೇನೆ. ನಾನು ಹೇಳಿದುದನ್ನು ಮನಸ್ಸಿನಲ್ಲಿಟ್ಟುಕೊಂಡು, ಆದರಂತೆ ನಡೆ. ಅದರಿಂದ ಶ್ರೇಯಸ್ಸು ಉಂಟಾಗುವುದು.[೧]

ನಂತರ ಮೈತ್ರೇಯರು ವ್ಯಾಸರಿಗೆ ಪ್ರದಕ್ಷಿಣೆ ಮಾಡಿ, ನಮಸ್ಕರಿಸಿ, ಪೂಜ್ಯರಿಗೆ ನಿಮಗೆ ಕ್ಷೇಮವಾಗಲಿ ಎಂದು ಕೈಮುಗಿದು ಹೇಳಿದರು.

## ಸಂದೇಶಗಳು - ವಿವರಣೆಗಳು

ಶ್ರೀವೇದವ್ಯಾಸರ ಕಾರಣ್ಯಪೂರ್ಣವಾದ ಅನುಗ್ರಹಪೂರ್ವಕ ಮಾತುಗಳೇ ಸಂದೇಶಗಳು. ಆದನ್ನು ಮಹಾ ಅನುಗ್ರಹವೆಂದು ಬಗೆದ ಮೈತ್ರೇಯರು ಧನ್ಯರು. ಅತಿಥಿಪೂಜೆಯೇ ಇಲ್ಲಿಯ ಸಂದೇಶ. ಮೈತ್ರೆಯರಿಗೆ ಭಗವಂತನೇ ಆತಿಥಿಯಾಗಿ ಸಿಕ್ಕ. ಎಲ್ಲರಿಗೂ ಹಾಗೆ ಆಗದು. ಆದರೆ ಯಾರು ಆತಿಥಿಯಾಗಿ ಬಂದರೂ, ಅವರನ್ನು ಯಥಾಶಕ್ತಿ ಸಂತೋಷಪಡಿಸುವುದೇ ಮನುಷ್ಯಯಜ್ಞ ಎಂದು ಕರೆಯಲ್ಪಡುತ್ತದೆ. ಕಾರಣ ಮನುಷ್ಯಯಜ್ಞದ ಭಾಗ್ಯ ಸಿಗಲು ನಾವು ಪ್ರಯತ್ನಿಸಬೇಕು.

*****

---

೧ ಸ್ವಸ್ತಿ ಪ್ರಾಪ್ನುಹಿ ಮೈತ್ರೇಯ ಗೃಹಾನ್ ಸಾಧು ವ್ರಜಾಮ್ಯಹಮ್ ।
ಏತನ್ಮನಸಿ ಕರ್ತವ್ಯಂ ಶ್ರೇಯ ಏವಂ ಭವಿಷ್ಯತಿ ॥ - ೧೭೩/೧೮

# ೨೦೨. ಪತಿವ್ರತಾಧರ್ಮ

ಧರ್ಮರಾಜನು ಭೀಷ್ಮರನ್ನು ಸತ್‌ಸ್ತ್ರೀಯರ ಸದಾಚಾರವನ್ನು ಕುರಿತು ಹೇಳಲು ಪ್ರಾರ್ಥಿಸಿದಾಗ, ಭೀಷ್ಮರು **ಸುಮನಾ** ಹಾಗೂ **ಶಾಂಡಿಲಿಯರ** ಸಂವಾದರೂಪದ ಇತಿಹಾಸವನ್ನು ಉದಾರಣೆಗೆ ಹೇಳಿದರು.

ದೇವಲೋಕದಲ್ಲಿ ಸರ್ವಧರ್ಮ ತಿಳಿದವಳೂ, ಧೃತಚಿತ್ತಳಾದ, ಸರ್ವಜ್ಞಳಾದ ಶಾಂಡಿಲೀಯನ್ನು ಕೇಕಯರಾಜ್ಯದ ಕೈಕೇಯಿಯು ಪ್ರಶ್ನೆ ಮಾಡುತ್ತಾನೆ. 'ಎಲೈ ಕಲ್ಯಾಣಿಯೇ! ನೀನು ಯಾವ ನಡತೆಯಿಂದ ಅಥವಾ ಸದಾಚಾರದಿಂದ ಎಲ್ಲ ಪಾಪಗಳನ್ನು ಕಳೆದುಕೊಂಡು ದೇವಲೋಕಕ್ಕೆ ಬಂದೆ (ಬಂದಿದ್ದೀಯಾ)? ನೀನು ನಿನ್ನ ತೇಜಸ್ಸಿನಿಂದ, ಅಗ್ನಿಶಿಖೆಯಂತೆ, ಚಂದ್ರನ ಕಾಂತಿಯಂತೆ ಬೆಳಗುವಳಾಗಿ ಸ್ವರ್ಗಕ್ಕೆ ಬಂದಿದ್ದೀಯಾ. ನೀನು ಶುಭ್ರವಸ್ತ್ರಧರಿಸಿ, ಯಾವುದೇ ಶ್ರಮವಿಲ್ಲದೆ ವಿಮಾನದಲ್ಲಿ ಕುಳಿತು ಸಹಸ್ರಪಟ್ಟು ಕಾಂತಿಯಿಂದ ತೋರುತ್ತೀಯಾ. ನೀನು ಅಲ್ಪತಪಸ್ಸಿನಿಂದ, ದಾನದಿಂದ, ನಿಯಮದಿಂದ ಈ ಲೋಕಕ್ಕೆ ಬಂದಿಲ್ಲ, ಆದ್ದರಿಂದ ನೀನು ಇಲ್ಲಿಗೆ ಬಂದುದು ಹೇಗೆಂದು ತಿಳಿಸು.

ಹೀಗೆ ಸುಮನಳಿಂದ ಕೇಳಲ್ಪಟ್ಟ ಶಾಂಡಿಲಿಯು ಸುಮನಳನ್ನು ಕುರಿತು ಉತ್ತರಿಸಿದಳು.

೧. ನಾನು ಕಾವಿಬಟ್ಟೆ ಧರಿಸಿದವಳಾಗಿ ಅಥವಾ ನಾರುಮಡಿಯುಟ್ಟು ಅಥವಾ ಸನ್ಯಾಸ ಸ್ವೀಕರಿಸಿ, ಅಥವಾ ಜಟೆಗಳಿಂದ ಕೂಡಿದವಳಾಗಿ ದೇವಲೋಕಕ್ಕೆ ಬಂದಿಲ್ಲ.

೨. ನಾನು ಎಂದೂ ಪತಿಗೆ ಅಜಾಗರೂಕಳಾಗಿ ಎಂದೂ ಅಹಿತವಲ್ಲದ ಮಾತುಗಳನ್ನಾಗಲೀ, ಒರಟಾದ ಮಾತುಗಳನ್ನಾಗಲೀ, ಆಡಿಲ್ಲ.[೧]

೩.. ದೇವತೆಗಳ, ಪಿತೃಗಳ, ಬ್ರಾಹ್ಮಣರ ಪೂಜೆಯಲ್ಲಿ, ಸೇವೆಯಲ್ಲಿ, ಸೊಕ್ಕಿನಿಂದ ನಡೆಯದೆ, ಸದಾ ಶ್ರದ್ದೆಯಿಂದ ತೊಡಗಿಸಿಕೊಂಡು ಅತ್ತೆ ಮಾವಂದಿರ ವಶವರ್ತಿನಿಯಾಗಿದ್ದೆ. [೨]

೪. ನಾನೆಂದೂ ಚಾಡಿ ಹೇಳುವುದಿಲ್ಲ, ಇದು ನನಗೆ ಇಷ್ಟವೂ ಇಲ್ಲ. ಮನೆಯ ಮುಂದೆ ನಿಲ್ಲುವುದಿಲ್ಲ. ಯಾರೊಡನೆಯೂ ಬಹಳ ಹೊತ್ತು ಮಾತನಾಡುವುದಿಲ್ಲ.

೫. ಕೆಟ್ಟ ವಿಷಯದಲ್ಲಿ ನಗೆಯಾಡಿಲ್ಲ, ಹಿತವಲ್ಲದ ಕಾರ್ಯವನ್ನು ಮಾಡಿಲ್ಲ, ರಹಸ್ಯವೆಂಬುದಾಗಲೀ, ರಹಸ್ಯವಿಲ್ಲದುದಾಗಲೀ, ನನಗೇನೂ ಇಲ್ಲ. ನಾನು ಸರಳ ಜೀವನ, ನೇರನುಡೆನುಡಿಯವಳು.

---

೧ ಅಹಿತಾನಿ ಚ ವಾಕ್ಯಾನಿ ಸರ್ವಾಣಿ ಪರುಷಾಣಿ ಚ।
ಅಪ್ರಮತ್ತಾ ಚ ಭರ್ತಾರಂ ಕದಾಚಿನ್ನಾಹಮಬ್ರುವಮ್ ॥ – ೧೭೪/೯

೨ ದೇವತಾನಾಂ ಪಿತೄಣಾಂ ಚ ಬ್ರಾಹ್ಮಣಾನಾಂ ಚ ಪೂಜನೇ।
ಅಪ್ರಮತ್ತಾ ಸದಾಯುಕ್ತಾ ಶ್ವಶ್ರೂಶ್ವಶುರವರ್ತಿನೀ ॥ – ೧೭೪/೧೦

೬. ಯಾವುದಾದರೂ ಕಾರ್ಯನಿಮಿತ್ತ ಹೊರಗೆ ಹೋಗಿ ಮನೆಗೆ ಬರುವ ಪತಿಯನ್ನು ಆಸನ ಕೊಟ್ಟು ಸತ್ಕರಿಸಿ, ಸಮಾಧಾನದಿಂದ ಪೂಜಿಸುತ್ತೇನೆ.

೭. ಪತಿ ಯಾವ ಭೋಜ್ಯ, ಭಕ್ಷ್ಯ, ಲೇಹ್ಯವನ್ನು ಇಷ್ಟಪಡುವುದಿಲ್ಲವೋ ನಾನು ಅದನ್ನು ಬಿಡುತ್ತೇನೆ.[೧]

೮. ಕುಟುಂಬದ ಯಾವುದೇ ಕಾರ್ಯವಿದ್ದರೂ ಅದನ್ನು ಬೆಳಿಗ್ಗೆ ಬೇಗ ಎದ್ದು ಮಾಡುತ್ತೇನೆ ಮತ್ತು ಮಾಡಿಸುತ್ತೇನೆ.

೯. ನನ್ನ ಪತಿಯು ಯಾವುದಾದರೂ ಕಾರ್ಯದ ಸಲುವಾಗಿ ಪ್ರವಾಸಕ್ಕೆ ಹೋದರೆ ನಾನು ಮಂಗಳಕ್ಕೆ ಕಾರಣಗಳಾದ ನಿಯಮಗಳನ್ನು ಪಾಲಿಸುತ್ತೇನೆ.[೨]

೧೦. ಪತಿಯು ಊರಲ್ಲಿಲ್ಲದಿದ್ದರೆ ನಾನು ಅಭ್ಯಂಜನವನ್ನಾಗಲೀ, ಅಲಂಕಾರವನ್ನಾಗಲೀ, ವಿಶೇಷ ಸ್ನಾನವನ್ನಾಗಲೀ, ಮಾಲೆಯನ್ನಾಗಲೀ, ಸುಗಂಧಲೇಪನವನ್ನಾಗಲೀ, ಕಾಡಿಗೆ, ಅಂಜನವನ್ನು ಇಷ್ಟಪಡುವುದಿಲ್ಲ.[೩]

೧೧. ಅವಸರ ಕಾರ್ಯವಿದ್ದರೂ, ಸುಖವಾಗಿ ನಿದ್ರಿಸುವ ನನ್ನ ಪತಿಯನ್ನು ಎಂದೂ ಎಬ್ಬಿಸುವುದಿಲ್ಲ. ಅದರಿಂದ ನನ್ನ ಮನಸ್ಸು ಸಂತೋಷಗೊಳ್ಳುತ್ತದೆ.

೧೨. ಕುಟುಂಬದ ಸಲುವಾಗಿ ಗಂಡನಿಗೆ ಎಂದೂ ಉಪದ್ರವ ಕೊಡುವುದಿಲ್ಲ. ರಹಸ್ಯಗಳನ್ನು ಸದಾ ಗೋಪ್ಯವಾಗಿಯೇ ಇಡುತ್ತೇನೆ. ಮನೆಯನ್ನು ಯಾವಾಗಲೂ ಚೆನ್ನಾಗಿ ಸ್ವಚ್ಛವಾಗಿಡುತ್ತೇನೆ.

ಇಂತಹ ಧರ್ಮಮಾರ್ಗವನ್ನು ಸಮಾಧಾನದಿಂದ ಅನುಸರಿಸುವ ನಾರಿಯು ನಾರಿಯರ ಮಧ್ಯದಲ್ಲಿ ಅರುಂಧತಿಯು ಪೂಜಿಸಲ್ಪಡುವಂತೆ ಸ್ವರ್ಗಲೋಕದಲ್ಲಿ ಪೂಜಿಸಲ್ಪಡುತ್ತಾಳೆ.

ಇದನ್ನು ತಪಸ್ವಿಯಾದ, ಭಾಗ್ಯಶಾಲಿಯಾದ ಶಾಂಡಿಲಿಯು ಸುಮನಾಳಿಗೆ ಹೀಗೆ ಪತಿಧರ್ಮವನ್ನು ಹೇಳಿ ಅದೃಶ್ಯಳಾದಳು.

ಎಲೈ ಪಾಂಡವನೇ! ಯಾರು ಈ ಆಖ್ಯಾನವನ್ನು ಪರ್ವಪರ್ವಗಳಲ್ಲಿ ಪಠಿಸುತ್ತಾನೋ, ಅವನು ದೇವಲೋಕವನ್ನು ಪಡೆದು ನಂದನವನದಲ್ಲಿ ಸುಖವಾಗಿರುತ್ತಾನೆ.

*****

---

೧ ಯದ್ಭಕ್ಷ್ಯಂ ನಾಭಿಜಾನಾತಿ ಯದ್ಭೋಜ್ಯಂ ನಾಭಿನಂದತಿ ।
ಭಕ್ಷ್ಯಂ ವಾಪ್ಯಥ ವಾ ಲೇಹ್ಯಂ ತತ್ಸರ್ವಂ ವರ್ಜಯಾಮ್ಯಹಮ್ ॥ -೧೭೪/೧೪

೨ ಪ್ರವಾಸಂ ಯದಿ ಮೇ ಭರ್ತಾ ಯಾತಿ ಕಾರ್ಯೇಣ ಕೇನಚಿತ್ ।
ಮಂಗಲ್ಯೈರ್ಬಹುಭಿರ್ಯುಕ್ತಾ ಭವಾಮಿ ನಿಯತಾಸನಾ ॥ - ೧೭೪/೧೬

೩ ಅಂಜನಂ ರೋಚನಾಂ ಚೈವ ಸ್ನಾನಂ ಮಾಲ್ಯಾನುಲೇಪನಮ್ ।
ಪ್ರಸಾಧನಂ ಚ ನಿಷ್ಕ್ರಾಂತೇ ನಾಭಿನಂದಾಮಿ ಭರ್ತರಿ ॥ - ೧೭೪/೧೭

# ಆಶ್ವಮೇಧಿಕಪರ್ವ

## ಅನುಗೀತಾಪರ್ವ

## ೨೦೩–೨೧೦. ಪರಂಬ್ರಹ್ಮಜ್ಞಾನೋಪದೇಶ

### ಭಗವದ್ಗೀತಾಸಾರ

ಶ್ರೀಕೃಷ್ಣನು ಅರ್ಜುನನಿಗೆ ಉಪದೇಶಿಸಿದ ಅನುಗೀತೆ ಒಂದು ಇತಿಹಾಸವಾಗಿ ಪರಿಗಣಿತವಾಗಿರುವುದರಿಂದ ಇದನ್ನು ಉಪದೇಶಪರ ಉಪಾಖ್ಯಾನವಾಗಿ ತೆಗೆದುಕೊಳ್ಳಲಾಗಿದೆ. ಈ ಉಪದೇಶವು ಐದು ಮಜಲುಗಳಲ್ಲಿ ಉಪದಿಷ್ಟವಾಗಿದೆ. ಉಪದೇಶಗಳು ಕೆಳಕಂಡಂತೆ ಸಿಗುತ್ತವೆ. ಹೀಗಾಗಿ೮ ಉಪಾಖ್ಯಾನಗಳಾಗಿ ಪರಿಗಣಿಸಬಹುದು. ಹೇಗೆಂದರೆ

೧. ಸಿದ್ಧ-ಕಾಶ್ಯಪರ ಸಂವಾದ – ಅ. ೧೬–೧೯ – ೦೪

೨. ಬ್ರಾಹ್ಮಣ–ಬ್ರಾಹ್ಮಣಿಯರ ಸಂವಾದ – ಅ. ೨೦,೨೮,೩೨–೩೫ – ೧೨

೩. ಬ್ರಾಹ್ಮಣ ಯತಿ ಸಂವಾದ – ಅ. ೨೯ – ೦೧

೪. ಸಮುದ್ರರಾಜ–ಕಾರ್ತವೀರ್ಯಾರ್ಜುನರ ಸಂವಾದ ಅ. ೩೦– ೧

೫. ಅಲರ್ಕೋಪಾಖ್ಯಾನ – ಅ. ೩೧ – ೦೧

೬. ಬ್ರಾಹ್ಮಣ – ಜನಕರ ಸಂವಾದ – ಅ. ೩೩ – ೦೧

೭. ಗುರುಶಿಷ್ಯರ ಸಂವಾದ – ಅ. ೩೬ – ೦೧

೮. ಬ್ರಹ್ಮದೇವ ಕಶ್ಯಪಾದಿ ಋಷಿಗಳಿಗೆ ಉಪದೇಶಿಸಿದುದು –ಅ. ೩೭–೫೧ – ೧೫

ಒಟ್ಟು ೩೬ ಅಧ್ಯಾಯಗಳು

– ಇಡೀ ಉಪಾಖ್ಯಾನಗಳ, ಉಪದೇಶಗಳ ಸಾರ, ರಹಸ್ಯಗಳೆಲ್ಲವನ್ನು ಸಂದೇಶಗಳು, ವಿವರಣೆಗಳಲ್ಲಿ ವಿವರಿಸಲಾಗಿದೆ.

ಈ ಅನುಗೀತೆಯನ್ನು ಎಂಟು ಉಪಾಖ್ಯಾನಗಳಾಗಿ ಅಧ್ಯಯನದ ದೃಷ್ಟಿಯಿಂದ ವಿಂಗಡಿಸಲಾಗಿದೆ.

ಕುರುಕ್ಷೇತ್ರಯುದ್ಧ ಮುಗಿದು ಧರ್ಮರಾಜನು ಪಟ್ಟಾಭಿಷಿಕ್ತನಾದನು. ಶ್ರೀಕೃಷ್ಣನು ತಾನೇ ಎಲ್ಲರಲ್ಲಿಯೂ ನಿಂತು ಪಾಂಡವರಿಗೆ ಜಯವನ್ನು ತಂದು ಕೊಟ್ಟಿದ್ದರೂ ಮಗ ಅಭಿಮನ್ಯು ಮೊದಲಾದ ಸಾವಿರಾರು ಜ್ಞಾತಿಗಳ ವಧೆಯಿಂದ ಸಂತಪ್ತನಾದ ಅರ್ಜುನನನ್ನು ಅನೇಕ ಕಥೆಗಳಿಂದ ಸಮಾಧಾ ಪಡಿಸಿದ. ಆದರಿಂದ ತನ್ನ ಮನಸ್ಸಿನ ಭಾರವನ್ನೂ ಕಳೆದುಕೊಂಡವನಂತೆ ನಟಿಸುತ್ತಾ ಅರ್ಜುನನನ್ನು 'ನಿನ್ನ ಬಾಹುಬಲ, ಭೀಮಸೇನನ ಮಹಾಪ್ರತಾಪ, ನಕುಲ–ಸಹದೇವರ ಪ್ರಭಾವದಿಂದಲೂ ಧರ್ಮರಾಜನು ನಿಷ್ಕಂಟಕವಾದ ಭೂಮಿಯನ್ನು ಅನುಭವಿಸುತ್ತಿದ್ದಾನೆ. ಧರ್ಮರಾಜನು ಧರ್ಮಬಲದಿಂದಲೇ ಇದು ಸಾಧ್ಯವಾಗಿದೆ. ಅಧರ್ಮಿಷ್ಠರಾದ ದುರ್ಯೋಧನಾದಿಗಳು ಹತರಾಗಿದ್ದಾರೆ. ಈಗ ಭೂಮಿ ಪ್ರಶಾಂತವಾಗಿದೆ. ಎಲ್ಲಿ ಯಮಧರ್ಮಸುತನಾದ ಧರ್ಮರಾಜನಿದ್ದಾನೋ, ಎಲ್ಲಿ ಮಹಾಬಲಶಾಲಿಯಾದ ಭೀಮನಿದ್ದಾನೋ, ಎಲ್ಲಿ ಮಾದ್ರಿಯ ಮಕ್ಕಳಾದ ನಕುಲ–ಸಹದೇವರು ಇದ್ದಾರೋ ಅಲ್ಲಿಯೇ ನನಗೆ ಪರಮಾನಂದ. ನಿಮ್ಮ ಈ ಸಭಾಭವನಾದಿಗಳು ಸ್ವರ್ಗತುಲ್ಯವಾಗಿವೆ. ನಾನು ನಿಮ್ಮಲ್ಲಿಗೆ ಬಂದು ಬಹಳ ಕಾಲವಾಗಿದೆ. ನಮ್ಮ ಬಾಂಧವರನ್ನು ನೋಡಬೇಕೆನಿಸಿದೆ. ನಾನು ಹೋಗಲು ಅನುಮತಿಯನ್ನು ಧರ್ಮರಾಜನು ಕೊಡಲಿ. ಆತ ಕೊಡದಿದ್ದರೆ, ನಾನು ಹೋಗುವುದಿಲ್ಲ. ನಿನ್ನ ಸಂತೋಷಕ್ಕಾಗಿ ಇದೆಲ್ಲ ಹೇಳುತ್ತಿದ್ದೇನೆ. ಧರ್ಮರಾಜನು ಧರ್ಮದಿಂದ ಈ ಭೂಮಿಯನ್ನು ಪಾಲಿಸಲಿ. ನನಗೆ ಧರ್ಮರಾಜನಿಂದ ಅನುಮತಿ ಕೊಡಿಸು[೧] ಎಂದ ಕೃಷ್ಣ.

ಅರ್ಜುನ ಈ ನಿನ್ನ ಶರೀರ, ನನ್ನ ಮನೆಯಲ್ಲಿರುವ ಸಮಗ್ರ ಐಶ್ವರ್ಯ, ಇವೆಲ್ಲ ಧರ್ಮರಾಜನಿಗೆ ಸಮರ್ಪಿತವಾಗದೆ, ಅವನು ನನಗೆ ಪ್ರಿಯ, ಮಾನ್ಯ.

---

೧ ಪುತ್ರಶೋಕಾಭಿಸಂತಪ್ತಂ ಜ್ಞಾತೀನಾಂ ಚ ಸಹಸ್ರಶಃ।
ಕಥಾಭಿಃ ಶಮಯಾಮಾಸ ಪಾರ್ಥಂ ಶೌರಿರ್ಜನಾರ್ದನಃ॥
ಕಾಲೋ ಮಹಾಂಸ್ತ್ವತೀತೋ ಮೇ ಶೂರಪುತ್ರಮಪಶ್ಯತಃ।
ಬಲದೇವಂ ಚ ಕೌರವ್ಯ ತಥಾಽನ್ಯಾನ್ ವೃಷ್ಣಿಪುಂಗವಾನ್॥
ಸೋಽಹಂ ಗಂತುಮಭೀಪ್ಸಾಮಿ ಪುರೀಂ ದ್ವಾರವತೀಂ ಪ್ರತಿ।
ಧರ್ಮಪುತ್ರೇ ಹಿ ಧರ್ಮಜ್ಞೇ ಕೃತಜ್ಞೇ ಸತ್ಯವಾದಿನಿ॥
ಸತ್ಯಧರ್ಮೇ ಮತಿಶ್ಚಾಗ್ರ್ಯಾ ಸ್ಥಿತಿಶ್ಚ ಸತತಂ ಸ್ಥಿತೌ।
ನ ಹಿ ತಸ್ಯಾಪ್ರಿಯಂ ಕುರ್ಯಾಂ ಪ್ರಾಣತ್ಯಾಗೇಽಪ್ಯುಪಸ್ಥಿತೇ।
ಕುತೋ ಗಂತುಂ ಮಹಾಬಾಹೋ ಪುರೀಂ ದ್ವಾರವತೀಂ ಪ್ರತಿ॥
ಸರ್ವಮೇತದಹಂ ಪಾರ್ಥ ತ್ವತ್ಪ್ರೀತಿಹಿತಕಾಮ್ಯಯಾ।...
ಧರ್ಮೇಣ ರಾಜ್ಞಾ ಧರ್ಮಜ್ಞಃ ಪಾತು ಸರ್ವಾಂ ವಸುಂಧರಾಮ್।
ಇದಂ ಶರೀರಂ ವಸು ಯಚ್ಚ ಮೇ ಗೃಹೇ
ನಿವೇದಿತಂ ಪಾರ್ಥ ಸದಾ ಯುಧಿಷ್ಠಿರೇ।
ಪ್ರಿಯಶ್ಚ ಮಾನ್ಯಶ್ಚ ಹಿ ಮೇ ಯುಧಿಷ್ಠಿರಃ
ಸದಾ ಕುರೂಣಾಮಧಿಪೋ ಮಹಾಮತಿಃ॥ – ೧೫/೧೦–೩೧

ನಂತರ ಅರ್ಜುನಕೃಷ್ಣರು ಇಂದ್ರಪ್ರಸ್ಥದ ಸಭಾಭವನದಲ್ಲಿದ್ದಾಗ ಅರ್ಜುನನು ಕೃಷ್ಣನನ್ನು ಕುರಿತು, ಹಿಂದೆ ಯುದ್ಧ ಸನ್ನದ್ಧನಾದ ನನ್ನನ್ನು ಕುರಿತು ನೀನು ನನ್ನ ಮಹಾತ್ಮ್ಯವನ್ನು ಐಶ್ವರ್ಯಪೂರ್ಣವಾದ ರೂಪವನ್ನು (ವಿಶ್ವರೂಪವನ್ನು) ತಿಳಿದೆ (ನೋಡಿದೆ). ಆ ಉಪದೇಶವೆಲ್ಲ ನನ್ನ ವ್ಯಗ್ರಬುದ್ಧಿಯಿಂದಾಗಿ ನಷ್ಟವಾಗಿದೆ (ಮರೆತು ಹೋಗಿದೆ). ಆದ್ದರಿಂದ ಕೇಳುವ ಕುತೂಹಲವಿರುವ ನನಗೆ ಅದೆಲ್ಲವನ್ನೂ ಮತ್ತೆ ಹೇಳು[೧].

ಹೀಗೆ ಅರ್ಜುನ ನುಡಿದಾಗ ಶ್ರೀಕೃಷ್ಣನು ಅರ್ಜುನನನ್ನು ಆಲಿಂಗಿಸಿಕೊಂಡು: 'ಅರ್ಜುನನೇ ನಾನು ನಿನಗೆ ಅತ್ಯಂತ ರಹಸ್ಯವಾದ, ಸನಾತನವಾದ ಧರ್ಮಸ್ವರೂಪಿಯಾದ (ಗುಣಪೂರ್ಣನಾದ - ಪುರುಷೋತ್ತಮತತ್ತ್ವವನ್ನು) ಹಾಗೂ ಶಾಶ್ವತವಾದ ಎಲ್ಲ ಲೋಕಗಳನ್ನೂ ಹೇಳಿದ್ದೆ. ಆದರೆ ನೀನು ಬುದ್ಧಿಯಿಲ್ಲದೆ (ತಿಳಿಗೇಡಿತನದಿಂದ) ಅದನ್ನು ಗ್ರಹಿಸದಿರುವುದಕ್ಕೆ ನನಗೆ ಬಹಳ ಅಸಮಾಧಾನವಾಗಿದೆ. ಶ್ರದ್ಧೆಯಿಂದ ನೀನು ಸದ್ಬುದ್ಧಿ ಹೊಂದಲಿಲ್ಲ. ಏಕೆಂದರೆ ಆಗ ಹೇಳಿದ ಬ್ರಹ್ಮಸ್ವರೂಪವು, ಗೀತೋಪದೇಶವು ಪರಿಪೂರ್ಣವಾಗಿತ್ತು. ಅದನ್ನು ಮತ್ತೆ ಪೂರ್ಣನಾಗಿ ಹಾಗೆ ಹೇಳಲು ಸಮಯವಿಲ್ಲ (ಸಾಧ್ಯವಿಲ್ಲ).[೨]

ನಾನು ಯೋಗಯುಕ್ತನಾಗಿ ಪರಬ್ರಹ್ಮಸ್ವರೂಪವನ್ನು ಹೇಳಿದ್ದೆ. ಆದರೆ ಈಗ ಆ ಪುರಾತನ ಪರತತ್ತ್ವದಲ್ಲಿ ವಿಷಯವಾಗಿ ಒಂದು ಇತಿಹಾಸವನ್ನು ಹೇಳುತ್ತೇನೆ. ಆ ಇತಿಹಾಸದಲ್ಲಿ ನೀನು ಬುದ್ಧಿಯನ್ನು ಇರಿಸಿದಲ್ಲಿ ಉತ್ತಮಗತಿಯನ್ನು ಹೊಂದುವೆ.

ಇದು ಅನುಗೀತೆಯ ಹಿನ್ನೆಲೆಯ ಕೆಲ ವಾಕ್ಯಗಳು.

ಅರ್ಜುನನಿಗೆ ಮತ್ತೊಮ್ಮೆ ತಾನು ದ್ವಾರಕೆಗೆ ಹೋಗುವ ಅವಸರವಿರುವಾಗಲೂ ಪರಂಬ್ರಹ್ಮತತ್ತ್ವವನ್ನು ನಿರೂಪಿಸುವ ಇತಿಹಾಸವನ್ನು ಹೇಳುತ್ತಾನೆ ಶ್ರೀಕೃಷ್ಣನು. ಈ ವಿಷಯವು

---

೧ ವಿದಿತಂ ಮೇ ಮಹಾಬಾಹೋ ಸಂಗ್ರಾಮೇ ಸಮುಪಸ್ಥಿತೇ।
ಮಾಹಾತ್ಮ್ಯಂ ದೇವಕೀಪುತ್ರ ತಚ್ಚ ಮೇ ರೂಪಮೈಶ್ವರಮ್॥
ಯತ್ತು ತದ್ ಭವತಾ ಪ್ರೋಕ್ತಂ ತದಾಕೇಶವ ಸೌಹೃದಾತ್।
ತತ್ಸರ್ವಂ ಪುರುಷವ್ಯಾಘ್ರ ನಷ್ಟಂ ಮೇ ವ್ಯಗ್ರಚೇತಸಃ॥
ಮಮ ಕೌತೂಹಲಂ ತ್ವಸ್ತಿ ತೇಷ್ವರ್ಥೇಷು ಪುನಃ ಪ್ರಭೋ।

೨ ಅಬುದ್ಧ್ಯಾಶಯನ್ನಗೃಹ್ಣೀಥಾಸ್ತನ್ಮೇ ಸುಮಹದಪ್ರಿಯಮ್।
ನೂನಮಶ್ರದ್ಧಧಾನೋಽಸಿ ದುರ್ಮೇಧಾಶ್ಚಾಸಿ ಪಾಂಡವ॥
ಸ ಹಿ ಧರ್ಮಃ ಸುಪರ್ಯಾಪ್ತಃ ಬ್ರಹ್ಮಣಃ ಪದವೇದನೇ।
ನ ಶಕ್ಯಂ ತನ್ಮಯಾ ಭೂಯಸ್ತಥಾ ವಕ್ತುಮಶೇಷತಃ॥
ಪರಂ ಹಿ ಬ್ರಹ್ಮ ಕಥಿತಂ ಯೋಗಯುಕ್ತೇನ ತನ್ಮಯಾ।
ಇತಿಹಾಸಂ ತು ವಕ್ಷ್ಯಾಮಿ ತಸ್ಮಿನ್ನರ್ಥೇ ಪುರಾತನಮ್॥ - ೧೬/೫-೧೩

ಅಧ್ಯಾಯ ೧೬ ರಿಂದ ೫೧ರವರೆಗೆ ಮುಂದಿನ ಶ್ಲೋಕಗಳಿಂದ (ಅಧ್ಯಾಯ ೧೬/೧೪-೫೧ ಅಧ್ಯಾಯಗಳವರೆಗೆ) ಸುಮಾರು೧೧೦೦ ಶ್ಲೋಕಗಳಲ್ಲಿನಿರೂಪಿತವಾಗಿದೆ. ಭಗವದ್ಗೀತೆಯಲ್ಲಿ ನೇರವಾಗಿ ಶ್ರೀಕೃಷ್ಣನು ಉಪದೇಶ ಮಾಡಿದ್ದಾನೆ. ಇಲ್ಲಿಯ ರೀತಿಯೇ ಬೇರೆ. ವಿವರ ಹೀಗಿದೆ.

ಅರ್ಜುನನಿಗೆ ಶ್ರೀಕೃಷ್ಣನು ಹೇಳುತ್ತಾನೆ –

ಹಿಂದೆ ಒಬ್ಬ ಬ್ರಾಹ್ಮಣನು ಬ್ರಹ್ಮಲೋಕದಿಂದ ಸ್ವರ್ಗಲೋಕಕ್ಕೆ ಆಗಮಿಸಿ, ನಂತರ ಭೂಮಿಗೆ ಬಂದು ದ್ವಾರಕೆಗೆ ಬಂದ. ಆತನು ಕೃಷ್ಣನಿಂದ ಸತ್ಕೃತನಾಗಿ ಕೆಲವು ಕಾಲ ಅಲ್ಲಿಯೇ ಇದ್ದಾಗ ಕೃಷ್ಣನು ಕೇಳಿದ ಪ್ರಶ್ನೆಗಳಿಗೆ ಆ ಬ್ರಾಹ್ಮಣ ಉತ್ತರಿಸಿದನು.

ಕೃಷ್ಣ ! ನೀನು ಮೋಕ್ಷಧರ್ಮದ ಬಗ್ಗೆ ಕೇಳಿದ್ದೀಯಾ. ಅದು ನನ್ನ ಅಜ್ಞಾನವನ್ನು ಪರಿಹಾರಕ್ಕಾಗಿ ಹಾಗೂ ಜಿಜ್ಞಾಸುಜೀವಿಗಳ ಮೇಲಿನ ಅನುಕಂಪ, ಕರುಣೆಯ ಉದ್ದೇಶವೆಂದು ಭಾವಿಸಿದ್ದೇನೆ. ಅದನ್ನು ನಾನು ಹೇಳುತ್ತೇನೆ ಕೇಳು.[೧]

**ಅಧ್ಯಾಯ ೧೬-೧೮ನೇ ಶ್ಲೋಕದಿಂದ ಬ್ರಾಹ್ಮಣೋಪದೇಶ ಆರಂಭವಾಗುತ್ತದೆ ಅಧ್ಯಾಯ ೫೧ರವರೆಗೆ.**

ತಪಸ್ವಿಯಾದ, ಧರ್ಮಬಲ್ಲ (ತಿಳಿದ), ಕಶ್ಯಪನೆಂಬ ಬ್ರಾಹ್ಮಣನು ಧರ್ಮಶಾಸ್ತ್ರಗಳ ರಹಸ್ಯಗಳನ್ನು ಬಲ್ಲ, ಜ್ಞಾನ, ವಿಜ್ಞಾನಗಳ ಆಳವನ್ನು ಬಲ್ಲ, ಹಿಂದಿನ, ಮುಂದಿನ ಆಗುಹೋಗುಗಳನ್ನು ತಿಳಿದ, ಲೋಕತತ್ತ್ವಗಳಲ್ಲಿಯೂ ಕುಶಲಿಯಾದ, ಸುಖದುಃಖ ಗಳ ರಹಸ್ಯವನ್ನು ಬಲ್ಲ, ಪೂರ್ವಜನ್ಮಸ್ಮರಣೆಯ ರಹಸ್ಯವನ್ನು ಬಲ್ಲ, ಪಾಪಪುಣ್ಯಗಳ ಕಾರಣಾದಿಗಳನ್ನು ಬಲ್ಲ, ಉಚ್ಚ ನೀಚ ಯೋನಿಗಳಲ್ಲಿನ ಜೀವಿಗಳ ಕರ್ಮಗಳಿಂದ ಆಗುವ ಗತಿಯನ್ನು ಬಲ್ಲ, ಮುಕ್ತನಂತೆ ಸಂಚರಿಸುತ್ತಿದ್ದ (ಜೀವನ್ಮುಕ್ತ) ಪ್ರಶಾಂತಮನಸ್ಸಿನ, ದೇವರಲ್ಲಿ ಸದಾ ಮನಸ್ಸನ್ನು ಇಟ್ಟ ಜಿತೇಂದ್ರಿಯನಾದ, ಬ್ರಹ್ಮತೇಜಸ್ಸಿನಿಂದ ಹೊಳೆಯುವ, ಅಂತರ್ಧಾನಶಕ್ತಿ ಇರುವ ಅದೃಶ್ಯರಾಗಿರುವ ವೈಷ್ಣವರೊಂದಿಗೆ ಸಂಚರಿಸುತ್ತಿರುವ, ಸಂಭಾಷಣೆ ಮಾಡುತ್ತಿರುವ, ಏಕಾಂತದಲ್ಲಿ ಕುಳಿತುಕೊಂಡಿರುವ, ವಾಯುವಿನಂತೆ ನಿರ್ಲಿಪ್ತನಾದ ಒಬ್ಬ ಸಿದ್ಧಪುರುಷನನ್ನು ನೋಡಿ ಅವನ ಬಳಿ ಬಂದು ಅವನ ಪಾದಗಳಿಗೆರಗಿ, ತನಗೊಬ್ಬ ಮಹಾಗುರು ದೊರಕಿದನೆಂದು ಸಂತಸಗೊಂಡನು. ಗುರುವೃತ್ತಿ, ಸೇವೆಯನ್ನು ಮಾಡಿದ, ಅವನನ್ನು ಸಂತೋಷಪಡಿಸಿದ. ಪ್ರಸನ್ನನಾದ ಆ ಸಿದ್ಧನು ಕಶ್ಯಪನಿಗೆ ಉತ್ಕೃಷ್ಟವಾದ ಸಿದ್ಧಿ ಬಗ್ಗೆ ಉಪದೇಶಿಸಿದನು.

**ಉಪದೇಶದ ಸಾರ ಹೀಗಿದೆ –**

---

೧ ಮೋಕ್ಷಧರ್ಮಂ ಸಮಾಶ್ರಿತ್ಯ ಕೃಷ್ಣ ಯನ್ಮಾಽನುಪೃಚ್ಛಸಿ।
ಭೂತಾನಾಮನುಕಂಪಾರ್ಥೇ ಮನ್ಮೋಹಚ್ಛೇದನಂ ಪ್ರಭೋ॥ – ೧೬/೧೬

'ಮಗು ಕಶ್ಯಪನೇ! ಮನುಷ್ಯರು ಇಲ್ಲಿ ತಾವು ಮಾಡುವ ಪುಣ್ಯಕರ್ಮಗಳಿಂದ ದೇವಲೋಕಕ್ಕೆ ಹೋಗುತ್ತಾರೆ. ಯಾವ ಲೋಕಕ್ಕೆ ಹೋದರೂ, ಆತ್ಯಂತಿಕ ಸುಖ ಸಿಗದು. ಕಾರಣ ಅವೆಲ್ಲ ಅಸ್ಥಿರ, ಅನಿತ್ಯ ಲೋಕಗಳು. ನಾನಾದರೂ, ಕಾಮಕ್ರೋಧಗಳಿಂದ ಕೂಡಿ, ಪಾಪಕರ್ಮಗಳನ್ನು ಮಾಡಿದ್ದರಿಂದ ಅಮಂಗಳ ಗತಿಗಳನ್ನು ಹೊಂದಿದೆ. ಮತ್ತೆ ಮರಣ, ಜನ್ಮ, ಅನೇಕ ಜನ್ಮಗಳಲ್ಲಿ ಅನೇಕ ಬಗೆಯ ಆಹಾರಸೇವನೆ ಅನೇಕ ತಾಯಂದಿರ ಸ್ತನ್ಯಪಾನ ಮಾಡಿದ, ಬಹುವಿಧವಾದ ತಂದೆತಾಯಿಗಳನ್ನು ವಿವಿಧ ಜನ್ಮಗಳಲ್ಲಿ ಹೊಂದಿದೆ. ವಿಚಿತ್ರ ಸುಖದುಃಖ ಅನುಭವಿಸಿದೆ. ಪ್ರೀತಿಪಾತ್ರರು ದೂರಾದರು. ಬೇಡಾದವರೊಂದಿಗೆ ಚಿರಕಾಲ ವಾಸಿಸಿದೆ. ಕಷ್ಟದಿಂದ ಸಂಪಾದಿಸಿದ ಧನನಾಶ, ಅವಮಾನಗಳು, ಬಂಧುಜನರಿಂದಲೇ ಕಷ್ಟಗಳ ಆಗಮನ, ಶಾರೀರ, ಮಾನಸಿಕ ವೇದನೆಗಳು ಆದವು. ನರಕದಲ್ಲಿ ಪತನ, ಯಮಲೋಕದಲ್ಲಿ ಯಾತನೆಗಳು ಅನುಭವಿಸಿದೆ. ಜೀವಿಸಿದ್ದಾಗ ಅವಮಾನ ಅಪರಾಧಗಳಿಗೆ ಪ್ರಾಣದಂಡ, ದಾರುಣ ಬಂಧನಕ್ಕೆ ಒಳಗಾದೆ. ನಿರಂತರ ಅನೇಕ ಜನ್ಮಗಳನ್ನು ತಾಳಿ ಮುಪ್ಪಿನಿಂದ ರೋಗಗಳಿಂದ ಬಳಲಿದೆ. ಲೋಕದಲ್ಲಿದ್ದಾಗ ಸುಖದುಃಖಗಳ ದ್ವಂದ್ವ ಅನುಭವಿಸಿದೆ.

ಇವೆಲ್ಲವುಗಳ ಪರಿಣಾಮ ನಿರಾಶೆ, ವೈರಾಗ್ಯಗಳಿಂದ ಕೊನೆಗೆ ದುಃಖದಿಂದ ಆರ್ತನಾಗಿ ಲೋಕವ್ಯಾಪಾರಗಳನ್ನು ಪೂರ್ಣಬಿಟ್ಟು ಪ್ರಾಕೃತಾಕಾರರಹಿತನಾದ ಭಗವಂತನನ್ನು ಆಶ್ರಯಿಸಿದೆ. ಆಗ ನನಗೆ ಸಿದ್ಧಿ ದೊರಕಿತು, ಭಗವಂತನ ಅನುಗ್ರಹದಿಂದ. ಇನ್ನು ನಾನು ಈ ಲೋಕಕ್ಕೆ ಬರುವವನಲ್ಲ, ಸೃಷ್ಟಿಕಾರ್ಯ ನಡೆಯುವವರೆಗೆ ನನ್ನ ಹಾಗೂ ಇತರ ಎಲ್ಲ ಜೀವರ ಶುಭಗತಿಗಳನ್ನು ನೋಡುತ್ತಿರುತ್ತೇನೆ. ಇನ್ನು ಮುಂದೆ ನಾನು ಇದಕ್ಕಿಂತಲೂ ಉತ್ತಮ ಲೋಕಕ್ಕೆ ಹೋಗುತ್ತೇನೆ. ಆ ಬ್ರಹ್ಮ ಪರತರ, ಯಾವುದೇ ದೋಷವಿರದ ಅವನ ಸ್ಥಾನ ಹೊಂದುತ್ತೇನೆ. ನಾನು ಮತ್ತೆ ಈ ಲೋಕಕ್ಕೆ ಬರುವುದಿಲ್ಲ, ಎಲೈ ಕಶ್ಯಪನೇ! ನಿನ್ನ ಬಗ್ಗೆ ನಾನು ಸಂತುಷ್ಟನಾಗಿದ್ದೇನೆ. ನಿನಗೇನು ಮಾಡಲಿ? ನೀನು ಏಕೆ ಬಂದಿರುವೆ ಎಂದು ನನಗೆ ಗೊತ್ತಿದೆ. ಬೇಕಾದುದನ್ನು ಕೇಳು. ನಿನ್ನ ಸದ್ಬುದ್ಧಿ ಬಲ್ಲೆ. ನಿನ್ನ ಚಾರಿತ್ರ್ಯದ ಬಗ್ಗೆ ಸಂತೋಷವಾಗಿದೆ. ನಾನು ರಹಸ್ಯವಾಗಿ ಸಂಚರಿಸುತ್ತಿದ್ದರೂ, ನನ್ನನ್ನು ನೀನು ಗುರುತಿಸಿದ್ದೀಯಾ, ಮೇಧಾವಿಯಾಗಿರುವೆ. ಎಂದು ಆ ಸಿದ್ಧಪುರುಷನು ತನ್ನ ಅನುಭವದೊಡನೆ ತನ್ನ ಸಿದ್ಧಿಯನ್ನು ಕಶ್ಯಪ ಬ್ರಾಹ್ಮಣನಿಗೆ ಹಂಚಿಕೊಂಡನು:

**ವಿವಿಧೈಃ ಕರ್ಮಭಿಸ್ತಾತ ಪುಣ್ಯಯೋಗೈಶ್ಚ ಕೇವಲೈಃ ।**
**ಗಚ್ಛಂತೀಹ ಗತಿಂ ಮರ್ತ್ಯಾ ದೇವಲೋಕೇ ಚ ವಾ ಸ್ಥಿತಿಮ್ ॥**
**ನ ಕ್ವಚಿತ್ ಸುಖಮತ್ಯಂತಂ ನ ಕ್ವಚಿತ್ ಶಾಶ್ವತೀ ಸ್ಥಿತಿಃ ।**
**ಅಶುಭಾಗತಯಃ ಪ್ರಾಪ್ತಾಃ ಕಷ್ಟಾಮೇ ಪಾಪಸೇವನಾತ್ ।**
**ಕಾಮಮನ್ಯುಪರೀತೇನ ತೃಷ್ಣಯಾ ಮೋಹಿತೇನ ಚ ॥**

ಮಾತರೋ ವಿವಿಧಾ ದೃಷ್ಟಾಃ ಪಿತರಶ್ಚ ಪೃಥಗ್ ವಿಧಾಃ।
ಸುಖಾನಿ ಚ ವಿಚಿತ್ರಾಣಿ ದುಃಖಾನಿ ಚ ಮಯಾಽನಘ ॥
ಪತನಂ ನಿರಯೋ ಚೈವ ಯಾತನಾಶ್ಚ ಯಮಕ್ಷಯೇ।
ಪ್ರಾಪ್ತಾ ವಿಮಾನನಾಶ್ಚೋಗ್ರಾ ವಧಂ ಬಂಧಾಶ್ಚ ದಾರುಣಾಃ ॥
ತಪಃ ಕದಾಚಿನ್ನಿರ್ವೇದಾನ್ನಿರಾಕಾರಾಶ್ರಿತೇನ ಚ।
ಲೋಕತಂತ್ರಂ ಪರಿತ್ಯಕ್ತಂ ದುಃಖಾರ್ತೇನ ಭೃಶಂ ಮಯಾ ॥
ತತಃ ಸಿದ್ಧಿರಿಯಂ ಪ್ರಾಪ್ತಾ ಪ್ರಸಾದಾದಾತ್ಮನೋ ಮಯಾ।
ಇತಃ ಪರಂ ಗಮಿಷ್ಯಾಮಿ ತತಃ ಪರತರಂ ಮಹತ್ ॥
ಬ್ರಹ್ಮಣಃ ಪದಮವ್ಯಗ್ರಂ ಮಾಂ ತೇಽಭೂದತ್ರ ಸಂಶಯಃ।
ಭೃಶಂ ಪ್ರೀತೋಽಸ್ಮಿ ಭವತಃ ಚಾರಿತ್ರೇಽಥ ವಿಚಕ್ಷಣ ॥
ಬಹುಮನ್ಯೇ ಚ ಬುದ್ಧಿಂ ತೇ ಭೃಶಂ ಸಂಪೂಜಯಾಮಿ ಚ।
ಯೇನಾಹಂ ಭವತೋ ಬುದ್ಧೋ ಮೇಧಾವೀ ಹ್ಯಸಿ ಕಾಶ್ಯಪ ॥ -೧೬/೨೯-೪೭

**ಅಧ್ಯಾಯ ೧೭** ರಲ್ಲಿ ಬ್ರಾಹ್ಮಣನು ಕೃಷ್ಣನನ್ನು ಕುರಿತು 'ಕಾಶ್ಯಪನ ಪ್ರಶ್ನೆಗಳಿಗೆ ಸಿದ್ಧಪುರುಷನು ನೀಡಿದ ಉತ್ತರಗಳನ್ನು ವಿಸ್ತಾರವಾಗಿ ಅನುವಾದಿಸುತ್ತಾನೆ.

ಕಾಶ್ಯಪನ ಪ್ರಶ್ನೆಗಳು ೧. ಭೌತಿಕ ಶರೀರದ ನಾಶ ಹೇಗೆ? ಮತ್ತೆ ಶರೀರಪ್ರಾಪ್ತಿ ಹೇಗೆ? ಸಂಸಾರದಿಂದ ಸಂಸಾರಿ ಜೀವನ ಬಿಡುಗಡೆ ಹೇಗೆ?

೨. ತಾನು ಮಾಡಿದ ಶುಭಾಶುಭಕರ್ಮಗಳ ಅನುಭವ ಹೇಗೆ? ದೇಹ ಬಿಟ್ಟ ಮೇಲೆ ಜೀವನ ಕರ್ಮ ಎಲ್ಲಿರುತ್ತದೆ?

**ಸಿದ್ಧಪುರುಷನ ಉತ್ತರಗಳು** – ಜೀವನು ಮಾಡುವ ಶುಭಕರ್ಮಗಳಿಂದ ಆಯುರ್ವೃದ್ಧಿ ಫಲ ಆ ಜನ್ಮದಲ್ಲಿಯೇ ಸಿಗುತ್ತದೆ. ಮಾರನೇ ಜನ್ಮದಲ್ಲಿಯೂ ಶುಭಕರ್ಮಗಳಿಂದ ಶರೀರ ಬಂದಾಗ ಅದನ್ನು ಅನುಭವಿಸುತ್ತಾನೆ. ಶುಭಕರ್ಮಕ್ಷಯವಾದಾಗ ಆಯುಃ ಕ್ಷೀಣತೆಯನ್ನು ಹೊಂದಿ, ವಿನಾಶಕಾಲ ಬಂದಾಗ ಬುದ್ಧಿ ವ್ಯತ್ಯಾಸವಾಗಿ ಮನೋನಿಗ್ರಹವಿಲ್ಲದೆ ಶರೀರಾರೋಗ್ಯ ಹಾನಿದಾಯಕ. ಆಹಾರ, ವಿಹಾರ, ನಿದ್ರಾ ಸೇವನೆಗಳಿಂದ ರೋಗಪೀಡಿತನಾಗಿ ಸಾಯುತ್ತಾನೆ. ಮತ್ತೆ ಜನ್ಮ ಬಂದಾಗ ಜನ್ಮದುಃಖ, ಮರಣ ಹೊಂದುವಾಗ ದೇಹದ ಸಂಧಿಗಳೆಲ್ಲ ಒಡೆದು ಭಯಾನಕ ನೋವು ಉಂಟಾಗಿ ಸಾವು, ಜ್ಞಾನನಾಶ, ಮುಖ್ಯಪ್ರಾಣನಿಂದ ಮೇಲೆ ಹೋಗುತ್ತಾನೆ. ಪ್ರಾಣೋತ್ಕ್ರಮಣವಾಗುವಾಗ ಮಹೋಚ್ಛ್ವಾಸ. ಆಗಲೂ ಮಾಡಿದ

೧ ಅಸ್ಮಿನ್ನೇವಾಶು ಫಲದಾ ಆಯುಷ್ಯಾಸ್ತು ಕ್ರಿಯಾಃ ಸ್ಮೃತಾಃ।
ಆಯುಃ ಕೃತ್ಯಕರಾಣೀಹ ಯಾನಿ ಕರ್ಮಾಣಿ ಸೇವತೇ ॥
ಯಸ್ಯ ಪಂಚಸು ಭೂತೇಷು ಪ್ರಾಣಾಪಾನೌ ವ್ಯವಸ್ಥಿತೌ।
ನ ಗಚ್ಛತ್ಯೂರ್ಧ್ವಗೋ ವಾಯುಃ ಕೃಚ್ಛ್ರಾನ್ಮುಕ್ತ್ವಾ ಶರೀರಿಣಮ್ ॥

ಕರ್ಮಗಳಿಂದಆವೃತನಾಗಿಯೇಹೊಂದುತ್ತಾನೆ. ಹೀಗೆಶುಭಾಶುಭಕರ್ಮಗಳಿಂದಸುಖ-ದುಃಖಾನುಭವ, ಪಾಪಕರ್ಮಿಗಳು ನರಕಕ್ಕೆ, ಪುಣ್ಯಕರ್ಮಿಗಳು ಸ್ವರ್ಗಾದಿಗಳಿಗೆ ಹೋಗುತ್ತಾರೆ. ಆದ್ದರಿಂದ ನರಕಕ್ಕೆ ಹೋಗದಂತೆ ತನ್ನನ್ನು ರಕ್ಷಿಸಿಕೊಳ್ಳಬೇಕು. ಅಂತರಿಕ್ಷಲೋಕದಲ್ಲಿ ಎಲ್ಲ ನಕ್ಷತ್ರಗಳು, ಚಂದ್ರಮಂಡಲ, ಸೂರ್ಯಮಂಡಲಗಳ ಸ್ಥಾನಗಳೆಲ್ಲ ಪುಣ್ಯಕರ್ಮಿಗಳಿಗೆ ಸಿಗುವ ಸ್ಥಾನಗಳು. ಆದರೆ ಇವಾವೂ ಶಾಶ್ವತಗಳಲ್ಲ.[೧]

## ಹದಿನೆಂಟನೆಯ ಅಧ್ಯಾಯದಲ್ಲಿ ಬ್ರಾಹ್ಮಣನು ಉಪದೇಶಿಸಿದ ವಿಷಯಗಳು

೧. ಜೀವರು ಮಾಡುವ ಪುಣ್ಯಾಪುಣ್ಯಫಲಗಳು ಅನೇಕ ಜನ್ಮಗಳಿಗೆ ಕಾರಣವಾಗುತ್ತವೆ. ಶುದ್ಧವಾದ ಮನಸ್ಸಿನಿಂದ ಮಾಡಿದ ಪುಣ್ಯಕಾರ್ಯವು ಫಲ ಕೊಡುವ ಕಾಲ ಬಂದಾಗ ಭಾರೀ ಫಲವನ್ನು ಕೊಡುತ್ತದೆ.

೨. ಜೀವನು ಪುರುಷವೀರ್ಯದ ಮೂಲಕ ಸ್ತ್ರೀಯ ಗರ್ಭಾಶಯವನ್ನು ಪ್ರವೇಶಿಸುತ್ತಾನೆ. ಅವನು ಹಿಂದೆ ಮಾಡಿದ ಪುಣ್ಯಪಾಪಕರ್ಮಗಳಿಗೆ ಅನುಸಾರವಾಗಿ ಒಳ್ಳೆಯ ಕ್ಷೇತ್ರ ದೊರೆಯುತ್ತದೆ (ತಾಯಿಯ ಗರ್ಭ). ಭಗವಂತನಿಂದಲೇ ಎಲ್ಲ ಜೀವರು ಜೀವಿಸುತ್ತಾರೆ (ಗರ್ಭದಲ್ಲಿ). ಮುಂದೆ ಕೂಡಾ ಅದರಂತೆ ಯೋಗ್ಯ ಶರೀರ ದೊರೆಯುತ್ತದೆ.

೩. ಮೋಕ್ಷಫಲಪ್ರಾಪ್ತಿಗೆ ಕಾರಣವಾದ ಧರ್ಮವನ್ನು ಅರಿತು, ನಡೆಯದವರಿಗೆ ಕರ್ಮಚಕ್ರದಿಂದ (ಸಂಸಾರ) ಹೊರಬರುವುದು ಅಸಾಧ್ಯ. ಸಮಸ್ತ ಪ್ರಜಾರಕ್ಷಕಧರ್ಮಗಳು ಯಾವುವೆಂದರೆ - ೧. ದಾನ, ೨. ವ್ರತ, ೩. ಬ್ರಹ್ಮಚರ್ಯ, ೪. ಶಾಸ್ತ್ರೋಕ್ತವೇದಸ್ವಿಕಾರ (ಶಿಖಾವ್ರತ ಇತ್ಯಾದಿ), ೫. ಇಂದ್ರಿಯನಿಗ್ರಹ, ೬. ಪ್ರಶಾಂತಚಿತ್ತತೆ, ೭. ಸರ್ವಭೂತಾನುಕಂಪ, ೮. ಚಿತ್ತಸಂಯಮ, ೯. ದಯಾಪರತ್ವ, ೧೦. ಪರಸಂಪತ್ತಿನ ಬಗ್ಗೆ ಅನಾಸಕ್ತಿ, ೧೧. ಪ್ರಪಂಚ, ಪ್ರಾಣಿಗಳ ಬಗ್ಗೆ ಮಾನಸಿಕವಾಗಿ ಅಹಿತ ಬಯಸದಿರುವುದು, ೧೨. ಮಾತಾಪಿತೃಸೇವೆ, ೧೩.

---

ಶರೀರಂ ಚ ಜಹಾತ್ಯೇವ ನಿರುಚ್ಛ್ವಾಸಶ್ಚ ದೃಶ್ಯತೇ।
ಸ ನಿರೂಷ್ಮಾ ನಿರುಚ್ಛ್ವಾಸೋ ನಿಃಶ್ರೀಕೋ ಗತಚೇತನಃ।
**ಬ್ರಹ್ಮಣಾ ಸಂಪರಿತ್ಯಕ್ತೋ ಮೃತ ಇತ್ಯುಚ್ಯತೇ ಬುಧೈಃ॥** - ೧೭/೬-೨೭

೧ ಬ್ರಾಹ್ಮಣಾ ಜ್ಞಾನಸಂಪನ್ನಾ ಯಥಾವತ್ ಶ್ರುತನಿಶ್ಚಯಾಃ।
ಇತರಂ ಕೃತಪುಣ್ಯಂ ವಾ ತಂ ವಿಜಾನಂತಿ ಲಕ್ಷಣೈಃ॥
ತಾರಾರೂಪಾಣಿ ಸರ್ವಾಣಿ ಯತ್ರೈತಚ್ಚಂದ್ರಮಂಡಲಮ್।
ಯಚ್ಚ ವಿಭ್ರಾಜತೇ ಲೋಕೇ ಸ್ವಭಾಸಾ ಸೂರ್ಯಮಂಡಲಮ್॥
ಸ್ಥಾನಾನ್ಯೇತಾನಿ ಜಾನೀಹಿ ನರಾಣಾಂ ಪುಣ್ಯಕರ್ಮಣಾಮ್॥ - ೧೭/೨೮-೪೬
ಇಹೈವಾ ಶುಭಕರ್ಮಾ ತು ಕರ್ಮಭಿರ್ನಿರಯಂ ಗತಃ।
ಅವಾಕ್ ಸ ನಿರಯೋ ಪಾಪೋ ಮಾನವಃ ಪಾತ್ಯತೇ ಭೃಶಮ್॥
ತಸ್ಮಾತ್ ಸುದುರ್ಲಭೋ ಮೋಕ್ಷ ಆತ್ಮಾ ರಕ್ಷ್ಯೋ ಭೃಶಂ ತತಃ॥ - ೧೭/೪೧,೪೨

ದೇವತಾಪೂಜೆ, ೧೪. ಅತಿಥಿಸತ್ಕಾರ, ೧೫. ಗುರುಪೂಜೆ, ೧೬. ದಯಾ, ೧೭. ಶೌಚ, ೧೮. ಇಂದ್ರಿಯಸಂಯಮ, ೧೯. ಬೇರೆಯವರನ್ನು ಶುಭಕರ್ಮಗಳಲ್ಲಿ ತೊಡಗಿಸುವುದು - ಇವುಗಳ ಅನುಷ್ಠಾನದಿಂದ ಧರ್ಮೋತ್ಪತ್ತಿ.

೪. ಚತುರ್ಮುಖನಿಂದ ಹದಿನಾಲ್ಕು ಲೋಕಗಳ ಸೃಷ್ಟಿ - ಪ್ರಾಕೃತ ಜಗತ್ತು ಕ್ಷರ. ಇದನ್ನು ಮೀರಿದವನು ಭಗವಂತ. ಅಕ್ಷರತತ್ತ್ವ. ಇತ್ಯಾದಿ.

## ೧೯ನೆಯ ಅಧ್ಯಾಯ

ಸಂಸಾರದಿಂದ ಬಿಡುಗಡೆಯಾಗಲು ಎಲ್ಲರೊಡನೆ ಮೈತ್ರಿ, ಸಹನೆ, ಎಲ್ಲೆಡೆ ಭಗವಂತನ ಇರುವಿಕೆ, ಕಾಮ, ಕ್ರೋಧಗಳಿಂದ ಮುಕ್ತನಾಗುವಿಕೆ ಮೊದಲಾದ ಗುಣಗಳು ಅವಶ್ಯವೆಂದು ಹೇಳುತ್ತಾನೆ, ಬ್ರಾಹ್ಮಣನು. ಈ ಬಗ್ಗೆ ಹತ್ತು ಶ್ಲೋಕಗಳಿಂದ ನಿರೂಪಿಸಲಾಗಿದೆ. ಯೋಗಸಿದ್ಧನ ಲಕ್ಷಣಗಳನ್ನು ಹೇಳಲಾಗಿದೆ.

ಶಿಷ್ಯ (ಕಶ್ಯಪನು) ಬ್ರಾಹ್ಮಣ (ಗುರುವನ್ನು) ತಿಂದ ಆಹಾರ ಜೀರ್ಣವಾಗುವ ಬಗ್ಗೆ, ರಸವಾಗುವ ಬಗ್ಗೆ ರಕ್ತವಾಗುವ ಬಗ್ಗೆ ಕೂಡಾ ಕೇಳುತ್ತಾನೆ. ಮಾಂಸ, ಮೇದಸ್ಸು ಸ್ನಾಯು, ಅಸ್ಥಿಗಳಾಗಿ ದೇಹ ಪೋಷಣೆ ಹೇಗೆ, ಮನುಷ್ಯನ ಬಲ ಹೇಗೆ ವೃದ್ಧಿ ಹೊಂದುತ್ತದೆ? ಜೀವನ ಉಸಿರಾಟದ ಬಗ್ಗೆ, ಪರಮಾತ್ಮನು ಮನುಷ್ಯನ ಯಾವಸ್ಥಾನದಲ್ಲಿರುತ್ತಾನೆ ಇವೇ ಮೊದಲಾದ ಪ್ರಶ್ನೆಗಳಿಗೆ ಬ್ರಾಹ್ಮಣನು ಉತ್ತರಿಸುತ್ತಾನೆ.

ಈ ಪ್ರಶ್ನೆಗಳ ಪೈಕಿ ಮುಖ್ಯವಾದ ಪರಮಾತ್ಮನ ಚಿಂತನೆಯಿಂದ ಹೃದಯಗುಹೆಯಲ್ಲಿ ಪರಬ್ರಹ್ಮದರ್ಶನವಾಗುತ್ತದೆ. ಅವನು ಕಣ್ಣು ಮೊದಲಾದ ಯಾವುದೇ ಇಂದ್ರಿಯಗಳಿಗೆ, ಮನಸ್ಸಿಗೆ ಸಿಗುವುದಿಲ್ಲ. ಅವನು ಎಲ್ಲೆಡೆ ಕಾಲು, ಕೈ, ಕಿವಿ, ಕಣ್ಣು ತಲೆ, ಮುಖಗಳನ್ನು ಹೊಂದಿದವನಾಗಿದ್ದಾನೆ. ಜೀವನು ತನ್ನಲ್ಲಿರುವ ಭಗವಂತನನ್ನು ಅನುಭವದಿಂದ ತಿಳಿಯುತ್ತಾನೆ. ಇವೇ ಮೊದಲಾದ ವಿಷಯಗಳು ಅಧ್ಯಾಯ ೧೯ರಲ್ಲಿವೆ.

## ೨೦ನೆ ಅಧ್ಯಾಯ

ಕೃಷ್ಣನಿಗೆ ಬ್ರಾಹ್ಮಣನು ಹಿಂದಿನ ವಿಷಯಗಳನ್ನು ಹೇಳಿ ಅಂತರ್ಧಾನ ಹೊಂದಿದನು. ಇಂತಹ ರಹಸ್ಯ ವಿಷಯಗಳನ್ನು ಹೇಳಿ ಇದನ್ನು ಆರು ತಿಂಗಳು ಅಭ್ಯಾಸ ಮಾಡಿದಲ್ಲಿ ಯೋಗಸಿದ್ಧಿಯನ್ನು ಹೊಂದುತ್ತಾನೆ ಎಂದು ಕೃಷ್ಣನು ಅರ್ಜುನನಿಗೆ ಹೇಳಿದನು.

**ಮುಂದಿನ ೨೧ರಿಂದ ೨೮ ಅಧ್ಯಾಯಗಳಲ್ಲಿ ಕೃಷ್ಣನು ಬ್ರಾಹ್ಮಣ, ಬ್ರಾಹ್ಮಣಿಯರ (ದಂಪತಿಗಳ) ಸಂವಾದರೂಪ ಇತಿಹಾಸದ ಮೂಲಕ ಅನೇಕ ವಿಷಯಗಳನ್ನು ಅರ್ಜುನನಿಗೆ ಅನುವಾದ ಮಾಡುತ್ತಾನೆ.**

ಅಧ್ಯಾಯ ೨೧-೨೮ ರಲ್ಲಿ ಬ್ರಾಹ್ಮಣನ ಹೆಂಡತಿಯ ಪ್ರಶ್ನೆಗಳಿಗೆ ಬ್ರಾಹ್ಮಣ ಉತ್ತರಿಸುತ್ತಾನೆ.

## ೨೧ನೇ ಅಧ್ಯಾಯ

ಭೂತ, ಪ್ರಾಣಾದಿಗಳ ಸೃಷ್ಟಿ ಹಾಗೂ ಬ್ರಹ್ಮನ ಸ್ವರೂಪ ಹೇಳಲಾಗಿದೆ. ಬ್ರಹ್ಮನು ಘ್ರಾಣಾದಿ ಇಂದ್ರಿಯಗಮ್ಯನಲ್ಲ. ಪ್ರಾಣಾಪಾನಾದಿ ಪಂಚಪ್ರಾಣಗಳು ಸೃಷ್ಟಿಯಲ್ಲಿ ದೇವರಿಂದಲೇ ಪ್ರವೃತ್ತಿ ಹೊಂದುವರು.

## ೨೨ನೇ ಅಧ್ಯಾಯ

ಬ್ರಾಹ್ಮಣನು ತನ್ನ ಪತ್ನಿಗೆ ಐದು ಜ್ಞಾನ, ಐದು ಕರ್ಮೇಂದ್ರಿಯಗಳನ್ನು ಯಜ್ಞವನ್ನಾಗಿ ಭಾವಿಸಬೇಕೆಂದು ಉಪಯೋಗಿಸುತ್ತಾನೆ. ದಶೇಂದ್ರಿಯಗಳೇ ದಶ ಹೋತೃಗಳು. ದಶೇಂದ್ರಿಯಗಳ ವಿಷಯಗಳೇ ಹತ್ತು ಹವಿಸ್ಸುಗಳು.

ದಿಕ್ಕುಗಳು, ವಾಯು, ಸೂರ್ಯ, ಚಂದ್ರ, ಪೃಥಿವೀ, ಅಗ್ನಿ, ವಿಷ್ಣು ಇಂದ್ರ, ಪ್ರಜಾಪತಿ, ಮಿತ್ರ (ಸೂರ್ಯ)ರೇ ಹತ್ತು ದೇವತೆಗಳು. ಅಗ್ನಿ ಮೇಲೆ ಹೇಳಲಾದ ಹತ್ತು ಹೋತೃಗಳು ಹತ್ತು ಅಗ್ನಿಗಳಲ್ಲಿ ಹತ್ತು ಹವಿಸ್ಸನ್ನು ಹಾಕುತ್ತಾರೆ. ದೇಹ ಪ್ರಾಪ್ತಿಯು ಯಜ್ಞದಲ್ಲಿ ಚಿತ್ತವೇ ಹೋಮ ಮಾಡುವ ಸ್ರುವ. ಪವಿತ್ರವಾದ ಜ್ಞಾನವೇ ವಿತ್ತ. ತಿಳಿಯಲ್ಪಡಬೇಕಾದ ಜಗತ್ತೇ ಚಿತ್ತ.

ಅಂತೂ ಈ ಅಧ್ಯಾಯದಲ್ಲಿ ಪಂಚಪ್ರಾಣಗಳ ಆಧ್ಯಾತ್ಮಿಕ ಚಿಂತನೆಯು ಅಡಗಿದೆ (ಬ್ರಾಹ್ಮಣ ದಂಪತಿಗಳ ಸಂವಾದದಲ್ಲಿ).

## ೨೩ನೇ ಅಧ್ಯಾಯ

ಘ್ರಾಣ(ಮೂಗು), ಕಣ್ಣು ಕಿವಿ, ಚರ್ಮ, ಮನಸ್ಸು ಬುದ್ಧಿಗಳು ಒಂದೇ ಶರೀರದಲ್ಲಿದ್ದರೂ, ಒಂದು ಇನ್ನೊಂದರ ಗುಣಜ್ಞಾನ ಹೊಂದಿರುವುದಿಲ್ಲ. ಉದಾ. ಕಣ್ಣು, ಮೂಗು, ಕಿವಿ, ಚರ್ಮ, ಮನಸ್ಸು ಬುದ್ಧಿಗಳ ಗುಣಗಳನ್ನು ಗ್ರಹಿಸುವ ಜ್ಞಾನ ಹೊಂದಿರುವುದಿಲ್ಲ. ತನಗೆ ಯೋಗ್ಯವಾದ ರೂಪ, ಗುಣ, ಜ್ಞಾನವನ್ನು ಮಾತ್ರ ಗ್ರಹಿಸಲು ಸಮರ್ಥವಾಗಿರುತ್ತದೆ. ಈ ರೀತಿ ಈ ಏಳೂ ಹೋತೃಗಳು ಅವರವರ ಜ್ಞಾನ ಹೊಂದಿದ್ದರೂ, ಇತರರ ಗುಣ, ಜ್ಞಾನಗಳನ್ನು ಹೊಂದಿಲ್ಲ.

ಹಿಂದೆ ಇಂದ್ರಿಯಗಳಿಗೂ, ಮನಸ್ಸಿಗೂ ತಮ್ಮಲ್ಲಿ ಯಾರು ಶ್ರೇಷ್ಠರೆಂಬ ಬಗ್ಗೆ ವಿವಾದ ಉಂಟಾಯಿತಂತೆ. ನನ್ನ ಸಂಬಂಧವಿಲ್ಲದೆ, ಇಂದ್ರಿಯಗಳು ತಮ್ಮ ವಿಷಯಗಳನ್ನು ಭೋಗಿಸಲಾರವೆಂದು ಮನಸ್ಸು ಪ್ರತಿಪಾದಿಸಿತು. ಆದರೆ ಅದರ ವಾದವು ಹಿಂದೆ ಬಿದ್ದಿತು. ಏಕೆಂದರೆ ಇಂದ್ರಿಯಗಳ ಸಹಕಾರವಿಲ್ಲದೆ ಅಥವಾ ಇಂದ್ರಿಯಗಳ ಲಯವಾದ ಮೇಲೆ ತಾನೇ ವಿವಿಧ ಇಂದ್ರಿಯ ಭೋಗಗಳನ್ನು ಮನಸ್ಸು ತಾನೇ ಅವುಗಳ ವಿಷಯಗಳನ್ನು

ಭೋಗಿಸಲಾರದಾಯಿತು. ಭೋಗಿಸುವೆನೆಂಬ ಮನಸ್ಸಿನ ಅನಿಸಿಕೆ ಕೇವಲ ಸಂಕಲ್ಪಕ್ಕೆ ಮಾತ್ರ ಮಿತಿಗೊಳಿಸಿರುತ್ತದೆ. ವಾಸ್ತವ ಭೋಗವಾಗಲಾರದು. ತೃಪ್ತಿಯಂತೂ ಸಾಧ್ಯವೇ ಇಲ್ಲ. ಸ್ವಪ್ನದ ಭೋಗದಂತೆ ಕೇವಲ ಕಾಲ್ಪನಿಕ. ಆದರೆ ಮನಸ್ಸಿನ ಸಹಾಯವಿಲ್ಲದಿದ್ದರೂ, ಇಂದ್ರಿಯಗಳ ಉಪಭೋಗಸಾಧ್ಯ ತೃಪ್ತಿ ಅಥವಾ ಸಂತೋಷ ಸಿಗದಿರುವುದು ಮಾತ್ರ ಮನಸ್ಸಿನಿಂದ ಎಂಬುವುದು ಮಾತ್ರ ಸತ್ಯ.

ಇವೇ ಮೊದಲಾದ ವಿಷಯಗಳು ಇಲ್ಲಿವೆ.

## ೨೪ನೇ ಅಧ್ಯಾಯ

ಬ್ರಾಹ್ಮಣನು ತನ್ನ ಪತ್ನಿಗೆ ಪ್ರಾಣಾಪಾನೋದಾನಸಮಾನವ್ಯಾನನೆಂಬ ಪಂಚಪ್ರಾಣಗಳು, ಪಂಚಹೋತೃಗಳೆಂದು ಪ್ರಸಿದ್ಧ. ಈ ಪಂಚಪ್ರಾಣಗಳು ಬ್ರಹ್ಮದೇವರನ್ನು (ಪ್ರಜಾಪತಿ) ಕಂಡು ಪ್ರಾಣನು ಧರಿಸಿರುವ ನಮ್ಮಲ್ಲಿ ಶ್ರೇಷ್ಠ ಯಾರು? ಯಾರ ಪ್ರವೃತ್ತಿಯಿಂದ ಜೀವರಿಗೆ ಪ್ರವೃತ್ತಿ ಉಂಟಾಗುತ್ತದೆ? ಇದಕ್ಕೆ ಬ್ರಹ್ಮನು ಯಾರು ಲಯ ಹೊಂದಲು ಉಳಿದ ಪ್ರಾಣಗಳು ಲಯ ಹೊಂದುತ್ತವೆಯೋ, ಯಾರು ಚಲಿಸಲು ಪ್ರಾಣಿಗಳಿಗೆ ಚಲನೆ ಉಂಟಾಗುತ್ತದೋ, ಅವನೇ ಶ್ರೇಷ್ಠ ಈ ವಿಷಯದಲ್ಲಿ ನೀವೇ ನಿಮ್ಮ ಅನುಭವದಿಂದ ನಿಶ್ಚಯಿಸಿಕೊಳ್ಳಿ ಎಂದನು.

ಅದರಂತೆ ಅವೆಲ್ಲ ಜೀವರ ಶರೀರದಲ್ಲಿ ಲಯ ಹೊಂದಿದಾಗಲೂ ಇತರ ಪ್ರಾಣಗಳು ಪ್ರವೃತ್ತಿಯನ್ನು ಮುಂದುವರಿಸಿದವು. ಮತ್ತೆ ಬ್ರಹ್ಮನ ಬಳಿಗೆ ಹೋದಾಗ ಪಂಚಪ್ರಾಣವಾಯುಗಳನ್ನು ಕುರಿತು –

**ಸರ್ವೇ ಶ್ರೇಷ್ಠಾ ನ ವಾ ಶ್ರೇಷ್ಠಾಃ ಸರ್ವೇ ಚಾನೋನ್ಯ ರಕ್ಷಿಣಃ।**
**ಸರ್ವೇ ಸ್ವವಿಷಯೇ ಶ್ರೇಷ್ಠಾಃ ಸರ್ವೇ ಚಾನ್ಯೋನ್ಯರಕ್ಷಿಣಃ॥ – ೨೪/೩೦**

– ನೀವೆಲ್ಲರೂ ಶ್ರೇಷ್ಠರೇ. ಅಥವಾ ಶ್ರೇಷ್ಠರೂ ಅಲ್ಲ. ನಿಮ್ಮಲ್ಲಿ ಎಲ್ಲರಲ್ಲಿಯೂ ಇರುವ ಧರ್ಮವು ಒಂದು ಇನ್ನೊಂದನ್ನು ಆಶ್ರಯಿಸಿವೆ. ನಿಮ್ಮ ನಿಮ್ಮ ಕಾರ್ಯಗಳಲ್ಲಿ, ಸ್ಥಾನಗಳಲ್ಲಿ ನೀವು ಶ್ರೇಷ್ಠರು. ಪರಸ್ಪರ ಧರ್ಮವುಳ್ಳವರಾಗಿದ್ದೀರಿ. ಒಬ್ಬನಲ್ಲಿರುವ ಧರ್ಮವು ಮತ್ತೊಬ್ಬನಲ್ಲಿಯೂ ಇದೆ. ನಿಮ್ಮ ಕಾರ್ಯಗಳು ಪರಸ್ಪರ ಸಹಕಾರವನ್ನು ನಿರೀಕ್ಷಿಸುತ್ತವೆ. ಮತ್ತೆ ಪ್ರಜಾಪತಿಯು ಮುಖ್ಯಪ್ರಾಣನೇ ಬ್ರಹ್ಮಪದವಿಗೆ ಯೋಗ್ಯ. ಅವನೇ ಆತ್ಮನೆನಿಸುತ್ತಾನೆ. ಪಂಚರೂಪಗಳಲ್ಲಿ ಮುಖ್ಯಪ್ರಾಣನಿದ್ದಾನೆ. ಅವನೇ ಮುಂದಿನಕಲ್ಪದ ಬ್ರಹ್ಮ. ಆದ್ದರಿಂದ ಕಲಹ ಬಿಡಿರಿ (ಪಂಚಪ್ರಾಣಗಳು ಸಮಾನರೇ. ಅವರಿಗಿಂತ ಮುಖ್ಯಪ್ರಾಣ ಶ್ರೇಷ್ಠ. ಅವನೇ ಭಾವೀ ಬ್ರಹ್ಮ). ಆದ್ದರಿಂದ ಎಲ್ಲೈ ವಾಯುಗಳೇ ಪರಸ್ಪರ ವಿಶ್ವಾಸದಿಂದ ಮೈತ್ರಿಯಿಂದ ಪೋಷಿಸಿರಿ.

**ಏಕಃ ಸ್ಥಿರಶ್ಚರಾಶ್ಚಾನ್ಯೇ ವಿಶೇಷಾತ್ ಪಂಚವಾಯವಃ।**
**ಏಕ ಏವ ಮಮೈವಾತ್ಮಾ ಬಹುಧಾಽಪ್ಯುಪಚೀಯತೇ॥**

**ಪರಸ್ಪರಸ್ಯ ಸುಹೃದೋ ಭಾವಯಂತಃ ಪರಸ್ಪರಮ್ ।**
**ಸ್ವಸ್ತಿ ವ್ರಜತ ಭದ್ರಂ ವೋ ಧಾರಯಧ್ವಂ ಪರಸ್ಪರಮ್ ॥ - ೨೪/೩೨,೩೩**

## ೨೫ನೇ ಅಧ್ಯಾಯ

ಶ್ರೀಕೃಷ್ಣನು ಅರ್ಜುನನಿಗೆ ಬ್ರಾಹ್ಮಣನು ಬ್ರಾಹ್ಮಣಿಗೆ ಹೇಳಿದ, ನಾರದ ಹಾಗೂ ದೇವತಮನೆಂಬ ಮುನಿಗಳ ಸಂವಾದರೂಪ ಇತಿಹಾಸವನ್ನು ಅನುವಾದ ಮಾಡುತ್ತಾನೆ. ಇಲ್ಲಿ ದೇವತಮನು ಜೀವನು ಹುಟ್ಟುವಾಗ ಪಂಚಪ್ರಾಣರಲ್ಲಿ ಯಾರು ಮೊದಲು ತಾಯಿಯ ಶರೀರದಲ್ಲಿ ಪ್ರವೃತ್ತರಾಗುತ್ತಾರೆ ಎಂಬ ಪ್ರಶ್ನೆ ಮಾಡುತ್ತಾರೆ. ಅದಕ್ಕೆ ನಾರದರು ಸುದೀರ್ಘವಾದ ಉತ್ತರವನ್ನು ನೀಡಿದ್ದಾರೆ (ಕಾಮ, ಸಂಕಲ್ಪ, ಹರ್ಷ, ಪ್ರಾಣದ್ವಂದ್ವ, ನಿರ್ದ್ವಂದ್ವ, ಮೊದಲಾದ ಅನೇಕ ಸಂಕೀರ್ಣ ವಿಷಯಗಳು ಇಲ್ಲಿವೆ).

## ೨೬ನೇ ಅಧ್ಯಾಯ

ಶ್ರೀಕೃಷ್ಣನು ಬ್ರಾಹ್ಮಣ ದಂಪತಿಗಳ ಸಂವಾದದಲ್ಲಿ ನಾಲ್ಕು ಹೋತೃಗಳಿಂದ ಸಂಪನ್ನವಾಗುವ ಯಜ್ಞದ ಬಗ್ಗೆ ಅನುವಾದ ಮಾಡುತ್ತಾನೆ. ನಾಲ್ಕು ಹೋತೃಗಳು ಕರಣ, ಕರ್ಮ, ಕರ್ತಾ ಹಾಗೂ ಮೋಕ್ಷವೆಂಬ ಜಗತ್ತೆಲ್ಲ ವ್ಯಾಪಿಸಿದವಾಗಿವೆ. ಈ ನಾಲ್ಕು ಹೋತೃಗಳಿಗೆ ಸಾಧನವು ಯಾವುದೆಂದರೆ -

| | |
|---|---|
| ಕರಣ ಹೇತುಗಳು | - ಸಪ್ತ ಇಂದ್ರಿಯಗಳು (ಮೂಗು, ನಾಲಿಗೆ, ಕಣ್ಣು ಚರ್ಮ, ಕಿವಿ, ಮನಸ್ಸು, ಬುದ್ಧಿಗಳು) |
| ಕರ್ಮಹೇತುಗಳು | - ಮೇಲಿನ ಇಂದ್ರಿಯಗಳ ವಿಷಯಗಳಾದ ಗಂಧ, ರಸ, ರೂಪ, ಶಬ್ದ, ಸ್ಪರ್ಶ, ಮನನ ತಿಳಿದುಕೊಳ್ಳುವುದು. |
| ಕರ್ತೃಹೇತುಗಳು | - ಆಘ್ರಾಣಿಸುವವನು, ತಿನ್ನುವವನು, ಕೊಡುವವನು, ಸ್ಪರ್ಶಿಸುವವನು, ಕೇಳುವವನು, ಮನನ ಮಾಡುವವನು, ತಿಳಿಯುವವನು. |

(ಘ್ರಾತಾ, ಭಕ್ಷಯಿತಾ....)

ಅಹಂ ಶಬ್ದವಾಚ್ಯನಾದ ಜೀವನು ವಿರಕ್ತನಾದಾಗ ಈ ಮೇಲಿನ ಹೇತುಗಳು ಮೋಕ್ಷ ಕಾರಣವಾಗುತ್ತವೆ.

**ಋಷಯಶ್ಚಾಪ್ಯತ್ರ ಶಂಸಂತಿ ನಾರಾಯಣವಿದೋ ಜನಾಃ ।**
**ನಾರಾಯಣಾಯ ದೇವಾಯ ಯದಬಧ್ನಂ ಪಶುಂ ಪುರಾ ॥**
**ದೇವಂ ನಾರಾಯಣಂ ಭೀರು ಸರ್ವಾತ್ಮಾನಂ ನಿಬೋಧ ಮೇ । - ೨೬/೧೯,೨೦**

- ಎಂದು ಅಧ್ಯಾಯ ಮುಕ್ತಾಯವಾಗುತ್ತದೆ. ಪತ್ನಿಗೆ ಬ್ರಾಹ್ಮಣನು ನಾರಾಯಣನನ್ನು ಸರ್ವಾಂತರ್ಯಾಮಿಯಾಗಿ ತಿಳಿ ಎಂದು ಉಪದೇಶಿಸುತ್ತಾನೆ.

## ೨೭ನೇ ಅಧ್ಯಾಯ

ಬ್ರಾಹ್ಮಣನು ತನ್ನ ಪತ್ನಿಗೆ ಉಪದೇಶಿಸಿದ. ಜಗತ್ತಿನ ನಿಯಾಮಕನು ಒಬ್ಬನೇ.[೧] ಗುರುವೆಂದರೆ ಅವನೇ,[೨] ಬಂಧು, ಶ್ರೋತಾ ಇತ್ಯಾದಿಗಳು (ಪರಮುಖ್ಯ ವೃತ್ತಿಯಿಂದ) ನಾರಾಯಣನೆಂದು[೩] ತಿಳಿಸುತ್ತಾ ಈ ಬಗ್ಗೆ ಬ್ರಹ್ಮನು ಸುರಾಸುರರಿಗೆ ಉಪದೇಶಿಸಿದ ಒಂದು ಇತಿಹಾಸವನ್ನು ಹೇಳುತ್ತಾನೆ. ಏಕಃ ಶಾಸ್ತ್ರ ನ ದ್ವಿತೀಯೋಽಸ್ತಿ ಶಾಸ್ತಾ ಎಂದು ಆಚಾರ್ಯರು ಸರ್ವಮೂಲದಲ್ಲಿ ಉದಾಹರಿಸಿದ ವಾಕ್ಯವು ಇಲ್ಲಿಯದೇ. ಅವನ ಮಹಿಮೆಗಳು ಹೀಗಿವೆ.

೧. ಜಗನ್ನಿಯಾಮಕನು ಒಬ್ಬನೇ. ಅವನ ನಿಯಮನದಂತೆ ನಾವು ನಡೆಯುತ್ತೇವೆ.

೨. ಜಗದ್ಗುರು ಒಬ್ಬನೇ. ಅವನನ್ನು ಅನುಸರಿಸಿಯೇ, ನಾನು ಪ್ರವಚನ ನೀಡುತ್ತೇನೆ. ಅವನೇ ಹಿಂದೆ ದಾನವರನ್ನು ಕೊಂದವನು.

೩. ನಿಜವಾದ ಬಂಧುವು ಅವನೊಬ್ಬನೇ, ಅವನಿಂದ ಉಪದಿಷ್ಟನಾಗಿಯೇ ಸಪ್ತರ್ಷಿಗಳು ಉತ್ತಮಸ್ಥಾನ ಪಡೆದು ಆಕಾಶದಲ್ಲಿ ಬೆಳಗುತ್ತಿದ್ದಾರೆ.

೪. ಎಲ್ಲರೂ ಮಾತನಾಡುವುದನ್ನು ಕೇಳುವವನೂ ಅವನೊಬ್ಬನೇ. ಅವನನ್ನು ಗುರುವಾಗಿ ಸ್ವೀಕರಿಸಿ ಇಂದ್ರನು ಸರ್ವಲೋಕಾಮರತ್ವ ಹೊಂದಿದನು.

೫. ದ್ವೇಷಿಸುವಂತಾದರೆ ನಿಜವಾಗಿಯೂ ದ್ವೇಷಿಸುವವನೂ ಅವನೇ. ಅವನಿಂದ ಆದಿಷ್ಟರಾಗಿಯೇ ಸರ್ಪಗಳು ಮತ್ತೊಬ್ಬರನ್ನು ಕಚ್ಚುತ್ತವೆ.

ಈ ವಿಷಯದಲ್ಲಿ ಬ್ರಾಹ್ಮಣನು ತನ್ನ ಪತ್ನಿಗೆ 'ಬ್ರಹ್ಮದೇವರನ್ನು ಕಂಡು ತಮ್ಮ ಶ್ರೇಯಸ್ಸು ಯಾವುದರಿಂದ ಆಗುತ್ತದೆ' ಎಂದು ದೇವ, ಋಷಿ, ನಾಗ, ಅಸುರರು ಪ್ರಾರ್ಥಿಸಿದ ಇತಿಹಾಸವನ್ನು ಹೇಳುತ್ತಾನೆ.[೪]

---

೧ ಏಕಃಶಾಸ್ತಾ ನ ದ್ವಿತೀಯೋಽಸ್ತಿ ಶಾಸ್ತಾ ।
ಯಥಾ ನಿಯುಕ್ತೋಽಸ್ಮಿ ತಥಾ ವಹಾಮಿ ॥ - ೨೭/೧

೨ ಏಕೋ ಗುರುರ್ನಾಸ್ತಿ ತತೋ ದ್ವಿತೀಯೋ ಪುರಾ ಹತಾ ದಾನವಾಃ ಸರ್ವ ಏವ ॥ - ೨೭/೨

೩ ಏಕೋ ಬಂಧುರ್ನಾಸ್ತಿ ತತೋ ದ್ವಿತೀಯೋ ತೇನಾನುಶಿಷ್ಟಾ ಬಾಂಧವಾ ಬಂಧುಮಂತಃ ॥ - ೨೭/೩

೪ ದೇವರ್ಷಯಶ್ಚ ನಾಗಾಶ್ಚಾಪ್ಯಸುರಾಶ್ಚ ಪ್ರಜಾಪತಿಮ್ ।
ಪರ್ಯಪೃಚ್ಛನ್ನುಪಾಸೀನಾಃ ಶ್ರೇಯೋ ನಃ ಪ್ರೋಚ್ಯತಾಮಿತಿ ॥ - ೨೭/೭

ತಮ್ಮ ಶ್ರೇಯಸ್ಸಿಗೆ ಸಾಧನವೇನೆಂದು ಕೇಳಿದಾಗ ಬ್ರಹ್ಮದೇವನು 'ಓಂ' ಎಂದು ಒಂದೇ ಅಕ್ಷರ ಉಪದೇಶಿಸಿದನು. ಇದನ್ನು ಕೇಳಿದವರೆಲ್ಲ ತಮ್ಮ ತಮ್ಮ ಸ್ಥಾನಗಳಿಗೆ ಹೋದರು.[೧]

೧. ಅವುಗಳಲ್ಲಿ ಸರ್ಪಗಳು (ಕಚ್ಚುವ ಸ್ವಭಾವದ) ಮತ್ತೊಬ್ಬರನ್ನು ಕಚ್ಚುವುದೇ ಶ್ರೇಯಸ್ಸಾಧನವೆಂದು ತಿಳಿದರು.[೨]

೨. ಅಸುರರು ತಮ್ಮ ಸ್ವಭಾವಕ್ಕೆ ಅನುಗುಣವಾಗಿ ಅಹಂಕಾರಪ್ರವೃತ್ತರಾಗಿ ದರ್ಪಿಷ್ಠರಾದರು.[೩]

೩. ದೇವತೆಗಳು ದಾನಪರರಾದರೆ, ಮಹರ್ಷಿಗಳು ಇಂದ್ರಿಯನಿಗ್ರಹವನ್ನು ತಿಳಿದರು.

ಹೀಗೆ ಒಬ್ಬ ಗುರುವು ವಿವಿಧ ಸ್ವಭಾವದವರಿಗೆ ಒಂದೇ ರೀತಿಯಾಗಿ ಉಪದೇಶಿಸಲು ಅವರು ತಿಳಿದದ್ದು ವಿಭಿನ್ನವಾಗಿ. ಫಲಗಳೂ ಬೇರೆ ಬೇರೆಯಾದವು. ಯೋಗ್ಯಶಿಷ್ಯ ಯಥಾರ್ಥವಾಗಿ ಸ್ವೀಕರಿಸುತ್ತಾನೆ. ಹೃದಯದಲ್ಲಿ ರಾಮನು ಒಬ್ಬನೇ ದೇವನಾದರೂ, ಅವನೇ ಗುರು, ಬಂಧುವಾದರೂ ಅವನನ್ನು ತಿಳಿಯುವವರು ಅವರ ಸ್ವಭಾವಕ್ಕೆ ಅನುಗುಣವಾಗಿ ಬಹುವಿಧವಾಗಿರುತ್ತದೆ. ಇಂದ್ರಯಾಸಕ್ತರು ಕಾಮಚಾರಿಯಾದರೆ, ವ್ರತನಿಷ್ಠರು ಭಗವನ್ನಿಷ್ಠರಾಗಿ ಬ್ರಹ್ಮಚಾರಿಗಳಾಗುತ್ತಾರೆ.[೪]

ಜ್ಞಾನಯಜ್ಞ ಮಾಡುವವನಿಗೆ ಬ್ರಹ್ಮನೇ ಸಮಿತ್ತು, ಅಗ್ನಿ, ಸಂಸ್ತರಣನೂ ಬ್ರಹ್ಮನೇ, ನೀರು ಎಲ್ಲವೂ ಬ್ರಹ್ಮ, ಬ್ರಹ್ಮಾಧೀನ.[೫] ಜ್ಞಾನಿಗಳ ಬ್ರಹ್ಮಚರ್ಯವೂ ಇದುವೇ ಎಂದು ಬ್ರಾಹ್ಮಣನು ತನ್ನ ಪತ್ನಿಗೆ ಉಪದೇಶಿಸಿದನು.

---

೧ ತೇಷಾಂ ಪ್ರೋವಾಚ ಭಗವಾನ್ ಶ್ರೇಯಃ ಸಮನುಪೃಚ್ಛತಾಮ್ ।
ಓಮಿತ್ಯೇಕಾಕ್ಷರಂ ಬ್ರಹ್ಮ ತೇ ಶ್ರುತ್ವಾ ಪ್ರಾದ್ರವನ್ ದಿಶಃ ॥ - ೨೭/೮

೨ ತೇಷಾಂ ಪ್ರದ್ರವತಾಮೇವ ಉಪದೇಶಾರ್ಥಮಾತ್ಮನಃ ।
ಸರ್ಪಾಣಾಂ ದಂಶನೇ ಭಾವಃ ಪ್ರವೃತ್ತಃ ಪೂರ್ವಮೇವ ತು ॥ - ೨೭/೯

೩ ಅಸುರಾಣಾಂ ಪ್ರವೃತ್ತಿಸ್ತು ದರ್ಪೋ ಭಾವಃ ಸ್ವಭಾವಜಃ ।
ದಾನಂ ದೇವಾ ವ್ಯವಸಿತಾ ದಮಮೇವ ಮಹರ್ಷಯಃ ॥ - ೨೭/೧೦

೪ ಪಾಪೇನ ವಿಚರನ್ ಲೋಕೇ ಪಾಪಚಾರೀ ಭವತ್ಯಯಮ್ ।
ಶುಭೇನ ವಿಚರನ್ ಲೋಕೇ ಶುಭಚಾರೀ ಭವತ್ಯುತ ॥
ಕಾಮಚಾರೀ ತು ಕಾಮೇನ ಯ ಇಂದ್ರಿಯಸುಖೇ ರತಃ ।
ವ್ರತಚಾರೀ ಸದೈವೈಷ ಯ ಇಂದ್ರಿಯಜಯೇ ರತಃ ॥
ಅಪೇತವ್ರತಕರ್ಮಾ ತು ಕೇವಲಂ ಬ್ರಹ್ಮಣಿ ಸ್ಥಿತಃ ।
ಬ್ರಹ್ಮಭೂತಶ್ಚರನ್ ಲೋಕೇ ಬ್ರಹ್ಮಚಾರೀ ಭವತ್ಯಯಮ್ ॥ - ೨೭/೧೪-೧೬

೫ ಬ್ರಹ್ಮೈವ ಸಮಿಧಸ್ತಸ್ಯ ಬ್ರಹ್ಮಾಗ್ನಿರ್ಬ್ರಹ್ಮಸಂಸ್ತರಃ ।
ಆಪೋ ಬ್ರಹ್ಮ ಗುರುರ್ಬ್ರಹ್ಮ ಸ ಬ್ರಹ್ಮಣಿ ಸಮಾಹಿತಃ ॥ - ೨೭/೧೭

## ೨೮ನೇ ಅಧ್ಯಾಯದಲ್ಲಿ

ಬ್ರಾಹ್ಮಣನು ತನ್ನ ಪತ್ನಿಗೆ ಸಂಸಾರಾರಣ್ಯವನ್ನು ದಾಟಿ ಮೋಕ್ಷವೆಂಬ ಮಹದ್ವನವನ್ನು ಪ್ರವೇಶಿಸಿರುವುದಾಗಿಯೂ, ಅಲ್ಲಿಯ ವೈಚಿತ್ರ್ಯ, ವೈಶಿಷ್ಟ್ಯಗಳನ್ನು **ರೂಪಕಾಲಂಕಾರದಲ್ಲಿಯೇ ವರ್ಣಿಸಲಾಗಿದೆ.** ಇದೊಂದು ಅಪೂರ್ವವಾದ **ಕಾವ್ಯಮಯವಾದ ಮುಕ್ತಿಯ ವರ್ಣನೆ.** ಸ್ವಾಭಾವಿಕವಾಗಿ ಅದ್ವೈತದ ಐಕಾತ್ಮ್ಯದ ಸೋರಿಕೆ ಇಲ್ಲದ, ಜೀವಬ್ರಹ್ಮವೇದಪರವಾದ ಬ್ರಹ್ಮವನವಾಗಿದೆ. ಮೊದಲು ಸಂಸಾರ ರೂಪ ಅರಣ್ಯವನ್ನು ವರ್ಣಿಸಲಾಗಿದೆ.[೧] ಇದನ್ನು ಕೇಳಿದ ಬ್ರಾಹ್ಮಣಿಯು ಮೋಕ್ಷಮಹದ್ವನವನ್ನು ಕೇಳಿದಾಗ ಬ್ರಾಹ್ಮಣನು ವರ್ಣಿಸುತ್ತಾನೆ.

೧. ಮೋಕ್ಷವೆಂಬ ವನವು ಜೀವಬ್ರಹ್ಮರಿಗೆ ಭೇದವನ್ನು ಒಪ್ಪಿದ ಮಂದನಿಗೂ ಸಿಗದು. ಸುಖವೂ ಸಿಗದು.

೨. ಭೇದದಲ್ಲಿ ಸ್ಥಿರಜ್ಞಾನವಿಲ್ಲದಿರುವ ಮಂದಜ್ಞಾನಿಗೂ, ನಿತ್ಯಸಂಸಾರಿಗೂ ಮೋಕ್ಷ ಸಿಗದು.

೩. ಇನ್ನು ಐಕ್ಯಜ್ಞಾನಿಗಂತೂ ಮೋಕ್ಷವು ಬಹುದೂರ.

೪. ಪರಬ್ರಹ್ಮಾಸಕ್ತರಿಗೆ ದುಃಖವಿಲ್ಲ, ಯಾವಾಗಲೂ ಸಂತೋಷ. ಅವರಿಗೆ ಪ್ರಾಣಿಗಳ ಭಯವಿಲ್ಲ, ಅವರಿಂದಲೂ ಯಾವ ಪ್ರಾಣಿಗಳಿಗೂ ಭಯವಿಲ್ಲ, ಮೋಕ್ಷದಲ್ಲಿ ಪ್ರವೇಶಿಸಿದವರು ಎಂದು ಬಹುವಚನ ಪ್ರಯೋಗವೇ ಜೀವಬ್ರಹ್ಮೈಕ್ಯವನ್ನು ನಿರಾಕರಿಸುತ್ತದೆ.[೨]

೫. ಆ ವನದಲ್ಲಿರುವ ಸಪ್ತಮಹಾವೃಕ್ಷಗಳು, ಫಲಗಳು, ಆಶ್ರಮಗಳು, ಸಮಾಧಿಗಳು, ಪಂಚಪರ್ವಗಳ ವರ್ಣನೆಯಿದೆ.

ಇತ್ಯಾದಿ...

## ೨೯ನೇ ಅಧ್ಯಾಯ

ಈ ಅಧ್ಯಾಯದಲ್ಲಿ ಬ್ರಾಹ್ಮಣನು ಹೇಳಿದ ಯತಿ ಹಾಗೂ ಅಧ್ವರ್ಯುಗಳೊಡನೆ ನಡೆದ ಯಾಗೀಯ ಹಿಂಸೆಯು ಅಧರ್ಮವಾಗುವುದಿಲ್ಲವೆಂಬ ವಿಷಯವನ್ನು ಶ್ರೀಕೃಷ್ಣನು ಅನುವಾದ ಮಾಡುತ್ತಾನೆ.

---

೧ ನೈದಸ್ತಿ ಪೃಥಗ್ಭಾವೇ ಮಂದಸ್ಯ ಚ ತತಃ ಸುಖಮ್ ।
ನ ತದಸ್ತ್ಯಪೃಥಗ್ಭಾವೇ ಕಿಂಚಿದ್ ದೂರತರಂ ತತಃ ।
ತಸ್ಮಾದ್ ಹ್ರಸ್ವತರಂ ನಾಸ್ತಿ ತತೋऽನ್ಯದ್ ಬೃಹತ್ತರಮ್ ॥
ನಾಸ್ತಿ ತಸ್ಮಾದ್ ದುಃಖತರಂ ನಾಸ್ತ್ಯನ್ಯತ್ ತತ್ಸಮಂ ಸುಖಮ್ ॥ - ೨೮/೪-೬

೨ ನ ತತ್ರಾವಿಶ್ಯ ಶೋಚಂತಿ ನ ಪ್ರಹೃಷ್ಯಂತಿ ಚ ದ್ವಿಜಾಃ ।
ನ ಚ ಬಿಭ್ಯತಿ ಕೇಭ್ಯಶ್ಚಿನ್ನೈಭ್ಯೋ ಬಿಭ್ಯತಿ ಕೇಚನ ॥ - ೨೮/೭

**ಪ್ರೋಕ್ಷ್ಯಮಾಣಂ ಪಶುಂ ದೃಷ್ಟ್ವಾ ಯಜ್ಞಕರ್ಮಣ್ಯಥಾಬ್ರವೀತ್ ।**
**ಯತಿರಧ್ವರ್ಯುಮಾಸೀನೋ ಹಿಂಸೇಯಮಿತಿ ಕುತ್ಸಯನ್ ॥**
**ತಮಧ್ವರ್ಯುಃ ಪ್ರತ್ಯುವಾಚ ನಾಯಂ ಛಾಗೋ ವಿನಶ್ಯತಿ ।**
**ಶ್ರೇಯಸಾ ಯೋಕ್ಷ್ಯತೇ ಜಂತುಃ ಯಜ್ಞಸ್ಸ್ತುತಿರಿಯಂ ತಥಾ ॥** - ೨೯/೭,೮

ಒಂದು ಯಜ್ಞದಲ್ಲಿ ಯಜ್ಞಪಶುವನ್ನು ವಧಿಸುತ್ತಿರುವುದನ್ನು ಕಂಡು ಅಲ್ಲಿಯೇ ಕುಳಿತಿದ್ದ ಯತಿಯು ಆ ಕಾರ್ಯವನ್ನು ಧಿಕ್ಕರಿಸುತ್ತಾನೆ. ಇದು ಹಿಂಸಾಕರ್ಮವಾಗಿದೆ, ಇದನ್ನು ಮಾಡಬಾರದು ಎಂದು. ಆದಕ್ಕೆ ಅಧ್ವರ್ಯು 'ಈ ಯಜ್ಞದಲ್ಲಿ ವಧಿಸುವ ಈ ಪಶುವು ಆಡು, ವಿನಾಶ ಹೊಂದುವುದಿಲ್ಲ, ವೇದವಾಕ್ಯಗಳು ಸತ್ಯವಾಗಿದ್ದಲ್ಲಿ ಇದು ಶ್ರೇಯಸ್ಸನ್ನೇ ಹೊಂದುತ್ತದೆ.

ಪ್ರಮಾಣಶ್ರುತಿ ಹೀಗಿದೆ : 'ಪಶುರ್ವೈ ನಿಯಾಮಾನಃ ಸ ಮೃತ್ಯುಂ ಪ್ರಾಪಶ್ಯತ್ ಸ ದೇವಾನ್ನಾನ್ವಕಾಮಯತ ಏತು ತಂ ದೇವಾ ಅಬ್ರುವನ್ ಏ ಹಿ ಸ್ವರ್ಗಂ ವೈ ತ್ವಾ ಲೋಕಂ ಗಮಿಷ್ಯಾಮಃ ॥ - ೫/೭/೮೦

ಈ ಇತಿಹಾಸದ ಅನುವಾದವು ಪೂರ್ವಾಮೀಮಾಂಸಾ ಪ್ರತಿಕ್ರಿಯೆಗೆ ವೇದಾಂತದ ಉತ್ತರರೂಪವಾಗಿದೆ.

ಅಧ್ವರ್ಯುವಿನ ಉತ್ತರದಿಂದ ತೃಪ್ತನಾದ ಯತಿಯು ಮೌನದಿಂದ ಇದ್ದನು (ವಿವಾದ ವಿಷಯವನ್ನು ಒಪ್ಪಿದನೆಂದು ಈ ಅಧ್ಯಾಯ ಹೇಳುತ್ತದೆ).

## ೩೦-೩೧ ನೇ ಅಧ್ಯಾಯ

ಹಿಂಸೆಯ ಅನೌಚಿತ್ಯವನ್ನು ಪ್ರತಿಪಾದಿಸಲು ಬ್ರಾಹ್ಮಣನು ತನ್ನ ಪತ್ನಿಗೆ ಹೇಳಿದ ಪರಶುರಾಮದೇವರ ಚರಿತ್ರೆಯನ್ನು ಕೃಷ್ಣನು ಅನುವಾದಿಸುತ್ತಾನೆ.

ಹಿಂದೆ ಸಹಸ್ರಬಾಹುಗಳುಳ್ಳ ಸಮುದ್ರಾಂತ ಗಡಿಯ ರಾಜನಾದ ಕಾರ್ತವೀರ್ಯ ರಾಜನು ಸಮುದ್ರವನ್ನೇ ತನ್ನ ಬಲಮದ ಗರ್ವಿತನಾಗಿ ಬಾಣಗಳಿಂದ ಮುಚ್ಚಿದನು. ಸಮುದ್ರದ ಒಳಗೆ ಇದ್ದ ಪ್ರಾಣಿಗಳು ಸತ್ತವು. ಸಮುದ್ರರಾಜ ಕೈಮುಗಿದು ಕಾರ್ತವೀರ್ಯನನ್ನು ತನ್ನ ಮೇಲೆ ಬಾಣ ಪ್ರಯೋಗ ಮಾಡಬಾರದೆಂದೂ, ಸಮುದ್ರಜೀವಿಗಳಿಗೆ ಅಭಯ ನೀಡಲು ಬೇಡಿದನು.

ಅರ್ಜುನನು ತನ್ನೊಡನೆ ಸಂಗ್ರಾಮದಲ್ಲಿ ಯುದ್ಧಮಾಡುವ ಪ್ರತಿವೀರರನ್ನು ಸೂಚಿಸೆಂದು ಕೇಳಿದಾಗ ಸಮುದ್ರರಾಜನು ಜಮದಗ್ನಿಯ ಮಗ ಪರಶುರಾಮ ನಿನಗೆ ಸೂಕ್ತ ಆತಿಥ್ಯ ನೀಡುತ್ತಾನೆಂದು ಹೇಳಿದನು. ಕೂಡಲೇ ಕಾರ್ತವೀರ್ಯನು ಕೋಪದಿಂದ ಪರಶುರಾಮನನ್ನು ಸಂಧಿಸಿ, ಅವನನ್ನು ಕೆಣಕಿದ. ಉದ್ವೇಗಗೊಂಡ ರಾಮನು ತನ್ನ ತೇಜಸ್ಸಿನಿಂದ ನಂತರ ಕೊಡಲಿಯಿಂದ ಸಾವಿರ ಭುಜಗಳನ್ನು (ಅರ್ಜುನನನ್ನೂ) ಕತ್ತರಿಸಿ

ವಧಿಸಿದ. ಅವನು ಹತನಾಗಲು ಅವನ ಬಾಂಧವರು ಪರಶುರಾಮನನ್ನು ಸುತ್ತುವರಿದರು. ಅವರ ತಂದೆ ಜಮದಗ್ನಿಯನ್ನು ಕೆಲ ದರ್ಪಿಷ್ಟ ಕ್ಷತ್ರಿಯರು ಸಂಹರಿಸಿದರು. ಪರಶುರಾಮಗೆ ಹೆದರಿ ಓಡಿಹೋಗಿ ಗಿರಿದುರ್ಗಗಳನ್ನು ಆಶ್ರಯಿಸಿದರು. ಆದರೆ ಪರಶುರಾಮನು ಎಲ್ಲ ದುಷ್ಟಕ್ಷತ್ರಿಯರನ್ನು ಹುಡುಕಿ ಹುಡುಕಿ ೨೧ ಬಾರಿ ಭೂಪ್ರದಕ್ಷಿಣೆ ಮಾಡಿ ಸಂಹರಿಸಲು, ಕ್ಷತ್ರಿಯರು ಸ್ವಧರ್ಮ ತ್ಯಾಗ ಮಾಡಿ ಶೂದ್ರತ್ವವನ್ನು ಹೊಂದಿದರು. ದ್ರವಿಡ, ಪುಂಡ್ರ, ಶಬರದ ಸಹವಾಸದಿಂದ.

ನಂತರ ಬ್ರಾಹ್ಮಣರು ಕ್ಷತ್ರಿಯ ಸ್ತ್ರೀಯರಲ್ಲಿ ನಿಯೋಗ ಪದ್ಧತಿಯಿಂದ ಸಂತಾನ ಪಡೆದು ಕ್ಷತ್ರಿಯ ಸಂತಾನ ಮುಂದುವರಿಸಿದರು. ಆಗಲೇ ಮಧುರವಾದ ಅಶರೀರವಾಣಿ ಪರಶುರಾಮನನ್ನು 'ಕ್ಷತ್ರಿಯಸಂಹಾರ ಸಾಕು. ಅದರಿಂದ ನಿನಗೇನು ಪ್ರಯೋಜನ?' ಪರಶುರಾಮನ ಪಿತಾಮಹ ಋಚೀಕನೂ ಈ ಕಾರ್ಯದಿಂದ ವಿಮುಖನಾಗಲು ಹೇಳಿದನು. ಪಿತೃದೇವತೆಗಳೂ ಕ್ಷತ್ರಿಯಸಂಹಾರ ಬೇಡವೆಂದರು. ರಾಮನು ನಾನು ದುಷ್ಟರನ್ನು ಸಂಹರಿಸುತ್ತಿರುವೆ. ಅದನ್ನು ನಿಲ್ಲಿಸು ಎಂದು ಹೇಳುವುದು ಸರಿಯಲ್ಲ ಎಂದನು.

ಮತ್ತೆ ಪಿತೃಗಳು **ಅಲರ್ಕೋಪಾಖ್ಯಾನವನ್ನು** ಹೇಳಿ ಹಿಂಸೆಯನ್ನು ವಿರೋಧಿಸಿದರು. ರಾಜ ಅಲರ್ಕನು ಇಂದ್ರಿಯನಿಗ್ರಹಕ್ಕಾಗಿ, ಮನೋನಿಗ್ರಹಕ್ಕಾಗಿ ಅವುಗಳ ಮೇಲೆ ಬಾಣ ಬಿಡುವ ಬದಲಾಗಿ ತಪಸ್ಸನ್ನು ಮಾಡಲು ಬೋಧಿಸಿದರು.

## ಅಧ್ಯಾಯ ೩೨

ಬ್ರಾಹ್ಮಣನು ತನ್ನ ಪತ್ನಿಗೆ ಕಾಮ, ಕ್ರೋಧಗಳನ್ನು ಹಾಗೂ ಲೋಭವನ್ನು ಬಿಟ್ಟು ಭಗವಂತನ ಚಿಂತನೆಯನ್ನು ಮಾಡಬೇಕೆಂದು ಹೇಳುತ್ತಾನೆ.

ಬ್ರಾಹ್ಮಣನು ಲೋಕದಲ್ಲಿ ಸತ್ವ, ರಜಸ್ಸು, ತಮಸ್ಸುಗಳೆಂಬ ಮೂರುಗುಣಗಳಿಂದ ಉಂಟಾಗುವ ರಜೋಗುಣದ ಶೋಕ, ಕ್ರೋಧ, ದ್ವೇಷಭಾವ, ತಮೋಗುಣದ ನಿದ್ರೆ, ಆಲಸ್ಯ ಹಾಗೂ ಮೋಹಗಳೆಂಬ ಶತ್ರುಗಳಿವೆ. ಇವುಗಳನ್ನು ಜಯಿಸಲು ಸತ್ತ್ವಗುಣದ ಜ್ಞಾನವನ್ನು ಸಂಪಾದಿಸಬೇಕು. ಹೀಗೆ ಜಿತೇಂದ್ರಿಯನಾದ ಅಂಬರೀಷರಾಜನ 'ಗೀತೆ'ಯನ್ನು ಬ್ರಾಹ್ಮಣನು ಉದಾಹರಿಸಿದನು.[೧]

ರಾಜನು ತನ್ನ ದೋಷಗಳನ್ನು ತ್ಯಾಗಮಾಡಿ, ದೇಶದ ಅಪರಾಧಗಳನ್ನು ತಡೆಗಟ್ಟಿ ಸತ್ಪುರುಷರನ್ನು ಗೌರವಿಸಿ, ಸಿದ್ಧಿ ಪಡೆದನು. ಅಂಬರೀಷನ ಗಾಥಾ ಹೀಗಿದೆ. ನನ್ನಲ್ಲಿದ್ದ ಅನೇಕ

೧ ತ್ರಯೋಃ ವೈ ರಿಪವೋ ಲೋಕೇ ನವಧಾ ಗುಣತಃ ಸ್ಮೃತಾಃ।
ಹರ್ಷಃ ಸ್ತಂಭೋಽತಿಮಾನಶ್ಚತ್ರಯಸ್ತೇ ಸಾತ್ವಿಕಾ ಗುಣಾಃ॥
ಶೋಕಃ ಕ್ರೋಧಽಭಿಸಂರಂಭೋ ರಾಜಸಾಸ್ತೇ ಗುಣಾಃ ಸ್ಮೃತಾಃ।
ಸ್ವಪ್ನಸ್ತಂದ್ರೀ ಚ ಮೋಹಶ್ಚತ್ರಯಸ್ತೇ ತಾಮಸಾ ಗುಣಾಃ॥ - ೩೨/೧,೨

ದೋಷಗಳನ್ನು ದೂರ ಮಾಡಿದೆ. ಶತ್ರಗಳನ್ನು ಗೆದ್ದೆ ಇನ್ನೂ ನನ್ನಲ್ಲಿದ್ದ ದೋಷದಿಂದ ವೈರಾಗ್ಯ ಸಿಗದು. ಹೀಗಾಗಿ ನಾನು ಹೀನಕರ್ಮ ಮಾಡುತ್ತಿದ್ದೇನೆ. ಅದನ್ನು ತೀಕ್ಷ್ಣವಾದ ಜ್ಞಾನವೆಂಬ ಖಡ್ಗದಿಂದ ಕತ್ತರಿಸಿದರೆ, ಸುಖ.[೧] ಲೋಭದಿಂದ ಆಸೆ, ಅದರಿಂದ ಅದನ್ನು ಹೊಂದಲು ಚಿಂತೆ, ಆದರಿಂದ ಧನಕನಕಾದಿಗಳ ಅಪೇಕ್ಷೆ, ಹೀಗೆ ರಜೋಗುಣದ ವೃದ್ಧಿ ನಂತರ ಇದೇ ತಮೋಗುಣಕ್ಕೂ ಕಾರಣವಾಗುತ್ತದೆ.[೨] ಇದರಿಂದ ಸಂಸಾರದ ಬಂಧನ ತೀವ್ರವಾಗುತ್ತದೆ. ಮುಂದೆ ಪುನರ್ಜನ್ಮಗಳ ಪರಂಪರೆ, ಮರಣಗಳ ಚಕ್ರಬಂಧನ. ಆದ್ದರಿಂದ ಲೋಭವನ್ನು ನಿಗ್ರಹಿಸಿ ಭಗವಚ್ಚಿಂತನೆಯಲ್ಲಿ ಸಾಮ್ರಾಜ್ಯವನ್ನು ಕಟ್ಟಬೇಕು. ಅದೇ ನಿಜವಾದ ರಾಜ್ಯ.[೩]

ಸತ್ತ್ವಗುಣ - ಹರ್ಷ, ಸ್ತಂಭ, ಅತಿಮಾನ (ಅಹಂಕಾರ, ಜಗತ್ತಿನ ವಿಷಯ ಸುಖಗಳಲ್ಲಿಯೇ ಸಂತೋಷ, ಜಂಭ)
ರಜೋಗುಣ - ಶೋಕ, ಕ್ರೋದ, ಅತಿದ್ವೇಷ
ತಮೋಗುಣ - ಸ್ವಪ್ನ(ನಿದ್ರೆ), ಆಲಸ್ಯ, ಮೋಹ (ತಪ್ಪು ತಿಳುವಳಿಕೆ)

## ೩೩ನೇ ಅಧ್ಯಾಯ

ಬ್ರಾಹ್ಮಣನು ತನ್ನ ಪತ್ನಿಗೆ ಮಮತಾ ತ್ಯಾಗ ಮಾಡಲು ಬ್ರಾಹ್ಮಣ ಜನಕರ ಸಂವಾದವನ್ನು ಹೇಳಿದನು (ಜನಕನೊಂದಿಗೆ ಸಂವಾದ ಮಾಡಿದ ಬ್ರಾಹ್ಮಣನು ಬೇರೆ ಬ್ರಾಹ್ಮಣ).

ಜನಕನ ಆಸ್ಥಾನದಲ್ಲಿದ್ದ ಒಬ್ಬ ಬ್ರಾಹ್ಮಣನು ಮಾಡಿದ ಅಪರಾಧದಿಂದಾಗಿ ಸಿಕ್ಕುಬಿದ್ದಾಗ ರಾಜನು ನೀನು ನನ್ನ ದೇಶದಲ್ಲಿರಬಾರದು ಎಂದು ಆದೇಶಿಸಿದ (ಗಡಿಪಾರು ಮಾಡಿದ). ಆಗ ಬ್ರಾಹ್ಮಣನು ನಿನ್ನ ದೇಶದ ಗಡಿಗಳಾವುವು ಎಂದಾಗ ರಾಜನು ನಿರುತ್ತರನಾದ. ಕಾರಣ ತನ್ನ ಹಿಂದಿನವರಂತೆ ತಾನೂ ಈ ರಾಷ್ಟ್ರವನ್ನು ಬಿಟ್ಟೇ ಹೊರಡುವುದರಿಂದ ಆತನದು ಎಂಬುದು ಯಾವುದೂ ಇಲ್ಲ. ಇಡೀ ದೇಶ, ಭೂಮಿ, ಅತನ ಆಳ್ವಿಕೆಯಲ್ಲಿದ್ದರೂ ಆತನದು ಯಾವುದೂ ಇಲ್ಲ. ನನ್ನ ಹಿಂದೆ ಯಾವುದೂ ಬರುವುದಿಲ್ಲವೆಂದು ಆತ ಬಗೆದ. ಮಮತೆಯನ್ನು ಎಂದೋ ಆತ ಬಿಟ್ಟಿದ್ದನು. ಇದೇ ರಾಜ್ಯ ಬೇರೆ ಬೇರೆ ಕಾಲದಲ್ಲಿ ಬೇರೆಯವರದಾಗಿಯೂ ಇರುತ್ತದೆ. ಇದು ನನ್ನದೆಂದು ಹೇಗೆ ತಿಳಿಯಲಿ. ಆದ್ದರಿಂದ ನೀನು ಎಲ್ಲ ದೇಶಗಳಲ್ಲಿ ಎಷ್ಟು ಕಾಲ ಬೇಕೋ ಅಷ್ಟು ಕಾಲ ಸುಖಭೋಗಗಳನ್ನು ಅನುಭವಿಸು ಎಂದನು. ಜನಕರಾಜ ಬ್ರಾಹ್ಮಣನಿಗೆ. ಇದು ಈ ಬುದ್ಧಿ ಹೇಗೆ ಮಾಡಿದೆ? ಎಂದು ಬ್ರಾಹ್ಮಣ ಕೇಳಿದಾಗ-

---

೧ ಅಕಾರ್ಯಮಪಿ ಯೇನೇಹ ಪ್ರಯುಕ್ತಃ ಸೇವತೇ ನರಃ।
ತಂ ಲೋಭಮಸಿಭಿಸ್ತೀಕ್ಷ್ಣೈರ್ನಿಕೃತ್ಯ ಸುಖಮೇಧತೇ॥ - ೩೨/೯

೨ ತದವಾಪ್ತೌ ತು ಲಭತೇ ಭೂಯಿಷ್ಠಂ ತಾಮಸಾನ್ ಗುಣಾನ್॥ - ೩೨/೧೧

೩. ತಸ್ಮಾದೇನಂ ಸಮ್ಯಗವೇಕ್ಷ್ಯ ಲೋಭಂ ನಿಗೃಹ್ಯ ಧೃತ್ಯಾऽऽತ್ಮನಿ ರಾಜ್ಯಮಿಚ್ಛೇತ್।
ಏತದ್ ರಾಜ್ಯಂ ನಾನ್ಯದಸ್ತೀತಿ ವಿದ್ಯಾತ್ ಯಸ್ತ್ವೇನ ರಾಜ್ಞಾನಿಚಿತೋಽಮುಯ್ಯೈಕಃ॥ - ೩೨/೧೩

**ಕಸ್ಯೇದಮಿತಿ ಕಸ್ಯ ಸ್ವಮಿತಿ ವೇದವಚಃ ಸದಾ ।**
**ನಾಧ್ಯಗಚ್ಛಮಹಂ ಬುದ್ಧ್ಯಾ ಮಮೇದಮಿತಿ ಯದ್ಭವೇತ್ ॥**

– ಇದು ಯಾರ ಸ್ವತ್ತು? ಇದು ಯಾರ ಧನ ಎಂಬ ವೇದವಚನವಿದೆ. ಆದ್ದರಿಂದ ನಾನು ಬುದ್ಧಿಯಿಂದ (ವಿವೇಕದಿಂದ) ವಿಚಾರಿಸಲು ಇದು ನನ್ನದು ಎಂದು ಹೇಳಿಕೊಳ್ಳುವ ಯಾವ ಪದಾರ್ಥವು ನನಗೆ ತಿಳಿಯುತ್ತಿಲ್ಲ' ಎಂದನು ರಾಜ ಜನಕ.[೧]

ನಾನು ಆತ್ಮಸುಖಕ್ಕಾಗಿ ಮೂಸಿ ನೋಡುವುದಿಲ್ಲ, ರಸಾಸ್ವಾದನೆ ಮಾಡುವುದಿಲ್ಲ, ರೂಪಗಳನ್ನು ನೋಡುವುದಿಲ್ಲ. ಆದರೆ ನನ್ನ ಸಮಸ್ತ ಕಾರ್ಯಗಳು ದೇವ, ಪಿತೃ, ಭೂತ, ಅತಿಥಿಗಳ ಅಂತರ್ಯಾಮಿ ಭಗವಂತನ ಸಲುವಾಗಿ ಆರಂಭವಾಗುತ್ತದೆ, ಇಚ್ಛಿಸುತ್ತೇನೆ.[೨]

ಈ ಮಾತನ್ನು ಕೇಳಿ ನಕ್ಕ ಬ್ರಾಹ್ಮಣನು ನಾನು ನಿನ್ನ ಈ ಬುದ್ಧಿ ಪರೀಕ್ಷಿಸಲು ಆಗಮಿಸಿರುವ ಯಮಧರ್ಮನೆಂದು ತಿಳಿ ಎಂದನು.

## ೩೪ನೇ ಅಧ್ಯಾಯ

ಬ್ರಾಹ್ಮಣನು ತನ್ನ ಮಹಿಮೆ ಹೇಳುತ್ತಾನೆ.

೧. ಎಲೈ ಭೀರುವೇ! (ಭಯಸ್ವಭಾವದಳೇ!) ನಾನು ನೀನು ತಿಳಿದಂತೆ ಹೇಗೋ ತರ್ಕಿಸಲು ಆಗದು. ನಾನು ಬ್ರಾಹ್ಮಣ, ಮುಕ್ತ, ವನಸಂಚಾರಿ, ಗೃಹಸ್ಥ ಬ್ರಹ್ಮಚಾರಿಯೂ ಹೌದು. ನೀನು ನೋಡಿದಂತೆ ನಾನಿಲ್ಲ. ಈ ಜಗತ್ತೆಲ್ಲ ಏನೆಲ್ಲ ಇದೆ, ಅದೆಲ್ಲವನ್ನೂ ನಾನು ವ್ಯಾಪಿಸಿದ್ದೇನೆ.[೩]

೨. ನಾನು ಈ ಪ್ರಪಂಚದಲ್ಲಿರುವ ಸ್ಥಾವ ಜಂಗಮಾತ್ಮಕ ಪ್ರಪಂಚ ಎಲ್ಲರ ಒಳಗೆ ಇದ್ದೇನೆ ಎಂದು ತಿಳಿ.[೪]

೩. ಆದ್ದರಿಂದ ನನಗೆ ಪರಲೋಕಕೃತ ಭಯ ಯಾವುದೂ ಇಲ್ಲ. ನನ್ನಸ್ವರೂಪವನ್ನು ತಿಳಿದ ನೀನು ನನ್ನನ್ನು ಹೊಂದುತ್ತೀಯ.

---

೧ ಏತಾಂ ಬುದ್ಧಿಂ ವಿನಿಶ್ಚಿತ್ಯ ಮಮತ್ವಂ ವರ್ಜಿತಂ ಮಯಾ ।
ಶೃಣು ಬುದ್ಧಿಂ ತು ಯಾಂ ಶ್ರುತ್ವಾ ಸರ್ವಸ್ತು ವಿಷಯೋ ಮಮ ॥ – ೩೩/೧೮

೨ ನಾಹಮಾತ್ಮಾರ್ಥಮಿಚ್ಛಾಮಿ ..... – ೩೩/೧೯
ದೇವೇಭ್ಯಶ್ಚ ಪಿತೃಭ್ಯಶ್ಚ ಭೂತೇಭ್ಯೋಽತಿಥಿಭಿಃ ಸಹ ।
ಭುಕ್ತ್ಯರ್ಥಂ ಸರ್ವ ಏವೇಮೇ ಸಮಾರಂಭಾ ಭವಂತಿ ವೈ ॥ – ೩೩/೨೫

೩ ನಾಹಂ ತಥಾ ಭೀರು ಚರಾಮಿ ಲೋಕೇ ಯಥಾ ತ್ವಂ ಮಾಂ ತರ್ಕಯಸೇ ಸ್ವಬುದ್ಧ್ಯಾ ।
ವಿಪ್ರೋಽಸ್ಮಿ ಮುಕ್ತೋಽಸ್ಮಿ ವನೇಚರೋಽಸ್ಮಿ ಗೃಹಸ್ಥಧರ್ಮಾ ಬ್ರಹ್ಮಚಾರೀ ತಥಾಽಸ್ಮಿ ॥
ನಾಹಮಸ್ಮಿ ಯಥಾ ಮಾಂ ತ್ವಮೀಕ್ಷಸೇ ಚಕ್ಷುಷಾ ಶುಭೇ ।
ಮಯಾ ವ್ಯಾಪ್ತಮಿದಂ ಸರ್ವಂ ಯತ್ ಕಿಂಚಿಜ್ಜಗತೀಗತಮ್ ॥ – ೩೪/೧,೨

೪ ಯೇ ಕೇಚಿದಿಹ ವೈ ಲೋಕೇ ಜಂಗಮಾಃ ಸ್ಥಾವರಾಶ್ಚ ಹ ।
ತೇಷಾಮಂತರ್ಗತಂ ವಿದ್ಧಿ ದಾರೂಣಾಮಿವ ಪಾವಕಮ್ ॥ – ೩೪/೩

**ತಸ್ಮಾನ್ಮೇ ಸುಭಗೇ ನಾಸ್ತಿ ಪರಲೋಕಕೃತಂ ಭಯಮ್ ।**
**ಮದ್ಭಾವಭಾವನಿರತಾ ಮಮೈವಾತ್ಮಾನಮೇಷ್ಯತಿ ॥** - ೩೪/೯

## ೩೫ನೇ ಅಧ್ಯಾಯ

ಬ್ರಾಹ್ಮಣ-ಬ್ರಾಹ್ಮಣಿ ಶಬ್ದಗಳಿಂದ ಅಭಿಪ್ರೇತರಾದವರು ಯಾರು ಎಂಬುದನ್ನು ತಿಳಿಸಿದ **ಬ್ರಾಹ್ಮಣನು ತಾನೇ ಎಂದು ಕೃಷ್ಣನು ಅರ್ಜುನನಿಗೆ ಹೇಳುತ್ತಾನೆ.**

ಬ್ರಾಹ್ಮಣಿಯು ಅಲ್ಪಬುದ್ಧಿಯಳಾದ ನಾನು ಬ್ರಹ್ಮಜ್ಞಾನವನ್ನು ಗ್ರಹಿಸಲಾರೆ. ಇದಕ್ಕಾಗಿ ಉಪಾಯ ಹೇಳು? ಎಂದಾಗ ಬ್ರಾಹ್ಮಣನು ನಿನ್ನ ಬುದ್ಧಿಯನ್ನು ಕೆಳಗಿನ ಅರಣಿ ಎಂದು ಭಾವಿಸು. ಎಂದರೆ ನನ್ನ ಬಳಿ ಶಿಷ್ಯತ್ವ ವಹಿಸು. ನನ್ನನ್ನು ಮೇಲಿನ ಅರಣಿಯನ್ನಾಗಿ ತಿಳಿ. ಇವುಗಳ ಮಥನದಿಂದ ತಪಸ್ಸು ವೇದಾಂತಪಠನ (ಶ್ರವಣ) ಬ್ರಹ್ಮಜ್ಞಾನವೆಂಬ ಅಗ್ನಿ ಉತ್ಪಾದನೆಯಾಗುತ್ತದೆ. ಕ್ಷೇತ್ರಜ್ಞನೆಂದು ತಿಳಿಯಲಾಗುವ ಪರಬ್ರಹ್ಮನನ್ನು ಯಾವ ಲಕ್ಷಣದಿಂದ ಗ್ರಹಿಸಬೇಕು? ಅದನ್ನು ತಿಳಿಯುವ ಗುಣಪೂರ್ಣನಾದ ಬ್ರಹ್ಮನಿಗೆ ನಿರ್ದಿಷ್ಟಕಾರಣವೆಂಬುದು ಇಲ್ಲ. ಆದರೆ ಅವನನ್ನು ಹೇಗೆ ಗ್ರಹಿಸಬಹುದೆಂಬುದಕ್ಕೆ ಉಪಾಯ ಹೇಳುತ್ತೇನೆ. ಬ್ರಹ್ಮನ ಸ್ವರೂಪವನ್ನು ಗುರೂಪದೇಶದಿಂದ, ಸಂಸ್ಕಾರಗಳಿಂದ ತಿಳಿಯಬಹುದು. ದುಃಖಿಗಳು ಪುಷ್ಪರಸವನ್ನು ವಾಸನೆಯಿಂದ ಗ್ರಹಿಸುವಂತೆ, ಮೋಕ್ಷೋಪಾಯ ಸಾಧನಗಳಲ್ಲಿ ವಿಧಿನಿಷೇಧಗಳನ್ನು ಹೀಗೆ ಎಂದು ಹೇಳುವುದಿಲ್ಲ. ಪರಮಾತ್ಮನ ನಿರಂತರ ಶ್ರವಣದಿಂದ ಬುದ್ಧಿ ಪರಮಾತ್ಮನಲ್ಲಿ ಹೋಗುತ್ತದೆ. ಭಗವಂತನ ಪ್ರಕಟ, ಅಪ್ರಕಟವಾದ ನೂರಾರು, ಸಾವಿರಾರು ರೂಪಗಳನ್ನು ಬುದ್ಧಿಯಿಂದ ಮನನ ಮಾಡಬೇಕು. ಪರಬ್ರಹ್ಮಜ್ಞಾನಕ್ಕೆ ಲಭ್ಯವಿರುವ ಎಲ್ಲ ಪ್ರತ್ಯಕ್ಷ ಹಾಗೂ ಯುಕ್ತಿಗಳನ್ನು ಬಳಸಿಕೊಳ್ಳಬೇಕು.

ಬ್ರಾಹ್ಮಣನು ಹೀಗೆ ಹೇಳಲು ಬ್ರಾಹ್ಮಣಿಯು ಕ್ಷೇತ್ರಜ್ಞನಾದ ಪರಮಾತ್ಮನಲ್ಲಿ ತನ್ನ ಬುದ್ಧಿಯನ್ನು ಸ್ಥಿರಗೊಳಿಸಿದಳು. ಕ್ಷೇತ್ರಜ್ಞನಾದ ಪರಮಾತ್ಮನಿಂದಲೇ ತಾನು ನಿಯಮ್ಯಳು ಎಂದು ಆಕೆಗೆ ನಿಶ್ಚಯಜ್ಞಾನ ಉಂಟಾಯಿತು ಎಂದು ಶ್ರೀಕೃಷ್ಣನು ಹೇಳಿದಾಗ ಅರ್ಜುನನು ಈ ಬ್ರಾಹ್ಮಣ, ಬ್ರಾಹ್ಮಣೀ ಯಾರೆಂದು ಕೇಳಿದನು.

ಅದಕ್ಕೆ ಶ್ರೀಕೃಷ್ಣನು ಬ್ರಾಹ್ಮಣನು ತಾನೇ ಎಂದೂ, ಬ್ರಾಹ್ಮಣಿಯು ತನ್ನ ಬುದ್ಧಿ ಎಂದೂ, ಕ್ಷೇತ್ರಜ್ಞನೂ ತಾನೇ ಎಂದೂ ಹೇಳಿದನು.

## ೩೬ನೇ ಅಧ್ಯಾಯ

ಅರ್ಜುನನು ಶ್ರೀಕೃಷ್ಣನನ್ನು ಪ್ರಶ್ನಿಸುತ್ತಾನೆ -

ಸೂಕ್ಷ್ಮವಾದ ಪರಬ್ರಹ್ಮನ ಸ್ವರೂಪ ತಿಳಿಯಲು ನನ್ನ ಬುದ್ಧಿಯು ಇಚ್ಛಿಸುತ್ತದೆ. ಅದನ್ನು ದಯವಿಟ್ಟು ಹೇಳೆಂದಾಗ ಕೃಷ್ಣನು ಈ ಬಗ್ಗೆ ಮೇಧಾವಿ ಶಿಷ್ಯ ಹಾಗೂ ಗುರುಗಳ ಮೋಕ್ಷವಿಷಯಕ ಸಂವಾದರೂಪ ಇತಿಹಾಸವನ್ನು ಹೇಳಿದನು.

ಮೇಧಾವಿಯಾದ ಶಿಷ್ಯನೊಬ್ಬನು ವ್ರತನಿಷ್ಠನಾದ, ಬ್ರಾಹ್ಮಣ, ಆಚಾರ್ಯನನ್ನು ಸಮೀಪಿಸಿ, ಶರಣಾಗತನಾಗಿ, ಸಾಷ್ಟಾಂಗವೆರಗಿ, ನಿಃಶ್ರೇಯಸ ಮೋಕ್ಷದ ಬಗ್ಗೆ ತಿಳಿದುಕೊಳ್ಳಲು ಉತ್ಸುಕನಾದ ನನಗೆ ಶ್ರೇಯಸ್ಸಿನ ಬಗ್ಗೆ ತಿಳಿಸಿರಿ ಎಂದನು.

**ಗುರು** : ಯಾವ ವಿಷಯದಲ್ಲಿ ಸಂಶಯವಿದೆ ಹೇಳು.

**ಶಿಷ್ಯ** : ನಾನು ಎಲ್ಲಿಂದ ಬಂದೆ? ನೀವು ಎಲ್ಲಿಂದ ಬಂದಿರಿ? ಜಗತ್ತಿನಲ್ಲಿರುವ ಚರಾಚರ ಪ್ರಾಣಿಗಳು ಯಾರಿಂದ ಜನಿಸಿದವು? ಯಾರನ್ನು ಆಶ್ರಯಿಸಿ ಜೀವಿಸುತ್ತಿವೆ? ಅವುಗಳ ಆಯಸ್ಸೆಷ್ಟು? ಸತ್ಯ, ತಪಸ್ಸು ಎಂದರೇನು? ಸಜ್ಜನರ ಗುಣಗಳಾವುವು? (ಸಜ್ಜನರಿಂದ ಪ್ರಶಂಸಿಸಲ್ಪಡುವ ಗುಣಗಳಾವುವು?) ಮಂಗಳಕರವಾದ ಮಾರ್ಗಗಳು ಯಾವುವು? ಸುಖವೆಂದರೇನು? ಪಾಪ ಎಂದರೇನು? ಈ ಪ್ರಶ್ನೆಗಳಿಗೆ ಸರಿಯಾದ (ಯಥಾವತ್ತಾದ) ಉತ್ತರ ಹೇಳಿರಿ.

ವಿನೀತವಾಗಿ, ಯಥೋಚಿತವಾಗಿ, ಗುಣಿಯಾದ, ಭಗವಂತನಲ್ಲಿ ಮನಸ್ಸಿರುವ, ಪ್ರಿಯವಾದ ನಡೆಯುಳ್ಳ, ಜಿತೇಂದ್ರಿಯನಾದ, ಗುರ್ವಾಜ್ಞಾ ಪರಿಪಾಲಕನಾದ, ಶಿಷ್ಯನ ಎಲ್ಲ ಪ್ರಶ್ನೆಗಳಿಗೆ ಗುರುಗಳು ಉತ್ತರಿಸಿದರು.

**ಗುರು**: ನಾನು ಹೇಳುವುದೆಲ್ಲ ವೇದೋಕ್ತ (ಬ್ರಹ್ಮಪ್ರೋಕ್ತ)ವಾದುದು. ಋಷಿಶ್ರೇಷ್ಠರು ಅನುಸರಿಸಿದ್ದು. ವೇದವಿದ್ಯೆಗಳಲ್ಲಿರುವುದು. ಯಥಾರ್ಥವಾದುದೂ ಕೂಡಾ. ಹಿಂದೆ, ಇಂದು, ಮುಂದಿನ ಧರ್ಮಕಾಮಾರ್ಥಗಳನ್ನು ನಿಶ್ಚಯಿಸುವಂತಹುದು (ತ್ರಿಕಾಲೋಪಯೋಗಿ ನಿರ್ಣಯ). ಸಾಧ್ಯವನ್ನು ಪಡೆದ ಸಿದ್ಧರಿಂದ ತಿಳಿಯಲ್ಪಟ್ಟಿದ್ದು, ಸನಾತನವೂ ಆದುದು. ನಿನಗೆ ಜ್ಞಾನಿಗಳ ಬುದ್ಧಿಗೆ ಸಿದ್ಧವಾದುದು. ಹಿಂದೆ ಋಷಿಗಳೆಲ್ಲ ಜಿಜ್ಞಾಸಿಸಿ (ಪರಸ್ಪರ ಚರ್ಚಿಸಿ) ತಿಳಿದುದು. ಇಂತಹ ಜ್ಞಾನವನ್ನು ನಿನಗೆ ಹೇಳುತ್ತೇನೆ. ಜಿಜ್ಞಾಸೆ ಮಾಡಿದ ಜ್ಞಾನಿಗಳು ಯಾರೆಂದರೆ ಬೃಹಸ್ಪತಿ, ಭಾರದ್ವಾಜ, ಗೌತಮ, ಶುಕ್ರ, ವಸಿಷ್ಠ ಕಶ್ಯಪ, ವಿಶ್ವಾಮಿತ್ರರೇ ಮೊದಲಾದವರು ತಮ್ಮ ಅನುಷ್ಠಾನಗಳಿಂದ ಆಯಾಗೊಂಡವರು.

ಇವರೆಲ್ಲ ನಿರ್ಣಯಕ್ಕೆ ಬರಲಾರದೇ ವೃದ್ಧರಾದ ಆಂಗಿರಸಮುನಿಯನ್ನು ಮುಂದಿಟ್ಟುಕೊಂಡು ಬ್ರಹ್ಮನನ್ನು ಕಂಡರು. ಅವರು ಬ್ರಹ್ಮನನ್ನು 'ಯಾವ ಕರ್ಮಗಳನ್ನು ಮಾಡಿದರೆ ಒಳ್ಳೆಯದಾಗುತ್ತದೆ? ಪಾಪಗಳಿಂದ ಮೋಚನವಾಗುತ್ತದೆ? ಅಂತಹ ಕರ್ಮ ಯಾವುದು? ನಮಗೆ ಯಾವ ಮಾರ್ಗಗಳು ಕಲ್ಯಾಣಕಾರಕಗಳು? ಸತ್ಯ, ಪಾಪ ಎಂದರೇನು? ಕರ್ಮಗಳ ಎರಡು ಮಾರ್ಗಗಳಾವುವು? ಯಾವುದರಿಂದ ಮಹತ್ತ್ವ ಹೊಂದುತ್ತಾನೆ? ನರಕ, ಮೋಕ್ಷ ಎಂದರೇನು? (ಯಾವುದರಿಂದ ಇವು ಬರುತ್ತವೆ?) ಪ್ರಾಣಿಗಳ ಹುಟ್ಟು-ಸಾವುಗಳು ಹೇಗೆ – ಯಾರಿಂದ ಆಗುತ್ತವೆ?

ಈ ರೀತಿಯಾಗಿ ಪ್ರಶ್ನಿಸಿದಾಗ ಬ್ರಹ್ಮನು ಕೊಟ್ಟ ಉತ್ತರಗಳು ನಿನಗೆ ಹೇಳುತ್ತೇನೆ ಎಂದು ಗುರುಗಳು ಶಿಷ್ಯನಿಗೆ ಹೇಳಿದರು.

ಬ್ರಹ್ಮ ಉವಾಚ

ಚರಾಚರ ಪ್ರಾಣಿಪ್ರಪಂಚವೆಲ್ಲ ಸತ್ಯದಿಂದ (ನಾರಾಯಣನಿಂದ) ಹುಟ್ಟಿದವು. ಅವನ ತಪೋರೂಪಕರ್ಮಗಳಿಂದ ಜೀವಿಸುತ್ತವೆ. ಅವುಗಳ ಜೀವಿತ ಬದುಕಿಗೆ ಅವನೇ ಕಾರಣ. ಅವನನ್ನು ಮರೆತಾಗ ಮತ್ತೆ ಮತ್ತೆ ಜನನ-ಮರಣ ಚಕ್ರದಲ್ಲಿ ತಿರುಗುತ್ತವೆ ಪ್ರಾಣಿಗಳು.

ಸತ್ಯವೆಂಬುದು ಐದು ಲಕ್ಷಣಗಳಿಂದ ಕೂಡಿದ್ದಾಗಿದೆ. ಬ್ರಹ್ಮಸತ್ಯ, ತಪಸ್ಸೂ ಸತ್ಯ, ಚತುರ್ಮುಖಬ್ರಹ್ಮನೂ ಸತ್ಯ, ಸತ್ಯದಿಂದಲೇ ಎಲ್ಲ ಪ್ರಾಣಿಗಳು ಹುಟ್ಟುತ್ತವೆ. ಈ ಭೌತಿಕ ಮಹಾಜಗತ್ತು ಸತ್ಯವೇ ಆಗಿದೆ. ಆದ್ದರಿಂದ ಯೋಗಪರಾಯಣರಾದ ಬ್ರಾಹ್ಮಣರು ಸತ್ಯವನ್ನು ಆಶ್ರಯಿಸಿದವರಾಗಿದ್ದಾರೆ. ಅವರು ಕ್ರೋಧ, ಪಾಪಗಳಿಂದ ದೂರರೂ, ನಿಯಮಪಾಲಕರೂ, ಧರ್ಮಸೇತುಗೂ ಆಗಿದ್ದಾರೆ. ಅಧರ್ಮಾನುಷ್ಠಾನ ಪರರೂ ಆಗಿದ್ದಾರೆ. ಹಾಗೆಯೇ ಚತುರ್ವರ್ಣ ಹಾಗೂ ಆಶ್ರಮಗಳಿಗೆ ಸಂಬಂಧಿಸಿದಂತೆ ನಾಲ್ಕು ವಿದ್ಯೆಗಳನ್ನು ವಿವರಿಸುತ್ತೇನೆ.

ಬ್ರಹ್ಮಚರ್ಯ, ಗೃಹಸ್ಥ ವಾನಪ್ರಸ್ಥ ಸನ್ಯಾಸ ಇವು ನಾಲ್ಕು ಆಶ್ರಮಗಳು. ಸನ್ಯಾಸಾಶ್ರಮವು ಆಧ್ಯಾತ್ಮಿಕವೂ ಆಗಿದೆ. ಬ್ರಹ್ಮಚರ್ಯ ಹಾಗೂ ಸನ್ಯಾಸ ಆಶ್ರಮಗಳು ಶ್ರೇಷ್ಠಗತಿಗಳಾಗಿವೆ. ಪರಬ್ರಹ್ಮನ ಜ್ಞಾನವು ಎಲ್ಲಿಯವರೆಗೆ ಆಗುವುದಿಲ್ಲವೋ, ಅಲ್ಲಿಯವರೆಗೆ ಜ್ಯೋತಿ, ಆಕಾಶ, ಆದಿತ್ಯ, ವಾಯು, ಇಂದ್ರ, ಪ್ರಜಾಪತಿಗಳ ನಿಜರೂಪ ತಿಳಿಯುವುದಿಲ್ಲ, ಬ್ರಹ್ಮಜ್ಞಾನದಿಂದಲೇ ಇವುಗಳ ಜ್ಞಾನ ಲಾಭ.

ವಾನಪಸ್ರಸ್ಥಾಶ್ರಮವು ಕಾಡಿನಲ್ಲಿದ್ದು ಗಡ್ಡೆ-ಗೆಣಸು, ಫಲ ತಿಂಗು ಬದುಕುವ ಮುನಿಗಳಿಗೆ ವಿಹಿತ. ಬ್ರಾಹ್ಮಣ ಕ್ಷತ್ರಿಯ, ವೈಶ್ಯ - ದ್ವಿಜಾತಿಯವರಿಗೆ ವಾನಪಸ್ಥಾಶ್ರಮ ವಿಹಿತ. ನಾಲ್ಕು ವರ್ಣದವರಿಗೂ ಗೃಹಸ್ಥಾಶ್ರಮ ವಿಹಿತ.

ನಿಷ್ಠಾವಂತನಾದ, ವಿರಕ್ತನಾದ, ಯತಿಯೇ ಬ್ರಹ್ಮದರ್ಶನಕ್ಕೆ ಅರ್ಹ. ಜ್ಞಾನಿಗಳು ಶ್ರದ್ಧೆಯೇ ಧರ್ಮದ ಲಕ್ಷಣವೆನ್ನುತ್ತಾರೆ. ಮೋಕ್ಷಕ್ಕೆ ದೇವಯಾನ ಸಹಿತವಾದ ದಾರಿಗಳೆಲ್ಲ ಮಾರ್ಗಗಳಾಗಿವೆ.

ಅವ್ಯಕ್ತ, ಮಹತ್ತತ್ವ, ಅಹಂಕಾರ, ಹನ್ನೊಂದು ಇಂದ್ರಿಯಗಳು, ಪಂಚಭೂತ ತನ್ಮಾತ್ರಗಳು ಇವೆಲ್ಲ ಸನಾತನ ಸೃಷ್ಟಿಗಳೆಲ್ಲ ಸೇರಿ ೨೪ ತತ್ತ್ವಗಳಾಗುತ್ತವೆ. ಜೀವನೂ ಸೇರಿದಾಗ ೨೫ ತತ್ತ್ವಗಳಾಗುತ್ತವೆ. ಈ ಎಲ್ಲ ತತ್ತ್ವಗಳ ಸೃಷ್ಟಿ ಲಯಗಳನ್ನು ಚೆನ್ನಾಗಿ ಬಲ್ಲವನೇ ಪ್ರಾಣಿ ಪ್ರಪಂಚದಲ್ಲಿ ನಿಜವಾಗಿ ಧೀರನೆನಿಸುತ್ತಾನೆ. ಅವನಿಗೆ ಎಂದೂ ಮೋಹ(ಮಿಥ್ಯಾಜ್ಞಾನ) ವುಂಟಾಗುವುದಿಲ್ಲ.

ಯಾರು ಈ ತತ್ತ್ವಗಳನ್ನು ಸರಿಯಾಗಿ ತಿಳಿಯುತ್ತಾರೋ, ಗುಣಗಳನ್ನು ಅವುಗಳ ಅಭಿಮಾನಿಗಳನ್ನು ತಿಳಿಯುತ್ತಾರೋ, ಅವನು ಎಲ್ಲ ಪಾಪಗಳನ್ನು ಕಳೆದುಕೊಂಡು,

ಸಂಸಾರಬಂಧನದಿಂದ ಮೋಚನ ಹೊಂದಿ ಪವಿತ್ರವಾದ ಎಲ್ಲಾ ಲೋಕಗಳನ್ನು ಹೊಂದಿ ಸುಖ ಪಡುತ್ತಾನೆ.

## ३೭ನೇ ಅಧ್ಯಾಯ

ಗುರು-ಶಿಷ್ಯರ ಸಂವಾದದಲ್ಲಿ ಕಶ್ಯಪಾದಿ ಋಷಿಗಳ ಪ್ರಶ್ನೆಗಳಿಗೆ ಬ್ರಹ್ಮದೇವರ ಉತ್ತರಗಳು ಮುಂದುವರೆದಿವೆ. ಇಲ್ಲಿ ಅವ್ಯಕ್ತತತ್ತ್ವದಿಂದ ಅಭಿವ್ಯಕ್ತವಾಗುವ ಸತ್ತ್ವರಜಸ್ತಮೋಗುಣಗಳನ್ನು ಪರಸ್ಪರ ಸಂಬದ್ಧವೆಂದು ಕರೆಯಲಾಗಿದೆ. ಇವುಗಳಲ್ಲಿ ಪರಸ್ಪರಾಶ್ರಯಭಾವವಿದೆ. ದೇಹದಲ್ಲಿಯೂ ಈ ಮೂರು ಗುಣಗಳಿರುತ್ತವೆ. ಇವು ಮನಸ್ಸಿನಲ್ಲಿ ನಿರಂತರ ಹರಿಯುತ್ತಿರುತ್ತವೆ ಪಂಚಮಹಾಭೂತಗಳು. ಈ ತ್ರಿಗುಣಗಳಿಂದ ಕೂಡಿರುತ್ತವೆ. ತಮೋಗುಣದೊಡನೆ ಸತ್ತ್ವಗುಣ ಜೊತೆಯಾಗಿರುತ್ತದೆ. ಸತ್ತ್ವಕ್ಕೆ ತಮಸ್ಸು ಜೊತೆಯಾಗಿರುತ್ತದೆ.

ತಮೋಗುಣಕ್ಕೆ ನಿರೋಧ ಉಂಟಾದಾಗ ರಜೋಗುಣ ಹುಟ್ಟುತ್ತದೆ. ರಜೋಗುಣಕ್ಕೆ ತಡೆಯುಂಟಾದಾಗ ಸತ್ತ್ವಾಭಿವ್ಯಕ್ತವಾಗುತ್ತದೆ. ರಜೋಗುಣವು ಪ್ರಕೃತಿರೂಪವಾಗಿದ್ದು ಸೃಷ್ಟಿಗೆ ಕಾರಣವಾಗಿದೆ. ಪ್ರಪಂಚವೆಲ್ಲ ರಜೋಮಯವಾಗಿರುತ್ತದೆ. ಉತ್ಪತ್ತಿ-ಪ್ರವೃತ್ತಿಗಳು ರಜೋಗುಣದ ಲಕ್ಷಣ (ಸ್ವಭಾವ).

ಮುಂದೆ ಸುಮಾರು ೨೮ ಶ್ಲೋಕಗಳಿಂದ (೧೨-೩೯) ತಮೋಗುಣದ ಸ್ವಭಾವ, ಪ್ರವೃತ್ತಿಗಳನ್ನು ವಿಸ್ತಾರವಾಗಿ ಹೇಳಲ್ಪಟ್ಟಿದೆ. ತಮೋಗುಣದ ಕೆಲಸ್ವಭಾವಲಕ್ಷಣಗಳು - ಮೋಹ, ಅಜ್ಞಾನ, ನಿದ್ರಾ, ಗರ್ವ, ಭಯ, ಲೋಭ, ಮರೆವು, ಸತ್ಕರ್ಮನಿಂದಾ, ನಾಸ್ತಿಕತೆ, ದುಷ್ಟಚಾರಿತ್ರ್ಯ, ಕೀಳು ಅಭಿರುಚಿ, ದುರಭಿಮಾನ, ಎಲ್ಲರೊಡನೆ ಶತೃತ್ವ, ಪಾಪಕರ್ಮಾಸಕ್ತಿ, ಇಂದ್ರಿಯಗಳಿಗೆ ವಶವಾಗಿರುವುದು, ವೇದನಿಂದೆ, ದೇವನಿಂದೆ, ದಾನ ಮಾಡದಿರುವುದು, ಹೊಟ್ಟೆಕಿಚ್ಚು, ನಿಷಿದ್ಧ ಕರ್ಮಗಳಲ್ಲಿ ಉತ್ಸಾಹ, ಕ್ಷಮೆ ಇಲ್ಲಿರುವುದು, ಹೆಚ್ಚು ಮಾತನಾಡುವುದು ಇತ್ಯಾದಿ.

ತಾಮಸಸ್ವಭಾವದರು ಪ್ರಾಣಿಪಕ್ಷಿಗಳಾಗಿ ಹುಟ್ಟುತ್ತಾರೆ, ನರಕ ಭಾಗಿಗಳಾಗುತ್ತಾರೆ, ಸ್ಥಾವರ ಜೀವಿಗಳೂ, ನಾಲ್ಕು ಕಾಲಿನ ಪ್ರಾಣಿಗಳಾಗಿ, ಹುಚ್ಚರಾಗಿ, ಪಾಪರೋಗಗ್ರಸ್ತರಾಗಿ ಹುಟ್ಟುವರು.

ಇಂತಹವರೂ ಕೂಡಾ ಬ್ರಾಹ್ಮಣರ ಮೂಲಕ ಅಗ್ನಿಹೋತ್ರಾದಿ ಕರ್ಮಗಳಿಗೆ ಸೇವಾರೂಪನಾಗಿ ಬಳಸಿಕೊಂಡಾಗ ಊರ್ಧ್ವಲೋಕಗಳಿಗೆ ಹೋಗಬಹುದು. ಪಾಪಿಯೋನಿಯಲ್ಲಿ ಜನಿಸಿದರೂ, ಮುಂದೆ ಚಂಡಾಲ, ಮೂಕರಾಗಿ ಕ್ರಮವಾಗಿ ಉಚ್ಚವರ್ಣಗಳಲ್ಲಿ ಹುಟ್ಟುತ್ತಾರೆ.

ಕಾಮಭೋಗಗಳಲ್ಲಿಯೇ ಆಸಕ್ತಿ ಹೊಂದುವುದು ಮಹಾಮೋಹವೆನಿಸುತ್ತದೆ. ಋಷ್ಯಾದಿಗಳೂ ಕೆಲವೊಮ್ಮೆ ಮಹಾಮೋಹಕ್ಕೆ ಸಿಲುಕುತ್ತಾರೆ. ತಮೋಗುಣವು ಐದು

ಪ್ರಕಾರ - ತಮೋ, ಮೋಹ, ಮಹಾಮೋಹ, ತಾಮಿಸ್ರ, ಅಂಧತಾಮಿಸ್ರ. ಅತತ್ತ್ವದಲ್ಲಿಯೇ ತತ್ತ್ವದೃಷ್ಟಿಯುಳ್ಳವನು ಯಾರು ತಾನೇ ಬ್ರಹ್ಮತತ್ತ್ವವನ್ನು ಸರಿಯಾಗಿ ತಿಳಿದಾನು? ಇವರಿಗೆ ಬ್ರಹ್ಮಜ್ಞಾನ ಆಗದು. ಇವೆಲ್ಲವು ತಮೋಗುಣದ ದುಷ್ಪರಿಣಾಮಗಳು. ಇತ್ಯಾದಿ...

## ೩೮ನೇ ಅಧ್ಯಾಯ

ಬ್ರಹ್ಮದೇವರು ರಜೋಗುಣದ ಕಾರ್ಯ, ಪರಿಣಾಮಗಳನ್ನು ಋಷಿಗಳಿಗೆ ವಿವರಿಸುತ್ತಾರೆ.

ಈ ಲೋಕದಲ್ಲಿ ಸ್ತ್ರೀಯರು, ಪುರುಷರು, ಪ್ರಾಣಿಗಳು, ದ್ರವ್ಯ, ಮನೆಗಳಿಗೆ ಆಗುವ ಎಲ್ಲ ಸಂಸ್ಕಾರಗಳೂ ರಜೋಗುಣದ ಪ್ರೇರಣೆಯಿಂದಲೇ. ಇವು ಕೆಲ ರಜೋಗುಣ ಲಕ್ಷಣಗಳು.

೧. ಸಂಕಲ್ಪ, ರೂಪ, ಆಯಾಸ, ಸುಖದುಃಖ, ಚಳಿ, ಬಿಸಿಲು, ಐಶ್ವರ್ಯ, ಕಲಹ, ಕುತರ್ಕ, ಸಹನೆ, ಬಲ, ಶೌರ್ಯ, ಮದ, ರೋಷ, ಈರ್ಷ್ಯೆ, ಚಾಡಿ ಹೇಳುವುದು, ಯುದ್ಧ ಮಮತೆ, ಕುಟುಂಬಪಾಲನೆ, ವಧೆ, ಬಂಧನ, ಕ್ಲೇಶ, ಕ್ರಯ, ವಿಕ್ರಯ, ಮರ್ಮಸ್ಥಾನ ಭೇದಿಸುವುದು, ನಿಷ್ಠುರತೆ, ಕೂಗಾಟ, ಪರಸ್ವತ್ತಿನಲ್ಲಿ ಆಸಕ್ತಿ, ಶೋಕ, ಚಿಂತೆ, ಬೇಡವಾದ ಪುರಾಣಪಠಣ, ಸುಳ್ಳು ಹೇಳುವುದು, ಸಂಶಯದಿಂದ ಮಾತಾಡುವುದು, ನಿಂದಾಸ್ತುತಿ, (ಪ್ರಶಂಸೆ) ಮತ್ತೊಬ್ಬರನ್ನು ಸಂತೋಷಪಡಿಸುವುದು, ಪ್ರಮಾದ, ನಯ, ಪರಿಗ್ರಹ ಇತ್ಯಾದಿ.

೨. ಸಂತಾಪ, ಅವಿಶ್ವಾಸ, ವ್ರತ, ನಿಯಮ, ಪ್ರಾರ್ಥನೆ (ಇಷ್ಟ), ಪ್ರಮದೆಯರಲ್ಲಿ ಆಸಕ್ತಿ, ಸ್ವಧಾಕಾರ, ನಮಸ್ಕಾರ, ಸ್ವಾಹಾರ, ವಷಟ್‌ಕ್ರಿಯಾ, ಯಜನ, ಅಧ್ಯಾಪನ, ಪ್ರತಿಗ್ರಹ - ಇವೆಲ್ಲ ರಜೋಗುಣದಿಂದ ಹುಟ್ಟುತ್ತವೆ. ಇದು ನನಗೆ ಸಿಗಲಿ, ಒದಗಲಿ ಎಂಬ ಸ್ನೇಹಗಳು ರಜೋಗುಣದಿಂದ ಉತ್ಪನ್ನವಾಗುತ್ತದೆ.

೩. ದ್ರೋಹ, ಮಾಯಾ, ತಿರಸ್ಕಾರ, ವಂಚನೆ, ಮಾನ, ಕಳ್ಳತನ, ಅಪವಾದ, ಜಾಗರಣ, ದಂಭ, ದರ್ಪ, ರಾಗ, ಭಕ್ತಿ, ಪ್ರೀತಿ, ದ್ಯೂತಕ್ರೀಡೆ, ಸ್ತ್ರೀನಿಮಿತ್ತ ಸಂಬಂಧಗಳು, ನೃತ್ಯ, ಗೀತೆ, ವಾದ್ಯ, ಗಾಯನಗಳೆಲ್ಲ ರಾಜಸ ಕರ್ಮಗಳು.

೪. ಪ್ರಪಂಚದಲ್ಲಿ ಮೂರು ಕಾಲಗಳ ಬಗ್ಗೆ ಯೋಚನೆ (ಸಂಪಾದನೆ ಇತ್ಯಾದಿ ಲೌಕಿಕ) ಧರ್ಮಾರ್ಥಕಾಮ ಸೇವನೆಯಲ್ಲಿ ನಿರತರಾಗುವುದು, ಸ್ವೇಚ್ಛಾಚಾರ, ಭೋಗಾಸಕ್ತರಾದ ಮನುಷ್ಯರು - ಇವರೆಲ್ಲ ಭೂಮಿಯಿಂದ ಕೆಳಮುಖವಾಗಿ ಗಮನವುಳ್ಳವರು (ನರಕಪಾತ್ರರು).

ಈ ರಜೋಗುಣಗಳನ್ನು ತಿಳಿಯುವವನು ಅದರಿಂದ ನಿವೃತ್ತನಾಗುವವನು.

## ೩೯ನೇ ಅಧ್ಯಾಯ

ಬ್ರಹ್ಮದೇವರು ಋಷಿಗಳಿಗೆ ಮೂರು ಗುಣಗಳಲ್ಲಿ ಉತ್ತಮವಾದ ಸತ್ತ್ವಗುಣವನ್ನು ವರ್ಣಿಸಿದ್ದಾರೆ. ಇದು ಲೋಕದಲ್ಲಿ ಎಲ್ಲ ಜೀವರಿಗೆ ಹಿತಕಾರಿ, ಮತ್ತು ಸಜ್ಜನರು ಅನುಸರಿಸುವ ಧರ್ಮ(ನಿಂದ್ಯವಲ್ಲದ). ಸತ್ತ್ವಗುಣದ ಮಹತ್ತ್ವ, ಕಾರ್ಯಗಳು ಹೀಗಿವೆ.

೧. ಆನಂದ, ಪ್ರೀತಿ, ಪ್ರಕಾಶ (Transparency), ಜಿಪುಣತೆ ಇಲ್ಲದಿರುವುದು (ಔದಾರ್ಯ), ನಿರ್ಭಯತೆ, ಶ್ರದ್ಧೆ, ಕ್ಷಮಾ, ಧೈರ್ಯ, ಅಹಿಂಸಾ, ಸಮತೆ, ಸತ್ಯ, ಸರಳತೆ, ಪಾವಿತ್ರ್ಯ, ಚಾತುರ್ಮಾಸ್ಯ, ಪರಾಕ್ರಮ ಇತ್ಯಾದಿ.

೨. ಪ್ರಯೋಜನಾಪೇಕ್ಷೆಯಿಲ್ಲದೆ ಜ್ಞಾನ, ಕರ್ಮ, ಸೇವೆ, ಇವೆಲ್ಲ ಧರ್ಮಗಳಲ್ಲಿ ರತನಾದರೆ, ಪರಲೋಕದಲ್ಲಿ ಅಕ್ಷಯಸುಖ ಸಿಗುತ್ತದೆ.

೩. ಮಮತೆ ಇಲ್ಲದಿರುವುದು, ಅಹಂಕಾರವಿಲ್ಲದಿರುವುದು, ಆಶಾರಾಹಿತ್ಯ, ಎಲ್ಲೆಡೆ ಭಗವಂತನನ್ನು ಕಾಣುವುದು (ಇದ್ದಾನೆಂದು ಭಾವಿಸುವುದು), ಇವೇ ಸನಾತನ ಧರ್ಮಗಳು.

೪. ವಿಶ್ವಾಸ, ನಾಚಿಕೆ, ಸಹನೆ, ತ್ಯಾಗ, ಪಾವಿತ್ರ್ಯ, ಉತ್ಸಾಹ, ಕಾರುಣ್ಯ, ಶೌಚ, ಆಲಸ್ಯವಿರದಿರುವುದು(ಸದಾ ಚಟುವಟಿಕೆ), ಯಥಾರ್ಥಜ್ಞಾನ, ಪ್ರಾಣಿದಯೆ, ಚಾಡಿ ಹೇಳದಿರುವುದು, ಶಾಂತಿ, ಕರ್ಮಕರಣಗಳಲ್ಲಿ ಶುದ್ಧಿ ವಿನಯ, ಬ್ರಹ್ಮಚರ್ಯ, ನಿರ್ಮಮತೆ, ನಿಷ್ಕಾಮತ್ವ, ನಿರಂತರ ಧರ್ಮಶೀಲತೆಗಳು, ಸತ್ತ್ವಗುಣಕಾರ್ಯಗಳು.

೫. ಸಕಾಮಕರ್ಮತ್ಯಾಗ (ವ್ಯರ್ಥವಾದ್ದರಿಂದ)ಮಾಡುವವರೇ ಸಾಧುದರ್ಶಿಗಳು, ಧೀರರು.

ಇವರು ಎಲ್ಲ ಪಾಪಗಳನ್ನು ಪ್ರಾಯಶ್ಚಿತ್ತಾದಿಗಳಿಂದ ದಾಟಿ ಅಜರಾಮರರಾಗಿ ದಿವ್ಯ ಶರೀರಿಗಳಾಗಿ ದಿವ್ಯಲೋಕಗಳಿಗೆ ಹೋಗಿ ವಿಹರಿಸುತ್ತಾರೆ. ಇವರಲ್ಲಿ ಊರ್ಧ್ವಲೋಕಗಾಮಿಗಳು, ವೈಕಾರಿಕ ದೇವತೆಗಳು ಎಂದೂ ಕರೆಯಲ್ಪಡುತ್ತಾರೆ. ಅಲ್ಲಿ ಬಯಸಿದ್ದೆಲ್ಲವನ್ನೂ ಹೊಂದುತ್ತಾ, ಬೇರೆಯವರಿಗೂ ದಾನ ಮಾಡುತ್ತಾರೆ.

ಋಷಿಗಳೇ ಇದೆಲ್ಲ ಸತ್ತ್ವವೃತ್ತಿ. ಇದನ್ನು ತಿಳಿದವನು ಇಚ್ಛಿಸಿದುದನ್ನು ಪಡೆಯುತ್ತಾನೆ.

## ೪೦ನೇ ಅಧ್ಯಾಯ

ಬ್ರಹ್ಮದೇವರು ಗುಣತ್ರಯಗಳನ್ನು ಋಷಿಗಳಿಗೆ ವರ್ಣಿಸುತ್ತಾರೆ.

ಜಗತ್ತಿನಲ್ಲಿ ಈ ಮೂರು ಗುಣಗಳೂ ಜೊತೆಯಲ್ಲಿಯೇ ಇರುತ್ತವೆ. ಪರಸ್ಪರ ಸೇರಿಯೇ ಶರೀರದಲ್ಲಿರುತ್ತವೆ. ಕಾಲವ್ಯತ್ಯಾಸದಿಂದ ಅವುಗಳ ಪರಿಮಾಣವು ವ್ಯತ್ಯಾಸವಾಗುಖುತ್ತವೆ.

ಪಶುಪಕ್ಷ್ಯಾದಿಗಳಲ್ಲಿ ತಮೋಗುಣವು ಅಧಿಕ, ರಜಸ್ಸತ್ತ್ವಗಳು ಅಲ್ಪ. ಮನುಷ್ಯರಲ್ಲಿ ರಜೋಗುಣ ಅಧಿಕ. ತಮ ಹಾಗೂ ಸತ್ತ್ವಗುಣಗಳು ಅಲ್ಪ. ಭಗವಚ್ಚಿಂತನೆ ಮಾಡುವವರಲ್ಲಿ ಸತ್ತ್ವಗುಣ ಅಧಿಕವಾಗಿ ರಜಸ್ತಮೋಗುಣಗಳು ಅಲ್ಪವಾಗಿರುತ್ತವೆ. ಸತ್ತ್ವಗುಣ ಇಂದ್ರಿಯಗಳನ್ನು ಪ್ರಕಾಶಗೊಳಿಸುತ್ತವೆ. ವಿಕಾರ ಅದರ ಸ್ವಭಾವ. ಸತ್ತ್ವಗುಣಜೀವಿಗಳೂ ಊರ್ಧ್ವಲೋಕಕ್ಕೂ, ರಜೋಗುಣಾಧಿಕ ಜೀವಿಗಳು ಮನುಷ್ಯಲೋಕದಲ್ಲಿಯೇ, ತಮೋಗುಣಾಧಿಕ ಜೀವಿಗಳು ಹೀನಯೋನಿಗಳಲ್ಲಿ ಜನಿಸಿ, ಅಧೋಗತಿ ಹೊಂದುತ್ತಾರೆ. ಶೂದ್ರರಲ್ಲಿ ತಮೋಗುಣ, ಕ್ಷತ್ರಿಯರಲ್ಲಿ ರಜೋಗುಣ, ಬ್ರಾಹ್ಮಣರಲ್ಲಿ ಸತ್ತ್ವಗುಣವು ಅಧಿಕವಾಗಿರುತ್ತದೆ. ಇವುಗಳ ಅಭಿವ್ಯಕ್ತಿಯನ್ನು ದೂರದಿಂದಲೂ ಕಾಣಬಹುದು.

ಕಳ್ಳರಿಗೆ ಸೂರ್ಯೋದಯ ಭಯಜನಕ. ಸೂರ್ಯೋದಯ ಸತ್ತ್ವಗುಣದ ಆವಿರ್ಭಾವ ಕಾಲ. ದುರಾಚಾರಿಗಳಿಗೆ ಭಯ ತಮೋಗುಣಕಾರ್ಯ. ಪ್ರಯಾಣಿಕರಿಗೆ ಸೂರ್ಯತಾಪವೇ ರಜೋಗುಣದ ವ್ಯಾಪಾರ. ಸೂರ್ಯನಲ್ಲಿರುವ ಪ್ರಕಾಶ – ಸತ್ತ್ವ ಎನಿಸಿದರೆ, ಅವನಿಂದುಂಟಾಗುವ ಸಂತಾಪ ರಜೋಗುಣ, ಸೂರ್ಯೋಪರಾಗದಲ್ಲಿ ಆಗುವ ಗ್ರಹಣ ತಮೋಗುಣ ವ್ಯಾಪಾರವೆನಿಸಿದೆ. ಹೀಗೆ ಎಲ್ಲ ಜ್ಯೋತಿಗಳಲ್ಲೂ ಗುಣತ್ರಯಗಳಿವೆ. ಹಗಲು, ರಾತ್ರಿ, ಮಾಸ, ವರ್ಷ, ಋತು, ದಾನಯಜ್ಞ, ಲೋಕ ದೇವತೆ ವಿದ್ಯಾಗಳಲ್ಲೂ ಮೂರು ಗುಣಗಳಿವೆ.

ಈ ಮೂರು ಗುಣಗಳ ಸೃಷ್ಟಿಯೂ ಅನಾದಿ. ಪ್ರಕೃತಿಗೆ ತಮಸ್ಸು ಅವ್ಯಕ್ತ, ಶಿವ, ಭಾವ, ನಿತ್ಯ, ಅಜ, ಯೋನಿ, ಸನಾತನ, ಪ್ರಕೃತಿವಿಕಾರ, ಪ್ರಲಯ, ಪ್ರಧಾನ, ಪ್ರಭವ, ನಾಶ, ಅನುದ್ರಿಕ್ತ, ಅನೂನ, ವ್ಯಕ್ತ, ಅಚಲ, ಧ್ರುವ, ಅಸತ್, ಅವ್ಯಕ್ತ ಎಂಬ ನಾಮಗಳು ತ್ರಿಗುಣಗಳನ್ನು ಹೇಳುತ್ತವೆ. ಅಧ್ಯಾತ್ಮಚಿಂತಕರು ಈ ನಾಮಗಳನ್ನು ತಿಳಿದಿರಬೇಕು.

## ೪೧ನೇ ಅಧ್ಯಾಯ

ಅವ್ಯಕ್ತ, ಪ್ರಕೃತಿ – ಇವು ಹುಟ್ಟುವ ಮೊದಲೇ ಇದ್ದ ಸತ್ತ್ವರಜಸ್ತಮೋಗುಣ ರಹಿತನಾದ ಪರಮಾತ್ಮನು '**ಮಹಾನ್ ಆತ್ಮಾ**' '**ಮಹಾಮತಿ**' ಎಂದು ಕರೆಯಿಸಿಕೊಂಡವನಿದ್ದನು. ಇವನು ಹುಟ್ಟಿಲ್ಲದವನು. ಅವನು ಸರ್ವವ್ಯಾಪಿ. ವಿಷ್ಣು ಜಿಷ್ಣು ಶಂಭು, ವೀರ್ಯವಾನ್, ಬುದ್ಧಿ ಪ್ರಜ್ಞಾ, ಉಪಲಬ್ಧಿ ಖ್ಯಾತಿ, ಧೃತಿ, ಸ್ಮೃತಿ ಎಂಬ ಪರ್ಯಾಯ ಶಬ್ದಗಳಿಂದ ವಾಚ್ಯನಾಗಿದ್ದಾನೆ. ಇಂತಹವನ ಜ್ಞಾನದಿಂದ ವಿದ್ವಾಂಸನು ಬ್ರಹ್ಮಜ್ಞಾನಿಯಾಗಿ ಎಂದೂ ಮೋಹ (ಮಿಥ್ಯಾಜ್ಞಾನ) ಹೊಂದುವುದಿಲ್ಲ. ಅವನ ಕೈ, ಕಾಲು, ಕಣ್ಣು ತಲೆ, ಮುಖ, ಕಿವಿ ಎಲ್ಲವೂ ಜಗದ್ವ್ಯಾಪಿಯಾಗಿವೆ. ಅವನು ಅಣಿಮಾ, ಲಘಿಮಾ, ಮೊದಲಾದ ಸಿದ್ಧಿಗಳನ್ನು ಹೊಂದಿದ್ದಾನೆ. ಈ ಸರ್ವೋತ್ತಮನಾದ ವಿಷ್ಣುವೇ ಆದಿಸೃಷ್ಟಿಗಳಲ್ಲಿ ಸ್ವಯಂಭೂ, ಪ್ರಭು ಎಂದೆನಿಸಿದ್ದಾನೆ. ಯಾರು ಲೋಕದಲ್ಲಿ ಬುದ್ಧಿವಂತರೋ, ಸನ್ಯಾಸನಿರತರೋ,

ಧ್ಯಾನಯೋಗಿಗಳೋ, ಸತ್ಯಸಂಧರೋ, ಜಿತೇಂದ್ರಿಯರೋ, ಲೋಭಿಗಳಲ್ಲವೋ, ಕೋಪವನ್ನು ಗೆದ್ದವರೋ, ನಿರಹಂಕಾರಿಗಳೋ, ಪ್ರಸನ್ನಮನಸ್ಸುಳ್ಳವರೋ, ಮಮತೆ ರಹಿತರೋ, ಅವರೆಲ್ಲ ಇಂತಹ ಮಹತ್ತ್ವವನ್ನು (ಪರಮಾತ್ಮನನ್ನು) ಹೊಂದಿ, ಉತ್ತಮಗತಿ ಹೊಂದುತ್ತಾರೆ. ಅಂತಹ ಜ್ಞಾನಿ ಎಂದೂ ಲೋಕದಲ್ಲಿ ಮೋಹದಿಂದ ದೂರಾಗಿರುತ್ತಾನೆ.

## ೪೨ನೇ ಅಧ್ಯಾಯ

ಬ್ರಹ್ಮದೇವರು ಋಷಿಗಳಿಗೆ ಅಹಂಕಾರ ತತ್ತ್ವವನ್ನು ಉಪದೇಶಿಸುತ್ತಾರೆ.

ಸೃಷ್ಟಿಯ ಮೊದಲಲ್ಲಿ ಹುಟ್ಟಿದುದು ಮಹತ್ತತ್ತ್ವ. ಅದಕ್ಕೆ ಚತುರ್ಮುಖಬ್ರಹ್ಮ ಅಭಿಮಾನಿ. ಆತನಿಂದ ಜನಿಸಿದವನು ಅಹಂಕಾರ ತತ್ತ್ವಾಭಿಮಾನಿ ರುದ್ರದೇವರು. ಈ ಅಹಂಕಾರವು ಪ್ರಾಣಿಗಳ ಸೃಷ್ಟಿಗೆ ಮೂಲಕಾರಣ. ಇದುವೇ ವೈಕಾರಿಕ ಅಹಂಕಾರ. ಮನಸ್ಸು ಇಂದ್ರಿಯಾಭಿಮಾನಿ ದೇವತೆಗಳು ದೇಹವನ್ನು ಹುಟ್ಟಿಸಿರುವ ಸಾಮರ್ಥ್ಯ, ಈ ವೈಕಾರಿಕಾಹಂಕಾರಕ್ಕೆ ಇದೆ. ತೈಜಸವೆನಿಸಿದ ಇಂದ್ರಿಯಗಳನ್ನು ಹುಟ್ಟಿಸುವ ಸಾಮರ್ಥ್ಯ ತೈಜಸಾಹಂಕಾರಕ್ಕೆ ಇದೆ. ಜೀವರನ್ನು ಸೃಷ್ಟಿ ಮಾಡುವ ಚತುರ್ಮುಖಬ್ರಹ್ಮನು ಧಾತು ಎನಿಸಿದ್ದಾನೆ. ಅಹಂಕಾರತತ್ತ್ವಾಭಿಮಾನಿ ದೇವ, ದೇವತೆಗಳೆಲ್ಲ ಮೊದಲನೆಯವನು. ಮನಸ್ಸಿಗೆ ಜನಕ. ಮನಸ್ಸುಳ್ಳ ಲೋಕಗಳಿಗೆಲ್ಲ ನಿಯಾಮಕ. ಜೀವಿಗಳಿಗೆ '**ಅಹಂ**' ಎಂಬ ಅನುವ್ಯವಸಾಯವನ್ನು ಹೊಂದಿಸುವವನು ಇವನೇ ಮಹರುದ್ರದೇವ. ಅಹಂಕಾರತತ್ತ್ವದಿಂದ ಜೀವನ ಉತ್ಪತ್ತಿಯಾಗುತ್ತದೆ. ಆದ್ದರಿಂದ ಅದು ಭೂತಾದಿ ಪ್ರಾಣಿಗಳ ಉತ್ಪತ್ತಿಗೆ ನಿಯಾಮಕ. ವೈಕಾರಿಕ ತತ್ತ್ವವೇ ಜಗದ್ವ್ಯಾಪಾರ ಮಾಡಿಸುತ್ತದೆ. ತನ್ನ ಶಕ್ತಿಯ ಪ್ರಭಾವದಿಂದ ಜಗತ್ತನ್ನು ಸಂತೋಷಪಡಿಸುತ್ತದೆ.

## ೪೩ನೆ ಅಧ್ಯಾಯ

ಬ್ರಹ್ಮದೇವರು ಋಷಿಗಳಿಗೆ ಪಂಚಭೂತಸೃಷ್ಟಿ ಅವುಗಳ ವ್ಯಾಪಾರಾದಿಗಳನ್ನು ತಿಳಿಸುತ್ತಾರೆ. ಅದರ ಸಾರ ಹೀಗಿದೆ –

೧. ಅಹಂಕಾರತತ್ತ್ವದಿಂದ ಪಂಚಭೂತಗಳು ಉತ್ಪನ್ನವಾಗಿವೆ. ಪಂಚಭೂತಗಳಿಂದ ಉತ್ಪನ್ನವಾದ ಶಬ್ದಾದಿ ತನ್ಮಾತ್ರಗಳ ಬಗ್ಗೆ ಎಲ್ಲ ಪ್ರಾಣಿಗಳಿಗೂ ಭಯವಿದೆ.

೨. ಯಾವ ಭೂತದಿಂದ ಯಾವ ಭೂತ ಹುಟ್ಟುವುದೋ, ಅದರಲ್ಲಿಯೇ ಅದರ ಲಯ. ಪೃಥಿವೀ ಜಲದಿಂದ ಉತ್ಪತ್ತಿಯಾಗುತ್ತದೆ. ಜಲದಲ್ಲಿಯೇ ಅದರ ಲಯ. ಆದರೆ, ಭಗವತ್ಸ್ಮರಣಸಂಪನ್ನರಾದ ಜ್ಞಾನಿಗಳು ಎಲ್ಲ ಪ್ರಾಣಿಗಳು ಲಯವಾದರೂ, ಯೋಗಿಗಳು ಲಯ ಹೊಂದುವುದಿಲ್ಲ.

೩. ಪ್ರಾಣಾದಿ ಪಂಚಪ್ರಾಣಗಳು, ಮಾತು, ಮನಸ್ಸು ಬುದ್ಧಿಗಳು ಸೇರಿದಾಗ ಒಟ್ಟಾರೆ ಸೂಕ್ಷ್ಮಜಗತ್ತು ೮ ವಿಧವಾಗುತ್ತದೆ.

೪. ಶಬ್ದಾದಿ ಸ್ಥೂಲರೂಪಗಳು ಅನಿತ್ಯ (ಕಾರ್ಯ); ಕಾರಣರೂಪಗಳು ನಿತ್ಯ.

೫. ಮೇಲಿನ ೮ ಇಂದ್ರಿಯಾದಿಗಳು ಯಾರ ವಶದಲ್ಲಿವೆಯೋ, ವಿಷಯಗಳಲ್ಲಿ ಆಸಕ್ತಿ ಹೊಂದಿಲ್ಲವೋ ಅವನು ಗುಣಪೂರ್ಣ ಪರಬ್ರಹ್ಮನನ್ನು ಹೊಂದುತ್ತಾನೆ. ಆ ಬ್ರಹ್ಮನಿಗಿಂತ ಮಿಗಿಲಾದ ಮತ್ತೊಂದು ವಸ್ತು ಇಲ್ಲ.

೬. ಅಹಂಕಾರತತ್ತ್ವದಿಂದ ಉತ್ಪನ್ನವಾದವು ಮನಸ್ಸು ಹಾಗೂ ಹತ್ತು ಜ್ಞಾನಕರ್ಮೇಂದ್ರಿಯಗಳು. ಇವುಗಳನ್ನು ಗೆದ್ದವರು ಹೃದಯದಲ್ಲಿ ಬ್ರಹ್ಮನು ಕಾಣುತ್ತಾನೆ.[೧]

೭. ಮನಸ್ಸನ್ನು ನಿಯಂತ್ರಿಸುವ ಇಂದ್ರಿಯವೇ ಬುದ್ಧಿ ಎಂಬ ಇಂದ್ರಿಯ. ಈ ಎಲ್ಲ ಇಂದ್ರಿಯಗಳನ್ನು ತಿಳಿದವರು ಕೃತಕೃತ್ಯರೆನಿಸುತ್ತಾರೆ (ಗೆದ್ದವರನ್ನ).

ಇಂದ್ರಿಯಸಂಬಂಧ ವಿಷಯಗಳು –

| ಸಂಖ್ಯೆ | ಇಂದ್ರಿಯ | ಆಧ್ಯಾತ್ಮ | ಅಧಿಭೂತ | ಆಧಿದೈವ |
|---|---|---|---|---|
| ೧ | ಆಕಾಶ (ಪ್ರಥಮಭೂತ) | ಶ್ರೋತ್ರ (ಕಿವಿ) | ಶಬ್ದ | ದಿಕ್ಕುಗಳು |
| ೨ | ವಾಯು (ಮಾರುತ) (ದ್ವಿತೀಯಭೂತ) | ತ್ವಕ್ | ಸ್ಪರ್ಶ | ವಿದ್ಯುತ್ |
| ೩ | ಜ್ಯೋತಿ (ತೃತೀಯಭೂತ) | ಕಣ್ಣು | ರೂಪ | ಸೂರ್ಯ |
| ೪ | ನೀರು (ಅಪ್) ಚತುರ್ಥಭೂತ | ಜಿಹ್ವಾ | ರಸ | ಸೋಮ |
| ೫ | ಪೃಥಿವೀ (ಪಂಚಮಭೂತ) | ಪ್ರಾಣ | ಗಂಧ | ವಾಯು |
| ೬ | ಪ್ರಾಣ | ಎರಡು ಪಾದಗಳು | ಗಂತವ್ಯ ಸ್ಥಾನ | ವಿಷ್ಣು |
| ೭ | ವಾಯು | ಅಪಾನ | ಮಲ ಮೂತ್ರ ತ್ಯಾಗ | ಮಿತ್ರ |
| ೮ | ವೀರ್ಯ | ಉಪಸ್ಥ | ಶುಕ್ಲ | ಪ್ರಜಾಪತಿ |
| ೯ | ಕೈ (ಕಾರ್ಯ) | ಕೈಗಳು | ಕೈ ಕಾರ್ಯ | ಇಂದ್ರ |

೧ ಇಂದ್ರಿಯಗ್ರಾಮ ಇತ್ಯೇತನ್ಮನ ಏಕಾದಶಂ ಭವೇತ್ ।
ಏತದ್ ಗ್ರಾಮಂ ಜಯೇತ್ ಪೂರ್ವಂ ತತೋ ಬ್ರಹ್ಮ ಪ್ರಕಾಶತೇ ॥ – ೪೩/೧೫

| | | | | |
|---|---|---|---|---|
| ೧೦ | ದೇವತಾಮಂತ್ರ ಆವೃತ್ತಿ | ವಾಕ್ | ಮಂತ್ರಗಳ ಮಾತು | ಜೀವಾಂತರ್ಯಾಮಿ ದೇಹಾಂತರ್ಯಾಮಿ |
| ೧೧ | ಪಂಚಭೂತಪ್ರೇರಕ | ಮನಸ್ಸು | ಸಂಕಲ್ಪ | ಚಂದ್ರ |
| ೧೨ | ಆರು ಇಂದ್ರಿಯಗಳು | ಬುದ್ಧಿ | ತಿಳಿಯಲ್ಪಡುವಿಕೆ | ಬ್ರಹ್ಮ |

೮. ಪ್ರಾಣಿಗಳು ವಾಸ ಮಾಡಲು ಇರುವ ಸ್ಥಳಗಳು ಭೂಮಿ, ಜಲ, ಆಕಾಶ.

೯. ಪ್ರಾಣಿಗಳು ಅಂಡಜ, ಉದ್ಭಿಜ, ಸ್ವೇದಜ, ಜರಾಯುಜ ಎಂದು ನಾಲ್ಕು ವಿಧ.

ಅ. ಅಂಡಜಗಳು – ಹಕ್ಕಿಗಳು, ಸರ್ಪಗಳು; ಆ. ಉದ್ಭೀಜಗಳು – ಮರಗಿಡ ಬಳ್ಳಿಗಳು; ಇ. ಸ್ವೇದಜಗಳು – ಬೆವರಿನಿಂದ ಹುಟ್ಟುವವು ಕ್ರಿಮಿಗಳು, ಜಂತುಗಳು; ಈ. ಜರಾಯುಜಗಳು – ಎರಡು ಬಹುಪಾದವುಗಳ್ಳ, ವಕ್ರಗತಿಯ, ವಕ್ರಬುದ್ಧಿಯ, ವಿಕಾರ ರೂಪವುಗಳ್ಳ ಪ್ರಾಣಿಗಳು.

೧೦. ಬ್ರಾಹ್ಮಣ್ಯಕ್ಕೆ ಕಾರಣವಾದ ಅಂಶಗಳು – ತಪಸ್ಸು ಪುಣ್ಯಕರ್ಮಗಳ ಅನುಷ್ಠಾನ.

೧೧. ಕರ್ಮಗಳು ಎರಡು ವಿಧ – ೧. ಅಗ್ನಿಮುಖದಲ್ಲಿ ದಾನ; ೨. ಸ್ವಾಧ್ಯಾಯ (ವೇದಾಧ್ಯಯನ). ಮೇಲಿನಂತೆ ವಿಷಯಗಳನ್ನು ತಿಳಿದವನು ಸರ್ವಪಾಪಮುಕ್ತನಾಗಿ ಯೋಗಿ ಎನಿಸುತ್ತಾನೆ.

೧೨. ಬ್ರಾಹ್ಮಣನು ತನ್ನಲ್ಲಿರುವ ದುರ್ಗುಣಗಳಲ್ಲಿ ಅಸಂಗನಾಗಿದ್ದರೆ, ಮತ್ತು ಪರಬ್ರಹ್ಮ ವಸ್ತುವನ್ನೇ ಅರಸುವವನು ಬ್ರಾಹ್ಮಣನೆನಿಸುತ್ತಾನೆ. ಭಗವತ್ಪಾದನೆನಿಸುವವನೇ ನಿಜವಾದ ಬ್ರಾಹ್ಮಣ (ಭಗವಂತನ ಸ್ವರೂಪಚಿಂತಕ, ನಾಮಸ್ಮರಣಾದಿಗಳನ್ನು ಮಾಡುವವನು).

೧೩. ಯಾರು ದುರಾಶೆಗಳನ್ನು ನಿಗ್ರಹಿಸಿಕೊಂಡು, ಎಲ್ಲ ಪ್ರಾಣಿ(ಜೀವಿ)ಗಳಿಗೆ ಸುಹೃತ್, ಮಿತ್ರನಾಗಿದ್ದು, ಬ್ರಹ್ಮಧ್ಯಾನವನ್ನು ಏಕಾಗ್ರತೆಯಿಂದ ಮಾಡುವವನು ಬ್ರಹ್ಮನನ್ನು ಹೊಂದಲು ಯೋಗ್ಯನಾಗುತ್ತಾನೆ. ಅಂತಹವನಲ್ಲಿ ಅಧ್ಯಾತ್ಮಾಗ್ನಿ ಉರಿಯುತ್ತದೆ. ಅವನ ಹೃದಯದಲ್ಲಿ ಪರಮಾತ್ಮನು ಪ್ರಕಾಶಿಸುತ್ತಾನೆ.

೧೪. ಜ್ಞಾನಿಗಳ ಪಿಂಡಾಂಡ ಚಿಂತನೆ.

೧. ದೇಹದಲ್ಲಿರುವ ಅಗ್ನಿ – ಬಾಹ್ಯ ಪ್ರಪಂಚದಲ್ಲಿ ಕಾಣುವ ರೂಪ

೨. ದೇಹದಲ್ಲಿರುವ ರಸ – ಬಾಹ್ಯಪ್ರಪಂಚದಲ್ಲಿ ಹರಿಯುವ ನದಿ

೩. ದೇಹದಲ್ಲಿರುವ ಸ್ಪರ್ಶ– ಬಾಹ್ಯಪ್ರಪಂಚದಲ್ಲಿ ಬೀಸುವ ಗಾಳಿ

೪. ದೇಹದಲ್ಲಿರುವ ಗಂಧ- ಬಾಹ್ಯಪ್ರಪಂಚದಲ್ಲಿ ಪೃಥಿವೀ

೫. ದೇಹದಲ್ಲಿರುವ ಶಬ್ದ - ಬಾಹ್ಯಪ್ರಪಂಚದಲ್ಲಿ ಆಕಾಶ

೬. ರೋಗಶೋಕಗಳಿಂದ ಕೂಡಿದ, ಪ್ರವಾಹರೂಪದ ಐದು ಇಂದ್ರಿಯಗಳಿರುವ ಪಂಚಭೂತಗಳಿಂದ ತುಂಬಿರುವ, ನವದ್ವಾರಗಳಿರುವ ರಜೋಗುಣ ತುಂಬಿರುವ, ತ್ರಿಗುಣಾತ್ಮಕವಾದ, ಸಪ್ತಧಾತುಗಳಿಂದ ಕೂಡಿದ, ಬಾಹ್ಯಭೋಗಗಳಲ್ಲಿಯೇ ಆಸಕ್ತವಾದ, ದೇಹ (ಪಾಂಚಭೌತಿಕ) - ಶರೀರ

೧೫. ಪ್ರತಿಜೀವನನ್ನು ಆಶ್ರಯಿಸಿರುವ ಶರೀರ - ಕಾಲಚಕ್ರ. ಬಾಲ್ಯಾದಿ ಅವಸ್ಥೆಗಳನ್ನು ಹೊಂದಿದ ಶರೀರ - ಕಾಲ.

೧೬. ಇಂದ್ರಿಗಳನ್ನು ನಿಗ್ರಹಿಸಿದಾಗ ಕಾಮ, ಕ್ರೋದ, ಭಯ, ಮೋಹ, ದ್ರೋಹ, ಅಸತ್ಯಗಳೆಂಬ ದುರ್ಗುಣಗಳನ್ನು ಬಿಡಲು ಸಮರ್ಥನಾಗುತ್ತಾನೆ.

೧೭. ತ್ರಿಗುಣಾತ್ಮಕವಾದ ಶರೀರದ ಮೇಲೆ ಅಭಿಮಾನತ್ಯಾಗ ಮಾಡಿದಾಗ ಅವನ ಹೃದಯಾಕಾಶದಲ್ಲಿ ಪರಬ್ರಹ್ಮ ನಿತ್ಯವೂ ನೆಲೆಸುತ್ತಾನೆ (ಅಭಿವ್ಯಕ್ತನಾಗುತ್ತಾನೆ).

೧೮. ಆ ಪರಮಾತ್ಮನನ್ನು ಸಾಧಕನು - ಜಿತೇಂದ್ರಿಯನಾದಾಗ, ವಿವಿಧ ಶಬ್ದಗಳಿಂದ ವಾಚ್ಯನಾದ (ವಿಷ್ಣು ರುದ್ರ, ವರುಣ, ಅಗ್ನಿ) ವಿಷ್ಣುವನ್ನು ನೋಡುತ್ತಾನೆ.

೧೯. ಎಲ್ಲರ ಜೀವರ ಹೃದಯದಲ್ಲಿಯೂ ಜ್ಞಾನಿಗಳಿಗೆ ಸರ್ವೋತ್ತಮನಾದ ಪರಮಾತ್ಮನು ಕಾಣುತ್ತಾನೆ. ಅವನನ್ನು ಬ್ರಾಹ್ಮಣರು, ಸುರಾಸುರರು, ಯಕ್ಷರು, ಪಿಶಾಚಗಳು, ಪಿತೃಗಳು, ರಾಕ್ಷಸರು, ಭೂತಗಳು, ಮಹರ್ಷಿಗಳು ಸದಾಸ್ತುತಿ ಮಾಡುತ್ತಾರೆ.

ಸರ್ವವಿತ್ ಸರ್ವಭೂತೇಷು ದ್ರಕ್ಷ್ಯತ್ಯಾತ್ಮಾನಮಾತ್ಮನಿ ॥
ಏಕಧಾ ಬಹುಧಾ ಚೈವ ವಿಕುರ್ವಾಣಸ್ತತಸ್ತತಃ ।
ಧ್ರುವಂ ಪಶ್ಯತಿ ರೂಪಾಣಿ ದೀಪಾನ್ ದೀಪಶತಂ ಯಥಾ ॥
ಸ ವೈ ವಿಷ್ಣುಶ್ಚ ರುದ್ರಶ್ಚ ವರುಣೋಗ್ನೀ( ಗ್ನಿಃ) ಪ್ರಜಾಪತಿಃ ।
ಸ ಹಿ ಧಾತಾ ವಿಧಾತಾ ಚ ಸ ಪ್ರಭುಃ ಸರ್ವತೋಮುಖಃ ॥
ಹೃದಯಂ ಸರ್ವಭೂತಾನಾಂ ಮಹಾನಾತ್ಮಾ ಪ್ರಕಾಶತೇ ॥
ತಂ ವಿಪ್ರಸಂಘಾಶ್ಚ ಸುರಾಸುರಾಶ್ಚ
ಯಕ್ಷಾಃ ಪಿಶಾಚಾಃ ಪಿತರೋ ವಯಾಂಸಿ ।
ರಕ್ಷೋಗಣಾ ಭೂತಗಣಾಶ್ಚ ಸರ್ವೇ
ಮಹರ್ಷಯಶ್ಚೈವ ಸದಾ ಸ್ತುವಂತಿ ॥ - ೪೩/೬೧-೬೬೫

## ೪೪ನೇ ಅಧ್ಯಾಯ

ಸೃಷ್ಟಿಯಲ್ಲಿನ ಜೀವಿಗಳಲ್ಲಿ ಶ್ರೇಷ್ಠ ಪ್ರಾಣಿಗಳಾವುವು ಇತ್ಯಾದಿ ವಿಷಯಗಳನ್ನು ಹೇಳುತ್ತಾರೆ ಬ್ರಹ್ಮದೇವರು ಋಷಿಗಳಿಗೆ.

| ಸಂಖ್ಯೆ | ಯಾರಲ್ಲಿ | ಯಾರು ಶ್ರೇಷ್ಠ |
|---|---|---|
| ೧ | ಮನುಷ್ಯರು | ರಜೋಗುಣ ಕ್ಷತ್ರಿಯರಾಜ |
| ೨ | ಕುದುರೆ, ಆನೆ, ಹೇಸರಗತ್ತೆ ವಾಹನ | ಆನೆ |
| ೩ | ಅರಣ್ಯವಾಸಿ ಪ್ರಾಣಿಗಳು | ಸಿಂಹ |
| ೪ | ಪಶುಗಳು | ಕುರಿ |
| ೫ | ಬಿಲದಲ್ಲಿ ವಾಸ ಮಾಡುವ ಪ್ರಾಣಿಗಳು | (ಇಲಿ) ಸರ್ಪ |
| ೬ | ಗೋವುಗಳು | ವೃಷಭ (ಎತ್ತು) |
| ೭ | ಸ್ತ್ರೀ, ಪುರುಷರು | ಪುರುಷ |
| ೮ | ವೃಕ್ಷಗಳು | ಆಲದಮರ, ನೇರಳೆಮರ, ಅರಳಿ, ಬೂರುಗ, ಅಗರು, ಬಿದಿರು, |
| ೯ | ಪರ್ವತಗಳು | ಹಿಮಾಲಯ, ಪಾರಿಯಾತ್ರ, ಸಹ್ಯ, ವಿಂಧ್ಯ, ತ್ರಿಕೂಟ, ಶ್ವೇತ, ನೀಲ, ಭಾಸ, ಕ್ರೋಷ್ಟವಾನ್, ಶುಭಸ್ಕಂಧ, ಮಹೇಂದ್ರ, ಮಾಲ್ಯವಾನ್ |
| ೧೦ | ಇಂದ್ರಿಯ ಗಣಗಳು | ಪಂಚಪ್ರಾಣರು |
| ೧೧ | ಗ್ರಹಗಳು | ಸೂರ್ಯ |
| ೧೨ | ನಕ್ಷತ್ರಗಳು | ಚಂದ್ರ |
| ೧೩ | ಪಿತೃಗಳು | ಯಮದೇವರು |
| ೧೪ | ನದಿಗಳು | ಸಮುದ್ರ |
| ೧೫ | ಜಲಾಶಯಗಳು | ವರುಣ |
| ೧೬ | ಇಂದ್ರಿಯಗಳು | ಮಿತ್ರ |
| ೧೭ | ಉಷ್ಣಪದಾರ್ಥಗಳು | ಸೂರ್ಯ |
| ೧೮ | ಬೆಳಕು ಬೀರುವ | ಚಂದ್ರ |
| ೧೯ | ಎಲ್ಲ ಪ್ರಾಣಿಗಳು | ಅಗ್ನಿ |
| ೨೦ | ಬ್ರಾಹ್ಮಣರು | ಬೃಹಸ್ಪತಿ |
| ೨೧ | ಓಷಧಿಗಳು | ಸೋಮ(ಚಂದ್ರ) |
| ೨೨ | ಬಲಿಷ್ಠರು | ವಿಷ್ಣು |

| | | |
|---|---|---|
| ೨೩ | ಶಿಲ್ಪಿಗಳು | ವಿಶ್ವಕರ್ಮ |
| ೨೪ | ರೂಪಗಳು | ತ್ವಷ್ಟ್ರು (ಸೂರ್ಯ) |
| ೨೫ | ಪಶುಗಳು | ಪಶುಪತಿ (ಶಿವ) |
| ೨೬ | ಯಜ್ಞಗಳು | ದಕ್ಷಿಣಾ |
| ೨೭ | ವೇದಗಳು | ಸಾಮವೇದ |
| ೨೮ | ದಿಕ್ಕುಗಳು | ಉತ್ತರ |
| ೨೯ | ಪ್ರತಾಪಗಳಲ್ಲಿ | ಸೋಮ (ರಾಜ) |
| ೩೦ | ಯಕ್ಷರು | ಕುಬೇರ |
| ೩೧ | ದೇವತೆಗಳು | ಪುರಂದರ |
| ೩೨ | ಪ್ರಜೆಗಳು | ಪ್ರಜಾಪತಿ |
| ೩೩. | ಸೃಷ್ಟಿಮಾಡುವ ಅಧಿಕಾರಿಗಳು | ಚತುರ್ಮುಖಬ್ರಹ್ಮ(ಭೂತಾಧಿಕ) |
| ೩೪ | ಚರಾಚರ ಪ್ರಪಂಚ (ಎಲ್ಲರಿಗಿಂತ) ನರಕಿನ್ನರ ಯಕ್ಷಗಂಧರ್ವ ಉರಗ ರಾಕ್ಷಸರು ದೇವದಾನ ನಾಗ ಎಲ್ಲರು | ವಿಷ್ಣು(ಪರತರ) ರಾಜಾಧಿರಾಜ |
| ೩೫ | ಸಮಸ್ತಸ್ತ್ರೀಯರು | ಮಹೇಶ್ವರೀ (ಉಮಾ)ಪಾರ್ವತೀ |
| ೩೬ | ಆಭರಣಭೂಷಿತ ಸ್ತ್ರೀಯರು | ರತಿಯರು, ಅಪ್ಸರೆಯರು |

೧. ಹೀಗೆ ಬ್ರಹ್ಮದೇವರು ಸೃಷ್ಟಿಯ ವಿವಿಧ ಸ್ತರಗಳಲ್ಲಿ ಉತ್ತಮರು ಯಾರೆಂದು ತಿಳಿಸುತ್ತಾ ಮುಂದೆ ಕ್ಷತ್ರಿಯ, ಬ್ರಾಹ್ಮಣರಲ್ಲಿ ವಿವೇಕ ಮಾಡುತ್ತಾರೆ.

ರಾಜರು ಧರ್ಮ, ಕಾಮಗಳ ಲಕ್ಷಣವುಳ್ಳವರು, ಬ್ರಾಹ್ಮಣರು ಧರ್ಮದ ಲಕ್ಷಣವುಳ್ಳವರು. ಆದ್ದರಿಂದ ಧರ್ಮದ ಸೇತುವೆಯಾಗಿರುವ ಬ್ರಾಹ್ಮಣರನ್ನು ಕ್ಷತ್ರಿಯರು ರಕ್ಷಿಸಬೇಕು. ಯಾವ ರಾಜ್ಯದಲ್ಲಿ ಬ್ರಾಹ್ಮಣರು ದುಃಖಿತರಾಗಿದ್ದಾರೋ, ಆ ರಾಜರು ಸತ್ತ ಮೇಲೆ ದುರ್ಗತಿ ಹೊಂದುತ್ತಾರೆ. ಬ್ರಾಹ್ಮಣರು ಸುರಕ್ಷಿತರಾಗಿದ್ದಲ್ಲಿ ಅಂತಹ ರಾಜರು ಸದ್ಗತಿ ಹೊಂದುತ್ತಾರೆ.

೨. ಕೆಲ ಪದಾರ್ಥಗಳ ಲಕ್ಷಣಗಳನ್ನು ಹೇಳುತ್ತಾರೆ.

| | | |
|---|---|---|
| ೧ | ಧರ್ಮ | ಅಹಿಂಸಾಲಕ್ಷಣ |
| ೨ | ಮನುಷ್ಯ | ಯಜ್ಞಾದಿಕರ್ಮಗಳನ್ನು ಮಾಡುವವನು |
| ೩. | ಅಧರ್ಮ | ಹಿಂಸಾಲಕ್ಷಣ |
| ೪ | ಆಕಾಶ | ಶಬ್ದ |

| | | |
|---|---|---|
| ೫ | ಸ್ಪರ್ಶ | ವಾಯುವಿನ ಲಕ್ಷಣ |
| ೬ | ರೂಪವು | ತೇಜಸ್ಸಿನ ಲಕ್ಷಣ |
| ೭ | ರಸ | ನೀರಿನ ಲಕ್ಷಣ |
| ೮ | ಗಂಧ | ಪೃಥಿವೀಲಕ್ಷಣ |
| ೯ | ಶಬ್ದ | ಸ್ವರವ್ಯಂಜನಗಳಿಂದ ಸಂಸ್ಕೃತವಾದ ಮಾತು |
| ೧೦ | ಮನಸ್ಸು | ಯುಕ್ತಾಯುಕ್ತ ಚಿಂತಾ |
| ೧೧ | ಬುದ್ಧಿ | ಪದಾರ್ಥಗಳಿಗೆ ಅನುಸಾರವಾಗಿ ಜ್ಞಾನ ಹೊಂದುವುದು ಧ್ಯಾನ |
| ೧೨ | ಸಜ್ಜನರು | ವ್ಯಕ್ತವಾದ ಬಾಹ್ಯಪ್ರಪಂಚವನ್ನು ಮೀರಿ, ಅವ್ಯಕ್ತಪ್ರಪಂಚವೆನಿಸಿದ ಪರಮಾತ್ಮನ ಧ್ಯಾನ ಮಾಡುವುದು |
| ೧೩ | ಕರ್ಮಯೋಗ | ಪ್ರವೃತ್ತಿ |
| ೧೪ | ಸನ್ನ್ಯಾಸ | ಜ್ಞಾನ |

೩. ಇಂದ್ರಿಯಗಳು ಗ್ರಹಿಸುವ ಗುಣಗಳು

| **ಸಂ.** | **ಪದಾರ್ಥ** | **ಗುಣ** | **ಗ್ರಹಿಸುವ ಇಂದ್ರಿಯ** | **ಸಹಾಯಕವಾದುದು-ಮಾಡುವವರು** |
|---|---|---|---|---|
| ೧ | ಪೃಥಿವೀ | ಗಂಧ | ಮೂಗು | ಮೂಗಿನಲ್ಲಿರುವ ವಾಯು |
| ೨ | ನೀರು | ರಸ | ಜಿಹ್ವಾ(ನಾಲಿಗೆ) | ಚಂದ್ರ |
| ೩ | ತೇಜಸ್ಸು | ರೂಪ | ಕಣ್ಣು | ಸೂರ್ಯ |
| ೪ | ವಾಯು | ಸ್ಪರ್ಶ | ಚರ್ಮ | ಅಹಂಕಾರಿಕ ವಾಯು (ಪ್ರಾಣ) |
| ೫ | ಆಕಾಶ | ಘೋಷಃ(ಶಬ್ದ) | ಕಿವಿ | ದಿಗ್ದೇವತೆಗಳು |
| ೬ | ಮನಸ್ಸು | ಚಿಂತನ | ಬುದ್ಧಿ | ಹೃದಯದಲ್ಲಿರುವ ಆತ್ಮ |
| ೭ | ಬುದ್ಧಿ | ನಿಶ್ಚಯಿಸುವುದು | – | ಪ್ರಕೃತಿ |
| ೮ | ಪರಮಾತ್ಮ | ಅಲಿಂಗ (ಪ್ರಕೃತಿಯ ಯಾವ ಗುಣಗಳಿಂದಲೂ ನಿರ್ಣಯ ಮಾಡಲು ಆಗುವುದಿಲ್ಲ) | ಜ್ಞಾನಗಮ್ಯ | ಕ್ಷೇತ್ರಜ್ಞ |

೪. ಅವ್ಯಕ್ತತತ್ತ್ವದಲ್ಲಿ ಮಹದಾದಿ ಜಗತ್ತಿದೆ. ಚತುರ್ಮುಖನು ಅದನ್ನು ನೋಡುತ್ತಾನೆ, ಕೇಳುತ್ತಾನೆ. ತ್ರಿಗುಣಗಳ ಉತ್ಪತ್ತಿ ಲಯಗಳೆ ಅವ್ಯಕ್ತತತ್ತ್ವದಲ್ಲಿವೆ.

ಆದೇ ಕ್ಷೇತ್ರ ಪುರುಷನು (ಪರಮಾತ್ಮ) ಅದನ್ನು ತಿಳಿದಿದ್ದಾನೆ. ಆದ್ದರಿಂದ ಅವನೇ ಕ್ಷೇತ್ರಜ್ಞ. ಅವನೊಬ್ಬನೇ ಈ ಕ್ಷೇತ್ರವನ್ನು ಪೂರ್ಣವಾಗಿ ನೋಡುವವನು. ಭಗವದನುಗ್ರಹದಿಂದಲೇ ಯೋಗ್ಯಚೇತನನುಪ್ರಾಕೃತಗುಣಗಳನ್ನುಭೌತಿಕದೇಹವನ್ನೂತ್ಯಾಗಮಾಡಿ, ದೋಷಮುಕ್ತನಾಗಿ ಅವನನ್ನೇ ಹೊಂದುತ್ತಾನೆ. ಅವನೇ ನಿರ್ದ್ವಂದ್ವ (ದ್ವಂದ್ವಗಳಿಗೆ ಸಿಲುಕದವನು), ಯಾರಿಗೂ ನಮಸ್ಕರಿಸದವನು, ಸ್ವಾಹಾಸ್ವಧಾವಿಧಿಶೂನ್ಯನಾದ, ಅಚಲನಾದ, ಯಾರ ಆಶ್ರಯದಲ್ಲಿಯೂ ಇಲ್ಲದಿರುವ, ವಿಶ್ವದಲ್ಲಿ ಸರ್ವೋತ್ತಮನಾದವನು ಈ ಕ್ಷೇತ್ರಜ್ಞನೇ.

## ೪೫ನೇ ಅಧ್ಯಾಯ

ಬ್ರಾಹ್ಮಣನು ಋಷಿಗಳಿಗೆ ವಿಭಿನ್ನ ಪದಾರ್ಥಗಳಲ್ಲಿ ಶ್ರೇಷ್ಠವಸ್ತು ಯಾವುದು? ಇವೇ ಮೊದಲಾದ ವಿಷಯಗಳನ್ನು ಹೇಳುತ್ತಾನೆ.

ಮಹರ್ಷಿಗಳೆ ಸಮಸ್ತ ಪದಾರ್ಥಗಳ ನಾಮ, ಲಕ್ಷಣಸಹಿತವಾದ, ಆದಿ, ಮಧ್ಯ, ಅಂತಗಳನ್ನು ಅವುಗಳನ್ನು ತಿಳಿಯುವ ಉಪಾಯವನ್ನು ಹೇಳುತ್ತೇನೆ. ಕಾಲಸೃಷ್ಟಿಯಲ್ಲಿ ಮೊದಲು ಹಗಲು, ನಂತರ ರಾತ್ರಿ, ಕ್ರಮೇಣ ಶುಕ್ಲಾದಿ ಪಕ್ಷಗಳು, ಮಾಸಗಳು, ಶ್ರವಣಾದಿ ನಕ್ಷತ್ರಗಳು, ಶಿಶಿರಾದಿ ಋತುಗಳು ಪ್ರಾರಂಭವಾದವು.

ಪಂಚಭೂತಗಳಿಂದ ತನ್ಮಾತ್ರಗಳು ಹುಟ್ಟಿದವು (ಭೂಮಿಯಿಂದ ಗಂಧ) ಭೂತಗಳ ಉತ್ತಮವಾದಗುಣಗಳು ಆದಿಯನ್ನು ಹೇಳುತ್ತೇನೆ ಎಂದನು ಬ್ರಹ್ಮ.[೧]

| ಸಂ. | ಭೂತ | ಆದಿ | ಸಂ. | ಭೂತ | ಆದಿ |
|---|---|---|---|---|---|
| ೧ | ತೇಜಸ್ಸುಗಳಿಗೆ | ಸೂರ್ಯ | ೨ | ಭೂತಗಳಿಗೆ | ಜಠರಾಗ್ನಿ |
| ೩. | ವಿದ್ಯೆಗಳಿಗೆ | ಸಾವಿತ್ರೀ | ೪ | ದೇವತೆಗಳಿಗೆ | ಬ್ರಹ್ಮ |
| ೫ | ವೇದಗಳಿಗೆ | ಓಂಕಾರ | ೬ | ವಾಕ್‌ಗಳಿಗೆ | ಪ್ರಾಣ |
| ೭ | ಛಂದಸ್ಸುಗಳಿಗೆ | ಗಾಯತ್ರೀ | ೮ | ಪಶುಗಳಿಗೆ | ಅಜ |
| ೯ | ಚತುಷ್ಪಾದಗಳಿಗೆ | ಗೋವುಗಳು | ೧೦ | ಮನುಷ್ಯರಿಗೆ | ದ್ವಿಜರು |
| ೧೧ | ಪಕ್ಷಿಗಳಿಗೆ | ಗಿಡುಗ | ೧೨ | ಯಜ್ಞಗಳಿಗೆ | ಅಗ್ನಿಹೋತ್ರ |
| ೧೩. | ಸರಿಯುತ್ತಾ – ತೆವಳುತ್ತಾ ನಡೆಯುವ ಪ್ರಾಣಿಗಳಿಗೆ | ಸರ್ಪ | ೧೪ | ಯುಗಗಳಲ್ಲಿ | ಕೃತಯುಗ |
| ೧೫ | ಸರ್ವರತ್ನಗಳಲ್ಲಿ | ಸುವರ್ಣ | ೧೬ | ಓಷಧಿ | ಗೋಧಿ |

೧ ಅತಃ ಪರಂ ಪ್ರವಕ್ಷ್ಯಾಮಿ ಭೂತಾನಾಮಾದಿಮುತ್ತಮಮ್ ॥ – ೪೫/೫

| | | | | | |
|---|---|---|---|---|---|
| ೧೭ | ಭಕ್ಷ್ಯಭೋಜ್ಯಗಳಲ್ಲಿ | ಅನ್ನ | ೧೮ | ದ್ರವ್ಯಗಳಲ್ಲಿ - ಪೇಯಗಳಲ್ಲಿ | ನೀರು |
| ೧೯ | ಸ್ಥಾವರಗಳಲ್ಲಿ | ಪುಷ್ಕರಕ್ಷೇತ್ರ (ಬ್ರಹ್ಮವೃಕ್ಷ) | ೨೦ | ದ್ವೀಪಗಳಲ್ಲಿ | ಪ್ಲಕ್ಷ |
| ೨೧ | ಪ್ರಜಾಪತಿಗಳಲ್ಲಿ | ಚತುರ್ಮುಖ | ೨೨ | ಬ್ರಹ್ಮನಿಗೂ ಆದಿ | ವಿಷ್ಣು(ಸ್ವಯಂಭೂ) |
| ೨೩ | ಪರ್ವತಗಳು | ಮೇರು | ೨೪ | ದಿಕ್ಕುಗಳು | ಪೂರ್ವ |
| ೨೫ | ನದಿಗಳಲ್ಲಿ | ಗಂಗಾ | ೨೬ | ಸರೋವರ - ಜಲಾಶಯ | ಸಾಗರ |
| ೨೭ | ದೇವದಾನವ-ಭೂತಪಿಶಾಚ-ಉರಗರಾಕ್ಷಸರು ನರಕಿನ್ನರ ಯಕ್ಷರಲ್ಲಿ | ಶಂಕರ ಈಶ್ವರ | ೨೮ | ವಿಶ್ವಕ್ಕೆ ಆದಿ | ವಿಷ್ಣು |
| ೨೯ | ಆಶ್ರಮಗಳಲ್ಲಿ | ಗೃಹಸ್ಥ | ೩೦ | ಸಮಸ್ತ ಜಗತ್ತಿಗೆ | ಅವ್ಯಕ್ತತತ್ತ್ವ ಮೂಲಪ್ರಕೃತಿ |
| ೩೧ | ಹಗಲಿಗೆ ಕೊನೆ | ಸೂರ್ಯಾಸ್ತ | ೩೨ | ರಾತ್ರಿಗೆ ಕೊನೆ | ಸೂರ್ಯೋದಯ |
| ೩೩ | ಸುಖದ ಕೊನೆ | ದುಃಖ | ೩೪ | ದುಃಖದ ಕೊನೆ | ಸುಖ |
| ೩೫ | ಉನ್ನತಸ್ಥಿತಿಗೆ | ಅಧಃಪತನ | ೩೬ | ಯೋಗಕ್ಕೆ (ಸೇರುವರೆಗೆ) | ವಿಯೋಗ |
| ೩೭ | ಜೀವನಕ್ಕೆ | ಮರಣ | | | |

ಸೃಷ್ಟಿಯಾದುವೆಲ್ಲ ವಿನಾಶದಲ್ಲಿಯೇ ಪರ್ಯವಸಾನವಾಗುತ್ತದೆ. ಹುಟ್ಟಿದವನಿಗೆ ಮರಣ ನಿಶ್ಚಯ. ಜಗತ್ತಿನ ಸ್ಥಾವರ ಜಂಗಮಗಳೆಲ್ಲ ಅಶ್ವಾಶ್ವತ.

ಯಜ್ಞದಾನ, ಅಧ್ಯಯನ, ವ್ರತ, ನಿಯ, ಇವೆಲ್ಲ ನಾಶವಾಗುತ್ತವೆ. ಆದರೆ ಜ್ಞಾನಕ್ಕೆ ನಾಶವಿಲ್ಲ. ಆದ್ದರಿಂದ ಪ್ರಸನ್ನತೆಯಿಂದ ಕೂಡಿದ ಮನಸ್ಸಿನಿಂದ ಜಿತೇಂದ್ರಿಯನೂ ಆಗಿ, ಅಹಂಕಾರ ಬಿಟ್ಟು ನಿರ್ದುಷ್ಟನಾದ ಗುಣಪೂರ್ಣನಾದ ಪರಮಾತ್ಮನ ಜ್ಞಾನವನ್ನು ಸಂಗ್ರಹಿಸುವವನು ಎಲ್ಲ ಪಾಪಗಳಿಂದ ದೂರವಾಗುತ್ತಾನೆ.

**ಓಂಕಾರಃ ಸರ್ವವೇದಾನಾಂ ವಚಸಾಂ ಪ್ರಾಣ ಉಚ್ಯತೇ ।**
**ಇತ್ಯಸ್ಮಿನ್ ನಿಧನಂ ಲೋಕೇ ಸರ್ವಂ ಸಾವಿತ್ರ್ಯನೂಚ್ಯತೇ ॥**
**ಗಾಯತ್ರೀಚ್ಛಂದಸಾಮಾದಿಃ ಪಶೂನಾಮಜ ಉಚ್ಯತೇ ।**
**ಗಾವಶ್ಚತುಷ್ಪದಾಮಾದಿರ್ಮನುಷ್ಯಾಣಾಂ ದ್ವಿಜಾತಯಃ ॥**

ಅಹಂ ಪ್ರಜಾಪತೀನಾಂ ಚ ಸರ್ವೇಷಾಂ ನಾತ್ರ ಸಂಶಯಃ ।
ಮಮ ವಿಷ್ಣುರಚಿಂತ್ಯಾತ್ಮಾ ಸ್ವಯಂಭೂರಿತಿ ಸಂಸ್ಮೃತಃ ॥
ದೇವದಾನವಭೂತಾನಾಂ ಪಿಶಾಚೋರಗರಕ್ಷಸಾಮ್ ।
ನರಕಿನ್ನರಯಕ್ಷಾಣಾಂ ಸರ್ವೇಷಾಮೀಶ್ವರಃ ಪ್ರಭುಃ ॥
ಆದಿರ್ವಿಶ್ವಸ್ಯ ಜಗತೋ ವಿಷ್ಣುರ್ಬ್ರಹ್ಮಮಯೋ ಮಹಾನ್ ।
ಭೂತಂ ಪರತರಂ ತಸ್ಮಾತ್ ತ್ರೈಲೋಕ್ಯೇ ನೇಹ ವಿದ್ಯತೇ ॥
ಇಷ್ಟಂ ದತ್ತಂ ತಪೋಽಧೀತಂ ವ್ರತಾನಿ ನಿಯಮಾಶ್ಚ ಯೇ ।
ಸರ್ವಮೇತದ್ ವಿನಾಶಾಂತಂ ಜ್ಞಾನಸ್ಯಾಂತೋ ನ ವಿದ್ಯತೇ ॥
ತಸ್ಮಾಜ್ಜ್ಞಾನೇನ ಶುದ್ಧೇನ ಪ್ರಸನ್ನಾತ್ಮಾ ಸಮಾಹಿತಃ ।
ನಿರ್ಮಮೋ ನಿರಹಂಕಾರೋ ಮುಚ್ಯತೇ ಸರ್ವಪಾಪ್ಮಭಿಃ ॥
-೪೫/೭,೮,೧೩,೧೬,೧೭,೨೨,೨೩

## ೪೬ನೇ ಅಧ್ಯಾಯ

ಬ್ರಹ್ಮದೇವರು ಋಷಿಗಳಿಗೆ ಶರೀರ ಮತ್ತು ಕಾಲಚಕ್ರಕ್ಕೆ ಧರ್ಮಗಳನ್ನು **ರೂಪಕಾಲಂಕಾರದ ಮೂಲಕ** ವರ್ಣಿಸಲಾಗಿದೆ.

೧. ಈ ಕಾಲಚಕ್ರದ ಪ್ರವೃತ್ತಿ ಮತ್ತು ನಿವೃತ್ತಿಗಳನ್ನು ಬಲ್ಲವನು ಎಂದಿಗೂ ಪಂಚಭೂತಗಳಲ್ಲಿ ಮೋಹಗೊಳ್ಳುವುದಿಲ್ಲ (ಪಂಚಭೂತಗಳನ್ನು ಶಾಶ್ವತವೆಂದೂ, ಅವೇ ಸುಖದಾಯಕವೆಂದೂ ತಿಳಿಯುವುದಿಲ್ಲ). ಅವನು ಸಕಲ ಪಾಪಗಳಿಂದ ಮುಕ್ತನಾಗಿ ಪರಮಗತಿಯನ್ನು ಹೊಂದುತ್ತಾನೆ.

೨. ನಂತರ ಬ್ರಹ್ಮಚರ್ಯಾದಿ ನಾಲ್ಕು ಆಶ್ರಮಗಳಿಗೆ ಗೃಹಸ್ಥಾಶ್ರಮವೇ ಆಧಾರವೆಂದು ವರ್ಣಿಸಲಾಗಿದೆ.

೩. ಜಗತ್ತಿನಲ್ಲಿರುವ ವಿವಿಧ ಆಶ್ರಮ(೪)ಗಳ ಗುರಿಯನ್ನು ತಿಳಿಯುವುದೇ ಶಾಶ್ವತ ಕೀರ್ತಿಗೆ ಕಾರಣವಾಗುತ್ತದೆ..

೪. ನಂತರ **ಗೃಹಸ್ಥಾಶ್ರಮಧರ್ಮಗಳನ್ನು** ಬ್ರಹ್ಮದೇವರು ವರ್ಣಿಸುತ್ತಾರೆ. ಅವು ಯಾವುವೆಂದರೆ ೧. ಉಪನಯನ ಸಂಸ್ಕಾರ; ೨. ಸದ್ವ್ರತ- ವೇದಾಧ್ಯಯನ; ೩. ಸದ್ವಂಶದಲ್ಲಿ ಜನಿಸಿದ ಕನ್ಯೆಯೊಡನೆ ವಿವಾಹ; ೪. ತನ್ನ ಪತ್ನಿಯಲ್ಲಿ ಮಾತ್ರ ನಿಯತಿ (ಪರದಾರ) ಇಚ್ಛಾದಿಗಳನ್ನು ನಿಗ್ರಹಿಸುವುದು; ೫. ಜಿತೇಂದ್ರಿಯ ಜೀವನ; ೬. ನಿತ್ಯ ಪಂಚಮಹಾಯಜ್ಞ ಆಚರಣೆ; ೭. ಶ್ರದ್ಧೆಯಿಂದ ಯಾಗಮಾಡುವುದು; ೮. ದೇವತಾತಿಥಿ ಪೂಜಾನಂತರ ಭೋಜನ; ೯. ವೇದೋಕ್ತ ಕರ್ಮಾನುಷ್ಠಾನ; ೧೦. ಯಥಾಶಕ್ತಿ ದಾನ, ಯಜನ; ೧೧. ತನ್ನ ಶರೀರದ ಅಂಗಗಳ ಚಾಪಲ್ಯಕ್ಕೆ ಒಳಗಾಗದಿರುವುದು; ೧೨. ಯಜ್ಞೋಪವೀತವನ್ನು ಎಂದೂ ತ್ಯಾಗ

ಮಾಡದಿರುವುದು; ೧೩. ಬಿಳಿವಸ್ತ್ರಧಾರಣ; ೧೪. ಉತ್ತಮ ವಸ್ತ್ರಧಾರಣ; ೧೫. ಶೌಚವ್ರತ; ೧೬. ಇಂದ್ರಿಯನಿಗ್ರಹ, ದಾನಗಳಿಂದ, ಯಾವಾಗಲೂ ಶಿಷ್ಯರೊಂದಿಗೆ ತತ್ತ್ವವಿಚಾರ; ೧೭. ಉದರ-ಉಪಸ್ಥಾಗಳ ನಿಯಮನ; ೧೮. ಎಲ್ಲ ಪ್ರಾಣಿಗಳೊಡನೆ ಮೈತ್ರಿ; ೧೯. ಶಿಷ್ಟಾಚಾರ - ಗುರುಹಿರಿಯರನ್ನು ಅವರವರ ಯೋಗ್ಯತೆಗನುಗುಣವಾಗಿ ಗೌರವಿಸುವುದು; ೨೦. ಬಿದಿರಿನ ಚಿತ್ರ, ನೀರಿರುವ ಕಮಂಡಲು ಧಾರಣ - ಗೃಹಸ್ಥನು ಮೂರು ಕಮಂಡಲುಗಳನ್ನು ಧರಿಸುತ್ತಾನೆ(ಸಬೇಕು). ಒಂದು ಆಚಮನಕ್ಕಾಗಿ, ಎರಡನೆಯದು ಪಾದ ತೊಳೆದುಕೊಳ್ಳಲು, ಮೂರನೆಯದು ಶುಚಿಗಾಗಿ; ೨೧. ಬ್ರಾಹ್ಮಣನು ಅಧ್ಯಯನ ಮಾಡುವುದಲ್ಲದೆ ಅಧ್ಯಾಪನವನ್ನು (ಬೋಧಿಸುವುದನ್ನೂ) ಮಾಡಬೇಕು; ೨೨. ಯಜನ, ಯಾಜನ; ೨೩. ದಾನ, ಪ್ರತಿಗ್ರಹ - ಹೀಗೆ ಬ್ರಾಹ್ಮಣನಿಗೆ (ಗೃಹಸ್ಥನಿಗೆ) ಆ ಕರ್ಮಗಳು. ಇವುಗಳಲ್ಲಿ ಯಾಜನ, ಅಧ್ಯಾಪನ ಹಾಗೂ ಪ್ರತಿಗ್ರಹಗಳು (ಯಜ್ಞ ಮಾಡಿಸುವುದು, ಪಾಠ ಹೇಳುವುದು, ದಾನ ಸ್ವೀಕಾರಗಳು). ಬದುಕಿನ ವೃತ್ತಿಗಳಾಗಿವೆ. ದಾನವು ಸತ್ಪಾತ್ರರಿಂದಲೇ ಸ್ವೀಕರಿಸಬೇಕು. ಉಳಿದ ಅಧ್ಯಯನ, ಯಜನ, ದಾನಗಳು, ಧರ್ಮಯುಕ್ತವಾಗಿರಬೇಕೇ ಹೊರತು, ಜೀವಿಕೆಗಲ್ಲ. ಈ ಬಗ್ಗೆ ಬ್ರಾಹ್ಮಣನು ಪ್ರಮಾದ ಮಾಡಕೂಡದು (ಆಲಸ್ಯ, ಎಚ್ಚರ ತಪ್ಪುವುದು ಅಪರಾಧ).

ಹೀಗೆ ಬದುಕುವ ಸದ್ವ್ರತಸ್ಥನಾದ ಗೃಹಸ್ಥನು ಸ್ವರ್ಗವನ್ನು ಗೆಲ್ಲುತ್ತಾನೆ.

**ಮಹದಾದಿಶೇಷಾಂತಮಸಕ್ತಂ ಪ್ರಭವಾಪ್ಯಯಮ್ ।**
**ಮನೋಜವಮವಿಶ್ರಾಂತಂ ಕಾಲಚಕ್ರಂ ಪ್ರವರ್ತತೇ ॥**
**ಏತದ್ ದ್ವಂದ್ವಸಮಾಯುಕ್ತಂ ಕಾಲಚಕ್ರಮಚೇತನಮ್ ।**
**ವಿಸೃಜನ್ ಸಂಕ್ಷಿಪಂಶ್ಚಾಪಿ ಬೋಧಯನ್ ಸ್ಥಾಪಯನ್ ಜಗತ್ ॥**
**ಕಾಲಚಕ್ರಪ್ರವೃತ್ತಿಂ ಚ ನಿವೃತ್ತಿಂ ಚೈವ ತತ್ತ್ವತಃ ।**
**ಯಸ್ತು ವೇದ ನರೋ ನಿತ್ಯಂ ನ ಸ ಭೂತೇಷು ಮುಹ್ಯತೇ ॥**
**ಗೃಹಸ್ಥೋ ಬ್ರಹ್ಮಚಾರೀ ಚ ವಾನಪ್ರಸ್ಥೋಽಥ ಭಿಕ್ಷುಕಃ ।**
**ಚತ್ವಾರ ಆಶ್ರಮಾಃ ಪ್ರೋಕ್ತಾಃ ಸರ್ವೇ ಗಾರ್ಹಸ್ಥ್ಯಮೂಲಕಾಃ ॥**
**ಅಧೀತ್ಯಾಧ್ಯಾಪನಂ ಕುರ್ಯಾತ್ ತಥಾ ಯಜನಯಾಜನೇ ।**
**ದಾನಂ ಪ್ರತಿಗ್ರಹಂ ಚೈವ ಷಡ್ಗುಣಾಂ ವೃತ್ತಿಮಾಚರೇತ್ ॥**
**ತ್ರೀಣಿ ಕರ್ಮಾಣಿ ಯಾನೀಹ ಬ್ರಾಹ್ಮಣಾನಾಂ ತು ಜೀವಿಕಾಃ ।**
**ಯಾಜನಾಧ್ಯಾಪನೇ ಚೋಭೇ ಶುದ್ಧಾಚ್ಚಾಪಿ ಪ್ರತಿಗ್ರಹಃ ॥**
**ಸರ್ವಮೇತದ್ ಯಥಾಶಕ್ತಿ ವಿಪ್ರೋ ನಿರ್ವರ್ತಯೇಚ್ಛುಚಿಃ ।**
**ಏವಂ ಯುಕ್ತೋ ಜಯೇತ್ ಸ್ವರ್ಗಂ ಗೃಹಸ್ಥಃ ಸಂಶಿತವ್ರತಃ ॥**

**- ೪೬/೯-೧೧,೧೩,೨೩,೨೪,೨೭**

## ೪೭ನೇ ಅಧ್ಯಾಯ

ಬ್ರಹ್ಮದೇವರು ಋಷಿಗಳಿಗೆ ಬ್ರಹ್ಮಚರ್ಯ ಹಾಗೂ ವಾನಪ್ರಸ್ಥಧರ್ಮಗಳನ್ನು ಉಪದೇಶಿಸುತ್ತಾರೆ.

ಇವು ಬ್ರಹ್ಮಚಾರಿಯ ಕರ್ತವ್ಯಗಳು.

ಸ್ವಧರ್ಮನಿರತ – ೧. ಇಂದ್ರಿಯನಿಗ್ರಹ; ೨. ಮನನಶೀಲತೆ; ೩. ಗುರುವಿಗೆ ಹಿತಕಾರಿಯಾಗಿ ಪ್ರಿಯವನ್ನು ಮಾಡಬೇಕು; ೪. ಸತ್ಯಧರ್ಮಪರನಾಗಿರುವುದು; ೫. ಶೌಚ (ಬಾಹ್ಯಾಂತಃ ಶೌಚ); ೬. ಗುರುವಿನ ಆಜ್ಞೆಯನ್ನು ತೆಗೆದುಕೊಂಡೇ ಊಟ ಮಾಡುವುದು; ೭. ಉಣ್ಣುವ ಅನ್ನವನ್ನು ನಿಂದಿಸದಿರುವುದು; ೮. ಬೇಡಿ ತಂದ ಅನ್ನವನ್ನು ಹವಿಷ್ಯವೆಂದು ಭಾವಿಸುವುದು; ೯. ಯೋಗ್ಯ ಆಸನ, ಸ್ಥಾನ, ವಿಹಾರವಿಟ್ಟುಕೊಳ್ಳುವುದು; ೧೦. ಬೆಳಿಗ್ಗೆ ಹಾಗೂ ಸಾಯಂಕಾಲ ಅಗ್ನಿಕಾರ್ಯ ಮಾಡುವುದು; ೧೧. ಯಾವಾಗಲೂ ಬಿಲ್ವ ಅಥವಾ ಮುತ್ತುಂಗ ದಂಡಧಾರಣೆ; ೧೨. ರೇಷ್ಮೆ ಹತ್ತಿ ಅಥವಾ ಕೃಷ್ಣಾಜಿನ ವಸ್ತ್ರಧಾರಣೆ ಅಥವಾ ಕಾವೀಬಟ್ಟೆ; ೧೩. ಮುಂಜ ಎಂಬ ಹುಲ್ಲಿನಿಂದ ಮಾಡಿದ ಉಡುದಾರ ಧಾರಣೆ; ೧೪. ಜಟಾಧಾರಿಯಾಗಿರುವುದು; ೧೫. ವೇದಾಧ್ಯಯನ; ೧೬. ನಿಯಮಗಳನ್ನು ಉಲ್ಲಂಘಿಸದಿರುವುದು; ೧೭. ಪವಿತ್ರವನ್ನು ಧರಿಸಿ ಪವಿತ್ರ ನೀರಿನಿಂದ ದೇವತರ್ಪಣ ಕೊಡುವುದು

– ಇಂತಹ ಬ್ರಹ್ಮಚಾರಿಯು ಪ್ರಶಂಸೆಗೆ ಪಾತ್ರನಾಗುವನು. ಸ್ವರ್ಗವನ್ನು ಜಯಿಸುತ್ತಾನೆ.

**ವಾನಪ್ರಸ್ಥಧರ್ಮಗಳು**

೧. ಊರ್ಧ್ವರೇಜಸ್ಕನಾಗಿರುವುದು (ಬ್ರಹ್ಮಚರ್ಯ ಪಾಲನೆ); ೨. ಸತ್ (ವಿಹಿತವಾದ) ಸಂಸ್ಕಾರಗಳಿಂದ ಸಂಸ್ಕೃತನಾದ ಬ್ರಹ್ಮಚರ್ಯ ಪಾಲಕನು ಸಂಸಾರದ ಮೋಹ ತೊರೆದು ಗ್ರಾಮದಿಂದ ಹೊರಗೆ ಹೋಗಿ ಅರಣ್ಯದಲ್ಲಿ ವಾಸ ಮಾಡಬೇಕು; ೩. ನಾರುಮಡಿ ಅಥವಾ ಜಿಂಕೆಯ ಚರ್ಮ ಉಡಬೇಕು; ೪. ಬೆಳಿಗ್ಗೆ ಸಾಯಂಕಾಲ ೨ ಸ್ನಾನ; ೫. ಅರಣ್ಯದಲ್ಲಿಯೇ ವಾಸ, ಗ್ರಾಮಕ್ಕೆ ಮತ್ತೆ ಬರಕೂಡದು; ೬. ತನ್ನ ಆಶ್ರಮಕ್ಕೆ ಬಂದವರಿಗೆ ಆತಿಥ್ಯ, ಆಶ್ರಯ, ಸತ್ಕಾರ; ೭. ಅರಣ್ಯದಲ್ಲಿ ಸಿಗುವ ಗಡ್ಡೆ–ಗೆಣಸು–ಶಾಮೆ ಅಕ್ಕಿ, ಫಲ, ಎಲೆಗಳನ್ನು ತಿನ್ನಬೇಕು; ೮. ನಿತ್ಯ ಅರಣ್ಯದಲ್ಲಿ ಸಿಗುವ ಗಾಳಿ, ನೀರು, ಅರಣ್ಯ ಪದಾರ್ಥಗಳು, ಹುಲ್ಲುಗಳನ್ನೇ ಆಶ್ರಯಿಸಿಕೊಂಡು, ಆಲಸ್ಯ ರಹಿತನಾಗಿರಬೇಕು; ೯. ದೇವತಾ–ಅತಿಥಿಪೂಜೆ, ನೈವೇದ್ಯ, ನಂತರ ಮೌನಿಯಾಗಿ ಭೋಜನ; ೧೦. ಅಲ್ಪಾಹಾರ ಸೇವನೆ; ೧೧. ಭಗವಂತನನ್ನು ಆಶ್ರಯಿಸಿ ಬದುಕಬೇಕು; ೧೨. ಇಂದ್ರಿಯನಿಗ್ರಹ; ೧೩. ಎಲ್ಲ ಜೀವಿಗಳೊಡನೆ ಮೈತ್ರಿ, ಸಹಬಾಳ್ವೆ, ಅಹಿಂಸಾವ್ರತ, ಕ್ಷಮಾಶಾಲಿ; ೧೪. ಮೀಸೆ, ಗಡ್ಡಧಾರಿಯಾಗಿರುವುದ (ಕೇಶಕೃಂತನ ಮಾಡದಿರುವುದು); ೧೫. ಅಗ್ನಿಹೋತ್ರ; ೧೬. ಸತ್ಯಧರ್ಮಪರಾಯಣ; ೧೭. ಸ್ವಾಧ್ಯಾಯಶೀಲ; ೧೮. ದೇಹಾಭಿಮಾನತ್ಯಾಗ; ೧೯. ಧರ್ಮಕಾಲಕಾರ್ಯದಲ್ಲಿ ದೀಕ್ಷೆ – ಹೀಗಿರುವವನು ಸ್ವರ್ಗವನ್ನು ಜಯಿಸುತ್ತಾನೆ.

ಮೋಕ್ಷ ಬಯಸುವ ಬ್ರಹ್ಮಚಾರಿ, ಗೃಹಸ್ಥ ವಾನಪ್ರಸ್ಥ - ಆಶ್ರಮಿಗಳು ಉತ್ತಮವಾದ ಸನ್ಯಾಸಾಶ್ರಮ ಸ್ವೀಕಾರ ಮಾಡಬೇಕು.

**ಸನ್ನ್ಯಾಸಧರ್ಮಗಳು -**

೧. ಸರ್ವಪ್ರಾಣಿಗಳಿಗೂ ಅಭಯದಾನ ನೀಡಿ ಕರ್ಮತ್ಯಾಗರೂಪ, ಭಗವತ್ಪ್ರೀತಿಗಾಗಿಯೇ ಧರ್ಮಾಚರಣೆ ಮಾಡಬೇಕು. ಅದೇ ನಿಜವಾದ ಸನ್ನ್ಯಾಸ.

೨. ಸರ್ವಭೂತಹಿತೈಷಿ, ಮೈತ್ರಿ; ೩. ಸರ್ವೇಂದ್ರಿಯ ಜಯ; ೪. ಮನನಶೀಲತೆ; ೫. ಬೇಡದೆ ಬಂದ, ತಾನಾಗಿಯೇ ಬಂದ, ಅನ್ನಭೋಜನ, ಸಿಕ್ಕ ಅನ್ನವನ್ನು ಭಗವತ್ಪ್ರಸಾದವೆಂದು ಬಗೆದು ತಿನ್ನಬೇಕು; ೬. ಶರೀರಯಾತ್ರೆಗೆ ಬೇಕಾದಷ್ಟನ್ನು ಮಾತ್ರ (Just for maintaining body - Mainitanance ratio) (ಪ್ರಾಣಧಾರಣೆಗೆ ಬೇಕಾದಷ್ಟು ಮಾತ್ರ); ೭. ದಾನಸ್ವೀಕಾರ, ನಿಷಿದ್ಧ, ಬಂದಪದಾರ್ಥವನ್ನು ಎಲ್ಲರಿಗೂ ಹಂಚಬೇಕು; ೮. ಪರಸ್ವತ್ತನ್ನು ಸ್ವೀಕರಿಸಲು ಇಚ್ಛಿಸಬಾರದು; ೯. ಶಿಲ್ಪಿಯಾಗಿ ಜೀವನ ಮಾಡಬಾರದು; ೧೦. ವಿಶ್ರಾಂತಿ, ವಿರಾಮ, ವಿಶೇಷಕ್ರೀಡೆಗಳನ್ನು ಬಯಸಬಾರದು; ೧೧. ಯಾರನ್ನೂ ದ್ವೇಷಿಸಬಾರದು, ಅಯೋಗ್ಯರಿಗೆ ಉಪದೇಶಿಸಬಾರದು, ಅಲಂಕಾರ ಮಾಡಿಕೊಳ್ಳಬಾರದು; ೧೨. ಶ್ರದ್ಧೆಯಿಂದ ಪವಿತ್ರವಾದ ಅನ್ನವನ್ನು ಸ್ವೀಕರಿಸಬೇಕು. ಶ್ರಾದ್ಧಾದಿ ಭೋಜನಕ್ಕೆ ಹೋಗಬಾರದು; ೧೩. ಪ್ರಯೋಜನೋದ್ದೇಶ್ಯವಿಲ್ಲದೆ ಸತ್ಕಾರ್ಯ ಮಾಡಬೇಕು; ೧೪. ಪೂರ್ವಾಹ್ನದಲ್ಲಿ ಭಿಕ್ಷೆ ಬೇಡಬೇಕು; ೧೫. ಯಥೇಷ್ಟ ಮಳೆ, ಬೆಳೆ ಇದ್ದ ಗ್ರಾಮದಲ್ಲಿ ಮಾತ್ರ ಭಿಕ್ಷೆ ಬೇಡಬೇಕು; ೧೬. ತುಂಬಾ ಸನ್ಮಾನಿಸಿ ಸತ್ಕರಿಸುವ ಜಾಗದಲ್ಲಿ ಊಟ ಮಾಡಬಾರದು. ಅಂತಹ ಜನರಿಂದ ಜುಗುಪ್ಸಿತನಾಗಬೇಕು; ೧೭. ಪಾಪಸಾಧನೆಗಳಾದ ಅತಿಯಾದ ಪಿತ್ತ, ಕಷಾಯ, ಕಟುಗಳನ್ನು ಮಧುರರಸಗಳನ್ನು ಆಸ್ವಾದಿಸಬಾರದು; ೧೮. ಎಲ್ಲ ಪ್ರಾಣಿಗಳನ್ನು ಮನದಲ್ಲಿ ನೆನೆದು ಅವುಗಳ ಬದುಕಿಗೆ ಹಿಂಸೆಯಾಗದಿರುವಂತೆ ತನ್ನ ಬದುಕನ್ನು ಸಾಗಿಸಬೇಕು; ೧೯. ಶೂನ್ಯಾಗಾರ (ಯಾರು ಇರದ) ಮನೆ, ಅರಣ್ಯ, ಮಠದ ಬುಡ, ನದಿಯನ್ನಾಗಲೀ ಆಶ್ರಯಿಸಬೇಕು. ಪರ್ವತದ ಗುಹೆಯಲ್ಲಾಗಲೀ, ವಾಸ ಮಾಡಬಹುದು; ೨೦. ಗ್ರೀಷ್ಮ ಋತುವಿನಲ್ಲಿ ಒಂದು ಗ್ರಾಮದಲ್ಲಿ ಒಂದು ರಾತ್ರಿಗಿಂತ ಅಧಿಕ ವಾಸಮಾಡಬಾರದು. ಮಳೆಗಾಲದಲ್ಲಿ ಚಾತುರ್ಮಾಸ್ಯಕ್ಕಾಗಿ ಉಳಿಯಬಹುದು; ೨೧. ಹಗಲಿನಲ್ಲಿ ಮಾತ್ರ ಸಂಚಾರ ಮಾಡಿ, ರಾತ್ರಿ ಬಿಡಬೇಕು (ಪ್ರಾಣಿಗಳ ಹಿಂಸೆಯನ್ನು ತಡೆಯಲು). ಸಂಚಾರ ಸಮಯದಲ್ಲಿ ಗ್ರಾಮದಲ್ಲಿ ಸಿಗುವ ದ್ರವ್ಯಗಳಲ್ಲಿ ಸ್ನೇಹ, ಸಂಗ್ರಹ ಬುದ್ಧಿ ಮಾಡಬಾರದು.

೨೨. ಮಂತ್ರಜ್ಞನಾದ ಸನ್ನ್ಯಾಸಿಯು ಪವಿತ್ರ ನೀರಿನಿಂದ ಸತ್ಕರ್ಮಾಚರಣೆ ಮಾಡಬೇಕು (ಬಾವಿ ನೀರು, ನದಿ ನೀರಿನಿಂದ).

೨೩. ಅಹಿಂಸೆ, ಬ್ರಹ್ಮಚರ್ಯ, ಸತ್ಯ, ಆರ್ಜವ (ತ್ರಿಕರಣಗಳಲ್ಲಿ ಏಕತಾನ) ಸರಳತೆ, ಕೋಪವಿರದಿರುವುದು, ಅಸೂಯೆ ಇಲ್ಲದಿರುವುದು, ಇಂದ್ರಿಯನಿಗ್ರಹ, ಚಾಡಿ ಹೇಳದಿರುವುದು, ಇವು ಎಂಟು ವ್ರತಗಳಲ್ಲಿ ಆಸಕ್ತಿ.

೨೪. ಹಿಂಸಾಯುಕ್ತಕಾಮ್ಯಕರ್ಮಗಳನ್ನು ಮಾಡಬಾರದು, ಮಾಡಿಸಬಾರದು.

೨೫. ಎಲ್ಲ ಪದಾರ್ಥಗಳಲ್ಲಿ ವ್ಯಾಮೋಹ ಬಿಟ್ಟು ಅಲ್ಪತೃಪ್ತನಾಗಿ, ಚರಾಚರ ಪ್ರಾಣಿಗಳಲ್ಲಿ ಭಗವಂತನಿದ್ದಾನೆಂದು ಭಾವಿಸಿ ಎಲ್ಲೆಡೆ ಸಂಚರಿಸಬೇಕು.

೨೬. ತಾನೂ ಉದ್ವೇಗಗೊಳ್ಳದೆ, ಬೇರೆಯವರಿಗೂ ಉದ್ವೇಗವುಂಟುಮಾಡಬಾರದು. ಎಲ್ಲರ ಬಗ್ಗೆ ವಿಶ್ವಾಸ ಹೊಂದಿದವನೇ ಶ್ರೇಷ್ಠನೂ, ಮೋಕ್ಷಬಲ್ಲವನೂ ಆಗಿರುವನು.

೨೭. ಮುಂದಿನದನ್ನು (ಭವಿಷ್ಯಕ್ಕಾಗಿ) ಚಿಂತಿಸಬಾರದು, ಹಿಂದಿನದನ್ನು ಯೋಚಿಸ-ಬಾರದು, ವರ್ತಮಾನದ ಬಗ್ಗೆ ಅತ್ಯುತ್ಸಾಹ ತಾಳದೆ (ಉದಾಸೀನನಾಗಿ) - (ಅಪರೋಕ್ಷ-ಜ್ಞಾನಕ್ಕಾಗಿ, ದೇವರದರ್ಶನ) ಕಾಲಪ್ರತೀಕ್ಷೆ ಮಾಡುತ್ತ ಧ್ಯಾನ ಮಾಡುತ್ತಿರಬೇಕು.

೨೮. ಕಣ್ಣಿನಿಂದ, ಮನಸ್ಸಿನಿಂದ, ಮಾತಿನಿಂದ ಯಾರನ್ನೂ ದೂಷಿಸಬಾರದು. ಪ್ರತ್ಯಕ್ಷ ಪರೋಕ್ಷವಾಗಿಯಾಗಲೀ, ದುಷ್ಕಾರ್ಯಗಳನ್ನು ಮಾಡಬಾರದು.

೨೯. ಆಮೆಯಂತೆ ಇಂದ್ರಿಯಗಳನ್ನು ಒಳಗೆ ಸೇರಿಸಬೇಕು (ಜಿತೇಂದ್ರಿಯ). ಮನಸ್ಸು ಬುದ್ಧಿಗಳನ್ನು ವಿಷಯ ಪದಾರ್ಥಗಳಿಂದ ದುರ್ಬಲಗೊಳಿಸಬೇಕು, ಬ್ರಹ್ಮನ ವಿಷಯದಲ್ಲಿ ಪ್ರಬಲಗೊಳಿಸಬೇಕು.

೩೦. ಸುಖದುಃಖಾದಿ ದ್ವಂದ್ವಗಳಿರಬಾರದು. ಬೇರೆಯವರು ನಮಸ್ಕಾರ ಮಾಡಲಿ ಎಂಬ ಮೋಹವಿರಬಾರದು. ಅಗ್ನಿಹೋತ್ರಾದಿಗಳನ್ನು ಮಾಡಬಾರದು, ಅಹಂಕಾರ, ಮಮಕಾರರಹಿತನಾಗಿ, ತನ್ನ ಯೋಗಕ್ಷೇಮದ ಬಗ್ಗೆ ಲಕ್ಷಿಸದೆ, ಚಿಂತಿಸದೆ, ಬ್ರಹ್ಮನಿಷ್ಠನಾಗಿರಬೇಕು (ಬ್ರಹ್ಮನಲ್ಲಿಯೇ ಮನವನಿರಿಸಬೇಕು).

**ಮುಂದೆ ಸನ್ಯಾಸಿಯು ಚಿಂತಿಸಬೇಕಾದ ಬ್ರಹ್ಮನ ರೂಪ ಹೇಳುತ್ತಾರೆ.**

೧. ಪ್ರಾಕೃತ ಕೈಕಾಲು, ತಲೆ, ಉದರಗಳಿಲ್ಲದ, ನಿರ್ಮಲನಾದ, ಸ್ಥಿರನಾದ, ಸರ್ವೋತ್ತಮನಾದ, ಪ್ರಾಕೃತಗಂಧರಸಸ್ಪರ್ಶರೂಪಶಬ್ದರಹಿತನಾದ ಪ್ರಾಕೃತ ಅಸ್ಥಿಮಾಂಸ-ಮಜ್ಜಾದಿಗಳಿರದ, ಪೂರ್ಣವಾಗಿ ಯೋಚಿಸಲು ಅಸಾಧ್ಯವಾದ, ನಾಶರಹಿತನಾದ, ದಿವ್ಯವಾದ, ಅವ್ಯಾಕೃತ ಆಕಾಶದಂತೆ ನಿರ್ವಿಕಾರನಾದ, ಸರ್ವಭೂತಗಳಲ್ಲಿರುವ (ಅಂತರ್ಯಾಮಿಯಾಗಿರುವ), ಪರಮಾತ್ಮನನ್ನು ಯಾರು ನೋಡುತ್ತಾರೋ, ಅವರಿಗೆ ಸಾವು ಬರದು.

೨. ಭಗವಂತನ ವಿಷಯದಲ್ಲಿ ಬುದ್ಧಿಯಾಗಲಿ, ಇಂದ್ರಿಯಗಳಾಗಲಿ, ದೇವತೆಗಳಾಗಲಿ, ವೇದ, ಯಜ್ಞ, ಲೋಕ, ತಪಸ್ಸು ಪರಾಕ್ರಮಗಳಾಗಲಿ ಕೆಲಸ ಮಾಡುವುದಿಲ್ಲ (ತಿಳಿಯವು).

೩. ಅವನ ಸ್ವರೂಪವನ್ನು ಕುತರ್ಕಗಳಿಂದ ತಿಳಿಯಲಾಗದು. ಜ್ಞಾನಿಗಳಿಗೆ ಮಾತ್ರ ಸಿಗುತ್ತಾನೆ

೪. ಅವನನ್ನು ತಿಳಿಯಲು ಧರ್ಮತತ್ತ್ವವನ್ನೇ (ವೇದೋಕ್ತ) ಆಚರಿಸಬೇಕು. ಉಪನಿಷತ್ತಿನ ಧರ್ಮಗಳನ್ನು ಆಶ್ರಯಿಸಿಯೇ ಯಾರೂ ತಿಳಿಯದಂತೆಯೇ ಧ್ಯಾನಿಸಬೇಕು (ಉಪಾಸನೆಯು ಏಕಾಂತದಲ್ಲಿಯೇ ಇರಬೇಕು).

೫. ತಾನು ಗೂಢನಾಗಿರಬೇಕು (ಜಗದಿಂದ ದೂರನಾಗಿ) ಧರ್ಮವನ್ನು ನಿಂದಿಸದೆ ಧ್ಯಾನಿಯಾಗಬೇಕು.

೬. ಸಜ್ಜನರು ಆಚರಿಸುವ ಧರ್ಮಗಳನ್ನು ದೂಷಿಸಬಾರದು. ಭಗವದ್ಧರ್ಮ (ಭಾಗವತ-ಧರ್ಮ)ಕ್ಕೆ ಅವಮಾನವಾಗದಂತೆ ತನ್ನ ಬದುಕನ್ನು ರೂಪಿಸಿಕೊಂಡು ಧರ್ಮಾಚರಣೆ ಮಾಡಬೇಕು.

## ಅಧ್ಯಾಯದ ಉಪಸಂಹಾರ

ಯಾರು ಇಂದ್ರಿಯ, ಅವುಗಳ ವಿಷಯಗಳು, ಪಂಚಮಹಾಭೂತಗಳು, ಮನಸ್ಸು ಬುದ್ಧಿ ಅಹಂಕಾರ, ಮಹತ್ತತ್ತ್ವ, ಪ್ರಕೃತಿ, ಅವ್ಯಕ್ತತತ್ತ್ವ, ಪುರುಷ, ಎಲ್ಲ ತತ್ತ್ವಗಳನ್ನು ಚೆನ್ನಾಗಿ ತಿಳಿದುಕೊಂಡು ಅವುಗಳ ಅಂತರ್ಯಾಮಿಯನ್ನು ನಿರ್ಮಲ ಮನಸ್ಸಿನಿಂದ ಪೂಜಿಸಿ, ಆರಾಧಿಸುತ್ತಾರೋ, ಅವರು ಸರ್ವಬಂಧನಗಳಿಂದ ಮುಕ್ತರಾಗಿ ಸ್ವರ್ಗಕ್ಕೆ ಹೋಗುತ್ತಾರೆ (ಸ್ವರ್ಗ, ಅಂತಿಮ ಮೋಕ್ಷಸ್ಥಾನ).

ಬ್ರಹ್ಮತತ್ತ್ವ ತಿಳಿದವನು ತನ್ನ ಕೊನೆಕಾಲದಲ್ಲಿ ಏಕಾಂತದಲ್ಲಿ ಕುಳಿತು, ತನ್ನ ಹೃದಯಕಮಲದಲ್ಲಿರುವಹರಿಯನ್ನುಧ್ಯಾನಿಸುತ್ತಾನೋ, ಅವನುಸರ್ವಪ್ರಾಕೃತಪದಾರ್ಥಗಳ ಸಂಗದಿಂದ ಮುಕ್ತನಾಗಿ, ಆಕಾಶದಲ್ಲಿರುವ ವಾಯುವಿನಂತೆ ದುಃಖ ಕಳೆದುಕೊಂಡು, ನಿರಾತಂಕವಾಗಿ, ಪರಮಗತಿಯನ್ನು ಹೊಂದುತ್ತಾನೆ.

## ೪೮ನೇ ಅಧ್ಯಾಯ

ಬ್ರಹ್ಮದೇವರು ಋಷಿಗಳಿಗೆ ಸನ್ಯಾಸ, ತಪಸ್ಸು, ಜ್ಞಾನಗಳನ್ನು ಪರಮಪುರುಷಾರ್ಥ-ಸಾಧನವೆಂದು ತಿಳಿಸುತ್ತಾರೆ. ಅದರ ಸಾರ ಹೀಗಿದೆ.

೧. ಇದು ಹೀಗೆಯೇ (ಇದಮಿತ್ಥಂ) ಎಂದು ನಿಶ್ಚಯ ಮಾಡಿ ಹೇಳಲು ಸಮರ್ಥರಾದ, ವೇದಗಳನ್ನು ಬಲ್ಲವರಾದ, ಪರಮಾತ್ಮನಲ್ಲಿಯೇ, ಮನಸ್ಸುಳ್ಳ ಜ್ಞಾನವೃದ್ಧರು ಸನ್ಯಾಸವನ್ನೇ ತಪಸ್ಸೆಂದು ಹೇಳುತ್ತಾರೆ. ಪರಬ್ರಹ್ಮನ ಜ್ಞಾನವೇ ಶ್ರೇಷ್ಠವೆಂದು ಹೇಳುತ್ತಾರೆ.

೨. ವೇದವಿದ್ಯೆಗಳ ನೆರವಿಲ್ಲದೆ ಬ್ರಹ್ಮನ ಸ್ವರೂಪವನ್ನು ನಿರೂಪಿಸಲು ಬರುವುದಿಲ್ಲ. ವೇದವಿದ್ಯೆಗಳಲ್ಲಿದ್ದಲ್ಲಿ ಬ್ರಹ್ಮನೇ ಸರಿ. ಪರಂಬ್ರಹ್ಮ ದ್ವಂದ್ವರಹಿತ, ಪ್ರಾಕೃತಗುಣಶೂನ್ಯ, ನಿತ್ಯ, ಅಚಿಂತ್ಯ, ಶ್ರೇಷ್ಠವಾದ ರಹಸ್ಯತತ್ತ್ವವೂ ಆಗಿದ್ದಾನೆ. ಇಂತಹ ಬ್ರಹ್ಮನನ್ನು ಜ್ಞಾನಿಗಳು ಧ್ಯಾನದಿಂದ, ತಪಸ್ಸಿನಿಂದ ನೋಡುತ್ತಾರೆ (ತಿಳಿಯುತ್ತಾರೆ).

೩. ಜ್ಞಾನಿಗಳು ತಪಸ್ಸನ್ನು ಬೆಳಕು ಎಂದೂ, ಆಚಾರವು ಧರ್ಮಸಾಧಕವೆಂದೂ ಪರತತ್ತ್ವವನ್ನು ಜ್ಞಾನವೆಂದೂ ತಿಳಿದಿದ್ದಾರೆ. ಸನ್ಯಾಸವೇ ಉತ್ತಮತಪಸ್ಸು ಎನಿಸಿದೆ.[೧]

೪. ಯಾರು ನಿರಂತರವಾದ ಬ್ರಹ್ಮಜ್ಞಾನವನ್ನು ಹೊಂದಿದ್ದಾರೋ, ಅವರಿಗೆ ತತ್ತ್ವ ನಿಶ್ಚಯವಾಗಿರುವುದರಿಂದ, ಪರಮಾತ್ಮನನ್ನು ಎಲ್ಲ ಪ್ರಾಣಿಗಳಲ್ಲಿಯೂ ಇರುವವನೆಂದು (ಅಂತರ್ಯಾಮಿ) ನೋಡುತ್ತಾರೆ. ಹಾಗೆ ನೋಡುವವನೇ ಸರ್ವಜ್ಞ. ಅವನು ಮುನಿಗಳ ಸಹವಾಸ, ಮನೆ, ಮಡದಿ, ಬಂಧುಬಾಂಧವರ ಸಂಗ ಬಿಟ್ಟು ಇರುವನೋ, ಅವನು ಬ್ರಹ್ಮನ ಗುಣಕ್ರಿಯೆಗಳಲ್ಲಿ ಏಕತೆಯನ್ನು ಜೀವರಲ್ಲಿ ಭೇದವನ್ನೂ ನೋಡುತ್ತಾನೆ. ಅಂತಹ ಜ್ಞಾನಿ ದುಃಖದಿಂದ ಬಿಡುಗಡೆಯಾಗುತ್ತಾನೆ.

೫. ಭಗವಂತನನ್ನು ಪರಿಪರಿಯಾಗಿ ವರ್ಣಿಸುತ್ತಾ, ಅವನು ಎಲ್ಲ ಜೀವರಿಗೂ ಆಶ್ರಯಸ್ಥಾನನೂ, ಸನಾತನನೂ(ಅನಾದಿ), ಸಮಿತ್ತುಗಳನ್ನು ಸ್ವೀಕರಿಸಲು ಬ್ರಾಹ್ಮಣರಿಗೆ ಯೋಗ್ಯವಾದ, ಅಶ್ವತ್ಥವೃಕ್ಷದಂತೆ ಇರುವ ಈ ಸಂಸಾರವೆಂಬ ಅಶ್ವತ್ಥವೃಕ್ಷ(ನಾಳೆ ಇರದಿರುವ, ಅನಿತ್ಯವಾದ)ವನ್ನು ತತ್ತ್ವಜ್ಞಾನವೆಂಬ ಕೊಡಲಿಯಿಂದ ಜ್ಞಾನಿಯು ಕತ್ತರಿಸುತ್ತಾನೆ, ನಂತರ ಮುಕ್ತನಾಗುತ್ತಾನೆ.[೨]

ಯಾವಾಗಲೂ ಈ ದೇಹವೆಂಬ ವೃಕ್ಷದಲ್ಲಿ ಬದ್ಧನಾಗಿ, ಜೀವ-ದೇಹ ಎಂಬ ಎರಡು ಪಕ್ಷಿಗಳು ಇವು ಕ್ರಿಯಾಶೀಲವಾಗಿದ್ದರೂ ಜಡಗಳೇ. ಇವುಗಳಿಗಿಂತ ಉತ್ತಮನಾದ ಪರಮಾತ್ಮನು ಚೇತನ, ಜ್ಞಾನ ಸ್ವರೂಪಿ ಎಂದು ಹೇಳಲ್ಪಟ್ಟಿದ್ದಾನೆ.[೩]

## ೪೯ನೇ ಅಧ್ಯಾಯ

ಋಷಿಗಳಿಗೆ ಜೀವ, ಬ್ರಹ್ಮರ ಸ್ವರೂಪವನ್ನು ಹೇಳುತ್ತಾರೆ.

ಈ ಅಧ್ಯಾಯದಲ್ಲಿ ಬೇರೆ ಬೇರೆ ಮತಗಳ ಪ್ರಕ್ರಿಯೆಗಳೂ ಬಂದಿವೆ. ತುಂಬಾ ಸಂಕೀರ್ಣವಾಗಿವೆ. ಆದರೂ ಬ್ರಹ್ಮಸ್ವರೂಪ, ಜೀವಸ್ವರೂಪ ನಿರೂಪಕ ಕೆಲವಾಕ್ಯಗಳಿವೆ.

---

೧ ತಪಃ ಪ್ರದೀಪ ಇತ್ಯಾಹುರಾಚಾರೋ ಧರ್ಮಸಾಧಕಃ।
ಜ್ಞಾನಂ ತ್ವೇವ ಪರಂ ವಿದ್ಮಃ ಸನ್ಯಾಸಂ ತಪ ಉತ್ತಮಮ್ ॥ - ೪೮/೫

೨ ಆಜೀವ್ಯಃ ಸರ್ವಭೂತಾನಾಂ ಬ್ರಹ್ಮವೃಕ್ಷಃ ಸನಾತನಃ।
ಏನಂ ಛಿತ್ವಾ ಚ ಭಿತ್ವಾ ಚ ತತ್ತ್ವಜ್ಞಾನಾಸಿನಾ ಬುಧಃ॥ - ೪೮/೧೪

೩. ದ್ವಾವೇತೌ ಪಕ್ಷಿಣೌ ನಿತ್ಯೌ ಸಂಕ್ಷೇಪೌ ಚಾಪ್ಯಚೇತನೌ।
ಏತಾಭ್ಯಾಂ ತು ಪರೋ ಯೋನ್ಯಃ ಚೇತನಾವಾನ್ ಸ ಉಚ್ಯತೇ॥ - ೪೮/೧೬

ಚರ್ಚಾಭಾಗವನ್ನು ಬಿಟ್ಟು ಕೆಲವು ಸಿದ್ಧಾಂತಾಭಿಪ್ರಾಯಪರ ಶ್ಲೋಕಗಳ ಭಾವವನ್ನು ಸಂಗ್ರಹಿಸಲಾಗಿದೆ ಇಲ್ಲಿ.

**ಮುಕ್ತಿಗೆ ಹೋಗುವವರು ಯಾರು?** ಇತ್ಯಾದಿ ಪ್ರಶ್ನೆಗಳಿಗೆ ಉತ್ತರ ಹೀಗಿದೆ:

೧. ಮರಣಸಮಯದಲ್ಲಿ (ಕಾಯತ್ಯಾಗಕ್ಷಣ) ಉಸಿರನ್ನು ಎಳೆಯುವಷ್ಟು ಕಾಲವನ್ನಾದರೂ, ಬುದ್ಧಿಯನ್ನು ಪರಮಾತ್ಮನಲ್ಲಿ ನೆಲೆಸುವಂತೆ ಮಾಡಿ ಬ್ರಹ್ಮಾಪರೋಕ್ಷ ಹೊಂದಿ (ದರ್ಶನ) ದೇಹತ್ಯಾಗ ಮಾಡುವವನು ಮುಕ್ತಿಗೆ ಹೋಗುತ್ತಾನೆ.[೧] ಯಾರು ಕಣ್ಣು ಮುಚ್ಚಿ ತೆಗೆಯುವಷ್ಟು ಕಾಲವಾದರೂ, ಮನಸ್ಸನ್ನು ದೇವರಲ್ಲಿ ನಿಲ್ಲಿಸಿದ್ದಲ್ಲಿ ಆ ಸುಖದಿಂದಲೇ ಅಕ್ಷಯ(ಸುಖದ)ಗತಿಯನ್ನು ಹೊಂದುತ್ತಾನೆ. ಇತ್ಯಾದಿ..

೨. ಯಾರು ಮೊದಲು ಪ್ರಸನ್ನಮನಸ್ಕನಾಗಿ ಭಗವಂತನನ್ನು ಸಂತೋಷಗೊಳಿಸಿ ಲಕ್ಷ್ಮೀತತ್ತ್ವ(ಅವ್ಯಕ್ತ)ಕ್ಕಿಂತ ಶ್ರೇಷ್ಠವಾದ ಕಲ್ಯಾಣಗುಣನಾದ ನಾರಾಯಣನನ್ನು ಹೊಂದುತ್ತಾನೋ, ಅವನು ಬಯಸಿದ್ದೆಲ್ಲವನ್ನು ಹೊಂದುತ್ತಾನೆ.[೨]

೩. ಜ್ಞಾನದಲ್ಲಿ ಮಗ್ನರಾದ ಕೆಲವು ಮಹಾತ್ಮರು ಯೋಗಿಗಳಲ್ಲಿ ನಾಲ್ಕುವಿಧ ಎಂದು ಹೇಳುತ್ತಾ, ಜೀವಬ್ರಹ್ಮರಲ್ಲಿ ಐಕ್ಯವಿದೆ ಎಂದು ಒಪ್ಪುವುದಿಲ್ಲ.[೩]

೪. ನೀರಿನಲ್ಲಿರುವ ಮತ್ಸ್ಯಕ್ಕೂ, ನೀರಿಗೂ ಭೇದವಿರುವಂತೆ (ಆಧಾರ ಆಧೇಯ ಭಾವವಿರುವುದರಿಂದ), ಜೀವ-ಪರಮಾತ್ಮರಿಗೂ ಪರಸ್ಪರ ಆಧಾರ, ಆಧೇಯ ಭಾವರೂಪ ಸಂಬಂಧವಿರುವುದರಿಂದ ಐಕ್ಯ ಹೇಳಲು ಬರುವುದಿಲ್ಲ.[೪]

ಇನ್ನೂ ಅನೇಕ ರೀತಿಯಲ್ಲಿ ಬ್ರಹ್ಮದೇವರು ಋಷಿಗಳಿಗೆ ಹೇಳಿದರೆಂದು ಗುರುಗಳು ಶಿಷ್ಯರಿಗೆ ಹೇಳಿದರು. ನಂತರ ಋಷಿಗಳು ಜಗತ್ತಿನಲ್ಲಿರುವ ವಿವಿಧ ವಿವಾದಾಸ್ಪದ ವಿಷಯಗಳನ್ನು

---

೧ ಉಚ್ಛ್ವಾಸಮಾತ್ರಮಪಿ ಚೇದ್ ಯೋಽಂತಕಾಲೇ ಸಮೋ ಭವೇತ್ ।
ಆತ್ಮಾನಮುಪಸಂಗಮ್ಯ ಸೋಽಮೃತತ್ವಾಯ ಕಲ್ಪತೇ ॥ - ೪೯/೩

೨ ಏವಂ ಪೂರ್ವಂ ಪ್ರಸನ್ನಾತ್ಮಾ ಲಭತೇ ಯದ್ಯದಿಚ್ಛತಿ ।
ಅವ್ಯಕ್ತಾತ್ ಸತ್ತ್ವಮುದ್ರಿಕ್ತಮಮೃತತ್ವಾಯ ಕಲ್ಪತೇ ॥ - ೪೯/೬

೩ ಆಹುರೇತೇ ಮಹಾತ್ಮಾನೋ ಯೇ ಜ್ಞಾನೇಷು ಪ್ರತಿಷ್ಠಿತಾಃ ।
ಕ್ಷೇತ್ರಜ್ಞಸತ್ತ್ವಯೋರೈಕ್ಯಮಿತ್ಯೇತನ್ನೋಪಪದ್ಯತೇ ॥ - ೪೯/೧೧

೪ ಮತ್ಸ್ಯೋ ಯಥಾಽನ್ಯಃ ಸ್ಯಾದ್ ಅಪ್ಸು ಸಂಪ್ರಯೋಗಸ್ತಥಾನಯೋಃ ।
ಸಂಬಂಧತೋಯಬಿಂದೂನಾಂ ಪರ್ಣೈಃ ಕೋಕನದಸ್ಯ ಚ ॥
ಇತ್ಯುಕ್ತವಂತಸ್ತೇ ವಿಪ್ರಾಸ್ತದಾ ಲೋಕಪಿತಾಮಹಮ್ ।
ಪುನಃ ಸಂಶಯಮಾಪನ್ನಾಃ ಪಪ್ರಚ್ಛುರ್ಮುನಿಸತ್ತಮಾಃ ॥
ಕೋ ವಾ ಸ್ವಿದಿಹ ಧರ್ಮಾಣಾಮನುಷ್ಠೇಯತಮೋ ಮತಃ ।
ವ್ಯಾಹತಾಮಿವ ಪಶ್ಯಾಮೋ ಧರ್ಮಸ್ಯ ವಿವಿಧಾಂ ಗತಿಮ್ ॥ - ೪೯/೧೪-೧೬

ಹೇಳುತ್ತಾ (ಶ್ಲೋ. ೧೫-೩೨ರವರೆಗೆ ನಾಸ್ತಿಕ, ಆಸ್ತಿಕ, ಬೌದ್ಧ ಅದ್ವೈತವಾದಿಗಳ ಅಭಿಪ್ರಾಯಗಳನ್ನು) ಒಟ್ಟಾರೆ 'ಈ ಮಾರ್ಗವೇ ಶ್ರೇಯಸ್ಕರವಾದುದು' ಎಂದು ಯಾವುದನ್ನು ಹೇಳುತ್ತೀರಿ[1] ಎಂದು ಬ್ರಹ್ಮದೇವರನ್ನು ಕೇಳಿದಾಗ ಬ್ರಹ್ಮದೇವರು ಉತ್ತರಿಸುತ್ತಾರೆ. (೫೦ನೇ) ಅಧ್ಯಾಯದಲ್ಲಿ ವಿವಾದಾಸ್ಪದ ವಿಷಯಗಳು ಯಾವುದೆಂದು ಮೂಲದಲ್ಲಿಯೇ ನೋಡುವುದು. ಇಲ್ಲಿ ಹೇಳಿರುವುದು ತೀರ ಸಂಕ್ಷಿಪ್ತಭಾವ.

## ೫೦ ನೇ ಅಧ್ಯಾಯ

ಬ್ರಹ್ಮನು ಋಷಿಗಳಿಗೆ ಅವರು ವ್ಯಕ್ತಪಡಿಸಿದ ಸಂದೇಹಗಳನ್ನು ಪರಿಹರಿಸುತ್ತಾರೆ.

೧. ಯಾವುದೇ ಪ್ರಾಣಿಗಳ ಹಿಂಸೆ ಮಾಡದಿರುವುದು ಶ್ರೇಷ್ಠವಾದ ಕರ್ತವ್ಯ (ಕೃತ್ಯತಮ). ಈ ವ್ರತವು ಉದ್ವೇಗವಿಲ್ಲದೆ ಶ್ರೇಷ್ಠವಾದ ಧರ್ಮದ ಲಕ್ಷಣವಾಗಿದೆ (ಒಂದು). ನಾಸ್ತಿಕಪ್ರವೃತ್ತಿಯ, ಹಿಂಸಾಪ್ರವೃತ್ತಿಯ (ಪ್ರಾಣಿಗಳ) ಜನರು ಲೋಭಮೋಹಗಳಿಗೆ ಒಳಗಾಗಿ ನರಕಕ್ಕೆ ಹೋಗುತ್ತಾರೆ.

೨. ಜ್ಞಾನದಿಂದಲೇ (ಪರಮಾತ್ಮನ) ಮೋಕ್ಷಸಾಧನವೆಂದು ನಿಶ್ಚಯಾತ್ಮಕ ಜ್ಞಾನವುಳ್ಳವರು ಹೇಳುತ್ತಾರೆ. ಆದ್ದರಿಂದ ಭಗವದಪರೋಕ್ಷಜ್ಞಾನದಿಂದಲೇ ಎಲ್ಲ ಪಾಪಗಳಿಂದ ಮುಕ್ತರಾಗುತ್ತಾರೆ.[2]

೩. ಸಕಾಮಕರ್ಮಿಗಳು ತಡೆಯಿಲ್ಲದೆ (ಆಲಸ್ಯ ಬಿಟ್ಟು) ಮಾಡುತ್ತಾ ಇದೇ ಲೋಕದಲ್ಲಿ ಮತ್ತೆ ಹುಟ್ಟಿ ಆನಂದಪಡುತ್ತಾರೆ (ಲೌಕಿಕ). ಆದರೆ ಯಾರು ವಿದ್ವಾಂಸರೋ, ನಿಷ್ಕಾಮಕರ್ಮಾಸಕ್ತರಾಗಿ ಶ್ರದ್ಧಾಭಕ್ತಿಗಳಿಂದ ಕೂಡಿದವರಾಗಿರುತ್ತಾರೋ, ಅವರೇ ಜ್ಞಾನಿಗಳು, ಧೀರರು ಮತ್ತು ಸಾತ್ತ್ವಿಕ ಜ್ಞಾನಿಗಳು[3].

೪. ಜೀವೇಶ್ವರಭೇದವನ್ನು ಬ್ರಹ್ಮದೇವರು ಋಷಿಗಳಿಗೆ ವಿಸ್ತಾರವಾಗಿ ಹೇಳುತ್ತಾರೆ. ಅದರಲ್ಲಿ ಒಂದು ಹೀಗಿದೆ:

---

೧ ಏವಂ ವ್ಯುತ್ಥಾಪಿತೇ ಧರ್ಮೇ ಬಹುಧಾ ವಿಪ್ರಬೋಧಿತೇ।
ನಿಶ್ಚಯಂ ನಾಧಿಗಚ್ಛಾಮಃ ಶ್ರೇಯಃ ಕಿಮಿತಿ ಸತ್ತಮ ॥
ಅತಃ ಪರಂ ತು ಯದ್ ಗುಹ್ಯಂ ತದ್ ಭವಾನ್ ವಕ್ತುಮರ್ಹತಿ।
ಸತ್ತ್ವಕ್ಷೇತ್ರಜ್ಞಯೋಶ್ಚೈವ ಸಂಬಂಧಃ ಕೇನ ಹೇತುನಾ ॥ – ೪೯/೨೮,೩೦

೨ ಜ್ಞಾನಾನ್ನಿಃಶ್ರೇಯಸಂ ಪ್ರಾಹುರ್ವೃದ್ಧಾ ನಿಶ್ಚಯದರ್ಶಿನಃ।
ತಸ್ಮಾಜ್ಜ್ಞಾನೇನ ಶುದ್ಧೇನ ಮುಚ್ಯತೇ ಸರ್ವಕಿಲ್ಬಿಷೈಃ ॥
ಹಿಂಸಾಪರಾಶ್ಚ ಲೋಕೇ ಯೇ ಯೇ ಚ ನಾಸ್ತಿಕವೃತ್ತಯಃ।
ಲೋಭಮೋಹಸಮಾಯುಕ್ತಾಸ್ತೇ ವೈ ನಿರಯಗಾಮಿನಃ ॥ –೫೦/೩,೪

೩. ಕುರ್ವತೇ ಯೇ ತು ಕರ್ಮಾಣಿ ಶ್ರದ್ದಧಾನಾ ವಿಪಶ್ಚಿತಃ।
ಅನಾಶೀರ್ಯೋಗಸಂಯುಕ್ತಾಸ್ತೇ ಧೀರಾಃ ಸಾಧುದರ್ಶಿನಃ ॥ – ೫೦/೬

ಕ್ಷೇತ್ರಜ್ಞನೆನಿಸಿದ, ಈ ದೇಹದಲ್ಲಿ ಜೀವಾಂತರ್ಯಾಮಿಯಾಗಿರುವ ಪರಮಾತ್ಮನು ನಿಷ್ಕಲನಾಗಿದ್ದಾನೆ. ಎಂದರೆ ಪ್ರಾಕೃತ ಷೋಡಶಕಲಾರಹಿತನಾಗಿದ್ದಾನೆ. ಶೀತೋಷ್ಣಾದಿ ದ್ವಂದ್ವಗಳಿಂದ ದೂರನಾಗಿದ್ದಾನೆ(ನಿರ್ದ್ವಂದ್ವ). ಇಂತಹ ಪರಮಾತ್ಮನನ್ನು ಜೀವನು ಯಾವಾಗ ನೋಡುತ್ತಾನೋ, ಅಣುರೇಣುತೃಣಕಾಷ್ಠಗಳಲ್ಲಿ(ಎಲ್ಲ ಕಡೆ) ಆಗ ಈ ದೇಹದ ಅಭಿಮಾನವನ್ನು ಜೀವನು ಬಿಡುತ್ತಾನೆ. ಕಮಲದ ಎಲೆಯ ಮೇಲೆ ಅಸಂಗವಾಗಿ ಕುಳಿತ ನೀರಿನ ಹನಿಯಂತೆ ಈ ದೇಹದಲ್ಲಿ ಅಸಂಗನಾಗಿ ವಾಸಿಸುತ್ತಾನೆ (ಜೀವ).[೧]

೫. ಹೇಗೆ ಸುದೀರ್ಘವಾದ ದಾರಿಯನ್ನು ಕಾಲ್ನಡಿಗೆಯಲ್ಲಿ ಹೋಗುವುದು ತುಂಬಾ ದುಃಖಕಾರ್ಯವೋ, ಹಾಗೆಯೇ ತತ್ತ್ವಜ್ಞಾನರಹಿತನು ತಾನು ತಲುಪಬೇಕಾದ ಕರ್ಮಫಲವನ್ನು ಕರ್ಮಮಾರ್ಗದಿಂದ ಹೊಂದಲಾರನು.[೨] ಮಹಾಸಮುದ್ರವನ್ನು ದೋಣಿಯಿಲ್ಲದೆ ದಾಟುವುದು ಹೇಗೆ ಅಶಕ್ಯವೋ, ಬಾಹುಗಳಿಂದ ದಾಟುವುದು ಅಸಾಧ್ಯವೋ ಹಾಗೆ ಜ್ಞಾನಾಶ್ರಯವಿಲ್ಲದೆ ಸಂಸಾರ ದಾಟುವುದು ಅಸಾಧ್ಯ. ಹಾಗೆ ಭಾವಿಸುವುದು ಮೂರ್ಖತನವೇ ಸರಿ.[೩]

ಚಕ್ಕುಲಿಯನ್ನು ತಿನ್ನುವಾಗ ತ್ವಕ್, ಜ್ಞಾನೇಂದ್ರಿಯವು ಅದರ ಸ್ಪರ್ಶದಲ್ಲಿ ಮಾತ್ರ ಏಕಾಗ್ರತೆ ಹೊಂದಿರುತ್ತದೆ. ಕಣ್ಣು ಚಕ್ಕುಲಿಯ ರೂಪದಲ್ಲಿ, ಮೂಗು ಅದರ ವಾಸನೆ, ಗಂಧದಲ್ಲಿ, ಕಿವಿಯು ತಿನ್ನುವಾಗ ಉಂಟಾಗುವ ಶಬ್ದದಲ್ಲಿ, ನಾಲಿಗೆಯು ರುಚಿಯಲ್ಲಿ ಆಸಕ್ತವಾಗಿರುತ್ತದೆ. ಆದ್ದರಿಂದ ಬೇರೆ ಜ್ಞಾನಗಳು ಹೇಗೆ ಬರುತ್ತವುದಿಲ್ಲವೋ ಹಾಗೆಯೇ ಪ್ರಕೃತಿಯಲ್ಲಿ ಬದ್ಧನಾದವನು ಪ್ರಕೃತಿಯ ಗುಣಗಳನ್ನು ಆಸ್ವಾದಿಸುತ್ತಾನೆ ಹೊರತು, ಪರಮಾತ್ಮನನ್ನು ತಿಳಿಯುವುದಿಲ್ಲ.

---

೧ ನಿರ್ದ್ವಂದ್ವೋ ನಿಷ್ಕಲೋ ನಿತ್ಯಂ ಕ್ಷೇತ್ರಜ್ಞೋ ನಿಷ್ಕಲಾತ್ಮಕಃ।
ಸಮಾಸಜ್ಞಾನತತ್ತ್ವೇನ ಯದಾ ಸರ್ವತ್ರ ದೃಶ್ಯತೇ॥ - ೫೦/೧೧

೨ ಯಥಾ ಚ ದೀರ್ಘಮಧ್ವಾನಂ ಪದ್ಭ್ಯಾಮೇವ ಪ್ರವರ್ತತೇ।
ಅದೃಷ್ಟಪೂರ್ವಂ ಸಹಸಾ ತತ್ತ್ವದರ್ಶನವರ್ಜಿತಃ॥
ತಮೇವ ಚ ಯಥಾಽಧ್ವಾನಂ ರಥೇನೈವಾಶುಗಾಮಿನಾ।
ಯಾಯಾದಶ್ವಪ್ರಯುಕ್ತೇನ ತಥಾ ಬುದ್ಧಿಮತಾಂ ಗತಿಃ॥
ಊರ್ಧ್ವಂ ಪರ್ವತಮಾರುಹ್ಯ ನಾನ್ವವೇಕ್ಷೇತ ಭೂತಲಮ್।
ರಥೇನ ರಥಿನಂ ಪಶ್ಯೇತ್ ಕ್ಲಿಶ್ಯಮಾನಮಚೇತನಮ್॥
ಯಾವದ್ ರಥಪಥಸ್ತಾವದ್ ರಥೇನ ಸ ತು ಗಚ್ಛತಿ।
ಕ್ಷೀಣೇ ರಥಪಥೇ ಪ್ರಾಜ್ಞೋ ರಥಮುತ್ಸೃಜ್ಯ ಗಚ್ಛತಿ॥
ಏವಂ ಗಚ್ಛತಿ ಮೇಧಾವಿ ತತ್ತ್ವಜ್ಞೋ ಮೋಕ್ಷಮಾರ್ಗವಿತ್
ಸಮಾಜ್ಞಾಯ ಮಹಾಬುದ್ಧಿರುತ್ತರಾದುತ್ತರೋತ್ತರಮ್॥ - ೫೦/೨೨

೩ ಯಥಾ ಮಹಾರ್ಣವಂ ಘೋರಮಪ್ಲವಃ ಸಂಪ್ರಗಾಹತೇ।
ಬಾಹುಭ್ಯಾಮೇವ ಸಮ್ಮೋಹಾದ್ ವಧಮಿಚ್ಛತ್ಯಸಂಶಯಮ್॥ - ೫೦/೨೩

ಮುಂದೆ ಬ್ರಹ್ಮನು ಅವ್ಯಕ್ತವೆನಿಸಿದ ಪ್ರಕೃತಿಯಿಂದ ಮಹತ್ತತ್ತ್ವವು ಪ್ರಕೃತಿಯ ಕಾರ್ಯವೆಂದೂ, ಅದರಿಂದ ಅಹಂಕಾರತತ್ತ್ವವೆಂಬ ಕಾರ್ಯದ ಹುಟ್ಟು ಅದರಿಂದ ಪಂಚಮಹಾಭೂತಗಳ ಜನನ, ಪ್ರತ್ಯೇಕ ಪ್ರತ್ಯೇಕವಾಗಿ ಅವುಗಳ ಗುಣಗಳಾದ ಶಬ್ದಾದಿಗಳು ಕೂಡಾ ಹೇಳಲಾಗಿದೆ.

ಅಹಂಕಾರತತ್ತ್ವದಿಂದ ಮೊದಲು ಹುಟಿದ ಆಕಾಶವು ಶಬ್ದವೆಂಬ ಒಂದೇ ಗುಣವುಳ್ಳದ್ದು. ಆಕಾಶದಿಂದ ಹುಟ್ಟಿದ ವಾಯುವಿಗೆ ಶಬ್ದ ಹಾಗೂ ಸ್ಪರ್ಶಗಳೆಂಬ ಎರಡು ಗುಣಗಳು. ನಂತರ ಹುಟ್ಟಿದ ತೇಜಸ್ಸಿಗೆ ಶಬ್ದ, ಸ್ಪರ್ಶ, ರೂಪಗಳೆಂಬ ಮೂರು ಗುಣಗಳಾದರೆ, ಆಮೇಲೆ ಹುಟ್ಟಿದ ಜಲಕ್ಕೆ ನಾಲ್ಕು ಗುಣಗಳಿವೆ. ಅವು ಶಬ್ದ, ಸ್ಪರ್ಶ, ರೂಪ ಮತ್ತು ರಸ. ನಂತರ ಜಲದಿಂದ ಹುಟ್ಟಿದ ಪೃಥ್ವಿಗೆ ಶಬ್ದ, ಸ್ಪರ್ಶ, ರೂಪ, ರಸ ಹಾಗೂ ಗಂಧಗಳೆಂಬ ಐದು ಗುಣಗಳು ಇವೆ.

ಪ್ರಧಾನ-ಅವ್ಯಕ್ತ-ಪ್ರಕೃತಿ-ಮಹತ್ತತ್ತ್ವ



ಅಹಂಕಾರತತ್ತ್ವ



| ಭೂತ ತನ್ಮಾತ್ರ (ಗುಣಗಳು) | ಆಕಾಶ | ವಾಯು | ತೇಜಸ್ಸು | ಜಲ | ಪೃಥಿವೀ |
|---|---|---|---|---|---|
| | ೧. ಶಬ್ದ | ೧. ಸ್ಪರ್ಶ | ೧. ರೂಪ | ೧. ರಸ | ೧. ಗಂಧ |
| | | ೨. ಶಬ್ದ | ೨. ಸ್ಪರ್ಶ | ೨. ಸ್ಪರ್ಶ | ೨. ರಸ |
| | | | ೩. ಶಬ್ದ | ೩. ಶಬ್ದ | ೩. ರೂಪ |
| | | | | ೪. ರೂಪ | ೪. ಸ್ಪರ್ಶ |
| | | | | | ೫. ಶಬ್ದ |

ಪಂಚಭೂತಗಳ ಇತರೆ ಗುಣಗಳು

೧. ಪೃಥಿವೀ – ಗಂಧ(ಮುಖ್ಯಗುಣ) – ಪ್ರಕಾರ– ಇಷ್ಟಗಂಧ, ಅನಿಷ್ಟಗಂಧ, ಮಧುರ, ಹುಳಿ, ಕಟು, ನಿರ್ಹಾರಿ, ಮಿಶ್ರಿತ, ಸ್ನಿಗ್ಧ ಕಠಿಣ, ವಿಶದ (೧೦ ಗುಣಗಳು).

೨. ಜಲ – ಶಬ್ದ, ಸ್ಪರ್ಶ, ರೂಪ, ರಸ –ನೀರಿನ ಗುಣಗಳು ನಾಲ್ಕು– ರಸಮುಖ್ಯ, ರಸಗಳ ಪ್ರಕಾರ – ಮಧುರ, ಆಮ್ಲ, ಕಟು, ತಿಕ್ತ, ಕಷಾಯ, ಲವಣ, ಆರು ವಿಧ ರಸಗಳು ನೀರಿನಿಂದ ಹುಟ್ಟುತ್ತವೆ.

೩.. ತೇಜಸ್ಸು – ಶಬ್ದ, ಸ್ಪರ್ಶ, ರೂಪ – ಮೂರು ಗುಣಗಳು (ತೇಜಸ್ಸಿನ), ಇದರ ಪ್ರಕಾರಗಳು – ಬಿಳಿ, ಕಪ್ಪು ಕೆಂಪು, ನೀಲಿ, ಹಳದಿ, ಅರುಣ, ಹ್ರಸ್ವ, ದೀರ್ಘ, ಕೃಶ, ಸ್ಥೂಲ, ಚಚ್ಚೌಕ, ದುಂಡು – ಹೀಗೆ ಹನ್ನೆರಡು ಪ್ರಕಾರದ ತೇಜಸ್ಸುಗಳು.

೪. ವಾಯು – ಶಬ್ದ ಹಾಗೂ ಸ್ಪರ್ಶಗಳು – ೨ ಗುಣಗಳು. ಸ್ಪರ್ಶಮುಖ್ಯ ೧೨ ಸ್ಪರ್ಶಪ್ರಕಾರಗಳು – ಉಷ್ಣ ಶೀತ, ಸುಖ, ದುಃಖ, ಸ್ನಿಗ್ಧ ವಿಶದ, ಕಠಿಣ, ನುಣುಪು, ಶ್ಲಕ್ಷ್ಣ ಜಿಡ್ಡು ದಾರುಣ, ಕೋಮಲ.

೫. ಆಕಾಶ – ಆಕಾಶದ ಗುಣ ಶಬ್ದ ಒಂದೇ. ಅದರ ಪ್ರಕಾರಗಳು ಷಡ್ಜ ಋಷಭ, ಗಾಂಧಾರ, ಮಧ್ಯಮ, ಪಂಚಮ, ನಿಷಾದ, ದೈವತ, ಇಷ್ಟ ಅನಿಷ್ಟ ಸಂಹತ ಎಂದು ಹತ್ತು ಪ್ರಕಾರಗಳು.

ಆಕಾಶವು ಎಲ್ಲ ಭೂತಗಳಿಗಿಂತ ಉತ್ತಮ ಅದಕ್ಕಿಂತ ಶ್ರೇಷ್ಠ ಅಹಂಕಾರ ತತ್ತ್ವ, ಅದಕ್ಕಿಂತ ಬುದ್ಧಿತತ್ತ್ವ, ಇದಕ್ಕಿಂತಲೂ ಮಹತ್ತತ್ತ್ವಾಭಿಮಾನಿ ಬ್ರಹ್ಮಶ್ರೇಷ್ಠ ಈತನಿಗಿಂತಲೂ ಅವ್ಯಕ್ತತತ್ತ್ವಾಭಿಮಾನಿ ಲಕ್ಷ್ಮೀದೇವಿ ಉತ್ತಮಳು. ಅವ್ಯಕ್ತಕ್ಕಿಂತ ಉತ್ತಮನು ಪರಮಪುರುಷ ನಾರಾಯಣ.[೧]

## ೫೧ನೇ ಅಧ್ಯಾಯ

ಬ್ರಹ್ಮದೇವರು ಋಷಿಗಳಿಗೆ ಮಾಡಿದ ಉಪದೇಶದ ಉಪಸಂಹಾರ, ಇದನ್ನು ತನ್ನ ಶಿಷ್ಯರಿಗೆ ಹೇಳಿದ ಗುರು, ಇದೆಲ್ಲವನ್ನು ಅರ್ಜುನನಿಗೆ ಹೇಳಿ, ಆತನ ದುಃಖ ದೂರ ಮಾಡಿದ ಕೃಷ್ಣನು ಅರ್ಜುನನಿಗೆ ದ್ವಾರಕೆಗೆ ತಾನು ಹೋಗಲು ಧರ್ಮರಾಜನಿಂದ ಅನುಮತಿಯನ್ನು ಕೋರುತ್ತಾನೆ.

೧. ಎಲ್ಲ ಪಂಚಭೂತಗಳ ಸೃಷ್ಟಿ ಹಾಗೂ ನಿಯಮನವನ್ನು ಮನಸ್ಸೇ ಮಾಡುತ್ತದೆ. ಆ ಸಾಮರ್ಥ್ಯ ಇತರ ಇಂದ್ರಿಯಗಳಿಗೆ ಇಲ್ಲ. ಪಂಚಭೂತಗಳಿಗೆ ಆಧಾರ (ಅಧಿಷ್ಠಾತೃ) ಮನಸ್ಸೇ. ಬುದ್ಧಿಯು ಜೀವನಲ್ಲಿರುವ ಐಶ್ವರ್ಯವನ್ನು ಹೇಳುತ್ತದೆ. ಬುದ್ಧಿ ಮನಸ್ಸು ಪಂಚಭೂತಗಳಿಗೆಲ್ಲ ನಿಯಾಮಕನಾದ ಪರಮಾತ್ಮನು **ಸರ್ವ** ಎನಿಸುತ್ತಾನೆ. ಜೀವರ ಶರೀರವೇ **ರಥ.** ಅದನ್ನು ಚಲಿಸುವಂತೆ ಮಾಡುವವನು ಭಗವಂತ. **ಮನಸ್ಸು** ಇಂದ್ರಿಯಗಳೆಂಬ ಕುದುರೆಗಳನ್ನು ನಿಯಮಿಸುತ್ತದೆ. **ಮನಸ್ಸು ಬುದ್ಧಿಗಳನ್ನು ಕ್ಷೇತ್ರಜ್ಞ** ಎಂದು ಕರೆಯಲ್ಪಡುವ ಪರಮಾತ್ಮನು ನಿಯಮಿಸುತ್ತಾನೆ.[೨]

ಇಂದ್ರಿಯ ಸಮೂಹದಿಂದ ಕೂಡಿರುವ **ಶರೀರವೇ** ಭಗವಂತನ **ರಥ.** ಏಕಾಗ್ರತೆಯ **ಮನಸ್ಸು ಸಾರಥಿ. ಬುದ್ಧಿಯೂ ನಿಯಂತ್ರಿಸುವ ಹಗ್ಗ** (ಕಡಿವಾಣ– ಬಾರುಕೋಲು). ಹೀಗೆ

೧ ಆಕಾಶಮುತ್ತಮಂ ಭೂತಮಹಂಕಾರಸ್ತತಃ ಪರಃ।
ಅಹಂಕಾರಾತ್ ಪರಾ ಬುದ್ಧಿಃ ಬುದ್ಧೇರಾತ್ಮಾ ತತಃ ಪರಃ॥
ಪರಾವರಜ್ಞೋ ಭೂತಾನಾಂ ಯಂ ಪ್ರಾಪ್ಯಾನಂತ್ಯಮಶ್ನುತೇ॥ – ೫೦/೫೮,೬೦

೨ ಇಂದ್ರಿಯಾಣಿ ಮನೋ ಯುಕ್ತೇ ಸದಾಶ್ವಾನಿವ ಸಾರಥೀ।
ಇಂದ್ರಿಯಾಣಿ ಮನೋ ಬುದ್ಧಿಃ ಕ್ಷೇತ್ರಜ್ಞೇ ಯುಜ್ಯತೇ ಸದಾ॥ – ೫೧/೩

ಪರಬ್ರಹ್ಮನಿಂದ ನಿಯಮಿತವಾದ ದೇಹವೆಂಬ ರಥವನ್ನು ತಿಳಿದವನು ಧೀರ, ಪ್ರಾಣಿಗಳಲ್ಲಿ ಶ್ರೇಷ್ಠನು. ಅವನು ಎಂದೂ ಮೋಹಕ್ಕೆ (ಮಿಥ್ಯಾಜ್ಞಾನ) ತುತ್ತಾಗುವುದಿಲ್ಲ.[೧]

ಪರಬ್ರಹ್ಮನ ಸ್ಥಾನವು ಹೀಗಿದೆ:

೧. ಸ್ಥಳ - ಪೃಥಿವೀ - ಇದರ ಮೂಲ ಅವ್ಯಕ್ತತತ್ತ್ವ

೨. ಇದರಲ್ಲಿರುವುದು - ಸ್ಥಾವರ ಜಂಗಮಗಳು (ಪದಾರ್ಥಗಳು)

೩. ಬೆಳಕು - ಚಂದ್ರಸೂರ್ಯರಿಂದ

೪. ಅಲಂಕಾರ ಸಾಮಗ್ರಿ - ನಕ್ಷತ್ರಗಳು, ನದಿಗಳು, ಪರ್ವತಗಳು, ತೀರ್ಥಗಳು

೫. ಯಾರಿಗೆ ಆಧಾರ/ಗತಿಪ್ರದ - ಎಲ್ಲ ಪ್ರಾಣಿಗಳಿಗೆ

೬. ಹೀಗೆ ಪರಮಾತ್ಮನು ಚರಾಚರ ಪದಾರ್ಥ ಎಲ್ಲ ಪ್ರಾಣಿಗಳಿಂದ ಕೂಡಿಕೊಂಡು ಜೀವರ ಶರೀರವೆಂಬ ರಥದಲ್ಲಿದ್ದು ಸರ್ವತ್ರವ್ಯಾಪ್ತನಾಗಿದ್ದುಕೊಂಡು ಅತ್ತಿತ್ತ ಸಂಚರಿಸುತ್ತಾನೆ.

**ಹೀಗೆ ಭೂಗೋಲವು ಪರಬ್ರಹ್ಮನೆಂಬ ರಾಜನಿಗೆ ರಾಜಮಂದಿರವಾಗಿದೆ. ಅವನು ಕ್ಷೇತ್ರಜ್ಞನಾಗಿದ್ದಾನೆ.**

೨. ಈ ಲೋಕದಲ್ಲಿ ಯಾವೆಲ್ಲ ಭಗವಂತನಿಂದ ಸೃಷ್ಟಿಯಾಗಿವೆಯೋ, ಅವೆಲ್ಲ ಪ್ರಲಯಕಾಲ ಬಂದಾಗ ಅವನಲ್ಲಿಯೇ ಲಯ ಹೊಂದುತ್ತವೆ.

೩. ಸೃಷ್ಟಿಯಾದ ವಿವಿಧ ಜೀವರೆಲ್ಲ ಮೂಲತಃ ಹಾಗೆಯೇ. ಅನಾದಿಕಾಲದಿಂದ ಇರುವವರೇ. ಎಂದರೆ ದೇವ, ಮನುಷ್ಯ, ಗಂಧರ್ವ, ಪಿಶಾಚ, ಉರಗ, ರಾಕ್ಷಸಾದಿಗಳೆಲ್ಲ ಸ್ವಾಭಾವಿಕವಾಗಿ ಆಯಾ ಸ್ವಭಾವದವರೇ. ಅದನ್ನು ಯಾರೂ ಮಾಡಿಲ್ಲ, ಅವರವರ ಸ್ವಭಾವಗಳು ಸೃಷ್ಟಿಯಾದಾಗ ವ್ಯಕ್ತವಾಗಿವೆಯಷ್ಟೇ. ಅದಕ್ಕೆ ಬೇರಾವ ಕಾರಣಗಳೂ ಇಲ್ಲ (ಅದೃಷ್ಟ ಕರ್ಮ ಇತ್ಯಾದಿ).[೨] ಇವೆಲ್ಲ ಮತ್ತೆ ಮತ್ತೆ ಪ್ರತಿ ಸೃಷ್ಟಿಯಲ್ಲೂ ಹುಟ್ಟುತ್ತಿರುತ್ತವೆ (ಹಾಗೆಯೇ). ಮಹದಾದಿ ತತ್ತ್ವಗಳಿಂದ ಸೃಷ್ಟಿಯಾದ ಪಂಚಭೂತಗಳು ಅಲ್ಲಿಯೇ ಲಯ ಹೊಂದುತ್ತವೆ.

೪. ೧. ಬ್ರಹ್ಮನು ಈ ಎಲ್ಲ ಜಗತ್ತನ್ನು ತಪಸ್ಸಿನಿಂದ ಸೃಷ್ಟಿಮಾಡಿದನು.

---

೧ ಇಂದ್ರಿಯಗ್ರಾಮಸಂಯುಕ್ತೋ ಮನಃ ಸಾರಥಿಮೇವ ಚ।
ಬುದ್ಧಿಸಂಯಮನೋ ನಿತ್ಯಂ ಮಹಾನ್ ಬ್ರಹ್ಮಮಯೋ ರಥಃ॥
ಏವಂ ಯೋ ವೇತ್ತಿ ವಿದ್ವಾನ್ ವೈ ಸದಾ ಬ್ರಹ್ಮಮಯಂ ರಥಮ್।
ಸ ಧೀರಃ ಸರ್ವಲೋಕೇಷು ನ ಮೋಹಮಧಿಗಚ್ಛತಿ॥ - ೫೧/೫,೬

೨ ದೇವಾ ಮನುಷ್ಯಾ ಗಂಧರ್ವಾಃ ಪಿಶಾಚೋರಗರಾಕ್ಷಸಾಃ।
ಸರ್ವೇ ಸ್ವಭಾವತಃ ಸೃಷ್ಟಾ ನ ಕ್ರಿಯಾಭ್ಯೋ ನ ಕಾರಣಾತ್॥ - ೫೧/೧೨

೨. ಹಾಗೆಯೇ ದೇವತೆಗಳು, ಋಷಿಗಳು ಕೂಡಾ ತಮ್ಮ ಸ್ಥಾನಗಳನ್ನು ತಪಸ್ಸಿನಿಂದಲೇ ಹೊಂದಿದ್ದಾರೆ.[1]

೩. ಗಡ್ಡೆ ಗೆಣಸು ಮೊದಲಾದ ಫಲಗಳನ್ನು ತಿನ್ನುತ್ತಾ ತಪಸ್ಸನ್ನು ಮಾಡಿ ಸಿದ್ಧರಾದ ಪುರುಷರು ತಪಸ್ಸಿನಿಂದಲೇ ಏಕಾಗ್ರಮನಸ್ಸಿನಿಂದ ಮೂರೂ ಲೋಕಗಳನ್ನು ಪ್ರತ್ಯಕ್ಷವಾಗಿ ನೋಡುತ್ತಾರೆ.

೪. ಆರೋಗ್ಯಸಾಧಕಗಳಾದ ಔಷಧಿಗಳು, ನಾನಾ ವಿದ್ಯೆಗಳು ಕೂಡಾ ತಪಸ್ಸಿನಿಂದಲೇ ಸಿದ್ಧಿಸುತ್ತವೆ. ಎಲ್ಲದಕ್ಕೂ ತಪಸ್ಸೇ ಮೂಲ.

೫. ಹೊಂದಲು ಅಸಾಧ್ಯವಾದ, ಅಭ್ಯಾಸ ಮಾಡಲು ಅಸಾಧ್ಯವಾದ, ಸಹಿಸಲು ಅಸಾಧ್ಯವಾದ, ಸಂಬಂಧ ಹೊಂದಲು ಅಸಾಧ್ಯವಾದ (ನೋಡಲು, ಮುಟ್ಟಲು, ಕೇಳಲು) ಇವೆಲ್ಲವೂ ತಪಸಿನಿಂದ ಸಾಧ್ಯವಾಗಿವೆ. ಆದ್ದರಿಂದ ತಪಸ್ಸಿನ ಪ್ರಭಾವಕ್ಕೆ ಮಿತಿಯಿಲ್ಲ.[2]

೬. ಮದ್ಯಪಾನ ಮಾಡಿರಲಿ, ಬ್ರಹ್ಮಹತ್ಯೆ ಮಾಡಿರಲಿ, ಕಳ್ಳತನ, ಭ್ರೂಣಹತ್ಯೆ ಮಾಡಿರಲಿ, ಗುರುಪತ್ನಿಗಮನ ಮಾಡಿರಲಿ - ಇವೆಲ್ಲ ಪಾಪಗಳನ್ನು ಶ್ರದ್ಧೆ ಮಾಡಿದ ತಪಸ್ಸಿನಿಂದ ಕಳೆದುಕೊಳ್ಳಬಹುದು.[3]

೭. ಮಾನವರು, ಪಿತೃಗಳು, ದೇವತೆಗಳು, ಪಶುಗಳು, ಮೃಗಪಕ್ಷಿಗಳು, ಇತರೆ ಎಲ್ಲ ಚರಾಚರ ಪ್ರಾಣಿಗಳು ನಿತ್ಯವೂ ತಪಸ್ಸಿನಲ್ಲಿ ಆಸಕ್ತರಾಗಿ ಸಿದ್ಧಿಯನ್ನು ಹೊಂದುತ್ತಾರೆ.

೮. ತಪಸ್ಸಿನಿಂದಲೇ ದೇವತೆಗಳೂ ಸ್ವರ್ಗಸ್ಥಾನ ಗಳಿಸಿದ್ದಾರೆ.

೯. ಯಾರು ಫಲದಾಶೆಯಿಂದಲೇ/ಆಲಸ್ಯವಿಲ್ಲದೆ ಕರ್ಮಗಳನ್ನು ಆಚರಿಸುತ್ತಾರೋ, ಅವರೆಲ್ಲ ಪ್ರಜಾಪತಿಯ ಲೋಕಕ್ಕೆ ಹೋಗುತ್ತಾರೆ (ಚತುರ್ಮುಖಬ್ರಹ್ಮನ ಲೋಕಕ್ಕೆ?).[4]

೧೦. ಆದರೆ ಶುದ್ಧಮನಸ್ಕರಾಗಿ ಮಮಕಾರ, ಅಹಂಕಾರ ಬಿಟ್ಟು, ಧ್ಯಾನಯೋಗದಿಂದ ಭಗವಂತನನ್ನು ಧ್ಯಾನಿಸುತ್ತಾರೋ, ಅವರು ಪ್ರಜಾಪತಿಯ ಲೋಕಕ್ಕಿಂತ ಉತ್ತಮವಾದ ಲೋಕವನ್ನು(ವೈಕುಂಠ) ಹೊಂದುತ್ತಾರೆ.

---

೧ ಪ್ರಜಾಪತಿರಿದಂ ಸರ್ವಂ ತಪಸೈವಾಸೃಜತ್ ಪ್ರಭುಃ।
ತಥೈವ ದೇವಾನೃಷಯಸ್ತಪಸಾ ಪ್ರತಿಪೇದಿರೇ॥ – ೫೧/೧೬

೨ ಯದ್ ದುರಾಪಂ ದುರಾಮ್ನಾಯಂ ದುರಾಧರ್ಷಂ ದುರನ್ವಯಮ್।
ತತ್ಸರ್ವಂ ತಪಸಾ ಸಾಧ್ಯಂ ತಪೋ ಹಿ ದುರತಿಕ್ರಮಮ್॥ – ೫೧/೧೯

೩ ಸುರಾಪೋ ಬ್ರಹ್ಮಹಾ ಸ್ತೇನೋ ಭ್ರೂಣಹಾ ಗುರುತಲ್ಪಗಃ।
ತಪಸೈವ ಸುತಪ್ತೇನ ಮುಚ್ಯತೇ ಕಿಲ್ಬಿಷಾತ್ ತತಃ॥ – ೫೧/೨೦

೪ ಆಶೀರ್ಯುಕ್ತಾನಿ ಕರ್ಮಾಣಿ ಕುರ್ವತೇ ಯೇ ತ್ವತಂದ್ರಿತಾಃ।
ಅಹಂಕಾರಸಮಾಯುಕ್ತಾಃ ತೇ ಸಕಾಶೇ ಪ್ರಜಾಪತೇ॥ – ೫೧/೨೪

**ಧ್ಯಾನಯೋಗೇನ ಶುದ್ಧೇನ ನಿರ್ಮಮಾ ನಿರಹಂಕೃತಾಃ।**
**ಆಪ್ನುವಂತಿ ಮಹಾತ್ಮಾನೋ ಮಹಾಂತಂ ಲೋಕಮುತ್ತಮಮ್ ॥ - ೫೧/೨೫**

ಇವರು ಸಜ್ಜನರ ಸಂಗದಿಂದ ಯಥಾರ್ಥಜ್ಞಾನವನ್ನು ಹೊಂದಿರುತ್ತಾರೆ. ಪರಿಣಾಮವಾಗಿ ಭಗವಂತನ ಜ್ಞಾನದಿಂದ ಎಲ್ಲ ಪಾಪಗಳಿಂದ ಮುಕ್ತರಾಗಿ ಎಲ್ಲ ಪ್ರಕಾರದ ಬಿಡುಗಡೆಯನ್ನು ಹೊಂದುತ್ತಾರೆ. ಆ ಪರಮಾತ್ಮನನ್ನು ಕ್ಷೇತ್ರಜ್ಞ ಎಂದು ಚಿಂತಿಸುವುದರಿಂದ ಅವೆಲ್ಲ ವೇದ ಬಲ್ಲವರೆಂದು ಕರೆಯಲ್ಪಡುತ್ತಾರೆ.[೧]

೧೧. ಎರಡಕ್ಷರಗಳ ಪದ ಮೃತ್ಯು ಎನಿಸಿದೆ. ಮೂರ ಅಕ್ಷರಗಳ ಪದ 'ಅಕ್ಷರ' ಬ್ರಹ್ಮಪದವನ್ನು ದೊರಕಿಸುತ್ತದೆ. 'ಮಮ' ಎಂಬ ಎರಡಕ್ಷರ ಪದವು ಮೃತ್ಯು ಎನಿಸಿದೆ. 'ನ ಮಮ ಎಂಬ ಮೂರು ಅಕ್ಷರದ ಪದವು ಶಾಶ್ವತಸುಖಪದವು.[೨]

೧೨. ಜ್ಞಾನನಿಷ್ಠರಾದ, ಜೀವನ್ಮುಕ್ತರಿಗೆ ಪರಮಾತ್ಮನ ದರ್ಶನವೇ ಪರಮಗತಿ ಎನಿಸಿದೆ.[೩]

೧೩. ವಿರಕ್ತರಾದ ಸಜ್ಜನರಿಗೆ ಪರಮಾತ್ಮನೇ ಗತಿಯು. ಇದುವೇ ಸನಾತನಧರ್ಮ. ಜ್ಞಾನಿಗಳಿಂದ ಹೊಂದಬೇಕಾದ ಸ್ಥಾನವೂ ಇದೇ. ಈ ಆಚಾರ ಶುದ್ಧ ನಿರ್ದುಷ್ಟ ನಿಂದಿತವಲ್ಲ.

೧೪. ಯಾವನು ಎಲ್ಲ ಪ್ರಾಣಿಗಳಲ್ಲಿ ಅಂತರ್ಯಾಮಿಯಾದ ಪರಮಾತ್ಮನನ್ನು ಸಮನಾಗಿ ನೋಡುತ್ತಾನೋ, ಜಗತ್ತಿನಲ್ಲಿ ಯಾವ ಆಸೆ, ಆಕಾಂಕ್ಷೆಗಳಿಗೆ, ಫಲಗಳಿಗೆ ನಿರಾಸಕ್ತನಾಗಿರುತ್ತಾನೋ ಅಂತಹ ಸರ್ವತ್ರ ಸಮದರ್ಶಿಯೇ ಪರಬ್ರಹ್ಮನ ಸ್ಥಾನಕ್ಕೆ ಹೋಗುತ್ತಾನೆ[೪] (ಸಾಲೋಕ್ಯ ಮೋಕ್ಷ).

ಬ್ರಹ್ಮರ್ಷಿಗಳೆ! ನಾನು ನಿಮಗೆ ಇದೆಲ್ಲವನ್ನು ವಿಸ್ತಾರವಾಗಿ ಹೇಳಿದ್ದೇನೆ. ನಾನು ಹೇಳಿದಂತೆ ಸಾಧನೆ ಮಾಡಿ ಸಿದ್ಧಿ ಪಡೆಯಿರಿ.

ಗುರುಗಳು ಹೇಳಿದರು:

ಶಿಷ್ಯನೇ! ಬ್ರಹ್ಮದೇವರು ಹೇಳಿದಂತೆ ಮುನಿಗಳು ಆಚರಿಸಿ, ಉತ್ತಮ ಲೋಕವನ್ನು ಹೊಂದಿದರು. ನೀನೂ ಕೂಡಾ ಬ್ರಹ್ಮನ ಮಾತನ್ನು ಅರಿತು ಶುದ್ಧಮನಸ್ಕನಾಗಿ ಆಚರಿಸು(ಸಿದರೆ), ಸಿದ್ಧಿಯನ್ನು ಹೊಂದು (ತ್ತಿ). ಎಂದು ಗುರುವು ಶಿಷ್ಯನಿಗೆ ಹೇಳಿದನು.

---

೧ ಕ್ಷೇತ್ರಜ್ಞ ಇತಿ ತಂ ಚಿಂತ್ಯಾತ್ ಯಸ್ತಂ ವೇದ ಸ ವೇದವಿತ್ ॥ - ೫೧/೩೦

೨ ದ್ವ್ಯಕ್ಷರಸ್ತು ಭವೇನ್ಮೃತ್ಯುಃ ತ್ರ್ಯಕ್ಷರಂ ಬ್ರಹ್ಮ ಶಾಶ್ವತಮ್।
ಮಮೇತಿ ಹಿ ಭವೇನ್ಮೃತ್ಯುರ್ನ ಮಮೇತಿ ಹಿ ಶಾಶ್ವತಮ್ ॥ - ೫೧/೩೩

೩ ಗತಿರೇಷಾಂ ತು ಮುಕ್ತಾನಾಂ ಯೇ ಜ್ಞಾನಪರಿನಿಷ್ಠಿತಾಃ।
ಪ್ರವೃತ್ತಯಶ್ಚ ಯಾಃ ಸರ್ವಾಃ ಪಶ್ಯಂತಿ ಪರಿಣಾಮಜಾಃ॥ - ೫೧/೪೧

೪ ಸಮೇನ ಸರ್ವಭೂತೇಷು ನಿಸ್ಪೃಹೇಣ ನಿರಾಶಿಷಾ।
ಶಕ್ಯಾ ಗತಿರಿಯಂ ಗಂತುಂ ಸರ್ವತ್ರ ಸರ್ಮದರ್ಶಿನಾ॥ - ೫೧/೪೩

ಗುರುವಿನಿಂದ ಉಪದೇಶ ಹೊಂದಿದ ಶಿಷ್ಯನೂ ಕೂಡಾ ಹಾಗೇ ಉತ್ತಮವಾದ ಧರ್ಮವನ್ನು ಆಚರಿಸಿ, ಕೃತಕೃತ್ಯನಾದ, ಮೋಕ್ಷವನ್ನೂ ಪಡೆದನೆಂದು ಶ್ರೀಕೃಷ್ಣನು ಅರ್ಜುನನಿಗೆ ಹೇಳಿದನು. ಅವನು ಹೊಂದಿದ ಮೋಕ್ಷಸ್ಥಾನದಲ್ಲಿ ಶೋಕಕ್ಕೆ ಅವಕಾಶವೇ ಇರುವುದಿಲ್ಲ. ಎಲೈ ಅರ್ಜುನನೇ! ನೀನೂ ಕೂಡಾ ಆ ಬ್ರಾಹ್ಮಣನು ಹೇಳಿದ ಸತ್ಕರ್ಮಗಳನ್ನು ಶುದ್ಧಮನಸ್ಸಿನಿಂದ ಧ್ಯಾನಿಸಿದಲ್ಲಿ ಸಿದ್ಧಿಯನ್ನು ಹೊಂದುವೆ ಎಂದು ಹೇಳಿದನು.

ಶ್ರೀಕೃಷ್ಣನ ಉಪದೇಶವನ್ನು ಕೇಳಿದ ಅರ್ಜುನನು ನೀನು ಉಲ್ಲೇಖಿಸಿದ ಬ್ರಾಹ್ಮಣ ಯಾರು? ಶಿಷ್ಯ ಯಾರು? ಎಂದು ಪ್ರಾಂಜಲನಾಗಿ ಕೇಳಿದನು.[೧] ಅದಕ್ಕೆ ಶ್ರೀಕೃಷ್ಣನು ಆ ಗುರು ನಾನೇ? ನನ್ನ ಮನಸ್ಸೇ ಶಿಷ್ಯ. ನಿನ್ನ ಮೇಲಿನ ಪ್ರೀತಿಯಿಂದ ನಾನು ಇದೆಲ್ಲ (ರಹಸ್ಯ)ವನ್ನು ಹೇಳಿದ್ದೇನೆ.[೨] ನಿನಗೆ ನನ್ನ ಮೇಲೆ ನಿತ್ಯವೂ ಪ್ರೀತಿಯಿದ್ದಲ್ಲಿ ಈ ಅಧ್ಯಾತ್ಮ(ವಿದ್ಯೆ, ತತ್ತ್ವ)ವನ್ನು ನಿತ್ಯವೂ ಆಚರಿಸು. ಮೋಕ್ಷಧರ್ಮವನ್ನು ನೀನು ಆಚರಿಸಿದಲ್ಲಿ ಸಮಸ್ತ ಪಾಪದೂರವಾಗಿ ಶುದ್ಧವಾದ ಮೋಕ್ಷವನ್ನು ಹೊಂದುವೆ. ಹಿಂದೆ ಯುದ್ಧದ ಪ್ರಸಂಗದಲ್ಲಿಯೂ ಇದನ್ನೆ ಹೇಳಿದ್ದೆ (ಅದನ್ನು ಮರೆತ) ನೀನು ಈಗಲಾದರೂ ಆ ವಿಷಯದಲ್ಲಿ ಮನಸ್ಸನ್ನು ಇಡು (ಆಚರಿಸು).

ನಂತರ ಶ್ರೀಕೃಷ್ಣನು ಸಾಮಾನ್ಯ ಲೋಕ ಪುರುಷನಂತೆ 'ನಾನು ನನ್ನ ತಂದೆಯನ್ನು ನೋಡಿ ಬಹಳ (ದಿನಗಳಾದವು) ಕಾಲವಾಯಿತು. ನಿನ್ನ ಅನುಮತಿಯಿಂದ ದ್ವಾರಕೆಗೆ ಹೋಗುವೆ.

ಕೃಷ್ಣನ ಮಾತನ್ನು ಕೇಳಿದ ಅರ್ಜುನನು ನಿನ್ನ ಇಷ್ಟದಂತೆ ಮಾಡು. ನೀನೆ ಸರ್ವಪ್ರಪಂಚದ ಒಡೆಯ. ನಮ್ಮನ್ನು ಪಾಲಿಸು (ನಾನು ಅನುಮತಿ ನೀಡುವುದು ಏನಿದೆ? ನಾವೆಲ್ಲ ನಿನ್ನ ವಚನಪಾಲಕರು ಮಾತ್ರ).

**ಯದಿಷ್ಟಂ ಕುರು ಸರ್ವಸ್ಯಾಪೀಶ್ವರೋಽಸ್ಮಾನ್ ಪ್ರಪಾಲಯ ।**
**ನಮಸ್ತೇ ಸರ್ವಲೋಕಾತ್ಮನ್ ನಾರಾಯಣ ಪರಾತ್ಪರ ॥**
**ಮನೋಮಲಾತ್ ತಪೋಽಶಕ್ಯಂ ಕರ್ಮ ಚಾವಿದ್ಯಯಾ ತಥಾ ।**
**ದಾನಮಪ್ಯರ್ಥದೋಷೇಣ ನಾಮ ತಸ್ಮಾತ್ ಕಲೌ ಸ್ಮರೇತ್ ॥**

**- ೫೧/೫೭-೫೯**

- ಹೀಗೆಸ್ತೋತ್ರ ಮಾಡಿದ ಅರ್ಜುನನುಕೃಷ್ಣನೊಡನೆಹಸ್ತಿನಾವತಿಗೆಹೋಗಿ, ಧರ್ಮರಾಜ ಅಣ್ಣನೊಡನೆ ಆಲೋಚಿಸಿ, ಕೃಷ್ಣನನ್ನು ತುಂಬಾ ಕಷ್ಟದಿಂದಲೇ ದ್ವಾರಕೆಗೆ ಬೀಳ್ಕೊಟ್ಟನು.

**

---

೧ ಕೋ ನ್ವಸೌ ಬ್ರಾಹ್ಮಣಃ ಕೃಷ್ಣ ಕಶ್ಚ ಶಿಷೋ ಜನಾರ್ದನ ।
ಜ್ಞಾತವ್ಯಂ ಚೇನ್ಮಯೈತದ್ ವೈ ತನ್ಮಮಾಚಕ್ಷ್ವ ಮೇ ವಿಭೋ ॥ - ೫೧/೫೦

೨ ಅಹಂ ಗುರುರ್ಮಹಾಬಾಹೋ ಮನಃ ಶಿಷ್ಯೋ ಹಿ ವಿದ್ಧಿ ಮೇ ।
ತ್ವತ್ಪ್ರೀತ್ಯಾ ಸರ್ವಮೇತದ್ ವೈ ಕಥಿತಂ ತೇ ಧನಂಜಯ ॥ - ೫೧/೫೧

## ಮ.ಭಾ.ತಾ.ನಿ. (೩೦/೪೯-೫೮

**ಗೀತೋಕ್ತಂ ವಿಸ್ಮೃತಂ ಚಾಸ್ಮೈ ಪುನರ್ವಿಸ್ತರತೋ ವದತ್ ।**
**ವಾಣೀ ಪ್ರಾಣೋ ವಾಸುದೇವ ಇತ್ಯೇತ್ಯೈರಖಿಲಂ ಶತಮ್ ॥**
**ಸರ್ವೋತ್ತಮತ್ವಮೇತೇಷಾಂ ಸರ್ವಮೇತದ್ವಶೇ ಜಗತ್ ।**
**ಉತ್ತರೋತ್ತಮೇತೇಽಪಿ ಗುಣೋಚ್ಚಾಸ್ತದ್ವಶೇಽಪರೇ ॥**

ಅರ್ಜುನನಿಗೆ ಶ್ರೀಕೃಷ್ಣ ಗೀತೆಯಲ್ಲಿ ಉಪದೇಶಿಸಿದುದು ಮರೆತುಹೋಯಿತು. ಅದನ್ನು ಪುನಃ ವಿಸ್ತಾರವಾಗಿ ಅನುಗೀತೆಯಲ್ಲಿ ಶ್ರೀಕೃಷ್ಣ ಉಪದೇಶಿಸಿದ. ಭಾರತೀ, ಮುಖ್ಯಪ್ರಾಣ, ಶ್ರೀಕೃಷ್ಣ ಈ ಮೂವರಿಂದಲೇ ಅಲ್ಲ ಜಗತ್ತು ವ್ಯಾಪ್ತವಾಗಿದೆ. ಸರ್ವೋತ್ತಮತ್ವ ಈ ಮೂವರಿಗೆ ಮಾತ್ರ ಇದೆ. ಈ ಎಲ್ಲ ಜಗತ್ತು ಇವರ ವಶದಲ್ಲಿ ಇದೆ. ಇವರಲ್ಲಿ ಮೇಲು, ಮೇಲಿನವರು ಹೆಚ್ಚು ಗುಣವಂತರು. ಬೇರೆ ರುದ್ರಾದಿಗಳು ಇವರ ವಶದಲ್ಲಿ ಇರುತ್ತಾರೆ.

**ಇತ್ಥಂ ಹರೇರ್ವಶೇ ಸರ್ವಂ ಗುಣಪೂರ್ಣಶ್ಚ ಸ ಪ್ರಭುಃ ।**
**ಏಕ ಏವ ನ ಚಾನ್ಯೋಽಸ್ತಿ ಪ್ರಾಣೋಚ್ಚಾ ತದಧೋ ರಮಾ ॥**

ಹೀಗೆ ಶ್ರೀಹರಿಯ ವಶದಲ್ಲಿಯೇ ಎಲ್ಲವೂ ಇದೆ. ಗುಣಪೂರ್ಣ ಆ ಪ್ರಭು ಒಬ್ಬನೇ ಹೊರತು ಇನ್ನೊಬ್ಬನಿಲ್ಲ. ಅವನಿಗಿಂತ ಕಡಿಮೆಯವಳು ಮುಖ್ಯಪ್ರಾಣನಿಗಿಂತ ಹೆಚ್ಚಿನವಳು ರಮೆ.

**ಸ ಹುತಾಶ ಇತಿ ಪ್ರೋಕ್ತೋ ಹುತಮತ್ತ್ಯಖಿಲಂ ಯತಃ ।**
**ವಾಕ್ಪ್ರಾಣಮಧ್ಯಗೋ ನಿತ್ಯಂ ಧಾರಯತ್ಯಖಿಲಂ ಜಗತ್ ॥**
**ಸ ಈಶೋ ಬ್ರಹ್ಮರುದ್ರಾದ್ಯಾ ಜೀವಾ ಏವ ಪ್ರಕೀರ್ತಿತಾಃ ।**
**ಯೇ ತಸ್ಯಾನಾದಿಸದ್ಭಕ್ತಾ ಮುಕ್ತಿಯೋಗ್ಯಾ ಹಿ ತೇ ಸ್ಮೃತಾಃ ॥**

ಹೋಮಿಸಿದ್ದೆಲ್ಲವನ್ನು ಉಣ್ಣುವುದರಿಂದ ಶ್ರೀಹರಿ ಹುತಾಶನೆನಿಸಿದ್ದಾನೆ. ವಾಕ್ ಪ್ರಾಣರ ಹೃದಯ ಕಮಲದಲ್ಲಿದ್ದು ನಿತ್ಯವೂ ಸಕಲ ಜಗತ್ತನ್ನು ಅವನೇ ಧರಿಸುತ್ತಾನೆ. ಅವನೆ ಈಶ. ಬ್ರಹ್ಮರುದ್ರಾದಿಗಳೆಲ್ಲ ಜೀವರೆಂದೇ ಕರೆಸಿಕೊಂಡಿದ್ದಾರೆ. ಅವನ ಅನಾದಿ ಸದ್ಭಕ್ತರು ಯಾರೋ ಅವರು ಮುಕ್ತಿಯೋಗ್ಯರೆನಿಸುತ್ತಾರೆ.

**ಅನಾದಿದ್ವೇಷಿಣೋ ಯೇಽಸ್ಮಿಂಸ್ತಮೋಯೋಗ್ಯಾಃ ಸುಪಾಪಿನಃ ।**
**ಮಿಶ್ರಾ ಮಧ್ಯಾ ಇತಿ ಜ್ಞೇಯಾಃ ಸಂಸಾರಪರಿವರ್ತಿನಃ ॥**
**ಏವಂ ಜೀವಾಸ್ತ್ರಿಧಾ ಪ್ರೋಕ್ತಾ ಭವಂತ್ಯೇತೇ ನ ಚಾನ್ಯಥಾ ।**
**ತಾರತಮ್ಯಂ ಚ ವಿಜ್ಞೇಯಂ ಲಿಂಗೈರ್ದೈಹಿಕಮಾನಸೈಃ ॥**

ಶ್ರೀಹರಿಯಲ್ಲಿ ಅನಾದಿ ದ್ವೇಷಿಗಳು ಮಹಾಪಾಪಿಗಳು, ತಮೋಯೋಗ್ಯರು, ಮಿಶ್ರರು, ಮಧ್ಯರು, ಸಂಸಾರದಲ್ಲಿರುವವರು ಎಂದು ತಿಳಿಯಬೇಕು. ಹೀಗೆ ಜೀವರು

ತ್ರಿವಿಧರೆನಿಸುತ್ತಾರೆ. ಇದಕ್ಕೆ ವ್ಯತ್ಯಾಸವಾಗುವುದಿಲ್ಲ. ಜೀವರಲ್ಲಿ ದೈಹಿಕ ಮತ್ತು ಮಾನಸಿಕ ಚಿಹ್ನೆಗಳಿಂದ ತಾರತಮ್ಯವನ್ನು ತಿಳಿಯಬೇಕು.

**ವಿಷ್ಣೋರ್ಲಿಂಗಾನುಸಾರಿತ್ವಾತ್ ತಾರತಮ್ಯಾತ್ ತದೀಕ್ಷಣಮ್ ।**
**ವಿಷ್ಣೋಸ್ತದನುಗಾನಾಂ ಚ ಪ್ರೀತಿಕೃತ್ ಧರ್ಮ ಈರಿತಃ ॥**
**ಅಧರ್ಮೋಽನ್ಯ ಇಯಂ ನಿಷ್ಠಾ ಪ್ರಲಾಪಃ ಕಿಂ ಕರಿಷ್ಯತಿ ।**
**ಏವಮಾದ್ಯನುಶಾಸ್ಯಾಜಃ ಪಾರ್ಥಂ ಪಾರ್ಥೈಃ ಸುಸತ್ಕೃತಃ ॥**

ಈ ದೈಹಿಕ, ಮಾನಸಿಕ ಚಿಹ್ನೆಗಳಿಗೆ ಅನುಗುಣವಾಗಿಯೇ ಶ್ರೀಹರಿ ಅನುಗ್ರಹಿಸುವುದರಿಂದ ಜೀವರನ್ನು ತಾರತಮ್ಯದಿಂದಲೇ ತಿಳಿಯಬೇಕು. ಮತ್ತು ವಿಷ್ಣುವಿಗೂ ಅವನ ಭಕ್ತರಿಗೂ ಸಂತೋಷ ಉಂಟುಮಾಡಬೇಕು. ಇದೇ ಧರ್ಮ. ಬೇರೆ ಎಲ್ಲವೂ ಅಧರ್ಮ. ಇದು ಶಾಸ್ತ್ರನಿರ್ಣಯ. ಪುತ್ರಶೋಕದಿಂದ ಅತ್ತರೆ ಏನು ಫಲ? ಇತ್ಯಾದಿಯಾಗಿ ಶ್ರೀಕೃಷ್ಣ ಅರ್ಜುನನಿಗೆ ಉಪದೇಶಿಸಿ ಹಸ್ತಿನಾಪುರಕ್ಕೆ ಹೋಗಿ, ಅಲ್ಲಿ ಪಾಂಡವರಿಂದ ಬಹಳ ಸತ್ಕಾರ ಹೊಂದಿದ.

**ಕಥಂಚಿತ್ ತಾನವಸ್ಥಾಪ್ಯ ಸುದೂರಾನುಗತಾನ್ ಪ್ರಭುಃ ।**
**ಸುಭದ್ರಾಸಹಿತಃ ಪ್ರಾಯಾದ್ ಯಾನೇನ ದ್ವಾರಕಾಂ ಪುರೀಮ್ ॥**

ಬಲುದೂರದವರೆಗೆ ಹಿಂಬಾಲಿಸಿ ಬಂದ ಪಾಂಡವರನ್ನು ಕಷ್ಟದಿಂದ ಹಿಂದೆ ನಿಲ್ಲಿಸಿ, ಶ್ರೀಕೃಷ್ಣ ಸುಭದ್ರಾಸಹಿತನಾಗಿ ರಥದಿಂದ ದ್ವಾರಕಾ ಪಟ್ಟಣಕ್ಕೆ ತೆರಳಿದ.

## ಸಂದೇಶಗಳು-ವಿವರಣೆಗಳು

೧. ಅಧ್ಯಾಯ೧೬-೫೧ರವರೆಗೆ ೩೬ ಅಧ್ಯಾಯಗಳಲ್ಲಿ ೧೧೦೦ ಶ್ಲೋಕಗಳ ಮೂಲಕ ಕೃಷ್ಣನು ಅರ್ಜುನನಿಗೆ ಆತನ ಪ್ರಾರ್ಥನೆಯ ಮೇರೆಗೆ ಮತ್ತೊಮ್ಮೆ ಭಕ್ತವಾತ್ಸಲ್ಯದಿಂದ ಉಪದೇಶ ಮಾಡಿದ ಗೀತೆ - ಅನುಗೀತೆ ಎಂದು ಪ್ರಸಿದ್ಧವಾಗಿದೆ. ಇದು ಸಾಮಾನ್ಯ ವಲಯದಲ್ಲಿ ಬಳಕೆಯಲ್ಲಿಲ್ಲ.

೨. ಇದು ತುಂಬಾ ಒಂದು ದೃಷ್ಟಿಯಿಂದ ಕ್ಲಿಷ್ಟವಾಗಿದೆ, ನೇರವಾಗಿ ನಿರೂಪಣೆ ಇಲ್ಲಿಲ್ಲ, ಗೀತೆಯಂತೆ. ಅಲ್ಲಿಯ ರೀತಿ, ಇಲ್ಲಿಯ ರೀತಿ ಬೇರೆ ಬೇರೆಯಾಗಿ ತೋರುತ್ತದೆ. ಅಲ್ಲಿಯ ಅಧ್ಯಾಯ, ವಿಷಯಗಳ ಜೋಡಣೆ ಹಾಗೂ ಇಲ್ಲಿಯ ಜೋಡಣೆ ಅರ್ಥವಾಗುವುದು ಕಷ್ಟಸಾಧ್ಯ.

೩. ಭೀಷ್ಮಪರ್ವದಲ್ಲಿ ಬಂದ ಮೂಲ ಗೀತೆ ಹಾಗೂ ಅಶ್ವಮೇಧಿಕಪರ್ವದಲ್ಲಿ ಬಂದಿರುವ ಈ ಅನುಗೀತೆಯನ್ನು ಹೀಗೆ ನೋಡಬಹುದೇನೋ.!

| ಪರ್ವ | ಭೀಷ್ಮಪರ್ವ | ಆಶ್ವಮೇಧಿಕಪರ್ವ |
|---|---|---|
| ಉಪದೇಶಿಸಿದ ಕಾಲ | ಯುದ್ಧಾರಂಭ | ಧರ್ಮರಾಜನ ಪಟ್ಟಾಭಿಷೇಕವಾದ ನಂತರ |
| ನಿಮಿತ್ತ | ಅರ್ಜುನನಿಗೆ ಬಂಧುಗಳದರ್ಶನದಿಂದ ವಿಷಾದ, ಯುದ್ಧ ಮಾಡಲು ಒಪ್ಪದ ಮನಸ್ಸು ವಿಷಾದ, ಮಾನಸಿಕ ಕ್ಲೇಶಕ್ಕೆ ಒಳಗಾದ | ಯುದ್ಧ ಮುಗಿದ ಮೇಲೂ ಅಭಿಮನ್ಯು ಮೊದಲಾದ ಮಕ್ಕಳ ಕಳಕೊಂಡ ದುಃಖ, ಬಂಧು ಗಳನ್ನು ಕಳಕೊಂಡ ದುಃಖದಿಂದ ಮತ್ತೆ ಉದ್ವಿಗ್ನಮನಸ್ಸಿನವನಾದ |
| ಉಪದೇಶಕ | ಕೃಷ್ಣ-ಅರ್ಜುನನಿಗೆ | ೧ ದ್ವಾರಕೆಗೆ ಬಂದ ಒಬ್ಬ ಬ್ರಾಹ್ಮಣ ಕೃಷ್ಣನಿಗೆ ಹೇಳಿದನು<br>೨. ಆ ಬ್ರಾಹ್ಮಣನು ಕಾಶ್ಯಪ -ಸಿದ್ಧರ ಸಂವಾದ ಹೇಳಿದನು<br>೩. ಬ್ರಾಹ್ಮಣ-ಬ್ರಾಹ್ಮಣಿ(ಪತ್ನಿ) ಸಂವಾದಮೂಲಕ<br>೪. ಗುರುಶಿಷ್ಯರ ಸಂವಾದದ ಮೂಲಕ<br>೫. ಈ ಗುರು ಬ್ರಹ್ಮನು ಕಶ್ಯಪಾದಿ ಋಷಿಗಳಿಗೆ ಉಪದೇಶಿಸಿದ ವಿಷಯದ ಮೂಲಕ |
| | | ಹೀಗೆ ಇಲ್ಲಿ ಐದು ಮಜಲುಗಳ ಉಪದೇಶಗಳ ಸರಣಿಗಳಿವೆ |
| ಅಧ್ಯಾಯಗಳು | ೧೮ | ೩೬ (೧೬-೫೧) |
| ವಿಷಯಗಳು | ಕ್ರಮಬದ್ಧವಾಗಿವೆ (ಒಂದು ರೀತಿಯ) | ಇಲ್ಲಿಯ ಕ್ರಮಗಳೇ ಬೇರೆ |
| ವಿಶ್ವರೂಪ | ಅಧ್ಯಾಯ ೧೧ರಲ್ಲಿ | ೯ ಶ್ಲೋಕಗಳಲ್ಲಿ ಬ್ರಾಹ್ಮಣ ಬ್ರಾಹ್ಮಣಿಗೆ ತನ್ನ ಮಹಿಮೆ ಹೇಳುತ್ತಾನೆ (ವಿಶ್ವರೂಪ ತೋರಿಕೆ ಇಲ್ಲ) |
| ಜೀವೇಶ್ವರ ಸ್ವರೂಪ | ಬಂದಿದೆ. ಅಧ್ಯಾಯ-೨ ಇತ್ಯಾದಿ | ಬಂದಿದೆ ಅಧ್ಯಾಯ ೪೯, ೧೯ ಇತ್ಯಾದಿ |

| | | |
|---|---|---|
| ಮಹಾಲಕ್ಷ್ಮೀತತ್ತ್ವ ಪರತತ್ತ್ವಗಳ ಬಗ್ಗೆ | ಅಧ್ಯಾಯ-೧೨ | ೪೦, ೪೧... |
| ಯಾಗೀಯ ಹಿಂಸೆ ಬಗ್ಗೆ | - | ಅಧ್ಯಾಯ ೨೯ |
| ಉಪಾಖ್ಯಾನಗಳು | - | ಪರಶುರಾಮ ಚರಿತ್ರೆ - ೩೦<br>ಅಲರ್ಕೋಪಾಖ್ಯಾನ-೩೧<br>ಬ್ರಾಹ್ಮಣ-ಜನಕ ಸಂವಾದ-೩೩<br>ಅಂಬರೀಷಗೀತೆ - ೩೨ |
| ಪ್ರಕೃತಿ-ಅವ್ಯಕ್ತ-ಗುಣತ್ರಯ ಕ್ಷೇತ್ರ ಕ್ಷೇತ್ರಜ್ಞಗಳ ಚಿಂತನೆ | ೧೨-೧೮ | ೩೬-೪೪,೫೦ |
| ವರ್ಣಾಶ್ರಮಧರ್ಮಗಳ ಚಿಂತನೆ | ೧೮ | ೫೧... |
| ತಪಸ್ಸಿನ ಮಹತ್ವ | ೧೮ | ೫೧... |
| ವರ್ಣನೆಗಳು (ಅಲಂಕಾರಬದ್ಧ) | ಅ-೧೫ (ಸಂಸಾರವರಕ್ಷ ಇತ್ಯಾದಿ) | ಅ-೨೮ (ಮೋಕ್ಷವೆಂಬ ವನ)<br>ಅ-೪೬ (ಕಾಲಚಕ್ರ-ಶರೀರ) |
| ಮೋಕ್ಷಯೋಗ್ಯ ಧರ್ಮಗಳು | ಅ-೧೬-೧೮ | ಅ-೧೮ |
| ವಾಯುಜೀವೋತ್ತ ಮತ್ತ್ವ | ೧-೧೦ | ಅ-೨೪ |
| ಪಂಚಪ್ರಾಣ ವಾಯು | ಅ-೧೫ | ಅ-೨೫ |
| ರಹಸ್ಯ ವಿಷಯಗಳು | ಅಲ್ಲಲ್ಲಿ ಹೇಳಲಾಗಿದೆ ಅ-೧೫/೨೦, ೯/೧೨, ೧೦/೩೮ | ಬ್ರಾಹ್ಮಣ ಗುರು ತಾನೇ ಶಿಷ್ಯ, ತನ್ನ ಮನಸ್ಸು. ಅ-೫೧/೨೦ |

## ಸಂದೇಶಗಳು - ವಿವರಣೆಗಳು

೧. ಭಗವಂತನು ಭಕ್ತರಿಗೆ ಒಂದಲ್ಲ ಅನೇಕ ಬಾರಿ ಉಪದೇಶಿಸುತ್ತಾನೆ. ಇದು ಆತನ ಭಕ್ತವಾತ್ಸಲ್ಯಕ್ಕೆ ಕ್ಷಮಾಸಮುದ್ರತ್ವಕ್ಕೆ ದ್ಯೋತಕ.

೨. ಕೆಲವು ವೇಳೆ ತಾನೇ ಉಪದೇಶಿಸುತ್ತಾನೆ, ಮತ್ತೆ ಕೆಲವು ಪರೋಕ್ಷವಾಗಿ ಉಪದೇಶ ನೀಡುತ್ತಾನೆ (ಅನುಗೀತಾಪರ್ವದಲ್ಲಿ).

೩. ಮೋಕ್ಷಧರ್ಮಗಳೇ ಅನುಗೀತಾ ಸಂದೇಶ; ೪. ಸಿದ್ಧಿ ಪಡೆಯಲು ಗುರುವೃತ್ತಿ, ಸೇವೆ ಅವಶ್ಯ (೧೬/೨೬-೨೮); ೫. ಭಗವದನುಗ್ರಹದಿಂದಲೇ ಸಿದ್ಧಿ(೧೬/೨೯); ೬. ಸಂಸಾರ, ಜೀವನ, ಶರೀರ ಅನಿತ್ಯ, ದುಃಖಮಯ (ಅ-೧೬); ೭. ಪಂಚಭೂತಾತ್ಮಕ ಶರೀರ ವೇದನಾಮಯವಾದುದು (ಅ-೧೭); ೮. ದಾನವ್ರತಾದಿಗಳೇ ಪ್ರಜಾರಕ್ಷಕ ಧರ್ಮಗಳು (ಅ-೧೮/೧೬-೨೩) ಇತ್ಯಾದಿ..; ೯. ಮೋಕ್ಷಧರ್ಮಗಳು (ಅ-೧೯); ೧೦. ಪಂಚಪ್ರಾಣಗಳು ಪರಸ್ಪರ ಅವಲಂಬಿ - ಎಲ್ಲರೂ ಸಮಾನ, ಮುಖ್ಯಪ್ರಾಣನು ಪಂಚಪ್ರಾಣರಿಗಿಂತ ಶ್ರೇಷ್ಠ (ಅ-೨೪); ೧೧. ಜಗತ್ತಿಗೆಲ್ಲ ಆತ್ಯಂತಿಕವಾಗಿ ಶಾಸನ ಮಾಡುವವನು ಗುರು, ಬಂಧು ಒಬ್ಬನೇ. ಅವನು ನಿಯಮಿಸಿದಂತೆ ಎಲ್ಲರೂ ನಡೆದುಕೊಳ್ಳುತ್ತಾರೆ (ಅ-೨೭); ಅವನೇ ಓಂಕಾರ ಸ್ವರೂಪಿ ಶ್ರೀಹರಿ (ಅ-೨೭); ೧೨. ಬ್ರಾಹ್ಮಣ ಹಂತಕರನ್ನು ದೇವರು ಯಾರೇ ಇರಲಿ ಕ್ಷತ್ರಿಯರೇ ಇರಲಿ, ತನ್ನ ಭಕ್ತರಿಗಲಿ, ಸಂಹಾರ ಮಾಡುತ್ತಾನೆ. ಪರಶುರಾಮನು ಕಾರ್ತವೀರ್ಯ ಮತ್ತು ಆತನ ಪರಿವಾರ ನಾಶ ಮಾಡಿದಂತೆ (ಅ-೩೦); ೧೩. ಇಂದ್ರಿಯನಿಗ್ರಹವೆಂದರೆ ಅವುಗಳನ್ನು ನಾಶ ಮಾಡುವುದಲ್ಲ, ಏಕಾಗ್ರಚಿತ್ತದಿಂದ ಭಗವದ್ಧ್ಯಾನರೂಪ ತಪಸ್ಸು (೧-೩೧); ೧೪. ಮಾನವರ ಶತ್ರುಗಳ ಸತ್ತ್ವ ರಜಸ್ತಮೋ ಗುಣಗಳು - ಕ್ರೋಧ, ಲೋಭ, ತೃಷ್ಣಾಗಳೇ (ಅ-೩೨); ೧೫. ಮಮಕಾರ ಬಿಡಬೇಕು (ಅ-೩೩); ೧೬. ನಮ್ಮ ಎಲ್ಲ ಕಾರ್ಯಗಳು ನಮ್ಮ ಸುಖಕ್ಕಾಗಿ ಇರಬಾರದು. ದೇವ, ;ಪಿತೃ, ಭೂತ, ಅತಿಥಿ (ಋಷಿ)ಗಳ ಅಂತರ್ಯಾಮಿ ಭಗವಂತನ ತೃಪ್ತಿಗಾಗಿ ಇರಬೇಕು (ಅ-೩೩); ೧೭. ಶಿಷ್ಯನ ಗುಣಗಳು ವಿನಯ, ಶಾಂತತೆ, ಗುರುಗಳ ಆಜ್ಞಾಪಾಲನೆ ಇತ್ಯಾದಿ (ಅ-೩೬); ೧೮. ಎಲ್ಲ ವರ್ಣದವರಿಗೂ ಗೃಹಸ್ಥಾಶ್ರಮ ವಿಶೇಷವೇ, ಮುಖ್ಯವೇ (ಅ-೩೬-೪೦); ೧೯. ಎಲ್ಲ ವಿಧವಾದ ಸಂಗ್ರಹಗಳಿಗೆ ವಿನಾಶವಿದೆ. ಜೀವನಕ್ಕೆ ಮರಣವೇ ಕೊನೆ ಎನಿಸಿದೆ (ಅ-೪೫/೨೦); ೨೦. ಸೃಷ್ಟಿ ಹೊಂದಿದ ವಸ್ತುಗಳೆಲ್ಲ ವಿನಾಶದಲ್ಲಿಯೇ ಕೊನೆ ಹೊಂದುತ್ತವೆ. ಹುಟ್ಟಿದವನಿಗೆ ಮರಣ ನಿಯತ, ಜಗತ್ತಿನ ಸ್ಥಾವರ, ಜಂಗಮಗಳೆಲ್ಲ ಅಶಾಶ್ವತ (ಅ-೪೫/೨೧); ೨೧. ಯಜ್ಞ, ದಾನ, ಅಧ್ಯಯನ, ವ್ರತ ನಿಯಮ ಇವೆಲ್ಲ ವಿನಾಶ ಹೊಂದುತ್ತವೆ. ಆದರೆ ಜ್ಞಾನಕ್ಕೆ ಕೊನೆಯಿಲ್ಲ (ಅ-೪೫/೨೨); ೨೨. ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ ಸನ್ಯಾಸ ಈ ನಾಲ್ಕು ಆಶ್ರಮಗಳಿಗೂ ಮೂಲವಾದುದು ಗೃಹಸ್ಥಾಶ್ರಮ (ಗೃಹಸ್ಥಾಶ್ರಮದ ಮೇಲೆ ಇತರೆ ಎಲ್ಲರೂ ಅವಲಂಬಿತರಾಗಿರುತ್ತಾರೆ (೪೬/೧೩); ೨೩. ಹೊಂದಲು ಯಾವುದು ಅಸಾಧ್ಯವೋ, ಅಭ್ಯಾಸ ಮಾಡಲು ಯಾವುದು ಅಸಾಧ್ಯವೋ, ಯಾವುದು ಸಂಬಂಧ ಹೊಂದಲು ಅಸಾಧ್ಯವೋ, ಅವೆಲ್ಲವೂ ತಪಸ್ಸಿನಿಂದಲೇ ಸಾಧ್ಯವೆನಿಸಿವೆ. ತಪಸ್ಸಿನ ಪ್ರಭಾವ ದಾಟಲು ಅಸಾಧ್ಯ (ಅ-೫೧/೧೯); ೨೪. ಮದ್ಯಪಾನ ಮಾಡಿದವನಿರಲಿ,

ಬ್ರಹ್ಮಹತ್ಯೆ ಮಾಡಿರಲಿ, ಕಳ್ಳತನ ಮಾಡಿರಲಿ, ಭ್ರೂಣಹತ್ಯೆ ಮಾಡಿರಲಿ, ಗುರುಪತ್ನಿಗಮನ ಮಾಡಿರಲಿ, ಎಲ್ಲ ಪಾಪಗಳು ಶ್ರದ್ಧೆಯಿಂದ ಮಾಡಿದ ತಪಸ್ಸಿನಿಂದ ನಾಶವಾಗಿ ಸಾಧಕರು ಮೋಕ್ಷ ಹೊಂದುತ್ತಾನೆ.

೪. ಇಂತಹ ಅನುಗೀತೆಯ ಸಾರವನ್ನು ಶ್ರೀಮದಾಚಾರ್ಯರು ಮಹಾಭಾರತ-ತಾತ್ಪರ್ಯನಿರ್ಣಯದಲ್ಲಿ ಹತ್ತೇ ಶ್ಲೋಕಗಳಲ್ಲಿ ಉಣಬಡಿಸಿ, ಅನುಗ್ರಹಿಸಿದಾರೆ. ಅವರ ಸಂಗ್ರಹ ಕೌಶಲಕ್ಕೆ 'ಭೂಯಿಷ್ಠಾಂ ತೇ ನಮ ಉಕ್ತಿಂ ವಿಧೇಮ' ಎಂದು ಹೇಳುವುದಕ್ಕಿಂತ ಮತ್ತೇನೂ ಹೇಳಲಾರೆನು. 'ತೇ ನಮಃ ಕೌಶಲಾಯ' ಎಂದೆ ಪಂಡಿತಾಚಾರ್ಯರು ಹೇಳಿದ್ದಾರಷ್ಟೆ ನಾವೂ ಹಾಗೆಯೇ ಹೇಳಿ ವಿರಮಿಸೋಣ.

೫. ಅನುಗೀತೆಯಲ್ಲಿ ತ್ರಿಗುಣಪ್ರಕೃತಿಯ ವಿಚಾರ ಹೆಚ್ಚಾಗಿ ಬಂದಿದೆ.

೬. ಭಗವದ್ಗೀತೆ ಹಾಗೂ ಅನುಗೀತೆಗಳ ಪ್ರತ್ಯೇಕ ಆಳವಾದ ಅಧ್ಯಯನ ಜಿಜ್ಞಾಸುಗಳಿಗೆ ಒಂದು ತತ್ತ್ವರಸದೌತಣವಾಗುತ್ತದೆ. ಈ ಬಗ್ಗೆ ಅಂತಹ ಅಧ್ಯಯನ ಆದಂತಿಲ್ಲ.

೭. ಅನುಗೀತೆ ಹೆಚ್ಚಾಗಿ ಗುಹ್ಯಭಾಷೆ ಎನಿಸುತ್ತದೆ.

ಇತ್ಯಾದಿ...

*****

**ಶ್ರೀಕೃಷ್ಣಾರ್ಪಣಮಸ್ತು**

*****

# ಪರಿಶಿಷ್ಟ - ೧

## ಉಪಾಖ್ಯಾನಗಳಲ್ಲಿ ಬಂದಿರುವ ಸ್ತೋತ್ರಗಳು

### ೧. ಗುರು ಸೇವೆ - ಫಲ

#### ಉಪಮನ್ಯುಕೃತ - ಅಶ್ವಿನೀ ದೇವತೆಗಳ ಸ್ತೋತ್ರ

ಸ ಏವಮುಕ್ತ ಉಪಾಧ್ಯಾಯೇನ ಸ್ತೋತುಂ ಪ್ರಚಕ್ರಮೇ ।
ದೇವಾವಶ್ವಿನೌ ವಾಗ್ಭಿಋಗ್ಭಿಃ ॥[1] ॥ ೫೯ ॥

ಪ್ರ ಪೂರ್ವಗೌ ಪೂರ್ವಜೌ ಚಿತ್ರಭಾನೂ
ಗಿರಾ ವಾ ಶಂಸಾಮಿ ತಪನಾವನಂತೌ ।
ದಿವ್ಯೌ ಸುಪರ್ಣೌ ವಿರಜೌ ವಿಮಾನಾ-
ವಧಿಕ್ಷಿಯಂತೌ ಭುವನಾನಿ ವಿಶ್ವಾ ॥ ೬೦ ॥

ಹಿರಣ್ಮಯೌ ಶಕುನೀ ಸಾಂಪರಾಯೌ
ನಾಸತ್ಯದಸ್ರೌ ಸುನಸೌ ವೈಜಯಂತೌ ।
ಶುಕ್ರಂ ವಯಂತೌ ತರಸಾ ಸುವೇಮಾ-
ವಭಿವ್ಯಯಂತಾವಸಿತಂ ವಿವಸ್ವತ್ ॥ ೬೧ ॥

ಗ್ರಸ್ತಾಂ ಸುಪರ್ಣಸ್ಯ ಬಲೇನ ವರ್ತಿಕಾ
ಮಮುಂಚತಾಮಶ್ವಿನೌ ಸೌಭಗಾಯ ।
ತಾವತ್ ಸುವೃತ್ತಾವನಮಂತ ಮಾಯಯಾ
ಸತ್ತಮಾ ಗಾ ಅರುಣಾ ಉದಾವಹನ್ ॥ ೬೨ ॥

ಷಷ್ಟಿಶ್ಚ ಗಾವಸ್ತ್ರಿಶತಾಶ್ಚ ಧೇನವ
ಏಕಂ ವತ್ಸಂ ಸುವತೇ ತಂ ದುಹಂತಿ ।
ನಾನಾ ಗೋಷ್ಠಾ ವಿಹಿತಾ ಏಕದೋಹನಾ
ಸ್ತಾವಶ್ವಿನೌ ದುಹತೋ ಧರ್ಮ ಮುಕ್ಥ್ಯಮ್ ॥ ೬೩ ॥

ಏಕಾಂ ನಾಭಿಂ ಸಪ್ತಶತಾ ಅರಾಶ್ರಿತಾಃ
ಪ್ರಧೀಷ್ವನ್ಯಾ ವಂಶತಿರರ್ಪಿತಾ ಅರಾಃ ।
ಅನೇಮಿ ಚಕ್ರಂ ಪರಿವರ್ತತೇಽಜರಂ
ಮಾಯಾಶ್ವಿನೌ ಸಮನಕ್ತಿ ಚರ್ಷಣೀ ॥ ೬೪ ॥

ಏಕಂ ಚಕ್ರಂ ವರ್ತತೇ ದ್ವಾದಶಾರಂ ಪ್ರಧಿ

---

೧ ಪೂನಾಭಂಡಾರಕರ್ ಸಂಸ್ಥೆ ಪಾಠಾನುಸಾರ

ಷಣ್ಣಾಭಿಮೇಕಾಕ್ಷಮಮೃತಸ್ಯ ಧಾರಣಮ್ ।
ಯಸ್ಮಿನ್ ದೇವಾ ಅಧಿ ವಿಶ್ವೇ ವಿಷಕ್ತಾ
ಸ್ತಾವಶ್ವಿನೌ ಮುಂಚತೋ ಮಾ ವಿಷೀದತಮ್ ॥ ೬೫ ॥

ಅಶ್ವಿನಾವಿಂದ್ರಮಮೃತಂ ವೃತ್ತಭೂಯೌ
ತಿರೋಧತ್ತಾಮಶ್ವಿನೌ ದಾಸಪತ್ನೀ ।
ಭಿತ್ತ್ವಾ ಗಿರಿಮಶ್ವಿನೌ ಗಾಮುದಾಚರಂತೌ
ತದ್ವೃಷ್ಟಮಹ್ನಾ ಪ್ರಥಿತಾ ಬಲಸ್ಯ(ಽಬಲಸ್ಯ) ॥ ೬೬ ॥

ಯುವಾಂ ದಿಶೋ ಜನಯಥೋ ದಶಾಗ್ರೇ
ಸಮಾನಂ ಮೂರ್ಧ್ನಿ ರಥಯಾ ವಿಯಂತಿ ।
ತಾಸಾಂ ಯಾತಮೃಷಯೋಽನು ಪ್ರಯಾಂತಿ
ದೇವಾ ಮನುಷ್ಯಾಃ ಕ್ಷಿತಿಮಾಚರಂತಿ ॥ ೬೭ ॥

ಯುವಾಂ ವರ್ಣಾನ್ವಿಕುರುಥೋ ವಿಶ್ವರೂಪಾಂ
ಸ್ತೇಽಧಿಕ್ಷಿಯಂತಿ ಭುವನಾನಿ ವಿಶ್ವಾ ।
ತೇ ಭಾನವೋಽಪ್ಯನುಸೃತಾಶ್ಚರಂತಿ
ದೇವಾ ಮನುಷ್ಯಾಃ ಕ್ಷಿತಿಮಾಚರಂತಿ ॥ ೬೮ ॥

ತೌ ನಾಸತ್ಯಾವಶ್ವಿನಾವಾಮಹೇ ವಾಂ
ಸ್ರಜಂ ಚ ಯಾಂ ಬಿಭೃಥಃ ಪುಷ್ಕರಸ್ಯ ।
ತೌ ನಾಸತ್ಯಾವಮೃತಾವೃತಾವೃಧಾ-
ವೃತೇ ದೇವಾಸ್ತತ್ಪ್ರಪದೇನ ಸೂತೇ ॥ ೬೯ ॥

ಮುಖೇನ ಗರ್ಭಂ ಲಭತಾಂ ಯುವಾನೌ
ಗತಾಸುರೇ ತತ್ಪ್ರಪದೇನ ಸೂತೇ ।
ಸದ್ಯೋಜಾತೋ ಮಾತರಮತ್ತಿ ಗರ್ಭ-
ಸ್ತಾವಶ್ವಿನೌ ಮುಂಚಥೋ ಜೀವಸೇ ಗಾಃ[೧] ॥ ೭೦ ॥

ಸ್ತೋತುಂ ನ ಶಕ್ನೋಮಿ ಗುಣೈರ್ಭವಂತೌ
ಚಕ್ಷುರ್ವಿಹೀನಃ ಪಥಿ ಸಂಪ್ರಮೋಹಃ ।
ದುರ್ಗೇಹಮಸ್ಮಿನ್ ಪತಿತೋಽಸ್ಮಿ ಕೂಪೇ
ಯುವಾಂ ಶರಣ್ಯಂ ಶರಣಂ ಪ್ರಪದ್ಯೇ ॥ ೬೮ ॥

---

೧ ಮೇಲಿನ ೫೯-೭೦ರವರೆಗಿನ ಶ್ಲೋಕಗಳು ದಾಕ್ಷಿಣಾತ್ಯ ಔತ್ತರೇಯ ಪಾಠಗಳಲ್ಲಿವೆ. ಇವೆಲ್ಲ ಋಗ್ವೇದದಲ್ಲಿನ ಸ್ತೋತ್ರವೆಂದು ಹೇಳಲಾಗಿದೆ. - ಆದಿಪರ್ವ (೩-೩)
ಇದು ಔತ್ತರೇಯಪಾಠದಲ್ಲಿದೆ. ತ.ಸಂ.ಸಂ ಪಾಠಕ್ಕೂ ಇದಕ್ಕೂ ಪಾಠವ್ಯತ್ಯಾಸವಿದೆ.

ಏವಂ ತೇನಾಭಿಷ್ಟುತೌ ಅಶ್ವಿನಾವಾಜಗ್ಮತುಃ।
ಆಹತುಶ್ಚೈನಮ್ ಪ್ರೀತೌ ಸ್ವಃ।........... - ಅ-೩

*****

## [೧]ಉದಂಕ ಋಷಿಕೃತ ಪುರಂದರಾದಿ ಸ್ತುತಿ (ಅ. ೩

ಸ ತಾನ್ ಸರ್ವಾನ್ ತುಷ್ಟಾವ ಏಭಿರ್ಮಂತ್ರವದೇವ ಶ್ಲೋಕೈಃ॥

ತ್ರೀಣ್ಯರ್ಪಿತಾನ್ಯತ್ರ ಶತಾನಿ ಮಧ್ಯೇ
ಷಷ್ಟಿಶ್ಚ ನಿತ್ಯಂ ಚರತಿ ಧ್ರುವೇಽಸ್ಮಿನ್।
ಚಕ್ರೇ ಚತುರ್ವಿಂಶತಿ ಪರ್ವಯೋಗೇ
ಷಡ್ವೈಕುಮಾರಾಃ ಪರಿವರ್ತಯಂತಿ ॥೧೫೪॥

ತಂತ್ರಂ ಚೇದಂ ವಿಶ್ವರೂಪೇ ಯುವತ್ಯೌ
ವಯತಸ್ತಂತೂನ್ ಸತತಂ ವರ್ತಯಂತ್ಯೌ।
ಕೃಷ್ಣಾನ್ ಸಿತಾಂಶ್ಚೈವ ವಿವರ್ತಯಂತ್ಯೌ
ಭೂತಾನ್ಯಜಸ್ರಂ ಭುವನಾನಿ ಚೈವ॥ ೧೫೫॥

ವಜ್ರಸ್ಯ ಭರ್ತಾ ಭುವನಸ್ಯ ಗೋಪ್ತಾ
ವೃತ್ರಸ್ಯ ಹಂತಾ ನಮುಚೇರ್ನಿಹಂತಾ।
ಕೃಷ್ಣೇ ವಸಾನೋ ವಸನೇ ಮಹಾತ್ಮಾ
ಸತ್ಯಾನೃತೇ ಯೋ ವಿವಿನಕ್ತಿ ಲೋಕೇ ॥೧೫೬॥

ಯೋ ವಾಜಿನಂ(ವಾಹನಂ) ಗರ್ಭಮಪಾಂ ಪುರಾಣಂ
ವೈಶ್ವಾನರಂ ವಾಹನಮಭ್ಯುಪೇತಃ।
ನಮಃ ಸದಾಸ್ಮೈ ಜಗದೀಶ್ವರಾಯ
ಲೋಕತ್ರಯೇಶಾಯ ಪುರಂದರಾಯ ॥೧೫೭॥

ತತಃ ಸ ಏನಂ ಪುರುಷಃ ಪ್ರಾಹ। ಪ್ರೀತೋಽಸ್ಮಿ ತೇ
ಅಹಮೇತೇನ ಸ್ತೋತ್ರೇಣ। ಕಿಂ ತೇ ಪ್ರಿಯಂ ಕರವಾಣೇತಿ॥

*****

೧ ಇಲ್ಲಿ ಉತ್ತಂಕನು ಇಂದ್ರ, ಪರ್ಜನ್ಯ, ಕಾಲ, ಧಾತ್ರೀ, ವಿಧಾತ್ರೀ ಹಗಲು ರಾತ್ರಿ ಅಭಿಮಾನಿದೇವತೆಗಳ ಸ್ತೋತ್ರ ಮಾಡಿದ್ದಾನೆ.

## ಉತ್ತಂಕಋಷಿಕೃತ ನಾಗಸ್ತುತಿ

ಪ್ರವಿಶ್ಯ ಚ ನಾಗಾನಸ್ತುವದೇಭಿಃ ಶ್ಲೋಕೈಃ ॥ ಆದಿ.ಪ.ಅ. ೩/೧೩೮

ಯ ಐರಾವತರಾಜಾನಃ ಸರ್ಪಾಃ ಸಮಿತಿಶೋಭನಾಃ ।
ವರ್ಷಂತ (ಕ್ಷರಂತ) ಇವ ಜೀಮೂತಾಃ ಸವಿದ್ಯುತ್ಪವನೇರಿತಾಃ ॥ ೧೩೯ ॥

ಸುರೂಪಾಶ್ಚ ವಿರೂಪಾಶ್ಚ ತಥಾ ಕಲ್ಮಾಷಕುಂಡಲಾಃ ।
ಆದಿತ್ಯವನ್ನಾಕ ಪೃಷ್ಠೇ ರೇಜುರೈರಾವತೋದ್ಭವಾಃ ॥ ೧೪೦ ॥

ಬಹೂನಿ ನಾಗವರ್ತ್ಮಾನಿ ಗಂಗಾಯಾಸ್ತೀರ ಉತ್ತರೇ ।
ಇಚ್ಛೇತ್ಕೋಽರ್ಕಾಂಶುಸೇನಾಯಾಂ ಚರ್ತುಮೈರಾವತರಂ ವಿನಾ ॥ ೧೪೧ ॥

ಶತಾನ್ಯಶೀತಿರಷ್ಟೌ ಚ ಸಹಸ್ರಾಣಿ ಚ ವಿಂಶತಿಃ ।
ಸರ್ಪಾಣಾಂ ಪ್ರಗ್ರಹಾ ಯಾಂತಿ ಧೃತರಾಷ್ಟ್ರೋಯದೇಜತಿ ॥ ೧೪೨ ॥

ಯೇ ಚೈನಮುಪಸರ್ಪಂತಿ ಯೇ ಚ ದೂರಂ ಪರಂ(ದೂರಪಥಂ) ಗತಾಃ ।
ಅಹಮೈರಾವತಜ್ಯೇಷ್ಠಭ್ರಾತೃಭ್ಯೋಽಕರವಂ ನಮಃ ॥ ೧೪೩ ॥

ಯಸ್ಯ ವಾಸಃ ಕುರುಕ್ಷೇತ್ರೇ ಖಾಂಡವೇ ಚಾಭವತ್ಸದಾ (ಪುರಾ) ।
ತಂ ಕಾದ್ರವೇಯಮಸ್ತೌಷಂ ಕುಂಡಲಾರ್ಥಾಯ ತಕ್ಷಕಮ್ ॥ ೧೪೪ ॥

ತಕ್ಷಕಶ್ಚ ಶ್ವಸೇನಶ್ಚ ನಿತ್ಯಂ ಸಹಚರಾವುಭೌ ।
ಕುರುಕ್ಷೇತ್ರೇ ನಿವಸತಾಂ ನದೀಮಿಕ್ಷುಮತೀಮನು ॥ ೧೪೫ ॥

ಜಘನ್ಯಜಸ್ತಕ್ಷಕಸ್ಯ ಶ್ರುತಸೇನೇತಿ ಯಃ ಶ್ರುತಃ ।
ಅವಸದ್ಯೋ ಮಹದ್ದ್ಯುಮ್ನಿ ಪ್ರಾರ್ಥಯನ್ನಾಗಮುಖ್ಯತಾಮ್ ।
ಕರವಾಣಿ ಸದಾ ಚಾಹಂ ನಮಸ್ತಸ್ಮೈ ಮಹಾತ್ಮನೇ ॥ ೧೪೬ ॥

*****

## ಗರುಡಸ್ತೋತ್ರ (ಅ. ೨೩/೧೪-೨೭)(ಗೀತಾಪ್ರೆಸ್)

ಏವಮುಕ್ತಾಸ್ತದಾ ಗತ್ವಾ ಗರುಡಂ ವಾಗ್ಭಿರಸ್ತುವನ್ ।
ತೇ ದೂರಾದಭ್ಯುಪೇತ್ಯೈನಂ ದೇವಾಃ ಸರ್ವಗಣಾಸ್ತದಾ ॥ ೧೦ ॥

ದೇವಾ ಊಚುಃ

ತ್ವಮೃಷಿಸ್ತ್ವಂ ಮಹಾಭಾಗಸ್ತ್ವಂ ದೇವಃ ಪತಗೇಶ್ವರಃ ।
ತ್ವಂ ಪ್ರಭುಸ್ತಪನಃ ಸೂರ್ಯಃ ಪರಮೇಷ್ಠೀ ಪ್ರಜಾಪತಿಃ ॥ ೧೧ ॥

ತ್ವಮಿಂದ್ರಸ್ತ್ವಂ ಹಯಮುಖಸ್ತ್ವಂ ಶರ್ವಸ್ತ್ವಂ ಜಗತ್ಪತಿಃ ।
ತ್ವಂ ಮುಖಂ ಪದ್ಮಜೋ ವಿಪ್ರಸ್ತ್ವಮಗ್ನಿಃ ಪವನಸ್ತಥಾ ॥ ೧೨ ॥

ತ್ವಂ ಹಿ ಧಾತಾ ವಿಧಾತಾ ಚ [೧]ತ್ವಂ ವಿಷ್ಣುಃ ಸುರಸತ್ತಮಃ ।
ತ್ವಂ ಮಹಾನಭಿಭೂ ಶಶ್ವದಮೃತಂ ತ್ವಂ ಮಹದ್ಯಶಃ ।
ತ್ವಂ ಪ್ರಭಾಸ್ತ್ವಮಭಿಪ್ರೇತಂ ನಸ್ತ್ರಾಣಮನುತ್ತಮಮ್ ॥ ೧೮ ॥

ತ್ವಮುತ್ತಮಃ ಸರ್ವಮಿದಂ ಚರಾಚರಂ
ಗಭಸ್ತಿಭಿರ್ಭಾನುರಿವಾವಭಾಸಸೇ ।
ಸಮಾಕ್ಷಿಪನ್ ಭಾನುಮತಃ ಪ್ರಭಾಂ ಮುಹುಃ
ತ್ವಮಂತಕಃ ಸರ್ವಮಿದಂ ಧ್ರುವಾಧ್ರುವಮ್ ॥ ೨೦ ॥

ದಿವಾಕರಃ ಪರಿಕುಪಿತೋ ಯಥಾ ದಹೇತ್
ಪ್ರಜಾಸ್ತಥಾ ದಹಸಿ ಹುತಾಶನಪ್ರಭ ।
ಭಯಂಕರಃ ಪ್ರಲಯ ಇವಾಗ್ನಿರುತ್ಥಿತೋ
ವಿನಾಶಯನ್ ಯುಗಪರಿವರ್ತನಾಂತಕೃತ್ ॥ ೨೧ ॥

ಖಗೇಶ್ವರಂ ಶರಣಮುಪಾಗತಾ ವಯಂ
ಮಹೌಜಸಂ ಜ್ವಲನಸಮಾನವರ್ಚಸಂ ।
ತಡಿತ್ಪ್ರಭಂ ವಿತಿಮಿರಮಭ್ರಗೋಚರಂ
ಮಹಾಬಲಂ ಗರುಡಮುಪೇತ್ಯ ಖೇಚರಮ್ ॥ ೨೨ ॥

ಪರಾವರಂ ವರದಮಜಯ್ಯವಿಕ್ರಮಂ
ತವೌಜಸಾ ಸರ್ವಮಿದಂ ಪ್ರತಾಪಿತಮ್ ।
ಜಗತ್ಪ್ರಭೋ ಸಪ್ತ ಸುವರ್ಣವರ್ಚಸಾ
ತ್ವಂ ಪಾಹಿ ಸರ್ವಾಂಶ್ಚ ಸುರಾನ್ ಮಹಾತ್ಮನಃ ॥ ೨೩ ॥

ಭಯಾನ್ವಿತಾ ನಭಸಿ ವಿಮಾನಗಾಮಿನೋ
ವಿಮಾನಿತಾ ವಿಪಥಗತಿಂ ಪ್ರಯಾಂತಿ ತೇ ।
ಋಷೇಃ ಸುತಸ್ತ್ವಮಸಿ ದಯಾವತಃ ಪ್ರಭೋ
ಮಹಾತ್ಮನಃ ಖಗವರ ಕಶ್ಯಪಸ್ಯ ಹ ॥ ೨೪ ॥

ಸ ಮಾ ಕ್ರುಧಃ ಕುರು ಜಗತೋ ದಯಾಂ ಪರಾಂ
ತ್ವಮೀಶ್ವರಃ ಪ್ರಶಮಮುಪೈಹಿ ಪಾಹಿ ನಃ ।

---

೧ ಶ್ರೀವಾದಿರಾಜತೀರ್ಥವಿರಚಿತ ಲಕ್ಷಾಲಂಕಾರ ಟೀಕಾಯಾಂ ।
'ತ್ವಂ ವಿಷ್ಣುಃ ಸುರಸತ್ತಮ' ಇತ್ಯಾದ್ಯೈಕ್ಯವ್ಯಪದೇಶಸ್ತು ವಿಷ್ಣ್ವಾದೀನಾಂ ಗರುಡೇ ಸನ್ನಿಹಿತತ್ವಾತ್ ಆಯೋಽಗ್ನಿರಿತಿವತ್ । ಅನ್ಯಥಾ 'ನಾಸ್ತಿ ನಾರಾಯಣಸಮಂ ನ ಭೂತಂ ನ ಭವಿಷ್ಯತಿ' ಇತ್ಯುಪಕ್ರಮವಿರೋಧಃ । ವಿಷ್ಣು ವಾಹನಸ್ಯೈವ ವಿಷ್ಣುತ್ವಾಸಂಭವಾತ್ ಯುಕ್ತಿ ವಿರೋಧಃ, ಏವಂ ಅನ್ಯತ್ರಾಪ್ಯೂಹ್ಯಮ್ ॥

ಮಹಾಶನಿಸ್ಫುರಿತಸಮಸ್ವನೇನ ತೇ
ದಿಶೋಽಂಬರಂ ತ್ರಿದಿವಮಿಯಂ ಚ ಮೇದಿನೀ ॥ ೨೫ ॥

ಚಲಂತಿ ನಃ ಖಗಹೃದಯಾನಿ ಚಾನಿಶಂ
ನಿಗೃಹ್ಯತಾಂ ವಪುರಿದಮಗ್ನಿಸನ್ನಿಭಮ್ ।
ತವದ್ಯುತಿಂ ಕುಪಿತಕೃತಾಂತ ಸನ್ನಿಭಾಂ
ನಿಶಮ್ಯ ನಭಶ್ಚಲತಿ ಮನೋಽವ್ಯವಸ್ಥಿತಮ್ ॥ ೨೬ ॥

ಪ್ರಸೀದ ನಃ ಪತಗಪತೇ ಪ್ರಯಾಚತಾಂ
ಶಿವಶ್ಚ ನೋ ಭವ ಭಗವನ್ ಸುಖಾವಹಃ
ಏವಂ ಸ್ತುತಃ ಸುಪರ್ಣಸ್ತು ದೇವೈಃ ಸರ್ಷಿಗಣೈಸ್ತದಾ
ತೇಜಸಃ ಪ್ರತಿಸಂಹಾರಮಾತ್ಮನಃ ಸ ಚಕಾರ ಹ ॥ ೨೭ ॥

*****

## (ಕಶ್ಯಪಪತ್ನಿ) ಕದ್ರೂದೇವಿಕೃತ ಇಂದ್ರಸ್ತುತಿಃ

(ಗರುಡನಿಂದ ತಾಯಿಯ ಶಾಪವಿಮೋಚನೆ ಕಥೆ) (ಅ. ೨೫/೭-೧೭)

ತದವಸ್ಥಾನ್ ಸುತಾನ್ ದೃಷ್ಟ್ವಾ ಕದ್ರೂಃ ಶಕ್ರಮಥಾಸ್ತುವತ್ ।
ನಮಸ್ತೇ ದೇವದೇವೇಶ ನಮಸ್ತೇ ಬಲಸೂದನ ।
ನ ಮುಚಿಘ್ನ ನಮಸ್ತೇಽಸ್ತು ಸಹಸ್ರಾಕ್ಷ ಶಚೀಪತೇ ॥ ೭ ॥

ಸರ್ಪಾಣಾಂ ಸೂರ್ಯತಪ್ತಾನಾಂ ವಾರಿಣಾ ತ್ವಂ ಪ್ಲವೋ ಭವ ।
ತ್ವಮೇವ ಪರಮಂ ತ್ರಾಣಮಸ್ಮಾಕಮಮರೋತ್ತಮ ॥ ೮ ॥

ಈಶೋಽಹ್ಯಸಿ ಪಯಃ ಸ್ರಷ್ಟುಂ ತ್ವಮನಲ್ಪಂ ಪುರಂದರ ।
ತ್ವಮೇವ ಮೇಘಸ್ತ್ವಂ ವಾಯುಸ್ತ್ವಮಗ್ನಿರ್ವೈದ್ಯುತೋಽಂಬರೇ ॥ ೯ ॥

ತ್ವಮಭ್ರಘನವಿಕ್ಷೇಪ್ತಾ ತ್ವಾಮೇವಾಹುಃ ಪುನರ್ಘನಮ್ ।
ತ್ವಂ ವಜ್ರಮತುಲಂ ಘೋರಂ ಘೋಷವಾಂಸ್ತ್ವಂ ಬಲಾಹಕಃ ॥ ೧೦ ॥

ಸ್ರಷ್ಟಾ ತ್ವಮೇವ ಲೋಕಾನಾಂ ಸಂಹರ್ತಾ ಚಾಪರಾಜಿತಃ ।
ತ್ವಂ ಜ್ಯೋತಿಃ ಸರ್ವಭೂತಾನಾಂ ತ್ವಮಾದಿತ್ಯೋ ವಿಭಾವಸುಃ ॥ ೧೧ ॥

ತ್ವಂ ಮಹದ್ಭೂತಮಾಶ್ಚರ್ಯಂ ತ್ವಂ ರಾಜಾ ತ್ವಂ ಸುರೋತ್ತಮಃ ।
ತ್ವಂ ವಿಷ್ಣುಸ್ತ್ವಂ ಸಹಸ್ರಾಕ್ಷಸ್ತ್ವಂ ದೇವಸ್ತ್ವಂ ಪರಾಯಣಮ್ ॥ ೧೨ ॥

ತ್ವಂ ಸರ್ವಮಮೃತಂ ದೇವ ತ್ವಂ ತ್ವಂ ಸೋಮಃ ಪರಮಾರ್ಚಿತಃ ।
ತ್ವಂ ಮುಹೂರ್ತಸ್ತಿಥಿಶ್ಚ ತ್ವಂ ಲವಸ್ತ್ವಂ ವೈ ಪುನಃ ಕ್ಷಣಃ ॥ ೧೩ ॥

ಶುಕ್ಲಸ್ತ್ವಂ ಬಹುಲಶ್ಚೈವ ಕಲಾ ಕಾಷ್ಠಾ ತ್ರುಟಿಸ್ತಥಾ ।
ಸಂವತ್ಸರರ್ತವೋ ಮಾಸಾ ರಜನ್ಯಶ್ಚ ದಿನಾನಿ ಚ ॥ ೧೪ ॥

ತ್ವಮುತ್ತಮಾ ಸಗಿರಿವನಾ ವಸುಂಧರಾ
ಸ ಭಾಸ್ಕರಂ ವಿತಿಮಿರಮಂಬರಂ ತಥಾ ।
ಮಹೋದಧಿಃ ಸ ತಿಮಿಂಗಿಲಸ್ತಥಾ
ಮಹೋರ್ಮಿಮಾನ್ ಬಹುಮಕರೋ ಝಷಾಲಯಃ ॥ ೧೫ ॥

ಮಹದ್ಯಶಸ್ತ್ವಮಿತಿ ಸದಾಭಿಪೂಜ್ಯಸೇ
ಮನೀಷಿಭಿರ್ಮುದಿತಮನಾ ಮಹರ್ಷಿಭಿಃ ।
ಅಭಿಷ್ಟುತಃ ಪಿಬಸಿ ಚ ಸೋಮಮಧ್ವರೇ
ವಷಟ್ಕೃತಾನ್ಯಪಿ ಚ ಹವೀಂಷಿ ಭೂತಯೇ ॥ ೧೬ ॥

ತ್ವಂ ವಿಪ್ರೈಃ ಸತತಮಿಹೇಜ್ಯಸೇ ಫಲಾರ್ಥಂ
ವೇದಾಂಗೇಷ್ವತುಲಬಲೌಘ ಗೀಯಸೇ ಚ ।
ತ್ವದ್ಧೇತೋರ್ಯಜನ ಪರಾಯಣಾ ದ್ವಿಜೇಂದ್ರಾ
ವೇದಾಂಗಾನ್ಯಭಿಗಮಯಂತಿ ಸರ್ವವೇದೈಃ[೧] ॥ ೧೭ ॥

*****

## ಶಾರ್ಙ್ಗಕೋಪಾಖ್ಯಾನದಲ್ಲಿ ಶಾರ್ಙ್ಗ ಶಿಶುಗಳು ಮಾಡಿದ ಅಗ್ನಿಸ್ತೋತ್ರ[೨]
## (ಅ-೨೩೧ (೨೫೮))

ಏವಂ ಸಂಭಾಷ್ಯ ತೇಽನ್ಯೋನ್ಯಂ ಮಂದಪಾಲಸ್ಯ ಪುತ್ರಕಾಃ ।
ತುಷ್ಟುವುಃ ಪ್ರಯತಾ ಭೂತ್ವಾ ಯಥಾಗ್ನಿಂ ಶೃಣು ಪಾರ್ಥಿವ ॥

ಜರಿತಾರಿರುವಾಚ

ಆತ್ಮಾಸಿ ವಾಯೋರ್ಜ್ವಲನ ಶರೀರಮಸಿ ವೀರುಧಾಂ ।
ಯೋನಿರಾಪಶ್ಚ ತೇ ಶುಕ್ರಂ ಯೋನಿಸ್ತ್ವಮಸಿ ಚಾಂಭಸಃ ॥ ೭ ॥

ಊರ್ಧ್ವಂ ಚಾಧಶ್ಚ ಸರ್ಪಂತಿ ಪೃಷ್ಠತಃ ಪಾರ್ಶ್ವತಸ್ತಥಾ ।

---

೧ ಮೇಲಿನ ಇಂದ್ರಸ್ತುತಿಯಲ್ಲಿ ಆತನನ್ನು ವಿಷ್ಣು ಇತ್ಯಾದಿಯಾಗಿ ಸಂಬೋಧಿಸಿರುವುದರ ಬಗ್ಗೆ ಗರುಡಸ್ತುತಿ ವ್ಯಾಖ್ಯಾನದಲ್ಲಿ ಶ್ರೀವಾದಿರಾಜರು ಲಕ್ಷಾಲಂಕಾರದಲ್ಲಿ (ಭಾಗ-೧, ಪು. ೪೩.ರಲ್ಲಿ) ಅರ್ಥೈಸಿದಂತೆ ಇಲ್ಲಿಯೂ ತಿಳಿಯಬೇಕು. ಗರುಡ, ಇಂದ್ರಾದಿದೇವತೆಗಳಲ್ಲಿ ವಿಷ್ಣು ಮೊದಲಾದ ದೇವತೆಗಳ ಸನ್ನಿಧಾನವಿರುವುದರಿಂದಾಗಿ ಇಂದ್ರಾದಿ ದೇವತೆಗಳನ್ನು ವಿಷ್ಣ್ವಾದಿಗಳೆಂದೇ ವ್ಯವಹರಿಸಿದ್ದಾರೆಯೇ ಹೊರತು, ಇಂದ್ರಾದಿಗಳೇ ವಿಷ್ಣ್ವಾದಿಗಳು ಎಂದಲ್ಲ.

೨ ಇದು ಔತ್ತರೇಯ – ದಾಕ್ಷಿಣಾತ್ಯ ಪಾಠದಲ್ಲಿದೆ.

ಅರ್ಚಿಷಸ್ತೇ ಮಹಾವೀರ್ಯ ರಶ್ಮಯಃ ಸವಿತುರ್ಯಥಾ ॥ ೮ ॥

ಸಾರಿಸೃಕ್ಕ ಉವಾಚ (ಸಾರಿಸೃಕ್ಕ ಎಂಬ ಪಕ್ಷಿ ಮಾಡಿದ ಸ್ತೋತ್ರ)

ಮಾತಾ ಪ್ರಣಷ್ಟಾ ಪಿತರಂ ನ ವಿದ್ಮಃ
ಪಕ್ಷಾಜಾತಾ ನೈವ ನೋ ಧೂಮಕೇತೋ।
ನ ನಸ್ತ್ರಾತಾ ವಿದ್ಯತೇ ವೈ ತ್ವದನ್ಯಃ
ತಸ್ಮಾದಸ್ಮಾಂಸ್ತ್ರಾಹಿ ಬಾಲಾಂಸ್ತ್ವಮಗ್ನೇ ॥ ೯ ॥

ಯದಗ್ನೇ ತೇ ಶಿವಂ ರೂಪಂ ಯೇ ಚ ತೇ ಸಪ್ತ ಹೇತಯಃ।
ತೇನ ನಃ ಪರಿಪಾಹಿ ತ್ವಮಾರ್ತಾನ್ ವೈ ಶರಣೈಷಿಣಃ ॥ ೧೦ ॥

ತ್ವಮೇವೈಕಸ್ತಪಸೇ ಜಾತವೇದೋ
ನಾನ್ಯಸ್ತಪ್ತಾ ವಿದ್ಯತೇ ಗೋಷು ದೇವ।
ಋಷೀನಸ್ಮಾನ್ ಬಾಲಕಾನ್ ಪಾಲಯಸ್ವ
ಪರೇಣಾಸ್ಮಾನ್ ಪ್ರೇಹಿ ವೈ ಹವ್ಯವಾಹ ॥ ೧೧ ॥

*****

## [೧]ಸ್ತಂಭಮಿತ್ರ ಉವಾಚ (ಸ್ತಂಭಮಿತ್ರ ಎಂಬ ಪಕ್ಷಿಕೃತ ಸ್ತೋತ್ರ)

ಸರ್ವಮಗ್ನೇ ತ್ವಮೇವೈಕಸ್ತ್ವಯಿ ಸರ್ವಮಿದಂ ಜಗತ್।
ತ್ವಂ ಧಾರಯಸಿ ಭೂತಾನಿ ಭುವನಂ ತ್ವಂ ಬಿಭರ್ಷಿ ಚ ॥ ೧೨ ॥

ತ್ವಮಗ್ನಿರ್ಹವ್ಯವಾಹಸ್ತ್ವಂ ತ್ವಮೇವ ಪರಮಂ ಹವಿಃ।
ಮನೀಷಿಣಸ್ತ್ವಾಂ ಜಾನಂತಿ ಬಹುಧಾ ಚೈಕಧಾಪಿ ಚ ॥ ೧೩ ॥

---

೧ ಪಾಠಾಂತರಗಳೂ ಇವೆ.
ಮೇಲಿನ ಸ್ತೋತ್ರಗಳು ಎಲ್ಲ ಪಾಠಗಳಲ್ಲಿಯೂ ಇವೆ. ಈ ಉಪಾಖ್ಯಾನದ ೩೮ ಶ್ಲೋಕಗಳಲ್ಲಿನ ಕೆಲವು ಕಠಿಣ ಶಬ್ದಗಳಿಗೆ ಶ್ರೀವಾದಿರಾಜರು ಲಕ್ಷಾಲಂಕಾರದಲ್ಲಿ ಅರ್ಥಬರೆದು ಉಪಕರಿಸಿದ್ದಾರೆ.
ಆಚಾರ್ಯ ಶ್ರೀಮಧ್ವರು ಈ ಭಾಗದ ಭಾರತಕ್ಕೆ ನಿರ್ಣಯ ಬರೆಯುತ್ತಾ 'ಅಯಮಗ್ನೇ ಜರೀತೇತ್ಯಾದಿಮಂತ್ರೈಃ' ಎಂಬ ಋಗ್ವೇದ ೧೦ನೇ ಮಂಡಲದ ೧೪೨ನೇ ಸೂಕ್ತದಲ್ಲಿನ ೮ ಮಂತ್ರಗಳಿಂದ ಶಾಂರ್ಙಕ ಪಕ್ಷಿಗಳು ಅಗ್ನಿಸ್ತೋತ್ರ ಮಾಡಿ ಸಾವಿನ ದವಡೆಯಿಂದ ಪಾರಾದವೆಂದು ತಿಳಿಸಿದ್ದಾರೆ. ಮೇಲಿನ ಸ್ತೋತ್ರವು ಪೌರುಷೇಯಸ್ತೋತ್ರವಾದರೆ, ಅಪೌರುಷೆಯ ಸ್ತೋತ್ರಗಳು ೧೪೨ನೇ ಸೂಕ್ತವಾಗಿದೆ. ಇದನ್ನೇ ಆ ಪಕ್ಷಿಗಳು ಕಂಡವು ಎಂದು ಭಾವ. ಪಕ್ಷಿಗಳಿಗೂ ವೇದಾ-ಧಿಕಾರವಿರುವ ವಿಚಾರವು ಬ್ರಹ್ಮಸೂತ್ರಗಳಲ್ಲಿ ನಿರ್ಣಯಿಸಲ್ಪಟ್ಟಿದೆ.
ಈ ಸ್ತೋತ್ರ ಪಠಣದಿಂದ ಅಗ್ನಿ ಭಯವಿರದು. ಅಲ್ಲದೆ ಕೃಷ್ಣಾರ್ಜುನರ, ಹರಿವಾಯುಶೇಷದೇವರ (ನರೋತ್ತಮ-ನರ) ಅನುಗ್ರಹವು ಆಗುವುದೆಂದು ಇದರ ಅಭಿಪ್ರಾಯ.

ಶುಕ್ಲಸ್ತ್ವಂ ಬಹುಲಶ್ಚೈವ ಕಲಾ ಕಾಷ್ಠಾ ತ್ರುಟಿಸ್ತಥಾ ।
ಸಂವತ್ಸರರ್ತವೋ ಮಾಸಾ ರಜನ್ಯಶ್ಚ ದಿನಾನಿ ಚ ॥ ೧೪ ॥

ತ್ವಮುತ್ತಮಾ ಸಗಿರಿವನಾ ವಸುಂಧರಾ
ಸ ಭಾಸ್ಕರಂ ವಿತಿಮಿರಮಂಬರಂ ತಥಾ ।
ಮಹೋದಧಿಃ ಸ ತಿಮಿಂಗಿಲಸ್ತಥಾ
ಮಹೋರ್ಮಿಮಾನ್ ಬಹುಮಕರೋ ಝಷಾಲಯಃ ॥ ೧೫ ॥

ಮಹದ್ಯಶಸ್ತ್ವಮಿತಿ ಸದಾಭಿಪೂಜ್ಯಸೇ
ಮನೀಷಿಭಿರ್ಮುದಿತಮನಾ ಮಹರ್ಷಿಭಿಃ ।
ಅಭಿಷ್ಟುತಃ ಪಿಬಸಿ ಚ ಸೋಮಮಧ್ವರೇ
ವಷಟ್ಕೃತಾನ್ಯಪಿ ಚ ಹವೀಂಷಿ ಭೂತಯೇ ॥ ೧೬ ॥

ತ್ವಂ ವಿಪ್ರೈಃ ಸತತಮಿಹೇಜ್ಯಸೇ ಫಲಾರ್ಥಂ
ವೇದಾಂಗೇಷ್ವತುಲಬಲೌಘ ಗೀಯಸೇ ಚ ।
ತ್ವದ್ಧೇತೋರ್ಯಜನ ಪರಾಯಣಾ ದ್ವಿಜೇಂದ್ರಾ
ವೇದಾಂಗಾನ್ಯಭಿಗಮಯಂತಿ ಸರ್ವವೇದ್ಯೈಃ[1] ॥ ೧೭ ॥

*****

## ಶಾರ್ಙ್ಗಕೋಪಾಖ್ಯಾನದಲ್ಲಿ ಶಾರ್ಙ್ಗ ಶಿಶುಗಳು ಮಾಡಿದ ಅಗ್ನಿಸ್ತೋತ್ರ[2]
## (ಅ-೨೩೧ (೨೫೮))

ಏವಂ ಸಂಭಾಷ್ಯ ತೇऽನ್ಯೋನ್ಯಂ ಮಂದಪಾಲಸ್ಯ ಪುತ್ರಕಾಃ ।
ತುಷ್ಟುವುಃ ಪ್ರಯತಾ ಭೂತ್ವಾ ಯಥಾಗ್ನಿಂ ಶೃಣು ಪಾರ್ಥಿವ ॥

ಜರಿತಾರಿರುವಾಚ

ಆತ್ಮಾಸಿ ವಾಯೋರ್ಜ್ವಲನ ಶರೀರಮಸಿ ವೀರುಧಾಂ ।
ಯೋನಿರಾಪಶ್ಚ ತೇ ಶುಕ್ರಂ ಯೋನಿಸ್ತ್ವಮಸಿ ಚಾಂಭಸಃ ॥ ೭ ॥

ಊರ್ಧ್ವಂ ಚಾಧಶ್ಚ ಸರ್ಪಂತಿ ಪೃಷ್ಠತಃ ಪಾರ್ಶ್ವತಸ್ತಥಾ ।

---

೧ ಮೇಲಿನ ಇಂದ್ರಸ್ತುತಿಯಲ್ಲಿ ಆತನನ್ನು ವಿಷ್ಣು ಇತ್ಯಾದಿಯಾಗಿ ಸಂಬೋಧಿಸಿರುವುದರ ಬಗ್ಗೆ ಗರುಡಸ್ತುತಿ ವ್ಯಾಖ್ಯಾನದಲ್ಲಿ ಶ್ರೀವಾದಿರಾಜರು ಲಕ್ಷಾಲಂಕಾರದಲ್ಲಿ (ಭಾಗ-೧, ಪು. ೪೩ರಲ್ಲಿ) ಅರ್ಥೈಸಿದಂತೆ ಇಲ್ಲಿಯೂ ತಿಳಿಯಬೇಕು. ಗರುಡ, ಇಂದ್ರಾದಿದೇವತೆಗಳಲ್ಲಿ ವಿಷ್ಣು ಮೊದಲಾದ ದೇವತೆಗಳ ಸನ್ನಿಧಾನವಿರುವುದರಿಂದಾಗಿ ಇಂದ್ರಾದಿ ದೇವತೆಗಳನ್ನು ವಿಷ್ಣ್ವಾದಿಗಳೆಂದೇ ವ್ಯವಹರಿಸಿದ್ದಾರೆಯೇ ಹೊರತು, ಇಂದ್ರಾದಿಗಳೇ ವಿಷ್ಣ್ವಾದಿಗಳು ಎಂದಲ್ಲ.

೨ ಇದು ಔತ್ತರೇಯ – ದಾಕ್ಷಿಣಾತ್ಯ ಪಾಠದಲ್ಲಿದೆ.

ಅರ್ಚಿಷಸ್ತೇ ಮಹಾವೀರ್ಯ ರಶ್ಮಯಃ ಸವಿತುರ್ಯಥಾ ॥ ೮ ॥

ಸಾರಿಸೃಕ್ಕ ಉವಾಚ (ಸಾರಿಸೃಕ್ಕ ಎಂಬ ಪಕ್ಷಿ ಮಾಡಿದ ಸ್ತೋತ್ರ)

ಮಾತಾ ಪ್ರಣಷ್ಟಾ ಪಿತರಂ ನ ವಿದ್ಮಃ
ಪಕ್ಷಾ ಜಾತಾ ನೈವ ನೋ ಧೂಮಕೇತೋ ।
ನ ನಸ್ತ್ರಾತಾ ವಿದ್ಯತೇ ವೈ ತ್ವದನ್ಯಃ
ತಸ್ಮಾದಸ್ಮಾಂಸ್ತ್ರಾಹಿ ಬಾಲಾಂಸ್ತ್ವಮಗ್ನೇ ॥ ೯ ॥

ಯದಗ್ನೇ ತೇ ಶಿವಂ ರೂಪಂ ಯೇ ಚ ತೇ ಸಪ್ತ ಹೇತಯಃ ।
ತೇನ ನಃ ಪರಿಪಾಹಿ ತ್ವಮಾರ್ತಾನ್ ವೈ ಶರಣೈಷಿಣಃ ॥ ೧೦ ॥

ತ್ವಮೇವೈಕಸ್ತಪಸೇ ಜಾತವೇದೋ
ನಾನ್ಯಸ್ತಪ್ತಾ ವಿದ್ಯತೇ ಗೋಷು ದೇವ ।
ಋಷೀನಸ್ಮಾನ್ ಬಾಲಕಾನ್ ಪಾಲಯಸ್ವ
ಪರೇಣಾಸ್ಮಾನ್ ಪ್ರೇಹಿ ವೈ ಹವ್ಯವಾಹ ॥ ೧೧ ॥

*****

## [1]ಸ್ತಂಭಮಿತ್ರ ಉವಾಚ (ಸ್ತಂಭಮಿತ್ರ ಎಂಬ ಪಕ್ಷಿಕೃತ ಸ್ತೋತ್ರ)

ಸರ್ವಮಗ್ನೇ ತ್ವಮೇವೈಕಸ್ತ್ವಯಿ ಸರ್ವಮಿದಂ ಜಗತ್ ।
ತ್ವಂ ಧಾರಯಸಿ ಭೂತಾನಿ ಭುವನಂ ತ್ವಂ ಬಿಭರ್ಷಿ ಚ ॥ ೧೨ ॥

ತ್ವಮಗ್ನಿರ್ಹವ್ಯವಾಹಸ್ತ್ವಂ ತ್ವಮೇವ ಪರಮಂ ಹವಿಃ ।
ಮನೀಷಿಣಸ್ತ್ವಾಂ ಜಾನಂತಿ ಬಹುಧಾ ಚೈಕಧಾಪಿ ಚ ॥ ೧೩ ॥

---

೧ ಪಾಠಾಂತರಗಳೂ ಇವೆ.
ಮೇಲಿನ ಸ್ತೋತ್ರಗಳು ಎಲ್ಲ ಪಾಠಗಳಲ್ಲಿಯೂ ಇವೆ. ಈ ಉಪಾಖ್ಯಾನದ ೩೮ ಶ್ಲೋಕಗಳಲ್ಲಿನ ಕೆಲವು ಕಠಿಣ ಶಬ್ದಗಳಿಗೆ ಶ್ರೀವಾದಿರಾಜರು ಲಕ್ಷಾಲಂಕಾರದಲ್ಲಿ ಅರ್ಥಬರೆದು ಉಪಕರಿಸಿದ್ದಾರೆ.
ಆಚಾರ್ಯ ಶ್ರೀಮಧ್ವರು ಈ ಭಾಗದ ಭಾರತಕ್ಕೆ ನಿರ್ಣಯ ಬರೆಯುತ್ತಾ 'ಅಯಮಗ್ನೇ ಜರೀತೇತ್ಯಾದಿಮಂತ್ರೈಃ' ಎಂಬ ಋಗ್ವೇದ ೧೦ನೇ ಮಂಡಲದ ೧೪೨ನೇ ಸೂಕ್ತದಲ್ಲಿನ ೮ ಮಂತ್ರಗಳಿಂದ ಶಾರ್ಙ್ಗಕ ಪಕ್ಷಿಗಳು ಅಗ್ನಿಸ್ತೋತ್ರ ಮಾಡಿ ಸಾವಿನ ದವಡೆಯಿಂದ ಪಾರಾದವೆಂದು ತಿಳಿಸಿದ್ದಾರೆ. ಮೇಲಿನ ಸ್ತೋತ್ರವು ಪೌರುಷೇಯಸ್ತೋತ್ರವಾದರೆ, ಅಪೌರುಷೆಯ ಸ್ತೋತ್ರಗಳು ೧೪೨ನೇ ಸೂಕ್ತವಾಗಿದೆ. ಇದನ್ನೇ ಆ ಪಕ್ಷಿಗಳು ಕಂಡವು ಎಂದು ಭಾವ. ಪಕ್ಷಿಗಳಿಗೂ ವೇದಾ-ಧಿಕಾರವಿರುವ ವಿಚಾರವು ಬ್ರಹ್ಮಸೂತ್ರಗಳಲ್ಲಿ ನಿರ್ಣಯಿಸಲ್ಪಟ್ಟಿದೆ.
ಈ ಸ್ತೋತ್ರ ಪಠಣದಿಂದ ಅಗ್ನಿ ಭಯವಿರದು. ಅಲ್ಲದೆ ಕೃಷ್ಣಾರ್ಜುನರ, ಹರಿವಾಯುಶೇಷದೇವರ (ನರೋತ್ತಮ-ನರ) ಅನುಗ್ರಹವು ಆಗುವುದೆಂದು ಇದರ ಅಭಿಪ್ರಾಯ.

ಸೃಷ್ಟ್ವಾ ಲೋಕಾಂಸ್ತ್ರೀನಿಮಾನ್ ಹವ್ಯವಾಹ
ಕಾಲೇ ಪ್ರಾಪ್ತೇ ಪಚಸಿ ಪುನಃ ಸಮಿದ್ಧಃ ।
ತ್ವಂ ಸರ್ವಸ್ಯ ಭುವನಸ್ಯ ಪ್ರಸೂತಿ
ಸ್ತ್ವಮೇವಾಗ್ನೇ ಭವಸಿ ಪುನಃ ಪ್ರತಿಷ್ಠಾ ॥ ೧೪ ॥

ದ್ರೋಣ ಉವಾಚ (ದ್ರೋಣಪಕ್ಷಿಕೃತ ಸ್ತೋತ್ರ)

ತ್ವಮನ್ನಂ ಪ್ರಾಣಿಭಿರ್ಭುಕ್ತಮಂತರ್ಭೂತೋ ಜಗತ್ಪತೇ ।
ನಿತ್ಯಪ್ರವೃದ್ಧಃ ಪಚಸಿ ತ್ವಯಿ ಸರ್ವಂ ಪ್ರತಿಷ್ಠಿತಮ್ ॥ ೧೫ ॥

ಸೂರ್ಯೋ ಭೂತ್ವಾ ರಶ್ಮಿಭಿರ್ಜಾತವೇದೋ
ಭೂಮೇರಂಭೋ ಭೂಮಿಜಾತಾನ್ ರಸಾಂಶ್ಚ ।
ವಿಶ್ವಾನಾದಾಯ ಪುನರುತ್ಸೃಜ್ಯ ಕಾಲೇ
ದೃಷ್ಟ್ವಾ ವೃಷ್ಟ್ಯಾ ಭಾವಯಸೀಹ ಶುಕ್ರ ॥ ೧೬ ॥

ತ್ವತ್ತ ಏತಾಃ ಪುನಃ ಶುಕ್ರ ವೀರುಧೋ ಹರಿತಚ್ಛದಾಃ ।
ಜಾಯಂತೇ ಪುಷ್ಕರಿಣ್ಯಶ್ಚ ಸುಭದ್ರಶ್ಚ ಮಹೋದಧಿಃ ॥ ೧೭ ॥

ಇದಂ ವೈ ಸದ್ಮ ತಿಗ್ಮಾಂಶೋ ವರುಣಸ್ಯ ಪರಾಯಣಂ
ಶಿವಸ್ತ್ರಾತಾ ಭವಾಸ್ಮಾಕಂ ಮಾಸ್ಮಾನದ್ಯ ವಿನಾಶಯ ॥ ೧೮ ॥

ಪಿಂಗಾಕ್ಷ ಲೋಹಿತಾಗ್ನೀವ ಕೃಷ್ಣವರ್ತ್ಮನ್ ಹುತಾಶನ ।
ಪರೇಣ ಪ್ರೇಹಿ ಮುಂಚಾಸ್ಮಾನ್ ಸಾಗರಸ್ಯ ಗೃಹಾನಿವ ॥ ೧೯ ॥

ಅಗ್ನಿರುವಾಚ

ಋಷಿರ್ದ್ರೋಣಸ್ತ್ವಮಸಿ ವೈ ಬ್ರಹ್ಮ ತದ್ವ್ಯಾಹೃತಂ ತ್ವಯಾ ।
ಈಪ್ಸಿತಂ ತೇ ಕರಿಷ್ಯಾಮಿ ನ ಚ ತೇ ವಿದ್ಯತೇ ಭಯಮ್ ॥ ೨೦ ॥

ಭೃಶಂ ಪ್ರೀತೋಽಸ್ಮಿ ಭದ್ರಂತೇ ಬ್ರಹ್ಮನ್ ಸ್ತೋತ್ರೇಣ ಸತ್ತಮ ॥ ೨೨ ॥

*****

## ವಸಿಷ್ಠಕೃತ ಸೂರ್ಯಸ್ತೋತ್ರ (ತಾಪತ್ಯೋಪಾಖ್ಯಾನ) (೧-೧೭೨) (ಆದಿಪರ್ವ)

ವಸಿಷ್ಠ ಉವಾಚ

ಅಜಾಯ ಲೋಕತ್ರಯ ಪಾವನಾಯ
ಭೂತಾತ್ಮನೇ ಗೋಪತಯೇ ವೃಷಾಯ ।

ಸೂರ್ಯಾಯ ಸರ್ಗಪ್ರಲಯಾಲಯಾಯ
ನಮೋ ಮಹಾಕಾರುಣಿಕೋತ್ತಮಾಯ ॥ ೨೪ ॥

ವಿವಸ್ವತೇ ಜ್ಞಾನ ಭೃತೇಽಂತರಾತ್ಮನೇ (ಭೃದಂತರಾತ್ಮನೇ)
ಜಗತ್ಪ್ರದೀಪಾಯ ಜಗದ್ಧಿತೈಷಿಣೇ ।
ಸ್ವಯಂಭುವೇ ದೀಪ್ತ ಸಹಸ್ರಚಕ್ಷುಷೇ
ಸುರೋತ್ತಮಾಯಾಮಿತತೇಜಸೇ ನಮಃ ॥ ೨೫ ॥

ನಮಃ ಸವಿತ್ರೇ ಜಗದೇಕಚಕ್ಷುಷೇ
ಜಗತ್ಪ್ರಸೂಸ್ಥಿತಿನಾಶಹೇತವೇ ।
ತ್ರಯೀಮಯಾಯ ತ್ರಿಗುಣಾತ್ಮಧಾರಿಣೇ
ವಿರಿಂಚ ನಾರಾಯಣ ಶಂಕರಾತ್ಮನೇ ॥ ೨೬ ॥

ಸೂರ್ಯ ಉವಾಚ

ಸಂಸ್ತುತೋ ವರದಃ ಸೋಽಹಂ ವರಂ ವರಯ ಸುವ್ರತ ।
ಸ್ತುತಿಸ್ತ್ವಯೋಕ್ತಾ ಭಕ್ತಾನಾಂ ಜಪ್ಯೇಯಂ ವರದೋಽಸ್ಮ್ಯಹಮ್ ॥

*****

# ಪರಿಶಿಷ್ಟ - ೨

## ಕರ್ಣಪರ್ವದ ಹಂಸಕಾಕೀಯ ಉಪಾಖ್ಯಾನ
## (ಅಧ್ಯಾಯ ೪೧ರಿಂದ ಉದಾಹೃತ ಶ್ಲೋಕಗಳು
## ಪು. ೫೩ಕ್ಕೆ ಸಂಬಂಧಿಸಿದ)

**ಕಾಕ ಉವಾಚ -**

**ಶತಮೇಕಂ ಚ ಪಾತಾನಾಂ ಪತಿತಾऽಸ್ಮಿ ನ ಸಂಶಯಃ।**
**ಶತಯೋಜನಮೇಕ್ಕೈಕಂ ವಿಚಿತ್ರಂ ವಿವಿಧಂ ತಥಾ ॥ ಅಧ್ಯಾಯ ೪೧-॥ ೨೮ ॥**

ಕಾಗೆ ಹೇಳಿತು, ನೂರೊಂದು ಬಗೆಯ ವಿಚಿತ್ರ ವಿವಿಧ ಹಾರಾಟಗಳಲ್ಲಿ ನಾನು ಹಾರಾಡಬಲ್ಲೆ. ಸಂಶಯ ಬೇಡ. ಒಂದೊಂದು ಹಾರಾಟವನ್ನು ಕೂಡ ನೂರು ಯೋಜನ ಪರ್ಯಂತ ಹಾರಬಲ್ಲೆ.

**ಉಡ್ಡೀನಮವಡೀನಂ ಚ ಪ್ರಡೀನಂ ಡೀನಮೇವ ಚ।**
**ನಿಡೀನಮಥ ಸಂಡೀನಂ ತಿರ್ಯಗ್ ಡೀನಗತಾನಿ ಚ ॥ ೨೯ ॥**

ಉಡ್ಡೀನ ಅವಡೀನ ಪ್ರಡೀನ ಡೀನ ನಿಡೀನ ಸಂಡೀನ ತಿರ್ಯಕ್ ಡೀನ

**ವಿಡೀನಂ ಪರಿಡೀನಂ ಚ ಪರಾಡಿನಂ ಸುಡೀನಕಮ್।**
**ಅತಿಡೀನಂ ಮಹಾಡೀನಂ ಖಡೀನಂ ವರಡೀನಕಮ್ ॥ ೩೦ ॥**

ವಿಡೀನ ಪರಿಡೀನ ಪರಾಡೀನ ಸುಡೀನ ಅತಿಡೀನ ಮಹಾಡೀನ ಖಡೀನ ವರಡೀನ

**ಅವಡೀನಂ ಪ್ರಡೀನಂ ಚ ಸಂಡೀನಂ ಡೀನಡೀನಕಮ್।**
**ಅವಡೀನಂ ಪ್ರಡೀನಂ ಚ ಪುನರ್ಡೀನವಿಡೀನಕಮ್ ॥ ೩೧ ॥**

ಅವಡೀನ ಪ್ರಡೀನ ಸಂಡೀನ ಡೀನಡೀನ ಅವಡೀನ ಪ್ರಡೀನ ಡೀನವಿಡೀನ

**ಸಂಪಾತಂ ಸಮಡೀನಂ ಚ ತತೋऽನ್ಯದ್ ವಿತಿರಶ್ಚಕಮ್।**
**ಗತಾಗತಪ್ರತಿಗತಾ ಬಹ್ವೀಶ್ಚ ನಿಕನೀನಕಾಃ ॥ ೩೨ ॥**

ಸಂಪಾತ ಸಮಡೀನ ವಿತಿರಶ್ಚಕ ಗತ-ಅಗತ-ಪ್ರತಿಗತ ಎಂದು ಬಹುವಿಧವಾದ ಅತಿನಿಕೃಷ್ಟಗತಿ.

'ಉಡ್ಡೀನ' 'ಡೀಙ್ ವಿಹಾಯಸಾಗತೌ' ಧಾತುವಿನಿಂದ ಆಕಾಶದಲ್ಲಿ ಮೇಲೆ ಹಾರುವುದು. 'ಅವಡೀನ' ಅಧೋಗಮನ. 'ಪ್ರಡೀನ' ಶೀಘ್ರಗಮನ. 'ಡೀನ' ಸಮವಾಗಿ ಗಮನ. 'ನಿಡೀನ' ರೆಕ್ಕೆಗಳನ್ನು ಸ್ವಲ್ಪ ಅಡಗಿಸಿಕೊಂಡು ಗಮನ, 'ಸಂಡೀನ' ಚೆನ್ನಾಗಿ ರೆಕ್ಕೆ ಬಿಡಿಸಿ

ಗಮನ. 'ವಿಡೀನ' ವಿರೋಧವಿದ್ದಾಗ ಮುಖ ಮೇಲೆತ್ತಿ ಗಮನ. ಪರಿಡ್ಡೀನ ಸುತ್ತಲೂ ಗಮನ, ಪರಾಡೀನ ಹಿಂತಿರುಗಿ ಗಮನ, 'ಸುಡೀನ' ಸುಖವಾಗಿ ಗಮನ, 'ಅತಿಡೀನ' ಒಂದಕ್ಕಿಂತ ಇನ್ನೊಂದು ವೇಗದಿಂದ ಗಮನ. 'ಮಹಾಡೀನ' ಕ್ಷಣಕ್ಷಣ ರೆಕ್ಕೆ ಬಡಿದು ಗಮನ. 'ಖಡೀನ' ಆಕಾಶದ ಕಡೆಗೆ ಗಮನ, 'ವರಡೀನ' ಕೊಳ್ಳೆಯನ್ನೆತ್ತಿಕೊಂಡು ಗಮನ. ಇವಿಷ್ಟೂ ಊರ್ಧ್ವಗಮನ ಪ್ರಭೇದಗಳು.

ಇನ್ನು ಮುಂದೆ ಅಧೋಗಮನ ಪ್ರಭೇದಗಳು – ಅವಡೀನ ಪ್ರಡೀನ ಮುಂತಾದವು. ಅವುಗಳಲ್ಲಿ 'ಡೀನಡೀನಕ' ನಿಧಾನವಾದ ಗಮನ, 'ಉಡ್ಡೀನ' ಅಧೋಗಮನದಲ್ಲಿಯೇ ಮಿಡತೆ ಮುಂತಾದವುಗಳನ್ನು ತಿನ್ನಲು ಸ್ವಲ್ಪ ಮೇಲಕ್ಕೆ ಗಮನ. 'ಸಂಪಾತ' ಶೀಘ್ರಗಮನ, 'ಸಮಡೀನ' ಸಮವಾಗಿ ಗಮನ, 'ವಿತಿರಶ್ಚಕ' ವಿಶೇಷವಾಗಿ ತಿರ್ಯಕ್ ಗಮನ ಅಂದರೆ ಅಧೋಗಮನದಲ್ಲಿಯೇ ಕೆಲವೊಮ್ಮೆ ತಿರ್ಯಕ್ ಗಮನ.

ಗತ-ಆಗತ-ಪ್ರತಿಗತ-ನಿಕನೀನಕಗಳು ನೆಲದಲ್ಲಿಯೇ ಎರಡು ಕಾಲುಗಳಿಂದ ಹಾರುತ್ತ ಹಾರುತ್ತ ಹೋಗುವುದು. ಬಲ್ಯಾದಿ ಭಕ್ಷಣಕ್ಕಾಗಿ ಅಧೋಗಮನವನ್ನೇ ಕಾಗೆ ಮಾಡುವುದರಿಂದ ಅದನ್ನೇ ವಿಶೇಷವಾಗಿ ವರ್ಣಿಸಿದೆ.

ಈ ನಾಲ್ಕು ಶ್ಲೋಕಗಳಲ್ಲಿ ಇಪ್ಪತ್ತಾರು ಗತಿಗಳನ್ನು ಹೇಳಿದೆ. ಇವುಗಳಲ್ಲಿ 'ಮಹಾಡೀನ' ಒಂದನ್ನು ಬಿಟ್ಟು ಉಳಿದ ಇಪ್ಪತ್ತೈದು ಗತಿಗಳು ಪ್ರತಿಯೊಂದೂ 'ಗತಿ ಆಗತಿ ಪ್ರತಿಗತಿ' ಹೋಗುವುದು ಬರುವುದು, ಹಿಂದಿರುಗಿ ಬರುವುದು, ಎಂದು ಮೂರು ಬಗೆ ಇರುವುದರಿಂದ ಒಟ್ಟು ಎಪ್ಪತ್ತಾರು ಗತಿಗಳಾದವು. ಸಂಪಾತಗಳು ಬೇರೆ ಇಪ್ಪತ್ತೈದು ಇವೆ. ಅವೂ ಸೇರಿದರೆ ಒಟ್ಟು ನೂರೊಂದು ಗತಿಗಳಾಗುತ್ತವೆ.

ಕೃಪೆ: ಕರ್ಣಪರ್ವ ಅಧ್ಯಾಯ ೪೧ – ತತ್ತ್ವಸಂಶೋಧನಸಂಸತ್ ಪಲಿಮಾರುಮಠ, ಉಡುಪಿ (೨೦೧೯)

## ಪರಿಶಿಷ್ಟ - ೩

# ಭಾಷಾತ್ರಯ ವಿಜ್ಞಾನ

**ಮಾರ್ಕಂಡೇಯಸ್ತದಾಗತ್ಯ ತೇಷಾಮಕಥಯತ್ ಕಥಾಃ ।**
**ಬಹ್ವೀಶ್ಚೈವ ವಿಚಿತ್ರಾಶ್ಚ ಭಾಷಾತ್ರಯಸಮನ್ವಿತಾಃ ॥ - ಮ.ತಾ.ನಿ. ೨೨/೩೯೭**

ಮಾರ್ಕಂಡೇಯ ಮುನಿ ಬಂದು ಪಾಂಡವರಿಗೆ ಮೂರು ಭಾಷೆಗಳಿಂದ ಕೂಡಿದ ವಿಚಿತ್ರವಾದ ಬಹಳ ಕಥೆಗಳನ್ನು ಹೇಳಿದ.

- 'ಸಮಾಸ್ಯಾ' ಎಂದರೆ ಸಹವಾಸ. ಜೊತೆಗೆ ಇದ್ದು ನಾನಾ ಕಥೆಗಳನ್ನು ಕೇಳುವುದು. ಮುಂದೆ ಮಾರ್ಕಂಡೇಯ ಸಮಾಸ್ಯಾದಲ್ಲಿ ರಾಮೋಪಾಖ್ಯಾನ ಪರ್ವದಲ್ಲಿ ಶ್ರೀರಾಮಕಥೆಯನ್ನೂ ಪತಿವ್ರತಾಮಾಹಾತ್ಮ್ಯ ಪರ್ವದಲ್ಲಿ ಸಾವಿತ್ರೀ ಸತ್ಯವಾನರ ಕಥೆಯನ್ನೂ ವರ್ಣಿಸಿದ್ದಾರೆ. ಈ ಕಥೆಗಳನ್ನು ಸರಿಯಾಗಿ ತಿಳಿಯಬೇಕಾದರೆ ಭಾಷಾತ್ರಯದ ಪರಿಜ್ಞಾನ ಬೇಕು.

**ಲೋಕದರ್ಶನಮಾಶ್ರಿತ್ಯ ದೇವಾಶ್ಚ ಮುನಯಸ್ತಥಾ ।**
**ಬ್ರೂಯುಃ ಕಥಾಸ್ತತ್ರ ಶಿಕ್ಷಾ ಗ್ರಾಹ್ಯಾ ನಾರ್ಥಃ ಕಥಂಚನ ॥ - ೧/೩೯೮**

ಲೋಕರೀತಿಯನ್ನು ಅನುಸರಿಸಿ ದೇವತೆಗಳೂ, ಮುನಿಗಳೂ ಕಥೆಗಳನ್ನು ಹೇಳಬಹುದು. ಆಗ ಅದರಲ್ಲಿ ನೀತಿಯನ್ನು ಮಾತ್ರ ಸ್ವೀಕರಿಸಬೇಕು. ಕಥಾವಸ್ತುವನ್ನಲ್ಲ.

- [೧]ವೇದಪುರಾಣ ಇತಿಹಾಸಗಳ ಭಾಷೆಗಳು ಮೂರು - ದರ್ಶನಭಾಷೆ, ಸಮಾಧಿ ಭಾಷೆ ಮತ್ತು ಗುಹ್ಯಭಾಷೆ ಎಂದು. ದರ್ಶನಭಾಷೆ ಎರಡು ಬಗೆಯಾಗಿದೆ. ಲೋಕದರ್ಶನ

---

೧ ದರ್ಶನಭಾಷಾ ದ್ವಿವಿಧಾ, ಲೋಕದರ್ಶನಭಾಷಾ ಪರದರ್ಶನಭಾಷಾ ಚೇತಿ। ಪರದರ್ಶನಭಾಷಾಽಪಿ ದ್ವಿವಿಧಾ ಲೌಕಿಕ ಪರದರ್ಶನಭಾಷಾ ವೈದಿಕರ್ಶನಭಾಷಾ ಚೇತಿ । ತತ್ರ ಲೋಕದರ್ಶನಭಾಷಾಂ ದರ್ಶಯತಿ ಲೋಕದರ್ಶನಮಾಶ್ರಿತ್ಯೇತಿ । ಲೋಕದರ್ಶನಂ ಸ್ಮೃತ್ಯಾದಿ ಧರ್ಮಶಾಸ್ತ್ರಂ, ಮಾತಾಪಿತ್ರೋರ್ಮೃತೇಽಹನಿ ಶ್ರಾದ್ಧತಿಲಾಂಜಲ್ಯಾದಿಕಂ ಕುರ್ಯಾತ್, ಪಿತ್ರೇ ಮಾತ್ರೇ ಗುರವೇ ಚ ನಮಸ್ಕುರ್ಯಾತ್ ಇತ್ಯಾದಿ ಲೋಕೋಚಿತಧರ್ಮಪ್ರತಿಪಾದಕಮಿತ್ಯರ್ಥಃ । ಈದೃಶಂ ಲೋಕದರ್ಶನಮಾಶ್ರಿತ್ಯ ದೇವಾಶ್ಚ ಮುನಯಶ್ಚ ಹರಾವಪಿ ಕಥಾಂ ಬ್ರೂಯುಃ । ತತ್ರ ಶಿಕ್ಷೈವ ಗ್ರಾಹ್ಯಾ, ಲೋಕಶಿಕ್ಷಾರ್ಥಮಿದಮುಕ್ತಮಿತ್ಯೇವೋಹ್ಯಂ। ಅರ್ಥಸ್ತು ಕಥಂಚನ ನ ಗ್ರಾಹ್ಯಃ। ಕೃತಕೃತ್ಯಸ್ಯ ಸರ್ವೋತ್ತಮಸ್ಯ ಹರೇಃ ಕರ್ತವ್ಯಾಭಾವಾತ್, ಪಿತೃಶ್ರಾದ್ಧಮುನಿವಂದನಸೀತಾನ್ವೇಷಾದಿಕಂ ಲೀಲೈವೇತ್ಯನಾದರಣೀಯಮಿತ್ಯರ್ಥಃ। ಅತ ಏವ ಮಾರ್ಕಂಡೇಯ ಮುನಿನಾ ಪಾಂಡವಾನ್ ಪ್ರತಿ ರಾಮಾಯಣ ಕಥಾ ಕಥನೇ ಪಿತರಿ ಮೃತೇ ಸತಿ ರಾಮೇಣ ಪಿತೃಶ್ರಾದ್ಧಂ ಕೃತಂ, ತಿಲಾಂಜಲಿರ್ದತ್ತಃ ಅಗಸ್ತ್ಯಾದಿ ಮುನಿವಂದನಂ ಕೃತಂ, ಸೀತಾನ್ವೇಷಂ ಕೃತಮಿತ್ಯಾದಿ ಯಾ ಕಥಾ ಕಥಿತಾ ತತ್ರಾಪಿ ಶಿಕ್ಷೈವ ಗ್ರಾಹ್ಯಾ, ನ ತ್ವರ್ಥಃ । ಹರ್ಯವತಾರಸ್ಯ ರಾಮಸ್ಯ ಪಿತ್ರಾದ್ಯಭಾವಾತ್ ಪಿತೃಶ್ರಾದ್ಧಮುನಿವಂದನ ಸೀತಾನ್ವೇಷಣಾದಿಕಂ ಲೀಲೈವೇತ್ಯನಾದರಣೀಯ ಮೇವೇತಿ ಭಾವಃ। - ವಾದಿರಾಜೀಯ

ಭಾಷೆ ಮತ್ತು ಪರದರ್ಶನಭಾಷೆ ಎಂದು. ಪರದರ್ಶನ ಭಾಷೆಯೂ ಎರಡು ವಿಧ - ಲೌಕಿಕ ಪರದರ್ಶನಭಾಷೆ ಮತ್ತು ವೈದಿಕ ಪರದರ್ಶನಭಾಷೆ ಎಂದು. ಈ ಶ್ಲೋಕದಲ್ಲಿ ಈಗ ಲೋಕದರ್ಶನ ಭಾಷೆಯ ಬಗ್ಗೆ ಹೇಳಿದ. ಆದರ್ಶಮಾನವ ಹೀಗಿರಬೇಕೆಂದು ಲೋಕರೀತಿಯನ್ನು ತಿಳಿಸುವುದಕ್ಕಾಗಿ ಶ್ರುತಿಸ್ಮೃತ್ಯಾದಿ ಧರ್ಮಶಾಸ್ತ್ರರೂಪವಾದ ಲೋಕದರ್ಶನವನ್ನು ಅನುಸರಿಸಿ ಶ್ರೀರಾಮನ ಕಥೆಯನ್ನು ಮಾರ್ಕಂಡೇಯ ಮುನಿ ಹೇಳಿದ. ಹೀಗೆ ಮಾತಾಪಿತೃಗಳ ಶ್ರಾದ್ಧದಿನದಲ್ಲಿ ಶ್ರಾದ್ಧತಿಲತರ್ಪಣ ಮುಂತಾದುವನ್ನು ಮಾಡಬೇಕು. ತಂದೆ, ತಾಯಿ, ಗುರುಗಳಿಗೆ ನಮಿಸಬೇಕು ಎಂದು ಮುಂತಾಗಿ ಲೋಕೋಚಿತವಾದ ಧರ್ಮವನ್ನು ಹೇಳುವುದೇ ಲೋಕದರ್ಶನಭಾಷೆ. ರಾಮಕಥೆಯಲ್ಲಿ ತಂದೆ ಸತ್ತ ಬಳಿಕ ರಾಮ ಪಿತೃಶ್ರಾದ್ಧ ಮಾಡಿದ, ತಿಲಾಂಜಲಿ ನೀಡಿದ, ಅಗಸ್ತ್ಯಾದಿ ಮುನಿಗಳಿಗೆ ನಮಸ್ಕಾರ ಮಾಡಿದ. ರಾವಣ ಸೀತೆಯನ್ನು ಕದ್ದೊಯ್ದಾಗ ಸೀತಾನ್ವೇಷಣ ಮಾಡಿದ ಎಂದು ಮುಂತಾಗಿ ಹೇಳಿದ. ಇಲ್ಲಿ ಎಲ್ಲ ಕಡೆ ಲೋಕರೀತಿಯನ್ನು ಮಾತ್ರ ತೆಗೆದುಕೊಳ್ಳಬೇಕು. ಕಥಾವಸ್ತುವನ್ನಲ್ಲ. ಜನನ, ಮರಣ ರಹಿತನಾದ ಸಾಕ್ಷಾತ್ ಹರಿಯ ಅವತಾರನಾದ ಶ್ರೀರಾಮನಿಗೆ ತಂದೆ ತಾಯಿ ಮುಂತಾದವರಿಲ್ಲ. ಕೃತಕೃತ್ಯನಾದ ಆತನಿಗೆ ಕರ್ತವ್ಯಕರ್ಮವಿಲ್ಲ. ಅವನು ಮಾಡಿದ ಪಿತೃಶ್ರಾದ್ಧ ಮುನಿವಂದನ, ಸೀತಾನ್ವೇಷಣೆ ಮೊದಲಾದುದು ಲೀಲೆ. ವಾಸ್ತವವೆಂದು ಸ್ವೀಕರಿಸಕೂಡದು.

**ಅರ್ಥಃ ಸಮಾಧಿಭಾಷಾಸು ಗ್ರಾಹ್ಯಃ ಸರ್ವೋಽಪ್ಯಸಂಶಯಮ್ ।**
**ಪರದರ್ಶನಭಷಾಸು ಜ್ಞೇಯಂ ತದ್ದರ್ಶನಂ ತಥಾ ॥** - ೧/೩೯೯

**ಗ್ರಾಹ್ಯೋ ನಾರ್ಥೋ ವೈದಿಕಂ ತು ದರ್ಶನಂ ಗ್ರಾಹ್ಯಮೇವ ಹಿ ।**
**ಅನ್ಯಾರ್ಥೋ ಗುಹ್ಯಭಾಷಾಸು ಗ್ರಾಹ್ಯ ಏವ ವಿನಿರ್ಣಯಃ ॥** - ೧/೪೦೦

ಸಮಾಧಿ ಭಾಷೆಗಳಲ್ಲಿ ಹೇಳಿದ ವಿಷಯವೆಲ್ಲವೂ ನಿಃಸಂಶಯವಾಗಿ ಗ್ರಾಹ್ಯ. ಪರದರ್ಶನಭಾಷೆಯಲ್ಲಿ ಹೇಳಿದಾಗ ಪರರ ದರ್ಶನ ಹಾಗೆ ಇದೆ ಎಂದು ಮಾತ್ರ ತಿಳಿಯಬೇಕು. ಹೇಳಿದ ವಿಷಯ ಗ್ರಾಹ್ಯವಲ್ಲ. ವೈದಿಕ ಪರದರ್ಶನವು ಮಾತ್ರ ಗ್ರಾಹ್ಯವೇ. ಗುಹ್ಯಭಾಷೆಗಳಲ್ಲಿ ಬೇರೆಯೇ ಅರ್ಥಗ್ರಾಹ್ಯ. ಹೀಗೆ ಶಾಸ್ತ್ರಗಳಲ್ಲಿ ಭಾಷಾನಿರ್ಣಯವಿದೆ.

**ವೈದಿಕಂ ತು ದರ್ಶನಂ ಆಪಾತತಃ ಶಿವಾದೀನಾಮವಿದ್ಯಮಾನಮುತ್ತಮತ್ವಂ ದರ್ಶನಾದ್ ರುದ್ರಸೂಕ್ತಾದಿಕಂ । ಅಸ್ಯ ಪರದರ್ಶನತ್ವೇಽಪ್ಯಪೌರುಷೇಯತ್ವೇನ ಸರ್ವಥಾಽಪ್ರಾಮಾಣ್ಯಾಯೋಗಾತ್ ರುಜಂ ದ್ರಾವಯತೇ ಯಸ್ಮಾತ್ ಇತ್ಯಾದಿ ಸ್ಮೃತ್ಯುಕ್ತ ವ್ಯುತ್ಪತ್ತಿಮಾಶ್ರಿತ್ಯ ತದಪಿ ಸೂಕ್ತಂ ವಿಷ್ಣುಸೂಕ್ತಮಿತಿ ಗ್ರಾಹ್ಯಮೇವ । ನ ತು ಪರದರ್ಶನವತ್ ತ್ಯಾಜ್ಯಮಿತಿ ಭಾವಃ । ಇಯಂ ಭಾಷಾ ।** - ವಾದಿರಾಜೀಯ

ವೈದಿಕ ಪರದರ್ಶನ ಗ್ರಾಹ್ಯ ಎಂದರೆ ವೇದದಲ್ಲಿಯೇ ರುದ್ರಸೂಕ್ತ ಮುಂತಾದವುಗಳಲ್ಲಿ ಮೇಲುನೋಟಕ್ಕೆ ಶಿವಸರ್ವೋತ್ತಮತ್ವಾದಿಗಳನ್ನು ಹೇಳುತ್ತಿರುವುದರಿಂದ ಪಾಶುಪತಾದಿ

ದರ್ಶನಗಳನ್ನು ಹೇಳಿದಂತೆ ಕಾಣುತ್ತದೆ. ಇದು ವೈದಿಕ ಪರದರ್ಶನಭಾಷೆ. ಇದು ವೇದ ತಾನು ಒಪ್ಪಿರುಥ ಸಿದ್ಧಾಂತವಲ್ಲ. ಪರದರ್ಶನವೆ. ಹಾಗಿದ್ದರೂ ವೇದ ಅಪೌರುಷೇಯವಾಗಿರುವುದರಿಂದ ಅಪ್ರಮಾಣವಾಗಲಾರದು. ಸರ್ವಥಾ ಅಗ್ರಾಹ್ಯವಾಗಲಾರದು ಎಂದು ರೋಗ ಪರಿಹಾರಕನಾದ್ದರಿಂದ ಹರಿಯೇ ರುದ್ರನೆನಿಸುತ್ತಾನೆ. ಎಂಬಂತೆ ರುದ್ರನೆಂದರೆ ವಿಷ್ಣುವೇ ಎಂದು ಗ್ರಹಿಸಿ ರುದ್ರಸೂಕ್ತ ವಿಷ್ಣುಸರ್ವೋತ್ತಮತ್ವವನ್ನೇ ಹೇಳುತ್ತದೆ, ಅದು ಗ್ರಾಹ್ಯ ಎನ್ನಬೇಕು.

ಅನ್ಯಾರ್ಥವನ್ನು ಸ್ವೀಕರಿಸಿದ ಮಾತ್ರಕ್ಕೆ ಇದನ್ನು ಗುಹ್ಯಭಾಷೆ ಎನ್ನಕೂಡದು. ಪರದರ್ಶನರೀತಿಯಿಂದ ಪ್ರವೃತ್ತವಾಗಿರುವುದರಿಂದ ಇದು ಪರದರ್ಶನ ಭಾಷೆಯೇ ಎಂದು ವಾದಿರಾಜೀಯದಲ್ಲಿ ಹೇಳಿದೆ.

**ದರ್ಶನಾಂತರ ಪ್ರಮೇಯಮನವಲಂಬ್ಯ ಯಾ ಲೌಕಿಕೇಽರ್ಥೇ ನಿಗೂಢಭಾಷಾ ಸಾ ಗುಹ್ಯಭಾಷಾ। ಈದೃಶ ಗುಹ್ಯಭಾಷಾಸು ಅನ್ಯಾರ್ಥೋ ಗ್ರಾಹ್ಯಃ। ಯಥಾ –**

**ಉಚ್ಛಿಷ್ಟಂ ಶಿವ ನಿರ್ಮಾಲ್ಯಂ ವಾಂತಂ ಚ ಮೃತಕರ್ಪಟಂ।**
**ಕಾಕವಿಷ್ಠಾ ಸಮಾಯುಕ್ತಂ ಪಂಚ ಪೂತಾನಿ ಭಾರತ॥ ಇತ್ಯಾದಿ।**

**ಅತ್ರ ಯಥಾವಸ್ಥಿತಾರ್ಥಸ್ಯ ಬಾಧಿತತ್ವಾತ್ ಉಚ್ಛಿಷ್ಟಪದೇನೋಚ್ಛಿಷ್ಟಮಿವ ಪ್ರತೀಯಮಾನಂ ವತ್ಸೋಚ್ಛಿಷ್ಟಮುಚ್ಯತೇ। ಶಿವನಿರ್ಮಾಲ್ಯಪದೇನ ಚ ಶಿವೇನ ಶಿರಸಿ ಧೃತತ್ವ ಮಾತ್ರತಃ ಶಿವನಿರ್ಮಾಲ್ಯಮಿವ ಪ್ರತೀಯಮಾನಂ ಗಂಗಾಜಲಮುಚ್ಯತೇ। ವಾಂತಪದೇನ ಮಧುಮಕ್ಷಿಕೋದರವಿನಿಃಸೃತತ್ವಮಾತ್ರೇಣ ವಾಂತೋಪಮಂ ಮಧೂಚ್ಯತೇ। ಅತ್ರಾಪಿ ಪುಷ್ಪರಸಾದಿಕಂ ಸ್ವಯಮನಾಸ್ವಾದ್ಯ ಚರ್ಮಮಾತ್ರ ಇವ ಸ್ವೋದರೇ ಸಂಗೃಹ್ಯ ಬಹಿರ್ನಿಃಸಾರಯಂತಿ। ಮಧುಭಾವಾನಂತರಮೇವ ಸ್ವೀಕುರ್ವಂತಿ। ಅತೋಽಗ್ನಿನಾ ಸ್ವಯಮನಾಸ್ವಾದ್ಯ ಸ್ವಜಿಹ್ವಯಾ ದೀಯಮಾನ ದೇವತಾಹುತಿವದಿದಮಪಿ ಶುದ್ಧಮಿತಿ ಭಾವಃ। ಮೃತಕರ್ಪಟಪದೇನ ಮೃತಕೃಮಿ ಕೋಶೋತ್ಥಂ ವಸ್ತ್ರಮುಚ್ಯತೇ। ಕಾಕವಿಷ್ಠಾಸಮಾಯುಕ್ತ ಪದೇನ ಕಾಕೈರಶ್ವತ್ಥಫಲಭಕ್ಷಣೇ ಕೃತೇ ಸತಿ ತದ್ವಿಷ್ಠಾಯಂ ಯದ್ ಬೀಜಂ ತದುತ್ಥೋಽಶ್ವತ್ಥ ಉಚ್ಯತೇ॥**
**– ವಾದಿರಾಜೀಯ**

ಯಾವ ದರ್ಶನಪ್ರಮೇಯಗಳನ್ನೂ ಆಶ್ರಯಿಸದೆ ಲೌಕಿಕ ವಿಷಯಗಳನ್ನೇ ನಿಗೂಢವಾಗಿ ಹೇಳುವುದು ಗುಹ್ಯಭಾಷೆ. ಉದಾ: ಎಂಜಲು, ಶಿವನಿರ್ಮಾಲ್ಯ, ವಾಂತಿ ಮಾಡಿದ್ದು, ಹೆಣದ ಬಟ್ಟೆ, ಕಾಗೆಯ ವಿಷ್ಠೆಯಲ್ಲಿ ಹಟ್ಟಿದ್ದು – ಈ ಐದು ಪವಿತ್ರ ಎಂದು ಮಹಾಭಾರತ ಹೇಳಿದೆ. ಇಲ್ಲಿ ಮೇಲುನೋಟಕ್ಕೆ ಕಾಣುವ ಅರ್ಥ ಬಾಧಿತ. ಆದರೆ ನಿಗೂಢವಾಗಿ ಹೀಗೆ ಹೇಳಿದೆ. ಕರು ಎಂಬಲು ಮಾಡಿರುವ ಆಕಳ ಹಾಲು ಪವಿತ್ರ, ಶಿವನ ತಲೆಯ ಮೇಲೆ ಧರಿಸಿರುವ ಗಂಗಾಜಲ ಪವಿತ್ರ. ಜೇನುನೊಣ ಹೂವಿನ ರಸವನ್ನು ಹೊಟ್ಟೆಯಲ್ಲಿಟ್ಟುಕೊಂಡು ಹೊರಗೆ

ಹಾಕುವುದರಿಂದ ವಾಂತಿಯಂತೆ ಕಂಡರೂ ಜೇನುತುಪ್ಪ ಪವಿತ್ರ. ಏಕೆಂದ್ರೆ ಜೇನುನೊಣ ಹೂವಿನ ರಸವನ್ನು ಉಣ್ಣುವುದಿಲ್ಲ. ಪಾತ್ರೆಯಲ್ಲಿ ಸಂಗ್ರಹಿಸಿಡುವಂತೆ ಹೊಟ್ಟೆಯಲ್ಲಿ ಸಂಗ್ರಹಿಸಿ ಹೊರಗೆ ಹಾಕುತ್ತದೆ. ಆ ರಸಗಳು ಮುಂದೆ ಜೇನಾಗಿ ಪರಿವರ್ತನೆಗೊಂಡಾಗ ಉಣ್ಣುತ್ತದೆ. ಅದರಿಂದ ಅಗ್ನಿ ಆಹುತಿಯನ್ನು ತಾನು ಉಣ್ಣದೆ ದೇವತೆಗಳಿಗೆ ತಂದುಕೊಡುವಂತೆಯೇ ಇದು. ಹೆಣದ ಬಟ್ಟೆ ಎಂದರೆ ರೇಷ್ಮೆ ಪಟ್ಟೆ ಮಡಿ. ರೇಶಿಮೆಗೂಡನ್ನು ನೀರಲ್ಲಿ ಬೇಯಿಸಿದಾಗ ಬಂದ ಎಳೆಗಳಿಂದ ಪಟ್ಟೆ ಮಾಡಿ ನಿರ್ಮಾಣವಾಗುತ್ತದೆ. ಕಾಗೆಯ ವಿಷ್ಠೆಯಲ್ಲಿ ಜನಿಸಿದ್ದು ಅಶ್ವತ್ಥವೃಕ್ಷ. ಕಾಗೆ ಅಶ್ವತ್ಥದ ಹಣ್ಣನ್ನು ತಿಂದರೆ ಅದರ ಬೀಜ ವಿಷ್ಠೆಯ(ಮಲ)ದಲ್ಲಿ ಇರುತ್ತದೆ. ಅದರಿಂದ ಹುಟ್ಟಿದರೂ ಅಶ್ವತ್ಥ ಪವಿತ್ರವೇ.

ಸಮಾಧಿಭಾಷೆಗಳು, ದರ್ಶನಭಾಷೆಗಳು, ಗುಹ್ಯಭಾಷೆಗಳು ಎಂದು ಬಹುವಚನವೇಕೆ ಎಂದರೆ, ಸಮಾಧಿ, ದರ್ಶನ, ಗುಹ್ಯಭಾಷೆಗಳು ಮೂರು ಮೂರು ವಿಧವಾಗಿರುತ್ತವೆ.

೧. ಸಮಾಧಿಸಮಾಧಿಭಾಷೆ, ಸಮಾಧಿದರ್ಶನಭಾಷೆ, ಸಮಾಧಿಗುಹ್ಯಭಾಷೆ

೨. ದರ್ಶನಸಮಾಧಿಭಾಷೆ, ದರ್ಶನದರ್ಶನಭಾಷೆ, ದರ್ಶನಗುಹ್ಯಭಾಷೆ

೩. ಗುಹ್ಯಸಮಾಧಿಭಾಷೆ, ಗುಹ್ಯದರ್ಶನಭಾಷೆ, ಗುಹ್ಯಗುಹ್ಯಭಾಷೆ

*****

## ಪರಿಶಿಷ್ಟ - ೪

# ನನು ಲಕ್ಷಸಂಖ್ಯಾಕ ಮಾತ್ರೇಣ

'ನನು ಲಕ್ಷಸಂಖ್ಯಾಕ ಶ್ಲೋಕಕರಣಮಾತ್ರೇಣ ಕಥಂ ವ್ಯಾಸಸ್ಯ ಸಾಕ್ಷಾನ್ನಾರಾಯಣಸ್ಯ ಸಿದ್ಧಿರಿತಿ ನ ಶಂಕನೀಯಂ । ಕುರುಪಾಂಡವವಂಶೋತ್ಪತ್ತೇಃ ಪೂರ್ವಮೇವ ಉಭಯೋರ್ವಂಶಯೋರುತ್ಪತ್ತಿಪ್ರಕಾರಂರಾಜಸೂಯಾಶ್ವಮೇಧಾದಿಯಾಗಮಹಿಮಾನಂ ತದರ್ಥಂ ಕೃತದಿಗ್ವಿಜಯಪ್ರಕಾರಂ ಜತುಗೇಹಾನ್ನಿರ್ಗಮನಪ್ರಕಾರಕೌಶಲಂ ಬಕ ಹಿಡಂಬಯೋರ್ಹನನಂ ದ್ರೌಪದೀವಿವಾಹ ನಿರ್ವಾಹಕಶಕ್ತಿಂ ದುರ್ದ್ಯೂತೋದ್ಯೋಗಂ ವನವಾಸಾಜ್ಞಾತವಾಸಗೋಗ್ರಹಣಾದಿಬಹುತರಕಥಾಂ ಅಷ್ಟಾದಶಾಕ್ಷೋಹಿಣೀ ಸೇನಾ-ಯಾಮನ್ಯೋನ್ಯಂ ಕಥ್ಯಮಾನೋಕ್ತಿ ಪ್ರತ್ಯುಕ್ತಿ ಪ್ರಕಾರಂ ಶರಂ ಪ್ರತಿ ಶರ ಸಂಖ್ಯಾಖಂಡನಾದಿ ಚಾತುರೀಂ ವ್ಯೂಹಪ್ರತಿವ್ಯೂಹಕರಣಂ ಅಸ್ತ್ರ ಪ್ರತ್ಯಸ್ತ್ರ ಪ್ರಯೋಗ ಪರಿಪಾಟೀಂ ಭೀಮಾರ್ಜುನ ಭೀಷ್ಮ ದ್ರೋಣಾದಿಭಿರ್ದಿನೇದಿನೇ ಹನ್ಯಮಾನಕರಿತುರಗಾದ್ಯನೇಕ-ಸಂಖ್ಯಾದಿತಂ ಚ ಕರತಲಮಿಲಿತಾಮಲಕವದ್ ದೃಷ್ಟ್ವಾ ಮಹಾಭಾರತಾಖ್ಯಸ್ವಗ್ರಂಥೇ ಗ್ರಥಯತೋ ವ್ಯಾಸಸ್ಯ ನಿರವಧಿಕಜಗನ್ನಿರ್ಮಾತೃನಾರಾಯಣವತ್ ನಿರವಧಿ ಕಸಾರ್ವಜ್ಞ್ಯಸಿದ್ಧೇಃ ಸಾಕ್ಷಾತ್ ತದವತಾರತ್ವಸ್ಯಾಪಿ ಪ್ರೇಕ್ಷಾವದ್ಭಿರುತ್ಪ್ರೇಕ್ಷಯಿತುಂ ಶಕ್ಯತ್ವಾತ್ । ಕಥಮನ್ಯಥಾ ಮತ್ಸ್ಯಕೂರ್ಮಾದೇಸ್ತದವತಾರತ್ವಸಿದ್ಧಿಃ? ಅತಃ ಸಾಧೂಕ್ತಂ ।

'ಕೋ ಹನ್ಯಃ ಪುಂಡರೀಕಾಕ್ಷಾದ್ ಮಹಾಭಾರತಕೃದ್ ಭವೇತ್' ಇತಿ ॥

- ವಾದಿರಾಜೀಯ

- ಲಕ್ಷಶ್ಲೋಕಗಳ ಭಾರತ ಗ್ರಂಥವನ್ನು ಬರೆದ ಮಾತ್ರಕ್ಕೆ ವ್ಯಾಸರು ಸಾಕ್ಷಾತ್ ಭಗವಂತನೆಂದು ತೀರ್ಮಾನಿಸುವುದು ಹೇಗೆ ಎನ್ನಕೂಡದು. ಕುರುಪಾಂಡವ ವಂಶೋತ್ಪತ್ತಿಯಾಗುವುದಕ್ಕೆ ಮೊದಲೇ ಎರಡೂ ವಂಶಗಳ ಉತ್ಪತ್ತಿಪ್ರಕಾರವನ್ನು ಅರಗಿನ ಮನೆಯಿಂದ ಅವರು ಪಾರಾಗಿ ಬಂದ ಕೌಶಲ್ಯವನ್ನು ಬಕ ಹಿಡಿಂಬರ ವಧೆಯನ್ನು, ದ್ರೌಪದಿಯನ್ನು ವಿವಾಹ ಮಾಡಿಕೊಂಡ ಸಾಮರ್ಥ್ಯವನ್ನು ಕಪಟದ್ಯೂತ ಪ್ರವೃತ್ತಿಯನ್ನು, ಹೀಗೆ ವನವಾಸ, ಅಜ್ಞಾತವಾಸ, ಗೋಗ್ರಹಣ ಮುಂತಾದ ಅಸಂಖ್ಯ ಪ್ರಸಂಗಗಳನ್ನು, ಹದಿನೆಂಟು ಅಕ್ಷೋಹಿಣೀ ಸೈನ್ಯದ ನಡುವೆ ಯೋಧರು ಪರಸ್ಪರ ಆಡಿದ ಉಕ್ತಿಪ್ರತ್ಯುಕ್ತಿಗಳ ರೀತಿಯನ್ನು, ಬಾಣಗಳಿಗೆ ಪ್ರತಿಯಾಗಿ ಎಸೆದ ಬಾಣಗಳ ಸಂಖ್ಯೆ ಆ ಬಾಣಗಳನ್ನು ಕತ್ತರಿಸುವ ಚಾತುರ್ಯ ವ್ಯೂಹಗಳಿಗೆ ಪ್ರತಿಯಾಗಿ ರಚಿಸಿದ ವ್ಯೂಹಗಳು ಅಸ್ತ್ರಗಳಿಗೆ ಪ್ರತಿಯಾಗಿ ಪ್ರತ್ಯಸ್ತ್ರಪ್ರಯೋಗಿಸುವ ರೀತಿ, ಭೀಮ ಅರ್ಜುನ ಭೀಷ್ಮ ದ್ರೋಣ ಮುಂತಾದವರು ಪ್ರತಿದಿನ ಸಂಹಾರ ಮಾಡಿದ ಆನೆ ಕುದುರೆ ಮುಂತಾದವುಗಳು ಎಷ್ಟು ಎಂದು ಮುಂತಾದ ವಿವರಗಳು, ಇವೆಲ್ಲವನ್ನೂ ಅಂಗೈ ಮೇಲಿನ ನೆಲ್ಲಿಕಾಯಿಯಂತೆ ನೋಡಿ

ಮಹಾಭಾರತವೆಂಬ ಗ್ರಂಥದಲ್ಲಿ ನಿರೂಪಿಸುವ ವ್ಯಾಸರಿಗೆ ಅಪರಿಮಿತ ಪ್ರಪಂಚ ನಿರ್ಮಾಣ ಮಾಡುವ ನಾರಾಯಣನಂತೆಯೆ ಅಪರಿಮಿತ ಸರ್ವಜ್ಞತ್ವ ಸಿದ್ಧವಾಗುವುದರಿಂದ ಸಾಕ್ಷಾತ್ ನಾರಾಯಣನ ಅವತಾರವೇ ಮತ್ಸ್ಯಕೂರ್ಮಾದಿಗಳನ್ನು ನಾರಾಯಣನ ಅವತಾರವೆಂದು ತೀರ್ಮಾನಿಸುವ ಬಗೆಯಾದರೂ ಹೇಗೆ?

ಆದ್ದರಿಂದ 'ನಾರಾಯಣಾವತಾರರ ಹೊರತು ಇನ್ನಾರು ಮಹಾಭಾರತದಂಥ ಗ್ರಂಥವನ್ನು ರಚನೆ ಮಾಡಬಲ್ಲರು?' ಎಂದು ಹೇಳಿದುದು ಅತ್ಯಂತ ಸಮರ್ಪಕವಾಗಿದೆ ಎನ್ನುತ್ತದೆ ವಾದಿರಾಜೀಯ.

# ಪರಿಶಿಷ್ಟ - ೫

## ಉಪಾಖ್ಯಾನಗಳಲ್ಲಿನ ಪಾತ್ರಪ್ರಪಂಚ

| ಸಂ. | ಅವತಾರ | ಪರ್ವ |
|---|---|---|
| ೧ | ಮತ್ಸ್ಯಾವತಾರ | ವನ (ತೀಯಾ) |
| ೨ | ವರಾಹ | ಶಾಂತಿ |
| ೩ | ಪರಶುರಾಮ | ವನ, ದ್ರೋಣ<br>ಶಾಂತಿ, ರಾಜಧರ್ಮ |
| ೪ | ರಾಮ | ವನ<br>ದ್ರೋಣ |
| ೫ | ಕೃಷ್ಣ | ಅನುಶಾಸನ<br>ಆಶ್ವಮೇಧಿಕ |
| ೬ | ಹಯಗ್ರೀವ | ಶಾಂತಿ |
| ೭ | ವೇದವ್ಯಾಸ | ದ್ರೋಣ<br>ಶಾಂತಿ<br>ಶಾಂತಿ<br>ಅನುಶಾಸನ |
| ೮ | ಅಪಾಂತರತಮ | ಶಾಂತಿ |
| ೯ | ಕಪಿಲ | ವನ |
| ೧೦ | ವಿಷ್ಣು | ಶಾಂತಿ<br>ಉದ್ಯೋಗ<br>ಕರ್ಣ |
| ೧೧ | ಸೀತಾ | ವನ |
| ೧೨ | ರುಗ್ಮಿಣೀ | ಅನುಶಾಸನ |
| ೧೩ | ಬ್ರಹ್ಮ | ಆದಿ<br>ವನ<br>ಕರ್ಣ<br>ಶಾಂತಿ |

| | | |
|---|---|---|
| ೧೪ | ವಾಯು-ಭೀಮಸೇನ | ಅನುಶಾಸನ<br>ವನ |
| ೧೫ | ಹನುಮಾನ್<br>ಗಾಯತ್ರೀ | ವನ<br>ಶಾಂತಿ |
| ೧೬ | ಗರುಡ | ಆದಿ<br>ಅನುಶಾಸನ<br>ಉದ್ಯೋಗ |
| ೧೭ | ಶೇಷ | ಆದಿ |
| ೧೮ | ಶಿವ, ರುದ್ರ,<br>ಶುಕಾಚಾರ್ಯರು | ವನ<br>ಉದ್ಯೋಗ<br>ಕರ್ಣ<br>ಶಾಂತಿ<br>ಶಾಂತಿ |
| ೧೯ | ದ್ರೌಪದೀ | ವನ |
| ೨೦ | ಇಂದ್ರ, ಶಕ್ರ, ವಾಲಿ | ಆದಿ<br>ವನ<br>ಉದ್ಯೋಗ<br>ಅನುಶಾಸನ<br>ಆಶ್ವಮೇಧಿಕ |
| ೨೧ | ಶಚೀ | ಉದ್ಯೋಗ |
| ೨೨ | ಕುಮಾರ-ಸ್ಕಂದ | ಶಲ್ಯ-ಗದಾ<br>ಅನುಶಾಸನ |
| ೨೩ | ಬೃಹಸ್ಪತಿಆಚಾರ್ಯ | ಉದ್ಯೋಗ |
| ೨೪ | ದಕ್ಷಪ್ರಜಾಪತಿ | ಶಲ್ಯ-ಗದಾ<br>ಶಾಂತಿ |
| ೨೫ | ವರುಣ | ವನ, ಆದಿ |
| ೨೬ | ವಸುಗಳು, ದ್ಯು, ವರಾಂಗಿ | ಆದಿ |
| ೨೭ | ಚಂದ್ರ | ಶಲ್ಯ-ಗದಾ |
| ೨೮ | ರೋಹಿಣೀ - ಇತರ<br>ನಕ್ಷತ್ರಗಳು | ಶಲ್ಯ-ಗದಾ |

| | | |
|---|---|---|
| ೨೯ | ವೈವಸ್ವತಮನು | ವನ ತೀ.ಯಾ.ಪ |
| ೩೦ | ಭಾಗೀರಥಿ – ಗಂಗಾ | ವನ |
| ೩೧ | ಮಾತಲಿ | ಉದ್ಯೋಗ |
| ೩೨ | ಯಮ<br>ಅಗ್ನಿ<br>ವರುಣ<br>ಅಗ್ನಿ | ವನ<br><br><br>ವನ |
| ೩೩ | ಚಂದ್ರಪುತ್ರೀ–ಪ್ರಭಾ | ಅನುಶಾಸನ |
| ೩೪ | ಕಾಶ್ಯಪೀ–ಭೂದೇವಿ | ಅನುಶಾಸನ |
| ೩೫ | ಸುರಭಿ | ವನ |

## ಚಕ್ರವರ್ತಿ–ರಾಜರು–ಕ್ಷತ್ರಿಯರು

| ಸಂ. | ಹೆಸರು | ಪರ್ವ |
|---|---|---|
| ೧ | ಪರೀಕ್ಷಿತ | ಆದಿ |
| ೨ | ಉಪರಿಚರ | –''– |
| ೩ | ಗಿರಿಕೆ(ಕಾ) | –''– |
| ೪ | ವಸು | –''– |
| ೫ | ದುಷ್ಯಂತ (ಷ್ಟ) | –''– |
| ೬ | ಶಕುಂತಲಾ | –''– |
| ೭ | ಮಹಾಭಿಷಕ್ | –''– |
| ೮ | ಶಂತನು | –''– |
| ೯ | ವರಾಂಗಿ | –''– |
| ೧೦ | ಸುಬಿಂದ | –''– |
| ೧೧ | ಸತ್ಯವತೀ | –''– |
| ೧೨ | ಚಿತ್ರಾಂಗದ | –''– |
| ೧೩ | ವಿಚಿತ್ರವೀರ್ಯ | –''– |
| ೧೪ | ಯಯಾತಿ | –''– |
| ೧೫ | ವೃಷಿತಾಶ್ವ | –''– |
| ೧೬ | ಋಕ್ಷ | –''– |

| | | |
|---|---|---|
| ೧೭ | ಕಲ್ಮಾಷಪಾದ | -"- |
| ೧೮ | ಶ್ವೇತಕೀ | -"- |
| ೧೯ | ಲೋಮಪಾದ | -"- |
| ೨೦ | ನಳ | ವನ |
| ೨೧ | ದಮಯಂತೀ | -"- |
| ೨೨ | ಚೇದಿರಾಜ | -"- |
| ೨೩ | ಋತುಪರ್ಣ | -"- |
| ೨೪ | ಭೀಮರಾಜ | -"- |
| ೨೫ | ಶ್ರುತರ್ವಾಣ | -"- |
| ೨೬ | ಬಧ್ವಶ್ವ | -"- |
| ೨೭ | ತ್ರಸದಸ್ಯು | -"- |
| ೨೮ | ಭಗೀರಥ | -"- |
| ೨೯ | ಸಗರ | -"- |
| ೩೦ | ಅಂಶುಮಾನ್ | -"- |
| ೩೧ | ಪ್ರಸೇನಜಿತ್ | -"- |
| ೩೨ | ಚಿತ್ರರಥ | -"- |
| ೩೩ | ಸಹದೇವ | -"- |
| ೩೪ | ಮಾಂಧಾತ | -"- |
| ೩೫ | ಸೋಮಕ, ಜಂತು | -"- |
| ೩೬ | ಉಶೀನರ | -"- |
| ೩೭ | ಬೃಹದ್ಯುಮ್ನ | ವನ. ತೀ.ಯಾ.ಪ |
| ೩೮ | ಪರೀಕ್ಷಿತ | -"- |
| ೩೯ | ಮಂಡೂಕರಾಜ | -"- |
| ೪೦ | ಸುಶೋಭನಾ | -"- |
| ೪೧ | ಆಯು | -"- |
| ೪೨ | ಶಲ, ದಲ | -"- |
| ೪೩ | ಸುಹೋತ್ರ, ಉಶೀನರ, ಶಿಬಿ | -"- |
| ೪೪ | ವೃಷದರ್ಭ | -"- |
| ೪೫ | ಸೇದುಕ | -"- |

| | | |
|---|---|---|
| ೪೬ | ಇಂದ್ರದ್ಯುಮ್ನ | -"- |
| ೪೭ | ಕುವಲಾಶ್ವ | -"- |
| ೪೮ | ಧುಂಧುಮಾರ | -"- |
| ೪೯ | ಅಶ್ವಪತಿ | -"- |
| ೫೦ | ಸಾವಿತ್ರೀ | -"- |
| ೫೧ | ಸತ್ಯವಾನ್, ಚಿತ್ರಾಶ್ವ | -"- |
| ೫೨ | ದ್ಯುಮತ್ಸೇನ | -"- |
| ೫೩ | ದಂಭೋದ್ಭವ | ಉದ್ಯೋಗ |
| ೫೪ | ಹರ್ಯಶ್ವ | -"- |
| ೫೫ | ದಿವೋದಾಸ | -"- |
| ೫೬ | ವಸುಮನಸ್ | -"- |
| ೫೭ | ಮಾಧವಿ<br>ಉಶೀನರ | -"- |
| ೫೮ | ಮುಚುಕುಂದ | -"- |
| ೫೯ | ವಿದುಲಾ | -"- |
| ೬೦ | ಸಂಜಯ | -"- |
| ೬೧ | ಅಕಂಪನ | ದ್ರೋಣ |
| ೬೨ | ಮರುತ್ತ | -"- |
| ೬೩ | ಶೈಬ್ಯ | -"- |
| ೬೪ | ಸೃಂಜಯ | -"- |
| ೬೫ | ಅವಿಕ್ಷಿತ | -"- |
| ೬೬ | ಸುಹೋತ್ರ | -"- |
| ೬೭ | ಅಂಗರಾಜ | -"- |
| ೬೮ | ಶಿಬಿ | -"- |
| ೬೯ | ಭಗೀರಥ | -"- |
| ೭೦ | ದಿಲೀಪ | -"- |
| ೭೧ | ಮಾಂಧಾತ | -"- |
| ೭೨ | ಯಯಾತಿ | -"- |
| ೭೩ | ಅಂಬರೀಷ | -"- |

| | | |
|---|---|---|
| ೭೪ | ಶಶಬಿಂದು | –''– |
| ೭೫ | ಗಯಾರಾಜ | –''– |
| ೭೬ | ರಂತಿದೇವ | –''– |
| ೭೭ | ಭರತ | –''– |
| ೭೮ | ಪೃಥು | –''– |
| ೭೯ | ವೇನ | –''– |
| ೮೦ | ಶಲ್ಯ | ಕರ್ಣ |
| ೮೧ | ಭಲಾಕ | –''– |
| ೮೨ | ಅಕಂಪನ | ಶಾಂತಿ |
| ೮೩ | ವಿಚಖ್ನು | –''– |
| ೮೪ | ದ್ಯುಮತ್ಸೇನ | –''– |
| ೮೫ | ಸತ್ಯವಾನ್ | –''– |
| ೮೬ | ಸುಲಭಾ | –''– |
| ೮೭ | ಉಪರಿಚರ | –''– |
| ೮೮ | ಸುದ್ಯುಮ್ನ | –''– |
| ೮೯ | ಸೇನಜಿತ್ | –''– |
| ೯೦ | ಮರುತ್ತ | –''– |
| ೯೧ | ವಿತಥ | –''– |
| ೯೨ | ಬೃಹದ್ರಥ | –''– |
| ೯೩ | ಜಹ್ನು | –''– |
| ೯೪ | ಅಜಹ್ನು | –''– |
| ೯೫ | ವಲ್ಲಭ | –''– |
| ೯೬ | ಕುಶಿಕ | –''– |
| ೯೭ | ಗಾಧಿ(ಕೌಶಿಕ) | –''– |
| ೯೮ | ಸತ್ಯವತೀ | –''– |
| ೯೯ | ವಿಡೂರಥ | –''– |
| ೧೦೦ | ಗೋಪತಿ | –''– |
| ೧೦೧ | ಸೌದಾಸ | –''– |
| ೧೦೨ | ಪ್ರತರ್ದನ | –''– |

| | | |
|---|---|---|
| ೧೦೩ | ವತ್ಸ | ಆಶ್ವಮೇಧಿಕ |
| ೧೦೪ | ದಧಿವಾಹನ | -"- |
| ೧೦೫ | ದಿವ್ಯರಥ | -"- |
| ೧೦೬ | ಅಂಗ | -"- |
| ೧೦೭ | ಸರ್ವಕರ್ಮ | -"- |
| ೧೦೮ | ತುರ್ವಸು | -"- |
| ೧೦೯ | ಸೌದಾಸ | -"- |
| ೧೧೦ | ಕೇಕಯ | -"- |
| ೧೧೧ | ಪಾರಿಕ | -"- |
| ೧೧೨ | ಹರಿಶ್ಚಂದ್ರ | ಅನುಶಾಸನ |
| ೧೧೩ | ಭಂಗಾಶ್ವನ | -"- |
| ೧೧೪ | ರಂತಿದೇವ | -"- |
| ೧೧೫ | ಮನು | ಆಶ್ವಮೇಧಿಕ |
| ೧೧೬ | ಪ್ರಜಾತಿ | -"- |
| ೧೧೭ | ಕ್ಷುಪ | -"- |
| ೧೧೮ | ಇಕ್ಷ್ವಾಕು | -"- |
| ೧೧೯ | ವಿಂಶ | -"- |
| ೧೨೦ | ವಿವಿಂಶ | -"- |
| ೧೨೧ | ಕರಂಧಮ | -"- |
| ೧೨೨ | ಆವಿಕ್ಷಿತ | -"- |
| ೧೨೩ | ಮರುತ್ತ | -"- |
| ೧೨೪ | ದಶಾಶ್ವ | ಅನುಶಾಸನ |
| ೧೨೫ | ದ್ಯುತಿಮಂತ | -"- |
| ೧೨೬ | ಸುವೀರ | -"- |
| ೧೨೭ | ದುರ್ಜಯ | -"- |
| ೧೨೮ | ದುರ್ಯೋಧನ | -"- |
| ೧೨೯ | ಹರ್ಯಶ್ವ | -"- |
| ೧೩೦ | ವೀತಹವ್ಯ | -"- |
| ೧೩೧ | ಹೇಹಯ | -"- |

| | | |
|---|---|---|
| ೧೩೨ | ತಾಳಜಂಘ | -''- |
| ೧೩೩ | ನೃಗ | -''- |
| ೧೩೪ | ದಿವೋದಾಸ | ಅನುಶಾಸನ |
| ೧೩೫ | ಖನಿನೇತ್ರ | ಆಶ್ವಮೇಧಿಕ |
| ೧೩೬ | ಸುವರ್ಚಸ | -''- |
| ೧೩೭ | ಕರಂಧಮ | -''- |

*****

## ಬ್ರಹ್ಮಜ್ಞಾನಿಗಳು-ಋಷಿಗಳು-ಬ್ರಾಹ್ಮಣರು

| ಸಂ. | ಹೆಸರು | ಪರ್ವ |
|---|---|---|
| ೧ | ಆರುಣಿ | ಆದಿ |
| ೨ | ಉಪಮನ್ಯು | -''- |
| ೩ | ವೇದ-ಬೈದ | -''- |
| ೪ | ಖಗಾಮ | -''- |
| ೫ | ಶೃಂಗಿ | -''- |
| ೬ | ಕೃಶ | -''- |
| ೭ | ಗೌರಮುಖ | -''- |
| ೮ | ದೇವಯಾನಿ (ಶುಕ್ರಾಚಾರ್ಯರ ಮಗಳು) | -''- |
| ೯ | ಅದೃಶ್ಯಂತೀ | -''- |
| ೧೦ | ಧೌಮ್ಯ (ಆಮೋದ) | -''- |
| ೧೧ | ಭೃಗು | -''- |
| ೧೨ | ಚ್ಯವನ | -''- |
| ೧೩ | ರುರು | -''- |
| ೧೪ | ಪ್ರಮದ್ವರಾ | -''- |
| ೧೫ | ಸಹಸ್ರಪಾದ | -''- |
| ೧೬ | ವಾಲಖಿಲ್ಯರು | -''- |

| | | |
|---|---|---|
| ೧೭ | ಜರತ್ಕಾರು | –''– |
| ೧೮ | ಜರತ್ಕಾರು | –''– |
| ೧೯ | ಶಮೀಕ | –''– |
| ೨೦ | ವಸಿಷ್ಠ | –''– |
| ೨೧ | ಅಣಿಮಾಂಡವ್ಯ | –''– |
| ೨೨ | ಔರ್ವ | –''– |
| ೨೩ | ಲೋಮಶ | ವನಪರ್ವ |
| ೨೪ | ಋಷ್ಯಶೃಂಗ | –''– |
| ೨೫ | ವಿಭಾಂಡಕ | –''– |
| ೨೬ | ಉದ್ದಾಲಕ | –''– |
| ೨೭ | ಕಹೋಳ | –''– |
| ೨೮ | ರೈಭ್ಯ | –''– |
| ೨೯ | ಧನುಪಾಕ್ಷ | ವನ. ತೀ.ಯಾ.ಪ. |
| ೩೦ | ವಿಶ್ರವಸ್ | –''– |
| ೩೧ | ಬಕ | –''– |
| ೩೨ | ಸುಧನ್ವ | ಸಭಾ |
| ೩೩ | ಇಧ್ಮವಾಹ | ವನ |
| ೩೪ | ದೃಢಸ್ಯು | –''– |
| ೩೫ | ಋಮಣ್ವಾನ್ | –''– |
| ೩೬ | ಶ್ವೇತಕೇತು | –''– |
| ೩೭ | ಅಷ್ಟಾವಕ್ರ | –''– |
| ೩೮ | ಕಹೋಳ | –''– |
| ೩೯ | ಬಂದಿ(ವಂದಿ) | –''– |
| ೪೦ | ಯವಕ್ರೀತ | –''– |
| ೪೧ | ಮೇಧಾವಿ | ವನ. ತೀ.ಯಾ.ಪ. |
| ೪೨ | ಬಾಲಧಿ | –''– |
| ೪೩ | ಅರ್ವಾವಸು | –''– |
| ೪೪ | ಪರಾವಸು | –''– |
| ೪೫ | ಅಷ್ಟಕ | –''– |

| | | |
|---|---|---|
| ೪೬ | ಪ್ರತರ್ದನ | –''– |
| ೪೭ | ವಸುಮನಸ್ | –''– |
| ೪೮ | ಕೌಶಿಕ | –''– |
| ೪೯ | ಪ್ರಭಾವತಿ | –''– |
| ೫೦ | ಗಾಲವ | ಉದ್ಯೋಗ |
| ೫೧ | ಅಷ್ಟಕ | –''– |
| ೫೨ | ಕೌಶಿಕ | ಕರ್ಣ |
| ೫೩ | ತ್ರಿತ | ಗದಾ |
| ೫೪ | ದ್ವಿತ | –''– |
| ೫೫ | ಏಕತ | –''– |
| ೫೬ | ಗೌತಮೀ | ಅನುಶಾಸನ |
| ೫೭ | ಉಶನಸ್ (ಶುಕ್ರಾಚಾರ್ಯ) | ಶಾಂತಿ |
| ೫೮ | ಪಂಚಶಿಖರ (ಸನ್ಯಾಸಿ) | –''– |
| ೫೯ | ಜಾಜಲಿ | –''– |
| ೬೦ | ಚಿರಕಾರಿ | –''– |
| ೬೧ | ಧರ್ಮಾರಣ್ಯ | ಶಾಂತಿ |
| ೬೨ | ಪಿಪ್ಪಲಾದ | –''– |
| ೬೩ | ವಿರೂಪ – ವಿಕೃತ | –''– |
| ೬೪ | ಜಾಪಕ | –''– |
| ೬೫ | ಶ್ವೇತಕೇತು | –''– |
| ೬೬ | ದೇವಲ | –''– |
| ೬೭ | ಸುವರ್ಚಲಾ | –''– |
| ೬೮ | ಚಾಕ್ರಾಯಣ | –''– |
| ೬೯ | ಶಂಖಲಿಖಿತರು | –''– |
| ೭೦ | ಪರ್ವತ | ಆಶ್ವಮೇಧಿಕ |
| ೭೧ | ನಾರದರು | –''– |
| ೭೨ | ಅಗ್ನಿಪ್ರಭಾಮುನಿ | –''– |
| ೭೩ | ಋಚೀಕ | –''– |
| ೭೪ | ಪರ್ವತ | ದ್ರೋಣ |

| | | |
|---|---|---|
| ೭೫ | ಮಂಕಣಕ | ಗದಾ |
| ೭೬ | ಬಕಮುನಿ | –''– |
| ೭೭ | ದಾಲ್ಭ್ಯ | –''– |
| ೭೮ | ದೇವಲ | –''– |
| ೭೯ | ಜೈಗೀಷವ್ಯ | –''– |
| ೮೦ | ದಧೀಚಿ | –''– |
| ೮೧ | ಕುಣಿ | –''– |
| ೮೨ | ಶೃಂಗವಾನ್ | –''– |
| ೮೩ | ಗಾಲವ | –''– |
| ೮೪ | ಸುಭ್ರೂ(ವೃದ್ಧಕನ್ಯಾ) | –''– |
| ೮೫ | ಶುನಶ್ಶೇಪ | ಅನುಶಾಸನ |
| ೮೬ | ಅಷ್ಟಾವಕ್ರ | –''– |
| ೮೭ | ಮತಂಗ | –''– |
| ೮೮ | ದೇವಶರ್ಮ | –''– |
| ೮೯ | ಚ್ಯವನ | –''– |
| ೯೦ | ಅಂಗೀರಸ | ಆಶ್ವಮೇಧಿಕ |
| ೯೧ | ಬೃಹಸ್ಪತ್ಯಾಚಾರ್ಯರು | –''– |
| ೯೨ | ಸಂವರ್ತ | –''– |
| ೯೩ | ಉದಂಕ | –''– |
| ೯೪ | ದೇವಶರ್ಮ | ಅನುಶಾಸನ |
| ೯೫ | ವಿಪುಲ | –''– |
| ೯೬ | ನಚಿಕೇತ | –''– |
| ೯೭ | ಉದ್ದಾಲಕ | –''– |
| ೯೮ | ಸುಮಿತ್ರ (ಫೇನಪ) | –''– |
| ೯೯ | ಭಾರ್ಗವ | –''– |
| ೧೦೦ | ಶರ್ಮಿಷ್ಠಾ | –'– |

*****

## ಪ್ರಾಣಿವರ್ಗ

| ಸಂ. | ಹೆಸರು | ಪರ್ವ |
|---|---|---|
| ೧ | ಕದ್ರೂದೇವಿ (ಸರ್ಪದೇವತೆ) | ಆದಿ |
| ೨ | ವಿನತಾ (ಪಕ್ಷಿದೇವತೆ) | -''- |
| ೩ | ಮಹಾನಾಗ -ಪದ್ಮನಾಗ (ಹಾವು) | ಶಾಂತಿ |
| ೪ | ದೀರ್ಘಸೂತ್ರಮೀನು | ಆಪದ್ಧರ್ಮ ಶಾಂತಿ |
| ೫ | ಪಲಿತ (ಇಲಿ) | -''- |
| ೬ | ಹರಿಕ (ಮುಂಗುಸಿ) | -''- |
| ೭ | ಚಂದ್ರಕ (ಗೂಬೆ) | -''- |
| ೮ | ಪೂಜನಿ (ಗುಬ್ಬಿ) | -''- |
| ೯ | ನಾಡೀಜಂಘ (ಬಕಪಕ್ಷಿ) | -''- |
| ೧೦ | ರಾಜಧರ್ಮ (ಪಕ್ಷಿ) | -''- |
| ೧೧ | ಗೋಲಾಂಗೂಲ (ಕಪಿ) | -''- |
| ೧೨ | ಉಚ್ಚೈಃಶ್ರವಸ್ (ಕುದುರೆ) | ಅನುಶಾಸನ |
| ೧೩ | ಕೃಕಲಾಸ | -''- |

*****

## ರಾಕ್ಷಸರು-ದೈತ್ಯರು-ದಾನವರು

| ಸಂ. | ಹೆಸರು | ಪರ್ವ |
|---|---|---|
| ೧ | ಪುಲೋಮಾ (ದಾನವ) | ಆದಿ |
| ೩ | ವಿರೋಚನ | ಸಭಾ |
| ೪ | ಕಾಲಕೇಯ | ವನ |
| ೫ | ಮಧುಕ್ಕೈಟಭರು | -''- |
| ೬ | ಮಂಥರಾ - ದುಂದುಭಿ | -''- |
| ೭ | ಮಯ | -''- |
| ೮ | ಸುಂದೋಪಸುಂದರು | ಆದಿ |

| | | |
|---|---|---|
| ೯ | ಇಲ್ವಲ | ವನ |
| ೧೦ | ವಾತಾಪಿ | -''- |
| ೧೧ | ಪುಷ್ಪೋತ್ಕಟಾ | ವನ.ತೀಯಾ.ಪ. |
| ೧೨ | ರಾಕಾ | -''- |
| ೧೩. | ಮಾಲಿನೀ | -''- |
| ೧೪ | ಶೂರ್ಪಣಖಾ | -''- |
| ೧೫<br>೧೬<br>೧೭<br>೧೮<br>೧೯ | ದೂಷಣ<br>ವಜ್ರವೇಗ<br>ಪ್ರಮಾಥಿ<br>ಅವಿಂಧ್ಯ<br>ತ್ರಿಜಟಾ | -''- |
| ೨೦ | ವೃತ್ರಾಸುರ | ಶಾಂತಿ |
| ೨೧ | ವಿರೂಪಾಕ್ಷ | ಆಪದ್ಧರ್ಮ |
| ೨೨ | ತ್ರಿಪುರಾಸುರ | ಕರ್ಣ |
| ೨೩.<br>೨೪ | ತಾರಾಕ್ಷ<br>ಕಮಲಾಕ್ಷ | -''- |
| ೨೫ | ಹರಿ | -''- |
| ೨೬ | ವಿದ್ಯುನ್ಮಾಲೀ | -''- |
| ೨೭ | ತಾರಕಾಸುರ | ಗದಾ |
| ೨೮ | ಮಹಿಷಾಸುರ | -''- |
| ೨೯ | ಖಲಿಗಳು (ದಾನವರು) | ಅನುಶಾಸನ |
| ೩.೦ | ಕಲಿ, ದ್ವಾಪರ | ವನ |

*****

## ಅಪ್ಸರೆಯರು-ಯಕ್ಷರು

| ಸಂ. | ಹೆಸರು | ಪರ್ವ |
|---|---|---|
| ೧ | ಘೃತಾಚೀ (ಅಪ್ಸರೆ) | ಶಾಂತಿ |
| ೨ | ಕುಂಡಧಾರ (ಯಕ್ಷ) | -''- |
| ೩. | ಮೇನಕಾ | ಆದಿ |

*****

## ಶೂದ್ರ-ಚಂಡಾಲರು (ಭಕ್ತರು)

| ಸಂ. | ಹೆಸರು | ಪರ್ವ |
|---|---|---|
| ೧ | ತುಲಾಧಾರ | ವನ, ಶಾಂತಿ |
| ೨ | ವಿಶ್ವಾಮಿತ್ರರಿಗೆ ಆಹಾರ ಕೊಟ್ಟವನು – ಚಂಡಾಲ | |
| ೩ | ಅರ್ಜುನಕ (ವ್ಯಾಧ) | ಅನುಶಾಸನ |

*****

## ನದಿಗಳು - ತೀರ್ಥಗಳು

| ಸಂ. | ಹೆಸರು | ಪರ್ವ |
|---|---|---|
| | ನದಿಗಳು | |
| ೧ | ಶುಕ್ತಿಮತೀ | ಆದಿ |
| ೨ | ಕೌಶಕೀ | ವನ |
| ೩ | ವೈತರಣೀ | –''– |
| ೪ | ಸರಸ್ವತೀ | –''– |
| ೫ | ವಿಪಾಶಾ | –''– |
| ೬ | ಜಲಾ | –''– |
| ೭ | ಉಪಜಲಾ | –''– |
| ೮ | ಸುಮಂಗಾ–ಮಧುವಿಲಾ | –''– |
| ೯ | ಬಾಹುದಾ | –''– |
| ೧೦ | ಸರಯೂ | ಅನುಶಾಸನ |
| | ತೀರ್ಥಗಳು | |
| ೧೧ | ಸರಸ್ವತೀ | ಗದಾ |
| ೧೨ | ಕಾಂಚನಾಕ್ಷೀ | –''– |
| ೧೩ | ವಿಶಾಲಾ | –''– |
| ೧೪ | ಮನೋವ್ರತಾ | –''– |
| ೧೫ | ಜಘವತೀ–ಜಘಮಾಲಾ | –''– |
| ೧೬ | ಸುವೇಣಿ | –''– |

| | | |
|---|---|---|
| ೧೭ | ವಿಮಲೋಡಾ | -''- |
| ೧೮ | ಸಪ್ತಸಾರಸ್ವತ | -''- |
| ೧೯ | ಬಾಹುದಾ | ಆದಿ, ಅನುಶಾಸನ, ಶಾಂತಿ |
| ೨೦ | ಅಶೋಕ | ಅನುಶಾಸನ |
| ೨೧ | ಮಂದಾಕಿನೀ | -''- |
| ೨೨ | ಕುಲಹಾ | -''- |
| ೨೩ | ಚರ್ಮಣ್ವತೀ | -''- |
| ೨೪ | ಪಾರ್ವತೀತೀರ್ಥ | -''- |
| ೨೫ | ಕನಕ ಸರೋವರ | ಅನುಶಾಸನ |

*****

## ಪರ್ವತಗಳು

| ಸಂ. | ಹೆಸರು | ಪರ್ವ |
|---|---|---|
| ೧ | ಮೈನಾಕ | ವನ |
| ೨ | ಭೃಗುತುಂಗ | -''- |
| ೩ | ಸೌಬಂಧನ | ವನ.ತೀ.ಯಾ.ಪ. |
| ೪ | ಜ್ಯೋತಿಷ್ಕ | ಶಾಂತಿ |
| ೫ | ಋಕ್ಷವಾನ್ | ಆಪದ್ಧರ್ಮ |
| ೬ | ಗೃಧ್ರಕೂಟ | -''- |
| ೭ | ವಿಷ್ಣುಪದ | -''- |
| ೮ | ಪಾರಿಯಾತ್ರ | -''- |
| ೯ | ಉರಗ | ಅನುಶಾಸನ |
| ೧೦ | ಮಣಿಕಾಂಚನ | -''- |
| ೧೧ | ತ್ರಿಶಿಖರ | -''- |
| ೧೨ | ಕೈಲಾಸ | -''- |
| ೧೩. | ಮೇರು | - |

*****

## ಪಟ್ಟಣ-ನಗರಗಳು

| ಸಂ. | ಹೆಸರು | ಪರ್ವ |
|---|---|---|
| ೧ | ಮಹಾಪದ್ಮ | ಶಾಂತಿ |
| ೨ | ನಾಗ | -"- |
| ೩ | ವೈತಂತ್ರ | ಆಪದ್ಧರ್ಮ |
| ೪ | ಕಾಂಪಿಲ್ಯನಗರ | -"- |
| ೫ | ವೈದಶ | -"- |
| ೬ | ಮೇರುವ್ರಜ | -"- |
| ೭ | ಪುರೀಕಾ | -"- |
| ೮ | ಕುಳಿಂದ-ಶಾಖಾಪತನ | ಅನುಶಾಸನ |

ಇತ್ಯಾದಿ...

## ಪರಿಶಿಷ್ಟ-೬

### ನಕುಲೋಪಾಖ್ಯಾನದ ಮ.ತಾ.ನಿ. ಭಾಗ

ಸ ಕೃಷ್ಣೇಷ್ವಥ ಪಾರ್ಥೇಷು ಸುಸ್ನಾತಾವಭೃಥೇಷ್ವಲಮ್ ।
ಪಂಚೇಂದ್ರವದ್ ವಿರಾಜತ್ಸು ಸ್ತೂಯಮಾನೇಷ್ವಪೀಶ್ವರೈಃ ॥
ಸ್ತೂಯಮಾನೇ ಚ ತದ್ಯಜ್ಞೇ ಕ್ರೋಧೋ ನಕುಲತಾಂ ಗತಃ ।
ಕೃತ್ವೋಗ್ರಗರ್ಜನಂ ಯಜ್ಞಂ ತಾಂಶ್ಚ ಯಜ್ಞಕೃತೋಽಖಿಲಾನ್ ॥
ಗರ್ಹಯನ್ನೂಚಿವಾನಿತ್ಥಂ ಭಾರ್ಯಾಪುತ್ರಸ್ನುಷಾಯುತಃ ।
ಸಕ್ತುಪ್ರಸ್ಥಮದಾದ್ ವಿಪ್ರ ಉಂಛವೃತ್ತಿಃ ಸುಭಕ್ತಿತಃ ॥
ಧರ್ಮಾಯಾತಿಥಯೇ ತಸ್ಯ ಕಲಾಂ ನಾರ್ಹತಿ ಷೋಡಶೀಮ್ ।
ಯಜ್ಞೋಽಯಮಿತಿ ಹೇತುಂ ಚ ವಿಪ್ರೈಃ ಪೃಷ್ಟೋಽಭ್ಯಭಾಷತ ॥

ಪಾಂಡವರು ದ್ರೌಪದಿಯೊಂದಿಗೆ ಅವಭೃಥಸ್ನಾನ ಮಾಡಿ ಐವರು ಇಂದ್ರರಂತೆ ಶೋಭಿಸುತ್ತಿದ್ದಾಗ ರಾಜರು ಅವರನ್ನು ಕೊಂಡಾಡಿದರು. ಯಜ್ಞವನ್ನೂ ಕೊಂಡಾಡಿದರು. ಆಗ ಕ್ರೋಧಾಭಿಮಾನಿ ಅಸುರ ಮುಂಗುಸಿಯಾಗಿ ಭಯಂಕರ ಗರ್ಜನೆ ಮಾಡಿ ಯಜ್ಞವನ್ನೂ ಯಜ್ಞಮಾಡಿದ ಎಲ್ಲ ಪಾಂಡವರನ್ನೂ ನಿಂದಿಸುತ್ತ ಹೇಳಿದ 'ಉಂಛವೃತ್ತಿಯಿಂದ ಜೀವಿಸುತ್ತಿದ್ದ ಒಬ್ಬ ಬ್ರಾಹ್ಮಣ ಹೆಂಡತಿ ಮಗ ಸೊಸೆಯರಿಂದೊಡಗೂಡಿ ಬಹಳ ಭಕ್ತಿಯಿಂದ ಹಿಟ್ಟಿನ ರಾಶಿಯನ್ನು ಅತಿಥಿಯಾಗಿ ಬಂದ ಯಮನಿಗೆ ದಾನ ಮಾಡಿದ. ಅದರ ಹದಿನಾರನೆ ಒಂದಂಶಕ್ಕೂ ಈ ಯಜ್ಞ ಸಮವಾಗದು', ಎಂದು. ಮುನಿಗಳು ಇದಕ್ಕೆ ಕಾರಣವನ್ನು ಕೇಳಲು ಅಸುರ ಹೇಳಿದ –

ಅತಿಥೇಸ್ತಸ್ಯ ಪಾದೋದಕ್ಲಿನ್ನಃ ಪಾರ್ಶ್ವೋ ಹಿರಣ್ಮಯಃ ।
ಏಕೋ ಮಾಭೂದಪರಃ ಸರ್ವತೀರ್ಥಾದಿಕೇಷ್ವಪಿ ॥
ಮಜ್ಜತೋಽವಭೃಥೇಷ್ವದ್ಧಾ ಯಜ್ಞಾನಾಮತ್ರ ಚಾಽದರಾತ್ ।
ನಾಭೂದಿತ್ಯಥ ತತ್ತತ್ತ್ವೇದಿಭಿರ್ಮುನಿಪುಂಗವೈಃ ॥
ಕೃಷ್ಣೇನ ಚ ತಮೋಽಂಧಂ ತಂ ಪ್ರಾಪಯದ್ಭಿಃ ಸ್ಮಿತೇ ಕೃತೇ ।
ಅದರ್ಶನಂ ಜಗಾಮಾಽಶು ತಮಃ ಪ್ರಾಪ ಚ ಕಾಲತಃ ॥

'ಆ ಅತಿಥಿಯ ಪಾದೋದಕದಿಂದ ಒದ್ದೆಯಾದ ನನ್ನ ಮೈಯ ಒಂದು ಪಾರ್ಶ್ವ ಸುವರ್ಣಮಯವಾಯಿತು. ಬಳಿಕ ಎಲ್ಲ ಪವಿತ್ರ ಜಲಗಳಲ್ಲಿಯೂ ಇಲ್ಲಿ ಯಜ್ಞದ

ಅವಭೃಥಜಲಗಳಲ್ಲಿಯೂ ಆದರದಿಂದ ನಾನು ಚೆನ್ನಾಗಿ ಮುಳುಗಿದರೂ, ಇನ್ನೊಂದು ಪಾರ್ಶ್ವ ಸುವರ್ಣಮಯವಾಗಲೇ ಇಲ್ಲ'. ಪಾಂಡವರ ಯಜ್ಞದ ನಿಜವಾದ ಮಹತ್ತ್ವವನ್ನು ಅರಿತಿದ್ದ ಮುನಿಪುಂಗವರೂ ಕೃಷ್ಣನೂ ಕ್ರೋಧಾಸುರನನ್ನು ಅಂಧಂತಮಸ್ಸಿಗೆ ಕಳಿಸಲು ಬಯಸಿ ಮುಗುಳುನಕ್ಕಾಗ ಅಸುರ ಅದೃಶ್ಯನಾದ. ಸ್ವಲ್ಪ ಕಾಲವಾದ ಬಳಿಕ ತಮಸ್ಸನ್ನು ಹೊಂದಿದ.

**ತದರ್ಥಮೇವ ಹೈರಣ್ಯಃ ಪಾರ್ಶ್ವಸ್ತಸ್ಯಾಭವತ್ ಪುರಾ ।**
**ಕೃಷ್ಣಸ್ಯ ಪಾಂಡವಾನಾಂ ಚ ಮಖಾದೇಶ್ಚ ಗುಣಾನ್ ಬಹೂನ್ ॥**
**ವದಂತೋ ಭತ್ಸಯಾಂಚಕ್ರುಸ್ತನ್ಮತಜ್ಞಾ ಮಧುದ್ವಿಷಃ ।**

ಅದಕ್ಕಾಗಿಯೇ ಅವನ ಒಂದು ಪಾರ್ಶ್ವ ಹಿಂದೆ ಬಂಗಾರವಾಗಿತ್ತು. ಶ್ರೀಕೃಷ್ಣನ ಅಭಿಪ್ರಾಯವನ್ನು ತಿಳಿದಿದ್ದ ಮುನಿಗಳು ಶ್ರೀಕೃಷ್ಣನ ಪಾಂಡವರ ಮತ್ತು ಯಜ್ಞಾದಿಗಳ ಬಹಳ ಗುಣಗಳನ್ನು ಹೇಳುತ್ತಾ ಅಸುರನನ್ನು ನಿಂದಿಸಿದರು.

**ಶ್ರಾದ್ಧಾರ್ಥಂ ಹಿ ಪಯಃ ಪೂರ್ವಂ ಜಮದಗ್ನೇರದೂಷಯತ್ ।**
**ನಾಕುಲೇನೈವ ರೂಪೇಣ ಕ್ರೋಧಸ್ತಂ ಪಿತರೋಽಶಪನ್ ॥**
**ಭವ ತ್ವಂ ನಕುಲಸ್ತಾವದ್ ಯಾವದ್ ಧರ್ಮಾದಿಕಾನ್ ಸುರಾನ್ ।**
**ಕ್ಷೇಪ್ಸ್ಯಸೀತಿ ತಮೋ ಘೋರಂ ಭೂಯಃ ಪಾಪೇನ ಯಾತ್ವಯಮ್ ॥**
**ಇತ್ಯಭಿಪ್ರೇತ್ಯ ತೈಃ ಶಪ್ತಸ್ತಥಾ ಕೃತ್ವಾ ತಮೋಽಭ್ಯಯಾತ್ ॥**

ಶ್ರಾದ್ಧಕ್ಕಾಗಿ ಇಟ್ಟಿದ್ದ ಜಮದಗ್ನಿಯ ಹಾಲನ್ನು ಹಿಂದೆ ಈ ಕ್ರೋಧಾಸುರ ಮುಂಗುಸಿಯ ರೂಪದಿಂದಲೇ ಎಂಜಲು ಮಾಡಿದ್ದ. ಅವನನ್ನು ಪಿತೃಗಳು ಶಪಿಸಿದರು. 'ಧರ್ಮರಾಜಾದಿ ದೇವತೆಗಳನ್ನು ನಿಂದಿಸುವವರೆಗೂ ನೀನು ಮುಂಗುಸಿಯಾಗಿರು' ಎಂದು. ಮಹಾಪಾಪದಿಂದ ಈತ ಘೋರವಾದ ಅಂಧಂತಮಸ್ಸನ್ನು ಹೊಂದಲಿ ಎಂದು ಬಯಸಿಯೆ ಅವರು ಹಾಗೆ ಮಾಡಿದ್ದರು. ಕ್ರೋಧಾಸುರ ಹಾಗೇ ಮಾಡಿ ತಮಸ್ಸನ್ನು ಹೊಂದಿದ.

**ಯದ್ಯಪ್ಯಲ್ಪಧನತ್ಯಕ್ತಂ ವಿತ್ತಂ ಬಹುಫಲಂ ಭವೇತ್ ।**
**ತಥಾಽಪ್ಯನಂತಫಲದಾಃ ಕರ್ತುರೇವ ಮಹಾಗುಣಾಃ ॥**
**ಸತಾಂ ಪ್ರೀತಿಶ್ಚ ತತ್ರಾಪಿ ಸದ್ವರೋ ಹರಿರೇವ ಹಿ ।**
**ಪಾರ್ಥೇಭ್ಯೋಽಭ್ಯಧಿಕಃ ಕರ್ತಾ ಸಮೋ ವಾ ಕೋ ಗುಣೈರ್ಭವೇತ್ ॥**

ಅಲ್ಪಧನ ಉಳ್ಳವನು ಕೊಟ್ಟ ಧನ ಅಧಿಕಫಲವನ್ನು ಕೊಟ್ಟಿತು. ಆದರೂ ಕರ್ತೃವಿನ ಜ್ಞಾನ ಭಕ್ತ್ಯಾದಿ ಮಹಾಗುಣಗಳು ಮತ್ತು ಅವುಗಳಿಂದ ಉಂಟಾಗುವ ಸಜ್ಜನರ ಸಂತೋಷಗಳೇ ಅನಂತ ಫಲದಾಯಕಗಳು. ಸಜ್ಜನರಲ್ಲಿ ಉತ್ತಮನು ಶ್ರೀಹರಿಯೇ. ಭಕ್ತ್ಯಾದಿ ಗುಣಗಳಲ್ಲಿ ಪಾಂಡವರಿಗಿಂತ ಶ್ರೇಷ್ಠರಾದ ಅಥವಾ ಅವರಿಗೆ ಸಮನಾದ ಕರ್ತನೂ ಯಾರು ಇದ್ದಾರೆ?

**ಸತಾಂ ಚ ಪ್ರವರೋ ವಿಷ್ಣುಃ ಸದ್ಭಿರ್ಮುನಿಸುರೈರ್ವೃತಃ।**
**ಪ್ರತ್ಯಕ್ಷತಃ ಕಾರಯತಿ ಪಾರ್ಥೈಃ ಪ್ರಿಯತಮೈಶ್ಚ ತೈಃ ॥**
**ಯಂ ಮಖಪ್ರವರಂ ತಸ್ಯ ಸಮಂ ಕಿಂ ಶುಭಸಾಧನೈಃ।**
**ಪಠಂತ ಪೈಂಗಿನಶ್ಚೈತಾನ್ ಮುಂತ್ರಾನನ್ವರ್ಥಕಾನಿಹ ॥**

ಸಜ್ಜನರಲ್ಲಿ ಶ್ರೇಷ್ಠನಾದ ವಿಷ್ಣು ಸಜ್ಜನರಾದ ಮುನಿವರರಿಂದ ಯುಕ್ತನಾಗಿ ಅತ್ಯಂತ ಪ್ರಿಯರಾದ ಪಾಂಡವರ ಮೂಲಕ ಶುಭಸಾಧನಗಳಿಂದ ಪ್ರತ್ಯಕ್ಷವಾಗಿ ಯಾವ ಯಜ್ಞವನ್ನು ಮಾಡಿಸುತ್ತಿರುವರೋ, ಆ ಯಜ್ಞಕ್ಕೆ ಸಮಾನವಾದ ಪುಣ್ಯಕರವಾದ ಇನ್ನೊಂದು ಕರ್ಮ ಯಾವುದು? ಏಕೆಂದರೆ **ಪೈಂಗಿಶಾಖೆಯವರು** ಅರ್ಥಗರ್ಭಿತವಾದ ಮುಂದೆ ಹೇಳುವ ಮಂತ್ರಗಳನ್ನು ಪಠಿಸುತ್ತಾರೆ.

**ಅವೈಷ್ಣವಕೃತಂ ಕರ್ಮ ಸರ್ವಮಂತವದುಚ್ಯತೇ।**
**ಅನಂತಂ ವೈಷ್ಣವಕೃತಂ ತತ್ರ ವರ್ಣಕ್ರಮಾತ್ ಪರಮ್ ॥**
**ವೈಷ್ಣವೇಷ್ವಪಿ ಮರ್ತ್ಯೈರ್ಯತ್ ಕೃತಂ ಶತಗುಣಂ ತತಃ।**
**ಗಾಂಧರ್ವಂ ಕರ್ಮ ತಸ್ಮಾಚ್ಚ ಮುನಿಭಿಃ ಪಿತೃಭಿಸ್ತತಃ ॥**
**ದೇವಶಕ್ರಶಿವಬ್ರಹ್ಮಕೃತಂ ತಸ್ಮಾತ್ ಕ್ರಮೇಣ ಚ।**
**ಶತೋತ್ತರಮಿತಿ ಜ್ಞೇಯಂ ನಾನ್ಯದ್ ಬ್ರಹ್ಮಕೃತೋಪಮಮ್ ॥**

ವಿಷ್ಣುಭಕ್ತರಲ್ಲದವರು ಮಾಡಿದ ಎಲ್ಲ ಕರ್ಮವೂ ಅಲ್ಪಫಲ ಉಳ್ಳದ್ದೆನಿಸುತ್ತದೆ. ವಿಷ್ಣುಭಕ್ತರು ಮಾಡಿದ್ದು ಅನಂತಫಲ ಉಳ್ಳದ್ದು. ಅದರಲ್ಲಿಯೂ ವರ್ಣಕ್ರಮದಿಂದ ಮೇಲು ಮೇಲಿನವರ ಕರ್ಮ ಹೆಚ್ಚು ಫಲ ಉಳ್ಳದ್ದು. ವೈಷ್ಣವರಲ್ಲಿಯೂ ಮಾನವರು ಮಾಡಿದ್ದಕ್ಕಿಂತ ನೂರು ಪಾಲು ಗಂಧರ್ವರು ಮಾಡಿದ್ದು ಶ್ರೇಷ್ಠ ಅದಕ್ಕಿಂತ ಪಿತೃಗಳು ಮಾಡಿದ್ದು ನೂರುಪಾಲು ಶ್ರೇಷ್ಠ ಅದಕ್ಕಿಂತ ಮುನಿಗಳು ಮಾಡಿದ್ದು ನೂರಪಾಲು ಶ್ರೇಷ್ಠ ಅದಕ್ಕಿಂತ ದೇವತೆಗಳು, ಇಂದ್ರ, ಶಿವ, ಬ್ರಹ್ಮರು ಮಾಡಿದ್ದು ಕ್ರಮವಾಗಿ ನೂರುಪಟ್ಟು ಹೆಚ್ಚು ಶ್ರೇಷ್ಠವೆಂದು ತಿಳಿಯಬೇಕು. ಬ್ರಹ್ಮ ಮಾಡಿದ್ದಕ್ಕೆ ಸಮಾನ ಇನ್ನೊಂದಿಲ್ಲ?

**ವೈಷ್ಣವತ್ವಂ ಕ್ರಮಾದ್ವೃದ್ಧಂ ಬ್ರಹ್ಮಾಂತಂ ಜೀವರಾಶಿಷು।**
**ಫಲಾಧಿಕ್ಯಂ ಕರ್ಮಣಾಂ ಹಿ ವಿಷ್ಣೋಃ ಪ್ರೀತ್ಯೈವ ನಾನ್ಯಥಾ ॥**

ವಿಷ್ಣುಭಕ್ತಿ ಜೀವರಾಶಿಗಳಲ್ಲಿ ಕ್ರಮಕ್ರಮವಾಗಿ ಬ್ರಹ್ಮನವರೆಗೆ ಹೆಚ್ಚು ಹೆಚ್ಚಾಗಿರುತ್ತದೆ. ಕರ್ಮಗಳಿಗೆ ಅಧಿಕ ಫಲ ಸಿಗುವುದು ಶ್ರೀಹರಿಗೆ ಆಗುವ ತೃಪ್ತಿಯಿಂದಲೇ ಹೊರತು ಬೇರಾವುದರಿಂದಲೂ ಅಲ್ಲ.

ಇತಿ ತೇನ ನ ಪಾರ್ಥಾನಾಂ ಕರ್ಮಣಾऽನ್ಯತ್ ಸಮಂ ಕ್ವಚಿತ್ ।
ಗುಣೈರ್ಜ್ಞಾನಾದಿಭಿರ್ವಾऽಪಿ ತಸ್ಮಾತ್ ಕ್ರೋಧಃ ಸ ತಾಮಸಃ ॥
ವಿನಿಂದ್ಯ ತಾನ್ ಸುಸತ್ತ್ವಸ್ಥಾಂಸ್ತಮೋऽಂಧಮುಪಜಗ್ಮಿವಾನ್ ॥

ಹೀಗೆ ಪೈಂಗಿ ಶಾಖೆಯ ಮಂತ್ರಗಳಿರುವುದರಿಂದ ಪಾಂಡವರ ಯಜ್ಞಕ್ಕೆ ಸಮಾನ ಇನ್ನೊಂದು ಎಲ್ಲಿಯೂ ಇಲ್ಲ. ಅವರ ಜ್ಞಾನಾದಿ ಗುಣಗಳಿಗೂ ಸಮಾನವಾದ ಗುಣ ಇನ್ನೊಂದು ಎಲ್ಲಿಯೂ ಇಲ್ಲ. ಆದರಿಂದ ತಾಮಸನಾದ ಆ ಕ್ರೋಧಾಸುರ ಮಹಾ ಸಾತ್ವಿಕರಾದ ಆ ಪಾಂಡವರನ್ನು ನಿಂದಿಸಿ, ಅಂಧಂತಮಸ್ಸನ್ನು ಹೊಂದಿದನು.

ಕೃಪೆ : ಅಖಿಲಭಾರತಮಾಧ್ವಮಹಾಮಂಡಲ, ಬೆಂಗಳೂರು (೨೦೦೧); ಇವರ ಮ. ತಾ.ನಿ ಭಾಗ - ೪; ಪುಟ ೪೩೧-೪೩೬; ಅಧ್ಯಾಯ ೩೦/೧೫೮-೧೭೭.

*****

## ಪರಿಶಿಷ್ಟ-೭

# ಶ್ರೀವಾದಿರಾಜಸ್ವಾಮಿಗಳ ಲಕ್ಷಾಲಂಕಾರ

೧. ಆದಿಪರ್ವ – ಪೌಷ್ಯಪರ್ವ – ಇಲ್ಲಿ ಸುಮಾರು ೫೦ ಶಬ್ದಗಳಿಗೆ ಸಂಬಂಧಿಸಿದಂತೆ (ಅ. ೩-೧) ಶ್ಲೋಕಗಳ ಪ್ರತೀಕಗಳನ್ನು ಹಿಡಿದು, ಅರ್ಥ ಬರೆಯುತ್ತಾರೆ. ಅವಶ್ಯವಿದ್ದೆಡೆ ಕೋಶಗಳನ್ನು ಉದಾಹರಿಸುತ್ತಾರೆ. ಉದಾ – ೧. ಅಮರಕೋಶ, ಅಭಿಧಾನ ಮುಂತಾದವು (ಅ–೧)

'ಸಾರಮೇಯ ಶ್ವಾಃ :' 'ಕೌಲೇಯಕಃ ಸಾರಮೇಯಃ ಕುಕ್ಕುರೋ ಮೃಗದಶಂಕಃ' ಶುನಕೋ ಭಷಕಃ ಶ್ವಾ ಸ್ಯಾತ್' ಇತ್ಯಮರಃ। (ಪು. ೯೫)

೨. ಸರಮಾ – ಶುನೀ–ಸರಮಾ ಶುನೀ' ಇತ್ಯಮರಃ। (ಪು. ೯೬)

೩. ಅಂತರೇಣ ಮಹಾದೇವ ಕೃತ್ಯಾಂ ಇತ್ಯತ್ರ – ಮಹತೋ ದೇವಸ್ಯ ನಾರಾಯಣಸ್ಯ ದ್ರೋಹರೂಪಕೃತ್ಯಾಮಂತರೇಣ ವಿನಾ ಇತ್ಯರ್ಥಃ। (ಪು. ೯೭)

೪. ಭವತ್ವೇವಂ ಕರಿಷ್ಯಾಮಿ ಇತ್ಯತ್ರ – ಭವತು ಸ್ವದೇಹದಂಡನೇನಾಪಿ ಗುರುಸೇವಾ ಭವತು। ಅತ ಏವಂ ಕರಿಷ್ಯಾಮಿ ಇತ್ಯಪಶ್ಯತ್ । (ಪು. ೯೮)

೫. ತಸ್ಮಾದ್ಭವಾನ್ ಉದ್ದಾಲಕ ಏವ ನಾಮ್ನಾ ಭವತು ಇತ್ಯತ್ರ ಉದ್ಗತ್ಯ ಕೇದಾರಖಂಡಂ ದಾ(ರ)ಲಯತಿ ವಿದಾರಯತಿ ಇತಿ ಉದ್ದಾಲಕೋ ನಾಮ್ನಾ ಭವತ್ವಿತ್ಯರ್ಥಃ। ಇತಃ ಪರಂ ತ್ವಂ ಗುರುಸೇವಾಂಕಿತ ನಾಮ್ನಾ ಏವ ಕಥ್ಯಸೇ ಇತಿ ಭಾವಃ॥ (ಪು. ೯೯)

೬. ಉಪಮನ್ಯುವು ಗುರುಗಳ ಆಜ್ಞೆಯ ಮೇರೆಗೆ ಅಶ್ವಿನೀದೇವತೆಗಳನ್ನು ಋಙ್ಮಂತ್ರಗಳಿಂದ ಸ್ತೋತ್ರಮಾಡಿದ ಅವು ಹದಿಮೂರು. ಅವುಗಳಲ್ಲಿ ಶ್ರೀವಾದಿರಾಜರು ೧೧ ಮಂತ್ರಗಳಿಗೆ ವಿಸ್ತೃತ ವ್ಯಾಖ್ಯಾನ ಮಾಡಿದ್ದಾರೆ. (ಅ ೩/೬೨–೬೭ರವರೆಗೆ).

'ಪ್ರಪೂರ್ವಗೌ ಪೂರ್ವಜೌ ಚಿತ್ರಭಾನೂ....' ಇತ್ಯಾದಿ ಮಂತ್ರಗಳಿಗೆ ವಿಸ್ತಾರವಾದ ವ್ಯಾಖ್ಯಾನ ಹಾಗೂ ಒಟ್ಟು ತಾತ್ಪರ್ಯವನ್ನು ಬರೆಯುತ್ತಾರೆ. 'ಹೇ ಅಶ್ವಿನೌ ದಸ್ರೌ ಗಿರಾ ಸ್ತುತಿ ರೂಪಗಿರಾ ಪ್ರಶಂಸಾಮಿ ಇತಿ ಪ್ರಥಮ ಶ್ಲೋಕಸ್ಯ ಅರ್ಥಃ। (ಪು. ೧೦೩)

ಅಶ್ವಿನೀದೇವತೆಗಳ ಸ್ತೋತ್ರಗಳನ್ನು ಆರೋಗ್ಯವೃದ್ಧಿ ಬಯಸಿ ಉಪಯೋಗಿಸಬಹುದು. ಎರಡನೇ ಮಂತ್ರದಲ್ಲಿ 'ಹಿರಣ್ಮಯೌ ಶಕುನೀ ಸಾಂಪರಾಯೌ ನಾಸತ್ಯದಸ್ರೌ ... । ಹಿರಣ್ಮಯೌ ಶಕುನೀ ಇತ್ಯತ್ರ ಹಿರಣ್ಮಯೌ ಸುವರ್ಣಾಲಂಕೃತೌ ಶಕುನೀ ಆರೋಗ್ಯಕರಣೇನ ಶಕೂ ಶಕ್ತಿಂ ನಯತಃ ಪ್ರಾಪಯತ ಇತಿ ಶಕುನೀ' ಎಂದು ವ್ಯಾಖ್ಯಾನಿಸಿದ್ದಾರೆ.

೭. ಅ. ೩, ಶ್ಲೋಕ ೧೫೯ರಲ್ಲಿ 'ಚತುರ್ವಿಂಶತಿ ಪರ್ವಯೋಗ' (ಎಂಬ ಪ್ರತೀಕಕ್ಕೆ) ಇತ್ಯತ್ರ ದ್ವಾದಶಾಮಾವಾಸ್ಯಾಃ ದ್ವಾದಶಪೌರ್ಣಮಾಸ್ಯಶ್ಚ ಇತಿ ಚತುರ್ವಿಂಶತಿ ಪರ್ವಣಾಂ ಯೋಗೋ ಯಸ್ಮಿನ್ ಸಂವತ್ಸರಾಖ್ಯ ಕಾಲಚಕ್ರೇ। ಮೇಲಿನ ಶಬ್ದಕ್ಕೆ ಹನ್ನೆರಡು ಅಮಾವಾಸ್ಯಾ, ಹನ್ನೆರಡು ಹುಣ್ಣಿಮೆಗಳು ಒಂದು ವರ್ಷದಲ್ಲಿ ಬರುತ್ತವೆ. ಒಟ್ಟು೨೪ ಪರ್ವಕಾಲಗಳು ಯಾವ ಸಂವತ್ಸರದಲ್ಲಿ ಬರುತ್ತವೆಯೋ ಆ ಕಾಲಚಕ್ರದಲ್ಲಿ' ಎಂದು ವ್ಯಾಖ್ಯಾನವಿದೆ.

೮. ಆಸ್ತಿಕಪರ್ವ ಅ. ೧೩-೧೧ರಲ್ಲಿ 'ಯಾಯಾವರಾಣಾಂ ಪ್ರಿಯಾಣಾಂ' ಇತ್ಯತ್ರ ಗೃಹೇ ಗೃಹೇ ಯಾತ್ವಾ ಯಾತ್ವಾ ವರಯಂತಿ ತದ್ದಿನ ಮಾತ್ರೋಚಿತ ತಂಡುಲಾನಿತಿ ಯಾಯಾವರಾಃ ವಿರಕ್ತ ಬ್ರಾಹ್ಮಣಾಃ ತೇಷಾಂ ಧರ್ಮಜ್ಞಃ।' ಎಂದು ಯಾಯಾವರ ಶಬ್ದಾರ್ಥ ಬರೆದಿದ್ದಾರೆ. ಇಂದಿಗೂ ದಾಸಕೂಟದ ದೀಕ್ಷೆ ಪಡೆದವರು ಯಾಯಾವರಕ್ಕೆ ಹೋಗಿ ಅತ್ಯವಶ್ಯವಾದುದನ್ನು ಮಾತ್ರ ಉದರ ನಿರ್ವಹಣೆಗೆ ಸಂಗ್ರಹಿಸುವುದು ಕಂಡುಬಂದಿದೆ.

೯. ಅ. ೩/೧೪ ರಲ್ಲಿ 'ವೀರಣಸ್ತಂಬಕೇ ಲಗ್ನಾ' ಇತ್ಯತ್ರ ವೀರಣಸ್ತಂಬಂ ಔಶೀರಕ ತೃಣಾನಾಂ ಗುಲ್ಮಂ 'ಲಾವಂ ಚ' ಇತಿ ಅಪಭ್ರಂಶ ಭಾಷಾ ಎಂದು ವ್ಯಾಖ್ಯಾನವಿದೆ. ವೀರಣಸ್ತಂ ಬ ಎಂದರೆ ಲಾವಂಚ ಎಂಬ ಹುಲ್ಲಿನ ಸಸ್ಯ.

೧೦. ಅ. ೪೨ರಲ್ಲಿ 'ಉಪಾಯೈಃ ಶ್ವೇತಕಾಕೀಯೈಃ' ಇತ್ಯತ್ರ ಅನುಕೂಲೈಃ ಉಪಾಯೈಃ ಭಾಷಿತ ಚೇಷ್ಟಿತಾದ್ಯುಪಾಯೈಃ। ತಥಾಽಽಹ ವಾಗುರಿಃ। 'ವದಂತಿ ಕಾಕಕಾಲೀಯಂ ದೈವಾತ್ ಸಂಪ್ರಾಪ್ತಮೇವ ಯತ್ । ತಥಾ ಚ ಶ್ವೇತಕಾಕೀಯಂ ಅನುಕೂಲಾರ್ಥವಾಚಕಮ್ । 'ಶ್ವೇತಕಾಕೀಯ' ಎಂಬ ಶಬ್ದಕ್ಕೆ ತನ್ನ ಕೆಲಸವಾಗಲಿ ಎಂದು, ಬೇರೆಯವರು ಏನೇ ಹೇಳಲಿ 'ಹೂಂ ಎನ್ನುವುದು ಉದಾಃ ಕಾಗೆ ಬೆಳ್ಳಗಿದೆ (ಶ್ವೇತಕಾಕೀಯ) ಎಂದರೂ ಎದುರು ಮಾತಾಡದೆ ಹೌದು ಎನ್ನುವ ನಡೆ : ಹೀಗೆ ಕೆಲವು ಜನರು ಇರುತ್ತಾರೆ. ಹಾಗೆ ಇಲ್ಲಿ ಜರತ್ಕಾರು ಮಡದಿ ಪತಿಯನ್ನು ಎದುರು ಹಾಕಿಕೊಳ್ಳದೆ ಪತಿಯನ್ನು ಅನುಕರಿಸಿದ್ದಳು ಆತನ ಪತ್ನಿ.

೧೧. ಶಕುಂತಲೋಪಾಖ್ಯಾನದಲ್ಲಿ ಸಂಭವಪರ್ವ ಅ. ೮೭/೧೯ರಲ್ಲಿ 'ವಚನಂ ಮತ್ತಕಾಶಿನಿ' ಇತ್ಯತ್ರ 'ಮತ್ತ ಕಾಶಿನಿ' ಇತಿ ಉತ್ತಮಸ್ತ್ರಿಯಾ ನಾಮ । 'ವರಾರೋಹಾ ಮತ್ತಕಾಶಿನಿನ್ಯುತ್ತಮಾ ವರವರ್ಣಿನೀ ಇತ್ಯಮರಃ । 'ಅಮತ್ತಾ ಮತ್ತವದ್ಭಾತಿ ಯಾಸೀ ಸಾ ಮತ್ತಕಾಶಿನೀ। ಇತಿ ಚ। ನಿಘಂಟು ಇಲ್ಲಿ ಮತ್ತಕಾಶಿನೀ ಎಂದರೆ ಉತ್ತಮಸ್ತ್ರೀ ಎಂದು ಅರ್ಥ ಇದನ್ನು ಅಮರಕೋಶ ಹಾಗೂ ನಿಘಂಟುಗಳನ್ನು ಉದಾಹರಿಸಿ ಅರ್ಥೈಸಲಾಗಿದೆ.

೧೨. ಆದಿಪರ್ವ – ವೈವಾಹಿಕಪರ್ವ – ಅ. ೧೯೬/೫ ನೇ ಶ್ಲೋಕದಲ್ಲಿ 'ಲೋಲಂ ಈರ್ಷ್ಯಂ ಸುಕೋಪನಂ' ಎಂಬಲ್ಲಿ 'ಈರ್ಷ್ಯಂ' 'ಈರ್ಷ್ಯಾಶೀಲಂ' ಎಂದು ಅರ್ಥ ಬರೆದಿದ್ದಾರೆ (ಈ ಶಬ್ದ ಲೋಕನಿಘಂಟುವಿನಲ್ಲಿ ಕಾಣುತ್ತಿಲ್ಲ).

೧೩. ಆದಿಪರ್ವ ಅ. ೧೯೬/೫೦ 'ಸಕೃದುಕ್ತಂ ತ್ವಯಾ ನೈತತ್' ಇತ್ಯತ್ರ ಪತಿಂ ದೇಹೀತಿ ವಾಕ್ಯಂ ಯದುಕ್ತಂ ನ। ಕಿಂತು ಪಂಚಸೋಕ್ತಮ್। ಅತಸ್ತೇ ಅಧರ್ಮೋ ನ ಭವಿಷ್ಯತಿ। ..... ಬಹುಧಾ ಪ್ರಾರ್ಥನಂ ತು ತ್ವಯ್ಯಪಿ ಬಹುನಾರೀ ಸದ್ಭಾವ ಸೂಚಕಮ್। ಅತ ಏಕಸ್ಮಿನ್ ದೇಹೇಽಪಿ ಸ್ವಸ್ವಪತಿನಾ ತತ್ತತ್ ಪತ್ನ್ಯಾ ರಮಣೇ ಸತಿ ಪಂಚಪತಿತ್ವೇಽಪಿ ನಾಧರ್ಮ ಇತಿ ಭಾವಃ। ಅನ್ಯಥಾ ಪಂಚವಾರಂ ಜಾರಪ್ರಾರ್ಥನೇಽಪಿ ದೋಷಾಭಾವಪ್ರಸಂಗಾತ್ ಗೂಢಾಭಿಸಂಧೇಃ ಶಿವಸ್ಯ ಇದಮೇವ ಹೃದಯಮ್। ದ್ರೌಪದೀ ಪಂಚಪತಿತ್ವ – ಪಂಚೇಂದ್ರೋಪಾಖ್ಯಾನಗಳ ತಿರುಳನ್ನು ಗುರುರಾಜರು ಇಲ್ಲಿ ಸಂಗ್ರಹಿಸಿದ್ದಾರೆ.

ಅಲ್ಲದೆ ಇದೇ ಅಧ್ಯಾಯದ ೫೩, ೫೪ ನೇ ಶ್ಲೋಕಗಳ ವ್ಯಾಖ್ಯಾನವೂ ಮೇಲಿನ ವಿಷಯಗಳನ್ನು ಒಳಗೊಂಡಿದೆ. ಮ.ತಾ.ನಿ.ದ ಅ. ೧೮/೧೦೮-೧೫೨ರಲ್ಲಿ ಆಚಾರ್ಯರ ನಿರ್ಣಯಗಳನ್ನು ಇಲ್ಲಿಯೂ ಸಂಕ್ಷೇಪವಾಗಿ ನಿರೂಪಿಸಿದ್ದಾರೆ. ಮತ್ತು ಅದರ ಭಾವಪ್ರಕಾಶಿಕಾ ವ್ಯಾಖ್ಯಾನವನ್ನೂ ಇಲ್ಲಿ ಸೂಕ್ಷ್ಮವಾಗಿ ಗಮನಿಸಬಹುದು.

೧೪. ಸಭಾಪರ್ವದ ದ್ಯೂತಪರ್ವದಲ್ಲಿ ದ್ರೌಪದೀ ಕೇಳುವ ಪ್ರಶ್ನೆಗಳಿಗೆ ಉತ್ತರಿಸದಿದ್ದಾಗ ವಿದುರ, ಪ್ರಹ್ಲಾದ, ಕಾಶ್ಯಪರ ಸಂವಾದರೂಪ ಕಥೆ ಹೇಳಿ ನ್ಯಾಯೋಚಿತವಾಗಿ ಉತ್ತರ ಕೊಡದಿದ್ದರೆ, ಪ್ರಶ್ನೆಯನ್ನೇ ಕೇಳಿಸಿಕೊಳ್ಳದಿದ್ದರೆ, ಉತ್ತರವನ್ನೇ ಕೊಡದಿದ್ದರೆ, ಅಂತಹವನು ಸತ್ತಮೇಲೆ ನೂರು ವಾರುಣ ಪಾಶಗಳ ಬಂಧನಕ್ಕೆ ತುತ್ತಾಗುತ್ತಾನೆ ಎಂದಿದೆ.

ಆ ಶ್ಲೋಕದ ಲಕ್ಷಾಲಂಕಾರವ್ಯಾಖ್ಯಾನ ಹೀಗಿದೆ:

**'ಸಾಕ್ಷೀವಾ ವಿಬ್ರುವನ್ ಸಾಕ್ಷ್ಯಂ ಗೋಕರ್ಣಶಿಥಿಲಂ ಚರನ್।**
**ಸಹಸ್ರಂ ವಾರುಣಾನ್ ಪಾಶಾನ್ ಆತ್ಮನಿ ಪ್ರತಿಮುಂಚತಿ॥ - ೮೮/೧೮**

'ಸಾಕ್ಷೀ ವಾ ವಿಬ್ರುವನ್ ಇತ್ಯತ್ರ ಸಾಕ್ಷ್ಯಂ ಸಾಕ್ಷಿಸಂಬಂಧಿವಚನಂ ವಿಬ್ರುವನ್ ವಿಪರೀತತಯಾ ಬ್ರುವನ್। ಗೋಕರ್ಣಶಿಥಿಲಂ ಚರನ್ ಇತ್ಯತ್ರ ಗೋಕರ್ಣಶಿಥಿಲಂ ಗೌಃ ಆರ್ತಾನಾಂ ಪ್ರಶ್ನವಾಕ್ ಕರ್ಣಾತ್ ಶ್ರೋತ್ರಾತ್ ಶಿಥಿಲಾ ವಿಸ್ರಂಸಿತಾ ಯಥಾ ಭವತಿ ತಥಾ ಆಚರನ್, ಔದ್ಧತ್ಯಾತ್ ತತ್ಪ್ರಶ್ನವಾಕ್ಯಮೇವ ಅಶೃಣ್ವನ್ ಇತ್ಯರ್ಥಃ।.. ಇತ್ಯಾದಿ.

೧೫. ವನಪರ್ವ ಅ. ೧೩/೯ ಶ್ಲೋಕದಲ್ಲಿ(ಸಾಲ್ವವಧೋಪಾಖ್ಯಾನದಲ್ಲಿ)

'ಯುದ್ಧೇ ವಿನಯಿತಾಽಸ್ಮ್ಯಹಮ್। ಇತ್ಯತ್ರ ವಿ ವಿನಾಶಂ ನಯಿತಾ ಪ್ರಾಪಯಿತಾ। ಎಂದು ಲಕ್ಷಾಲಂಕಾರವಿದೆ. ಸಾಲ್ವನಿಗೆ ಯುದ್ಧದಲ್ಲಿ ವಿನಾಶವನ್ನು ಹೊಂದಿಸಿದೆ (ವಿನಾಶ ಹೊಂದುವಂತೆ ಮಾಡಿದೆ).

೧೬. ವನಪರ್ವ ಅ. ೧೪/೨ರಲ್ಲಿ '.... ಮಯಾ ಶ್ರೌತಶ್ರವಂ ನೃಪಂ।' ಇಲ್ಲಿ ಲಕ್ಷಾಲಂಕಾರದಲ್ಲಿ 'ಶ್ರೌತಶ್ರವಃ ಶ್ರುತವಾ ನಾಮ ದಮಘೋಷಪುತ್ರೀ, ತಸ್ಯಾಃ ಪುತಃ ಶ್ರೌತಶ್ರವಃ ಶಿಶುಪಾಲಃ।' ಎಂದಿದೆ.

೧೭. ವನಪರ್ವ ಕೈರಾತಪರ್ವದಲ್ಲಿ ೧೬/೪೯ನೇ ಶ್ಲೋಕ 'ರುಧಿರಾಶನಾಃ – ಶಿರಸ್ಯುರಸಿ ವಕ್ತ್ರೇ ಚ ಸ ಮುಮೋಹ ಪಪಾತ ಚ।' ಎಂಬಲ್ಲಿ ಲಕ್ಷಾಲಂಕಾರದಲ್ಲಿ –

'ರುಧಿರಾಶನಾಃ ಶರಾಃ' ಎಂದು ಅರ್ಥೈಸಿದೆ. (ರುಧಿರ – ರಕ್ತ – ಅಶನ– ಆಹಾರ) ರಕ್ತವೇ ಆಹಾರವಾಗಿರುವ ಎಂದರೆ ಬಾಣಗಳು ಎಂದು ಬಹುವ್ರೀಹಿ ಮಾಡಬೇಕೆನಿಸುತ್ತದೆ).

೧೮. ಮಾರ್ಕಂಡೇಯ ಸಮಾಸ್ಯಾಪರ್ವ ಅ. ೧೯೪/೧೦ –

'ಸೂನಾಮಧ್ಯೇ ವ್ಯವಸ್ಥಿತಮ್ ।' ಇತ್ಯತ್ರ ಪರೇಣ ಹಿಂಸಿತ ಮಹಿಷಾದಿ ಮಾಂಸಾನಾಂ ವಿಕ್ರಯಾಯ ಶಸ್ತ್ರೇಣ ಛೇದಃ ಸೂನಾ ತಸ್ಯಾಃ ಮಧ್ಯೇ।

– ಧರ್ಮವ್ಯಾಧನು ಸ್ವಯಂ ಪ್ರಾಣಿಗಳನ್ನು ಕೊಲ್ಲುತ್ತಿರಲಿಲ್ಲ. ಬೇರೆಯವರು ಕೊಂದ ಮಹಿಷ ಮೊದಲಾದ ಪ್ರಾಣಿಗಳ ಮಾಂಸವನ್ನು ಮಾರುತ್ತಿದ್ದ ಎಂದು 'ಸೂನಾಮಧ್ಯೇ' – ಹಿಂಸೆಯ ಮಧ್ಯದಲ್ಲಿ ಎಂಬ ಶಬ್ದಾರ್ಥ ಬರೆದಿದ್ದಾರೆ ಲಕ್ಷಾಲಂಕಾರಕಾರರು. ಆದರೆ ಆ ಶಬ್ದ ನೋಡಿದರೆ ಧರ್ಮವ್ಯಾಧನು ಸ್ವಯಂ ಹಿಂಸೆ ಮಾಡುತ್ತಿದ್ದನೆಂಬ ಭ್ರಮೆ ಬರುತ್ತದೆ.

೧೯. 'ವೇದಸ್ಯೋಪನಿಷತ್ ಸತ್ಯಂ' ಇತ್ಯತ್ರ ಎಂಬಲ್ಲಿ ಅಲ್ಲಿಯದೇ ವಾಕ್ಯಕ್ಕೆ (೧೯೪/೭೦) ಉಪನಿಷತ್‌ರಹಸ್ಯಮ್ ಎಂದು ಲಕ್ಷಾಲಂಕಾರವಿದೆ.

೨೦. ಅ. ೧೯೫/೧೫ರಲ್ಲಿ 'ಅಮಾಸಾಂಶೀ ಭವೇದೇವಮಿತ್ಯಪಿ ಶ್ರೂಯತೇ ಶ್ರುತಿಃ। ಭಾರ್ಯಾಂ ಗಚ್ಛನ್ ಬ್ರಹ್ಮಚಾರೀ ಋತೌ ಭವತಿ ಬ್ರಾಹ್ಮಣಃ। ಇತ್ಯತ್ರ ಯಥಾ ಋತೌ ಋತಾವೇವ ಭಾರ್ಯಾಂ ಗಚ್ಛನ್ ಬ್ರಾಹ್ಮಣಃ ಬ್ರಹ್ಮಚಾರೀ ಭವತಿ, ಏವಂ ಅಮಾಂಸಾಶೀ ಅವಿಹಿತಮಾಂಸ ಭಕ್ಷಣಾದನ್ಯತ್ರ ಮಾಂಸಂ ಅಭಕ್ಷಯತ್ ಅಮಾಂಸಾಶೀ ಇತ್ಯಪಿ ಶ್ರುತಿಃ ಶ್ರೂಯತೇ।

– ವಿಹಿತವಾಗಿ ದೇವಪಿತೃಗಳಿಗೆ ನಿವೇದಿಸಿದ ನಂತರ ಮಾಂಸ ತಿಂದರೆ ಅವನು ಮಾಂಸ ತಿನ್ನದವನೆಂದೇ ಶ್ರುತಿ ಹೇಳುತ್ತದೆ. ಋತುಕಾಲದಲ್ಲಿ ಮಾತ್ರ ಪತ್ನಿಯೊಡನೆ ರಮಿಸುವವನು ಬ್ರಹ್ಮಚಾರಿ ಎಂದೆನಿಸುತ್ತಾನೆ.

೨೧. ಸಾವಿತ್ರೀ ಉಪಾಖ್ಯಾನದಲ್ಲಿ ಅ. ೨೮೨/೩೬ರಲ್ಲಿ 'ಅಪ್ರದಾತಾ ಪಿತಾ ವಾಚ್ಯ ಇತ್ಯತ್ರ ವಾಚ್ಯಃ ನಿಂದ್ಯಃ। ಪಿತುಃ ಅನು ಅಂಗೀಕೃತ ಭಾರ್ಯಾಯಾಮುದಾಸೀನಃ। 'ವಾಚ್ಯಃ'।

– ಎಂದರೆ ನಿಂದಿಸಲ್ಪಡಲು ಯೋಗ್ಯ ಎಂದು ಅರ್ಥ ಬರೆದಿದ್ದಾರೆ. ವಾಚ್ಯ ಶಬ್ದಕ್ಕೆ ಅನೇಕ ಅರ್ಥಗಳಿವೆ, ಇದು ಇಲ್ಲಿ ಬೇಕಾದುದು.

೨೨. ಇಲ್ಲಿಯೇ ೨೮೬/೬ರಲ್ಲಿ 'ತಿಸ್ರಣಾಂ ವಸತೀನಾಂ' ಇತ್ಯತ್ರ ತಿಸ್ರಣಾಂ ವಸತೀನಾಂ ಉಪವಾಸಾನಾಂ ಸ್ಥಾನಂ ಅನುಷ್ಠಾನಂ।

– ವಸತಿ ಶಬ್ದಕ್ಕೆ ಲೌಕಿಕ ಕೋಶಗಳಲ್ಲಿ ಈ ಅರ್ಥವಿಲ್ಲ. ಇದು ವ್ಯಾಸರ ಪ್ರಯೋಗ.

(**ವಿ.ಸೂ.**: ನಳೋಪಾಖ್ಯಾನ ಹಾಗೂ ಸಾವಿತ್ರೀ ಉಪಾಖ್ಯಾನಗಳಲ್ಲಿ ಕ್ರಮವಾಗಿ ೨೭ ಮತ್ತು ೩೩ ಶಬ್ದಗಳಿಗೆ ಪ್ರಸಂಗಗಳಲ್ಲಿ ವಾದಿರಾಜರು ಅರ್ಥೈಸಿ ಅನುಗ್ರಹಿಸಿದ್ದಾರೆ)

**೨೩.** ಶ್ರೀರಾಮೋಪಾಖ್ಯಾನ ಅ. ೨೬೧/೧೩ರಲ್ಲಿನ –

'ಅಸ್ತಿ ಕಶ್ಚಿತ್ ಮಯಾ' ಇತ್ಯತ್ರ ಮಯಾ ವಿನಾ, ಮಯಾ ಮತ್ತ ಇತಿ ವಿಭಕ್ತಿವ್ಯತ್ಯಾಸೋ ವಾ । ಮಯಾ ಇದು ತೃತೀಯಾ ವಿಭಕ್ತಿ. ಅದಕ್ಕೆ ಪಂಚಮ್ಯರ್ಥವನ್ನೂ ಮಾಡಬಹುದೆಂದು ವಿಕಲ್ಪವನ್ನು ತಿಳಿಸಲಾಗಿದೆ.

**೨೪.** ಅ. ೨೬೩/೩೧ರಲ್ಲಿ 'ಅಮರತ್ವಂ ದದಾಮಿ ತೆ' ಇತ್ಯತ್ರ ಕಲ್ಪಾವಸಾನಪರ್ಯಂತಂ ಮರಣರಾಹಿತ್ಯಂ ಅಮೃತತ್ವರೂಪಮುಕ್ತತ್ವಂ ಚ ಅಮರತ್ವಮ್ ।' ಎಂದು ವಿಭೀಷಣನಿಗೆ ಬ್ರಹ್ಮದೇವರು ಅನುಗ್ರಹಿಸಿದ ಅಮರತ್ವಶಬ್ದಕ್ಕೆ **ಕಲ್ಪದವರೆಗೆ ಜೀವನ** ಎಂದು ಅರ್ಥೈಸಲಾಗಿದೆ.

**೨೫.** ಅ. ೨೬೭/೧೯ರಲ್ಲಿ 'ರುದ್ರಸ್ತಾರಾಮೃಗಂ ಯಥಾ' ಎಂಬಲ್ಲಿ 'ಸಂಹಾರಕಾಲೇ ಮೃಗಶೀರ್ಷಾಖ್ಯತಾರಾಮೃಗಮ್।' ಎಂದು ಬರೆದಿದ್ದಾರೆ. ರುದ್ರದೇವರು ಮೃಗಶೀರ್ಷವೆಂಬ ಹೆಸರಿನ ಮೃಗವನ್ನು ಹಿಂಬಾಲಿಸಿದಂತೆ ರಾಮನು ಮೃಗವೇಷಧಾರಿ ಮಾರೀಚನನ್ನು ಬೆನ್ನು ಹತ್ತಿದನು.

**೨೬.** ಅ. ೨೭೬/೧೩ರಲ್ಲಿ ಲಕ್ಷ್ಮಣನು ಕುಂಭಕರ್ಣನನ್ನು ಕೊಂದನೆಂದು ತೋರುತ್ತದೆ.

'ಸೋಽಭಿಪತ್ಯ ಮಹಾವೇಗಂ' 'ಪ್ರಾಹಿಣೋತ್ ಕುಂಭಕರ್ಣಾಯ ಲಕ್ಷ್ಮಣಃ ಪರವೀರಹಾ' ಇತ್ಯತ್ರ ಕುಂಭವತ್ ಕರ್ಣೌ ಯಸ್ಯೇತಿ ವ್ಯುತ್ಪತ್ತ್ಯಾ ಕುಂಭಕರ್ಣಪದೇನ ಅತಿಕಾಯಃ ಕಥ್ಯತೇ । ಅತ ಏವ 'ಬೃಹತ್ತನುಃ ಕುಂಭವದೇವ ಕರ್ಣಾವಸ್ಯೇತ್ಯತೋ ನಾಮ ಚ ಕುಂಭಕರ್ಣಃ ಇತ್ಯಾಹುಃ (ಮ.ತಾ.ನಿ. ೮/೫೬) ರಾಮಂ ವಿನಾ ಲಕ್ಷ್ಮಣಸ್ಯ ಕುಂಭಕರ್ಣಘಾತಕತ್ವಾ ಯೋಗಾದಯಮೇವಾರ್ಥಃ । ಕುಂಭಕರ್ಣಪದ ಪ್ರಯೋಗಸ್ತು ರಾಮೇಣ ಕುಂಭಕರ್ಣ ವಧೋಽಪಿ ಕೃತ ಇತಿ ಸೂಚಯಿತುಂ।

**೨೭. ಉದ್ಯೋಗಪರ್ವ** ಅಂಬೋಪಾಖ್ಯಾನ ಅ. ೧೭೯/೧೭ –

'ತ್ವಯಾ ಚೈವ ಚತುರ್ವಿಧಂ। ಉಪದಿಷ್ಟಂ....। ಇತ್ಯತ್ರ 'ಚತುರ್ವಿಧಂ ೧. ಶರಪ್ರಯೋಗಃ ೨. ಶರಸಂಧಾನಂ, ೩. ಮಂತ್ರಪ್ರಯೋಗಃ ೪. ಮಂತ್ರೋಪಸಂಹಾರಶ್ಚ ಇತಿ।'

**೨೮. ದ್ರೋಣಪರ್ವ** ೫೧/೪೫ (ಅಭಿಮನ್ಯುವಧಪರ್ವ)

'ಏವಂ ಸರ್ವೇ ಪ್ರಾಣಿನಸ್ತತ್ರಗತ್ವಾ' ಇತ್ಯತ್ರ ಏವಂ ಉಕ್ತ ಪ್ರಕಾರೇಣ ಮೃತ್ಯೋಃ ಸಕಾಶಾತ್ ಪರಲೋಕಂ ಗತ್ವಾ ದೇಹಂ ದೇಹಮಪೇಕ್ಷ್ಯ ಭೂಯಃ ಮರ್ತ್ಯತಾಂ ಯಾಂತಿ, ನ ತು ಜೀವಸ್ಯೈವ ನಾಶೋ ನಾಮಾಽಸ್ತಿ। ಅತೋಽಪಿ ಶೋಕೋ ನ ಕರ್ತವ್ಯ ಇತಿ ಭಾವಃ॥

೨೯. ದ್ರೋಣಪರ್ವ ೫೧/೪೬-

ವಾಯುರ್ಭೀಮೋ ಭೀಮನಾದೋ ಮಹೌಜಾಃ ....।

ವಾಯುರ್ಭೀಮೋ ಇತ್ಯತ್ರ ಯಸ್ಮಾದಿತಿ ಅಭ್ಯುಪಸ್ಕರ್ತವ್ಯಮ್ । ಯಸ್ಮಾದ್ವಾಯುಃ ಭೀಮಃ ಅಸುರಾಣಾಂ ಭಯಂಕರಃ। ತತ್ರ ಹೇತುಃ ಭೀಮನಾದ ಇತಿ। .... ತಥಾ ಮಹದ್ ಓಜೋ ಯಸ್ಯಾಸೌ ತಥೋಕ್ತಃ ಮಹೌಜಾಃ । ಸರ್ವೇಷಾಂ ಪ್ರಾಣಿನಾಂ ಜೀವಾನಾಂ ಪ್ರಾಣಭೂತಃ ಚೇಷ್ಟಾದಿಪ್ರದಃ। ತಥಾ ದೇಹಿನಾಂ ಪ್ರಾಣಿನಾಂ ದೇಹಪಾತೇ ಕಾಯೇ ಅನಸ್ಯ ವಾಯೋಃ ಅವೃತ್ತಿಃ ಕಾರಣಮಿತ್ಯರ್ಥಃ । ಮುಖ್ಯಪ್ರಾಣೇನ ದೇಹೇ ಪರಿತ್ಯಕ್ತೇ ತತ್ಪಾತೋ ಭವತಿ, ನಾನ್ಯಥೇತಿ ಭಾವಃ। ಅಥವಾ ದೇಹಿನಾಂ ಮುಮುಕ್ಷೂಣಾಂ ದೇಹಪಾತೇ ಅನಾವೃತ್ತಿಃ ಯತ್ಪ್ರಸಾದಾತ್ ಭವತೀತ್ಯರ್ಥಃ । ತಸ್ಮಾತ್ ಏತಾದೃಶೋ ವಾಯುರ್ದೇವಾನಾಮಪಿ ದೇವೋತ್ತಮಃ। ವಿಶಿಷ್ಟಃ ಸರ್ವೋತ್ಕೃಷ್ಟ ಇತ್ಯರ್ಥ॥

೩೦. ಕರ್ಣಪರ್ವ – ೮೩/೫೦

'ಪ್ರಾವೇಯಾಃ ಸಹಮೌನೇಯಾ; ಇತ್ಯತ್ರ ಪ್ರಾವೇಯಾಃ ಪ್ರಾವಾನಾಮ್ನ್ಯಾಃ ಕಶ್ಯಪಪತ್ನ್ಯಾಃ ಪುತ್ರಾಃ ಗಂಧರ್ವಾಃ। ಮೌನೇಯಾಃ ಮುನಿನಾಮ್ನ್ಯಾಃ ಕಶ್ಯಪ ಪತ್ನ್ಯಾಃ ಪುತ್ರಾಃ । ಇಲ್ಲಿ ಕಶ್ಯಪಪತ್ನಿಯರಾದ ಪ್ರಾವಾ ಹಾಗೂ ಮುನಿ ಎಂಬುವವರ ಮಕ್ಕಳನ್ನು ಪ್ರಾವೇಯ ಹಾಗೂ ಮೌನೇಯ ಎಂದು ಇಲ್ಲಿ ಹೇಳಲಾಗಿದೆ. ಪ್ರಾವಾಳ ಮಕ್ಕಳನ್ನು ಗಂಧರ್ವರೆಂದೂ ಹೇಳಲಾಗಿದೆ.

೩೧. ಶಲ್ಯಪರ್ವ – ೧/೩೨ರಲ್ಲಿ (ಸಂಜಯನ ಮಾತು – ಧೃತರಾಷ್ಟ್ರನಿಗೆ)

'ದುರ್ಯೋಧನ ಹತೋ ರಾಜನ್ ಯಥೋಕ್ತಂ ಪಾಂಡವೇನ ಹಿ' ಇತ್ಯತ್ರ ಭೀಮಸೇನೇನ ದ್ಯೂತಸಮಯೇ ಯಥಾ ಉಕ್ತಂ 'ದುರ್ಯೋಧನಸ್ಯ ಊರೂ ಭೇತ್ಸ್ಯೇ ಇತಿ ಯದುಕ್ತಂ ತಥೈವ ಹತ ಇತಿ ಯೋಜನಾ । ಭಗ್ನಸಕ್ಥಿರ್ಮಹಾರಾಜ' ಇತ್ಯತ್ರ ಭಗ್ನೇ ಸಕ್ಥಿನೀ ಯಸ್ಯ ಸಃ ಭಗ್ನಸಕ್ಥಿಃ। 'ಸಕ್ಥಿಕ್ಲೀಬೇ ಪುಮಾನೂರು' ಇತ್ಯಮರಃ।

೩೨. ಶಲ್ಯಪರ್ವ ೫/೨೧

'ಯಾವದ್ವೈರಸ್ಯ ಯಾತನಾ' ಇತ್ಯತ್ರ ಯಾತನಾ ಪ್ರಾಪಣಂ ಪಾರಗಮನಮಿತ್ಯರ್ಥಃ। ಯಾತನಾಶಬ್ದಕ್ಕೆ ಪ್ರಚಲಿತ ಅರ್ಥ ಬೇರೆ ಇದೆ. ಇಲ್ಲಿ ಸರಿಯಾದ ಅರ್ಥ 'ಹೊಂದುವುದು' ಎಂದು ಅರ್ಥೈಸಿದ್ದಾರೆ.

**೩೩. ಶಲ್ಯಪರ್ವ** ಅ. ೫/೨೨,೨೩, ಇದು ದುರ್ಯೋಧನನು ಕೃಪಾಚಾರ್ಯರಿಗೆ ಹೇಳಿದ ಮಾತು –

'ಇತಿ ವೈರಂ ಸಮುನ್ನದ್ಧಂ ನ ನಿರ್ವಾತಿ ಕಥಂಚನ' ಇತ್ಯತ್ರ ಇತಿ ಪೂರ್ವೋಕ್ತ ಪ್ರಕಾರೇಣ ಸಮುನ್ನದ್ಧಂ ವೈರಂ ಅಭಿಮನ್ಯೋರ್ವಿನಾಶೇನ ಕಥಂಚನ ಯೇನ ಕೇನಾಪಿ ಪ್ರಕಾರೇಣ ನ ನಿರ್ವಾತಿ ನಿರ್ವಾಣಂ ನಾಶಂ ನ ಗಚ್ಛತಿ। ಸ್ವಸೇವಾನಿರತ ಸುಭದ್ರಾಪುತ್ರನಾಶಸ್ಯ ದ್ರೌಪದ್ಯಾಃ ಸ್ವಪುತ್ರನಾಶಾದಪ್ಯಧಿಕ ದುಃಖಕರತ್ವಾತ್ ಅಭಿಮನ್ಯುನಾಶಾತ್ ಜಾತಂ ವೈರಂ ದ್ರೌಪದೀ ನ ವಿಸ್ಮರತ್ಯೇವ। ಅತಃ ಸಃ ಅಸ್ಯಾಃ ಪತಿಃ ಧರ್ಮರಾಜಃ। (ಸಂಧೇಯಃ ಕಥಂ ಇತಿಯೋಜನಾ)

**೩೪. ಶಲ್ಯಪರ್ವದ** ೮/೨೪ 'ತಸ್ಯ ಸೀತಾ' ಮಹಾರಾಜ ಇತ್ಯತ್ರ ಸೀತಾ ಸುವರ್ಣಫಲಿಕಾಯಾಂ ಲಾಂಗಲೇನ ಕೃತಾ ರೇಖಾ। 'ಸೀತಾಲಾಂಗಲಪದ್ಧತಿಃ' ಇತ್ಯಮರಃ।

**೩೫. ಗದಾಪರ್ವ** – ೩೧/೮ (ಇದು ಕೃಷ್ಣನ ಮಾತು – ಧರ್ಮರಾಜನಿಗೆ)

'ಕ್ರಿಯಾಭ್ಯುಪಾಯೈರ್ಬಹುಭಿಃ' ಇತ್ಯತ್ರ ಕ್ರಿಯಯಾ ಸಹಿತಾ ಅಭ್ಯುಪಾಯಾ; ಕ್ರಿಯಾಭ್ಯುಪಾಯಾಃ। ಕೇವಲಮುಪಾಯಚಿಂತಾಮಾತ್ರೇಣ ನ ಸ್ಥಾತವ್ಯಂ, ತದುಚಿತ ಕ್ರಿಯಾಶ್ಚ ಕರ್ತವ್ಯಾ ಇತಿಭಾವಃ॥

**೩೬. ಶಲ್ಯಪರ್ವ** –ಸಾರಸ್ವತಪರ್ವ ಅ. ೪೪/೩೨

'ಅರುಣಾಮಾನಯಾಮಾಸ' ಇತ್ಯತ್ರ ಅರುಣಾಂ ಗೋದಾವರೀಸಮೀಪಸ್ಥಾ ಅರುಣಾಖ್ಯಾಂ ನದೀಂ ಸ್ವಾಂ ತನುಂ ಆನಯಾಮಾಸ।

**'ಅರುಣಾವರುಣಯೋರ್ಮಧ್ಯೇ ಯತ್ರ ಪ್ರಾಚೀ ಸರಸ್ವತೀ।**
**ತತ್ರ ಸ್ನಾತ್ವಾ ಚ ಪೀತ್ವಾ ಚ ಬ್ರಹ್ಮಹತ್ಯಾಂ ವ್ಯಪೋಹತಿ॥**

ಇತಿ ವಚನಾತ್ ಅರುಣಾಸಂಗಮೇನೈವ ಸ್ವಸ್ಯಾಃ ಬ್ರಹ್ಮಹತ್ಯಾಪರಿಹಾರ ಶಕ್ತೇಃ ಪ್ರಸಿದ್ಧ-ತ್ವಾತ್ ಅತ್ರಾಪಿ ತಾಮಾನಯಾಮಾಸೇತಿ ಭಾವಃ।

**೩೭. ಶಲ್ಯಪರ್ವ**–ಸಾರಸ್ವತಪರ್ವ ೪೪/೩೯

'ಏವಂ ಸ ಕೃತ್ವಾ ಸಮಯಂ ಸೃಷ್ಟ್ವಾ ನೀಹಾರಮೀಶ್ವರಃ' ಇತ್ಯತ್ರ ನೀಹಾರಂ ಹಿಮಾನೀಮ್ । ಘನತರ ಹಿಮಸಂಪ್ಲವೇ ಸತಿ ಸೂರ್ಯಕಿರಣಪ್ರಚಾರಾಭಾವಾದಹೋಽಪಿ ನ ಭವತಿ; ತಮಸೋಽಭಾವಾದ್ರಾತ್ರಿರಪಿ ನ ಭವತೀತಿ ಭಾವಃ।

**೩೮. ಶಲ್ಯಪರ್ವ** ಅ. ೪೫/೩೭

'ತತೋಽಭವಚ್ಚತುರ್ಮೂರ್ತಿಃ' ಇತ್ಯತ್ರ ಏಕಃ ಪ್ರಾಗೇವ ವಿದ್ಯಮಾನಃ ಕುಮಾರಃ । ಶಾಖವಿಶಾಖ ನೈಗಮೇಷಾಖ್ಯಂ ತು ರೂಪತ್ರಯಂ ಪಶ್ಚಾದ್ಗೃಹೀತಮ್ । ಏವಂ ಚತುರ್ಮೂರ್ತಿರಿತಿಭಾವಃ।

**೩೯. ಶಲ್ಯ - ಗದಾಪರ್ವ** ೬೧/೨೦ (ಕೃಷ್ಣನು ಅರ್ಜುನನಿಗೆ ಹೇಳಿದ ಮಾತು)

'ಮದಧಿಷ್ಠಿತತ್ವಾತ್ ಸಮರೆ' ಇತ್ಯತ್ರ ಯುದ್ಧಕಾಲೇ ಮದಧಿಷ್ಠಿತತ್ವಾತ್, ಯುದ್ಧಾತ್ ಸ್ವಶಿಬಿರಂ ಪ್ರತಿ ಗತೇ ಸತಿ ದೈವಿಕ ಧ್ವಜೇನ ಹನುಮತಾ ಚ ಅಧಿಷ್ಠಿತತ್ವಾತ್ ಇತ್ಯಪಿ ಜ್ಞೇಯಮ್ । ಅತ ಏವ ದಾಹಸಮಯೇ ಕಪೇರ್ಧ್ವಜಸ್ಯ ಚಾಪಸರಣಂ ಕೃತಮ್ ॥

**೪೦. ಗದಾಯುದ್ಧಪರ್ವ** ೬೧/೩೯ (ಕೃಷ್ಣನು ಧರ್ಮರಾಜನಿಗೆ ಹೇಳಿದ ಮಾತು)

'ಮತ್ಸಮೋ ವಾ ವಿಶಿಷ್ಟೋ ವಾ' ಇತ್ಯತ್ರ ನರಾವೇಶಾತ್ ಮತ್ಸಮಃ, ಹರ್ಯಾವೇಶಾತ್ ಮದ್ವಿಶಿಷ್ಟಃ ಇತಿ ವಿವೇಕಃ।

**೪೧. ಗದಾಯುದ್ಧಪರ್ವ** ೬೧/೪೨,೪೩,೪೪

'ವಿಧಿನಾ ಮಹಿತಶ್ಚಾಸೌ' ಇತ್ಯತ್ರ ವಿಧಿನಾ ಗುರುರ್ಮಾನನೀಯ ಇತ್ಯಾದಿ ವಿಧಿವಾಕ್ಯೇನ ಮಹಿತಃ ಮಹತ್ವಂ ಪ್ರಾಪಿತಃ ಮಯಾ ಸಂಚೋದಿತೋಽಪಿ ಸನ್ ಬಲವತ್ತರಃ ಅಸೌ ಅರ್ಜುನಃ ಕೃತಾಂತಃ ಕೃತಃ ಅಂತಃ ನ ಹನ್ಮ್ಯೇವೇತಿ ನಿಶ್ಚಯೋ ಯೇನ ಸಃ । 'ಅಂತೋಽಸ್ತಿ ನಿಶ್ಚಯೇ ನಾಶೇ' ಇತ್ಯಮರಃ। ಹಂತುಂ ಮತಿಂ ನ ಚಕಾರೇತಿ ಯೋಜನಾ।

**೪೨.** ಕರ್ಣನು ಕುಂತಿಯ ಕನ್ಯಾವಸ್ಥೆಯಲ್ಲಿ ಜನಿಸಿದ್ದು ಆತನು ಸೂತನಿಂದ ಲಾಲಿಸಿದ ವಿಷಯಗಳನ್ನು ವಿಸ್ತಾರವಾಗಿ ಚರ್ಚಿಸಿ ಆತನು ಕ್ಷತ್ರಿಯನೂ ಹೌದು, ಸೂತನೂ ನಿಜ. ಆತನಿಗೆ ಸ್ವರ್ಗಲಾಭವೂ ಸಹಜವೆಂಬ ವಿಷಯವನ್ನು ಪ್ರತಿಪಾದಿಸಿದ್ದಾರೆ. ಲೇಖನದ ಇತಿಮಿತಿಗಾಗಿ ಇಲ್ಲಿ ಉಲ್ಲೇಖಿಸಲು ಆಗುತ್ತಿಲ್ಲ. ಶಾಂತಿಪರ್ವ - ರಾಜಧರ್ಮಪರ್ವ-ಅ. ೨/೪.

**೪೩ ಶಾಂತಿಪರ್ವ - ರಾಜಧರ್ಮಪರ್ವ** ೮/೨೫ (ಅರ್ಜುನನು ಧರ್ಮರಾಜನಿಗೆ ಹೇಳಿದ ಮಾತು)

'ಅವೇಕ್ಷಸ್ವ ಯಥಾನ್ಯಾಯಂ ಪಶ್ಯ ದೈವಾಸುರಂ ದೇವಾಸುರ ಸಂಬಂಧಿಕರ್ಮ, ಸ್ವಜ್ಯೇಷ್ಠದಾಯಾದಾನ್ ಅಸುರಾನ್ ಹತ್ವಾ ಕನಿಷ್ಠದಾಯಾದಾಃ ಸುರಾಃ ರಾಜ್ಯಮನುಭವಂತಿ ತದ್ ಯಥಾ ಯಥಾವತ್ ಪಶ್ಯ । ಯಥಾ ನ್ಯಾಯಂ ತನ್ನ್ಯಾಯಮನತಿಕ್ರಮ್ಯ ಅಪೇಕ್ಷಸ್ವ ಸ್ವಜ್ಞಾತಿವಧೇಽಪಿ ದೃಷ್ಟಿಂ ದಿಶೇತಿ ಯೋಜನಾ।

**೪೪. ಶಾಂತಿಪರ್ವ-ರಾಜಧರ್ಮಪರ್ವ** ೭೨/೨ (ರಾಜನಿಗೆ ೩೬ ಗುಣಗಳಿರಬೇಕೆಂದು ಭೀಷ್ಮರು ಹೇಳುತ್ತಾರೆ.)

'ಇಯಂ ಗುಣಾನಾಂ ಷಟ್‌ತ್ರಿಂಶೀ' ಇತ್ಯತ್ರ ಇಯಂ ವಕ್ಷ್ಯಮಾಣಾ ಗುಣಾನಾಂ ಷಟ್ ತ್ರಿಂಶೀ ಶಾಸ್ತ್ರೇಷು ವಿಹಿತಾ । ತೈಃ ಷಟ್‌ತ್ರಿಂಶತಾ ಗುಣೈರ್ಯುತಃ ಇತಿ ಸಂಬಂಧಃ । ಶ್ಲೋಕ

೩ ರಿಂದ ೧೧ ರವರೆಗೆ ೩೬ ಗುಣಗಳನ್ನು ಹೇಳಿ ಅವುಗಳಿದ್ದಾಗ ರಾಜನು ಶ್ರೇಯಸ್ಸನ್ನು ಸ್ವರ್ಗವನ್ನು ಹೊಂದುತ್ತಾನೆ ಎಂದು ಹೇಳುತ್ತಾರೆ.

**೪೫. ರಾಜಧರ್ಮಪರ್ವ** ಅ. ೭೭/೩೨

'ಯೇ ಹಿ ವೈದ್ಯಾ' ಇತ್ಯತ್ರ ವೈದ್ಯಾಃ ವಿದ್ಯಾವಂತಃ। ವೃತ್ತಿಃ ಜೀವನೋಪಾಯ ತದಭಾವಃ ಅವೃತ್ತಿಃ । ಪ್ರಾಪ್ಯ ತೃಪ್ತಾಃ ಪ್ರಾಪ್ಯಂ ಯದೃಚ್ಛಯಾ ಪ್ರಾಪ್ತಾಂ ಯೋಗ್ಯಂ ತೇನ ತೃಪ್ತಾಃ । ಇಲ್ಲಿ ವೈದ್ಯ ಶಬ್ದದ ರೂಢ್ಯರ್ಥ ಬೇರೆ ಇದೆ. ಅದನ್ನು ಯೌಗಿಕವಾಗಿ ವಿದ್ಯಾವಂತಃ ಎಂದು ಹೇಳಿರುವುದು ಸಂದರ್ಭೋಚಿತವಾದುದು – ಔಚಿತ್ಯಪೂರ್ಣವಾದುದು.

**೪೬. ರಾಜಧರ್ಮಪರ್ವ** ೭೯/೪

'ಯಸ್ಯ ಸ್ಮ ವಿಷಯ' ಇತ್ಯತ್ರ ಸ್ತೇನೋ ದ್ವಿಜಸ್ಯ ಯಸ್ಯ ವಿಷಯೇ ಭವತಿ ರಾಜ್ಞ ಏವಾಪರಾಧಂ ತಂ ಮನ್ಯಂತ ಇತಿ ಯೋಜನಾ।

(ಯಾವ ದೇಶದಲ್ಲಿ ಬ್ರಾಹ್ಮಣನು ಕಳ್ಳನಾಗಿರುತ್ತಾನೋ, ಅದಕ್ಕೆ ಕಾರಣ ರಾಜನೇ. ಅವನ ಅಪರಾಧದಿಂದಲೇ ಬ್ರಾಹ್ಮಣನು ಕಳ್ಳನಾಗುತ್ತಾನೆ. ಏಕೆಂದರೆ ರಾಜನು ಬ್ರಾಹ್ಮಣನು ಸರಿಯಾಗಿ ಬದುಕಲು ವ್ಯವಸ್ಥೆ ಕಲ್ಪಿಸಿಲ್ಲ ಆದ್ದರಿಂದ)

**೪೭. ಆಪದ್ಧರ್ಮಪರ್ವ** – ಶಾಂತಿಪರ್ವ – ಅ. ೧೦/೫೭

'ತ್ರಿವರ್ಗೇ ತ್ರಿವಿಧಾ ಪೀಡಾ' ಇತ್ಯತ್ರ ಅನಾರ್ಜನಂ, ಆರ್ಜಿತಸ್ಯ ಅರಕ್ಷಣಂ, ರಕ್ಷಿತಸ್ಯ ಚಾಂತೇ ವಿನಾಶನಮಿತಿ ತ್ರಿವಿಧಾ ಪೀಡಾ। ಆರ್ಜನಂ, ಅರ್ಜಿತಸ್ಯ ರಕ್ಷಣಂ, ರಕ್ಷಿತಸ್ಯ ಆಮರಣಾಂತಂ ಪರಿಪಾಲನಮಿತಿ ತ್ರಿವಿಧೋಽನುಬಂಧಃ।

**೪೮. ಆಪದ್ಧರ್ಮಪರ್ವ** – ಶಾಂತಿಪರ್ವ ೨೦/೨೩

'ನೈತತ್ಕಾರ್ಯಂ ಪುನರಿತಿ' ಇತ್ಯತ್ರ ಏತತ್ ಏತಾದೃಶಂ ಪಾಪಂ ಪುನಃ ನ ಕುರ್ಯಾಮಿತಿ ಮನ್ವಾನೋ ದ್ವಿತೀಯಾತ್ ಪಾಪಾತ್ ಪರಿಮುಚ್ಯತೇ । ಧರ್ಮಮೇವ ಚರಿಷ್ಯೇ ಇತಿ ಮನ್ವಾನಸ್ತು ತೃತೀಯಾತ್ ಪಾಪಾತ್ ಪರಿಮುಚ್ಯತೇ, ಪುನಃ ಪಾಪಂ ನ ಕರೋತ್ಯೇವ।

**೪೯. ಮೋಕ್ಷಧರ್ಮಪರ್ವ** – ಶಾಂತಿ ೧೧೩/೪ (ವೃತ್ರಗೀತೆ)

'ವಿಮುಕ್ತಾಃ ಸಪ್ತದಶಭಿಃ' ಇತ್ಯತ್ರ ಸಪ್ತದಶಭಿಃ ಬುದ್ಧ್ಯಾ ಸಹ ದ್ವಾದಶೇಂದ್ರಿಯೈಃ ಪಂಚಮಹಾಭೂತೈಶ್ಚೇತಿ ಸಪ್ತದಶಭಿಃ ಪಂಚಭಿಃ ಇಂದ್ರಿಯಾರ್ಥೈಃ ಗುಣೈಃ ರೂಪಾದಿಗುಣೈಃ, ಅಷ್ಟಭಿಃ ಧನಮದ, ಕುಲಮದ, ವಿದ್ಯಾಮದ, ಯೌವನಮದ, ಪ್ರಭುತ್ವಮದ, ಪರಿಜನಮದ, ಧರ್ಮವದ, ದಾನಮದ, ಇತ್ಯಷ್ಟಮದೈಃ ವಿಮುಕ್ತಾಃ।

೫೦. **ಆಶ್ವಮೇಧಿಕಪರ್ವ**ದ ಅನುಗೀತಾ ಉಪಪರ್ವದಲ್ಲಿ ಪಂಚಪ್ರಾಣಗಳಿಗಿಂತ ಮುಖ್ಯಪ್ರಾಣನ ಶ್ರೇಷ್ಠತ್ವ ಪ್ರತಿಪಾದಕ ಶ್ಲೋಕ.

ಏಕಃ ಸ್ಥಿರಶ್ಚರಾಶ್ಚಾನ್ಯೇ ..... । ಏಕವಚನಮವ್ಯೈವಾತ್ಮಾ ಇತ್ಯತ್ರ 'ವಾಯೋರೇವ ಬ್ರಹ್ಮಪದವೀಯೋಗ್ಯತ್ವಾತ್ ಏಕ ಏವ ಮಮ್ಯೈವ ಆತ್ಮಾ ಇತ್ಯುಕ್ತಮ್ । ಪಂಚರೂಪಾ ಅಪಿ ಭವಂತಃ ಏಕಃ ಮುಖ್ಯಪ್ರಾಣ ಏವ। ಸ ಚ ಮಮ್ಯೈವಾತ್ಮಾ ಬ್ರಹ್ಮೈವ। ಅತಃ ಕಲಹಃ ನ ಕರ್ತವ್ಯಃ ಇತ್ಯರ್ಥಃ ॥

ಕೃಪೆ: ತತ್ತ್ವಸಂಶೋಧನ ಸಂಸತ್, ಉಡುಪಿ, ಪಲಿಮಾರುಮಠದ ಮಹಾಭಾರತ ಸಂಸ್ಕೃತ ಮೂಲದಿಂದ ಸಂಗ್ರಹಿಸಲಾಗಿದೆ.

ವಿ.ಸೂ. : ಪುಟ ಸಂಖ್ಯೆ ಸಂಬಂಧಿಸಿದ ಮಹಾಭಾರತದಲ್ಲಿ ಬಂದಿರುವುದು.

*****

## ಪರಿಶಿಷ್ಟ-೮

### ಶ್ರೀಸ್ಕಂದಪುರಾಣೇ ಗುರುಸ್ತೋತ್ರಮ್

ಸಮಾಶ್ರಯೇದ್ಗುರುಂ ಭಕ್ತ್ಯಾ ಮಹಾವಿಶ್ವಾಸಪೂರ್ವಕಮ್ ।
ನಿಕ್ಷಿಪೇತ್ ಸರ್ವಭಾರಾಂಶ್ಚ ಗುರೋಃ ಶ್ರೀಪಾದಪಂಕಜೇ ॥ ೧ ॥

ಗುರೋರೇವ ಪರೋ ಧರ್ಮೋ ಗುರುರೇವ ಪರಾ ಗತಿಃ ।
ಗುರುರೇವ ಪರೋ ಬಂಧುರ್ಗುರುರ್ದೈವಂ ಪರಂ ಸ್ಮೃತಮ್ ॥ ೨ ॥

ಗುರುರೇವ ಮಹಾಪಾಪಂ ಕ್ಷಪಯೇದಾತ್ಮಭಾವತಃ ।
ಗುರುರ್ಗುರುರ್ಗುರುರಿತಿ ಜಪತೋ ನಾಸ್ತಿ ಪಾತಕಮ್ ॥ ೩ ॥

ತಸ್ಮಾದ್ಗುರುಪ್ರಸಾದಾರ್ಥಂ ಗುರುಮಂತ್ರಂ ಜಪೇತ್ಸದಾ।
ಶ್ರೀಗುರುಭ್ಯೋನಮಃ ಇತಿ ಗುರುಮಂತ್ರಂ ಜಪೇತ್ ಸದಾ ॥ ೪ ॥

ಗುರುಸ್ತ್ರಾತಾ ಗುರುಸ್ತ್ರಾತಾ ಗುರುಸ್ತ್ರಾತಾ ನ ಸಂಶಯಃ ।
ಇತಿ ಯಸ್ಯ ಮತಿಸ್ತಸ್ಯ ನಾಸ್ತಿ ನಾರಕದರ್ಶನಮ್ ॥ ೫ ॥

ಆಪಾದಮೌಲಿಪರ್ಯಂತಂ ಗುರೂಣಾಮಾಕೃತಿಂ ಸ್ಮರೇತ್ ।
ತೇನ ವಿಘ್ನಾಃ ಪ್ರಣಶ್ಯಂತಿ ಸಿದ್ಧ್ಯಂತಿ ಚ ಮನೋರಥಾಃ ॥ ೬ ॥

ಗುರುಭಕ್ತ್ಯಾ ವಿನಾಶಃ ಸ್ಯಾತ್ ದೋಷಸ್ಯಾಪಿ ಗರೀಯಸಃ ।
ಭವಿಷ್ಯತಿ ನವೇತ್ಯೇವಂ ಸಂದಿಗ್ಧೋ ನಿರಯಂ ವ್ರಜೇತ್ ॥ ೭ ॥

ಗುರುಪಾದಾಂಬುಜಂ ಧ್ಯಾಯೇದ್ ಗುರೋರ್ನಾಮ ಸದಾ ಜಪೇತ್ ।
ಗುರೋರ್ವಾರ್ತಾಂ ಚ ಕಥಯೇದ್ಗುರೋರನ್ಯಂ ನ ಭಾಷಯೇತ್ ॥ ೮ ॥

ಗುರುಪಾದೌ ಚ ಶಿರಸಾ ಮನಸಾ ವಚಸಾ ತಥಾ ।
ಯಃ ಸ್ಮರೇತ್ ಸತತಂ ಭಕ್ತ್ಯಾ ಸಂತುಷ್ಟಸ್ತಸ್ಯ ಕೇಶವಃ ॥ ೯ ॥

ಗುರುಸಂಸ್ಮರಣಂ ಕಾರ್ಯಂ ಸರ್ವದೈವ ಮುಮುಕ್ಷುಭಿಃ ।
ಉತ್ಥಾನೇ ಭೋಜನೇ ಸ್ನಾನೇ ಗ್ರಂಥಾರಂಭೇ ವಿಶೇಷತಃ ॥ ೧೦ ॥

ಗುರುಪ್ರಸಾದಾತ್ಸರ್ವೇಷ್ಟಸಿದ್ಧಿರ್ಭವತಿ ನಾಽನ್ಯಥಾ ।
ತಸ್ಮಾದ್ಗುರುಪ್ರಸಾದಾರ್ಥಂ ಯತೇತ ಮತಿಮಾನ್ ನರಃ ॥ ೧೧ ॥

ಗುರುಪ್ರಸಾದೋ ಬಲವಾನ್ ನ ತಸ್ಮಾದ್ಬಲವತ್ತರಃ ।
ಯದ್ಗುರುಃ ಸುಪ್ರಸನ್ನಃ ಸನ್ ದದ್ಯಾತ್ತನ್ನಾನ್ಯಥಾ ಭವೇತ್ ॥ ೧೨ ॥

ಶುಭಾನ್ ಧ್ಯಾಯಂತಿ ಯೇ ಕಾಮಾನ್ ಗುರುದೇವಪ್ರಸಾದಜಾನ್ ।
ಇತರಾನಾತ್ಮಪಾಪೋತ್ಥಾನ್ ತೇಷಾಂ ವಿದ್ಯಾ ಫಲಿಷ್ಯತಿ ॥ ೧೩ ॥

ಸ್ಮೃತ್ವಾ ಗುರುಂ ಪೂರ್ವಗುರುಮಾದಿಮೂಲಗುರೂಂಸ್ತಥಾ ।
ದೇವತಾಂ ವಾಸುದೇವಂ ಚ ವಿದ್ಯಾಭ್ಯಾಸಿ ತು ಸಿದ್ಧಿಭಾಕ್ ॥ ೧೪ ॥

ತಸ್ಮಾದ್ಗುರುಂ ಪ್ರಪದ್ಯೇತ ಜಿಜ್ಞಾಸುಃ ಶ್ರೇಯ ಉತ್ತಮಮ್ ।
ತತ್ರ ಭಾಗವತಾನ್ ಧರ್ಮಾಚ್ಛಿಕ್ಷೇದ್ಗುರ್ವಾತ್ಮದೈವತಃ ॥ ೧೫ ॥

ಅಮಾಯಯಾ ಚ ಸೇವಯಾ ತು ತುಷ್ಯೇದಾತ್ಮಾ ಯತೋ ಹರಿಃ ।
ಗುರೋಃ ಸೇವಾ ಗುರೋಃ ಸ್ತೋತ್ರಂ ಶಿಷ್ಯಕೃತ್ಯಂ ಪರಂ ಸ್ಮೃತಮ್ ॥ ೧೬ ॥

ದೋಷದೃಷ್ಟಿರನರ್ಥಾಯ ಉಮಾಮಾಹ ಸದಾಶಿವಃ ।
ಅಹೋಭಾಗ್ಯಮಹೋಭಾಗ್ಯಂ ಮಧ್ವಮಾರ್ಗಾನುವರ್ತಿನಾಮ್ ॥ ೧೭ ॥

ದೇವೋ ರಮಾಪತಿರ್ಯೇಷಾಂ ಯದ್ಗುರುರ್ಭಾರತೀಪತಿಃ ।
ಅಹೋಭಾಗ್ಯಮಹೋಭಾಗ್ಯಂ ಗುರುಪಾದಾನುವರ್ತಿನಾಮ್ ॥ ೧೮ ॥

ಐಹಿಕಾಮುಷ್ಮಿಕಂ ಸೌಖ್ಯಂ ವರ್ಧತೇ ಯದನುಗ್ರಹಾತ್ ।
ಅಹೋದೌರ್ಭಾಗ್ಯಮತುಲಂ ವಿಮುಖಾನಾಂ ಹರೌ ಗುರೌ ॥ ೧೯ ॥

ಐಹಿಕಂ ಹ್ರಸತೇ ಸೌಖ್ಯಂ ದುಃಖಂ ನಾರಕಮಶ್ನುತೇ ।
ಸರ್ವಧರ್ಮಾನ್ ಪರಿತ್ಯಜ್ಯ ಗುರುಧರ್ಮಾನ್ ಸಮಾಚರೇತ್ ॥ ೨೦ ॥

ನ ಗುರೋರಧಿಕಂ ಕಿಂಚಿತ್ ಪುರುಷಾರ್ಥಚತುಷ್ಟಯೇ ।
ಸಾಧನಂ ವಿದ್ಯತೇ ದೇವೀ ಗುರೋರಾಜ್ಞಾಂ ನ ಲಂಘಯೇತ್ ॥ ೨೧ ॥

ಪಿತಾ ಮಾತಾ ತಥಾ ಭ್ರಾತಾ ಸರ್ವ ಸಂಸಾರಹೇತವಃ ।
ಗುರುರೇಕಃ ಸದಾ ಸೇವ್ಯೋ ಸಂಸಾರೋದ್ಧಾರಣಕ್ಷಮಃ ॥ ೨೨ ॥

ಗುರುಭಕ್ತಃ ಸದಾ ಸೇವ್ಯೋ ಗುರುಭಕ್ತಸ್ಯ ದರ್ಶನೇ ।
ಮನೋ ಮೇ ದ್ರವತೇ ದೇವಿ ಕದಾ ದ್ರಕ್ಷ್ಯೇ ಯೇ ಗುರುಪ್ರಿಯಮ್ ॥ ೨೩ ॥

ಸರ್ವಧರ್ಮಾಃ ಕೃತಾಸ್ತೇನ ಸರ್ವತೀರ್ಥಾನಿ ತೇನ ಚ ।
ಯಸ್ಯ ಸ್ಯಾದ್ಗುರುವಾಕ್ಯೇಷು ಭಕ್ತಿಃ ಸರ್ವೋತ್ತಮೋತ್ತಮಾ ॥ ೨೪ ॥

ಯದ್ಯತ್ ಸುಕೃತಜಂ ಪುಣ್ಯಂ ತತ್ಸರ್ವಂ ಗುರವೇಽರ್ಪಯೇತ್ ।
ತೇನ ತತ್ಸಫಲಂ ಪ್ರೋಕ್ತಮನ್ಯಥಾ ನಿಷ್ಫಲಂ ಭವೇತ್ ॥ ೨೫ ॥

॥ ಇತಿ ಶ್ರೀಸ್ಕಂದಪುರಾಣೇ ಗುರುಸ್ತೋತ್ರಮ್ ॥

*****

## ಪರಿಶಿಷ್ಟ-೯

# ದ್ರೌಪದೀ ಪಂಚಪತಿತ್ವವಿಚಾರ (ಮ.ತಾ.ನಿ.)

ದ್ರೌಪದೀ ಪಂಚಪತಿತ್ವ ವಿಚಾರವನ್ನು ಸಮಗ್ರವಾಗಿ ಆಚಾರ್ಯರು ತಮ್ಮ ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಹೀಗೆ ಸಂಗ್ರಹಿಸಿದ್ದಾರೆ.

**ಪೂರ್ವಂ ಹ್ಯುಮಾ ಚ ದೇವ್ಯಸ್ತಾಃ ಕದಾಚಿದ್ ಭರ್ತೃಭಿರ್ಯುತಾಃ ।**
**ವಿಲಾಸಂ ದರ್ಶಯಾಮಾಸುರ್ಬ್ರಹ್ಮಣಃ ಪಶ್ಯತೋಽಧಿಕಮ್ ॥**
**ಶಶಾಪ ತಾಸ್ತದಾ ಬ್ರಹ್ಮಾ ಮಾನುಷೀಂ ಯೋನಿಮಾಪ್ಸ್ಯಥ ।**
**ತತ್ರಾನ್ಯಗಾಶ್ಚಭವತೇತ್ಯೇವಂ ಶಪ್ತಾಃ ಸುರಾಂಗನಾಃ ॥**
**ವಿಚಾರ್ಯ ಭಾರತೀಮೇತ್ಯ ಸರ್ವಮಸ್ಯೈ ನಿವೇದ್ಯ ಚ ।**
**ಸಹಸ್ರವತ್ಸರಂ ಚೈನಾಂ ಶುಶ್ರೂಷಿತ್ವಾ ಬಭಾಷಿರೇ ॥**

(ಕೃಪೆ: ಅ.ಭಾ.ಮಾ.ಮ.ಮಂಡಲ, ಬೆಂಗಳೂರು ಇವರ ಪ್ರಕಾಶನ ಮಹಾಭಾರತ-ತಾತರ್ಯನಿರ್ಣಯ ಅ- ೧೮ ರಿಂದ ಉದ್ಧೃತ)

ದ್ರೌಪದಿ ಪಾರ್ವತಿಯ ಅಂಶದಿಂದಲೂ ಯುಕ್ತಳಾಗಿದ್ದಳು. ಬಲಿ ಚೆನ್ನಾಗಿ ಸಕಲ ಲಕ್ಷಣಗಳಿಂದ ಯುಕ್ತಳೂ ಆಗಿದ್ದಳು. ಹಿಂದೆ ಪಾರ್ವತಿಯೂ ಶಚೀ ಮುಂತಾದ ದೇವಿಯರೂ ಒಮ್ಮೆ ಬ್ರಹ್ಮನು ನೋಡುತ್ತಿದ್ದಂತೆಯೇ ತಮ್ಮ ಪತಿಗಳೊಡನೆ ಬಹಳ ವಿಲಾಸವನ್ನು ಪ್ರದರ್ಶಿಸಿದರು. ಬ್ರಹ್ಮ ಅವರನ್ನು 'ಮನುಷ್ಯ ಜನ್ಮ ಹೊಂದಿರಿ. ಮನುಷ್ಯ ಜನ್ಮದಲ್ಲಿ ನಿಮಗೆ ಪರಪುರುಷ ಸ್ಪರ್ಶವಾಗಲಿ' ಎಂದು ಶಪಿಸಿದ. ಹೀಗೆ ಶಪ್ತರಾದ ದೇವಾಂಗನೆಯರು ವಿಚಾರ ಮಾಡಿ ಭಾರತೀದೇವಿಯ ಬಳಿಗೆ ಬಂದು ಎಲ್ಲವನ್ನೂ ಹೇಳಿಕೊಂಡು ಸಾವಿರವರ್ಷಕಾಲ ಸೇವೆ ಮಾಡಿ ಹೇಳಿದರು.

**ದೇವಿ ನೋ ಮಾನುಷಂ ಪ್ರಾಪ್ಯಮನ್ಯಗಾತ್ವಂ ಚ ಸರ್ವಥಾ ।**
**ತತ್ರಾಪಿ ಮಾರುತಾದನ್ಯಂ ನ ಸ್ಪೃಶೇಮ ಕಥಂಚನ ॥**

ದೇವೀ! ನಮಗೆ ಮನುಷ್ಯ ಜನ್ಮ ಬರಲಿದೆ. ಪರಪುರುಷಸ್ಪರ್ಶವೂ ಅಪರಿಹಾರ್ಯವಾಗಿ ಉಂಟಾಗಲಿದೆ. ಆಗಲೂ ವಾಯುವಿಗಿಂತ ಬೇರೆಯವರನ್ನು ಯಾವ ರೀತಿಯಿಂದಲೂ ಸ್ಪರ್ಶಿಸಲಾರೆವು.

**ಪಂಚದ್ರೌಪದೀ ಜನ್ಮಾಂತರಗಳು**

**ಬ್ರಹ್ಮಣೈವ ಚ ಶಪ್ತಾಃ ಸ್ಮಃ ಪೂರ್ವಂ ಚಾನ್ಯತ್ರ ಲೀಲಯಾ ।**
**ಏಕದೇಹತ್ವಮಾಪ್ಯೈನಂ ಯದಾ ವಂಚಯಿತುಂ ಗತಾಃ ॥**

ಹಿಂದೆ ಇನ್ನೊಂದು ಸಂದರ್ಭದಲ್ಲಿ ನಾವು ವಿನೋದದಿಂದ ಒಂದೇ ದೇಹದಲ್ಲಿ ಜೊತೆಗಿದ್ದು ಬ್ರಹ್ಮನನ್ನು ವಂಚಿಸಲು ಹೋದಾಗ ಅವನಿಂದ ಶಪ್ತರಾದೆವು.

**ಏಕದೇಹಾ ಮಾನುಷತ್ವಮಾಪ್ಸ್ಯಥ ತ್ರಿಶ ಉದ್ಧತಾಃ ।**
**ತ್ರಿಶೋ ಮದ್ವಂಚನಾಯೇತಾ ಇತಿ ತೇನೋದಿತಾ ವಯಮ್ ॥**

ಉದ್ಧತರಾಗಿ ನಾವು ಮೂರು ಬಾರಿ ನನ್ನನ್ನು ವಂಚಿಸಲು ಬಂದಿರಿ. ಆದರಿಂದ ಮೂರು ಬಾರಿ ಒಂದೇ ದೇಹದಲ್ಲಿ ಮನುಷ್ಯ ಜನ್ಮ ಪಡೆಯಿರಿ ಹೀಗೆ ಬ್ರಹ್ಮ ನಮಗೆ ಶಾಪ ನೀಡಿದ್ದಾರೆ.

**ಅತಸ್ತ್ವಯ್ಯೈಕ ದೇಹತ್ವಮಿಚ್ಛಾಮೋ ದೇವಿ ಜನ್ಮಸು ।**
**ಚತುರ್ಷ್ವಪಿ ಯತೋऽಸ್ಮಾಕಂ ಶಾಪದ್ವಯ ನಿಮಿತ್ತತಃ ॥**
**ಚತುರ್ಜನ್ಮ ಭವೇದ್ಭೂಮೌ ತ್ವಾಂ ನಾನ್ಯೋ ಮಾರುತಾದ್ ವ್ರಜೇತ್ ।**
**ನಿಯಮೋऽಯಂ ಹರೇರ್ಯಸ್ಮಾದನಾದಿರ್ನಿತ್ಯ ಏವ ಚ ॥**

ನಮಗೆ ಬ್ರಹ್ಮನ ಎರಡು ಶಾಪಗಳಿರುವುದರಿಂದ ನಾಲ್ಕು ಜನ್ಮಗಳು ಭೂಮಿಯಲ್ಲಿ ಸಂಭವಿಸುವ ಪ್ರಯುಕ್ತ ನಾಲ್ಕು ಜನ್ಮಗಳಲ್ಲಿಯೂ ನಿನ್ನ ಜೊತೆಗೇ ಒಂದು ದೇಹದಲ್ಲಿ ಜನಿಸಲು ನಾವು ಬಯಸುವೆವು. ಏಕೆಂದರೆ ನಿನ್ನನ್ನು ವಾಯುವಿಗಿಂತ ಬೇರೆ ಯಾರೂ ಹೊಂದಲಾರ. ಇದು ಹರಿ ಮಾಡಿರುವ ಅನಾದಿನಿತ್ಯವಾದ ನಿಯಮ.

**ಅತಸ್ತ್ವಯ್ಯೈಕದೇಹಾ ನೋ ನಾನ್ಯ ಆಪ್ನೋತಿ ಮಾರುತಾತ್ ।**
**ಇತೀರಿತೇ ತಥೇತ್ಯುಕ್ತ್ವಾ ಪಾರ್ವತ್ಯಾದಿ ಯುತೈವ ಸಾ ।**
**ವಿಪ್ರಕನ್ಯಾऽಭವತ್ ತತ್ರ ಚತಸ್ರಃ ಪಾರ್ವತೀಯುತಾಃ ॥**
**ಏಕದೇಹಸ್ಥಿತಾಶ್ಚಕ್ರುರ್ಗಿರೀಶಾಯ ತಪೋ ಮಹತ್ ।**
**ತದ್ದೇಹಸ್ಥಾ ಭಾರತೀ ತು ರುದ್ರದೇಹಸ್ಥಿತಂ ಹರಿಮ್ ॥**
**ತೋಷಯಾಮಾಸ ತಪಸಾ ಕರ್ಮೈಕ್ಯಾರ್ಥಂ ಧೃತವ್ರತಾ ॥**

ಆದರಿಂದ ನಿನ್ನ ಜೊತೆಗೆ ನಾವು ಏಕದೇಹಿಗಳಾದರೆ ವಾಯು ಹೊರತು ಇನ್ನಾರೂ ನಮ್ಮನ್ನು ಹೊಂದಲಾರ. ಹೀಗೆ ದೇವಿಯು ಹೇಳಿದಾಗ ಹಾಗೆ ಆಗಲಿ ಎಂದು ಹೇಳಿ ಭಾರತೀದೇವಿ ಪಾರ್ವತಿ ಮುಂತಾದವರಿಂದ ಯುಕ್ತಳಾಗಿಯೇ ಒಬ್ಬ ಬ್ರಾಹ್ಮಣನ ಮಗಳಾಗಿ ಜನಿಸಿದಳು. ಆ ಜನ್ಮದಲ್ಲಿ ಪಾರ್ವತಿ ಮುಂತಾದ ನಾಲ್ವರು ದೇವಿಯರು ಏಕದೇಹಿಗಳಾಗಿ ಶಿವನನ್ನು ಒಲಿಸಲು ದೊಡ್ಡ ತಪಸ್ಸನ್ನು ಮಾಡಿದರು. ಕರ್ಮೈಕ್ಯಕ್ಕಾಗಿ ಆ ದೇಹದಲ್ಲಿದ್ದ ಭಾರತಿಯೂ ವ್ರತನಿಷ್ಠಳಾಗಿ ಶಿವನ ಶರೀರದಲ್ಲಿದ್ದ ಹರಿಯನ್ನು ಒಲಿಸಿಕೊಂಡಳು.

**ತಸ್ಯೈ ಸ ರುದ್ರದೇಹಸ್ಥೋ ಹರಿಃ ಪ್ರಾದಾದ್ ವರಂ ಪ್ರಭುಃ ।**
**ಅನಂತತೋಷಣಂ ವಿಷ್ಣೋಃ ಸ್ವಭರ್ತ್ರಾ ಸಹ ಜನ್ಮಸು ॥**

**ಸರ್ವೇಷ್ವಪೀತಿ ಚಾನ್ಯಾಸಾಂ ದದೌ ಶಂಕರ ಏವ ಚ ।**
**ವರಂ ಸ್ವಭರ್ತೃಸಂಯೋಗಂ ಮಾನುಷೇಷ್ವಪಿ ಜನ್ಮಸು ॥**

ಭಾರತಿಗೆ ರುದ್ರದೇಹಸ್ಥನಾದ ಹರಿ ವರವನ್ನಿತ್ತ 'ಎಲ್ಲ ಜನ್ಮಗಳಲ್ಲಿಯೂ ನೀನು ನಿನ್ನ ಪತಿಯೊಂದಿಗೆ ನನ್ನನ್ನು ಬಹಳ ತೃಪ್ತಿಪಡಿಸುವಿ' ಎಂದು. ಬೇರೆ ದೇವಿಯರಿಗೆ ಶಿವನೆ ಮನುಷ್ಯ ಜನ್ಮಗಳ ಪೈಕಿ ಒಂದರಲ್ಲಿ ತಮ್ಮ ಪತಿಗಳ ಸಮಾಗಮದ ವರವನ್ನಿತ್ತ.

**ತತಸ್ತದೈವ ದೇಹಂ ತಾ ವಿಸೃಜ್ಯ ನಲನಂದಿನೀ ।**
**ಬಭೂವುರಿಂದ್ರಸೇನೇತಿ ದೇಹೈಕ್ಯೇನ ಸುಸಂಗತಾಃ ॥**

ಬಳಿಕ ಬೇಗನೆ ಆ ದೇವಿಯರು ವಿಪ್ರಕನ್ಯಾಶರೀರವನ್ನು ತೊರೆದು, ಏಕದೇಹಿಗಳಾಗಿಯೇ ನಲಮಹಾರಾಜನ ಕುಮಾರಿಯಾಗಿ ಜನಿಸಿದರು. ಬಳಿಕ ಅ ಶರೀರವನ್ನೂ ತೊರೆದು ಏಕದೇಹರಾಗಿ ಇಂದ್ರಸೇನೆ ಎಂಬ ಹೆಸರಿನವರಾಗಿಯೂ ಜನಿಸಿದರು.

**ತದಾಽಽಸಿನ್ಮುದ್ಗಲೋ ನಾಮ ಮುನಿಸ್ತಪಸಿ ಸಂಸ್ಥಿತಃ ।**
**ಚಕಮೇ ಪುತ್ರಿಕಾಂ ಬ್ರಹ್ಮೇತ್ಯಶೃಣೋತ್ ಸ ಕಥಾಂತರೇ ॥**

ಆಗ ಮುದ್ಗಲನೆಂಬ ಮುನಿ ತಪಸ್ಸು ಮಾಡುತ್ತಿದ್ದ. ಅವನು ಬ್ರಹ್ಮನು ತನ್ನ ಮಗಳನ್ನು ಮೋಹಿಸಿದನೆಂದು ಒಂದು ಕಥೆಯನ್ನು ಕೇಳಿದ.

**ಅಪಾಹಸತ್ ಸೋಽಬ್ಜಯೋನಿಂ ಶಶಾಪೈನಂ ಚತುರ್ಮುಖಃ ।**
**ಭಾರತ್ಯಾದ್ಯಾಃ ಪಂಚ ದೇವೀರ್ಗಚ್ಛ ಮಾನಿನ್ನಭೂತಯೇ ॥**

ಮುದ್ಗಲ ಬ್ರಹ್ಮನನ್ನು ಅಪಹಾಸಗೈದ. ಅದರಿಂದ ಬ್ರಹ್ಮ ಅವನಿಗೆ 'ಅಹಂಕಾರಿಯೇ ನೀನು ಭಾರತೀ ಮುಂತಾದ ಐದು ಮಂದಿ ದೇವಿಯರ ಸಂಗ ಮಾಡು. ಅದು ನರಕಾದಿ ಅನರ್ಥಸಾಧನ' ಎಂದು ಶಾಪ ನೀಡಿದ್ದ.

**ಇತೀರಿತಸ್ತಂ ತಪಸಾ ತೋಷಯಾಮಾಸ ಮುದ್ಗಲಃ ।**
**ಶಾಪಾನುಗ್ರಹಮಸ್ಯಾಥ ಚಕ್ರೇ ಕಂಜಸಮುದ್ಭವಃ ॥**

ಹೀಗೆ ಶಾಪ ಪಡೆದ ಮುದ್ಗಲ ತಪಸ್ಸಿನಿಂದ ಬ್ರಹ್ಮನನ್ನು ಒಲಿಸಿಕೊಂಡ ಅದರಿಂದ ಬ್ರಹ್ಮ ಅವನಿಗೆ ಶಾಪಕ್ಕೆ ಪ್ರತಿಯಾಗಿ ಅನುಗ್ರಹ ಮಾಡಿದ.

**ನ ತ್ವಂ ಯಾಸ್ಯಸಿ ತಾ ದೇವೀರ್ಮಾರುತಸ್ತ್ವಚ್ಛರೀರಗಃ ।**
**ಯಾಸ್ಯತಿ ತ್ವಂ ತದಾ ಮೂರ್ಛಾಂ ಗತೋ ನೈವ ವಿಬುಧ್ಯಸೇ ॥**

ನೀನು ಆ ದೇವಿಯರ ಸಂಗ ಮಾಡುವುದಿಲ್ಲ. ನಿನ್ನ ಶರೀರದಲ್ಲಿದ್ದು ವಾಯು ಇಂದ್ರಸೇನೆಯ ಸಂಗ ಮಾಡುತ್ತಾನೆ. ನೀನು ಆಗ ಮೂರ್ಛೆ ಹೊಂದಿರುತ್ತಿ. ನಿನಗೇನೂ ತಿಳಿಯುವುದಿಲ್ಲ.

**ನ ಚ ಪಾಪಂ ತತಸ್ತೇ ಸ್ಯಾದಿತ್ಯುಕ್ತೇ ಚೈನಮಾವಿಶತ್ ।**
**ಮಾರುತೋಽಥೇಂದ್ರಸೇನಾಂ ಚ ಗೃಹೀತ್ವಾಽಥಾಭವದ್ ಗೃಹೀ ॥**

ಆದರಿಂದ ನಿನಗೆ ಶಾಪ ಬರಲಾರದು ಎಂದು ಬ್ರಹ್ಮ ಮುದ್ಗಲನಿಗೆ ಅನುಗ್ರಹಿಸಿದಾಗ ವಾಯು ಮುದ್ಗಲನನ್ನು ಪ್ರವೇಶಿಸಿದ. ಬಳಿಕ ಇಂದ್ರಸೇನೆಯನ್ನು ಮದುವೆಯಾಗಿ ಗೃಹಸ್ಥನಾದ.

**ರೇಮೇ ಚ ಸ ತಯಾ ಸಾರ್ಧಂ ದೀರ್ಘಕಾಲಂ ಜಗತ್ಪ್ರಭುಃ ।**
**ತತೋ ಮುದ್ಗಲಮುದ್ಬೋಧ್ಯ ಯಯೌ ಚ ಸ್ವಂ ನಿಕೇತನಮ್ ॥**

ಜಗದೊಡೆಯನಾದ ವಾಯು ದೀರ್ಘಕಾಲ ಇಂದ್ರಸೇನೆಯೊಡನೆ ವಿಹರಿಸಿ, ಮುದ್ಗಲನನ್ನು ಎಚ್ಚರಿಸಿ, ತನ್ನ ಲೋಕಕ್ಕೆ ತೆರಳಿದ.

**ಬ್ರಹ್ಮಶಾಪ- ಶಿವವರ**

**ತತೋ ದೇಶಾಂತರಂ ಗತ್ವಾ ತಪಶ್ಚಕ್ರೇ ಸ ಮುದ್ಗಲಃ ।**
**ಸೇಂದ್ರಸೇನಾ ವಿಯುಕ್ತಾಥ ಭರ್ತ್ರಾ ಚಕ್ರೇ ಮಹತ್ತಪಃ ॥**

ಬಳಿಕ ಮುದ್ಗಲ ದೇಶಾಂತರಕ್ಕೆ ಹೋಗಿ ತಪಸ್ಸು ಮಾಡಿದ. ಇಂದ್ರಸೇನೆ ಪತಿಯಿಂದ ವಿಯುಕ್ತಳಾಗಿ ಮಹಾತಪಸ್ಸನ್ನಾಚರಿಸಿದಳು.

**ತದ್ದೇಹಗಾ ಭಾರತೀ ತು ಕೇಶವಂ ಶಂಕರೇ ಸ್ಥಿತಮ್ ।**
**ತೋಷಯಾಮಾಸ ತಪಸಾ ಕರ್ಮೈಕ್ಯಾರ್ಥಂ ಹಿ ಪೂರ್ವವತ್ ॥**

ಇಂದ್ರಸೇನೆಯ ಶರೀರದಲ್ಲಿದ್ದ ಭಾರತಿ ಶಿವನಲ್ಲಿ ಅಂತರ್ಗತನಾದ ಹರಿಯನ್ನು ತಪಸ್ಸಿನಿಂದ ಒಲಿಸಿಕೊಂಡಳು. ಇದು ಹಿಂದಿನಂತೆಯೇ ಕರ್ಮೈಕ್ಯಕ್ಕಾಗಿ.

**ಉಮಾದ್ಯಾ ರೌದ್ರಮೇವಾತ್ರ ತಪಶ್ಚಕ್ರುರ್ಯಥಾ ಪುರಾ ।**
**ಪ್ರತ್ಯಕ್ಷೇ ಚ ಶಿವೇ ಜಾತೇ ತದ್ದೇಹಸ್ಥೇ ಚ ಕೇಶವೇ ॥**
**ಪೃಥಕ್ ಪೃಥಕ್ ಸ್ವಭರ್ತ್ರಾಸ್ತ್ಯೈ ತಾಃ ಪಂಚಾಪ್ಯೇಕದೇಹಗಾಃ ।**
**ಪ್ರಾರ್ಥಯಾಮಾಸುರ ಭವತ್ ಪಂಚಕೃತ್ವೋ ವಚೋ ಹಿ ತತ್ ॥**

ಪಾರ್ವತಿ ಮುಂತಾದ ದೇವಿಯರು ಹಿಂದನಂತೆಯೇ ಶಿವನನ್ನು ಕುರಿತು ತಪಸ್ಸು ಮಾಡಿದರು. ವಟು ರೂಪದಿಂದ ಶಿವನೂ ಅವನೊಳಗಿನ ಹರಿಯೂ ಪ್ರತ್ಯಕ್ಷನಾದಾಗ ಒಂದೇ ಶರೀರದಲ್ಲಿದ್ದ ಐದು ದೇವಿಯರೂ ತಮ್ಮ ಪತಿಗಳನ್ನು ಹೊಂದುವುದಕ್ಕೆ ಬೇರೆಬೇರೆಯಾಗಿ ವರವನ್ನು ಬೇಡಿದರು. ಆದರಿಂದ ವರವನ್ನು ಬೇಡುವ ಮಾತು ಐದು ಬಾರಿ ಕೇಳಿಸಿತು.

**ಶಿವದೇಹಸ್ಥಿತೋ ವಿಷ್ಣುರ್ಭಾರತ್ಯೈ ತು ದದೌ ಪತಿಮ್ ।**
**ಅನ್ಯಾಸಾಂ ಶಿವ ಏವಾಥ ಪ್ರದದೌ ಚತುರಃ ಪತೀನ್ ॥**

ಶಿವದೇಹಾಂತರ್ಗತನಾದ ವಿಷ್ಣು ಭಾರತಿಗೆ ಪತಿಪ್ರಾಪ್ತಿ ವರ ನೀಡಿದ. ಬೇರೆ ದೇವಿಯರಿಗೆ ಶಿವನೇ ನಾಲ್ಕು ಪತಿಗಳನ್ನು ವರವಾಗಿ ಇತ್ತ.

**ದೇವ್ಯಶ್ಚತಸ್ರಸ್ತು ತದಾ ದತ್ತಮಾತ್ರೇ ವರೇಽಮುನಾ ।**
**ದೇವಾನಾಮವತಾರಾರ್ಥಂ ಪಂಚದೇವ್ಯಃ ಸ್ಮ ಇತ್ಯಥ ॥**

**ನಾಜಾನನ್ನೇಕದೇಹತ್ವಾಚ್ಚಿದ್ಯೋಗಾತ್ ಕ್ಷೀರ ನೀರವತ್ ।**
**ತಾಃ ಶ್ರುತ್ವಾ ಸ್ವಪತಿಂ ದೇವಿ ನ ಚಿರಾತ್ ಪ್ರಾಪ್ಸ್ಯಸೀತಿ ಚ ॥**

**ವಿಷ್ಣೂಕ್ತಂ ಶಂಕರೋಕ್ತಂ ಚ ಚತ್ವಾರಃ ಪತಯಃ ಪೃಥಕ್ ।**
**ಭವಿಷ್ಯಂತೀತ್ಯಥೈಕಸ್ಯಾಂ ಮೇನಿರೇ ಪಂಚ ಭರ್ತೃತಾಮ್ ॥**

ಶಿವನೂ, ವಿಷ್ಣುವೂ ವರವನ್ನು ಕೊಟ್ಟಾಗ ದೇವಿಯರು ತಾವು ದೇವತೆಗಳ ಅವತಾರಕ್ಕಾಗಿ ಹುಟ್ಟಿದ ಬೇರೆ ಬೇರೆ ಐದು ಮಂದಿ ದೇವಿಯರೆಂಬುದನ್ನು ಮರೆತಿದ್ದರು. ಏಕೆಂದರೆ ಒಂದೇ ದೇಹದಲ್ಲಿ ಹಾಲು ನೀರುಗಳಂತೆ ಆ ಚೇತನರು ಒಂದಾಗಿ ಬೆರೆತಿದ್ದರು. 'ದೇವಿ ನೀನು ನಿನ್ನ ಪತಿಯನ್ನು ಬೇಗನೇ ಪಡೆಯುವಿ. ಎಂದು ಒಮ್ಮೆ ವಿಷ್ಣು ಹೇಳಿದ್ದನ್ನೂ ನಾಲ್ಕು ಬಾರಿ ಶಿವ ಹೇಳಿದ್ದನ್ನೂ ಕೇಳಿ ನಾಲ್ಕು ಮಂದಿ ಪತಿಗಳು ಬೇರೆ ಸಿಗುವರು. ಬೇರೆ ಬೇರಯಾಗಿ ಒಬ್ಬಳಿಗೇ ಐದು ಮಂದಿ ಪತಿಗಳೆಂದು ತಪ್ಪಾಗಿ ತಿಳಿದರು.

**ಪಂಚೇಂದ್ರೋಪಾಖ್ಯಾನ**

**ರುರುದುಶ್ಚೈಕದೇಹಸ್ಥಾ ಏಕೈವಾಹಮಿತಿ ಸ್ಥಿತಾಃ ।**
**ಅಥಾಪ್ಯಗಾನ್ಮಹೇಂದ್ರೋಽತ್ರ ಸೋಽಬ್ರವೀತ್ ತಾಂ ವರಸ್ತ್ರಿಯನ್ ॥**
**ಕಿಮರ್ಥಂ ರೋದಿಷೀತ್ಯೇವ ಸಾಬ್ರವೀದ್ ವಟುರೂಪಿಣಮ್ ।**
**ಶಂಕರಂ ದರ್ಶಯಿತ್ವೈವ ಪಂಚಭರ್ತೃತ್ವಮೇಷ ಮೇ ॥**
**ವರಾರ್ಥಮರ್ಥಿತಃ ಪ್ರಾದಾದಿತಿ ತಂ ಶಿವ ಇತ್ಯಥ ।**
**ಅಜಾನನ್ ಶಕ್ರ ಆಹೋಚ್ಚೈಃ ಕಿಮೇತದ್ ಭುವನತ್ರಯೇ ॥**
**ಮತ್ಪಾಲಿತೇ ಯೋಷಿತಂ ತವಂ ವೃಥಾ ಶಪಸಿ ದುರ್ಮತೇ ॥**

ಒಂದು ದೇಹದಲ್ಲಿರುವ ದೇವಿಯರು 'ನಾನೊಬ್ಬಳೆ' ಎಂದು ತಿಳಿದು ಅತ್ತರು. ಆಗ ದೇವೇಂದ್ರ ಅಲ್ಲಿಗೆ ಬಂದ. 'ಏಕೆ ಅಳುವೆ?' ಎಂದು ಆ ಉತ್ತಮ ಸ್ತ್ರೀಯನ್ನು ಕೇಳಿದ. ಅವಳು ವಟುರೂಪಿ ಶಿವನನ್ನು ತೋರಿಸಿ ಹೇಳಿದಳು. 'ಪತಿಪ್ರಾಪ್ತಿಗಾಗಿ ನಾನು ಬೇಡಿದಾಗ ಇವನು ನನಗೆ ಐದು ಮಂದಿ ಪತಿಗಳಾಗುವುರೆಂದು ವರ ನೀಡಿದ' ಆ ವಟುವನ್ನು ಶಿವನೆಂದರಿಯದೆ ಇಂದ್ರ ಗಟ್ಟಿಯಾಗಿ ನುಡಿದ. 'ದುರ್ಬುದ್ಧಿಯವನೇ! ಇದೇನು. ನಾನು ಈ ಮೂರುಲೋಕವನ್ನು ಆಳುತ್ತಿರುವಾಗ ಒಂದು ಹೆಣ್ಣನ್ನು ವಿನಾಕಾರಣ ಶಪಿಸುತ್ತಿರುವೆ?

**ಇತೀರಿತೇ ಶಿವಃ ಪ್ರಾಹ ಪತ ಮಾನುಷಮಾಪ್ನುಹಿ ।**

ಹೀಗೆ ಹೇಳಿದಾಗ ಶಿವನೆಂದ 'ನೀನು ಸ್ವರ್ಗದಿಂದ ಚ್ಯುತನಾಗು. ಮನುಷ್ಯನಾಗಿ ಹುಟ್ಟು'

**ಅಸ್ಯಾಶ್ಚ ಭರ್ತಾ ಭವಸಿ ತ್ವಾಮೇವೈಷಾ ವರಿಷ್ಯತಿ ।**
**ಪಶ್ಯಾತ್ರ ಮದವಜ್ಞಾನಾತ್ ಪತಿತಾಂಸ್ತ್ವಾದೃಶಾನ್ ಸುರಾನ್ ।**
**ಗಿರೇರಧಸ್ತಾದಸ್ಯೈವೇತ್ಯುಕ್ತೋಽಸೌ ಪಾಕಶಾಸನಃ ॥**
**ಉದ್ಬಬರ್ಹ ಗಿರಿಂ ತಂ ತು ದದರ್ಶಾತ್ರ ಚ ತಾನ್ ಸುರಾನ್ ॥**

ಇವಳಿಗೆ ನೀನು ಪತಿಯಾಗುವೆ. ನಿನ್ನನ್ನೇ ಇವಳು ವರಿಸುವಳು. ನನ್ನನ್ನು ಅಪಮಾನಿಸಿದ ಕಾರಣ ಸ್ವರ್ಗದಿಂದ ಪತಿತರಾಗಿರುವ ನಿನ್ನಂತಹ ದೇವತೆಗಳನ್ನು ಇಲ್ಲಿ ಇದೇ ಪರ್ವತದ ಕೆಳಗೆ ನೋಡು' ಹೀಗೆ ಶಿವ ಹೇಳಿದಾಗ ಇಂದ್ರ ಆ ಬೆಟ್ಟವನ್ನೆತ್ತಿದ. ಅಲ್ಲಿ ಆ ದೇವತೆಗಳನ್ನು ಕಂಡ.

**ಪೂರ್ವೇಂದ್ರಾನ್ ಮಾರುತವೃಷನಾಸತ್ಯಾಂಶ್ಚತುರಃ ಸ್ಥಿತಾನ್ ।**
**ಮಾನುಷೇಷ್ವವತಾರಾಯ ಮಂತ್ರಂ ರಹಸಿ ಕುರ್ವತಃ ॥**

ಹಿಂದಿನ ಮನ್ವಂತರಗಳಲ್ಲಿ ಇಂದ್ರ ಪದವಿಯನ್ನಾಳಿದ್ದ ವಾಯು, ಯಮ ಮತ್ತು ಇಬ್ಬರು ಅಶ್ವಿನೀದೇವತೆಗಳು ಎಂದು ನಾಲ್ವರು ಮನುಷ್ಯರಲ್ಲಿ ಅವತರಿಸಲು ರಹಸ್ಯವಾಗಿ ಮಂತ್ರಾಲೋಚನೆ ಮಾಡುತ್ತ ಅಲ್ಲಿ ಕುಳಿತಿದ್ದರು.

**ತತೋ ವರೇಣ್ಯಂ ವರದಂ ವಿಷ್ಣುಂ ಪ್ರಾಪ್ಯ ಸ ವಾಸವಃ ।**
**ತತ್ಪ್ರಸಾದಾನ್ನರಾಂಶೇನ ಯುಕ್ತೋ ಭೂಮಾವಜಾಯತ ॥**

ಬಳಿಕ ದೇವೇಂದ್ರ ವರದಾಯಕನಾದ ಸರ್ವೋತ್ತಮನಾದ ಹರಿಯನ್ನು ತಪಸ್ಸಿನಿಂದ ಒಲಿಸಿಕೊಂಡು ಅವನ ಅನುಗ್ರಹದಿಂದ ನರಾಂಶಯುಕ್ತನಾಗಿ ಭೂಮಿಯಲ್ಲಿ ಹುಟ್ಟಿದ.

**ಶಿವನಿಗೆ ಬ್ರಹ್ಮಶಾಪ**

**ಮದವಜ್ಞಾನಿಮಿತ್ತೇನ ಪತಿತಾ ಇತಿ ತಾನ್ ಸುರಾನ್ ।**
**ಮಾರುತಾದೀನ್ ಮೃಷಾಽವಾದೀರಿತಿ ಬ್ರಹ್ಮಾ ಶಿವಂ ತದಾ ॥**

**ಶಶಾಪ ಮಾನುಷೇಷು ತ್ವಂ ಕ್ಷಿಪ್ರಂ ಜಾತಃ ಪರಾಭವಮ್ ।**
**ಶಕ್ರಾನ್ನರತನೋರ್ಯಾಸಿ ಯಸ್ಮೈ ತ್ವಂ ತು ಮೃಷಾಽವದಃ ॥**

'ತನ್ನನ್ನು ಅಪಮಾನಿಸಿದ ಪ್ರಯುಕ್ತ ಆ ವಾಯು ಮುಂತಾದ ದೇವತೆಗಳು ಸ್ವರ್ಗದಿಂದ ಚ್ಯುತರಾಗಿದ್ದಾರೆ' ಎಂದು ಸುಳ್ಳು ಹೇಳಿದಿ ಎಂದು ಕೋಪದಿಂದ ಬ್ರಹ್ಮ ಶಿವನನ್ನು ಶಪಿಸಿದ. 'ನೀನು ಕೂಡಲೇ ಮನುಷ್ಯನಾಗಿ ಹುಟ್ಟಿ ಮನುಷ್ಯನಾಗಿ ಹುಟ್ಟುವ ಇಂದ್ರನಿಂದ ಪರಾಭವ ಹೊಂದುವಿ. ನೀನು ಅವನ ಮುಂದೆ ಸುಳ್ಳಾಡಿರುವಿ.

**ಮಚ್ಛಪ್ತಾನಾಂ ಚ ದೇವೀನಾಮವಿಚಾರ್ಯ ಮಯಾ ಯತಃ।**
**ಪತಿಯೋಗವರಂ ಪ್ರಾದಾ ನಾವಾಪ್ಸ್ಯಸಿ ತತಃ ಪ್ರಿಯಾಮ್ ॥**
**ಮಾನುಷೇಷು ತತಃ ಪಶ್ಚಾದ್ ಭಾರತೀದೇಹನಿರ್ಗತಾಮ್ ।**
**ಸ್ವಲೋಕೇ ಪ್ರಾಪ್ಸ್ಯಸಿ ಸ್ವಾರ್ಥೇ ವರೋಽಯಂ ತೇ ಮೃಷಾ ಭವೇತ್ ॥**

ನನ್ನಿಂದ ಶಪ್ತರಾದ ದೇವಿಯರಿಗೆ ನೀನು ನನ್ನೊಡನೆ ವಿಚಾರಿಸದೆ ಪತಿಪ್ರಾಪ್ತಿವರ ನೀಡಿರುವಿ. ಅದರಿಂದ ನೀನು ಮನುಷ್ಯ ಜನ್ಮದಲ್ಲಿ ನಿನ್ನ ಸತಿಯನ್ನು ಹೊಂದಲಾರೆ. ಅವಳು ಭಾರತೀದೇಹದಿಂದ ನಿರ್ಗಮಿಸಿದ ಬಳಿಕ ನಿನ್ನ ಲೋಕದಲ್ಲಿ ಅವಳನ್ನು ಹೊಂದುವಿ. ನೀನು ದೇವಿಯರಿಗೆ ಕೊಟ್ಟವರ ನಿನ್ನ ವಿಷಯದಲ್ಲಿ ವಿಫಲವಾಗುವುದು.

**ಏಷಾ ಸಾ ದ್ರೌಪದೀ ನಾಮ ಪಂಚದೇವೀತನುರ್ಭವೇತ್ ।**
**ಮೃಷಾ ವಾಗ್ ಯೇಷು ತೇ ಪ್ರೋಕ್ತಾ ಮಾರುತಾದ್ಯಾಸ್ತು ತೇಽಖಿಲಾಃ ॥**
**ತಾಸಾಂ ಪತಿತ್ವಮಾಪ್ಸ್ಯಂತಿ ಭಾರತ್ಯೈವ ತು ಪಾರ್ವತೀ ।**
**ಸಂಯುಕ್ತಾ ವ್ಯವಹಾರೇಷು ಪ್ರವರ್ತೇತ ನ ಚಾನ್ಯಥಾ ॥**

ಐದು ಮಂದಿ ದೇವಿಯರ ಅವತಾರ ಭೂತಳಾದ ಈ ಇಂದ್ರಸೇನೆ ದ್ರೌಪದಿ ಎನಿಸಿ ಜನಿಸುವಳು. ನೀನು ಯಾರ ವಿಷಯದಲ್ಲಿ ಸುಳ್ಳಾಡಿದೆಯೋ, ಆ ದೇವತೆಗಳು ವಾಯು ಮುಂತಾದವರೆಲ್ಲರೂ ಆ ದೇವಿಯರ ಪತಿಗಳಾಗುವರು. ಪಾರ್ವತೀ, ಭಾರತಿಯೊಡನೆ ಕೂಡಿಕೊಂಡು ಬೇರೆ ಎಲ್ಲ ವ್ಯವಹಾರಗಳಲ್ಲಿ ಮಾತ್ರವೇ ಪ್ರವೃತ್ತಿ ಮಾಡುವಳು. ತನ್ನ ಪಾತಿವ್ರತ್ಯಕ್ಕೆ ಭಂಗ ತರುವ ವ್ಯವಹಾರಗಳಲ್ಲಿ ಅಲ್ಲ.

**ಏತೇ ಹಿ ಮಾರುತಾದ್ಯಾಸ್ತೇ ದೇವಕಾರ್ಯಾರ್ಥ ಗೌರವಾತ್ ।**
**ಜಾತಾ ಇತಿ ಶ್ರುತಿಸ್ತಸ್ಯ ನಾವಜ್ಞಾತೇಽತ್ರಕಾರಣಮ್ ॥**

ಈ ವಾಯು ಮುಂತಾದ ದೇವತೆಗಳು ದೇವಕಾರ್ಯ ರೂಪವಾದ ಫಲದಲ್ಲಿ ಗೌರವಬುದ್ಧಿಯಿಂದ ಮಾನವರಾಗಿ ಹುಟ್ಟಿದರೆಂದು ಶ್ರುತಿ ಇದೆ. ಅವರು ಹುಟ್ಟುವುದಕ್ಕೆ ನಿನ್ನನ್ನು ಅಪಮಾನಿಸಿದುದು ಕಾರಣವಲ್ಲ.

– ಕೃಪೆ (ಅಖಿಲಭಾರತಮಾಧ್ವಮಹಾಮಂಡಲದ
ಮ.ತಾ.ನಿ. ಅನುವಾದ)

# ಪರಿಶಿಷ್ಟ-೧೦

## ಕಥಾ-ಆಖ್ಯಾನ-ಉಪಾಖ್ಯಾನ-ನಿಷ್ಪತ್ತಿ

ಕನ್ನಡದ ಕಥೆ(ತೆ) ಶಬ್ದವು ಸಂಸ್ಕೃತದ ಕಥಾ ಶಬ್ದದ ತದ್ಭವವಾಗಿದೆ. ಕಥಾ ಶಬ್ದದ ನಿಷ್ಪತ್ತಿ ಹೀಗಿದೆ.

ಕಥ ವಾಕ್ಯ ಪ್ರಬಂಧೇ (ಚುರಾದಿ ೧೦ ಉಭಯಪದ ಸ) ಎಂಬ ಧಾತುವಿಗೆ ಅಜ್ (೩-೩-೧೦೫) ಪ್ರತ್ಯಯದ ಜೋಡಣೆಯಿಂದಾಗಿ ಕಥಾಶಬ್ದ ನಿಷ್ಪನ್ನವಾಗಿದೆ. ಇದರ ಅರ್ಥ (೧) ಹೇಳುವುದು, ನಿರೂಪಿಸುವುದು; ೨. ಪರಸ್ಪರ ಮಾತನಾಡುವುದು, ಸಂಭಾಷಣೆ; ೩. ಅನೇಕ ವಿದ್ವಾಂಸರು ಒಂದೆಡೆ ಸೇರಿ ತತ್ತ್ವನಿರ್ಣಯ ಅಥವಾ ವಿಜಯಕ್ಕಾಗಿ ಮಾಡುವ ಪ್ರಮಾಣಬದ್ಧವಾದ ಯುಕ್ತಿಯುಕ್ತವಾದ ವಿಚಾರಗೋಷ್ಠಿ ಹೀಗೆ ಹಲವು ಅರ್ಥಗಳನ್ನು ನಾವು ಕೋಶಗಳಲ್ಲಿ ಈ ಶಬ್ದಕ್ಕೆ ನೋಡಬಹುದು.

ಕಥಾ ಎನ್ನುವುದು ವಿಚಾರಗೋಷ್ಠಿ ಎಂಬ ಅರ್ಥದಲ್ಲಿ ವಾದ, ಜಲ್ಪ, ವಿತಂಡಾ ಎಂದು ಮೂರು ವಿಧವಾಗಿರುತ್ತದೆ.

ಅಲ್ಲದೆ ಆಖ್ಯಾನ, ಉಪಾಖ್ಯಾನ, ಆಖ್ಯಾಯಿಕಾ ಎಂಬ ಶಬ್ದಗಳು ಹೆಚ್ಚು ಕಡಿಮೆ ಇದೇ ಅರ್ಥದಲ್ಲಿ ಬಳಕೆಯಲ್ಲಿವೆ. ಇವು 'ಖ್ಯಾ ಪ್ರಕಥನೇ' ಹೇಳು, ಪ್ರಸಿದ್ಧಿ ಪಡಿಸು (ಅದಾದಿ-೨ ಪ.ಸ.) ಎಂಬ ಧಾತುವಿಗೆ ಅನು, ಆ, ಉಪ ಎಂಬ ಉಪಸರ್ಗಗಳ ಜೋಡಣೆಯಿಂದ ಬೇರೆ ಬೇರೆ ಅರ್ಥಗಳಲ್ಲೂ ಬಳಕೆಯಾಗುತ್ತವೆ.

೧. ಅನು+ಆ+ಖ್ಯಾ - ಣಿಜಂತದಲ್ಲಿ ಅನ್ವಾಖ್ಯಾನ ಶಬ್ದವಾಗಿ 'ಹಿಂದೆ ಹೇಳಿದ ವಿಷಯವನ್ನು ವಿವರಿಸಿ ಹೇಳುವುದು' ಎಂಬ ಅರ್ಥ ಕೊಡುತ್ತದೆ.

೨. ಆ+ಖ್ಯಾ - ಣಿಜಂತದಲ್ಲಿಯೇ ಆಖ್ಯಾನ ಶಬ್ದವಾಗಿ 'ಚೆನ್ನಾಗಿ ಹೇಳುವುದು, ಸರಿಯಾಗಿ ಹೇಳುವುದು' ಎಂಬ ಅರ್ಥ ಕೊಡುತ್ತದೆ.

ಹೀಗೆ ಕಥ ಮತ್ತು ಖ್ಯಾ ಧಾತುಗಳಿಂದ ಹಿಂದಿನ ಕಥೆಗಳನ್ನು ಸರಿಯಾಗಿ, ಚೆನ್ನಾಗಿ, ಇರುವಂತೆಯೇ ಹೇಳಲ್ಪಟ್ಟ ವಿಷಯವೆಂದು ತಿಳಿಯಬಹುದು. ಎಂದರೆ ಕಥಾಶಬ್ದವು ಹಿಂದೆ ನಡೆದ ಘಟನೆಯಗಳ ವಿವರಗಳನ್ನು ತಿಳಿಸುವ ಕೃತಿ ಎಂದರೆ ತಪ್ಪಾಗದು.

ಹೀಗೆಯೇ 'ಇತಿಹಾಸ' ಎಂಬ ಶಬ್ದವೂ ಪುರಾತನ ಕಥೆಯನ್ನು ಹೇಳುವ ಗ್ರಂಥ ಎಂಬ ಅರ್ಥದಲ್ಲಿ ಬಳಕೆಯಲ್ಲಿದೆ. ತಾಂತ್ರಿಕವಾಗಿ ವೇದಾಂತ ಗ್ರಂಥಗಳಲ್ಲಿ ಇತಿಹಾಸ ಶಬ್ದವು ಪಂಚಮವೇದವೆಂದು ಕರೆಯಲ್ಪಡುವ ಭಾರತ, ಮೂಲರಾಮಾಯಣ, ಪಂಚರಾತ್ರ ಹಾಗೂ ಪುರಾಣಗಳಲ್ಲಿ ಒಂದಾಗಿದೆ. ಇದು ಉಪನಿಷತ್ತು ಹೇಳಿದ ಅರ್ಥವೂ ಆಗಿದೆ.

**ಇತಿಹಾಸಪುರಾಣಃ ಪಂಚಮೋ ವೇದಾನಾಂ ವೇದಃ। - ಉಪನಿಷತ್ತು**

ಇತಿಹಾಸ ಶಬ್ದವು 'ಇತಿ' 'ಹ' ಎಂಬ ಎರಡು ಅವ್ಯಯಗಳ ಮುಂದೆ 'ಆಸ' ಎಂಬ ಧಾತು ಪ್ರತಿರೂಪಕ ಅವ್ಯಯವೂ ಸೇರಿ ನಿಷ್ಪನ್ನವಾಗಿದ್ದರೂ, 'ಹಿಂದೆ ನಡೆದ ಕಥೆ' ಎಂಬ ಅರ್ಥ ರೂಢಿಯಲ್ಲಿದೆ. ಮಹಾಭಾರತ, ಪುರಾಣಗಳಲ್ಲಿ ಈ ಅರ್ಥವನ್ನು ಸಾವಿರಾರು ಕಡೆ ನೋಡಬಹುದು.

**ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ ಎಂದು.**

ಹೀಗೆ ಆಖ್ಯಾನ, ಉಪಾಖ್ಯಾನ, ಆಖ್ಯಾಯಿಕಾ, ಇತಿಹಾಸ, ಕಥಾ ಶಬ್ದಗಳೆಲ್ಲ ಹಿಂದೆ ನಡೆದ ಘಟನೆಗಳನ್ನು ನಿರೂಪಿಸುವ ಸಾಹಿತ್ಯ ಪ್ರಕಾರಗಳು. ಈ ರೀತಿಯಾಗಿ ಕಥೆಗಳು ಸಾಹಿತ್ಯದ ಅವಿಭಾಜ್ಯ ಅಂಗಗಳಾಗಿವೆ. ಇವು ಆಯಾ ಭಾಷೆಗಳಿಗೆ ತಕ್ಕಂತೆ ಇದ್ದು ಹಲವು ಬದಲಾವಣೆಗಳಿಗೆ ಒಳಗಾಗಿರಲೂ ಸಾಕು.

ಸಂಸ್ಕೃತ ಸಾಹಿತ್ಯ ಚರಿತ್ರೆಯಲ್ಲಿ ಇವೆಲ್ಲ ಗದ್ಯ, ಪದ್ಯ, ಚಂಪೂ ಕಾವ್ಯಗಳಾಗಿ ಸಿಗುತ್ತವೆ. ವೇದಗಳಲ್ಲಿ ಕೂಡಾ ಉಪಾಖ್ಯಾನ, ಆಖ್ಯಾಯಿಕೆಗಳಿವೆ.

ಉದಾ :

೧. ತಲವಕಾರೋಪನಿಷತ್ ಭಾಷ್ಯದಲ್ಲಿ ಶ್ರೀಮದಾಚಾರ್ಯರು ಈ ಉಪನಿಷತ್‌ನಲ್ಲಿ ಬಂದಿರುವ ಯಕ್ಷ ಹಾಗೂ ದೇವತೆಗಳ ಸಂವಾದವನ್ನು 'ಆಖ್ಯಾಯಿಕಾ' ಎಂದು ಕರೆದಿರುವ 'ಬ್ರಹ್ಮಸಾರ' ಎಂಬ ಪ್ರಮಾಣಗ್ರಂಥವನ್ನು ಉದಾಹರಿಸಿದ್ದಾರೆ.

**ಇತ್ಯತ್ರಾಖ್ಯಾಯಿಕಾಂ ವಚ್ಮಿ ಶೃಣು ತಾಂ ತ್ವಂ ಮಹೇಶ್ವರ।**
**ಸ್ಥಿತ್ವಾ ದೇವೇಷು ತದ್ಬ್ರಹ್ಮ ವ್ಯಜಯತ್ ದೈತ್ಯದಾನವಾನ್॥**

೨. ಛಾಂದೋಗ್ಯೋಪನಿಷತ್‌ನಲ್ಲಿ

ಅ. 'ಜಾನಶ್ರುತಿ ಉಪಾಖ್ಯಾನ' (ಅಧ್ಯಾಯ ೪; ಖಂಡ ೧-೩)
ಆ. 'ಜಾಬಾಲಿ ಸತ್ಯಕಾಮನ ಉಪಾಖ್ಯಾನ' (ಖಂಡ ೪-೯)
ಇ. 'ಉಪಕೋಸಲನ ಉಪಾಖ್ಯಾನ' (ಖಂಡ ೧೦-೧೪)

೩. ಮಹಾಭಾರತದಲ್ಲಂತೂ ೨೦೦ಕ್ಕೂ ಹೆಚ್ಚು ಉಪಾಖ್ಯಾನಗಳಿವೆ. ಇವು ಆದಿಪರ್ವ, ವನಪರ್ವ, ಶಾಂತಿಪರ್ವ, ಅನುಶಾಸನಪರ್ವ ಮೊದಲಾದವುಗಳಲ್ಲಿ ಪಸರಿಸಿವೆ.

೪. ಪದ್ಮ ಮೊದಲಾದ ಪುರಾಣಗಳಲ್ಲೂ ಚೈತ್ರಾದಿ ಮಾಸ ಮಾಹಾತ್ಮೆಗಳಲ್ಲೂ ಇಂತಹ ಕಥೆ, ಆಖ್ಯಾನ, ಶಬ್ದಗಳಿಂದ ಕರೆಯಲ್ಪಡುವ ಪ್ರಸಂಗಗಳನ್ನು ಹೇರಳವಾಗಿ ನೋಡಬಹುದು.

– ಕೃಪೆ: ಭಂಡಾರಕೆರೆ ಮಠದ ಪ್ರಕಾಶನ ಭಗವತ್ಕಥಾತರಂಗದ ಮುನ್ನುಡಿಯಿಂದ

*****

## ಪರಿಶಿಷ್ಟ-೧೧

# ಆಧುನಿಕ ಯುಗದಲ್ಲಿ ಸಣ್ಣ ಕಥೆಗಳು

ಕನ್ನಡದ ಆಸ್ತಿ ಡಾ. ಮಾಸ್ತಿ ವೇಂಕಟೇಶ ಅಯ್ಯಂಗಾರ್‌ಅವರು ಅನೇಕ ಸಣ್ಣ ಕಥೆಗಳನ್ನು ಬರೆದು ಸಮಾಜದ ನ್ಯೂನತೆಗಳನ್ನು ತಮ್ಮ ಬರವಣಿಗೆಯಲ್ಲಿ ಕನ್ನಡಿ ಹಿಡಿದಿದ್ದಾರೆ. ನಂತರದ ಕನ್ನಡದ ಗೌರಮ್ಮ, ಕುವೆಂಪು, ಚದುರಂಗ, ಅನಕೃ, ತರಾಸು, ಅನುಪಮಾ ನಿರಂಜನ, ಪ್ರೇಮಾಭಟ್ ಮೊದಲಾದ ಅನೇಕ ಲೇಖಕರು ಈ ಸಣ್ಣಕತೆಗಳ ರಚನೆಯನ್ನು ಮುಂದುವರಿಸಿರುವುದು ನಿಜಕ್ಕೂ ಶ್ಲಾಘನೀಯವಾಗಿದೆ. ಸಣ್ಣಕತೆಗಳ ಪರಂಪರೆಯು ಈಗೀಗಂತೂ ಅನೇಕ ಪತ್ರಿಕೆಗಳಲ್ಲಿ ಬಂದು ಕನ್ನಡ ವಾಙ್ಮಯ ಸಮೃದ್ಧಿಯಾಗುತ್ತಿದೆ. ಇದು ಹಾಗೆಯೇ ಬೆಳೆದು ಕರ್ನಾಟಕ ಮಾತೆಯ ಸೇವೆಯು ಚಿರಂತನವಾಗಿ ಸಿಗಲೆಂದು ಆಶಿಸೋಣ.

ಅಲ್ಲದೆ ಈ ಸಣ್ಣಕತೆಗಳ ಪರಂಪರೆಗಳು ಎಲ್ಲ ಭಾಷೆಯಲ್ಲಿಯೂ ಇವೆ. ಆಂಗ್ಲಭಾಷೆಯ ಸಾಹಿತ್ಯದ ಮೂಲಕ ಓ ಹೆನ್ರಿ, ವಿಲಿಯಮ್ ಬಾಯ್ಡ್ ಮೊದಲಾದವರು ೧೯ನೇ ಶತಮಾನದಿಂದ ಈ ಸಣ್ಣಕಥೆಗಳನ್ನು ಹುಟ್ಟುಹಾಕಿದರು. ಹೀಗೆ ೧೯ನೇ ಶತಮಾನದಿಂದ ವಿವಿಧ ಭಾಷೆಗಳಲ್ಲಿ ಸಣ್ಣಕತೆಗಳ ಆಂದೋಲನ ಆರಂಭವಾಗಿದ್ದು, ಅದು ಈಗ ಎಲ್ಲ ಭಾಷೆಗಳಲ್ಲೂ ತುಂಬಾ ಪ್ರಬುದ್ಧವಾಗಿ ಬೆಳೆಯುತ್ತಿದೆ.

ಸಣ್ಣಕಥೆಗಳ ಬೆಳವಣಿಗೆಯು ಪ್ರಪಂಚದಲ್ಲಿ ನೋಬೆಲ್ ಬಹುಮಾನ ಪಡೆಯುವಷ್ಟರ ಮಟ್ಟಿಗೆ ಮುಂದುವರೆದಿದೆ. ಇದಕ್ಕೆ ಸಾಕ್ಷಿಯಾಗಿ ೨೦೧೩ರಲ್ಲಿ (೧೧.೧೦.೨೦೧೩ರಂದು) 'Alice Munro' ಎಂಬ ಕೆನಡಾ ದೇಶದ ಮಹಿಳೆಗೆ ನೋಬೆಲ್ ಬಹುಮಾನವು 'Master of the Contemporary Short Story' ಎಂಬ ಕೃತಿಗೆ 'ಸಾಹಿತ್ಯ' ಪ್ರಕಾರದಡಿಯಲ್ಲಿ ಸಿಕ್ಕಿದೆ.

*****

॥ ಶ್ರೀಕೃಷ್ಣಾರ್ಪಣಮಸ್ತು ॥

*****



ಭಗವಾನ್ ವಾಸುದೇವಶ್ಚ ಕೀರ್ತ್ಯತೇಽತ್ರ ಸನಾತನಃ । ....
ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್ ।

ಆದಿ ಪರ್ವ ಅ.1

ಚರಿತಂ ವೈಷ್ಣವಾನಾಂ ತು ವಿಷ್ಣೂದ್ರೇಕಾಯ ಕಥ್ಯತೇ । -
ನಿರ್ಣಯಃ ಸರ್ವಶಾಸ್ತ್ರಾಣಾಂ ಸದೃಷ್ಟಾಂತೋ ಹಿ ಭಾರತೇ ।

ಭವಿಷ್ಯತ್ಪರ್ವಪುರಾಣ- ಮ.ತಾ.ನಿ.(2/129)

